GOVERNMENT OF BOMBAY
KANNADA RESEARCH GRANT PUBLICATION

# ಕರ್ನಾಟಕ ಶಬ್ದಾನುಶಾಸನ ಪ್ರಕಾಶಿಕೆ

(ಭಟ್ಟಾಕಳಂಕದೇವ ವಿರಚಿತ ಸಂಸ್ಕೃತ ಕರ್ನಾಟಕ ಶಬ್ದಾನುಶಾಸನದ ವಿಸ್ತಾರವಾದ ಕನ್ನಡ ಟೀಕೆ)

ಕೈ. ವಾ. ಶ್ರೀ. ಕುಂಡಲಗಿರಿಯಾಚಾರ್ಯರಿಂದ ರಚಿತವಾದುದು

ನೂತನ ಪರಿಷ್ಕರಣ ೧೯೪೧

ಸಂಪಾದಕರು :
ಶಿ. ಶಿ. ಬಸವನಾಳ, ಎಂ. ಎ.,
ಕನ್ನಡ ಮತ್ತು ಇತಿಹಾಸದ ಪ್ರಾಧ್ಯಾಪಕರು, ಲಿಂಗರಾಜ ಕಾಲೇಜ, ಬೆಳಗಾವಿ.

ಪ್ರಕಾಶಕರು :
ಕರ್ನಾಟಕ ವಿದ್ಯಾವರ್ಧಕ ಸಂಘ
ಧಾರವಾಡ

**Price : 5 Rs.**

# ಕರ್ಣಾಟಕ ಶಬ್ದಾನುಶಾಸನ ಪ್ರಕಾಶಿಕೆ

## ಒಳಪಿಡಿ

# ಕೈ. ವಾ. ಶ್ರೀ ಕುಂಡಲಿಗಿರಿಯಾಚಾರ್ಯರ ಅಲ್ಪ ಪರಿಚಯ

ಇವರು ಮೈಸೂರಿನವರು. ನಂಜನಗೂಡ ಹತ್ತಿರ ಇರುವ ಕಳಲೇ ಎಂಬ ಗ್ರಾಮ ಇವರ ಜನ್ಮಸ್ಥಳ. ಇವರು ೧೮೬೫ ನೆಯ ಇಸ್ವಿಯಲ್ಲಿ ಜನಿಸಿದರು. ಇವರ ತಂದೆಯ ಹೆಸರು ಶ್ರೀ ಬ್ರಹ್ಮ ವೆಂಕಟಾಚಾರ್ಯರು. ತಮ್ಮ ಸ್ವಂತ ಗ್ರಾಮವಾದ ನರಸೀಪುರ, ತಾಲೂಕ ತಿರಮಕೊಡ್ಲಿನಲ್ಲಿ ೧೫ ವರ್ಷ ವಯಸ್ಸಿನ ವರೆಗೆ ವೇದಾಧ್ಯಯನ ಮಾಡಿದರು. ಮುಂದೆ ಅದೇ ಅಭ್ಯಾಸಕ್ಕೋಸ್ಕರ ಮೈಸೂರಿನಲ್ಲ ವಾರಹಚ್ಚಿಕೊಂಡು ಮೈಸೂರ ಅರಮನೆಯಿಂದ ಕೊಡಲಾದ ವಿದ್ಯಾರ್ಥಿ ವೇತನದ ಸಹಾಯದಿಂದ ತಿರುಮಲಾಚಾರ್ಯರ ಪಾಠಶಾಲೆಯಲ್ಲಿ ಎಂಟು ವರ್ಷಗಳವರೆಗೆ ಕಲಿತು ವ್ಯಾಕರಣ ಪಂಡಿತರಾದರು.

ಮೂರು ವರ್ಷ ಶ್ರವಣಬೆಳಗೊಳದಲ್ಲೂ ಐದು ವರ್ಷ ಬೆಂಗಳೂರ ಸಂಸ್ಕೃತ ಪಾಠಶಾಲೆಯಲ್ಲೂ ಸಂಸ್ಕೃತ ಅಧ್ಯಾಪಕರಾಗಿ ಕೆಲಸ ಮಾಡಿದರು. ಅನಂತರ ೧೨ ವರ್ಷಗಳ ಕಾಲ ಮೈಸೂರ ನಾರ್ಮಲ್ ಸ್ಕೂಲಿನಲ್ಲ ಸಂಸ್ಕೃತ ಅಧ್ಯಾಪಕರಾಗಿದ್ದು ೧೯೦೪ರಲ್ಲಿ ತಮ್ಮ ೪೦ ನೆಯ ವಯಸ್ಸಿನಲ್ಲಿ ದೈವಾಧೀನರಾದರು.

ಇವರು ಕನ್ನಡದಲ್ಲಿಯೂ ಉದ್ದಾಮ ಪಂಡಿತರಾಗಿದ್ದರು. ಕನ್ನಡದಲ್ಲಿ ಆಗ ಪ್ರಕಟವಾಗುತ್ತಿದ್ದ "ವಿದ್ಯಾದಾಯಿನಿ," "ಕರ್ನಾಟಕ ಗ್ರಂಥಮಾಲೆ" ಮುಂತಾದ ಮಾಸಿಕ ಪುಸ್ತಕಗಳನ್ನು ಪ್ರಕಟಿಸುವುದರಲ್ಲಿ ಸಹಾಯಮಾಡಿ ಕನ್ನಡ ಭಾಷಾ ಪ್ರಚಾರಕ್ಕೆ ದುಡಿಯುತ್ತಿದ್ದರು. ಇವರು ಹರ್ಷ ಚರಿತ್ರೆ, ಧರ್ಮಶರ್ಮಾಭ್ಯುದಯ, ಜೀವಂಧರನ ಚರಿತ್ರೆ, ಶಬ್ದಾನುಶಾಸನ ಮುಂತಾದ ಅನೇಕ ಉದ್ಗ್ರಂಥಗಳನ್ನು ಬರೆದಿರುವರು.

ಇವರು ಮೈಸೂರು ಆಸ್ಥಾನ ವಿದ್ವಾಂಸರಾಗಿದ್ದರು. ಇವರ ಪಾಂಡಿತ್ಯಕ್ಕೆ ಮೆಚ್ಚಿ ಬಡೋದೆ ಸಂಸ್ಥಾನದ ಮಹಾರಾಜರವರು ಅವರನ್ನು ಆಗಾಗ್ಗೆ ತಮ್ಮ ಸಂಸ್ಥಾನಕ್ಕೆ ಕರೆಯಿಸಿಕೊಂಡು ಬಹುಮಾನ ಮಾಡುತ್ತಿದ್ದರು. ಮತ್ತು ತಮ್ಮ ತುಲಾಭಾರ ಮಹೋತ್ಸವ ಕಾಲಕ್ಕೆ ಬಂಗಾರದ ಕಡೆಯನ್ನು ದಯಪಾಲಿಸಿದರು. ತ್ರಾವಣಕೋರದ ಮಹಾರಾಜರವರು ಪ್ರತಿವರ್ಷ ೨೦೦ ರೂಪಾಯಿಗಳ ವರ್ಷಾಶನವನ್ನು ಇವರಿಗೆ ಕೊಡುತ್ತಿದ್ದರು.

—(ಅವರ ಆಪ್ತರಿಂದ ಬರೆದು ಬಂದದ್ದು)

# ಮುನ್ನುಡಿ

ಶ್ರೀ ಭಟ್ಟಾಕಲಂಕದೇವ ಕೃತ ಸಂಸ್ಕೃತ ಕರ್ಣಾಟಕ ಶಬ್ದಾನುಶಾಸನದ ಕನ್ನಡ ಅನುವಾದವು (ಭಾಗ ೧) ಶ್ರೀ ಕುಂಡಲಿಗಿರಿಯಾಚಾರ್ಯರಿಂದ ಬರೆಯಲ್ಪಟ್ಟು ಅದು ಮೊದಲು ೧೯೦೮ ರಲ್ಲಿ ಮುದ್ರಣವಾಗಿತ್ತು. ಅದರ ಪ್ರತಿಗಳು ತೀರಿಹೋದುದರಿಂದಲೂ ಈ ಸಂದರ್ಭ ಗ್ರಂಥದ ಇರವು ಕನ್ನಡದ ಬಾಳಿಗೆ ಅವಶ್ಯವೆನಿಸಿದುದರಿಂದಲೂ ಅದರ ಅಧಿಕೃತ ಪ್ರಕಟನೆಯೊಂದನ್ನು ಪುನರ್ಮುದ್ರಣ ಮಾಡಬೇಕೆಂಬ ಬಯಕೆಯು ಸಂಘಕ್ಕೆ ಮೊದಲಿನಿಂದಲೂ ಇತ್ತು.

ಈ ಸಂದರ್ಭದಲ್ಲಿ ಮುಂಬೈ ಸರಕಾರದವರು ೧೯೩೮ ರಲ್ಲಿ ಕನ್ನಡ ಸಂಶೋಧನ ಸಮಿತಿಯೊಂದನ್ನು ಧಾರವಾಡದಲ್ಲಿ ಹೊಸದಾಗಿ ಸ್ಥಾಪಿಸಿ, ತನ್ಮೂಲಕ ಉಪಯುಕ್ತವೆನಿಸುವ ಕನ್ನಡ ಗ್ರಂಥಗಳ ಪ್ರಕಟನೆಗೆ ಧನಸಹಾಯವನ್ನು ಮಾಡುವ ಯೋಜನೆಯನ್ನು ಕೈಕೊಂಡುದರಿಂದ ನಾವು ಈ ಗ್ರಂಥವನ್ನು ಅವರ ಉದಾರಾಶ್ರಯದಲ್ಲಿ ಪ್ರಕಟಿಸಲು ಅನುವಾಯಿತು. ಇದಕ್ಕಾಗಿ ಸಂಘವು ಅವರಿಗೆ ಚಿರಋಣಿಯಾಗಿದೆ.

ಕೈ. ವಾ. ಕುಂಡಲಿಗಿರಿಯಾಚಾರ್ಯರಿಂದ ಕರ್ನಾಟಕ ಶಬ್ದಾನುಶಾಸನವು ಕನ್ನಡದಲ್ಲಿ ಸಂಪೂರ್ಣವಾಗಿ ಬರೆಯಲ್ಪಟ್ಟಿದ್ದರೂ ಅದರ ೨ನೆಯ ಭಾಗದ ಕೊನೆಯ ೧೨೦ ಸೂತ್ರಗಳ ಕನ್ನಡ ಟೀಕೆ, ಟಿಪ್ಪಣಿಗಳು ನಮಗೆ ದೊರೆಯದುದರಿಂದಲೂ ದೊರೆತುದರಲ್ಲಿಯ ಅಂಶವು ಖಿಲವಾಗಿ, ಸುವಾಚ್ಯವಾಗಿಲ್ಲದುದರಿಂದಲೂ — ಆ ಕಡೆಯ ೧೨೦ ಸೂತ್ರಗಳಿಗೆ ಕನ್ನಡ ಟೀಕೆ ಟಿಪ್ಪಣಿಗಳನ್ನು ಬರೆದುಕೊಡಲು ಧಾರವಾಡದ ಟ್ರೇನಿಂಗ್ ಕಾಲೇಜಿನ ನಿವೃತ್ತ ಕನ್ನಡ ಪಂಡಿತರಾದ ಶ್ರೀಮಾನ್ ಮ. ಪ್ರ. ಪೂಜಾರ ಇವರನ್ನು ಬಿನ್ನವಿಸಿಕೊಂಡೆವು. ನಮ್ಮ ಬಿನ್ನಹವನ್ನು ಮನ್ನಿಸಿ ಅವರು ಹಾಗೆ ಮಾಡಿದರು. ಇದಕ್ಕಾಗಿ ನಾವು ಅವರಿಗೆ ಉಪಕೃತರಾಗಿದ್ದೇವೆ.

ಗ್ರಂಥದ ಸಂಪಾದಕತ್ವದ ಹೊಣೆಯನ್ನು— ನಮ್ಮ ಸಂಘದ ಕಾರ್ಯಾಧ್ಯಕ್ಷರೂ, ಬೆಳಗಾವಿಯ ಲಿಂಗರಾಜ ಕಾಲೇಜಿನ ಕನ್ನಡ ಮತ್ತು ಇತಿಹಾಸದ ಪ್ರಾಧ್ಯಾಪಕರೂ ಆದ ಶ್ರೀಮಾನ್ ಶಿ. ಶಿ. ಬಸವನಾಳ, ಎಂ. ಎ., ಅವರು— ತಮ್ಮ ಕಾರ್ಯಬಾಹುಲ್ಯದಲ್ಲಿಯೂ ದಯವಿಟ್ಟು ಸ್ವೀಕರಿಸಿದರು. ಇಂತಹದೊಂದು ಹಿರಿಹೊತ್ತಿಗೆಯ ಸಂಪಾದಕತ್ವವನ್ನು ವಹಿಸಿ ಅದನ್ನು ಬೆಳಕಿಗೆ ತಂದ ಪ್ರೊ. ಬಸವನಾಳರವರಿಗೆ ಸಂಘವು ಎಂದಿಗೂ ಕೃತಜ್ಞವಿದೆ.

ಈ ಗ್ರಂಥದ ಒಪ್ಪೋಲೆಯನ್ನು ಶ್ರಮವಹಿಸಿ ಸಿದ್ಧಪಡಿಸಿಕೊಟ್ಟ ಧಾರವಾಡದ ಕರ್ನಾಟಕ ಕಾಲೇಜಿನ ಸಂಸ್ಕೃತ ಪಂಡಿತರಾದ ಶ್ರೀಮಾನ್ ವಿಟ್ಠಲಾಚಾರ್ಯ ಶಿವಣಗಿ ಅವರಿಗೆ ನಮ್ಮ ನೆನೆಕೆಗಳನ್ನು ಸಲ್ಲಿಸುತ್ತೇವೆ.

ಪ್ರಸ್ತುತ ಗ್ರಂಥದ ಮೊದಲನೆಯ ಭಾಗವನ್ನು ನಮ್ಮ ಸಂಘದ ೫೧ನೆಯ ವಾರ್ಷಿಕೋತ್ಸವದ ದಿವಸ—ಅದರ ಮುಖ್ಯ ಅತಿಥಿಗಳಾದ ಬೆಂಗಳೂರಿನ ಶ್ರೀಮಾನ್ ಮಾಸ್ತಿ ವೆಂಕಟೇಶ ಐಯ್ಯಂಗಾರ, ಎಂ. ಎ., ಅವರು ಸಮಯೋಚಿತ ನುಡಿಗಳಿಂದ ಪ್ರಸಿದ್ಧಿಸಿದರು. ಇದರ ಎರಡನೆಯ ಭಾಗವನ್ನು — ಇದೀಗ ನಮ್ಮ ಸಂಘದ ಚಿನ್ನದ ಹಬ್ಬದ ಸುಸಮಯದಲ್ಲಿ ಅದರ

ಉದ್ಘಾಟಕರಾದ ಶ್ರೀಮಂತ ಬಸವಪ್ರಭು ರಾಜಾ ಲಖಮಗೌಡ ಸರದೇಸಾಯಿ, ವಂಟಮುರಿ, ಓ. ಬಿ. ಇ. ಅವರು ಪ್ರಸಿದ್ಧಿಸಲು ಕೃಪೆಯಿಟ್ಟು ಒಪ್ಪಿರುವರು. ಈ ರೀತಿ ಗ್ರಂಥ ಪ್ರಸಿದ್ಧಿ ಮಾಡುವ ಕಾರ್ಯದಲ್ಲಿ ನೆರವಾದ ಈ ಉಭಯ ಮಹನೀಯರಿಗೆ ಸಂಘವು ತನ್ನ ಕೃತಜ್ಞತೆಯನ್ನು ಸಲ್ಲಿಸುತ್ತದೆ.

ಇನ್ನು ಈ ಗ್ರಂಥವು ಸರ್ವವಿಧದಿಂದಲೂ ಚಿತ್ತಾಕರ್ಷಕವಾಗುವಂತೆ ಹೆಚ್ಚಾದ ಆಸ್ಥೆ ವಹಿಸಿ ಅದರ ಮುದ್ರಣ ಕಾರ್ಯದಲ್ಲಿ ನೆರವಾದ ಧಾರವಾಡದ ಶೋಂಟದಾರ್ಯ ಮುದ್ರಣಾಲಯದ ವ್ಯವಸ್ಥಾಪಕರಿಗೆ ನಾವು ಆಭಾರಿಯಾಗಿದ್ದೇವೆ.

ಕ. ವಿ. ವ. ಸಂಘ
ಧಾರವಾಡ
ತಾ. ೨೬-೧೨-೧೯೪೧

**ಕಾಂತೇಶ ಕಮಲಾಪೂರ**
**ಕೃಷ್ಣಶರ್ಮ ಬೆಟಗೇರಿ**
ಗೌರವ ಕಾರ್ಯದರ್ಶಿಗಳು

# ಪ್ರಸ್ತಾವನೆ



ಹಳಗನ್ನಡದ ವ್ಯಾಕರಣವನ್ನು ಕುರಿತು ಬರೆದ ಮೂವರು ವ್ಯಾಕರಣಕಾರರ ನಾಲ್ಕು ಗ್ರಂಥಗಳು ಈಗ ಉಪಲಬ್ಧವಾಗಿರುವುವು. ಇವುಗಳಲ್ಲಿ ಮೊದಲಿನವೆರಡನ್ನು (ಎರಡನೆಯ) ನಾಗವರ್ಮ[೧]ನೆಂಬವನು ರಚಿಸಿರುವನು; ಅವುಗಳಲ್ಲಿ ಮೊದಲನೆಯದಾದ ಶಬ್ದಸ್ಮೃತಿ ಎಂಬುದು ಕನ್ನಡದಲ್ಲಿರುವುದು; ಎರಡನೆಯದಾದ ಕರ್ಣಾಟಕ ಭಾಷಾಭೂಷಣವೆಂಬುದು ಸಂಸ್ಕೃತದಲ್ಲಿರುವುದು. ಶಬ್ದಸ್ಮೃತಿಯೆಂಬುದು ಆತನು ಬರೆದ ಕಾವ್ಯಾವಲೋಕನವೆಂಬ ಕನ್ನಡ ಅಲಂಕಾರ ಗ್ರಂಥದ ಮೊದಲನೆಯ ಭಾಗ. ಇದರಲ್ಲಿ ಕನ್ನಡ ವ್ಯಾಕರಣವು ಸಂಗ್ರಹವಾಗಿ ವಿವೇಚಿತವಾಗಿರುವುದು. ಇದರಲ್ಲಿ ಒಟ್ಟಿಗೆ ೯೭ ಸೂತ್ರಗಳಿರುವುವು; (ಕಂದ) ಪದ್ಯರೂಪವಾಗಿ ರಚಿತವಾಗಿರುವುವು; ಉದಾಹರಣೆಗಾಗಿ ಹಿಂದಣ ಕವಿಗಳಿಂದ ರಚಿತವಾದ ಹಲವು ಪದ್ಯಗಳು ಉದ್ಧೃತವಾಗಿರುವುವು. ಕರ್ಣಾಟಕ ಭಾಷಾಭೂಷಣವೆಂಬ ನಾಗವರ್ಮನ ಎರಡನೆಯ ಗ್ರಂಥದಲ್ಲಿ ಕನ್ನಡ ವ್ಯಾಕರಣವು ಹೆಚ್ಚು ವಿಸ್ತಾರವಾಗಿ ಪ್ರತಿಪಾದಿತವಾಗಿರುವುದು. ಇದರಲ್ಲಿಯ ೨೬೯ ಸೂತ್ರಗಳು ಸಂಸ್ಕೃತ ಗದ್ಯದಲ್ಲಿ ರಚಿತವಾಗಿರುವುವು. ಇವುಗಳ ಮೇಲಿನ ವೃತ್ತಿಯೂ ಸಂಸ್ಕೃತ ಗದ್ಯದಲ್ಲಿಯೇ ರಚಿತವಾಗಿರುವುದು. ಸಂಜ್ಞಾ, ಸಂಧಿ, ವಿಭಕ್ತಿ, ಕಾರಕ, ಯುಷ್ಮದಾದಿ, ಸಮಾಸ, ತದ್ಧಿತ, ಆಖ್ಯಾತ, ಅವ್ಯಯ, ನಿಪಾತ ಎಂಬ ಹತ್ತು ಅಧಿಕರಣಗಳಾಗಿ ಈ ಗ್ರಂಥವು ವಿಭಾಗಿಸಲ್ಪಟ್ಟಿರುವುದು.

ಹದಿಮೂರನೆಯ ಶತಮಾನದ ಮಧ್ಯದಲ್ಲಿದ್ದ ಕೇಶಿರಾಜ[೨]ನೆಂಬ ಕವಿ ಬರೆದ ಶಬ್ದಮಣಿದರ್ಪಣವೆಂಬುದು ಮೂರನೆಯ ಕನ್ನಡ ವ್ಯಾಕರಣ ಗ್ರಂಥ; ಕನ್ನಡದಲ್ಲಿರುವುದು. ನಾಗವರ್ಮನ ಶಬ್ದಸ್ಮೃತಿಯಂತೆ ಇದರಲ್ಲಿಯ ಸೂತ್ರಗಳು (ಕಂದ) ಪದ್ಯಗಳಲ್ಲಿ ರಚಿತವಾಗಿರುವುವು. ಅವುಗಳ ಮೇಲಿನ ವೃತ್ತಿಯು ಕನ್ನಡ ಗದ್ಯದಲ್ಲಿರುವುದು. ಇದರಲ್ಲಿ ಕೊಟ್ಟಿರುವ ಉದಾಹರಣೆಗಳಲ್ಲಿ ಹಲವು ನಾಗವರ್ಮನ ಕಾವ್ಯಾವಲೋಕನಗಳಿಂದಲೆ ತೆಗೆದುಕೊಂಡುವುಗಳಾಗಿರುವುವು. ಇದರಲ್ಲಿ ಬರುವ ೩೨೨ ಸೂತ್ರಗಳು ಸಂಧಿ, ನಾಮ, ಸಮಾಸ, ತದ್ಧಿತ, ಆಖ್ಯಾತ, ಧಾತು, ಅಪಭ್ರಂಶ, ಅವ್ಯಯ ಎಂಬ ಎಂಟು ಸಂಧಿಗಳಾಗಿ ವಿಭಾಗಿಸಲ್ಪಟ್ಟಿರುವುವು. ಈ ಗ್ರಂಥಕ್ಕೆ ನಾಗವರ್ಮನ ಗ್ರಂಥಗಳೇ ಆಧಾರವಾದವಾಗ್ಯೂ ಇದರಲ್ಲಿ ಕನ್ನಡ ವ್ಯಾಕರಣ ವಿಷಯವು ಹೆಚ್ಚು ವಿಸ್ತಾರವಾಗಿ ಪ್ರತಿಪಾದಿತ

---

೧. ಈತನು ಕ್ರಿ. ೧೨ನೆಯ ಶತಮಾನದಲ್ಲಿ – ಬಹುತರ ಉತ್ತರಾರ್ಧದಲ್ಲಿ – ಬದುಕಿದ್ದನೆಂದು ಊಹಿಸಲು ಆಧಾರಗಳಿರುವುವು. ಕರ್ಣಾಟಕ ಕವಿಚರಿತ್ರೆ ಭಾಗ ೧ ಪುಟ ೫೨–೫೪; ಬಸವನಾಳ ಮತ್ತು ಕೇಪು ಇವರಿಂದ ಸಂಪಾದಿತವಾದ ಕಾವ್ಯಾವಲೋಕನ ಪುಟ ೧–೨.

೨. ಈತನು ಕ್ರಿ. ೧೩ನೆಯ ಶತಮಾನದಲ್ಲಿದ್ದನೆಂದು ಗೊತ್ತಾಗುತ್ತದೆ. ಕರ್ಣಾಟಕ ಕವಿಚರಿತೆ ಭಾಗ ೧ ಪುಟ ೩೮೫–೬.

ವಾಗಿರುವುದು; ಅಲ್ಲದೆ ಪ್ರಯೋಗ ವಿಷಯದಲ್ಲಿ ಇದೇ ಪ್ರಮಾಣ ಗ್ರಂಥವಾಗಿ ಅಂಗೀಕೃತ ವಾಗಿರುವುದು; ಮೇಲಾಗಿ ಕನ್ನಡದಲ್ಲಿರುವುದರಿಂದ ಎಲ್ಲರಿಗೂ ಸುಲಭಗ್ರಾಹ್ಯವಾಗಿರುವುದು.

ಪ್ರಸ್ತುತ ಗ್ರಂಥದ ಮೂಲವಾದ ಕರ್ಣಾಟಕ ಶಬ್ದಾನುಶಾಸನವೇ ಕನ್ನಡ ವ್ಯಾಕರಣವನ್ನು ಕುರಿತಾದ ನಾಲ್ಕನೆಯ ಗ್ರಂಥ[1]; ಸಂಸ್ಕೃತದಲ್ಲಿರುವುದು. ಈ ಕರ್ಣಾಟಕ ಶಬ್ದಾನುಶಾಸನವನ್ನು ರಚಿಸಿದಾತನು ಭಟ್ಟಾಕಳಂಕದೇವನೆಂಬ ಜೈನ ವ್ಯಾಕರಣಕಾರನು. ಈತನು (ಈಗಿನ) ದಕ್ಷಿಣ ಕನ್ನಡ ಜಿಲ್ಲೆಯೊಳಗಿನ ಹಾಡುವಳ್ಳಿ (ಸಂ. ಸಂಗೀತಪುರ) ಎಂಬ ಜೈನ ಮಠದಲ್ಲಿ ಗುರುವಾಗಿದ್ದ ಅಕಳಂಕದೇವರ ಶಿಷ್ಯನು. ಈ ಗುರುವಂಶವು ಮೂಲಸಂಘದ ದೇಶೀಯಗಣದ ಪುಸ್ತಕಗಚ್ಛದ ಕುಂದಕುಂದಾನ್ವಯಕ್ಕೆ ಸೇರಿದುದು. ಭಟ್ಟಾಕಳಂಕನು ನಾನಾಮತದ ತರ್ಕಗಳಲ್ಲಿ ಪಂಡಿತನಾಗಿದ್ದನು; ವ್ಯಾಖ್ಯಾನಗಳನ್ನು ರಚಿಸುವುದರಲ್ಲಿ ಪಟುವಾಗಿದ್ದನು; ಕನ್ನಡ-ಸಂಸ್ಕೃತ ಉಭಯವ್ಯಾಕರಣಗಳಲ್ಲಿಯೂ ಬಲ್ಲಿದನಾಗಿದ್ದನು; ಅರಸರ ಸಭೆಗಳಲ್ಲಿ ಜಿನಮತವನ್ನು ಹಲವು ಸಾರೆ ಪ್ರತಿಪಾದಿಸಿದ್ದನು.[2] ಈತನು ಸುಧಾಪುರ ಎಂಬಲ್ಲಿ ಎಲ್ಲ ಶಾಸ್ತ್ರಗಳನ್ನು ಅಧ್ಯಯನಮಾಡಿದ್ದನೆಂದೂ ಆರು ಭಾಷೆಗಳಲ್ಲಿ ಕವಿತ್ವ ರಚಿಸುವ ಶಕ್ತಿ ಈತನಿಗೆ ಇತ್ತೆಂದೂ ದೇವಚಂದ್ರನ ರಾಜಾವಳೀಕಥೆಯಿಂದ ಗೊತ್ತಾಗುತ್ತದೆ. ಭಟ್ಟಾಕಳಂಕನೇ ಬರೆಸಿದನೆಂದು ಹೇಳಿದ ಕ್ರಿ. ೧೫೯೨ ರಲ್ಲಿ ಹುಟ್ಟಿದ ಬೀಳಗಿ ತಾಲೂಕಿನಲ್ಲಿಯ ಒಂದು ಶಾಸನ[3]ದಿಂದ ಈತನು ವಿಜಯನಗರದ ಅರಸನಾದ ವೆಂಕಟಪತಿರಾಯನ ಆಳಿಕೆಯಲ್ಲಿ (ಕ್ರಿ. ೧೫೮೬—೧೬೧೫) ಇದ್ದನೆಂದು ತಿಳಿದು ಬರುತ್ತದೆ. ಈತನು ಕರ್ಣಾಟಕ ಶಬ್ದಾನುಶಾಸನವನ್ನು ರಚಿಸಿದ ಕಾಲವು ಕ್ರಿ. ಶ. ೧೬೦೪ ಎಂದು ಗೊತ್ತಾಗುತ್ತದೆ.

ಈ ಗ್ರಂಥದಲ್ಲಿರುವುವು ೫೯೨ ಸೂತ್ರಗಳು; ನಾಲ್ಕು ಪಾದಗಳಾಗಿ ವಿಂಗಡಿಸಲ್ಪಟ್ಟಿರುವುವು. ಮೊದಲನೆಯ ಪಾದದಲ್ಲಿ- ಅಕ್ಷರ, ಸಂಜ್ಞೆ, ಸಂಧಿ, ಅವ್ಯಯ ಮೊದಲಾದುವುಗಳ ವಿಷಯವಾಗಿ, ಎರಡನೆಯದರಲ್ಲಿ- ಲಿಂಗ, ಸಂಸ್ಕೃತದ ಶಬ್ದಗಳನ್ನು ಕನ್ನಡದಲ್ಲಿ ಬಳಸುವ ವಿಧಾನ, ವಿಭಕ್ತಿ ಇವುಗಳ ವಿಷಯವಾಗಿ, ಮೂರನೆಯದರಲ್ಲಿ— ಸಮಾಸ, ಪುರುಷಾರ್ಥಕ ಸರ್ವನಾಮ, ವಚನ, ಸಂಖ್ಯಾವಾಚಿ, ತದ್ಧಿತ ಮೊದಲಾದುವುಗಳ ವಿಷಯವಾಗಿ, ನಾಲ್ಕನೆಯದರಲ್ಲಿ— ಧಾತು,

---

೧. ಈ ನಾಲ್ಕೂ ಗ್ರಂಥಗಳಲ್ಲದೆ (ಇವೆಲ್ಲಕ್ಕೂ ಹಿಂದೆಯೇ ಇದ್ದ) ಕ್ರಿ. ೯ನೆಯ ಶತಮಾನದಲ್ಲಿ ಹುಟ್ಟಿದ 'ನೃಪತುಂಗಾಭಿಮತಮಪ್ಪ' "ಕವಿರಾಜಮಾರ್ಗ"ವೆಂಬ ಗ್ರಂಥದಲ್ಲಿಯೂ ವ್ಯಾಕರಣ ವಿಷಯಗಳು ಅಲ್ಲಲ್ಲಿ ಬರುತ್ತವೆ. ಆದರೆ ಅದು ಮುಖ್ಯವಾಗಿ ಅಲಂಕಾರ ವಿಷಯಕ ಗ್ರಂಥ; ಅದರಲ್ಲಿ ಬರುವ ವ್ಯಾಕರಣ ವಿಷಯಗಳು ಪ್ರಾಸಂಗಿಕವಾಗಿ ಬರುವುವಾದರೂ ವಿರಳ. ಆದುದರಿಂದ ಅದನ್ನು ವ್ಯಾಕರಣ ಗ್ರಂಥಗಳಲ್ಲಿ ಎಣಿಸುವುದಿಲ್ಲ.

೨. ಈ ಸಂಗತಿಗಳು ಕರ್ಣಾಟಕ ಶಬ್ದಾನುಶಾಸನದ ಮೇಲಿನ ಮಂಜರೀಮಕರಂದದ ಕೊನೆಯ ಭಾಗದಿಂದ ತಿಳಿಯುತ್ತವೆ.

೩. ಈ ಶಾಸನದ ಒಂದು ಪ್ರತಿ ಮದ್ರಾಸು ಪ್ರಾಚ್ಯಕೋಶಾಲಯದಲ್ಲಿರುವುದೆಂದು ರಾ। ಬ। ಆರ್. ನರಸಿಂಹಾಚಾರ್ ಅವರು ಹೇಳುತ್ತಾರೆ. ಅವರಿಂದ (೧೯೨೩ರಲ್ಲಿ) ಸಂಪಾದಿತವಾದ ಕರ್ಣಾಟಕ ಶಬ್ದಾನುಶಾಸನದ ಇಂಗ್ಲಿಷ್ ಪ್ರಸ್ತಾವನೆ ಪುಟ 5.

ಮತ್ತು ಕೃತ್ ಪ್ರತ್ಯಯಗಳ ವಿಷಯವಾಗಿ ವಿವೇಚನೆ ಬರುವುದು. ಸೂತ್ರಗಳ ಮೇಲೆ ಭಾಷಾ ಮಂಜರಿಯೆಂಬ ವೃತ್ತಿಯನ್ನೂ, ಹೆಚ್ಚಿನ ವಿವರಣೆಗಾಗಿ ಮಂಜರೀಮಕರಂದವೆಂಬ ವ್ಯಾಖ್ಯೆಯನ್ನೂ ಭಟ್ಟಾಕಳಂಕನೇ ಬರೆದಿರುವನು.[೧] ವಿಷಯ ಪ್ರತಿಪಾದನದಲ್ಲಿ ಈತನು ಹಿಂದಣ ಕನ್ನಡ ವ್ಯಾಕರಣಕಾರರನ್ನೇ ಅನುಸರಿಸಿದ್ದರೂ, ಪ್ರತಿಪಾದನದ ವಿಷಯದಲ್ಲಿ ಮಾತ್ರ ಸಂಸ್ಕೃತವ್ಯಾಕರಣಕಾರರ ಮಾರ್ಗವನ್ನೇ ಅವಲಂಬಿಸಿರುವನು. ನಾಗವರ್ಮ ಕೇಶಿರಾಜರ ಗ್ರಂಥಗಳಿಂದ ಹಲವು ಕಡೆಗೆ ಉದಾಹರಿಸಿರುವನು; ಆದರೂ ಹಲವೆಡೆಗಳಲ್ಲಿ ಅವರನ್ನು ಹಿಂಬಾಲಿಸದೆ ಸ್ವತಂತ್ರವಾದ ಅಭಿಪ್ರಾಯಗಳನ್ನೂ ಪ್ರಕಟಿಸಿರುವನು; ಅಲ್ಲದೆ ಪ್ರತಿಪಾದನೆಯೂ ಹೆಚ್ಚು ವಿಸ್ತಾರವಾಗಿರುವುದು. ಕನ್ನಡದಲ್ಲಿ ದಕ್ಷಿಣೋತ್ತರ ಮಾರ್ಗಗಳಿರುವವೆಂಬುವನ್ನೂ ಒಂದೆಡೆ ಹೇಳಿದ್ದಾನೆ.[೨] ಆದರೆ ಅವುಗಳೊಳಗಿನ ಪ್ರಯೋಗ ವೈಷಮ್ಯದಲ್ಲಿ ಹೆಚ್ಚು ಉದಾಹರಣೆಗಳನ್ನು ಕೊಟ್ಟಿರುವುದಿಲ್ಲ. ಭಟ್ಟಾಕಳಂಕನು ಸಂಸ್ಕೃತವ್ಯಾಕರಣಶಾಸ್ತ್ರದಲ್ಲಿ ಒಳ್ಳೆಯ ಬಲ್ಲದನಾದುದರಿಂದ ಪಾಣಿನೀಯ, ಕಾತಂತ್ರ, ಜೈನೇಂದ್ರ, ಶಾಕಟಾಯನ, ಸಾರಸ್ವತ ಈ ಭಿನ್ನ ಮತಗಳನ್ನು ಅಲ್ಲಲ್ಲಿ ಉಲ್ಲೇಖಿಸಿರುವನಲ್ಲದೆ, ಆಯಾ ಗ್ರಂಥಗಳಿಂದಲೂ ಸೂತ್ರ ಮುಂತಾದುವುಗಳನ್ನು ಉದಾಹರಿಸಿದ್ದಾನೆ.

ಭಟ್ಟಾಕಳಂಕನು ಈ ಗ್ರಂಥವನ್ನು ರಚಿಸುವಲ್ಲಿಟ್ಟುಕೊಂಡಿದ್ದ ಧ್ಯೇಯವು ಉದಾತ್ತವೂ ಪ್ರಶಂಸನೀಯವೂ ಆಗಿರುವುದು. ಸಂಸ್ಕೃತಕ್ಕೆ ಹೆಚ್ಚಿನ ಪ್ರಾಶಸ್ತ್ಯವಿದ್ದ ಆಗಿನ ಕಾಲದಲ್ಲಿ ಕನ್ನಡವಂತಹ ದೇಶೀಯ ಭಾಷೆಗಳಿಗೆ ಯೋಗ್ಯ ಪುರಸ್ಕಾರದೊರೆಯುವದು ಅಶಕ್ಯವಾಗಿದ್ದಿತು. ಪಂಡಿತರೆಂಬ, ಶಾಸ್ತ್ರಜ್ಞರೆಂಬ ಎಣಿಕೆಗೆ ತಕ್ಕವರಾಗಬೇಕಾದರೆ ಸಂಸ್ಕೃತದ ಅಭ್ಯಾಸವನ್ನೆ ಮಾಡಬೇಕಾಗುತ್ತಿತ್ತು. ಪಂಡಿತರೆನಿಸಿಕೊಂಡವರು ಸಂಸ್ಕೃತದಲ್ಲಿಯೆ ಸಂಸ್ಕೃತವನ್ನು ಕುರಿತ ಗ್ರಂಥಗಳನ್ನೆ ರಚಿಸಬೇಕಾಗುತ್ತಿತ್ತು. ಇಂತಹ ಪರಿಸ್ಥಿತಿಯಲ್ಲಿ ವ್ಯಾಕರಣಶಾಸ್ತ್ರದಲ್ಲಿ ಪಾರಂಗತನಾದ ಭಟ್ಟಾಕಳಂಕನು ಕನ್ನಡಕ್ಕೆ ವ್ಯಾಕರಣವನ್ನು ರಚಿಸಲು ಪ್ರಯತ್ನಿಸಿದುದು ಸ್ತೋತ್ರಾರ್ಹವಾಗಿರುವುದು.[೩] ಸಂಸ್ಕೃತದಂತೆಯೆ ಕನ್ನಡವೂ ಪಂಡಿತರ ಅಧ್ಯಯನಕ್ಕೆ ತಕ್ಕ ವಿಷಯವೆಂದೂ ವ್ಯಾಕರಣದ ಅನುಶಾಸನಕ್ಕೆ ಯೋಗ್ಯವಾದುದೆಂದೂ ಈತನು ಕಂಠೋಕ್ತವಾಗಿ ಹೇಳಿದ್ದಾನೆ. ಕನ್ನಡವು ಶಾಸ್ತ್ರಕ್ಕೆ ಅನುಪಯೋಗವಾದ ಭಾಷೆಯಲ್ಲವೆಂದೂ, ಇದರಲ್ಲಿ ತತ್ತ್ವಾರ್ಥ ಮಹಾಶಾಸ್ತ್ರದ ಮೇಲೆ ವ್ಯಾಖ್ಯಾನರೂಪವಾದ ೯೬ ಸಾವಿರ ಗ್ರಂಥ ಪರಿಮಿತಿಯುಳ್ಳ ಬೃಹದ್‌ಗ್ರಂಥವು ರಚಿತವಾಗಿರುವುದೆಂದೂ, ಈ ಭಾಷೆಯಲ್ಲಿ ಶಬ್ದಾಗಮ, ಪರಮಾಗಮ, ಯುಕ್ತ್ಯಾಗಮ, ಕಾವ್ಯ,

---

೧. ಸೂತ್ರಗಳನ್ನು ರಚಿಸಿದವರೂ ವೃತ್ತಿ ಮತ್ತು ವ್ಯಾಖ್ಯಾನಗಳನ್ನು ರಚಿಸಿದವರೂ ಬೇರೆ ಬೇರೆ ವ್ಯಕ್ತಿಗಳೆಂದು ಕೆಲವರ ವಾದವಿದೆ. ಆದರೆ ಅದು ಅಷ್ಟು ಪ್ರಬಲಾಧಾರಗಳಿಂದ ಕೂಡಿದುದಲ್ಲ. ಆರ್. ನರಸಿಂಹಾಚಾರ್ ಸಂಪಾದಿಸಿದ ಕರ್ಣಾಟಕ ಶಬ್ದಾನುಶಾಸನದ ಇಂಗ್ಲಿಷ್ ಪ್ರಸ್ತಾವನೆ ಪು. 17-18.

೨. ಸೂತ್ರ ೨೮೮ರ ವ್ಯಾಖ್ಯಾನದಲ್ಲಿ.

೩. ಎರಡನೆಯ ನಾಗವರ್ಮನು 'ಕರ್ಣಾಟಕಭಾಷಾಭೂಷಣ'ವೆಂಬ ಕನ್ನಡದ ವ್ಯಾಕರಣವನ್ನು ಸಂಸ್ಕೃತದಲ್ಲಿ ಭಟ್ಟಾಕಳಂಕನಿಗಿಂತ ಮೊದಲೆ ಬರೆದಿದ್ದನಾದರೂ ಅದು ಈ ಗ್ರಂಥದಷ್ಟು ಪ್ರೌಢವೂ ಅಧಿಕೃತವೂ ಆಗಿರುವುದಿಲ್ಲ.

ನಾಟಕ, ಅಲಂಕಾರ, ಕಲಾಶಾಸ್ತ್ರ ವಿಷಯಕ ಗ್ರಂಥಗಳು ವಿಪುಲವಾಗಿ ಉಪಲಬ್ಧವಾಗಿರುವು ವೆಂದೂ, ಆದುದರಿಂದ ಕನ್ನಡ ನುಡಿಯು ಮಹಾಜನರಿಗೂ ಪರಿಗ್ರಾಹ್ಯವಾಗಿರುವುದೆಂದೂ ಹೇಳಿ[೧] ಭಟ್ಟಾಕಳಂಕನು ಈ ಗ್ರಂಥವನ್ನು ರಚಿಸಲುಪಕ್ರಮಿಸಿರುವನು.

ಪ್ರಯೋಗ-ಪ್ರಾಮಾಣ್ಯದಲ್ಲಿ ಶಬ್ದಮಣಿದರ್ಪಣವನ್ನು ಸರಿಗಟ್ಟಲಾರದಾದರೂ ಈ ಗ್ರಂಥವು ಶಾಸ್ತ್ರೀಯ ವಿವೇಚನೆಯಲ್ಲಿ ಪ್ರೌಢವೂ ವಿಸ್ತಾರಾರ್ಹವೂ ಆಗಿರುವುದರಿಂದ ಕನ್ನಡ ನುಡಿಯ ಆಳವಾದ ಅಭ್ಯಾಸಕ್ಕೆ ಬಹು ಉಪಯುಕ್ತವಾಗಿರುವುದು.

ಕರ್ನಾಟಕ ಶಬ್ದಾನುಶಾಸನ ಪ್ರಕಾಶಿಕೆಯು ಭಟ್ಟಾಕಳಂಕನ ಗ್ರಂಥದ ಕನ್ನಡ ಅನುವಾದವು; ಆದರೆ ಕೇವಲ ಅನುವಾದವಲ್ಲ. ಇದನ್ನು ರಚಿಸಿದ ಕುಂಡಲಗಿಯಾಚಾರ್ಯರು ಸಂಸ್ಕೃತ ಕನ್ನಡ ವ್ಯಾಕರಣಗಳಲ್ಲಿ ತಮಗಿದ್ದ ಅಗಾಧ ಪರಿಶ್ರಮವನ್ನು ಈ ಗ್ರಂಥ ರಚನೆಯಲ್ಲಿ ತೋರ್ಪಡಿಸಿದ್ದಾರೆ. ಅಲ್ಲಲ್ಲಿ ಭಟ್ಟಾಕಳಂಕನು ಉದಾಹರಿಸದಿದ್ದ ಹೆಚ್ಚಿನ ಆಧಾರಗಳನ್ನು ಸಂಸ್ಕೃತ ಮತ್ತು ಕನ್ನಡ ವ್ಯಾಕರಣ ಗ್ರಂಥಗಳಿಂದ ಉದಾಹರಿಸಿದ್ದಾರೆ. ಆದುದರಿಂದ ಕನ್ನಡಿಗರಿಗೆ ಇದರಿಂದ ಬಹಳ ಲಾಭವಾಗುವಂತಿದೆ. ಇವರು ರಚಿಸಿದ ಕೃತಿಯಲ್ಲಿ ಮೊದಲಿನ ಎರಡು ಪಾದಗಳು ಮುದ್ರಿತವಾಗಿದ್ದುವು. ಉಳಿದ ಭಾಗವು ಬಹುದಿವಸ ಹಾಗೆ ಬಿದ್ದುದರಿಂದ ಅಲ್ಲಲ್ಲಿ ಶಿಲವಾಗಿದ್ದಿತು. ಕೊನೆಯ ಕೆಲವು ಭಾಗವು ಗಲಿತವಾಗಿ ಹೋಗಿತ್ತು. ಆ ಭಾಗವನ್ನು ಪಂಡಿತ ಶ್ರೀ ಮಹಾದೇವ ಪ್ರಭಾಕರ ಪೂಜಾರವರು ಬರೆದು ಪೂರೈಸಿಕೊಟ್ಟುದರಿಂದ ಕನ್ನಡಿಗರೆಲ್ಲರಿಗೂ ಅವರಿಂದ ಬಹಳ ಉಪಕಾರವಾಗಿದೆಯೆಂಬುದನ್ನು ಬೇರೆ ಹೇಳಬೇಕಾಗಿಲ್ಲ.

ಶಿ. ಶಿ. ಬಸವನಾಳ

೧. ಕರ್ನಾಟಕ ಶಬ್ದಾನುಶಾಸನದ ಮಂಗಳಶ್ಲೋಕದ ಮೇಲಿನ ವ್ಯಾಖ್ಯಾನದಲ್ಲಿ.

ಶ್ರೀರಸ್ತು

# ಕರ್ಣಾಟಕ ಶಬ್ದಾನುಶಾಸನ ಪ್ರಕಾಶಿಕೆ

## ಪೀಠಿಕೆ

ಶ್ಲೋಕ ॥ ಅವ್ಯಾಜಕರುಣಾಸಿಂಧುರ್ಬಂಧುಸ್ಸರ್ವಸತಾಂ ಗುರುಃ
ಸ್ವಾಮೀ ಚ ವಾಜಿವದನಃ ಪ್ರೀಯತಾಂ ಚಿತ್ಸುಖಾಕೃತಿಃ

**ಶಬ್ದಸ್ವರೂಪ**

ಲೋಕದಲ್ಲಿ ಎಲ್ಲರಿಗೂ ತಮ್ಮ ತಮ್ಮ ಅಭಿಪ್ರಾಯವನ್ನು ಸ್ಪಷ್ಟವಾಗಿ ಇತರರಿಗೆ ತಿಳಿಸುವುದಕ್ಕೂ ತಾವು ತಿಳಿದುಕೊಳ್ಳುವುದಕ್ಕೂ ಶಬ್ದಗಳೇ ಮುಖ್ಯ ಸಾಧಕಗಳಾಗಿರುವುವು. ಶಬ್ದಗಳೆಂದರೆ ಪೃಥಿವಿ ಮೊದಲಾದ ಭೂತಚತುಷ್ಟಯದ ಕ್ರಿಯೆಗಳಿಂದ ಆಕಾಶದೇಶದಲ್ಲಿ ಹುಟ್ಟಿ ವಸ್ತುಗಳನ್ನಾಶ್ರಯಿಸಿಕೊಂಡಿರುವ ಗುಣವಿಶೇಷವೆಂದು ತಿಳಿಯಬೇಕು. ಇವುಗಳಿಗೆ ಪಂಚಭೂತ ಗುಣತ್ವವು ಭೂತಚತುಷ್ಟಯಪ್ರಯೋಜ್ಯತ್ವದಿಂದಲೂ ಆಕಾಶದೇಶಸ್ಥತ್ವದಿಂದಲೂ ಉಂಟಾಗಿರುವದೆಂದು ಕೆಲವು ಶಾಸ್ತ್ರಕಾರರು ವ್ಯವಹರಿಸಿರುವರು. **ಕರ್ಣಾಟಕ ಶಬ್ದಮಣಿದರ್ಪಣಕಾರನು**—

ಅನುಕೂಲಪವನಸಂಜೀ
ವನಿಷ್ಟ್ರಂ ನಾಭಿಮೂಲದೊಳ್ ಕವಳಿಯ ಪಾಂ
ಗಿನವೊಲ್ ಶಬ್ದದ್ರವ್ಯಂ
ಜನಿಯಿಸುಗುಂ ಶ್ವೇತಮದಱ ಕಾರ್ಯಂ ಶಬ್ದಂ (ಆರಂಭದಿಂದ ೯ನೆಯ ಪದ್ಯ)

ಎಂಬ ಸೂತ್ರದಲ್ಲಿ ಶಬ್ದವನ್ನು ದ್ರವ್ಯವೆಂತಲೂ ಶ್ವೇತಗುಣವುಳ್ಳದೆಂತಲೂ ವ್ಯವಹರಿಸಿರುವನು. ಆದರೆ ನ್ಯಾಯ ಮೊದಲಾದ ಶಾಸ್ತ್ರಜ್ಞರಲ್ಲಿ ಅನೇಕರು ಶಬ್ದಗಳನ್ನು ಶ್ರವಣೇಂದ್ರಿಯಗ್ರಾಹ್ಯವಾದ ಗುಣಗಳೆಂದು ಹೇಳಿರುವರು. ಶಬ್ದಗಳು ಎಂದಿಗೂ ಚಕ್ಷುರಿಂದ್ರಿಯಕ್ಕೆ ಗೋಚರವಲ್ಲದೆ ಶ್ರೋತ್ರೇಂದ್ರಿಯ ಮಾತ್ರದಿಂದ ಗ್ರಾಹ್ಯವಾದುದರಿಂದ ಗುಣಗಳಲ್ಲಿ ಪರಿಗಣಿಸುವುದು ಉಚಿತವಲ್ಲ. **ದರ್ಪಣಕಾರನು** ಮುಂದೆ—

ವ್ಯವಹರಿಪುವೆರಡು ರೂಪಿಂ
ದವಕ್ಕರಂ ಶ್ರಾವಣಂ ಸ್ವಸ್ವೈಕಾಕಾರಂ
ವಿವಿಧಾಕಾರಂ ಲಿಪಿಭೇ
ದವೃತ್ತಿಯಿಂ ಚಾಕ್ಷುಷಂ ಪುರಾತನಮತದಿಂ (ಸೂತ್ರ ೪)

ಎಂಬ ಸೂತ್ರದಲ್ಲಿ ಲಿಪಿಭೇದವೃತ್ತಿಯಿಂ **ಚಾಕ್ಷುಷಂ** ಎಂದು ಹೇಳಿರುವುದರಿಂದ ಧ್ವನಿರೂಪವಾದುದು ಚಾಕ್ಷುಷವಲ್ಲವೆಂದು ಸ್ಪಷ್ಟವಾಗುವುದು. ಮೇಲಿನ ಸೂತ್ರದಲ್ಲಿ ಶಬ್ದಕ್ಕೆ ದ್ರವ್ಯವನ್ನು ಹೇಳಿರುವುದು ದ್ರವ್ಯವನ್ನೆ ಆಶ್ರಯಿಸಿರುವುದರಿಂದ ಔಪಚಾರಿಕವಾಗಿ ದ್ರವ್ಯವೆಂದು ತಿಳಿಯತಕ್ಕದ್ದು. ಹೀಗೆಯೆ ಲಿಪಿಗಳು ಶಬ್ದಾಭಿವ್ಯಂಜಕ ರೇಖಾವಿಶೇಷಗಳಾಗಿದ್ದರೂ ಅವನ್ನು ಚಾಕ್ಷುಷವೆಂದು

ಔಪಚಾರಿಕವಾಗಿ ತಿಳಿಯಬೇಕು. ಆದುದರಿಂದಲೆ **ಪತಂಜಲಿಯು** ವ್ಯಾಕರಣ **ಮಹಾಭಾಷ್ಯ**ದಲ್ಲಿ ಪಸ್ಪಶಾಹ್ನಿಕದ ಅಂತ್ಯದಲ್ಲಿ

**« ಲಿಪಾವೇವಾಕ್ಷರಭ್ರಮವತಾಂ ಪುಸ್ತಕಮುಪಯುಜ್ಯತೇ »**

ಎಂದು **ಲಿಪಿಗೆ** ಅಕ್ಷರವೆಂದು ಹೇಳುವದು ಭ್ರಾಂತಿಯೆಂದು ಸೂಚಿಸಿರುವನು.

## ಶಬ್ದಭೇದಗಳು

**ಈ** ಶಬ್ದವು ಬುದ್ಧಿಹೇತು, ಅಬುದ್ಧಿಹೇತುಯೆಂದು ಎರಡು ತೆರನಾಗಿರುವುದು. ಅವುಗಳಲ್ಲಿ ಮೇಘಾದಿ ಶಬ್ದವು ಅಬುದ್ಧಿಹೇತುವು. ಬುದ್ಧಿಹೇತುವಾದರೂ ಸ್ವಾಭಾವಿಕವೆಂತಲೂ ಕಾಲ್ಪನಿಕ ವೆಂತಲೂ ಎರಡು ವಿಧವಾಗಿರುವುದು. ಅವುಗಳಲ್ಲಿ ಸ್ವಾಭಾವಿಕವಾದ ಶಬ್ದವು ವರ್ಣವಿಶೇಷ ಗಳನ್ನು ಸ್ಪಷ್ಟಪಡಿಸದೆ ಹಸಿತ-ರುದಿತ ಮೊದಲಾದ ಪ್ರಾಣಿಮಾತ್ರದಲ್ಲಿರುವ ಶಬ್ದವು. ಕಾಲ್ಪನಿಕ ವಾದುದು ವಾದ್ಯಾದಿ ಶಬ್ದ, ಗೀತಿರೂಪ ಶಬ್ದ, ವರ್ಣಾತ್ಮಕ ಶಬ್ದಗಳೆಂದು ಮೂರು ವಿಧವಾಗಿರು ವುದು. ಇವುಗಳಲ್ಲಿ ಭೇರಿ ಮೊದಲಾದುವುಗಳ ಶಬ್ದವು ವಾದ್ಯಾದಿ ಶಬ್ದವೆಂತಲೂ ಗಾಯಕ ರಿಂದ ರಾಗಾಭಿವ್ಯಂಜಕವಾಗಿ ಉಚ್ಚರಿಸಲ್ಪಡುವ ನಿಷಾದಾದಿರೂಪವಾದ ಶಬ್ದವು ಗೀತಿರೂಪ ಶಬ್ದವೆಂತಲೂ ಧ್ವನಿವಿಶೇಷಸಹಕೃತವಾಗಿ ಕಂಠತಾಲ್ವಾದಿಗಳ ಅಭಿಘಾತದಿಂದ ಹುಟ್ಟಿದ ಶಬ್ದವು ವರ್ಣಾತ್ಮಕ ಶಬ್ದವೆಂತಲೂ ವ್ಯವಹರಿಸಲ್ಪಡುವುದು. ಇಂತಹ ಅನೇಕ ಭೇದಗಳಿಂದ ಭಿನ್ನಭಿನ್ನ ವಾಗಿರುವ ಶಬ್ದಗಳಿಗೆ ಸಾಮಾನ್ಯವಾಗಿ ಧ್ವನಿಯೆಂದು ವ್ಯವಹಾರವುಂಟು. ಯಾವುದು ದೂರ ದಲ್ಲಿದ್ದರೂ ಸಮೀಪದಲ್ಲಿದ್ದರೂ ಕಿವಿಯ ಸಹಾಯದಿಂದ ಆತ್ಮಗೋಚರವಾಗುವುದೋ ಅದೇ ಧ್ವನಿ, ಶಬ್ದ ಎಂದು ತಿಳಿಯಲ್ಪಡುವುದು.

## ವ್ಯಾಕರಣದ ಉಪಯೋಗ

ಇಂತಹ ಅನೇಕ ಪ್ರಕಾರವಾದ ಶಬ್ದಗಳಲ್ಲಿ ಲೋಕವ್ಯವಹಾರಕ್ಕೆ ಮುಖ್ಯೋಪಯೋಗಿ ಯಾದ ವರ್ಣಾತ್ಮಕ ಶಬ್ದಗಳನ್ನು ತಿಳಿದುಕೊಳ್ಳುವುದು ಮನುಷ್ಯರಿಗೆ ಅತ್ಯಾವಶ್ಯಕವಾಗಿರುವುದು. ಅಂತಹ ವರ್ಣಾತ್ಮಕವಾದ ಶಬ್ದಗಳು ಲೋಕದಲ್ಲಿ ಅನೇಕ ದೇಶ-ಜಾತಿ-ಭಾಷಾಭೇದಗಳಿಂದ ಭೇದಗಳನ್ನು ಹೊಂದಿ ಅನಂತವಾಗಿರುವುದರಿಂದ ಪ್ರತಿಪದವನ್ನೂ ಪಾಠಮಾಡಿ ತಿಳಿದುಕೊಳ್ಳು ವುದು ಮನುಷ್ಯನ ಜೀವಮಾನದಲ್ಲಿ ಅಸಾಧ್ಯವೆಂದು ಪ್ರಾಚೀನ ಶಾಸ್ತ್ರಕಾರರು ಅನೇಕ ಮಹಾ ಭಾಷೆಗಳಿಗೆ ವ್ಯಾಕರಣವನ್ನು ಬರೆದಿಟ್ಟಿರುವರು. ಏಕೆಂದರೆ—

**" ಸರ್ವೇಷಾಂ ವ್ಯವಹಾರಾಣಾಂ ಮೂಲಂ ಶಬ್ದಾರ್ಥನಿರ್ಣಯಃ**

**ಸ ಚ ವ್ಯಾಕರಣಾದೇವ ಮುನಿಭಿಸ್ತೇನ ತತ್ಕೃತಂ "**

ಎಂಬ ಶ್ಲೋಕದಿಂದ ಎಲ್ಲಾ ವ್ಯವಹಾರಕ್ಕೂ ಶಬ್ದಗಳ ನಿರ್ಣಯವೂ ಅರ್ಥಗಳ ನಿರ್ಣಯವೂ ಮೂಲವಾಗಿರುವುದು; ಆ ಶಬ್ದಾರ್ಥ ನಿರ್ಣಯವು ವ್ಯಾಕರಣದಿಂದಲೆ ಉಂಟಾಗುವುದು; ಆದುದ ರಿಂದಲೆ ಋಷಿಗಳು ವ್ಯಾಕರಣವನ್ನು ಬರೆದಿರುವರು- ಎಂದು ಹೇಳಿರುವುದರಿಂದ ವ್ಯಾಕರಣದಿಂದಲೆ ಶಬ್ದಗಳ ಸಾಧುತ್ವವನ್ನು ತಿಳಿದುಕೊಳ್ಳುವುದು ಸುಲಭವೆಂದು ತೋರುವುದು. ಆದುದರಿಂದಲೆ **ಪತಂಜಲಿ-ಭಾಷ್ಯದಲ್ಲಿ**—

**«ಶಬ್ದಾನಾಮಾನಂತ್ಯಾತ್ ಶೃಂಗಗ್ರಾಹಿಕಯಾ ಬೋದ್ಧುಂ ಬೋಧಯಿತುಂ ಚಾಶಕ್ಯಾ । ಚತ್ವಾ**

ರೋ ವೇದಾಃ । ಏಕವಿಂಶತಿಧಾ ಬಾಹ್ವೃಚ್ಯಂ । ಏಕಶತಮಧ್ವರ್ಯು ಶಾಖಾಃ । ಸಹಸ್ರವರ್ತ್ಮಾ ಸಾಮವೇದಃ । ನ್ವಾದಶಧಾ ಆಥರ್ವಣಃ ಸಾಂಗಾಃ ಸರಹಸ್ಯಾಃ ಪುರಾಣಾಃ । ಸೇತಿಹಾಸಾಃ । ಇತ್ಯಾದಿ ಪ್ರಯೋಗವಿಷಯಾ ಬಹವಃ । ಬೃಹಸ್ಪತಿಶ್ಚ ವಕ್ತಾ ಇಂದ್ರಶ್ಚ ಅಧ್ಯೇತಾ ದಿವ್ಯವರ್ಷಸಹಸ್ರಮಧ್ಯಯನಕಾಲಃ । ತಥಾಪಿ ನಾಂತಂ ಜಗಾಮ । ಕಿಮುತ ಅದ್ಯತನತ್ವೇ । "

ಎಂದು ಮೊದಲಾಗಿ ಅಲ್ಲಲ್ಲಿ ಅಲ್ಪಾಯುಷ್ಕರಾದ ಈಗಿನ ಜನರಿಗೆ ಶಬ್ದಗಳು ಅಪರಿಮಿತವಾಗಿರುವುದರಿಂದ ಎಲ್ಲಾ ಶಬ್ದಗಳನ್ನು ತಿಳಿದುಕೊಳ್ಳುವುದು ಅಸಾಧ್ಯವೆಂದು ತೋರಿ ವ್ಯಾಕರಣವೆಂಬ ಸುಲಭೋಪಾಯವನ್ನು ಪೂರ್ವಿಕರು ಮಾಡಿರುವರೆಂದು ಸೂಚಿತವಾಗುವುದು.

## ವ್ಯಾಕರಣವೆಂದರೇನು?

ವ್ಯಾಕರಣವೆಂದರೆ, — 'ವ್ಯಾಕ್ರಿಯಂತೇ ವ್ಯುತ್ಪಾದ್ಯಂತೇ, ಅಸಾಧುಭ್ಯೋ ವಿವಿಚ್ಯ ಬೋಧ್ಯಂತೇ ಯತ್ರ', ಎಂಬ ನಿರ್ವಚನದಿಂದ ಶಬ್ದಗಳ ಸಾಧುತ್ವವನ್ನು ಎಂದರೆ ಪ್ರಯೋಗಾರ್ಹತೆಯನ್ನು ಬೋಧಿಸುವ ಗ್ರಂಥಕ್ಕೆ ವ್ಯಾಕರಣವೆಂದು ಹೆಸರಾಗುವುದು. ಇಂತಹ ವ್ಯಾಕರಣಗಳನ್ನು ಅನೇಕ ಭಾಷೆಗಳಲ್ಲಿ ಅನೇಕ ವಿದ್ವಾಂಸರು ಬರೆದಿಟ್ಟಿರುವರು. ಇವರಲ್ಲಿ ಒಬ್ಬನು ಸ್ಯಾದ್ವಾದವಿದ್ಯಾವಿಶಾರದನಾದ **ಭಟ್ಟಾಕಳಂಕದೇವನು.** ಇವನು ಸಕಲ ಕರ್ಣಾಟಕ ಜನರನ್ನು ಅನುಗ್ರಹಿಸಬೇಕೆಂಬಿಚ್ಛೆಯಿಂದ, ಈ ಲೋಕದಲ್ಲಿ ವಾಙ್ಮಲಗ್ರಸ್ತರಾದ ಪ್ರವಕ್ತೃಗಳಿಗೆ ಶಿಷ್ಯರ ಅನುಪಲಾಲ್ಯತ್ವವನ್ನೂ ಆತ್ಮಶಾಸನಶ್ರೋತೃಗಳಿಗೆ ಲಾಘವಕಾರಿತ್ವವನ್ನೂ ಪರಿಹರಿಸಬೇಕೆಂದಪೇಕ್ಷಿಸಿದವನಾಗಿ, ಧರ್ಮಾರ್ಥಕಾಮಮೋಕ್ಷ ವಿದ್ಯೆಗಳೆಲ್ಲಾ ಶಬ್ದನಿಬಂಧನಗಳೆ ಆದುದರಿಂದ ಎಲ್ಲಾ ವಿದ್ಯೆಗಳಿಗೂ ಪ್ರದೀಪಭೂತವಾಗಿಯೂ ವಾಙ್ಮಲಗಳಿಗೆ ಚಿಕಿತ್ಸಿತರೂಪವಾಗಿಯೂ ಇರುವುದು ವ್ಯಾಕರಣಕ್ಕಿಂತಲೂ ಬೇರೆ ಯಾವುದೂ ಇಲ್ಲವೆಂದು ಯೋಚಿಸಿ, ಕಿವಿಯಿಂದ ಕೇಳಿದ ಮಾತ್ರಕ್ಕೆ ಮನಸ್ಸಿಗೆ ಆನಂದವನ್ನುಂಟುಮಾಡುತ್ತಿರುವ ಭಾಷೆ **ಕಾರ್ಣಾಟಕಿ**ಯು ಅಲ್ಲದೆ ಬೇರೆಯಿಲ್ಲವೆಂದು ನಿಶ್ಚಯಿಸಿ, ತದ್ವಿಷಯಕವಾದ ಅನೇಕ ಗ್ರಂಥಗಳನ್ನು ಪರ್ಯಾಲೋಚಿಸಿ, ಅಪಶಬ್ದಪರಿಹಾರದಿಂದ ಪ್ರಕೃತಿ-ಪ್ರತ್ಯಯವಿಭಾಗ ಪ್ರದರ್ಶನಪೂರ್ವಕವಾಗಿ ಪ್ರಯೋಗಾರ್ಹ ಶಬ್ದ ಪ್ರತಿಪಾದನರೂಪ ಪ್ರಕ್ರಿಯಾವಿಷಯಗಳಾದ ಸಿದ್ಧ ಶಬ್ದಗಳನ್ನು ಬೋಧಿಸಲು, ಲಕ್ಷಣ-ಪ್ರತಿಪದೋಕ್ತರೂಪವಾದ ಪಕ್ಷಗಳೆರಡರಲ್ಲಿ ಪ್ರತಿಪದೋಕ್ತ ಪಕ್ಷವನ್ನವಲಂಬಿಸುವುದು ಅಸಾಧ್ಯವಾದುದರಿಂದ ಲಕ್ಷಣವನ್ನು ಹೇಳುವುದೇ ಉತ್ತಮವೆಂದು ಭಾವಿಸಿ, ಸ್ವಲ್ಪ ಗ್ರಂಥವಾಗಿಯೂ ಸುಬೋಧವಾಗಿಯೂ ಸಂಪೂರ್ಣವಾಗಿಯೂ ನಿರ್ದುಷ್ಟವಾಗಿಯೂ ವಿಷಯಸಂಬಂಧಾಧಿಕಾರಪ್ರಯೋಜನರೂಪವಾದ ಸಂಬಂಧ ಚತುಷ್ಟಯಯುಕ್ತವಾಗಿಯೂ ಇರುವ **'ಸಿದ್ಧಾ ಹಿ ಶುದ್ಧಕಾಃ'** ಎಂಬ ಸೂತ್ರವೇ ಮೊದಲಾದ ಐನೂರತೊಂಬತ್ತೆರಡು ಸೂತ್ರಗಳುಳ್ಳ **ಶಬ್ದಾನುಶಾಸನ**ವೆಂಬ ಗ್ರಂಥವನ್ನು ನಿರ್ಮಿಸಿ, ಇದರ ಅರ್ಥವನ್ನು ಸುಲಭವಾಗಿ ತಿಳಿಸಲು **ಭಾಷಾಮಂಜರಿ**ಯೆಂಬ ವೃತ್ತಿಯನ್ನು ಬರೆದು, ಆ ವೃತ್ತಿಯರ್ಥವನ್ನು ಸ್ಪಷ್ಟಪಡಿಸಿ ಅನೇಕ ಶಾಸ್ತ್ರವಿಚಾರಗಳನ್ನು ತಿಳಿಸಲು **ಮಂಜರೀಮಕರಂದ**ವೆಂಬ ವ್ಯಾಖ್ಯಾನವನ್ನೂ ಬರೆದು, ಲೋಕದಲ್ಲಿ

**" ಸಮಾಪ್ತಿಕಾಮೋ ಮಂಗಳಮಾಚರೇತ್ "**

ಎಂಬ ಶಿಷ್ಟಾಚಾರದಿಂದನುಮಿತವಾದ ಶ್ರುತಿಗೆ ಅನುಸಾರವಾಗಿ ವೃತ್ತಿಗ್ರಂಥದ ಆದಿಯಲ್ಲಿ ಮಂಗಳ

ವನ್ನು ಮಾಡಿ,ಈ ಗ್ರಂಥವನ್ನು ಓದುವವರಿಗೂ ಹೇಳುವವರಿಗೂ ಮಂಗಳವಾಗಲೆಂದು ಆ ಮಂಗಳ ವನ್ನು ಬೋಧಿಸುವ ಶ್ಲೋಕವನ್ನು ಗ್ರಂಥದ ಆದಿಯಲ್ಲಿ ಬರೆದಿರುವನು.

**ಮಂಗಳಶ್ಲೋಕಂ**

**ನಮಃ ಶ್ರೀವರ್ಧಮಾನಾಯ ವಿಶ್ವವಿದ್ಯಾವಭಾಸಿನೇ**
**ಸರ್ವಭಾಷಾಮಯೀ ಭಾಷಾ ಪ್ರವೃತ್ತಾ ಯನ್ಮುಖಾಂಬುಜಾತ್**

ವ್ಯಾಖ್ಯೆ || ಈ ಶ್ಲೋಕದಲ್ಲಿ,— 'ಅಸ್ತು', ಎಂಬ ಪದವನ್ನಾಗಲಿ, 'ಕರೋಮಿ', ಎಂಬ ಪದವನ್ನಾಗಲಿ ಅಧ್ಯಾಹಾರ ಮಾಡಿಕೊಳ್ಳಬೇಕು. ಇವುಗಳಲ್ಲಿ 'ಅಸ್ತು'ವೆಂಬ ಪದವು ಅಕರ್ಮಕ ಧಾತುವಿನಿಂದ ನಿಷ್ಪನ್ನವಾಗಿರುವುದರಿಂದ ಕರ್ಮಾಪೇಕ್ಷೆ ಇಲ್ಲದಿದ್ದರೂ ಕರ್ತೃವನ್ನಪೇಕ್ಷಿಸುವುದು. ಈ ಎರಡು ವಿಧವಾದಾಕಾಂಕ್ಷೆಯನ್ನು ಪೂರಣೆಮಾಡಲು 'ನಮಃ' ಎಂಬ ಪದವನ್ನು ಅವ್ಯಯ ವೆಂದಾಗಲಿ ಪ್ರಥಮಾಂತವೆಂದಾಗಲಿ ದ್ವಿತೀಯಾಂತವೆಂದಾಗಲಿ ತಿಳಿಯಬೇಕು. 'ಶ್ರೀವರ್ಧಮಾ ನಾಯ' ಎಂಬುದು ವಿಶೇಷ್ಯವು. ಇದಕ್ಕೆ 'ವಿಶ್ವವಿದ್ಯಾವಭಾಸಿನೇ' ಎಂಬುದು ವಿಶೇಷಣವು. 'ಸರ್ವ ಭಾಷಾಮಯೀ ಭಾಷಾ ಪ್ರವೃತ್ತಾ ಯನ್ಮುಖಾಂಬುಜಾತ್' ಎಂಬ ಉತ್ತರಾರ್ಧವೆಲ್ಲಾ ವರ್ಧ ಮಾನಸ್ವಾಮಿಯ ಗುಣಗಳನ್ನೇ ವಿವರಿಸುವುದರಿಂದ ಇದನ್ನೂ ವಿಶೇಷಣವೆಂದೇ ತಿಳಿಯಬೇಕು. ಒಟ್ಟು ಈ ಶ್ಲೋಕದರ್ಥವೇನೆಂದರೆ— 'ಯನ್ಮುಖಾಂಬುಜಾತ್,' ಯಾವ ಪರಮಾತ್ಮನ ಮುಖ ಕಮಲದ ದೆಸೆಯಿಂದ, 'ಸರ್ವಭಾಷಾಮಯೀ', ಸರ್ವ ಭಾಷೆಗಳನ್ನೂ ಒಳಗೊಂಡಿರುವ, 'ಭಾಷಾ', ಮಾತು, 'ಪ್ರವೃತ್ತಾ' ಪ್ರವೃತ್ತಿಸಿರುವುದೊ, (ಅಂತಹ) 'ವಿಶ್ವವಿದ್ಯಾವಭಾಸಿನೇ,' ಸಕಲ ವಿದ್ಯೆಗ ಳಿಂದಲೂ ಪ್ರಕಾಶಮಾನನಾದ,'ಶ್ರೀವರ್ಧಮಾನಾಯ', ಅಂತರಂಗ ಬಹಿರಂಗರೂಪ ಲಕ್ಷ್ಮೀದ್ವಯ ಯುಕ್ತನಾದ ವರ್ಧಮಾನತೀರ್ಥಕರನಿಗೆ, 'ನಮಃ', ನಮಸ್ಕಾರವು, 'ಅಸ್ತು', ಆಗಲಿ; ಅಥವಾ ನಮಸ್ಕಾರವನ್ನು, 'ಕರೋಮಿ' ಮಾಡುತ್ತೇನೆ.

**ವಿಚಾರ**

ಈ ಮಂಗಳ ಶ್ಲೋಕದಲ್ಲಿ ಹೇಳಿರುವ

**'ಸರ್ವಭಾಷಾಮಯೀ ಭಾಷಾ ಪ್ರವೃತ್ತಾ ಯನ್ಮುಖಾಂಬುಜಾತ್'**

ಎಂಬ ವಾಕ್ಯದಿಂದ ಭಗವದ್ವಾಣಿಯು ಏಕರೂಪವಾಗಿದ್ದರೂ ಲೋಕದಲ್ಲಿ ಹೇಗೆ ವರ್ಷಾಕಾಲದ ಮೇಘಗಳು ಅಂತರಿಕ್ಷದಿಂದ ಕರೆಯುತ್ತಿರುವ ನೀರು ಒಂದೆ ವಿಧವಾಗಿ ಯಾವ ರಸವೂ ತೋರ ದಿರುವುದಾಗಿದ್ದರೂ ಲವಣ-ಕೃಷ್ಣ-ಊಷರ ಮೊದಲಾದ ಬೇರೆ ಬೇರೆ ನೆಲಗಳಲ್ಲಿ ಬಿದ್ದು ಆಯಾಯ ನೆಲಗಳ ಗುಣಗಳಿಂದ ಲವಣ-ಮಧುರ-ಕಷಾಯ ಮೊದಲಾದ ರಸಭೇದಗಳನ್ನು ಹೊಂದಿ ಭಿನ್ನಭಿನ್ನವಾಗಿರುವುದೊ, ಹೇಗೆ ತೋಟಗಳಲ್ಲಿ ಒಂದೆ ಬಾವಿಯ ನೀರನ್ನು ಎರೆದು ಬೆಳೆಸಿದ ಗಿಡಗಳ ಫಲಗಳು ಮಧುರ-ಆಮ್ಲ-ಕಟು-ತಿಕ್ತ ಮೊದಲಾದ ಅನೇಕ ರಸಗಳುಳ್ಳವು ಗಳಾಗಿ ಪರಿಣಮಿಸುವುವೊ, ಮತ್ತು ಹೇಗೆ ಶರತ್ಕಾಲದಲ್ಲಿ ಸೂರ್ಯನು ಸ್ವಾತೀ ನಕ್ಷತ್ರಗತ ನಾಗುತ್ತಿರಲು ಶುಭ್ರವಾದಭ್ರದಿಂದ ಬಿದ್ದ ನೀರು ತಾಮ್ರಪರ್ಣಿ ಶುಕ್ತಿಗಳಲ್ಲಿ ಬೀಳಲು ಮುಕ್ತಾ ಫಲಗಳಾಗಿಯೂ ಸಪ್ತಚ್ಛದಗಳಲ್ಲಿ ಬೀಳಲು ಪಚ್ಚಕರ್ಪೂರವಾಗಿಯೂ ಪರಿಣಮಿಸುವುದೊ,

ಹಾಗೆ ನಾನಾದೇಶ ನಾನಾಜನಪದ ನಾನಾಜಾತಿಭೇದಗಳಿಂದ ನಾನಾಭಾಷೆಗಳಾಗಿ ಪರಿಣಮಿಸಿರುವುದೆಂದು ಸೂಚಿಸಲ್ಪಡುವುದು.

ಇಲ್ಲಿ ಭಾಷೆಯೆಂದರೆ—'ಭಾಷತೇ ಇತಿ ವಾ, ಭಾಷ್ಯತೇ ಅನಯಾ ಇತಿ ವಾ, ಭಾಷಣಮಿತಿ ವಾ' ಎಂಬ ಮೂರು ವಿಧವಾದ ವ್ಯುತ್ಪತ್ತಿಯಿಂದ ಭಾಷಾಶಬ್ದವು 'ಭಾಷ್ ವ್ಯಕ್ತಾಯಾಂ, ವಾಚಿ'ಯೆಂಬ ಸಂಸ್ಕೃತ 'ಭಾಷ್' ಧಾತುವಿನ ಮೇಲೆ ಕರ್ತೃ-ಅರ್ಥದಲ್ಲಾಗಲಿ ಕರ್ಮಾರ್ಥದಲ್ಲಾಗಲಿ ಭಾವಾರ್ಥದಲ್ಲಾಗಲಿ ಅಕಾರ ಪ್ರತ್ಯಯವು ಬಂದು ನಿಷ್ಪನ್ನವಾಗಿರುವುದರಿಂದ ಸಂಕೇತ ಸಂಬಂಧದಿಂದ ಪದಾರ್ಥ ಗೋಚರ ಪ್ರವೃತ್ತಿ ನಿವೃತ್ತಿರೂಪವಾದ ವ್ಯವಹಾರಕ್ಕುಪಯುಕ್ತವಾದ ವಾಗ್ವಿಶೇಷಗಳೆಂದರ್ಥವಾಗುವುದು. ಇಂತಹ ಭಾಷೆಗಳು ನಾನಾ ಭೇದಗಳುಳ್ಳವಾಗಿದ್ದರೂ ಈಗ ಲೋಕದಲ್ಲಿ ಪ್ರಸಿದ್ಧವಾಗಿರುವುವು. ಅಷ್ಟಾದಶ ಮಹಾಭಾಷೆಗಳೆಂತಲೂ ಸಪ್ತಶತಕ್ಷುಲ್ಲಕಭಾಷೆಗಳೆಂತಲೂ ತಿಳಿದುಕೊಳ್ಳಬೇಕು.

ಹೀಗೆ ಭಗವದ್ಭಾಷೆಯು ಸ್ವೋತ್ಪತ್ತಿ ಸಮಯದಲ್ಲಿ ಸಮುದ್ರಘೋಷಗಳಂತೆ ಅವ್ಯಕ್ತಾಕ್ಷರ ಭಾಷಾರೂಪವಾಗಿದ್ದರೂ ಶ್ರೋತೃಗಳ ಶ್ರೋತ್ರಪ್ರದೇಶಗಳನ್ನು ಹೊಂದಿ ಆಯಾ ಭಾಷೆಗಳಾಗಿ ಪರಿಣಮಿಸುವುದು ಭಗವದ್ವಾಣಿಯ ವಿಚಿತ್ರ ಮಹಿಮೆಯೆಂದು ಪ್ರಾಜ್ಞರಾದ **ಪದ್ಮನಂದಾಚಾರ್ಯರು—**

**ಸಮುದ್ರಘೋಷಾಕೃತಿರರ್ಹತಿ ಪ್ರಭೌ ಯದಾ ತ್ವಮುತ್ಕರ್ಷಮುಪಾಗತಾ ಭೃಶಂ**
**ಅಶೇಷಭಾಷಾತ್ಮತಯಾ ತ್ವಯಾ ತದಾ ಕೃತಂ ನ ಕೇಷಾಂ ಹೃದಿ ಮಾತರದ್ಭುತಂ**

ಎಂಬ ಶ್ಲೋಕದಿಂದ ಸೂಚಿಸಿರುವರು. ಇದರಂತೆ ಜೈನರಲ್ಲಿ ಪ್ರಸಿದ್ಧವಾಗಿರುವ **ಮಹಾಪುರಾಣ**ವೆಂಬ ಪ್ರಮಾಣ ಗ್ರಂಥದಲ್ಲಿ—

**ದೇವಾ ದೈವೀಂ ನರಾ ನಾರೀಂ ಶಬರಾಶ್ಚಾಪಿ ಶಾಬರೀಂ**
**ತಿರ್ಯಂಚೋಪಿ ಚ ತೈರಶ್ಚೀಂ ಮೇನಿರೇ ಭಗವದ್ಗಿರಂ**

ಎಂದು ಹೇಳಲ್ಪಟ್ಟಿರುವುದು. ಮತ್ತು ಪೂರ್ವಾಚಾರ್ಯರು ಭಗವದ್ವಾಣಿಯನ್ನು ಗಾಂಭೀರ್ಯ, ಮಾಧುರ್ಯ ಮೊದಲಾದ ಚತುರ್ದಶಗುಣಗಳಿಂದ ಕೂಡಿರುವುದೆಂದು ವರ್ಣಿಸಿರುವರು. ಹೇಗೆಂದರೆ —

**ಗಂಭೀರಂ ಮಧುರಂ ಮನೋಹರತರಂ ದೋಷವ್ಯಪೇತಂ ಹಿತಂ**
**ಕಂಠೋಷ್ಠಾದಿವಚೋನಿಮಿತ್ತರಹಿತಂ ನೋ ವಾತರೋಧೋದ್ಗತಂ**
**ಸ್ಪಷ್ಟಂ ತತ್ತದಭೀಷ್ಟವಸ್ತುಕಥಕಂ ನಿಶ್ಶೇಷಭಾಷಾತ್ಮಕಂ**
**ದೂರಾಸನ್ನಸಮಂ ಶಮಂ ನಿರುಪಮಂ ಜೈನಂ ವಚಃ ಪಾತು ನಃ**

ಎಂದು ಹೇಳಿರುವುದರಿಂದ ಭಗವದ್ವಾಣಿಯು ಅಸಾಧಾರಣಗುಣಗಳಿಂದ ಕೂಡಿರುವುದೆಂದು ತಿಳಿಯಬೇಕು.

ಹೀಗೆ ಈ ಶ್ಲೋಕದಲ್ಲಿ ಅನೇಕ ವಿಶೇಷಣಗಳನ್ನು ಭಗವದ್ವಾಣಿಗೆ ಕೊಟ್ಟಿದ್ದರೂ ಪ್ರಕೃತವಾದ ಮಂಗಳ ಶ್ಲೋಕದಲ್ಲಿ ಸರ್ವಭಾಷಾತ್ಮಕತ್ವರೂಪವಾದ ಒಂದೇ ವಿಶೇಷಣವನ್ನು ಕೊಟ್ಟಿರುವುದರಿಂದ ಪ್ರಕೃತಶಾಸನಕ್ಕೆ ವಿಷಯವಾದ ಕರ್ಣಾಟಕ ಶಬ್ದಗಳು ಸಮೂಲಗಳೆಂದು ಸೂಚಿಸಲ್ಪಡುವುದು.

ಆದುದರಿಂದ ಈಗ ಪ್ರಸ್ತುತವಾದುದು ಶಬ್ದಾನುಶಾಸನವು; ಈ ಶಬ್ದಾನುಶಾಸನಕ್ಕೆ ವಿಷಯವಾದ ಶಬ್ದಗಳು ಕಾರ್ಣಾಟಕಶಬ್ದಗಳು. " ಈ ಶಬ್ದಗಳು ಸಂಸ್ಕೃತ ಶಬ್ದಗಳಂತೆ ಸಕಲ ದೇಶಪ್ರಸಿದ್ಧವಾಗಿಯೂ ಸಕಲ ಶಾಸ್ತ್ರೋಪಯೋಗಿಗಳಾಗಿಯೂ ಸಕಲ ಮಹಾಜನಪರಿಗ್ರಾಹ್ಯ ಗಳಾಗಿಯೂ ಇರುವುದಿಲ್ಲ. ಭಾಷಾಮಾತ್ರಕ್ಕೆ ಪಾಮರರೆ ಅಧಿಕಾರಿಗಳು; ಆದುದರಿಂದ ಇವು ಅನುಶಾಸನಕ್ಕರ್ಹವಲ್ಲವು. ಸಂಸ್ಕೃತ ಭಾಷೆಯೆ ಮಹಾಭಾಷೆ, ಇದೇ ಸರ್ವಶಾಸ್ತ್ರೋಪಯೋಗಿ, ಇದೇ ಮಹಾಜನಪರಿಗ್ರಾಹ್ಯವು, ಇದೆ ಅನುಶಾಸನಕ್ಕರ್ಹವು. " ಎಂದು ಆಗ್ರಹವನ್ನು ಮಾಡುವ ಪಂಡಿತಮನ್ಯರಾದ ಕೇವಲ ಸಂಸ್ಕೃತಜ್ಞರ ಮನಸ್ಸಿನಲ್ಲಿ ನೆಲೆಗೊಂಡಿರುವ ಅನ್ಯಥಾಖ್ಯಾತಿಯು ತೊಲಗುವುದು. ಇದರಿಂದ ಸಂಸ್ಕೃತ ಶಬ್ದಗಳು ಹೇಗೆ ಸಾಧ್ವಸಾಧು ವಿವೇಚನಪೂರ್ವಕವಾಗಿ ಅನುಶಾಸನಕ್ಕರ್ಹಗಳೊ ಹಾಗೆ ಭಾಷಾಶಬ್ದಗಳೂ ಆಗಿರುವುವು. ಹಾಗಲ್ಲದಿದ್ದರೆ, ಭಗವದ್ವಾಣಿಯು ಹೇಗೆ ತನ್ಮಯವಾಗುವುದು ? ಆದುದರಿಂದ ಭಾಷಾಶಬ್ದಗಳೂ ಅನುಶಾಸನಕ್ಕೆ ವಿಷಯಗಳೆಂದು ತಿಳಿಯಬೇಕೆಂಬ ಅರ್ಥವು ಸೂಚಿತವಾಗುವುದು.

ಮತ್ತು ಈ ಭಾಷೆಯಲ್ಲಿ ತತ್ತ್ವಾರ್ಥಮಹಾಶಾಸ್ತ್ರವ್ಯಾಖ್ಯಾನರೂಪವಾದ ಷಣ್ಣವತಿ ಸಹಸ್ರಸಂಖ್ಯಾಕ **ಚೂಡಾಮಣಿಯೆಂಬ** ಗ್ರಂಥವು, ಶಬ್ದಾಗಮ-ಯುಕ್ತ್ಯಾಗಮ-ಪರಮಾಗಮ ವಿಷಯಕ ಗ್ರಂಥಗಳೂ ಕಾವ್ಯ-ನಾಟಕಾಲಂಕಾರ-ಕಲಾಶಾಸ್ತ್ರ ವಿಷಯಗಳಾದ ಅನೇಕ ಗ್ರಂಥಗಳೂ ಲೋಕದಲ್ಲಿ ಪ್ರಸಿದ್ಧವಾಗಿರುವುದರಿಂದ ಈ ಭಾಷೆಯು ಶಾಸ್ತ್ರಕ್ಕುಪಯುಕ್ತವಾದುದೆಂದೂ ಆದುದರಿಂದಲೆ ಮಹಾಜನ ಪರಿಗ್ರಾಹ್ಯವೆಂದೂ ತಿಳಿಯುವುದು.

**ಅವತಾರಿಕೆ**

ಮೇಲೆ ಹೇಳಿದಂತೆ ಗ್ರಂಥಕಾರನು 'ಮಲಗಾಲನಾತ್, ಮಂಗಾದಾನಾದ್ವಾ ಮಂಗಳಂ' ಎಂಬ ವ್ಯುತ್ಪತ್ತಿಯಿಂದ ನಿಷ್ಪನ್ನವಾದ 'ಮಂಗಳ' ಶಬ್ದವು ಮಲವನ್ನು ಎಂದರೆ ಪಾಪವನ್ನು (ವಿಘ್ನ ಮೊದಲಾದ ದುರಿತಗಳನ್ನು) 'ಗಾಲನಾತ್,' ಕಳೆಯುವುದರಿಂದಲೂ, 'ಮಂಗ'ವೆಂದರೆ ಇಷ್ಟಾರ್ಥವನ್ನು, 'ಆದಾನಾತ್,' ಕೊಡುವುದರಿಂದಲೂ, ಅನಿಷ್ಟನಿವೃತ್ತಿಪೂರ್ವಕವಾದ ಇಷ್ಟಪ್ರಾಪ್ತಿಯನ್ನುಂಟು ಮಾಡುವ ಕ್ರಿಯೆಯೆಂದರ್ಥವನ್ನು ಬೋಧಿಸುವ ಮಂಗಳ ಶ್ಲೋಕವನ್ನು ಮಾಡಿ, ಆಸನ್ನಹಿತರಾದ ಶಿಷ್ಯರಿಗೆ ತಾವು ಗ್ರಂಥಗಳನ್ನು ಬರೆಯುವಾಗ ಮಂಗಳವನ್ನು ಮಾಡಬೇಕು ಎಂಬರ್ಥವನ್ನು ಬೋಧಿಸುವುದಕ್ಕೂ ಅಂತಹ ಗ್ರಂಥಗಳನ್ನೋದುವವರಿಗೆ ಮಂಗಳವಾಗಲಿ ಎಂಬ ತನ್ನುದ್ದೇಶವನ್ನು ವ್ಯಕ್ತಪಡಿಸುವುದಕ್ಕೂ ಇಂತಹ ಮಂಗಳದಿಂದ ಕೂಡಿದ ಗ್ರಂಥಗಳೇ ಲೋಕದಲ್ಲಿ ಪ್ರಚಾರಕ್ಕೆ ಬರುವುದೆಂಬರ್ಥವನ್ನು ತಿಳಿಸುವುದಕ್ಕೂ ಮಂಗಳ ಶ್ಲೋಕವನ್ನು ಗ್ರಂಥದ ಆದಿಯಲ್ಲಿ ಬರೆದು, ಮಂಗಳಾನಂತರದಲ್ಲಿ ಗ್ರಂಥಕಾರನಾವ ಗ್ರಂಥವನ್ನು ಬರೆಯುವುದಕ್ಕೆ ಪ್ರಾರಂಭಿಸುವನೊ ಎಂಬ ಶಂಕೆಯನ್ನು ಶ್ರೋತೃಗಳಿಗೆ ಹೋಗಲಾಡಿಸುವುದಕ್ಕೆ ತನ್ನಿಂದ ಚಿಕೀರ್ಷಿತವಾದುದನ್ನು ಪ್ರತಿಜ್ಞೆ ಮಾಡಿ ತಿಳಿಸುವನು.

# ಶಬ್ದಾನುಶಾಸನಾರಂಭಂ

**ಮೂಲಂ ॥ ಅಥ ಶಬ್ದಾನುಶಾಸನಮಾರಭ್ಯತೇ ॥**

**ಅರ್ಥ ॥ ಮಂಗಳ ಮಾಡಿದನಂತರದಲ್ಲಿ ಶಬ್ದಾನುಶಾಸನವೆಂಬ ಗ್ರಂಥವು ಪ್ರಾರಂಭಿಸಲ್ಪಡುವುದು.**

**ಅವತಾರಿಕೆ**

ಶಬ್ದಾನುಶಾಸನವು ಪ್ರಾರಂಭಿಸಲ್ಪಡುವುದೆಂದು ಪ್ರತಿಜ್ಞೆ ಮಾಡಲ್ಪಟ್ಟಿರುವುದು. ಇಲ್ಲಿ ಪ್ರತಿಜ್ಞೆಗೆ ವಿಷಯವಾದ ಶಬ್ದಾನುಶಾಸನವೆಂಬುದು -- 'ಶಬ್ದಾನಾಮ್ ಅನುಶಾಸನಂ, ಶಬ್ದಾನುಶಾಸನಂ,' ಎಂದು ಷಷ್ಠೀ ತತ್ಪುರುಷ ಸಮಾಸವನ್ನು ಮಾಡುವುದರಿಂದ ನಿಷ್ಪನ್ನವಾಗುವುದು. ಇದರಲ್ಲಿ ಅನುಶಾಸನಕ್ಕೆ ವಿಷಯಗಳಾದುವು ಸಾಮಾನ್ಯವಾಗಿ ಶಬ್ದಗಳೆಂದು ತೋರುವುದು. ಲೋಕದಲ್ಲಿ ಶಬ್ದಗಳೆಂದರೆ— ವಾಯುವಿನ ಅಭಿಘಾತದಿಂದುಂಟಾಗಿ ಶ್ರೋತ್ರೇಂದ್ರಿಯದಿಂದ ಗ್ರಹಿಸುವುದಕ್ಕೆ ಯೋಗ್ಯವಾದ ಅರ್ಥವೆಂದು ತೋರುವುದು. ಅದು ಸಾಮಾನ್ಯವಾಗಿ ಅಕ್ಷರಾತ್ಮಕಾನಕ್ಷರಾತ್ಮಕಗಳೆಂದೆರಡು ತೆರನಾಗಿರುವುದು. ಅವುಗಳಲ್ಲಿ ಮೇಘಧ್ವನಿ, ಸಮುದ್ರಘೋಷ ಮೊದಲಾದ ಅನಕ್ಷರಾತ್ಮಕವಾದ ಶಬ್ದಗಳಿಗೆ ವಾಚಕತ್ವವಿಲ್ಲದಿರುವುದರಿಂದ ಅವಕ್ಕೆ ಅನುಶಾಸನಾರ್ಹತೆಯಿಲ್ಲದಿದ್ದರೂ ಅಕ್ಷರಾತ್ಮಕವಾದ ಸಂಸ್ಕೃತ ಮೊದಲಾದ ಅನೇಕ ಜಾತಿಯ ಶಬ್ದಗಳು ವಾಚಕಗಳಾಗಿ ಅನುಶಾಸನಕ್ಕೆ ವಿಷಯಗಳಾಗಿರುವುವು. ಆದುದರಿಂದ ಪ್ರಕೃತ ಗ್ರಂಥದಲ್ಲಿ ಸರ್ವವಿಧವಾದ ಶಬ್ದಗಳಿಗೂ ಅನುಶಾಸನವನ್ನು ಮಾಡಬೇಕೆಂದು ತೋರುವುದು. ಆದರೆ ಈ ಗ್ರಂಥದಲ್ಲಿ ಹಾಗೆ ಎಲ್ಲಾ ಬಗೆಯ ಶಬ್ದಗಳಿಗೆ ಅನುಶಾಸನವನ್ನು ಮಾಡದೆ ಇರುವುದರಿಂದ ತನ್ನ ಪ್ರತಿಜ್ಞೆಗೆ ನ್ಯೂನತೆಯುಂಟಾಗುವುದೆಂದು ಪ್ರಕೃತ ಪ್ರತಿಜ್ಞೆಗೆ ವಿಷಯವಾದ ಶಬ್ದಗಳಾವುವೆಂದರೆ ಪ್ರಶ್ನಪೂರ್ವಕವಾಗಿ ಹೇಳುತ್ತಾನೆ.

**ಮೂಲಂ ॥ಕೇಷಾಂ ಶಬ್ದಾನಾಂ॥**

**ಅರ್ಥ ॥ ಹಿಂದೆ ಹೇಳಿದಂತೆ ನಾನಾ ಜನಪದ ಜಾತಿಭೇದಗಳಿಂದು ಬಗೆಬಗೆಯಾಗಿರುವ ಸಂಸ್ಕೃತ-ಪ್ರಾಕೃತ ಮೊದಲಾದ ಅನೇಕ ಶಬ್ದಗಳಲ್ಲಿ ಅವ ಶಬ್ದಗಳ ( ಅನುಶಾಸನವು ) ಪ್ರಾರಂಭಿಸಲ್ಪಡುವುದು, ಎಂದು ಹಿಂದಿನ ವಾಕ್ಯದಲ್ಲಿರುವ ಪ್ರಾರಭ್ಯತೇ ಎಂಬುವುದರಲ್ಲಿ ಅನ್ವಯಿಸತಕ್ಕದ್ದು.**

**ಅವತಾರಿಕೆ :**

ಉತ್ತರವನ್ನು ಹೇಳುತ್ತಾನೆ.

**ಮೂಲಂ ॥ ಕರ್ಣಾಟಕಾನಾಂ ॥**

**ಅರ್ಥ ॥ ಕರ್ಣಾಟ ದೇಶದಲ್ಲಿ ಪ್ರಸಿದ್ಧವಾದ, ಎಂದರೆ ಪ್ರಯೋಗಾರ್ಹಗಳಾಗಿ ಶಿಷ್ಟರಿಗೆ ಸಮ್ಮತವಾದ ಶಬ್ದಗಳ ( ಅನುಶಾಸನವು ).**

**ವಿಚಾರ**

ಇಲ್ಲಿ ಪ್ರಯೋಗಾರ್ಹಗಳಾಗಿ ಶಿಷ್ಟರಿಗೆ ಸಮ್ಮತವಾದ ಶಬ್ದಗಳು ತದ್ಭವ-ತತ್ಸಮ-ದೇಶ್ಯಗಳೆಂಬ ಭೇದಗಳಿಂದ ಮೂರು ಬಗೆಯಾಗಿ ಆರಾತೀಯ ಮಹಾಕವಿಗಳಿಂದ ಪ್ರಯೋಗಿಸಲ್ಪಡುವುವು. ಇವುಗಳಲ್ಲಿ ಕೃದಂತ-ತದ್ಧಿತಾಂತ-ಸಮಾಸಾಂತಗಳಾದ ಸಂಸ್ಕೃತ ಶಬ್ದಗಳನೇಕಗಳು

ಸೇರಿರುವುವು. ಇದು **ಅರ್ಥವಲ್ಲಿಂಗಂ ||೮||** ಎಂಬ ಸೂತ್ರದಲ್ಲಿ ಸ್ಪಷ್ಟವಾಗುವುದು. ಇಂತಹ ಸಂಸ್ಕೃತ ಶಬ್ದಗಳು ಕರ್ಣಾಟಕ ಗ್ರಂಥಗಳಲ್ಲಿ ಪ್ರಯೋಗಿಸಲ್ಪಟ್ಟಿದ್ದರೂ, ಅವಕ್ಕೆ ಸಂಸ್ಕೃತ ವ್ಯಾಕರಣದಲ್ಲಿ ಹೇಳಿರುವಂತೆ ಸಾಧುತ್ವವನ್ನು ತಿಳಿದುಕೊಳ್ಳಬಹುದಾದುದರಿಂದ ಅವನ್ನು ಈ ವ್ಯಾಕರಣದಲ್ಲಿ ಬಿಟ್ಟಿರುತ್ತೇವೆ. ಅವಕ್ಕೆ ಸಂಸ್ಕೃತ ವ್ಯಾಕರಣದಿಂದಲೆ ಸಾಧುತ್ವವನ್ನು ತಿಳಿದು ಕರ್ಣಾಟಕ ವಿಭಕ್ತಿ ಪ್ರತ್ಯಯಗಳನ್ನು ಮಾತ್ರ ಹತ್ತಿಸಿ ಪ್ರಯೋಗಮಾಡಬೇಕೆಂದು ತಿಳಿಯುವುದು.

**ಅವತಾರಿಕೆ**

ಮೇಲೆ ಹೇಳಿದ ಪ್ರಶ್ನೋತ್ತರಗಳಿಂದ ಲೋಕದಲ್ಲಿ ಪ್ರಸಿದ್ಧವಾದ ಶಬ್ದಗಳ ಪ್ರಕೃತಿ-ಪ್ರತ್ಯಯ ವಿಭಾಗಪೂರ್ವಕವಾಗಿ ಅನ್ವಾಖ್ಯಾನವೆ ವ್ಯಾಕರಣವೆಂದು ತೋರುವುದು. ಆಯನ್ವಾಖ್ಯಾನವೆಂಬುವುದು ಪ್ರಯೋಗಾರ್ಹವಾದ ಶಬ್ದಗಳನ್ನು ನಿರುಕ್ತಿಯಿಂದ ಪ್ರತಿಪಾದಿಸುವುದು. ಆ ಪ್ರತಿಪಾದನವೆಂಬುದು ವಿಧೇಯನಿರೂಪಣೆಗೆ ಅಧೀನವಾಗಿರುವುದು. ಆ ವಿಧೇಯಗಳು ಆಗಮ-ಪ್ರತ್ಯಯ-ಆದೇಶಗಳೆಂದು ಮೂರು ಬಗೆಯಾಗಿರುವುವು. ಇಂತಹ ವಿಧೇಯಗಳನ್ನು ವಿಧಿಸುವುದು ಕೆಲವು ಸಂಕೇತಗಳಿಲ್ಲದೆ ಅಸಾಧ್ಯವಾಗುವುದು. ಅಂತಹ ಸಂಕೇತಗಳನ್ನು ಮಾಡುವುದು ಶಬ್ದಗಳಿಂದ ಸಾಧ್ಯವು. ಆ ಶಬ್ದಗಳಿಗೆ ನಿಯತವಾದಾನುಪೂರ್ವಿಯುಳ್ಳ ವರ್ಣಮಾಲೆಯತ್ಯಾವಶ್ಯಕವಾಗಿರುವುದು. ಆದುದರಿಂದ ಶಾಸ್ತ್ರದಾದಿಯಲ್ಲಿ ವರ್ಣಮಾಲೆಯನ್ನು ಬರೆಯುವುದು ಉಚಿತವೆಂದರಿದು ಪೂರ್ವಾಚಾರ್ಯರ ಮತವನ್ನವಲಂಬಿಸಿ ಈ ಗ್ರಂಥಕರ್ತನು ಆದಿಯಲ್ಲಿ ಲೋಕಪ್ರಸಿದ್ಧವಾದ ವರ್ಣಸಮಾಮ್ನಾಯವನ್ನು ಬೋಧಿಸುವ ಮೊದಲನೆಯ ಸೂತ್ರವನ್ನು ಬರೆಯುತ್ತಾನೆ.

**ಸೂತ್ರಂ || ಸಿದ್ಧಾಃ ಶುದ್ಧಕಾಃ ||೧||**

**ಅರ್ಥ || ಶುದ್ಧಕಾಃ ಎಂದರೆ ಅ ಕಾರ ಮೊದಲು ಳ ಕಾರದವರೆಗೆ ಇರುವ ವರ್ಣಗಳು, ಸಿದ್ಧಾಃ, ಎಂದರೆ ಲೋಕಪ್ರಸಿದ್ಧಗಳಾಗಿರುವುವು ಎಂದು ತಿಳಿಯುವುದು.**

ಅವಾವುವೆಂದರೆ— ಅ, ಇ, ಉ, ಋ, ಌ, ಏ, ಐ, ಓ, ಔ, ಕಖಗಘಙ, ಚಛಜಝಞ, ಟಠಡಢಣ, ತಥದಧನ, ಪಫಬಭಮ, ಯರಲವ, ಶಷಸಹ, ಳ.

ಇಲ್ಲಿ ಹೇಳಿರುವ ವರ್ಣಗಳೆಲ್ಲ ಆಯಾಯ ವರ್ಣಗಳ ಜಾತಿಮಾತ್ರವನ್ನು ಬೋಧಿಸುವುದರಿಂದ ದೀರ್ಘಪ್ಲುತ ಮೊದಲಾದ ಭೇದಗಳನ್ನೆಲ್ಲ ಇಲ್ಲಿ ಹೇಳದೆ ಇದ್ದರೂ ಆಯಾ ವರ್ಣಗಳ ಭೇದಗಳನ್ನೆಲ್ಲ ಬೋಧಿಸುವುದೆಂದು ತಿಳಿಯಬೇಕು.

**ವಿಚಾರ ೧ : ಸೂತ್ರಸ್ವರೂಪ**

ಲೋಕದಲ್ಲಿ ಪ್ರಸಿದ್ಧವಾಗಿ ಎಷ್ಟು ವರ್ಣಗಳಿವೆಯೊ, ಅವು ಎಂತಹ ಸನ್ನಿವೇಶಗಳನ್ನು ಪಡೆದಿವೆಯೊ, ಅವನ್ನೇ ಆಶ್ರಯಿಸಿ ಈ ಶಾಸ್ತ್ರವನ್ನು ಪ್ರಾರಂಭಿಸಿರುವುದೆಂದು ಈ ಸೂತ್ರದಿಂದ ಸೂಚಿತವಾಗುವುದು. ಇಲ್ಲಿ ಸೂತ್ರವೆಂದರೆ ವಿವಕ್ಷಿತವಾದ ಅರ್ಥವನ್ನು ಸೂಚಿಸುವುದೆಂದು ತಿಳಿಯಬೇಕು. ಇದರಲ್ಲಿ ಸೂತ್ರಜ್ಞರು—

**ಅಲ್ಪಾಕ್ಷರಮಸಂಧಿಗ್ಧಂ ಸಾರವದ್ವಿಶ್ವತೋಮುಖಂ**
**ಅಸ್ತೋಭಮನವದ್ಯಂ ಚ ಸೂತ್ರಂ ಸೂತ್ರವಿದೋ ವಿದುಃ**

ಎಂಬ ಶ್ಲೋಕದಿಂದ ಎಷ್ಟು ಅಕ್ಷರಗಳಿಂದ **ವಿವಕ್ಷಿತವಾದ** ಅರ್ಥಬೋಧೆಯುಂಟಾಗುವುದೊ

ಅಷ್ಟೇ ಅಕ್ಷರಗಳಲ್ಲದೆ ಹೆಚ್ಚು ಅಕ್ಷರಗಳಿಲ್ಲದೆಯೂ ಇದೋ ಅದೋ ಸೂತ್ರಾರ್ಥವು ಎಂದು ಸಂಶಯುಗ್ರಸ್ತವಾಗದೆಯೂ ಪ್ರಮಾಣಾಂತರಾಬಾಧಿತವಾಗಿಯೂ ಸರ್ವಶಾಖಾನಿರ್ಣಾಯಕವಾಗಿಯೂ ಸ್ತೋಭಾಕ್ಷರರಹಿತವಾಗಿಯೂ ಇರುವುದಾವುದೊ ಅದನ್ನು ಸೂತ್ರವೆಂದು ಸೂತ್ರಜ್ಞರು ಹೇಳುತ್ತಾರೆಂದು ಹೇಳಿರುವರು. ಇಂತಹ ವಿಶೇಷಣಗಳಿಂದ ಕೂಡಿದ ಸೂತ್ರ ಲಕ್ಷಣಕ್ಕೆ ವಿಷಯುವಾದ ಸೂತ್ರಗಳಲ್ಲಿ—ಸಂಜ್ಞೆ, ಪರಿಭಾಷೆ, ವಿಧಿ, ನಿಯಮ, ಅಧಿಕಾರ, ಅತಿದೇಶಗಳೆಂಬ **ಆರು** ಭೇದಗಳುಂಟೆಂದು –

**ಸಂಜ್ಞಾ ಚ ಪರಿಭಾಷಾ ಚ ವಿಧಿರ್ನಿಯಮ ಏವ ಚ**
**ಅಧಿಕಾರೋऽತಿದೇಶಶ್ಚ ಷಡ್ವಿಧಂ ಸೂತ್ರಮುಚ್ಯತೇ**

ಎಂಬ ಶ್ಲೋಕದಿಂದ ತೋರುವುದು. ಕೆಲವರು **ಸಂಜ್ಞೆ, ನಿಯಮ, ನಿಷೇಧ, ಅಧಿಕಾರ, ನಿತ್ಯ, ಅಪವಾದ, ವಿಧಿ, ಪರಿಭಾಷೆ, ಅತಿದೇಶ, ವಿಕಲ್ಪ**ಗಳೆಂದು ಹತ್ತು ಭಾಗಗಳಾಗಿ ವಿಂಗಡಿಸಿರುವರು. ಇವುಗಳಲ್ಲಿ ನಿಷೇಧ-ಅಪವಾದ ನಿತ್ಯ-ವಿಕಲ್ಪಸೂತ್ರಗಳಿಗೆ ಪ್ರಾಚೀನರು ಹೇಳಿರುವ **ವಿಧಿ** ಸೂತ್ರದಲ್ಲಿ ಅಂತರ್ಭಾವವನ್ನು ಹೇಳಬಹುದೆಂದು ತೋರುವುದು. ಇಲ್ಲಿ—

**ಸಂಜ್ಞಾ** ಸೂತ್ರವೆಂದರೆ—ಕೆಲವರು ಅಪೂರ್ವವಾಗಿ ಒಂದು ಶಬ್ದಕ್ಕೆ ಒಂದು ಶಕ್ತಿಯನ್ನು ಕಲ್ಪಿಸಿ ಹೇಳುವುದೆಂದು ಹೇಳುತ್ತಾರೆ. ಆದುದರಿಂದ ಪ್ರಾಚೀನರು

**ಶಕ್ತಿಗ್ರಾಹಕಂ ಸಂಜ್ಞಾಸೂತ್ರಂ,**

ಎಂದು ಹೇಳಿರುವರು. ಇನ್ನು ಕೆಲವರು ಎಲ್ಲಾ ಶಬ್ದಗಳು ಎಲ್ಲಾ ಅರ್ಥವನ್ನು ಬೋಧಿಸುವುವೆಂದಿರುವುದರಿಂದ ಈ ಶಾಸ್ತ್ರದಲ್ಲಿ ಈ ಶಬ್ದಗಳಿಂದ ಈ ಅರ್ಥವನ್ನೇ ಗ್ರಹಿಸಬೇಕೆಂದು ಶಕ್ತಿ ಸಂಕೋಚವನ್ನು ಕಲ್ಪಿಸುವುದು ಸಂಜ್ಞಾಸೂತ್ರವೆಂದು ಹೇಳಿ—

**ಸರ್ವೇ ಸರ್ವಾರ್ಥವಾಚಕಾಃ; ವೃದ್ಧ್ಯಾದೀನಾಂ ಚ ಶಾಸ್ತ್ರೇऽಸ್ಮಿನ್ ಶಕ್ತ್ಯವಚ್ಛೇದಲಕ್ಷಣಃ**

ಎಂಬ ವಚನಗಳನ್ನು ತಾವು ಮಾಡಿಕೊಂಡಿರುವ ಅರ್ಥಕ್ಕೆ ಪ್ರಮಾಣವಾಗಿ ಕೊಟ್ಟಿರುವರು. ಇವುಗಳಲ್ಲಿ 'ಸರ್ವೇ ಸರ್ವಾರ್ಥವಾಚಕಾಃ' ಎಂಬುವುದು ಯಾರಿಗೆ ಎಲ್ಲಾ ಪದಗಳೂ ಅರ್ಥಗಳೂ ಏಕಕಾಲದಲ್ಲಿ ಜ್ಞಾನವಿಷಯುವಾಗುವುವೊ ಅಂತಹ ಯೋಗಿಗಳಿಗಲ್ಲದೆ ಅಲ್ಪಜ್ಞರಾದ ನಮ್ಮಗಳಿಗಲ್ಲವಾದುದರಿಂದ ಪ್ರಕೃತದಲ್ಲಿ ಶಕ್ತಿಗ್ರಾಹಕವಾದುದೆ ಸಂಜ್ಞಾಸೂತ್ರವೆಂದು ಮೊದಲು ಹೇಳಿದ ಮತವನ್ನವಲಂಬಿಸುವುದು ಉಚಿತವೆಂದು ತೋರುವುದು.

**ಪರಿಭಾಷೆ**ಯೆಂದರೆ — 'ಪರಿತಃ', ಈ ಶಾಸ್ತ್ರದಲ್ಲೆಲ್ಲ 'ವ್ಯಾಪ್ಯ ಸ್ಥಿತಾ ಭಾಷಾ', ತನ್ನರ್ಥದಿಂದ ವ್ಯಾಪಿಸಿರುವ ಭಾಷೆಯೆಂದರ್ಥವಾಗುವುದು. ಇದನ್ನು ಕೆಲವರು ಅನಿಯುಮವು ಪ್ರಸಕ್ತವಾದ ಸೂತ್ರಗಳಲ್ಲಿ ನಿಯುಮವನ್ನುಂಟುಮಾಡಿಕೊಡುವುದು ಪರಿಭಾಷೆಯೆಂತಲೂ ಸಂಜ್ಞಾಸೂತ್ರಕ್ಕಿಂತಲೂ ಬೇರೆಯಾಗಿ ವಿಧಿಗೆ ಉಪಕಾರಕವಾದ ಸೂತ್ರವು ಪರಿಭಾಷೆಯೆಂತಲೂ ಸಂಕೇತವಿರದಿಂದ ಶಾಸ್ತ್ರಗಳಲ್ಲಿ ಪರಿಭಾಷಾಶಬ್ದದಿಂದ ವ್ಯವಹರಿಸಲ್ಪಡುವ ಸೂತ್ರಗಳು ಪರಿಭಾಷೆಯೆಂತಲೂ ಬಗೆಬಗೆಯಾಗಿ ಹೇಳುವರು. **ಪತಂಜಲಿ** ಬರೆದಿರುವ ಸಂಸ್ಕೃತವ್ಯಾಕರಣ ಮಹಾಭಾಷ್ಯದಲ್ಲಿ—ದೀಪವು ಹೇಗೆ ಮನೆಯುಲ್ಲೊಂದೇ ಕಡೆಯಲ್ಲಿದ್ದರೂ ತನ್ನ ಪ್ರಭೆಯಿಂದ ಮನೆಯನ್ನೆಲ್ಲಾ ಪ್ರಕಾಶ ಮಾಡು

* [ ಸಂಜ್ಞಾನಿಯಮನಿಷೇಧಾಧಿಕಾರನಿತ್ಯಾಪವಾದವಿಧಿಪರಿಭಾಷಾ । ಅತಿದೇಶವಿಕಲ್ಪಾವಿತಿಗತಯಃ ಶಬ್ದಾನುಶಾಸನೇ ಸೂತ್ರಾಣಿ ॥–ಭಟ್ಟಾಕಳಂಕದೇವನ ವೃತ್ತಿ –ಸಂಪಾದಕ ]

ವುದೊ ಹಾಗೆ ಈ ಪರಿಭಾಷೆಯೆಂಬುವುದು ಸೂತ್ರಕಾರರು ಯಾವ ಪ್ರಕರಣದಲ್ಲಿ ಯಾವ ಕ್ರಮದಿಂದ ಯಾವ ಸ್ಥಲದಲ್ಲಿ ಉಚ್ಚರಿಸಿರುವರೋ ಆ ಪ್ರಕರಣಾದಿಗಳಲ್ಲೆ ಇದ್ದು ತನ್ನಿಂದ ಬೋಧ್ಯವಾದ ಅರ್ಥದಿಂದ ಶಾಸ್ತ್ರವನ್ನೆಲ್ಲ ಪ್ರಕಾಶಗೊಳಿಸುವುದೆಂದು ಹೇಳಿ —

**ಏಕದೇಶಸ್ಥಿತಾ ಶಾಸ್ತ್ರಭವನೇ ಯಾತಿ ದೀಪತಾಂ**
**ಪರಿತೋ ವ್ಯಾಪೃತಾಂ ಭಾಷಾಂ ಪರಿಭಾಷಾಂ ಪ್ರಚಕ್ಷತೇ**

ಎಂಬ ಶ್ಲೋಕವನ್ನು ಬರೆದಿರುವುದು. ಇದರಿಂದ ಸೂತ್ರಾರ್ಥಗಳನ್ನು ಮಾಡುವುದಕ್ಕೆ ಸಾಧಕಗಳಾದ ವಾಕ್ಯವಿಶೇಷಗಳೆ ಪರಿಭಾಷೆಗಳೆಂದು ಸೂಚಿತವಾಗುವುದು.

**ವಿಧಿ**ಯೆಂದರೆ — ಅಪೂರ್ವವಾಗಿ ಯಾವುದಾದರೂ ಒಂದು ವಿಷಯವನ್ನು ಬೋಧಿಸುವ ವಾಕ್ಯವಿಶೇಷವು. ಇದನ್ನೇ ಕೆಲವರು ಅಜ್ಞಾತ ಸ್ವಸ್ವರೂಪ ಬೋಧನವೆಂತಲೂ ಭೃತ್ಯ ಮೊದಲಾದ ತನಗಿಂತಲೂ ನಿಕೃಷ್ಟರಾದವರಿಗೆ ಒಂದು ಕಾರ್ಯದಲ್ಲಿ ಪ್ರವೃತ್ತಿಯನ್ನುಂಟುಮಾಡುವುದೆಂತಲೂ ಹೇಳುವರು.

**ನಿಯಮ**ವೆಂದರೆ — ಮೇಲೆ ಹೇಳಿದ ವಿಧಿಗೆ ವಿಷಯಗಳಾದ ಕೆಲವು ಎಡೆಗಳಲ್ಲಿ ಆ ವಿಧಿವಾಕ್ಯವನ್ನು ಬಾರದಂತೆ ಮಾಡುವುದೆಂದು ತಿಳಿಯಬೇಕು. ಇದಕ್ಕೆ ಪೂರ್ವಮೀಮಾಂಸೆಯಲ್ಲಿ **ಪರಿಸಂಖ್ಯೆ**ಯೆಂದು ನಿಯಮದಿಂದ ಬೇರೆ ಮಾಡಿರುವರು. ವ್ಯಾಕರಣದಲ್ಲಿ **ನಿಯಮ ಪರಿಸಂಖ್ಯೆ**ಗಳೆರಡೂ ಏಕಜಾತೀಯವಾದುವೆಂದು ಹೇಳುತ್ತಾರೆ. ಅದೇ ಅರ್ಥವನ್ನು ಸಂಸ್ಕೃತ ವ್ಯಾಕರಣಜ್ಞನಾದ **ಶಬ್ದಕೌಸ್ತುಭ**ಕಾರನು ಮೀಮಾಂಸಕರು ಹೇಳಿರುವ —

**ವಿಧಿರತ್ಯಂತಮಪ್ರಾಪ್ತೌ ನಿಯಮಃ ಪಾಕ್ಷಿಕೇ ಸತಿ**
**ತತ್ರ ಚಾನ್ಯತ್ರ ಚ ಪ್ರಾಪ್ತೌ ಪರಿಸಂಖ್ಯೇತಿ ಗೀಯತೇ**

ಎಂಬ ಶ್ಲೋಕವನ್ನು ಬರೆದು ಮುಂದೆ

**ಪರಿಸಂಖ್ಯಾಯಾ ನಿಯಮಶಾಸ್ತ್ರೇಷ್ವೇವಾಂತರ್ಭಾವಃ**

ಎಂದೂ ಬರೆದಿರುವನು.

**ಅಧಿಕಾರ**ವೆಂದರೆ — ತನಗಿಂತಲೂ ಮುಂದೆ ಇರುವ ಸೂತ್ರಗಳಲ್ಲಿ ತಾನು ಸಂಪೂರ್ಣವಾಗಾಗಲಿ ಏಕದೇಶದಿಂದಾಗಲಿ ಸಂಬಂಧಿಸಿಕೊಂಡು ಆ ಸೂತ್ರಾರ್ಥಕ್ಕೆ ಸಹಾಯಮಾಡುವ ವಾಕ್ಯಸಂದರ್ಭವೆಂದು ತಿಳಿಯಬೇಕು. ಇದಕ್ಕೆ **ಪಾಣಿನಿ** ವ್ಯಾಕರಣದಲ್ಲಿ – '**ಸ್ವರಿತೇನಾಧಿಕಾರಃ**' ಎಂದು ಅಧಿಕಾರಕ್ಕೆ **ಸ್ವರಿತ**ವೆಂಬುವುದು ಗುರುತೆಂದು ಹೇಳಲ್ಪಟ್ಟಿರುವುದು. ಈ ವ್ಯಾಕರಣದಲ್ಲಿ ಅಂತಹ ಗುರುತುಗಳಾವುವೂ ಇಲ್ಲವಾದರೂ ವ್ಯಾಖ್ಯಾನಕಾರನ ವಚನವನ್ನೇ ಪ್ರಮಾಣವಾಗಿಟ್ಟುಕೊಂಡು ಅಧಿಕಾರಸೂತ್ರಗಳನ್ನು ತಿಳಿದುಕೊಳ್ಳಬೇಕು. **ಅನುವೃತ್ತಿ**ಯೆಂಬುವುದೂ ಇದರ ವಿಶೇಷವೆಂದು ತಿಳಿಯಬೇಕು. ಕೆಲವು ಸಂದರ್ಭಗಳಲ್ಲಿ ಮುಂದಣ ಸೂತ್ರದಲ್ಲಿರುವ ಪದಗಳನ್ನು ಹಿಂದಣ ಸೂತ್ರಕ್ಕೆ ತೆಗೆದುಕೊಳ್ಳುವುದುಂಟು. ಇದಕ್ಕೆ **ಅಪಕರ್ಷ**ವೆಂದು ಸಂಸ್ಕೃತವ್ಯಾಕರಣಕಾರರು ಹೇಳುವರು. ಈ ವ್ಯಾಕರಣದಲ್ಲಿ '**ಅತ ಓಷ್ಠ್ಯೇ ||೩೦||**' ಎಂಬ ಸೂತ್ರದಲ್ಲಿ ಮಾತ್ರ, '**ಓದೋಃಬಹುಳಂ ||೩೯||**' ಎಂಬ ಮುಂದಣ ಸೂತ್ರದಿಂದ 'ಬಹುಳ' ಪದವನ್ನು ಅಪಕರ್ಷಮಾಡಿರುವುದು. ಇಂತಹ ಅಪಕರ್ಷವನ್ನು ಈ ಗ್ರಂಥಕಾರನು ಇನ್ನೆಲ್ಲಿಯೂ ಅಂಗೀಕರಿಸಿಲ್ಲ. ಇಲ್ಲಿ ಕೆಲವರು ಅಧಿಕಾರವೆಂದರೆ —

**ಸ್ವದೇಶವಾಕ್ಯಾರ್ಥ ಶೂನ್ಯತ್ವೇ ಸತಿ ಉತ್ತರವಿಧ್ಯೇಕವಾಕ್ಯತಾಪನ್ನತ್ವಮಧಿಕಾರತ್ವಂ** ಎಂದು ಹೇಳಿರುವ ಅಧಿಕಾರ ಲಕ್ಷಣದಲ್ಲಿ 'ಸ್ವದೇಶ ವಾಕ್ಯಾರ್ಥಶೂನ್ಯತ್ವೇ ಸತಿ,' ಎಂಬ ವಿಶೇಷಣವು ವ್ಯರ್ಥವಾದುದರಿಂದಲೂ ಕೆಲವೆಡೆಗಳಲ್ಲಿ ಸ್ವದೇಶವಾಕ್ಯಾರ್ಥವನಂಗೀಕರಿಸಿರುವುದರಿಂದ ಲಕ್ಷಣವು ಅವ್ಯಾಪ್ತವಾಗುವುದರಿಂದಲೂ, ಅಂತಹ ವಿಶೇಷಣವನ್ನು ಪರಿತ್ಯಾಗಮಾಡಿ ' ಉತ್ತರವಿಧ್ಯೇಕ ವಾಕ್ಯತಾಪನ್ನತ್ವಂ ' ಎಂದಿಷ್ಟೆ ಅಧಿಕಾರಲಕ್ಷಣವೆಂದು ತಿಳಿಯಬೇಕು.

**ಅತಿದೇಶ**ವೆಂದರೆ— ಒಂದರಲ್ಲಿಲ್ಲದ್ದನ್ನು ಆರೋಪಿಸಿ ಹೇಳುವ ಸೂತ್ರವು. ಇದರಲ್ಲಿ ಕೆಲವೆಡೆಗಳಲ್ಲಿ **ಕಾರ್ಯಾತಿದೇಶ**ವೆಂತಲೂ ಕೆಲವೆಡೆಗಳಲ್ಲಿ **ರೂಪಾತಿದೇಶ**ವೆಂತಲೂ ವ್ಯವಹರಿಸಲ್ಪಡುವದುಂಟು. ಅವನ್ನು ಆಯಾ ಸಂದರ್ಭಗಳಲ್ಲಿ ವಿವರಿಸಲಾಗುವುದು.

**ನಿಷೇಧ**ವೆಂದರೆ — ಆವುದಾದರೂ ಒಂದು ವಾಕ್ಯದಿಂದ ಪ್ರಾಪ್ತವಾದುದನ್ನು ಕೆಲವು ಲಕ್ಷ್ಯಗಳಲ್ಲಿ ನಿರೋಧಿಸುವುದು.

**ನಿತ್ಯ**ವೆಂದರೆ — ಪ್ರಮಾಣಾಂತರದಿಂದ ಬಾಧಿತವಾಗದೆ ತನಗೆ ವಿಷಯವಾದ ಲಕ್ಷ್ಯಗಳಲ್ಲಿ ನಿಯಮಿತವಾಗಿ ಬರುವುದು.

**ಅಪವಾದ**ವೆಂದರೆ — ಒಂದು ಸೂತ್ರದಿಂದ ಪ್ರಾಪ್ತವಾದ ಕಾರ್ಯವನ್ನು ನಿರೋಧಿಸಿ ಕೆಲವು ಲಕ್ಷ್ಯಗಳಿಗೆ ಮಾತ್ರ ಬೇರೆ ಕಾರ್ಯವನ್ನು ವಿಧಿಸುವುದು.

**ವಿಕಲ್ಪ**ವೆಂದರೆ — ಒಂದು ಸೂತ್ರದಿಂದ ವಿಧಿಸಿದ ಕಾರ್ಯವು ಲಕ್ಷ್ಯಗಳಲ್ಲಿ ಒಂದು ವೇಳೆ ಬರುವುದು; ಒಂದು ವೇಳೆ ಬಾರದಿರುವುದು. ಇದರಲ್ಲಿ **ಪ್ರಾಪ್ತಾಪ್ರಾಪ್ತವಿಭಾಷೆ, ವ್ಯವಸ್ಥಿತ ವಿಭಾಷೆ, ಸಾಮಾನ್ಯವಿಭಾಷೆ, ಬಾಹುಳಕ** ಎಂದು ನಾಲ್ಕು ಭೇದಗಳುಂಟು. **ಪ್ರಾಪ್ತಾಪ್ರಾಪ್ತವಿಭಾಷೆಯೆಂದರೆ** — ಒಂದು ಸೂತ್ರದಿಂದ ವಿಹಿತವಾದ ಕಾರ್ಯವು ಕೆಲವೆಡೆಗಳಲ್ಲಿ ಪ್ರಾಪ್ತವಾಗುವುದು; ಕೆಲವೆಡೆಗಳಲ್ಲಿ ಅಪ್ರಾಪ್ತವಾಗುವುದು — ಅಂತಹ ಸಂದರ್ಭಗಳಲ್ಲಿ ಹೇಳುವ ವಿಕಲ್ಪ ವಿಧಿಯೆಂದು ತಿಳಿಯಬೇಕು. **ವ್ಯವಸ್ಥಿತವಿಭಾಷೆಯೆಂದರೆ** — ಕೆಲವು ಲಕ್ಷ್ಯಗಳಲ್ಲಿ ನಿತ್ಯವಾಗಿ ಬರುವುದು; ಕೆಲವು ಲಕ್ಷ್ಯಗಳಲ್ಲಿ ಬಾರದೆ ಇರುವುದು. ಒಂದೇ ಲಕ್ಷ್ಯದಲ್ಲಿ ಬಂದು ಬಾರದೆ ಇದ್ದರೆ **ಸಾಮಾನ್ಯವಿಭಾಷೆ** ಎಂದು ತಿಳಿಯುವುದು. ಲಕ್ಷ್ಯಭೇದಗಳಲ್ಲ ಬಂದು ಬಾರದಿದ್ದರೆ **ವ್ಯವಸ್ಥಿತವಿಭಾಷೆಯೆಂದೂ** ಒಂದೆ ಲಕ್ಷ್ಯದಲ್ಲ ಬಂದು ಬಾರದಿದ್ದರೆ **ಸಾಮಾನ್ಯವಿಭಾಷೆಯೆಂದೂ** ಇವುಗಳಿಗೆ ಭೇದವನ್ನು ತಿಳಿಯಬೇಕು. **ಬಾಹುಳಕ**ವೆಂದರೆ ಕೆಲವು ಲಕ್ಷ್ಯಗಳಲ್ಲ ಬರುವುದು; ಕೆಲವು ಲಕ್ಷ್ಯಗಳಲ್ಲ ಬಾರದಿರುವುದು; ಕೆಲವು ಲಕ್ಷ್ಯಗಳಲ್ಲ ವಿಕಲ್ಪವಾಗಿ ಬರುವುದು; ಕೆಲವು ಲಕ್ಷ್ಯಗಳಲ್ಲಿ ಬೇರೆ ಯಾವುದೋ ಒಂದು ಕಾರ್ಯವು ಬರುವುದು, ಎಂದು ನಾಲ್ಕು ವಿಧವೆಂದು ಹೇಳುವರು. ಇದೇ ಅರ್ಥವನ್ನು ವ್ಯಾಖ್ಯಾನಕಾರರು —

**ಕ್ವಚಿತ್ಪ್ರವೃತ್ತಿಃ ಕ್ವಚಿದಪ್ರವೃತ್ತಿಃ ಕ್ವಚಿದ್ವಿಭಾಷಾ ಕ್ವಚಿದನ್ಯದೇವ**
**ವಿಧೇರ್ವಿಧಾನಂ ಬಹುಧಾ ಸಮೀಕ್ಷ್ಯ ಚಾತುರ್ವಿಧಂ ಬಾಹುಲಕಂ ವದಂತಿ**

ಎಂಬ ಶ್ಲೋಕದಿಂದ ಸೂಚಿಸಿರುವರು.

## ಮೊದಲನೆಯ ಸೂತ್ರವು ಸಂಜ್ಞಾ ಸೂತ್ರವು

ಇಲ್ಲಿ ಹೇಳಿರುವ " **ಸಿದ್ಧಾಃ ಶುದ್ಧಕಾಃ** " ಎಂಬ ಸೂತ್ರವು ಲೋಕಪ್ರಸಿದ್ಧವಾದ ವರ್ಣ

ಗಳನ್ನು ಮಾತ್ರ ಬೋಧಿಸುವುದರಿಂದ ಮೇಲೆ ಹೇಳಿದ ಸಂಜ್ಞಾಪರಿಭಾಷಾದಿ ಸೂತ್ರಲಕ್ಷಣಗಳಲ್ಲಿ ಯಾವ ಲಕ್ಷಣಕ್ಕೂ ವಿಷಯವಾಗುವುದಿಲ್ಲ. ಆದುದರಿಂದ ಇದನ್ನು ಹಿಂದೆ ಹೇಳಿರುವ ಆರು ವಿಧವಾದ ಸೂತ್ರಭೇದಗಳಲ್ಲಾಗಲಿ **ಶಾಕಟಾಯನ** ಮೊದಲಾದ ಪ್ರಾಚೀನ ವೈಯಾಕರಣರಿಂದ ಅಂಗೀಕರಿಸಿರುವ ಹತ್ತು ವಿಧವಾದ ಸೂತ್ರಭೇದಗಳಲ್ಲಾಗಲಿ ಅಂತರ್ಭಾವ ಮಾಡಿ ಹೇಳಲು ಅಸಾಧ್ಯವಾಗಿರುವುದು. ಆದುಕಾರಣದಿಂದ ಈ ಸೂತ್ರವು ಆ ಸೂತ್ರಗಳಿಗಿಂತಲೂ ಬೇರೊಂದು ಬಗೆಯಾಗಿರುವುದೆಂದು ಸೂತ್ರಗಳು ಏಳು ಬಗೆಯಾಗಿರುವುವೆಂದಾಗಲಿ, ಹನ್ನೊಂದು ಬಗೆಯಾಗಿರುವುವೆಂದಾಗಲಿ ಹೇಳಬೇಕೆಂದು ತೋರುವುದು. ಆದರೆ ಶಾಸ್ತ್ರವೆಂಬುದು ಸಮುದ್ರದಂತೆ ಅಪಾರವಾಗಿರುವುದೆಂದು ತೋರುವುದರಿಂದ ಲೋಕದಲ್ಲಿ ಸಮುದ್ರವನ್ನು ಕೊನೆಗಾಣಿಸಲು ತರಣಿಗಳು ಹೇಗೆ ಸಾಧಕಗಳಾಗಿರುವುವೊ ಹಾಗೆ ಶಾಸ್ತ್ರವನ್ನು ಕೊನೆಗಾಣಿಸಲು ಕೆಲವು ಸಂಜ್ಞೆಗಳು ಸಾಧಕಗಳಾಗಿರುವುದರಿಂದ, ಆ ಸಂಜ್ಞೆಗಳನ್ನು ಮಾಡಲು ನಿಯತವಾಗಿರುವ ಲೋಕಪ್ರಸಿದ್ಧವಾದ ವರ್ಣಾನುಪೂರ್ವಿಗಳು ಬೇಕಾಗಿರುವುದರಿಂದ, ಅಂತಹ ವರ್ಣಾನುಪೂರ್ವಿಗಳನ್ನು ಬೋಧಿಸಿ ಸಂಜ್ಞಾಸೂತ್ರಗಳಿಗೆ ಸಹಾಯ ಮಾಡುವುದರಿಂದ, ಇದನ್ನೂ ಸಂಜ್ಞಾಸೂತ್ರವೆಂದೇ ಅಂಗೀಕರಿಸಬೇಕು. ಇದರಿಂದ ಪೂರ್ವೋಕ್ತ ಸೂತ್ರ ವಿಶೇಷ ಲಕ್ಷಣಗಳಿಗಿಂತ ಬೇರೊಂದು ಲಕ್ಷಣ ಹೇಳಬೇಕೆಂಬ ಅವಶ್ಯಕತೆಯಿಲ್ಲ. **ಈ ಸೂತ್ರವು ಭೋಧಿಸುವ ವರ್ಣಗಳಾವುವು?**

ಈ ಸೂತ್ರದಲ್ಲಿ ಲೋಕಪ್ರಸಿದ್ಧವಾದ ವರ್ಣಗಳಲ್ಲವೆ ಬೋಧಿಸಲ್ಪಡುವುದು? ಲೋಕದಲ್ಲಿ **ಅ**ಕಾರ ಮೊದಲು **ಹ**ಕಾರದವರೆಗೆ ವರ್ಣಗಳು ಪ್ರಸಿದ್ಧವಾಗಿರುವುವು. ಇಲ್ಲಿಯಾದರೂ **ಱ**ಕಾರ **ಳ**ಕಾರಗಳೆರಡು ವರ್ಣಗಳು ಹೆಚ್ಚಾಗಿ ಹೇಳಲ್ಪಟ್ಟಿರುವುವು.* ಇದು ಲೋಕಪ್ರಸಿದ್ಧ ವರ್ಣಗಳನ್ನು ಬೋಧಿಸುವ ಸೂತ್ರವೆಂದು ಹೇಳಿರುವ ವಚನಕ್ಕೆ ವಿರುದ್ಧವಾಗಿ ತೋರುವುದು. ಆದರೂ ಲೋಕದಲ್ಲಿ ವರ್ಣಗಳು ಸಾಮಾನ್ಯವಾಗಿ **ಮೂಲ**ವರ್ಣಗಳೆಂದೂ **ಸಂಯುಕ್ತ**ವರ್ಣಗಳೆಂದೂ ಎರಡು ತೆರನಾಗಿ ವಿಭಾಗಿಸಲ್ಪಟ್ಟಿರುವುವು. ಇವುಗಳಲ್ಲಿ **ಮೂಲ**ವರ್ಣಗಳು ಎಂದರೆ ವರ್ಣಾಂತರಗಳ ಯೋಜನವಿಲ್ಲದೆ ಲೋಕದಲ್ಲಿ ವರ್ಣವೆಂಬ ವ್ಯವಹಾರಕ್ಕೆ ವಿಷಯವಾದ—ಅ ಆ ಇ ಈ ಮೊದಲಾದ **ಸ್ವರ**ವರ್ಣಗಳೂ ಕ್ ಖ್ ಗ್ ಘ್ ಮೊದಲಾದ ಸ್ವರಸಹಾಯವಿಲ್ಲದ **ವ್ಯಂಜನ**ವರ್ಣಗಳೂ **ಯೋಗವಾಹ**ಗಳೆಂಬ ಅನುಸ್ವಾರ-ವಿಸರ್ಗ-ಜಿಹ್ವಾಮೂಲೀಯ-ಉಪಧ್ಮಾನೀಯಗಳೂ ಎಂದು ತಿಳಿಯಬೇಕು. **ಸಂಯುಕ್ತ**ವರ್ಣಗಳೆಂದರೆ ಈ ಮೂಲ ವರ್ಣಗಳಿಗೆ ನಾನಾಬಗೆಯಾಗಿ ಸ್ವರಗಳನ್ನಾಗಲಿ ವ್ಯಂಜನಗಳನ್ನಾಗಲಿ ಸೇರಿಸಿ ಉಚ್ಚರಿಸುವ ‘ರಾಷ್ಟ್ರ, ಕೃಷ್ಣ’ ಮೊದಲಾದ ಪದಗಳಲ್ಲಿರುವ ಅಕ್ಷರಗಳೆಂದು ತಿಳಿಯತಕ್ಕದ್ದು.

**ಮೂಲವರ್ಣಗಳಲ್ಲಿಯ ಭೇದಗಳು**

ಇವುಗಳಲ್ಲಿ **ಮೂಲವರ್ಣ**ಗಳು ಸಾಮಾನ್ಯವಾಗಿ **ಸ್ವರ**ಗಳೆಂದೂ **ವ್ಯಂಜನ**ಗಳೆಂದೂ **ಯೋಗವಾಹ**ಗಳೆಂದೂ ಮೂರು ತೆರನಾಗಿ ವ್ಯವಹರಿಸಲ್ಪಡುವುವು. **ಸ್ವರ**ಗಳೆಂದರೆ — ‘ಸ್ವಯಂ (ಇತರ ವರ್ಣಸಹಾಯಂ ವಿನಾ) ರಾಜಂತೇ ಸ್ಪಷ್ಟೋಚ್ಚಾರಣೇನ ಪ್ರಕಾಶಂತೇ ಇತಿ ಸ್ವರಾಃ’ಎಂಬ ವ್ಯುತ್ಪತ್ತಿಯಿಂದ ಯಾವ ವರ್ಣಗಳ ಸಹಾಯವೂ ಇಲ್ಲದೆ ಸ್ವತಂತ್ರವಾಗಿ ಉಚ್ಚರಿಸಲ್ಪಟ್ಟರೂ

[ * ಱ-ಳಗಳನ್ನು ಭಟ್ಟಾಕಳಂಕದೇವನು ಈ ಸೂತ್ರದ [ತನ್ನ] ವೃತ್ತಿಯಲ್ಲಿ ಹೇಳಿದ್ದಾನೆ. -ಸಂಪಾದಕ ]

ಸ್ಪಷ್ಟವಾಗಿ ಬೋಧೆಯಾಗುವ ವರ್ಣಗಳೆಂದು ತಿಳಿಯಬೇಕು. **ವ್ಯಂಜನಗಳೆಂದರೆ** — 'ವ್ಯಂಜಂತಿ (ಪ್ರಕಾಶಂತೇ ಸ್ವರಸಹಾಯೇನ) ಇತಿ ವ್ಯಂಜನಾನಿ'ಎಂಬ ವ್ಯುತ್ಪತ್ತಿಯಿಂದ ಸ್ವರಸಹಾಯದಿಂದಲೆ ಸ್ಪಷ್ಟವಾಗಿ ಉಚ್ಚರಿಸುವುದಕ್ಕೆ ಬರುವ ವರ್ಣಗಳೆಂದು ತಿಳಿಯಬೇಕು. **ಯೋಗವಾಹ**ಗಳೆಂದರೆ. 'ಯೋಗೇನ (ಇತರಸಂಬಂಧೇನ) ವಾಹಯಂತಿ (ಪ್ರಯೋಗಾನ್ನಿರ್ವಾಹಯಂತಿ) ಇತಿ ಯೋಗ ವಾಹಾಃ' ಎಂಬ ವ್ಯುತ್ಪತ್ತಿಯಿಂದ ಸ್ವತಂತ್ರವಾಗಿ ಉಚ್ಚರಿಸುವುದಕ್ಕೆ ಬಾರದೆ ಸ್ವರದೊಡನೆ ಸೇರಿ ಪ್ರಯೋಗಗಳನ್ನು ನಿರ್ವಹಿಸುವ **ಅನುಸ್ವಾರ** ( ಂ ) **ವಿಸರ್ಗ** ( ಃ ) **ಜಿಹ್ವಾಮೂಲೀಯ** ( ೱಕ್ ) **ಉಪಧ್ಮಾನೀಯ** ( ೲಪ್ ) ಗಳೆಂಬುವೆಂದು ತಿಳಿಯಬೇಕು. **ಪಾಣಿನಿ** ವ್ಯಾಕರಣ ದಲ್ಲಿ ಇವನ್ನು **ಅಯೋಗವಾಹ**ಗಳೆಂದು ವ್ಯವಹರಿಸುವರು. **ಅಯೋಗವಾಹ**ವೆಂದರೆ ವರ್ಣ ಮಾಲೆಯಲ್ಲಿ ಪಾಠವು ಇಲ್ಲದೆ ಪಾಠ ಮಾಡಿರುವ ಯಾವ ವರ್ಣಗಳಲ್ಲಿಯೂ ಅಂತರ್ಭಾವವನ್ನು ಹೇಳುವುದಕ್ಕೆ ಆಗದೆ ಪ್ರಯೋಗ ಮಾತ್ರದಲ್ಲದ್ದು ಶಬ್ದಗಳ ಸಾಧುತ್ವವನ್ನು ಬೋಧಿಸುವ ಅನು ಸ್ವಾರ ಮೊದಲಾದುವುಗಳೆಂದು ತಿಳಿಯಬೇಕು.

ಇಂತಹ ಯೋಗವಾಹಗಳಲ್ಲಿ ಅನುಸ್ವಾರ-ವಿಸರ್ಗಗಳು ಸ್ವರಸಹಾಯವಿಲ್ಲದೆ ಉಚ್ಚರಿಸಲಿಕ್ಕೆ ಬಾರದಿರುವುದರಿಂದ ಇವು ಸ್ವರಗಳಲ್ಲಿ ಸೇರುವುವೆಂದೂ ಜಿಹ್ವಾಮೂಲೀಯ ಉಪಧ್ಮಾನೀಯಗಳು **ಕ ಖ, ಪ ಫ,** ಎಂಬ ವರ್ಣಗಳ ಸಹಾಯವಿಲ್ಲದೆ ಇರುವುದಿಲ್ಲವಾದುದರಿಂದ ಇವು ವ್ಯಂಜನದಲ್ಲಿ ಸೇರುವುವೆಂದೂ ಹೇಳಿ, ಮೂಲ ವರ್ಣಗಳು ಎರಡೇ ಬಗೆಯಾಗಿರುವುವೆಂದು **ಕಾತಂತ್ರ** ವ್ಯಾಕರಣ ದಲ್ಲಿ ಹೇಳಲ್ಪಟ್ಟಿದೆ. **ಪತಂಜಲಿ** ಭಾಷ್ಯದಲ್ಲಿ ಇವುಗಳನ್ನು ವರ್ಣಮಾಲೆಯಲ್ಲಿ **ಅ** ಕಾರದ ಮೇಲಾ ಗಲಿ **ಶ ಷ ಸ** ಗಳ ಮಧ್ಯದಲ್ಲಾಗಲಿ ಪಾಠ ಮಾಡಿಕೊಂಡು ಇವನ್ನು **ಅಚ್** (ಸ್ವರ) ಎಂದಾಗಲಿ **ಹಲ್** (ವ್ಯಂಜನ) ಎಂದಾಗಲಿ ವ್ಯವಹರಿಸಲಹುದೆಂದು ಹೇಳಲ್ಪಟ್ಟಿದೆ. **ಶಬ್ದಮಣಿದರ್ಪಣ**ದಲ್ಲಿ ಇದೇ ಅರ್ಥವನ್ನು ಬೋಧಿಸುವಂತೆ —

ಸ್ವರಪರದೊಳಿರ್ಪ ತೆರದಿಂ
ದುರುಮುಖ್ಯೋಚ್ಚಾರಣಕ್ಕೆ ಬಾರದ ಕತದಿಂ
ಪರಿಕಿಸೆ ಬಿಂದುವಿಸರ್ಗಂ
ಸ್ವರಾಂಗಮುಂ ವ್ಯಂಜನಾಂಗಮುಂ ತಾವೆಂಬರ್ (ಸೂತ್ರ ೧೨)

ಎಂದು ಹೇಳಲ್ಪಟ್ಟಿರುವುದು. ಇಲ್ಲಿ ಜಿಹ್ವಾಮೂಲೀಯ-ಉಪಧ್ಮಾನೀಯಗಳು ಹೇಳಲ್ಪಡದಿದ್ದರೂ ಅವು ವಿಸರ್ಗದ ರೂಪಾಂತರವಾದುದರಿಂದ ಅವನ್ನೂ ಹೇಳಿದಂತೆಯೆ ತಿಳಿಯಬೇಕು. ಇವುಗಳ ಸ್ವರೂಪವು —

ಬಿಂದುವನುಸ್ವಾರಂ ತಾ
ನೆಂದಕ್ಕುಂ ಸೊನ್ನೆ ಮುತ್ತುವೋಲ್ ವೃತ್ತತೆಯಿಂ
ಸಂದಿರ್ಪುದಂತದದಕಿ
ಟ್ಟೊಂದಿರೆ ಮಣಿಗೊಪ್ಪುವೋಲ್ ವಿಸರ್ಗಮೆಸಕ್ಕುಂ (ಸೂತ್ರ ೧೧)
ಸಮಸಂದಿರ್ದ ×ಕ್ ಮುಮು
~ ಪ್ ಮುಮೊಂದಿದ ಬಿಂದುವುಂ ವಿಸರ್ಗಮುಮೊಂದ
ಕ್ಕುಮಿವೆಯ್ದು ಯೋಗವಾಹಂ
ಕ್ರಮದಿಂ ಕ ಪ ಯುಗಳವಿವಱೊಳಸಂಬಂಧಂಗಳ್ (ಸೂತ್ರ ೧೭)

ಎಂಬ ಸೂತ್ರಗಳಿಂದ ಸೂಚಿಸಲ್ಪಟ್ಟಿರುವುದು. ಇವುಗಳಲ್ಲಿ ವಿಸರ್ಗ-ಜಿಹ್ವಾಮೂಲೀಯ-ಉಪಧ್ಮಾನೀಯಗಳು ಅಚ್ಚಗನ್ನಡ ಶಬ್ದಗಳಲ್ಲಿಲ್ಲದಿದ್ದರೂ ಅನುಕರಣಗಳಲ್ಲಿಯೂ ಭಾಷೆಯಲ್ಲಿ ಉಪಯೋಗಿಸುವ ಕೆಲವು ಸಂಸ್ಕೃತ ಶಬ್ದಗಳಲ್ಲಿಯೂ ಇರುವುದರಿಂದ ಅವುಗಳ ಸ್ವರೂಪವನ್ನು ತಿಳಿಸಲು ಇಲ್ಲಿ ಹೇಳಲಾಗಿದೆ‡ಇವನ್ನು ಇತರ ಯಾವ ವೈಯ್ಯಾಕರಣರೂ ಸ್ವರ ವ್ಯಂಜನಗಳಿಗಿಂತಲೂ ಬೇರೆಯಾಗಿ ಅಂಗೀಕರಿಸದಿದ್ದರೂ ಜೈನ ಮತದಲ್ಲಿ ಪ್ರಸಿದ್ಧಿಯನ್ನು ಪಡೆದಿರುವ **ಪರಮಾಗಮ**ವೆಂಬ ಪ್ರಾಕೃತ ಗ್ರಂಥದಲ್ಲಿ ಪೃಥಕ್ಕಾಗಿಯೆ ವ್ಯವಹರಿಸುತ್ತಿರುವುದರಿಂದ ಇಲ್ಲಿಯೂ ಮೂಲವರ್ಣಗಳು ಮೂರು ವಿಧವೆಂದು ಹೇಳಲ್ಪಟ್ಟಿರುವುದು.

## ಸ್ವರ-ವ್ಯಂಜನಾದಿಗಳಲ್ಲಿಯ ಭೇದಗಳು

ಇಂತಹ ಮೂರು ವಿಧವಾದ ಮೂಲ ವರ್ಣಗಳಲ್ಲಿ **ಸ್ವರಗಳು** ಸಂಕ್ಷೇಪವಾಗಿ ಐಯ್ದು **ಹ್ರಸ್ವ**ಗಳೆಂದೂ ನಾಲ್ಕು **ಸಂಧ್ಯಕ್ಷರ**ಗಳೆಂದೂ ಒಟ್ಟು ಒಂಬತ್ತೆಂದು ಹೇಳುವರು. ಇದೇ ಅರ್ಥವನ್ನು "**ನವಾದಿತಃ ಸ್ವರಾಃ**" ಎಂಬ ಸೂತ್ರದಿಂದ **ಸಾರಸ್ವತ** ವ್ಯಾಕರಣದಲ್ಲಿ ಹೇಳಿರುವುದು. ಮಧ್ಯಮ ಪಕ್ಷದಲ್ಲಿ **ಕಾತಂತ್ರ** ವ್ಯಾಕರಣಕಾರರು "**ಚತುರ್ದಶಾದೌ ಸ್ವರಾಃ**" ಎಂದು ಹೇಳಿರುವಂತೆ **ಸಮಾನಸ್ವರ**ಗಳು ಹತ್ತು, **ಸಂಧ್ಯಕ್ಷರ**ಗಳು ನಾಲ್ಕು, ಅಂತು ಹದಿನಾಲ್ಕು ಸ್ವರಗಳೆಂದು ತಿಳಿಯಬೇಕು. ಇನ್ನು ವಿಸ್ತರಿಸಲು ಹಿಂದೆ ಹೇಳಿದ ಒಂಬತ್ತು ಸ್ವರಗಳಿಗೂ **ಹ್ರಸ್ವ, ದೀರ್ಘ, ಪ್ಲುತ**ಗಳೆಂಬ ಭೇದಗಳನ್ನಂಗೀಕರಿಸುವುದರಿಂದ ಇಪ್ಪತ್ತೇಳು ಭೇದಗಳುಳ್ಳವುಗಳೆಂದು ತಿಳಿಯಬೇಕು ಆದುದರಿಂದಲೆ "**ಸತ್ತಾವೀಸಾ ತಹ ಸರಾ ಭಣಿಯಾ**" ಎಂದು **ಪರಮಾಗಮ**ದಲ್ಲಿ ಹೇಳಲ್ಪಟ್ಟಿರುವುದು. ಇನ್ನೂ ವಿಸ್ತರಿಸಲು ಅ ವರ್ಣವೊಂದೆ ಅನುನಾಸಿಕ ಹ್ರಸ್ವೋದಾತ್ತ, ಅನುನಾಸಿಕ ಹ್ರಸ್ವಾನುದಾತ್ತ, ಅನುನಾಸಿಕ ಹ್ರಸ್ವಸ್ವರಿತ, ಅನನುನಾಸಿಕ ಹ್ರಸ್ವೋದಾತ್ತ, ಅನನುನಾಸಿಕ ಹ್ರಸ್ವಾನುದಾತ್ತ, ಅನನುನಾಸಿಕ ಹ್ರಸ್ವಸ್ವರಿತವೆಂದು ಹ್ರಸ್ವಾಕಾರದಲ್ಲಿ ಆರು ಭೇದಗಳೂ ದೀರ್ಘಾಕಾರದಲ್ಲಿ ಅನುನಾಸಿಕ ದೀರ್ಘೋದಾತ್ತ, ಅನುನಾಸಿಕ ದೀರ್ಘಾನುದಾತ್ತ, ಅನುನಾಸಿಕ ದೀರ್ಘಸ್ವರಿತ, ಅನನುನಾಸಿಕ ದೀರ್ಘೋದಾತ್ತ, ಅನನುನಾಸಿಕ ದೀರ್ಘಾನುದಾತ್ತ, ಅನನುನಾಸಿಕ ದೀರ್ಘಸ್ವರಿತವೆಂದು ಆರು ಭೇದಗಳೂ ಪ್ಲುತಾಕಾರದಲ್ಲಿ ಅನುನಾಸಿಕ ಪ್ಲುತೋದಾತ್ತ, ಅನುನಾಸಿಕ ಪ್ಲುತಾನುದಾತ್ತ, ಅನುನಾಸಿಕ ಪ್ಲುತಸ್ವರಿತ, ಅನನುನಾಸಿಕ ಪ್ಲುತೋದಾತ್ತ, ಅನನುನಾಸಿಕ ಪ್ಲುತಾನುದಾತ್ತ, ಅನನುನಾಸಿಕ ಪ್ಲುತಸ್ವರಿತವೆಂದು ಆರು ಭೇದಗಳೂ ಇರುವುದರಿಂದ ಹದಿನೆಂಟು ಭೇದಗಳುಳ್ಳದೆಂದು ತಿಳಿಯಬೇಕು. ಹೀಗೆಯೆ ಇ ವರ್ಣ ಮೊದಲಾದ ಎಲ್ಲಾ ಸ್ವರಗಳಿಗೂ ಇರುವುದರಿಂದ ನೂರರವತ್ತೆರಡು ಭೇದಗಳು ಇರುವುವೆಂದು ತಿಳಿಯುವುದು. ಮತ್ತು ವೇದದಲ್ಲಿಯೂ ಮಂತ್ರಶಾಸ್ತ್ರದಲ್ಲಿಯೂ ಸ್ವರಗಳಲ್ಲಿ ಉದಾತ್ತಾನುದಾತ್ತಸ್ವರಿತ ಪ್ರಚಯಗಳೆಂಬ ನಾಲ್ಕು ಭೇದಗಳನ್ನಂಗೀಕರಿಸಿರುವುದರಿಂದ ಅ ವರ್ಣವೊಂದೆ ಇಪ್ಪತ್ತುನಾಲ್ಕು ಭೇದಗಳನ್ನು ಹೊಂದಿರುವುದು. ಹೀಗೆ ಇ ವರ್ಣ ಮೊದಲಾದ ಎಲ್ಲಾ ಸ್ವರಗಳಿಗೂ ಇರುವುದರಿಂದ ಸ್ವರಗಳು ಇನ್ನೂರಹದಿನಾರು ಭೇದಗಳನ್ನು ಹೊಂದಿರುವುವೆಂದು ತಿಳಿಯುವುದು.

**ವ್ಯಂಜನ**ಗಳಲ್ಲಿ ಇಪ್ಪತ್ತಯ್ದು **ವರ್ಗಾಕ್ಷರ**ಗಳೆಂತಲೂ ಎಂಟು **ಅವರ್ಗಾಕ್ಷರ**ಗಳೆಂತಲೂ

[ ‡ ಇವುಗಳ ರೂಪವನ್ನು ದರ್ಪಣಕಾರನು ೧೭ನೆಯ ಸೂತ್ರದ ವೃತ್ತಿಯಲ್ಲಿ ಹೇಳಿದ್ದಾನೆ. –ಸಂಪಾದಕ ]

ಒಟ್ಟು ಮೂವತ್ತುಮೂರು ಭೇದಗಳಿರುವುವು. ಇವುಗಳಲ್ಲಿ **ಯ ವ ಲ** ಗಳಾದರೊ ಅನುನಾಸಿಕಾನನುನಾಸಿಕ ಭೇದಗಳಿಂದ ಆರಾಗುವುವು. ಇದರಿಂದ ವ್ಯಂಜನಗಳು ಮೂವತ್ತಾರೆಂದು ತಿಳಿಯಬೇಕು.

**ಯೋಗವಾಹ**ಗಳಾದರೊ ಅಂ, ಅಃ, **ಅ ಃ ಕ್, ಅ ಃ ಪ್** ಎಂದು ನಾಲ್ಕು ಇರುವುವು. ಹೀಗಿರಲು ಮಧ್ಯಮಪಕ್ಷ ವಿವಕ್ಷೆಯಿಂದ ಪರವಾಗಮದಲ್ಲಿ ಮೂಲ ವರ್ಣಗಳು: "**ಚೌಸಟ್ಠಿ ಮುಳ ವಣ್ಣಾಯ**" ಎಂದಿರುವ ವಚನದಿಂದ ಇಪ್ಪತ್ತೇಳು ಸ್ವರಗಳು, ಮುವ್ವತ್ತುಮೂರು ವ್ಯಂಜನಗಳು, ನಾಲ್ಕು ಯೋಗವಾಹಗಳು, ಒಟ್ಟು ಅರವತ್ತುನಾಲ್ಕು ಆಗುವುವೆಂದು ತಿಳಿಯಬೇಕು. ಸಂಯುಕ್ತ ವರ್ಣಗಳಾದರೋ ಏಕದ್ವಿತ್ರ್ಯಾದಿ ಸಂಯೋಗಗಳಿಂದ ಅನೇಕ ಭೇದಭಿನ್ನಗಳಾಗಿರುವುವೆಂದು ತಿಳಿಯಬೇಕು. ಭಾಷೆಯಲ್ಲಿ ಉದಾತ್ತಾನುದಾತ್ತ ಮೊದಲಾದ ಸ್ವರಗಳ ಭೇದಗಳು ಪ್ರಸಿದ್ಧಿಗೆ ಬಂದಿಲ್ಲವಾದುದರಿಂದ ಅವುಗಳ ಸ್ವರೂಪವನ್ನು ಇಲ್ಲಿ ವಿವರಿಸಲು ಅವಶ್ಯಕವಿಲ್ಲವೆಂದು ಬಿಟ್ಟಿರುವುದು.

## ಸಂಸ್ಕೃತದಲ್ಲಿಯ ವರ್ಣಗಳು

ಸಂಸ್ಕೃತದಲ್ಲಾದರೊ **ಅ ಇ ಉ ಋ** ವರ್ಣಗಳಿಗೆ ಮಾತ್ರ ಮೇಲೆ ಹೇಳಿರುವ ಹದಿನೆಂಟು ಭೇದಗಳಿರುವುದರಿಂದಲೂ **ಌ** ವರ್ಣಕ್ಕೆ ದೀರ್ಘವಿಲ್ಲದಿರುವುದರಿಂದ ಹನ್ನೆರಡು ಭೇದವಿರುವುದರಿಂದಲೂ **ಏ ಐ ಓ ಔ** ಕಾರಗಳಿಗೆ ಹ್ರಸ್ವವಿಲ್ಲದಿರುವುದರಿಂದ ಪ್ರತ್ಯೇಕವಾಗಿ ಹನ್ನೆರಡು ಭೇದಗಳೇ ಇರುವುದರಿಂದಲೂ ಸ್ವರಗಳು ನೂರವೊಪ್ಪತ್ತೆರಡು ಭೇದಗಳುಳ್ಳವುಗಳೆಂದು ತಿಳಿಯುವುದು. ವ್ಯಂಜನಗಳು ಮುವತ್ತಮೂರು, ಯೋಗವಾಹಗಳು ನಾಲ್ಕು, ಅಂತು ನೂರಅರವತ್ತೊಂಬತ್ತು ಮೂಲವರ್ಣಗಳೆಂದು ತಿಳಿಯಬೇಕು. **ಌ**ಕಾರವು ಋಕಾರವನ್ನುಚ್ಚರಿಸಲು ಬಾರದೆ ಉಚ್ಚರಿಸಿದ ಋ ವರ್ಣವೆಂದು —

**ದಧಿಋತಕಾಯ ದೇಹೀತಿ ವಕ್ತುಂ ಪ್ರವೃತ್ತಾ ಕುಮಾರೀ ಕರಣಾದ್ಯಪಾಟವಾತ್**
**ಌತಕಾಯ ದೇಹೀತ್ಯಾಹ ಇತ್ಯಶಕ್ತಿಜಾನುಕರಣಮಿದಂ**

ಎಂದು ಪತಂಜಲಿ ಭಾಷ್ಯದಲ್ಲಿ ಹೇಳಿರುವುದರಿಂದಲು **ಌ** ಕಾರ ಘಟಿತವಾದ ಪದಗಳು ಲೋಕದಲ್ಲಿ ಅಪ್ರಸಿದ್ಧವಾಗಿರುವುದರಿಂದಲೂ ಇದು ಅಷ್ಟು ಅವಶ್ಯಕವಾದ ವರ್ಣವಲ್ಲವೆಂದು ತಿಳಿಯುವುದು.

## ಕನ್ನಡದಲ್ಲಿ ವರ್ಣಗಳೆಷ್ಟು

ಕನ್ನಡದಲ್ಲಿ **ಅ ಇ ಉ ಋ ಌ ಎ ಒ** ವರ್ಣಗಳಿಗೆ ಮಾತ್ರ ಹ್ರಸ್ವದೀರ್ಘಪ್ಲುತಗಳೆಂಬ ಭೇದಗಳಿರುವುದರಿಂದ ಇಪ್ಪತ್ತೊಂದು ಭೇದಗಳೂ **ಐ ಔ** ವರ್ಣಗಳಿಗೆ ಹ್ರಸ್ವಮಾತ್ರವಿಲ್ಲದಿರುವುದರಿಂದ ನಾಲ್ಕು ಭೇದಗಳೂ ಎಲ್ಲಾ ಸೇರಿ ಇಪ್ಪತ್ತಯ್ದು ಭೇದಗಳಿರುವುವೆಂದು ತಿಳಿಯಬೇಕು. ವ್ಯಂಜನಗಳಲ್ಲಾದರೊ ಇಪ್ಪತ್ತಯ್ದು ವರ್ಗಾಕ್ಷರಗಳು, ಭಾಷೆಯಲ್ಲಿ ಮಾತ್ರ ಅಂಗೀಕರಿಸಿರುವ **ಱ**ಕಾರ **ೞ**ಕಾರಗಳು ಸೇರಿ ಹತ್ತು ಅವರ್ಗಾಕ್ಷರಗಳು, ಎಲ್ಲಾ ಮುವತ್ತಯ್ದು ವರ್ಣಗಳಿರುವವು. ಯೋಗವಾಹಗಳು ನಾಲ್ಕು. ಎಲ್ಲಾ ಸೇರಿ ಮೂಲ ವರ್ಣಗಳು ಅರವತ್ತುನಾಲ್ಕೆಂದು ತಿಳಿಯಬೇಕು. ಇದರಿಂದ **ಱ**ಕಾರ**ೞ**ಕಾರಗಳು ಇತರ ವ್ಯಾಕರಣದಲ್ಲಿ ಪ್ರಸಿದ್ಧಿಯುಲ್ಲದಿದ್ದರೂ ಭಾಷೆಯಲ್ಲಿ ಅಂಗೀಕರಿಸಿರುವುದರಿಂದ ವಿರೋಧವಿಲ್ಲವೆಂದು ತಿಳಿಯಬೇಕು.

ಈ ಕರ್ಣಾಟಕ ಭಾಷೆಯಲ್ಲಿ **ಱ ಕುಳ ಕ್ಷಳ** ಭೇದಗಳಿಂದ **ಳ**ಕಾರವು ಮೂರಾಗಿರುವುದರಿಂದ ಮೂಲವರ್ಣಗಳು ಅರವತ್ತಾರಿರುವುವೆಂದು ಶಂಕೆಯುಂಟಾಗುವುದು. ಆದರೂ **ಳ**ಕಾರವೊಂದೇ ಸ್ಥಾನಭೇದದಿಂದ ಎಂದರೆ **ಲ**ಕಾರಸ್ಥಾನದಲ್ಲಿ ಆದಿಷ್ಟವಾದುದಕ್ಕೆ **ಕ್ಷಳ**ವೆಂತಲೂ **ಡ**ಕಾರಾದಿಗಳ ಸ್ಥಾನದಲ್ಲಿ ಬಂದುದಕ್ಕೆ **ಱ**ವೆಂತಲೂ ಸಂಜ್ಞೆ ಬರುವುದರಿಂದ ವರ್ಣಾಂತರವೆಂದು ಹೇಳುವುದಕ್ಕಾಗುವುದಿಲ್ಲ. ಆದುದರಿಂದ ಮೂಲ ವರ್ಣಗಳು **ಅರವತ್ತನಾಲ್ಕು** ಎಂದು ಅಂಗೀಕರಿಸಲ್ಪಟ್ಟಿವೆ. ಮತ್ತು ಅಚ್ಚ ಕರ್ಣಾಟಕ ವಿಷಯದಲ್ಲಿ ಋವರ್ಣ, ಌವರ್ಣ, ೡವರ್ಣ, ಶಕಾರ, ಷಕಾರ, ವಿಸರ್ಜನೀಯ, ಜಿಹ್ವಾಮೂಲೀಯ-ಉಪಧ್ಮಾನೀಯಗಳಿಗೆ ಪ್ರಯೋಗವಿಲ್ಲದಿದ್ದರೂ ಸಂಸ್ಕೃತಶಬ್ದಗಳನ್ನೂ ಭಾಷೆಯಲ್ಲಿ ಪ್ರಯೋಗಿಸುವುದರಿಂದ ಅವೂ ಭಾಷಾವಿಷಯಗಳೆಂದು ಇಲ್ಲಿ ಹೇಳಲ್ಪಟ್ಟಿವೆ.

ಲೋಕದಲ್ಲಿ ಅಕಾರಾದಿ ಸ್ವರಗಳಿಗೆ ದೀರ್ಘಪ್ಲುತಾದಿ ಭೇದಗಳು ಪ್ರಸಿದ್ಧವಾಗಿದ್ದರೂ ಅವನ್ನು ಬಿಟ್ಟು ವರ್ಣಮಾಲೆಯಲ್ಲಿ **ಅ** ಕಾರಾದಿ (ಹ್ರಸ್ವ) ವರ್ಣಗಳೊಂದೊಂದನ್ನೆ ಪಾಠ ಮಾಡಿದ್ದರೂ ಜಾತಿಪಕ್ಷವನ್ನಾಶ್ರಯಿಸಿ ಆಯಾ ವರ್ಣಗಳ ಭೇದಗಳನ್ನೆಲ್ಲ ಗ್ರಹಿಸಲು ಶಕ್ಯವಾಗಿರುವುದರಿಂದ ಇಲ್ಲ **ಆ** ಕಾರಾದಿ ದೀರ್ಘಗಳನ್ನು ಹೇಳಿಲ್ಲವೆಂದು ತಿಳಿಯಬೇಕು. **ಶಬ್ದಮಣಿದರ್ಪಣ**ದಲ್ಲಿ—

ವರ್ಣಂಗಳ ಪಾಠಕ್ರಮ
ಮರ್ಣವವೃತ ಧಾತ್ರಿಯೊಳ್ ಪ್ರಸಿದ್ಧಂ ನಿಜದಿಂ
ವರ್ಣಂಗಳಕಾರಾದ್ಯಾ
ಪೂರ್ಣತೆಯಂ ಪಡೆದುವಾ ಳಕಾರಂಬರೆಗಂ (ಸೂತ್ರ ೪)

ಎಂಬ ಸೂತ್ರವನ್ನು ಹೇಳಿ, ವೃತ್ತಿಯಲ್ಲಿ

**ಅವಾವುವೆಂದೊಡೆ ಅ ಆ ಇ ಈ ಉ ಊ ಋ ೠ ಌ ೡ**

ಎಂದು **ಹ್ರಸ್ವ ದೀರ್ಘ**ಗಳೆರಡನ್ನೂ ಹೇಳಿರುವುದು. ಮತ್ತು ಇವಕ್ಕೆ—

.. ಆದಿಯ ಪತ್ತು
ಸ್ವರಮುಂ ಸಮಾನಮೆನಿಸುಗು
ಮೆರಡೆರಡವಱೊಳ್ ಸವರ್ಣಮೆಂತೋದಿದೊಡಂ (ಸೂತ್ರ ೬)

ಎಂಬ ಸೂತ್ರಖಂಡದಿಂದ ಮೊದಲ ಹತ್ತಕ್ಷರಗಳಿಗೆ ‘**ಸಮಾನ**’ ವೆಂದು ಹೆಸರು. ಆ ಹತ್ತಕ್ಷರದೊಳಗೆ ಕ್ರಮವಾಗಿ ಎರಡೆರಡಕ್ಷರಗಳು ಪರಸ್ಪರವಾಗಿ ಸವರ್ಣಗಳೆನಿಸಿಕೊಳ್ಳುವುವು ಎಂದು ಹೇಳಿರುವುದು. ಪಾಣಿನಿ ವ್ಯಾಕರಣದಲ್ಲಿ

**ತುಲ್ಯಾಸ್ಯ ಪ್ರಯತ್ನಂ ಸವರ್ಣಂ**

ಎಂಬ ಸೂತ್ರದಿಂದ ಒಂದೆ ಸ್ಥಾನಪ್ರಯತ್ನಗಳಲ್ಲಿ ಹುಟ್ಟಿದ ವರ್ಣಗಳು ಸವರ್ಣಗಳೆನಿಸಿಕೊಳ್ಳುವುವೆಂದು ಹೇಳಲ್ಪಟ್ಟಿರುವುದು. **ಶಾಕಟಾಯನ**ವ್ಯಾಕರಣದಲ್ಲಿ ಇಂತಹ ವರ್ಣಗಳಿಗೆ **ಸ್ವ**ಸಂಸ್ಥೆಯೆಂದು

**ಸ್ಥಾನಾಸ್ಯೈಕ್ಯೇಸ್ವಃ**

ಎಂಬ ಸೂತ್ರದಿಂದ ಸೂಚಿಸಲ್ಪಟ್ಟಿರುವುದು. ಇಲ್ಲಿ ಪ್ರಯತ್ನವೆಂದರೆ ವರ್ಣೋಚ್ಚಾರಣೆಗೆ ಸಾಧಕವಾದ ವಾಯುವಿನ ವ್ಯಾಪಾರವಿಶೇಷವು. ಇದು ಆಭ್ಯಂತರ ಬಾಹ್ಯಗಳೆಂದು ಎರಡು ವಿಧವಾಗಿರುವುದು. ಸವರ್ಣಸಂಜ್ಞೆಯಲ್ಲಿ ಆಭ್ಯಂತರ ಪ್ರಯತ್ನದಿಂದಲೆ ಸಾಮ್ಯವನ್ನು ಹೇಳಬೇಕು. **ಶಾಕಟಾ**

**ಯನ** ಸೂತ್ರದಲ್ಲಿ ಹೇಳಿರುವ 'ಆಸ್ಯ'ಪದಕ್ಕೆ ಪ್ರಯತ್ನವೆಂದೇ ಅರ್ಥವನ್ನು ಹೇಳಬೇಕು. ಇಂತಹ ಪ್ರಯತ್ನಗಳ ಸ್ವರೂಪವನ್ನೂ ಭೇದಗಳನ್ನೂ ಸಂಸ್ಕೃತ ವ್ಯಾಕರಣದಲ್ಲಿ ವಿಶದವಾಗಿ ಹೇಳಿರುವುದ ರಿಂದ ಅವುಗಳನ್ನು ಅದರಿಂದಲೇ ತಿಳಿದುಕೊಳ್ಳಬೇಕು.

**ಅವತಾರಿಕೆ ೨**

ವರ್ಣಮಾಲೆಯನ್ನು ನಿರ್ಣಯಿಸಿದ ಅನಂತರದಲ್ಲಿ ಶಾಸ್ತ್ರವೆಂಬ ಸಮುದ್ರವನ್ನು ಪ್ರವೇಶಿಸ ಬೇಕೆಂಬಿಚ್ಛೆಯುಳ್ಳ ಜನರಿಗೆ ನೌಕಾಪ್ರಾಯವಾದ ಸಂಜ್ಞಾಪ್ರಕರಣವನ್ನು **ಭಟ್ಟಾಕಳಂಕ ದೇವನು** ಪ್ರಾರಂಭಿಸುತ್ತಾನೆ. ಅದರಲ್ಲಿ ಮೊದಲು ಅ ಕಾರಾದಿ ವರ್ಣಗಳು ಉಪಸ್ಥಿತವಾಗುವುದ ರಿಂದ ಅವುಗಳಿಗೆ ಸಂಜ್ಞೆಯನ್ನು ಹೇಳುತ್ತಾನೆ.

**ಸೂತ್ರಂ || ಔತಃ ಸ್ವರಾಃ || ೨ ||**

**ಅರ್ಥ || ವರ್ಣಮಾಲೆಯಲ್ಲಿ ಹೇಳಿರುವ ಅ ಕಾರ ಮೊದಲು ಔ ಕಾರ ಪರ್ಯಂತರವಿರುವ ಒಂಬತ್ತು ವರ್ಣಗಳು ಸ್ವರಗಳೆನಿಸಿಕೊಳ್ಳುವುವು.**

**ಉದಾಹರಣೆ ||** ಅ ಇ ಉ ಋ ೞ ಏ ಐ ಓ ಔ ಇವೂ ಇವುಗಳ ದೀರ್ಘಪ್ಲುತಗಳೂ **ಸ್ವ**ರಗಳೆನಿಸಿಕೊಳ್ಳುವುವು.

**ಇದಕ್ಕೆ ಪ್ರಯೋಜನವು ||** ಈ ಶಾಸ್ತ್ರದಲ್ಲಿ ಹೇಳಿರುವ '**ಯಙ್ ಸ್ವರೇ ಸ್ವರಸ್ಯ ||೩೫||**' ಎಂದು ಮೊದಲಾದ ಸ್ವರಪದಘಟಿತವಾದ ಸೂತ್ರಗಳಲ್ಲಿ ಸ್ವರಪದಕ್ಕೆ ಅ ಕಾರ ಮೊದಲು ಔ ಕಾರ ದವರೆಗಿರುವ ವರ್ಣಗಳೆಂದು ತಿಳಿಯಬೇಕು.

**ವಿಚಾರ ೨**

ಈ ಸ್ವರಗಳನ್ನು ಸಂಸ್ಕೃತದಲ್ಲಿ '**ಅಚ್**' ಎಂದು ವ್ಯವಹರಿಸುವರು. ಇಂತಹ **ಸ್ವರಗಳು** ಸಾಮಾನ್ಯವಾಗಿ ಒಂಬತ್ತೆಂದು **ಶಾಸನಕಾರನು** ಹೇಳಿದ್ದಾಗ್ಯೂ **ದರ್ಪಣಕಾರನು** ಪ್ಲುತವನ್ನು ಬಿಟ್ಟು ಹದಿನಾಲ್ಕು ಸ್ವರಗಳೆಂದು—

ತರದಿನಕಾರಂ ಮೊದಲಾ
ಗಿರೆ ಪದಿನಾಲ್ಕುಂ ಸ್ವರಂಗಳ್ ...... (ಸೂತ್ರ ೬)

ಎಂಬ ಸೂತ್ರದಿಂದ ಸೂಚಿಸಿ, ಅವುಗಳಲ್ಲಿ ಹ್ರಸ್ವಕ್ಕೆ ಹ್ರಸ್ವಪರವಾಗಿದ್ದರೂ ದೀರ್ಘಕ್ಕೆ ದೀರ್ಘಪರ ವಾಗಿದ್ದರೂ ಪರಸ್ಪರ **ಸವರ್ಣ**ಗಳೆನಿಸಿಕೊಳ್ಳುವುವೆಂದು—

ಕ್ರಮದಿಂ ಹ್ರಸ್ವಕ್ಕಂ ಹ್ರ
ಸ್ವಮೊದವೆ ದೀರ್ಘಕ್ಕೆ ದೀರ್ಘಮೊದವೆ ತಗುಳ್ಗುಂ
ಸಮಸಂದಾ ಯುಗುಳಂಗಳೊ
ಳಮಳಿನಮಾಗೆಲ್ಲಿಯುಂ ಸವರ್ಣವಿಧಾನಂ (ಸೂತ್ರ ೭)

ಎಂಬ ಸೂತ್ರದಿಂದ ತಿಳಿಸಿರುವನು. ಹೀಗೆ ಕನ್ನಡ ಭಾಷೆಯಲ್ಲಿ ಪ್ರಸಿದ್ಧವಾದ **ಎ ಒ** ಎಂಬ ಹ್ರಸ್ವಗಳಿಗೂ **ಏ ಓ** ಎಂಬ ದೀರ್ಘಗಳಿಗೂ **ಸವರ್ಣ**ವುಂಟೆಂದು—

ಸವಸಿಸಿದೆ ಏ ಒ ಓ ಎಂ
ಬಿವು ಕನ್ನಡದೊಳ್ ಸ್ವಭಾವದಿಂದೊಳವು ಸವ
ರ್ಣವುಮಪ್ಪುವು ............ (ಸೂತ್ರ ೮)

ಎಂಬ ಸೂತ್ರದಿಂದ ಬೋಧಿಸಿರುವನು. ಸಂಸ್ಕೃತದಲ್ಲಿ **ಏ ಓ** ಎಂಬ ವರ್ಣಗಳು ಅ, ಇ ಸೇರಿ ಏ ಎಂಬುದಾಗಿಯೂ ಅ, ಉ ಸೇರಿ ಓ ಎಂಬುದಾಗಿಯೂ ಗುಣಸಂಧಿಯಿಂದ ನಿಷ್ಪನ್ನವಾಗಿರುವುವು. ಇವಕ್ಕೆ ಹ್ರಸ್ವವಿಲ್ಲವೆಂದು ಹೇಳಲ್ಪಟ್ಟಿರುವುದು. ಆದುದರಿಂದ ಇವಕ್ಕೆ ಸಂಧ್ಯಕ್ಷರಗಳೆಂದು ವ್ಯವಹಾರವಿರುವುದು. ಇದೇ ಅರ್ಥವನ್ನು **ದರ್ಪಣಕಾರನು** —

ವರಸಂಧ್ಯಕ್ಷರದಂತಿರೆ
ಗುರು ದೀರ್ಘಂ ಗೂಢಸಂಧಿಯೆನೆ ತೋಳ್ ನಾಲ್ಕುಂ
ಕರಮೆಸೆದಿರ್ಕುಂ ಪದ್ಮೋ
ದರಂಗೆ ಶಂಖಾಸಿ ಚಕ್ರ ಶಾರ್ಙ್ಗ ಸಮೇತಂ

ಎಂಬ ಪದ್ಯದಿಂದ ಸೂಚಿಸಿರುವನು. ಆದರೂ **ತೈತ್ತರೀಯ-ಪ್ರಾತಿಶಾಖ್ಯ**ವೆಂಬ ವೇದಲಕ್ಷಣ ಗ್ರಂಥದಲ್ಲಿ **ಎ ಒ** ಎಂಬುವು ಹ್ರಸ್ವವಾಗಿಯೂ ಇರುವುವೆಂದು ಹೇಳಲ್ಪಟ್ಟಿದೆ. ಹೀಗೆ ಅನೇಕ ಭೇದಭಿನ್ನಗಳಾದ ಎಲ್ಲಾ ಸ್ವರವರ್ಣಗಳೂ ಈ ಸೂತ್ರದಲ್ಲಿ ಹೇಳಿರುವ '**ಸ್ವರ**' ಪದದಿಂದ ಬೋಧ್ಯವಾಗುವುವೆಂದು ತಿಳಿಯಬೇಕು.

**ಅವತಾರಿಕೆ ೩**

ವರ್ಣಮಾಲೆಯಲ್ಲಿ ಹೇಳಿರುವ ಅ ಕಾರ ಮೊದಲು ಔ ಕರವವರೆಗೆ ಹೇಳಿರುವ ವರ್ಣಗಳಿಗೆ ಸ್ವರವೆಂಬ ಸಂಜ್ಞೆಯನ್ನು ಹೇಳಿ ಈಗ ಆ ಸ್ವರಸಂಜ್ಞಕವಾದ ವರ್ಣಗಳಲ್ಲಿರುವ ಭೇದಗಳನ್ನು ಹೇಳುತ್ತಾನೆ.

**ಸೂತ್ರಂ || ಏಕ ದ್ವಿ ತ್ರಿಮಾತ್ರಾ ಹ್ರಸ್ವ ದೀರ್ಘ ಪ್ಲುತಾಃ || ೩ ||**

**ಅರ್ಥ** || ಒಂದು ಎರಡು ಮೂರು ಮಾತ್ರಾಕಾಲಗಳಲ್ಲಿ ಉಚ್ಚರಿಸಲ್ಪಟ್ಟ ಸ್ವರಗಳು ಕ್ರಮವಾಗಿ ಹ್ರಸ್ವ ದೀರ್ಘ ಪ್ಲುತ ಸಂಜ್ಞೆಯುಳ್ಳವುಗಳಾಗುವುವು.

**ಉದಾಹರಣೆ** || ಅ ಆ ಆ೩, ಇ ಈ ಈ೩, ಉ ಊ ಊ೩, ಇತ್ಯಾದಿ ಸರ್ವ ಸ್ವರಗಳಿಗೂ ಹೀಗೆ ಊಹಿಸಿಕೊಳ್ಳುವುದು.

**ಇದಕ್ಕೆ ಪ್ರಯೋಜನವು** || '**ಹ್ರಸ್ವಾದೇರಸಮಾಸೇ** ||೮೭|| **ದೀರ್ಘಃ ಸ್ವರೇ** ||೩೩೫|| **ಪ್ಲುತಃ ಪ್ರಕೃತ್ಯಾ** ||೯೧||' ಇವೇ ಮೊದಲಾದ ಸೂತ್ರಗಳಲ್ಲಿರುವ ಹ್ರಸ್ವ ದೀರ್ಘ ಪ್ಲುತ ಶಬ್ದಗಳಿಗೆ ಅ ಆ ಆ೩ ಮೊದಲಾದ ಏಕ-ದ್ವಿ-ತ್ರಿಮಾತ್ರಿಕವಾದ ಸ್ವರಗಳೆ ಕ್ರಮವಾಗಿ ಅರ್ಥವೆಂದು ತಿಳಿಯಬೇಕು.

**ವಿಚಾರ ೩: ಮಾತ್ರಾಲಕ್ಷಣ**

ಈ ಸೂತ್ರದಲ್ಲಿ ಹೇಳಿರುವ '**ಮಾತ್ರಾ**' ಶಬ್ದಕ್ಕೆ ನಿಮೇಷೋನ್ಮೇಷಕಾಲವೆಂದು ಅರ್ಥವನ್ನು ಹೇಳಬೇಕು. ಲೋಕದಲ್ಲಿ ಮಾತ್ರೆಯೆಂಬುದು ಪರಿಮಾಣವಾಚಕವಾಗಿದ್ದರೂ ದ್ರವ್ಯಾಶ್ರಯವಾಗಿ ವೈದ್ಯಾದಿ ಗ್ರಂಥಗಳಲ್ಲಿ ಪ್ರಸಿದ್ಧವಾಗಿರುವುದು. ಆದರೂ ಈ ಗ್ರಂಥದಲ್ಲಿ 'ಮಾತ್ರಾ'ಶಬ್ದವು ಕಾಲಪರಿಮಾಣಾರ್ಥಕವೆಂದು ಹೇಳಬೇಕು. ಅದೂ ಕಾಲವಿಶೇಷಪರವೆಂದು ತಿಳಿಯಬೇಕು. ಇದನ್ನು ನಿರ್ಣಯಿಸುವುದಕ್ಕೆ ಚತುರಂಗುಲಾಂತರಕರತಾಡನ, ಜಾನುಪ್ರದಕ್ಷಿಣ, ಅಂಗುಳಿಸ್ಫೋಟನ, ಲಘ್ವಕ್ಷರೋಚ್ಚಾರಣ, ಚಟಕಾರಾವ, ಕೃಕವಾಕುಪ್ರಥಮಸ್ವನ, ಮೊದಲಾದುವು ಉಪಾಧಿಗಳಾಗಿರುವುವೆಂದು ತಿಳಿಯಬೇಕು. ಇದೇ ವಿಷಯವನ್ನು ಪ್ರಾಚೀನರು —

**ಚತುರಂಗುಲಮಾನಾಂತರಾಲಕಂ ಕರತಾಡನಂ**
**ಅಕ್ಷಿಪ್ರಮಂದಂ ಯತ್ತತ್ಸ್ಯಾನ್ಮಾತ್ರಾ ಸೈವ ಲಘುರ್ಭವೇತ್**
**ಜಾನುಪ್ರದಕ್ಷಿಣಂ ಯತ್ತನ್ನದ್ರುತಂ ನವಿಲಂಬಿತಂ**
**ಅಂಗುಲಿಸ್ಫೋಟನಂ ಯಾವತ್ಕಾಲೇ ಮಾತ್ರೇತಿ ಸೋಚ್ಯತೇ**
**ಸ್ವಸ್ಥೋ ಯುವಾ ಋಜುಶ್ವಾಸ ಉಚ್ಚರತ್ಯಕ್ಷರಂ ಲಘು**
**ಕಾಲೇನ ಯಾವತಾ ಸಾ ಸ್ಯಾನ್ಮಾತ್ರೇತಿ ಮುನಯೋ ವಿದುಃ**

ಎಂಬ ಶ್ಲೋಕಗಳಿಂದ ವಿಶದವಾಗಿ ತಿಳಿಸಿರುವರು. ನಿಘಂಟುಕಾರರು —

**ಲಘ್ವಕ್ಷರೋಚ್ಚಾರಕಾಲೋ ನಿಮೇಷೋ ಮಾತ್ರಯಾ ಸಮಃ**

ಎಂದೂ

**ನಿಮೇಷೋನ್ಮೇಷಕಾಲೇನ ಸಮಂ ಮಾತ್ರಾ ತು ಸಾ ಸ್ಮೃತಾ**

ಎಂದು ಹೇಳಿರುವುದರಿಂದ ಮಾತ್ರಾಕಾಲವೆಂದರೆ ನಿಮೇಷಕಾಲವೆಂದು ತಿಳಿಯುವುದು. ಇಂತಹ ಒಂದು ನಿಮೇಷಕಾಲದಲ್ಲಿ ಉಚ್ಚರಿಸುವ ಸ್ವರವು **ಹ್ರಸ್ವ**ವೆಂತಲೂ ಎರಡು ನಿಮೇಷಕಾಲಗಳಲ್ಲಿ ಉಚ್ಚರಿಸುವ ಸ್ವರವು **ದೀರ್ಘ**ವೆಂತಲೂ ಮೂರು ನಿಮೇಷ ಕಾಲಗಳಲ್ಲಿ ಉಚ್ಚರಿಸುವ ಸ್ವರವು **ಪ್ಲುತ**ವೆಂತಲೂ ತಿಳಿದುಕೊಳ್ಳಬೇಕು. ಇದೇ ಅರ್ಥವು ಪ್ರಾಚೀನರು ಹೇಳಿರುವ —

**ಏಕಮಾತ್ರೋ ಭವೇದ್ಧ್ರಸ್ವೋ ದ್ವಿಮಾತ್ರೋ ದೀರ್ಘ ಉಚ್ಯತೇ**
**ತ್ರಿಮಾತ್ರಸ್ತು ಪ್ಲುತೋ ಜ್ಞೇಯೋ ವ್ಯಂಜನಂ ತ್ವರ್ಧಮಾತ್ರಕಂ**

ಎಂಬ ಶ್ಲೋಕದಿಂದ ಸೂಚಿಸಲ್ಪಟ್ಟಿರುವುದಲ್ಲದೆ ಕೇವಲ ವ್ಯಂಜನೋಚ್ಚಾರಣೆಗೆ ಅರ್ಧಮಾತ್ರಾಕಾಲವು ಬೇಕಾಗುವುದೆಂದೂ ಹೇಳಲ್ಪಟ್ಟಿರುವುದು. ಮತ್ತು ಇದಕ್ಕೆ ದೃಷ್ಟಾಂತವಾಗಿ —

**ಚಟಕೋ ರೌತ್ಯೇಕಮಾತ್ರಂ ದ್ವಿಮಾತ್ರಂ ರೌತಿ ವಾಯಸಃ**
**ತ್ರಿಮಾತ್ರಂ ತು ಶಿಖೀ ರೌತಿ ನಕುಲಸ್ತ್ವರ್ಧಮಾತ್ರಕಂ**
**ಪ್ರಾತಃ ಪ್ರಾತಃ ಸಮುತ್ಥಾಯ ಕ್ರಮಾತ್ ತ್ರಿಶ್ಶುದ್ಧಕಂಧರಃ**
**ಹ್ರಸ್ವದೀರ್ಘಪ್ಲುತಾನ್ ರೌತಿ ಕೃಕವಾಕುರನಾತುರಃ**

ಎಂದು ಹೇಳಲ್ಪಟ್ಟಿರುವುದು.

ಇಲ್ಲಿ ವ್ಯಂಜನೋಚ್ಚಾರಣೆಗೆ ಅರ್ಧಮಾತ್ರಾಕಾಲವೆಂದು ಹೇಳಿರುವುದರಿಂದ ಎರಡು ವ್ಯಂಜನಗಳನ್ನುಚ್ಚರಿಸಲು ಒಂದು ಮಾತ್ರೆಯಾಗುವುದರಿಂದ ಆ ವ್ಯಂಜನದ್ವಯಕ್ಕೆ ಹ್ರಸ್ವಸಂಜ್ಞೆ ಬರುವುದೆಂದು ಶಂಕೆಯುಂಟಾಗುವುದು. ಆದರೆ ಇಲ್ಲಿ ಪೂರ್ವ ಸೂತ್ರದಿಂದ 'ಸ್ವರಾ' ಎಂಬ ಪದವನ್ನು ಅನುವರ್ತಿಸಿ ಸ್ವರಗಳಿಗೇ ಈ ಸಂಜ್ಞೆಗಳನ್ನು ಹೇಳುವುದರಿಂದ ವ್ಯಂಜನಗಳಿಗೆ ಬರುವುದಿಲ್ಲವೆಂದು ತಿಳಿಯಬೇಕು. ಈ ಸಂಜ್ಞೆಗಳು

**ಹ್ರಸ್ಯತೇ ಸ್ವಲ್ಪಕಾಲಮುಚ್ಚಾರ್ಯತ ಇತಿ ಹ್ರಸ್ವಃ; ದೃಣಾತಿ ಉಚ್ಚಾರಯಿತುರ್ಮುಖಬಿಲಂ ವಿದಾರಯತೀತಿ ದೀರ್ಘಃ; ಪ್ಲವತೇ ಭೂಯಾಂಸಂ ಕಾಲಮುಚ್ಚಾರಣವಿಷಯಿಾ ಭವತೀತಿ ಪ್ಲುತಃ;**

ಎಂಬ ವ್ಯುತ್ಪತ್ತಿಗಳನ್ನಂಗೀಕರಿಸಿರುವುದರಿಂದ ಅನ್ವರ್ಥಕಗಳಾಗಿರುವುವು.

ಇಲ್ಲಿ ಸಾಮಾನ್ಯವಾಗಿ ಸ್ವರಗಳಿಗೆಲ್ಲಾ ಹ್ರಸ್ವ-ದೀರ್ಘ-ಪ್ಲುತ ಸಂಜ್ಞೆಗಳುಂಟೆಂದು ಹೇಳಲ್ಪ

ಟ್ಟಿದ್ದರೂ ಅ ಇ ಉ ಋ ವರ್ಣಗಳಿಗೆ ಮಾತ್ರ ಹ್ರಸ್ವಾದಿ ಮೂರೂ ಸಂಜ್ಞೆಗಳುಂಟು. ೡ ವರ್ಣಕ್ಕೆ ದೀರ್ಘವು ಪ್ರಸಿದ್ಧವಾಗಿ ಇಲ್ಲವಾದುದರಿಂದ ಹ್ರಸ್ವ-ಪ್ಲುತಗಳೆರಡೇ ಸಂಜ್ಞೆಗಳಿರುವುವು. ಎ ಒ ವರ್ಣಗಳಿಗೆ ಹ್ರಸ್ವ-ದೀರ್ಘ-ಪ್ಲುತ ಸಂಜ್ಞೆಗಳು ಮೂರೂ ಇರುವುವು. ಐ ಔ ವರ್ಣಗಳಿಗೆ ಹ್ರಸ್ವವಿಲ್ಲವಾದುದರಿಂದ ದೀರ್ಘ-ಪ್ಲುತಗಳೆರಡೆ ಇರುವುವೆಂದು ತಿಳಿಯಬೇಕು. ಇದರಿಂದ ಭಾಷೆಯಲ್ಲಿ ಸ್ವರಗಳು ಇಪ್ಪತ್ತುನಾಲ್ಕು ಪ್ರಸಿದ್ಧವಾಗಿರುವುವೆಂದು ತಿಳಿಯಬೇಕು. ಆದರೆ ೡ ವರ್ಣವು ಯಾವ ಮಾತಿನಲ್ಲಯೂ ವಿಶೇಷವಾಗಿ ಇಲ್ಲದಿದ್ದರೂ **ಪಾಣಿನಿ ವ್ಯಾಕರಣ**ದಲ್ಲಿಯೂ ಮಂತ್ರ ಶಾಸ್ತ್ರಗಳಲ್ಲಿಯೂ ಹೇಳಿರುವುದರಿಂದ ಇಲ್ಲಿ ಹೇಳಲ್ಪಟ್ಟಿದೆ. ಇದಕ್ಕೆ ಲೋಕದಲ್ಲಿ ಪ್ರಸಿದ್ಧವಾಗಿರುವ ಶಬ್ದಗಳಾವುವೂ ಉದಾಹರಣೆಗೆ ಇಲ್ಲವಾದುದರಿಂದ ಇದನ್ನು ಇಲ್ಲಿ ಹೇಳಿ ಇದರ ಸ್ವರೂಪವನ್ನು ನಿರ್ಣಯಿಸುವುದು ಅತ್ಯಾವಶ್ಯಕವಾಗಿ ತೋರುವುದಿಲ್ಲ.

**ಅವತಾರಿಕೆ ೪**

ಈ ಶಾಸ್ತ್ರವನ್ನು ಪ್ರಾರಂಭಿಸುವುದಕ್ಕೆ ಮೂಲಭೂತವಾದ ಲೋಕಪ್ರಸಿದ್ಧ ವರ್ಣಮಾಲೆಯನ್ನು ಬೋಧಿಸಲು **'ಸಿದ್ಧಾಹಿ ಶುದ್ಧಕಾಃ'** ಎಂಬ ಮೊದಲನೆಯ ಸೂತ್ರವನ್ನು ಹೇಳಿ, ಆ ಸೂತ್ರದಿಂದ ಸೂಚಿತವಾದ ಅಕಾರಮೊದಲು ಳ ಕಾರದ ವರೆಗೆ ಇರುವ ಲೋಕಪ್ರಸಿದ್ಧ ವರ್ಣಗಳಲ್ಲಿ ಔ ಕಾರದ ವರೆಗಿರುವ ವರ್ಣಗಳಿಗೆ-**'ಔತಃ ಸ್ವರಾಃ'** ಎಂಬ ಸೂತ್ರದಿಂದ ಸ್ವರಸಂಜ್ಞೆಯನ್ನು ಹೇಳಿ - **'ಏಕ ದ್ವಿ ತ್ರಿ ಮಾತ್ರಾ ಹ್ರಸ್ವ ದೀರ್ಘ ಪ್ಲುತಾಃ'** ಎಂಬ ಸೂತ್ರದಿಂದ ಆ ಸ್ವರಗಳಿಗೆ ಉಚ್ಚಾರಣ ಕಾಲವ್ಯತ್ಯಾಸದಿಂದ ಆಗುವ ಹ್ರಸ್ವಾದಿ ಸಂಜ್ಞಾಭೇದಗಳನ್ನೂ ತಿಳಿಸಿ, ಆ ಸಂಜ್ಞೆಗಳನ್ನೇ ಉಪಜೀವಿಸಿಕೊಂಡು ಮುಂದೆ ವಿಧಿಸಲ್ಪಡುವ ಆದೇಶಗಳ ವಿಷಯದಲ್ಲಿ ವ್ಯವಸ್ಥಾಪಕವಾದ ಪರಿಭಾಷಾ ಸೂತ್ರವನ್ನು ಹೇಳುತ್ತಾನೆ.

**ಸೂತ್ರಂ || ಸ್ವರಸ್ಯ || ೪ ||**

**ಅರ್ಥ** || 'ಹ್ರಸ್ವ-ದೀರ್ಘ-ಪ್ಲುತ' ಶಬ್ದಗಳನ್ನುಚ್ಚರಿಸಿ ವಿಧಿಸಲ್ಪಡುವ (ಹ್ರಸ್ವದೀರ್ಘಪ್ಲುತ ಸಂಜ್ಞಕಗಳಾದ) ಸ್ವರಗಳು ಆವ ಶಬ್ದಕ್ಕೆ ವಿಧಿಸಲ್ಪಡುವುವೊ ಆ ಶಬ್ದದಲ್ಲಿರುವ ಸ್ವರದ ಸ್ಥಾನದಲ್ಲಿಯೆ ಬರುವುವು. ಎಂದರೆ ಹ್ರಸ್ವದೀರ್ಘಪ್ಲುತಗಳನ್ನು ವಿಧಿಸುವ ಸೂತ್ರಗಳಲ್ಲಿ 'ಸ್ವರಸ್ಯ' ಎಂಬ ಷಷ್ಠ್ಯಂತಪದವನ್ನು ಇಟ್ಟುಕೊಂಡು ಆ ಸೂತ್ರಗಳ ಅರ್ಥವನ್ನು ಹೇಳಬೇಕೆಂದು ತಾತ್ಪರ್ಯವು.

**ಉದಾಹರಣೆ** || **' ಉಗು ಪುಗು ಕುಡು ತುಡೋರೋತ್ ಹ್ರಸ್ವಃ || ೪೫೦ || ದೀರ್ಘಃ ||೨೪೪|| ಅದಃ || ೨೫೫ || ಅವೋ ನ: || ೨೫೬ || ದೂರಾದಾಹ್ವಾನೇ ಬಹುಲಂ || ४०० || '** ಇತ್ಯಾದಿ ಹ್ರಸ್ವ ದೀರ್ಘ ಪ್ಲುತ ಪದಗಳ ಸಂಬಂಧವುಳ್ಳ ಸೂತ್ರಗಳೆಂದು ತಿಳಿಯಬೇಕು. ಆದುದರಿಂದ ಆ ಸೂತ್ರಗಳಿಗೆ ಲಕ್ಷ್ಯಗಳಾದ ಶಬ್ದಗಳನ್ನೂ ಈ ಸೂತ್ರಕ್ಕೆ ಉದಾಹರಣೆಗಳನ್ನಾಗಿ ತೆಗೆದುಕೊಳ್ಳಲು ಶಕ್ಯವೆಂದು ಆ ಶಬ್ದಗಳೂ ಇಲ್ಲಿ ಕ್ರಮವಾಗಿ ಉವಹರಿಸಲ್ಪಡುವುವು:

ಒಕ್ಕಂ, ಪೊಕ್ಕಂ, ಕೊಟ್ಟಂ, ತೊಟ್ಟಂ; ದೇವಾ ಬಿನ್ನಪಂ, ಜಿನನಾ, ಕಲ್ಲಾನೇರಿದಂ; ಎಲೆ ಅಣ್ಣಾ೩ ಇಲ್ಲಿ ಬಾ, ಇತ್ಯಾದಿ.

**ವಿಚಾರ ೪: ಸೂತ್ರಗಳ ಪ್ರಯೋಜನ**

ಮುಂದೆ ಹೇಳುವ ವಿಧಿಸೂತ್ರಗಳಲ್ಲಿ **ಆಗಮ**ವಿಧಾಯಕ ಸೂತ್ರಗಳೆಂದೂ **ಪ್ರತ್ಯಯ**ವಿಧಾ

ಯಕ ಸೂತ್ರಗಳೆಂದೂ **ಆದೇಶವಿಧಾಯಕ** ಸೂತ್ರಗಳೆಂದೂ ಮೂರು ತೆರನಾಗಿ ವಿಭಾಗಿಸಲ್ಪಟ್ಟಿರುವುವು. ಅವುಗಳಲ್ಲಿ **ಆಗಮ**ವೆಂದರೆ ಅವಯುವದಂತೆ ಕಾಣುವುದು. ಇದನ್ನು ಕೆಲವರು 'ಮಿತ್ರವದಾಗಮಃ' ಎಂದು ಹೇಳಿ ಮಿತ್ರನು ಹೇಗೆ ಸಮೀಪದಲ್ಲಿ ಬಂದು ಕೂಡುತ್ತಾನೋ ಹಾಗೆ ಇದು ಆವ ಶಬ್ದಕ್ಕೆ ಬರುವುದೆಂದು ಹೇಳುವರೋ ಆ ಶಬ್ದದ ರೂಪವನ್ನು ಕೆಡಿಸದೆ ಅದರ ಸಮೀಪಕ್ಕೆ ಬಂದು ಆ ಶಬ್ದದಲ್ಲಿ ಸೇರಿರುವುದು ಎಂದು ಹೇಳುತ್ತಾರೆ. ಈ ಶಾಸ್ತ್ರದಲ್ಲಿ ಆಗಮವನ್ನು ಸೂಚಿಸುವುದಕ್ಕೆ ಕಕಾರವನ್ನು **ಇತ್**-ಸಂಜ್ಞಾ ವರ್ಣವನ್ನಾಗಿ ಸೇರಿಸಿ ವಿಧಿಸಿರುವುದು. ಇದನ್ನು ಆ ಸಂದರ್ಭದಲ್ಲಿ ವಿವರಿಸುವೆವು. **ಪಾಣಿನೀಯ** ಮೊದಲಾದ ಸಂಸ್ಕೃತ ವ್ಯಾಕರಣಗಳಲ್ಲಿ ಕಕಾರ ಟಕಾರ ಮಕಾರಗಳನ್ನು ಇತ್-ಸಂಜ್ಞಕಗಳನ್ನಾಗಿ ಹೇಳಿರುವರು. **ದರ್ಪಣಕಾರ**ನು ಇಂತಹ ಚಿಹ್ನೆಗಳಾವುವನ್ನೂ ಹೇಳದೆ ಕೇವಲ ಆಗಮತ್ವಪ್ರತಿಜ್ಞೆಯನ್ನು ಮಾತ್ರ ಮಾಡಿರುವನು.

**ಪ್ರತ್ಯಯ ವಿಚಾರ**

**ಪ್ರತ್ಯಯ**ವೆಂದರೆ ಪ್ರಕೃತಿಯ ಮುಂದೆ ಬರುವುದು. **ಪ್ರಕೃತಿ**ಯೆಂದರೆ ಪ್ರತ್ಯಯವನ್ನು ಹೊಂದುವುದಕ್ಕೆ ಯೋಗ್ಯವಾದ ಶಬ್ದವು. ಇಂತಹ ಪ್ರತ್ಯಯಗಳು **ನಾಮವಿಭಕ್ತಿ ಪ್ರತ್ಯಯ**ಗಳೆಂದೂ **ಆಖ್ಯಾತವಿಭಕ್ತಿ ಪ್ರತ್ಯಯ**ಗಳೆಂದೂ **ವಿಕರಣ ಪ್ರತ್ಯಯ**ಗಳೆಂದೂ **ಕೃತ್ಪ್ರತ್ಯಯ**ಗಳೆಂದೂ **ಪ್ರೇರಣಾದ್ಯರ್ಥಕ ಪ್ರತ್ಯಯ**ಗಳೆಂದೂ **ತದ್ಧಿತಪ್ರತ್ಯಯ**ಗಳೆಂದೂ **ಸ್ತ್ರೀಪ್ರತ್ಯಯ**ಗಳೆಂದೂ ಏಳು ಬಗೆಯಾಗಿ ವಿಭಾಗಿಸಲ್ಪಡುವುವು. ಇವುಗಳಲ್ಲಿ

**ನಾಮವಿಭಕ್ತಿ ಪ್ರತ್ಯಯ**ಗಳೆಂದರೆ ಜಾತಿ-ಗುಣ-ಕ್ರಿಯಾ ಶಬ್ದಗಳ ಮೇಲೆಯೂ 'ಯದೃಚ್ಛಾ' ಶಬ್ದಗಳೆಂದರೆ 'ಕುಂಟ' 'ಮುಂಟ' ಮೊದಲಾದ ಶಬ್ದಗಳ ಮೇಲೆಯೂ ಕಾರಕಾರ್ಥಗಳನ್ನು ಬೋಧಿಸಲು ಮಾಡುವ ಪ್ರತ್ಯಯಗಳು. ಇವು ಏಳು ವಿಧವಾಗಿ ವಿಭಾಗಿಸಲ್ಪಡುವುವು.

**ಆಖ್ಯಾತಪ್ರತ್ಯಯ**ಗಳೆಂದರೆ—ಧಾತುಗಳ ಮೇಲೆ ಕರ್ತೃಕರ್ಮಾರ್ಥಗಳಲ್ಲಿ ವಿಧಿಸುವುದರಿಂದ ಪದಸಂಜ್ಞೆಯನ್ನು ಮಾಡುವುದಕ್ಕೆ ಸಾಧಕಗಳಾದ ಪ್ರತ್ಯಯಗಳು.

**ವಿಕರಣಪ್ರತ್ಯಯ**ಗಳೆಂದರೆ— ಆವ ಅರ್ಥವಿಶೇಷವನ್ನೂ ಹೇಳದೆ ಧಾತುವಿಗೂ ಆಖ್ಯಾತ ಪ್ರತ್ಯಯಕ್ಕೂ ನಡುವೆ ಬರುವ ಪ್ರತ್ಯಯಗಳು.

**ಕೃತ್ಪ್ರತ್ಯಯ**ಗಳೆಂದರೆ— '**ಅಚ್ ಕರ್ತೃಕರ್ಮಣೋಃ || ೫೪೩ ||**' ಇತ್ಯಾದಿ ಸೂತ್ರಗಳಿಂದ ಧಾತುವಿನ ಮೇಲೆ ಕರ್ತೃ-ಕರ್ಮಾದ್ಯರ್ಥದಲ್ಲಿ ವಿಧಿಸಲ್ಪಟ್ಟು ವಿಭಕ್ತಿಪ್ರತ್ಯಯಗಳನ್ನು ಹೊಂದುವುದಕ್ಕೆ ತಕ್ಕ ಪ್ರಕೃತಿಯನ್ನುಂಟುಮಾಡುವುದಕ್ಕೆ ಅರ್ಹವಾದ ಪ್ರತ್ಯಯಗಳು.

**ಪ್ರೇರಣಾದ್ಯರ್ಥಕ ಪ್ರತ್ಯಯ**ಗಳೆಂದರೆ— '**ಧಾತೋರ್ಹೇತುಮತಿ || ೫೩೬ ||**' ಇತ್ಯಾದಿ ಸೂತ್ರಗಳಿಂದ ವಿಹಿತವಾದ ಪ್ರತ್ಯಯಗಳೆಂದು ತಿಳಿಯಬೇಕು.

**ತದ್ಧಿತಪ್ರತ್ಯಯ**ಗಳೆಂದರೆ— ನಾಮ ಪ್ರಕೃತಿಗಳ ಮೇಲೆ '**ತದಸ್ಯಾಸ್ತ್ಯಸ್ಮಿನ್ನಿತಿವಂತಃ ||೪೦೨||**' ಎಂಬ ಸೂತ್ರಮೊದಲು '**ಕಾಲೇ ದುಃ || ೬೩೮ ||**' ಎಂಬ ಸೂತ್ರಗಳವರೆಗಿರುವ ಸೂತ್ರಗಳಿಂದ ವಿಧಿಸುವ 'ಇಸು' ಮೊದಲಾದ ಪ್ರತ್ಯಯಗಳೆಂದು ತಿಳಿಯಬೇಕು.

**ಸ್ತ್ರೀಪ್ರತ್ಯಯ**ಗಳೆಂದರೆ—ನಾಮಪ್ರಕೃತಿಗಳ ಮೇಲೆ '**ಜಾತಿಶಬ್ದಾದಿತಿಃ || ೧೯೦ ||**' ಎಂಬ ಸೂತ್ರ ಮೊದಲು '**ಅರಸ್ಯಾದಯಃ || ೨೯೨ ||**' ಎಂಬ ಸೂತ್ರದವರೆಗೆ ವಿಧಿಸುವ ಪ್ರತ್ಯಯಗಳು.

ಇಂತಹ ಪ್ರತ್ಯಯಗಳನ್ನು ವಿಧಿಸುವ ಸೂತ್ರಗಳಲ್ಲಿ ಪಂಚಮ್ಯಂತವನ್ನುಚ್ಚರಿಸಿರುವುದರಿಂದ ಆ ಪ್ರತ್ಯಯಗಳು ಪರವಾಗಿಯೆ ಬರುವುವು. ಇದೇ ರೀತಿಯಾಗಿ ಸಂಸ್ಕೃತ ವ್ಯಾಕರಣಕಾರರೂ ಅಂಗೀಕರಿಸಿರುತ್ತಾರೆ. ಆದರೆ ಅಲ್ಲಿ 'ಬಹುಚ್' ಎಂಬ ತದ್ಧಿತ ಪ್ರತ್ಯಯವು ಮಾತ್ರ ಪ್ರಕೃತಿಗೆ ಪೂರ್ವದಲ್ಲಿ ಬರುವುದೆಂದೂ 'ಶ್ನಮ್' ಎಂಬ ವಿಕರಣ ಪ್ರತ್ಯಯವು ಧಾತುವಿನ ಸ್ವರದ ಮುಂದೆ ಬರುವುದೆಂದೂ ಹೇಳಿರುವರು. ಕರ್ಣಾಟಕದಲ್ಲಿ ಅಂತಹ ಸಂದರ್ಭವಾವುದೂ ಇಲ್ಲವಾದುದರಿಂದ ಪ್ರಕೃತಿಗಳಿಗೆ ಪರವಾಗಿಯೆ ಬರುವುವೆಂದು ತಿಳಿಯಬೇಕು. ಇವು ಆಗಮಗಳಂತೆ ತೋರುತ್ತಿದ್ದರೂ ಇವನ್ನು ಆಗಮಗಳೆಂದು ಶಾಸ್ತ್ರದಲ್ಲಿ ವ್ಯವಹರಿಸದಿರುವುದರಿಂದ ಇವು ಆವುದಕ್ಕೂ ಆಗಮಗಳಂತೆ ಅವಯವಗಳಲ್ಲವೆಂದು ತಿಳಿಯಬೇಕು*. ಈ ವ್ಯಾಕರಣದಲ್ಲಿ ಇಂತಹ ಪ್ರತ್ಯಯ ವಿಧಿಗಳಲ್ಲಿ ವ್ಯವಸ್ಥಾಪಕವಾದ ಪರಿಭಾಷೆಯನ್ನು ಹೇಳಿಲ್ಲವಾದರೂ ಸಾಮಾನ್ಯವಾಗಿ ಪಂಚಮ್ಯಂತ ಪದಗಳುಳ್ಳ ಸೂತ್ರಗಳಲ್ಲಿ ವ್ಯವಸ್ಥಾಪಕವಾದ '**ತಸ್ಮಾದುತ್ತರಸ್ಯ** ॥ ೨೭ ॥' ಎಂಬ ಸೂತ್ರದಿಂದಲೆ ಇಲ್ಲಿಯೂ ವ್ಯವಸ್ಥೆಯನ್ನು ಮಾಡಿಕೊಳ್ಳುವುದು. ಅಥವಾ ಸಂಸ್ಕೃತ ವ್ಯಾಕರಣಕಾರರು ಹೇಳಿರುವ '**ಪ್ರತ್ಯಯಃ, ಪರಶ್ಚ**' ಎಂಬ ಸೂತ್ರಗಳಿಂದ ವ್ಯವಸ್ಥಿತವಾದ ಅಂಶವನ್ನು ಇಲ್ಲಿಯೂ ವ್ಯವಹರಿಸಲು ಶಕ್ಯವಾಗಿರುವುದು.

**ಆದೇಶವೆಂದರೆ**—ಆವುದಾದರೊಂದು ವರ್ಣವನ್ನಾಗಲಿ ಶಬ್ದವನ್ನಾಗಲಿ ಹೊರಡಿಸಿ ಅದರ ಸ್ಥಾನದಲ್ಲಿ ಬರುವುದು. ಇದನ್ನು 'ಶತ್ರುವತ್' ಎಂದರೆ ಶತ್ರು ಹೇಗೆ ಒಬ್ಬನನ್ನು ನಾಶಮಾಡಿ ಅವನ ಸ್ಥಾನದಲ್ಲಿ ತಾನು ಬರುವನೊ ಹಾಗೆಂದು ಕೆಲವರು ಹೇಳುವರು. ಇಂತಹ ಆದೇಶವು **ಭಾವರೂಪ**ವೆಂದು, **ಅಭಾವರೂಪ**ವೆಂದು ಎರಡು ಬಗೆಯಾಗಿರುವುದು. **ಭಾವರೂಪ**ವೆಂದರೆ ಒಂದಕ್ಕೆ ಪ್ರತಿಯಾಗಿ ಬರುವ ವರ್ಣಾಂತರ ಅಥವಾ ಶಬ್ದಾಂತರ ಎಂದು ತಿಳಿಯಬೇಕು. **ಅಭಾವರೂಪ**ವೆಂದರೆ ಬೇರೆ ಆವ ವರ್ಣವೂ ಬಾರದೆ ಮೊದಲಿದ್ದುದು ಹೋಗುವುದು. ಇದನ್ನು **ಲೋಪ**ವೆಂದು ಹೇಳುತ್ತಾರೆ. ಈ ಲೋಪಕ್ಕೆ ಈ ವ್ಯಾಕರಣದಲ್ಲಿ-**ಶ್ಲುಪ್, ಲುಪ್** ಎಂದು ವ್ಯವಹಾರವಿರುವುದು. ಸಂಸ್ಕೃತ ವ್ಯಾಕರಣದಲ್ಲಿ-**ಲೋಪ, ಲುಕ್, ಶ್ಲು, ಲುಪ್** ಎಂದು ವ್ಯವಹರಿಸುವರು. ಆದರೆ **ಲೋಪ**ವೆಂಬುದು ಸಾಮಾನ್ಯವಾಗಿ ಪ್ರಸಕ್ತವಾದುದನ್ನು ಉಚ್ಚರಿಸದಿರುವುದೆಂದೂ **ಲುಕ್, ಶ್ಲು, ಲುಪ್** ಎಂಬಿವು ಪ್ರಸಕ್ತವಾದ **ಪ್ರತ್ಯಯ**ವನ್ನು ಉಚ್ಚರಿಸದಿರುವುದಕ್ಕೆ ಸಂಕೇತವೆಂದೂ ಹೇಳುವರು.

ಹೀಗೆ ಮೂರು ಬಗೆಯಾದ ವಿಧೇಯಗಳಲ್ಲಿ ಈ ಪರಿಭಾಷೆ ಆದೇಶವಾಗಿ ಬರುವ ಹ್ರಸ್ವ-ದೀರ್ಘ-ಪ್ಲುತಗಳಲ್ಲಿ ವ್ಯವಸ್ಥಾಪಕವಾದುದೆಂದು ತಿಳಿಯಬೇಕು. ಅದರಲ್ಲಿಯೂ '**ಷಷ್ಠ್ಯಾಃ**

* [ಆಗಮ-ಆದೇಶ-ಲೋಪ-ಪ್ರತ್ಯಯ ಇವುಗಳ ಭೇದವನ್ನು ಕೆಳಗಿನ ಸಂಸ್ಕೃತ ಶ್ಲೋಕದಲ್ಲಿ ಹೇಳಿದೆ:

**ಸ್ಥಾನೇ ಶತ್ರುವದಾದೇಶಃ ಫಾಲೇ ಪುಂಡ್ರವದಾಗಮಃ**
**ದಂತಾನಾಮಿವ ಲೋಪಃ ಸ್ಯಾಚ್ಛತ್ರವತ್ ಪ್ರತ್ಯಯಾ: ಪರೇ**

ಎಂದರೆ ಒಬ್ಬನನ್ನು ನಾಶಮಾಡಿ ಅವನ ಸ್ಥಾನದಲ್ಲಿ ತಾನು ಬರುವ ಶತ್ರುವಿನಂತೆ ಆದೇಶದ ಕಾರ್ಯವೆಂದೂ ಹಣೆಯ ಮೇಲಿನ ವಿಭೂತಿಯಂತೆ ಆಗಮದ ಕಾರ್ಯವೆಂದೂ ಕಳಚಿ ಹೋಗುವ ಹಲ್ಲುಗಳಂತೆ ಲೋಪದ ಕಾರ್ಯವೆಂದೂ ಕೊಡೆಯಂತೆ ಮುಂದೆಯೆ ಇರುವುದು ಪ್ರತ್ಯಯದ ಕಾರ್ಯವೆಂದೂ ತಿಳಿಯತಕ್ಕದು.
—ಸಂಪಾದಕ ]

**ಸ್ಥಾನೇಽಂತ್ಯಸ್ಯ ॥ ೨೨ ॥**' ಎಂಬ ಪರಿಭಾಷೆಯಿಂದ ಈ ಶಾಸ್ತ್ರದಲ್ಲಿ ವಿಧಿಸಲ್ಪಡುವ ಆದೇಶಗಳೆಲ್ಲ ಆಯಾ ಸೂತ್ರಗಳಲ್ಲಿ ಹೇಳಿರುವ ಷಷ್ಠ್ಯಂತ ಪದಗಳಿಂದ ಬೋಧ್ಯವಾಗುವ ಪ್ರಯೋಗಸ್ಥ ಶಬ್ದಗಳ ಅಂತ್ಯವರ್ಣಕ್ಕೆ ಬರುವುವೆಂದು ಬೋಧಿಸುವುದರಿಂದ ಹ್ರಸ್ವ-ದೀರ್ಘ-ಪ್ಲುತಗಳೂ ಅದ ರಂತೆ ಅಂತ್ಯ ವರ್ಣಕ್ಕೆ ಬರಲು ವ್ಯಂಜನಾಂತ ಶಬ್ದಗಳಲ್ಲಿ ಅಂತ್ಯ ವ್ಯಂಜನಕ್ಕೆ ಪ್ರಸಕ್ತವಾಗುವುವು. ಅವನ್ನು ತಪ್ಪಿಸಿ ಅಂತಹ ಶಬ್ದಗಳಲ್ಲಿರುವ ಸ್ವರದ ಸ್ಥಾನದಲ್ಲಿ ಬರುವುವೆಂದು ಬೋಧಿಸುವುದು. ಹೇಗೆಂದರೆ — '**ಉಗು ಪುಗು ಕುಡು ತುಡೋರೊದ್ಧ್ರಸ್ವಃ ॥ ೮೮ ॥**' ಎಂಬ ಸೂತ್ರದಲ್ಲಿ ಹ್ರಸ್ವ ಪದವನ್ನುಚ್ಚರಿಸಿ 'ಉಗು' ಮೊದಲಾದ ಧಾತುಗಳಿಗೆ ದ ಕಾರಾದಿ ಪ್ರತ್ಯಯವು ಪರವಾಗಿರಲು ಹ್ರಸ್ವೌಕಾರಾದೇಶವನ್ನು ವಿಧಿಸುವುದರಿಂದ ಆ ಹ್ರಸ್ವೌಕಾರಾದೇಶವು ಆ ಧಾತುಗಳ ಸ್ವರಗಳ ಸ್ಥಾನದಲ್ಲಿ ಬರುವುದೆಂದರೆ ಸ್ಪಂದನಾರ್ಥಕವಾದ 'ಉಗು' ಧಾತುವಿನ ಮೇಲೆಯೂ ಪ್ರವೇಶಾರ್ಥಕ ವಾದ 'ಪುಗು' ಧಾತುವಿನ ಮೇಲೆಯೂ ಕರ್ತ್ರರ್ಥದಲ್ಲಿ 'ಅಮ್' ಪ್ರತ್ಯಯವನ್ನು ಮಾಡಲು ಧಾತುವಿಗೂ ಪ್ರತ್ಯಯಕ್ಕೂ ಮಧ್ಯದಲ್ಲಿ – '**ದಪದವಂ ತಿಙಾ ಸದ್ಭೂತಭಾವಿನಿ ॥ ೪೪೬ ॥**' ಎಂಬ ಸೂತ್ರದಿಂದ ಅತೀತ ಕಾಲವನ್ನು ಬೋಧಿಸಲು 'ದ' ಪ್ರತ್ಯಯವನ್ನು ಮಾಡಲು '**ಗೋಃ ಕಃ॥೪೮೫॥**' ಎಂಬ ಸೂತ್ರದಿಂದ 'ಗು' ಶಬ್ದದ ಸ್ಥಾನದಲ್ಲಿ ಕ ಕಾರಾದೇಶವು ಬರಲು 'ಉಕ್+ದ+ಅಮ್' ಎಂದು ಇರಲು, 'ಉಗು ಪುಗು' ಇತ್ಯಾದಿ ಸೂತ್ರದಿಂದ ವಿಧಿಸಲ್ಪಟ್ಟ ಹ್ರಸ್ವೌಕಾರಾದೇಶವು ಅಂತ್ಯ ವರ್ಣಕ್ಕೆ ಬಾರದೆ ಉಕಾರ ಸ್ಥಾನದಲ್ಲಿ ಬರಲು, ಅನಂತರದಲ್ಲಿ '**ವರ್ಗಪ್ರಥಮಾತ್ ಪೂರ್ವಃ॥೫೦೬॥**' ಎಂಬ ಸೂತ್ರದಿಂದ ದ ಕಾರಕ್ಕೆ ಕ ಕಾರಾದೇಶವನ್ನು ಮಾಡಿ 'ದ' ಪ್ರತ್ಯಯದ ಅ ಕಾರಕ್ಕೆ '**ಲುಬ ನಾಮಹಾನೌ ॥ ೩೬ ॥**' ಎಂಬ ಸೂತ್ರದಿಂದ ಲೋಪವನ್ನು ಮಾಡಲು 'ಒಕ್ಕಂ' 'ಪೊಕ್ಕಂ' ಎಂಬ ರೂಪಗಳಾಗುವುವು. ಹೀಗೆ ದಾನಾರ್ಥಕ '**ಕುಡು**' ಧಾತುವಿನ ಮೇಲೆಯೂ ಧಾರಣಾರ್ಥಕ '**ತುಡು**' ಧಾತುವಿನ ಮೇಲೆಯೂ ಮೇಲೆ ಹೇಳಿರುವಂತೆ ಕರ್ತ್ರರ್ಥದಲ್ಲಿ 'ಅಮ್' ಪ್ರತ್ಯಯವನ್ನು ಮಧ್ಯದಲ್ಲಿ 'ದ' ಪ್ರತ್ಯಯವನ್ನು ಮಾಡಿ ಧಾತುವಿನ 'ಡು' ಶಬ್ದಕ್ಕೆ '**ಡೋಷ್ಟುಃ॥೪೮೭॥**' ಎಂಬ ಸೂತ್ರ ದಿಂದ ಟ ಕಾರಾದೇಶವನ್ನು ಮಾಡಿ, ದ ಕಾರಕ್ಕೆ ಪೂರ್ವವರ್ಣಾದೇಶವನ್ನೂ ಅ ಕಾರಕ್ಕೆ ಲೋಪ ವನ್ನೂ ಮಾಡಿ, ಉ ಕಾರಕ್ಕೆ ಒ ಕಾರಾದೇಶವನ್ನು ಮಾಡಲು, '**ಕೊಟ್ಟಂ**' '**ತೊಟ್ಟಂ**' ಎಂಬ ರೂಪ ಗಳು ಸಿದ್ಧವಾಗುವುವು. ಹೀಗೆ 'ದೇವಾ ಬಿನ್ನಪಂ, ಜನನಾ, ಕಲ್ಲಾನೇಽದ' ಎಂದು ಮೊದಲಾದ ಲಕ್ಷ್ಯಗಳಲ್ಲಿಯೂ '**ದೀರ್ಘಃ, ಅದಃ, ಅಮೋ ನಃ**' ಇತ್ಯಾದಿ ಸೂತ್ರಗಳಿಂದ ವಿಧಿಸಲ್ಪಡುವ ದೀರ್ಘಾ ದೇಶವು ಸ್ವರದ ಸ್ಥಾನದಲ್ಲಿಯೇ ಬಂದಿರುವುದೆಂದು ತಿಳಿಯಬೇಕು. ಹೀಗೆ ಪ್ಲುತವಿಧಾಯಕ ಸೂತ್ರಗಳಲ್ಲಿಯೂ ಹೇಳುವುದರಿಂದ 'ಅಣ್ಣಾ೩, ಇಲ್ಲಿ ಬಾ' ಎಂದು ಮೊದಲಾದ ಉದಾಹರಣೆಗಳಲ್ಲಿ '**ದೂರಾದಾಹ್ವಾನೇ ಬಹುಳಂ**' ಎಂಬ ಸೂತ್ರದಿಂದ ವಿಧಿಸುವ ಪ್ಲುತವು ಸ್ವರಸ್ಥಾನದಲ್ಲಿಯೇ ಬಂದಿರುವುದು.

**ಅವತಾರಿಕೆ ೫**

ಪೂರ್ವದಲ್ಲಿ '**ಸಿದ್ಧಾಹಿ ಶುದ್ಧಕಾಃ**' ಎಂಬ ಸೂತ್ರದಲ್ಲಿ ಅ ಕಾರ ಮೊದಲಾದ ವರ್ಣ ಗಳನ್ನು ಮಾತ್ರ ಪಾಠ ಮಾಡಿ ಅವುಗಳ ಭೇದಗಳನ್ನು ಹೇಳದಿದ್ದರೂ ಈ ಶಾಸ್ತ್ರವು ಜಾತಿಪಕ್ಷ ವನ್ನವಲಂಬಿಸಿ ಪ್ರವೃತ್ತವಾಗಿರುವುದರಿಂದ ದೀರ್ಘಾದಿ ವರ್ಣಗಳನ್ನು ಗ್ರಹಿಸಬಹುದೆಂದು ಹೇಳ

ಲ್ಪಟ್ಟಿರುವುದು. ಅದರಂತೆ ಈ ಶಾಸ್ತ್ರದಲ್ಲಿ ಎಲ್ಲ ಸೂತ್ರಗಳಲ್ಲೂ ಪ್ರಾಪ್ತವಾದರೆ '**ಅತೋ ಮಗ್ಗದ್ವಿರಿ || ೨೫೭ ||**' ಇತ್ಯಾದಿ ಸೂತ್ರಗಳಿಂದ ಸ್ವರಗಳಿಗೆ ವಿಹಿತವಾದ ಕಾರ್ಯಗಳು ಆಯಾ ವರ್ಣಗಳ ಪ್ರಭೇದಗಳಿಗೆಲ್ಲ ಪ್ರಾಪ್ತವಾಗುವುವು. ಆದುದರಿಂದ ಅಂತಹ ಸೂತ್ರಗಳಲ್ಲಿ ವ್ಯಾವೃತ್ತಿಯನ್ನು ಮಾಡಲು ಸೂತ್ರವನ್ನು ಹೇಳುತ್ತಾನೆ.

**ಸೂತ್ರಂ || ತಪರಸ್ತಾವಾರ್ || ೫ ||**

**ಅರ್ಥ** || ಈ ಶಾಸ್ತ್ರದಲ್ಲಿ ಆವ ಸ್ವರವು ತ ಕಾರವನ್ನು ಪರದಲ್ಲಿವುಳ್ಳುದಾಗಿರುವುದೊ ಅದು ತನ್ನುಚ್ಚಾರಣ ಕಾಲಮಾತ್ರವನ್ನೆ ಬೋಧಿಸುವುದು. ಎಂದರೆ ತ ಕಾರಪರಕವಾದ ಸ್ವರವು ತಜ್ಜಾತೀಯವಾಗಿ ಅಷ್ಟೇ ಕಾಲದಲ್ಲಿ ಉಚ್ಚರಿಸಿದ ಸ್ವರವನ್ನು ಮಾತ್ರ ಬೋಧಿಸುವುದೆ ಅಲ್ಲದೆ ಅದಕ್ಕಿಂತಲೂ ಅಧಿಕವಾದ ಕಾಲದಲ್ಲಿ ಹುಟ್ಟುವ ಸ್ವರಗಳನ್ನು ಬೋಧಿಸುವುದಿಲ್ಲವೆಂದು ತಾತ್ಪರ್ಯವು.

**ಉದಾಹರಣೆ**— '**ಅತೋ ಮಗ್ಗದ್ವಿರಿ || ೨೫೭ || ಇತಃ ಪ್ರೋಚಿ || ೫೭ || ಉತೋಗಾರೇ || ೩೮೪ ||**' ಇತ್ಯಾದಿ ಸೂತ್ರಗಳಲ್ಲಿ ಅಕಾರಾದಿಗಳಿಗೆ 'ತಪರಕರಣ' ಮಾಡಿರುವುದರಿಂದ ಆ ಸೂತ್ರಗಳಿಂದ ವಿಧಿಸಲ್ಪಡುವ ಮಗಾಗಮ, ಪಕಾರಾದೇಶ ಮೊದಲಾದ ಕಾರ್ಯಗಳು ಏಕಮಾತ್ರಿಕವಾದ ಆಯಾ ವರ್ಣಗಳಿಗೆ ಮಾತ್ರ ಬರುವುದೆಂದಾಗುವುದರಿಂದ ಅಣ್ಣಂಗೆ, ಅಣ್ಣಂದಿರ್, ತರಿಪ್ಪಂ ಮೊದಲಾದ ಲಕ್ಷ್ಯಗಳಲ್ಲಿ ಬರುವಂತೆ ಜ್ಯಾಗೆ, ಮಾಗೆ ಇತ್ಯಾದಿ ಲಕ್ಷ್ಯಗಳಲ್ಲಿ ಬರುವುದಿಲ್ಲವೆಂದು ಬೋಧಿಸುವುದರಿಂದ ಆ ಸೂತ್ರಗಳ ಉದಾಹರಣೆಗಳೆ ಈ ಸೂತ್ರಕ್ಕೂ ಉದಾಹರಣೆಗಳೆಂದು ತಿಳಿಯುವುದು.

**ವಿಚಾರ ೫**

ಈ ಸೂತ್ರಾರ್ಥವನ್ನು ಪರ್ಯಾಲೋಚಿಸಲು ತಪರನಿರ್ದೇಶವಿರುವ ಸೂತ್ರಗಳನ್ನು ಬಿಟ್ಟು ಉಳಿದೆಡೆಗಳಲ್ಲೆಲ್ಲ ಜಾತಿಪಕ್ಷವನ್ನವಲಂಬಿಸಲ್ಪಟ್ಟಿರುವುದೆಂದು ತೋರುವುದು. ಆದರೆ ವಿಧೇಯಗಳಲ್ಲಿ ತಪರನಿರ್ದೇಶವಿಲ್ಲದಿರುವುದರಿಂದ ಅವುಗಳಲ್ಲಿ ಜಾತಿಪಕ್ಷವನ್ನವಲಂಬಿಸಲು ಅತಿ ಪ್ರಸಕ್ತವಾಗುವುದರಿಂದ 'ಭಾವ್ಯ' ಎಂದರೆ ಒಂದಕ್ಕೆ ವಿಧಿಸಲ್ಪಡುವ ವರ್ಣವು ತಪರವಾಗಿಲ್ಲದಿದ್ದರೂ '**ಎಚ್ಚಾಮಂತ್ರಣೇ || ೨೫೨ ||**' ಎಂಬ ಸೂತ್ರದಿಂದ ಎ ಕಾರಾದೇಶವನ್ನು ವಿಧಿಸಿ ಅನಂತರದಲ್ಲಿ '**ದೀರ್ಘಃ || ೫೪ ||**' ಎಂಬ ಸೂತ್ರದಿಂದ ದೀರ್ಘವನ್ನು ವಿಧಿಸಿರುವುದರಿಂದ ಇಂತಹ ಸಂದರ್ಭಗಳಲ್ಲಿ ಜಾತಿಪಕ್ಷವನ್ನವಲಂಬಿಸುವುದಿಲ್ಲವೆಂದು ತಿಳಿಯುವುದು. ಹಾಗೆ ವಿಧೇಯಸ್ಥಲದಲ್ಲಿ ಜಾತಿಪಕ್ಷವನ್ನವಲಂಬಿಸುವುದು ಸೂತ್ರಕಾರನಿಗೆ ತಾತ್ಪರ್ಯವಿದ್ದರೆ 'ಎಚ್ಚಾಮಂತ್ರಣೇ' ಎಂಬ ಸೂತ್ರದಲ್ಲಿ 'ಎತ್' ಎಂಬಲ್ಲಿರುವ ತ ಕಾರವನ್ನು ಬಿಟ್ಟು ಎ ಕಾರಾದೇಶವನ್ನು ಮಾತ್ರ ವಿಧಿಸಲು ಜಾತಿಪಕ್ಷದಿಂದ ಏ ಕಾರವೂ ಸಿದ್ಧವಾಗುವುದು; '**ದೀರ್ಘಃ**' ಎಂಬ ಸೂತ್ರವೂ ವ್ಯರ್ಥವಾಗುವುದು. ಆದುದರಿಂದ ವಿಧೇಯಗಳಲ್ಲಿ ತಪರಕರಣವಿಲ್ಲದಿದ್ದರೂ ಜಾತಿಪಕ್ಷವನ್ನಾಶ್ರಯಿಸದೆ ತತ್ಕಾಲಕ್ಕೆ ಮಾತ್ರ ಗ್ರಹಣವಾಗುವುದೆಂದು ತಿಳಿಯಬೇಕು.

**ಅವತಾರಿಕೆ ೬**

ವರ್ಣಮಾಲೆಯಲ್ಲಿ ಹೇಳಿರುವ ವರ್ಣಗಳಲ್ಲಿ ಅ ಕಾರ ಮೊದಲು ಔ ಕಾರದ ವರೆಗಿರುವ

ವರ್ಣಗಳಿಗೆ ಸ್ವರಸಂಜ್ಞೆಯನ್ನು ಹೇಳಿ ಆ ಸ್ವರಗಳಲ್ಲಿರುವ ಭೇದಗಳನ್ನು ತಿಳಿಸಿ ಅವುಗಳಲ್ಲಿ ವ್ಯವಸ್ಥಾಪಕವಾದ ಪರಿಭಾಷೆಯನ್ನೂ ಹೇಳಿ ಈ ಶಾಸ್ತ್ರದಲ್ಲಿ ಜಾತಿ ಪಕ್ಷವನ್ನಾಶ್ರಯಿಸಿರುವುದರಿಂದ ಆ ಸ್ವರಗಳಲ್ಲುಂಟಾಗುವ ಅತಿಪ್ರಸಕ್ತಿಯನ್ನು ಪರಿಹರಿಸಿ ಕ ಕಾರಾದಿಗಳಿಗೆ ಸಂಜ್ಞೆಯನ್ನು ತಿಳಿಸುತ್ತಾನೆ.

**ಸೂತ್ರಂ || ಕಾದಯೋ ವ್ಯಂಜನಂ || ೬ ||**

**ಅರ್ಥ ||** **ವರ್ಣಮಾಲೆಯಲ್ಲಿ ಹೇಳಿರುವ ಕ ಕಾರಾದಿ ಳ ಕಾರಾಪರ್ಯಂತವಿರುವ ವರ್ಣಗಳು ವ್ಯಂಜನಸಂಜ್ಞೆಯುಳ್ಳವು.**

**ಉದಾಹರಣೆ ||** ಕ ಖ ಗ ಘ ಙ, ಚ ಛ ಜ ಝ ಞ, ಟ ಠ ಡ ಢ ಣ, ತ ಥ ದ ಧ ನ, ಪ ಫ ಬ ಭ ಮ, ಯ ರ ಲ ವ, ಶ ಷ ಸ ಹ, ಱ, ಳ.

**ಪ್ರಯೋಜನಂ ||** 'ಸ್ವರಾದರೋ ವ್ಯಂಜನೇ ||೬೭||' ಎಂದು ಮೊದಲಾದ 'ವ್ಯಂಜನ' ಪದವುಳ್ಳ ಸೂತ್ರಗಳಲ್ಲಿ 'ವ್ಯಂಜನ'ಪದಕ್ಕೆ ಕ ಕಾರ ಮೊದಲಾದ ವರ್ಣಗಳೆ ಅರ್ಥವೆಂದು ತಿಳಿಯುವುದು.

**ವಿಚಾರ ೬**

ಈ ಸೂತ್ರದಲ್ಲಿ ಹೇಳಿರುವ 'ಕಾದಯಃ' ಎಂಬ ಪದವು 'ಕಃ ಆದಿಃ ಯೇಷಾಂ ತೇ' ಎಂದು ಬಹುವ್ರೀಹಿಸಮಾಸದಿಂದ ನಿಷ್ಪನ್ನವಾಗಿರುವುದರಿಂದ ಕ ಕಾರವೆ ಆದಿಯಾದ ವರ್ಣಗಳಿಗೆ ವ್ಯಂಜನ ಸಂಜ್ಞೆ ಬರುವುದೆಂದು ತೋರುವುದು; ಅಲ್ಲದೆ ಕ ಕಾರಕ್ಕೆ ವ್ಯಂಜನಸಂಜ್ಞೆ ಬರುವಂತೆ ತೋರುವುದಿಲ್ಲ. ಆದುದರಿಂದ ಈ ಶಾಸ್ತ್ರದಲ್ಲಿ ಕ ಕಾರವನ್ನು ವ್ಯಂಜನವಲ್ಲಿ ಸೇರಿಸಲು ಅಸಾಧ್ಯವಾಗಿರುವುದೆಂದು ಶಂಕೆಯುಂಟಾಗುವುದು. ಇದರಿಂದ '**ಅವಕ್ಕಾರ್ಗಂತೆಯರ್, ಇವಕ್ಕುರ್ಗಲಟಿಯರ್**' ಇತ್ಯಾದಿ ಉದಾಹರಣೆಗಳಲ್ಲಿ ಕ ಕಾರಕ್ಕೆ ವ್ಯಂಜನ ಕಾರ್ಯವು ಅಪ್ರಾಪ್ತವಾಗುವುದು ಎಂದರೆ— ಬಹುವ್ರೀಹಿಸಮಾಸಕ್ಕೆ **ತದ್ಗುಣಸಂವಿಜ್ಞಾನ** ಬಹುವ್ರೀಹಿಯೆಂತಲೂ **ಅತದ್ಗುಣಸಂವಿಜ್ಞಾನ** ಬಹುವ್ರೀಹಿಯೆಂತಲೂ ಎರಡು ವಿಧವಾಗಿರುವುದು. **ತದ್ಗುಣಸಂವಿಜ್ಞಾನ**ವೆಂದರೆ 'ತಸ್ಯ (ವಿಶೇಷ್ಯಸ್ಯ) **ಗುಣಾಃ** (ವೃತ್ತಿಪದಾರ್ಥಾಃ ವಿಶೇಷಣ ಭೂತಪದಾರ್ಥಾಃ) ತೇಷಾಂ ಸಂವಿಜ್ಞಾನಂ (ಏಕಕಾರ್ಯಾನ್ವಯಿತಯಾ ಜ್ಞಾನಂ) ಯಸ್ಮಿನ್ ಸಃ' ಎಂಬ ವ್ಯುತ್ಪತ್ತಿಯಿಂದ ಆವ ಬಹುವ್ರೀಹಿಯಲ್ಲಿ ವಿಶೇಷಣಾರ್ಥಗಳಿಗೂ ವಿಶೇಷ್ಯದಲ್ಲಿ ಸೇರಿ ಅನ್ವಯಿಸುವುದೊ ಅದು ತದ್ಗುಣಸಂವಿಜ್ಞಾನ ಬಹುವ್ರೀಹಿಯೆನಿಸಿಕೊಳ್ಳುವುದು. ಆದುದರಿಂದ ಲಂಬಕರ್ಣನನ್ನು ಕರೆದುಕೊಂಡು ಬಾ, ಎಂದು ವಾಕ್ಯವನ್ನು ಪ್ರಯೋಗಿಸಲು ಲಂಬವಾದ ಕರ್ಣವಿಶಿಷ್ಟನಾದ ಪುರುಷನನ್ನೆ ಕರೆತರುವುದು; ಇಂತಹ ವಾಕ್ಯಗಳಲ್ಲಿ ತದ್ಗುಣಸಂವಿಜ್ಞಾನ ಬಹುವ್ರೀಹಿಯೆಂದು ತಿಳಿಯುವುದು. ಚಿತ್ರವಾದಗೋವುಳ್ಳವನನ್ನು ಕರೆತಾರೆಂದು ಪ್ರಯೋಗಿಸಲು ಗೋವನ್ನು ಬಿಟ್ಟು ಪುರುಷನನ್ನು ಮಾತ್ರ ಕರೆತರುವುದು; ಆದುದರಿಂದ ಇಲ್ಲಿ **ಅತದ್ಗುಣಸಂವಿಜ್ಞಾನ** ಬಹುವ್ರೀಹಿಯೆಂದು ತಿಳಿಯಬೇಕು. ಹೀಗೆ ಎರಡು ಬಗೆಯಾದ ಬಹುವ್ರೀಹಿಗಳಲ್ಲ ತದ್ಗುಣಸಂವಿಜ್ಞಾನ ಬಹುವ್ರೀಹಿಯನ್ನು 'ಕಾದಯಃ' ಎಂಬಲ್ಲಿ ಆಶ್ರಯಿಸಿರುವುದರಿಂದ ಕ ಕಾರಕ್ಕೂ ವ್ಯಂಜನಸಂಜ್ಞೆ ಬರುವುದೆಂದು ತಿಳಿಯಬೇಕು. ಇಂತಹ ವ್ಯಂಜನಗಳಲ್ಲಿ **ವರ್ಗಾಕ್ಷರ**ಗಳೆಂತಲೂ **ಅವರ್ಗಾಕ್ಷರ**ಗಳೆಂತಲೂ ಎರಡು ಬಗೆಯಿರುವುವೆಂದು **ದರ್ಪಣ**ದಲ್ಲಿ—

ಪ್ರಕಟತರವ್ಯಂಜನಸಂ
ಜ್ಞೆ ಕಕಾರದಿನಾ ಳಕಾರಪರ್ಯಂತಂ ಪಂ
ಚಕಪಂಚಕಂಗಳಿಂ ಪಂ
ಚಕಮುಕ್ಕುಂ ವರ್ಗಮಂತ್ಯವರ್ಣಮವರ್ಗಂ (ಸೂತ್ರ ೧೩)

ಎಂಬ ಸೂತ್ರದಿಂದ ಸೂಚಿಸಲ್ಪಡುವುದು.

**ಅವತಾರಿಕೆ ೭**

ಹೀಗೆ ಸಾಮಾನ್ಯವಾಗಿ ಕ ಕಾರಾದಿ ವರ್ಣಗಳಿಗೆ ವ್ಯಂಜನಸಂಜ್ಞೆಯನ್ನು ಹೇಳಿ ಅವುಗಳಲ್ಲಿರುವ ವಿಶೇಷಸಂಜ್ಞೆಯನ್ನು ಹೇಳುತ್ತಾನೆ.

**ಸೂತ್ರಂ || ಮಾಂತಾಃ ಪಂಚ ಪಂಚ ವರ್ಗಃ || ೭ ||**

**ಅರ್ಥ || ವರ್ಣಮಾಲೆಯಲ್ಲಿ ಹೇಳಿರುವ ಕ ಕಾರ ಮೊದಲು ಮ ಕಾರ ಪರ್ಯಂತವಿರುವ ವರ್ಣಗಳು ಐದೈದಾಗಿ ಐದು ವರ್ಗಸಂಜ್ಞಕಗಳಾಗುತ್ತವೆ.**

**ಉದಾಹರಣೆ** || ಕ ಖ ಗ ಘ ಙ, ಚ ಛ ಜ ಝ ಞ, ಟ ಠ ಡ ಢ ಣ, ತ ಥ ದ ಧ ನ, ಪ ಫ ಬ ಭ ಮ.

**ಪ್ರಯೋಜನಂ || 'ತದಂತ್ಯೋ ವಾ ವರ್ಗೇ||೮೦||'** ಎಂದು ಮೊದಲಾದ 'ವರ್ಗ' ಪದವುಳ್ಳ ಸೂತ್ರಗಳಲ್ಲಿ 'ವರ್ಗ' ಪದಕ್ಕೆ ಕ ಕಾರಮೊದಲು ಮ ಕಾರದವರೆಗಿರುವ ವ್ಯಂಜನಗಳೆಂದು ತಿಳಿಯುವುದು.

**ವಿಚಾರ ೭**

ಈಗ ವರ್ಣಮಾಲೆಯಲ್ಲಿ ಹೇಳಿದ ಕ ಕಾರದಿಂದ ಳ ಕಾರದವರೆಗಿರುವ ವರ್ಣಗಳಿಗೆ ವ್ಯಂಜನ ಸಂಜ್ಞೆಯನ್ನು ಹೇಳಿ ಅವುಗಳಲ್ಲಿ ಮೊದಲಿಂದ ಕ್ರಮವಾಗಿ ಐದೈದಕ್ಕೆ ವರ್ಗಸಂಜ್ಞೆ ಹೇಳಲ್ಪಟ್ಟಿತು. ಈ ವರ್ಗಗಳು **ಕ** ವರ್ಗ, **ಚ** ವರ್ಗ, **ಟ** ವರ್ಗ, **ತ** ವರ್ಗ, **ಪ** ವರ್ಗ ಎಂದು ಐದು ಇರುವುವು. ಇವುಗಳನ್ನು **ಸ್ಪರ್ಶ** ವರ್ಣಗಳೆಂದು ಪ್ರಾಚೀನರು ಹೇಳಿರುವರು. ಉಳಿದ ವ್ಯಂಜನಗಳು **ಅವರ್ಗ**ಗಳೆಂದು ತಿಳಿಯುವುದು. ಇವುಗಳಲ್ಲಿ **ಯ ರ ಲ ವ** ಗಳು **ಅಂತಸ್ಥ**ಗಳೆಂದೂ **ಶ ಷ ಸ ಹ** ಗಳು **ಊಷ್ಮ**ಗಳೆಂದೂ ವ್ಯವಹರಿಸಲ್ಪಡುವುವು. ಇಂತಹ ವ್ಯಂಜನಗಳಲ್ಲಿ **ಖ ಛ ಠ ಥ ಫ** ಎಂಬ ವರ್ಗ ದ್ವಿತೀಯ ವರ್ಣಗಳೂ **ಘ ಝ ಢ ಧ ಭ** ಎಂಬ ವರ್ಗ ಚತುರ್ಥಾಕ್ಷರಗಳೂ **ಶ ಷ ಸ ಹ** ಎಂಬ (ಅವರ್ಗಾಕ್ಷರಗಳಲ್ಲಿಯ) ನಾಲ್ಕು ವರ್ಣಗಳೂ **ಮಹಾಪ್ರಾಣ**ಗಳೆನಿಸಿಕೊಳ್ಳುವುವು. ಇವುಗಳಲ್ಲಿ ವರ್ಗದ್ವಿತೀಯ ಚತುರ್ಥಾಕ್ಷರಗಳು ಮಾತ್ರ ಮಹಾಪ್ರಾಣಗಳೆಂದು **ಶಬ್ದಮಣಿದರ್ಪಣ**ದಲ್ಲಿ—

ವರ್ಗದ್ವಿತೀಯವರ್ಣಂ
ವರ್ಗಚತುರ್ಥಾಕ್ಷರಂ ಮಹಾಪ್ರಾಣಮವಂ
ಮಾರ್ಗವಿದರ್ ಸಂಖ್ಯೆಯೊಳಂ
ಭೋರ್ಗರೆವನುಕೃತಿಯೊಳಂ ಪ್ರಯೋಗಿಸುತಿರ್ಪರ್ (ಸೂತ್ರ ೧೪)

ಎಂಬ ಸೂತ್ರದಿಂದ ಸೂಚಿಸಿ ಇವನ್ನು ಕನ್ನಡ ಕವಿಗಳ ಮಾರ್ಗವನ್ನರಿತವರು ಸಂಖ್ಯಾವಾಚಕಗಳಲ್ಲಿಯೂ ಅನುಕರಣ ಶಬ್ದಗಳಲ್ಲಿಯೂ ಪ್ರಯೋಗಿಸುವರು ಎಂದು ಹೇಳಿರುವುದು. ಇಲ್ಲಿ **ಶ ಷ ಸ ಹ** ಗಳನ್ನು ಹೇಳಿಲ್ಲವಾದರೂ ಅಚ್ಚಗನ್ನಡದಲ್ಲಿ **ಶ ಷ** ಗಳಿಲ್ಲವಾದುದರಿಂದ ಅವೆರಡನ್ನು ಬಿಟ್ಟು

**ಸ ಹ** ಗಳನ್ನು ಮಾತ್ರ ಇಲ್ಲಿ ಸೇರಿಸಿಕೊಂಡು **ಮಹಾಪ್ರಾಣ**ಗಳೆಂದು ಹೇಳಬೇಕು. ಇದಲ್ಲದೆ ಈ ಭಾಷೆಯಲ್ಲಿ ಸಾಮಾನ್ಯವಾಗಿ ಮಹಾಪ್ರಾಣಗಳಿಲ್ಲದಿದ್ದರೂ ಸ್ವಭಾವವಾಗಿ ಕೆಲವು ಮಹಾಪ್ರಾಣ ಗಳುಳ್ಳ—'ದೆಖ್ಖಾಣಂ, ಖಾರಿಗೆ, ಛಲ್ಲಂ, ಠಕ್ಕಿಸು, ಥಟ್ಟು, ಫಾಸೆ, ಝುಳಕಂ, ಝುಲ್ಲರಿ, ಮೊದಲಾದ ಕೆಲವು ಶಬ್ದಗಳುಂಟೆಂದು ಪ್ರಯೋಗಗಳನ್ನು ನೋಡಿ ತಿಳಿದುಕೊಳ್ಳಬೇಕು. ಮತ್ತು ವರ್ಗದ ಅಂತ್ಯವರ್ಣಗಳು **ಅನುನಾಸಿಕ**ವೆಂದೂ ತಿಳಿಯಬೇಕು. ಈ ವಿಷಯವು **ಶಬ್ದಮಣಿದರ್ಪಣದ**-

> ಒಳವು ಮಹಾಪ್ರಾಣಂಗಳ್
> ವಿಳಸತ್ಕರ್ಣಾಟಭಾಷೆಯೊಳ್ ಕೆಲವು ನಿಜೋ
> ಜ್ವಳಮಾಗಿ ವರ್ಗದಂತ್ಯಂ
> ಗಳನಱಿಯನುನಾಸಿಕಾಖ್ಯೆಯಂ ತಳೆದಿರ್ಕುಂ (ಸೂತ್ರ ೧೫)

ಎಂಬ ಸೂತ್ರದಿಂದ ಸೂಚಿತವಾಗಿರುವುದು. ಇದರಿಂದ ವರ್ಣಗಳೆಂದರೆ ವರ್ಗದ ಪ್ರಥಮ ತೃತೀಯ ಪಂಚಮ ವರ್ಣಗಳೂ ಯ ರ ಲ ವ ಗಳೂ **ಅಲ್ಪಪ್ರಾಣ**ಗಳೆಂದು ತಿಳಿಯುವುದು. **ಶಾಸನಕಾರ**ನು ಮಹಾಪ್ರಾಣ ಮೊದಲಾದ ವ್ಯವಸ್ಥೆಯನ್ನು ಸೂತ್ರಗಳಿಂದ ಮಾಡದಿದ್ದರೂ ವ್ಯಾಖ್ಯಾನಗಳಿಂದ ಊಹಿಸಿಕೊಳ್ಳಬೇಕು.

### ವರ್ಣೋತ್ಪತ್ತಿಸ್ಥಾನ-ಪ್ರಯತ್ನಗಳ ವಿಚಾರ

ಸಂಸ್ಕೃತ ವ್ಯಾಕರಣದಲ್ಲಿಯಾದರೂ ವರ್ಣಗಳು ತಾಲ್ವಾದ್ಯೋಷ್ಠ ಪುಟಗಳಲ್ಲಿ ವಾಯುವಿನ ಅಭಿಘಾತದಿಂದ ಅಭಿವ್ಯಕ್ತವಾಗುವುದಕ್ಕೆ ಅಭ್ಯಂತರ, ಬಾಹ್ಯಗಳೆಂಬೆರಡು ಪ್ರಯತ್ನಗಳಿರುವುವೆಂದು ಹೇಳಿರುವುದು. ಅಭ್ಯಂತರ ಪ್ರಯತ್ನವು ವರ್ಣೋತ್ಪತ್ತಿಗೆ ಪೂರ್ವದಲ್ಲುಂಟಾಗುವುದು; ಬಾಹ್ಯವು ವರ್ಣೋತ್ಪತ್ತ್ಯನಂತರದಲ್ಲುಂಟಾಗುವುದು. ಅಭ್ಯಂತರವು ಸ್ಪೃಷ್ಟ, ಈಷತ್ ಸ್ಪೃಷ್ಟ, ವಿವೃತ, ಸಂವೃತ, ಎಂದು ನಾಲ್ಕು* ಬಗೆಯಾಗಿರುವುದು. ಇವುಗಳಲ್ಲಿ ಸ್ಪೃಷ್ಟ ಪ್ರಯತ್ನಗಳು ಸ್ಪರ್ಶವರ್ಣ ಗಳಿಗೂ ಈಷತ್ಸ್ಪೃಷ್ಟವು ಅಂತಸ್ಥವರ್ಣಗಳಿಗೂ ವಿವೃತವು ಊಷ್ಮ ವರ್ಣಗಳಿಗೂ ಸ್ವರಗಳಿಗೂ ಸಂವೃತವು ಪ್ರಯೋಗಾವಸ್ಥೆಯಲ್ಲಿರುವ 'ಅ' ಹ್ರಸ್ವವರ್ಣಕ್ಕೂ ಇರುವುದು—ಎಂದು ಹೇಳಿರುವುದು. ಬಾಹ್ಯಪ್ರಯತ್ನವು: ವಿವಾರ, ಸಂವಾರ, ಶ್ವಾಸ, ನಾದ, ಘೋಷ, ಅಘೋಷ, ಅಲ್ಪಪ್ರಾಣ, ಮಹಾ ಪ್ರಾಣ, ಉದಾತ್ತ, ಅನುದಾತ್ತ, ಸ್ವರಿತ ಎಂದು ಹನ್ನೊಂದು ಬಗೆಯಾಗಿರುವುದು. ಇವುಗಳಲ್ಲಿ ವರ್ಗಪ್ರಥಮ ದ್ವಿತೀಯ ವರ್ಣಗಳಿಗೂ ಶ ಷ ಸ ಗಳಿಗೂ ವಿಸರ್ಗ ಜಿಹ್ವಾಮೂಲೀಯ ಉಪಧ್ಮಾ ನೀಯಗಳಿಗೂ ಅಘೋಷ ಶ್ವಾಸ ವಿವಾರ ಎಂಬ ಮೂರು ಪ್ರಯತ್ನಗಳು, ಉಳಿದ ಎಲ್ಲಾ ವರ್ಣ ಗಳಿಗೂ ಘೋಷ ನಾದ ಸಂವಾರ ಎಂಬ ಮೂರು ಪ್ರಯತ್ನಗಳು ಇರುವುವು. ಮತ್ತು ಈ ವರ್ಣಗಳಲ್ಲಿ ವರ್ಗಪ್ರಥಮ ದ್ವಿತೀಯ ಪಂಚಮ ವರ್ಣಗಳಿಗೂ ಯ ರ ಲ ವ ಗಳಿಗೂ ಸ್ವರ ಗಳಿಗೂ ಅಲ್ಪಪ್ರಾಣಪ್ರಯತ್ನವು; ತದ್ಭಿನ್ನಗಳೆಂದರೆ ವರ್ಗದ್ವಿತೀಯ ಚತುರ್ಥಗಳಿಗೂ ಶ ಷ ಸ ಹ ಗಳಿಗೂ ಮಹಾಪ್ರಾಣಪ್ರಯತ್ನವಿರುವುದೆಂದು:—

> **ಅಚೋಸ್ಪೃಷ್ಟಾಯಣಸ್ತ್ವೀಷನ್ನೇಮಸ್ಪೃಷ್ಟಾಃ ಶಲಸ್ತಥಾ**
> **ಶೇಷಾಃ ಸ್ಪೃಷ್ಟಾ ಹಲಃ ಪ್ರೋಕ್ತಾಃ** .... .... ....

* [ಕೆಲ ವ್ಯಾಕರಣಕಾರರು 'ಈಷತ್ಸ್ಪೃಷ್ಟ' ಮತ್ತು 'ವಿವೃತ' ಇವುಗಳ ನಡುವೆ 'ಈಷದ್ವಿವೃತ' ಎಂಬ ಇನ್ನೊಂದು ಬಗೆಯನ್ನೂ ಹೇಳುತ್ತಾರೆ. —ಸಂಪಾದಕ]

**ಖಯಾಂ ಯಮಾಃ ಖಯಃಕಃಪೌ ವಿಸರ್ಗಃ ಶರ ಏವ ಚ**
**ಏತೇ ಶ್ವಾಸಾನುಪ್ರದಾನಾ ಅಘೋಷಾಶ್ಚ ವಿವೃಣ್ವತೇ**
**ಕಂಠಮನ್ಯೇತು ಘೋಷಾಃ ಸ್ಯುಃ ಸಂವೃತಾ ನಾದಭಾಗಿನಃ**
**ಅಯುಗ್ಮಾ ವರ್ಗಯಮಗಾ ಯಣಶ್ಚಾಲ್ಪಾಸವಃ ಸ್ಮೃತಾಃ**

ಎಂಬ **ಶಿಕ್ಷಾ-ಪ್ರಾತಿಶಾಖ್ಯ**ಗಳ ಶ್ಲೋಕಗಳಿಂದ ಸೂಚಿತವಾಗುವುದು. ಉದಾತ್ತಾನುದಾತ್ತಸ್ವರಿತಗಳು ಸ್ವರ ವರ್ಣಗಳಿಗೆ ಮಾತ್ರ ಹೇಳಿರುವುದರಿಂದ ಅವನ್ನು ಇಲ್ಲಿ ಹೇಳಲಿಲ್ಲ.

ಇಂತಹ ಎರಡು ಬಗೆಯಾದ ಪ್ರಯತ್ನಗಳಲ್ಲಿ ಅಭ್ಯಂತರ ಪ್ರಯತ್ನದಿಂದಲೂ ವರ್ಣೋತ್ಪತ್ತಿ ಸ್ಥಾನದಿಂದಲೂ ಆವಾವ ವರ್ಣಗಳಿಗೆ ಐಕ್ಯವುಂಟಾಗುವುದೋ ಅವು ಪರಸ್ಪರ ಸವರ್ಣಗಳೆನಿಸಿಕೊಳ್ಳುವುವು— ಎಂಬ ವಿಷಯವು

**ತುಲ್ಯಾಸ್ಯಪ್ರಯತ್ನಂ ಸವರ್ಣಂ ( ೧-೧-೯ )**

ಎಂಬ **ಪಾಣಿನೀಯ** ಸೂತ್ರದಿಂದಲೂ

**ಸ್ಥಾನಾಸ್ಯೈಕ್ಯೇ ಸ್ವಃ**

ಎಂಬ **ಶಾಕಟಾಯನ** ಸೂತ್ರದಿಂದಲೂ ಸೂಚಿಸಲ್ಪಟ್ಟಿರುವುದು. ಇವುಗಳಲ್ಲಿ ಸ್ವರ-ಸ್ವರಗಳಿಗೂ ವ್ಯಂಜನ-ವ್ಯಂಜನಗಳಿಗೂ ಪರಸ್ಪರ ಸವರ್ಣವೆಂದು ಹೇಳಬೇಕಲ್ಲದೆ ಸ್ವರ-ವ್ಯಂಜನಗಳಿಗೆ ಪರಸ್ಪರ ಸವರ್ಣಸಂಜ್ಞೆಯನ್ನು ಹೇಳಲಾಗದು.

ಇಲ್ಲಿ ವರ್ಣೋತ್ಪತ್ತಿ ಸ್ಥಾನಗಳಾವುವೆಂಬುದನ್ನು **ದರ್ಪಣಕಾರನು**—

**ಕೊರಲುಂ ಜಿಹ್ವಾಮೂಲಮು**
**ಮುರಮುಂ ತಾಲುಗೆಯುಮೋಷ್ಠಮುಂ ನಾಸಿಕೆಯುಂ**
**ಶಿರಮುಂ ದಂತಮುಮೆಂದ**
**ಕ್ಕರಮುದಯಿಪ ತಾಣಮಾದುವೀ ಪೇೞ್ದೆಂಟುಂ (ಸೂತ್ರ ೨೦)**

ಎಂಬ ಸೂತ್ರದಿಂದ ಸೂಚಿಸಿರುವನು. **ಶಾಸನಕಾರನು**—

**ಅಷ್ಟೌ ಸ್ಥಾನಾನಿ ವರ್ಣಾನಾಮುರಃ ಕಂಠಃ ಶಿರಸ್ತಥಾ**
**ಜಿಹ್ವಾಮೂಲಂ ಚ ದಂತಾಶ್ಚ ನಾಸಿಕೋಷ್ಠೌ ಚ ತಾಲು ಚ**

ಎಂದು ಹೇಳಿರುವನು. ಇವುಗಳಲ್ಲಿ ಅ ವರ್ಣ ಕ ವರ್ಗ ಹ ಕಾರ ವಿಸರ್ಗ ಜಿಹ್ವಾಮೂಲಗಳು ಕಂಠವಲ್ಲಿಯೂ ಇ ವರ್ಣ ಚ ವರ್ಗ ಯ ಕಾರ ಶ ಕಾರಗಳು ತಾಲುವಿನಲ್ಲಿಯೂ ಉ ವರ್ಣ ಪ ವರ್ಗ ಉಪಧ್ಮಾನೀಯಗಳು ಓಷ್ಠಗಳಲ್ಲಿಯೂ ಋ ವರ್ಣ ಟ ವರ್ಗ ರೇಫ ಷ ಕಾರಗಳು ಶಿರಸ್ಸಿನಲ್ಲಿಯೂ ಌ ವರ್ಣ ಲ ಕಾರ ಸ ಕಾರಗಳು ದಂತಗಳಲ್ಲಿಯೂ ಙ ಞ ಣ ನ ಮ ಗಳು ಆಯಾ ವರ್ಗಸ್ಥಾನಗಳಲ್ಲದೆ ನಾಸಿಕೆಯಲ್ಲಿಯೂ ವ ಕಾರವು ದಂತೋಷ್ಠದಲ್ಲಿಯೂ ಅನುಸ್ವಾರವು ನಾಸಿಕೆಯಲ್ಲಿಯೂ ಹುಟ್ಟುವುವು.

ಕೆಲವರು ಹ ಕಾರ ವಿಸರ್ಗಗಳು **ಉರಸ್ಯ**ಗಳೆಂತಲೂ ಕ ವರ್ಗ ಜಿಹ್ವಾಮೂಲೀಯಗಳು **ಜಿಹ್ವ್ಯ**ಗಳೆಂತಲೂ ಅ ವರ್ಣವು **ಸರ್ವಮುಖಸ್ಥಾನ**ವೆಂತಲೂ ಏ ಐ ಕಾರಗಳು ಕೇವಲ **ತಾಲವ್ಯ**ಗಳೆಂತಲೂ ಓ ಔ ಕಾರಗಳು ಕೇವಲ **ಔಷ್ಠ್ಯ**ಗಳೆಂತಲೂ ರೇಫವು **ದಂತಮೂಲಪ್ರಭವ**ವೆಂತಲೂ ವ ಕಾರವು **ಸೃಕ್ವಸ್ಥಾನ**ವೆಂತಲೂ ಅನುಸ್ವಾರವು **ಕಂಠ್ಯನಾಸಿಕ್ಯ**ವೆಂತಲೂ ಹೇಳುತ್ತಾರೆ. ಇವೆಲ್ಲ ಶಿಕ್ಷಾಗ್ರಂಥದಲ್ಲಿ ವಿಶದವಾಗಿರುವುವು.

(ಮುಂದಿನ ಪಟ್ಟಿಯನ್ನು ನೋಡಿರಿ)

## ವರ್ಣೋತ್ಪತ್ತಿ ಸ್ಥಾನಗಳನ್ನೂ ಬಾಹ್ಯಾಭ್ಯಂತರ ಪ್ರಯತ್ನಗಳನ್ನೂ ತೋರಿಸುವ ಪಟ್ಟಿಯು

| ಆಭ್ಯಂತರ ಪ್ರಯತ್ನಗಳು | (ವ್ಯಂಜನ) | | | | | | | (ಸ್ವರ) | |
|---|---|---|---|---|---|---|---|---|---|
| | ಸ್ಪೃಷ್ಟ (ವರ್ಗೀಯಗಳು) | | | | | ಈಷತ್ಸ್ಪೃಷ್ಟ | ಈಷತ್ ವಿವೃತ | ವಿವೃತ | ಸಂವೃತ |
| ವರ್ಣಗಳ ಉತ್ಪತ್ತಿ ಸ್ಥಾನಗಳು | ಸ್ಪರ್ಶವರ್ಣಗಳು | | | | | ಅಂತಸ್ಥಗಳು | ಊಷ್ಮಗಳು | | |
| | ಕರ್ಕಶ | | ಮೃದು | | | | | | |
| | ೧ | ೨ | ೩ | ೪ | ೫ ಅನುನಾಸಿಕ | | | | |
| ಕಂಠ | ಕ್ | ಖ್ | ಗ್ | ಘ್ | ಙ್ | ಹ್ | ಃ(೨) | ಅ(ವರ್ಣ) | ಪ್ರಯೋಗದಲ್ಲಿ |
| ತಾಲು | ಚ್ | ಛ್ | ಜ್ | ಝ್ | ಞ್ | ಯ್ | ಶ್ | ಇ ,, / ಎ(೫) ,, | |
| ಶಿರಸ್ಸು | ಟ್ | ಠ್ | ಡ್ | ಢ್ | ಣ್ | ರ್ | ಷ್ | ಋ ,, | |
| ದಂತ | ತ್ | ಥ್ | ದ್ | ಧ್ | ನ್ | ಲ್ | ಸ್ | ಌ ,, | |
| ಓಷ್ಠ | ಪ್ | ಫ್ | ಬ್ | ಭ್ | ಮ್(೧) | ವ್ (೪) | ಃ(೩) | ಉ ,, / ಒ(೫) ,, | |
| ಬಾಹ್ಯ ಪ್ರಯತ್ನಗಳು | ಅಲ್ಪ ಪ್ರಾಣ | ಮಹಾ ಪ್ರಾಣ | ಅಲ್ಪ ಪ್ರಾಣ | ಮಹಾ ಪ್ರಾಣ | ಅಲ್ಪಪ್ರಾಣ | | ಮಹಾ ಪ್ರಾಣ | ಅಲ್ಪಪ್ರಾಣ | |
| | ವಿವಾರ | | ಸಂವಾರ | | | | ವಿವಾರ | ಸಂವಾರ | |
| | ಶ್ವಾಸ | | ನಾದ | | | | ಶ್ವಾಸ | ನಾದ | |
| | ಅಘೋಷ | | ಘೋಷ | | | | ಅಘೋಷ | ಘೋಷ | |

**ವಿಶೇಷಸಂಗತಿಗಳು—**

(೧) ‘ಅನುಸ್ವಾರ’ ವನ್ನು ಅನುನಾಸಿಕವೆಂದೆ ಗಣಿಸುವರು.

(೨) ಈ (ಃ) ಚಿಹ್ನದಲ್ಲಿ ‘ವಿಸರ್ಗ’, ‘ಜಿಹ್ವಾಮೂಲೀಯ’ ಗಳೆರಡೂ ಸಮಾವೇಶವಾಗುತ್ತವೆ. (ಜಿಹ್ವಾಮೂಲೀಯವೆಂದರೆ ಕ ಕಾರದ ಮೊದಲು ಬರುವ ವಿಸರ್ಗ. ಉದಾಹರಣೆ:‘ಅಂತಃಕರಣ’)

(೩) ಇದು ‘ಉಪಧ್ಮಾನೀಯ’ವು (ಎಂದರೆ ಪ ಕಾರದ ಮೊದಲು ಬರುವ ವಿಸರ್ಗ. ಉದಾಹರಣೆ: ‘ಅಂತಃಪುರ’)

(೪) ವ ಕಾರವು ದಂತೌಷ್ಠ್ಯವೆಂದು ಗ್ರಹಿಸುತ್ತಾರೆ.

(೫) ಎ ವರ್ಣವು ಕಂಠತಾಲುಸ್ಥಾನದಲ್ಲಿ ಜನಿಸುವುದೆಂದೂ ಒ ವರ್ಣವು ಕಂಠೋಷ್ಠದಲ್ಲಿ ಜನಿಸುವುದೆಂದೂ ಸಂಸ್ಕೃತ ವ್ಯಾಕರಣಕಾರರು ಗ್ರಹಿಸುವರು.

[ಆಧುನಿಕ ವರ್ಣಶಾಸ್ತ್ರಾನುಸಾರವಾಗಿ ಮೊದಲಿನ ಪಟ್ಟಿಯನ್ನು ಸುಧಾರಿಸಿ ಇದನ್ನು ಸಿದ್ಧಪಡಿಸಲಾಗಿದೆ—ಸಂಪಾದಕ]

ಹೀಗೆ ಸ್ಥಾನಪ್ರಯತ್ನ ಭೇದಗಳನ್ನು ಸಂಸ್ಕೃತ ವ್ಯಾಕರಣಗಳಲ್ಲಿ ವಿಶದವಾಗಿ ಹೇಳಿ ಅವುಗಳ ಪ್ರಯೋಜನವನ್ನೂ ಹೇಳಿರುವುದು. ಭಾಷಾವ್ಯಾಕರಣದಲ್ಲಿ ವರ್ಣೋತ್ಪತ್ತಿ ಸ್ಥಾನಗಳು ಅವಶ್ಯಕಗಳಾಗಿದ್ದರೂ ಪ್ರಯತ್ನಗಳು ಅಷ್ಟು ಅವಶ್ಯಕಗಳಾಗಿಲ್ಲವಾದುದರಿಂದ ಭಾಷಾವ್ಯಾಕರಣಕಾರರಾರೂ ಹೇಳಿಲ್ಲವೆಂದು ತಿಳಿಯಬೇಕು.

ಹಿಂದೆ ಹೇಳಿರುವ ರೀತಿಯಲ್ಲಿ ಪರ್ಯಾಲೋಚಿಸಲು ಕನ್ನಡದಲ್ಲಿ **ಶುದ್ಧಾಕ್ಷರಗಳು— ಸ್ವರ, ವರ್ಗ, ಅವರ್ಗ, ಯೋಗವಾಹ, ದೇಶೀಯ** ಎಂದು **ಐದು** ಬಗೆಯಾಗಿರುವುವೆಂದು ತೋರುವುದು. ಇದೇ ವಿಷಯವನ್ನು ಕೇಶಿರಾಜನು—

**ಕವಿಗಳ್ ಸ್ವರದಿಂ ವರ್ಗದಿ**
**ನವರ್ಗದಿಂ ಯೋಗವಾಹದಿಂ ದೇಶದೊಳು**
**ದ್ಭವಮಪ್ಪ ವರ್ಣದಿಂ ಪಂ**
**ಚವಿಧಂ ತಾನೆಂದು ತಿಳಿಪುವರ್ ಶುದ್ಧಗೆಯಂ** (ಸೂತ್ರ ೩೧)

ಎಂಬ ಸೂತ್ರದಿಂದ ಸ್ಪಷ್ಟವಾಗಿ ಹೇಳಿರುವನು. ಮತ್ತು—

**ತರದಿಂದಂ ಪದಿನಾಲ್ಕುಂ**
**ಸ್ವರಮಿರ್ಪತ್ತೈದು ವರ್ಣಮವುವರ್ಗಂ ತ**
**ತ್ಪರದೊಂಬತ್ತುಮವರ್ಗಂ**
**ಪರಿಭಾವಿಸೆ ಯೋಗವಾಹಮವು ನಾಲ್ಕೆ ವಲಂ** (ಸೂತ್ರ ೩೩)

ಎಂಬ ಸೂತ್ರದಿಂದ ಕ್ರಮವಾಗಿ ಸ್ವರಾಕ್ಷರಗಳು ಹದಿನಾಲ್ಕು, ವರ್ಗಾಕ್ಷರಗಳು ಇಪ್ಪತ್ತೈದು, ಆ ವರ್ಗಾಕ್ಷರಗಳ ಮುಂದಣ ಅವರ್ಗಾಕ್ಷರಗಳೆಂಬುವು ಒಂಬತ್ತು, ಯೋಗವಾಹಗಳು ನಾಲ್ಕು-ಎಲ್ಲಾ ಐವತ್ತೆರಡಕ್ಷರಗಳೆಂದು ಹೇಳಿ—

**ತಿಳಿ ದೇಶೀಯಮುಮೈದಂ**
**ಕಳೆ ನೀಂ ಋ ಌ ವರ್ಣ ಶ ಷ ವಿಸರ್ಗ ×ಕ್ ೲ ಪ್**
**ಕ್ಷಳನಂ ನಾಲ್ವತ್ತೇೞಾ**
**ಯ್ತೆಳಿ ಶುದ್ಧಗೆಯಚ್ಚಗನ್ನಡಕ್ಕೀ ಕ್ರಮದಿಂ** (ಸೂತ್ರ ೩೪)

ಎಂಬ ಸೂತ್ರದಿಂದ ಕನ್ನಡದಲ್ಲಿ **ದೇಶೀಯಾಕ್ಷರ**ಗಳು **ಱ ೞ ಳ ಎ ಒ** ಎಂಬಿವು ಐದೆಂದು ತಿಳಿಯಬೇಕು. ಈ ಐದಕ್ಷರಗಳು ಹಿಂದೆ ಹೇಳಿದ ಐವತ್ತೆರಡಕ್ಷರಗಳು ಇವು ಕೂಡಿ ಐವತ್ತೇಳಾಗುವುವು. ಅವುಗಳಲ್ಲಿ ಋ ೠ ಌ ೡ ಶ ಕಾರ, ಷ ಕಾರ, ವಿಸರ್ಗ, ಜಿಹ್ವಾಮೂಲೀಯ, ಉಪಧ್ಮಾನೀಯ, ಕ್ಷಳ ಎಂಬ ಹತ್ತು ಅಕ್ಷರಗಳು ಅಚ್ಚ ಕನ್ನಡ ಭಾಷೆಯಲ್ಲಿಲ್ಲವೆಂದು ಅವನ್ನು ಬಿಡಬೇಕು. ಈ ರೀತಿ ತಿಳಿಯುವುದರಿಂದ ಅಚ್ಚಗನ್ನಡವೆಂದರೆ ಸಂಸ್ಕೃತವನ್ನು ಬೆರೆಯಿಸದೆ ಕನ್ನಡ ಭಾಷೆಯಲ್ಲಿ ಶುದ್ಧಾಕ್ಷರಗಳು ನಾಲ್ವತ್ತೇಳಿರುವುವೆಂದು ತಿಳಿಯಬೇಕು— ಎಂದು ಹೇಳಿರುವನು. ಇದು '**ಸಿದ್ಧಾ ಹಿ ಶುದ್ಧಕಾಃ ||೧||**' ಎಂಬ ಸೂತ್ರದ ವಿಚಾರದಲ್ಲಿ ಹೇಳಿರುವ ವರ್ಣವಿಭಾಗಗಳ ಇಯತ್ತೆಗೆ ವಿರುದ್ಧವಾಗಿರುವುದೆಂದು ತೋರುವುದು. ಆದರೂ ಅಲ್ಲಿ ಹೇಳಿರುವುದು ಸಂಸ್ಕೃತ ಶಬ್ದಗತವಾದ ವರ್ಣಗಳ ವಿಷಯಕವೆಂದು ತಿಳಿಯಬೇಕು. **ದರ್ಪಣಕಾರನು** ಹೇಳಿರುವುದಾದರೊ ಸಂಸ್ಕೃತ ಶಬ್ದಗಳನ್ನು ಕನ್ನಡ ಭಾಷೆಯಲ್ಲಿ ಉಪಯೋಗಿಸುವುದೇ ಇಲ್ಲವೆಂದು ಪ್ರತಿಜ್ಞೆಯನ್ನು ಮಾಡಿಕೊಂಡು ಕವಿತೆಯನ್ನು ಮಾಡುವವರ ಅಭಿಪ್ರಾಯವನ್ನನುಸರಿಸಿ ಹೇಳಿರುವನೆಂದು ತಿಳಿಯ

ಬೇಕು. ಹೀಗೆ ಹೇಳುವುದು ಕೆಲವರ ಕೇವಲ ಸಂಕೇತ ಸಿದ್ಧವಾದುದರಿಂದ ಸರ್ವಸಮ್ಮತವಾದ ಶಾಸ್ತ್ರದಲ್ಲಿ ಹಾಗೆ ಪ್ರಯೋಗಗಳನ್ನು ನಿರೋಧಿಸಿ ಆ ವರ್ಣಗಳನ್ನು ಬಿಡುವುದು ಉಚಿತವಲ್ಲವೆಂದು ಶಾಸನಕಾರನು ವರ್ಣಗಳನ್ನೆಲ್ಲಾ ಇಲ್ಲಿ ಹೇಳಿರುವನೆಂದು ತಿಳಿಯಬೇಕು.

**ಅವತಾರಿಕೆ ೮**

ಹೀಗೆ ಉಕ್ತವಾದ ವರ್ಣಸಮುದಾಯಾತ್ಮಕ ಶಬ್ದಗಳೆ ಪ್ರಯೋಗದಲ್ಲಿರುವುವು. ಇಂತಹ ಶಬ್ದಗಳು **ಸುಬಂತ-ತಿಙಂತ***ಗಳೆಂದು ಎರಡು ಬಗೆಯಾಗಿರುವುವು. ಅವುಗಳಲ್ಲಿ **ಸುಬಂತ**ಗಳೆಂದರೆ ನಾಮವಿಭಕ್ತಿಗಳನ್ನು ಪಡೆದಿರುವ ಶಬ್ದಗಳು. **ತಿಙಂತ**ವೆಂದರೆ ಆಖ್ಯಾತ ಪ್ರತ್ಯಯಗಳನ್ನು ಪಡೆದಿರುವ ಶಬ್ದಗಳು. ಇವುಗಳಲ್ಲಿ ಮೊದಲು ಸುಬಂತಪ್ರಕರಣವನ್ನು ಹೇಳುವುದರಿಂದ ಅಲ್ಲಿ 'ಸುಪ್' ಪ್ರತ್ಯಯವನ್ನು ಸಾಮಾನ್ಯವಾಗಿ ವಿಧಿಸಲು ಮಾಡಿರುವ '**ಲಿಂಗಾತ್ ಸುಪ್ ‖ ೨೦೩ ‖**' ಎಂಬ ಸೂತ್ರದಲ್ಲಿರುವ ಲಿಂಗಪದಕ್ಕೆ ಅರ್ಥವಾಗದೆ ಆ ಸೂತ್ರಾರ್ಥವು ಆಗುವದಿಲ್ಲವೆಂದು ಲಿಂಗಸಂಜ್ಞಾ ಸೂತ್ರಗಳನ್ನು ಹೇಳಬೇಕೆಂಬಿಚ್ಛೆಯಿಂದ ಮೊದಲು ಸಾಮಾನ್ಯವಾಗಿ ಲಿಂಗಸಂಜ್ಞೆಯನ್ನು ಹೇಳಲು ಪ್ರಾರಂಭಿಸುತ್ತಾನೆ.

**ಸೂತ್ರ ‖ ಅರ್ಥವಲ್ಲಿಂಗಂ ‖ ೮ ‖**

**ಅರ್ಥ ‖ ಅರ್ಥವುಳ್ಳ ಶಬ್ದವು ಲಿಂಗಸಂಜ್ಞೆಯುಳ್ಳುದಾಗುವುದು.**

**ಉದಾಹರಣೆ—** ನೆಲ, ಪೊಲ, ಘಟ, ಪಟ; ತಂಬುಲಿಗ, ಸರವಂದಿಗ, ಔಪಗವ, ಗ್ರೈವೇಯಕ; ಅರಮನೆ, ಸೂಳೆಗೇರಿ, ರಾಜಪುರುಷ, ಬಹುಧನ; ಕಾಣ್ಕೆ, ಪೂಣ್ಕೆ, ಕುಂಭಕಾರ, ಯಜಮಾನ, ಇತ್ಯಾದಿ.

**ಪ್ರಯೋಜನಂ ‖ 'ಲಿಂಗಾತ್ ಸುಪ್ ‖ ೨೦೩ ‖'** ಮೊದಲಾದ 'ಲಿಂಗ'ಪದವುಳ್ಳ ಸೂತ್ರಗಳಲ್ಲಿ 'ಲಿಂಗ' ಪದಕ್ಕೆ ಇಂತಹ ಶಬ್ದಗಳೇ ಅರ್ಥವೆಂದು ತಿಳಿಯಬೇಕು.

**ವಿಚಾರ ೮**

ಈ ಸೂತ್ರದಲ್ಲಿ ಅರ್ಥವತ್ತಾದ ಶಬ್ದ ಸಾಮಾನ್ಯಕ್ಕೆ **ಲಿಂಗ**ಸಂಜ್ಞೆಯನ್ನು ಹೇಳಿರುವುದು. ಇಲ್ಲಿ 'ಅರ್ಥ' ಶಬ್ದಕ್ಕೆ ಅನೇಕಾರ್ಥಗಳಿದ್ದರೂ 'ಅಭಿಧೇಯ'ವೆ ಅರ್ಥವೆಂದು ತಿಳಿಯಬೇಕು. ಅಭಿಧೇಯವೆಂದರೆ— ( ಅಭಿಧಾತುಂ ವಕ್ತುಂ ಅರ್ಹಃ ) ಎಂಬ ವ್ಯುತ್ಪತ್ತಿಯಿಂದ ಶಬ್ದಗಳಿಂದ ವಾಚ್ಯವಾದುದೆಂದಾಗುವುದು. ಇದು ಲೋಕ ವ್ಯವಹಾರದಿಂದಲೆ ತಿಳಿದುಕೊಳ್ಳತಕ್ಕುದು. ಇಂತಹ ಅರ್ಥವುಳ್ಳ ಶಬ್ದಸಾಮಾನ್ಯಕ್ಕೂ **ಲಿಂಗ**ಸಂಜ್ಞೆ ಬರುವುದೆಂದು ಈ ಸೂತ್ರದಿಂದ ಸೂಚಿತವಾಗುವುದು. ಹೀಗೆ ಸೂಚಿತವಾಗಲು ಕ್ರಿಯಾರ್ಥಕಗಳಾದ **ಧಾತು**ಗಳಿಗೂ **ಲಿಂಗ**ಸಂಜ್ಞೆ ಪ್ರಾಪ್ತವಾಗುವುದು. ಆದುದರಿಂದಲೆ ತಿನ್ನಂ, ಉಣ್ಣಂ, ಕೊಲ್ಲಂ, ಬಯ್ಯಂ-ಎಂಬುವೆ ಮೊದಲಾದ ಕೆಲವೆಡೆಗಳಲ್ಲಿ ಲಿಂಗಾಂತ್ಯಕ್ಕೆ ವಿಧಿಸಿರುವ ದ್ವಿತ್ವವು ಧಾತ್ವಂತಕ್ಕೂ ಬರುವುದೆಂದು ತಿಳಿಯಬೇಕು. ಹೀಗೆ

[* 'ಸುಪ್' ಎಂಬುದು ಸಂಸ್ಕೃತನಾಮಗಳಿಗೆ ಹಚ್ಚುವ ವಿಭಕ್ತಿಪ್ರತ್ಯಯಗಳ ಮೊದಲಿನ ಪ್ರತ್ಯಯದ ಮೊದಲನೆಯ ಅಕ್ಷರ ಮತ್ತು ಕಡೆಯ ಪ್ರತ್ಯಯದ ಕೊನೆಯ ಅಕ್ಷರ ಇವುಗಳನ್ನು ಕೂಡಿಸಿ ಮಾಡಿದ 'ಪ್ರತ್ಯಹಾರ' ವೆಂದೂ, ಇದರಂತೆ "ತಿಙ್" ಎಂಬುದು ಆಖ್ಯಾತಪ್ರತ್ಯಯಗಳಿಂದ ಆದ 'ಪ್ರತ್ಯಾಹಾರ' ವೆಂದೂ ತಿಳಿಯಬೇಕು— ಸಂಪಾದಕ ]

ಧಾತುಗಳ ಮೇಲೆಯೂ '**ಲಿಂಗಾತ್ ಸುಚ್** ‖ ೨೦೩ ‖' ಎಂಬ ಸೂತ್ರದಿಂದ ವಿಧಿಸುವ 'ಸು' ಪ್ರತ್ಯಯವು ಪ್ರಸಕ್ತವಾಗುವುದು. ಆದರೆ 'ಬ್ರಾಹ್ಮಣೇಭ್ಯೋ ದಧಿ ದೀಯತಾಂ ತಕ್ರಂ ಕೌಂಡಿನ್ಯಾಯ' ಎಂಬ 'ತಕ್ರಕೌಂಡಿನ್ಯನ್ಯಾಯ' ದಂತೆ ಸಾಮಾನ್ಯ ವಿಶೇಷಗಳಿಗೆ ಬಾಧ್ಯ-ಬಾಧಕ ಭಾವಗಳನ್ನು ಹೇಳುವುದರಿಂದ ಪ್ರಕೃತದಲ್ಲಿ ಸಾಮಾನ್ಯವಾದ ಸುಪ್-ವಿಧಿಯನ್ನು ಬಾಧಿಸಿ, '**ಧಾತೋರೇಕಾನೇಕತ್ವೇಽಮರಯಿರೆನೆವವೋಽನ್ಯಯುಷ್ಮದಸ್ಮಾಸು ಕರ್ತರಿ** ‖ ೪೪೨ ‖' ಎಂಬ ಸೂತ್ರದಿಂದ ವಿಧಿಸುವ ತಿಙ್-ಪ್ರತ್ಯಯಗಳೆ ಬರುವುದರಿಂದ ಇಲ್ಲಿ ಧಾತುಗಳಿಗೆ ಲಿಂಗಸಂಜ್ಞೆಯಿದ್ದರೂ ದೋಷವಿಲ್ಲವೆಂದು ತಿಳಿಯಬೇಕು.

**ಲಿಂಗವೆಂದರೇನು?**

ಇಲ್ಲಿ **ಲಿಂಗ**ವೆಂದರೆ— '**ಲೀನಮರ್ಥಂ ಗಮಯತೀತಿ ಲಿಂಗಂ**' ಎಂಬ ನಿರ್ವಚನದಿಂದ ವಾಚಕಸಾಮಾನ್ಯವು ಲಿಂಗವೆಂದರ್ಥವಾಗುವುದು. ಇಂತಹ ಲಿಂಗವು **ನಾಮರೂಪ, ಧಾತುರೂಪ**ಗಳೆಂದೆರಡು ಬಗೆಯಾಗಿರುವುದು. ಇವುಗಳಲ್ಲಿ ನಾಮರೂಪವಾದ ಲಿಂಗವು ಹೇಗೆ ಸಪ್ತವಿಭಕ್ತಿಗಳಲ್ಲಿಯೂ ಏಕಾನೇಕ ವಚನಗಳಲ್ಲಿಯೂ ಕರ್ತೃ, ಕರ್ಮ, ಕರಣ, ಸಂಪ್ರದಾನ, ಅಪಾದಾನ, ಅಧಿಕರಣ, ಎಂಬ ಷಟ್ಕಾರಕರೂಪ ಪ್ರತ್ಯಯಾರ್ಥವಿಶಿಷ್ಟವಾಗಿಯೂ ಅವ್ಯಕ್ತವಾಗಿಯೂ ಅನುಸ್ಯೂತವಾಗಿಯೂ ಇರುವ ಅರ್ಥವನ್ನು ಬೋಧಿಸುವುದೋ ಹಾಗೆ ಧಾತುರೂಪ ಲಿಂಗವು ಪ್ರಥಮ, ಮಧ್ಯಮ, ಉತ್ತಮವೆಂಬ ಪುರುಷಗಳಲ್ಲಿಯೂ ಏಕಾನೇಕ ವಚನಗಳಲ್ಲಿಯೂ ಕರ್ತೃ, ಕರ್ಮ, ಮೊದಲಾದ ಆಖ್ಯಾತ ಪ್ರತ್ಯಯಾರ್ಥ ವಿಶಿಷ್ಟವಾಗಿಯೂ ಕಾಲತ್ರಯ ಸಾಧಾರಣವಾಗಿಯೂ ಇರುವ ಅನುಸ್ಯೂತಕ್ರಿಯಾಮಾತ್ರಾರ್ಥವನ್ನು ಬೋಧಿಸುವುದು. ಆದುದರಿಂದಲೆ ಧಾತುವಿಗೂ ಇಲ್ಲ ಲಿಂಗಸಂಜ್ಞೆ ಹೇಳಲ್ಪಟ್ಟಿರುವುದು. ಈ ವಿಷಯದಲ್ಲಿ **ದರ್ಪಣಕಾರನು**—

ಕ್ರಿಯೆಯಂ ನುಡಿಯದುದು ವಿಭ<br>
ಕ್ತಿಯನಿಲ್ಲದುದರ್ಥಮುಳ್ಳುದಂತದು ಲಿಂಗಂ<br>
ನಿಯತಚತುರ್ಭೇದಮುದಾ<br>
ರಯೆ ಕೃತ್ತದ್ಧಿತ ಸಮಾಸ ನಾಮಸ್ಥಿತಿಯಿಂ

ಎಂಬ ಸೂತ್ರದಿಂದ ಸಾಮಾನ್ಯವಾಗಿ ಕ್ರಿಯಾವಾಚಕವಲ್ಲದೆಯೂ ಸಪ್ತವಿಭಕ್ತಿಗಳಿಲ್ಲದೆಯೂ ನಿರರ್ಥಕವಲ್ಲದೆಯೂ ಇರುವ ಶಬ್ದವು ಲಿಂಗವಾಗುವುದೆಂದು ಹೇಳಿ ಆ ಲಿಂಗವು **ಕೃಲ್ಲಿಂಗ, ತದ್ಧಿತಲಿಂಗ, ಸಮಾಸಲಿಂಗ, ನಾಮಲಿಂಗ** ಎಂದು **ನಾಲ್ಕು** ಬಗೆಯಾಗಿರುವುದೆಂದು ಹೇಳಿರುವನು. ಅಲ್ಲಿ ಕ್ರಿಯಾವಾಚಕವಲ್ಲದೆಯೂ ಎಂದು ಹೇಳಿರುವುದರಿಂದ ಧಾತುಗಳಿಗೂ ಸಪ್ತವಿಭಕ್ತಿಗಳನಿಲ್ಲದೆಯೂ ಎಂದು ಹೇಳಿರುವುದರಿಂದ ಸುಪ್-ವಿಭಕ್ತ್ಯಂತ ಪದಗಳಿಗೂ ಹಾಗು ವಿಭಕ್ತಿಗಳಿಗೂ ಲಿಂಗಸಂಜ್ಞೆಯಿಲ್ಲವೆಂದು ತೋರುವುದು. ಆದರೆ **ದರ್ಪಣಕಾರ**ನಿಗೆ ಧಾತುಗಳ ವಿಷಯದಲ್ಲಿ ಲಿಂಗಸಂಜ್ಞಾಪ್ರಯುಕ್ತವಾದ ಕಾರ್ಯಗಳಾವುವೂ ಇಲ್ಲವಾದುದರಿಂದ ಅವಕ್ಕೆ ನಿಷೇಧ ಮಾಡಿರುವನೆಂದು ತಿಳಿಯುವದು. ವಿಭಕ್ತ್ಯಂತ ಪದಗಳಿಗಾಗಲಿ ವಿಭಕ್ತಿಗಳಿಗಾಗಲಿ ಲಿಂಗಸಂಜ್ಞೆಯನ್ನು ಮಾಡಲು ಅವುಗಳ ಮೇಲೆ ತಿರಿತಿರಿಗಿ ಸುಪ್-ವಿಭಕ್ತಿ ಪ್ರತ್ಯಯಗಳು ಪ್ರಸಕ್ತವಾಗುವುದರಿಂದ ಅನವಸ್ಥಾದೋಷವು ಬರುವುದೆಂದು ಅವಕ್ಕೂ ನಿಷೇಧಿಸಿರುವನು.

**'ಪ್ರಾತಿಪದಿಕ' 'ಲಿಂಗ' ಸಂಜ್ಞೆಗಳು**

ಸಂಸ್ಕೃತ ವ್ಯಾಕರಣದಲ್ಲಿ 'ಲಿಂಗ' ಸಂಜ್ಞೆಗೆ ಬದಲಾಗಿ '**ಪ್ರಾತಿಪದಿಕ**' ಸಂಜ್ಞೆಯನ್ನು '**ಅರ್ಥವದಧಾತುರಪ್ರತ್ಯಯಃ ಪ್ರಾತಿಪದಿಕಂ** ||೧-೨-೪೫||' '**ಕೃತ್ತದ್ಧಿತ ಸಮಾಸಾಶ್ಚ**||೧-೨-೪೬||' ಎಂಬ ಸೂತ್ರಗಳಿಂದ ಮಾಡಿರುವರು. ಅಲ್ಲಿ 'ಅಭರ್ವ' 'ಅಪರ್ಚ' ಎಂಬ ಧಾತುರೂಪಗಳಲ್ಲಿ ಪ್ರಾತಿಪದಿಕ ಸಂಜ್ಞೆ ಬರಲು 'ನ' ಲೋಪವೂ 'ಕಾಂಡೇ' 'ಕುಂಡೇ'ಎಂಬ ವಿಭಕ್ತ್ಯಂತ ಪದಗಳಲ್ಲಿ ಹ್ರಸ್ವಾದೇಶವೂ 'ರಾಮೇಷು' 'ಹರಿಷು' ಎಂಬ ಪದಗಳಲ್ಲಿ ವಿಭಕ್ತಿ ಮಾತ್ರಕ್ಕೆ ಪ್ರಾತಿಪದಿಕ ಸಂಜ್ಞೆ ಬರಲು ಅವುಗಳ ಮೇಲೆಯೂ ಸುಪ್ ಪ್ರತ್ಯಯವು ಪ್ರಸಕ್ತವಾಗಿ ತದಂತವು ಪದವಾಗುವುದರಿಂದ ಅದರ ಆದಿಯ ಸಕಾರಕ್ಕೆ '**ಸಾತ್ಪದಾದ್ಯೋಃ** ||೮-೩-೧೧೧||' ಎಂಬ ಸೂತ್ರದಿಂದ ಷತ್ವನಿಷೇಧವು ಬರುವುದು. ಹೀಗೆ ಎಲ್ಲಾ ಪ್ರತ್ಯಯಾಂತ ಶಬ್ದಗಳಿಗೂ ನಿಷೇಧವು ಪ್ರಾಪ್ತವಾದರೆ ಕೃದಂತ ತದ್ಧಿತಾಂತಗಳಿಗೆ ಮಾತ್ರ ಎರಡನೆಯ ಸೂತ್ರದಿಂದ ವಿಧಿಸಿರುವುದೆಂದು ತಿಳಿಯಬೇಕು. ಆದುದರಿಂದ **ಲಿಂಗ**ವೆಂಬುದು 'ಸುಪ್' ಉತ್ಪತ್ತಿಗೆ ಸಾಧನೀಭೂತವಾದ '**ಪ್ರಾತಿಪದಿಕ**'ವೆಂಬ ನಾಮಾಂತರವುಳ್ಳ ಶಬ್ದವೆಂದು ತೋರುವುದು.

**ಕೃತ್–ತದ್ಧಿತ–ಸಮಾಸ–ನಾಮಗಳು**

ಲಿಂಗವು '**ಕೃತ್-ತದ್ಧಿತ-ಸಮಾಸ-ನಾಮ**' ಎಂಬ ಭೇದಗಳಿಂದ ನಾಲ್ಕು ಬಗೆಯಾಗಿರುವುದು. ಇವುಗಳಲ್ಲಿ 'ಕೃತ್-ತದ್ಧಿತ-ಸಮಾಸ' ಸಂಜ್ಞೆಗಳು ಮುಂದೆ ಹೇಳಲ್ಪಡುವುವು. ಇದರಲ್ಲಿ ಕೃತ್ಸಂಜ್ಞಕ ಪ್ರತ್ಯಯಾಂತವಾದುದು **ಕೃಲ್ಲಿಂಗ**ವೆನಿಸಿಕೊಳ್ಳುವುದು. ತದ್ಧಿತಸಂಜ್ಞಕ ಪ್ರತ್ಯಯಾಂತವಾದುದು **ತದ್ಧಿತಲಿಂಗ**ವೆಂಬುದು. ಏಕಾರ್ಥೀಭಾವಲಕ್ಷಣ ಸಾಮರ್ಥ್ಯದಿಂದ **ಕಥಂಚಿ**ದೈಕಪದ್ಯವನ್ನು ಹೊಂದಿದ ಸುಬಂತ ಸಮುದಾಯ ರೂಪಪ್ರಕೃತಿಮಯವಾದ ಸಮಾಸಾಂತ ಪ್ರತ್ಯಯ ವಿಶಿಷ್ಟವಾಗಿಯೂ ಅವಿಶಿಷ್ಟವಾಗಿಯೂ ಇರುವ ಶಬ್ದಸ್ವರೂಪವು **ಸಮಾಸ**ವೆಂಬುದು. ಇಂತಹ ಮೂರು ಬಗೆಯಾದ ಲಿಂಗಕ್ಕಿಂತಲೂ ಅತಿರಿಕ್ತವಾದ **ತದ್ಭವ-ತತ್ಸಮ-ದೇಶ್ಯ** ಭೇದಗಳಿಂದ ಮೂರು ಬಗೆಯಾಗಿ ಪ್ರಸಿದ್ಧವಾಗಿರುವ ಶಬ್ದ ಸಮೂಹವು **ನಾಮಲಿಂಗ**ವೆಂಬುದು. ಇಲ್ಲಿ **ತದ್ಭವ**ವೆಂದರೆ ಸಾಮಾನ್ಯಲಕ್ಷಣದಿಂದಾಗಲಿ ವಿಶೇಷಲಕ್ಷಣದಿಂದಾಗಲಿ ನಿಪಾತನದಿಂದಾಗಲಿ ಸಮುದಾಯದಲ್ಲಿ ಅಥವಾ ಏಕದೇಶದಲ್ಲಿ ವಿಕಾರವನ್ನು ಹೊಂದಿದ ಸಂಸ್ಕೃತ ಶಬ್ದಗಳೆಂದು ತಿಳಿಯಬೇಕು. **ತತ್ಸಮ**ವೆಂದರೆ ಇಂತಹ ಆವ ವಿಕಾರವನ್ನು ಹೊಂದದೆ ಸಂಸ್ಕೃತದಲ್ಲಿಯೂ ಭಾಷೆಯಲ್ಲಿಯೂ ಸಮವಾಗಿರುವ ಶಬ್ದಗಳು. **ದೇಶ್ಯ**ವೆಂದರೆ ಸಂಸ್ಕೃತ ಶಬ್ದಗಳಲ್ಲದೆ ಭಾಷೆಯಲ್ಲಿ ಪ್ರಸಿದ್ಧವಾದ ಶಬ್ದಗಳು. ಹೀಗೆ ಅವಾಂತರಾನೇಕಭೇದಭಿನ್ನವಾಗಿದ್ದರೂ ಸಾಮಾನ್ಯವಾಗಿ ಲಿಂಗವು ನಾಲ್ಕು ಬಗೆಯಾಗಿರುವುದೆಂದು ತಿಳಿಯುವುದು. ಇದು ಸಂಸ್ಕೃತದಲ್ಲಿಯೂ ಸಮ್ಮತವಾಗಿರುವುದು. ಆದರೆ ಕೃತ್-ತದ್ಧಿತ-ಸಮಾಸಗಳಲ್ಲಿ ಏನೂ ಭೇದವಿಲ್ಲ. ನಾಮವಿಷಯದಲ್ಲಾದರೊ ಸಂಜ್ಞಾಶಬ್ದಗಳು ವ್ಯುತ್ಪನ್ನ-ಅವ್ಯುತ್ಪನ್ನಗಳೆಂದು ಮತಭೇದದಿಂದ ಎರಡು* ಬಗೆಯಾಗಿರುವುವು. ಅವುಗಳಲ್ಲಿ

[ ಸಂಸ್ಕೃತ ವ್ಯಾಕರಣಾನುಸಾರವಾಗಿ **ವ್ಯುತ್ಪನ್ನ-ಅವ್ಯುತ್ಪನ್ನ**ಗಳ ಒಳಭೇದಗಳು ಮುಂದೆ ಕಾಣಿಸಿದಂತೆ ಇರುವುವು: (ಅ) **ವ್ಯುತ್ಪನ್ನ**: (೧) **ಕೃತ್**, (೨) **ತದ್ಧಿತ**, (೩) ಸಮಾಸ: ಇವಕ್ಕೆ **ಕ್ರಮೋದಾಹರಣೆ**: (೧) **ಕರ್ತಾ, ಭಾಸುರ**; (೨) ಬುದ್ಧಿಮಾನ್, **ಘಟತ್ವ**; (೩) ರಾಜಪುರುಷ, **ರಾಮಲಕ್ಷ್ಮಣ**. (ಆ) **ಅವ್ಯುತ್ಪನ್ನ**: (೧) **ವಾಚಕ**, (೨) **ದ್ಯೋತಕ** ( **ಅಥವಾ ನಿಪಾತ** ): ಇವಕ್ಕೆ **ಕ್ರಮೋದಾಹರಣೆ**: (೧) **ಘಟ, ತಂಡುಲ**; (೨) **ಚ, ತು**, ನ ಇತ್ಯಾದಿ —ಸಂಪಾದಕ]

ಅವ್ಯುತ್ಪತ್ತಿ ಪಕ್ಷವಿಷಯದಲ್ಲಿ ಭಾಷೆಗೂ ಸಂಸ್ಕೃತಕ್ಕೂ ವಿಶೇಷವಿಲ್ಲ. ವ್ಯುತ್ಪತ್ತಿ ಪಕ್ಷದಲ್ಲಾದರೊ ಅವು 'ಉಣಾದಿ' ಪ್ರತ್ಯಯಗಳಿಂದ ವ್ಯುತ್ಪನ್ನಗಳಾಗಿದ್ದರೂ ಆ ಪ್ರತ್ಯಯಗಳಿಗೆ ಕೃತ್ಸಂಜ್ಞೆಯಿಲ್ಲವಾದುದರಿಂದ ಕೃಲ್ಲಿಂಗಕ್ಕಿಂತಲು ಬೇರೆಯೆಂದು ತಿಳಿಯಬೇಕು. ಅಂತಹ ಸಂಸ್ಕೃತ ಪ್ರಾತಿಪದಿಕಗಳೆ ಭಾಷೆಯಲ್ಲಿಯೂ ಪ್ರಯೋಗಕ್ಕೆ ಅರ್ಹವಾಗಿರುವುವು. ಹೀಗೆ ಎರಡು ಬಗೆಯಾಗಿದ್ದರೂ ಭಾಷೆಯಲ್ಲಿ ಸಾಮಾನ್ಯವಾಗಿ ಅವ್ಯುತ್ಪತ್ತಿ ಪಕ್ಷವೊಂದನ್ನೆ ಅಂಗೀಕರಿಸಿರುವರು.

ಈಗ ವೃತ್ತಿಯಲ್ಲಿ, ಸಾಮಾನ್ಯವಾಗಿ ನಾಲ್ಕು ಬಗೆಯಾಗಿರುವ ಲಿಂಗಗಳಿಗೆ ಕ್ರಮವಾಗಿ ಉದಾಹರಣೆಗಳನ್ನು ಕೊಡಲು ಮೊದಲು ಪ್ರಚುರ ಪ್ರಯೋಗಕ್ಕೆ ವಿಷಯವಾದ ನಾಮಲಿಂಗದ ಉದಾಹರಣೆಗೆಂದು ಕಾರ್ಣಾಟಕ ಶಬ್ದಗಳು ಉದಾಹರಿಸಲ್ಪಟ್ಟಿರುವುವು. 'ನೆಲ, ಪೊಲ' ಇತ್ಯಾದಿ. ಹಾಗೆಯೆ ಸಂಸ್ಕೃತವನ್ನೂ ಉದಾಹರಿಸಿರುವನು. 'ಘಟ, ಪಟ' ಇತ್ಯಾದಿ. ಹೀಗೆ ತದ್ಧಿತ, ಸಮಾಸ, ಕೃತ್ತುಗಳಲ್ಲಿ ಕ್ರಮವಾಗಿ ಕಾರ್ಣಾಟಕ-ಸಂಸ್ಕೃತಗಳಲ್ಲಿ ಪ್ರತ್ಯೇಕವಾಗಿ ಎರಡೆರಡು ಉದಾಹರಣೆಗಳು ಕೊಡಲ್ಪಟ್ಟಿವೆಯೆಂದು ತಿಳಿಯಬೇಕು.

ಆದರೆ ಈ ಸೂತ್ರದಲ್ಲಿ 'ಅರ್ಥವತ್' ಎಂದು ಹೇಳಿರುವುದರಿಂದ 'ಧನಂ, ವನಂ' ಮೊದಲಾದ ಶಬ್ದಗಳಲ್ಲಿರುವ ಧನ್, ವನ್ ಎಂಬ ಅನರ್ಥಕ ಭಾಗಗಳಿಗೆ ಲಿಂಗಸಂಜ್ಞೆ ಬರುವುದಿಲ್ಲ. ಇದರಿಂದ ಲಿಂಗಾಂತ್ಯಕ್ಕೆ ವಿಧಿಸುವ ದ್ವಿತ್ವವು ಪ್ರಸಕ್ತವಾಗುವುದಿಲ್ಲವೆಂದು ತಿಳಿಯಬೇಕು.

**ದರ್ಪಣಕಾರ**ನು ಲಿಂಗವಿಷಯದಲ್ಲಿ ಹೇಳಿರುವ ಸಾಮಾನ್ಯ ಸೂತ್ರಕ್ಕೂ ಇಲ್ಲಿ ಹೇಳಿರುವ ಸಾಮಾನ್ಯ ಸೂತ್ರಕ್ಕೂ ಧಾತು ವಿಷಯವನ್ನು ಬಿಟ್ಟು ಉಳಿದ ವಿಷಯಗಳಲ್ಲಿ ಏನೂ ವ್ಯತ್ಯಾಸವಿರುವುದಿಲ್ಲ. ಆದರೆ ಕೃಲ್ಲಿಂಗ ವಿಷಯದಲ್ಲಿ ಭೂತಭವಿಷ್ಯತ್ಕಾಲದ ಕ್ರಿಯಾವಾಚಕ ಪದಗಳು, ಅವುಗಳಲ್ಲಿ ಅಂತರ್ಗತವಾದ ವಿಭಕ್ತಿಪ್ರತ್ಯಯಗಳನ್ನು ತಮ್ಮ ತಮ್ಮ ಆಗಮದೊಡನೆ ಕಳೆಯಲು, ಕೃಲ್ಲಿಂಗವಾಗುವುವೆಂದು—

> ಭೂತಭವಿಷ್ಯತ್ ಕ್ರಿಯೆಗಳು
> ಪೇತವಿಭಕ್ತಿಗಳನುಬಂಯೆ ಕೃತ್ತುವ್ಪವಸಂ
> ಭೂತಂ ಸಂಪ್ರತಿ ವಿಧಿಗಳೊ
> ಳಾ ತೆಱದಿಂ ಮಧ್ಯಮೋತ್ತಮಕ್ರಿಯೆಗಳೊಳಂ (ಸೂತ್ರ ೭೩)

ಎಂಬ ಸೂತ್ರದಿಂದ ವಿವರಿಸಲ್ಪಟ್ಟಿರುವುದು. ಮತ್ತು ಕ್ರಿಯಾವಾಚಕಗಳಾದ ಸಂಸ್ಕೃತ ಭಾವವಚನಗಳಿಗೆ 'ಇಸು' ಪ್ರತ್ಯಯವನ್ನು ಸೇರಿಸಿ ಕನ್ನಡದಲ್ಲಿ ಕೃಲ್ಲಿಂಗವನ್ನು ಮಾಡುವರೆಂದು—

> ವಿನುತಕ್ರಿಯಾತ್ಮಕಂಗಳು
> ಮೆನಿಸುವ ಸಂಸ್ಕೃತದ ಭಾವವಚನಂಗಳನಾ
> ಯ್ದನಿತರ್ಕೆ ಮಿಸು ಪ್ರತ್ಯಯ
> ವನೆ ಪತ್ತಿಸಿ ನಿಱಿಸೆ ಬರ್ಕುಮಾ ಕೃಲ್ಲಿಂಗಂ (ಸೂತ್ರ ೭೪)

ಎಂಬುದರಿಂದ ಸೂಚಿಸಲ್ಪಡುವುದು. ಮತ್ತು ಅನುಕರಣಗಳಿಗೂ ಲಿಂಗಸಂಜ್ಞೆಯುಂಟೆಂದು ಹೇಳಿ—

> ಕ್ಷಿತಿಯೊಳೆ ರೂಢಾನ್ವರ್ಥಾಂ
> ಕಿತಮೆಂದಾ ನಾಮಮುಱಿಗೆ ಮೂದೆಱನಸಮಾ
> ಸತೆಯೊಳ್ ನೆಲಸಿರ್ಪುದು ನಿ
> ಶ್ಚಿತನಾಮಂ ಪಂಚವರ್ಣಕೃತಪರಿಮಾಣಂ (ಸೂತ್ರ ೭೬)

ಎಂಬ ಸೂತ್ರದಿಂದ ನಾಮಗಳು **ರೂಢ**ನಾಮವೆಂಮೂ **ಅನ್ವರ್ಥ**ನಾಮವೆಂಮೂ **ಅಂಕಿತ**ನಾಮವೆಂದೂ ಮೂರು ತೆರನಾಗಿರುವುವು. ಇವುಗಳಲ್ಲಿ **ರೂಢ**ನಾಮವೆಂದರೆ ಪ್ರಸಿದ್ಧತರವಾಗಿರುವುದು. **ಅನ್ವರ್ಥ**ನಾಮವೆಂದರೆ ಗುಣಾನುರೂಪ-ಅರ್ಥಾನುರೂಪವೆಂದು ಎರಡು ತೆರನಾಗಿರುವುವು. **ಅಂಕಿತ**ನಾಮವೆಂದರೆ ಹೆಸರನ್ನಿಡುವನಿಷ್ಟದಿಂದ ಸಂಕೇತ ಮಾಡಿ ಹೇಳುವುದು. ದಿಟವ ನಾಮವೆಂದರೆ ಸಮಾಸವಿಲ್ಲದೆ ಒಂದಕ್ಷರ ಮೊದಲು ಐವಕ್ಷರದ ವರೆಗೆ ಇರುವ ಹೆಸರುಗಳೆಂದು ವಿವರಿಸಿರುವುದು. ಇವೆಲ್ಲಕ್ಕೂ **ಶಬ್ದಾನುಶಾಸನಕಾರ**ನು ಹೇಳಿರುವ ‘ **ಅರ್ಥವಲ್ಲಿಂಗಂ || ೮ ||** ’ ಎಂಬ ಸೂತ್ರದಿಂದಲೆ ಲಿಂಗಸಂಜ್ಞೆಯುಂಟಾಗುವುದೆಂದು ತಿಳಿಯಬೇಕು.

**ಅವತಾರಿಕೆ ೯**

ಹೀಗೆ ಸಾಮಾನ್ಯವಾಗಿ ಹೇಳಿರುವ ‘ ಅರ್ಥವಲ್ಲಿಂಗಂ ’ ಎಂಬ ಸೂತ್ರದಿಂದ ಅರ್ಥವತ್ತಾದ ಎಲ್ಲಾ ಶಬ್ದಗಳಿಗೂ ಲಿಂಗಸಂಜ್ಞೆ ಪ್ರಾಪ್ತವಾಗಲು ‘ಉಚ್ಚೈಃ, ನೀಚೈಃ, ಸ್ವರ್’ ಮೊದಲಾದ ಸಂಸ್ಕೃತಾವ್ಯಯಗಳಿಗೂ ‘ರಣತ್, ಪಠತ್’ ಮೊದಲಾದ ಸಂಸ್ಕೃತ ‘ಶತೃ’ ಪ್ರತ್ಯಯಾಂತಗಳಿಗೂ ‘ತ್ಯದ್, ತದ್’ ಮೊದಲಾದ ‘ತ್ಯದಾದಿ’ ಶಬ್ದಗಳಿಗೂ ಲಿಂಗಸಂಜ್ಞೆ ಪ್ರಸಕ್ತವಾಗುವುದರಿಂದ ಅವುಗಳಿಗೂ ಭಾಷೆಯಲ್ಲಿ ಪ್ರಯೋಗಾರ್ಹತೆಯುಂಟಾಗುವುದೆಂದು ಅಂತಹ ಪ್ರಯೋಗವನ್ನು ನಿರೋಧಿಸುವುದಕ್ಕೆ ಮುಂದಿನ ಸೂತ್ರದಿಂದ ಲಿಂಗಸಂಜ್ಞೆ ನಿಷೇಧಿಸಲ್ಪಡುವುದು. ಅದರಿಂದ ಸಂಸ್ಕೃತಾವ್ಯಯಗಳಿಗೆಲ್ಲ ನಿಷೇಧವು ಪ್ರಾಪ್ತವಾದರೆ ಕೆಲವು ಅವ್ಯಯಗಳಿಗೆ ಮಾತ್ರ ಲಿಂಗಸಂಜ್ಞೆ ಅವಶ್ಯಕವೆಂದು ಹೇಳುತ್ತಾನೆ.

**ಸೂತ್ರಂ || ಇಹಾದಯಃ || ೯ ||**

**ಅರ್ಥ || ಇಹ ಎಂಬುದೆ ಮೊದಲಾದ ಶಬ್ದಗಳು ಲಿಂಗಸಂಜ್ಞಕಗಳಾಗುವುವು.**

**ಉದಾಹರಣೆ ||** ಇಹ, ಅಮುತ್ರ, ಪರತ್ರ, ಉಭಯತ್ರ, ಅಸ್ತಿ, ಸ್ವಸ್ತಿ, ನಾಸ್ತಿ, ವೃಥಾ, ಮುಧಾ, ಝುಡಿತಿ— ಇತ್ಯಾದಿ.

**ವಿಚಾರ ೯**

ಇಲ್ಲಿ ‘ ಇಹಾದಯಃ ’ ಎಂದು ಬಹುವಚನವನ್ನು ಹೇಳಿರುವುದರಿಂದ ‘ಇಹಾದಿ’ ಗಳನೇಕಗಳೆಂದು ತೋರುವುದು. ಆದರೆ ‘ಇಹ’ ಎಂಬುದೇ ಆದಿಯಾಗುಳ್ಳ ಎಂದು ಹೇಳಿದರೆ ‘ಅಮುತ್ರ’ ಎಂಬ ಶಬ್ದಕ್ಕೆ ‘ಇಹ’ ಶಬ್ದವು ಆದಿಯಾಗಿರುವುದರಿಂದ ‘ಅಮುತ್ರ’ ಶಬ್ದವೊಂದಕ್ಕೆ ಲಿಂಗಸಂಜ್ಞೆ ಬರುವುದು. ಗಣದಲ್ಲಿ ಪಠಿತವಾದ ‘ಪರತ್ರ, ಉಭಯತ್ರ’ ಮೊದಲಾದ ಶಬ್ದಗಳಿಗೂ ಆದಿಯಲ್ಲಿರುವ ‘ಇಹ’ ಶಬ್ದಕ್ಕೂ ಲಿಂಗಸಂಜ್ಞೆ ಬರುವುದಿಲ್ಲವೆಂದು ತೋರುವುದು. ಆದರೆ ಹಿಂದೆ ಹೇಳಿದಂತೆ ಬಹುವ್ರೀಹಿ ಸಮಾಸದಲ್ಲಿ ‘ತದ್ಗುಣ ಸಂವಿಜ್ಞಾನ’ ಬಹುವ್ರೀಹಿ, ‘ ಅತದ್ಗುಣ ಸಂವಿಜ್ಞಾನ ’ ಬಹುವ್ರೀಹಿ ಎಂದು ಎರಡು ಭೇದಗಳನ್ನಂಗೀಕರಿಸಿರುವುದರಿಂದ ಪ್ರಕೃತದಲ್ಲಿ ತದ್ಗುಣ ಸಂವಿಜ್ಞಾನ ಬಹುವ್ರೀಹಿಯನ್ನು ಹೇಳಲು ‘ಇಹ’ ಶಬ್ದಕ್ಕೂ,ಸೂತ್ರದಲ್ಲಿ ಏಕವಚನವನ್ನು ಹೇಳದೆ ಬಹುವಚನವನ್ನು ಹೇಳಿರುವುದರಿಂದ ‘ **ತಿರೋಹಿತಾವಯವಭೇದಃ ಸಮುದಾಯಃ** ’ ‘ **ಉದ್ಭೂತಾವಯವಭೇದಃ ಸಮುದಾಯಃ** ’ ಎಂದು ಎರಡು ಬಗೆಯಾದ ವಿವಕ್ಷೆ ಶಾಸ್ತ್ರಕಾರರಲ್ಲಿರುವುದೆಂದು ಅಲ್ಲಲ್ಲಿ ತೋರುವುದರಿಂದ ಇಲ್ಲಿ ಉದ್ಭೂತಾವಯವಭೇದವುಳ್ಳುದು ಈ ಸಮುದಾಯವೆಂದು ವಿವಕ್ಷೆ ಮಾಡಲು

'ಪರತ್ರಾದಿ' ಶಬ್ದಗಳಿಗೂ ಲಿಂಗಸಂಜ್ಞೆ ಬರುವುದಲ್ಲದೆ, ಬಹುವಚನವು ಈ ಗಣವು ಆಕೃತಿಗಣವೆಂದೂ ಸೂಚಿಸುವುದು. ಆದುದರಿಂದ ಇಲ್ಲಿ ಪಠಿತವಾಗಿರುವ ಶಬ್ದಗಳಲ್ಲದೆ ಪ್ರಾಮಾಣಿಕ ಪ್ರಯೋಗಗಳಲ್ಲಿರುವ ಶಬ್ದಗಳನ್ನು ಇಲ್ಲಿ ಪಾಠ ಮಾಡಿ ಲಿಂಗಸಂಜ್ಞೆಯನ್ನು ಹೇಳಬಹುದೆಂದು ತಿಳಿಯಬೇಕು.

ಇಲ್ಲಿ 'ಇಹ, ಅಮುತ್ರ, ಪರತ್ರ' ಮೊದಲಾದುವು ಸಖಂಡಗಳೆಂತಲೂ, ಅಸ್ತಿ, ನಾಸ್ತಿ, ಸ್ವಸ್ತಿ' ಮೊದಲಾದುವು ಅಖಂಡಗಳೆಂತಲೂ ತಿಳಿಯಬೇಕು. ಇವುಗಳು ಸಂಸ್ಕೃತದಲ್ಲಿ ವಿಭಕ್ತಿಪ್ರತ್ಯಯಗಳನ್ನು ಹೊಂದುವುದಕ್ಕೆ ಯೋಗ್ಯವಾದ ಪ್ರಾತಿಪದಿಕ ಸಂಜ್ಞೆಯನ್ನು ಪಡೆದಿದ್ದರೂ ಅವ್ಯಯಗಳಾದುದರಿಂದ— '**ಅವ್ಯಯಾದಾಪ್ಸುಪಃ** ||೨-೪-೮೨||' ಎಂಬ ಸೂತ್ರದಿಂದ ವಿಭಕ್ತಿ ಪ್ರತ್ಯಯಕ್ಕೆ ಲೋಪವಾಗಿ ಅವಿಭಕ್ತಿಕಗಳಾಗಿಯೇ ಪ್ರಯೋಗಿಸಲ್ಪಡುವುವು. ಆದಾಗ್ಯೂ ಭಾಷೆಯಲ್ಲಿ ಸವಿಭಕ್ತಿಕಗಳಾಗಿ ಪ್ರಯೋಗಿಸಲ್ಪಡುವುವೆಂಬುದು—

ಇಹಪರಸೌಖ್ಯಮೆಂಬೆರಡುಮಿಲ್ಲದ ನಾಸ್ತಿಕಧರ್ಮದಿಂದಮೊಂ
ದಿಹಮನೆ ಬಲ್ಪಬಿಲ್ಪವಿಧಿಯಿಂದಿಸಿಸೆಯ್ದಿಪ ಸೌಗತಾದಿದು
ರ್ವಿಹಿತಕುಧರ್ಮದಿಂದಮಿಹಮುಂ ಪರಮುಂ ಬಗೆದಂತೆ ಮಾಳ್ಪ ಸ
ನ್ಮಹಿತಜಿನೇಂದ್ರಧರ್ಮಮಭಿವಾಂಛಿತದಾಯಿಯೆನಿಪ್ಪುದೊಪ್ಪದೇ
ನಾಸ್ತವಸುಖಮುಯುಮಪ್ಪಾ
ಸ್ವಸ್ತಿಯನಿಹಕಂ ಪರತ್ರೆಗಂ ಮಾಡುವ ಲೋ
ಕಸ್ತುತಜಿನೇಂದ್ರಧರ್ಮ
ಕ್ಕಾಸ್ತಿಕನವೊಲಱಿಂದು ನಾಸ್ತಿಕಂ ಮೆಚ್ಚುಗುಮೇ

ಎಂಬೀಯೆರಡು ಪದ್ಯಗಳಲ್ಲಿ 'ಇಹಮುಂ, ಸ್ವಸ್ತಿಯನಿಹಕಂ, ಪರತ್ರೆಗಂ' ಎಂಬ ಪ್ರಯೋಗಗಳಿಂದ ತಿಳಿಯಲ್ಪಡುವುದು. ಇದರಿಂದ ಮುಂದೆ ಹೇಳುವ ಲಿಂಗಸಂಜ್ಞಾನಿಷೇಧವು 'ಇಹಾದಿ' ವ್ಯತಿರಿಕ್ತವಾದ ಅವ್ಯಯಗಳಿಗೆಂದು ತಿಳಿಯಬೇಕು. ಆದುದರಿಂದ ಕೇವಲ 'ಇಹಾದಿ'ಗಳಿಗೆ ಮಾತ್ರ ಭಾಷೆಯಲ್ಲಿ ಪ್ರಯೋಗವುಂಟೆಂದು ತಿಳಿಯುವುದು.

**ಅವತಾರಿಕೆ ೧೦**

ಪೂರ್ವದಲ್ಲಿ ಸಾಮಾನ್ಯವಾಗಿ ವಿಧಿಸಿದ ಲಿಂಗಸಂಜ್ಞೆ ಕೆಲವು ಸಂಸ್ಕೃತಾವ್ಯಯ 'ಶತೃ'ಪ್ರತ್ಯಯಾಂತ 'ತ್ಯದಾದಿ'ಗಳಿಗೂ ಪ್ರಾಪ್ತವಾಗಲು ಅವುಗಳಿಗೆ ಭಾಷೆಯಲ್ಲಿ ಪ್ರಯೋಗಾರ್ಹತೆಯುಂಟಾಗುವುದು. ಅದು ಪ್ರಯೋಗಾಭಿಜ್ಞರಿಗೆ ಸಮ್ಮತವಲ್ಲವೆಂದು ಅವುಗಳಿಗೆ ಲಿಂಗಸಂಜ್ಞೆಯನ್ನು ನಿಷೇಧಿಸುವನು.

**ಸೂತ್ರಂ || ನಾವ್ಯಯಶತೃತ್ಯದಾದಿ || ೧೦ ||**

**ಅರ್ಥ ||** **ಅವ್ಯಯಗಳು ಶತ್ರಂತಗಳು ತ್ಯದಾದಿಗಳು ಲಿಂಗಸಂಜ್ಞಕಗಳಾಗುವುದಿಲ್ಲ.**

**ಉದಾಹರಣೆ ||** ಉಚ್ಚೈಸ್, ನೀಚೈಸ್, ಸ್ವರ್, ಪ್ರಾತರ್; ರಣತ್, ಪಠತ್; ತ್ಯದ್, ತದ್, ಯದ್, ಇದಮ್, ಅದಸ್, ಏತದ್, ಕಿಮ್, ಯುಷ್ಮದ್, ಅಸ್ಮದ್, ಭವತ್—ಇತ್ಯಾದಿ.

**ವಿಚಾರ ೧೦**

ಇಲ್ಲಿ ಅವ್ಯಯವೆಂದು ಸಾಮಾನ್ಯವಾಗಿ ಹೇಳಿದ್ದರೂ

**ಸಹಚರಿತಾಸಹಚರಿತಯೋಃ ಸಹಚರಿತಸ್ಯೈವ ಗ್ರಹಣಂ**

ಎಂಬ ನ್ಯಾಯದಿಂದ ಸಂಸ್ಕೃತದಲ್ಲಿ ಪ್ರಸಿದ್ಧವಾದ 'ಶತೃತ್ಯದಾದಿ' ಸಹಚರಿತವಾದ 'ಅವ್ಯಯ' ಪದಕ್ಕೆ ಸಂಸ್ಕೃತಾವ್ಯಯಗಳೆ ಎಂದು ಅರ್ಥವಾಗುವುದು. ಆದುದರಿಂದ ಭಾಷಾಪ್ರಸಿದ್ಧವಾದ ಅವ್ಯಯಗಳಿಗೆ ಲಿಂಗಸಂಜ್ಞೆ ಬಂದು '**ಲಿಂಗಾತ್ ಸುಪ್** ||೨೦೩||' ಎಂಬ ಸೂತ್ರದಿಂದ ಸುಪ್ ಪ್ರತ್ಯಯವು ಬಂದು '**ಲುಬವ್ಯಯಸ್ಯ** ||೨೪||' ಎಂಬ ಸೂತ್ರದಿಂದ ಸುಪ್ಪಿಗೆ ಲೋಪವು ಬರುವುದು. ಆದುದರಿಂದ ಆ ಸೂತ್ರವು ಸಾರ್ಥಕವಾಗುವುದು. 'ಶತೃ' ಎಂಬುದು ಸಂಸ್ಕೃತದಲ್ಲಿ ಧಾತುವಿನ ಮೇಲೆ ವರ್ತಮಾನ ಕಾಲದ್ಯೋತಕವಾಗಿ ವಿಧಿಸಲ್ಪಡುವ ಪ್ರತ್ಯಯವು. ಇದು ಕನ್ನಡದಲ್ಲಿ ಸ್ವಾಭಾವಿಕವಾಗಿ ಪ್ರಯೋಗಾರ್ಹವಲ್ಲ. ಆದುದರಿಂದ ಅದಕ್ಕೆ ಲಿಂಗಸಂಜ್ಞೆಯನ್ನು ನಿಷೇಧಿಸಿರುವುದು ವ್ಯರ್ಥವೆಂದು ತೋರುವುದು. ಆದರೂ '**ಯೇನ ವಿಧಿಸ್ತದಂತಸ್ಯ** || ೨೮ ||' ಎಂಬ ಸೂತ್ರದಿಂದ ಈ ಶಾಸ್ತ್ರದಲ್ಲಿ ವಿಶೇಷಣಕ್ಕೆ ವಿಧಿಸುವ ಕಾರ್ಯವು ಆ ವಿಶೇಷಣವೆ ಅಂತವಾಗುಳ್ಳ ಶಬ್ದಕ್ಕೂ ಬರುವುದೆಂದು ಹೇಳಿರುವುದರಿಂದಲೂ

**ಪ್ರತ್ಯಯಗ್ರಹಣೇ ಯಸ್ಮಾತ್ಸ ವಿಹಿತಸ್ತದಾದೇಸ್ತದಂತಸ್ಯ ಗ್ರಹಣಂ**

ಎಂಬ ಪರಿಭಾಷೆಯಿಂದ ಎಲ್ಲಿ ಸಾಮಾನ್ಯರೂಪವಾಗಲಿ ವಿಶೇಷರೂಪವಾಗಲಿ ಪ್ರತ್ಯಯವನ್ನು ಬೋಧಿಸುವ ಪದವಿರುವುದೊ ಅಲ್ಲಿ ಆ ಪ್ರತ್ಯಯ ಬೋಧಕವಾದ ಪದವು ತದಂತಬೋಧಕವಾಗುವುದೆಂದು ತಿಳಿಯುವುದರಿಂದಲೂ ಶತೃಪ್ರತ್ಯಯಾಂತವೆಂದರ್ಥವಾಗುವುದು. ಆದರೆ '**ಸುಪ್ ತಿಙಂತಂ ಪದಂ** ||೧-೪-೧೪||' ಎಂಬ ಸೂತ್ರದಲ್ಲಿಯೂ ಸುಪ್, ತಿಙ್ ಎಂಬುವು ಪ್ರತ್ಯಯಬೋಧಕವಾದುದರಿಂದಲೆ ತದಂತವನ್ನು ಬೋಧಿಸುತ್ತಿರಲು ಪುನಃ ಮಾಡಿರುವ ಅಂತಗ್ರಹಣವು. ಸಂಜ್ಞಾವಿಧಿಯಲ್ಲಿ ತದಂತವನ್ನು ಬೋಧಿಸುವುದಿಲ್ಲವೆಂದು ತಿಳಿಸುವುದು. ಆದರೂ ಇಲ್ಲಿ ಕೇವಲ ಪ್ರತ್ಯಯಗಳಿಗೆ ಪ್ರಯೋಗವೆ ಇಲ್ಲದಿರುವುದರಿಂದ ಲಿಂಗಸಂಜ್ಞೆಯೆ ಅಪ್ರಾಪ್ತವಾಗಿರಲು ಅದಕ್ಕೆ ನಿಷೇಧ ಮಾಡಿರುವುದು ಅಸಂಗತವೆಂದು ತೋರುವುದಾದುದರಿಂದ ಇಲ್ಲಿ ತದಂತಲಾಭ ಬಂದು ಶತ್ರಂತಗಳೆಂದರ್ಥವಾಗುವುದು.

'ತ್ಯದಾದಿ'ಯೆಂಬುದು ಸಂಸ್ಕೃತದಲ್ಲಿ ಹೇಳಿರುವ 'ಸರ್ವಾದಿ'ಗಣದಲ್ಲಿ ಸೇರಿದ ಅಂತರ್ಗಣವು ಎಂದು ತಿಳಿಯಬೇಕು. ಈ ತ್ಯದಾದಿಯಲ್ಲಿ 'ಏಕ ದ್ವಿ' ಶಬ್ದಗಳನ್ನು ಸಂಸ್ಕೃತ ವ್ಯಾಕರಣಕಾರರು ಪಾಠ ಮಾಡಿದಾಗ್ಯೂ 'ಏಕ' ಶಬ್ದಕ್ಕೆ ಲಿಂಗಸಂಜ್ಞೆ ಇಷ್ಟವಾದುದರಿಂದಲೂ 'ದ್ವಿ' ಶಬ್ದಕ್ಕೆ ಮುಂದಿನ ಸೂತ್ರದಿಂದ ನಿಷೇಧ ಮಾಡುವುದರಿಂದಲೂ ಅವೆರಡನ್ನು ಬಿಟ್ಟು ಇಲ್ಲಿ ಹೇಳಿದೆ.

'ಪಾರ್ವರ್ ಪ್ರಿಯಪ್ರಾತರರ್, ಯಾಜ್ಞಿಕರ್ ಪ್ರಿಯಸ್ವರರ್' ಎಂಬುವೆ ಮೊದಲಾದ ಅವ್ಯಯಘಟಿತವಾದ ಪ್ರಯೋಗಗಳನೇಕವಿರುವುದರಿಂದ ಈ ಸೂತ್ರದಲ್ಲಿ ಅವ್ಯಯಾದಿಗಳು ಮೂರು ವ್ಯಸ್ತಗಳಾಗಿಯೂ ಅನುಪಸರ್ಜನೀಭೂತಗಳಾಗಿಯೂ ಇರುವುವೇ ನಿಷೇಧಕ್ಕೆ ವಿಷಯಗಳು; ಸಮಸ್ತಗಳಾಗಿಯೂ ಉಪಸರ್ಜನಗಳಾಗಿಯೂ ಇರುವಂತಹವು ಅಲ್ಲ—ಎಂದು ವ್ಯಾಖ್ಯಾನಾದಿಗಳಿಂದ ಸೂತ್ರಕ್ಕೆ ಸಂಕೋಚಾರ್ಥವನ್ನು ಹೇಳಬೇಕು. ಆದುದರಿಂದಲೆ **ಕೇಶಿರಾಜನು**—

**ವಿದಿತಮೆನಿಪ್ಪವ್ಯಯಮುಂ**
**ತ್ಯದಾದಿಯುಂ ಶತೃಙಾಂತಮುಂ ಸಂಸ್ಕೃತದೊಳ್**
**ಪದವಿಧಿಯಂ ನೆರೆ ತಳೆದ**
**ಲ್ಲದೆ ಕನ್ನಡದಲ್ಲಿ ಲಿಂಗಮಾಗವು ನಿಜದಿಂ (ಸೂತ್ರ ೮೧)**

ಎಂಬ ಸೂತ್ರದಿಂದ 'ಪದವಿಧಿಯಂ ನೆರೆ ತಳೆದಲ್ಲದೆ' ಎಂದರೆ ಸಮಾಸವನ್ನು ಹೊಂದದೆ 'ಕನ್ನಡದಲ್ಲಿ ಲಿಂಗಮಾಗವು' ಎಂದು ಹೇಳುವುದರಿಂದ ಕೇವಲ ಅವ್ಯಯಕ್ಕೆ ಲಿಂಗಸಂಜ್ಞೆಯಿಲ್ಲವೆಂದು ತೋರುವುದು. ಇದರಿಂದ ಸಮಸ್ತವಾದುವುಗಳಿಗೆ ಲಿಂಗಸಂಜ್ಞೆ ಪ್ರಾಪ್ತವಾದರೂ 'ಪರಮೋಚ್ಚೈಃ,' 'ಪರಮನೀಚೈಃ' ಎಂಬುವೆ ಮೊದಲಾದ ಅನುಪಸರ್ಜನವಾದುವುಗಳಿಗೂ ಅವ್ಯಯತ್ವವಿರುವುದರಿಂದ ಲಿಂಗಸಂಜ್ಞಾ ನಿಷೇಧವು ಪ್ರಾಪ್ತವಾಗಿಯೇ ಇರುವುದು. ಉಪಸರ್ಜನೀಭೂತಗಳಿಗಾದರೆ ಅವ್ಯಯಾರ್ಥಕ್ಕೆ ಪ್ರಾಧಾನ್ಯವಿಲ್ಲದಿರುವುದರಿಂದ ಸಮುದಾಯಕ್ಕೆ ಅವ್ಯಯತ್ವವಿಲ್ಲವೆಂದು ನಿಷೇಧವು ಬರುವುದಿಲ್ಲ ಎಂಬುದು '**ವಿಧಿರ್ನಿಷೇಧಶ್ಚ ಕಥಂಚಿದಿಷ್ಟಾ ||**' ಎಂಬ ಪ್ರಾಚೀನರ ವಚನದಿಂದ ಸಿದ್ಧವಾಗಿರುವುದು ಎಂದು ತಿಳಿಯುವುದು.

**ಅವತಾರಿಕೆ ೧೧**

ಸಾಮಾನ್ಯ ಸೂತ್ರದಿಂದ ಸಂಖ್ಯಾವಾಚಕ ಶಬ್ದಗಳಿಗೂ ಪ್ರಾಪ್ತವಾದ ಲಿಂಗಸಂಜ್ಞೆಯನ್ನು ನಿಷೇಧಿಸುತ್ತಾನೆ.

**ಸೂತ್ರಂ** || ದ್ವ್ಯಾದ್ಯಾದಶ್ನಃ || ೧೧ ||

**ಅರ್ಥ || ದ್ವಿ ಶಬ್ದವೆ ಮೊದಲಾಗಿ ದಶ್ ಶಬ್ದಪರ್ಯಂತವಾಗಿರುವ ಸಂಖ್ಯಾವಾಚಕ ಶಬ್ದಗಳು ಲಿಂಗಸಂಜ್ಞಕಗಳಾಗುವುದಿಲ್ಲ.**

**ಉದಾಹರಣೆ** || ದ್ವಿ, ತ್ರಿ, ಚತುರ್, ಪಂಚನ್, ಷಟ್, ಸಪ್ತನ್, ಅಷ್ಟನ್, ನವನ್, ದಶನ್.

**ವಿಚಾರ ೧೧**

ಈ ಸೂತ್ರದಲ್ಲಿ 'ದ್ವ್ಯಾದಿ' ಎಂದು ಹೇಳಿರುವುದರಿಂದ '**ಏಕ**' ಶಬ್ದಕ್ಕೂ 'ಆದಶ್ನಃ' ಎಂದು ಹೇಳಿರುವುದರಿಂದ '**ಏಕಾದಶ,**' '**ದ್ವಾದಶ**' ಶಬ್ದಗಳಿಗೂ ಲಿಂಗಸಂಜ್ಞೆಯುಂಟೆಂದು ತಿಳಿಯುವುದು. ಇಲ್ಲಿ 'ದ್ವಿ' 'ದಶ' ಎಂದು ಸಂಸ್ಕೃತ ಸಂಖ್ಯಾವಾಚಕ ಶಬ್ದಗಳನ್ನು ಹೇಳಿರುವುದರಿಂದ ಸಂಸ್ಕೃತ ಸಂಖ್ಯಾಶಬ್ದಗಳನ್ನೇ ಗ್ರಹಿಸಬೇಕು. ಅವುಗಳಲ್ಲಯೂ ಅಸಮಸ್ತವಾಗಿಯೂ ಪ್ರತ್ಯಯಾಂತವಲ್ಲದಾಗಿಯೂ ಇರುವುವನ್ನೇ ತೆಗೆದುಕೊಳ್ಳಬೇಕು. ಆದುದರಿಂದ 'ಪ್ರಿಯತ್ರಿ' 'ಪ್ರಿಯಚತುರ್' ಇತ್ಯಾದಿ ಸಮಸ್ತಗಳಿಗೂ 'ದ್ವಿಕ, ತ್ರಿಕ, ದ್ವಯ, ತ್ರಯ, ದ್ವಿತಯ, ತ್ರಿತಯ' ಮೊದಲಾದ ಪ್ರತ್ಯಯಾಂತಗಳಿಗೂ ಲಿಂಗಸಂಜ್ಞೆ ಬಂದೇ ಬರುವುದು. ಇದೇ ವಿಷಯದಲ್ಲಿ **ದರ್ಪಣಕಾರನು**—

ಏಕದ್ವಿತ್ರ್ಯಾದಿ ಸಮಾ
ಸಾಕೃತಿಯಿಂ ಪ್ರತ್ಯಯಾಂತದಿಂದಿರೆ ಲಘುವ
ಪ್ಪೇಕಾರಮನತ್ವಮನಿರ
ದಾಕಾರಂ ಬಹುಳದಿಂದೆ ತಳೆದಿರೆ ಲಿಂಗಂ (ಸೂತ್ರ ೮೨)

ಎಂಬ ಸೂತ್ರವನ್ನು ಹೇಳಿರುವನು. ಇಲ್ಲಿ 'ಏಕ' ಶಬ್ದವನ್ನು ಹೇಳಿರುವುದರಿಂದ ಸಮಾಸಘಟಕವಲ್ಲದೆಯೂ ಪ್ರತ್ಯಯಾಂತವಲ್ಲದೆಯೂ ಇರುವ ಕೇವಲ '**ಏಕ**' ಶಬ್ದಕ್ಕೆ ಲಿಂಗಸಂಜ್ಞೆಯಿಲ್ಲವೆಂದು ತೋರುವುದು. ಶಾಸನಕಾರನ ಮತದಲ್ಲಿ ಇದಕ್ಕೆ ಲಿಂಗಸಂಜ್ಞೆಯಿರುವುದು. ಆದರೆ ಈ ಸೂತ್ರದಲ್ಲಿ 'ಬಹುಳದಿಂದೆ' ಎಂದು ಬಹುಳಗ್ರಹಣಮಾಡಿರುವುದರಿಂದ ದರ್ಪಣಕಾರನಿಗೂ ಇದು ಸಮ್ಮತವೆಂದು ತೋರುವುದು. ಮತ್ತು **ದರ್ಪಣಕಾರನ** ಈ ಸೂತ್ರದಲ್ಲಿ ಸಂಸ್ಕೃತ ಆ ಕಾರಾಂತ

ಶಬ್ದಗಳಿಗೆ ಹ್ರಸ್ವವಾದ ಎ ಕಾರಾದೇಶವನ್ನು ಮಾಡಿದರೂ ಅ ಕಾರಾದೇಶವನ್ನು ಮಾಡಿದರೂ ಆಗುವ ಶಬ್ದಗಳು ಲಿಂಗಸಂಜ್ಞಕಗಳಾಗುವುವೆಂದು ಹೇಳಲ್ಪಟ್ಟಿರುವುದು. ಮತ್ತು—

**ಸಮುದಿತಸಂಖ್ಯಾವ್ಯಯಂಹಿ**
**ತಮೆನಿಸಿ ವರ್ತಿಪ ನಿಘಂಟುವಿನ ನಾಮುಪದೋ**
**ತ್ತಮುವರ್ಣಪ್ರಕೃತಿಗಳಂ**
**ಸಮಸಂಸ್ಕೃತವೆರಸನಿಟ್ಟು ಲಿಂಗಂ ಮಾಳ್ಪರ್ (ಸೂತ್ರ ೮೦)**

ಎಂಬ ಸೂತ್ರದಿಂದ ಸಂಖ್ಯಾವ್ಯಯಗಳನ್ನು ಕಳೆದುಳಿದ ನಿಘಂಟುವಿನ ನಾಮುಪ್ರಕೃತಿಗಳನ್ನು ಕನ್ನಡಕ್ಕೆ ಸರಿಮಾಡಿ '**ಸಮಸಂಸ್ಕೃತ**' ವೆಂಬ ಹೆಸರಿಟ್ಟು ಲಿಂಗಸಂಜ್ಞೆಯನ್ನು ಮಾಡುವರೆಂದು ಹೇಳಲ್ಪಟ್ಟಿರುವುದು. ಇವೆಲ್ಲ '**ಅರ್ಥವಲ್ಲಿಂಗಂ || ೮ ||**' ಎಂಬ ಸಾಮಾನ್ಯ ಸೂತ್ರದಿಂದಲೆ ಸಿದ್ಧವಾಗುವುವೆಂದು ತಿಳಿಯಬೇಕು. ಇಂತಹ 'ಲಿಂಗ' ಸಂಜ್ಞೆ ಅರ್ಥಬೋಧಕವಾದ ಶಬ್ದಗಳಿಗೆ ಹೇಳಿರುವುದರಿಂದ ಪ್ರತ್ಯಯೋತ್ಪತ್ತಿಗೆ ಸಾಧಕವಾದ ಪ್ರಕೃತಿ ವಿಶೇಷವೆಂದು ತಿಳಿಯುವುದು. ಇದನ್ನೆ ಸಂಸ್ಕೃತ ವ್ಯಾಕರಣದಲ್ಲಿ **ಪ್ರಾತಿಪದಿಕ**ವೆಂದು ವ್ಯವಹರಿಸುವರು. ಇಂತಹ ಲಿಂಗದ ಅರ್ಥಗಳಲ್ಲಿರುವ ಸ್ತ್ರೀಲಿಂಗ ಪುಲ್ಲಿಂಗ ನಪುಂಸಕಲಿಂಗವೆಂಬ ಭೇದಗಳು ದ್ವಿತೀಯಪಾದದಲ್ಲಿ ತಿಳಿಸಲ್ಪಡುವುವು.

**ಅವತಾರಿಕೆ ೧೨**

ಹೀಗೆ ಅರ್ಥವತ್ತಾದ ಶಬ್ದಸಾಮಾನ್ಯಕ್ಕೆ ಲಿಂಗಸಂಜ್ಞೆಯನ್ನು ಹೇಳಿ ಕ್ರಿಯಾರೂಪಾರ್ಥ ವಿಶೇಷಬೋಧಕವಾದ ಶಬ್ದಗಳಿಗೆ ಆಖ್ಯಾತಾದಿ ಪ್ರತ್ಯಯೋತ್ಪತ್ತಿಗೆ ಸಾಧನೀಭೂತವಾದ '**ಧಾತು**' ಸಂಜ್ಞೆಯನ್ನು ಹೇಳುತ್ತಾನೆ.

**ಸೂತ್ರಂ || ಕ್ರಿಯಾರ್ಥೋ ಧಾತುಃ ||೧೨||**

**ಅರ್ಥ || ಕ್ರಿಯೆಯೆ ಅರ್ಥವಾಗುಳ್ಳ ಶಬ್ದವು ಲಿಂಗಸಂಜ್ಞಕವಾಗುವುದು.**

**ಉದಾಹರಣೆ** || ಅಡು, ಕುಡು, ಮಾಡು, ನೋಡು, ಅಡಿಸು, ಕುಡಿಸು, ಅಲರ್ಚು, ತೊಡರ್ಚು, ಪೂರೈಸು, ಬೋಳೈಸು, ಇತ್ಯಾದಿ. ಇಲ್ಲಿ 'ಧಾತು' ಸಂಜ್ಞೆಯನ್ನು ಹೇಳಿರುವುದರಿಂದ '**ಧಾತೋರ್ಹೇತುಮತಿ || ೫೩೬ ||**' ಇತ್ಯಾದಿ 'ಧಾತು' ಪದವುಳ್ಳ ಸೂತ್ರಗಳಲ್ಲಿ 'ಧಾತು' ಪದಕ್ಕೆ ಕ್ರಿಯಾವಾಚಕ ಶಬ್ದಗಳೆಂದು ಅರ್ಥವಾಗುವುದು.

**ವಿಚಾರ ೧೨**

ಈ ಸೂತ್ರದಲ್ಲಿ ಹೇಳಿರುವ 'ಕ್ರಿಯಾ' ಎಂಬ ಶಬ್ದವು ಸಂಸ್ಕೃತ 'ಕೃ' ಧಾತುವಿನಿಂದ ನಿಷ್ಪನ್ನವಾಗಿರುವುದರಿಂದ 'ವ್ಯಾಪಾರಸಾಮಾನ್ಯ' ಬೋಧಕವೆಂದು ತಿಳಿಯಬೇಕು. ಲೋಕದಲ್ಲಿ 'ಘಟಂ ಕರೋತಿ' 'ಪಟಂ ಕರೋತಿ' ಇತ್ಯಾದಿ ಪ್ರಯೋಗಗಳಿಂದ 'ಕೃ' ಧಾತು ಅಪೂರ್ವ ಪ್ರಾದುರ್ಭಾವಾರ್ಥಕವೆಂದು ತೋರುವುದು. ಆದರೂ 'ದೇವದತ್ತಃ ಕಿಂ ಕರೋತಿ' ಎಂದು ಸಾಮಾನ್ಯವಾಗಿ ಪ್ರಶ್ನೆಮಾಡಲು 'ಆಸ್ತೇ' 'ತಿಷ್ಠತಿ' 'ಪಚತಿ' 'ಪಠತಿ' 'ಶೇತೇ' 'ಗಚ್ಛತಿ' ಇತ್ಯಾದಿ ವ್ಯಾಪಾರ ವಿಶೇಷಗಳಿಂದ ಉತ್ತರವನ್ನು ಕೊಡುವುದು ಸಕಲಜನ ಪ್ರಸಿದ್ಧವಾಗಿರುವುದು. ಪ್ರಶ್ನೋತ್ತರಗಳಿಗೆ ಆನುಗುಣ್ಯವಿರಬೇಕಾದುದು ಅತ್ಯಾವಶ್ಯಕವಾದುದರಿಂದಲೂ ಸಾಮಾನ್ಯವಾಗಿ ತಿಳಿದು ವಿಶೇಷವಾಗಿ ತಿಳಿಯದಿರುವುದರಿಂದಲೆ ಪ್ರಶ್ನೆಯು ಪ್ರವರ್ತವಾಗುವುದರಿಂದಲೂ ಅಥವಾ ಸಾಮಾನ್ಯವಿಶೇಷಗಳೆರಡು ತಿಳಿಯದಿರುವುದರಿಂದಲೂ ಇಲ್ಲಿ ವ್ಯಾಪಾರ ಸಾಮಾನ್ಯಬೋಧಕವೆಂದು

ಹೇಳಬೇಕು. ಲೋಕದಲ್ಲಿ 'ಗೋ' ಶಬ್ದವನ್ನುಚ್ಚರಿಸಲು ಹೇಗೆ ಆ ಗೋವಿನಲ್ಲಿರುವ ಸಾಸಾ ಲಾಂಗೂಲ ಕಕುದ ಖುರ ವಿಷಾಣಾದ್ಯವಯವ ಸಮುದಾಯರೂಪವೆ 'ಗೋ' ಶಬ್ದವಾಚ್ಯವೆಂದ ತೋರುವುದೊ ಹಾಗೆ—'ದೇವದತ್ತನು ಅಕ್ಕಿಯನ್ನು ಬೇಯಿಸುತ್ತಾನೆ'ಂದು ಹೇಳಲು ಅಧಿ ಯಣ, ಉದಕಸೇಚನ, ತಂಡುಲಪ್ರಕ್ಷೇಪಣ, ಕಾಷ್ಠೋಪಕರ್ಷಣ, ದರ್ವೀಪರಿಘಟ್ಟನ, ಮಂಡ ಸ್ರಾವಣ ಮೊದಲಾದ ಅನೇಕಾವಾಂತರ ಕ್ರಿಯಾಕಲಾಪದಿಂದ ಕೂಡಿರುವುದೆ ಪಾಕಕ್ರಿಯೆ ಯೆಂದು ತೋರುವುದು. ಇಂತಹ ಕ್ರಿಯೆ—

**ಕ್ರಿಯಾ ನಾಮ ಅತ್ಯಂತಾಽಪರಿದೃಷ್ಟಾ ಪಿಂಡೀಭೂತಾ ನಿದರ್ಶಯಿತುಮಶಕ್ಯಾ**

ಎಂದು **ಪತಂಜಲಿಭಾಷ್ಯ**ದಲ್ಲಿ ಹೇಳಿರುವುದರಿಂದ ಚಕ್ಷುರಿಂದ್ರಿಯಕ್ಕೆ ವಿಷಯವಲ್ಲದಿದ್ದರೂ ಕ್ರಿಯಾಶ್ರಯವಾದ ವಸ್ತುಪ್ರತ್ಯಕ್ಷದಿಂದ ಕ್ರಿಯಾಪ್ರತ್ಯಕ್ಷವಾಗುವುದೆಂದು ತಿಳಿಯಬೇಕು. ಈ ಕ್ರಿಯೆಯನ್ನೆ ವ್ಯಾಪಾರ, ಪ್ರವೃತ್ತಿ, ಈಹಾ, ಚೇಷ್ಟಾ ಎಂದು ಕೆಲವರು ಹೇಳುವರು. ಇದೆ ಭಾವ ವೆಂಬುದು. ಇದನ್ನೇ **ಪಾಣಿನೀಯ** ವ್ಯಾಕರಣದಲ್ಲಿ—

**ಭಾವೋ ಭಾವನಾ ಉತ್ಪಾದನಾ ಸೈವ ಕ್ರಿಯಾ ಧಾತುತ್ವೇನ ಸಕಲಧಾತುವಾಚ್ಯಾ**

ಎಂದು ಹೇಳಿರುವರು. ಹೀಗೆ **ಹರಿಕಾರಿಕೆ**ಯಲ್ಲಿಯೂ—

**ಧಾತ್ವರ್ಥಃ ಕೇವಲಃ ಶುದ್ಧೋ ಭಾವ ಇತ್ಯಭಿಧೀಯತೇ**

ಎಂದು ಹೇಳಿರುವುದು. ಆದುದರಿಂದ ಇಂತಹ ಕ್ರಿಯಾವಾಚಕ ಶಬ್ದಗಳೆಲ್ಲ ಧಾತುಗಳೆನಿಸಿ ಕೊಳ್ಳುವುವು.

ಆದರೆ ಹೀಗೆ ಕ್ರಿಯಾವಾಚಕಗಳಾದ ಎಲ್ಲಾ ಶಬ್ದಗಳಿಗೂ 'ಧಾತು' ಸಂಜ್ಞೆ ಬರುವುದೆಂದು ಹೇಳಿದರೆ ಭಾವಾರ್ಥದಲ್ಲಿ ವಿಹಿತವಾದ ಕೃತ್ ಪ್ರತ್ಯಯಾಂತಗಳಾದ 'ಅಟುವು, ಪಟುವು, ಕಾಣ್ಕೆ, ಪೂಣ್ಕೆ' ಮೊದಲಾದ ಶಬ್ದಗಳಿಗೂ ಕೆಲವು ಅವ್ಯಯುಗಳಿಗೂ 'ಧಾತು' ಸಂಜ್ಞೆ ಪ್ರಾಪ್ತವಾಗುವುದೆಂದು ಶಂಕಿಸಲಾಗದು. ಆದುದರಿಂದ **ಭೂಷಣಸಾರ, ಮಂಜೂಷಾ** ಎಂಬ ಸಂಸ್ಕೃತ ವಿಚಾರ ಗ್ರಂಥಗಳಲ್ಲಿ—ಕ್ರಿಯೆಯು ಸಿದ್ಧಸಾಧ್ಯಗಳೆಂಬ ಎರಡು ಭೇದವನ್ನುಳ್ಳುದು; ಅವುಗಳಲ್ಲಿ ಆವುದು ಸಾಧನ ಸಾಮಗ್ರಿಗಳಿಂದ ನಿರ್ವೃತ್ತವಾದುದೊ ಅದೆ ಸಿದ್ಧಕ್ರಿಯೆ; ಸಾಧನಸಾಮಗ್ರಿಗಳಿಂದಾಕಾಂಕ್ಷಿತವಾದುದು ಸಾಧ್ಯಕ್ರಿಯೆ ; ಇಂತಹ ಸಾಧ್ಯಕ್ರಿಯೆಯೆಂಬುದೆ ಧಾತುವಾಚ್ಯಕ್ರಿಯೆ ; ಸಿದ್ಧಕ್ರಿಯೆ ಎಂಬುದು ಕೃದಂತವಾಚ್ಯಕ್ರಿಯೆ ಎಂದು— **'ಕೃದಭಿಹಿತೋ ಭಾವೋ ದ್ರವ್ಯವದ್ಭವತಿ'** ಎಂಬ ಪ್ರಾಚೀನರ ವಚನದಿಂದ ತಿಳಿದು ಬರುವುದು. ಆದುದರಿಂದಲೆ ಈ ಸೂತ್ರದಲ್ಲಿ ಸಾಧ್ಯತಾವಸ್ಥಾಪನ್ನವಾದ ಕ್ರಿಯಾವಾಚಕವಾದುದು 'ಧಾತು' ಸಂಜ್ಞಕವೆಂದು ಹೇಳಬೇಕು. ಇದೇ ವಿಷಯ ವನ್ನು ಪ್ರಾಚೀನರು—

**ವ್ಯಾಪೃತೀನಾಮವಸ್ಥೇ ದ್ವೇ ಸಾಧ್ಯತಾ ಸಿದ್ಧತೇತಿ ಚ**
**ಸಾಧ್ಯತಾ ಸಾಧನಾಕಾಂಕ್ಷಾ ಸಿದ್ಧತಾ ನಿಷ್ಠಿತಾತ್ಮತಾ**
**ಸಾಧ್ಯಾ ಸಾ ಧಾತುವಾಚ್ಯಾ ಸ್ಯಾತ್ ಕೃದ್ವಾಚ್ಯಾ ತು ಪರೋಚ್ಯತೇ**
**ಅಧಿಕಾವಚನಾದ್ಭಾವೇ ಸ್ವಾರ್ಥಿಕಾವೇವ ತಿಙ್ಕೃತೌ**
**ತಿಙ್ಭಾವಂ ತತ್ರ ಯೈವಾಹ ದ್ರವ್ಯವದ್ಭಾವಮಾಹ ಕೃತ್**

ಎಂಬ ಶ್ಲೋಕಗಳಿಂದ ತಿಳಿಸಿರುವರು. ಆದುದರಿಂದ ಭಾವಕೃದಂತಾದಿಗಳಿಗೆ 'ಧಾತು'ಸಂಜ್ಞೆಯಿಲ್ಲ.
**ದರ್ಪಣಕಾರನು**—

ಕ್ರಿಯೆಯರ್ಥದ ಮೂಲಂ ಪ್ರ
ತ್ಯಯರಹಿತಂ ಧಾತುವದನಭಾವಕ್ರಿಯೆಯೊಳ್
ನಿಯತಂ ನಿಶ್ಚಯಿಪುದು ಬುಧ
ಚಯಮಾ ಧಾತುಗೆ ವಿಭಕ್ತಿಯಾಱಾಗಿರ್ಕುಂ (ಸೂತ್ರ ೨೧೬)

ಎಂಬ ಸೂತ್ರದಲ್ಲಿ 'ಕ್ರಿಯಾರ್ಥದ ಮೂಲಂ ವಿಭಕ್ತಿರಹಿತಮುಂ ಧಾತುವೆಂಬುದು, ಆ ಧಾತುವನ್ನು ಪ್ರತಿಷೇಧ ಕ್ರಿಯೆಯ ವಿಭಕ್ತಿಯಂ ಕಳೆಯೆ ಕಾಣಲಕ್ಕುಂ' ಎಂದು ಹೇಳಿರುವನು.

**ಪಾಣಿನಿ**-ವ್ಯಾಕರಣದಲ್ಲಿ—

**ಭೂವಾದಯೋ ಧಾತವಃ (೧-೩-೧)**

ಎಂಬ ಸೂತ್ರದಿಂದ ಕ್ರಿಯಾವಾಚಕವಾದ 'ಭೂ' ಮೊದಲಾದ ಗಣಗಳಲ್ಲಿ ಪಠಿತವಾಗಿ ಇರುವ ಶಬ್ದವಿಶೇಷಗಳಿ ಧಾತುಗಳೆಂದು ಹೇಳಿರುವುದು. ಇವೆಲ್ಲ ಯೋಚಿಸಲಾಗಿ ಕ್ರಿಯಾವಾಚಕವಾದ ಅವ್ಯಯ-ಭಾವ-ಕೃದಂತಗಳನ್ನು ಬಿಟ್ಟು ಉಳಿದ ಕ್ರಿಯಾವಾಚಕಗಳು ಧಾತುಗಳೆನಿಸಿಕೊಳ್ಳುವು ವೆಂದು ತಿಳಿಯುವುದು.

## ಧಾತುಗಳು ಕ್ರಿಯಾವಾಚಕಗಳು

ಇಲ್ಲಿ ಇಂತಹ ಧಾತುಗಳಿಗೆ ವಾಚ್ಯವಾದುದು ಕ್ರಿಯೆಯೆಂದು ಸಾಮಾನ್ಯವಾಗಿ ಹೇಳಿದ್ದರೂ ವಿಶೇಷಗಳನ್ನೊಳಕೊಳ್ಳದೇ ಸಾಮಾನ್ಯವಿರುವುದೆ ಇಲ್ಲವಾದುದರಿಂದ ಧಾತುಪಾಠದಲ್ಲಿ ಅನೇಕ ಕ್ರಿಯಾವಿಶೇಷಾರ್ಥಗಳನ್ನು ಪ್ರದರ್ಶನ ಮಾಡಿರುವುದು. ಮತ್ತು ಇದು ಅಲ್ಲದೆ ಧಾತುಗಳು ಅನೇಕಾರ್ಥಗಳು; ಅವನ್ನು ಪ್ರಯೋಗಗಳಿಂದ ತಿಳಿದುಕೊಳ್ಳಬೇಕು ಎಂದು—

ಧಾತುಗಳವು ನಾನಾರ್ಥೋ
ಪೇತಂಗಳ್ ಲಕ್ಷ್ಯಸಿದ್ಧಿ ವಿಡಿದುವನಱದ
ಸ್ಥಿತರೆ ಕ್ರಿಯಾನುಕೂಲಂ
ಮಾತೇಂ ಪೂರಿಸುಗೆ ಮತ್ತಮುಱದುವನಿದಱೊಳ್ (ಸೂತ್ರ ೨೫೧)

ಎಂದು **ದರ್ಪಣಕಾರನು** ಹೇಳಿರುವ ಸೂತ್ರದಿಂದ ತಿಳಿಯುವುದು.

ಇಂತಹ ಧಾತುಗಳಲ್ಲಿ ಸರ್ವಕಾರಕಗಳಿಗೂ ಕಾಲವಿಶೇಷಗಳಿಗೂ ಅನ್ವಯೋಪಪತ್ತಿಗಾಗಿ-

**'ಕ್ರಿಯಾಭೇದಾಯ ಕಾಲಸ್ತು ಸಂಖ್ಯಾ ಸರ್ವಸ್ಯ ಭೇದಿಕಾ'**

ಎಂದು **ಹರಿಕಾರಿಕೆ**ಯಲ್ಲಿ ಹೇಳಿರುವುದು. ಇದರಿಂದ ಕಾಲಕ್ಕೆ ಕ್ರಿಯಾಭೇದಕತ್ವವಿರುವುದೆಂದೂ '**ಕ್ರಿಯಾ ನಿಯತಸಾಧನಾ**' ಎಂಬ ವಚನದಿಂದ ಕಾರಕಗಳಿಗೆ ಕ್ರಿಯಾಕಾಂಕ್ಷಿತತ್ವವು ಇರುವು ದೆಂದೂ ಸೂಚಿತವಾಗುವುದು. ಹೀಗೆ ಧಾತುವಾಚ್ಯವಾದದು ಕ್ರಿಯೆಯಲ್ಲದಿದ್ದರೆ ಕಾಲಕ್ಕೂ ಕಾರಕಕ್ಕೂ ಕ್ರಿಯಾನ್ವಯವೇ ಬಾರದೆ ಇರುವುದರಿಂದ ಕಾಲಕ್ಕೆ ಕ್ರಿಯಾಭೇದಕತ್ವರೂಪಲಕ್ಷಣವು ಕಾರಕಕ್ಕೆ ಕ್ರಿಯಾನ್ವಯಿಕತ್ವರೂಪಲಕ್ಷಣವು ಸಿದ್ಧಿಸುವುದಿಲ್ಲ. ಆದುದರಿಂದ ಅವಶ್ಯಕವಾಗಿ ಧಾತು ಗಳಿಗೆ ಕ್ರಿಯಾವಾಚಕತ್ವವನ್ನಂಗೀಕರಿಸಿ—**ಧಾತೋರರ್ಥಃ ಕ್ರಿಯೋಚ್ಯತೇ** ಎಂದೂ

**ಫಲವ್ಯಾಪಾರಯೋರಾಶ್ರಯೇ ತು ತಿಙಃ ಸ್ಮೃತಾಃ**
**ಫಲೇ ಪ್ರಧಾನಂ ವ್ಯಾಪಾರಸ್ತಿಙರ್ಥಸ್ತು ವಿಶೇಷಣಂ**

ಎಂಬ **ಪತಂಜಲಿ** ವಚನದಿಂದ ಫಲವು ಧಾತುವಾಚ್ಯವೆಂದು ತಿಳಿಯಬೇಕು. ಇದಲ್ಲದೆ ಸಂಸ್ಕೃತ ವ್ಯಾಕರಣದಲ್ಲಿ '**ಸೌತ್ರ**' ಧಾತುಗಳೂ '**ಸನಾದ್ಯಂತ**' ಧಾತುಗಳೂ* ಹೇಳಲ್ಪಟ್ಟಿರುವುವು. ಭಾಷಾ ವ್ಯಾಕರಣದಲ್ಲಿ ಅಂತಹ ಸೌತ್ರಧಾತುಗಳಾವುವು ಇಲ್ಲವಾದರೂ ಸನಾದ್ಯಂತ ಧಾತುಗಳಿಗೆ ಬದಲಾಗಿ 'ಇಸು' ಮೊದಲಾದ ಕೆಲವು ಪ್ರತ್ಯಯಾಂತ ಧಾತುಗಳುಂಟೆಂದು ಅಂಗೀಕರಿಸಲ್ಪಟ್ಟಿರುವುದು. ಇಂತಹ ಧಾತುಗಳು ಸಂಸ್ಕೃತದಲ್ಲಿ ಹತ್ತುಗಣಗಳಾಗಿಯೂ ಆತ್ಮನೇಪದಿ, ಪರಸ್ಮೈಪದಿ, ಉಭಯಪದಿ ಎಂಬುದಾಗಿಯೂ ವಿಭಾಗಮಾಡಲ್ಪಟ್ಟಿರುವುವು. ಭಾಷೆಯಲ್ಲಿ ಇಂತಹ ಭೇದಗಳಾವುವು ಇರುವುದಿಲ್ಲ.

ಈ ಧಾತುಗಳು ಸಾಮಾನ್ಯವಾಗಿ **ಸಕರ್ಮಕ** ಧಾತುಗಳೆಂದೂ **ಅಕರ್ಮಕ** ಧಾತುಗಳೆಂದೂ ಎರಡು ಬಗೆಯಾಗಿರುವುವು. ಅವುಗಳಲ್ಲಿ ವ್ಯಾಪಾರಾಧಿಕರಣ ಮಾತ್ರಾವೃತ್ತಿ ಫಲವಾಚಕವಾದ ಧಾತುಗಳು **ಸಕರ್ಮಕ**ಗಳೆಂದೂ ವ್ಯಾಪಾರವ್ಯಧಿಕರಣ ಮಾತ್ರಾವೃತ್ತಿ ಫಲವಾಚಕವಾದುವು **ಅಕರ್ಮಕ**ಗಳೆಂದೂ ಕೆಲವರು ಸಕರ್ಮಕಾರ್ಮಕಗಳ ಲಕ್ಷಣವನ್ನು ಹೇಳುತ್ತಾರೆ. ಮತ್ತೆ ಕೆಲವರು— 'ಫಲಸಮಾನಾಧಿಕರಣ ವ್ಯಾಪಾರವಾಚಕತ್ವಮಕರ್ಮಕತ್ವಂ, ಫಲವ್ಯಧಿಕರಣ ವ್ಯಾಪಾರವಾಚಕತ್ವಂ ಸಕರ್ಮಕತ್ವಂ' ಎಂದು ಲಕ್ಷಣಗಳನ್ನು ಹೇಳುವರು. **ಹರಿಕಾರಿಕೆ**ಯಲ್ಲಿ —

**ಫಲವ್ಯಾಪಾರಯೋರೇಕನಿಷ್ಠತಾಯಾಮಕರ್ಮಕಃ**
**ಧಾತುಸ್ತಯೋರ್ಧರ್ಮಭೇದೇ ಸಕರ್ಮಕ ಉದಾಹೃತಃ**

ಎಂಬ ಶ್ಲೋಕದಿಂದ ಸ್ಪಷ್ಟವಾಗಿ ಹೇಳಿರುವುದು. ಶಾಸನದಲ್ಲಿ—

**ವೃದ್ಧಿಕ್ಷಯಭಯಜೀವಿತಮರಣಂ ಲಜ್ಜಾಸತ್ತಾಸ್ಥಿತಿಜಾಗರಣಂ**
**ಶಯನಕ್ರೀಡಾರುಚಿದೀಪ್ತ್ಯರ್ಥಂ ಧಾತುಗಣಂ ತಮಕರ್ಮಕಮಾಹುಃ**

ಎಂಬ ಶ್ಲೋಕದಲ್ಲಿ ಹೇಳಿರುವ ಅರ್ಥಗಳುಳ್ಳ ಧಾತುಗಳು ಅಕರ್ಮಕಗಳೆಂದು ಹೇಳಿ —

**ಯದ್ವಾಚ್ಯೇಹಾ ಸವಿಷಯಾ ಧಾತವಸ್ತೇ ಸಕರ್ಮಕಾಃ**

ಎಂಬ ಶ್ಲೋಕಾರ್ಧದಿಂದ ಸವಿಷಯಕ್ರಿಯಾವಾಚಕವಾದ ಧಾತುಗಳು ಸಕರ್ಮಕಗಳೆಂದು ಹೇಳಿ—

**ಯೇ ತು ನಿರ್ವಿಷಯಾಮಾಹುರೀಹಾಂ ತೇ ಸ್ಯುರಕರ್ಮಕಾಃ**

ಎಂದು ಉತ್ತರಾರ್ಧದಿಂದ ಅಕರ್ಮಕಲಕ್ಷಣವನ್ನು ಹೇಳಿರುವುದು. ಮತ್ತು—

**ಕರ್ತೃಕ್ರಿಯಾಪದದ್ವಂದ್ವಾತ್ ಕರ್ಮಾಪೇಕ್ಷಾ ಯದಾ ಭವೇತ್**
**ತದಾ ಸಕರ್ಮಕೋ ಧಾತುಃ ವಿಪರೀತಸ್ತ್ವಕರ್ಮಕಃ**

ಎಂಬ ಶ್ಲೋಕದಿಂದ ಬಾಲಕರಿಗೆ ಸುಲಭವಾಗಿ ತಿಳಿಯುವಂತೆ ಹೇಳಿರುವುದು. ಇದು ಪ್ರಾಜ್ಞರಿಗೆ ಅತಿವ್ಯಾಪ್ತ್ಯಾದಿದೋಷಗ್ರಸ್ತವಾಗಿ ತೋರುವುದರಿಂದ ಹಿಂದೆ ಹೇಳಿದ ಲಕ್ಷಣವನ್ನೆ ಅಂಗೀಕರಿಸಬೇಕು. **ದರ್ಪಣ**ದಲ್ಲಿ—

ಕ್ರಿಯೆಯ ಪದಂ ತಾಂ ಕರ್ತೃ
ಪ್ರಯುಕ್ತಮಾಗೆಲ್ಲಿಯೇನದೆಂಬಿಚ್ಛೆಯನಾ
ಶ್ರಯಿಪುದು ಸಕರ್ಮಕಮದಲ್ (ಸೂತ್ರ ೨೫೧ರ ಮುಂದಿನ ಪದ್ಯ)

* [ ಸಂಸ್ಕೃತದ ವ್ಯಾಕರಣಕಾರರು ಧಾತುಗಳನ್ನೂ '**ವ್ಯುತ್ಪನ್ನ-ಅವ್ಯುತ್ಪನ್ನ**' ಎಂದು ಎರಡು ವಿಧವಾಗಿ ವಿಭಾಗಿಸುತ್ತಾರೆ. '**ಸನ್**' ಮುಂತಾದ ಕೆಲವು ಪ್ರತ್ಯಯಗಳನ್ನು ಅಂತ್ಯದಲ್ಲಿ ಉಳ್ಳ ಧಾತುಗಳಿಗೆ '**ಸನಾದ್ಯಂತ**'ಗಳೆಂದು ಅವುಗಳನ್ನು '**ವ್ಯುತ್ಪನ್ನ**' ಎಂಬ ವಿಭಾಗದಲ್ಲಿ ಸೇರಿಸುತ್ತಾರೆ. -ಸಂಪಾದಕ]

ಎಂಬುದರಿಂದ ಇದೇ ಅರ್ಥವು ಸೂಚಿಸಲ್ಪಟ್ಟಿರುವುದು. ಸಂಸ್ಕೃತದಲ್ಲಿ ಸಾಮಾನ್ಯವಾಗಿ ಸಕರ್ಮಕಾಕರ್ಮಕ ಲಕ್ಷಣಗಳನ್ನು ಹೇಳಿ—

**ಪಚ್ಯಾದಿಕಾ ಸವಿಷಯಾ ಕ್ರಿಯಾ ಸಾ ಯಾ ಕಿಮಿಚ್ಛಿಕಾ**
**ಸ್ಥಿತ್ಯಾದಿರನ್ಯಾ ವಿಷಯಾ ಕಿಮಿಚ್ಛಾಂ ಜನಯೇನ್ನ ಯಾ**

ಎಂಬುದರಿಂದ ವಿಶೇಷವಾಗಿ ಆ ಲಕ್ಷಣಗಳಿಗೆ ಸ್ಪಷ್ಟವಾಗಿ ಅರ್ಥವನ್ನು ವಿವರಿಸಿರುವುದು. ಇದರಿಂದ ಸಕರ್ಮಕಾಕರ್ಮಕಗಳಿಗೆ ಲಕ್ಷಣಗಳನ್ನು ತೋರಿಸಿದಂತಾಗುವುದು. ಇವೆಲ್ಲಾ ಪಂಡಿತರು ಸೂಕ್ಷ್ಮಬುದ್ಧಿಯಿಂದ ವಿಚಾರಿಸಲು ಒಂದೇ ಲಕ್ಷಣವಾಗಿ ಪರಿಣಮಿಸುವುವು.

ಇವುಗಳಲ್ಲಿ ಸಕರ್ಮಕಗಳಾಗಿ ಅಭಿಮತವಾದ ಕೆಲವು ಧಾತುಗಳು ಅಕರ್ಮಕಗಳಾಗುವುವು. ಅಕರ್ಮಕವಾಗಿರುವ ಕೆಲವು ಧಾತುಗಳು ಸಕರ್ಮಕಗಳಾಗುವುವು ಎಂಬುದು—

**ಧಾತೋರರ್ಥಾಂತರೇ ವೃತ್ತೇರ್ಧಾತ್ವರ್ಥೇನೋಪಸಂಗ್ರಹಾತ್**
**ಪ್ರಸಿದ್ಧೇರವಿವಕ್ಷಾತಃ ಕರ್ಮಣೋಽಕರ್ಮಿಕಾ ಕ್ರಿಯಾ**

ಎಂಬ ಶ್ಲೋಕದಿಂದ ತೋರುವುದು. ಇದು ಕೆಲವು ಪ್ರಯೋಗಗಳಲ್ಲಿ ಉಪಸರ್ಗಬಲದಿಂದಲೂ ತೋರುವುದುಂಟು. ಭಾಷೆಯಲ್ಲಿ ಕಾರಣಾಂತರಗಳಿಂದಲೂ ಅರ್ಥವಿಶೇಷದಿಂದಲೂ ಸಕರ್ಮಕ ಧಾತುಗಳನ್ನು ಅಕರ್ಮಕಗಳನ್ನಾಗಿಯೂ ಅಕರ್ಮಕಧಾತುಗಳನ್ನು ಸಕರ್ಮಕಗಳನ್ನಾಗಿಯೂ ಉಪಯೋಗಿಸುವುದುಂಟು. ಆದರೆ ಸಂಸ್ಕೃತದಲ್ಲಿರುವಂತೆ ಅಂತಹ ಅರ್ಥ ವಿಶೇಷವನ್ನು ತೋರಿಸುವ ಉಪಸರ್ಗಗಳಾವುವು ಇಲ್ಲವಾದರೂ ಪ್ರಯೋಗ ಬಲದಿಂದ ಊಹಿಸಿ ತಿಳಿದುಕೊಳ್ಳಬೇಕು.

ಹೀಗೆ ದ್ವಿವಿಧವಾದ ಧಾತುಗಳಲ್ಲಿ ಸಕರ್ಮಕವಾದ ಧಾತುಗಳು **ಏಕಕರ್ಮಕ**ಗಳೆಂದು **ದ್ವಿಕರ್ಮಕ**ಗಳೆಂದು ಎರಡು ಬಗೆಯಾಗಿರುವುವು. ಇವುಗಳಲ್ಲಿ ಒಂದೇ ಕರ್ಮದಿಂದ ಅನ್ವಿತವಾಗಿ ಸ್ವಾರ್ಥವನ್ನು ಬೋಧಿಸುವುವು **ಏಕಕರ್ಮಕ**ಗಳೆಂದು ತಿಳಿಯುವುದು. **ದ್ವಿಕರ್ಮಕಗಳು** ಎರಡು ಕರ್ಮಗಳಿಂದ ಅನ್ವಿತವಾಗಿ ಒಂದೇ ವ್ಯಾಪಾರವನ್ನು ಬೋಧಿಸುವುವೆಂದು ಎರಡು ಕರ್ಮಗಳಿಂದ ಅನ್ವಿತವಾಗಿ ಎರಡು ವ್ಯಾಪಾರವನ್ನು ಬೋಧಿಸುವುವೆಂದು ಎರಡು ಬಗೆಯಾಗಿರುವುವು. ಇವುಗಳ ಸ್ವರೂಪವನ್ನು ಧಾತುಪ್ರಕರಣದಲ್ಲಿ ವಿವರಿಸುವೆವು.

**ಅವತಾರಿಕೆ ೧೩**

ಹೀಗೆ ಪ್ರಸಿದ್ಧವಾದ ‘ಸುಬಂತ ತಿಙಂತ’ ರೂಪವಾದ ದ್ವಿವಿಧವಾದ ಪದಗಳ ಸಾಧುತ್ವವನ್ನು ಬೋಧಿಸಲು ವಿಧಿಸುವ ‘**ಸುಪ್**’ ‘**ತಿಙ್**’ ಪ್ರತ್ಯಯಗಳನ್ನು ಮಾಡುವುದಕ್ಕೆ ಉಪಯುಕ್ತವಾದ ‘**ಲಿಂಗ**’ ಸಂಜ್ಞೆಯನ್ನು ‘**ಧಾತು**’ ಸಂಜ್ಞೆಯನ್ನು ಹೇಳಿ ನಾಮ ಮತ್ತು ಧಾತು ಇವುಗಳ ವಿಶೇಷ ನಿರಪೇಕ್ಷವಾಗಿ ಶಬ್ದಮಾತ್ರದಲ್ಲಿ ಉಪಯುಕ್ತವಾದ ಸಂಜ್ಞಾವಿಶೇಷವನ್ನು ಹೇಳುತ್ತಾನೆ.

**ಸೂತ್ರಂ ॥ ದುರಂತ್ಯವ್ಯಂಜನಾದಿಃ ॥ ೧೩ ॥**

**ಅರ್ಥ॥ ನಾಮ-ಧಾತುಗಳೆಂಬ ಭೇದವಿಲ್ಲದ ಶಬ್ದಮಾತ್ರದಲ್ಲಿರುವ ವ್ಯಂಜನಮಧ್ಯದಲ್ಲಿ ಅಂತ್ಯವ್ಯಂಜನವೆ ಆದಿಯಾಗುಳ್ಳ ಶಬ್ದಾವಯವವು ‘ದು’ ಸಂಜ್ಞಕವಾಗುವುದು.**

ಎಂದರೆ ವ್ಯಂಜನಾಂತ ಶಬ್ದಗಳಲ್ಲಿ ಕೊನೆಯ ವ್ಯಂಜನ ಮಾತ್ರವು ಸ್ವರಾಂತ ಶಬ್ದಗಳಲ್ಲಿ

ಕೊನೆಯ ವ್ಯಂಜನವೆ ಆದಿಯಲ್ಲುಳ್ಳ ಅಂತ್ಯ ಸ್ವರಸಹಿತವಾದುದು 'ದು' ಸಂಜ್ಞೆಯನ್ನುಳ್ಳುದೆಂದು ತಿಳಿಯಬೇಕು.

**ಪ್ರಯೋಜನಂ** || '**ದೋಃಕ್ಕಳನೇಕತ್ವೇ** || **೧೮೮** ||' ಎಂಬುದೆ ಮೊದಲಾದ 'ದೋಃ' ಎಂಬ ಪದವುಳ್ಳ ಸೂತ್ರಗಳಲ್ಲಿ 'ದೋಃ' ಎಂಬುದಕ್ಕೆ ಆಯಾ ಸೂತ್ರಗಳಲ್ಲಿ ಉದ್ದೇಶ್ಯವಾಗಿ ಹೇಳಿರುವ ಶಬ್ದಗಳ ಅಂತ್ಯ ವ್ಯಂಜನ ಮೊದಲಾದ ಭಾಗಕ್ಕೆ ಆಯಾ ಕಾರ್ಯಗಳು ಬರುವುವೆಂದು ತಿಳಿಯಬೇಕು.

**ವಿಚಾರ ೧೩**

ಈ ಸೂತ್ರದಲ್ಲಿ ಹೇಳಿರುವ 'ಅಂತ್ಯವ್ಯಂಜನಾದಿ' ಎಂಬ ಪದಕ್ಕೆ ಸ್ವರಾಂತವಾದ ಶಬ್ದಗಳಲ್ಲಿ ಆ ಕೊನೆಯ ಸ್ವರದ ಹಿಂದಿನ ವ್ಯಂಜನವೇ ಆದಿಯಾಗುಳ್ಳ ಅಂತ್ಯ ಸ್ವರಸಹಿತವಾದ ಭಾಗವೆಂದೂ ವ್ಯಂಜನಾಂತವಾದ ಶಬ್ದಗಳಲ್ಲಿ ಆ ಕೊನೆಯ ವ್ಯಂಜನ ಮಾತ್ರವೆ ಎಂದೂ ಅರ್ಥವೆಂದು ಹೇಳಬೇಕು. ಆದರೆ ವ್ಯಂಜನಾಂತ ಶಬ್ದಗಳಿಗೆಲ್ಲ ಅಂತ್ಯದಲ್ಲಿ ವ್ಯಂಜನಮಾತ್ರವೆ ಇರುವುದರಿಂದ ತದಾದಿಯಾದ ವರ್ಣಾಂತರವಿಲ್ಲದಿದ್ದರೂ ಲೋಕದಲ್ಲಿ ಒಬ್ಬ ಮನುಷ್ಯನಿಗೆ ಒಬ್ಬನೆ ಮಗನಿರಲು ಆರಾದರೂ ಆ ಮಗುವನ್ನು ನೋಡಿ 'ನಿನಗೆ ಇವನೇ ದೊಡ್ಡ ಮಗನೋ?' ಎಂದು ಪ್ರಶ್ನೆಮಾಡಿದರೆ 'ದೊಡ್ಡವನೂ ಇವನೇ ಮಧ್ಯಮನೂ ಇವನೇ ಕೊನೆಯವನೂ ಇವನೇ' ಎಂದು ಒಂದೇ ವ್ಯಕ್ತಿಯಲ್ಲಿ ಹೇಗೆ 'ಜ್ಯೇಷ್ಠ-ಮಧ್ಯಮ-ಕನಿಷ್ಠ' ವ್ಯವಹಾರಗಳಿರುವುವೋ ಹಾಗೆ ಶಾಸ್ತ್ರದಲ್ಲಿಯೂ ಕಾರ್ಯಾರ್ಥವಾಗಿ ವರ್ಣಾಂತರ ಸಹಾಯವಿಲ್ಲದಾಗ ಆ ಒಂದೇ ವರ್ಣದಲ್ಲಿ ಆದಿತ್ವ-ಅಂತ್ಯತ್ವ ವ್ಯವಹಾರಗಳನ್ನು ಮಾಡಬೇಕು. ಇಂತಹ ವ್ಯವಹಾರಕ್ಕೆ ಸಂಸ್ಕೃತ ವ್ಯಾಕರಣಕಾರರು '**ವ್ಯಪದೇಶಿವದ್ಭಾವ**' ವೆಂದು ಹೇಳುವರು. ಭಾಷಾವ್ಯಾಕರಣದಲ್ಲಿ ಈ 'ವ್ಯಪದೇಶಿವದ್ಭಾವ' ವು ಕೆಲವೆಡೆಗಳಲ್ಲಿ ಉಪಯುಕ್ತವಾಗಿದ್ದರೂ 'ದು' ಸಂಜ್ಞಾವಿಷಯದಲ್ಲಿ ವ್ಯಂಜನಮಾತ್ರಕ್ಕೆ 'ದು' ಸಂಜ್ಞೆ ನಿಮಿತ್ತಕವಾದ ಕಾರ್ಯಗಳು ಪ್ರಾಯಶಃ ಇಲ್ಲವಾದುದರಿಂದ ಇಲ್ಲಿ ಅಷ್ಟು ಉಪಯುಕ್ತವಲ್ಲವೆಂದು ತಿಳಿಯಬೇಕು. '**ವ್ಯಪದೇಶಿವದ್ಭಾವ**' ವೆಂದರೆ— 'ವಿ' ವಿಶಿಷ್ಟವಾದ 'ಅಪದೇಶ' ವ್ಯವಹಾರ, ಇದುವುಳ್ಳುದು 'ವ್ಯಪದೇಶಿ,' ಇದಕ್ಕೆ ಸದೃಶವಾದುದು 'ವ್ಯಪದೇಶಿವತ್' ಹೀಗಾಗಿರುವುದೇ 'ವ್ಯಪದೇಶಿದ್ಭಾವ' ಎಂದರೆ ಅಸಹಾಯಸ್ಥಲಗಳಲ್ಲಿ ವಿಶೇಷಣಾದಿ ವಿಶಿಷ್ಟವ್ಯವಹಾರಗಳನ್ನು ಮಾಡಿ ತತ್ತತ್ಪ್ರಯುಕ್ತಕಾರ್ಯಗಳನ್ನೆಲ್ಲಾ ಮಾಡಬಹುದೆಂದು ತಾತ್ಪರ್ಯವು.

ಸಂಸ್ಕೃತ ವ್ಯಾಕರಣದಲ್ಲಿ 'ದು' ಸಂಜ್ಞೆಗೆ ಪ್ರತಿಯಾಗಿ, 'ಟಿ' ಎಂಬ ಸಂಜ್ಞೆಯನ್ನು '**ಅಚೋಽನ್ತ್ಯಾದಿ ಟಿ** || **೧-೧-೬೪** ||' ಎಂಬ ಸೂತ್ರದಿಂದ ಸೂಚಿಸಿರುವುದು. ಆದರೆ ಇಲ್ಲಿ ಸ್ವರಾಂತ್ಯವಾದ ಶಬ್ದಗಳಲ್ಲಿ ಅಂತ್ಯಸ್ವರಮಾತ್ರಕ್ಕೂ ವ್ಯಂಜನಾಂತ ಶಬ್ದಗಳಲ್ಲಿ ಆ ವ್ಯಂಜನದ ಹಿಂದಿನ ಸ್ವರದಿಂದ ಕೂಡಿದ ಅಂತ್ಯವ್ಯಂಜನಕ್ಕೂ ಬರುವುದೆಂದು ತಿಳಿಯಬೇಕು.

**ದರ್ಪಣಕಾರನು** ಇಂತಹ ಆವ ಸಂಜ್ಞೆಯನ್ನೂ ಹೇಳಿಲ್ಲ.

**ಅವತಾರಿಕೆ ೧೪**

ಹಿಂದೆ ಕೆಲವು ಸೂತ್ರಗಳಿಂದ ಪ್ರಕೃತಿಗಳ ವಿಷಯದಲ್ಲಿ ವ್ಯವಹರಿಸುವ 'ಲಿಂಗ' ಸಂಜ್ಞೆಯನ್ನೂ 'ಧಾತು' ಸಂಜ್ಞೆಯನ್ನೂ ಬೋಧಿಸಿ, ಅವುಗಳಲ್ಲಿ ಸಾಧಾರಣವಾದ 'ದು' ಎಂಬ ಸಂಜ್ಞೆ

ಯನ್ನೂ ಹೇಳಿ, ತದಾಶ್ರಯವಾಗಿ ವಿಧಿಸುವ ಪ್ರತ್ಯಯಾದೇಶಗಳಲ್ಲಿ ಮೊದಲು ಮುಖ್ಯವಾದ **'ಪ್ರತ್ಯಯ'** ಸ್ವರೂಪವನ್ನು ತಿಳಿಸಲು 'ಪ್ರತ್ಯಯ' ಸಂಜ್ಞಾಸೂತ್ರವನ್ನು ಹೇಳುತ್ತಾನೆ—

**ಸೂತ್ರಂ ॥ ಪಂಚಮ್ಯಾಃ ಪ್ರತ್ಯಯಃ ಪರಃ ॥ ೧೪ ॥**

**ಅರ್ಥ ॥ ಈ ಶಾಸ್ತ್ರದಲ್ಲಿ ಪಂಚಮ್ಯಂತವನ್ನುಚ್ಚರಿಸಿ ಸಾಕ್ಷಾತ್ತಾಗಿ ಆವುದು ವಿಧಿಸಲ್ಪಡುವುದೊ ಅದು ಪ್ರತ್ಯಯವೆನಿಸಿಕೊಳ್ಳುವುದು. ಅದು ಆಯಾ ಸೂತ್ರಗಳಲ್ಲಿ ಉಪಾತ್ತವಾಗಿರುವ ಪಂಚಮ್ಯಂತಪದಗಳಿಂದ ಬೋಧ್ಯವಾದ ಶಬ್ದಗಳ ಮುಂದೆ ಬರುವುದೆಂದು ತಿಳಿಯಬೇಕು.**

**ಉದಾಹರಣೆ** ॥ '**ಓಕಾಮೇಭ್ಯಃ ಪುಃ ॥ ೫೭೩** ॥' ಇದೆ ಮೊದಲಾದ ಸೂತ್ರಗಳಲ್ಲಿ ಪಂಚಮ್ಯಂತ ಪದಗಳನ್ನುಚ್ಚರಿಸಿ, '**ಪು**' ಮೊದಲಾದುವುಗಳನ್ನು ವಿಧಿಸುವುದರಿಂದ ಆ '**ಪು**' ಮೊದಲಾದುವು ಪ್ರತ್ಯಯ ಸಂಜ್ಞೆಯನ್ನು ಹೊಂದಿ ಆಯಾ ಸೂತ್ರಗಳಲ್ಲಿ ಹೇಳಿರುವ 'ಓ' 'ಕಾ' 'ಮೇ' ಮೊದಲಾದ ಪ್ರಕೃತಿ ವಿಶೇಷಗಳಿಗೆ ಪರವಾಗಿ ಬರುವುದರಿಂದ 'ಓಪು' 'ಕಾಪು' 'ಮೇಪು' ಇತ್ಯಾದಿ ರೂಪಗಳು ಸಿದ್ಧವಾಗುವುವು. ಆದುದರಿಂದ ಅಂತಹ ಸೂತ್ರಗಳಿಗೆ ಉದಾಹರಣೆಗಳಾಗುವ ಶಬ್ದಗಳೆಲ್ಲಾ ಈ ಸೂತ್ರಕ್ಕೂ ಉದಾಹರಣೆಗಳಾಗುವುವೆಂದು ಭಾವಿಸಬೇಕು.

ಇದರಂತೆ—'**ಅಟ್ ಸ್ವರಾತ್ ॥ ೩೨೮** ॥' ಎಂಬ ಸೂತ್ರದಿಂದ ವಿಧಿಸುವ '**ಅಟ್**' ಎಂಬುದು ಪ್ರತ್ಯಯವು. ಇದು ಸ್ವರಾಂತವಾದ ಬಹುವ್ರೀಹಿ ಸಮಾಸ ಸಂಜ್ಞಕವಾದ ಶಬ್ದಗಳ ಮುಂದೆ ಬರುವುದರಿಂದ, 'ಮೆಲ್ಲರ್ದೆಯಂ, ಪೆಟಿವಣೆಯಂ' ಎಂದು ಮೊದಲಾದ ಪ್ರಯೋಗಗಳು ಸಿದ್ಧಿಸುವುವು.

**ಪ್ರಯೋಜನಂ ॥ 'ಪ್ರತ್ಯಯೇ ॥ ೮೪ ॥'** ಎಂಬ ಸೂತ್ರವೆ ಮೊದಲಾದ 'ಪ್ರತ್ಯಯ' ಪದವುಳ್ಳ ಸೂತ್ರಗಳಲ್ಲಿ ಆ 'ಪ್ರತ್ಯಯ' ಪದಕ್ಕೆ ಮೇಲೆ ಸೂಚಿಸಿರುವ ಸೂತ್ರಗಳಲ್ಲಿ ವಿಧೇಯವಾದುವುಗಳೆಂದು ತಿಳಿಯಬೇಕು.

**ವಿಚಾರ ೧೪**

ಈ ಶಾಸ್ತ್ರದಲ್ಲಿ ವಿಧೇಯಗಳಾಗಿರುವುವು — **ಆಗಮ-ಪ್ರತ್ಯಯ-ಆದೇಶ** ಎಂದು ಮೂರು ಬಗೆಯಾಗಿರುವುವು. ಇವುಗಳಲ್ಲಿ ಆಗಮವಾವುದು ? ಪ್ರತ್ಯಯವಾವುದು ? ಆದೇಶವಾವುದು ? ಎಂದು ಸಂದೇಹವುಂಟಾಗಲು, ಪ್ರತ್ಯಯ ಸ್ವರೂಪವನ್ನು ಬೋಧಿಸಲು ಈ ಸೂತ್ರವು ಪ್ರಾರಂಭಿಸಲ್ಪಟ್ಟಿರುವುದು. ಆದರೆ ಇಲ್ಲಿ ಪಂಚಮೀನಿರ್ದೇಶದಿಂದಲೆ ವಿಧಿಸುವುದು ಪ್ರತ್ಯಯವು, ಇತರ ವಿಭಕ್ತ್ಯಂತವನ್ನು ಹೇಳಿ ವಿಧಿಸುವುದು ಅಲ್ಲವೆಂದು ನಿಯಮವೆ ? ಅಥವಾ ಪಂಚಮೀನಿರ್ದೇಶದಿಂದ ಪ್ರತ್ಯಯಮಾತ್ರವು ವಿಧಿಸಲ್ಪಡುವುದು ಮತ್ತಾವುದೂ ಇಲ್ಲವೆಂದು ನಿಯಮವೆ ? ಎಂದು ಎರಡು ಬಗೆಯಾದ ಶಂಕೆಯುಂಟಾಗುವುದು. ಆದರೆ—'**ಕರ್ಮಣ್ಯಮ್ ॥ ೨೦೪ ॥ ಇಮ್ ಸಿದ್ಧೌ ॥ ೨೦೮ ॥ ಗೆದಾಪ್ಯೇ ದೇಯ್ಯೈಃ ॥ ೨೧೩ ॥**' ಮೊದಲಾದ ಕೆಲವು ಸೂತ್ರಗಳಲ್ಲಿ 'ಕರ್ಮಣಿ' ಎಂದು ಮೊದಲಾದ ಸಪ್ತಮ್ಯಂತಾದಿ ನಿರ್ದೇಶಗಳಿಂದ ವಿಧಿಸಲ್ಪಡುವ 'ಅಮ್, ಇಮ್, ಗೆತ್' ಮೊದಲಾದವುಗಳಿಗೆ 'ಪ್ರತ್ಯಯ' ಸಂಜ್ಞೆಯು ಬಾರದೆ ಹೋಗುವುದು. ಆದುದರಿಂದ ಮೊದಲನೆಯ ಶಂಕೆಯು ಸರಿಯಾದುದಲ್ಲವೆಂದು ತಿಳಿಯಬೇಕು. '**ದೀರ್ಘಾದ್ವೃತೋ ರುರ ದ್ವಾದೇಃ ॥ ೪೦ ॥ ಸ್ವರಾದ್ವಃ ಪವರ್ಗಸ್ಯ ॥ ೯೧ ॥**' ಇತ್ಯಾದಿ ಸೂತ್ರಗಳಲ್ಲ ಪಂಚಮ್ಯಂತನಿರ್ದೇ

ಶವಿದ್ದರೂ ಕಾರ್ಯಾಂತರವನ್ನು ವಿಧಿಸುವುದರಿಂದ ಎರಡನೆಯ ಶಂಕೆಯು ಸರಿಯಾದುದಲ್ಲವೆಂದು ತಿಳಿಯುವುದು. 'ಕರ್ಮಣಿ' ಇತ್ಯಾದಿ ಸೂತ್ರಗಳಲ್ಲಿ 'ಲಿಂಗಾತ್' ಎಂಬ ಪಂಚಮ್ಯಂತವನ್ನು ಅನುವರ್ತಿಸಿ, ಅದರಮುಂದೆ ಸಾಕ್ಷಾತ್ತಾಗಿ ವಿಧಿಸಲ್ಪಡುವುದೆ ಪ್ರತ್ಯಯವು, ಪಂಚಮ್ಯಂತಕ್ಕೆ ಪರವಾದುದರ ಸ್ಥಾನದಲ್ಲಿ ವಿಧಿಸಲ್ಪಡುವುವು ಆಗಮಾದೇಶಗಳು ಎಂದು ತಿಳಿಯುವುದು. ಇದಲ್ಲದೆ ಆಗಮಾದೇಶಗಳಿಗೆ ನಿಮಿತ್ತಗಳುಂಟು. ಅವು ಆಯಾ ಸೂತ್ರಗಳಲ್ಲಿ ತಿಳಿಸಲ್ಪಡುವುವು.

ಲೋಕದಲ್ಲಿ –'ಪೂರ್ವ ಪರ ದಕ್ಷಿಣ ಉತ್ತರ' ಮೊದಲಾದ ಶಬ್ದಗಳು ದಿಗ್ದೇಶಕಾಲವ್ಯಕ್ತಿಗಳಾಗಿರುವುದರಿಂದ ಆ ಶಬ್ದಗಳನ್ನು ಪ್ರಯೋಗಿಸಲು, ಆವುದಕ್ಕಿಂತಲೂ ಪೂರ್ವ, ಆವುದಕ್ಕಿಂತಲೂ ಪರ, ಆವುದಕ್ಕಿಂತಲೂ ದಕ್ಷಿಣ, ಆವುದಕ್ಕಿಂತಲೂ ಉತ್ತರ, ಎಂದು ಆವುದಾದರೂ ಒಂದವಧಿಯ ಆಕಾಂಕ್ಷೆಯುಂಟಾಗುವುದು. ಅದರಂತೆ ಈ ಶಾಸ್ತ್ರದಲ್ಲಿಯೂ ಇಂತಹ ಶಬ್ದಗಳನ್ನು ಪ್ರಯೋಗಿಸಿದರೆ ಒಂದು ಅವಧಿಯನ್ನು ಅಪೇಕ್ಷಿಸುವುದು. ಹಾಗೆ ಈ ಸೂತ್ರದಲ್ಲಿ 'ಪರಃ' ಎಂದು ಪ್ರಯೋಗಿಸಿರುವುದರಿಂದ ಆವುದಕ್ಕಿಂತಲೂ ಪರವಾಗಿ ಬರುವುದು ಪ್ರತ್ಯಯವೆನಿಸಿಕೊಳ್ಳುವುದೆಂದು ಪ್ರಕೃತಿಯ ಆಕಾಂಕ್ಷೆಯುಂಟಾಗಲು, 'ಪಂಚಮ್ಯಾಃ' ಎಂದು ಹೇಳಿರುವುದರಿಂದ ಪ್ರತ್ಯಯವಿಧಾಯಕ ಸೂತ್ರಗಳಲ್ಲಿ ಉಪಾತ್ತವಾದ ಪಂಚಮ್ಯಂತಪದ ಬೋಧ್ಯವಾದ ಆಯಾ ಪ್ರಕೃತಿವಿಶೇಷಕ್ಕೆ ಪರವಾಗಿ ಆಯಾ ಪ್ರತ್ಯಯಗಳು ಬರುವುವೆಂದು ತಿಳಿಯಬೇಕು.

ಆದರೆ ಮೇಲೆ ಹೇಳಿದಂತೆ ಪ್ರತ್ಯಯವಿಧಾಯಕವಾದ ಕೆಲವು ಸೂತ್ರಗಳಲ್ಲಿ -ಸಪ್ತಮ್ಯಂತಾದಿನಿರ್ದೇಶಗಳಿರುವುದರಿಂದಲೂ ಪ್ರತ್ಯಯವಿಧಾಯಕವಲ್ಲದ ಕೆಲವು ಸೂತ್ರಗಳಲ್ಲಿ ಪಂಚಮ್ಯಂತಗಳನ್ನು ಹೇಳಿರುವುದರಿಂದಲೂ ಪಂಚಮೀನಿರ್ದೇಶದಿಂದಲೇ ವಿಹಿತವಾದುದು ಪ್ರತ್ಯಯವು, ಇತರವಿಭಕ್ತ್ಯಂತನಿರ್ದೇಶ ವಿಹಿತವಾದುದು ಅಲ್ಲ ಎಂಬ ನಿಯಮವೂ ಪಂಚಮೀ ನಿರ್ದೇಶದಿಂದ ವಿಧಿಸಲ್ಪಡುವುದು ಪ್ರತ್ಯಯವೇ, ಇತರವಲ್ಲ – ಎಂಬ ನಿಯಮವೂ ಆಗುವುದಿಲ್ಲವೆಂದು ಶಂಕೆಯುಂಟಾಗುವುದು. ಆದರೆ ಕರ್ಮಣೀತ್ಯಾದಿ ಸೂತ್ರಗಳಲ್ಲಿ ಸಪ್ತಮ್ಯಂತಾದಿನಿರ್ದೇಶಗಳನ್ನು ಮಾಡಿದ್ದರೂ ಅವು ಅರ್ಥವಿಶೇಷಗಳನ್ನು ಬೋಧಿಸುವುವೇ ಅಲ್ಲದೆ ಪ್ರಕೃತಿಯನ್ನು ಬೋಧಿಸುವುದಿಲ್ಲವಾದುದರಿಂದ ಇಂತಹ ಸೂತ್ರಗಳಲ್ಲಿ 'ಲಿಂಗಾತ್' ಎಂಬ ಪಂಚಮ್ಯಂತ ಪದವನ್ನು ಅನುವರ್ತಿಸಿ ಕರ್ಮರೂಪಾದ್ಯರ್ಥದಲ್ಲಿ ಲಿಂಗಕ್ಕೆ ಪರವಾಗಿ 'ಅಮಾದಿ' ಪ್ರತ್ಯಯಗಳು ಬರುವುವೆಂದು ವ್ಯಾಖ್ಯಾನ ಮಾಡುವುದರಿಂದಲೂ 'ದೀರ್ಘಾದಿ' ಇತ್ಯಾದಿ ಸೂತ್ರಗಳಲ್ಲಿ 'ದೀರ್ಘಾತ್ ಪರಸ್ಯ ಸ್ಥಾನೇ' ಎಂದು ಷಷ್ಠ್ಯಂತಪದಬೋಧ್ಯವಾದ ಶಬ್ದಗಳಿಗೆ ಕಾರ್ಯಗಳನ್ನು ವಿಧಿಸಿರುವುದರಿಂದಲೂ ಸೂತ್ರೋಪಾತ್ತ ಪಂಚಮ್ಯಂತ ಪದಬೋಧ್ಯವಾದುದಕ್ಕೆ ಸಾಕ್ಷಾತ್ಪರವಾಗಿಯೇ ವಿಧಿಸಲ್ಪಡುವುದೇ ಪ್ರತ್ಯಯವೆಂದು ಹೇಳಲು ಆವ ಬಾಧಕವೂ ತೋರುವುದಿಲ್ಲ.

ಆದರೆ ಇಲ್ಲಿ 'ಪರವಾಗಿಯೇ ಬರುವುದು' ಎಂಬ ನಿಯಮಮಾಡಿರುವುದು– **ಕದಾಚಿತ್** ಪೂರ್ವವಾಗಿ ಪ್ರಾಪ್ತವಾದರೆ ತದ್ವ್ಯಾವೃತ್ತ್ಯರ್ಥವಾಗಿ– ಎಂದು ಹೇಳಬೇಕು. ಸಂಸ್ಕೃತದಲ್ಲಿ 'ಬಹುಚ್, ಅಕಚ್' ಎಂಬ ಪ್ರತ್ಯಯಗಳು ಪೂರ್ವವಾಗಿಯೂ ಮಧ್ಯವಾಗಿಯೂ ಬರುವಂತೆ, ಕನ್ನಡದಲ್ಲಿ ಇಲ್ಲವಾದುದರಿಂದ ಹಾಗೆ ನಿಯಮನ ಮಾಡುವುದು ವ್ಯರ್ಥವೆಂದು ತೋರುವುದು. ಮತ್ತು– '**ತಸ್ಮಾದುತ್ತರಸ್ಯ || ೨೬ ||**' ಎಂದು ಮುಂದೆ ಹೇಳುವ ಪರಿಭಾಷಾ ಸೂತ್ರದಿಂದ ಪಂಚಮ್ಯಂತ

ನಿರ್ದೇಶಸ್ಥಲಗಳಲ್ಲಿ ಉಪಸ್ಥಿತವಾಗುವ ' ಪರಸ್ಯ ' ಎಂಬ ಷಷ್ಠ್ಯಂತವನ್ನು ಪ್ರಥಮಾಂತವಾಗಿ ವಿಪರಿಣಾಮ ಮಾಡಿಕೊಂಡು ಪ್ರತ್ಯಯವು ಪರವಾಗಿ ಬರುವುದೆಂದು ವ್ಯಾಖ್ಯಾನವನ್ನು ಮಾಡಿದರೂ ' ಪರಃ ' ಎಂಬುದು ಗತಾರ್ಥವಾಗುವುದರಿಂದಲೂ ವ್ಯರ್ಥ ವಿಶೇಷಣವೆಂದು ತೋರುವುದು. ಇದೇ ರೀತಿಯಾಗಿ ಸಂಸ್ಕೃತವ್ಯಾಕರಣಕ್ಕೆ ವ್ಯಾಖ್ಯಾನವನ್ನು ಬರೆದಿರುವವರು ಶಂಕಿಸಿ ಅಲ್ಲಿ **' ಪ್ರತ್ಯಯಃ ಪರಶ್ಚ '** ಎಂದು ಅಧಿಕಾರ ಸೂತ್ರವಾಗಿ ಹೇಳಿರುವ ' ಪರಃ ' ಎಂಬುದಕ್ಕೆ-- **' ನ ಕೇವಲಾಃ ಪ್ರಕೃತಯಃ ಪ್ರಯೋಕ್ತವ್ಯಾಃ ನಾಪಿ ಪ್ರತ್ಯಯಾಃ '** ಎಂದು ಜ್ಞಾಪಿಸುವುದೇ ಪ್ರಯೋಜನವೆಂದು ಹೇಳಿರುವರು. ಇದರಂತೆ ಭಾಷೆಯಲ್ಲಿಯೂ ಪ್ರತ್ಯಯವನ್ನು ಸ್ಥಲವ್ಯವಸ್ಥೆಯಿಲ್ಲದೆ ಪ್ರಯೋಗಿಸಲಾಗದು ಎಂದು ಈ ಸೂತ್ರವು ಬೋಧಿಸುವುದು.

ಆದರೆ ಪ್ರತ್ಯಯವಿಲ್ಲದ ಕೇವಲ ಪ್ರಕೃತಿಗಳನ್ನೂ ಪ್ರಕೃತಿಯಿಲ್ಲದ ಕೇವಲ ಪ್ರತ್ಯಯಗಳನ್ನೂ ಪ್ರಯೋಗಿಸಲಾಗದೆಂದು ಮೇಲಿನ ನಿಯಮವನ್ನಂಗೀಕರಿಸಿದರೂ ಸಂಸ್ಕೃತದಲ್ಲಿ ಅವ್ಯಯಗಳಿಗೂ 'ದಧಿ-ಮಧು' ಮೊದಲಾದ ಕೆಲವು ಪ್ರಕೃತಿಮಾತ್ರಗಳಿಗೂ 'ಇಯತೀ' ಮೊದಲಾದ ಪ್ರತ್ಯಯಮಾತ್ರಕ್ಕೂ ಪ್ರಯೋಗವಿರುವುದರಿಂದ ಆ ನಿಯಮಕ್ಕೆ ಸಂಕೋಚವನ್ನು ಕಲ್ಪಿಸುವುದಕ್ಕೆ ಪ್ರತಿಯಾಗಿ ಸಾಮಾನ್ಯವಾಗಿ ಪ್ರಾಪ್ತವಾದ ಪ್ರತ್ಯಯಗಳಿಗೆ ಲೋಪಬರುವುದೆಂದು ಲೋಪವನ್ನು ವಿಧಿಸಿರುವರು. ಹೀಗೆ ಭಾಷೆಯಲ್ಲಿಯೂ ಕೆಲವೆಡೆಗಳಲ್ಲಿ ಸಾಮಾನ್ಯವಾಗಿ ಪ್ರಾಪ್ತವಾದ ಪ್ರತ್ಯಯಗಳಿಗೆ ಲೋಪವನ್ನು ಮಾಡಲು **' ಲ್ಲುಬವ್ಯಯಸ್ಯ || ೨೪೭ || '** ಇತ್ಯಾದಿ ಕೆಲವು ಸೂತ್ರಗಳನ್ನು ಕಲ್ಪಿಸಿಕೊಂಡಿರುವರು. ಇದು ಅಲ್ಲದೆ ಭಾಷೆಯಲ್ಲಿ ಷಟ್ಪದಿ ಗ್ರಂಥಗಳಲ್ಲಿ ಪ್ರಕೃತಿಮಾತ್ರ ಪ್ರಯೋಗಗಳು ಎಷ್ಟೋ ಸಿಕ್ಕುವುವು. ಪ್ರತ್ಯಯಮಾತ್ರಕ್ಕೆ ಪ್ರಯೋಗಗಳು ಭಾಷೆಯಲ್ಲಿ ಪ್ರಾಯಿಕವಾಗಿ ಇಲ್ಲ. ಆದುದರಿಂದ ಮೇಲೆ ಹೇಳಿರುವ ' ನ ಕೇವಲಾಃ ಪ್ರಕೃತಯಃ ಪ್ರಯೋಕ್ತವ್ಯಾಃ' ಎಂಬುದು ಪ್ರಾಯಿಕವೆಂದು ತಿಳಿಯಬೇಕು.

ಇಂತಹ ಪ್ರತ್ಯಯಗಳಾವುವೆಂದರೆ--**' ಓಕಾಮೇಭ್ಯಃ ಪುಃ || ೫೭೩ || ಅಟ್ ಸ್ವರಾತ್ || ೩೨೮ || '** ಇತ್ಯಾದಿ ಸೂತ್ರಗಳಿಂದ ವಿಧಿಸಲ್ಪಡುವ 'ಪು' 'ಅಟ್' ಇತ್ಯಾದಿಗಳೆಂದು ತಿಳಿಯಬೇಕು. ಇದರಿಂದ ಸ್ನೇಹಾರ್ಥಕವಾದ 'ಓ' ಧಾತುವಿಗೂ ರಕ್ಷಣಾರ್ಥಕವಾದ 'ಕಾ' ಧಾತುವಿಗೂ ತಿರ್ಯಗ್ಗಾತ್ರಸಾರ್ಥಕವಾದ 'ಮೇ' ಧಾತುವಿಗೂ ಪರವಾಗಿ 'ಪು' ಎಂಬ ಪ್ರತ್ಯಯವನ್ನು ಮಾಡಲು 'ಓಪು, ಕಾಪು, ಮೇಪು,' ಎಂಬ ರೂಪಗಳೂ ' ಮಲ್ಲದೆ, ಪೆಜಿವಣ ' ಎಂಬ ಸ್ವರಾಂತವಾದ ಬಹುಪ್ರೀಟಿಗೆ ಪರವಾಗಿ 'ಅಟ್' ಎಂಬ ವಿಭಕ್ತಿ ಪ್ರತ್ಯಯವನ್ನು ಮಾಡಲು ' ಮಲ್ಲದೆಯಂ, ಪೆಜಿವಣೆಯಂ ' ಇತ್ಯಾದಿ ರೂಪಗಳೂ ಸಿದ್ಧಿಸುವುವು.

**ದರ್ಪಣಕಾರ**ನು ಪ್ರತ್ಯಯಗಳು ಪರವಾಗಿ ಬರುವುವೆಂದು ಬೋಧಿಸಲು ಬೇರೆ ಸೂತ್ರವನ್ನು ಬರೆಯದಿದ್ದರೂ--

ಪದದರ್ಥಮಂ ವಿಭಾಗಿಸು
ವುದರಿಂದೆ ವಿಭಕ್ತಿಯಂತದಂ ಪ್ರತ್ಯಯಮೆಂ
ಬುದು ತತ್ಪ್ರತ್ಯಯದಿಂ ಪೂ
ರ್ವದೊಳಿರ್ಕುಂ ಪ್ರಕೃತಿಯೆರಡುಮುಮದೊಡದವೆ ಪದಂ (ಸೂತ್ರ ೩೫)

ಎಂದು ಹೇಳಿರುವ ಸೂತ್ರದಲ್ಲಿ ' ಪೂರ್ವದೊಳಿರ್ಕುಂ ಪ್ರಕೃತಿ ' ಎಂಬುದರಿಂದ ಪ್ರತ್ಯಯವು ಪರವಾಗಿರುವುದೆಂದು ತಿಳಿಯಬೇಕು.

**ಅವತಾರಿಕೆ ೧೫**

ಹೀಗೆ ಸಾಮಾನ್ಯವಾಗಿ ಪ್ರತ್ಯಯ ಸಂಜ್ಞೆಯನ್ನು ಹೇಳಿ, ಅವುಗಳ ವಿಶೇಷವನ್ನು ಬೋಧಿಸಲಿಚ್ಛೆಯಿಂದ ಮೊದಲು ಪ್ರಯೋಗಾರ್ಹವಾದ ' ಸುಬಂತ, ತಿಙಂತ ' ಗಳೆಂಬ ದ್ವಿವಿಧ ಪದಗಳಲ್ಲಿ ' ಸುಬಂತ ' ಪದಗಳನ್ನು ಸಾಧಿಸುವುದಕ್ಕೆ ಪ್ರಕೃತಿಗಳಾಗಿ ಪರಿಣಮಿಸುವ ' ಕೃದಂತ ' ವೆಂಬ ವ್ಯವಹಾರಕ್ಕೆ ಸಾಧಕವಾದ ' **ಕೃತ್** ' ಸಂಜ್ಞೆಯನ್ನು ಹೇಳುತ್ತಾನೆ—

**ಸೂತ್ರಂ || ಕೃದಜಾದಿಃ || ೧೫ ||**

**ಅರ್ಥ ||** ' **ಅಚ್ ಕರ್ತೃಕರ್ಮಣೋಃ || ೫೪೩ ||** ' ಎಂಬ ಸೂತ್ರವನ್ನು ಮೊದಲು ಮಾಡಿಕೊಂಡು ಈ ಶಾಸ್ತ್ರದ ಕೊನೆಯ ಸೂತ್ರದವರೆಗೂ ವಿಧಿಸಲ್ಪಡುವ—ಅಚ್, ಉತೆದ್, ಉತ್ತೆದ್, ಉತುಂ, ಉತ್ತುಂ, ಕುಳಿ, ಇ, ಇಗ, ಅತ್, ತ, ಗುಳ್, ಕೆತ್, ತೆತ್, ಪ, ಅವಿ, ಅಸು, ಗೆತ್, ವು, ಇಕೆತ್, ಮೆತ್, ಪು, ಸು, ಅ, ಹು, ಪಿ, ಹ, ಯತ್, ಇಸುಪ್, ವುದು, ದು, ಇತ್, ಅದೆತ್, ಅದು, ಅತ್, ಆತ್, ಅಲ್, ವುದುಮ್, ಯು, ವನ್ನ, ವನ್ನೆಗಂ, ವಿನಂ, ವಿನೆಗಂ, ದೊಡೆತ್, ವೊಡೆತ್— ಎಂಬ 'ಅಜಾದಿ' ನಾಲ್ವತ್ತು ನಾಲ್ಕು ಪ್ರತ್ಯಯಗಳು ' **ಕೃತ್** ' ಸಂಜ್ಞಕಗಳಾಗುವುವು.

**ಉದಾಹರಣೆ ||** ಮಾಳ್ಪಂ, ನೋಳ್ಪಂ, ಕಾಣ್ಕೆ, ಪೂಣ್ಕೆ, ಇತ್ಯಾದಿ,—

**ಪ್ರಯೋಜನಂ ||** ' **ಕೃತಿ || ೬೨ ||** ' ಎಂಬ ಸೂತ್ರ ಮೊದಲು ' ಕೃತ್ ' ಪದವುಳ್ಳ ಸೂತ್ರಗಳಲ್ಲೆಲ್ಲ ' ಕೃತ್ ' ಪದಕ್ಕೆ ಮೇಲೆ ಹೇಳಿರುವ ' ಅಜಾದಿ ' ಪ್ರತ್ಯಯಗಳೆ ಅರ್ಥವೆಂದು ತಿಳಿಯಬೇಕು.

**ವಿಚಾರ ೧೫**

ಈ ಸೂತ್ರದಲ್ಲಿ—'ಅಜಾದಿ' ಎಂದು 'ಆದಿ' ಪದವನ್ನುಚ್ಚರಿಸಿರುವುದರಿಂದ ಈ ಶಾಸ್ತ್ರದಲ್ಲಿ ಕೃತ್ಪ್ರತ್ಯಯವನ್ನು ವಿಧಿಸುವುದಕ್ಕೆ 'ಅಚ್' ಪ್ರತ್ಯಯವೇ ಮೊದಲೆಂದು ತಿಳಿಯುವುದು. ಆದರೆ ಈ ಸೂತ್ರದಲ್ಲ ಆದಿಯನ್ನು ಹೇಳಿದ್ದರೂ ಅಂತವನ್ನು ಹೇಳದಿರುವುದರಿಂದ ಎಲ್ಲಿಯವರೆಗೆ ಎಂಬುದು ಗೊತ್ತಾಗದೆ ಸಂಶಯವು ಬರುವುದು. ಆದರೂ ಮುಂದೆ ಕೃತ್ತಲ್ಲದೆ ಬೇರಾವುದನ್ನೂ ವಿಧಿಸದೇ ಇರುವುದರಿಂದ ಈ ಶಾಸ್ತ್ರದ ಕೊನೆಯವರೆಗೂ ಬರುವ ಪ್ರತ್ಯಯಗಳೆಂದು ಎಂದು ತಿಳಿಯಬೇಕು. ಇಂತಹ ಪ್ರತ್ಯಯಗಳು ' ಧಾತ್ವಧಿಕಾರ ' ದಲ್ಲಿಯೆ ಹೇಳಿರುವುದರಿಂದ ಧಾತುಗಳ ಮೇಲೆ ಬರುವುವೆಂದೂ ತಿಳಿಯಬೇಕು.

ಆದುದರಿಂದ ಉದಾಹರಣೆಯಲ್ಲಿ ಕೊಟ್ಟಿರುವ—' ಮಾಳ್ಪಂ, ನೋಳ್ಪಂ ' ಎಂಬಿವು ಕರಣಾರ್ಥಕ ' ಮಾಡು ' ಧಾತುವಿನ ಮೇಲೆಯೂ ದರ್ಶನಾರ್ಥಕ ' ನೋಡು ' ಧಾತುವಿನ ಮೇಲೆಯೂ ಕರ್ತ್ರರ್ಥದಲ್ಲಿ— ' **ಅಚ್ ಕರ್ತೃಕರ್ಮಣೋಃ ||೫೪೩||** ' ಎಂಬ ಸೂತ್ರದಿಂದ ' ಅಚ್ ' ಪ್ರತ್ಯಯವನ್ನು ಮಾಡಿ ಚಕಾರಕ್ಕೆ ಇಂತ್ಸಂಜ್ಞಾಲೋಪದಿಂದ ನಿವೃತ್ತಿಯನ್ನೂ ಭವಿಷತ್ಕಾಲವನ್ನು ಸೂಚಿಸುವುದಕ್ಕೆ ಆ ಅಚ್ಪ್ರತ್ಯಯವು ಪರವಾಗಿರಲು ' **ಅಚಿ || ೪೪೭ ||** ' ಎಂಬ ಸೂತ್ರದಿಂದ ಧಾತ್ವಿಗೂ ಪ್ರತ್ಯಯಕ್ಕೂ ನಡುವೆ 'ವ' ಪ್ರತ್ಯಯವನ್ನೂ ಆ 'ವ' ಪ್ರತ್ಯಯವು ಪರವಾಗಿರಲು ಧಾತುವಿನ

. ಡು ' ಎಂಬ ಸಮುದಾಯಕ್ಕೆ — '**ಪ್ರತ್ಯಯೇ || ೮೪ ||**' ಎಂಬ ಸೂತ್ರದಿಂದ ಟ ಕಾರಾದೇಶವನ್ನೂ 'ವ' ಪ್ರತ್ಯಯದ ವ ಕಾರಕ್ಕೆ– '**ಆದಿಷ್ವಾದ್ ಅಟಃ || ೫೧೪ ||**' ಎಂಬ **ಸೂತ್ರ**ದಿಂದ ಪ ಕಾರಾದೇಶವನ್ನೂ 'ವ' ಪ್ರತ್ಯಯದ ಅ ಕಾರಕ್ಕೆ ಅಚ್ ಪ್ರತ್ಯಯದ ಅ ಕಾರವು ಪರವಾಗಿರಲು '**ಲುಬನಾಮಹಾನ್ || ೩೬ ||**' ಎಂಬ ಸೂತ್ರದಿಂದ ಅ ಕಾರಕ್ಕೆ ಲೋಪವನ್ನೂ ಮಾಡಲು — 'ಮಾಟ್ಪು, ನೋಟ್ಪು' ಎಂದು ಕೃಲ್ಲಿಂಗಗಳಾಗುವುವು. ಇಂತಹ ಲಿಂಗಗಳ ಮೇಲೆ '**ಮುಕ್ತೇ || ೨೨೬ ||**' ಎಂಬ ಸೂತ್ರದಿಂದ ಪ್ರಥಮ ಏಕವಚನವಾದ 'ಮ್' ಪ್ರತ್ಯಯವನ್ನು ಮಾಡಿ ಸಾಧಿಸಲ್ಪಟ್ಟಿರುವುವು. ಹೀಗೆ ದರ್ಶನಾರ್ಥಕ 'ಕಾಣ್' ಧಾತುವಿನ ಮೇಲೆಯೂ ಶಪಥಾರ್ಥಕ 'ಪೂಣ್' ಧಾತುವಿನ ಮೇಲೆಯೂ ಭಾವಾರ್ಥದಲ್ಲಿ '**ನ ಲ ರ ಣ ಉಭ್ಯಃ || ೫೫೬ ||**' ಎಂಬ ಸೂತ್ರದಿಂದ 'ಕೆತ್' ಪ್ರತ್ಯಯನ್ನು ಮಾಡಿ 'ಕಾಣ್ಕೆ' 'ಪೂಣ್ಕೆ' ಎಂಬಿವು ಸಾಧಿಸಲ್ಪಟ್ಟಿರುವುವು.

**ದರ್ಪಣಕಾರ**ನು 'ಕೃತ್' ಪ್ರತ್ಯಯಗಳಿಗಾಗಿ ಬೇರೊಂದು ಪ್ರಕರಣವನ್ನು ಮಾಡದಿದ್ದರೂ

ಭೂತ ಭವಿಷ್ಯತ್ ಕ್ರಿಯೆಗಳು
ಪೇತವಿಭಕ್ತಿಗಳನುಱಿಯೆ ಕೃತ್ತುಪ್ಪವಸಂ
ಭೂತಂ ಸಂಪ್ರತಿವಿಧಿಗಳೊ
ಳಾ ತೆಱದಿಂ ಮಧ್ಯಮೋತ್ತಮಕ್ರಿಯೆಗಳೊಳಂ (ಸೂತ್ರ ೭೩)

ಎಂಬ ಸೂತ್ರದಿಂದ 'ಕೃತ್' ಸಂಜ್ಞೆಯನ್ನು ಮಾತ್ರ ತೋರಿಸಿ, ಅಂತಹ ಶಬ್ದಗಳಿಗೂ—

ವಿನುತಕ್ರಿಯಾತ್ಮಕಂಗಳು
ಮೆನಿಸುವ ಸಂಸ್ಕೃತದ ಭಾವವಚನಂಗಳನಾ
ಯ್ದಿಸಿತರ್ಕಮಿಸು ಪ್ರತ್ಯಯ
ವನೆ ಪತ್ತಿಸಿ ನಿಱಿಸೆ ಬರ್ಕುಮಾ ಕೃಲ್ಲಿಂಗಂ (ಸೂತ್ರ ೭೪)

ಎಂಬ ಸೂತ್ರದಿಂದ ಸಂಸ್ಕೃತದ ಭಾವಕೃದಂತಗಳನಾಯ್ದು 'ಇಸು' ಪ್ರತ್ಯಯವನ್ನು ಪತ್ತಿಸಿದ ಕೆಲವು ಶಬ್ದಗಳಿಗೂ ಕೃಲ್ಲಿಂಗವೆಂಬ ಹೆಸರನ್ನಿಟ್ಟಿರುವನು. ಮತ್ತು **ಶಾಸನಕಾರ**ನು ಧಾತುಗಳ ಮೇಲೆ ಆಖ್ಯಾತ ಪ್ರತ್ಯಯಗಳಿಗಿಂತಲೂ ಬೇರೆಯಾಗಿ — '**ಉತೆದುತ್ತೆದುತುಮುತ್ತುಮ್ ಸತ್ಯಚೋ ವಾ || ೫೪೪ ||**' ಎಂಬ ಸೂತ್ರದಿಂದ '**ಅಚ್ ಕರ್ತೃಕರ್ಮಣೋಃ || ೫೪೩ ||**' ಎಂಬ ಸೂತ್ರದಿಂದ ಸಾಮಾನ್ಯವಾಗಿ ವಿಧಿಸಲ್ಪಟ್ಟ 'ಅಚ್' ಪ್ರತ್ಯಯಸ್ಥಾನದಲ್ಲಿ ಆದೇಶವಾಗಿ ವಿಧಿಸಿರುವ 'ಉತೆತ್, ಉತ್ತೆತ್, ಉತುಂ, ಉತ್ತುಂ' ಎಂಬ ನಾಲ್ಕಕ್ಕೂ—

ಪ್ರತಿಪಾದ್ಯಮುತ್ವಮಿತ್ವಂ
ಮತಿವಂತರಿನೆಯ್ದೆ ಪೂರ್ವಕಾಲಕ್ರಿಯೆಗಾ
ಯುತುಮುತ್ತುಮುತ್ತೆಯುತೆಯೆಂ
ಡು ತಗುಳ್ಗುಂ ವರ್ತಮಾನವಿಹಿತಕ್ರಿಯೆಯೊಳ್ (ಸೂತ್ರ ೨೩೬)

ಎಂಬ ಸೂತ್ರದಿಂದ ವರ್ತಮಾನ ಕ್ರಿಯೆಯಲ್ಲಿ ಇವನ್ನು ಧಾತುವಿಗೆ ಸೇರಿಸಿದರೆ 'ಮಾಡುತುಂ, ಮಾಡುತ್ತುಂ, ಮಾಡುತೆ, ಮಾಡುತ್ತೆ' ಎಂದಾಗುವುವೆಂದು ಉದಾಹರಣೆಗಳನ್ನು ಕೊಟ್ಟಿರುವನು. ಮತ್ತು ಈ ಸೂತ್ರದಲ್ಲಿ ಹೇಳಿರುವ 'ಪ್ರತಿಪಾದ್ಯಮುತ್ವಮಿತ್ವಂ ಮತಿವಂತರಿನೆಯ್ದೆ ಪೂರ್ವಕಾಲ ಕ್ರಿಯೆಗೆ' ಎಂಬ ವಾಕ್ಯದಿಂದ ಭೂತಕಾಲ ಕ್ರಿಯಾವಾಚಕವಾದ ಧಾತುಗಳಿಗೆ ಉ ಕಾರವೂ

ಇ ಕಾರವೂ ಸೇರಿ — 'ಕುಸಿದು, ಒಸೆದು, ನಚ್ಚಿ, ಮುತ್ತಿ ' ಇತ್ಯಾದಿ ಶಬ್ದಗಳು ಸಿದ್ಧಿಸುವುವೆಂದು ಹೇಳಿರುವನು. ಇವು ಇವನ ರೀತಿಯಲ್ಲಿ ಕೃದಂತಗಳೆಂದು ವ್ಯವಹರಿಸುವುದಕ್ಕೆ ಸರಿಯಾದ ಸಾಧಕಗಳಿಲ್ಲದಿದ್ದರೂ —

ಅಮರಯಿರೆನೆವುಗಳಕ್ಕುಂ
ಕ್ರಮದೇಕಾನೇಕವಚನದೊಳ್ ಪ್ರತ್ಯೇಕಂ
ಸಮಸಿಸೆ ಯುಗಳತೆಯಾಖ್ಯಾ
ತಮಾರ್ಗದೊಳ್ ನೆಲಸಿಸಂದ ಪುರುಷತ್ರಯಕಂ (ಸೂತ್ರ ೩೧೭)

ಎಂಬ ಸೂತ್ರದಲ್ಲಿ ಹೇಳಿರುವ ಆಖ್ಯಾತ ಪ್ರತ್ಯಯಗಳಿಗಿಂತಲೂ ಬೇರೆಯಾಗಿರುವುದರಿಂದಲೂ ಇಂತಹ ಪ್ರತ್ಯಯಗಳನ್ನು ವ್ಯಾಕರಣಾಂತರದಲ್ಲಿ ಕೃತ್ತುಗಳೆಂದು ವ್ಯವಹರಿಸುವುದರಿಂದಲೂ ಇವನ್ನು ಆಖ್ಯಾತ ಪ್ರಕರಣದಲ್ಲಿ ಹೇಳಿದರೂ ಕೃತ್ತೆಂದು ಹೇಳಲು ಬಾಧಕವೇನೂ ತೋರುವುದಿಲ್ಲ. ಆದರೆ ಇಂತಹ ಶಬ್ದಗಳು ಕೃದಂತವೆಂಬ ವ್ಯವಹಾರಕ್ಕೆ-ವಿಷಯಗಳಾಗಲು ' ಲಿಂಗ ' ಸಂಜ್ಞೆ ಬಂದು ವಿಭಕ್ತಿ ಪ್ರತ್ಯಯಗಳು ಪ್ರಾಪ್ತವಾಗುವುವೆಂದು ಶಂಕೆಯುಂಟಾಗುವುದು. ಆದಾಗ್ಯೂ ಇವುಗಳನ್ನು '**ಕೃದವ್ಯಯ**' ಗಳೆಂದು ಭಾವಿಸಿ ವಿಭಕ್ತಿ ಪ್ರತ್ಯಯಕ್ಕೆ ಲೋಪ ಬಂದಿರುವುದು ಎಂದು ತಿಳಿಯಬೇಕು.

ಹೀಗೆಯೇ **ಶಾಸನಕಾರ**ನು ಹೇಳಿರುವ 'ಅಲ್' ಮೊದಲಾದ ಕೆಲವು ಪ್ರತ್ಯಯಗಳನ್ನು **ದರ್ಪಣಕಾರ**ನು ಆಖ್ಯಾತ ಪ್ರಕರಣದಲ್ಲಿಯೂ ತದ್ಧಿತ ಪ್ರಕರಣದಲ್ಲಿಯೂ ಹೇಳಿರುವನು. ಅವನ್ನು ಆಯಾ ಪ್ರಕರಣದ ವಿಚಾರದಲ್ಲಿ ವಿವರಿಸುವೆವು.

ಇದರಂತೆ **ಶಾಸನಕಾರ**ನೂ 'ಕೃತ್ ಪ್ರಕರಣ' ದಲ್ಲಿ ಹೇಳಿರುವ—ಕುಳ್, ಇಗ, ಇಕೆತ್, ಪು, ಮೆತ್ ಮೊದಲಾದ ಕೆಲವು ಪ್ರತ್ಯಯಗಳನ್ನು ಅರ್ಥ ವಿಶೇಷಗಳಲ್ಲಿ '**ವಾದ್ಯಾತ್ತದ್ಧಿತಃ || ೪೦೧ ||**' ಎಂಬ 'ತದ್ಧಿತಾಧಿಕಾರ' ಪಠಿತ ಸೂತ್ರಗಳಿಂದ ಪ್ರಕೃತಿ ವಿಶೇಷಗಳ ಮೇಲೆ ವಿಧಿಸಿರುವನು. ಇಲ್ಲಿ ಪ್ರತ್ಯಯ ಸ್ವರೂಪವು ಒಂದಾಗಿದ್ದರೂ ಧಾತುಗಳ ಮೇಲೆ ಬರುವುವು **ಕೃತ್** ಎಂತಲೂ ನಾಮ ಲಿಂಗಗಳ ಮೇಲೆ ಬರುವುವು **ತದ್ಧಿತ**ಗಳೆಂತಲೂ ಉದಾಹರಣೆಗಳಿಂದ ತಿಳಿದುಕೊಳ್ಳಬೇಕು.

ಸಂಸ್ಕೃತ ವ್ಯಾಕರಣದಲ್ಲಿ — '**ಕೃದತಿಙ್ || ೩-೧-೯೩ ||**' ಎಂಬ ಸೂತ್ರದಿಂದ ಧಾತುಗಳ ಮೇಲೆ ವಿಹಿತವಾದ ಆಖ್ಯಾತ ಪ್ರತ್ಯಯವಲ್ಲದ ಪ್ರತ್ಯಯಗಳು ಕೃತ್ತೆಂದು ಸ್ಪಷ್ಟವಾಗಿ ತಿಳಿಸಿರುವರು. ಅದರಂತೆಯೇ ಭಾಷೆಯಲ್ಲಿಯೂ ವ್ಯವಸ್ಥೆಯನ್ನು ಮಾಡಿಕೊಳ್ಳಬೇಕು.

**ಅವತಾರಿಕೆ ೧೬**

ಪೂರ್ವದಲ್ಲಿ ವಾಚಕಸಾಮಾನ್ಯಕ್ಕೂ 'ಲಿಂಗ ಸಂಜ್ಞೆ'ಯನ್ನು ಹೇಳಿ, ಅವ್ಯಾಪ್ತಿ-ಅತಿವ್ಯಾಪ್ತಿಗಳೆಂಬ ದೋಷ ಪರಿಹಾರಾರ್ಥವಾಗಿ ವಿಶೇಷ ಸೂತ್ರಗಳನ್ನೂ ಹೇಳಿ, ಕ್ರಿಯಾವಾಚಕಗಳಾದ ಶಬ್ದ ವಿಶೇಷಗಳಿಗೆ ಧಾತುಸಂಜ್ಞೆಯನ್ನೂ ಹೇಳಿ, ಈ ಉಭಯ ವಿಧವಾದ ಪ್ರಕೃತಿಗಳ ಮುಂದೆ ವಿಧಿಸುವುದಕ್ಕೆ ಸಾಮಾನ್ಯವಾಗಿ 'ಪ್ರತ್ಯಯ' ವೆಂಬ ಹೆಸರನ್ನಿಟ್ಟು ಅವುಗಳಲ್ಲಿ ಧಾತುರೂಪವಾದ ಪ್ರಕೃತಿಗಳ ಮೇಲೆ ಬರುವ ಕೆಲವು ಪ್ರತ್ಯಯಗಳಿಗೆ 'ಕೃತ್' ಸಂಜ್ಞೆಯು ಹೇಳಲ್ಪಟ್ಟಿತು. ಈಗ ಧಾತ್ವತಿರಿಕ್ತವಾದ 'ಲಿಂಗ' ಸಂಜ್ಞಕ ನಾಮ ಪ್ರಕೃತಿಗಳ ಮೇಲೆ ವಿಧಿಸುವ ಪ್ರತ್ಯಯಗಳಿಗೆ ವಿಶೇಷ ಸಂಜ್ಞೆಯನ್ನು ಹೇಳುತ್ತಾನೆ —

**ಸೂತ್ರಂ || ಮಮಿಮ್ಗೆದತ್ತಣಿಮದೊಳ್ ಸುಪ್ || ೧೬ ||**

**ಅರ್ಥ ||** **ಮ್, ಅಮ್, ಇಮ್, ಗೆ, ಅತ್ತಣಿಂ, ಅದ್, ಒಳ್ ಎಂಬೀ ಏಳು ಪ್ರತ್ಯಯಗಳೂ 'ಸುಪ್' ಸಂಜ್ಞಕಗಳಾಗುವುವು.**

**ಉದಾಹರಣೆ ||** ಜಿನಂ, ಜಿನನಮ್, ಜಿನನಿಂ, ಜಿನಂಗೆ ಇತ್ಯಾದಿ ನಾಮವಿಭಕ್ತ್ಯಂತಗಳನ್ನೆಲ್ಲ ಇದಕ್ಕೆ ಉದಾಹರಣೆಗಳನ್ನಾಗಿ ಊಹಿಸಿಕೊಳ್ಳುವುದು.

**ಪ್ರಯೋಜನಂ ||** '**ಲಿಂಗಾತ್ ಸುಪ್ || ೨೦೩ ||**' ಎಂದು ಮೊದಲಾದ 'ಸುಪ್' ಎಂಬ ಪದವುಳ್ಳ ಸೂತ್ರಗಳಲ್ಲಿ 'ಸುಪ್' ಎಂಬ ಪದಕ್ಕೆ ಈ ಏಳು ಪ್ರತ್ಯಯಗಳು ಅರ್ಥವೆಂದು ತಿಳಿಯುವುದು.

**ವಿಚಾರ ೧೬**

ಈ ಸೂತ್ರದಲ್ಲಿ ಹೇಳಿರುವ '**ಮ್**' ಮೊದಲಾದುವು ಭಿನ್ನ ಭಿನ್ನವಾಗಾಗಲಿ ಸಮಸ್ತವಾಗಾಗಲಿ ಉಚ್ಚರಿಸಲ್ಪಟ್ಟಿದ್ದರೂ '**ಸುಪ್**' ಸಂಜ್ಞೆಯು ಒಂದೊಂದು ಪ್ರತ್ಯಯಕ್ಕೂ ಉಂಟೆಂದು ತಿಳಿಯಬೇಕು. ಆದರೆ ಲೋಕದಲ್ಲಿ ಸಂಜ್ಞೆಯನ್ನು ಮಾಡುವುದು ಲಾಘವಾರ್ಥವೆಂದು '**ಲಘ್ವರ್ಥಂ ಹಿ ಸಂಜ್ಞಾಕರಣಂ**' ಎಂಬ ಪ್ರಾಚೀನರ ವ್ಯವಹಾರದಿಂದಲೂ

'**ಅರ್ಧಮಾತ್ರಾಲಾಘವಂ ಪುತ್ರೋತ್ಸವಂ ಮನ್ಯಂತೇ ವೈಯಾಕರಣಾಃ ||**'

ಎಂಬ ಪ್ರಾಚೀನ ವೈಯಾಕರಣರ ವ್ಯವಹಾರದಿಂದಲೂ ತಿಳಿದು ಬರುವುದರಿಂದ ಅತ್ಯಂತ ಲಾಘವವಿರುವುದೆಂದು ಈ ಸೂತ್ರವನ್ನು 'ಮಾದಿಸ್ಸುಪ್' ಎಂದು ಹೇಳದೆ, 'ಮಮಿಮ್ಗೆದತ್ತಣಿಮದೊಳ್ ಸುಪ್' ಎಂದು ಗುರುನಿರ್ದೇಶ ಮಾಡಿರುವುದೇತಕೆಂದರೆ — ನಾಮವಿಭಕ್ತಿ ಪ್ರತ್ಯಯಗಳು ಇಷ್ಟೇ, ಇವುಗಳ ಸ್ವರೂಪವು ಇಂತಹುದೆ — ಎಂದು ಸ್ಪಷ್ಟವಾಗಿ ಗ್ರಹಿಸಲು ಸೌಲಭ್ಯವಿರುವುದೆಂದು ತಿಳಿಯಬೇಕು. ಮತ್ತು ಲೋಕದಲ್ಲಿ **ಪ್ರಥಮೆ, ದ್ವಿತೀಯೆ, ತೃತೀಯೆ, ಚತುರ್ಥಿ, ಪಂಚಮಿ, ಷಷ್ಠಿ, ಸಪ್ತಮಿ** ಎಂಬ ವ್ಯವಹಾರವು '**ಮ್**' ಮೊದಲಾದ ಏಳು ಪ್ರತ್ಯಯಗಳಿಗೆ ಕ್ರಮವಾಗಿ ಸಿದ್ಧಿಸುವುದೆಂದೂ ಸೂತ್ರದಲ್ಲಿ ಆಯಾ ಪ್ರತ್ಯಯ ಸ್ವರೂಪವನ್ನು ನಿರ್ದೇಶಿಸಿರುವುದು.

ಇಲ್ಲಿ ಲೋಕ ವ್ಯವಹಾರದಿಂದಲೂ ಪ್ರಾಚೀನ ವೈಯಾಕರಣರು ಸೂತ್ರಗಳಲ್ಲಿ ಪ್ರಥಮಾದಿ ವ್ಯವಹಾರಗಳನ್ನು ಅಲ್ಲಲ್ಲ ಮಾಡಿರುವುದರಿಂದಲೂ ಪ್ರಥಮಾದಿ ಸಂಜ್ಞೆಗಳನ್ನು ಹೇಳದಿದ್ದರೂ ಆ ವ್ಯವಹಾರವುಂಟೆಂದು ತಿಳಿಯಬೇಕು. ಹೀಗೆ ಈ ಶಾಸ್ತ್ರದಲ್ಲಿ ವಿಭಕ್ತಿ ಸಂಜ್ಞೆಯನ್ನು ಹೇಳಿಲ್ಲವಾದರೂ ಸಂಸ್ಕೃತ ವ್ಯಾಕರಣದಲ್ಲಿ — '**ವಿಭಕ್ತಿಶ್ಚ || ೧-೪-೧೦೪ ||**' ಎಂಬ ಸೂತ್ರದಿಂದ ವಿಭಕ್ತಿ ಸಂಜ್ಞೆಯನ್ನು ಹೇಳಿರುವುದರಿಂದಲೂ 'ವಿಭಜ್ಯತೇ ಅನಯಾ' ಎಂಬ ವಿಗ್ರಹದಿಂದ ನಿಷ್ಪನ್ನವಾದ 'ವಿಭಕ್ತಿ' ಶಬ್ದಕ್ಕೆ ಪ್ರಕೃತ್ಯರ್ಥವನ್ನು ವಿಭಾಗಮಾಡಿ ಬೋಧಿಸುವುದಕ್ಕೆ ಸಾಧಕವಾದ ಪ್ರತ್ಯಯವೆ ಅರ್ಥವೆಂದು ತೋರುವುದರಿಂದ 'ವಿಭಕ್ತಿ' ಪದವನ್ನು 'ಸುಪ್-ತಿಙ್' ಪ್ರತ್ಯಯಗಳಲ್ಲಿ ಯೋಗರೂಢವಾಗಿ ಪ್ರಯೋಗಿಸಿರುವುದರಿಂದಲೂ ಈ ಪ್ರತ್ಯಯಗಳಿಗೆ '**ವಿಭಕ್ತಿ**' ಯೆಂಬ ವ್ಯವಹಾರವುಂಟೆಂದು ತಿಳಿಯುವುದು.

**ವಿಭಕ್ತಿಗಳು ಏಳೊ ಎಂಟೊ ?**

ಇಂತಹ ವಿಭಕ್ತಿಗಳು ಏಳು ಎಂದು ಎಲ್ಲರಿಗೂ ಸಮ್ಮತವಾಗಿರುವುದು. ಕೆಲವರು

ಸಂಬೋಧನ ವಿಭಕ್ತಿಯನ್ನು ಸೇರಿಸಿಕೊಂಡು ಎಂಟು ವಿಭಕ್ತಿಗಳೆಂದು ಹೇಳುವರಾದರೂ ಸಂಬೋಧನವೆಂಬ ಅರ್ಥವಿಶೇಷದಲ್ಲಿ ವಿಹಿತವಾದ ಪ್ರಥಮೆಯ ಸ್ವರೂಪವೇ ಸಂಬೋಧನವಿಭಕ್ತಿಯಾಗಿರುವುದರಿಂದ* ಎಂಟು ವಿಭಕ್ತಿಗಳೆಂದು ಹೇಳುವುದಕ್ಕಾಗುವುದಿಲ್ಲ. ಹಾಗೆ ಅರ್ಥವಿಶೇಷ ನಿಮಿತ್ತಗಳಿಂದ ವಿಭಕ್ತಿಭೇದಗಳನ್ನು ಹೇಳುವ ಪಕ್ಷದಲ್ಲಿ ಪ್ರತಿವಿಭಕ್ತಿಗೂ ಅನೇಕಾರ್ಥಗಳಿರುವುದರಿಂದ ಅನೇಕ ವಿಭಕ್ತಿಗಳೆಂದು ಹೇಳಬೇಕಾಗುವುದು. ಆದುದರಿಂದ ವಿಭಕ್ತಿಗಳು ಅನೇಕಾರ್ಥಗಳನ್ನೊಳಗೊಂಡಿದ್ದರೂ ಶಬ್ದರೂಪ ಭೇದಗಳನ್ನುಂಟುಮಾಡುವುವು ಏಳೇ ವಿಧವಾಗಿರುವುವೆಂದು ಎಲ್ಲಾ ವೈಯಾಕರಣರೂ **'ಸಪ್ತವಿಭಕ್ತಿ'** ಯೆಂದೇ ವ್ಯವಹರಿಸುತ್ತಿರುವರು. ಈ ವಿಭಕ್ತಿಗಳ ಅರ್ಥವಿಶೇಷಗಳು 'ಕಾರಕ ಪ್ರಕರಣ' ದಲ್ಲಿ ವಿವರಿಸಲ್ಪಡುವುವು.

ಸಂಸ್ಕೃತ ವ್ಯಾಕರಣದಲ್ಲಿ ಈ ನಾಮವಿಭಕ್ತಿ ಪ್ರತ್ಯಯಗಳನ್ನು ಇಪ್ಪತ್ತೊಂದು ಪ್ರಕಾರವಾಗಿ ಹೇಳಿ—ಅವುಗಳಲ್ಲ ಏಕತ್ವ, ದ್ವಿತ್ವ, ಬಹುತ್ವ ಭೇದಗಳಿಂದ ಏಕವಚನ, ದ್ವಿವಚನ, ಬಹುವಚನಗಳೆಂಬ ಮೂರು-ಮೂರು ಸಂಕೇತಗಳಿಂದ ಕೂಡಿರುವ ಮೂರು-ಮೂರಾಗಿ ಏಳು ಖಂಡಕ್ಕೆ ಕ್ರಮವಾಗಿ ಪ್ರಥಮೆ, ದ್ವಿತೀಯೆ, ತೃತೀಯೆ, ಚತುರ್ಥಿ, ಪಂಚಮಿ, ಷಷ್ಠಿ, ಸಪ್ತಮಿ — ಎಂದು ಏಳು ಸಂಜ್ಞೆಗಳನ್ನು ಮಾಡಿರುವರು.

ಕನ್ನಡದಲ್ಲಿ ಹೀಗೆ ಸಪ್ತವಿಭಕ್ತಿಗಳೆಂಬ ವ್ಯವಹಾರವಿದ್ದರೂ ದ್ವಿವಚನವಿಲ್ಲವಾದುದರಿಂದ ಹದಿನಾಲ್ಕು ವಿಭಕ್ತಿಪ್ರತ್ಯಯಗಳೆಂದು ಹೇಳಬೇಕು. ಈ ಸೂತ್ರದಲ್ಲಿ ಹದಿನಾಲ್ಕು ಪ್ರತ್ಯಯಗಳನ್ನು ಹೇಳದಿದ್ದರೂ ಈ ಏಳು ಪ್ರತ್ಯಯಗಳಿಗೇ ವಿಭಕ್ತಿಪ್ರಕರಣದಲ್ಲಿ ಹೇಳುವ ಬಹುತ್ವದ್ಯೋತಕವಾದ ಕಾರ್ಯವಿಶೇಷಗಳಿಂದ ಹದಿನಾಲ್ಕು ಬಗೆಯಾಗುವುವೆಂದು ತಿಳಿಯುವುದು. **ಶಾಸನಕಾರ**ನು ಸಂಸ್ಕೃತದಂತೆ ಶಬ್ದಗಳ ಸ್ವರೂಪದಿಂದಲೆ ಇದು ದ್ವಿವಚನ, ಇದು ಬಹುವಚನ ಎಂಬ ವಚನ ಭೇದಗಳನ್ನು ಗ್ರಹಿಸುವುದು ಅಸಾಧ್ಯವಾದುದರಿಂದ ಇಲ್ಲಿ ದ್ವಿವಚನ ವಿಚಾರವನ್ನು ಮಾಡಲಿಲ್ಲ. **ದರ್ಪಣಕಾರ**ನಾದರೊ ಅರ್ಥಸಂದರ್ಭವಶದಿಂದ ಕೆಲವೆಡೆಗಳಲ್ಲಿ ದ್ವಿವಚನವಿರುವುದೆಂದು—

---

* [ಸಂಬೋಧನೆಯು ಪ್ರತ್ಯೇಕವಾದ ವಿಭಕ್ತಿಯಹುದೇ ಅಲ್ಲವೇ ಎಂಬುದಕ್ಕೆ ಈ ಕೆಳಗಣ ಉದ್ಧರಣೆಯು ಉಪಕಾರಿಯಾಗಬಹುದು: "In some languages e. g. Latin, it (the vocative) has a separate form, and must consequently be reckoned a separate case. In most languages, however, it is identical with the nominative, and therefore does not require a separate name. The vocative, where it is found, may be said to indicate that a noun is used as a second person and placed outside a sentence, or as a sentence by itself. It has points of contact with the imperative, and might, like this, be said to express a request to the hearer, viz., 'hear' or 'be attentive' ...... The close relation between the vocative and the nominative is seen with an imperative, when 'you, take the chair' with *you* outside the sentence (exactly as in 'John, take that chair') by rapid enunciation becomes 'you take that chair' with *you* as the subject of the imperative"— *Otto Jesperson: The Philosophy of Grammar: p.* 184—ಸಂಪಾದಕ]

ಏಕ ದ್ವಿತ್ವ ಬಹುತ್ವಮ
ನೇಕ ದ್ವಿ ಬಹುತ್ವವಸ್ತುಗಳೊಳಾಚರಿಪರ್
ಸ್ವೀಕಾರಂ ಕನ್ನಡದೊಳ
ಗೇಕತ್ವ ಬಹುತ್ವಂ ದ್ವಿವಚನಮುಚಿತದೆ ಬರ್ಕುಂ (ಸೂತ್ರ ೯೪)

ಎಂಬ ಸೂತ್ರದಿಂದ ಸೂಚಿಸಿ — ಏಕವಚನಕ್ಕೆ: ಮೇರುವಿದು; ದ್ವಿವಚನಕ್ಕೆ: ಕಣ್ಗಳಿವು; ಬಹುವಚನಕ್ಕೆ: ಕುರುಳ್ಗಳಿವು — ಎಂದು ಉದಾಹರಣೆಯನ್ನು ಕೊಟ್ಟು 'ದ್ವಿವಚನಮುಚಿತದೆ ಬರ್ಕುಂ' ಎಂಬುವಕ್ಕೆ — 'ರಾಮ ಲಕ್ಷ್ಮಣರ್,' 'ನಕುಲ ಸಹದೇವರ್' ಎಂಬ 'ದ್ವಿಪದೇತರೇತರಯೋಗ ದ್ವಂದ್ವ' ವನ್ನು ಉದಾಹರಿಸಿರುವನು. ಇಲ್ಲಿ— 'ಕಣ್ಗಳ್,' 'ಕುರುಳ್ಗಳ್' ಇತ್ಯಾದಿ ದ್ವಿವಚನ ಬಹುವಚನಗಳೆಂದು ಅಂಗೀಕರಿಸಿರುವ ಶಬ್ದಗಳಲ್ಲಿ 'ರಾಮೌ, ರಾಮಾಃ' ಎಂಬ ಸಂಸ್ಕೃತ ಶಬ್ದಗಳಂತೆ ಯಾವ ಭೇದವೂ ತೋರದಿದ್ದರೂ ಲೋಕವಲ್ಲಿ ಎಲ್ಲಕ್ಕೂ ಕಣ್ಣು, ಕೆಯ್, ಕಾಲ್ ಮೊದಲಾದುವು ಎರಡೆರಡೆಂದು ತೋರುವುದರಿಂದ-ಅರ್ಥದೃಷ್ಟಿಯಿಂದ ದ್ವಿವಚನವನ್ನು ತಿಳಿಯಬೇಕು- ಎಂಬುದು **ದರ್ಪಣಕಾರ**ನು ಕೊಟ್ಟಿರುವ ಉದಾಹರಣೆಗಳಿಂದ ತೋರುವುದು.

**ಶಾಸನಕಾರ**ನು ಈ ವಿಚಾರವನ್ನು ಮಾಡದಿದ್ದರೂ '**ಗಳನೇಕತ್ವೇ ಸುಪಿ || ೨೩೨ ||**' ಇತ್ಯಾದಿ ಸೂತ್ರಗಳಲ್ಲಿ 'ಅನೇಕತ್ವೇ' ಎಂದು ಹೇಳಿರುವುದರಿಂದ ಏಕತ್ವಕ್ಕೆ ಭಿನ್ನವಾದುದು 'ದ್ವಿತ್ವ-ಬಹುತ್ವ' ಗಳೆರಡೂ ಆದುದರಿಂದ 'ಗಳ್' ಆದಿಗಳು ದ್ವಿತ್ವ, ಬಹುತ್ವಗಳನ್ನು ಬೋಧಿಸುವುವೆಂದು ಪ್ರಕರಣವಶದಿಂದಲೂ ಅರ್ಥದ ಔಚಿತ್ಯದಿಂದಲೂ ದ್ವಿವಚನವನ್ನು ನಿಶ್ಚಯಿಸಬಹುದಾದುದರಿಂದ ಗ್ರಂಥಾಂತರ ವಿರೋಧವೇನೂ ಇರುವದಿಲ್ಲ.

ಹೀಗೆ ಸಂಸ್ಕೃತ ಭಾಷೆಯಲ್ಲಿಯೂ—'ನ ಬ್ರಾಹ್ಮಣಂ ಹನ್ಯಾತ್,' 'ಪಶುನಾ ಯಜೇತ' ಇತ್ಯಾದಿ ವಾಕ್ಯಗಳಲ್ಲ ಪ್ರಕರಣವಶದಿಂದ 'ಬ್ರಾಹ್ಮಣಂ' ಎಂಬಲ್ಲ 'ಏಕತ್ವ' ವಿವಕ್ಷೆಯಿಲ್ಲವೆಂದೂ 'ಪಶುನಾ' ಎಂಬಲ್ಲಿ 'ಏಕತ್ವ' ವಿವಕ್ಷೆಯುಂಟೆಂದೂ ಮೀಮಾಂಸಕರು ಅಂಗೀಕರಿಸಿ—'ಕಪಿಂಜಲಾನಾಲಭೇತ' ಎಂಬ ವಾಕ್ಯದಲ್ಲಿ ಹೇಳಿರುವ 'ಕಪಿಂಜಲಾ೯' ಎಂಬ ಬಹುವಚನಾಂತಪದಕ್ಕೆ ಬಹುತ್ವಾವಧಿಯು ಗೊತ್ತಾಗದೆ ಅನವಸ್ಥೆಯುಂಟಾಗುವುದೆಂದು ಶಂಕಿಸಿ, ಎಲ್ಲಿಂದ ಬಹುತ್ವಕ್ಕೆ ಪ್ರಾರಂಭವೊ ಅದನ್ನು ಇಲ್ಲಿ ಬಹುವಚನದಿಂದ ಗ್ರಹಿಸಬೇಕೆಂದು ಮೂರು ಕಪಿಂಜಲಗಳನ್ನು ಎಂದರ್ಥವನ್ನು ಹೇಳಿರುವರು. ಅದರಂತೆ ಭಾಷೆಯಲ್ಲಿ ದ್ವಿವಚನವನ್ನಂಗೀಕರಿಸಬೇಕಾದ ಸಂದರ್ಭವು ಪ್ರಾಪ್ತವಾದರೆ-ಅನೇಕತ್ವವು ಏಕಭಿನ್ನವಾದ ಬಹುಪದಾರ್ಥ ನಿಷ್ಠವಾಗಿದ್ದರೂ ಪ್ರಕರಣವಶದಿಂದ ಅನೇಕತ್ವಕ್ಕೆ ಪ್ರಾರಂಭವಾಗುವ ದ್ವಿತ್ವದಲ್ಲಿ ಪರ್ಯವಸಾನವನ್ನು ಹೇಳಬೇಕೆಂಬುದು 'ಅನೇಕತ್ವೇ' ಎಂದು ಹೇಳುವ **ಶಾಸನಕಾರ**ನ ಅಭಿಪ್ರಾಯವು. ದ್ವಿತ್ವ-ಬಹುತ್ವಗಳೆಂಬ ಎರಡು ಪದಗಳನ್ನೂ ಉಚ್ಚರಿಸಿರುವ **ದರ್ಪಣಕಾರ**ನಿಗೆ ಈ ಅಭಿಪ್ರಾಯವನ್ನು ಹೇಳುವದಕ್ಕಾಗುವದಿಲ್ಲ. ಹೀಗೆಯೇ ಆಖ್ಯಾತ ಪ್ರತ್ಯಯಗಳಲ್ಲಿಯೂ ಪ್ರಕರಣಾದಿ ಬಲದಿಂದ ದ್ವಿವಚನ ಬಹುವಚನಗಳನ್ನು ವ್ಯವಸ್ಥೆ ಮಾಡಿಕೊಳ್ಳಬೇಕು.

ಈ ಪ್ರತ್ಯಯಗಳಲ್ಲ ಚತುರ್ಥೀ ವಿಭಕ್ತಿಯಾದ '**ಗೆತ್**' ಎಂಬ ಪ್ರತ್ಯಯದಲ್ಲಿರುವ ತಕಾರಕ್ಕೂ '**ಅದ್**' ಎಂಬ ಷಷ್ಠೀ ವಿಭಕ್ತಿಯ ದಕಾರಕ್ಕೂ— '**ಗೆತಃ ಕ ಆದೇಃ || ೨೭೪ || ಯೋಗೇsದ್ || ೨೨೫ ||**' ಇತ್ಯಾದಿ ಸೂತ್ರಗಳಲ್ಲಿ ಪ್ರಯೋಜನವು ಸಿಕ್ಕುವುದು.

ಹೀಗೆ **ಶಾಸನಕಾರನ** ಮತದಲ್ಲಿ 'ಸುಪ್' ವಿಭಕ್ತಿಪ್ರತ್ಯಯಗಳು **ಮ್, ಅಮ್, ಇಮ್, ಗೆ, ಅತ್ತಣಿಂ, ಅ, ಒಳ್** ಎಂಬ ರೂಪದಲ್ಲಿರುವುವೆಂದು ತಿಳಿಯುವುದು.

**ದರ್ಪಣಕಾರನ** ಮತದಲ್ಲಾದರೊ—

ಸಂದಿಸಿ ಮುಮ್ಮಿಂಕೆಯುದದೊಳೆ
ಯೆಂದಿರ್ಪುವು ಸಪ್ತವಿಧವಿಭಕ್ತಿಗಳವು ಮಾ
ರ್ಗಂದಪ್ಪದರ್ಥವಶದಿಂ
ಪಿಂದೆಣಿಸಿದ ವಿವಿಧವಿಧದ ಲಿಂಗಕ್ಕೆಲ್ಲಂ (ಸೂತ್ರ ೯೩)

ಎಂಬ ಸೂತ್ರದಲ್ಲಿ ಹೇಳಿರುವಂತೆ **ಮ್, ಅಮ್, ಇಮ್, ಕೆ, ಅತ್, ಆತ್, ಒಳ್** ಎಂಬ ರೂಪದಲ್ಲಿರುವುವೆಂದು ತಿಳಿಯುವುದು. ಇಲ್ಲಿಯೂ ಪಂಚಮೀ ಷಷ್ಠೀ ವಿಭಕ್ತಿಗಳಲ್ಲಿರುವ ತ ಕಾರವು ಉಚ್ಚಾರಣಾರ್ಥವಲ್ಲದೆ ಲಕ್ಷ್ಯಗಳನ್ನು ಸಾಧಿಸುವುದಕ್ಕೆ ಸಾಧಕವಲ್ಲವೆಂದು ತಿಳಿಯಬೇಕು. **ಶಬ್ದಾನುಶಾಸನದ** ರೀತಿಯಲ್ಲಿ ಚತುರ್ಥಿಯನ್ನು '**ಗೆ**' ಎಂದಂಗೀಕರಿಸಿದ್ದರೂ '**ಗೆತಃ ಕ ಆದೇಃ || ೨೭೪ ||**' ಎಂಬ ಸೂತ್ರದಿಂದ ಅ ಕಾರಾಂತವಾದ ನಪುಂಸಕಲಿಂಗ ಶಬ್ದದ '**ಗೆ**' ಪ್ರತ್ಯಯದ ಗ ಕಾರಕ್ಕೆ ಕ ಕಾರಾದೇಶವು ಬಂದು ನೆಲಕೆ, ಪೊಲಕೆ ಇತ್ಯಾದಿ ರೂಪಗಳು ಸಿದ್ಧಿಸುವುವು. 'ಜನಂಗೆ' ಮೊದಲಾದ ಸಂಸ್ಕೃತ ಪುಲ್ಲಿಂಗದಲ್ಲಿ ಗ ಕಾರವೆ ಪ್ರಯುಮಾಣವಾಗುವುದೆಂದು ತಿಳಿಯಬೇಕು. **ದರ್ಪಣಕಾರನು** '**ಕೆ**' ಪ್ರತ್ಯಯವನ್ನು ಅಂಗೀಕರಿಸಿ—

ಒದವುವುದದಂತಪುಲ್ಲಿಂ
ಗದೊಳ್ ಗೆಯೆಂದಾದಿಬಿಂದುವಿಂ ದ್ವಿತ್ವಂ ಮೇಣ್
ಒದವುವುದು ನಪುಂಸಕದಿಂ
ಗದೊಳ್ ಚತುರ್ಥಿಗೆ ಗೆಯುಕ್ಕುಮುಟಾದೆಡೆಗೆಲ್ಲಂ (ಸೂತ್ರ ೧೧೩)

ಎಂಬ ಸೂತ್ರದಿಂದ 'ಅರಸಂಗೆ, ಜನಕ್ಕೆ, ಜನಕೆ, ಕವಿಗೆ' ಇತ್ಯಾದಿ ರೂಪಗಳು ಸಿದ್ಧಿಸುವುದರಿಂದ **ದರ್ಪಣಕ್ಕೂ ಶಾಸನಕ್ಕೂ** ಲಕ್ಷ್ಯಸಿದ್ಧಿಯಲ್ಲಿ ಬಹಳ ವ್ಯತ್ಯಾಸವೇನೂ ತೋರುವುದಿಲ್ಲ. ವಿಭಕ್ತಿ ಪ್ರಕರಣದಲ್ಲಿ ಇದನ್ನು ಚೆನ್ನಾಗಿ ವಿಸ್ತರಿಸುವೆವು.

**ಅವತಾರಿಕೆ ೧೭**

ಹಿಂದಿನ ಸೂತ್ರದಲ್ಲಿ ನಾಮವಿಭಕ್ತಿಗಳ ಸ್ವರೂಪಗಳನ್ನು ತಿಳಿಸಿ ಅವಕ್ಕೆ ಶಾಸ್ತ್ರಾಂತರದಲ್ಲಿ ಹೇಳಿರುವ '**ಸುಪ್**' ಎಂಬ ಸಂಜ್ಞೆಯೆ ಹೇಳಲ್ಪಟ್ಟಿದೆಯೆಂದು ಸೂಚಿಸಲ್ಪಟ್ಟಿತು. ಈಗ ಧಾತುಗಳ ಮೇಲೆ ವಿಧಿಸುವ ಆಖ್ಯಾತ ಪ್ರತ್ಯಯಗಳ ಸ್ವರೂಪವನ್ನು ಬೋಧಿಸಿ ಅವುಗಳಿಗೆ ಈ ಶಾಸ್ತ್ರದಲ್ಲಿ ವ್ಯವಹರಿಸಬೇಕಾದ ಸಂಕೇತವನ್ನು ತಿಳಿಸುತ್ತಾನೆ.

**ಸೂತ್ರಂ || ಅಮರಯಿರೆನೆವು ತಿಙ್ || ೧೭ ||**

**ಅರ್ಥ || ಅಮ್, ಅರ್, ಅಯ್, ಇರ್, ಎನ್, ಎವು, ಇವಾರು ಪ್ರತ್ಯಯಗಳೂ '೧ತಿಙ್' ಸಂಜ್ಞಕಗಳಾಗುತ್ತವೆ.**

**ಉದಾಹರಣೆ ||** 'ನೋಡಿದಂ, ನೋಡಿದರ್, ನೋಡಿದಯ್, ನೋಡಿದಿರ್, ನೋಡಿದೆಂ, ನೋಡಿದೆವು' ಇವೇ ಮೊದಲಾದ ಆಖ್ಯಾತ ಪ್ರತ್ಯಯಾಂತ ಶಬ್ದಗಳೆಲ್ಲಾ ಈ ಸೂತ್ರಕ್ಕೂ ಲಕ್ಷ್ಯಗಳಾಗುವುವೆಂದು ತಿಳಿಯಬೇಕು.

**ಪ್ರಯೋಜನಂ** || ‘ ಅಮಕೃತ್ತಿಙಾ || ೨೯೮ || ’ ಇದೇ ಮೊದಲಾದ ‘ ತಿಙ್ ’ ಪದವುಳ್ಳ ಸೂತ್ರಗಳಲ್ಲಿ ‘ ತಿಙ್ ’ ಪದಕ್ಕೆ ಈ ಸೂತ್ರದಲ್ಲಿ ಹೇಳಿರುವ ಆರು ಪ್ರತ್ಯಯಗಳು ವಾಚ್ಯವಾಗುವುವೆಂದು ತಿಳಿಯುವುದು.

**ವಿಚಾರ ೧೭**

ಈ ಸೂತ್ರದಲ್ಲಿ ಹಿಂದಿನ ಸೂತ್ರದಲ್ಲಿ ಶಂಕಿಸಿದಂತೆ — ‘ **ಅನಾದಿಸ್ತಿಙ್** ’ ಎಂದು ಹೇಳದೆ ‘ ಅಮರಯಿರೆನೆವು ತಿಙ್ ’ ಎಂದು ಹೇಳಿರುವುದು **ಪ್ರಥಮ, ಮಧ್ಯಮ, ಉತ್ತಮ**ಗಳೆಂಬ ಭೇದಗಳನ್ನೂ ಇವುಗಳಲ್ಲಿರುವ **ವಚನ ಭೇದ**ಗಳನ್ನೂ ತಿಳಿಸಲು ನಿಯತವಾದ ಆನುಪೂರ್ವಿಯು ಬೇಕಾದುದರಿಂದ—ಎಂದು ತಿಳಿಯಬೇಕು. ಆದರೆ ಈ ಶಾಸ್ತ್ರದಲ್ಲಿ ಅಂತಹ ‘ ಪ್ರಥಮ-ಮಧ್ಯಮ-ಉತ್ತಮಪುರುಷ ’ ಸಂಜ್ಞೆಯು ಮಾಡಿಲ್ಲವಾದರೂ ಪೂರ್ವ ವೈಯಾಕರಣರು ಶಾಸ್ತ್ರಗಳಲ್ಲಿ ವ್ಯವಹರಿಸುತ್ತಿರುವುದರಿಂದ ಇಲ್ಲಿಯೂ ಆ ಸಂಕೇತಗಳನ್ನೇ ಇಟ್ಟುಕೊಂಡು ವ್ಯವಹರಿಸಬೇಕು.

**ದರ್ಪಣಕಾರ**ನು ಈ ವಿಷಯದಲ್ಲಿ—

ಅಮರಯಿರೆನೆವುಗಳಕ್ಕುಂ
ಕ್ರಮದೇಕಾನೇಕವಚನದೊಳ್ ಪ್ರತ್ಯೇಕಂ
ಸಮನಿಸೆ ಯುಗಳತೆಯಾಖ್ಯಾ
ತಮಾರ್ಗದೊಳ್ ನೆಲಸಿ ನಿಂದ ಪುರುಷತ್ರಯಕಂ (ಸೂತ್ರ ೨೧೭)

ಎಂಬ ಸೂತ್ರವನ್ನು ಹೇಳಿ ಅದರಲ್ಲಿ ‘ ಪುರುಷತ್ರಯಕಂ ’ ಎಂದು ಹೇಳಿರುವುದರಿಂದ ಪ್ರಥಮ ಮಧ್ಯಮೋತ್ತಮ ವ್ಯವಹಾರವುಂಟೆಂದು ಸೂಚಿಸಿರುವನು. **ನಾಗವರ್ಮ**ನೂ ಸಂಸ್ಕೃತ ಮರ್ಯಾದೆಯನ್ನವಲಂಬಿಸಿ ‘ **ತಾಸ್ತು ದ್ವೇ ದ್ವೇ ಪ್ರಥಮಮಧ್ಯಮೋತ್ತಮಪುರುಷಾಃ** ’ ಎಂದು (೧೯೮) ಸೂತ್ರವನ್ನು ಮಾಡಿರುವನು. ಈ ಶಾಸ್ತ್ರದಲ್ಲಿ ಪ್ರಯೋಜನಾರ್ಥವಾಗಿಯೇ ಸಂಜ್ಞೆಗಳನ್ನು ಹೇಳುವುದರಿಂದ ಪ್ರಥಮಾದಿ ಸಂಜ್ಞೆಗಳನ್ನೇ ಉದ್ದೇಶ ಮಾಡಿ ಯಾವ ಕಾರ್ಯವನ್ನೂ ವಿಧಿಸುವುದಿಲ್ಲವಾದುದರಿಂದ ಇಲ್ಲಿ ಅಂತಹ ಸಂಜ್ಞಾಬೋಧಕವಾದ ಸೂತ್ರವನ್ನು ಮಾಡಲಿಲ್ಲವೆಂದು ತಿಳಿಯಬೇಕು. ಆದರೂ ಲೋಕವ್ಯವಹಾರದಲ್ಲಿ ಪ್ರಥಮಪುರುಷ, ಮಧ್ಯಮಪುರುಷ, ಉತ್ತಮಪುರುಷ ಎಂದು ಪ್ರಸಿದ್ಧವಾಗಿರುವುದರಿಂದ ಪೂರ್ವ ವೈಯಾಕರಣರು ಮಾಡಿರುವ ಸಂಕೇತವನ್ನೇ ಇಟ್ಟುಕೊಂಡು ಇಲ್ಲಿಯೂ ವ್ಯವಹರಿಸುವುದೆಂದು ತಿಳಿಯಬೇಕು.

ಈ ಶಾಸ್ತ್ರದಲ್ಲಿ ‘ ಸುಪ್ ’ ‘ ತಿಙ್ ’ ಎಂಬಿವೆರಡೂ ಸಂಸ್ಕೃತ ವ್ಯಾಕರಣಕಾರರು ಅಂಗೀಕರಿಸಿರುವಂತೆ ಪ್ರತ್ಯಾಹಾರಗಳು ಎಂದು ತಿಳಿಯದೆ, ನಾಮವಿಭಕ್ತಿಗಳಿಗೆ **ಸುಪ್** ಎಂಬ ಸಂಕೇತವೂ ಆಖ್ಯಾತ ಪ್ರತ್ಯಯಗಳಿಗೆ **ತಿಙ್** ಎಂಬ ಸಂಕೇತವೂ ಈ ಶಾಸ್ತ್ರಕಾರರಿಂದ ಅಂಗೀಕರಿಸಲ್ಪಟ್ಟಿದೆ — ಎಂದು ತಿಳಿಯಬೇಕು.

ಆದರೆ ಲೋಕದಲ್ಲಿ ಸಂಕೇತವೆಂಬುದು ಅವರವರ ಬುದ್ಧಿಯಿಂದ ಪರಿಕಲ್ಪಿತವಾದುದು; ಆವ ರೀತಿಯಲ್ಲಾದರೂ ಮಾಡಲು ಶಕ್ಯವಾಗುವುದು. ಆದರೂ ಪ್ರಸಿದ್ಧ ವ್ಯವಹಾರವನ್ನನುಸರಿಸಿ ‘ ಕೃತ್ ’ ಸಂಜ್ಞೆ ಹೇಗೆ ಮಾಡಲ್ಪಟ್ಟಿರುವುದೊ ಹಾಗೆ ‘ ಸುಪ್ ’ ‘ ತಿಙ್ ’ ಎಂಬ ಸಂಜ್ಞೆಗಳೂ ಮಾಡಲ್ಪಟ್ಟಿವೆ. ಇದೇ ರೀತಿಯಾಗಿ ಕೆಲವು ಪ್ರಾಚೀನ ವೈಯಾಕರಣರೂ ಪ್ರತ್ಯಾಹಾರವಲ್ಲದೆ ಕೇವಲ ಸಂಕೇತವನ್ನೇ ಅಂಗೀಕರಿಸಿ ವ್ಯವಹರಿಸುವರು. ಮತ್ತು ಇವುಗಳಿಗೆ – **ವಿಭಜ್ಯಂತೇ ಕರ್ತೃ**

**ಕರ್ಮಾದಯೋಽರ್ಥಾ ಅದಿಭಿಃ** ' ಎಂಬ ವ್ಯುತ್ಪತ್ತಿಯಿಂದ ಇವುಗಳಿಗೆ ಕರ್ತೃಕರ್ಮಾದ್ಯರ್ಥಗಳು ವಿಭಾಗಿಸಿ ಬೋಧಿಸಲ್ಪಡುವುದರಿಂದ ವಿಭಕ್ತಿಯೆಂಬ ಹೆಸರೂ ಬಂದಿರುವುದು ಎಂದು ತಿಳಿಯ ಬೇಕು.

ಇಂತಹ ದ್ವಿವಿಧವಾದ ಸಂಜ್ಞೆಗಳಿಗೆ ವಕ್ಷ್ಯಮಾಣಸೂತ್ರಗಳಲ್ಲಿ ಪ್ರಯೋಜನವಿರುವುದ ರಿಂದ ಅಲ್ಲಿಲ್ಲಾ ಈ ಪ್ರತ್ಯಯಗಳನ್ನೇ ಗ್ರಹಿಸಿ ಸೂತ್ರಾರ್ಥವನ್ನು ಹೇಳಬೇಕೆಂದು ತಿಳಿಯಬೇಕು.

**ಅವತಾರಿಕೆ ೧೮**

ಲೋಕದಲ್ಲಿ ಪ್ರಯೋಗಿಸುವ ಶಬ್ದಗಳೆಲ್ಲಾ ಪದಗಳಾಗಿಯೇ ಇರಬೇಕೆಂಬುದು " **ಅಪದಂ ನ ಪ್ರಯುಂಜೀತ** " ಎಂಬ ವಾಕ್ಯದಿಂದ ಪದವಲ್ಲದುದನ್ನು ಪ್ರಯೋಗಿಸಲಾಗದೆಂದು **ಯಾಸ್ಕರು** ಸೂಚಿಸಿರುವುದರಿಂದ ಸಿದ್ಧವಾಗುವುದು. ಆದುದರಿಂದ ಎಲ್ಲರೂ ಮೊದಲು ಅಂತಹ ಪದಗಳ ಸ್ವರೂಪವನ್ನು ಸಾಮಾನ್ಯವಾಗಿ ತಿಳಿದುಕೊಳ್ಳಬೇಕಾದುದು ಅತ್ಯಾವಶ್ಯಕವೆಂಬ ಅಭಿಪ್ರಾಯ ದಿಂದ ಹಿಂದಿನ ಎರಡು ಸೂತ್ರಗಳಲ್ಲಿ ' ಪದ ' ಸಂಜ್ಞೆಯನ್ನು ಮಾಡುವುದಕ್ಕೆ ಸಾಧಕವಾದ— ಮ್, ಅಮ್, ಇಮ್, ಮೊದಲಾದ ನಾಮವಿಭಕ್ತಿಗಳಿಗೆ ' ಸುಪ್ ' ಎಂಬ ಸಂಜ್ಞೆಯನ್ನೂ ' ಅಮ್, ಅರ್ ' ಮೊದಲಾದ ಆಖ್ಯಾತ ಪ್ರತ್ಯಯಗಳಿಗೆ ' ತಿಙ್ ' ಎಂಬ ಸಂಜ್ಞೆಯನ್ನೂ ಹೇಳಿ ಈಗ ಅಂತಹ ಪ್ರತ್ಯಯಗಳಿಂದ ಕೂಡಿದ ಶಬ್ದಗಳಿಗೆ ಬರುವ ಸಂಜ್ಞೆಯನ್ನು ಹೇಳುತ್ತಾನೆ.

**ಸೂತ್ರಂ || ಸುಪ್ತಿಙನ್ತಂ ಪದಂ || ೧೮ ||**

**ಅರ್ಥ ||** **' ಸುಪ್ ' ಎಂಬ ಸಂಜ್ಞೆಯುಳ್ಳ ಪ್ರತ್ಯಯಾಂತ ಶಬ್ದಗಳೂ ' ತಿಙ್ ' ಎಂಬ ಸಂಜ್ಞೆ ಯುಳ್ಳ ಪ್ರತ್ಯಯಾಂತ ಶಬ್ದಗಳೂ ಪದಸಂಜ್ಞಕಗಳಾಗುವುವು.**

**ಉದಾಹರಣೆ || ಸುಬಂತಕ್ಕೆ**— ಜಿನಂ, ಜನನಂ, ಜಿನನಿಂ, ಜನಂಗೆ, ಜಿನನತ್ತಣಿಂ, ಜಿನನ, ಜಿನನೊಳ್ — ಇತ್ಯಾದಿ.

**ತಿಙನ್ತಕ್ಕೆ**— ಕಣ್ಡಂ, ಕಣ್ಡರ್, ಕಣ್ಡಯ್, ಕಣ್ಡಿರ್, ಕಣ್ಡೆಂ, ಕಣ್ಡೆವು — ಇತ್ಯಾದಿ.

**ಪ್ರಯೋಜನಂ ||** ' **ಕತಪಸ್ತೃತೀಯ ಉತ್ತರಪದಾದೇಃ || ೬೯ ||** ' ಇತ್ಯಾದಿ ' ಪದ ' ಪದವುಳ್ಳ ಸೂತ್ರಗಳಲ್ಲಿ ' ಪದ ' ಪದಕ್ಕೆ 'ಸುಬಂತ-ತಿಙಂತ ' ಶಬ್ದಗಳೆಂದರ್ಥವಾಗುವುದು.

**ವಿಚಾರ ೧೮**

ಈ ವ್ಯಾಕರಣ ಶಾಸ್ತ್ರದಲ್ಲಿ ಸಾಮಾನ್ಯರೂಪವಾಗಿಯೆ ಆಗಲಿ ವಿಶೇಷರೂಪವಾಗಿಯೆ ಆಗಲಿ ಇರುವ ಪ್ರತ್ಯಯಬೋಧಕವಾದ ಪದಗಳು, ಆ ಪ್ರತ್ಯಯಗಳು ಆವ ಪ್ರಕೃತಿಗಳ ದೆಸೆಯಿಂದ ಪರ ವಾಗಿ ವಿಧಿಸಲ್ಪಡುವುವೊ, ಆ ಪ್ರಕೃತಿಗಳೇ ಆದ್ಯವಯವವಾಗುಳ್ಳ ಆ ಪ್ರತ್ಯಯಗಳೆ ಚರಮಾವಯ ವವಾಗುಳ್ಳ ಶಬ್ದಸಮುದಾಯಗಳನ್ನು ಬೋಧಿಸುವುವು; ಎಂದರೆ ಪ್ರತ್ಯಯಬೋಧಕವಾದ ಪದವು ತದಂತಬೋಧಕವಾಗುವುದು — ಎಂಬ ತಾತ್ಪರ್ಯವುಳ್ಳ

**' ಪ್ರತ್ಯಯಗ್ರಹಣೇ ಯಸ್ಮಾತ್ಸವಿಹಿತಸ್ತದಾದೇಸ್ತದಂತಸ್ಯ ಗ್ರಹಣಂ '**

ಎಂಬ ಪರಿಭಾಷೆಯಿಂದ ' **ಒನಚಃ || ೧೭೯ ||** ' ಮೊದಲಾದ ಪ್ರತ್ಯಯ ಗ್ರಹಣವುಳ್ಳ **ವಕ್ಷ್ಯ** ಮಾಣಸೂತ್ರಗಳಲ್ಲಿ ಪ್ರತ್ಯಯಬೋಧಕವಾದ ಪದಗಳು ತದಂತಬೋಧಕಗಳಾಗುವುವು. ಆದುದ ರಿಂದಲೆ — ' **ನಾವ್ಯಯಶತೃತ್ಯದಾದಿ || ೧೦ ||** ' ಎಂಬ ಸೂತ್ರದಲ್ಲಿ ' **ಶತೃ** ' ವೆಂಬ ಪ್ರತ್ಯಯ

ಬೋಧಕ ಪದವು ತದಂತಬೋಧಕವಾಗಿ 'ಶತೃ' ಪ್ರತ್ಯಯಾಂತವಾದ ಶಬ್ದಗಳಿಗೆ 'ಲಿಂಗ' ಸಂಜ್ಞೆಯಿಲ್ಲವೆಂದು ಅರ್ಥವನ್ನು ಹೇಳಿರುವುದು.

ಪ್ರಕೃತದಲ್ಲಿ **'ಸುಪ್' 'ತಿಙ್'** ಎಂಬಿವೆರಡೂ ಪ್ರತ್ಯಯಬೋಧಕಗಳಾದುದರಿಂದ ತದಂತಬೋಧಕಗಳಾಗಿ 'ಸುಬಂತ-ತಿಙನ್ತ' ಗಳಿಗೆ 'ಪದ' ಸಂಜ್ಞೆಯಾಗುವುದೆಂದು ಅರ್ಥವಾಗುತ್ತಿರಲು, ಪುನಃ ಇಲ್ಲಿ 'ಅಂತ' ಗ್ರಹಣವನ್ನು ಮಾಡಿರುವುದು ವ್ಯರ್ಥವೆಂದು ತೋರುವುದು. ಆದರೆ ಸೂತ್ರಕಾರರ ಶೈಲಿಯನ್ನು ಪರ್ಯಾಲೋಚಿಸಿದರೆ ವ್ಯರ್ಥವಾದ ಪದಗಳನ್ನುಚ್ಚರಿಸುವುದು ಎಲ್ಲಿಯೂ ಕಂಡಿಲ್ಲವಾದುದರಿಂದ ಇಲ್ಲಿ ಹೇಳಿರುವ 'ಅಂತ' ಪದಕ್ಕೆ ಆವುದೊ ಒಂದು ಪ್ರಯೋಜನವಿರಬೇಕೆಂದು ಊಹಿಸಬೇಕು. ಅದಾವುದೆಂದರೆ —ಹಿಂದೆ ಹೇಳಿದ ಪ್ರತ್ಯಯಗ್ರಹಣ ಪರಿಭಾಷೆಯು ಸಂಜ್ಞಾಸೂತ್ರಗಳಲ್ಲಿ ಪ್ರವರ್ತಿಸುವದಿಲ್ಲವೆಂಬುವುದೆ. ಹೀಗೆ 'ಅಂತ' ಗ್ರಹಣಕ್ಕೆ ಪ್ರಯೋಜನವನ್ನು ಕಲ್ಪಿಸುವುದರಿಂದ ಇದೂ ಸಂಜ್ಞಾಸೂತ್ರವೆಂದು ತದಂತಲಾಭವಿಲ್ಲದೆ ಕೇವಲ ಪ್ರತ್ಯಯಗಳಿಗೆ 'ಪದ' ಸಂಜ್ಞೆ ಪ್ರಾಪ್ತವಾಗಲು, 'ಅಂತ' ಗ್ರಹಣದಿಂದ ತದಂತಗಳಿಗೇ ಪದ ಸಂಜ್ಞೆಯನ್ನು ಹೇಳುವುದರಿಂದ 'ಅಂತ' ಗ್ರಹಣವು ಸಾರ್ಥಕವಾಯಿತೆಂದು ತಿಳಿಯುವುದು. ಆದುದರಿಂದಲೆ ಸಂಸ್ಕೃತ ವ್ಯಾಕರಣದಲ್ಲಿ —

**'ಸಂಜ್ಞಾವಿಧೌ ಪ್ರತ್ಯಯಗ್ರಹಣೇ ತದಂತಗ್ರಹಣಂ ನಾಸ್ತಿ'**

ಎಂದು ಹೇಳಿರುವುದು.

ಇದರಿಂದ '**ಕೃದಜಾದಿಃ** ॥ ೧೫ ॥' ಮೊದಲಾದ ಸಂಜ್ಞಾಸೂತ್ರಗಳಲ್ಲಿ ಪ್ರತ್ಯಯಬೋಧಕವಾದ ಪದಗಳು ತದಂತಬೋಧಕಗಳಾಗದೆ ಪ್ರತ್ಯಯಮಾತ್ರವನ್ನು ಬೋಧಿಸುವುವು—ಎಂದರ್ಥವಾಗುವುದು. ಆದುದರಿಂದ ಅಲ್ಲಿ ಹೇಳುವ ಸಂಜ್ಞೆಗಳು ಆಯಾ ಪ್ರತ್ಯಯಗಳಿಗೆ ಮಾತ್ರ ಬರುವುವೆಂದು ತಿಳಿಯಬೇಕು.

'**ನಾವ್ಯಯಶತೃತ್ಯದಾದಿ** ॥೧೦॥' ಎಂಬ ಸೂತ್ರವು ಸಂಜ್ಞಾಪ್ರಕರಣದಲ್ಲಿ ಪಠಿತವಾಗಿದ್ದರೂ ಲಿಂಗಸಂಜ್ಞಾನಿಷೇಧಸೂತ್ರವಾದುದರಿಂದ **'ಸಂಜ್ಞಾವಿಧೌ ಪ್ರತ್ಯಯಗ್ರಹಣೇ ತದಂತಗ್ರಹಣಂ ನಾಸ್ತಿ'** ಎಂಬ ನಿಷೇಧವು ಅಲ್ಲಿ ಬರುವುದಿಲ್ಲವಾದುದರಿಂದ 'ಶತೃ' ಎಂಬ ಪ್ರತ್ಯಯಬೋಧಕವಾದ ಪದವು ತದಂತಬೋಧಕವಾಗಿ ತದಂತಕ್ಕೆ ಲಿಂಗಸಂಜ್ಞಾನಿಷೇಧವು ಬರುವುದೆಂದು ತಾತ್ಪರ್ಯವಾಗುವುದು.

'**ವುದುಮಾದ್ಯವ್ಯಯಂ** ॥ ೧೯ ॥' ಎಂಬ ವಕ್ಷ್ಯಮಾಣ ಸೂತ್ರವು ಸಂಜ್ಞಾಸೂತ್ರವಾಗಿದ್ದರೂ ಈ ಸೂತ್ರದಿಂದಲೆ 'ಅಂತ' ಪದವನ್ನು ಅನುವರ್ತಿಸಿ ಅದಕ್ಕೆ ಸೂತ್ರದಲ್ಲಿರುವ 'ವುದುಮಾದಿ' ಎಂಬುವುದನ್ನು ಸೇರಿಸಿದರೆ 'ವುದುಮಾದ್ಯಂತ' ವೆಂದರ್ಥವಾಗುವುದು.

ಆದರೆ ಸಂಜ್ಞಾಸೂತ್ರಗಳಲ್ಲದ '**ಇತಃ ಪ್ರೋऽಚಿ** ॥೫೭॥' '**ಕೋಃ ದಪಶ್ಚ ತಿಙಾ** ॥ ೫೮ ॥' ಮೊದಲಾದ ವಿಧಿಸೂತ್ರಗಳಲ್ಲಿ ಪ್ರತ್ಯಯಬೋಧಕವಾದ ಪದಗಳಿದ್ದರೂ ಅವು ಏಕೆ ತದಂತಬೋಧಕಗಳಾಗುವುದಿಲ್ಲವೆಂದು ಶಂಕೆಯುಂಟಾಗುವುದು. ಆದಾಗ್ಯೂ ನಮಗೆ ಸಂದೇಹ ಹುಟ್ಟಿದ ಮಾತ್ರಕ್ಕೆ ನಿರ್ಣಯಜನಕವಾದ ಶಾಸ್ತ್ರಕ್ಕೆ ಒಂದು ಕುಂದನ್ನುಂಟುಮಾಡುವುದು ಉಚಿತವಲ್ಲವೆಂದು-

**"ವ್ಯಾಖ್ಯಾನತೋ ವಿಶೇಷಪ್ರತಿಪತ್ತಿರ್ನಹಿ ಸಂದೇಹಾದಲಕ್ಷಣಂ ॥"**

ಎಂಬ ಪರಿಭಾಷೆಯಿಂದ ಲಕ್ಷ್ಯಾನುಸಾರಿಗಳಾದ ಶಿಷ್ಟರ ವ್ಯಾಖ್ಯಾನವನ್ನು ನೋಡಿ ಸಂದೇಹ

ವನ್ನು ಪರಿಹರಿಸಿಕೊಳ್ಳಬೇಕೆಂದು ಅಭಿಯುಕ್ತರು ಸೂಚಿಸಿರುತ್ತಾರೆ. ಆವು ಕಾರಣದಿಂದ ಈ ಶಾಸ್ತ್ರದಲ್ಲಿ ಪ್ರತ್ಯಯಬೋಧಕವಾದ ಪದವು ಸಪ್ತಮ್ಯಂತವಾಗಿ ಹೇಳಿದ್ದರೆ ಅಲ್ಲಿ ಅದು ತದಂತ ಬೋಧಕವಾಗುವುದಿಲ್ಲವೆಂದು ಹೇಳಬೇಕು. ಆದುದರಿಂದ 'ಅಚಿ' 'ತಿಙಿ' ಎಂದರೆ 'ಅಚ್‌ಪ್ರತ್ಯಯೇ ಪರೇ, ತಿಙ್‌ಪ್ರತ್ಯಯೇ ಪರೇ' ಎಂದರ್ಥವಾಗಿರುವುದು. ಏವಂಚ ಎಲ್ಲಿ ಲಕ್ಷಣವು ಅತಿಪ್ರಸಕ್ತವಾದರೂ ಹೀಗೆಯೆ ವ್ಯಾಖ್ಯಾನದಿಂದ ಅರ್ಥನಿರ್ಣಯವನ್ನು ಮಾಡಿಕೊಳ್ಳಬೇಕು. ಇದೆ ತಾತ್ಪರ್ಯದಿಂದ **ಶಾಸನಕಾರನು** '**ಪ್ರತ್ಯಯೋऽಸಪ್ತಮ್ಯಾಂ** ॥ ೨೮ ॥' ಎಂಬ ಪರಿಭಾಷಾ ಸೂತ್ರವನ್ನು ಮಾಡಿರುವನು.

ಈ ಸೂತ್ರಕ್ಕೆ ಲಕ್ಷ್ಯಭೂತಗಳಾದ ಪದಗಳು — **ನಾಮ**ಪದಗಳೆಂತಲೂ **ಆಖ್ಯಾತ**ಪದಗಳೆಂತಲೂ ಎರಡು ಬಗೆಯಾಗಿರುವುವು. ಇವುಗಳಲ್ಲಿ ನಾಮಪದಗಳೆಂಬುವು —**ಕೃದಂತ**ಪ್ರಕೃತಿಕಗಳೆಂತಲೂ **ತದ್ಧಿತಾಂತ**ಪ್ರಕೃತಿಕಗಳೆಂತಲೂ **ಸಮಾಸ**ಪ್ರಕೃತಿಕಗಳೆಂತಲೂ **ಕೇವಲನಾಮ**ಪ್ರಕೃತಿಕಗಳೆಂತಲೂ ನಾಲ್ಕು ಬಗೆಯಾಗಿರುವುವು. **ಆಖ್ಯಾತ**ಪದಗಳು **ಮೂಲಧಾತು**ಪ್ರಕೃತಿಕಗಳೆಂತಲೂ **ಪ್ರತ್ಯಯಾಂತಧಾತು**ಪ್ರಕೃತಿಕಗಳೆಂತಲೂ ಎರಡು ಬಗೆಯಾಗಿರುವುವು. ಹೀಗೆ ಒಳಗಿನ ಭೇದಗಳಿಂದ ಪದಗಳು ಆರುಬಗೆಯಾಗಿದ್ದರೂ ಸಾಮಾನ್ಯವಾಗಿ ಎರಡೇ ಬಗೆಯಾಗಿರುವುವೆಂದು ಸೂತ್ರದಲ್ಲಿ 'ಸುಬಂತ-ತಿಙಂತ' ಗಳೆಂಬ ಎರಡೆ ಭೇದವನ್ನು ಹೇಳಿರುವುದು.

ಹೀಗೆಯೆ ಸಂಸ್ಕೃತ ವ್ಯಾಕರಣಕಾರರೂ ಇದೇ ಸೂತ್ರವನ್ನು[೧] ಹೇಳಿ ಪದಗಳು ಸಾಮಾನ್ಯವಾಗಿ ಎರಡು ಬಗೆಯೆಂದಂಗೀಕರಿಸಿರುವರು. ಅಲ್ಲಿ ನಿರುಕ್ತಕಾರರು ಇಂತಹ ಪದಗಳು— ನಾಮಾಖ್ಯಾತೋಪಸರ್ಗನಿಪಾತಭೇದಗಳಿಂದ ನಾಲ್ಕು ಬಗೆಯಾಗಿರುವುವೆಂದು ಹೇಳಿರುವರು. ಅಲ್ಲಿ:

**ನಾಮಪದ**ವೆಂದರೆ ಸಂಸ್ಕೃತದಲ್ಲಿ ಹೇಳಿರುವ ಸಪ್ತವಿಭಕ್ತಿಗಳನ್ನು ಹೊಂದಿ ಪ್ರಯೋಗಕ್ಕೆ ಅರ್ಹವಾದ ಶಬ್ದಗಳು. ಇವಕ್ಕೆ ಕೃದಂತ, ತದ್ಧಿತಾಂತ, ಸಮಾಸ, ನಾಮವಾಚಕ ಎಂದು ನಾಲ್ಕು ಬಗೆಯಾಗಿರುವ ಪ್ರಾತಿಪದಿಕಗಳು ಪ್ರಕೃತಿಗಳಾಗುವುವು. ಆದರೂ ಸಾಮಾನ್ಯವಾಗಿ ಇವೆಲ್ಲಕ್ಕೂ ನಾಮಪದಗಳೆಂದೇ ವ್ಯವಹಾರವಿರುವುದು. ಆದುದರಿಂದ ಈ ಒಳಭೇದವನ್ನು ಇಲ್ಲಿ ಹೇಳಿಲ್ಲ.

**ಆಖ್ಯಾತಪದ**ವೆಂದರೆ -ತಿಙ್ ಪ್ರತ್ಯಯಗಳನ್ನುಹೊಂದಿದ ಧಾತುಪ್ರಕೃತಿಕಗಳಾದ ಶಬ್ದಗಳು.

**ಉಪಸರ್ಗ**ವೆಂದರೆ — ಧಾತುಗಳ ಪೂರ್ವದಲ್ಲಿ ಸೇರಿ, ಆ ಧಾತುಗಳಲ್ಲಿರುವ ಅರ್ಥವಿಶೇಷವನ್ನು[೨] ಪ್ರಕಾಶಮಾಡುವ ಕೆಲವು ಅವ್ಯಯಗಳು. ಅವಾವುವೆಂದರೆ— ಪ್ರ, ಪರಾ, ಅಪ, ಸಮ್, ಅನು, ಅವ, ನಿಸ್, ನಿರ್, ದುಸ್, ದುರ್, ವಿ, ಆ(ಙ್), ನಿ, ಅಧಿ, ಅತಿ, ಸು, ಅಪಿ, ಉದ್, ಅಭಿ, ಪ್ರತಿ, ಪರಿ, ಉಪ, ಎಂಬ ಇಪ್ಪತ್ತೆರಡು ಪದಗಳು.[೩]

**ನಿಪಾತ**ಗಳೆಂದರೆ – ಮೇಲೆ ಹೇಳಿದ ಉಪಸರ್ಗಗಳಲ್ಲದ ಅವ್ಯಯಪ್ರಕೃತಿಕಗಳಾದ ಶಬ್ದಗಳು.

ಹೀಗ ನಾಲ್ಕು ಬಗೆಯಾಗಿರುವ ಪದಗಳಲ್ಲಿ ನಾಮಪದಗಳಿಗೂ ಆಖ್ಯಾತಪದಗಳಿಗೂ

[೧ ಪಾಣಿನಿ: 'ಸುಪ್ ತಿಙನ್ತಂ ಪದಂ' ॥ ೧-೪-೧೪ ॥

೨ ಧಾತ್ವರ್ಥಂ ಬಾಧತೇ ಕಶ್ಚಿತ್ ಕಶ್ಚಿತ್ ತಮನುವರ್ತತೇ। ತಮೇವ ವಿಶಿನಷ್ಟ್ಯನ್ಯ ಉಪಸರ್ಗಗತಿಸ್ತ್ರಿಧಾ॥

೩ ಇವುಗಳಿಗೆ 'ಪ್ರಾದಿ' ಗಳೆಂದು ಹೆಸರು. ಇವುಗಳನ್ನೆಲ್ಲ ಕೆಳಗಿನ ಶ್ಲೋಕದಲ್ಲಿ ಕೂಡಿಸಿರುವರು:

ಪ್ರವಿಪರಾಪಸಮನ್ವವನಿರ್ನಿಸೋ ದುರತಿದುಷ್ಪ್ರತಿಸೂದಧಿಪರ್ಯಪಿ ।

(ತದನು) ಚಾಙಭಿನೀ ಉಪವಿಂಶತಿರ್ದ್ವಿಸಹಿತೇತ್ಯುಪಸರ್ಗಸಮಾಹ್ವಯಾಃ ॥ —ಸಂಪಾದಕ]

ವಾಚಕತ್ವವಿರುವುದು. ಉಪಸರ್ಗಗಳಿಗೆ ದ್ಯೋತಕತ್ವವಿರುವುದು. ನಿಪಾತಪದಗಳಲ್ಲಿ ಕೆಲವಕ್ಕೆ ದ್ಯೋತಕತ್ವವೂ ಕೆಲವಕ್ಕೆ ವಾಚಕತ್ವವೂ ಕೆಲವಕ್ಕೆ ನಿರರ್ಥಕತ್ವವೂ ಇರುವುದು. ಇದೇ ಅರ್ಥವನ್ನು ಮೀಮಾಂಸಕರು —

**ಚತುರ್ವಿಧೇ ಪದೇ ಚಾತ್ರದ್ವಿವಿಧಸ್ಯಾರ್ಥನಿರ್ಣಯಃ**
**ಕ್ರಿಯತೇ ಸಂಶಯೋತ್ಪತ್ತೇರ್ನೋಪಸರ್ಗನಿಪಾತಯೋಃ**
**ತಯೋರರ್ಥಾಭಿಧಾನೇ ಹಿ ವ್ಯಾಪಾರೋ ನೈವ ವಿದ್ಯತೇ**
**ಯದರ್ಥದ್ಯೋತಕೌ ತೌ ತು ವಾಚಕಸ್ಸ ವಿಚಾರ್ಯತೇ**

ಎಂಬ ಶ್ಲೋಕಗಳಿಂದ ವಿವರಿಸಿರುವರು. ಇಂತಹ ಉಪಸರ್ಗನಿಪಾತ ರೂಪವಾದ ಅವ್ಯಯ ಶಬ್ದಗಳೂ ದ್ಯೋತ್ಯಾರ್ಥದಿಂದಾಗಲಿ, ವಾಚ್ಯಾರ್ಥದಿಂದಾಗಲಿ ಅರ್ಥವತ್ತಾದ ಶಬ್ದಗಳಾದುದರಿಂದ ಪ್ರಾತಿಪದಿಕ ಸಂಜ್ಞಕಗಳಾಗಿ ವಿಭಕ್ತಿ ಪ್ರತ್ಯಯಗಳು ಬರಲು ಅವಕ್ಕೆ — **'ಅವ್ಯಯಾದಾಪ್ಸುಪಃ ||೨-೪-೮೨||'**ಎಂಬ ಸೂತ್ರದಿಂದ ಲುಕ್ ಮಾಡಿ, **'ಪ್ರತ್ಯಯಲೋಪೇ ಪ್ರತ್ಯಯಲಕ್ಷಣಂ||೧-೧-೬೨||'** ಎಂಬ ಸೂತ್ರದಿಂದ' ಸುಪ್ ' ಪ್ರತ್ಯಯವು ಲುಪ್ತವಾಗಿದ್ದರೂ ಆ ಲುಪ್ತಪ್ರತ್ಯಯನಿಮಿತ್ತವಾದ ಕಾರ್ಯವು ಬರುವುದೆಂದು ಹೇಳಿರುವುದರಿಂದ ಸುಬಂತತ್ವ ಪ್ರಯುಕ್ತಪದ ಸಂಜ್ಞೆಗೆ ವಿಷಯಗಳಾಗುವುದರಿಂದ ಇವುಗಳನ್ನೂ ಸುಬಂತದಲ್ಲಿಯೆ ಸೇರಿಸಬೇಕೆಂಬ ಅಭಿಪ್ರಾಯದಿಂದ ಸೂತ್ರಕಾರರು 'ಸುಬಂತ-ತಿಜಂತ' ಗಳೆಂಬ ಎರಡೆ ವಿಧವಾದ ಪದಗಳನ್ನು ಹೇಳಿರುವರು — ಎಂದು ತಿಳಿಯುವುದು. ಇನ್ನೂ ಇದರ ವಿಚಾರವು ಬಹಳವಾಗಿರುವುದರಿಂದ ಇಲ್ಲಿ ವಿವರಿಸಲು ಅಸಾಧ್ಯವಾಗಿರುವುದು. ಹೆಚ್ಚು ವಿಷಯಗಳನ್ನು ಸಂಸ್ಕೃತವ್ಯಾಕರಣದ ಉದ್ಗ್ರಂಥಗಳಿಂದ ತಿಳಿದುಕೊಳ್ಳಬೇಕು.

ಭಾಷೆಯಲ್ಲಾದರೂ ಉಪಸರ್ಗಗಳಿಲ್ಲವಾದುದರಿಂದ ನಾಮಾಖ್ಯಾತಾವ್ಯಯಗಳೆಂದು ಮೂರು ಬಗೆಯಾಗಿ ಪದಗಳಿರುವುವೆಂದು ತಿಳಿಯಬೇಕು. ಇಲ್ಲಿಯೂ ಅವ್ಯಯಪದಗಳನ್ನು ನಾಮಪದಗಳಲ್ಲಿಯೇ ಅಂತರ್ಭಾವವನ್ನು ಹೇಳುವುದರಿಂದ ಸುಬಂತ-ತಿಜಂತಗಳೆಂಬ ಎರಡೆ ಬಗೆಯನ್ನು ಹೇಳಿರುವುದು. ಈ ವಿಷಯದಲ್ಲಿ **ದರ್ಪಣಕಾರ**ನು —

ಪದದರ್ಥಮಂ ವಿಭಾಗಿಸು
ವುದರಿಂದೆ ವಿಭಕ್ತಿಯಂತದಂ ಪ್ರತ್ಯಯಮೆಂ
ಬುದು ತತ್ಪ್ರತ್ಯಯದಿಂ ಪೂ
ರ್ವದೊಳಿರ್ಪಂ ಪ್ರಕೃತಿಯೆರಡುಮುಮದೊರ್ದವೆ ಪದಂ (ಸೂತ್ರ ೩೫)

ಎಂಬ ಸೂತ್ರದಿಂದ ಶಬ್ದದೊಳಿದ್ದ ಅರ್ಥವನ್ನು ತಂತಮ್ಮ ಅರ್ಥಾನುಗುಣವಾಗಿ ವಿಭಾಗಿಸಿ ಕೊಡುವುದರಿಂದ **ವಿಭಕ್ತಿ**ಯೆನಿಸಿಕೊಳ್ಳುವುದು. ಆ ವಿಭಕ್ತಿಯನ್ನು **ಪ್ರತ್ಯಯ**ವೆಂದೂ ಹೇಳುತ್ತಾರೆ. ಅವಾವುವೆಂದರೆ — **ಮ್, ಅಮ್** ಮೊದಲಾದ ನಾಮಾಖ್ಯಾತ ವಿಭಕ್ತಿಗಳು. ಅವುಗಳಿಗೆ ಹಿಂದಿರುವ ' ಲಿಂಗ, ಧಾತು ' ಇವು **ಪ್ರಕೃತಿ**ಯೆನಿಸಿಕೊಳ್ಳುವುವು. ಇಂತಹ **ಪ್ರಕೃತಿ-ಪ್ರತ್ಯಯ**ಗಳೆರಡೂ ಸೇರಿರುವುವು **ಪದ**ಗಳೆನಿಸಿಕೊಳ್ಳುವುವೆಂದು ಹೇಳಿ— ' ಮರ, ದೇವ ' ಎಂಬ ನಾಮಲಿಂಗಕ್ಕೆ ' ಮ್ ' ಎಂಬ ವಿಭಕ್ತಿಯನ್ನು ಸೇರಿಸಲು ' ಮರಂ, ದೇವಂ ' ಎಂದು ನಾಮಪದಗಳಾಗುವುವು. ' ನುಡಿ, ನೋಡು ' ಎಂಬ ಧಾತುಗಳಿಗೆ ' ಅಮ್ ' ಎಂಬ ಆಖ್ಯಾತ ವಿಭಕ್ತಿಯನ್ನು ಸೇರಿಸಿದರೆ ' ನುಡಿದಂ, ನೋಡಿದಂ ' ಎಂದು ಆಖ್ಯಾತಪದಗಳಾಗುವುವು. ಅವ್ಯಯ

ವನ್ನೂ ಸಮಾಸದೊಳಗಣ ನಾಮಭಾಗವನ್ನೂ ವಿಭಕ್ತಿಯನ್ನು ಮಾಡಿ ಲೋಪಮಾಡಿರುವುದರಿಂದ ಪದಗಳೆಂದೆ ತಿಳಿಯಬೇಕು — ಎಂದು ಸೂಚಿಸಿರುವನು. ಆದುದರಿಂದ ಭಾಷೆಯಲ್ಲಿ ಉಪಸರ್ಗಗಳಿಲ್ಲವಾದರೂ ಅವ್ಯಯಗಳ ವಿಷಯದಲ್ಲಿ ಸಂಸ್ಕೃತಕ್ಕೂ ಕನ್ನಡಕ್ಕೂ ಏನೂ ಭೇದವಿಲ್ಲೆಂದು ತೋರುವುದು.

**ಅವತಾರಿಕೆ ೧೯**

ಹಿಂದಿನ ಸೂತ್ರದಲ್ಲಿ ಸುಬಂತ-ತಿಙಂತಗಳಿಗೆ ಪದಸಂಜ್ಞೆಯು ಹೇಳಲ್ಪಟ್ಟಿತು. ಅವುಗಳಲ್ಲ ಸುಬಂತಪದಗಳು ನಾಮಪ್ರಕೃತಿಗಳೆಂತಲೂ ಅವ್ಯಯಪ್ರಕೃತಿಗಳೆಂತಲೂ ಹೇಳಲ್ಪಟ್ಟಿವೆ. ಅಲ್ಲಿ ಅವ್ಯಯಗಳಾವುವೆಂದರೆ — ಅವುಗಳ ಸ್ವರೂಪವನ್ನು ತಿಳಿಸಲು ಅವ್ಯಯಸಂಜ್ಞಾಸೂತ್ರಗಳನ್ನು ಹೇಳುತ್ತಾನೆ. ಅವುಗಳಲ್ಲಿ ಮೊದಲು ಪ್ರತ್ಯಯಾಂತಗಳಾದ ಅವ್ಯಯಗಳ ಸ್ವರೂಪವನ್ನು ತಿಳಿಸುತ್ತಾನೆ.

**ಸೂತ್ರಂ || ಪುದುಮಾದ್ಯವ್ಯಯಂ || ೧೯ ||**

**ಅರ್ಥ || ' ಪುದುಮ್ ' ಎಂಬ ಪ್ರತ್ಯಯವೇ ಮೊದಲಾದ ಗಣದಲ್ಲಿ ಪಠಿತವಾದ ಪ್ರತ್ಯಯಾಂತ ಶಬ್ದಗಳು ಅವ್ಯಯಸಂಜ್ಞಕಗಳಾಗುವುವು.**

**ಉದಾಹರಣೆ ||** ಬಪ್ಪುದುಂ, ತಪ್ಪುದುಂ; ತರ್ಪಿನಂ, ಬರ್ಪಿನಂ; ಬಂದು, ತಂದು — ಇತ್ಯಾದಿಗಳು.

**'ಪುದುಮಾದಿಗಣ'** ವಾವುದೆಂದರೆ — ಪುದುಮ್, ಎ, ಪನ್ನಮ್, ಪನ್ನೆಗಮ್, ಪಿನಮ್, ಪಿನೆಗಮ್, ಉತೆ, ಉತ್ತೆ, ಉತುಮ್, ಉತ್ತುಮ್, ದೊಡೆ, ಪೊಡೆ, ಅಡೆ, ಅದು, ಅತ್, ಆತ್, ಅಲ್, ಇತ್, ದು, ಎವರಂ, ಎವರೆಗಂ, ಪೊಲ್, ಪೋಲ್, ಬೊಲ್, ಪುತ್, ತುಬ್, ತೆ, ತು — **ಈ ಇಪ್ಪತ್ತೆಂಟು** ಪ್ರತ್ಯಯಗಳೆಂದು ತಿಳಿಯಬೇಕು.

**ಪ್ರಯೋಜನಂ || ' ಲುಬವ್ಯಯಸ್ಯ || ೨೪೭ || '** ಇತ್ಯಾದಿ ' ಅವ್ಯಯ ' ಪದವುಳ್ಳ ಸೂತ್ರಗಳಲ್ಲಿ 'ಅವ್ಯಯ' ವೆಂಬ ಪದಕ್ಕೆ ಈ ಪ್ರತ್ಯಯಾಂತ ಶಬ್ದಗಳೂ ಮುಂದೆ ಹೇಳುವ ' **ಅಣಮಾದಿ** ' ಗಳೂ '**ಎವಮಾದಿ**' ಗಳೂ ಅರ್ಥವೆಂದು ತಿಳಿಯಬೇಕು.

**ವಿಚಾರ ೧೯**

**ಈ** ಸೂತ್ರವೂ ಸಂಜ್ಞಾಸೂತ್ರವಾದುದರಿಂದ ಹಿಂದಿನ ಸೂತ್ರದಲ್ಲಿ ಹೇಳಿರುವಂತೆ ' **ಪುದುಮಾದಿ** ' ಪ್ರತ್ಯಯಬೋಧಕವಾದ ಪದವು ತದಂತ ಬೋಧಕವಾಗುವುದಿಲ್ಲ. ಆದಾಗ್ಯೂ ಕೇವಲ ಪ್ರತ್ಯಯಗಳಿಗೆ ಪ್ರಯೋಗವಿಲ್ಲವಾದುದರಿಂದ ಅವಕ್ಕೆ ಅವ್ಯಯಸಂಜ್ಞೆಯನ್ನು ಮಾಡಲು ಪ್ರಯೋಜನವಿಲ್ಲವಾದುದರಿಂದ ಇಲ್ಲಿ ಪೂರ್ವಸೂತ್ರದಿಂದ 'ಅಂತ' ಪದವನ್ನು ಅನುವರ್ತಿಸಿ ಅದಕ್ಕೆ 'ಪುದುಮಾದಿ ' ಯೆಂಬುವುದನ್ನು ಸೇರಿಸಿದರೆ ' ಪುದುಮಾದ್ಯಂತ ' ವೆಂದು ಅರ್ಥವಾಗುವುದು.

ಇಲ್ಲಿ **' ಲಘ್ವರ್ಥಂ ಹಿ ಸಂಜ್ಞಾಕರಣಂ '** ಎಂದು ಪ್ರಾಚೀನರು ಹೇಳಿರುವಂತೆ ಲಘುಭೂತವಾದ ಸಂಜ್ಞೆಯನ್ನು ಮಾಡದೆ ' ಅವ್ಯಯಂ ' ಎಂಬ ಮಹಾಸಂಜ್ಞೆಯನ್ನು ಮಾಡಿರುವುದರಿಂದ ಇದು ಅನ್ವರ್ಥ ಸಂಜ್ಞೆಯೆಂದು ತೋರುವುದು. ಅನ್ವರ್ಥವೆಂದರೆ ಆ ಪದಕ್ಕೆ ಅನುಗುಣವಾದ ಅರ್ಥವುಳ್ಳದೆಂದು ತಾತ್ಪರ್ಯವು. ಆದುದರಿಂದಲೆ ಪೂರ್ವಿಕರು —

**' ನ ವ್ಯೆತಿ ನ ಚಲತಿ ಸರ್ವಲಿಂಗಸಂಖ್ಯಾವಿಭಕ್ತಿಷು ಸ್ವರೂಪಾನ್ನಚ್ಯವತ ಇತ್ಯವ್ಯಯಂ '**
ಎಂದು ವ್ಯುತ್ಪತ್ತಿಯನ್ನು ತೋರಿಸಿ ಈ ಅರ್ಥಕ್ಕೆ —

**ಸದೃಶಂ ತ್ರಿಷು ಲಿಂಗೇಷು ಸರ್ವಾಸು ಚ ವಿಭಕ್ತಿಷು**
**ವಚನೇಷು ಚ ಸರ್ವೇಷು ಯನ್ನವ್ಯೇತಿ ತದವ್ಯಯಂ**

ಎಂಬ ಶ್ರುತಿಯನ್ನು ಪ್ರಮಾಣವಾಗಿ ಹೇಳಿರುವರು. ಆದುದರಿಂದ ಅವ್ಯಯಗಳಿಗೆ ಲಿಂಗಪ್ರಯುಕ್ತವಾದ ವಿಕಾರವೂ ವಿಭಕ್ತಿಪ್ರಯುಕ್ತವಾದ ವಿಕಾರವೂ ವಚನಪ್ರಯುಕ್ತವಾದ ವಿಕಾರವೂ ಇಲ್ಲದೆ ಏಕರೂಪವಾಗಿರುವುವೆಂದು ತಾತ್ಪರ್ಯವಾಗುವುದು.

ಈ ಸೂತ್ರದ ಗಣದಲ್ಲಿ ಪಠಿತವಾದ— **ವುದುಮ್, ಎ, ವನ್ನಂ, ವನ್ನೆಗಂ, ವಿನಂ, ವಿನೆಗಂ** ಎಂಬ **ಆರು** ಪ್ರತ್ಯಯಗಳೂ ಆವ ಕ್ರಿಯೆ-ಕ್ರಿಯಾಂತರಕ್ಕೆ ಜ್ಞಾಪಕವಾಗುವುವೊ ಅಂತಹ ಕ್ರಿಯಾವಾಚಕವಾದ ಧಾತುಗಳ ಮುಂದೆ 'ವುದುಮಾದಿ'ಪ್ರತ್ಯಯಗಳು ಬರುವುವು ಎಂಬರ್ಥವುಳ್ಳ- '**ವುದುಮೆವನ್ನಂ ವನ್ನೆಗಂ ವಿನಂ ವಿನೆಗಂ ॥ ೫೮೮ ॥**' ಎಂಬ ಸೂತ್ರದಿಂದ ವಿಧಿಸುವ ಕೃತ್ ಪ್ರತ್ಯಯಗಳೆಂದು ತಿಳಿಯಬೇಕು. ಆದುದರಿಂದ ' ಪಾಡುವುದುಂ ಕೇಳ್ದಂ, ಪಾಡೆ ಕೇಳ್ದಂ, ಪಾಡುವನ್ನಂ ಕೇಳ್ದಂ, ಪಾಡುವನ್ನೆಗಂ ಕೇಳ್ದಂ, ಪಾಡುವಿನಂ ಕೇಳ್ದಂ, ಪಾಡುವಿನೆಗಂ ಕೇಳ್ದಂ' ಇತ್ಯಾದಿ ವಾಕ್ಯಗತವಾದ ' ಪಾಡುವುದುಂ ' ಮೊದಲಾದುವು ( ಕೃತ್ ಪ್ರತ್ಯಯಾಂತ ) **ಅವ್ಯಯ**ಗಳೆಂದು ತಿಳಿಯಬೇಕು.

' **ಉತೆ, ಉತ್ತೆ, ಉತುಮ್, ಉತ್ತುಮ್** ' ಎಂಬ **ನಾಲ್ಕು** ಪ್ರತ್ಯಯಗಳು ಧಾತುವಿಗೆ ಪರವಾಗಿ ವರ್ತಮಾನ ಕಾಲದಲ್ಲಿ ವಿಹಿತವಾದ ಅಚ್ಛತ್ಯಯದ ಸ್ಥಾನದಲ್ಲಿ—'ಉತೆದ್, ಉತ್ತೆದ್, ಉತುಂ, ಉತ್ತುಂ ' ಎಂದು ಆದೇಶಗಳಾಗುವುವು ಎಂಬರ್ಥವುಳ್ಳ — " **ಉತೆದುತ್ತೆದುತುಮುತ್ತುಮ್ ಸತ್ಯಚೋ ವಾ ॥ ೫೪೪ ॥**' ಎಂಬ ಸೂತ್ರದಿಂದ ವಿಹಿತವಾದ ಆದೇಶಗಳು. ಇವು ಪ್ರತ್ಯಯಸ್ಥಾನದಲ್ಲಿ ಬಂದಿರುವುದರಿಂದ ಇವನ್ನು ಪ್ರತ್ಯಯಗಳೆಂದು ವ್ಯವಹರಿಸುತ್ತಾರೆ. ಆದುದರಿಂದ ' ಮಾಡುತೆ, ಮಾಡುತ್ತೆ, ಮಾಡುತುಂ, ಮಾಡುತ್ತುಂ ' ಮೊದಲಾದುವೂ ಕೃತ್ ಪ್ರತ್ಯಯಾಂತ ಅವ್ಯಯಗಳೆಂದು ವ್ಯವಹರಿಸಲ್ಪಡುವುವು.

' **ದೊಡೆ** ' ಎಂಬ ಪ್ರತ್ಯಯವು — ' **ಭೂತೇ ದೊಡೆದ್ ವಾ ॥೫೮೯॥**' ಎಂಬ ಸೂತ್ರದಿಂದ ಭೂತಕಾಲದಲ್ಲಿ ಕ್ರಿಯಾಂತರಜ್ಞಾಪಕ ಕ್ರಿಯಾವಾಚಕವಾದ ಧಾತುವಿನ ಮೇಲೆ ವಿಹಿತವಾದ ' ದೊಡೆತ್ ' ಎಂಬ ಕೃತ್ಪ್ರತ್ಯಯವು; ಆದುದರಿಂದ ' ಪಾಡಿದೊಡೆ ಕೇಳ್ದಂ' ಎಂಬ ವಾಕ್ಯದಲ್ಲಿ ' ಪಾಡಿದೊಡೆ ' ಎಂಬುವುದು ಅವ್ಯಯವಾಗಿರುವುದು.

' **ವೊಡೆ** ' ಈ ಪ್ರತ್ಯಯವು ' **ವೊಡೆತ್ ಸದ್ಭಾವಿನಿ ॥೫೯೦॥** ' ಎಂಬ ಸೂತ್ರದಿಂದ ವಿಹಿತವಾದುದೆಂದು ತಿಳಿಯಬೇಕು. ' ಪಾಡುವೊಡೆ ಬಂದಂ ' ಎಂಬಲ್ಲಿ ' ಪಾಡುವೊಡೆ ' ಎಂಬುವುದು ಅವ್ಯಯವಾಗುವುದು.

' **ಅದೆ** ' ಎಂಬುದು —' **ಅದೆತ್ ಪ್ರತಿಷೇಧೇ ॥೫೮೩॥** ' ಎಂಬ ಸೂತ್ರದಿಂದ ಪ್ರತಿಷೇಧಾರ್ಥದಲ್ಲಿ ವಿಹಿತವಾದ 'ಅದೆತ್' ಪ್ರತ್ಯಯವು. ಆದುದರಿಂದ 'ನಡೆಯದೆ, ನುಡಿಯದೆ' ಮೊದಲಾದುವು ಅವ್ಯಯಗಳೆಂದು ತಿಳಿಯುವುದು.

' **ಅದು, ಅತ್, ಆತ್** ' ಎಂಬ ಮೂರು ಪ್ರತ್ಯಯಗಳೂ ' **ಅದ್ವದಾದಾಗೋರನರ್ಹಾರ್ಥೇ**

|| **೫೮೪** || ' ಎಂಬ ಸೂತ್ರದಿಂದ ' ಆಗು ' ಧಾತುವಿನ ಮೇಲೆ ಅನಹಾರ್ಥದಲ್ಲಿ ವಿಹಿತವಾದ ಪ್ರತ್ಯಯಗಳೆಂದು ತಿಳಿಯಬೇಕು. ಆದುದರಿಂದ ಈ ಪ್ರತ್ಯಯಾಂತಗಳಾದ — ' ಆಗದು, ಆಗ, ಆಗಾ ' ಎಂಬ ಮೂರು ಶಬ್ದಗಳೂ ಅವ್ಯಯಗಳಾಗುವುವು. ಇಲ್ಲಿ ' ಅತ್ ' ಎಂದು ತ ಕಾರೇತ್ಸಂಜ್ಞಕವಾದ ಅ ಕಾರರೂಪ ಪ್ರತ್ಯಯವನ್ನು ಹೇಳಿರುವುದರಿಂದ, ನಿರನುಬಂಧಕವಾದ — ' **ಸಾಲ್ಪಾನೋಽನ್ನೀಭ್ಯೋಽಹುಪಿಹಾಃ** || **೫೭೬** || ' ಎಂಬ ಸೂತ್ರದಿಂದ ವಿಹಿತವಾದ ' ಅ ' ಪ್ರತ್ಯಯಾಂತ ' ಸಾಲ ' ಶಬ್ದಕ್ಕೆ ಅವ್ಯಯ ಸಂಜ್ಞೆಯು ಬರುವುದಿಲ್ಲ.

' **ಅಲ್** ' ಎಂಬ ಪ್ರತ್ಯಯವು— ' **ಅಲಹಾರ್ಥೇ** || **೫೮೫** ||' ಎಂಬ ಸೂತ್ರದಿಂದ ವಿಹಿತವಾದುದು. ಆದುದರಿಂದ — ' ನೋಡಲ್, ನುಡಿಯಲ್; ನೋಡಲೊಡಂ, ನುಡಿಯಲೊಡಂ; ನೋಡಲೊಡನೆ, ನುಡಿಯಲೊಡನೆ ' ಮೊದಲಾದ ' ಅಲ್ ' ಪ್ರತ್ಯಯಾಂತ ಶಬ್ದಗಳು ಅವ್ಯಯಗಳಾಗುವವು. ಇಲ್ಲ ' ನೋಡಲೊಡಂ, ನುಡಿಯಲೊಡಂ, ನೋಡಲೊಡನೆ, ನುಡಿಯಲೊಡನೆ ' ಎಂಬ ಉದಾಹರಣೆಗಳಲ್ಲಿ—' **ಒಡನೆದೊಡಮಲೋಽನು** ||**೫೯೨**||' ಎಂಬ ಸೂತ್ರದಿಂದ ' ಅಲ್ ' ಅಂತಕ್ಕೆ ಅನುಪ್ರಯೋಗಗಳಾಗಿ ' ಒಡಂ, ಒಡನೆ ' ಎಂಬಿವು ಬಂದಿವೆಯೆಂದು ತಿಳಿಯಬೇಕು. ' ಒಡಂ, ಒಡನೆ ' ಎಂಬಿವೆರಡೂ ' ಅಣವಾದಿ ' ಗಣ ಪಠಿತವಾದ ಅವ್ಯಯಗಳು. ಇವುಗಳಲ್ಲ ' ಒಡಂ ' ಎಂಬುದಕ್ಕೆ ' ನಿಶ್ಚಯ, ' ಅಥವಾ ' ಅಭ್ಯುಗಮ ' ಎಂಬರ್ಥವೂ ' ಒಡನೆ ' ಎಂಬುದಕ್ಕೆ ' ಸಹ ', ' ಕೂಡ ' ಎಂದರ್ಥವೂ ಆಗುವುವು.

ಈ ಗಣದಲ್ಲ ಪ್ರತ್ಯಯಗಳನ್ನೇ ಪಾಠಮಾಡಿರುವುದರಿಂದ '**ಅತ್, ಅಲ್** ' ಎಂಬೆರಡನ್ನೂ ಪ್ರತ್ಯಯಗಳೆಂದೇ ಗ್ರಹಿಸಬೇಕಲ್ಲದೆ, ' **ತಸ್ಮಿನ್ನದಲೌ** || **೫೨೬** || ' ಎಂಬ ಸೂತ್ರದಿಂದ ವಿಹಿತವಾದ ತಿಙಾದೇಶಗಳನ್ನು ಗ್ರಹಿಸುವುದಿಲ್ಲ. ಆದುದರಿಂದ—ನೋಡಬೇಡಂ, ನೋಡಲ್ ಬೇಡಂ, ನುಡಿಯ ಬೇಡಂ, ನುಡಿಯಲ್ ಬೇಡಂ, ಮೊದಲಾದ ಪ್ರಯೋಗಗಳಲ್ಲಿ—'ನೋಡ, ನೋಡಲ್' ಮೊದಲಾದುವು ಅವ್ಯಯಗಳಲ್ಲವೆಂದು ತಿಳಿಯಬೇಕು. ' ಬೇಡಂ, ಬೇಡ ' ಎಂಬಿವು ' ಅಣವಾದಿ ' ಗಣದಲ್ಲ ಪಠಿಸಿರುವುದರಿಂದ ಅವ್ಯಯಗಳಾಗುವುವು.

' **ಇತ್** ' ಎಂಬುದು — ' **ಇದುತೋಽಲಘ್ವಾದಿದ್ವಿಸ್ವರಾತ್** || **೫೮೧** ||' ಎಂಬ ಸೂತ್ರದಿಂದ ಲಘ್ವಾದಿಯಾಗಿಯೂ ಎರಡು ಸ್ವರವುಳ್ಳುದಾಗಿಯೂ ಇರುವ ಧಾತುಗಳನ್ನು ಬಿಟ್ಟು ಉಳಿದ ಉಕಾರಾಂತವಾಗಿಯೂ ಉತ್ತರ ಕಾಲಕ್ರಿಯೆಯೊಡನೆ ಸಮಾನ ಕರ್ತೃಕವಾಗಿಯೂ ಪೂರ್ವಕಾಲ ಕ್ರಿಯಾರ್ಥವಾಗಿಯೂ ಇರುವ ಧಾತುಗಳ ಮೇಲೆ ವಿಹಿತವಾದ ಪ್ರತ್ಯಯವು. ಇದರಿಂದ ' ನೋಡಿ, ಬೇಡಿ ' ಎಂಬಿವೇ ಮೊದಲಾದುವು ಅವ್ಯಯಗಳಾಗುವುವು. ಇಲ್ಲಿಯೂ ' ಇತ್ ' ಎಂದು ತ ಕಾರ ಸಹಿತವಾಗಿ ಉಚ್ಚರಿಸಿರುವುದರಿಂದ—' **ಇರುಣಃ ಕರ್ಮಣಿ** || **೫೪೬** ||' ಎಂಬ ಸೂತ್ರದಿಂದ ವಿಹಿತವಾದ 'ಇಪ್' ಪ್ರತ್ಯಯಾಂತಗಳಾದ ಕಂಪುಣಿ, ಬಂಡುಣಿ, ಮೊದಲಾದುವು ಅವ್ಯಯಗಳಲ್ಲವೆಂದು ತಿಳಿಯಬೇಕು.

' **ದು** ' ಎಂಬುದು ' **ಪ್ರಾಕ್ಕಾಲೇ ದುಸ್ತುಲ್ಯಕರ್ತೃಕಾತ್** || **೫೮೦** || ' ಎಂಬ ಸೂತ್ರದಿಂದ ವಿಹಿತವಾದ ಪ್ರತ್ಯಯವು. ಇದರಿಂದ 'ನಡೆದು, ನುಡಿದು' ಮೊದಲಾದುವು **ಅವ್ಯಯ**ಗಳಾಗುವುವು.

ಇಲ್ಲಿ ಇದುವರೆಗೂ ಹೇಳಿದ ಪ್ರತ್ಯಯಗಳೆಲ್ಲಾ ಕೃತ್ತುಗಳಾದುದರಿಂದ ಉದಾಹರಣೆಗಳೂ

**ಕೃದಂತ**ಗಳೆಂದೇ ತಿಳಿಯಬೇಕು. ' **ದು** ' ಪ್ರತ್ಯಯ ಮಾತ್ರ ಸಾಮಾನ್ಯವಾಗಿ ಮಧ್ಯದಲ್ಲಿ ಹೇಳಿರುವುದರಿಂದ ಕೃತ್ತದ್ಧಿತಗಳೆರಡನ್ನೂ ಗ್ರಹಿಸಿ, ' **ಕಾಲೇ ದುಃ || ೪೩೮ ||** ' ಎಂಬ ಸೂತ್ರದಿಂದ ವಿಹಿತವಾದ ' ದು ' ಪ್ರತ್ಯಯಾಂತಗಳಾದ ' ಅಂದು, ಇಂದು ' ಮೊದಲಾದವುಗಳಿಗೂ ಅವ್ಯಯಸಂಜ್ಞೆ ಬರುವುದೆಂದು ತಿಳಿಯುವುದು.

ಇನ್ನು ಮುಂದೆ ಹೇಳುವ ಪ್ರತ್ಯಯಗಳೆಲ್ಲಾ **ತದ್ಧಿತ**ಗಳೆಂದು ತಿಳಿಯಬೇಕು:

**' ಎವರಂ, ಎವರೆಗಂ '** ಎಂಬಿವು —' **ಎವರಮೆವರೆಗಂ ಕಾಲಸ್ಯ ನಿಷ್ಠ || ೪೩೬ ||**' ಎಂಬ ಸೂತ್ರದಿಂದ ವಿಹಿತವಾದ ಪ್ರತ್ಯಯಗಳು. ಆದುದರಿಂದ ' ಅನ್ನೆವರಂ, ಇನ್ನೆವರಂ; ಅನ್ನವರೆಗಂ, ಇನ್ನೆವರೆಗಂ ' ಮೊದಲಾದುವು **ತದ್ಧಿತಾವ್ಯಯ**ಗಳೆನಿಸಿಕೊಳ್ಳುವುವು.

**' ವೊಲ್, ವೋಲ್ '** ಎಂಬೆರಡೂ— ' **ತಸ್ಯ ತುಲ್ಯೇ ವೊಲ್-ವೋಲೌ || ೪೨೮ ||** ' ಎಂಬ ಸೂತ್ರದಿಂದ ಸಾದೃಶ್ಯಾರ್ಥದಲ್ಲಿ ವಿಹಿತವಾದ ಪ್ರತ್ಯಯಗಳು. ಆದುದರಿಂದ ' **ಮುನಿಯವೊಲ್** ಮುನಿಯವೋಲ್ ' ಮೊದಲಾದುವು ಅವ್ಯಯಗಳಾಗಿರುವುವು.

**' ಬೋಲ್ '** ಇದು — ' **ವಾತೋ ಬೋಲ್ || ೪೨೯ ||** ' ಎಂಬ ಸೂತ್ರದಿಂದ ವಿಹಿತವಾದ ಪ್ರತ್ಯಯವು. 'ಇಂದ್ರಂಬೋಲ್' ಮೊದಲಾದುವು ಇದಕ್ಕೆ ಲಕ್ಷ್ಯಗಳಾಗಿರುವುವು. ಇಲ್ಲಿ ಕೆಲವರು 'ಬೊಲ್' ಎಂದು ಹ್ರಸ್ವಾದಿಯಾಗಿಯೂ ಹೇಳುವುದುಂಟು. ಈ ವಿಷಯವನ್ನು ವಿಶದವಾಗಿ ವಿಧಿಸೂತ್ರದಲ್ಲಿ ವಿವರಿಸುವೆವು.

**' ಮೆತ್ '** ಪ್ರತ್ಯಯವು ' **ಸಂಖ್ಯಾಯಾ ಮೆದ್ವಾರೇ ||೪೩೩||** ' ಎಂಬ ಸೂತ್ರದಿಂದ ವಿಧಿಸಲ್ಪಡುವುದು. ಇದರಿಂದ ' ಒರ್ಮೆ, ಇರ್ಮೆ ' ಮೊದಲಾದುವು ಅವ್ಯಯಗಳಾಗುವುವು. ಇಲ್ಲಿ ' ಮೆತ್ ' ಎಂದು ಕೃತ್ತಿಗೂ ತದ್ಧಿತಕ್ಕೂ ಸಾಧಾರಣವಾಗಿ ಹೇಳಿದ್ದರೂ ತದ್ಧಿತಮಧ್ಯದಲ್ಲಿ ಪಾಠಮಾಡಿರುವುದರಿಂದ ಇಲ್ಲಿ ತದ್ಧಿತವನ್ನೇ ಗ್ರಹಿಸಬೇಕು. ಆದುದರಿಂದ ' **ಬಲ್-ನಲ್-ಕೂಭ್ಯೋಃ ಮೆತ್|| ೫೭೦ ||** ' ಎಂಬ ಸೂತ್ರದಿಂದ ವಿಹಿತವಾದ 'ಮೆತ್' ಪ್ರತ್ಯಯಾಂತವಾದ 'ಒಲ್ಮೆ, ನಲ್ಮೆ' ಮೊದಲಾದವುಗಳಿಗೆ ಅವ್ಯಯಸಂಜ್ಞೆಯಿಲ್ಲ. '**ದು**' ಪ್ರತ್ಯಯವನ್ನಾದರೂ ಕೃತ್ತುಗಳಿಗೂ ತದ್ಧಿತಗಳಿಗೂ ಮಧ್ಯದಲ್ಲಿ ಪಾಠಮಾಡಿರುವುದರಿಂದ **ಉಭಯ**ವಿಧವಾದ ಪ್ರತ್ಯಯವೆಂದು ಗ್ರಹಿಸಲ್ಪಟ್ಟಿದೆಯೆಂದು ತಿಳಿಯಬೇಕು.

**' ತುಟು, ತೆ, ತು '** ಎಂಬ ಪ್ರತ್ಯಯಗಳು — ' **ಪ್ರಕಾರೇ ತುಟು ತೆ ತವಃ || ೪೩೭ ||** ' ಎಂಬ ಸೂತ್ರದಿಂದ ಪ್ರಕಾರಾರ್ಥದಲ್ಲಿ ವಿಹಿತವಾದುವು ಗ್ರಹಿಸಲ್ಪಡುವುವು. ಇದರಿಂದ 'ಅಂತುಟು, ಇಂತುಟು; ಅಂತೆ, ಇಂತೆ; ಅಂತು, ಇಂತು' ಮೊದಲಾದುವು **ಅವ್ಯಯ**ಗಳಾಗುವುವು.

ಇಲ್ಲಿ ಕೆಲವರು ' ತೆ ' ಎಂಬುದರಿಂದ — ' **ತೆದನೇಕಸ್ವರಾತ್ || ೫೫೯ ||** ' ಎಂಬ ಸೂತ್ರದಿಂದ ವಿಹಿತವಾದ ' **ತೆತ್** ' ಪ್ರತ್ಯಯಕ್ಕೂ ಗ್ರಹಣವುಂಟೆಂದು ಹೇಳಿ, ' ನೆಗೞ್ತೆ, ಪೊಗೞ್ತೆ ' ಮೊದಲಾದ **ಕೃತ್**ಪ್ರತ್ಯಯಾಂತಗಳಿಗೂ ಅವ್ಯಯ ಸಂಜ್ಞೆಯನ್ನು ಹೇಳುವರು. ಆದರೆ ಕೆಲವರು ' ತೆ ' ಎಂಬುದನ್ನು **ತದ್ಧಿತ**ಮಧ್ಯದಲ್ಲಿ ಪಾಠ ಮಾಡಿರುವುದರಿಂದ ಕೃತ್ತನ್ನು ಗ್ರಹಿಸಲಾಗದೆಂದು ಇವಕ್ಕೆ ಅವ್ಯಯತ್ವವಿಲ್ಲವೆಂದು ಹೇಳುವರು.

**ಅವತಾರಿಕೆ ೨೦**

ಹೀಗೆ ಪ್ರತ್ಯಯಾಂತಾವ್ಯಯಗಳ ಸ್ವರೂಪವನ್ನು ತಿಳಿಸಿ ಸಾಮಾನ್ಯಾವ್ಯಯಗಳ ಸ್ವರೂಪವನ್ನು ತಿಳಿಸುತ್ತಾನೆ.

**ಸೂತ್ರಂ || ಅಣಮಾದಯಃ || ೨೦ ||**

**ಅರ್ಥ || 'ಅಣಂ' ಎಂಬುದೆ ಮೊದಲಾದ ಗಣದಲ್ಲಿ ಪಠಿತವಾದ ಶಬ್ದಗಳು 'ಅವ್ಯಯ' ಸಂಜ್ಞಕಗಳಾಗುತ್ತವೆ.**

**ಉದಾಹರಣೆ ||** ಅಣಂ, ಆಣಂ; ಆವಗಂ; ನೀಡುಂ, ಕರಂ, ಆದಂ, ಕೆನ್ನಂ, ಪೀನಂ; ಎಲ್ಲಂ; ಅಲ್ಲಂ, ಇಲ್ಲಂ; ಚೆಚ್ಚರಂ, ಬೆಚ್ಚರಂ; ನಿನ್ನೆರಂ, ಸೋಡಂಬಾಡಂ; ಏಗಂ, ವರಂ, ವಲಂ, ವಲ್ಲಂ, ಪೆಱಂ; ಬಱಿಕಂ, ಬಱಿಕ್ಕಂ, ಬಱಿಯುಂ; ಬೇಡಂ; ಗಡಂ, ಗಳಂ; ಬೆಳ್ಪಳಂ, ಬೆಳ್ಪಡಂ; ಉಸಿಕಂ; ಒಡಂ, ಸಿಕ್ಕುವಂ, ತೇನಂ, ತೇನತೇನಂ; ಆನುಂ; ಪೊೞ್ತಡಂ, ಸವಳ್ತಡಂ; ಹುಂ; ಅಂ, ಉಂ; ಪಿರಿದುಂ; ಮುನ್; ಇನ್; ಪಿರಿದು, ನೀಡು; ನಿನ್ನೆರ; ಬೇಡ; ಒಡನೆ; ನಾಳೆ, ನಾಡಿದು; ಮತ್ತೆ; ಮತ್ತಿನ; ಪೇಱಿ; ಏನ್; ಏಗುವೆನ್, ಏವೆನ್; ಮೇಣ್; ದಲ್; ಭೋಂಕಲ್; ಅಂತೆ, ಅಂತಿರೆ, ಅಂತೆವೊಲ್, ಅಂತಿರೆವೊಲ್, ಅಂತೆವೋಲ್, ಅಂತಿರೆವೋಲ್||

**ವೃತ್ ||** ಗಡ, ಗಳ; ಅಲ್ತು, ಅಲ್ಲ, ಇಲ್ಲ; ಇಲ್ಲದೆ, ಅಲ್ಲದೆ; ಆಗಡ, ಈಗಡ, ಪೊೞ್ತಡ; ತಡಬಡ; ಅಕ್ಕಟ, ಅಕಟ; ಅಹಹ; ಬಱಿಕೆ, ಬಱಿಕ್ಕೆ; ಭೋಂಕನೆ, ಚೆಕ್ಕನೆ, ಭೋರನೆ, ಪಯ್ಕನೆ, ಬಯ್ಕನೆ; ಪೌವನೆ, ಪೌವಗೆ; ನೆಟ್ಟನೆ, ನೆಟ್ಟಗೆ; ತೊಟ್ಟನೆ, ತೊಟ್ಟಗೆ; ಆಯ್ಕನೆ, ಆಯ್ಕಗೆ; ತಿಱ್ರನೆ, ತಿಱ್ರಗೆ; ಗಿಱ್ರನೆ, ಗಿಱ್ರಗೆ; ಸುಮ್ಮನೆ, ಸುಮ್ಮಗೆ; ಬಿಮ್ಮನೆ, ಬಿಮ್ಮಗೆ; ಮೆಲ್ಲನೆ, ಮೆಲ್ಲಗೆ; ಕಮ್ಮನೆ, ಕಮ್ಮಗೆ; ತಣ್ಣನೆ, ತಣ್ಣಗೆ; ನುಣ್ಣನೆ, ನುಣ್ಣಗೆ || ಇವೇ **ಅಣಮಾದಿ**ಗಳು. ಈ ಗಣದಲ್ಲಿ ಪಠಿತ ಶಬ್ದಗಳ ಆಕಾರದಂತೆ ಇರುವ ಬೇರೆ ಶಬ್ದಗಳನ್ನೂ ಈ ಗಣದಲ್ಲಿ ಸೇರಿಸಿಕೊಂಡು ಪ್ರಯೋಗಾನುಸಾರವಾಗಿ ಅವಕ್ಕೂ ಅವ್ಯಯಸಂಜ್ಞೆಯನ್ನು ಹೇಳಬೇಕು. ಆದುದರಿಂದ ಇದನ್ನು **ಆಕೃತಿಗಣ**ವೆಂದು ಹೇಳುತ್ತಾರೆ.

**ವಿಚಾರ ೨೦**

ಈ ಸೂತ್ರದಲ್ಲಿ ಪೂರ್ವ ಸೂತ್ರದಿಂದ 'ಅವ್ಯಯಂ' ಎಂಬ ಪದವನ್ನು ಅನುವರ್ತಿಸಿ 'ಅಣಮಾದಯಃ' ಎಂಬುದು ಬಹುವಚನಾಂತವಾಗಿಯೂ ಪುಲ್ಲಿಂಗವಾಗಿಯೂ ಇರುವುದರಿಂದ ಅನುವರ್ತಿತವಾದ ಪದವನ್ನು ವಚನ ವಿಪರಿಣಾಮವನ್ನು ಮಾಡಿ ಅಣಮಾದಿಗಳಿಗೆ ಸಂಬಂಧ ಮಾಡಿರುವುದರಿಂದ ಅಣಮಾದಿಗಳು ಅವ್ಯಯಗಳಾಗುತ್ತವೆಂದರ್ಥವಾಯಿತು. ಈ ಗಣದಲ್ಲಿ ಪಠಿತವಾಗಿರುವ ಶಬ್ದಗಳಿಗೆ ಪ್ರಸಿದ್ಧವಾದ ಅರ್ಥವು **ಬಾಲಬೋಧಾರ್ಥ**ವಾಗಿ ಹೇಳಲ್ಪಡುವುದು. ಇದಲ್ಲದೆ ಇನ್ನೂ ಅನೇಕಾರ್ಥಗಳಿರುವುವು. ಅವನ್ನು ಪ್ರಯೋಗದಿಂದಲೂ ಕೋಶಾದಿಗಳಿಂದಲೂ ತಿಳಿದುಕೊಳ್ಳಬೇಕು. ದಿಙ್ಮಾತ್ರಪ್ರದರ್ಶನವು ಇಲ್ಲಿ ಮಾಡಲ್ಪಡುವುದು.

**'ಅಣ, ಆಣಂ'** ಇವೆರಡೂ 'ಈಷದಪಿ' (ಸ್ವಲ್ಪವಾದರೂ) ಎಂಬರ್ಥದಲ್ಲಿರುವುವು. ಗುಣಮಣಮಿಲ್ಲ, ಕಾರ್ಯಮಾಣಮಿಲ್ಲ'.

'**ಆವಗಂ**' 'ಅಜಸ್ರ' ಅರ್ಥದಲ್ಲಿರುವುದು. 'ಆದಿದೇವನೀಗಾವಗಮೆಮ್ಮ ಬೇಳ್ಪ ವರಮಂ'

'**ನೀಡುಂ, ಕರಂ, ಆದಂ, ಕೆನ್ನಂ, ಪೀನಂ**' ಇವು ಅಧಿಕ ಅರ್ಥದಲ್ಲಿರುವುವು.

'ನೀಡುಂ ನೋಡಿದಂ, ಕರಂ ಭಾವಿಸಿದಂ, ಆವಮೋದಿದಂ,ಕೆನ್ನಂ ಮನ್ನಿಸಿದಂ, ಪೀನಂ ಜಾನಿಸಿದಂ'.

**'ಎಲ್ಲಂ'** ಎಂಬುದು ಅಧಿಕಾರ್ಥದಲ್ಲಿಯೂ 'ಸರ್ವ' ಎಂಬರ್ಥದಲ್ಲಿಯೂ ಇರುವುದು. 'ಎಲ್ಲಂ ಮೆಱೆದಂ, ರಿಪುಗಳನೆಲ್ಲಂ ತವೆ ಗೆಲ್ದಂ'.

**'ಅಲ್ಲಂ, ಇಲ್ಲಂ'** ಇವೆರಡೂ 'ಪರ್ಯುದಾಸ ಪ್ರಸಜ್ಯಪ್ರತಿಷೇಧ' ಅರ್ಥಗಳಲ್ಲಿರುವುವು. 'ನೀತಿಯಲ್ಲಂ, ಗುಣಮಿಲ್ಲಂ'.

**'ಚೆಚ್ಚರಂ, ಬೆಚ್ಚರಂ'** ಇವು 'ವ್ಯಕ್ತ' ವೆಂಬರ್ಥದಲ್ಲಿರುವುವು. 'ಚೆಚ್ಚರಂ ನುಡಿದಂ ಬೆಚ್ಚರಮೊಪ್ಪಿದಂ'.

**'ನಿಸ್ನೇರಂ'** ಎಂಬುದು 'ನಿರ್ನಿಮಿತ್ತ' ವೆಂಬರ್ಥದಲ್ಲಿರುವುದು. 'ನಿರ್ನ್ನೆರಂ ಕೊಂದಂ'.

**'ಸೋಡಂಬಾಡಂ'** 'ನಿರ್ನಿಮಿತ್ತ' ವೆಂಬರ್ಥದಲ್ಲಿಯೂ 'ಬಹುಳ' ವೆಂಬರ್ಥ ದಲ್ಲಿಯೂ ಇರುವುದು. 'ಸೋಡಂಬಾಡಂ ಮುಳಿದಂ, ಸೋಡಂಬಾಡಂ ತನು ನೀ|ಳ್ದೋಡಿತು.'

**'ಏಗಂ, ವರಂ, ವಲಂ, ವಲ್ಲಂ, ವೇಱಂ'** ಇವು 'ಸ್ಫುಟಾ' ರ್ಥಕಗಳು. 'ಏಗಂ ನುಡಿದಂ, ವರಂ ನುಡಿದಂ, ಜಿನನಾಥ ನೀನೆ ಪೇಲ್ದಂತೆ ವಲಂ, ವಲ್ಲಂ ತೋರ್ಕುಂ ತತ್ವಮಿ|ದೆಲ್ಲಂ ಜಿನ ನಿನಗೆ, ವೇಱಮಾರ್ ಬಲ್ಲರ್ ತತ್ತ್ವದ|ತೆಱನಂ ನೀನಲ್ಲದುಳಿಯೆ ||'

**'ಬಱಕಂ, ಬಱಕ್ಕಂ, ಬಱಯಂ'** ಇವು 'ಪಶ್ಚಾತ್' ಎಂಬರ್ಥದಲ್ಲಿವೆ. 'ಬಱಕಂ ಬಂದಂ, ಬಱಕ್ಕಂ ಕಂಡಂ, ಬಱಯಂ ಪೋದಂ'.

**'ಬೇಡಂ'** ಇದು 'ನಿವಾರಣ' ಅರ್ಥದಲ್ಲಿರುವುದು. 'ಬಯ್ಯಲ್ ಬೇಡಂ'.

**'ಗಡಂ, ಗಳಂ'** ಇವು 'ಕಿಲ' ವೆಂಬರ್ಥದಲ್ಲಿರುವುವು. 'ಬಂದಂ ಗಡಂ ಫಲ್ಗುಣಂ, ಅಂಗ ಜಂ ಗಳಮಂಗಂ ತನಗಾಣಮಿಲ್ಲ ಗಳಂ'.

**'ಬೆಳ್ಪಳಂ, ಬೆಳ್ಪಡಂ'** ಇವು ''ಭಯಾ' ರ್ಥಕಗಳು. 'ಬೆಳ್ಪಳಂಬೋದಂ, ಬೆಳ್ಪಡಂ ನುಡಿದಂ'.

**'ಉಸಿಕಂ'** ಎಂಬುದು 'ಮೌನ' ಅರ್ಥಕವು. 'ಉಸಿಕಮಿರ್ದ್ದಂ' ಇದು ಮೌನ ವುಳ್ಳವನು ಎಂಬರ್ಥದಲ್ಲಿ ಅವ್ಯಯವಲ್ಲವು. 'ಉಸಿಕನೊಳೇಕೆ ಮಾತು'

**'ಒಡಂ, ನಿಕ್ಕುವಂ'** ಇವೆರಡೂ 'ನಿಶ್ಚಯ' ವೆಂಬರ್ಥದಲ್ಲಿರುವುವು. 'ಒಡಂ ನುಡಿದಂ, ನಿಕ್ಕುವಂ ಪೇಲ್ದಂ'.

**'ತೇನಂ , ತೇನತೇನಂ'** ಇವು 'ಅದೃಢ' ವೆಂಬರ್ಥದಲ್ಲಿರುತ್ತವೆ. 'ತೇನಂ ನುಡಿದಂ, ತೇನತೇನಮಾದುದು ಕಜ್ಜಂ'.

**'ಆನುಂ'** ಇದು 'ದಿಕ್, ದೇಶ, ಕಾಲ, ಸಂಖ್ಯಾ, ಪ್ರಕಾರ, ಪಕ್ಷಾಂತರ,' ಎಂಬರ್ಥಗಳಲ್ಲಿರು ವುದು. ದಿಗರ್ಥದಲ್ಲಿ: 'ಮೂಡಲಾನುಂ, ಬಡಗಲಾನುಂ;' ದೇಶಾರ್ಥದಲ್ಲಿ: 'ಅಲ್ಲಿಯಾನುಂ, ಇಲ್ಲ ಯಾನುಂ;' ಕಾಲಾರ್ಥದಲ್ಲಿ: 'ಅಂದಾನುಂ, ಇಂದಾನುಂ;' ಸಂಖ್ಯಾರ್ಥದಲ್ಲಿ: 'ಒಂದಾನುಂ, ಎರಡಾನುಂ;' ಪ್ರಕಾರಾರ್ಥದಲ್ಲಿ: 'ಅಂತಾನುಂ, ಇಂತಾನುಂ;' ಮೊದಲಾದ ಉದಾಹರಣೆ ಗಳನ್ನು ಪ್ರಯೋಗದಿಂದ ತಿಳಿದುಕೊಳ್ಳಬೇಕು.

**‘ ಪೊಳ್ತಡಂ, ಸವಳ್ತಡಂ ’** ಇವು ‘ ಪ್ರಭಾತ ’ ವೆಂಬರ್ಥದಲ್ಲಿರುವುವು. ‘ ಪೊಳ್ತಡ ಮೇಲ್ದು, ಸವಳ್ತಡಮೇಲ್ದು ’.

**‘ ಹುಂ ’** ಇದು ಪ್ರಶ್ನಾರ್ಥಕವು. ‘ ಹುಂ ಮತ್ತಮೇನಾಯ್ತು? ’

**‘ ಅಂ, ಉಂ ’** ಇವು ಸಮುಚ್ಚಯಾರ್ಥಕಗಳು. ‘ಆತಂಗವಾಕೆಗಂ, ಆತನುಮಾಕೆಯುಂ’.

**‘ ಪಿರಿದುಂ ’** ಇದು ಬಹುಲಾರ್ಥಕವು. ‘ ಪಿರಿದುಂ ಭಾವಿಸಿನೋಡಿ ’.

‘ ಅಣಂ ’ ಮೊದಲಾಗಿ ‘ ಪಿರಿದುಂ ’ ಎಂಬುದರವರೆಗೂ ಹೇಳಿರುವುವೆಲ್ಲಾ ‘ ಮಾಂತ ’ ಗಳಾದ ಅವ್ಯಯಗಳೆಂದು ತಿಳಿಯಬೇಕು.

**‘ ಮುನ್, ಇನ್ ’** ಇವೆರಡೂ ನ ಕಾರಾಂತಗಳು. ‘ ಪುರಾ, ಪಶ್ಚಾತ್ ’ ಎಂಬರ್ಥ ಗಳಲ್ಲಿರುತ್ತವೆ. ‘ ಮುನ್ ಬಿಸಜೋದ್ಭವಂ ಪಡೆದಂ, ಇನ್ನೇಕಾತನ ಚಿಂತೆ ? ’

**‘ ಪಿರಿದು, ನೀಡು ’** ಇವು ‘ ಆಧಿಕ್ಯ ’ ಅರ್ಥಕಗಳು. ‘ ಪಿರಿದುಂಡಂ, ನೀಡು ನಿದ್ದೆ ಗೆಯ್ದಂ ’.

**‘ ನಿನ್ನೆಗರ ’** ಇದು ‘ ನಿನ್ನೆ-ಮತ್ತ ’ ವೆಂಬರ್ಥದಲ್ಲಿರುವುದು. ‘ ನಿನ್ನೆಗರ ಪೋದಂ ’

**‘ ಬೇಡ ’** ಇದು ‘ ನಿವಾರಣ ’ ಅರ್ಥಕವು. ‘ ಪೊಯ್ಯಲ್ ಬೇಡ ’.

**‘ ಒಡನೆ ’** ಇದು ‘ ಸಹ ’ ಅರ್ಥಕವು. ‘ ತಂದೆಯೊಡನೆ ’.

**‘ ನಾಳೆ, ನಾಡಿದು ’** ಇವೆರಡೂ ‘ ಮುಂದಿನ ದಿನ, ಅದರ ಮುಂದಿನ ದಿನ ’ ಎಂಬರ್ಥ ಗಳಲ್ಲಿರುತ್ತವೆ. ‘ ನಾಳೆಯೊ ನಾಡಿದೊ ಕಾಲನ ದಾಱಿ ’.

**‘ ಮತ್ತೆ ’** ಇದು ‘ ಪುನಃ ’ ಎಂಬರ್ಥದಲ್ಲಿದೆ. ‘ ಮತ್ತೇಕೆ ಸೈತಿರ್ಪ್ಪಂ ’.

**‘ ಮತ್ತಿನ ’** ಇದು ‘ ಇತರ ’ ವೆಂಬರ್ಥದಲ್ಲಿದೆ. ‘ ಮತ್ತಿನ ಸುತ್ತಿನ ಮಾತನಾಡುವ್ಯೆ ’.

**‘ ಬೇಱಿ ’** ‘ ಪೃಥಕ್ ’ ಎಂಬರ್ಥದಲ್ಲಿರುವುದು. ‘ ಬೇಱಿ ಪೋದ ಪೊಲನಂ ’.

**‘ ಏನ್ ’** ಇದು ‘ ಕಿಮ್ ’ ಎಂಬರ್ಥದಲ್ಲಿರುವುದು. ಇದನ್ನೂ ಮುಂದೆ ಹೇಳುವ ‘ ಏನು ಮಾಡಲಿ ’ ಎಂಬರ್ಥವುಳ್ಳ ‘ **ಏಗುವೆನ್**, ‘ **ಏವೆನ್** ’ ಎಂಬುವುಗಳನ್ನೂ ನಾಂತಮಧ್ಯದಲ್ಲಿ ಪಠಿ ಸುವುದು ಯುಕ್ತವಾಗಿ ತೋರುವುದು. ಆದರೆ **ಶಾಸನಕಾರ**ನು ವ್ಯತ್ಯಸ್ತವಾಗಿ ಪಾಠಮಾಡಿರು ವುದರಿಂದ ಇಲ್ಲಿಯೂ ಅದನ್ನೇ ಅನುಸರಿಸಿ ಪಾಠ ಮಾಡಲ್ಪಟ್ಟಿದೆ. ‘ ಏಂಕಾರಣಂ ಬಂದೆ? ಏಗುವೆನಿ ಕ್ಕಿದಂ ಸಲೆ|ನೀಗುವೆ ನಿನ್ನೇವೆನೆಂದು ಖಳಸಂಸೃತಿಯಂ|| ’

**‘ ಮೇಣ್ ’** ಇದು ‘ ವಿಕಲ್ಪ ’ ಅರ್ಥಕವು. ‘ ಇಂದ್ರಂ ಮೇಣ್, ಚಂದ್ರಂ ಮೇಣ್ ’.

**‘ ದಲ್ ’** ಇದು ‘ ನಿಶ್ಚಯ ’ ಅರ್ಥಕವು. ‘ ಆತನೆ ದಲಿವಂ ’.

**‘ ಭೋಂಕಲ್ ’** ಇದು ‘ ಅವ್ಯವಧಾನ ’ ವೆಂಬರ್ಥದಲ್ಲಿದೆ. ‘ ಶ್ರೀನಾರೀಪತಿ ದೀಕ್ಷೆಯಂ ಕೊಳಲೊಡಂ ಭೋಂಕಲ್ ಮನಃ ಪರ್ಯಾಯ|ಜ್ಞಾನಂ ಪುಟ್ಟಿದುದು ’.

**‘ ಅಂತೆ, ಅಂತಿರೆ, ಅಂತೆವೊಲ್, ಅಂತಿರೆವೊಲ್, ಅಂತೆವೋಲ್, ಅಂತಿರೆವೋಲ್ ’** ಇವು ‘ ಉಪಮಾನ ’ ಅರ್ಥಕಗಳು. ‘ ಬರ್ಪ್ಪಂತೆ ಬಂದತ್ತಿಭಂ ’ ‘ ಕರಿಯಂತಿರೆ ಭದ್ರಲಕ್ಷಣಂ, ಗಜದಂತೆ ವೊಲಧಿಕದಾನಿ, ಅಂತಕನಂತಿರೆವೊಲುಗ್ರಂ, ರವಿಸುತನಂತೆ ವೋಲಧಿಕದಾನಿ, ರವಿ ಯಂತಿರೆವೋಲಧಿಕಪ್ರತಾಪಿ

ಈ ಗಣದ ಮಧ್ಯದಲ್ಲಿ '**ವೃತ್**' ಎಂದು ಪಾಠಮಾಡಿರುವುದು. ಆದುದರಿಂದ ಅದು ಅವ್ಯಯವೆಂದು ಭ್ರಾಂತಿಯುಂಟಾಗುವುದು. ಆದರೆ ಭಾಷೆಯಲ್ಲಿ ಅಂತಹ ಅವ್ಯಯವು ಎಲ್ಲಿಯೂ ಪ್ರಯುಕ್ತವಾಗಿಲ್ಲ. ಅದು ಕಾರಣದಿಂದ ಇಲ್ಲಿ ' ವೃತ್ ' ಎಂಬುದು ಅಂತರ್ಗಣ ಪ್ರಾರಂಭಸೂಚಕವಾದುದೆಂದು ತಿಳಿಯಬೇಕು. ಇದರಿಂದ ಪ್ರಕೃತಿಭಾವ ಪ್ರಕರಣದಲ್ಲಿ ಹೇಳುವ -'**ಗಡಾದಿಃ || ೪೯ ||**' ಎಂಬ ಸೂತ್ರದಲ್ಲಿರುವ ' ಗಡಾದಿ ' ಗಣವು ' ಅಣಮಾದ್ಯ 'ಂತರ್ಗಣವೆಂದು ತೋರುವುದು. ಈ ಗಡಾದಿಗಳಿಗೆ ಅಣಮಾದಿಯಲ್ಲಿ ಪಾಠವಿರುವುದರಿಂದ ಅವ್ಯಯತ್ವವೂ ಸಿದ್ಧವಾಗುವುದು. ಹೀಗೆ ಗಣಪಾಠಗಳಲ್ಲಿ ಅವಾಂತರಗಣಪ್ರಭೇದಗಳನ್ನು ತೋರಿಸುವ ಸಂದರ್ಭದಲ್ಲಿ ಸಂಸ್ಕೃತ ವ್ಯಾಕರಣಕಾರರೂ ಗಣದಲ್ಲಿ ' ವೃತ್ ' ಕರಣ ಮಾಡುವ ರೀತಿಯುಂಟು. ಅದೇ ಮಾರ್ಗವನ್ನು ಅನುಸರಿಸಿ ಇಲ್ಲಿಯೂ ಮಾಡಲ್ಪಟ್ಟಿದೆಯೆಂದು ತಿಳಿಯಬೇಕು.

'**ಗಡ, ಗಳ**' ಇವೆರಡೂ ' ಕಿಲ ' ಎಂಬರ್ಥವುಳ್ಳವು.— ' ಅಂಗಜಂ ಗಡ, ಅಂಗಜಂ ಗಳ '.

'**ಅಲ್ತು, ಅಲ್ಲ, ಇಲ್ಲ**' ಇವು ' ಪ್ರತಿಷೇಧ ' ಅರ್ಥಕಗಳು.- ' ತಾನಲ್ತು, ನೀನಲ್ಲ, ಆನಿಲ್ಲ '.

'**ಇಲ್ಲದೆ, ಅಲ್ಲದೆ**' ಇವು ' ವಿನಾ ' ಅರ್ಥಕಗಳು.–' ಅಕ್ಕರಮಿಲ್ಲದೆ ತಕ್ಕರಕ್ಕುಮೇ, ಜಿನನಲ್ಲದೆ ದೇವರೊಳರೇ '.

'**ಆಗಡ, ಈಗಡ, ಪೊಳ್ತಡ**' ಇವು ಕ್ರಮವಾಗಿ ' ಆಗ, ಈಗ, ಬೆಳಿಗ್ಗೆ ' ಎಂಬರ್ಥಗಳಲ್ಲಿರುವುವು. ' ಆಗಡ ಬಂದಂ, ಈಗಡ ಕಂಡಂ, ಪೊಳ್ತಡ ಪೋಪಂ '.

'**ತಡಬಡ**' ಇದು ' ವಾಕ್ಸ್ಖಲನ ' ಎಂಬರ್ಥದಲ್ಲಿರುವುದು — ' ತಡಬಡ ನುಡಿದಂ '.

'**ಅಕ್ಕಟ, ಅಕಟ**' ಇವು ' ಖೇದ ' ಎಂಬ ಅರ್ಥವುಳ್ಳವು.– ' ಅಕ್ಕಟ! ಖಳನಂ ಜವನೇ|ಕಿಕ್ಕನೋ ತುತ್ತಾಗಿ, ಅಕಟ ಖಳಂ ಚಿರಾಯು '.

'**ಅಹಹ,**' ಎಂಬುದು ' ಖೇದ ' ದ ಅರ್ಥದಲ್ಲಿಯೂ ' ಆಶ್ಚರ್ಯ ' ದ ಅರ್ಥದಲ್ಲಿಯೂ ಇರುವುದು.–' ಅಹಹ ಕಾಲದೋಷಮಿದಲ್ತೆ, ಅಹಹ ಗಗನಮಂ ನೀಳ್ದು ನಿಂದಂ ಮುನೀಂದ್ರಂ '.

'**ಬಱಕೆ, ಬಱಕ್ಕೆ**' ಇವು ' ಆಮೇಲೆ ' ಎಂಬರ್ಥದಲ್ಲಿರುವುವು.—' ಜನನೀಸ್ತನ್ಯಮನುಣ್ಡೆನಾಂ ಬಱಕೆ ನೀಂ, ಬಱಕ್ಕೆ ಯವ್ವನಂ ಮೊಳೆವುದುಮಾರುಮಂ ಬಗೆಯದೆ '.

'**ಭೋಂಕನೆ, ಚಿಕ್ಕನೆ, ಭೋರನೆ, ಪಯ್ಕನೆ, ಬಯ್ಕನೆ**' ಇವು ' ಬೇಗ ' ಎಂಬರ್ಥದಲ್ಲಿರುವುವು. -' ಭೋಂಕನೆ ಪೋದಂ, ಚಿಕ್ಕನೆ ಬಂದಂ, ಭೋರನೆ ಸಾರ್ದಂ, ಪಯ್ಕನೆ ರಥಂ ಪಱದತ್ತು, ಬಯ್ಕನೆ ಬಂದುದೈಕಿಲ್ '.

ಇವೈದೂ ನ ಕಾರೋಪಧಕಗಳೆಂದು ತಿಳಿಯಬೇಕು.

ಮುಂದೆ ಗಕಾರ, ನಕಾರೋಪಧಕಗಳು ಹೇಳಲ್ಪಡುವುವು. **ಪೌವನೆ, ಪೌವಗೆ,** ಇವು ' ಭಯ, ಆಕಸ್ಮಿಕ ' ಎಂಬರ್ಥಗಳಲ್ಲಿರುವುವು.—' ಪೌವನೆರ್ದೆ ಪಾಱತು ' ಎರಡಕ್ಕೂ ಇದೊಂದೇ ಉದಾಹರಣೆಯೆಂದು ತಿಳಿದು, ' ಪೌವಗೆ ' ಎಂದು ಗ ಕಾರ ಮಾತ್ರ ವ್ಯತ್ಯಾಸಮಾಡಿ ಹೇಳುವುದು.

'**ನೆಟ್ಟನೆ, ನೆಟ್ಟಗೆ; ತೊಟ್ಟನೆ, ತೊಟ್ಟಗೆ; ಆಯ್ಕನೆ, ಆಯ್ಕಗೆ**'-ಇವಾರು ' ನಿರ್ಭರ ' ವೆಂಬರ್ಥದಲ್ಲಿರುವುವು.— ' ನೆಟ್ಟನೆ ಬಂದಂ, ತೊಟ್ಟನೆ ಕಂಡಂ, ಆಯ್ಕನಪ್ಪಿದಂ '.

ಇಲ್ಲಿಯೂ ಪೂರ್ವದಂತೆ ಗ ಕಾರ ವ್ಯತ್ಯಾಸಮಾಡಿ ಹೇಳುವುದು. ಮುಂದೆ ಹೇಳುವ ಉದಾಹರಣೆಗಳಲ್ಲಿಯೂ ಹೀಗೆ ಊಹಿಸಿಕೊಳ್ಳುವುದು.

'**ತಿಱ್ರನೆ, ತಿಱ್ರಗೆ; ಗಿಱ್ರನೆ, ಗಿಱ್ರಗೆ**' ಇವು ನಾಲ್ಕು 'ಪರಿಭ್ರಮಣ' ಅರ್ಥದಲ್ಲಿರುವುವು— 'ತಿಱ್ರನೆ ಪರಿದುದು ಪಾಱುಂಬಳೆ, ಗಿಱ್ರನೆ ರಂಗದೊಳ್ ಭ್ರಮರಿಯಂ ಮೆಱೆಯಿಸಿದಂ'.

'**ಸುಮ್ಮನೆ, ಸುಮ್ಮಗೆ; ಬಿಮ್ಮನೆ, ಬಿಮ್ಮಗೆ**' 'ತೂಷ್ಣೀಂ' ಎಂಬರ್ಥದಲ್ಲಿರುವುವು— ಸುಮ್ಮನೆ ಪೋದಂ, ಬಿಮ್ಮನೆ ಬಂದಂ.'

'**ಮೆಲ್ಲನೆ, ಮೆಲ್ಲಗೆ**' ಇವು 'ಮಂದಂ' ಎಂಬರ್ಥದಲ್ಲಿವೆ— 'ತನ್ನ ಶರಾಸನಕ್ಕೆ ಚಾಚಿದಂ ಮೆಲ್ಲನೆ ಕರಶಾಖೆಯಂ'.

'**ಕಮ್ಮನೆ, ಕಮ್ಮಗೆ**' ಇವು ಘ್ರಾಣತರ್ಪಣಾರ್ಥಕಗಳು— 'ಕಮ್ಮನೆ ಬಂದುದು ಮಂದ ಮಾರುತಂ'.

'**ತಣ್ಣನೆ, ತಣ್ಣಗೆ**' ಇವು 'ಶೀತಸ್ಪರ್ಶ' ವೆಂಬರ್ಥದಲ್ಲಿವೆ— 'ತಣ್ಣನೆ ತೀಡಿತ್ತೆಲರ್'.

'**ನುಣ್ಣನೆ, ನುಣ್ಣಗೆ**' ಇವು 'ಮೃದುಸ್ಪರ್ಶ' ಅರ್ಥದಲ್ಲಿವೆ— 'ನುಣ್ಣನೆ ನೊಣೆದಂ'.

ಇವೆ 'ಅಣಮಾದಿ' ಗಣದಲ್ಲ ಪಠಿತವಾದ ಅವ್ಯಯಗಳು. ಇವುಗಳಿಗೆ ಅರ್ಥವು ಪ್ರಸಿದ್ಧ ಪ್ರಯೋಗಗಳನ್ನು ನೋಡಿ ತೋರಿಸಲ್ಪಟ್ಟಿದೆ. ಅವ್ಯಯಗಳಿಗೆ ಅನೇಕಾರ್ಥಗಳುಂಟೆಂಬ ಪ್ರಾಚೀನ ವೈಯಾಕರಣರ ವಚನದಿಂದ ಎಲ್ಲಿಯಾದರೂ ಅರ್ಥಾಂತರವಿದ್ದರೂ ಇವಕ್ಕೆ ಆ ಅರ್ಥವನ್ನೂ ಹೇಳಲಹುದೆಂದು ತಿಳಿಯಬೇಕು. ಈ ಗಣದಲ್ಲಿ ೧೧೯ ಅವ್ಯಯಗಳು ಹೇಳಲ್ಪಟ್ಟಿವೆ. ಆದರೆ ಲೋಕದಲ್ಲಿ ಇಷ್ಟೇ ಅವ್ಯಯಗಳೆಂದು ತಿಳಿಯಲಾಗದು. ಇಲ್ಲಿ ಉದಾಹರಣೆಗಾಗಿ ಕೆಲವು ಹೇಳಿರುವುದರಿಂದ ಗ್ರಂಥದಲ್ಲಿ ಪ್ರಯೋಗಿಸಿರುವ ಇನ್ನೂ ಕೆಲವು ಅವ್ಯಯಗಳನ್ನು ಈ ಗಣದಲ್ಲಿ ಪಾಠಮಾಡಿಕೊಳ್ಳಬೇಕೆಂಬ ತಾತ್ಪರ್ಯದಿಂದ ಸೂತ್ರಕಾರರು ಸೂತ್ರದಲ್ಲಿ 'ಅಣಮಾದಯಃ' ಎಂದು ಬಹುವಚನವನ್ನು ಹೇಳಿರುವರು. ಇದರಿಂದ ಇದು ಆಕೃತಿಗಣವೆಂದು ಸೂಚಿಸಲ್ಪಡುವುದು. ಆದುದರಿಂದ ಇಲ್ಲಿ ಪಾಠಮಾಡದೆ ಇರುವ ಪ್ರಯೋಗಸ್ಥವಾದ — ಪ್ರಭಾವವಾಚಕವಾದ '**ತಱಿಸಲ್**' ಎಂಬುದೂ ನಿರ್ಣಯವಾಚಕವಾದ '**ತಳಮಳ**' ಎಂಬುದೂ ಜುಗುಪ್ಸಾವಾಚಕವಾದ 'ಇಸ್ಸಿ' ಎಂಬುದೂ ಆಧಿಕ್ಯವಾಚಕವಾದ '**ಅಣಿಯರಂ, ಅಗುಂದಲೆ, ನೂಳದು, ಉರ್ವಿನಂ, ಆರ್ವಿನಂ**' ಎಂಬಿವೂ ಈಷದ್ಭೂತಕಾಲವಾಚಿಯಾದ **ಈವಱು** ಎಂಬುದೂ ಭೂತಕಾಲವಾಚಿಯಾದ **ಮೊನೆಯಿಾಡು** ಎಂಬುದೂ **ಆಗಳಿಂಗೆ, ಈಗಳಿಂಗೆ; ಆಗಡಿಂಗೆ, ಈಗಡಿಂಗೆ; ಆಗಳಿನ, ಈಗಳಿನ; ಆಗಡಿನ, ಈಗಡಿನ; ಆಗಳುಂ, ಈಗಳುಂ; ಆಗಡುಂ, ಈಗಡುಂ; ಈವಱುಂಗೆ, ಈವಱುನ; ಮೊನೆಯಿಾಡಿಂಗೆ, ಮೊನೆಯಿಾಡಿನ; ನಿನ್ನಿನ, ಮೊನ್ನಿನ, ನಾಳಿನ, ನಾಡಿದಿನ** ಎಂಬಿವೇ ಮೊದಲಾದ ಸುಬಂತಪ್ರತಿರೂಪಕಕಾಲವಿಶೇಷವಾಚಕ ಶಬ್ದಗಳೂ ಇನ್ನೂ ಇತರಾವ್ಯಯ ವಿಶೇಷಗಳೂ **ಭೋಂಕನೆ, ಭೋರನೆ,** ಮೊದಲಾದ ಕ್ರಿಯಾನುಕರಣ ಶಬ್ದಗಳೂ ಈ ಗಣದಲ್ಲಿ ಸೇರಿಸಲ್ಪಡುವುದರಿಂದ ಅವ್ಯಯಸಂಜ್ಞಕಗಳಾಗುವುವೆಂದು ತಾತ್ಪರ್ಯವಾಗುವುದು. ಮತ್ತು ಇಲ್ಲಿ ಅನುಕರಣ ಶಬ್ದಗಳ ಇಯತ್ತೆ ಇಲ್ಲವಾದುದರಿಂದ

ಮಾದರಿಗಾಗಿ ಈ ಗಣದಲ್ಲಿ ಕೆಲವು ಶಬ್ದಗಳನ್ನು ಪಾಠಮಾಡಿರುವುದು. ಆದುದರಿಂದ — 'ದಣ್ಣನೆ ದಣಿವಂ, ತಣ್ಣನೆ ತಣಿವಂ, ಝುಮ್ಮನೆ ಒಸರ್ದು, ಸಿಗ್ಗನೆ ಸಿಗಿದು, ಬಿಱ್ರನೆ ಬೀಗಿ, ಡಱ್ರನೆ ತೇಗಿ, ಸುಱ್ರನೆ ಸುರಿದು, ಘಳುಮ್ಮನೆ ಮುಳುಂಗಿ' ಮೊದಲಾದ ನಾನಾವಿಧ ಕ್ರಿಯಾನುಕರಣ ಶಬ್ದಗಳನ್ನೂ ಲಕ್ಷ್ಯಾನುಸಾರವಾಗಿ ಇಲ್ಲಿ ಪಾಠಮಾಡಿಕೊಂಡು ಅವುಗಳಿಗೆಲ್ಲಾ ಅವ್ಯಯ ಸಂಜ್ಞೆಯನ್ನು ಹೇಳಬೇಕೆಂದು ತಾತ್ಪರ್ಯವು.

**ಅವತಾರಿಕೆ ೨೧**

ಪೂರ್ವದಲ್ಲಿ '**ವುದುವಾದ್ಯವ್ಯಯಂ**' ಎಂಬ ಸೂತ್ರದಿಂದ ಕೆಲವು ತದ್ಧಿತ ಪ್ರತ್ಯಯಾಂತಗಳಿಗೂ ಕೆಲವು ಕೃತ್ ಪ್ರತ್ಯಯಾಂತಗಳಿಗೂ 'ಅವ್ಯಯ' ಸಂಜ್ಞೆಯನ್ನು ಹೇಳಿ 'ಅಣವಾಪವಯಃ' ಎಂಬುದರಿಂದ ಪ್ರಕೃತಿ-ಪ್ರತ್ಯಯ ವಿಭಾಗವಿಲ್ಲದ ಕೆಲವು ಅಖಂಡವಾದ ಶಬ್ದಗಳಿಗೂ ನಾನಾವಿಧ ಕ್ರಿಯಾನುಕರಣ ಶಬ್ದಗಳಿಗೂ ಸಾಮಾನ್ಯವಾಗಿ 'ಅವ್ಯಯ' ಸಂಜ್ಞೆ ಹೇಳಲ್ಪಟ್ಟಿತು. ಈಗ ಅಂತಹ ಪ್ರಕೃತಿ-ಪ್ರತ್ಯಯವಿಭಾಗ ಶೂನ್ಯವಾದ ಕೆಲವು ಶಬ್ದಗಳಿಗೆ 'ಅವ್ಯಯ' ಸಂಜ್ಞೆಯನ್ನೂ 'ನಿಪಾತ' ಸಂಜ್ಞೆಯನ್ನೂ ಹೇಳುತ್ತಾನೆ.

**ಸೂತ್ರಂ ॥ ಎಮಾದಯೋ ನಿಪಾತಾಶ್ಚ ॥ ೨೧ ॥**

**ಅರ್ಥ ॥ ಎಮ, ಎಂಬುದೇ ಮೊದಲಾದ ಗಣಪಠಿತವಾದ ಶಬ್ದಗಳು ಅವ್ಯಯಸಂಜ್ಞಕಗಳೂ ನಿಪಾತಸಂಜ್ಞಕಗಳೂ ಆಗುತ್ತವೆ.**

**ಉದಾಹರಣೆ** ॥ ಎಮ; ನಾಡೆ; ಎಡೆ; ನೆಱೆ, ಮಿಗೆ, ಕಡು; ಅಃ, ಆಃ; ಅ, ಆ; ಉಃ, ಊಃ; ಉ, ಊ; ಎ, ಏ; ಹೋ, ಅಹೋ, ಓಹೋ, ಹೋಹೋ; ಅಯ್ಯೊ, ಅಯ್ಯೋ; ಎಲೆ, ಎಲೇ; ಎಲಮ, ಎಲಮೇ; ಅರೆ; ಅರಮ, ಅರೆಉಲು; ಅಲ್ತೆ, ಅಲ್ತೇ; ಚಿಃ, ಚೀಃ; ನಿನ್ನೆ; ಮೊನ್ನೆ; ಗಡಾ, ಗಳಾ; ಅಕ್ಕಟಾ — ಇತ್ಯಾದಿ. ಇದೂ ಪೂರ್ವದಂತೆ ಆಕೃತಿಗಣವೆಂದು ತಿಳಿಯಬೇಕು.

**ಪ್ರಯೋಜನಂ** ॥ '**ನಿಪಾತಾಃ ॥ ೪೪ ॥ ಓ ನಿಪಾತೇ ॥ ೪೫ ॥**' ಮೊದಲಾದ 'ನಿಪಾತ' ಪದವುಳ್ಳ ಸೂತ್ರಗಳಲ್ಲಿ 'ನಿಪಾತ' ವೆಂಬ ಪದಕ್ಕೆ ಈ ಗಣದಲ್ಲಿ ಪಠಿತವಾದ ಶಬ್ದಗಳೂ ಆಕೃತಿಗಣದಿಂದ ಸಂಗ್ರಹೀತವಾದ ಶಬ್ದಗಳೂ ಬೋಧ್ಯವಾದುವೆಂದು ತಿಳಿಯಬೇಕು.

**ವಿಚಾರ ೨೧**

ಈ ಸೂತ್ರದಲ್ಲಿ 'ನಿಪಾತಾಶ್ಚ' ಎಂದು ಚಕಾರವನ್ನು ಹೇಳಿರುವುದರಿಂದ 'ವುದುವಾದಿ' ಸೂತ್ರದಲ್ಲಿರುವ ಅವ್ಯಯ ಪದವನ್ನನುವರ್ತಿಸಿಕೊಂಡು 'ಅವ್ಯಯ' ಸಂಜ್ಞಾಸಮುಚ್ಚಿತವಾಗಿ 'ನಿಪಾತ' ಸಂಜ್ಞೆಯನ್ನು ಹೇಳಿರುವುದು. ಆದುದರಿಂದ ಈ ಗಣಪಠಿತವಾದ ಶಬ್ದಗಳಿಗೆ ಈ ಎರಡು ಸಂಜ್ಞಾನಿಮಿತ್ತಕವಾದ ಕಾರ್ಯಗಳೂ ಬರುವುವು. ಇಲ್ಲಿ ಪಠಿತವಾದ 'ಎಮಾದಿ' ಗಳಿಗೂ 'ಅಣವಾದಿ' ಗಳಿಗೂ ಪ್ರಯೋಗಜ್ಞರು '**ಅವ್ಯಯಾನಾಮನೇಕಾರ್ಥಃ**' ಎಂಬ ವಚನ ಬಲದಿಂದ ಅನೇಕಾರ್ಥಗಳಿರುವುವೆಂದು ಹೇಳುವರು. ಆದಾಗ್ಯೂ ನಿದರ್ಶನಕ್ಕಾಗಿ ಒಂದೊಂದರ್ಥವು ಇಲ್ಲಿ ತೋರಿಸಲ್ಪಡುವುದು. ಅರ್ಥ ವಿಶೇಷಗಳನ್ನು ಲಕ್ಷ್ಯಾನುಸಾರವಾಗಿ ಊಹಿಸಿಕೊಳ್ಳಬೇಕು. ಮತ್ತು ಪ್ರಕೃತಿಭಾವ ನಿರೂಪಣಮಾಡುವ ಸಂದರ್ಭದಲ್ಲಿ ಕೆಲವು ಸ್ಪಷ್ಟವಾಗಿ ಉದಾಹರಿಸಲ್ಪಡುವುವು. ಆದುದರಿಂದ ಇಲ್ಲಿ ಒಂದೇ ಅರ್ಥವು ಹೇಳಲ್ಪಡುವುದು. '**ಎಮ**' ಎಂಬುದಕ್ಕೆ

ಅಂಗೀಕಾರವೆಂಬರ್ಥವು; '**ನಾಡೆ**' ಎಂಬುದಕ್ಕೆ ಬಾಹುಳ್ಯವೆಂಬರ್ಥವು; '**ಎಡೆ**' ಎಂಬುದಕ್ಕೆ ಅವಕಾಶವೆಂಬರ್ಥವು; '**ನೆಱೆ, ಮಿಗೆ, ಕಡು**' ಎಂಬುದಕ್ಕೆ ಆಧಿಕ್ಯಾರ್ಥವು; '**ಅಃ, ಆಃ**' ಎಂಬುವಕ್ಕೆ ಖೇದ, ವಿಸ್ಮಯ, ವಿಡಂಬನವೆಂಬರ್ಥಗಳೂ; '**ಅ, ಆ**' ಎಂಬುವಕ್ಕೆ ಕಿಲ ಎಂಬರ್ಥವು; '**ಅ**' ಎಂಬುದಕ್ಕೆ ಮಾತ್ರ ಅವಧಾರಣವೆಂಬರ್ಥವೂ; '**ಉಃ, ಊಃ**' ಎಂಬುವಕ್ಕೆ ವ್ಯಥೆಯೆಂಬರ್ಥವೂ; '**ಉ, ಊ**' ಎಂಬುವಕ್ಕೆ ಅಸಹ್ಯವೆಂಬರ್ಥವೂ; '**ಎ, ಏ**' ಎಂಬುವಕ್ಕೆ ವಿಶಂಕೆ, ಅವಧಾರಣ, ಅನುಮತಿಯೆಂಬರ್ಥಗಳೂ; '**ಹೋ, ಅಹೋ, ಹೋಹೋ**' ಎಂಬುವಕ್ಕೆ ವೇದನೆ, ಅನಿವಾರಣೆ ಎಂಬರ್ಥಗಳೂ; '**ಅಯ್ಯೋ, ಅಯ್ಯೋ**' ಎಂಬುವಕ್ಕೆ ಖೇದ, ವಿಡಂಬನವೆಂಬರ್ಥಗಳೂ; '**ಎಲೆ, ಎಲೇ, ಎಲವೊ, ಎಲವೋ**' ಎಂಬುವಕ್ಕೆ ಸ್ಮರಣ, ವಿಚಾರ, ಆಮಂತ್ರಣ, ಎಂಬರ್ಥಗಳೂ; '**ಅರೆ**' ಎಂಬುದಕ್ಕೆ ಭಾಗವೆಂಬರ್ಥವೂ; '**ಅರವೊ, ಅರೆವುಱ**' ಎಂಬುವಕ್ಕೆ ಪ್ರದೇಶವಿಶೇಷವೆಂಬರ್ಥವೂ; '**ಅಲ್ತೆ, ಅಲ್ತೇ**' ಎಂಬುವಕ್ಕೆ ಪ್ರಶ್ನೆ-ಪ್ರತಿವಾಕ್ಯ ಪ್ರತಿಷೇಧವೆಂಬರ್ಥವೂ; '**ಚಿಃ, ಚೀಃ**' ಎಂಬುವಕ್ಕೆ ಕುತ್ಸನವೆಂಬರ್ಥವೂ; '**ನಿನ್ನೆ**' ಎಂಬುದಕ್ಕೆ ಪೂರ್ವದಿನವೆಂಬರ್ಥವೂ; '**ಮೊನ್ನೆ**' ಎಂಬುದಕ್ಕೆ 'ಪ್ರಪೂರ್ವೇದ್ಯುಃ' ಎಂಬರ್ಥವೂ; '**ಗಡಾ, ಗಳಾ**' ಎಂಬುವಕ್ಕೆ ಕಿಲ ಎಂಬರ್ಥವೂ; '**ಅಕ್ಕಟಾ**' ಎಂಬುದಕ್ಕೆ ಖೇದವೆಂಬರ್ಥವೂ ಪ್ರಸಿದ್ಧವಾಗಿರುವುವು. '**ಗಡ, ಗಳ, ಅಕ್ಕಟ**' ಎಂಬೀ ಮೂರು ಶಬ್ದಗಳು 'ಅಣಮಾದಿ' ಯಲ್ಲಿ ಹ್ರಸ್ವಾಂತವಾಗಿ ಪಾಠಮಾಡಲ್ಪಟ್ಟಿವೆ. 'ಎಮಾದಿ' ಗಣದಲ್ಲಿ ದೀರ್ಘಾಂತವಾಗಿ ಪಾಠಮಾಡಲ್ಪಟ್ಟಿವೆ. ಆದುದರಿಂದ ಹ್ರಸ್ವಾಂತವಾದುವು ಕೇವಲಾವ್ಯಯಗಳೆಂತಲೂ ದೀರ್ಘಾಂತವಾದುವು ನಿಪಾತಾವ್ಯಯುಗಳೆಂತಲೂ ತಿಳಿಯಬೇಕು.

ಈ ಪ್ರಕರಣದಲ್ಲಿ **ದರ್ಪಣಕಾರ**ನು ಪ್ರತ್ಯಯಾಂತಗಳಿಗೆ 'ಅವ್ಯಯ' ಸಂಜ್ಞೆಯನ್ನು ಬೋಧಿಸುವ ಸೂತ್ರವನ್ನು ಹೇಳದಿದ್ದರೂ 'ಅಣಮಾದಿ' ಗಣಪಠಿತವಾದ ಶಬ್ದಗಳಿಗೂ 'ಎಮಾದಿ' ಗಣಪಠಿತವಾದ ಶಬ್ದಗಳಿಗೂ ಅರ್ಥನಿರ್ದೇಶ ಪೂರ್ವಕವಾಗಿ 'ಅವ್ಯಯ' ಸಂಜ್ಞೆಯನ್ನು ಬೋಧಿಸಲು ಗ್ರಂಥದ ಕೊನೆಯಲ್ಲಿ ಒಂದು ಅಧ್ಯಾಯವನ್ನೇ ಮಾಡಿರುವನು. ಅದರಲ್ಲಿ—

**ಅನುಕೃತಿಪದಮೊದವೆಯುಮದು**
**ವನೆಯೆಂಬೆರಡುಂ ಪದಾಂತ್ಯದೊಳ್ ಬರೆಯುಂ ನೆ**
**ಟ್ಟನೆ ತಾವವ್ಯಯಮಪ್ಪುವು**
**ವನೆಯ ನ ಕಾರಂ ವಿಕಲ್ಪದಿಂದೆ ಗ ಕಾರಂ** (ಸೂತ್ರ ೪೦೦)

ಎಂಬ ಮೊದಲನೆಯ ಸೂತ್ರದಿಂದ — '**ಧಿಗಿಲನೆ, ಭುಗಿಲನೆ, ಭೋರನೆ**' ಎಂದು ಮೊದಲಾದ ಅನುಕರಣ ಶಬ್ದಗಳೂ '**ಅದು, ಅನೆ**' ಎಂಬಿವು ಪದಾಂತ್ಯದಲ್ಲಿರುವ ಶಬ್ದಗಳೂ ಅವ್ಯಯಗಳಾಗುವುವೆಂದು ಹೇಳಿ 'ಅನೆ' ಯ ನ ಕಾರಕ್ಕೆ ವಿಕಲ್ಪವಾಗಿ ಗ ಕಾರವೂ ಬರುವುದೆಂದು ಹೇಳಿರುವುದರಿಂದ 'ನೂಂಕದು (ನೂತದು) ನೂಳದು, ತೆತ್ತದು (ತೆಕ್ಕದು); ಕಮ್ಮನೆ, ಇಮ್ಮನೆ, ಸಿಯ್ಯನೆ, ಮೆಲ್ಲನೆ; ನೆಟ್ಟನೆ, ನೆಟ್ಟಗೆ; ಸುಮ್ಮನೆ, ಸುಮ್ಮಗೆ; ಕಮ್ಮನೆ, ಕಮ್ಮಗೆ; ಬಿನ್ನನೆ, ಬಿನ್ನಗೆ;' ಎಂದು ಮೊದಲಾದುವು ಸಿದ್ಧವಾಗುವುವು. ಇಲ್ಲಿ ವಿಕಲ್ಪದಿಂದ ಗ ಕಾರಂ ಎಂದು ಹೇಳಿರುವುದು ಲಕ್ಷ್ಯಾನುಸಾರವಾಗಿ ಕೆಲವು ಶಬ್ದಗಳಲ್ಲಿ ನಿತ್ಯವಾಗಿಯೂ ಕೆಲವು ಲಕ್ಷ್ಯಗಳಲ್ಲಿ ಸರ್ವಥಾ ಇಲ್ಲದೆಯೂ ಕೆಲವು ಲಕ್ಷ್ಯಗಳಲ್ಲಿ ವಿಕಲ್ಪವಾಗಿಯೂ ಬರುವುದು ಉಂಟೆಂದು ಊಹಿಸಿಕೊಳ್ಳಬೇಕು.

**ಶಾಸನದಲ್ಲಿ** — ' ಇಮ್ಮನೆ, ಸಿಯ್ಯನೆ, ಬಿನ್ನನೆ, ಬಿನ್ನಗೆ, ಸೂೞದು ' ಇತ್ಯಾದಿ ಶಬ್ದಗಳನ್ನು ಪಾಠಮಾಡದಿದ್ದರೂ ಆಕೃತಿಗಣವೆಂದು ಹೇಳಿರುವುದರಿಂದ ಇವುಗಳೂ ಆ ಗಣದಲ್ಲಿ ಸೇರಿರುವುವೆಂದು ತಿಳಿದು ' ಅವ್ಯಯ ' ಸಂಜ್ಞೆಯನ್ನು ಹೇಳಬೇಕು. ' ಅಣಮಾದಿ ' ಯಲ್ಲಿ ಪಠಿಸಿರುವ ' ಅಗೆ ' ಎಂಬುದೆ ಅಂತ್ಯದಲ್ಲುಳ್ಳ ಶಬ್ದಗಳೆಲ್ಲಾ ' ನ ಕಾರಂ ವಿಕಲ್ಪದಿಂದೆ ಗ ಕಾರಂ ' ಎಂದು ಹೇಳಿರುವುದರಿಂದ ಸಿದ್ಧವಾಗುವುವು.

ಹೀಗೆಯೆ — ಇಲ್ಲ, ಕೀೞದು, (ಕಿೞದು), ನಿರ್ನಿರ್, (ನಿರ್ನೆರ್), ನಿರ್ನೆರಂ ಎಂಬಿವು ಅರ್ಥವಿಶೇಷಗಳಲ್ಲಿ ಅವ್ಯಯಗಳಾಗುವುವೆಂದು —

ಸೊಲ್ಲೊಳ್ ಕ್ರಿಯಾತ್ಮಕಾವ್ಯಯ
ಮಿಲ್ಲೆಂಬುದು ಕೀೞದೆಂಬುದಾ[1]ಕೀೞಾರ್ಥಂ
ಬಲ್ಲರ್ಗೆ ನಿರ್ನಿಮಿತ್ತಾ
ರ್ಥೋಲ್ಲಸಿತಂ ನಿರ್ನಿ[2]ರೆಂಬುದುಂ ನಿರ್ನೆರಮುಂ    ೩೦೧

ಎಂಬ ಸೂತ್ರದಿಂದ ಸೂಚಿಸಲ್ಪಟ್ಟಿರುವುದು. ಇದೇ ರೀತಿಯಾಗಿ —

ನೆಗೞ್ಗುಂ ಮೌನಾರ್ಥಂ ಸುಂ
ಮಗೆ ಸುಂಮನೆಯುಸಿಕನೆಂದು ನುಡಿವವ್ಯಯದೊಳ್
ಪುಗುಗುಂ ಗುೞುಗುಂಮಗೆ ಬಿಂ
ನಗೆ ಬಿಂನನೆಯೆನಲೊಡಂ ಕ್ರಿಯಾಶೂನ್ಯಾರ್ಥಂ    ೩೦೨

ಅನುಮೆನಿಪ್ಪವ್ಯಯಮಂ
ಸ್ಥಾನ ದಿಶಾ ಕಾಲ ಸಂಖ್ಯೆಯೊಳುಸಿರ್ವರ್ ಮ
ತ್ತೇನುಮೆಸಿಪ್ಪರ್ಥಮನಿರ
ದಾನಿಪರಣಮಾಣಮೆಂದು ನುಡಿವವ್ಯಯದೊಳ್    ೩೦೩

ನಾಡೆಯೆಡೆಯಾವಗಂ ನೆೞ್
ನೀಡುಂ ಕರಮಾದಮೆಯ್ದೆ ಸೂೞದು ಪಿರಿದುಂ
ನೀಡು ಮಿಗೆ ಕೆಂನಮೆಲ್ಲಂ
ರೂಢಿಯನುಳ್ಳುದುಮಿವವ್ಯಯದೊಳಧಿಕಾರ್ಥಂ    ೩೦೪

ಭೋಂಕನೆ ಚಿಕ್ಕನೆ ಭೋರನೆ
ಭೋಂಕಲ್ ಚಡುಪುಡನೆ ಗಿೞ್ತಿೞ್ನೆಯುಂ ಮ
ತ್ತಂ ಕಡು ಚಿಚ್ಚರ ಬೆಚ್ಚರ
ಮುಂ ಕೂಡಿರೆ ತಮ್ಮೊಳೊದವುಗುಂ ಶೀಘ್ರಾರ್ಥಂ    ೩೦೫

ಏಗಂ ವಲಂ ವೆೞಂ ದಲ್
ತಾಗುಗುಮತಿನಿಶ್ಚಯಾರ್ಥಮಂ ತಾಸಿತರಾ
ರ್ಥಾಗತಮದು ಮತ್ತಿನ ನುಡಿ
ಯೋಗೆಯ್ದುಂ ಬೇೞ್ ಬೇೞ್ಯೆನೆ ಪೃಥಗರ್ಥಂ    ೩೦೬

[1] ಕಿೞದುವೆಂಬುದಾ ( ಪಾಠಾಂತರ ) [2] ನೆರ್ನೆ ( ಪಾಠಾಂತರ)

ಅನುಕಿಱ್ರನೆ ಕಿಟ್ಟನೆ ಬಂ
ಟ್ಟನೆಯೆಂಬಿವಱೊಳ್ ಧ್ರುವಾರ್ಥಮೊಯ್ಯನೆಯೆನೆ ನೆ
ಟ್ಟನೆಯೆನೆ ನೆಟ್ಟಗೆಯೆನೆ ಬಂ
ದು ನಿಲ್ಕುಮಿವಱೊಳ್ ಪರಿಸ್ಫುಟಾರ್ಥವಿಧಾನಂ ೩೦೭

ಖೇದನೆಯೊಳಹಹಮೆಂಬುದು
ಖೇದದೊಳಚ್ಚರಿಯೊಳಕ್ಕಟಾ ಎಂಬುದು ತತ್-
ಖೇದ ವಿಡಂಬನ ಕರುಣಾ
ಸಾದದೊಳಯ್ಯೋ ಎನಿಪ್ಪುದವತರಿಸಿಕುಂ ೩೦೮

ಶವನಿಪುದೋಹೋ ಹೋ ಎನೆ
ನಿವಾರಣಾರ್ಥಂ ಸಹಾರ್ಥಮೊಡನೆನೆ ಹಸನ
ಪ್ರವಹೃತಿ ಗಹಗಹಮೆನೆ ಪಿರಿ
ದುವೆಂಬಭಿಪ್ರಾಯದಲ್ಲಿ ಸೋಡಂಬಾಡಂ ೩೦೯

ಪರಿವಿಡಿಯಿಂದಾಃ ಆಃ ಎಂ
ಬೆರಡುಂ ವಿಸ್ಮಯ ವಿಡಂಬನ ೨ವ್ಯಸನ ಸುಖ೨
ಸ್ಫುರಿತಾರ್ಥದೊಳುಃ ಎಂಬುದು
ಪಿರಿದುಮಸಹ್ಯಾರ್ಥದೊಳ್ ಪ್ರಯೋಗಿಸಿಸೆ ಪಡೆಇಗುಂ ೩೧೦

ಸ್ಮರಣ ವಿಚಾರಾಮಂತ್ರಣ
ಪರಿಗತವೆನಿಸಿರ್ಪುವೆಲೆಲೆ ಏ ಎಂಬಿವು ಸಂ
ಚರಿಸುವುದನುಮತದೊಳ್ ಬ
ಲ್ಲರಿನೇಕಾರವುದೆಕಾರಮುವಧಾರಣೆಯೊಳ್ ೩೧೧

ಮತ್ತೆಂಬುದು ಪುನರರ್ಥದೊ
ಳೆತ್ತಾನುಮದೆಲ್ಲಿಯಾನುಮೆಂಬರ್ಥದೊಳಾ
ಯತ್ತಂಗಳರಮೆ ಅರೆಗಳ್
ಸುತ್ತೇಂ ತರಲಾರ್ಥದಲ್ಲಿ ಬೆಳ್ಪಳಮುಕ್ಕುಂ ೩೧೨

ಸಲೆಯೆಂಬುದು ನಿತ್ಯಾರ್ಥಾ
ವಲಂಬಿ ಹುಂ೪ ಎನೆಯುಂ ಅಲ್ತೆಯಲ್ತೆಯೆನೆಯುಂ
ಫಲಯಿಸುಗುಂ ಪ್ರಶ್ನಾರ್ಥೋ
ಜ್ಜಲಾನುಮಾನಾರ್ಥಯುಗುಳವುವು ಶಾಬ್ದಿಕರಿಂ ೩೧೩

ಅಮುಮೆಂಬಿವೆರಡುಮುಮುಗುಂ
ಸಮುಚ್ಚಯಾರ್ಥದೊಳೆ ಏ ಒ ಓ ಎಂಬಿವು ಶ
ಬ್ದಮನಪ್ಪಿ ವಿಶಂಕಾಪ್ರ
ಶ್ನವುಂಡಲಾಕ್ಷೇಪಕಾರ್ಥದೊಳ್ ವರ್ತಿಸುಗುಂ ೩೧೪

೧ ದಿ ( ಪಾಠಾಂತರ ) ೨-೨ ವ್ಯಥನಸಂ( ಪಾಠಾಂತರ ) ೩-೩ ಸೆಪಡು ( ಪಾಠಾಂತರ ) ೪ ಹೂಂ ( ಪಾಠಾಂತರ )

ಬೞಿಕೆ ಬೞಿಕ್ಕಂ ಬೞಿಕಂ
ಬೞಿಕ್ಕೆ ಬೞಿಯಂ ಪ್ರಸಿದ್ಧಪಶ್ಚಾದರ್ಥಂ
ಘುೞಿಯಿಪುದು ವಿಕಲ್ಪಾರ್ಥಂ
ಕೞಿಲದೆ ಮೇಣೆಂಬ ಶಬ್ದದೊಳ್ ಶಾಬ್ದಿಕರಿಂ ೨೧೫

ಉಪಮಾನಾರ್ಥದೊಳಿವು ವ
ರ್ತಿಪುವಂತಿರೆಯಂತೆಯಂತೆವೋಲ್ ವೋಲ್ಗಳ್ ರಂ
ಜಿಪುವು ಗಡ ಗಳ ಗಡಂ ಗಳ
ವುಪಚಿತವಾರ್ತೆಯೊಳಮುಚಿತಸಂಭಾಷಣೆಯೊಳ್ ೨೧೬

ಮೆಱೆಗುಂ ಸುಂಮನೆ ಸುಂಮಗೆ
ಬಱುದಲ್ಲವೆಱೆಂಬ ಮಾತಕಾರಣದೊಳ್ ಪೊ
ಚ್ಚಱುಗುಂ ತೃತೀಯೆ ಬಂದಂ
ತಱುನೆಂಬ ಪದಕ್ಕಮಾ ಎ ಕಾರಕ್ಕಿತರಂ ೨೧೭

ಹೌವನೆಯಾಕಸ್ಮಿಕಭಯ
ಭಾವಿತವಂತಿಂತುಗಳ್ ಪದಾಪೂರಣದೊಳ್
ಕೋವುವು ಚೀಃ ಇಸ್ಸೀಗಳ್
ತಾವೊಗೆದು ಜುಗುಪ್ಸನಾರ್ಥದೊಳ್ ವರ್ತಿಸುಗುಂ ೨೧೮

ಮತ್ತೆಂಬರ್ಥಮೊಳುಸಿರ್ವರ್
ಬಿತ್ತಿಗರಾ ಬಲ್ಲೆ ಬೞಿಗಳಂ ಕಾಲಾರ್ಥಂ
ಪತ್ತುವುದಂದಿಂದುಂದೆಂ
ದೆತ್ತಂ ಸುಡಿವವ್ಯಯಂಗಳೊಳ್ ವಾಗ್ಮಿದರಿಂ ೨೧೯

ಭ್ರಾಂತಿಯನುಳಿದಂತಿಂತುಂ
ತೆಂತೆಂಬಿವು ತಾಂ ಪ್ರಕಾರಕಾಲಾರ್ಥಂಗಳ್
ಮುಂತೆ ಚತುರ್ಥೀ ಷಷ್ಠೀ
ಕಾಂತಂಗಳವೆಂದು ತಿಳಿಗೆ ಪೇೞ್ವವ್ಯಯಮಂ ೨೨೦

ತಳೆಗುಂ ಕಾಲಾರ್ಥಮನಾ
ಗಳೀಗಳೆಂಬಾಗಡೀಗಡೆಂಬಿವು ಬಿಂದೂ
ಜ್ವಳಮುಮಿವುದಯಮನುಸಿರ್ವುವು
ತಿಳಿ ಸವಳದೆ ಪೊೞ್ತುಡೆನೆ ಸವಳ್ತುಡೆಯೆನೆಯುಂ ೨೨೧

ಸವಸಂದ ಕಾಲವಾಚಕ
ಮಿವು ನಾಡಿದು ನಾಳೆ ನಿನ್ನೆ ಮೊನ್ನೆಗಳಾದಂ
ವಿವರಿಪುವೀವಱು ಮೊನೆಯೇ
ಡವು ಕಿಂಚಿದ್ಭೂತಭೂತಕಾಲದ್ವಯದೊಳ್ ೨೨೨

ಎಂಬ ಸೂತ್ರಗಳಿಂದ ಕೆಲವವ್ಯಯಗಳನ್ನು ನಿದರ್ಶನಕ್ಕಾಗಿ ಉಚ್ಚರಿಸಿ ಪ್ರಸಿದ್ಧವಾದ ಕೆಲವರ್ಥಗಳನ್ನೂ ಸೂಚಿಸಿರುವನು.

ಇಲ್ಲಿ **ಶಾಸನಕಾರನು** ಹೇಳದಿರುವ ಕೆಲವು ಅವ್ಯಯಗಳು ಹೆಚ್ಚಾಗಿ ಸೇರಿಸಲ್ಪಟ್ಟಿದ್ದರೂ ಅವನು ಹೇಳಿರುವ ಕೆಲವು ಅವ್ಯಯಗಳು ಬಿಟ್ಟು ಹೋಗಿರುವುವು. ಆದಾಗ್ಯೂ **ಶಾಸನಕಾರನ** ಮತದಲ್ಲಿ ಹೇಗೆ ಆಕೃತಿಗಣವೆಂದು ಅಂಗೀಕರಿಸಿ ಅಪಠಿತವಾದುವುಗಳನ್ನೂ ಪ್ರಯೋಗದರ್ಶನ ದಿಂದ ಗ್ರಹಿಸಬೇಕೆಂದು ಹೇಳುವನೋ ಹಾಗೆಯೆ **ದರ್ಪಣಕಾರನ** ಮತದಲ್ಲಿಯೂ ಉಪಲಕ್ಷಣೆ ಯಿಂದ ಪ್ರಯೋಗಸ್ಥವಾದ ಇತರಾವ್ಯಯಗಳನ್ನೂ ಊಹಿಸಿಕೊಳ್ಳಬೇಕೆಂದು ತಾತ್ಪರ್ಯವು. ಮತ್ತು **ದರ್ಪಣಕಾರನ** ಮತದಲ್ಲಿ ಕೃತ್ತದ್ಧಿತಾವ್ಯಯಗಳನ್ನು ಸ್ಪಷ್ಟವಾಗಿ ಹೇಳದಿದ್ದರೂ ಉಕ್ತ ಯುಕ್ತಿಯಿಂದಲೆ —

**‘ ಸದೃಶಂ ತ್ರಿಷು ಲಿಂಗೇಷು ಸರ್ವಾಸು ಚ ವಿಭಕ್ತಿಷು**
**ವಚನೇಷು ಚ ಸರ್ವೇಷು ಯನ್ನವ್ಯೇತಿ ತದವ್ಯಯಂ**

ಎಂಬ ಲಕ್ಷಣಕ್ಕೆ ವಿಷಯವಾದುದನ್ನು ತಿಳಿದುಕೊಳ್ಳಬೇಕು.

**|| ಇತಿ ಸಂಜ್ಞಾ ಪ್ರಕರಣಂ ಸಮಾಪ್ತಂ ||**

# ೨ ಪರಿಭಾಷಾಪ್ರಕರಣಂ

**ದರ್ಪಣಕಾರನು** ಮೊದಲನೆಯ ಅಧ್ಯಾಯದಲ್ಲಿ ಸಂಜ್ಞಾಪ್ರಕರಣ, ಸಂಧಿಪ್ರಕರಣ ಎಂದು ಎರಡು ಪ್ರಕರಣಗಳನ್ನು ಮಾಡಿ ಮೊದಲನೆಯ ಪ್ರಕರಣದಲ್ಲಿ ಎಲ್ಲಾ ಸಂಜ್ಞೆಗಳಿಗೂ ಮೂಲಭೂತವಾದ ಅಕ್ಷರಸಂಜ್ಞೆಯನ್ನು ತಿಳಿಸಿ, ಅವುಗಳ ಪರ್ಯಾಯ ನಾಮಗಳನ್ನೂ ವರ್ಣಗಳ ಪಾಠಕ್ರಮವನ್ನೂ ತಿಳಿಸಿ, ಆ ವರ್ಣಗಳ ಮಧ್ಯದಲ್ಲಿರುವ **ಲ** ಕಾರೋಚ್ಚಾರಣಭೇದದಿಂದುಂಟಾದ ಕನ್ನಡಶಬ್ದಗತವಾದ **ಳ** ಕಾರಕ್ಕೆ '**ಕುಳ**' ವೆಂದೂ ಸಂಸ್ಕೃತ-ಶಬ್ದಗತವಾದುವಕ್ಕೆ '**ಕ್ಷಳ**' ವೆಂದೂ ವ್ಯವಹಾರವಿರುವುದೆಂದು ಹೇಳಿ, ಸ್ವರಸಂಜ್ಞೆಯನ್ನೂ ಅವುಗಳ ಪ್ರಭೇದಗಳನ್ನೂ ಅನುಸ್ವಾರ-ವಿಸರ್ಗ ಸ್ವರೂಪಗಳನ್ನೂ ವ್ಯಂಜನ ಸಂಜ್ಞೆಯನ್ನೂ ತದ್ಭೇದಗಳನ್ನೂ ಯೋಗವಾಹಗಳನ್ನೂ ವಿವರಿಸಿ, ಱ, ೞ, ಳ ವರ್ಣಗಳ ಪರಿಣಾಮಗಳನ್ನೂ ಅವುಗಳ ಪ್ರಯೋಜನವನ್ನೂ ಹೇಳಿ, ವರ್ಣೋತ್ಪತ್ತಿಕ್ರಮಸ್ಥಾನಗಳನ್ನು ವಿವರಿಸಿ, ಪ್ರಕೃತಿ ವಿಭಕ್ತಿ ಪದಗಳ ಸ್ವರೂಪವನ್ನು ಬೋಧಿಸಿ, ಕೆಲವು ನಿತ್ಯಬಿಂದು, ಕೆಲವು ಅನಿತ್ಯಬಿಂದು, ಕೆಲವು ಅಬಿಂದು ಶಬ್ದಗಳು ಸ್ವತಃ ಪ್ರಯೋಗಗಳಲ್ಲಿರುವುವೆಂದು ಉದಾಹರಣೆಯಿಂದ ತೋರಿಸಿ, ಶಿಥಿಲದ್ವಿತ್ವಗಳಾದ ಕೆಲವು ಶಬ್ದಗಳನ್ನುದಾಹರಿಸಿ ವರ್ಣಲೋಪ ದೆ ಕಾರಲೋಪಗಳಿಗೆ ಪ್ರಯೋಗಗಳನ್ನು ತೋರಿಸಿ, ಸಂಧಿಸ್ವರೂಪವನ್ನೂ ಅದರ ಪ್ರಭೇದವನ್ನೂ ತಿಳಿಸಿ —

> ಇದು ಪೂರ್ವಪ್ರಕರಣದಿಂ
> ತಿದಱೊಳ್ ಸಾಕಲ್ಯಸಂಜ್ಞೆ ಪೇೞವೆನಲ್ ಬೇ
> ಱುದಿತಪ್ರಕರಣಗಣಸೂ
> ತ್ರದಿಷ್ಟದಿಂ ಸಂಜ್ಞೆಯೊಡನೆ ಪೇೞಲ್ ಪಡೆಗುಂ ( ಸೂತ್ರ ೫೦ )

ಎಂಬ ಸೂತ್ರದಿಂದ ಸಾಮಾನ್ಯವಾಗಿ 'ಸಂಜ್ಞಾಪ್ರಕರಣವನ್ನು' ಮುಗಿಸಿರುವನು. ಆದರೆ ಇಲ್ಲಿ ಬಿಂದು, ವರ್ಣಲೋಪ, ದೆ ಕಾರಲೋಪ, ಶಿಥಿಲದ್ವಿತ್ವ, ಮೊದಲಾದ ಕೆಲವನ್ನು ಪ್ರಾಚೀನರು 'ಸಂಜ್ಞಾಪ್ರಕರಣ' ದಲ್ಲಿ ಸೇರಿಸದಿದ್ದರೂ **ದರ್ಪಣಕಾರನು** ಅವುಗಳನ್ನು ಈ ಪ್ರಕರಣದಲ್ಲಿ ಸೇರಿಸಿರುವನು. **ಶಾಸನಕಾರನು** ಇವನ್ನು 'ವಿಧಿಸೂತ್ರಪ್ರಕರಣ' ದಲ್ಲಿ ಹೇಳುವನು. ಇದಕ್ಕೆ **ದರ್ಪಣ**ದಲ್ಲಿ ಸಂಗತಿಯನ್ನು ತಿಳಿಸುವುದು ಕಷ್ಟವಾಗಿರುವುದರಿಂದ **ಶಾಸನಕಾರನು** ಹೇಳಿರುವುದೆ ಉಚಿತವೆಂದು ತೋರುವುದು. ಮತ್ತು **ಶಾಸನಕಾರನು** 'ಸಂಜ್ಞಾಪ್ರಕರಣ' ದಲ್ಲಿ ಹೇಳಿರುವ 'ಅವ್ಯಯ' ಸಂಜ್ಞೆಯನ್ನೂ 'ಲಿಂಗ' ಸಂಜ್ಞೆಯನ್ನೂ 'ಕೃತ್' ಸಂಜ್ಞೆಯನ್ನೂ 'ಧಾತು' ಸಂಜ್ಞೆಯನ್ನೂ **ದರ್ಪಣಕಾರನು** ಈ ಪ್ರಕರಣದಲ್ಲಿ ಬಿಟ್ಟಿರುವನು. ಆದಾಗ್ಯೂ **ಶಾಸನಕಾರನು** ಹೇಗೆ ಕೆಲವು ಸಂಜ್ಞೆಗಳನ್ನು ಆಯಾ ಪ್ರಕರಣದಲ್ಲಿ ಹೇಳುವನೋ ಹಾಗೆ ಇವನೂ ಆಯಾ ಪ್ರಕರಣದಲ್ಲಿ ಉಪಯುಕ್ತವಾದ ಸಂಜ್ಞೆಗಳನ್ನು ಸೂಚಿಸುವನಾದುದರಿಂದ ಈ ವಿಷಯದಲ್ಲಿ ಇಬ್ಬರಿಗೂ ಏನೂ ಭೇದವಿಲ್ಲ. ಇಲ್ಲಿ ಸರ್ವಥಾ ಬಿಟ್ಟು ವ್ಯವಹಾರದಲ್ಲಿ ಮಾತ್ರ ಉಪಯೋಗಿಸುತ್ತಿರುವ ಕೆಲವು ಸಂಜ್ಞೆಗಳಿದ್ದರೆ ಅಂತಹ ಸಂಜ್ಞೆಗಳನ್ನು

ಲೋಕವ್ಯವಹಾರದಿಂದಲೂ ಸಂಸ್ಕೃತ ವ್ಯಾಕರಣಕಾರರ ಸಂಕೇತಗಳಿಂದಲೂ ತಿಳಿದುಕೊಳ್ಳ ಬೇಕೆಂಬುದು ಉಭಯತ್ರರಿಗೂ ಸಮವಾಗಿರುವುದು. ಮತ್ತು **ದರ್ಪಣ-ಶಾಸನಕಾರ**ರಿಬ್ಬರೂ ತಾವು ಆವಾವ ಸಂಜ್ಞೆಯನ್ನು ನಿಮಿತ್ತ ಮಾಡಿಕೊಂಡು ಕಾರ್ಯವನ್ನು ವಿಧಿಸುವರೋ ಅಂತಹ ಸಂಜ್ಞೆಗಳನ್ನು ಮಾತ್ರ ಅಂಗೀಕರಿಸಿರುವುದಲ್ಲದೆ ಸಂಸ್ಕೃತ ವ್ಯಾಕರಣಕಾರರು ಹೇಳುವ ಎಲ್ಲಾ ಸಂಜ್ಞೆಗಳನ್ನೂ ಹೇಳುವುದಿಲ್ಲ. ಆದುದರಿಂದ 'ಸಂಜ್ಞಾಪ್ರಕರಣ' ವಿಷಯದಲ್ಲಿ ಪ್ರಾಚೀನ-ನವೀನ ರಿಗೆ ಭೇದ ಹೇಳುವುದಕ್ಕೆ ಆಗುವದಿಲ್ಲ. ಹೀಗೆಯೆ **ಶಾಸನಕಾರ**ನು ಹೇಳುವ ಪರಿಭಾಷಾಪ್ರಕರಣವು **ದರ್ಪಣಕಾರ**ನಿಗೆ ಇಲ್ಲವೆಂದು ತಿಳಿಯಬೇಕು.

## ‖ ಅಥ ಪರಿಭಾಷಾಪ್ರಕರಣಂ ‖

**ಅವತಾರಿಕೆ ೨೨**

ಇದುವರೆಗೂ ಈ ಶಾಸ್ತ್ರದಲ್ಲಿ ಸಾಮಾನ್ಯವಾಗಿ ಉಪಯುಕ್ತವಾದ ಸಂಜ್ಞೆಗಳನ್ನು ಬೋಧಿಸುವ ಸೂತ್ರಗಳನ್ನು ಹೇಳಿ, ಮಧ್ಯದಲ್ಲಿ ಪ್ರಸಂಗವಶದಿಂದ 'ಸ್ವರಸಂಜ್ಞೆಯನ್ನು ಉಪಜೀವಿಸಿಕೊಂಡು ಬರುವ 'ಸ್ವರಸ್ಯ ‖ ೪ ‖' ಎಂಬ ಪರಿಭಾಷಾ ಸೂತ್ರವನ್ನು ಹೇಳಿ, ಈಗ ಎಲ್ಲಾ ಕಡೆಯುಲ್ಲಿಯೂ ಉಪಯುಕ್ತಗಳಾದ ಪರಿಭಾಷಾ ಸೂತ್ರಗಳನ್ನೂ ಹೇಳಲು ಪರಿಭಾಷಾಪ್ರಕರಣವೆಂಬೊಂದು ಪ್ರಕರಣವನ್ನೆ **ಶಾಸನಕಾರ**ನು ಪ್ರಾರಂಭಿಸುತ್ತಾನೆ. ಅದರಲ್ಲಿ ಮೊದಲು ಆದೇಶ ವಿಧಾಯಕ ಸೂತ್ರಗಳಲ್ಲಿ ವ್ಯವಸ್ಥಾಪಕಗಳಾದ ಪರಿಭಾಷೆಗಳನ್ನು ಹೇಳುತ್ತಾನೆ. ಅವುಗಳಲ್ಲಿ ಇದು ಮೊದಲನೆಯ ಪರಿಭಾಷೆ :

**ಸೂತ್ರಂ ‖ ಷಷ್ಠ್ಯಾಃ ಸ್ಥಾನೇಽಂತ್ಯಸ್ಯ ‖ ೨೨ ‖**

**ಅರ್ಥ ‖ ಆದೇಶವನ್ನು ವಿಧಿಸುವ ಸೂತ್ರಗಳಲ್ಲಿ ಷಷ್ಠ್ಯಂತ ಪದವು ಉಚ್ಚರಿಸಲ್ಪಟ್ಟಿರುವುದು. ಅಲ್ಲಿ ವಿಧಿಸಲ್ಪಡುವ ಆದೇಶವು ಆ ಸೂತ್ರದಲ್ಲಿ ಹೇಳಿರುವ ಷಷ್ಠ್ಯಂತ ಪದದಿಂದ ಬೋಧ್ಯವಾದ ಪ್ರಯೋಗಸ್ಥವಾದ ಶಬ್ದವಾವುದೋ ಅದರ ಅಂತ್ಯವಾದ ವರ್ಣದ ಸ್ಥಾನದಲ್ಲಿ ಆ ಆದೇಶವು ಬರುವುದೆಂದು ತಿಳಿಯಬೇಕು.**

**ಉದಾಹರಣೆ** ‖ '**ಸಖ್ಯುರದಾಯಾ** ‖ ೧೨೮ ‖ **ಊಷ್ಮಾದೀನಾಂ** ‖ ೧೨೦ ‖' ಮೊದಲಾದ ಸೂತ್ರಗಳೇ ಈ ಪರಿಭಾಷೆಗೆ ಉದಾಹರಣೆಗಳಾಗಿರುವುವು. ಇಲ್ಲಿ 'ಸಖ್ಯುಃ, ಊಷ್ಮಾದೀನಾಂ' ಎಂಬಿವು ಷಷ್ಠ್ಯಂತಗಳಾಗಿ ಉಚ್ಚರಿಸಲ್ಪಟ್ಟಿರುವುದರಿಂದ ಇವುಗಳಿಂದ ಬೋಧ್ಯವಾದ ಪ್ರಯೋಗಸ್ಥ 'ಸಖಿ' ಶಬ್ದದ ಅಂತ್ಯವರ್ಣಕ್ಕೂ 'ಊಷ್ಮಾದಿ' ಶಬ್ದಗಳ ಅಂತ್ಯ ವರ್ಣಗಳಿಗೂ ಆ ಸೂತ್ರಗಳಿಂದ ವಿಧಿಸಲ್ಪಡುವ 'ಅತ್, ಆಯ, ಎ' ಎಂಬ ಆದೇಶಗಳು ಬಂದು 'ಸಖಂ, ಸಖಾಯಂ, ಊಷ್ಮೆ' ಮೊದಲಾದ ಶಬ್ದಗಳು ಸಿದ್ಧಿಸುವುವು. ಹೀಗೆಯೇ ಆದೇಶ-ವಿಧಾಯಕ ಸೂತ್ರಗಳಲ್ಲೆಲ್ಲ ಊಹಿಸಿಕೊಳ್ಳಬೇಕು.

**ವಿಚಾರ ೨೨**

ಈ ಸೂತ್ರದಲ್ಲಿ 'ಷಷ್ಠ್ಯಾಃ, ಸ್ಥಾನೇ, ಅಂತ್ಯಸ್ಯ ಎಂಬ ಮೂರು ಪದಗಳಿರುವುವು. ಇವುಗಳಲ್ಲಿ 'ಷಷ್ಠ್ಯಾಃ' ಎಂಬುದು ಷಷ್ಠೀವಿಭಕ್ತಿ ಪ್ರತ್ಯಯವನ್ನು ಬೋಧಿಸುವುದರಿಂದ ಇದು

" **ಪ್ರತ್ಯಯಗ್ರಹಣೇ ಯಸ್ಮಾತ್ಸವಿಹಿತಸ್ತದಾದೇಸ್ತದಂತಸ್ಯ ಗ್ರಹಣಂ** " ಎಂಬ ಸಂಸ್ಕೃತ ವ್ಯಾಕರಣ ಕಾರರು ಅಂಗೀಕರಿಸಿರುವ ಪರಿಭಾಷೆಯಿಂದ ತದಂತಬೋಧಕವಾಗುವುದು. ಆದುದರಿಂದ 'ಷಷ್ಠ್ಯಾಃ' ಎಂಬುದಕ್ಕೆ 'ಷಷ್ಠ್ಯಂತಸ್ಯ' ಎಂದು ಅರ್ಥವಾಗುವುದು. ಈ ಶಾಸ್ತ್ರದಲ್ಲಿ ಹೇಳಿರುವ ಷಷ್ಠ್ಯಂತಪದಕ್ಕೆ ಕಾರ್ಯವಿಧಾನವು ಸಂಭವಿಸುವುದಿಲ್ಲವಾದುದರಿಂದ ಲಕ್ಷಣಾರ್ಥವನ್ನು ಸ್ವೀಕರಿಸಿ 'ಷಷ್ಠ್ಯಂತಸ್ಯ' ಎಂಬುದಕ್ಕೆ 'ಷಷ್ಠ್ಯಂತಪದಬೋಧ್ಯಸ್ಯ' ಎಂದು ಅರ್ಥವನ್ನು ಹೇಳಬೇಕು. ಹೀಗೆ ಹೇಳುವುದರಿಂದ ಪ್ರಯೋಗಸ್ಥವಾದ ಶಬ್ದಗಳಿಗೆ ಆದೇಶಗಳು ಬರುವುವೆಂದು ಫಲಿತವಾಗುವುದು. ಇಲ್ಲಿ 'ಸ್ಥಾನೇ' ಎಂದರೆ ಪ್ರಸಂಗವು; ಪ್ರಸಂಗವೆಂದರೆ ಪ್ರಸಕ್ತಿ' ಪ್ರಸಕ್ತಿಯೆಂದರೆ ಉಚ್ಚಾರಣ ಪ್ರಾಕ್ಕಾಲಿಕಾವಸ್ಥಾವಿಶೇಷವೆಂದು ತಾತ್ಪರ್ಯವು. 'ಷಷ್ಠ್ಯಂತಾರ್ಥಸ್ಯ' ಎಂಬುದು 'ಅಂತ್ಯಸ್ಯ' ಎಂಬುದಕ್ಕೆ ಅವಯವಾವಯವಿಭಾವ ಸಂಬಂಧದಿಂದ ವಿಶೇಷಣವು. 'ಅಂತ್ಯಸ್ಯ' ಎಂಬುದು ನಿವರ್ತ್ಯನಿವರ್ತಕಭಾವರೂಪ ಸಂಬಂಧದಿಂದ 'ಸ್ಥಾನೇ' ಎಂಬುದಕ್ಕೆ ವಿಶೇಷಣವು. ಇಲ್ಲಿ 'ಸ್ಥಾನೇ' ಎಂಬ ಪದವನ್ನು ಹೇಳಿರುವುದರಿಂದಲೆ ಈ ಪರಿಭಾಷೆ ಆದೇಶವಿಧಿವ್ಯವಸ್ಥಾಪಕವೆಂದು ತೋರುವುದು. ತಥಾಚ ಸ್ಥಾನ್ಯಾದೇಶಭಾವರೂಪ ಸಂಬಂದಾರ್ಥದಲ್ಲಿರುವ ಷಷ್ಠ್ಯಂತಕ್ಕೆ ವಿಧೀಯಮಾನವಾದ ಕಾರ್ಯವು ಆ ಷಷ್ಠ್ಯಂತ ಪದಬೋಧ್ಯವಾದ ಶಬ್ದದ ಅಂತ್ಯವರ್ಣಸ್ಥಾನದಲ್ಲಿ ಬರುವುದು. ಎಂದರೆ ಅಂತ್ಯವರ್ಣೋಚ್ಚಾರಣ ಪ್ರಸಕ್ತಿಯಿರಲು ಅದನ್ನು ಬಿಟ್ಟು ಆಯಾ ಸೂತ್ರದಲ್ಲಿ ವಿಧೇಯವಾದುದನ್ನು ಉಚ್ಚರಿಸಬೇಕೆಂದು ತಾತ್ಪರ್ಯವು.

ಸಂಸ್ಕೃತ ವ್ಯಾಕರಣದಲ್ಲಿ:– '**ಷಷ್ಠೀ ಸ್ಥಾನೇ ಯೋಗಾ || ೧-೧-೪೯ ||**' ಎಂದು ಸೂತ್ರವನ್ನು ಮಾಡಿ ಆದೇಶ ವಿಧಾಯಕವಾದ ಸೂತ್ರಗಳಲ್ಲಿ ಹೇಳಿರುವ ಷಷ್ಠೀ ವಿಭಕ್ತಿಯರ್ಥವು ಅನಿಶ್ಚಿತವಾಗಿದ್ದರೆ ಅಲ್ಲಿ 'ಸ್ಥಾನೇ' ಎಂಬುದಕ್ಕೆ ಸಂಬಂಧ ಮಾಡಿಕೊಳ್ಳಬೇಕೆಂದು ಅರ್ಥವನ್ನು ಹೇಳಿ, ಅಂತಹ ಸ್ಥಲಗಳಲ್ಲಿ ಅಂತ್ಯವರ್ಣಕ್ಕೆ ಆದೇಶವು ಬರುವುದಕ್ಕೆ '**ಅಲೋಽಂತ್ಯಸ್ಯ || ೧-೧-೫೨ ||**' ಎಂದು ಬೇರೆ ಸೂತ್ರವನ್ನು ಮಾಡಿರುವರು. ಇಲ್ಲಿ ಆಯೆರಡು ಸೂತ್ರಗಳ ಅರ್ಥವು '**ಷಷ್ಠ್ಯಾಃ ಸ್ಥಾನೇಽಂತ್ಯಸ್ಯ**' ಎಂಬ ಒಂದು ಸೂತ್ರದಿಂದಲೆ ಸಿದ್ಧಿಸುವುದರಿಂದ ಇದೆ ಅದಕ್ಕಿಂತಲೂ ಲಘುಭೂತವಾದ ಉಪಾಯವಾಗಿರುವುದು. **ದರ್ಪಣಕಾರ** ಮೊದಲಾದ ಕನ್ನಡ ವ್ಯಾಕರಣಕಾರರು ಇಂತಹ ಸಂಕೇತಗಳನ್ನು ಇಟ್ಟುಕೊಂಡಿಲ್ಲ. ಅದು ಕಾರಣದಿಂದ ಅವರಲ್ಲಿ ಪರಿಭಾಷಾಪ್ರಕರಣವೆಂಬ ಪ್ರಕರಣವೂ ಇಲ್ಲ.

**ಅವತಾರಿಕೆ ೨೩**

ಹಿಂದಿನ ಸೂತ್ರದಿಂದ ಈ ಶಾಸ್ತ್ರದಲ್ಲಿ ವಿಧಿಸಲ್ಪಡುವ ಆದೇಶಗಳು ಅಂತ್ಯವರ್ಣಕ್ಕೆ ಬರುವುವೆಂದು ಸಾಮಾನ್ಯವಾಗಿ ಹೇಳಲ್ಪಟ್ಟಿತು. ಹೀಗೆ ಹೇಳಲು '**ಒಳಃ ಶಲ್ಲಿಃ || ೨೭೭ ||**' ಇತ್ಯಾದಿ ಕೆಲವು ಸೂತ್ರಗಳಿಂದ ವಿಧಿಸಲ್ಪಡುವ 'ಶಲ್ಲಿ' ಮೊದಲಾದ ಆದೇಶಗಳೂ ಅಂತ್ಯ ವರ್ಣಕ್ಕೆ ಪ್ರಾಪ್ತವಾಗಲು 'ಗೃಹದಲ್ಲಿ, ಮನೆಯಲ್ಲಿ' ಮೊದಲಾದ ಲಕ್ಷ್ಯಗಳು ಸಿದ್ಧಿಸುವುದಿಲ್ಲವೆಂದು ಅದಕ್ಕೆ ಅಪವಾದವನ್ನು ಹೇಳುತ್ತಾನೆ.

**ಸೂತ್ರಂ || ಶಿತ್ ಸರ್ವಸ್ಯ || ೨೩ ||**

**ಅರ್ಥ || ಶ ಕಾರೇತ್ಸಂಜ್ಞಕವಾದುದು ಆವ ಷಷ್ಠ್ಯಂತಕ್ಕೆ ವಿಧಿಸಲ್ಪಡುವುದೊ ಆ ಷಷ್ಠ್ಯಂತ ದಿಂದ ಬೋಧ್ಯವಾದ ಶಬ್ದ ಸಮುದಾಯಕ್ಕೇ ಬರುವುದು — ಎಂದರೆ ಹಿಂದಿನ ಸೂತ್ರದಲ್ಲಿ ಹೇಳಿರುವಂತೆ ಅಂತ್ಯವರ್ಣಕ್ಕೆ ಬರುವುದಿಲ್ಲವೆಂದು ತಾತ್ಪರ್ಯವು.**

**ಉದಾಹರಣೆ** || ' **ಒಳಃ ಶಲ್ಲಿಃ ||೨೭೭|| ಒಳ್ಯಶ್ಚಾತೋ ದಿಗರ್ಥಾಚ್ಛಲ್ ಚ || ೨೮೦ ||** ' ಮೊದಲಾದ ಶ ಕಾರೇತ್ಸಂಜ್ಞಕ ಪದಗಳುಳ್ಳ ಸೂತ್ರಗಳೇ ಇದಕ್ಕೆ ಉದಾಹರಣೆಗಳಾಗಿರುವುವು. ಆದುದರಿಂದ ಆ ಸೂತ್ರಗಳಿಂದ ವಿಧಿಸಲ್ಪಡುವ ' **ಶಲ್ಲಿ, ಶಲ್** ' ಎಂಬ ಆದೇಶಗಳು ' ಒಳ್ ' ಎಂಬ ಸಮುದಾಯದ ಸ್ಥಾನದಲ್ಲಿಯೆ ಬಂದು ' ಗೃಹದಲ್ಲಿ, ಮನೆಯಲ್ಲಿ, ಮೂಡಲ್, ಪಡುವಲ್ ' ಮೊದಲಾದ ರೂಪಗಳು ಸಿದ್ಧಿಸುವುವು.

**ವಿಚಾರ ೨೩**

ಈ ಶಾಸ್ತ್ರದಲ್ಲಿ ಷಷ್ಠ್ಯಂತಪದ ಬೋಧ್ಯವಾದುದಕ್ಕೆ ವಿಧಿಸಲ್ಪಡುವ ಆದೇಶವು ಭಾವರೂಪವೆಂತಲೂ ಅಭಾವರೂಪವೆಂತಲೂ ಎರಡು ಬಗೆಯಾಗಿರುವುದು. ಅವುಗಳಲ್ಲಿ ಭಾವರೂಪವೆಂದರೆ ಒಂದರ ಸ್ಥಾನದಲ್ಲಿ ಬೇರೊಂದನ್ನು ಉಚ್ಚರಿಸುವುದು; ಅಭಾವರೂಪವೆಂದರೆ ಮೊದಲಿದ್ದುದನ್ನು ಉಚ್ಚರಿಸದೆ ಬಿಡುವುದು. ಇದಕ್ಕೆ ' **ಲೋಪ** ' ವೆಂದು ವ್ಯವಹಾರವುಂಟು. ಈ ಪರಿಭಾಷೆಯು ಈ ಉಭಯರೂಪವಾದ ಆದೇಶಗಳನ್ನು ವಿಧಿಸುವ ಸೂತ್ರಗಳಿಗೂ ವ್ಯವಸ್ಥಾಪಕವಾದುದು. ಆದುದರಿಂದ ' **ಒಳಃ ಶಲ್ಲಿಃ, ಸಖ್ಯುರದಾಯಾ** ' ಮೊದಲಾದ ಭಾವರೂಪಾದೇಶಗಳ ಮಧ್ಯದಲ್ಲಿ ಶ ಕಾರೇತ್ಸಂಜ್ಞಕವಾದುದು ಆವುದೊ ಅದು ಪೂರ್ವಸೂತ್ರದಲ್ಲಿ ಹೇಳಿರುವಂತೆ ಅಂತ್ಯವರ್ಣಕ್ಕೆ ಬರುವುದಿಲ್ಲ; ಸಮುದಾಯಕ್ಕೆ ಬರುವುದು—ಎಂದು ತಿಳಿಯಬೇಕು. ಹೀಗೆ ' **ಶ್ಲುಬವ್ಯಯಸ್ಯ || ೨೪೭ ||** ' ಮೊದಲಾದ ಸೂತ್ರಗಳಿಂದ ವಿಹಿತವಾದ ' **ಶ್ಲುಪ್** ' ಮೊದಲಾದ ಅಭಾವರೂಪಾದೇಶಗಳ ವಿಷಯದಲ್ಲಿಯೂ ಊಹಿಸಿಕೊಳ್ಳಬೇಕು.

ಈ ಪರಿಭಾಷೆಯನ್ನು ಅಂಗೀಕರಿಸಿರುವುದರಿಂದ ' ಗೃಹ ' ಶಬ್ದದ ಮೇಲೆ ಅಧಿಕರಣಾರ್ಥದಲ್ಲಿ ' ಒಳ್ ' ಎಂಬ ಸಪ್ತಮೀವಿಭಕ್ತಿಯನ್ನು ಮಾಡಲು ಅದಕ್ಕೆ ' **ಒಳಃ ಶಲ್ಲಿಃ** ' ಎಂಬ ಸೂತ್ರದಿಂದ ವಿಧಿಸಲ್ಪಡುವ ' **ಶಲ್ಲಿ** ' ಎಂಬಾದೇಶವು ' ಶಿತ್ ' ಆದುದರಿಂದ ಪೂರ್ವದಿಂದ ಅಂತ್ಯವಾದ ಳ ಕಾರಕ್ಕೆ ಬಾರದೆ ಸಮುದಾಯಕ್ಕೆ ಬಂದು ' ಗೃಹ, ಅಲ್ಲಿ ' ಎಂದು ಇರಲು ತೃತೀಯಾ ವಿಭಕ್ತಿ ಮೊದಲಾದ ವಿಭಕ್ತಿಪ್ರತ್ಯಯವು ಪರವಾಗಲು ' **ದಗಿವಮಾದೌ ನಪಿ || ೨೬೧ ||** ' ಎಂಬ ಸೂತ್ರದಿಂದ ದ ಆಗಮವನ್ನು ' ಗೃಹ ' ಎಂಬ ಪ್ರಕೃತಿಯ ಅಂತ್ಯಕ್ಕೆ ಮಾಡಲು ' ಗೃಹದಲ್ಲಿ ' ಎಂದು ಸಿದ್ಧಿಸುವುದು. ಹೀಗೆಯೆ ' ಮನೆಯಲ್ಲಿ ' ಮೊದಲಾದ ರೂಪಗಳ ಸಿದ್ಧಿಯನ್ನು ಆಯಾ ಸೂತ್ರ ಪರ್ಯಾಲೋಚನೆಯಿಂದ ಊಹಿಸಿಕೊಳ್ಳುವುದು. ' ಅರಮೆ ಕಂಡಂ ' ಮೊದಲಾದ ಪ್ರಯೋಗಗಳಲ್ಲಿ ಸುಬಂತತ್ವರೂಪಪದತ್ವಸಂಪಾದನಾರ್ಥವಾಗಿ ಅವ್ಯಯಗಳ ಮೇಲೆ ಮಾಡಿದ ಸುಪ್-ವಿಭಕ್ತಿ ಪ್ರತ್ಯಯಗಳಿಗೆ — ' **ಶ್ಲುಬವ್ಯಯಸ್ಯ || ೨೪೭ ||** ' ಎಂಬ ಸೂತ್ರದಿಂದ ವಿಹಿತವಾದ **ಲೋಪವೆ** ಅಭಾವರೂಪಕ್ಕೆ ಉದಾಹರಣೆಯೆಂದು ತಿಳಿಯಬೇಕು.

ಈ ಸೂತ್ರದಲ್ಲಿ ' ಶಿತ್ ' ಸರ್ವಾದೇಶವಾಗುವುದೆಂದು ಹೇಳಿರುವುದರಿಂದ ' **ಎದಾತಃ ಸ್ತ್ರಿಯಾಂ || ೧೧೮ ||** ' ಮೊದಲಾದ ಸೂತ್ರಗಳಿಂದ ವಿಧಿಸಲ್ಪಡುವ ' ಎತ್ ' ಮೊದಲಾದ ' ಶಿತ್ ' ಅಲ್ಲದ ಆದೇಶಗಳ ವಿಷಯದಲ್ಲಿ ಪೂರ್ವಸೂತ್ರವೆ ವ್ಯವಸ್ಥಾಪಕವಾಗುವುದರಿಂದ ' ಮಾಲೆ, ಬಾಲೆ ' ಮೊದಲಾದ ಪ್ರಯೋಗಗಳಲ್ಲಿ ವಿಧಿಸಲ್ಪಡುವ ಆದೇಶಗಳು ಅಂತ್ಯ ವರ್ಣದ ಸ್ಥಾನದಲ್ಲಿ ಬಂದು ರೂಪಸಿದ್ಧಿಯನ್ನು ಮಾಡುವುವು — ಎಂದು ತಿಳಿಯಬೇಕು.

**ಅವತಾರಿಕೆ ೨೪**

ಹಿಂದಿನ ಸೂತ್ರದಲ್ಲಿ ಶ ಕಾರೇತ್ಸಂಜ್ಞಕವಾದ ಆದೇಶವು ಸಮುದಾಯಕ್ಕೆ ಬರುವುದು-ಎಂದು ಹೇಳಿರುವುದರಿಂದ ತದತಿರಿಕ್ತವಾದ ಆದೇಶಗಳೆಲ್ಲ ' **ಷಷ್ಠ್ಯಾಃ ಸ್ಥಾನೇಽಂತ್ಯಸ್ಯ ||೨೨||** ' ಎಂಬ ಸೂತ್ರದಿಂದ ಅಂತ್ಯವರ್ಣಸ್ಥಾನದಲ್ಲಿ ಬರುವುವು ಎಂದು ತೋರುವುದು. ಆದರೆ ಇದರಂತೆ ತಿಙ್ ಪ್ರತ್ಯಯಗಳಿಗೆ ವಿಧಿಸುವ ಆದೇಶವೂ ಅದ್ವಾದಿಗಣ ಪಠಿತವಾದ ಶಬ್ದಗಳಿಗೆ ವಿಧಿಸುವ ಆದೇಶವೂ ಅಂತ್ಯ ವರ್ಣಕ್ಕೆ ಪ್ರಸಕ್ತವಾಗುವುದು. ಆದುದರಿಂದ ಅದಕ್ಕೆ ಅಪವಾದಾಂತರವನ್ನು ಹೇಳುತ್ತಾನೆ.

**ಸೂತ್ರಂ || ತಿಙದ್ವಾದೇಃ || ೨೪ ||**

**ಅರ್ಥ || ತಿಙ್ ಪ್ರತ್ಯಯಗಳ ಸ್ಥಾನದಲ್ಲಿಯೂ ಅದ್ವಾದಿಗಣಪಠಿತವಾದ — ಅದು, ಇದು, ಉದು, ಅವುದು, ಎಲ್ಲ, ಪೆಱತು, ಎಂಬ ಶಬ್ದಗಳ ಸ್ಥಾನದಲ್ಲಿಯೂ ವಿಹಿತವಾದ ಆದೇಶಗಳು ಆ ಸಮುದಾಯಕ್ಕೆಲ್ಲ ಬರುವುವು.**

**ಉದಾಹರಣೆ ||** ' **ನಪ್ಯುದುಃ || ೪೫೪ || ಅರಃ || ೪೫೭ ||** ' ಎಂಬ ಸೂತ್ರಗಳಿಂದ ' ಅಮ್ ' ಪ್ರತ್ಯಯಸ್ಥಾನದಲ್ಲಿ ವಿಧಿಸುವ ' ಉದು ' ಎಂಬ ಆದೇಶವೂ ' ಅರ್ ' ಪ್ರತ್ಯಯಸ್ಥಾನದಲ್ಲಿ ವಿಧಿಸುವ ' ಉವು ' ಎಂಬ ಆದೇಶವೂ ಶ ಕಾರೇತ್ಸಂಜ್ಞಕವಾಗಿಲ್ಲದಿದ್ದರೂ ' **ಷಷ್ಠ್ಯಾಃ ಸ್ಥಾನೇಽಂತ್ಯಸ್ಯ** ' ಎಂಬುದನ್ನು ಬಾಧಿಸಿ ' ಅಮ್, ಅರ್ ' ಎಂಬ ತಿಙ್ಪ್ರತ್ಯಯ ಸ್ಥಾನದಲ್ಲ ಬರುವುದರಿಂದ ' ಮಾಡಿದುದು, ಕೂಡಿದುದು; ಮಾಡಿದುವು, ಕೂಡಿದುವು ' ಮೊದಲಾದ ತಿಙನ್ತರೂಪಗಳು ಸಿದ್ಧಿಸುವುವು. ಹೀಗೆಯೆ — ' **ಆದೀದೂದದ್ವಿದೂದೋಃ || ೩೭೦ ||** ' ಎಂಬ ಸೂತ್ರದಿಂದ ' ಅದು, ಇದು, ಉದು ' ಎಂಬ ಶಬ್ದಗಳಿಗೆ ವಿಧಿಸುವ ಆ ಕಾರ ಈ ಕಾರ ಊ ಕಾರಾದೇಶಗಳೂ ' **ಅವುದೋರಾರ್ || ೧೭೪ ||** ಎಂಬ ಸೂತ್ರದಿಂದ ' ಅವುದು ' ಶಬ್ದಕ್ಕೆ ವಿಧಿಸುವ ' ಆರ್ ' ಎಂಬ ಆದೇಶವೂ ಅದ್ವಾದಿಗಳೆಲ್ಲಕ್ಕೂ ಬಂದು ಕ್ರಮವಾಗಿ ' ಆ ಮಾಟಕ್ಕೆ, ಈ ಮಾಟಕ್ಕೆ, ಊ ಮಾಟಕ್ಕೆ; ಆರಂ, ಆರಿಂ ' ಮೊದಲಾದ ರೂಪಗಳು ಸಿದ್ಧಿಸುವುವು.

**ವಿಚಾರ ೨೪**

ಇಲ್ಲಿ ' ತಿಙ್ ' ಎಂದರೆ ಧಾತುಗಳಮೇಲೆ ವಿಧಿಸುವ ಆಖ್ಯಾತಪ್ರತ್ಯಯಗಳೆಂದೂ ' ಅದ್ವಾದಿ ' ಯೆಂದರೆ ' ಅದು, ಇದು, ಉದು, ಅವುದು, ಎಲ್ಲ, ಪೆಱತು ' ಎಂದು ಗಣಪಠಿತವಾದ ಶಬ್ದಗಳೆಂದೂ ತಿಳಿಯಬೇಕು. ಇವುಗಳಲ್ಲಿಯೂ ' ಅಮ್, ಅರ್, ಅಯ್, ಇರ್, ಎನ್, ಎವು ' ಎಂಬ ತಿಙ್ಪ್ರತ್ಯಯಗಳಾರರ ಸ್ಥಾನದಲ್ಲಿಯೂ ಆದೇಶಗಳನ್ನು ಈ ಶಾಸ್ತ್ರದಲ್ಲಿ ಹೇಳಿರುವುದರಿಂದ ತಿಙ್ ವಿಷಯದಲ್ಲಿ ಎಲ್ಲಕ್ಕೂ ಉದಾಹರಣೆಗಳು ದೊರೆಯುವುವು. ಅವಾವುವೆಂದರೆ — ' ಮಾಡಿದುದು,

ಮಾಡಿದುವು, ನಂಬಿದಪ್ಪೋ, ಬೆಸಸಿಂ, ಪೂಜಿಸುವೆಂ, ಗೆಯ್ವಂ' ಎಂದು ಮೊದಲಾದ ಆಖ್ಯಾತಾಂತಗಳನ್ನು ಊಹಿಸಿಕೊಳ್ಳಬೇಕು.

ಅದ್ವಾದಿಗಳ ವಿಷಯದಲ್ಲಿ — 'ಅದು, ಇದು, ಉದು, ಆವುದು' ಎಂಬ ನಾಲ್ಕು ಶಬ್ದಗಳಿಗೆ ಮಾತ್ರ ಆದೇಶಗಳನ್ನು ವಿಧಿಸಿರುವುದರಿಂದ ಆ ನಾಲ್ಕು ಶಬ್ದಗಳಿಗೆ ಮಾತ್ರ ಉದಾಹರಣೆಗಳು ದೊರೆಯುವುವಲ್ಲದೆ 'ಎಲ್ಲ, ಪೆಱತು' ಶಬ್ದಗಳಿಗೆ ದೊರೆಯುವುದಿಲ್ಲವೆಂದು ಶಾಸ್ತ್ರಪರ್ಯಾಲೋಚನೆಯಿಂದ ತಿಳಿಯುವುದು.

**ಅವತಾರಿಕೆ ೨೫**

ಇದುವರೆಗೂ ಆದೇಶವಿಧಾಯಕ ಸೂತ್ರಗಳಲ್ಲಿ ವ್ಯವಸ್ಥಾಪಕವಾದ ಮೂರು ಪರಿಭಾಷಾ ಸೂತ್ರಗಳು ಹೇಳಲ್ಪಟ್ಟುವು. ಈಗ ಆಗಮವಿಧಾಯಕ ಸೂತ್ರಗಳಲ್ಲಿ ವ್ಯವಸ್ಥಾಪಕವಾದ ಪರಿಭಾಷಾ ಸೂತ್ರವು ಹೇಳಲ್ಪಡುವುದು.

**ಸೂತ್ರಂ || ಕಿದಂತ್ಯಃ || ೨೫ ||**

**ಅರ್ಥ || ಕ ಕಾರೇತ್ಸಂಜ್ಞಕವಾದುದು ಆವ ಶಬ್ದಕ್ಕೆ ವಿಧಿಸಲ್ಪಡುವುದೊ ಅದು ಆ ಶಬ್ದಕ್ಕೆ ಅಂತ್ಯಾವಯವವಾಗಿ ಬರುವುದು ಎಂದು ತಿಳಿಯುವುದು.**

**ಉದಾಹರಣೆ** 'ಮುನಿ + ಈತಂ, ಯತಿ + ಇಂದಂ, ವಧು + ಇಂ, ಪಿತೃ + ಇಂ,' ಮೊದಲಾದ ಲಕ್ಷ್ಯಗಳಲ್ಲಿ ಸ್ವರಕ್ಕೆ ಸ್ವರ ಪರವಾಗಿರಲು '**ಯಕ್ ಸ್ವರೇ ಸ್ವರಸ್ಯ** || **೩೫** || **ರಾವೋರ್ವಕ್** || **೩೭** ||' ಎಂಬ ಸೂತ್ರಗಳಿಂದ ವಿಧಿಸಲ್ಪಡುವ — ಯಕ್, ವಕ್ ಎಂಬೀ ಆಗಮುಗಳು ಪೂರ್ವಸ್ವರದ ಅಂತ್ಯಾವಯವವಾಗಿ ಬರುವುದರಿಂದ 'ಮುನಿಯೀತಂ, ಯತಿಯಿಂದಂ, ವಧುವಿಂ, ಪಿತೃವಿಂ' ಮೊದಲಾದ ರೂಪಗಳು ಸಿದ್ಧಿಸುವುವೆಂದು **ತಿಳಿಯಬೇಕು**.

**ವಿಚಾರ ೨೫**

ಈ ಶಾಸ್ತ್ರದಲ್ಲಿ ಆದೇಶಗಳನ್ನು ವಿಧಿಸುವ ಸೂತ್ರಗಳಲ್ಲಿ ಹೇಗೆ ಷಷ್ಠ್ಯಂತ ಪದಗಳನ್ನುಚ್ಚರಿಸಿರುವುದೋ ಹಾಗೆ **ಆಗಮ**ವಿಧಾಯಕ ಸೂತ್ರಗಳಲ್ಲಿಯೂ ಷಷ್ಠ್ಯಂತ ಪದಗಳನ್ನುಚ್ಚರಿಸಿರುವುದು. ಆದರೂ ವಿಧೇಯವು ಎಲ್ಲಿ ಕ ಕಾರೇತ್ಸಂಜ್ಞಕವಾಗಿರುವುದೊ ಅಲ್ಲಿ ಅದು ಆಗಮವೆಂದು ತಿಳಿಯಬೇಕು. ಉಳಿದುದು ಆದೇಶವೆಂದು ತಿಳಿಯುವುದು. ಆದುದರಿಂದಲೆ ಇದು ಆದೇಶದಂತೆ 'ಸ್ಥಾನಿ' ಯನ್ನು ತಳ್ಳಿ ತಾನು ಬರುವುದಿಲ್ಲ; ಮೊದಲಿದ್ದ ವರ್ಣಕ್ಕೆ ಅವಯವವಾಗಿ ನಿಲ್ಲುವುದೆಂದು ತಾತ್ಪರ್ಯವು.

**ಅವತಾರಿಕೆ ೨೬**

ಹಿಂದೆ ಕೇವಲ ಆದೇಶಗಳಿಗೆ ಉಪಕಾರಕವಾದ ಪರಿಭಾಷಾ ಸೂತ್ರಗಳನ್ನೂ ಕೇವಲ ಆಗಮಕ್ಕೆ ಸಾಧಕವಾದ ಸೂತ್ರವನ್ನೂ ಹೇಳಿದನು. ಈಗ ಆದೇಶಾಗಮಪ್ರತ್ಯಯ ಸಾಧಾರಣವಾದ ಪರಿಭಾಷಾ ಸೂತ್ರವನ್ನು ಹೇಳುತ್ತಾನೆ.

**ಸೂತ್ರಂ || ತಸ್ಮಿನ್ನಿತಿ ನಿರ್ದಿಷ್ಟೇ ಪೂರ್ವಸ್ಯ || ೨೬ ||**

**ಅರ್ಥ ||** **ಈ ವ್ಯಾಕರಣ ಶಾಸ್ತ್ರದಲ್ಲಿ ಸಪ್ತಮ್ಯಂತ ಪದವನ್ನುಚ್ಚರಿಸಿ ವಿಧಿಸಲ್ಪಡುವ ಕಾರ್ಯವು ಆ ಸೂತ್ರೋಪಾತ್ತ ಸಪ್ತಮ್ಯಂತ ಪದದಿಂದ ಬೋಧ್ಯವಾಗಿ ಉದಾಹರಣೆಗಳಲ್ಲಿರುವುದಕ್ಕಿಂತಲೂ ಅವ್ಯವಹಿತ ಪೂರ್ವದಲ್ಲಿರುವುದಕ್ಕೆ ಬರುವುದೆಂದು ತಿಳಿಯಬೇಕು.**

**ಉದಾಹರಣೆ || ' ಯಣ್ ಸ್ವರೇ ಸ್ವರಸ್ಯ || ೪೫ || ಅತ ಓಷ್ಠ್ಯೇ || ೪೮ || '** ಮೊದಲಾದ ಸೂತ್ರಗಳಲ್ಲಿ — ' ಸ್ವರೇ, ಓಷ್ಠ್ಯೇ ' ಮೊದಲಾದ ಸಪ್ತಮ್ಯಂತ ಪದಗಳನ್ನುಚ್ಚರಿಸಿ ಯಗಾದಿಗಳು ಸ್ವರಾದಿಗಳಿಗೆ ವಿಧಿಸಲ್ಪಡುವುವು. ಅವು ಆಯಾ ಸೂತ್ರೋಪಾತ್ತವಾದ ಸಪ್ತಮ್ಯಂತ ಪದಗಳಿಂದ ಬೋಧ್ಯವಾದ — ' ಮುನಿಯೀತಂ, ಸತಿಯಿವಳ್, ಪತಿಯೀತಂ ಆವೂರ್, ಆವೊಲೆ ' ಮೊದಲಾದ ಲಕ್ಷ್ಯಗಳಲ್ಲಿರುವ ಸ್ವರಾದಿಗಳಿಗೆ ಅವ್ಯವಹಿತಪೂರ್ವದಲ್ಲಿರುವ ' ಮುನಿ ' ಮೊದಲಾದ ಶಬ್ದಗಳ ಇಕಾರಾದಿಗಳಿಗೆ ಆ ಯಗಾದಿಗಳು ಬಂದು ರೂಪಸಿದ್ಧಿಯನ್ನುಂಟು ಮಾಡಿಕೊಡುವುವೆಂದು ತಿಳಿಯಬೇಕು.

**ವಿಚಾರ ೨೬**

ಈ ಸೂತ್ರದಲ್ಲಿ ' ತಸ್ಮಿನ್ ' ಎಂಬುದು ಸರ್ವನಾಮ ಶಬ್ದವಾದುದರಿಂದಲೂ ಸರ್ವನಾಮ ಶಬ್ದಗಳು ಬುದ್ಧಿಸ್ಥವಾಚಕಗಳಾಗಿರುವುವು — ಎಂದು ಪ್ರಾಚೀನರೆಲ್ಲ ಒಪ್ಪಿರುವುದರಿಂದಲೂ ವಿಧಿ-ಸೂತ್ರಗಳಲ್ಲಿ ಹೇಳಿರುವ ನಿಖಿಲಸಪ್ತಮ್ಯಂತ ಬೋಧಕವಾಗಿರುವುದು. ಆದುದರಿಂದಲೆ ಪ್ರಾಚೀನರು —

**' ಪ್ರಕ್ರಾನ್ತಪ್ರಸಿದ್ಧಾನುಭೂತಾರ್ಥಸ್ತಚ್ಛಬ್ದೋ ಯಚ್ಛಬ್ದೋಪಾದಾನಂ ನಾಪೇಕ್ಷತೇ '**

ಎಂದು ಹೇಳಿರುವಂತೆ ಯಚ್ಛಬ್ದಾಕಾಂಕ್ಷೆಯು ಇಂತಹ ಸಂದರ್ಭದಲ್ಲಿ ಬರುವುದಿಲ್ಲವೆಂದು ತಿಳಿಯಬೇಕು. ಇಲ್ಲಿ ' ಇತಿ ' ಶಬ್ದವನ್ನು ಹೇಳಿರುವುದರಿಂದ —

**' ಇತಿಶಬ್ದಃ ಪದಾರ್ಥವಿಪರ್ಯಾಸಕೃತ್ '**

ಎಂಬ ಪ್ರಾಚೀನರ ವಚನಾನುಸಾರವಾಗಿ ' ತಸ್ಮಿ ' ಎಂಬುದು ಸಪ್ತಮ್ಯಂತ ಪದಬೋಧಕವಾಗಿದ್ದರೂ ತದರ್ಥಪರವಾಗುವುದು. ' ನಿರ್ದಿಷ್ಟೇ' ಎಂಬುದಕ್ಕೆ 'ವರ್ಣಾಂತರಾವ್ಯವಹಿತೋಚ್ಚಾರಣ ವಿಷಯೀಭೂತೇ ' ಎಂದು ಅರ್ಥವಾಗುವುದು. ಇದು ಆ ಸಪ್ತಮ್ಯಂತ ಪದಬೋಧ್ಯವಾದುದಕ್ಕೆ ವಿಶೇಷಣವು. ಅದರಂತೆ ಸಪ್ತಮ್ಯಂತೋಚ್ಚಾರಿತ ಪದಬೋಧ್ಯವಾದುದು ವರ್ಣಾಂತರಾವ್ಯವಹಿತೋಚ್ಚಾರಣ ವಿಷಯೀಭೂತವಾಗಿರಲು ವಿಧೀಯಮಾನ ಕಾರ್ಯವು ಆ ಸಪ್ತಮ್ಯಂತ ಪದಬೋಧ್ಯವಾದುದಕ್ಕಿಂತಲೂ ಅವ್ಯವಹಿತಪೂರ್ವವಾಗಿರುವುದಕ್ಕೆ ಬರುವುದೆಂದು ಅರ್ಥವಾಗುವುದು. ಆದುದರಿಂದ ಈ ಶಾಸ್ತ್ರದಲ್ಲಿ ಸಪ್ತಮ್ಯಂತ ಪದವನ್ನು ಹೇಳಿರಲು ಆ ಸಪ್ತಮ್ಯಂತ ಪದವು ಅಧಿಕರಣಾರ್ಥದಲ್ಲಿ ಸಪ್ತಮೀ ವಿಭಕ್ತಿಯನ್ನು ವಿಧಿಸಿರುವುದರಿಂದ ಅಧಿಕರಣಾರ್ಥಕವಾಗುವುದು. ಆ ಅಧಿಕರಣವು — ಔಪಶ್ಲೇಷಿಕ, ವೈಷಯಿಕ, ವ್ಯಾಪಕ, ಸಮೀಪಗತ ಎಂದು ನಾಲ್ಕು ಬಗೆಯಾಗಿರುವುದೆಂದು ಪ್ರಾಚೀನರು —

**ಔಪಶ್ಲೇಷಿಕವೈಷಯಿಕವ್ಯಾಪಕಾಸತ್ತಿಭೇದತಃ**
**ಚತುರ್ಧಾಽಽಧಾರ ಆಖ್ಯಾತಃ ಕಟಾಕಾಶತಿಲಾ ನದೀ**

ಎಂಬ ಶ್ಲೋಕದಿಂದ ಸೂಚಿಸಿರುವರು. ಪ್ರಕೃತದಲ್ಲಿ ಶ್ರೂಯಮಾಣವಾದ ಸಪ್ತಮಿಯು ಔಪಶ್ಲೇಷಿಕವೂ ಅಲ್ಲ, ವೈಷಯಿಕವೂ ಅಲ್ಲ, ಅಭಿವ್ಯಾಪಕವೂ ಅಲ್ಲ, ಪರಿಶೇಷನ್ಯಾಯದಿಂದ ಸಾಮೀಪ್ಯಾರ್ಥಕವು ಎಂದು ಹೇಳಬೇಕು. ಅಂತಹ ಸಾಮೀಪ್ಯವು ದೇಶಕೃತವಾಗಿಯೂ ಕಾಲಕೃತವಾಗಿಯೂ ಸಂಭವಿಸುವುದು. ಮತ್ತು ಪೂರ್ವಕ್ಕೆ ಅಥವಾ ಪರಕ್ಕೆ ವ್ಯವಹಿತವಾಗಿಯೆ ಅವ್ಯವಹಿತವಾಗಿಯೆ ಎಂಬ ಸಂಶಯವೂ ಉಂಟಾಗುವುದು. ಇಂತಹ ಸಂಶಯಗಳನ್ನು ಪರಿಹರಿಸಲು ಸಪ್ತಮೀ ನಿರ್ದೇಶದಿಂದ ಷಷ್ಠ್ಯಂತಕ್ಕೆ ವಿಧೀಯಮಾನವಾದ ಕಾರ್ಯವು ವರ್ಣಾಂತರಾವ್ಯವಹಿತವಾಗಿ ಆ ಸಪ್ತಮ್ಯಂತ ಪದಬೋಧ್ಯವಾದುದಕ್ಕೆ ಪೂರ್ವದಲ್ಲಿ ಬರುವುದೆಂದು ಫಲಿತಾರ್ಥವನ್ನು ವರ್ಣಿಸಿರುತ್ತದೆ.

**ಅವತಾರಿಕೆ ೨೭**

ಪೂರ್ವದಂತೆ ವಿಧಿಸೂತ್ರಗಳಲ್ಲಿ ಪಂಚಮ್ಯಂತವನ್ನು ನಿರ್ದೇಶಿಸಿದ್ದರೆ ಅಲ್ಲಿ ವ್ಯವಸ್ಥಾಪಕವಾದ ಪರಿಭಾಷೆಯನ್ನು ಭಟ್ಟಾಕಳಂಕದೇವನು ಹೇಳುತ್ತಾನೆ.

**ಸೂತ್ರಂ || ತಸ್ಮಾದುತ್ತರಸ್ಯ || ೨೭ ||**

**ಅರ್ಥ || ಆವ ಸೂತ್ರಗಳಲ್ಲಿ ಪಂಚಮ್ಯಂತ ಪದವನ್ನುಚ್ಚರಿಸಿರುವುದೂ ಆ ಸೂತ್ರದಿಂದ ವಿಧಿಸಲ್ಪಡುವ ಕಾರ್ಯವು ಆ ಪಂಚಮ್ಯಂತ ಪದಬೋಧ್ಯವಾದುದಕ್ಕಿಂತಲೂ ಅವ್ಯವಹಿತಪರದಲ್ಲಿರುವುದಕ್ಕೆ ಬರುವುದು ಎಂದು ತಿಳಿಯಬೇಕು.**

**ಉದಾಹರಣೆ ||** 'ದೀರ್ಘಾದೃತೋ ರುರದ್ವಾದೇಃ || ೪೦ ||' ಎಂಬ ಸೂತ್ರದಲ್ಲಿ 'ದೀರ್ಘಾತ್' ಎಂದು ಪಂಚಮ್ಯಂತವನ್ನು ಹೇಳಿ ಋ ಕಾರಕ್ಕೆ 'ರು' ಎಂಬಾದೇಶವನ್ನು ವಿಧಿಸಿರುವುದರಿಂದ ಆ 'ರು' ಎಂಬಾದೇಶವು ಆ 'ದೀರ್ಘಾತ್' ಎಂಬ ಪಂಚಮ್ಯಂತಪದ ಬೋಧ್ಯವಾದ, 'ಆ ಋಷಿ, ಈ ಋತು' ಮೊದಲಾದ ಲಕ್ಷ್ಯಗಳಲ್ಲಿರುವ ಆ ಕಾರ ಈ ಕಾರಗಳಿಗಿಂತಲೂ ಅವ್ಯವಹಿತಪರದಲ್ಲಿರುವ ಋ ಕಾರಕ್ಕೆ ಆ 'ರು' ಎಂಬಾದೇಶವು ಬಂದು 'ಆ ರುಷಿ, ಈ ರುತು' ಎಂದು ಸಿದ್ಧಿಸುವುದು. ಹೀಗೆಯೇ '**ರೋ ದ್ವಿರ್ವ್ಯಂಜನಸ್ಯಾಹಾದೇಃ || ೬೫ ||**' ಎಂಬ ಸೂತ್ರದಲ್ಲಿಯೂ 'ರಃ' ಎಂಬುದು ಪಂಚಮ್ಯಂತವಾದುದರಿಂದ ರೇಫಾತ್ಪರವಾದ ವ್ಯಂಜನಕ್ಕೆ ದ್ವಿರ್ಭಾವವು ಬಂದು 'ಇವರ್ಬ್ಬಂದರ್, ಅವರ್ಪ್ಪೇದರ್' ಮೊದಲಾದ ಪ್ರಯೋಗಗಳು ಸಿದ್ಧಿಸುವುವು.

**ವಿಚಾರ ೨೭**

ಪೂರ್ವ ಸೂತ್ರದಂತೆ ಈ ಸೂತ್ರದಲ್ಲಿಯೂ ನಿರ್ದಿಷ್ಟ ಪದವನ್ನು ಸಂಬಂಧಿಸುವುದರಿಂದ ವರ್ಣಾಂತರಾವ್ಯವಹಿತೋತ್ತರಕ್ಕೆ ಆ ಕಾರ್ಯವು ಬರುವುದೆಂದರ್ಥವಾಗುವುದು. 'ಇತಿ' ಶಬ್ದವನ್ನು ಸಂಬಂಧಿಸಿರುವುದರಿಂದ ಆ ಪಂಚಮ್ಯಂತ ಪದಬೋಧ್ಯವಾದುದಕ್ಕಿಂತಲೂ ಪರದಲ್ಲಿರುವುದಕ್ಕೆಂದು ಅರ್ಥವಾಗುವುದು. 'ಉತ್ತರಸ್ಯ' ಎಂದು ಹೇಳಿರುವುದರಿಂದ ಆ ಕಾರ್ಯವು ಆ ಪಂಚಮ್ಯಂತ ಪದಬೋಧ್ಯವಾದುದಕ್ಕಿಂತಲೂ ಪೂರ್ವದಲ್ಲಿರುವುದಕ್ಕೆ ಬರುವದಿಲ್ಲವೆಂದರ್ಥವಾಗುವುದು. ಆದುದರಿಂದಲೆ ವೃತ್ತಿಯಲ್ಲಿ ಪರದಲ್ಲಿರುವುದಕ್ಕೇ ಬರುವುದೆಂದು ನಿರ್ಧಾರಣಾರ್ಥವನ್ನು ಸೂಚಿಸಿರುವುದು. ತಥಾಚ ಪಂಚಮೀ ನಿರ್ದೇಶ ಮಾಡಿ ಆವ ಸೂತ್ರದಿಂದ ಆವ ಕಾರ್ಯವು ವಿಧಿಸಲ್ಪಡುವುದೋ ಆ ಕಾರ್ಯವು ಆ ಪಂಚಮ್ಯಂತ ಪದಬೋಧ್ಯವಾದುದಕ್ಕಿಂತಲೂ

ವರ್ಣಾಂತರಗಳಿಂದ ಅವ್ಯವಹಿತವಾದುದಕ್ಕೇ ಬರುವುದೆಂದು ಫಲಿತಾರ್ಥವಾಗುವುದು. ಇದೇ ಅರ್ಥವನ್ನು **ಪಾಣಿನಿ** ವ್ಯಾಕರಣದಲ್ಲಿಯೂ — '**ತಸ್ಮಾದಿತ್ಯುತ್ತರಸ್ಯ || ೧-೧-೬೭ ||**' ಎಂಬ ಸೂತ್ರದಿಂದ ಸೂಚಿಸಿರುವುದು.

**ಅವತಾರಿಕೆ ೨೮**

ಈ ವ್ಯಾಕರಣ ಶಾಸ್ತ್ರದಲ್ಲಿ ಆವುದಾದರೂ ಒಂದು ಶಬ್ದಕ್ಕೆ ಒಂದು ಕಾರ್ಯವು ವಿಧಿಸಲ್ಪಡುವುದು. ಅಂತಹ ಸಂದರ್ಭಗಳಲ್ಲಿ ಕೆಲವೆಡೆ ಸ್ಥಾನಿಯಾಗಲಿ ನಿಮಿತ್ತವಾಗಲಿ ವಿಶೇಷಣಗಳಿಲ್ಲದೆ ಕೇವಲವಾಗಿ ನಿರ್ದೇಶಿಸಲ್ಪಡುವುದು. ಕೆಲವೆಡೆ ವಿಶೇಷಣವಿಶಿಷ್ಟವಾಗಿ ನಿರ್ದೇಶಿಸಲ್ಪಡುವುದು. ಅಂತಹ ಸೂತ್ರಗಳಲ್ಲಿ ಆವುದನ್ನು ಆವುದಕ್ಕೆ ವಿಶೇಷಣಮಾಡಿ ವಿಶೇಷ್ಯಕ್ಕೆ ಕಾರ್ಯವು ವಿಧಿಸಲ್ಪಡುವುದೋ ಅಲ್ಲಿ ಆ ವಿಶೇಷಣವು ಆ ವಿಶೇಷಣಾಂತ ಶಬ್ದಕ್ಕೆ ಬೋಧಕವಾಗುವುದೆಂದು ಹೇಳುತ್ತಾನೆ.

**ಸೂತ್ರಂ || ಯೇನ ವಿಧಿಸ್ತದಂತಸ್ಯ || ೨೮ ||**

**ಅರ್ಥ || ಆವ ಸೂತ್ರದಲ್ಲಿ ಆವುದನ್ನು ವಿಶೇಷಣ ಮಾಡಿ ಕಾರ್ಯವು ವಿಧಿಸಲ್ಪಡುವುದೋ ಆ ಸೂತ್ರದಲ್ಲಿ ಆ ವಿಶೇಷಣವು ವಿಶೇಷಣವೇ ಅಂತದಲ್ಲಿರುವ ಶಬ್ದವನ್ನು ಬೋಧಿಸುವುದು.**

**ಉದಾಹರಣೆ** || '**ಜಾತಿಶಬ್ದಾದಿತಿಃ** || ೧೯೦ ||' ಎಂಬ ಸೂತ್ರದಲ್ಲಿ 'ಅತಃ' ಎಂಬುದನ್ನು 'ಜಾತಿಶಬ್ದಾತ್' ಎಂಬುದಕ್ಕೆ ವಿಶೇಷಣ ಮಾಡಿ 'ಇತಿ' ಪ್ರತ್ಯಯವು ವಿಧಿಸಲ್ಪಡುವುದು. ಅಲ್ಲಿ ಆ 'ಇತಿ' ಪ್ರತ್ಯಯವು ಅ ಕಾರವೇ ಅಂತದಲ್ಲಿ ಉಳ್ಳ ಶಬ್ದಕ್ಕೆ ಪರವಾಗಿ ಬರುವುದು ಎಂದರ್ಥವಾಗುವುದರಿಂದ 'ಬ್ರಾಹ್ಮಣ, ಶೂದ್ರ, ಕ್ಷತ್ರಿಯ, ಅರಸ, ಗಾಣಿಗ, ಒಕ್ಕಲಿಗ, ಅಸಗ, ಕನ್ನಡಿಗ, ಕೊಂಕಣಿಗ' ಮೊದಲಾದ ಅಕಾರಾಂತ ಜಾತಿವಾಚಕ ಶಬ್ದಗಳ ಮೇಲೆ '**ಇತಿ**' **ಪ್ರತ್ಯಯವು** ಬಂದು — 'ಬ್ರಾಹ್ಮಣಿತಿ, ಶೂದ್ರಿತಿ, ಕ್ಷತ್ರಿಯಿತಿ, ಅರಸಿತಿ, ಗಾಣಿಗಿತಿ, **ಒಕ್ಕಲಿಗಿತಿ**, ಅಸಗಿತಿ, ಕನ್ನಡಿಗಿತಿ, ಕೊಂಕಣಿಗಿತಿ' ಮೊದಲಾದುವು ಸಿದ್ಧಿಸುವುವು. ಹೀಗೆಯೇ— '**ಕೃತೋಽಞುರುತಃ** || ೨೬೬ ||' ಎಂಬ ಸೂತ್ರದಲ್ಲಿಯೂ 'ಉತಃ' ಎಂಬುದು 'ಕೃತಃ' ಎಂಬುದಕ್ಕೆ ವಿಶೇಷಣ ಮಾಡಿ 'ಅಞು' ಎಂಬಾದೇಶವನ್ನು ವಿಧಿಸುವುದರಿಂದ ಅದು ಉ ಕಾರಾಂತವಾದ **ಕೃತ್ ಪ್ರತ್ಯಯ**ವಾವುದೊ ತದಂತವಾದ 'ಮಾಳ್ಪುದು, ನೋಳ್ಪುದು' ಎಂಬ ಶಬ್ದಗಳಿಗೆ ತೃತೀಯೆ ಮೊದಲಾದ ವಿಭಕ್ತಿ ಪ್ರತ್ಯಯವು ಪರವಾಗಿರಲು 'ಅಞು' ಎಂಬಾದೇಶವು ಬಂದು ಮಾಳ್ಪದಞಿಂ, ನೋಳ್ಪದಞಿಂ ಮೊದಲಾದುವು ಸಿದ್ಧಿಸುವುವು. ಇದೇ ರೀತಿಯಾಗಿ ವಿಶೇಷಣವಿರುವ ಸೂತ್ರಗಳಲ್ಲೆಲ್ಲಾ ಊಹಿಸಿಕೊಳ್ಳಬೇಕು.

**ವಿಚಾರ ೨೮**

ಈ ಶಾಸ್ತ್ರದಲ್ಲಿ ಒಂದಕ್ಕೆ ಒಂದು ಕಾರ್ಯವು ವಿಧಿಸಲ್ಪಡುವುದು. ಅಲ್ಲಿ ಸ್ಥಾನಿಯಾಗಲಿ ನಿಮಿತ್ತವಾಗಲಿ ಕೆಲವು ಸೂತ್ರಗಳಲ್ಲಿ ಇತರಸಂಬಂಧವಿಲ್ಲದ ಕೇವಲವಾಗಿ ನಿರ್ದೇಶಿಸಲ್ಪಡುವುದು; ಕೆಲವು ಸೂತ್ರಗಳಲ್ಲಿ ವಿಶೇಷಣಾಂತರವಿಶಿಷ್ಟವಾಗಿ ನಿರ್ದೇಶಿಸಲ್ಪಡುವುದು. ತಥಾಚ ಎಲ್ಲಿ ಸ್ಥಾನಿಯಾಗಲಿ, ನಿಮಿತ್ತವಾಗಲಿ, ವಿಶೇಷಣವಿಶಿಷ್ಟವಾಗಿ ನಿರ್ದೇಶಿಸಲ್ಪಡುವುದೋ, ಎಲ್ಲಿ ಆವ ವಿಶೇಷಣದಿಂದ ವಿಶೇಷ್ಯಕ್ಕೆ ಕಾರ್ಯವು ವಿಧಿಸಲ್ಪಡುವುದೊ, ಅಲ್ಲಿ ಆ ವಿಶೇಷಣವು ತದಂತಕ್ಕೆ ಗ್ರಾಹಕ

ವಾಗುವುದು — ಎಂಬರ್ಥವು ಈ ಸೂತ್ರದಿಂದ ಸೂಚಿತವಾಗುವುದು. ಈ ಸೂತ್ರದಲ್ಲಿ ಹೇಳಿರುವ ವಿಧಿಶಬ್ದವು — 'ವಿಧೀಯತ ಇತಿ ವಿಧಿಃ' ಎಂಬ ವ್ಯುತ್ಪತ್ತಿಯನ್ನು ಮಾಡಲು ಕರ್ಮಾರ್ಥಕ ಪ್ರತ್ಯಯಾಂತವಾದುದರಿಂದ ಈ ಶಾಸ್ತ್ರದಲ್ಲಿ ವಿಧಿಸಲ್ಪಡುವ ಕಾರ್ಯ ಸಾಮಾನ್ಯಪರವಾಗಿ ರುವುದು. ಸೂತ್ರದಲ್ಲಿ 'ಯೇನ' ಎಂದು ಹೇಳಿರುವುದರಿಂದ ಆ ಕಾರ್ಯವು ವಿಶೇಷಣಕ್ಕೆ ಬರು ವುದಿಲ್ಲವೆಂದು ತಿಳಿಯಬೇಕು. ಸಂಸ್ಕೃತ ವ್ಯಾಕರಣದಲ್ಲಿಯೂ ಇದೇ ರೀತಿಯಾಗಿ **ಪಾಣಿನಿ** ಸೂತ್ರ ವನ್ನು ಹೇಳಿದ್ದರೂ ಅಲ್ಲಿ ವಿಶೇಷಣಕ್ಕೂ ಕಾರ್ಯವು ಬರುವುದುಂಟೆಂದು ವ್ಯಾಖ್ಯಾನಕಾರರು ಹೇಳಿರುವರು. ಭಾಷೆಯಲ್ಲಿ ಅಂತಹ ಕಾರ್ಯವನ್ನು ವಿಶೇಷಣಕ್ಕೆ ಮಾಡಿ ಆವ ಲಕ್ಷ್ಯವನ್ನೂ ಸಾಧಿಸಬೇಕಾದುದಿಲ್ಲವಾದುದರಿಂದ ಇಲ್ಲಿ ಇಲ್ಲವೆಂದು ಹೇಳಲ್ಪಟ್ಟಿದೆ.

**ಅವತಾರಿಕೆ ೨೯**

ಹಿಂದಿನ ಸೂತ್ರದಲ್ಲಿ ಸಾಮಾನ್ಯವಾಗಿ ವಿಶೇಷಣವು ತದಂತಗ್ರಾಹಕವಾಗುವುದೆಂದು ಹೇಳಲ್ಪಟ್ಟಿತು. ಹೀಗೆ ವಿಶೇಷಣವಿರುವ ಕಡೆಯಲ್ಲೆಲ್ಲಾ ಅಂಗೀಕರಿಸಿದರೆ — '**ಗಳನೇಕತ್ವೇ ಸುಪಿ || ೨೩೨ ||**' ಮೊದಲಾದ ಸೂತ್ರಗಳಲ್ಲಿ ಅತಿವ್ಯಾಪ್ತಿ ಬರುವುದು. ಆದುದರಿಂದ ಮೇಲೆ ಹೇಳಿರುವುದಕ್ಕೆ ಸಂಕೋಚವನ್ನು ಕಲ್ಪಿಸಿಕೊಳ್ಳಬೇಕೆಂದು ಸೂಚಿಸುತ್ತಾನೆ.

**ಸೂತ್ರಂ || ಪ್ರತ್ಯಯೋಽಸಪ್ತಮ್ಯಾಂ || ೨೯ ||**

**ಅರ್ಥ || ಆವ ಸೂತ್ರದಲ್ಲಿ ಪ್ರತ್ಯಯಬೋಧಕವಾದ ಪದವು ಸಪ್ತಮ್ಯಂತ ಪದದಿಂದ ನಿರ್ದಿಷ್ಟ ವಾಗಿರುವುದೊ ಅದಕ್ಕಿಂತಲೂ ಬೇರೆ ಸೂತ್ರಗಳಲ್ಲಿ ಪ್ರತ್ಯಯವು ವಿಶೇಷಣವಾಗಿದ್ದರೆ ತದಂತಬೋಧಕ ವಾಗುವುದು.**

**ಉದಾಹರಣೆ** || '**ಅಪ್ಯಾತ್ || ೧೯೪ ||**' ಎಂಬ ಸೂತ್ರದಲ್ಲಿ 'ಅಪ್ಯಾತ್' ಎಂಬುದು ವಿಶೇಷಣವಾಗಿ ಪ್ರತ್ಯಯಬೋಧಕವಾದ ಪದವಾದುದರಿಂದ 'ಅಪ್' ಪ್ರತ್ಯಯಾಂತಕಗಳಾದ 'ನಿಡುವೆರಲ, ನಿಡುಗಣ್ಣ, ಬಡಕ, ಮುದುಕ' ಮೊದಲಾದ ಶಬ್ದಗಳ ಮೇಲೆ ಸ್ತ್ರೀಲಿಂಗ ವಿಷಯದಲ್ಲಿ 'ಇ' ಪ್ರತ್ಯಯವು ಬಂದು – 'ನಿಡುವೆರಲಿ, ನಿಡುಗಣ್ಣಿ, ಬಡಕಿ, ಮುದುಕಿ' ಮೊದಲಾದ ರೂಪಗಳು ಸಿದ್ಧಿಸುವುವು. ಹೀಗೆಯೇ — '**ಅನೆಯಸ್ಯ || ೧೮೫ ||**' ಎಂಬ ಸೂತ್ರ ದಲ್ಲಿಯೂ ಹೇಳಿದರೆ 'ಅನೆಯ' ಪ್ರತ್ಯಯಾಂತಗಳಾದ — 'ಒಂದನೆಯ, ಎರಡನೆಯ' ಮೊದ ಲಾದ ಶಬ್ದಗಳು ಸಿದ್ಧಿಸುವುವು. ಈ ಸೂತ್ರದಲ್ಲಿ 'ಅಸಪ್ತಮ್ಯಾಂ' ಎಂದು ಹೇಳಿರುವುದರಿಂದ — '**ಗಳನೇಕತ್ವೇ ಸುಪಿ || ೨೩೨ ||**' ಮೊದಲಾದ ಸಪ್ತಮ್ಯಂತವಾದ ಪ್ರತ್ಯಯಬೋಧಕ ಪದಗಳುಳ್ಳ ಸೂತ್ರಗಳಲ್ಲಿ ಆ ಪ್ರತ್ಯಯವು ತದಂತಬೋಧಕವಾಗುವುದಿಲ್ಲವೆಂದು ತಾತ್ಪರ್ಯವು.

**ವಿಚಾರ ೨೯**

ಹಿಂದಿನ ಸೂತ್ರದಲ್ಲಿ ವಿಶೇಷಣವೆಲ್ಲಾ ತದಂತಕ್ಕೆ ಗ್ರಾಹಕವಾಗುವುದೆಂದು ಹೇಳಲ್ಪಟ್ಟಿತು. ಈಗ ಕೆಲವು ಸೂತ್ರಗಳಲ್ಲಿ ಪ್ರತ್ಯಯವೂ ವಿಶೇಷಣವಾಗಿ ಹೇಳಲ್ಪಟ್ಟಿರುವುದು. ಅದೂ ಸಾಮಾನ್ಯ ವಾಗಿ ತದಂತಬೋಧಕವಾಗಬೇಕಾಗುವುದು. ಎಲ್ಲಿ ಪ್ರತ್ಯಯವು ಸಪ್ತಮ್ಯಂತವಾಗಿ ನಿರ್ದೇಶಿಸಲ್ಪ ಟ್ಟಿರುವುದೊ ಅಲ್ಲಿ ಅನಿಷ್ಟವಾಗಿರುವುದು. ಆದುದರಿಂದ ಅನಿಷ್ಟವಾದ ಸ್ಥಲವನ್ನು ಬಿಟ್ಟು ಇಷ್ಟವಾದ ಕಡೆಯಲ್ಲಿಯೇ ತದಂತಬೋಧಕವಾಗುವುದು ಎಂಬುದು ಈ ಸೂತ್ರದಿಂದ ಸೂಚಿಸಲ್ಪಡುವುದು.

ಆದುದರಿಂದ ' ಅಪ್ತ್ಯಾತ್ ॥ ೧೯೪ ॥ ' ಮೊದಲಾದ ಸೂತ್ರಗಳಲ್ಲಿ ಮಾತ್ರ ತದಂತಲಾಭ ವುಂಟೆಂದು ತಿಳಿಯಬೇಕು. ' ಗಳನೇಕತ್ವೇ ಸುಪಿ ॥ ೨೩೨ ॥ ' ಮೊದಲಾದ ಸೂತ್ರಗಳಲ್ಲಿ ' ಸುಪಿ ' ಮೊದಲಾದ ಪ್ರತ್ಯಯಬೋಧಕ ಸಪ್ತಮ್ಯಂತ ಪದಗಳು ತದಂತಬೋಧಕವಾಗುವುದಿಲ್ಲವೆಂದು ತಿಳಿಯಬೇಕು.

ಈ ಸೂತ್ರವು ಪೂರ್ವ ಸೂತ್ರದಲ್ಲಿ ಸೂಚಿಸಿದ ತದಂತ ಬೋಧನೆಗೆ ಸಪ್ತಮ್ಯಂತವಾಗಿ ಉಪಾತ್ತವಾದ ಪ್ರತ್ಯಯಬೋಧಕ ಪದವುಳ್ಳ ಸೂತ್ರದಲ್ಲಿ ತದಂತಲಾಭವಿಲ್ಲವೆಂದು ಬೋಧಿಸು ವುದರಿಂದ ' ನಿಯಮ ' ಸೂತ್ರವೆಂದು ತಿಳಿಯಬೇಕು. ಅಥವಾ ಪೂರ್ವ ಸೂತ್ರದಿಂದ ಪ್ರಾಪ್ತವಾದ ತದಂತಲಾಭಕ್ಕೆ ' ನಿಷೇಧಕ ' ವೆಂದು ಹೇಳಬೇಕು.

**ಅವತಾರಿಕೆ ೩೦**

ಪೂರ್ವದಲ್ಲಿ ಸಾಮಾನ್ಯವಾಗಿ ಬೋಧಿಸಿದ ತದಂತಲಾಭಕ್ಕೆ ಪ್ರತ್ಯಯಬೋಧಕವಾದ ಪದ ವುಳ್ಳ ಸೂತ್ರಗಳಲ್ಲಿ ವ್ಯವಸ್ಥೆ ಮಾಡಿ, ಈಗ ವರ್ಣಬೋಧಕ ಸಪ್ತಮ್ಯಂತವಾದ ವಿಶೇಷಣಗಳುಳ್ಳ ಸೂತ್ರಗಳಲ್ಲಿ ವ್ಯವಸ್ಥಾಪಕವಾದ ಪರಿಭಾಷೆಯನ್ನು ಹೇಳುತ್ತಾನೆ.

**ಸೂತ್ರಂ ॥ ಯಸ್ಮಿಂಸ್ತದಾದೇರ್ವರ್ಣಗ್ರಹಣೇ ॥ ೩೦ ॥**

**ಅರ್ಥ ॥ ಆವ ವರ್ಣಬೋಧಕವಾದ ಪದವು ಸಪ್ತಮ್ಯಂತವಾಗಿ ನಿರ್ದೇಶಿಸಿ ವಿಶೇಷಣ ಮಾಡ ಲ್ಪಡುವುದೋ ಅದು ಆ ಸಪ್ತಮ್ಯಂತ ಪದಬೋಧ್ಯವಾದ ವರ್ಣವೆ ಆದಿಯಾಗುಳ್ಳುದಕ್ಕೆ ಬೋಧಕ ವಾಗುವುದು.**

**ಉದಾಹರಣೆ** ॥ ' **ಕಕ್ಕಿ ॥ ೪೯೮ ॥** ' ಎಂಬ ಸೂತ್ರದಲ್ಲಿ ' ಕಿ ' ಎಂಬುದು ವರ್ಣಬೋಧಕ ವಾದ ಸಪ್ತಮ್ಯಂತವಾದುದರಿಂದ ಅದನ್ನು ಪ್ರತ್ಯಯಕ್ಕೆ ವಿಶೇಷಣಮಾಡಿ ವಿಧಿಸುವ ' ಕಕ್ ' ಎಂಬುದು ಕ ಕಾರಾದಿಯಾದ ಪ್ರತ್ಯಯವು ಪರವಾಗಲು ಬರುವುದು ಎಂದು ಅರ್ಥವಾಗುವುದು. ಅದರಿಂದ — ' ಅಕ್ಕುಂ, ಅಕ್ಕೆ ' ಮೊದಲಾದ ರೂಪಗಳು ಸಿದ್ಧಿಸುವುವು. ಹೀಗೆಯೇ — ' **ಣಿಗ್ದಿ ॥ ೪೭೫ ॥** ' ಮೊದಲಾದ ವರ್ಣಬೋಧಕ ಸಪ್ತಮ್ಯಂತ ವಿಶೇಷಣಗಳುಳ್ಳ ಸೂತ್ರಗಳ ಲ್ಲೆಲ್ಲಾ ಊಹಿಸಿಕೊಂಡು ಸೂತ್ರಾರ್ಥವನ್ನು ಮಾಡಲು — ' ಪಣ್ಣಿದಂ, ಪಣ್ಣಿದುದು ' ಮೊದ ಲಾದ ರೂಪಗಳೂ ಸಿದ್ಧಿಸುವುವು.

**ವಿಚಾರ ೩೦**

ಈ ಸೂತ್ರವು ' **ಯೇನ ವಿಧಿಸ್ತದಂತಸ್ಯ ॥ ೨೮ ॥** ' ಎಂಬ ಸೂತ್ರದಿಂದ ವಿಶೇಷಣ ಸಾಮಾ ನ್ಯಕ್ಕೂ ಪ್ರಾಪ್ತವಾದ ತದಂತಲಾಭಕ್ಕೆ ಬಾಧಕವಾದುದರಿಂದ ಅದಕ್ಕೆ ಇದು ಅಪವಾದ ಸೂತ್ರ ವೆಂದು ತಿಳಿಯಬೇಕು. ಆದುದರಿಂದಲೆ ಈ ಸೂತ್ರದಲ್ಲಿ ವಿಶೇಷಣಪದವು ಸಂಬಂಧಿಸಿಕೊಳ್ಳ ಬೇಕೆಂದು ತಾತ್ಪರ್ಯವಾಗುವುದು. ಸೂತ್ರದಲ್ಲಿ ' ಯಸ್ಮಿನ್ ' ಎಂಬುದು ಸಪ್ತಮ್ಯಂತ ಬೋಧಕ ವಾದ ನಿರ್ದೇಶವು. ' ವರ್ಣ ' ಶಬ್ದವು ಅಕ್ಷರವಾಚಕವಾದುದು. ' ಗ್ರಹಣೇ ' ಎಂಬುದಕ್ಕೆ ಬೋಧಕ ವೆಂಬರ್ಥವು. ಇದು ' ಯಸ್ಮಿನ್ ' ಎಂಬ ಪದಬೋಧ್ಯವಾದ ಸಪ್ತಮ್ಯಂತಕ್ಕೆ ವಿಶೇಷವು. ' ವಿಧಿಃ ' ಎಂಬುದು ಪೂರ್ವ ಸೂತ್ರದಿಂದ ಅನುವರ್ತಿಸಲ್ಪಡುವುದು. ತಥಾಚ — ವರ್ಣಬೋಧಕವಾದ ಸಪ್ತಮ್ಯಂತವು ಆವ ಸೂತ್ರದಲ್ಲಿ ವಿಶೇಷಣವಾಗಿ ಅಂಗೀಕರಿಸಲ್ಪಡುವುದೊ ಆ ಸೂತ್ರದಲ್ಲಿ ವಿಧಿ

ಸುವ ಕಾರ್ಯವು ಅಂತಹ ಸಪ್ತಮ್ಯಂತ ಪದಬೋಧ್ಯವಾದ ವರ್ಣಾದಿಯಾದುದು ಪರವಾಗಿರಲು ಬರುವುದೆಂದು ಫಲಿತವಾಗುವುದು. ಇದರಿಂದ ಪ್ರಾದುರ್ಭಾವಾರ್ಥಕವಾದ 'ಆಗು' ಧಾತುವಿನ ಮೇಲೆ ಕರ್ತ್ರರ್ಥದಲ್ಲಿ ಏಕತ್ವ ತೋರುವಾಗ ಪ್ರಥಮಪುರುಷ ಸಂಜ್ಞಕವಾದ 'ಅಮ್' ಪ್ರತ್ಯಯವನ್ನು ಮಾಡಿ, ಒಂದಕ್ಕೆ ಗುಮಾದೇಶವನ್ನೂ ಆಶೀರರ್ಥದಲ್ಲಿ ಮತ್ತೊಂದಕ್ಕೆ 'ಗತ್' ಆದೇಶವನ್ನೂ ಮಾಡಿ, ಗ ಕಾರಕ್ಕೆ ಕ ಕಾರಾದೇಶವನ್ನೂ 'ಆಗು' ಧಾತುವಿಗೆ 'ಶಕ್' ಆದೇಶವನ್ನೂ ಮಾಡಲು 'ಅಕ್ಕುಂ, ಅಕ್ಕೆ' ಎಂಬ ರೂಪಗಳು ಸಿದ್ಧಿಸುವುವು. ಹೀಗೆಯೇ ನಿಯೋಗಾರ್ಥಕವಾಗಿಯೂ ಫಲಸಂಪಾಕಾರ್ಥವಾಗಿಯೂ ಇರುವ — 'ಪಣ್' ಧಾತುವಿನ ಮೇಲೆ ಪೂರ್ವದಂತೆ 'ಅಮ್' ಪ್ರತ್ಯಯವನ್ನೂ ಭೂತಕಾಲದಲ್ಲಿ 'ದ' ಎಂಬ ವಿಕರಣ ಪ್ರತ್ಯಯವನ್ನೂ ಆ ದ ಕಾರಾದಿ ಪ್ರತ್ಯಯವು ಪರವಾಗಿದ್ದಾಗ 'ಣಿಗ್' ಆಗಮವನ್ನೂ ಮಾಡಲು 'ಪಣ್ಣಿದಂ' ಇತ್ಯಾದಿ ರೂಪಗಳು ಸಿದ್ಧಿಸುವುವು. (ಪ್ರಕ್ರಿಯಾ ಸೂತ್ರಗಳನ್ನು ಆಯಾ ಪ್ರಕರಣಗಳಿಂದ ತಿಳಿದುಕೊಳ್ಳಬೇಕು.)

ಈ ಸೂತ್ರದಲ್ಲಿ —'ಯಸ್ಮಿನ್' ಎಂದು ಹೇಳಿರುವುದರಿಂದ ಸಪ್ತಮ್ಯತಿರಿಕ್ತವಿಭಕ್ತಿನಿರ್ದೇಶ ವಿಷಯದಲ್ಲಿ ಈ ಪರಿಭಾಷೆಯು ಪ್ರವರ್ತಿಸುವುದಿಲ್ಲವೆಂದು ತಿಳಿಯಬೇಕು. ಆದುದರಿಂದ — 'ಯೋ ಜಃ' ॥ ೧೪೧ ॥' ಮೊದಲಾದ ತದತಿರಿಕ್ತ ನಿರ್ದೇಶವುಳ್ಳ ಸೂತ್ರಗಳಲ್ಲಿ ಆಯಾವರ್ಣ ಸ್ವರೂಪವನ್ನು ಮಾತ್ರ ಗ್ರಹಿಸಬೇಕಲ್ಲದೆ ಆ ವರ್ಣಾದಿಯಾದುದಕ್ಕೆ ಎಂದು ಗ್ರಹಿಸಲಾಗದು. 'ವರ್ಣಗ್ರಹಣೇ' ಎಂದು ಹೇಳಿರುವುದರಿಂದ — 'ಪನ್ನೊಂದಾ ॥ ೩೬೪ ॥' ಮೊದಲಾದ ವರ್ಣಸಮುದಾಯಾತ್ಮಕ ಶಬ್ದಗ್ರಹಣವುಳ್ಳ ಸೂತ್ರಗಳಲ್ಲಿ ತದಾದಿಯನ್ನು ಗ್ರಹಿಸುವದಿಲ್ಲವೆಂದು ತಾತ್ಪರ್ಯವಾಗುವುದು.

**ಅವತಾರಿಕೆ ೩೧**

ಇದುವರೆಗೂ ಈ ಪ್ರಕರಣದಲ್ಲಿ ಆದೇಶಾಗಮವಿಧಿಗಳಲ್ಲಿ ವ್ಯವಸ್ಥಾಪಕವಾದ ಸಾಮಾನ್ಯ ಪರಿಭಾಷೆಗಳನ್ನು ಹೇಳಿ, ಈಗ ಕೆಲವೆಡೆಗಳಲ್ಲ ಸ್ಥಾನಿಗೆ ಹೇಳಲ್ಪಟ್ಟ ಕಾರ್ಯವು ಆದೇಶದಲ್ಲಿಯೂ ಬರುವುದೆಂಬುದನ್ನು ಬೋಧಿಸಲು ಅತಿದೇಶ ಸೂತ್ರವನ್ನು ಹೇಳುತ್ತಾನೆ.

**ಸೂತ್ರಂ ॥ ಸ್ಥಾನಿವದಾದೇಶಃ ॥ ೩೧ ॥**

**ಅರ್ಥ ॥ ಆವ ಕಾರ್ಯವು ಅವುದರ ಸ್ಥಾನದಲ್ಲಿ ವಿಧಿಸಲ್ಪಡುವುದೋ ಅದೇ ಸ್ಥಾನಿಯೆಂಬುದು ವಿಧಿಸಲ್ಪಡುವುದೇ ಆದೇಶವು. ಆ ಆದೇಶವು ಸ್ಥಾನಿಯಂತಾಗುವುದು — ಎಂದರೆ ಸ್ಥಾನಿಗೆ ಹೇಳಿದ ಕಾರ್ಯವು ಆ ಸ್ಥಾನದಲ್ಲಿ ಬಂದ ಆದೇಶಕ್ಕೂ ಬರುವುದೆಂದು ತಾತ್ಪರ್ಯವು.**

**ಉದಾಹರಣೆ** ॥ 'ಮನೆಯಲ್ಲಿ, ಮೂಡಲ್' ಮೊದಲಾದ ಪ್ರಯೋಗಗಳಲ್ಲಿ 'ಒಳ್' ಪ್ರತ್ಯಯದ ಸ್ಥಾನದಲ್ಲಿ — '**ಒಳಃ ಶಲ್ಲಿಃ ॥ ೨೭೭ ॥ ಶಲ್ಬ ॥ ೨೮೦ ॥**' ಇತ್ಯಾದಿ ಸೂತ್ರಗಳಿಂದ ವಿಧಿಸಲ್ಪಟ್ಟ — 'ಅಲ್ಲಿ, ಅಲ್' ಮೊದಲಾದುವಕ್ಕೂ ಈ ಸೂತ್ರದಿಂದ ಸ್ಥಾನಿಕಾರ್ಯವನ್ನು ಅತಿದೇಶ ಮಾಡಲು ಆ ಸ್ಥಾನಿಯಲ್ಲಿರುವ ಸುಪ್ತ್ವವು ಬಂದು ತನ್ನಿಮಿತ್ತಕವಾದ — '**ಸುಪ್ತಿಙಂತಂ ಪದಂ ॥ ೧೮ ॥**' ಎಂಬ ಸೂತ್ರದಿಂದ ಪ್ರಾಪ್ತವಾದ 'ಪದ' ಸಂಜ್ಞೆಯು ಬರುವುದು. ಹೀಗೆಯೇ 'ಮಾಳ್ಪುದು, ನೋಳ್ಪುದು' ಮೊದಲಾದ ಪ್ರಯೋಗಗಳ 'ಉದು' ಎಂಬುದು ಕೃತ್ತಾದ 'ಅಚ್' ಪ್ರತ್ಯಯ ಸ್ಥಾನದಲ್ಲಿ ಬಂದಿರುವುದರಿಂದ ಅದೂ ಕೃತ್ತಾಗಿ

'**ಕೃತೋऽಱುರುತಃ || ೨೬೬ ||**' ಎಂಬ ಸೂತ್ರದಿಂದ ವಿಹಿತವಾದ '**ಅಱು**' **ಎಂಬಾದೇಶಕ್ಕೆ** ಸ್ಥಾನಿಯಾಗಿ' ಮಾಱ್ಪುದಱುಂ, ನೋಽಱ್ಪುದಱುಂ ' ಎಂಬ ರೂಪಗಳನ್ನು ಸಿದ್ಧಿಮಾಡುವುದು.

**ವಿಚಾರ ೩೧**

ಸ್ಥಾನಿಕಾರ್ಯವು ಆದೇಶದಲ್ಲಿಯೂ ಬರುವುದೆಂದು ತಿಳಿಸಲು ಈ ಸೂತ್ರವು ಮಾಡಲ್ಪಟ್ಟಿದೆ. ಇಲ್ಲಿ ಸ್ಥಾನಿಯೆಂದರಾವುದು? ಆದೇಶವೆಂದರಾವುದು? ಎಂದು ಶಂಕೆಯುಂಟಾಗಲು ಮೊದಲು ' ಸ್ಥಾನ ' ಪದದ ಅರ್ಥವನ್ನು ಹೇಳಬೇಕಾಗಿರುವುದರಿಂದ ಪ್ರಾಚೀನರು ಹೇಳಿರುವ— '**ಸ್ಥಾನಂ ಚ ಪ್ರಸಂಗಃ, ಪ್ರಸಂಗೋ ನಾಮ ಪ್ರಸಕ್ತಿಃ, ಪ್ರಸಕ್ತಿಶ್ಚ ಪ್ರಕೃತೇ: ಉಚ್ಚಾರಣ ಪ್ರಾಕ್ಕಾಲಿಕಾವಸ್ಥಾವಿಶೇಷಃ**' ಎಂಬ ವಿವರಣೆಯಿಂದ ' ಸ್ಥಾನ ' ವೆಂದರೆ ' ಪ್ರಸಕ್ತಿ ' ಯೆಂದರ್ಥವಾಗುವುದು. ಅಂತಹ ಸ್ಥಾನವುಳ್ಳದೆ ' ಸ್ಥಾನಿ ' ವೆಂಬುದು. ಇದೇ ಅಲ್ಲಲ್ಲಿ ಷಷ್ಠ್ಯಂತ ನಿರ್ದೇಶಕ್ಕೆ ವಿಷಯವಾಗಿ ಉಪದಿಷ್ಟವಾಗಿರುವುದು. ಅದಕ್ಕೆ ವಿಧೇಯವಾಗಿ ಪ್ರಥಮಾಂತ ಪದನಿರ್ದಿಷ್ಟವಾಗಿ ಭಾವರೂಪವಾದುದಾಗಲಿ ಅಭಾವರೂಪವಾದುದಾಗಲಿ ಬರುವುದು ಆದೇಶ ವೆಂಬುದು. ಇದಕ್ಕೇ ಪ್ರಾಚೀನರು ಸ್ಥಾನ್ಯಾದೇಶಭಾವವನ್ನು ಹೇಳುವರು. ಇಂತಹ ಸಂದರ್ಭ ದಲ್ಲಿಯೇ ಉಚ್ಚಾರಣ ಪ್ರಸಕ್ತವಾದ ವರ್ಣವಾಗಲಿ ವರ್ಣಸಮುದಾಯವಾಗಲಿ ನಿವೃತ್ತವಾಗಿ ಮತ್ತೊಂದು ಉಚ್ಚರಿಸಲ್ಪಡುವುದು. ಲೋಕದಲ್ಲಿಯೂ ಅವನ ಸ್ಥಾನದಲ್ಲಿ ಇವನು ಬಂದನೆಂದರೆ ಅವನಿಗೆ ಪ್ರತಿಯಾಗಿ ಬಂದನೆಂದು ತಿಳಿಯುವುದು. ಮತ್ತು ಯಾಜ್ಞಿಕಕರ್ಮದಲ್ಲಿ–' ದರ್ಭಾಣಾಂ ಸ್ಥಾನೇ ಶರೈಃ ಪ್ರಸ್ತರಿತವ್ಯಂ ' ಎಂಬ ವಾಕ್ಯದಿಂದ ದರ್ಭೆಯಿಲ್ಲದಿದ್ದರೆ ಅದಕ್ಕೆ ಪ್ರತಿಯಾಗಿ ' ಶರ ' ವೆಂಬ ತೃಣವಿಶೇಷವನ್ನುಪಯೋಗಿಸುತ್ತಾರೆ. ಅದರಂತೆ ಈ ಶಾಸ್ತ್ರದಲ್ಲಿಯೂ ಒಂದರ ಸ್ಥಾನದಲ್ಲಿ ಇನ್ನೊಂದು ಬರುವುದೆಂದರೆ ಮೊದಲಿದ್ದುದನ್ನು ಉಚ್ಚರಿಸದೆ ಅಲ್ಲಿ ವಿಧೇಯವಾದುದನ್ನು ಉಚ್ಚರಿಸಬೇಕೆಂದು ತಿಳಿಯಬೇಕು. ಹೀಗೆ ಆಗಮಸ್ಥಲಗಳಲ್ಲಿ ಇಲ್ಲ. ಅಲ್ಲಿ ಮೊದಲಿದ್ದುದರ ಜತೆಗೆ ಬೇರೆ ವರ್ಣವೂ ಸೇರುವುದೆಂದು ತಾತ್ಪರ್ಯವು.

ಲೋಕದಲ್ಲಿ ಹೇಗೆ ಗುರುಸ್ಥಾನದಲ್ಲಿ ಬಂದವನಿಗೆ ಗುರುಧರ್ಮವೆಲ್ಲಾ ಪ್ರಾಪ್ತವಾಗುವುದೋ ಹಾಗೆ ಈ ಶಾಸ್ತ್ರದಲ್ಲಿಯೂ ಆವುದರ ಸ್ಥಾನದಲ್ಲಿ ಆವುದು ಬರುವುದೋ ಅದಕ್ಕೂ ಅದರ ಧರ್ಮವು ಬರುವುದೆಂದು ತಿಳಿಸುವುದಕ್ಕಾಗಿ ಈ ಸೂತ್ರವು ಮಾಡಲ್ಪಟ್ಟಿದೆ ಎಂದು ತಿಳಿಯಬೇಕು. ಆದರೆ '**ತತ್ ಸ್ಥಾನಾಪನ್ನಸ್ತದ್ಧರ್ಮಂ ಲಭತೇ**' ಎಂದು ಪ್ರಾಚೀನರು ಹೇಳುವುದರಿಂದ ಆದೇಶದಲ್ಲಿ ಸ್ಥಾನಿಯಲ್ಲಿರುವ ಧರ್ಮಮಾತ್ರಕ್ಕೆ ಅತಿದೇಶವೇ ಅಲ್ಲದೆ ಅದರ ರೂಪಕ್ಕೆ ಅತಿದೇಶವಲ್ಲವೆಂದು ಲಕ್ಷ್ಯಾನುಸಾರಿಗಳ ವ್ಯಾಖ್ಯಾನದಿಂದ ತಿಳಿಯಬೇಕು.

ಸಂಸ್ಕೃತ ವ್ಯಾಕರಣದಲ್ಲಿ **ಪಾಣಿನಿಯು** ಇಂತಹ ಸಂದರ್ಭದಲ್ಲಿ '**ಸ್ಥಾನಿವದಾದೇಶೋಽನಲ್ವಿಧೌ || ೧-೧-೫೬ ||**' ಎಂಬ ಸೂತ್ರವನ್ನು ಹೇಳಿ ' ಸ್ಥಾನ್ಯಲಾಶ್ರಯ ' ಕಾರ್ಯಮಾಡುವಾಗ ಈ ಅತಿದೇಶವಿಲ್ಲವೆಂದು ನಿಷೇಧಿಸಿ, ಕೆಲವು ಸಂದರ್ಭದಲ್ಲಿ ' ಅಲಾಶ್ರಯ ' ಕಾರ್ಯದಲ್ಲಿಯೂ ಉಂಟೆಂದು ಹೇಳಿರುವನು. ಮತ್ತು ರೂಪಾತಿದೇಶವನ್ನೂ ಹೇಳಿರುವನು. ಅದರಂತೆ ಈ ಶಾಸ್ತ್ರ ದಲ್ಲಿ ಸ್ಪಷ್ಟವಾಗಿ ಹೇಳದಿದ್ದರೂ ಲಕ್ಷ್ಯಾನುಸಾರವಾಗಿ ವ್ಯಾಖ್ಯಾನದಿಂದ ವ್ಯವಸ್ಥೆ ಮಾಡಿಕೊಳ್ಳ ಬೇಕೆಂದು ತಾತ್ಪರ್ಯವು. ಇದು ಅತಿದೇಶ ಸೂತ್ರವಾದರೂ ಇದಕ್ಕೆ '**ಪರಿತೋವ್ಯಾಪೃತಾಂ**

**ಭಾಷಾಂ ಪರಿಭಾಷಾಂ ಪ್ರಚಕ್ಷತೇ '** ಇತ್ಯಾದಿ ಪರಿಭಾಷಾ ಲಕ್ಷಣವಿರುವುದರಿಂದ ಈ ಪ್ರಕರಣದಲ್ಲಿ ಸೇರಿಸಲ್ಪಟ್ಟಿದೆ. ಇದರಂತೆ **' ಅಪ್ರಯೋಗೀತ್ ॥ ೩೨ ॥ '** ಎಂಬ ಇತ್ಸಂಜ್ಞೆಯನ್ನು ಬೋಧಿಸುವ ಸೂತ್ರವೂ ಸೇರಿಸಲ್ಪಟ್ಟಿದೆ ಎಂದು ತಿಳಿಯಬೇಕು.

**ಅವತಾರಿಕೆ ೩೨**

ಇದುವರೆಗೂ ಈ ಪ್ರಕರಣದಲ್ಲಿ ಆಗಮಾದೇಶ ವಿಧಿಗಳಲ್ಲಿ ವ್ಯವಸ್ಥಾಪಕ ಪರಿಭಾಷೆಗಳು ಹೇಳಲ್ಪಟ್ಟವು. ಈಗ ಈ ಶಾಸ್ತ್ರದಲ್ಲಿ ವಿಧೇಯಗಳಾಗಿ ಏರ್ಪಡಿಸಿರುವ ಆಗಮ, ಪ್ರತ್ಯಯ, ಆದೇಶಗಳೆಂಬ ಮೂರರಲ್ಲಿಯೂ ಸಾಧಾರಣವಾಗಿರುವ ಇತ್ಸಂಜ್ಞೆಯನ್ನು ತಿಳಿಸಲು ಸೂತ್ರವನ್ನು ಹೇಳುತ್ತಾನೆ.

**ಸೂತ್ರಂ ॥ ಅಪ್ರಯೋಗೀತ್ ॥ ೩೨ ॥**

**ಅರ್ಥ ॥ ಈ ಶಾಸ್ತ್ರದಲ್ಲಿ ಮಾತ್ರ ಉಪದಿಷ್ಟವಾಗಿ ಪ್ರಯೋಗದಲ್ಲಿ ಕಾಣಲ್ಪಡದಿರುವ ವರ್ಣವಾವುದೋ ಅದು ಇತ್-ಸಂಜ್ಞಕವರ್ಣವೆಂದು ತಿಳಿಯುವುದು.**

**ಉದಾಹರಣೆ** ॥ **' ರಾವೋರ್ವರ್ಕ್** ॥ **೩೭** ॥ **ಒಳಃ ಶಲ್ಲಿಃ** ॥ **೨೭೭** ॥**'** ಮೊದಲಾದ ಸೂತ್ರಗಳಲ್ಲಿ ಮಾತ್ರ ಉಪದಿಷ್ಟವಾದ ಕ ಕಾರ ಶ ಕಾರಾದಿ ವರ್ಣಗಳು ' ಪಿತೃವಿಂ, ಮನೆಯಲ್ಲಿ ' ಮೊದಲಾದ ಪ್ರಯೋಗಗಳಲ್ಲಿಲ್ಲವಾದುದರಿಂದ ಅವು ಇತ್ಸಂಜ್ಞಕ ವರ್ಣಗಳೆಂದು ತಿಳಿಯಬೇಕು. ಈ ಸಂಜ್ಞೆಯು — **' ಶಿತ್ ಸರ್ವಸ್ಯ** ॥ **೨೩** ॥ **ಕಿದಂತ್ಯಃ** ॥ **೨೪** ॥ **'** ಮೊದಲಾದ ಸೂತ್ರಗಳಲ್ಲಿ ಉಪಯೋಗಿಸಲ್ಪಡುವುದು.

**ವಿಚಾರ ೩೨**

ಇಲ್ಲಿ ' ಪ್ರಯೋಗ ' ಎಂದರೆ — ಶಬ್ದದ ಉಚ್ಚಾರಣೆಯು; ಅಂತಹ ಉಚ್ಚಾರಣೆಯುಳ್ಳ ಶಬ್ದವೇ ' ಪ್ರಯೋಗಿ ' ಎಂಬುದು. ಇಂತಹ ಪ್ರಯೋಗಿಯಲ್ಲದು **' ಅಪ್ರಯೋಗಿ '** ಎಂಬುದು. ಆದುದರಿಂದ ಪ್ರಯೋಗರಹಿತವಾದ ಶಬ್ದವು ಎಂದು ' ಅಪ್ರಯೋಗೀ ' ಎಂಬ **ಶಬ್ದಕ್ಕೆ** ಅರ್ಥವಾಗುವುದು. ಆದರೆ ಪ್ರಯೋಗವಾದರೋ ಲೋಕದಲ್ಲಿಯೂ ಶಾಸ್ತ್ರದಲ್ಲಿಯೂ ಇರುವುದು. ಪ್ರಕೃತದಲ್ಲಿ ಅಪ್ರಯೋಗೀಯೆಂಬುವರಿಂದ ಉಭಯತ್ರ ಪ್ರಯೋಗಾಭಾವವು **ವಿವಕ್ಷಿತವೆ?** ಅಥವಾ ಎಲ್ಲಿಯಾದರೂ ಒಂದು ಕಡೆಯಲ್ಲಿ – ಎಂದು ವಿವಕ್ಷಿತವೆ? ಎಂದು ಶಂಕೆಯುಂಟಾಗುವುದು. ಆದುದರಿಂದ ಉಭಯತ್ರವೆಂದು ಹೇಳಿದರೆ ಸೂತ್ರಕ್ಕೇ ವೈಯ್ಯರ್ಥ್ಯ ಬರುವುದೆಂದು ಯೋಚಿಸಿ ಶಾಸ್ತ್ರದಲ್ಲಿ ಪ್ರಯುಕ್ತವಾಗಿಯೂ ಲೋಕದಲ್ಲಿ ಅಪ್ರಯುಕ್ತವಾಗಿಯೂ ಇರುವುದಾವುದೋ ಅದೇ ಈ ಸೂತ್ರದಲ್ಲಿ ' ಅಪ್ರಯೋಗೀ ' ಎಂಬ ಪದದಿಂದ ಬೋಧ್ಯವಾದುದು. ಇದೇ ಈ ಸೂತ್ರದಲ್ಲಿ ಸಂಜ್ಞೆಯಾದುದು ಎಂದು ತಿಳಿಯಬೇಕು.

ಆದರೆ ಲೋಕದಲ್ಲಿ ಅಂತಹ 'ಇತ್' ಸಂಜ್ಞಕ ವರ್ಣಗಳಿಗೆ ಪ್ರಯೋಗವೇ ಇಲ್ಲವಾದುದರಿಂದ ಸೂತ್ರದಲ್ಲಿ ಉಪದೇಶಮಾಡಿರುವುದೇ ವ್ಯರ್ಥವೆಂದು ತೋರುವುದು. ಆದಾಗ್ಯೂ ಲೋಕದಲ್ಲಿ ಅಂತಹ ವರ್ಣಗಳಿಗೆ ಅರ್ಥಬೋಧನೆಯನ್ನು ಮಾಡುವುದಕ್ಕೆ ಶಕ್ತಿಯಿಲ್ಲವಾದುದರಿಂದ ಪ್ರಯೋಗವಿಲ್ಲವೆಂದೂ ಶಾಸ್ತ್ರದಲ್ಲಿ ಮಾತ್ರ ಅವುಗಳಿಂದ ಪ್ರಯೋಜನವಿರುವುದೆಂದು ಉಪದೇಶಿಸಲ್ಪಟ್ಟಿವೆಯೆಂದೂ ತಿಳಿಯಬೇಕು. ಮತ್ತು ಶಾಸ್ತ್ರದಲ್ಲಿ ' ವಕ್ ' ಮೊದಲಾದ ಕೆಲವೆಡೆಗಳಲ್ಲಿ ಶಾಸ್ತ್ರೀಯ

ಪ್ರಯೋಜನಗಳಾವುವೂ ಇಲ್ಲದೆ ವ್ಯರ್ಥವಾದ ಕೆಲವು ವರ್ಣಗಳು ಹೇಳಲ್ಪಟ್ಟಿವೆ. ಅವು ಕೇವಲ ಸ್ಪಷ್ಟೋಚ್ಚಾರಣೆಗಾಗಿ ಹೇಳಲ್ಪಟ್ಟಿವೆಯಾದುದರಿಂದ ಅವಕ್ಕೆ 'ಇತ್' ಸಂಜ್ಞೆಯಿಲ್ಲವೆಂದೂ ತಿಳಿಯಬೇಕು. ಏವಂಚ ಎಲ್ಲಿ ಪ್ರಯೋಜನವೋ ಅಲ್ಲಿ 'ಇತ್' ಸಂಜ್ಞೆ ಬರುವುದೆಂದು ವ್ಯಾಖ್ಯಾನಗಳಿಂದ ತಿಳಿಯಬೇಕು.

ಸಂಸ್ಕೃತ ವ್ಯಾಕರಣದಲ್ಲಿಯೂ ಇದೇ ತಾತ್ಪರ್ಯವಿದ್ದರೂ ಸಂದೇಹಪರಿಹಾರಾರ್ಥವಾಗಿ ಬೇರೆ ಬೇರೆ ಕೆಲವು 'ಇತ್' ಸಂಜ್ಞಾಸೂತ್ರವನ್ನು ಹೇಳಿ, ಅದಕ್ಕೆ- '**ತಸ್ಯ ಲೋಪಃ ||೧-೩-೯||**' ಎಂಬ ಸೂತ್ರದಿಂದ ಲೋಪವನ್ನೂ ವಿಧಿಸಿರುವುದು.

ವಿಚಾರ ಮಾಡಲಾಗಿ ಈ ಸೂತ್ರವು ಸಂಜ್ಞಾ ಪ್ರಕರಣದಲ್ಲಿ ಹೇಳುವುದು ಯುಕ್ತವಾಗಿ ತೋರುವುದು. ಆದಾಗ್ಯೂ '**ಶಿತ್ ಸರ್ವಸ್ಯ || ೨೩ || ಕಿದಂತ್ಯಃ || ೨೫ ||**' ಎಂದು ಪರಿಭಾಷೆಗಳಲ್ಲಿರುವ 'ಇತ್' ಪದವು ಪ್ರಸಕ್ತವಾದುದರಿಂದ ಈ ಪ್ರಕರಣದಲ್ಲಿ ಅದನ್ನು ಸೇರಿಸಿದೆ ಎಂದು ತಿಳಿಯಬೇಕು. ಆದರೆ 'ಶಿತ್ ಸರ್ವಸ್ಯ' ಎಂಬ ಸೂತ್ರಕ್ಕೆ ಹಿಂದೆಯಾಗಲಿ 'ಕಿದಂತ್ಯಃ' ಎಂಬ ಸೂತ್ರಕ್ಕೆ ಮುಂದೆಯಾಗಲಿ ಹೇಳುವುದು ಉಚಿತವೆಂದು ತೋರುವುದು. ಆದರೆ ಈ ಸೂತ್ರವು 'ಇತ್' ಸಂಜ್ಞೆಯೊಂದನ್ನೇ ಬೋಧಿಸಲು ಮಾಡಲ್ಪಟ್ಟಿಲ್ಲ; ಮತ್ತೇನೆಂದರೆ ಅಂತಹ 'ಇತ್' ಸಂಜ್ಞಕ ವರ್ಣಕ್ಕೆ ಲೌಕಿಕ ಪ್ರಯೋಗಾಭಾವವನ್ನೂ ತಿಳಿಸುವುದಕ್ಕೆ ಮಾಡಲ್ಪಟ್ಟಿರುವುದು; ಆದುದರಿಂದ ಅತಿದೇಶಸೂತ್ರಾನಂತರದಲ್ಲಿ ಇದನ್ನು ಪಾಠಮಾಡಿರುವುದು — ಎಂದು ತಾತ್ಪರ್ಯವನ್ನು ಕಲ್ಪಿಸಿ ಸಂತೋಷಪಡಬೇಕು. ಆದುದರಿಂದ ಇದು ಕೇವಲ ಸಂಜ್ಞಾಸೂತ್ರವಲ್ಲವೆಂದು ಕೆಲವರು ಹೇಳುತ್ತಾರೆ.

**ಅವತಾರಿಕೆ ೩೩**

ಒಂದೇ ಲಕ್ಷ್ಯದಲ್ಲಿ ಒಂದೇ ಕಾಲದಲ್ಲಿ ಒಂದೇ ನಿಮಿತ್ತವಿದ್ದಾಗ ಅನೇಕ ಸೂತ್ರಗಳು ಪ್ರಸಕ್ತವಾಗಲು ತದ್ವಿಷಯದಲ್ಲಿ ವ್ಯವಸ್ಥಾಪಕವಾದ ಪರಿಭಾಷೆಯನ್ನು ಹೇಳುತ್ತಾನೆ.

**ಸೂತ್ರ || ಸ್ಪರ್ಧೇ ಪರಂ || ೩೩ ||**

**ಅರ್ಥ || ಸಮಬಲಗಳಾದ ವಿಧಿಗಳಿಗೆ ಒಂದೇ ಲಕ್ಷ್ಯದಲ್ಲಿ ಯುಗಪತ್ ಪ್ರವೃತ್ತಿಯೇ ಸ್ಪರ್ಧವೆಂಬುದು. ಅಂತಹ ಸ್ಪರ್ಧವಿರಲು ಸೂತ್ರಪಾಠ ಕ್ರಮದಲ್ಲಿ ಆವುದು ಪರವೋ ಅದು ಬಲೀಯವೆಂದು ತಿಳಿಯಬೇಕು.**

**ಉದಾಹರಣೆ ||** 'ಆ+ಊರ್, ಆ+ಉದಕಂ' ಎಂಬ ಲಕ್ಷ್ಯಗಳಲ್ಲಿ — '**ಅತ ಓಷ್ಠ್ಯೇ || ೩೮ ||**' ಎಂಬ ಸೂತ್ರದಿಂದ ವಗಾಗಮವು ಬಂದು — 'ಆವೂರ್, ಆವುದಕಂ' ಎಂಬ ರೂಪಗಳು ಸಿದ್ಧಿಸುವುವು. 'ಆ+ಅರಸಂ, ಆ+ಅಂಚೆ' ಎಂಬ ಲಕ್ಷ್ಯಗಳಲ್ಲಿ — '**ಅದೇ || ४३ ||**' ಎಂಬ ಸೂತ್ರದಿಂದ ಪ್ರಕೃತಿಭಾವವು ಬಂದು 'ಆ ಅರಸಂ, ಆ ಅಂಚೆ' ಎಂಬ ರೂಪಗಳು ಸಿದ್ಧಿಸುವುವು. 'ಆ ಔತ್ಕಂಠ್ಯಂ' ಎಂಬ ಲಕ್ಷ್ಯದಲ್ಲಿ ಔ ಕಾರವು ಕಂಠೋಷ್ಠ್ಯಸ್ಥಾನಿಕವಾಗಿದ್ದರೂ — 'ಶತೇ ಪಂಚಾಶನ್ನ್ಯಾಯ' ದಿಂದ ಔಷ್ಠ್ಯಸ್ಥಾನಿಕವೆಂದು 'ಅತ ಓಷ್ಠ್ಯೇ' ಎಂಬ ಸೂತ್ರದಿಂದ ವಿಹಿತವಾದ ವಗಾಗಮಕ್ಕೂ ಔಕಾರವು ಸಂಧ್ಯಕ್ಷರದಲ್ಲಿ ಸೇರಿರುವುದರಿಂದ ವಿಶ್ಲಿಷ್ಟಾಕಾರವತ್ತ್ವವನ್ನಂಗೀಕರಿಸಿ 'ಅದೇ' ಎಂಬ ಸೂತ್ರದಿಂದ ವಿಹಿತವಾದ ಪ್ರಕೃತಿಭಾವಕ್ಕೂ ಯುಗಪತ್

ಪ್ರವೃತ್ತಿಯುಂಟಾಗಲು 'ಆತ ಓಷ್ಠ್ಯೇ' ಎಂಬುದಕ್ಕಿಂತಲೂ 'ಆದೇ' ಎಂಬುದು ಸೂತ್ರಪಾಠ ಕ್ರಮದಲ್ಲಿ ಪರವಾದುದರಿಂದ ಪ್ರಕೃತಿಭಾವವೇ-ಬಂದು—'ಆ ಔತ್ಕಂಠ್ಯಂ' ಎಂದಾಗುವುದು. ಇಲ್ಲಿ ವಗಾಗಮ ಬರುವುದಿಲ್ಲವೆಂದು ತಾತ್ಪರ್ಯವು.

**ವಿಚಾರ ೩೩**

'ಸ್ಪರ್ಧ-ಸಂಘರ್ಷೇ' ಎಂದು ಸಂಸ್ಕೃತ ಧಾತುಪಾಠದಲ್ಲಿ ಪಠಿತವಾದ ಸಂಘರ್ಷಾರ್ಥಕ 'ಸ್ಪರ್ಧ' ಧಾತುವಿನಿಂದ ನಿಷ್ಪನ್ನವಾದ 'ಸ್ಪರ್ಧ' ಶಬ್ದಕ್ಕೆ 'ಸಂಘರ್ಷ' ವೆಂದರ್ಥವಾಗುವುದು. ಆ ಸಂಘರ್ಷವೆಂಬುಹು ಪರಾಭಿಭವೇಚ್ಛಾರೂಪವಾದುದರಿಂದ ಅನೇಕವಸ್ತ್ವಾಶ್ರಯವಾಗಿರುವುದು. ಆದುದರಿಂದ ಪ್ರಕೃತದಲ್ಲಿ ಸ್ಪರ್ಧವು ಅನೇಕ ಸೂತ್ರಗಳಿಗೆಂದು ಹೇಳಬೇಕು. ಅದರಲ್ಲಿಯೂ ಒಂದು ಪ್ರಬಲವಾಗಿ ಇನ್ನೊಂದು ದುರ್ಬಲವಾಗಿ ಇದ್ದರೆ ಪ್ರಬಲವಾದುದರಿಂದ ದುರ್ಬಲಕ್ಕೆ ಬಾಧೆಯುಂಟಾಗುವುದರಿಂದ ಅವಕ್ಕೆ ಸ್ಪರ್ಧವಿಲ್ಲ. ಆದುದರಿಂದ ಸಮಬಲಗಳಾದ ಸೂತ್ರಗಳಿಗೇ ಸ್ಪರ್ಧ ಎಂದು ಹೇಳಬೇಕು. ಇಲ್ಲಿ ಸೂತ್ರಗಳಿಗೆ ಸಮಬಲತ್ವವೆಂಬುದು ಪರಸ್ಪರ ನಿರಪೇಕ್ಷವಾದ ಲಕ್ಷ್ಯಗಳಲ್ಲಿ ಚಾರಿತಾರ್ಥ್ಯರೂಪವಾಗಿರುವುದು. ಇಂತಹ ಸೂತ್ರಗಳಿಗೆ ಒಂದೇ ಲಕ್ಷ್ಯದಲ್ಲಿ ಒಂದೇ ಕಾಲದಲ್ಲಿ ಪ್ರಸಕ್ತಿಯುಂಟಾಗಲು ಅವುಗಳಲ್ಲಿ ಪರವಾವುದೋ ಅದು ಪ್ರಬಲವು, ಪೂರ್ವ ಸೂತ್ರವು ದುರ್ಬಲವು ಎಂದು ತಿಳಿಯುವುದು.

ಬೇರೆ ಲಕ್ಷ್ಯಗಳಲ್ಲಿ ನಿರವಕಾಶಗಳಾಗಿ ಒಂದೇ ಲಕ್ಷ್ಯದಲ್ಲಿ ಯುಗಪತ್ ಪ್ರಸಕ್ತಗಳಾಗಿದ್ದರೂ ಅಂತಹ ಸೂತ್ರಗಳಿಗೆ ಸ್ಪರ್ಧವಿಲ್ಲ. ಅಂತಹ ಸಂದರ್ಭದಲ್ಲಿ—

**ಅನ್ಯತ್ರಾನವಕಾಶೌ ದ್ವಾವೇಕತ್ರಸ್ತೋ ಯದಾ ವಿಧೀ**
**ವಿರೋಧೇಽತ್ರ ವಿಕಲ್ಪಃ ಸ್ಯಾದವಿರೋಧೇ ಸಮುಚ್ಚಯಃ**

ಎಂದು ಪ್ರಾಚೀನರು ವ್ಯವಸ್ಥೆ ಮಾಡಿರುವಂತೆ ಪರಸ್ಪರವಿರೋಧವಿರುವ ಪಕ್ಷದಲ್ಲಿ ಸಮುಚ್ಚಯವಾಗಿಯೂ ಬರುವುದೆಂದು ಹೇಳಬೇಕು.

ಇದರಂತೆ ಸಮಬಲಗಳಾಗಿದ್ದರೂ ವಿಷಯಭೇದವಿರಲು ಅಂತಹ ಸೂತ್ರಗಳಿಗೂ ಪರಸ್ಪರ ಸ್ಪರ್ಧವಿಲ್ಲ. ಇದೇ ವಿಷಯವನ್ನು—

**ಸ್ವಂ ಸ್ವಂ ನಿಮಿತ್ತಮಾದಾಯ ಯಥಾ ಶಕ್ತಿ ಸ್ವಗೋಚರೇ**
**ಸ್ವಕಾರ್ಯಂ ಕುರ್ವತೋರತ್ರ ಸ್ಪರ್ಧಾ ನೈವಾವಿರೋಧತಃ**

ಎಂಬ ಶ್ಲೋಕದಿಂದ ಅಭಿಯುಕ್ತರು ಸೂಚಿಸಿರುವರು. ಆದುದರಿಂದಲೆ ಸ್ಪರ್ಧೆಯೆಂಬುದು ಸಮಾನ ವಿಷಯದಲ್ಲಿಯೆ ಎಂದು ಹೇಳಲ್ಪಟ್ಟಿದೆ. ಅಲ್ಲಿಯೂ ನಿಮಿತ್ತ ಕ್ರಮದಿಂದ ಭಿನ್ನ ಕಾಲದಲ್ಲಿ ಪ್ರವೃತ್ತಗಳಾದ ಸೂತ್ರಗಳಿಗೂ ಸ್ಪರ್ಧೆಯಿಲ್ಲವೆಂದು ತಿಳಿಯಬೇಕು. ಏವಂಚ ಉಭಯನಿಮಿತ್ತವಶಾತ್, ಸಮಬಲಗಳಾದ ಎರಡು ವಿಧಿಗಳು ಒಂದೇ ಲಕ್ಷ್ಯದಲ್ಲಿ ಪ್ರಾಪ್ತವಾದರೆ ಅಲ್ಲಿ ಆವ ವಿಧಿಯು ಮಾಡತಕ್ಕುದು—ಎಂದು ಸಂಶಯವುಂಟಾಗಲು ಪರವನ್ನು ಮಾಡಬೇಕೆಂದು ಈ ಸೂತ್ರದಿಂದ ಬೋಧಿಸಲ್ಪಡುವುದು. ಆದರೆ ಲೋಕದಲ್ಲಿ ಪೂರ್ವಪರಗಳೆಂಬಿವು ಆವುದಾದರೂ ಒಂದವಧಿಯನ್ನು ಅಪೇಕ್ಷಿಸುವುವು. ಪ್ರಕೃತದಲ್ಲಿ ಅಂತಹ ಪರತ್ವಾವಧಿಯಾವುದೆಂದರೆ ಪ್ರಕರಣ ಬಲದಿಂದ ಸೂತ್ರಪಾಠಕ್ರಮದಲ್ಲಿ ವ್ಯವಸ್ಥೆ ಮಾಡಿಕೊಳ್ಳಬೇಕೆಂದು ತಿಳಿಯಬೇಕು.

**ಪಾಣಿನಿ** ವ್ಯಾಕರಣದಲ್ಲಿಯೂ ಇಂತಹ ಸಂದರ್ಭದಲ್ಲಿ ಇದೇ ರೀತಿಯಾಗಿ ಹೇಳಬೇಕೆಂಬುದು — '**ವಿಪ್ರತಿಷೇಧೇ ಪರಂ ಕಾರ್ಯಂ || ೧-೪-೨ ||**' ಎಂಬ ಸೂತ್ರದಿಂದ ಸೂಚಿಸಲ್ಪಡುವುದು. ಆದರೆ ಸಂಸ್ಕೃತದಲ್ಲಿ ಈ ಸೂತ್ರಕ್ಕೆ ನಿಸ್ಸಂದಿಗ್ಧವಾದ ಉದಾಹರಣೆಗಳು ಹೇಗೆ ದೊರೆಯುವುವೋ ಹಾಗೆ ಭಾಷೆಯಲ್ಲಿ ದೊರೆಯುವುದಿಲ್ಲ. ಹೇಗೆಂದರೆ– ಈ ಸೂತ್ರಕ್ಕೆ 'ಆ ಔತ್ಕಂಠ್ಯಂ. ಆ ಔಗು' ಮೊದಲಾದ ಸಂಧ್ಯಕ್ಷರಗಳಿಲ್ಲದ ಪ್ರಯೋಗಗಳು ಇದಕ್ಕೆ ಉದಾಹರಣೆಯಾಗುವುದಿಲ್ಲ. ಇಲ್ಲಿ ವಗಾಗಮಕ್ಕೆ ನಿಮಿತ್ತವಾದ ಓಷ್ಠ್ಯ ವರ್ಣವಿದ್ದರೂ ಪ್ರಕೃತಿಭಾವ ನಿಮಿತ್ತವಾದ ಅವರ್ಣವಿರುವುದಿಲ್ಲ. ಆದುದರಿಂದ ಇಲ್ಲಿ ಅವರ್ಣಪರತ್ವಸಂಪಾದನಾರ್ಥವಾಗಿ ಏ ಕಾರ, ಐ ಕಾರ, ಓ ಕಾರ, ಔ ಕಾರಗಳು ಸಂಧ್ಯಕ್ಷರಗಳೆಂದಂಗೀಕರಿಸಿ ಔ ಕಾರವು ವಿಶ್ಲಿಷ್ಟಾವರ್ಣವುಳ್ಳುದರಿಂದ ಔ ಕಾರವು ಪರವಾಗಿದ್ದರೂ ಅವರ್ಣವು ಪರವಾಗಿದ್ದಂತೆ ಭಾವಿಸಿ ಪ್ರಕೃತಿಭಾವಕ್ಕೆ ಪ್ರವೃತ್ತಿಯನ್ನು ಹೇಳಬೇಕಾದ ಕ್ಲೇಶವಿರುವುದು. ಆದರೂ ಸೂತ್ರಕಾರನು ಸಂಸ್ಕೃತ ವ್ಯಾಕರಣಾಭ್ಯಾಸವಾಸನೆಯಿಂದ ಈ ಸೂತ್ರವನ್ನು ರಚಿಸಿ ಅದರ ಸಾರ್ಥಕ್ಯಕ್ಕಾಗಿ ಇಂತಹ ಕ್ಲೇಶವನ್ನಂಗೀಕರಿಸಿರುವನೆಂದು ತೋರುವುದು.

ಈ ಸೂತ್ರದಿಂದ ಸಮಬಲಗಳಾದ ವಿಧಿಗಳಲ್ಲಿ ವಿರೋಧಬಂದರೆ ವ್ಯವಸ್ಥೆ ಮಾಡಲ್ಪಟ್ಟಿತು. ಸಮಬಲಗಳಲ್ಲದ — ನಿತ್ಯಾನಿತ್ಯಾಂತರಂಗ ಬಹಿರಂಗ ಲಕ್ಷಣ ಪ್ರತಿಪದೋಕ್ತ ವಿಧಿಗಳ ವಿಷಯದಲ್ಲಿ ಬೇರೆ ಯತ್ನವಿಲ್ಲದೆ ಲೋಕನ್ಯಾಯದಿಂದಲೆ ವ್ಯವಸ್ಥೆ ಮಾಡಿಕೊಳ್ಳಬೇಕೆಂಬ ಅಭಿಪ್ರಾಯದಿಂದ ಇಲ್ಲಿ ಬೇರೆ ಸೂತ್ರವನ್ನು ಮಾಡಿಲ್ಲ. ಇದೇ ಅಭಿಪ್ರಾಯದಿಂದಲೇ ಸಂಸ್ಕೃತ ವ್ಯಾಕರಣದಲ್ಲಿಯೂ ಸೂತ್ರವನ್ನು ಮಾಡದೆ — '**ನಿತ್ಯಾನಿತ್ಯಯೋರ್ನಿತ್ಯೋ ವಿಧಿರ್ಬಲವಾನ್ || ಕೃತಾಕೃತಪ್ರಸಂಗೀಹಿ ನಿತ್ಯೋ ನಿರಪೇಕ್ಷಃ || ಕೃತೇಪ್ರಸಂಗೀ ಅಕೃತೇಚಾಪ್ರಸಂಗೀತ್ಯನಿತ್ಯಸ್ಸಾಪೇಕ್ಷಃ || ಸಾಪೇಕ್ಷನಿರಪೇಕ್ಷಯೋರ್ನಿರಪೇಕ್ಷೋ ವಿಧಿರ್ಬಲವಾನಿತಿ || ತಥಾ ಅಂತರಂಗ ಬಹಿರಂಗಯೋರಂತರಂಗೋ ವಿಧಿರ್ಬಲವಾನ್ || ಅವಯವಾಶ್ರಿತೋಽಹ್ಯಂತರಂಗಃ ಪ್ರತ್ಯಾಸನ್ನಃ || ಸಮುದಾಯಾಶ್ರಿತೋ ಬಹಿರಂಗೋ ವ್ಯಾಪ್ತಃ || ವ್ಯಾಪ್ತಪ್ರತ್ಯಾಸನ್ನಯೋಃ ಪ್ರತ್ಯಾಸನ್ನೋ ಬಲವಾನಿತಿ || ತಥಾ ಲಕ್ಷಣಪ್ರತಿಪದೋಕ್ತಯೋಃ ಪ್ರತಿಪದೋಕ್ತೋವಿಧಿರ್ಬಲವಾನ್ || ಔತ್ಸರ್ಗಿಕಃ ಸಾಮಾನ್ಯವಿಷಯೋ ಹಿ ಲಕ್ಷಣೋಕ್ತಃ ಸಾವಕಾಶಃ || ಆಪವಾದಿಕೋ ವಿಶೇಷವಿಷಯ ಇತಿ ಪ್ರತಿಪ್ರದೋಕ್ತೋ ನಿರವಕಾಶಃ || ಸಾವಕಾಶನಿರವಕಾಶಯೋಸ್ತು ನಿರವಕಾಶೋ ಬಲವಾನಿತಿ || ನಿತ್ಯಾಂತರಂಗಪ್ರತಿಪದವಿಧಯಃ ಪ್ರಬಲಾಸ್ಸಂತೋ ದುರ್ಬಲಾನಿತರಾನ್ ಬಾಧಂತೇ ||**' ಎಂದು ಹೇಳಿರುವರು. ಇದರ ಅರ್ಥವಿವರಣೆಯನ್ನು ಲಕ್ಷ್ಯಸಿದ್ಧಿಯನ್ನು ಮಾಡುವ ಸಂದರ್ಭಗಳಲ್ಲಿ ವಿವರಿಸುವೆವು. ಹೀಗೆಯೆ ನಿತ್ಯಾಂತರಂಗ ಪ್ರತಿಪದೋಕ್ತವಿಧಿಗಳಲ್ಲಿಯೂ ಉತ್ತರೋತ್ತರಪ್ರಾಬಲ್ಯವನ್ನು '**ಪರನಿತ್ಯಾಂತರಂಗಾಪವಾದಾನಾಮುತ್ತರೋತರಂ ಬಲೀಯಃ ||**' ಎಂಬ ವಚನದಿಂದ ಸೂಚಿಸಿರುವರು. ಇದೇ ಅರ್ಥವನ್ನು ಪ್ರಾಚೀನರೂ —

**ಪರಂ ಸ್ಯಾತ್ ಪೂರ್ವಪರಯೋರ್ನಿತ್ಯಂ ಸ್ಯಾತ್ಪರನಿತ್ಯಯೋಃ**
**ನಿತ್ಯಾತ್ತಥಾಂತರಂಗಂ ಸ್ಯಾತ್ತತೋಽಪ್ಯನವಕಾಶಕಂ**

ಎಂಬ ಶ್ಲೋಕದಲ್ಲಿ ಹೇಳಿರುವರು. ಇದರಿಂದ ಸೂತ್ರದಲ್ಲಿ 'ಪರಂ' ಎಂಬುದು ಇತರಕ್ಕೂ ಉಪ

ಲಕ್ಷಕವೆಂದು ತಿಳಿಯಬೇಕು. ಆದುದರಿಂದಲೆ **ಪತಂಜಲಿ** ಭಾಷ್ಯದಲ್ಲಿ— ' ಪರ ' ಶಬ್ದವು ಇಷ್ಟವಾಚಿ. ಆವುದು ಲಕ್ಷ್ಯಸಿದ್ಧಿಗೆ ಇಷ್ಟವೋ ಅದು ಬರುವುದು. ಇದು ಇಷ್ಟ, ಇದು ಇಷ್ಟವಲ್ಲ ಎಂಬುದು ಲಕ್ಷ್ಯಾನುಸಾರಿಗಳ ವ್ಯಾಖ್ಯಾನದಿಂದ ತಿಳಿಯಬೇಕು — ಎಂದು ಹೇಳಿರುವರು.

ಹೀಗೆ ಸಂಸ್ಕೃತ ವ್ಯಾಕರಣದಲ್ಲಿ ಅನೇಕಾದೇಶಗಳು ಪ್ರಸಕ್ತವಾದ ಸ್ಥಲದಲ್ಲಿ ಸದೃಶತಮವಾದುದು ಬರುವುದೆಂದು — ' **ಸ್ಥಾನೇಽಂತರತಮಃ || ೧-೧-೫೦ ||** ' ಎಂಬ ಪರಿಭಾಷೆಯಿಂದ ವ್ಯವಸ್ಥೆ ಮಾಡಿ — ' **ಯತ್ರಾನೇಕವಿಧಮಾಂತರ್ಯಂ ತತ್ರ ಸ್ಥಾನತ ಆಂತರ್ಯಂ ಬಲೀಯಃ** ' ಎಂದೂ ಹೇಳಿ ಅತಿಪ್ರಸಕ್ತಿಗಳನ್ನು ವಾರಣವಾಡಿರುವರು. ಈ ವ್ಯಾಕರಣದಲ್ಲಿ ಅಂತಹ ಸಂದರ್ಭಗಳು ಪ್ರಾಯಶಃ ಇಲ್ಲವಾದುದರಿಂದ ಹೇಳಲಿಲ್ಲ. ಆದರೆ ಲಕ್ಷ್ಯಸಿದ್ಧ್ಯರ್ಥವಾಗಿ ಇಲ್ಲಿ ಹೇಳದೆ ಇರುವ ಕೆಲವು ನ್ಯಾಯಗಳನ್ನು ಸಂದರ್ಭಾನುಸಾರವಾಗಿ ಸಮನ್ವಯಮಾಡಿಕೊಂಡು ಲಕ್ಷ್ಯಗಳನ್ನು ಸಾಧಿಸಬೇಕು. ಆ ರೀತಿಯನ್ನು ಆಯಾ ಪ್ರಕರಣದಲ್ಲಿ ಯಥಾಯೋಗ್ಯವಾಗಿ ತೋರಿಸುವೆವು.

**ಇತಿ ಪರಿಭಾಷಾಪ್ರಕರಣಂ ಸಮಾಪ್ತಂ**

# ಸಂಧಿಪ್ರಕರಣಂ: ಸ್ವರಸಂಧಿ

**ಅವತಾರಿಕೆ ೩೪**

ವಿಧಿ-ಪರಿಭಾಷಾದ್ಯನಾತ್ಮಕವಾಗಿ ಇಲ್ಲಿಂದ ಮುಂದೆ ಹೇಳುವ ಸೂತ್ರಗಳಲ್ಲಿ ಸಂಬಂಧಿಸುವ ಅಧಿಕಾರಸೂತ್ರವನ್ನು ಹೇಳುತ್ತಾನೆ.

**|| ಅಥ ಸಂಧಿಪ್ರಕರಣಂ ||**

**ಸೂತ್ರಂ || ಸಂಧೌ || ೩೪ ||**

**ಅರ್ಥ || ಸಂಧಿಯೆಂದರೆ ವರ್ಣಗಳಿಗೆ ಅತಿಶಯವಾದ ಸನ್ನಿಕರ್ಷವು. ಇಲ್ಲಿಂದ ಮುಂದೆ ಹೇಳುವ ವಿಧಿಗಳು ಇಂತಹ ಸಂಧಿ ವಿವಕ್ಷೆಯಲ್ಲಿ ಬರುವುವೆಂದು ತಿಳಿಯಬೇಕು.**

**ಉದಾಹರಣೆ** || 'ಯಣ್ ಸ್ವರೇ ಸ್ವರಸ್ಯ || ೩೫ ||' ಮೊದಲಾದ ಸೂತ್ರಗಳಿಂದ ವಿಧಿಸುವ ಯಗಾದಿಗಳು ಸಂಧಿ ವಿವಕ್ಷೆ ಮಾಡಿದಾಗಲೆ ಬರುವುವೆಂದು ಹೇಳುವುದರಿಂದ 'ಮುನಿಯಾತಂ, ಯತಿಯೀತಂ' ಮೊದಲಾದುವು ಸಿದ್ಧಿಸುವುವು. 'ಮುನಿ, ಆತಂ; ಯತಿ, ಈತಂ' ಎಂದು ಕಾಲ ವಿಲಂಬದಿಂದ ಉಚ್ಚರಿಸಲು ಅಲ್ಲಿ ಸಂಧಿಯಿಲ್ಲವಾದುದರಿಂದ ಯಗಾಗಮವು ಬರುವುದಿಲ್ಲ. ಹೀಗೆಯೆ 'ಅರಮುಗನಿರ್ಪ ಓಲಗದ ಓಲಗಕಾರ್ತಿಯರೆಲ್ಲರೊಪ್ಪಿದರ್' ಮೊದಲಾದ ಪ್ರಯೋಗಗಳಲ್ಲಿಯೂ ಊಹಿಸಿಕೊಳ್ಳಬೇಕು.

**ವಿಚಾರ ೩೪**

ಈ ಸೂತ್ರವು ಅಧಿಕಾರ ಸೂತ್ರವು. ಅಧಿಕಾರ-ಲಕ್ಷಣವು ಹಿಂದೆ ಹೇಳಲ್ಪಟ್ಟಿದೆ. ಈ ಅಧಿಕಾರವು ಈ ಪಾದ ಮುಗಿಯುವ ವರೆಗೂ ಬರುವುದು. ಆದುದರಿಂದ ಇಲ್ಲಿಂದ ಮುಂದೆ ಹೇಳುವ ಕಾರ್ಯವೆಲ್ಲಾ ಸಂಧಿವಿವಕ್ಷೆಯಿದ್ದಾಗ ಬರುವುದೆಂದು ತಿಳಿಯಬೇಕು. 'ಸಂಧಿ' ಶಬ್ದವು 'ಗುಣ, ಪ್ರತೀಕ, ಪರ್ವ' ಮೊದಲಾದ ಅನೇಕಾರ್ಥವುಳ್ಳುದಾಗಿದ್ದರೂ ಪ್ರಕೃತದಲ್ಲಿ 'ಉತ್ಕೃಷ್ಟವಾದ ಸನ್ನಿಕರ್ಷ' ಎಂಬ ಅರ್ಥವುಳ್ಳುದೆಂದು ತಿಳಿಯಬೇಕು. ಇಲ್ಲಿ 'ಸನ್ನಿಕರ್ಷ' ವೆಂದರೆ ಪೂರ್ವೋತ್ತರ ವರ್ಣಗಳಿಗೆ ವಿರಾಮವಿಲ್ಲದೆ ಉಚ್ಚರಿಸೋಣವು. ಇದನ್ನೇ ಕೆಲವರು 'ಸಂಹಿತೆ' ಎಂದು ಹೇಳುತ್ತಾರೆ. 'ಸಮ್' ಎಂಬುಪಸರ್ಗಪೂರ್ವಕವಾದ 'ಧಾ' ಧಾತುವಿನ ಮೇಲೆ 'ಇ' ಎಂಬ ಪ್ರತ್ಯಯವನ್ನು ಮಾಡಿದರೆ 'ಸಂಧಿ' ಶಬ್ದವೂ 'ತ' ಪ್ರತ್ಯಯವನ್ನು ಮಾಡಿದರೆ 'ಸಂಹಿತಾ' ಶಬ್ದವೂ ನಿಷ್ಪನ್ನವಾಗುವುದು. ಇವೆರಡೂ ಒಂದೇ ಧಾತುವಿನಿಂದ ಹುಟ್ಟಿರುವುದರಿಂದ ಇವು ಪರ್ಯಾಯ ಶಬ್ದಗಳೆಂದು ತಿಳಿಯಬೇಕು. **ಪಾಣಿನಿ** ವ್ಯಾಕರಣದಲ್ಲಿ ಹೇಳಿರುವ '**ಪರಃ ಸನ್ನಿಕರ್ಷಃ ಸಂಹಿತಾ || ೧-೪-೧೦೯ ||**' ಎಂಬ ಸೂತ್ರಕ್ಕೆ ಒಂದು ವರ್ಣವನ್ನು ಉಚ್ಚಾರಣೆ ಮಾಡಿ ಮತ್ತೊಂದು ವರ್ಣವನ್ನು ಉಚ್ಚರಿಸುವುದಕ್ಕೆ ಅತ್ಯಾವಶ್ಯಕವಾಗಿ ಬೇಕಾದ ಅರ್ಧಮಾತ್ರಾ ಕಾಲಾತಿರಿಕ್ತ ಕಾಲಾವ್ಯವಹಿತವಾಗಿ ಉಚ್ಚರಿಸುವುದೇ ಸಂಹಿತೆಯೆಂದು **ಪತಂಜಲಿ**ಗಳು ವ್ಯಾಖ್ಯಾನ ಮಾಡಿರುವರು. ಇಂತಹ ಸಂಹಿತಾವಿಷಯದಲ್ಲಿ ವಿಧಿಸುವ ಆದೇಶಾಗಮಗಳನ್ನೇ **ಸಂಧಿಕಾರ್ಯ**ವೆಂದು ವ್ಯವಹರಿಸುವರು. **ದರ್ಪಣಕಾರನು—**

ಎರಡುಂ ಪಲವುಂ ವರ್ಣಂ
ಪರಸ್ಪರಂ ಕೂಡುವಂದಮದು ಸಂಧಿ ಪಲಂ
ಸ್ವರರಹಿತವ್ಯಂಜನಮುವು
ಪರವರ್ಣಮನೆಯ್ದು ತಿರ್ಪುವಾ ಸಂಹಿತೆಯೊಳ್ ( ಸೂತ್ರ ೪೯ )

ಎಂಬ ಸೂತ್ರದಿಂದ ಎರಡಕ್ಷರವಾಗಲಿ ಪಲವಕ್ಷರಗಳಾಗಲಿ ಪರಸ್ಪರವಾಗಿ ಕೂಡುವುದು ಸಂಧಿ ಯೆನಿಸಿಕೊಳ್ಳುವುದು. ಆ ಸಂಧಿಯಲ್ಲಿ ಸ್ವರರಹಿತ ವ್ಯಂಜನಗಳು ಮುಂದಿನ ಅಕ್ಷರವನ್ನು ಕೂಡಿ ಉಚ್ಚರಿಸಲ್ಪಡುವುವು — ಎಂಬರ್ಥವನ್ನು ಸೂಚಿಸಿ, ಸಂಧಿಸಂಹಿತೆಗಳೆರಡೂ ಏಕಾರ್ಥಕಗಳೆಂದು ಅಭಿಪ್ರಾಯಪಟ್ಟಿರುವನು. ಮತ್ತು ಇಂತಹ ಸಂಧಿಯು ಪದಮಧ್ಯ-ಪದಾಂತ್ಯಗಳೆಂಬ ಎರಡು ಭೇದವನ್ನು ಹೊಂದಿರುವುದು ಎಂದು ಹೇಳಿ ಅವುಗಳ ಸ್ವರೂಪವನ್ನೂ —

ಪದಮಧ್ಯಂ ಪದದಂತ್ಯಂ
ವಿದಗ್ಧರಿಂ ಸಂಧಿವಿಷಯಮೆರಡಕ್ಕುಮಿಳಾ
ವಿದಿತಪ್ರಕೃತಿಪ್ರತ್ಯಯ
ಮೊದವಿದ ಪದಯುಗದ ಬೆರಕೆ ಬೇಡಿದುರ್ದದಱಂ (ಸೂತ್ರ ೫೦)

ಎಂಬ ಸೂತ್ರದಿಂದ ಸೂಚಿಸಿರುವನು.

### ಸಂಧಿ-ಭೇದಗಳು

ಸಂಸ್ಕೃತ ವ್ಯಾಕರಣದಲ್ಲಿ ಇಂತಹ ಸಂಧಿಯನ್ನು ಕೆಲವರು ' ಅಚ್-ಸಂಧಿ*, ಪ್ರಕೃತಿಭಾವ-ಸಂಧಿ, ವ್ಯಂಜನ-ಸಂಧಿ, ವಿಸರ್ಗ-ಸಂಧಿ, ಸ್ವಾದಿ-ಸಂಧಿ ' ಎಂದು ಐಯ್ದು ಬಗೆಯಾಗಿ ವ್ಯವಹರಿಸುವರು. ಇನ್ನು ಕೆಲವರು ಪ್ರಕೃತಿಭಾವ-ಸಂಧಿಯನ್ನು ಅಚ್-ಸಂಧಿಯಲ್ಲಿಯೆ ಅಂತರ್ಭಾವವನ್ನು ಮಾಡಿ ಸಂಧಿಗಳು ನಾಲ್ಕೆಂದು ಹೇಳುವರು. ಇನ್ನು ಕೆಲವರು ಸ್ವಾದಿ-ಸಂಧಿಯನ್ನು ವ್ಯಂಜನ-ಸಂಧಿಯಲ್ಲಿ ಅಂತರ್ಭಾವ ಮಾಡಿ ಸಂಧಿತ್ರಯವೆಂದು ವ್ಯವಹರಿಸುವರು. ಕೆಲವರು ವಿಸರ್ಗವು ವ್ಯಂಜನ ಸ್ಥಾನದಲ್ಲಿ ಬರುವುದರಿಂದ ವಿಸರ್ಗ-ಸಂಧಿಯನ್ನೂ ವ್ಯಂಜನ-ಸಂಧಿಯಲ್ಲಿ ಸೇರಿಸಿ ಸ್ವರ-ಸಂಧಿ, ವ್ಯಂಜನ-ಸಂಧಿಗಳೆಂದು ಎರಡೇ ಸಂಧಿಗಳೆಂದು ವ್ಯವಹರಿಸುವರು. ಸಾಮಾನ್ಯವಾಗಿ ಎರಡು ಪ್ರಕಾರವಾಗಿದ್ದರೂ ಒಳಭೇದಗಳನೇಕಗಳಿರುವುದರಿಂದ ಆ ವ್ಯವಹಾರಗಳೆಲ್ಲಾ ವಿವಕ್ಷಾನುಸಾರವಾಗಿ ಉಪಪನ್ನಗಳೆಂದು ತಿಳಿಯಬೇಕು.

ಕನ್ನಡದಲ್ಲಿ ಇಂತಹ ವಿಭಾಗಗಳನ್ನು ಕಂಠೋಕ್ತವಾಗಿ ತಿಳಿಸದಿದ್ದರೂ ವೈಯಾಕರಣರು ಆಯಾ ಕಾರ್ಯಸ್ವಭಾವವನ್ನರಿತು ವಿಭಾಗಿಸಿಕೊಳ್ಳಬೇಕು. ಇಲ್ಲಿ ಸಾಮಾನ್ಯವಾಗಿ ಸ್ವರ-ಸಂಧಿ ವ್ಯಂಜನ-ಸಂಧಿಗಳೆಂದು ಎರಡು ಭಾಗಗಳನ್ನು ಮಾಡಬಹುದು. ಸ್ವರ-ಸಂಧಿಗೆ ಬಾಧಕವಾಗಿ ಪ್ರಕೃತಿಭಾವವನ್ನು ಹೇಳಿರುವುದರಿಂದ ಅದೂ ಸ್ವರ-ಸಂಧಿಯಲ್ಲಿ ಅಂತರ್ಭೂತವಾಗುವುದು ಎಂದು ತಿಳಿಯಬೇಕು. ಕೆಲವರು ' **ಅಕಃ ಪ್ರಕೃತ್ಯಾ || ೯೬ ||** ' ಇತ್ಯಾದಿ ಸೂತ್ರಗಳಿಂದ –' **ಕಚಪ ಸ್ತೃತೀಯ ಉತ್ತರಪದಾದೇಃ || ೮೯ ||** ' ಇತ್ಯಾದಿ ಸೂತ್ರಗಳಿಂದ ವಿಹಿತವಾದ ವ್ಯಂಜನಾದೇಶ

* [ **' ಅಚ್ ' ಎಂಬುದು ಎಲ್ಲಾ ಸ್ವರಗಳನ್ನು ಸೂಚಿಸುವ ' ಪ್ರತ್ಯಾಹಾರವು ' ಆದುದರಿಂದ ' ಅಚ್–ಸಂಧಿ ' ಎಂದರೆ ಸ್ವರ-ಸಂಧಿಯೆಂದು ತಿಳಿಯತಕ್ಕದು.— ಸಂಪಾದಕ** ]

ಗಳಿಗೂ ಪ್ರಕೃತಿಭಾವವಿಧಾನವಮಾಡುವುದರಿಂದ ಅವನ್ನು ವ್ಯಂಜನ-ಸಂಧಿಯಲ್ಲಿ ಅಂತರ್ಭಾವ ಮಾಡಬೇಕೆಂದು ಹೇಳುವರು. ಇನ್ನು ಕೆಲವರು ಸ್ವರವ್ಯಂಜನೋಭಯವಿಷಯಕವಾದುದರಿಂದ ಪ್ರಕೃತಿಭಾವ-ಸಂಧಿಯನ್ನು ಬೇರ್ಪಡಿಸಿ, ಸ್ವರ-ಸಂಧಿ, ವ್ಯಂಜನ-ಸಂಧಿ, **ಪ್ರಕೃತಿಭಾವ-ಸಂಧಿ** ಎಂದು ಸಂಧಿತ್ರಯವನ್ನಂಗೀಕರಿಸುವರು.

**ಶಾಸನಕಾರನ** ಮತದಲ್ಲಿ '**ಸಂಧೌ**' ಎಂಬ ಅಧಿಕಾರ ಸೂತ್ರವು ಈ ಪಾದ ಮುಗಿಯುವವರೆಗೂ ಬರುವುದರಿಂದ ಅಲ್ಲಿ ದ್ವಿತ್ವ ಪ್ರಕರಣವನ್ನೂ ಸೇರಿಸಿರುವುದರಿಂದ ದ್ವಿತ್ವವನ್ನೂ ಸಂಧಿಕಾರ್ಯವೆಂದು ಹೇಳಬೇಕಾಗುವುದು. ಆದುದರಿಂದ ಅವನ ಮತದಲ್ಲಿ ಸಂಧಿಕಾರ್ಯವು ಸಾಮಾನ್ಯವಾಗಿ ನಾಲ್ಕು ಬಗೆಯಾಗಿರುವುದೆಂದು ತಿಳಿಯಬೇಕು.

ಇಂತಹ ಸಂಧಿ-ಸಾಮಾನ್ಯವು ದರ್ಪಣಕಾರನು ಹೇಳಿರುವಂತೆ ಪದಮಧ್ಯ-ಪದಾಂತಗಳೆಂಬ ಎರಡೆರಡು ಭೇದಗಳುಳ್ಳುದೆಂದು ತಿಳಿಯಬೇಕು.

ಸಂಹಿತೆಯಾದರೊ ವಕ್ತೃತಾತ್ಪರ್ಯವಿದ್ದಂತೆ ಲಕ್ಷ್ಯಗಳಲ್ಲಿರುವುದರಿಂದ ಮುಂದೆ ವಿಧಿಸುವ ಸಂಧಿಕಾರ್ಯಗಳು ಕೆಲವೆಡೆಗಳಲ್ಲಿ ನಿತ್ಯವಾಗಿಯೂ ಕೆಲವೆಡೆಗಳಲ್ಲಿ ವಿಕಲ್ಪವಾಗಿಯೂ ಕೆಲವೆಡೆಗಳಲ್ಲಿ ಬಾರದೆಯೂ ಇರಬೇಕಾಗುವುದು. ಆದುದರಿಂದ ಈ ಸಂಹಿತಾವಿವಕ್ಷಾ-ವಿಷಯಾವಿಷಯ-ವ್ಯವಸ್ಥೆಯು ಪ್ರಾಚೀನರ ಸಮ್ಮತಿಯಿಂದ ನಿಶ್ಚಿತವಾಗಿರುವುದು ಎಂದು:—

**ಪದೇ ತು ಸಂಹಿತಾ ನಿತ್ಯಾ ನಿತ್ಯಾ ಧಾತೂಪಸರ್ಗಯೋಃ**
**ನಿತ್ಯಾ ಸಮಾಸೇ ವಾಕ್ಯೇ ತು ಸಾ ವಿವಕ್ಷಾಮಪೇಕ್ಷತೇ**

ಎಂಬ ಶ್ಲೋಕದಿಂದ ತಿಳಿದುಕೊಳ್ಳಬೇಕು. ಈ ಶ್ಲೋಕದಲ್ಲಿ '**ಪದೇ**' ಎಂದರೆ **ಪ್ರಕೃತಿ-ಪ್ರತ್ಯಯ** ಸಮುದಾಯರೂಪವಾದ ಅಖಂಡಪದದಲ್ಲಿ — ಎಂದು ತಾತ್ಪರ್ಯವು. **ಭಾಷೆಯಲ್ಲಿ** ಉಪಸರ್ಗಗಳಿಲ್ಲವಾದುದರಿಂದ ಸಂಸ್ಕೃತಾಭಿಪ್ರಾಯದಿಂದ '**ಧಾತೂಪಸರ್ಗಯೋಃ**' ಎಂದು ಹೇಳಲ್ಪಟ್ಟಿದೆ ಎಂದು ತಿಳಿಯಬೇಕು. ಅಥವಾ ಭಾಷೆಯಲ್ಲಿ ಕೆಲವು ಧಾತುಗಳಿಗೆ ಕೆಲವು **ಅವ್ಯಯಗಳನ್ನು** ಅನುಪ್ರಯೋಗ ಮಾಡುವುದರಿಂದ ಉಪಲಕ್ಷಣದಿಂದ ಉಪಸರ್ಗ ಪದದಿಂದ ಅವನ್ನು ಗ್ರಹಿಸಿ ಅಲ್ಲಿ ಸಂಹಿತೆಯು ನಿತ್ಯವೆಂದು ಹೇಳಬಹುದು. '**ಸಮಾಸೇ**' ಎಂಬುದು ಪದಗಳ ಸಮುದಾಯರೂಪವಾದ ಒಂದು ಪದವಾಗಿದ್ದರೂ '**ಗೋಬಲೀವರ್ದನ್ಯಾಯ**' ದಿಂದ ಹೇಳಲ್ಪಟ್ಟಿದೆ ಎಂದು ತಿಳಿಯಬೇಕು. ಇದರಿಂದ ಉಕ್ತವಾದ ತ್ರಿವಿಧಲಕ್ಷ್ಯಗಳಲ್ಲಿಯೂ ಸಂಹಿತೆ ನಿತ್ಯವಾಗಿರುವುದು. ಆದರಿಂದ ಅಂತಹ ಲಕ್ಷ್ಯಗಳಲ್ಲಿ ವಕ್ತೃತಾತ್ಪರ್ಯವನ್ನು ಅವಲಂಬಿಸಿ ಸಂಧಿಕಾರ್ಯ ಪ್ರವೃತ್ತ್ಯಪ್ರವೃತ್ತಿಗಳನ್ನು ತಿಳಿಯುವುದಕ್ಕಾಗದು. **ಸೂತ್ರಕಾರರು** ಎಲ್ಲಿ ನಿತ್ಯವಾಗಿ ಹೇಳಿರುವರೋ ಎಲ್ಲಿ ವಿಕಲ್ಪವಾಗಿ ಹೇಳಿರುವರೋ ಎಲ್ಲಿ ನಿಷೇಧಿಸಿರುವರೋ ತದನುಗುಣವಾಗಿ ಬರುವುದೆಂದು ತಿಳಿಯಬೇಕು. ವಾಕ್ಯಗಳಲ್ಲಾದರೊ ಸಂಹಿತೆಯನ್ನು ವಕ್ತೃತಾತ್ಪರ್ಯಾನುಗುಣವಾಗಿ ಅಂಗೀಕರಿಸಿರುವುದರಿಂದ **ಸೂತ್ರಕಾರರು** ನಿತ್ಯವೆಂದು ಹೇಳಿರುವ ವಿಧಿಗಳೂ ಪ್ರವೃತ್ತ್ಯಪ್ರವೃತ್ತಿಗಳಿಂದ ವಿಕಲ್ಪವಿಧಿಗಳಂತೆ ರೂಪದ್ವಯಕ್ಕೆ ಸಾಧಕಗಳಾಗುವುವು. ಇವಕ್ಕೆ ಉದಾಹರಣೆಗಳನ್ನು ವಿದಗ್ಧರು ಆಯಾ ಪ್ರಕರಣದಲ್ಲಿ ಕೊಟ್ಟಿರುವ ಉದಾಹರಣೆಗಳ ಪರ್ಯಾಲೋಚನೆಯಿಂದ ತಿಳಿದುಕೊಳ್ಳಬೇಕು. ಇಂತಹ ಸಂಹಿತಾ ವಿಷಯದಲ್ಲಿ ಬರುವ ಕಾರ್ಯಗಳನ್ನೇ ಸಂಧಿಕಾರ್ಯಗಳೆಂದು ವ್ಯವಹರಿಸುತ್ತಾರೆ.

ಸಂಸ್ಕೃತ ವ್ಯಾಕರಣದಲ್ಲಿ ಸ್ವರಕ್ಕೆ ಸ್ವರವು ಪರವಾಗಲು ಬರುವುದು ಸ್ವರ-ಸಂಧಿಯೆಂತಲೂ ವ್ಯಂಜನಕ್ಕೆ ವ್ಯಂಜನವು ಪರವಾದಾಗ ಬರುವುದು ವ್ಯಂಜನ-ಸಂಧಿಯೆಂತಲೂ ವಿಸರ್ಗಕ್ಕೆ ಬರುವುದು ವಿಸರ್ಗ ಸಂಧಿಯೆಂತಲೂ ಸ್ವಾದಿವಿಭಕ್ತಿಗಳಿಗೆ ಬರುವುದು ಸ್ವಾದಿ-ಸಂಧಿಯೆಂತಲೂ ಸಾಮಾನ್ಯವಾಗಿ ವ್ಯವಹರಿಸುತ್ತಾರೆ. ಆದರೆ ಕನ್ನಡದಲ್ಲಿ ಇಂತಹ ವಿಶೇಷವ್ಯವಹಾರವಿಲ್ಲದಿದ್ದರೂ ಈ 'ಸಂಧೌ' ಎಂಬ ಅಧಿಕಾರದಲ್ಲಿ ಸೇರಿರುವುದೆಲ್ಲಾ ಸಂಧಿಕಾರ್ಯವೆಂದು ತಿಳಿಯಬೇಕು. ಪಂಡಿತರು ಒಳಭೇದಗಳನ್ನು ವಿಮರ್ಶೆಮಾಡಿ ವಿಶೇಷವ್ಯವಹಾರವನ್ನು ಮಾಡಬಹುದು.

**ಅವತಾರಿಕೆ ೩೫**

ಇದುವರೆಗೂ ವಿಧಿಸೂತ್ರಗಳಿಗೆ ಸಾಮಾನ್ಯವಾಗಿ ಉಪಕಾರಕಗಳಾದ ಸಂಜ್ಞಾ, ಪರಿಭಾಷಾ, ಅತಿದೇಶ, ಅಧಿಕಾರ ಸೂತ್ರಗಳನ್ನು ಹೇಳಿ ವಿಧಿಸೂತ್ರಗಳನ್ನು ಹೇಳಲು ಇಚ್ಛೈಸಿ, ಅವುಗಳಲ್ಲಿ ಮೊದಲು ಸಾಮಾನ್ಯವಾದ ಸಂಧಿಪ್ರಕರಣವನ್ನು ಹೇಳುವುದಕ್ಕೆ ಪ್ರಾರಂಭಿಸಬೇಕೆಂದು ವರ್ಣಮಾಲೆಯಲ್ಲಿ ಸ್ವರಗಳಿಗೆ ಪ್ರಾಥಮ್ಯವಿರುವುದರಿಂದ ಸ್ವರಸಂಧಿಯನ್ನು ಮೊದಲು ಪ್ರಾರಂಭಿಸುತ್ತಾನೆ. ಅದರಲ್ಲಿಯೂ ಬಹುಲಕ್ಷ್ಯಸಾಧಕವಾದ 'ಯಗಾಗಮ' ವಿಧಾಯಕ ಸೂತ್ರವನ್ನು ಮೊದಲು ಹೇಳುತ್ತಾನೆ.

**ಸೂತ್ರಂ || ಯಕ್ ಸ್ವರೇ ಸ್ವರಸ್ಯ || ೩೫ ||**

**ಅರ್ಥ ||** ಸ್ವರಕ್ಕೆ ಸ್ವರವು ಪರವಾಗಲು ಯಗಾಗಮವು ಬರುವುದು.

**ಉದಾಹರಣೆ ||** ಜ್ಯಾ + ಒಳ್ = ಜ್ಯಾಯೊಳ್ || ಹೀಗೆಯೆ 'ಆಯಿರವು, ಸತಿಯಿವಳ್, ಪತಿಯಿಾತಂ, ಸ್ತ್ರೀಯಿಾಕೆ, ಶ್ರೀಯಿರವು, ಸೀತೆಯಿಂದಂ, ಮಾತೆಯಿಂದಂ, ತೇಯೆಂದಂ, ಬೇಯೆಂದಂ, ರೈಯೊದವಿತ್ತು, ಸುರೈಯೊಪ್ಪಿದಂ' ಮೊದಲಾದ ಪ್ರಯೋಗಗಳನ್ನು ಈ ಸೂತ್ರಕ್ಕೆ ಲಕ್ಷ್ಯಗಳನ್ನಾಗಿ ಹೇಳುವುದು.

**ವಿಚಾರ ೩೫**

ಈ ಸೂತ್ರದಲ್ಲಿ — ಮೊದಲು ಹೇಳಿರುವ 'ಯಕ್' ಎಂಬುದೇ ವಿಧೀಯವಾದುದು. ಇದು ಕ ಕಾರೇತ್ಸಂಜ್ಞಕವಾದುದರಿಂದ ಅವುದಕ್ಕೆ ವಿಧಿಸಲ್ಪಡುವುದೋ ಅದಕ್ಕೆ ಅಂತ್ಯಾವಯವವಾಗಿ ಬರುವುದೆಂದು '**ಕಿದಂತ್ಯಃ || ೨೫ ||**' ಎಂಬ ಸೂತ್ರದಿಂದ ಬೋಧಿಸಲ್ಪಡುವುದು. '**ಸ್ವರಸ್ಯ**' ಎಂಬುದು ಷಷ್ಠ್ಯಂತವಾದುದರಿಂದ ಇಲ್ಲಿ ವಿಧೀಯಮಾನವಾದ ಯ ಕಾರಾಗಮಕ್ಕೆ ಸ್ವರವರ್ಣವು ಉದ್ದೇಶ್ಯವೆಂದು ತಿಳಿಯಬೇಕು. 'ಸ್ವರೇ' ಎಂಬುದು ಸಪ್ತಮ್ಯಂತವಾದುದರಿಂದ '**ತಸ್ಮಿನ್ನಿತಿ ನಿರ್ದಿಷ್ಟೇ ಪೂರ್ವಸ್ಯ || ೨೬ ||**' ಎಂಬ ಪರಿಭಾಷೆಯಿಂದ ಆ ಸಪ್ತಮ್ಯಂತ ಪದಬೋಧ್ಯವಾದ ಸ್ವರವರ್ಣಕ್ಕೆ ಅವ್ಯವಹಿತ ಪೂರ್ವದಲ್ಲಿರುವ ಸ್ವರಕ್ಕೆ ಎಂಬರ್ಥವಾಗುವುದು. ಹೀಗೆಯೆ ಸಪ್ತಮ್ಯಂತ ನಿರ್ದೇಶವುಳ್ಳ ಸೂತ್ರಗಳಲ್ಲೆಲ್ಲಾ 'ಪರೇ' ಎಂದರ್ಥವು ಫಲಿತವಾಗುವುದು. ಆದುದರಿಂದ ಸ್ವರಕ್ಕೆ ಸ್ವರಪರವಾಗಲು ಯಗಾಗಮ ಬರುವುದೆಂದರ್ಥವು ಹೇಳಲ್ಪಟ್ಟಿದೆ.

ಇಲ್ಲಿ — 'ಸ್ವರಸ್ಯ' 'ಸ್ವರೇ' ಎಂಬ ಉದ್ದೇಶ್ಯ ನಿಮಿತ್ತ ಪದಗಳೆರಡೂ ಸ್ವರ ಸಾಮಾನ್ಯಬೋಧಕಗಳಾಗಿದ್ದರೂ ವಕ್ಷ್ಯಮಾಣ ಸೂತ್ರಗಳ ಪರ್ಯಾಲೋಚನೆಯಿಂದ ಎಲ್ಲಾ ಸ್ವರಗಳಿಗೂ ಯಗಾಗಮವಿಲ್ಲವೆಂದು ತೋರುವುದರಿಂದ ಈ ಯಕಾರಾಗಮವು ಸ್ವರಗಳ ಮಧ್ಯದಲ್ಲಿ ಆ, ಇ, ಈ, ಎ, ಏ, ಐ, ಓ, ಎಂಬ ಸ್ವರಗಳಿಗೆ ಮಾತ್ರ ಕೆಲವು ಸ್ವರಗಳು ಪರದಲ್ಲಿದ್ದಾಗ ಯಗಾಗಮವು

ಬರುವುದೆಂದು ತಿಳಿಯುವುದು. ಆದರಲ್ಲಿಯೂ 'ಒ' ಎಂಬುದಕ್ಕೆ ಮುಂದೆ ಹೇಳುವ '**ಒದೋ ಬಹುಲಂ || ೩೯ ||**' ಎಂಬ ಸೂತ್ರದಿಂದ ವ ಕಾರಾಗಮವೂ ಪ್ರಾಯಿಕವಾಗಿ ಬರುವುದೆಂದು ತಿಳಿಯಬೇಕು. ಆದುದರಿಂದ ವಿಶೇಷ ಸೂತ್ರಗಳಿಗೆ ಅವಿಷಯಗಳಾದ ಲಕ್ಷ್ಯಗಳೆಲ್ಲಾ ಸಾಮಾನ್ಯ ಸೂತ್ರಗಳಿಗೆ ಲಕ್ಷ್ಯಗಳೆಂದು ಊಹಿಸಿಕೊಳ್ಳಬೇಕು.

ಮತ್ತು ಈ ಸೂತ್ರದಲ್ಲಿ ಉದ್ದೇಶ್ಯ-ನಿಮಿತ್ತಗಳೆರಡೂ ಸ್ವರವರ್ಣಗಳೇ ಆಗಿರಬೇಕೆಂದು ಹೇಳಿರುವುದರಿಂದ — 'ಪತಿ ನೋಡಿದಂ, ಸತಿ ಕೂರ್ತಳ್, ಅರಲಿದು, ಸರಲಿದು' ಮೊದಲಾದ ವ್ಯಂಜನಪರವಾದ ಸ್ವರಾಂತ ಶಬ್ದಗಳಿಗೂ ಸ್ವರಪರವಾದ ವ್ಯಂಜನಾಂತ ಶಬ್ದಗಳಿಗೂ 'ಯಗಾದಿ' ಆಗಮಗಳು ಬರುವುದಿಲ್ಲವೆಂದು ತಿಳಿಯಬೇಕು.

**ದರ್ಪಣಕಾರ**ನು ಇದೆಲ್ಲವನ್ನು ಪರ್ಯಾಲೋಚಿಸಿ ಬಾಲಕರಿಗೆ ಸುಬೋಧವಾಗುವಂತೆ ಅವ್ಯಾಪ್ತ್ಯತಿವ್ಯಾಪ್ತ್ಯಸಂಭವರೂಪ-ದೋಷತ್ರಯ-ವಿನಿರ್ಮುಕ್ತವಾದ ಉದ್ದೇಶ್ಯಗಳನ್ನೇ ಆರಿಸಿ, ಸ್ವರ ಪರವಾಗಿರಲು ಯ ಕಾರಾಗಮವು ಬರುವುದೆಂದು —

ಅತ್ವದಿನಿವರ್ಣದಿಂ ಮು
ತ್ತೋತ್ವದಿನೈತ್ವದಿನೆವರ್ಣದಿಂ ಮುಂದಕ್ಕುಂ
ಯುತ್ವಮುದವಧಾರಣೆ ಪರ
ಮತ್ವಂ ಪಿಂತಾಗೆ ಷಷ್ಠಿಯಿಯುವುದೆ ಯತ್ವಂ ( ಸೂತ್ರ ೫೩ )

ಎಂಬ ಸೂತ್ರದಿಂದ ಸೂಚಿಸಿ, ಪೂರ್ವಸೂತ್ರದಿಂದ 'ಸ್ವರಮಿದಿರೊಳಿರೆ' ಎಂಬುದನ್ನು ಈ ಸೂತ್ರದಲ್ಲಿಯೂ ಸಂಬಂಧಿಸಿಕೊಂಡು ಸ್ವರವು ಪರದಲ್ಲಿರುವಾಗ 'ಅ, ಇ, ಈ, ಓ, ಐ, ಎ, ಏ' ಎಂಬೀ ವರ್ಣಗಳಿಗೂ ಅವಧಾರಣಾರ್ಥಕವಾದ ಎ ಕಾರವು ಪರದಲ್ಲಿರುವಾಗ ಷಷ್ಠಿಯ ಅಕಾರಕ್ಕೂ ಮಧ್ಯದಲ್ಲಿ ಯ ಕಾರಾಗಮವು ಬರುವುದೆಂದು ಅರ್ಥವನ್ನು ಹೇಳಿರುವನು.

**ಶಾಸನಕಾರ**ನ ಮತದಲ್ಲಿ ಉಳಿದ ವಿಷಯದಲ್ಲಿ ಭೇದವಿಲ್ಲದಿದ್ದರೂ ಷಷ್ಠಿಯ ಅ ಕಾರಕ್ಕೆ ಅವಧಾರಣಾರ್ಥಕವಾದ ಎ ಕಾರ ಪರವಾಗಿದ್ದ ಲಕ್ಷ್ಯಗಳ ವಿಷಯದಲ್ಲಿ ಭೇದವಿರುವುದು. ಅದೇನೆಂದರೆ — '**ಓ ನಿಪಾತೇ || ४४ ||**' ಎಂಬ ಸೂತ್ರದಿಂದ ನಿಪಾತಸ್ವರವು ಪರವಾಗಲು ಪ್ರಕೃತಿಭಾವವನ್ನು ವಿಧಿಸಿರುವುದರಿಂದ 'ಅತನ+ಎ' ಇತ್ಯಾದಿ ಲಕ್ಷ್ಯಗಳಲ್ಲಿ ಯ ಕಾರಾಗಮವಿಲ್ಲವೆಂದು ಸಾಮಾನ್ಯವಾಗಿ ಹೇಳಲ್ಪಟ್ಟಿರುವುದು. ಆದಾಗ್ಯೂ 'ಅತನಯೆ, ತನ್ನಯೆ' ಮೊದಲಾದ ಯ ಕಾರಾಗಮ ಘಟಿತವಾದ ಅನೇಕ ಪ್ರಾಮಾಣಿಕ ಪ್ರಯೋಗಗಳು ಉಪಲಭ್ಯಮಾನಗಳಾಗಿರುವುದರಿಂದ —

**ಕ್ವಚಿತ್ಪ್ರವೃತ್ತಿಃ ಕ್ವಚಿದಪ್ರವೃತ್ತಿಃ ಕ್ವಚಿದ್ವಿಭಾಷಾ ಕ್ವಚಿದನ್ಯದೇವ**
**ವಿಧೇರ್ವಿಧಾನಂ ಬಹುಧಾ ಸಮೀಕ್ಷ್ಯ ಚಾತುರ್ವಿಧಂ ಬಾಹುಳಕಂವದಂತಿ**

ಎಂಬ ಕಾರಿಕೋಕ್ತಪ್ರಕಾರವಾಗಿ ಚಾತುರ್ವಿಧ್ಯವುಳ್ಳ 'ಬಹುಳ' ಪದ ಸಂಬಂಧವನ್ನು ಪ್ರಕೃತಿಭಾವ ಸೂತ್ರದಲ್ಲಿಯೂ ಸಂಬಂಧಿಸಿ ಲಕ್ಷ್ಯಾನುಸಾರವಾಗಿ ಕ್ವಚಿತ್ ಪ್ರಕೃತಿಭಾವಕ್ಕೆ ಅಪ್ರವೃತ್ತಿಯನ್ನು ಹೇಳಿದಲ್ಲಿ ದರ್ಪಣೋಕ್ತಾರ್ಥವು ಸಮರ್ಥಿಸಲ್ಪಡುವುದು.

ಮತ್ತು **ದರ್ಪಣಕಾರನು** —

**ಸದಮಳಸಂಸ್ಕೃತ-ಕರ್ಣಾ**
**ಟದದಂತಪ್ರಕೃತಿಗಳ್ಗಿಸು ಪ್ರತ್ಯಯಮಿಂ**
**ತಿದಿರಾಗೆ ಯತ್ವಮನುಕೃತಿ**
**ಪದಕಂ ಮುಂದನುಕೃತಿಸ್ವರಂ ನಿಲೆ ಯತ್ವಂ (ಸೂತ್ರ ೫೪)**

ಎಂಬ ಸೂತ್ರದಿಂದ — ಅಮಲತರ ಸಂಸ್ಕೃತ ಅ ಕಾರಾಂತ ಪ್ರಕೃತಿಗಳಿಗೂ ಕನ್ನಡದ ಅ ಕಾರಾಂತ ಪ್ರಕೃತಿಗಳಿಗೂ 'ಇಸು' ಪ್ರತ್ಯಯವನ್ನು ಮಾಡುವಾಗ ಮಧ್ಯೆ ಯ ಕಾರಾಗಮವು ಬರುವುದು. ಮತ್ತು ಅ ಕಾರಾಂತವಾದ ಅನುಕರಣ ಪದಗಳಿಗೆ ಆ ಅನುಕರಣ ಸ್ವರೂಪವನ್ನು ಬೋಧಿಸುವ ಸ್ವರಾದಿ ಶಬ್ದಗಳು ಪರವಾದಾಗಲೂ ಯ ಕಾರಾಗಮವು ಬರುವುದೆಂದು ಹೇಳಿ — 'ಶುದ್ಧಯಿಸಿದಂ, ತೆರಯಿಸಿದಂ, ಪಳಪಳಯೆಂದಾರಿಕಲ್ಗಳುದಿರ್ದುವು' ಮೊದಲಾದುವನ್ನುದಾಹರಿಸಿರುವನು. ಇವೆಲ್ಲಾ **ಶಾಸನಕಾರನು** ಹೇಳಿರುವ — '**ಯಕ್ ಸ್ವರೇ ಸ್ವರಸ್ಯ**' ಎಂಬ ಸೂತ್ರದಿಂದಲೇ ಸಾಧಿಸಲ್ಪಡುವುವು. ಆದುದರಿಂದ ಈ ವಿಷಯದಲ್ಲಿ **ಶಾಸನ**ಸೂತ್ರವೇ ಅನುಕೂಲವಾಗಿರುವುದೆಂದು ತೋರುವುದು. **ದರ್ಪಣಕಾರ**ನ ಮತದಲ್ಲಿ 'ಈಯೂರ್, ಈವೂರ್' ಮೊದಲಾದ ಪ್ರಯೋಗಗಳನ್ನು ಸಾಧಿಸಲು ಯತ್ವ-ವತ್ವಗಳಿಗೆ ಬಾಹುಳಕತ್ವವನ್ನು ಹೇಳುವುದು ಅವಶ್ಯಕವಾಗಿರುವುದರಿಂದ ಅದರಿಂದಲೇ ಎಲ್ಲಾ ಪ್ರಯೋಗಗಳನ್ನೂ ಸಾಧಿಸಬಹುದಾದುದರಿಂದ ಬೇರೆ ಹೇಳಿರುವ — '**ಅದವಧಾರಣೆ ಪರಮತ್ವಂ ಪಿಂತಾಗೆ ಷಷ್ಠಿನಿಯಮದೆ ಯತ್ವಂ**' ಎಂಬ ಸೂತ್ರಭಾಗವೂ '**ಸದಮಳ ಸಂಸ್ಕೃತ ಕರ್ಣಾಟಕದದಂತಪ್ರಕೃತಿಗಳ್ಗಿಸುಪ್ರತ್ಯಯಮಿಂತಿದಿರಾಗೆ ಯತ್ವಂ**' ಇತ್ಯಾದಿ ಸೂತ್ರವೂ ಬಾಲಕರಿಗೆ ಸ್ಪಷ್ಟವಾಗಿ ಬೋಧಿಸಲು ಮಾಡಲ್ಪಟ್ಟಿವೆ ಎಂದು ತಿಳಿಯಬೇಕು. **ಶಾಸನಕಾರನು** ಸಾಮಾನ್ಯವಾಗಿ — '**ಯಕ್ ಸ್ವರೇ ಸ್ವರಸ್ಯ**' ಎಂದು ಹೇಳಿದ್ದರೂ ಅಪವಾದಸೂತ್ರಪರ್ಯಾಲೋಚನೆಯಿಂದ ಅದಕ್ಕೂ ಅಲ್ಲಿಯೆ ತಾತ್ಪರ್ಯವೆಂದು ತಿಳಿದು ಬುದ್ಧಿವಂತರು ಬುದ್ಧಿಯಿಂದ ವಿವೇಚನೆಮಾಡಿ ಲಕ್ಷ್ಯಸಿದ್ಧಿಯನ್ನು ಮಾಡಬೇಕೆಂದು ತಾತ್ಪರ್ಯವು.

**ಅವತಾರಿಕೆ ೩೬**

ಪೂರ್ವಸೂತ್ರದಿಂದ ಸಾಮಾನ್ಯವಾಗಿ ಸ್ವರಕ್ಕೆ ಸ್ವರವು ಪರವಾಗಲು ಯ ಕಾರಾಗಮವು ಬರುವುದೆಂದು ಹೇಳಿರುವುದರಿಂದ ಅದು —'ಎನ್ನ+ಅರಸಂ, ತನ್ನ+ಆಳ್' ಮೊದಲಾದ ಪ್ರಯೋಗಗಳಲ್ಲಿಯೂ ನಿಮಿತ್ತವಿರುವುದರಿಂದ ಪ್ರಸಕ್ತವಾಗಲು ಇದಕ್ಕೆ ಅಪವಾದವಾಗಿ ಹೇಳುತ್ತಾನೆ.

**ಸೂತ್ರಂ || ಲುಬನಾಮುಹಾನೌ || ೩೬ ||**

**ಅರ್ಥ || ಸ್ವರಕ್ಕೆ ಸ್ವರವು ಪರವಾಗಲು ನಾಮಹಾನಿಯಿಲ್ಲದಿದ್ದರೆ ಲೋಪವು ಬರುವುದು.**

**ಉದಾಹರಣೆ ||** ಎನ್ನ + ಅರಸಂ = ಎನ್ನರಸಂ || ಹೀಗೆಯೇ 'ತನ್ನಾಳ್, ಗುಣದಿರವು, ಸುಖದೊಡೆಯಂ, ಮನೆಯಲ್ಲಿರ್ದಂ, ಕೂಡುಣ್ಡಂ, ಕಣ್ಡೆವಿದಂ, ಕೂಡಿದಳ್, ಕ್ರಮದಾಯ್ತು, ಲೇಸಿಂಗೊಡೆಯಂ' ಮೊದಲಾದುವನ್ನು ಊಹಿಸಿಕೊಳ್ಳುವುದು.

**ವಿಚಾರ ೩೬**

ಈ ಸೂತ್ರದಲ್ಲಿ ಹೇಳಿರುವ 'ಲುಪ್' ಎಂಬುದಕ್ಕೆ ಲೋಪವೆಂಬರ್ಥವು. 'ಲೋಪ' ವೆಂದರೆ ಉಚ್ಚಾರಣಪ್ರಸಕ್ತವಾದ ವರ್ಣವನ್ನು ಉಚ್ಚರಿಸದೆ ಇರುವುದು. ಇದಕ್ಕೆ **ಪಾಣಿನಿ** ವ್ಯಾಕರಣ

ದಲ್ಲಿ— '**ಅದರ್ಶನಂ ಲೋಪಃ**' ಎಂಬ ಸೂತ್ರದಿಂದ 'ಲೋಪ' ಸಂಜ್ಞೆ ಹೇಳಲ್ಪಟ್ಟಿರುವುದು. ಆದುದರಿಂದಲೇ ಇಲ್ಲಿಯೂ ವ್ಯವಹರಿಸಬೇಕೆಂದು ಇಲ್ಲಿ ಬೇರೆ 'ಲೋಪ' ಸಂಜ್ಞಾ ಸೂತ್ರವನ್ನು ಹೇಳಿಲ್ಲ. ಆದುದರಿಂದ ಇಲ್ಲಿ ಸ್ವರಕ್ಕೆ ಸ್ವರವು ಪರವಾಗಲು ಲೋಪ ಬರುವುದೆಂದರೆ ಪೂರ್ವ ಸ್ವರಕ್ಕೆ ಉಚ್ಚಾರಣೆ ಇಲ್ಲವೆಂದು ಅರ್ಥವಾಗುವುದು.

ಇಲ್ಲಿ 'ಅನಾಮಹಾನೌ' ಎಂದು ಹೇಳಿರುವುದರಿಂದ–ನಾಮವೆಂದರೆ ಲೋಕಪ್ರಸಿದ್ಧಿ, ಇದರ ಹಾನಿಯೆಂದರೆ – ಆ ಪ್ರಸಿದ್ಧಿ ಕೆಡದಿರುವ ಪಕ್ಷದಲ್ಲಿ – ಎಂದರ್ಥವಾಗುವುದು. ಇದರಿಂದ ಲೋಪವೂ ಯಗಾಗಮವೂ ಏಕವಿಷಯಕವೆಂದು ಭ್ರಮಿಸದೆ ನಾಮಹಾನಿ ವಿಷಯದಲ್ಲಿ ಯಗಾಗಮವೂ ಅನಾಮಹಾನಿ ವಿಷಯದಲ್ಲಿ ಲೋಪವೂ ಬರುವುದೆಂದು ವಿಷಯವ್ಯವಸ್ಥೆಯನ್ನು ಮಾಡಿಕೊಳ್ಳಬೇಕು.

ಈ ಸೂತ್ರವು 'ದೇಹಲೀದೀಪನ್ಯಾಯ' ದಿಂದ ಹಿಂದೆ ಹೇಳಿದ ಯಗಾಗಮಕ್ಕೂ ಮುಂದೆ ಹೇಳುವ ವಗಾಗಮಾದಿಗಳಿಗೂ ಅಪವಾದವೆಂದು ತಿಳಿಯಬೇಕು. ಆದುದರಿಂದ ಇಲ್ಲಿ ನಾಮಹಾನಿ ವಿಷಯದಲ್ಲಿ ಯಗಾದಿಗಳೂ ಅನಾಮಹಾನಿ ವಿಷಯದಲ್ಲಿ ಲೋಪವೂ ಬರುವುವೆಂದು ಫಲಿತವಾಗುವುದು.

ಆದರೆ, ಎಲ್ಲ ನಾಮಹಾನಿ ಇರುವುದು, ಎಲ್ಲಿ ಇಲ್ಲ ಎಂಬುದು ಶಿಷ್ಟಪ್ರಯೋಗದಿಂದ ತಿಳಿದುಕೊಳ್ಳಬೇಕು. ಆದುದರಿಂದ— 'ಎನ್ನ + ಅರಸಂ' ಎಂಬಲ್ಲ ಲೋಪಮಾಡದಿದ್ದರೆ ಎಂತಹ ಅರ್ಥವು ತೋರುವುದೋ ಅದೇ ಅರ್ಥವು ಲೋಪ ಮಾಡಿದಾಗಲೂ ತೋರುವುದರಿಂದ ಇಲ್ಲಿ ನಾಮಹಾನಿಯಿಲ್ಲವೆಂದು ತಿಳಿಯುವುದು. ಹೀಗೆಯೆ 'ತನ್ನಾಳ್' ಮೊದಲಾದ ಪ್ರಯೋಗಗಳಲ್ಲೂ ತಿಳಿಯಬೇಕು. 'ಸತಿಯಿವಳ್' 'ಪತಿಯಿತಂ' ಮೊದಲಾದ ಪ್ರಯೋಗಗಳಲ್ಲಿ ಲೋಪವನ್ನು ಮಾಡಲು ನಾಮಹಾನಿಯಾಗುವುದರಿಂದ ಲೋಪವು ಬರುವುದಿಲ್ಲವೆಂದು ತಿಳಿಯಬೇಕು.

ಏವಂಚ ಈ ಸೂತ್ರವನ್ನೂ ಯಗಾದಿವಿಧಾಯಕ ಸೂತ್ರಗಳನ್ನೂ ಪರ್ಯಾಲೋಚಿಸಿದರೆ ಅನಾಮಹಾನಿ ವಿಷಯದಲ್ಲಿ ಸ್ವರಕ್ಕೆ ಸ್ವರವು ಪರವಾಗಲು ಲೋಪವೂ ನಾಮಹಾನಿ ವಿಷಯದಲ್ಲ 'ಯಕ್, ವಕ್' ಮೊದಲಾದುವೂ ಬರುವುವೆಂದು ಪರ್ಯವಸನ್ನವಾಗುವುದು. ಆದುದರಿಂದ ಯಗಾದಿಗಳಿಗಿಂತಲೂ ಲೋಪವು ಸಾಮಾನ್ಯವಿಷಯಕವೆಂದು ತಿಳಿಯುವುದು. ಆದುದರಿಂದ ಸಾಮಾನ್ಯವನ್ನು ಮೊದಲು ಹೇಳಿ ವಿಶೇಷವನ್ನು ಆಮೇಲೆ ಹೇಳುವುದು ಸರ್ವಶಾಸ್ತ್ರಕಾರರ ಶೈಲಿಯಾಗಿದ್ದರೂ **ಶಾಸನಕಾರನು** ಸಂಧಿಪ್ರಕರಣ ಪ್ರಾರಂಭದಲ್ಲೇ ಲೋಪವನ್ನು ಹೇಳುವುದು ಅಮಂಗಳಕರವೆಂದು ಭಾವಿಸಿ ಭಾವರೂಪವಾದ ಯಗಾಗಮವನ್ನು ಮೊದಲು ಹೇಳಿ ಆಮೇಲೆ ಲೋಪವನ್ನೂ ವಗಾದಿಗಳನ್ನೂ ಹೇಳಿರುವನು.

**ದರ್ಪಣಕಾರ**ನಾದರೋ —

> **ಸ್ವರಮಿದಿರೊಳಿರೆ ವಿಭಕ್ತಿ**
> **ಸ್ವರಕಂ ಪ್ರಕೃತಿಸ್ವರಕ್ಕಂ ಅಕ್ಕುಂ ಲೋಪಂ**
> **ವರಸಂಸ್ಕೃತ-ಕರ್ಣಾಟಕ**
> **ಮೆರಡರೊಳಂ ನಾಮರೂಢಿಯಳಿಯದ ಪಕ್ಷಂ ( ಸೂತ್ರ ೫೨ )**

ಎಂಬ ಸೂತ್ರದಿಂದ ಲೋಪವನ್ನು ವಿಧಿಸಿ ಆಮೇಲೆ ಯಗಾದಿಗಳನ್ನು ವಿಧಿಸಿರುವನು. ಮತ್ತು **ಶಾಸನ**ದಲ್ಲ ಅನಾಮಹಾನಿ ವಿಷಯದಲ್ಲಿ ಸ್ವರಸಾಮಾನ್ಯಕ್ಕೂ ಸ್ವರವು ಪರವಾಗಲು ಲೋಪ

ಬರುವುದೆಂದು ಹೇಳಲ್ಪಟ್ಟಿದೆ. **ದರ್ಪಣ**ದಲ್ಲಿ ಹಿಂದೆ ಹೇಳಿರುವ ಸೂತ್ರದಿಂದ — ಸ್ವರಪರಕವಾದ ಸಂಸ್ಕೃತ-ಪ್ರಕೃತಿಕ ಕರ್ಣಾಟಕಶಬ್ದ-ಪ್ರಕೃತಿಕ ಕರ್ಣಾಟಕ ನಾಮಾಖ್ಯಾತ ವಿಭಕ್ತಿಸ್ವರಕ್ಕೂ, ಸಂಸ್ಕೃತ ಕರ್ಣಾಟಕ ಪ್ರಕೃತಿಗಳಿಗೆ ನಾಮಾಖ್ಯಾತ ವಿಭಕ್ತ್ಯಾದಿಗಳನ್ನು ಕೂಡಿಸುವಾಗ ಆ ಪ್ರಕೃತಿಗಳ ಸಹಜಸ್ವರಕ್ಕೂ ನಾಮಪ್ರಸಿದ್ಧಿ ಕೆಡದ ಪಕ್ಷದಲ್ಲಿ ಲೋಪ ಬರುವುದೆಂದು ವಿಷಯ ವಿಭಾಗ ಮಾಡಿ ಹೇಳಲ್ಪಟ್ಟಿದೆ. ಇವೆರಡಕ್ಕೂ ಬುದ್ಧಿಶಾಲಿಗಳು ಸಾಮಾನ್ಯ-ವಿಶೇಷ ಶಾಸ್ತ್ರಗಳ ಪರ್ಯಾಲೋಚನೆಯಿಂದ ಐಕಕಂಠ್ಯವನ್ನು ಕಲ್ಪಿಸಿ ಲಕ್ಷ್ಯಗಳ ಸಾಧುತ್ವವನ್ನು ಹೇಳಬೇಕು.

**ಅವತಾರಿಕೆ ೩೭**

ಹಿಂದೆ ಸ್ವರಸಾಮಾನ್ಯಕ್ಕೂ ಅನಾಮಹಾನಿ ವಿಷಯದಲ್ಲಿ ಲೋಪವೂ ನಾಮಹಾನಿ ವಿಷಯ ದಲ್ಲಿ ಯಗಾಗಮವೂ ಬರುವುದೆಂದು ಹೇಳಲ್ಪಟ್ಟಿತು. ಈಗ ' ವಧು+ ಇವಳ್, ಗುರು+ ಈತಂ ' ಮೊದಲಾದ ಪ್ರಯೋಗಗಳಲ್ಲಿಯೂ ನಾಮಹಾನಿ ವಿಷಯದಲ್ಲಿ ವಿಹಿತವಾದ ಯಗಾಗಮವು ಪ್ರಸಕ್ತ ವಾಗುವುದೆಂದು ಅದಕ್ಕೆ ಅಪವಾದ ಸೂತ್ರವನ್ನು ಹೇಳುತ್ತಾನೆ.

**ಸೂತ್ರಂ || ರಾವೋರ್ವಕ್ || ೩೭ ||**

**ಅರ್ಥ || ಋವರ್ಣ, ೡವರ್ಣ, ಔಕಾರ ಉವರ್ಣಗಳಿಗೆ ಸ್ವರವು ಪರವಾಗಲು ವಗಾಗಮವು ಬರುವುದು.**

**ಉದಾಹರಣೆ** || ಹೋತೃ + ಇಂ = ಹೋತೃವಿಂ || ಹೀಗೆಯೆ ಕ್ರಮವಾಗಿ — ' ಮಾತೃವಿಂ, ಗ್ರ್ಯಾವಿಂ, ಗ್ರ್ಯಾವಿನ, ೡವೆಂದಂ, ೡವೆಂದಂ, ನೌವಿದು, ಗ್ಲೌವಿದು, ವಧುವಿವಳ್, ಗುರುವೀತಂ, ಭ್ರೂವಿದು, ಪೂವೊಳ್ಳಿತ್ತು ' ಮೊದಲಾದ ಪ್ರಯೋಗಗಳನ್ನೂ ಇದಕ್ಕೆ ಉದಾಹರಣೆ ಗಳನ್ನಾಗಿ ತಿಳಿದುಕೊಳ್ಳಬೇಕು.

**ವಿಚಾರ ೩೭**

ಈ ಸೂತ್ರದಲ್ಲಿ ಹೇಳಿರುವ ' ರಾವೋಃ ' ಎಂಬ ಪದದಲ್ಲಿ ಸಂಸ್ಕೃತಸಂಧಿ ಕಾರ್ಯದಿಂದ — **ಋ, ೡ, ಔ, ಉ** ಎಂಬ ನಾಲ್ಕು ಸ್ವರವರ್ಣಗಳು ಸೇರಿವೆಯೆಂದು ತಿಳಿಯಬೇಕು. ಅವುಗಳಲ್ಲಿ - ಋ, ೡ, ಉ ಎಂಬೀ ಮೂರು ವರ್ಣಗಳೂ ಹ್ರಸ್ವ-ದೀರ್ಘ-ಪ್ಲುತ ಸಾಧಾರಣವಾಗಿ ನಿರ್ದೇಶಿಸ ಲ್ಪಟ್ಟಿವೆ. ಆದರೂ ಪ್ಲುತಕ್ಕೆ ಪ್ರಕೃತಿಭಾವವನ್ನು ಮುಂದೆ ವಿಧಿಸಿರುವುದರಿಂದ ಅದನ್ನು ಬಿಟ್ಟು ಉಳಿದ ಹ್ರಸ್ವ, ದೀರ್ಘಗಳನ್ನೆ ಇಲ್ಲಿ ಗ್ರಹಿಸಬೇಕು. ಔ ಕಾರವಾದರೋ ಸ್ವತಃ ದೀರ್ಘವಾಗಿಯೆ ಇರುವುದರಿಂದ ಅದು ದೀರ್ಘಪ್ಲುತಗಳೆರಡಕ್ಕೂ ಬೋಧಕವಾಗಿದ್ದರೂ ಇಲ್ಲಿ ಪ್ಲುತವನ್ನು ಬಿಟ್ಟು ದೀರ್ಘ ಮಾತ್ರವನ್ನು ಗ್ರಹಿಸಬೇಕು.

ಕನ್ನಡ ಭಾಷೆಯಲ್ಲಿ ಪ್ರಾಯಶಃ ಋ ಕಾರಾಂತ ಶಬ್ದಗಳಿಲ್ಲವಾದುದರಿಂದ ಸಂಸ್ಕೃತ ಋ ಕಾರಾಂತ ಶಬ್ದಗಳನ್ನೆ ಈ ಸೂತ್ರಕ್ಕೆ ಉದಾಹರಣೆಯಾಗಿ ಕೊಡಲ್ಪಟ್ಟಿದೆ. ಇದರಂತೆ ೠ ಕಾರಾಂತ ಶಬ್ದವೂ ಇಲ್ಲವಾದುದರಿಂದ ಸಂಸ್ಕೃತ ೠ ಕಾರಾಂತ ಧಾತುಗಳನ್ನು ಅನುಕರಿಸಿ ಹೇಳಲ್ಪ ಟ್ಟಿದೆ. ೡ ಕಾರವು ಆವ ಭಾಷೆಯಲ್ಲಿಯೂ ಇಲ್ಲ. ಆದಾಗ್ಯೂ **ಪತಂಜಲಿ** ಮಹಾಭಾಷ್ಯದಲ್ಲಿ — **' ದಧಿಋತಕಾಯ ದೇಹೀತಿ ವಕ್ತುಂ ಪ್ರವೃತ್ತಾ ಕುಮಾರೀ ಕರಣಾದ್ಯಪಾಟವಾತ್ ದಧಿ ೡತಕಾಯ ದೇಹೀತ್ಯಾಹ ಇತ್ಯಶಕ್ತಿಜಾನುಕರಣಂ '** ಎಂದು ಹೇಳಿರುವಂತೆ ಭಾಷೆಯಲ್ಲಿಯೂ ೡ ಕಾರವು

ಅಶಕ್ತಿಜಾನುಕರಣವೆಂದು ತಿಳಿಯಬೇಕು. ಹೀಗೆಯೇ ಔ ಕಾರಾಂತವಾದ ಶಬ್ದಗಳೂ ಪ್ರಾಯಶಃ ಸಂಸ್ಕೃತಪ್ರಕೃತಿಗಳನ್ನೆ ಆರಿಸಿ ಇಲ್ಲಿ ಉದಾಹರಿಸಲ್ಪಟ್ಟಿವೆ. **ದರ್ಪಣ**ದಲ್ಲಿ — '**ಚೌವಿವಂ**' ಎಂದು ಕರ್ಣಾಟಕ ಭಾಷಾಶಬ್ದವೂ ಉದಾಹರಿಸಲ್ಪಟ್ಟಿದೆ. ಉ ವರ್ಣಾಂತವಾದ ಶಬ್ದಗಳು ಸಂಸ್ಕೃತ-ಕರ್ಣಾಟಕೋಭಯಾತ್ಮಕಗಳು ದೊರೆಯುವುದರಿಂದ ಉಭಯ ವಿಧವಾದ ಶಬ್ದಗಳೂ ಉದಾಹರಿಸಲ್ಪಟ್ಟಿವೆ.

ಈ ಸೂತ್ರವು ಯಗಾಗಮಕ್ಕೆ ಅಪವಾದವಾದುದರಿಂದ ನಾಮಹಾನಿ ವಿಷಯದಲ್ಲಿಯೇ ವಗಾಗಮವು ಪ್ರವರ್ತಿಸುವುದೆಂದು ತಿಳಿಯಬೇಕು. ಆದುದರಿಂದ ಅನಾಮಹಾನಿ ವಿಷಯದಲ್ಲಿ ಋ ವರ್ಣಾದಿಗಳಿಗೆ ಲೋಪವೆ ಬರುವುದೆಂದು ತಿಳಿಯಬೇಕು. ಇವಕ್ಕೆ ಉದಾಹರಣೆಗಳನ್ನು ಪ್ರಯೋಗಜ್ಞರು ಶಿಷ್ಟ ಪ್ರಯೋಗದಿಂದ ಊಹಿಸಿಕೊಳ್ಳುವುದು.

ಈ ವಗಾಗಮ ವಿಷಯದಲ್ಲಿ **ದರ್ಪಣಕಾರ**ನು —

ಅವತರಿಸಿರ್ಕುಮುವರ್ಣದ
ಋವರ್ಣದೋತ್ಔತ್ವದಗ್ರದೋಳ್ ಸ್ವರಮಿರೆ ವ
ತ್ವವಿಧಾನಂ ಬಹುಳತೆ ಯ
ತ್ವ ವತ್ವದೊಳ್ ಸಂಸ್ಕೃತಕ್ಕೆ ತಾನಿಲ್ಲೆಂದುಂ ( ಸೂತ್ರ ೫೫ )

ಎಂಬ ಸೂತ್ರವನ್ನು ಹೇಳಿ — ಉ, ಊ, ಋ, ೠ, ಓ, ಔ ಎಂಬ ಸ್ವರಗಳಿಗೆ ಸ್ವರವು ಪರವಾಗಲು ನಡುವೆ ವ ಕಾರಾಗಮವು ಬರುವುದೆಂದೂ ಸಂಸ್ಕೃತ ಶಬ್ದಪ್ರಕೃತಿಗಳಲ್ಲಿ ಈ ವ ಕಾರಾಗಮಕ್ಕೂ ಹಿಂದೆ ಹೇಳಿದ ಯ ಕಾರಾಗಮಕ್ಕೂ ಬಹುಳತೆಯಿಲ್ಲವೆಂದೂ ಅರ್ಥವನ್ನು ಹೇಳಿರುವನು. ಇಲ್ಲ 'ಸಂಸ್ಕೃತದೊಳ್' ಎಂದು ಹೇಳಿರುವುದರಿಂದ ಕರ್ಣಾಟಕಶಬ್ದ ವಿಷಯದಲ್ಲಿ ಯತ್ವ-ವತ್ವಗಳು ವೈಕಲ್ಪಿಕಗಳೆಂದೂ ಸಂಸ್ಕೃತಶಬ್ದಗಳ ವಿಷಯದಲ್ಲಿ ನಿತ್ಯಗಳೆಂದೂ ಫಲಿತವಾಗುವುದು.

**ಶಾಸನ**ದಲ್ಲಿಯೂ ಹೀಗೆ ಸ್ಪಷ್ಟವಾಗಿ ಹೇಳದಿದ್ದರೂ— '**ಅತ ಓಕ್ಸ್ಯೇ ||೩೦||**' ಎಂಬ ಸೂತ್ರದಲ್ಲಿ '**ಒದೋೀ ಬಹುಲಂ || ೩೯ ||**' ಎಂಬ ಸೂತ್ರದಲ್ಲಿರುವ ಬಹುಳಗ್ರಹಣವುಂಟೆಂದು ವ್ಯಾಖ್ಯಾನ ಮಾಡಿ ಕೆಲವು ಲಕ್ಷ್ಯಗಳನ್ನು ಸಾಧಿಸುವುದರಿಂದ **ದರ್ಪಣ**ದಲ್ಲಿ ಉಕ್ತವಾದ ಅರ್ಥವೂ ಸಿದ್ಧಿಸುವುದು. ಮತ್ತು **ದರ್ಪಣ**ದಲ್ಲಿ ಓ ಕಾರಕ್ಕೆ ವ ಕಾರಾಗಮವನ್ನು ವಿಧಿಸಿರುವುದು. **ಶಾಸನ**ದಲ್ಲಿ — 'ರಾವೋರ್ವಕ್' ಎಂಬ ಸೂತ್ರದಲ್ಲಿ ಓ ಕಾರ ಗ್ರಹಣವನ್ನು ಮಾಡಿ ವ ಕಾರಾಗಮವನ್ನು ವಿಧಿಸದಿದ್ದರೂ— '**ಒದೋೀ ಬಹುಲಂ**' ಎಂಬ ಸೂತ್ರದಲ್ಲಿ ಹೇಳಿರುವ (ಹ್ರಸ್ವ) ಒ ಕಾರದಿಂದ ದೀರ್ಘಕ್ಕೂ ಸಿದ್ಧಿಸುವುದು. ಆದರೆ ಈ ಸೂತ್ರದಲ್ಲಿ ಮಾತ್ರ ಬಹುಳಗ್ರಹಣವನ್ನು ಮಾಡಿರುವುದರಿಂದ ವಗಾಗಮವು ಒ, ಓ, ವರ್ಣಗಳಿಗೆ ಮಾತ್ರ ವಿಕಲ್ಪವೆಂದು ತೋರುವುದು. ಆದಾಗ್ಯೂ ಈ ಬಹುಳಗ್ರಹಣವನ್ನು ಲಕ್ಷ್ಯಾನುಸಾರವಾಗಿ ಪೂರ್ವಸೂತ್ರದಲ್ಲಿಯೂ ಸಂಬಂಧಿಸಿ ವ್ಯಾಖ್ಯಾನ ಮಾಡುವುದರಿಂದಲೂ 'ಬಹುಲ' ಪದಕ್ಕೆ–'ಬಹೂನ್ ಅರ್ಥಾನ್ ಲಾತೀತಿ ಬಹುಲಂ' ಎಂಬ ವ್ಯುತ್ಪತ್ತಿಯಿಂದ ನಾಲ್ಕು ಬಗೆಯ ಅರ್ಥವನ್ನು ಸ್ವೀಕರಿಸಿರುವುದರಿಂದಲೂ ಅನೇಕ ಲಕ್ಷ್ಯಗಳನ್ನು ಸಾಧಿಸುವುದಕ್ಕಾಗುವುದರಿಂದ **ದರ್ಪಣ-ಶಾಸನ**ಗಳೆರಡಕ್ಕೂ ಈ ವಿಷಯದಲ್ಲಿ ತಾರತಮ್ಯವಿಲ್ಲವೆಂದೇ ತಿಳಿಯುವುದು.

**ದರ್ಪಣ**ದಲ್ಲಿ ಋ ಕಾರವನ್ನು ಹೇಳದಿರುವುದರಿಂದ ಅವನ ಮತದಲ್ಲಿ ಋ ಕಾರಾಂತ ಶಬ್ದವು ಪ್ರಸಿದ್ಧವಾಗಿಲ್ಲವೆಂದು ತಿಳಿಯುವುದರಿಂದ ಈ ವಿಷಯದಲ್ಲಿ ಮಾತ್ರ ಭೇದವಿರುವುದೆಂದೆಣಿಸಬೇಕು.

ಮತ್ತು **ದರ್ಪಣ**ದಲ್ಲಿಯೂ ಬಹುಳತೆಯು ಸಂಸ್ಕೃತದಲ್ಲಿಲ್ಲವೆಂದೂ ಭಾಷೆಯಲ್ಲಿ ಉಂಟೆಂದೂ ಹೇಳಿರುವುದರಿಂದ ಇ, ಈ ಎಂಬಕ್ಷರಗಳನ್ನನುಸರಿಸಿ ಹೇಳುವಾಗ ನಡುವೆ ವ ಕಾರಾಗಮವು ಬಂದು — 'ಈವೀಗ್ರಂಥಂಗಳ್, ಈವಿದುಗ್ರಂಥಂ' ಎಂಬ ಪ್ರಯೋಗಗಳು ಸಿದ್ಧಿಸುವುವೆಂದೂ ಕನ್ನಡದಲ್ಲಿ ಯತ್ವವತ್ವಗಳ ಬಹುಳತೆಯಿಂದ 'ಒತ್ತೆ + ಇಟ್ಟಂ' ಮೊದಲಾದ ಕೆಲವು ಪ್ರಯೋಗಗಳಲ್ಲಿ ಲೋಪವೂ ಯ ಕಾರ ವ ಕಾರಾಗಮಗಳೂ ಬಂದು — 'ಒತ್ತಿಟ್ಟಂ, ಒತ್ತೆಯಿಟ್ಟಂ' ಮೊದಲಾದುವು ಸಿದ್ಧಿಸುವುವೆಂದೂ ಹೇಳಿ, ಸಂಸ್ಕೃತದಲ್ಲಿ ನಿತ್ಯಕ್ಕೆ — 'ನದಿಯೆಲ್ಲಂ, ಸುರಸಿಂಧುವೆ, ವಿಧುವಿಲ್ಲದಿರುಳ್' —

ವಿಧುವಿಲ್ಲದಿರುಳ್ ತನ್ನಂಬಿ
ವಧುವಿಲ್ಲದ ಲೀಲೆ ಮಧುರಮಧುವಿಲ್ಲದ ಪೂ
ದಧಿಯಿಲ್ಲದೂಣೆಸದೇವುದೊ
ಬುಧರಿಲ್ಲದ ಸಭೆ ಸರಸ್ವತೀಮುಖತಿಲಕಾ

ಮೊದಲಾದುವು ಉದಾಹರಿಸಲ್ಪಟ್ಟಿವೆ. ಇವೆಲ್ಲಾ **ಶಾಸನ**ದಲ್ಲಿ ಹೇಳಿರುವ 'ಬಹುಳ' ಗ್ರಹಣವೊಂದರಿಂದಲೆ ಸಿದ್ಧವಾಗುವುವೆಂದು ತಿಳಿಯಬೇಕಾಗುವುದು.

**ಅವತಾರಿಕೆ ೩೮**

ಪೂರ್ವಸೂತ್ರವನ್ನು ಪರ್ಯಾಲೋಚಿಸಲು — ಋ, ೠ, ಌ, ೡ, ಔ, ಉ, ಊ, ಎಂಬ ಸ್ವರವರ್ಣಗಳನ್ನು ಬಿಟ್ಟು ಉಳಿದ ಸ್ವರಗಳಿಗೆ ಸ್ವರವು ಪರವಾದಾಗ ನಾಮಹಾನಿವಿಷಯದಲ್ಲಿ ಯಗಾಗಮವೆ ಬರುವುದೆಂದು ತೋರುವುದು. ಆದುದರಿಂದ 'ಆ + ಉದಕಂ' ಮೊದಲಾದ ಕೆಲವು ಪ್ರಯೋಗಗಳಲ್ಲಿಯೂ ಯ ಕಾರಾಗಮವೇ ಪ್ರಸಕ್ತವಾಗುವುದೆಂದು ಅದಕ್ಕೆ ಅಪವಾದ ಸೂತ್ರವನ್ನು ಹೇಳುತ್ತಾನೆ.

**ಸೂತ್ರಂ || ಆತ ಓಷ್ಠ್ಯೇ || ೩೮ ||**

**ಅರ್ಥ || ಆ ಕಾರಕ್ಕೆ ಓಷ್ಠಸ್ಥಾನದಲ್ಲಿ ಹುಟ್ಟಿದ ಸ್ವರವು ಪರವಾಗಲು ವಗಾಗಮವೆ ಬರುವುದು. ಇಂತಹ ಪ್ರಯೋಗಗಳಲ್ಲಿ ಯಗಾಗಮವಿಲ್ಲವೆಂದು ತಾತ್ಪರ್ಯವು.**

**ಉದಾಹರಣೆ** || ಆ + ಉದಕಂ = ಆವುದಕಂ || ಹೀಗೆಯೆ — 'ಆವೂರ್, ಆವೊಲೆ, ಆವೋಲೆ' ಮೊದಲಾದುವನ್ನು ತಿಳಿಯಬೇಕು.

**ವಿಚಾರ ೩೮**

ಈ ಸೂತ್ರದಲ್ಲಿ ಹೇಳಿರುವ 'ಓಷ್ಠ್ಯೇ' ಎಂಬ ಪದಕ್ಕೆ ತುಟಿಯಲ್ಲಿ ಹುಟ್ಟಿದ ವರ್ಣವೆಂದು ಅರ್ಥವಾಗುವುದು. ಆ ವರ್ಣವಾವುದೆಂದರೆ ಸಾಮಾನ್ಯವಾಗಿ ಉವರ್ಣ, ಪವರ್ಗ, ಉಪಧ್ಮಾನೀಯಗಳೆಂದು ತೋರುವುದು. ಆದಾಗ್ಯೂ ಇಲ್ಲಿ ಓಷ್ಠ್ಯ ಸ್ವರವಾದ ಉ ವರ್ಣವನ್ನೇ ಗ್ರಹಿಸಬೇಕು. ಆದರೆ ಉದಾಹರಣೆಯನ್ನು ಕೊಡುವಾಗ — ಆವೊಲೆ, ಆವೋಲೆ ಮೊದಲಾದೆಡೆಗಳಲ್ಲಿ ಒ, ಓ ಕಾರಗಳನ್ನೂ ಹೇಳಿರುವುದು. ಆದುದರಿಂದ ಸೂತ್ರದಲ್ಲಿ ಹೇಳಿರುವ ಓಷ್ಠ್ಯಪದದಿಂದ ಕಂಠೋಷ್ಠ್ಯ

ಗಳಾದ ಒ, ಓ, ಔ ಕಾರಗಳನ್ನೂ 'ಶತೇಪಂಚಾಶನ್ನ್ಯಾಯ' ದಿಂದ ಕಂಠೋಷ್ಠಸ್ಥಾನಗಳಲ್ಲಿ ಓಷ್ಠಸ್ಥಾನವೂ ಸೇರಿರುವುದರಿಂದ ಅವನ್ನು ಇಲ್ಲಿ ಉದಾಹರಿಸಲಾಗಿದೆ — ಎಂದು ತಿಳಿಯವುದು. ಆದರೆ ಈ ನ್ಯಾಯದಿಂದ ದಂತೋಷ್ಠಗಳಲ್ಲಿ ಹುಟ್ಟಿದ ವ ಕಾರಕ್ಕೂ ಗ್ರಹಣವುಂಟಾಗುವುದೆಂಬ ಶಂಕೆ ತೋರುವುದು. ಆದಾಗ್ಯೂ ಈ ಸೂತ್ರವಲ್ಲಿ ಸ್ವರಪದವನ್ನು ಸಂಬಂಧಿಸಿ ಓಷ್ಠ್ಯಸ್ವರವು ಪರವಾಗಲು ಎಂದರ್ಥವನ್ನು ಹೇಳಿರುವುದರಿಂದ ವ್ಯಂಜನದಲ್ಲಿ ಸೇರಿರುವ ವ ಕಾರಕ್ಕೆ ಗ್ರಹಣ ವಿಲ್ಲವೆಂದು ತಾತ್ಪರ್ಯವು.

ಅಥವಾ ಮತಾಂತರದಲ್ಲಿ ಒ, ಓ, ಔ ಕಾರಗಳಿಗೆ ಓಷ್ಠ್ಯವೊಂದೆ ಸ್ಥಾನವೆಂದಂಗೀಕರಿಸಿರು ವುದರಿಂದ ಓಷ್ಠ್ಯಪದದಿಂದ ಇಲ್ಲಿ ಅವೇ ಗೃಹಿಸಲ್ಪಡುವುವೆಂದು ತಿಳಿಯಬೇಕು. ಆದರೆ ಆವಾವ ವರ್ಣಕ್ಕೆ ಆರಾರ ಮತದಲ್ಲಿ ಆವಾವ ಸ್ಥಾನವಿರುವುದೆಂದರೆ —

**ಅಷ್ಟೌ ಸ್ಥಾನಾನಿ ವರ್ಣಾನಾಮುರಃ ಕಂಠಃ ಶಿರಸ್ತಥಾ**
**ಜಿಹ್ವಾಮೂಲಂ ಚ ದಂತಾಶ್ಚ ನಾಸಿಕೌಷ್ಠೌ ಚ ತಾಲು ಚ**

ಎಂಬ ವಚನದಿಂದ ವರ್ಣೋತ್ಪತ್ತಿ ಸ್ಥಾನಗಳು ಎಂಟೆಂದು ತೋರುವುದು. **ದರ್ಪಣ** ಕಾರನೂ ಇದೇ ಅರ್ಥವನ್ನು ಸೂಚಿಸುವ —

ಕೊರಲುಂ ಜಿಹ್ವಾಮೂಲಮು
ಮುರಮುಂ ತಾಲುಗೆಯುಮೋಷ್ಠಮುಂ ನಾಸಿಕೆಯುಂ
ಶಿರಮುಂ ದಂತಮುಮೆಂದ
ಕ್ಷರಮುದಯಿಪ ತಾಣಮಾದುವೀ ಪೇಟ್ಟೆಂಟುಂ (ಸೂತ್ರ ೩೦)

ಎಂಬ ಸೂತ್ರವನ್ನು ಹೇಳಿರುವನು.

ಈಯೆಂಟು ಸ್ಥಾನಗಳಲ್ಲಿ—ಅವರ್ಗ, ಕವರ್ಗ, ಹಕಾರ, ವಿಸರ್ಜನೀಯ ಜಿಹ್ವಾಮೂಲೀಯ ಗಳಿಗೆ **ಕಂಠ**ಸ್ಥಾನವೂ; ಇವರ್ಣ, ಎ, ಏ, ಐ, ಚವರ್ಗ, ಯ ಕಾರ, ಶ ಕಾರಗಳಿಗೆ **ತಾಲು**ಸ್ಥಾನವೂ, ಉವರ್ಣ, ಓ ಔ, ಪವರ್ಗ, ಉಪಧ್ಮಾನೀಯಗಳಿಗೆ **ಓಷ್ಠ**ಸ್ಥಾನವೂ; ಋವರ್ಣ, ಟವರ್ಗ, ರೇಫ ಷ ಕಾರಗಳಿಗೆ **ಮೂರ್ಧ**ಸ್ಥಾನವೂ; ಌವರ್ಣ, ತವರ್ಗ, ಲಕಾರ, ಸ ಕಾರಗಳಿಗೆ **ದಂತ**ಸ್ಥಾನವೂ; ವ ಕಾರಕ್ಕೆ **ದಂತೋಷ್ಠ**ಸ್ಥಾನವೂ; ಅನುಸ್ವಾರಕ್ಕೆ **ನಾಸಿಕ**ಸ್ಥಾನವೂ ಉತ್ಪತ್ತಿಸ್ಥಾನ ಗಳೆಂದು ಕೆಲವು ಶಿಕ್ಷಾಕಾರರು ಹೇಳಿರುವರು. ಮತ್ತೆ ಕೆಲವರು— ಹ ಕಾರ ವಿಸರ್ಜನೀಯಗಳಿಗೆ **ಉರಸ್ಸೆಂ**ತಲೂ; ಕ ವರ್ಗ ಜಿಹ್ವಾಮೂಲೀಯಗಳಿಗೆ **ಜಿಹ್ವೆ**ಯೆಂತಲೂ; ಅವರ್ಣಕ್ಕೆ **ಸರ್ವಮುಖ** ಸ್ಥಾನವೂ; ಏ, ಐ ಕಾರಗಳಿಗೆ **ಕಂಠತಾಲು**ಗಳೆಂತಲೂ; ಓ, ಔ ಕಾರಗಳಿಗೆ **ಕಂಠೋಷ್ಠ** ಗಳೆಂತಲೂ; ರೇಫಕ್ಕೆ **ದಂತಮೂಲ**ವೆಂತಲೂ; ವ ಕಾರಕ್ಕೆ **ಸೃಕ್ವ**ವೆಂತಲೂ; ಅನುಸ್ವಾರಕ್ಕೆ **ಕಂಠನಾಸಿಕ**ವೆಂತಲೂ ಸ್ಥಾನಗಳನ್ನು ಹೇಳುತ್ತಾರೆ. ಹೀಗೆ ಭಿನ್ನಭಿನ್ನವಾಗಿರುವ ಶಿಕ್ಷಾಕಾರರ ಮತದಿಂದ ಸ್ಥಾನಗಳು ಭಿನ್ನಭಿನ್ನಗಳಾಗಿದ್ದರೂ ಪ್ರಕೃತದಲ್ಲಿ — ಒ, ಓ, ಔ ಕಾರಗಳು ಓಷ್ಠ್ಯ ಗಳೆಂದು ಹೇಳುವುದರಲ್ಲಿ ಯಾವ ವಿವಾದವೂ ಇರುವುದಿಲ್ಲ. ಆದುದರಿಂದ ಈ ಸೂತ್ರದಲ್ಲಿ— **ಉ** ವರ್ಣವೂ ಭಾಷಾವಿಷಯವಾದ ಹ್ರಸ್ವವಾದ **ಒ** ಕಾರವೂ **ಓ ಔ** ಕಾರಗಳೂ 'ಓಷ್ಠ್ಯ' ಪದದಿಂದ ಗ್ರಹಿಸಿ ಅವು ಪರವಾಗಲು **ಅ** ಕಾರಕ್ಕೆ ವಗಾಗಮವು ಬರುವುದೆಂದು 'ಅವುದಕಂ'

ಮೊದಲಾದುವು ಉದಾಹರಿಸಲ್ಪಟ್ಟಿವೆ. ಕೆಲವರು—'ಈವೂರ್, ಈವೊಕ್ಕಲ್' ಮೊದಲಾದ ವಾಕ್ಯಪ್ರಯೋಗಗಳನ್ನೂ—

ಮಾವುಂ ಮಲ್ಲಿಗೆಯುಂ ಕರ
ಮಾವರಿಸಿದ ಕತದಿನೆಸೆವುದೀಕ್ಷಿಸುವರ ಕ
ಣ್ಗೀವುದ್ಯಾನಂ ಸರಸವಿ
ಟೀವಿಟಶಯ್ಯಾನಿವಾಸಮುಂ ನೆನೆಯಿಸುತುಂ

ಎಂಬ ಪದ್ಯಪ್ರಯೋಗಗಳನ್ನೂ ನೋಡಿ, ಈ ಸೂತ್ರದಲ್ಲಿ ಮುಂದಿನ ಸೂತ್ರದಿಂದ 'ಬಹುಳ' ಪದವನ್ನು ಅಪಕರ್ಷಿಸಿ ಆ 'ಬಹುಳ' ಪದಕ್ಕೆ 'ಕ್ವಚಿದನ್ಯದೇವ' ಎಂಬರ್ಥವನ್ನೂ ಅಂಗೀಕರಿಸಿ, ಈ ಸೂತ್ರದಲ್ಲಿ ಉಪಾತ್ತವಾದ ಉದ್ದೇಶ್ಯ-ನಿಮಿತ್ತಗಳೆರಡಕ್ಕಿಂತಲೂ ಬೇರೆ ಉದ್ದೇಶ್ಯ-ನಿಮಿತ್ತ ಗಳಿದ್ದರೂ ವ ಕಾರಾಗಮವು ಬರುವುದೆಂದು ವ್ಯಾಖ್ಯಾನ ಮಾಡಿ ಉಕ್ತಪ್ರಯೋಗಗಳಿಗೆ ಉಪ ಪತ್ತಿಯನ್ನು ಕಲ್ಪಿಸುವರು. ಹೀಗೆಯೆ ಕಾರ್ಯಾಂತರಗಳನ್ನೂ ತಿಳಿದು ಶಿಷ್ಟಪ್ರಯೋಗಗಳಿಗೆ ಉಪಪತ್ತಿಯನ್ನು ಕಲ್ಪಿಸಬಹುದು.

**ಅವತಾರಿಕೆ ೩೯**

ಒ, ಓ, ಎಂಬ ಸ್ವರಗಳಿಗೆ ಸ್ವರವು ಪರವಾಗಿರಲು, ಯಗಾಗಮಾಪವಾದಗಳಾದ 'ರಾವೋರ್ವಃ' 'ಆತ ಓಷ್ಟ್ಯೇ' ಎಂಬೆರಡು ಸೂತ್ರಗಳಿಗೂ ಪ್ರಾಪ್ತಿಯಿಲ್ಲದಿರುವುದರಿಂದ 'ಯಕ್ ಸ್ವರೇ ಸ್ವರಸ್ಯ' ಎಂಬ ಸೂತ್ರದಿಂದ ಯಗಾಗಮವು ಪ್ರಸಕ್ತವಾಗುವುದೆಂದು ಅದಕ್ಕೆ ಅಪವಾದವಾಗಿ ಸೂತ್ರಾಂತರವನ್ನು ಹೇಳುತ್ತಾನೆ.

**ಸೂತ್ರಂ || ಒದೋ ಬಹುಲಂ || ೩೯ ||**

**ಅರ್ಥ || ಒ ವರ್ಣಕ್ಕೆ ಸ್ವರವು ಪರವಾಗಿರಲು ಬಹುಳವಾಗಿ ವಗಾಗಮವು ಬರುವುದು.**

**ಉದಾಹರಣೆ ||** ಒ + ಎಂದಂ = ಒವೆಂದಂ, ಹೀಗೆಯೆ,—ನೋವೆಂದಂ, ಗೋವಿಂದಂ, ಮೊದಲಾದುವನ್ನು ಇದಕ್ಕೆ ಲಕ್ಷ್ಯಗಳನ್ನಾಗಿ ಊಹಿಸಿಕೊಳ್ಳುವುದು.

**ವಿಚಾರ ೩೯**

ಈ ಸೂತ್ರದಲ್ಲಿ ಹೇಳಿರುವ 'ಒದಃ' ಎಂಬ ಪದದಿಂದ ಕೇವಲ (ಕರ್ಣಾಟಕ) ಭಾಷಾ ವಿಷಯವಾದ ಒ ಕಾರವೂ ಸಂಸ್ಕೃತ-ಕರ್ಣಾಟಕ ಸಾಧಾರಣವಾದ ಓ ಕಾರವೂ ಗ್ರಹಿಸಲ್ಪಟ್ಟಿವೆ. ಆದುದರಿಂದಲೇ ವೃತ್ತಿಯಲ್ಲಿ ಒವರ್ಣಕ್ಕೆ ಎಂದು ಹೇಳಿರುವುದು. ಈ ಶಾಸ್ತ್ರದಲ್ಲಿ **ವರ್ಣಗ್ರಹಣ** ವಿದ್ದೆಡೆ ಅದರ ಸವರ್ಣವನ್ನೂ ಗ್ರಹಿಸುವುದು; **ಕಾರಗ್ರಹಣವಿದ್ದೆಡೆ** ತನ್ಮಾತ್ರವನ್ನು ಗ್ರಹಿಸುವುದು ಎಂದು **ಕಾತಂತ್ರ** ವ್ಯಾಕರಣಕಾರರು ಹೇಳಿರುವರು. ಇಲ್ಲಿ 'ಒವರ್ಣಕ್ಕೆ' ಎಂದು ಹೇಳಲ್ಪಟ್ಟಿದೆ ಯಾದುದರಿಂದ ಒ-ಓ ಕಾರಗಳೆರಡಕ್ಕೂ ಗ್ರಹಣವಾಗುವುದೆಂದು ತಿಳಿಯಬೇಕು. 'ಒದ್' ಎಂದು ದ ಕಾರವನ್ನುಚ್ಚರಿಸಿರುವುದು ಸ್ಪಷ್ಟಾರ್ಥವಾಗುವುದಕ್ಕೆಂದು ತಿಳಿಯುವುದು.

ಮತ್ತು ಇಲ್ಲಿ 'ಬಹುಳ' ಎಂದು ಹೇಳಿರುವುದರಿಂದ — 'ನೋಯಿಸಿದಂ, ತೋಯಲ್' ಮೊದಲಾದ ಪ್ರಯೋಗಗಳಲ್ಲಿ ಓ ಕಾರವಿದ್ದರೂ ವ ಕಾರಾಗಮವು ಬಾರದೆ ಯ ಕಾರಾಗಮವು ಬರುವುದೆಂದು ತಿಳಿಯಬೇಕು.

ಇಲ್ಲಿ ಉದಾಹರಣೆಯಾಗಿ ಕೊಟ್ಟಿರುವ — 'ಒವೆಂದಂ' ಎಂಬಲ್ಲಿ ಒ ಕಾರವು ವರ್ಣಾನುಕರಣವೆಂದೂ 'ನೋವೆಂದಂ' ಎಂಬಲ್ಲಿ 'ನೋ' ಎಂಬುದು ಧಾತ್ವನುಕರಣವೆಂದೂ ತಿಳಿಯು ಅನುಕರಣ ವಿಷಯದಲ್ಲಿ ವಿಧೀಯಮಾನವಾದ ಪ್ರಕೃತಿಭಾವವು ವೈಕಲ್ಪಿಕವಾದುದರಿಂದ ಪಕ್ಷೇ ವ ಕಾರಾಗಮವು ಬಂದಿರುವುದೆಂದು ತಿಳಿಯಬೇಕು. ಆದುದರಿಂದ ಪಕ್ಷೇ ಪ್ರಕೃತಿಭಾವವು ಬಂದು– 'ಒ ಎಂದಂ, ನೋ ಎಂದಂ' ಎಂದೂ ಸಿದ್ಧಿಸುವುವು. ಗೋವಿಂದಂ, ಎಂಬುದಾದರೋ 'ಗೋ' ಶಬ್ದದ ಮೇಲೆ ಕರಣಾರ್ಥದಲ್ಲಿ 'ಇಮ್' ಪ್ರತ್ಯಯವನ್ನು ಮಾಡಿ, ಇದರಿಂದ ವ ಕಾರಾಗಮವನ್ನು ಮಾಡಿದರೆ ಸಿದ್ಧಿಸುವುದು. ಬಹುಳಗ್ರಹಣ ಮಾಡಿರುವುದರಿಂದ ಲಕ್ಷ್ಯಾನುಸಾರವಾಗಿ ಕ್ವಚಿನ್ನಿತ್ಯವಾಗಿಯೂ ಕ್ವಚಿದನಿತ್ಯವಾಗಿಯೂ ಕ್ವಚಿದ್ವಿಕಲ್ಪವಾಗಿಯೂ ಬರುವುದೆಂದು ಬುದ್ಧಿವಂತರು ಊಹಿಸಿಕೊಳ್ಳುವುದು. 'ನೋಯಿಸಿದಂ' ಎಂಬುದು 'ಇಸು' ಪ್ರತ್ಯಯಾಂತ ಪ್ರಕೃತಿಕವಾದ ತಿಜಂತರೂಪವು. 'ತೋಯಲ್' ಎಂಬುದು 'ತೋ' ಧಾತುವಿಗೆ ಅರ್ಹಾರ್ಥದಲ್ಲಿ ವಿಹಿತವಾದ 'ಅಲ್' ಪ್ರತ್ಯಯಾಂತವಾದ ರೂಪವು. ಅಥವಾ ಆಶೀರಾದಿ ಪ್ರತಿಷೇಧವಿಷಯಕ ತಿಜಾದೇಶವಾದ 'ಅಲ್' ಪ್ರತ್ಯಯಾಂತರೂಪವೆಂದು ತಿಳಿಯುವುದು.

**ಅವತಾರಿಕೆ ೪೦**

ಪೂರ್ವದಲ್ಲಿ — ಸ್ವರಕ್ಕೆ ಸ್ವರವು ಪರವಾಗಲು ನಾಮುಹಾನಿಯಾಗುವುದಾದರೆ ಯಗಾಗಮ ವಗಾಗಮಗಳು —

**ಯಕ್ ಸ್ವರೇ ಸ್ವರಸ್ಯ || ವಾವ್ಪೋರ್ವರ್ಣೇ || ಅತ ಓಷ್ಠ್ಯೇ || ಒದೋ ಬಹುಲಂ ||**

ಎಂಬ ಸೂತ್ರಗಳಿಂದ ವಿಧಿಸಲ್ಪಟ್ಟಿರುವುವು. ಅವುಗಳಲ್ಲಿ ಸಾಮಾನ್ಯವಾಗಿ ಸ್ವರವು ಪರವಾಗಲು— ಋ, ಌ, ಔ, ಉ, ಓ ಎಂಬ ವರ್ಣಗಳಿಗೂ ಓಷ್ಠ್ಯಸ್ವರಪರಕವಾದ ಅಕಾರಕ್ಕೂ ವಗಾಗಮವು ಬರುವುದೆಂದೂ ಉಳಿದ ಸ್ವರಗಳಿಗೆ ಯಗಾಗಮವು ಬರುವುದೆಂದೂ ಅನಾಮುಹಾನಿ ವಿಷಯದಲ್ಲಿ ಲೋಪವು ಬರುವುದೆಂದೂ ಹೇಳಲ್ಪಟ್ಟಿದೆ. ಆದರೆ ಇವು ವಕ್ಷ್ಯಮಾಣ ಪ್ರಕೃತಿಭಾವ ಪ್ರಕರಣೋಕ್ತ ಸೂತ್ರಗಳಿಗೆ ಅವಿಷಯಗಳಾದ ಲಕ್ಷ್ಯಗಳಲ್ಲಿಯೇ ಪ್ರವರ್ತಿಸುವುವು — ಎಂದು ತೋರಲು 'ಅಯನಋತು' ಮೊದಲಾದ ಕೆಲವು ಹ್ರಸ್ವಾಂತ ಶಬ್ದಗಳಿಗೆ ಋ ಕಾರವು ಪರವಾಗಿದ್ದಾಗಲೂ 'ಆ ಋತು' ಮೊದಲಾದ ದೀರ್ಘಾಂತಗಳಾದ ಕೆಲವು ಶಬ್ದಗಳಿಗೆ ಋ ಕಾರವು ಪರವಾಗಿದ್ದಾಗಲೂ 'ರಿ || ೪೨ ||' ಎಂಬ ಸೂತ್ರದಿಂದ ವಕ್ಷ್ಯಮಾಣ ಪ್ರಕೃತಿಭಾವವು ಪ್ರಸಕ್ತವಾಗುವುದರಿಂದ ಅದನ್ನು ಬಾಧಿಸಿ ಕೆಲವು ದೀರ್ಘಾತ್ ಪರವಾದ ಪ್ರಕೃತಿಭಾವಕ್ಕೆ ನಿಮಿತ್ತವಾದ ಋ ಕಾರದ ಸ್ಥಾನದಲ್ಲಿ ಆದೇಶ ವಿಶೇಷವನ್ನು ಹೇಳುತ್ತಾನೆ.

**ಸೂತ್ರಂ || ದೀರ್ಘಾದ್ಯತೋ ರುರದ್ವಾದೇಃ || ೪೦ ||**

**ಅರ್ಥ || ದೀರ್ಘಾಂತಗಳಾಗಿರುವ ಅದ್ವಾದಿಗಣಪಠಿತಗಳಾದ ಅದು, ಇದು, ಉದು, ಎಲ್ಲ ಶಬ್ದಗಳಿಗಿಂತಲೂ ಪರದಲ್ಲಿರುವ ಋಕಾರ ಸ್ಥಾನದಲ್ಲಿ 'ರ' ಎಂಬಾದೇಶವಾಗುವುದು.**

**ಉದಾಹರಣೆ ||** ಆ+ಋತು=ಆರುತು. ಹೀಗೆಯೇ — ಆರುಷಿ, ಆರುಣ, ಈರುತು, ಈರುಷಿ, ಊರುತು, ಊರುಷಿ, ಎಲ್ಲಾ ರುತುಗಳ್, ಎಲ್ಲಾ ರುಷಿಗಳ್ ಮೊದಲಾದುವು ಇದಕ್ಕೆ ಲಕ್ಷ್ಯಗಳು.

ವಿಚಾರ ೪೦

ಈ ಸೂತ್ರದಲ್ಲಿ ಹೇಳಿರುವ 'ಅದ್ವಾದೇಃ' ಎಂಬುದು ಪಂಚಮೀವಿಭಕ್ತ್ಯಂತ ಪದವು. ಇದಕ್ಕೆ 'ದೀರ್ಘಾತ್' ಎಂಬುದನ್ನು ವಿಶೇಷಣ ಮಾಡಲು — '**ಯೇನ ವಿಧಿಸ್ತದಂತಸ್ಯ**' ಎಂಬ ಪರಿಭಾಷಾ ಸೂತ್ರದಿಂದ ಅದು ತದಂತಬೋಧಕವಾಗುವುದು. ಇಲ್ಲಿ ವಿಶೇಷ್ಯವಾಚಕ ಪದವು ಪಂಚಮ್ಯಂತವಾಗಿರುವುದರಿಂದ — '**ತಸ್ಮಾದುತ್ತರಸ್ಯ**' ಎಂಬ ಪರಿಭಾಷಾಸೂತ್ರದಿಂದ 'ಉತ್ತರಸ್ಯ' ಎಂದು ಉಪಸ್ಥಿತವಾಗುವುದು. ಆ 'ಉತ್ತರಸ್ಯ' ಎಂಬುದು 'ಋತಃ' ಎಂಬ ಷಷ್ಠ್ಯಂತಕ್ಕೆ ವಿಶೇಷಣವು. 'ಋತಃ' ಎಂಬುದು ಸ್ಥಾನನಿರೂಪಿತ ಸಂಬಂಧವುಳ್ಳ ಷಷ್ಠ್ಯಂತ ವಾದುದರಿಂದ ಋ ಕಾರಸ್ಥಾನದಲ್ಲ ಎಂದರ್ಥವಾಗುವುದು. ತಥಾಚ ದೀರ್ಘಾಂತಗಳಾದ 'ಅದ್ವಾದಿ' ಗಣಪಠಿತ ಶಬ್ದಗಳಿಗಿಂತಲೂ ಪರದಲ್ಲಿರುವ ಋ ಕಾರದ ಸ್ಥಾನದಲ್ಲ 'ರು' ಎಂಬಾ ದೇಶವು ಬರುವುದೆಂದು ಫಲಿತವಾಗುವುದು; ಇದರಿಂದ ಪರಪದದ ಆದಿಯ ಋ ಕಾರಕ್ಕೆ ಬರುವು ದೆಂದು ತಾತ್ಪರ್ಯವಾಗುವುದು.

ಈ ಸೂತ್ರದಲ್ಲಿ — '**ಋತಃ**' ಎಂದು ತ ಕಾರ ಸಹಿತವಾಗಿ ಉಚ್ಚರಿಸಿರುವುದರಿಂದ — 'ತಪರಸ್ತ್ವಾವಾನ್' ಎಂಬ ಸೂತ್ರದಿಂದ ದೀರ್ಘಕ್ಕೆ ಗ್ರಹಣವಿಲ್ಲವೆಂದು ಬೋಧೆಯಾಗುವುದು. ಆದುದರಿಂದ ಇಂತಹ ಸಂದರ್ಭದಲ್ಲಿ 'ತಪರ' ಕರಣಕ್ಕೆ ಪ್ರತಿಯಾಗಿ ಈ ಶಾಸ್ತ್ರದಲ್ಲಿ 'ಕಾರ' ಪ್ರತ್ಯಯುವನ್ನುಚ್ಚರಿಸುವೆವೋ ಆ ವರ್ಣವು ಅದರ ಉಚ್ಚಾರಣ ಸಮಕಾಲಿಕವಾದ ವರ್ಣಮಾತ್ರ ವನ್ನು ಬೋಧಿಸುವುದು. ಅದರ ಸ ವರ್ಣಗಳಾದ ಅಧಿಕ ಕಾಲಿಕಗಳಾದ ವರ್ಣಗಳನ್ನು ಬೋಧಿ ಸುವುದಿಲ್ಲವೆಂದು — '**ವರ್ಣಾತ್ಕಾರಃ || ನಿರ್ದೇಶ ಇತ್ಯೇವ ||**' ಎಂಬ ವಚನಗಳಿಂದ ಸೂಚಿ ಸಿರುವರು.

ಇಲ್ಲಿ ಆದಿಷ್ಟವಾದ '**ರು**' ಎಂಬುದು ಉ ಕಾರ ಸಹಿತವಾದ ರೇಫವು. ಇದಕ್ಕೆ ಲಕ್ಷ್ಯಗಳಾದ 'ಆ ರುತು' ಮೊದಲಾದ **ಪ್ರಯೋಗ**ಗಳಲ್ಲಿರುವ — 'ಆ, ಈ, ಊ' ಎಂಬಿವು 'ಅದು, ಇದು, ಉದು' ಎಂಬ ಶಬ್ದಗಳಿಗೆ **ಸಮಾ**ಸದಲ್ಲಿ ಉತ್ತರಪದವು ಪರವಾಗಿರಲು — '**ಅದೀದೂದದ್ವಿ ದೂದೋಃ || ೩೭೦ ||**' ಎಂಬ ಸೂತ್ರದಿಂದ ವಿಹಿತವಾದಾದೇಶಗಳೆಂದು ತಿಳಿಯಬೇಕು. 'ಎಲ್ಲಾ ಋತುಗಳ್' ಮೊದಲಾದ ಪ್ರಯೋಗಗಳಲ್ಲಿ 'ಎಲ್ಲ' ಶಬ್ದಕ್ಕೆ — '**ಅಗೆಲ್ಲಸ್ಯ ವಾ || ೩೭೧ ||**' ಎಂಬ ಸೂತ್ರದಿಂದ ವಿಹಿತವಾದ ಆಗಾಗಮಾಂತವಾದುದೆಂದು ತಿಳಿಯುವುದು.

ಈ ವ್ಯಾಕರಣದಲ್ಲಿ ಅದ್ವಾದಿಗಣಕ್ಕೆ — 'ಅದು, ಇದು, ಉದು, ಆವುದು, ಎಲ್ಲ, ಪೆಱತು' ಎಂದು ಆರು ಶಬ್ದಗಳು ಸೇರಿರುವುವು. ಇವುಗಳಲ್ಲಿ ಆವುದು, ಪೆಱತು ಶಬ್ದಗಳು ದೀರ್ಘಾಂತ ಗಳಾಗಿ ಪ್ರಯೋಗಗಳಲ್ಲಿ ದೊರೆಯುವುದಿಲ್ಲವಾದುದರಿಂದ ಅವನ್ನು ಬಿಟ್ಟು ಉಳಿದ ನಾಲ್ಕು ಶಬ್ದ ಗಳನ್ನೇ ಇಲ್ಲಿ ಲಕ್ಷ್ಯಗಳನ್ನಾಗಿ ತೆಗೆದುಕೊಂಡಿರುವೆವು.

ಈ ಸೂತ್ರದಲ್ಲಿ '**ದೀರ್ಘಾತ್**' ಎಂಬುದನ್ನು ವಿಶೇಷಣ ಮಾಡಿರುವುದರಿಂದ — 'ಅದು ಋತು, ಇದು ಋಣಂ, ಎಲ್ಲ ಋತುಗಳ್' ಮೊದಲಾದ ಹ್ರಸ್ವಾಂತಗಳಾದ ಅದ್ವಾದಿಗಳಿರಲು ಬರುವುದಿಲ್ಲ. 'ಅದ್ವಾದೇಃ' ಎಂಬ ವಿಶೇಷ್ಯವನ್ನು ಹೇಳಿರುವುದರಿಂದ — 'ದೇವಾ ಋಷಿಯುರಂ ನೋಡು, ಪಿತೃಗಳಾ ಋಣಂ' ಮೊದಲಾದ ಪ್ರಯೋಗಗಳಲ್ಲಿ ದೀರ್ಘಾಂತಗಳಿದ್ದರೂ ಅದ್ವಾದಿ

ಗಳಿಲ್ಲವಾದುದರಿಂದ ಬರುವುದಿಲ್ಲ. ' ಋತಃ ' ಎಂದು ತ ಪರವಾಗಿ ಉಚ್ಚರಿಸಿರುವುದರಿಂದ ಆಋಕಾರಂ, ಈಋಕಾರಂ ಮೊದಲಾದ ಪ್ರಯೋಗಗಳಲ್ಲಿ — ' ೮ || ೪೨ || ' ಎಂಬ ಸೂತ್ರ ದಿಂದ ಯಗಾದಿಗಳಿಗೆ ಬಾಧಕವಾದ ಪ್ರಕೃತಿಭಾವವೇ ಬರುವುದೆಂದು ತಿಳಿಯಬೇಕು.

**ಈ ಸೂತ್ರಾರ್ಥವನ್ನು** ಪರಿಶೀಲಿಸಲು ಸಮಾಸ ವಿಷಯದಲ್ಲಿಯೇ ' ರು ' ಎಂಬಾದೇಶವು ಬರುವುದೆಂದು ತೋರುವುದು. ಆದಾಗ್ಯೂ ಶಿಷ್ಟಪ್ರಯೋಗಾನುಸಾರವಾಗಿ ಅಸಮಾಸವಲ್ಲಿಯೂ ಬರುವುದೆಂದು ತಿಳಿಯಬೇಕು.

ಇಂತಹ ' ರು ' ಎಂಬಾದೇಶದ ವಿಷಯದಲ್ಲಿ **ದರ್ಪಣಕಾರನು** ಆವ ಸೂತ್ರವನ್ನೂ ಮಾಡಿಲ್ಲವಾದುದರಿಂದ ಅವನ ಮತದಲ್ಲಿ ಇಂತಹ ಪ್ರಯೋಗಗಳಲ್ಲ ಋ ಕಾರವನ್ನೇ ಬರೆಯ ಬೇಕು ಎಂದು ತೋರುವುದು. ಆದರೆ ಎಲ್ಲಾ ವೈಯಾಕರಣರು ಋ ವರ್ಣವನ್ನು ಸ್ವರದಲ್ಲಿ ಸೇರಿಸುವುದರಿಂದ ಋ ವರ್ಣವು ಸ್ವರವೆಂದು ವ್ಯವಹರಿಸಲ್ಪಡುವುದು. ಇಂತಹ ಋ ವರ್ಣವು ಸಾಮಾನ್ಯವಾಗಿ ಸ್ವರಾಂತ ಶಬ್ದಗಳ ಮುಂದಿರಲು **ದರ್ಪಣಕಾರನು** —'.... **ಋತ್ವಕ್ಕಮುಂತೆ ಸಂಧಿ ವಿಕಲ್ಪಂ** || ೬೧ || ' ಎಂಬ ಸೂತ್ರೈಕದಿಂದ ಪ್ರಕೃತಿಭಾವವನ್ನೂ ಪೂರ್ವೋಕ್ತವಾದ ಯಗಾದಿ ಗಳನ್ನೂ ಸೂಚಿಸಿರುವನೇ ಅಲ್ಲದೆ ಈ ' ರು ' ಎಂಬ ಆದೇಶವನ್ನು ಸೂಚಿಸಲಿಲ್ಲ. ಮತ್ತು ' ಸಂಧಿ ವಿಕಲ್ಪಂ ' ಎಂದು ಹೇಳಿರುವುದರಿಂದ — ' ಸಂಧಿ ' ಯೆಂದರೆ ಸಂಹಿತೆ, ' ವಿಕಲ್ಪಂ ' ವಿಕಲ್ಪ ವಾಗುವುದು — ಎಂದು ಅರ್ಥವಾಗುವುದು. ಆದರೆ ಸಂಹಿತೆಯಿರುವ ಪಕ್ಷದಲ್ಲಿ ಪೂರ್ವೋಕ್ತ ಯ ಕಾರಾದಿಗಳು ಬರುವುವೆಂದೂ ಇಲ್ಲದ ಪಕ್ಷದಲ್ಲಿ ಇದ್ದಂತೆಯೇ ಇರುವುವೆಂದೂ ತಾತ್ಪರ್ಯ ವಾಗುವುದು. ಇದರಿಂದ ಸ್ಪಷ್ಟವಾಗಿ ' ಪ್ರಕೃತಿಭಾವ ' ವೆಂದು ಹೇಳದಿದ್ದರೂ ' ಪ್ರಕೃತಿಭಾವ ' ಬಂದತೆಯೇ ಆಗುವುದು. ಆದಾಗ್ಯೂ ಸಂಹಿತೆಯೆಂದರೆ ಕಾಲವಿಲಂಬವಿಲ್ಲದೆ ಕೂಡಿಸಿ ಉಚ್ಚರಿ ಸುವುದೆಂದೂ ಸಂಹಿತೆಯಿಲ್ಲವೆಂದರೆ ವಿಲಂಬವಾಗಿ ಉಚ್ಚರಿಸುವುದೆಂದೂ ಹೇಳಿ ಈ ಸಂಹಿತೆಯು —

**ಸಂಹಿತೈಕಪದೇ ನಿತ್ಯಾ ನಿತ್ಯಾ ಧಾತೂಪಸರ್ಗಯೋಃ**
**ನಿತ್ಯಾ ಸಮಾಸೇ ವಾಕ್ಯೇ ತು ಸಾ ವಿವಕ್ಷಾಮಪೇಕ್ಷತೇ**

ಎಂಬ ಶ್ಲೋಕೋಕ್ತ ರೀತಿಯಿಂದ ವಾಕ್ಯಾತಿರಿಕ್ತ ಪ್ರಯೋಗಗಳಲ್ಲ ನಿತ್ಯವೆಂಬುದು ಸಕಲ ಶಾಬ್ದಿಕ-ಸಂಪ್ರದಾಯ ಸಿದ್ಧವಾದುದರಿಂದ ಸಮಾಸಸ್ಥಲದಲ್ಲ ವಿಲಂಬೋಚ್ಚಾರಣೆಯು ಶಿಷ್ಟ ಸಮ್ಮತವಲ್ಲವೆಂದು ಪ್ರಕೃತದಲ್ಲಿ ಸಂಧಿಪದಕ್ಕೆ ಸಂಧಿಕಾರ್ಯವೆಂದರ್ಥವನ್ನು ಹೇಳಿ ಸಂಧಿ ಕಾರ್ಯವು ವಿಕಲ್ಪವೆಂದು ಹೇಳಬೇಕು. ಹೀಗೆಯೇ **ದರ್ಪಣಕಾರನು** ಹೇಳಿರುವ ' ಸಂಧಿವಿಕಲ್ಪಂ, ಸಂಧಿನಿಷೇಧಂ ' ಎಂಬ ಸೂತ್ರಗಳಲ್ಲೆಲ್ಲಾ ಅರ್ಥವನ್ನು ಅಂಗೀಕರಿಸಬೇಕು.

**ಶಾಸನಕಾರನ** ಮತದಲ್ಲಾದರೋ ಇಂತಹ ವಿಷಯದಲ್ಲಿ ಪ್ರಕೃತಿಭಾವವು ವಿಕಲ್ಪವಾಗಿ ಬರುವುದೆಂದು ಬಹುಳಗ್ರಹಣ ಸಂಬಂಧದಿಂದ ಕಲ್ಪಿಸಿ ಪ್ರಾಮಾಣಿಕ-ಪ್ರಯೋಗಗಳನ್ನು ಸಾಧಿಸ ಬೇಕು. ಇದರಿಂದ ಪರ್ಯವಸಾನದಲ್ಲಿ ಇಬ್ಬರ ಮತವೂ ಒಂದೇ ಆಗುವುದು. ಆದರೆ **ಶಾಸನ ಕಾರನು** ದೀರ್ಘಾಂತಗಳಾದ ಅದ್ವಾದಿಗಳ ಮುಂದೆ ಇರುವ ಋ ಕಾರಕ್ಕೆ ' ರು ' ಎಂಬಾದೇಶ ವನ್ನು ಮಾತ್ರ ಹೆಚ್ಚಾಗಿ ಹೇಳಿರುವುದರಿಂದ ಉತ್ತರಪದವನ್ನು ವ್ಯಂಜನಾದಿಯಾಗಿ ಬರೆಯಬೇಕೆಂದು ತಿಳಿಯುವುದು. ಈ ಆದೇಶವನ್ನಂಗೀಕರಿಸದ **ದರ್ಪಣಕಾರನಿಗೆ** ಸ್ವರಾದಿ

ಯಾಗಿಯೇ ಬರೆಯಬೇಕೆಂದು ತಾತ್ಪರ್ಯವಾಗುವುದು. ಹೀಗೆ 'ಱು' ಎಂಬಾದೇಶವನ್ನು ಹೇಳದ **ದರ್ಪಣಕಾರನಿಗೆ** ಋ ವರ್ಣ-ರೇಫಗಳಿಗೆ ಲೇಖನದಲ್ಲಿ ಭೇದ ತೋರುತ್ತಿದ್ದರೂ ಉಚ್ಚಾರಣೆಯಲ್ಲ ಅತ್ಯಂತ ಭೇದವಿಲ್ಲವೆಂದು ಈ ಆದೇಶವನ್ನು ಕಲ್ಪಿಸಲಿಲ್ಲವೆಂದು ತಾತ್ಪರ್ಯವನ್ನು ಮಾಡಿಕೊಳ್ಳಬಹುದು. ಆದರೆ 'ಋ' ಎಂಬುದನ್ನು ಸ್ವರಮಧ್ಯದಲ್ಲಿ ಪಾಠಮಾಡಿರುವುದರಿಂದ ಇದು ಸ್ವರವೆಂತಲೂ ರೇಫವನ್ನು ವ್ಯಂಜನಮಧ್ಯದಲ್ಲಿ ಪಾಠಮಾಡಿರುವುದರಿಂದ ಇದು ವ್ಯಂಜನವೆಂತಲೂ ವ್ಯವಹರಿಸಿ ತತ್ಕಾರ್ಯಗಳನ್ನು ಮಾಡುವುದು. ಇಷ್ಟು ಭೇದವಿದ್ದರೂ ಲಕ್ಷ್ಯಸಿದ್ಧಿಗೆ ಬಾಧಕವೇನೂ ತೋರುವುದಿಲ್ಲ. ಉಚ್ಚಾರಣೆಯ ಫಲವೈಲಕ್ಷಣ್ಯವೂ ತೋರುವುದಿಲ್ಲ. ಆದುದರಿಂದಲೆ ಸಂಸ್ಕೃತ ವ್ಯಾಕರಣದಲ್ಲಿ ಇವುಗಳಿಗೆ ಸ್ವರತ್ವ-ವ್ಯಂಜನತ್ವ ರೂಪಭೇದಗಳನ್ನು ಬೋಧಿಸಲು ಸಾಮಾನ್ಯವಾಗಿ '**ವರ್ಣಾತ್ ಕಾರಃ**' ಎಂಬ ಸೂತ್ರದಿಂದ ವಿಧಿಸಿದ ಕಾರಪ್ರತ್ಯಯಕ್ಕೆ ಪ್ರತಿಯಾಗಿ 'ರಾದಿಫಃ' ಎಂದು 'ಇಫ' ಪ್ರತ್ಯಯವನ್ನು ವಿಧಿಸಿ ರೇಫವೆಂದು ವ್ಯಂಜನಕ್ಕೆ ವ್ಯವಹಾರವೆಂದೂ 'ಋ' ಕಾರವೆಂದು ಸ್ವರಕ್ಕೆ ವ್ಯವಹಾರವೆಂದೂ ಹೇಳುವರು.

ಈ 'ಋ' ವರ್ಣ ವಿಷಯದಲ್ಲಿ ಮಹಾಭಾಷ್ಯಕಾರರಾದ **ಪತಂಜಲಿ** ಮೊದಲಾದ ಕೆಲವು ವೈಯ್ಯಾಕರಣರು ರೇಫಾತ್ಪರ ನ ಕಾರಕ್ಕೆ ವಿಧೀಯಮಾನ ಣ ಕಾರವು ಋ ವರ್ಣಾತ್ಪರ ನ ಕಾರಕ್ಕೂ ಬಂದು 'ಧಾತೄಣಾಂ, ಕರ್ತೄಣಾಂ' ಮೊದಲಾದ ಪ್ರಯೋಗಗಳು ಸಿದ್ಧಿಸಬೇಕಾಗಿರುವುದರಿಂದ '**ಋವರ್ಣಾನ್ನಸ್ಯ ಣತ್ವಂ ವಾಚ್ಯಂ**' ಎಂದು **ವರರುಚಿಯು** ಹೇಳಿರುವ ವಚನವನ್ನು ಪ್ರತ್ಯಾಖ್ಯಾನ ಮಾಡುವುದಕ್ಕೆ 'ಋ' ವರ್ಣವು ರೇಫ ಮಧ್ಯಗತ ಸ್ವರವೆಂದಂಗೀಕರಿಸಿ ಆ ಮಧ್ಯಗತವಾದ ರೇಫ ನಿಮಿತ್ತವಾಗಿಯೇ ಣ ಕಾರಾದೇಶವು ಸಿದ್ಧಿಸುವುದರಿಂದ ಆ ಪೂರ್ವ ವಚನವು ಬೇಡವೆಂದು ಹೇಳಿರುವರು. **ಇದರಿಂದ** ಋ ವರ್ಣ-ರೇಫಗಳಿಗೆ ಇತರ ವಿಧವಾದ ಫಲವೇನೂ ತೋರುವುದಿಲ್ಲ. ಅದರಂತೆ **ಇಲ್ಲಿಯೂ** ಫಲಭೇದವಿಲ್ಲವಾದುದರಿಂದ 'ಱು' ಎಂಬ ಆದೇಶ ವಿಧಿಯು ಅಷ್ಟು ಫಲಕಾರಿಯಲ್ಲವೆಂದು ತೋರುವುದು. ಇಲ್ಲ ಯಗಾದಿಗಳಾದರೋ ವಕ್ಷ್ಯಮಾಣ ಪ್ರಕೃತಿಭಾವದಿಂದ ಬಾಧಿತವಾಗುವುವು. ಆದರೂ **ಶಾಸನಕಾರನು** ಕೇವಲ ಲೇಖನಭೇದವನ್ನಿಟ್ಟುಕೊಂಡು ಈ ಆದೇಶವನ್ನು ಹೇಳಿರುವಂತೆ ತೋರುವುದು. ಮತ್ತು ಸ್ವರಸಂಧಿ ಪ್ರಕರಣದಲ್ಲ ಆಗಮಾದೇಶಗಳೆಂದು ವಿಧೇಯಗಳೆರಡು ಬಗೆಯಾಗಿರುವುವು. ಅವುಗಳಲ್ಲ ಆಗಮಗಳಾವುವೆಂದರೆ ಯ ಕಾರ ವ ಕಾರಗಳು. ಆದೇಶಗಳಾವುವೆಂದರೆ 'ಲೋಪ' 'ಱು' ಎಂಬಿವು. ಇವುಗಳಲ್ಲ ಲೋಪವೆಂಬುದು ಅಭಾವರೂಪಾದೇಶವೆಂತಲೂ 'ಱು' ಎಂಬುದು ಭಾವರೂಪಾದೇಶವೆಂತಲೂ ವಿಭಾಗಿಸಲು ಈ ಆದೇಶವನ್ನು ಹೇಳಿರುವನೆಂದು ತಿಳಿಯಬೇಕು.

**ಸ್ವರಸಂಧಿಯಲ್ಲಿ ಆಗಮಾದೇಶ ಪ್ರಕರಣಂ ಸಮಾಪ್ತಂ**

## ॥ ಅಥ ಪ್ರಕೃತಿಭಾವ ಪ್ರಕರಣಂ ॥

**ಅವತಾರಿಕೆ ೪೧**

ಹೀಗೆ ಸಾಮಾನ್ಯವಾಗಿ ಸ್ವರಸಂಧಿ ಪ್ರಕರಣವನ್ನು ಮುಗಿಸಿ ಆ ಸೂತ್ರಗಳಲ್ಲಿ ಹೇಳಿರುವ ಉದ್ದೇಶನಿಮಿತ್ತಗಳುಳ್ಳ ಕೆಲವು ಪ್ರಯೋಗಗಳಲ್ಲಿ ಪೂರ್ವೋಕ್ತಸಂಧಿ ಕಾರ್ಯಗಳಾವುವೂ ಪ್ರವರ್ತಿಸಲಾಗದೆಂದು ಈ ಪ್ರಕೃತಿಭಾವ ಪ್ರಕರಣವು ಪ್ರಾರಂಭಿಸಲ್ಪಡುವುದು. ಆದರಲ್ಲಿ

ಮೊದಲು ಪೂರ್ವಸೂತ್ರಗಳಲ್ಲಿ ಉದ್ದೇಶವಾಗಿ ಹೇಳಲ್ಪಟ್ಟ ಸ್ವರವು ಹ್ರಸ್ವ-ದೀರ್ಘ-ಪ್ಲುತ ಸಾಧಾರಣವಾದುದರಿಂದ ಆ ಕಾರ್ಯಗಳು ಹ್ರಸ್ವಗಳಿಗೆ ಬರುವಂತೆ ಪ್ಲುತಕ್ಕೂ ಪ್ರಾಪ್ತವಾಗಲು ಅವಕ್ಕೆ ಬಾಧಕವಾಗಿ ಪ್ರಕೃತಿಭಾವವನ್ನು ಹೇಳುತ್ತಾನೆ.

**ಸೂತ್ರಂ || ಪ್ಲುತಃ ಪ್ರಕೃತ್ಯಾ || ೪೧ ||**

**ಅರ್ಥ || ಪ್ಲುತಸಂಜ್ಞಕವಾದ ಸ್ವರಗಳಿಗೆ ಸ್ವರವು ಪರವಾಗಲು ಸ್ವಭಾವದಿಂದಲೇ ಇರುವುವು— ಎಂದರೆ ಪೂರ್ವೋಕ್ತಸಂಧಿಕಾರ್ಯಗಳನ್ನು ಹೊಂದುವದಿಲ್ಲವೆಂದರ್ಥವು.**

**ಉದಾಹರಣೆ ||** ಅಕ್ಕಾ೩ ಇಲ್ಲಿ ಬಾ, ಅಣ್ಣಾ೩ ಇತ್ತ ಬಾ ಮೊದಲಾದ ಪ್ಲುತವುಳ್ಳ ಪ್ರಯೋಗಗಳೇ ಈ ಸೂತ್ರಕ್ಕೆ ಲಕ್ಷ್ಯಗಳಾಗಿರುವುವು.

**ವಿಚಾರ ೪೧**

ಈ ಸೂತ್ರದಲ್ಲಿ — 'ಪ್ಲುತಃ' ಎಂಬುದು ಏಕವಚನಾಂತವಾಗಿ ಹೇಳಿದ್ದರೂ — 'ನ ಬ್ರಾಹ್ಮಣಂ ಹನ್ಯಾತ್' ಎಂಬ ವಚನದಲ್ಲಿರುವಂತೆ ಸಾಮಾನ್ಯನಿರ್ದೇಶವೆಂದು ತಿಳಿಯುವುದು. ಇದಕ್ಕೇ ಜಾತಿನಿರ್ದೇಶವೆಂಬ ವ್ಯವಹಾರವು. ಇಂತಹ ಸಂದರ್ಭದಲ್ಲಿಯೇ '**ಜಾತಾವೇಕವಚನಂ**' ಎಂದು ಹೇಳುವುದು. ಆದುದರಿಂದ ಪ್ರಕೃತದಲ್ಲಿ 'ಪ್ಲುತಃ' ಎಂಬ ಏಕವಚನಾಂತ ಪದದಿಂದ ಎಲ್ಲಾ ಪ್ಲುತವ್ಯಕ್ತಿಗಳಿಗೂ ಸಂಗ್ರಹವು ಬರುವುದು. 'ಪ್ರಕೃತ್ಯಾ' ಎಂದರೆ — ಪ್ರಕೃತಿಶಬ್ದವು ಲೋಕದಲ್ಲಿ 'ಮಾಯೆ' ಮೊದಲಾದ ಅನೇಕಾರ್ಥವುಳ್ಳುದಾದರೂ ಪ್ರಕೃತದಲ್ಲಿ 'ಸ್ವಭಾವದಿಂದ' ಎಂದು ಅರ್ಥವು. ಸ್ವಭಾವವೆಂದರೆ —

**'ಸ್ವೇನ ಸ್ವಸ್ವರೂಪೇಣ ( ನಿರ್ವಿಕಾರೇಣೇತಿ ಯಾವತ್ ) ಭವತಿ ಅವತಿಷ್ಠತೇ'**

ಎಂಬ ವ್ಯುತ್ಪತ್ತಿಯ ಬಲದಿಂದ ಆವ ವಿಕಾರವನ್ನೂ ಹೊಂದದೆ ಮೊದಲಿದ್ದ ರೂಪದಲ್ಲಿಯೇ ಇರುವುದೆಂದರ್ಥವಾಗುವುದು. ಇದಕ್ಕೆ ಈ ಶಾಸ್ತ್ರದಲ್ಲಿ '**ಪ್ರಕೃತಿಭಾವ**' ವೆಂದು ವ್ಯವಹಾರವಿರುವುದು. ಈ ಪ್ರಕರಣವೇ ಸ್ವರಸಂಧಿ ಕಾರ್ಯಗಳಿಗೆ ಅಪವಾದವಾದುದರಿಂದ ಇಲ್ಲಿ ಉದ್ದೇಶ್ಯನಿಮಿತ್ತಗಳೆರಡೂ ಸ್ವರಗಳಾಗಿಯೇ ಇರಬೇಕು. ತಥಾಚ ಪ್ಲುತಸ್ವರಗಳಿಗೆ ಸ್ವರಗಳು ಪರವಾಗಿರಲು ಹಿಂದೆ ಹೇಳಿರುವ ಆವ ಸಂಧಿಕಾರ್ಯಗಳನ್ನೂ ಹೊಂದದೆ ಇದ್ದಂತೆಯೇ ಇರುವುವೆಂದು ಸೂತ್ರಾರ್ಥವಾಗುವುದು. ಇಲ್ಲಿ ಪ್ರಕೃತಿಭಾವವೆಂದರೂ ಪೂರ್ವೋಕ್ತ ಸಂಧಿಲಕ್ಷಣ ಕಾರ್ಯವು ಬರುವುದಿಲ್ಲವೆಂದರೂ ಒಂದೇ ತಾತ್ಪರ್ಯವೆಂದು ತಿಳಿಯಬೇಕು. ಇದು ಪೂರ್ವೋಕ್ತ ಸ್ವರಸಂಧಿ ಲಕ್ಷಣ ಕಾರ್ಯಗಳಿಗೆ ಬಾಧಕವಾದುದರಿಂದ ಆ ಸ್ವರಸಂಧಿ ವಿಧ್ಯನಂತರದಲ್ಲಿಯೇ ಈ ಪ್ರಕೃತಿಭಾವ ಪ್ರಕರಣವು ಪ್ರಾರಂಭಿಸಲ್ಪಟ್ಟಿರುವುದು. 'ವ್ಯಂಜನಸಂಧಿ' ಲಕ್ಷಣ ಕಾರ್ಯಗಳಿಗೆ ಬಾಧಕವಾದ 'ಪ್ರಕೃತಿಭಾವ' ಪ್ರಕರಣವು ಆ ವ್ಯಂಜನಸಂಧಿಕಾರ್ಯ ಪ್ರಕರಣಾನಂತರದಲ್ಲಿ ಹೇಳಲ್ಪಡುವುದು.

ಈ ಪ್ರಕರಣದಲ್ಲಿ '**ಪ್ಲುತಃ ಪ್ರಕೃತ್ಯಾ**' ಎಂಬ ಸೂತ್ರವು ಸ್ವರಪರಕವಾದ ಪ್ಲುತಸ್ವರ ವಿಷಯಕವೆಂದೂ '**ಐ**' ಎಂಬ ಸೂತ್ರವು ಋ ವರ್ಣ ಇ ವರ್ಣ ಪರಕವಾದ ಹ್ರಸ್ವ-ದೀರ್ಘ ಮಾತ್ರ ವಿಷಯಕವೆಂದೂ '**ಅದೇ**' ಎಂಬ ಸೂತ್ರವು ಅ ವರ್ಣ ಪರಕವಾದ ಆ ಕಾರ ಮಾತ್ರ ವಿಷಯಕವೆಂದೂ '**ನಿಪಾತಾಃ**' ಎಂಬುದು ಸ್ವರಪರಕವಾದ ಸ್ವರಾಂತನಿಪಾತ ಸಾಮಾನ್ಯವಿಷಯಕ

ವೆಂದೂ ' ಓ ನಿಪಾತೇ ' ಎಂಬುದು ಸ್ವರಾದಿ ನಿಪಾತಪರಕ ಅ ವರ್ಣಮಾತ್ರ ವಿಷಯಕವೆಂದೂ ' ಪೊಸತ್ವಾದಿಃ ' ಎಂಬುದು ಸ್ವರಪರಕವಾದ ಅ ಕಾರಾಂತ ಪೊಸತ್ವಾದಿ ವಿಷಯಕವೆಂದೂ ' ಪೇರದೆ ' ಎಂಬುದು ಪ್ರತಿಷೇಧಾರ್ಥಕ ಆದೆತ್‌ಪ್ರತ್ಯಯಪರಕ ಅ ಕಾರಾಂತ ' ಇರ್ ' ಧಾತು ವಿಷಯಕವೆಂದೂ ' ಕರೆದಲಿ ' ಎಂಬುದು ತಿಙ್-ಕೃತ್ ಸಾಧಾರಣ ಅಲ್‌ಪ್ರತ್ಯಯಪರಕ 'ಕರೆ'ಧಾತು ವಿಷಯಕವೆಂದೂ ' ಗಡಾದಿಃ ' ಎಂಬುದು ಸ್ವರಪರಕ ನಿಪಾತಗಳಲ್ಲದ ಸ್ವರಾಂತಗಳಾದ ಅಣಮಾದ್ಯಂತರ್ಗಣಾವ್ಯಯ ವಿಷಯಕವೆಂದೂ ' ಶ್ಲೋಕಾರ್ಧಂ ' ಎಂಬುದು ಸ್ವರಪರಕವಾದ ಸ್ವರಾಂತ ಕಂದವೃತ್ತಾದಿಗಳ ಸಮಭಾಗ ವಿಷಯಕವೆಂದೂ ' ಅನುಕರಣಂ ' ಎಂಬುದು ಸ್ವರಪರಕ ಸ್ವರಾಂತ ನಾನಾಜಾತೀಯ ಅನುಕರಣಶಬ್ದ ವಿಷಯಕಗಳೆಂದೂ ' ಅದ್ವಿಕೃತ್ವಾ ' ಎಂಬುದು ಸ್ವರಪರಕವಾಗಿ ವಿಕಾರದಿಂದ ಅಕಾರಾಂತವಾದ ಅನುಕರಣ ವಿಷಯಕವೆಂದೂ ಈ ಹನ್ನೆರಡು ಸೂತ್ರಗಳನ್ನು ಮಾಡಿರುವನು. ಇವುಗಳಲ್ಲಿ ' ಪೊಸತ್ವಾದಿಃ ' ಎಂಬ ಸೂತ್ರದವರೆಗೂ ನಿತ್ಯಪ್ರಕೃತಿಭಾವವು ಹೇಳಲ್ಪಡುವುದು. ಅನಂತರದಲ್ಲಿ ' ಅನುಕರಣಂ ' ಎಂಬ ಸೂತ್ರದವರೆಗೂ ವಿಕಲ್ಪವಾಗಿ ಹೇಳಲ್ಪಡುವುದು. ' ಅದ್ವಿಕೃತ್ವಾ ' ಎಂಬುದು ' ಅನುಕರಣಂ ' ಎಂಬ ಸೂತ್ರದಿಂದ ಸಿದ್ಧವಾಗಿದ್ದರೂ ಪುನರಾರಂಭ ಸಾಮರ್ಥ್ಯದಿಂದ ನಿತ್ಯವೆಂದು ತಿಳಿಯಬೇಕು. ಇವಕ್ಕೆಲ್ಲಾ ಪ್ರಯೋಗಗಳನ್ನು ಆಯಾ ಸೂತ್ರಗಳ ವ್ಯಾಖ್ಯಾನಾವಸರದಲ್ಲಿ ತೋರಿಸುವೆವು.

ಪ್ರಕೃತದಲ್ಲಿ ಕೊಟ್ಟಿರುವ ' ಅಕ್ಕಾ೩ ಇಲ್ಲಿ ಬಾ ' ಎಂಬ ವಾಕ್ಯದಲ್ಲಿ ' ಅಕ್ಕ' ಎಂಬ ಸಂಬೋಧನ ವಿಭಕ್ತ್ಯಂತ ಪದಕ್ಕೆ ' ದೂರಾದಾಹ್ವಾನೇ ಬಹುಲಂ || ೪೦೦ ||' ಎಂಬ ಸೂತ್ರದಿಂದ ಕೊನೆಯ ಸ್ವರಕ್ಕೆ ಪ್ಲುತವು ಬಂದು ಈ ಸೂತ್ರಕ್ಕೆ ಲಕ್ಷ್ಯವಾಗಿರುವುದು. ಹೀಗೆಯೇ ' ಅಣ್ಣಾ೩ ' ಎಂಬಲ್ಲಿಯೂ ಪ್ಲುತವು ಬಂದಿರುವುದು. ' ಇಲ್ಲಿ ' ಎಂಬುದು ಅವ್ಯಯವು. ' ಬಾ ' ಎಂಬುದು— ಆಗಮನಾರ್ಥಕ ' ಬರ್ ' ಧಾತುವಿನ ಮೇಲೆ —

' ಧಾತೋರೇಕಾನೇಕತ್ವೇಽಮರಯಿರೆನೆವರ್ಪೋಽನ್ಯಯುಷ್ಮದಸ್ಮಾಸು ಕರ್ತರಿ || ೪೪೨ || ' ಎಂಬ ಸೂತ್ರದಿಂದ ಯುಷ್ಮದರ್ಥವು ಪ್ರತೀಯಮಾನವಾಗುತ್ತಿರಲು ಕರ್ತ್ರರ್ಥದಲ್ಲಿ ಏಕತ್ವವು ತೋರುವಾಗ ಮಧ್ಯಮಪುರುಷೈಕವಚನ ಸಂಜ್ಞಕ ' ಆಯ್ ' ಪ್ರತ್ಯಯವನ್ನು ಮಾಡಿ ಅದಕ್ಕೆ- ' ಆಯೋಲ್ಲುಪೌ || ೪೬೮ || ' ಎಂಬ ಸೂತ್ರದಿಂದ ಲೋಪವನ್ನು ಮಾಡಿ ಧಾತುವಿನ ಅಂತ್ಯಕ್ಕೆ- ' ತರ್‌ಬರೋರ್ಲುಗ್ಬ್ಲುಪ್ತೇಽಯಿ || ೫೧೯ || ' ಎಂಬುದರಿಂದ ಲೋಪವನ್ನೂ ಧಾತುವಿನ ಸ್ವರಕ್ಕೆ— ' ದೀರ್ಘಃ || ೫೨೦ ||' ಎಂಬ ಸೂತ್ರದಿಂದ ದೀರ್ಘವನ್ನೂ ಮಾಡಲು ಸಿದ್ಧಿಸುವುದು. ಇದರಂತೆಯೇ ' ಇತ್ತ ಬಾ ' ಮೊದಲಾದ ಪ್ರಯೋಗಗಳಲ್ಲಿಯೂ ಪ್ರಕ್ರಿಯಾಸೂತ್ರಗಳನ್ನು ಪರ್ಯಾಲೋಚಿಸಿ ಸಾಧುತ್ವವನ್ನು ಹೇಳುವುದು.

ಸಂಸ್ಕೃತ ವ್ಯಾಕರಣದಲ್ಲಿ — ' ವಾಕ್ಯಸ್ಯ ಟೇಃ ಪ್ಲುತ ಉದಾತ್ತಃ ' ಎಂದು ಪ್ಲುತವಿಧಿ ಪ್ರಕರಣದಲ್ಲಿ ಅಧಿಕಾರ ಸೂತ್ರವನ್ನು ಹೇಳಿರುವುದರಿಂದ ಪ್ಲುತವು ವಾಕ್ಯದಲ್ಲಿಯೆ ಬರುವುದೆಂದು ತೋರುವುದು. ಇದರಂತೆಯೇ ಭಾಷಾವ್ಯಾಕರಣದಲ್ಲಿಯೂ ಪ್ರಯೋಗಬಲದಿಂದ ಅಂತಹ ಅಧಿಕಾರ ಸೂತ್ರವಿಲ್ಲದಿದ್ದರೂ ವಾಕ್ಯದಲ್ಲಿಯೇ ಬರುವುದೆಂದು ತಿಳಿದು ಇಲ್ಲಿ ವಾಕ್ಯಗಳನ್ನೇ ಉದಾಹರಿಸಿರುವೆವು.

ಇಲ್ಲಿ ಪ್ಲುತಕ್ಕೆ ಪ್ರಕೃತಿಭಾವವನ್ನು ಹೇಳಿರುವುದರಿಂದ ಪ್ಲುತಗಳಲ್ಲದ—'ಚಿತ್ತ್ರೈಸೆಂದು, ಸೂನುವಿತ್ತ ಬಾ' ಮೊದಲಾದ ಪ್ರಯೋಗಗಳಲ್ಲಿ ಪೂರ್ವೋಕ್ತ ಸಂಧಿಕಾರ್ಯಗಳೇ ಬಂದಿವೆ.

ಈ ವಿಷಯದಲ್ಲ **ದರ್ಪಣಕಾರನು** ಆಗಮನಿಷೇಧ ಪ್ರಕರಣವೆಂದು—

ಅವಿಕೃತಿಗಳೆವರ್ಣಮೊವ
ರ್ಣವಂತ್ಯವೆನಿಸಿದ ನಿಪಾತಮವಧಾರಣೆ ತ
ಳ್ತ ವಿಶಂಕೆಗಳೆಂಬಿವಱೊಳ್
ವ್ಯವಹರಿಸದು ಸಂಧಿಯಾ ಪ್ಲುತಕ್ಕಮಭಾವಂ (**ಸೂತ್ರ ೫೬**)

ಮೆಚ್ಚಿನೊಳಾಕ್ಷೇಪಕದೊಳ್
ಬಚ್ಚೋವಭ್ಯುಪಗಮಾರ್ಥದೆಮ ಶಬ್ದಂ ಕ
ಟ್ಟುಚ್ಚರಿಯ ಗಡಾರ್ಥಾತ್ವಂ
ಬಿಚ್ಚಿಕ್ಕುಗಂ ಸ್ವರಮಿದಿರೊಳಿರೆ ಖೇದದೊಳಂ (**ಸೂತ್ರ ೫೭**)

ಪೊಱಗೊಳಗು ಪೊಸತು ಪಟವೆಳ
ದಱಕೆಯದಂತತೆಯನಾ ಸಮಾಸಾಂತರದೊಳ್
ನೆಱೆ ತಾಳ್ದು ಸಂಧಿಯಾಗವು
ತಱಿಸಂದಿದಿರೊಳ್ ಸ್ವರಂಗಳಾವುವು ನಿಲೆಯುಂ (**ಸೂತ್ರ ೫೮**)

ಎಂಬ ಮೂರು ಸೂತ್ರಗಳನ್ನು ಹೇಳಿರುವನು. ಇವರಲ್ಲಿ — ಮೊದಲಿನ ಎರಡು ಸೂತ್ರಗಳಿಂದ ನಿಸರ್ಗಕಾರಿಗಳಾವ — 'ಎ ಏ, ಒ ಓ' ಎಂಬಿವು ಅಂತದಲ್ಲ ಉಳ್ಳ ನಿಪಾತಾವ್ಯಯಗಳಿಗೂ ಅವಧಾರಣಾರ್ಥಕ ನಿಪಾತಗಳಿಗೂ ವಿಶಂಕಾರ್ಥಕ ನಿಪಾತಗಳಿಗೂ ಪ್ಲುತಸ್ವರಗಳಿಗೂ ಮೆಚ್ಚಿನೊಳ್ ಆಕ್ಷೇಪಕದೊಳ್ ನೆಲಸಿರ್ದ ಓ ಕಾರಕ್ಕೂ ಅಂಗೀಕಾರಾರ್ಥದ 'ಎಮ' ಶಬ್ದಕ್ಕೂ ಗಡಾರ್ಥಕ್ಕಾದೇಶಮಾದ ಆ ಕಾರಕ್ಕೂ ಖೇದಾರ್ಥಕಾವ್ಯಯಕ್ಕೂ-ಸ್ವರವು ಪರವಾಗೆ ಸಂಧಿಯಿಲ್ಲವೆಂದು ಹೇಳಿರುವನು. ಇದರಿಂದ **ಶಾಸನಕಾರನು** ಹೇಳಿರುವ — '**ಪ್ಲುತಃ ಪ್ರಕೃತ್ಯಾ|| ನಿಪಾತಾಃ ||**' ಎಂಬೆರಡು ಸೂತ್ರಗಳಿಂದ ವಿಹಿತವಾದ ಪ್ರಕೃತಿಭಾವವು ಸಿದ್ಧಿಸುವುದು. ಆದರೆ **ದರ್ಪಣಕಾರನು** ನಿಪಾತಾವ್ಯಯಗಳ ವಿಷಯದಲ್ಲಿ ವ್ಯಕ್ತಿವಿಶೇಷವನ್ನೂ ಅರ್ಥವಿಶೇಷವನ್ನೂ ವಿಶಿಷ್ಯ ನಿರ್ದೇಶಿಸಿ ಹೇಳಿರುವನು. ಇವನ ಮತದಲ್ಲಿ ಸಾಧಿಸುವುದಕ್ಕಾಗದ ಪ್ರಯೋಗಗಳೂ **ಶಾಸನಕಾರನ** ಮತದಲ್ಲ ಸಾಧಿಸುವುದಕ್ಕೆ ಅನುಕೂಲಿಸುವುದೆಂದು ತಿಳಿಯಬೇಕು. ಮೂರನೆಯ ಸೂತ್ರದಿಂದ ಹೇಳಿರುವುದು '**ಪೊಸತ್ವಾದಿಃ**' ಎಂಬ ಸೂತ್ರವಿಹಿತವಾದ ಪ್ರಕೃತಿಭಾವದಿಂದ ಸಿದ್ಧಿಸುವುದೆಂದು ತಿಳಿಯಬೇಕು. **ಶಾಸನಕಾರನು** ಹೇಳಿರುವ "**ವೇರದ್ಯೆ, ಕರೆದಲಿ, ಶ್ಲೋಕಾರ್ಥಂ, ಅನುಕರಣಂ, ಅದ್ವಿಕೃತ್ಯಾ, ರಿ**" ಈ ಆರು ಸೂತ್ರಗಳಿಂದ ಸಿದ್ಧಿಸುವ ಲಕ್ಷ್ಯಗಳೆಲ್ಲಾ—

ಕರೆಗತ್ವದಿರ್ಗೆಯಲ್ಲದೆ
ಪರಮಿರೆ ಪದ್ಯಾರ್ಥವಾಕ್ಯವೇಕ್ಷ್ಯನದೆಡೆಗಂ
ಸ್ಫುರದನುಕೃತಿಗಂ ಸ್ವರಮವು
ಪರಮಿರೆ ಋತ್ವಕ್ಕಮಂತೆ ಸಂಧಿವಿಕಲ್ಪಂ (**ಸೂತ್ರ ೬೧**)

ಎಂಬ ಸೂತ್ರದಿಂದ ಸಾಧಿಸಲ್ಪಡುವುದು. ಆದರೆ ಋ ವರ್ಣ ವಿಷಯದಲ್ಲಿ **ಶಾಸನಕಾರನು** ನಿತ್ಯ

ವಾಗಿ ಹೇಳಿರುವನು. **ದರ್ಪಣಕಾರನು** ವಿಕಲ್ಪವೆಂದು ಹೇಳಿರುವನು. ಆದಾಗ್ಯೂ ಬಹುಳ ಗ್ರಹಣದಿಂದ ಇಬ್ಬರಿಗೂ ಐಕಮತ್ಯವನ್ನು ಕಲ್ಪಿಸಬೇಕು. ಹೀಗೆ — '**ಆದೇ, ಓ ನಿಪಾತೇ, ಗಡಾದಿಃ**' ಈ ಮೂರು ಸೂತ್ರಗಳ ವಿಷಯದಲ್ಲಿ ಏನೂ ಹೇಳಿಲ್ಲವಾದರೂ ಲಕ್ಷ್ಯಾನುಸಾರವಾಗಿ ವಿಧಿಗೆ ಉಪಲಕ್ಷಣತ್ವವನ್ನು ಅಂಗೀಕರಿಸಿ ಇಂತಹ ಪ್ರಯೋಗಗಳನ್ನು ಸಾಧಿಸಿಕೊಳ್ಳುವುದು. ಅಥವಾ **ದರ್ಪಣಕಾರನು** ನಿಪಾತವೆಂದು ಬೇರೆ ಸಂಜ್ಞೆಯನ್ನು ಅಂಗೀಕರಿಸಿಲ್ಲವಾದುದರಿಂದ ಸೂತ್ರದಲ್ಲಿ ಹೇಳಿರುವ ನಿಪಾತಪದವು ಅವ್ಯಯ ಸಾಮಾನ್ಯಪರವೆಂದು ತಿಳಿದು '**ಗಡಾದಿಃ**' ವಿಷಯದಲ್ಲ ಪ್ರಕೃತಿಭಾವವನ್ನು ಸಾಧಿಸುವುದು '**ಓ ನಿಪಾತೇ**' ಎಂಬ ಸೂತ್ರವಿಷಯದಲ್ಲಿ **ದರ್ಪಣಕಾರನು** ಸಂಧಿಕಾರ್ಯವನ್ನು ಅಂಗೀಕರಿಸಿರುವನು. **ಶಾಸನಕಾರನ** ಮತದಲ್ಲಿಯೂ ಬಹುಳಗ್ರಹಣದಿಂದ ಅಂತಹ ಪ್ರಯೋಗಗಳು ಸಾಧಿಸಲ್ಪಡುವುವು. ಈ ವಿಷಯದಲ್ಲಿ **ದರ್ಪಣ**ಕ್ಕಿಂತಲೂ **ಶಾಸನವೇ** ಲಕ್ಷ್ಯಸಿದ್ಧಿಗೆ ಹೆಚ್ಚಾದ ಅನುಕೂಲತೆಯನ್ನು ಕೊಡುವುದೆಂದು ತಿಳಿಯಬೇಕು.

**ದರ್ಪಣಕಾರನು** ಈ ಪ್ರಕೃತಿಭಾವಕ್ಕೆ ಆಗಮನಿಷೇಧವೆಂದು ವ್ಯವಹಾರ ಮಾಡುವನು. ಆದರೆ ಲೋಪನಿಷೇಧಕ್ಕೆ ಸಂಗ್ರಹವು ಬರುವುದಿಲ್ಲ. ಆದುದರಿಂದ ಇವನಿಗೆ ಲೋಪಪ್ರಾಪ್ತಿ ವಿಷಯದಲ್ಲ ಪ್ರಕೃತಿಭಾವವಿಲ್ಲವೆಂದು ತೋರುವುದು. ಮತ್ತು ಇವನ ಮತದಲ್ಲಿ ಸ್ವರಕ್ಕೆ ಭಾವರೂಪಾದೇಶವನ್ನು ಸಂಧಿಕಾರ್ಯ ಪ್ರಕರಣದಲ್ಲ ಹೇಳಿಲ್ಲವಾದುದರಿಂದ ಅಂತಹ ಪ್ರಯೋಗಗಳಲ್ಲಿ ದೋಷವಿಲ್ಲ. **ಶಾಸನಕಾರನ** ಮತದಲ್ಲ ಸಾಮಾನ್ಯವಾಗಿ ಪೂರ್ವೋಕ್ತ ಸಂಧಿಕಾರ್ಯಗಳಿಗೆ ಪ್ರತಿಷೇಧರೂಪವಾಗಿ ಪ್ರಕೃತಿಭಾವವನ್ನು ಹೇಳಿರುವುದರಿಂದ ಆಗಮಪ್ರಾಪ್ತಿ ಸ್ಥಲಗಳಲ್ಲಲ್ಲದೆ ಆದೇಶಪ್ರಾಪ್ತಿ ಸ್ಥಲಗಳಲ್ಲಿಯೂ ಪ್ರಕೃತಿಭಾವವು ಲಕ್ಷ್ಯಾನುಸಾರವಾಗಿ ಬರುವುದು.

ಹಿಂದೆ ಕೊಟ್ಟಿರುವ ಅ ಕಾರಾಂತ ಶಬ್ದಗಳಲ್ಲದೆ ಇ ಕಾರಾದ್ಯಂತ ಶಬ್ದಗಳನ್ನೂ ಈ ಸೂತ್ರಕ್ಕೆ ಲಕ್ಷ್ಯಗಳನ್ನಾಗಿ ತೆಗೆದುಕೊಳ್ಳುವುದು.

**ಅವತಾರಿಕೆ ೪೨**

ಹಿಂದೆ ಪ್ಲುತಸ್ವರಗಳಿಗೆ ಮಾತ್ರ ಪ್ರಕೃತಿಭಾವವು ಹೇಳಲ್ಪಟ್ಟಿತು. ಆದುದರಿಂದ ಹ್ರಸ್ವ, ದೀರ್ಘಗಳಿಗೆ ಸ್ವರವು ಪರವಾಗಲು ನಾಮಹಾನಿ ವಿಷಯದಲ್ಲಿ ಯಕಾರ-ವಕಾರಾಗಮಗಳೂ ಅನಾಮಹಾನಿ ವಿಷಯದಲ್ಲಿ ಲೋಪವೂ ದೀರ್ಘಾಂತಗಳಾದ ಅದ್ವಾದಿಗಳ ಮುಂದಿರುವ ಋ ಕಾರಕ್ಕೆ 'ರು' ಎಂಬಾದೇಶವೂ ಪ್ರಸಕ್ತವಾಗುವುವು. ಅವುಗಳಲ್ಲಿ ಋ ವರ್ಣಪರಕವಾದ ಹ್ರಸ್ವ-ದೀರ್ಘ ಸ್ವರಗಳಿಗೆ ಸಂಧಿಕಾರ್ಯ-ನಿಷೇಧರೂಪವಾದ ಪ್ರಕೃತಿಭಾವವನ್ನು ಹೇಳುತ್ತಾನೆ.

**ಸೂತ್ರಂ || ೮ || ೪೨ ||**

**ಅರ್ಥ || ಹ್ರಸ್ವ-ದೀರ್ಘಗಳಿಗೆ ಋ ವರ್ಣ ೣ ವರ್ಣಗಳು ಪರವಾಗಿದ್ದರೆ ಪ್ರಕೃತಿಭಾವವು ಆಗುವುದು.**

**ಉದಾಹರಣೆ ||** ಅಯನದ ಋತು, ಆ ಋಕಾರಂ, ಮುನಿ ಋದ್ಧಿಪ್ರಾಪ್ತಂ, ಸ್ತ್ರೀ ಋತುಮತಿ, ಕ್ರತು ಋತ್ವಿಜರ್ಗೆ, ಭ್ರೂ ಋಜುವಲ್ತು, ಪಿತೃ ಋಣಿ, ಋಷಿಗೆ ಋದ್ಧಿ, ರೈ ಋದ್ಧಂ, ಗೋ ಋಷಿಗೆ, ಗ್ಲೌ ಋಕ್ಷಪತಿ, ಎನ್ನ ೣಕಾರಂ, ಆತನ ೣಕಾರಂ—ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೪೨**

ಈ ಸೂತ್ರದಲ್ಲಿ — 'ಠಿ' ಎಂಬುದು 'ಋ ೠ' ವರ್ಣಗಳಿಗೆ ಸಾಮಾನ್ಯ ನಿರ್ದೇಶವು. ಆದುದರಿಂದ ಅವುಗಳ ಹ್ರಸ್ವ-ದೀರ್ಘ-ಪ್ಲುತಗಳನ್ನು ಬೋಧಿಸುವುದು. ಇದು ಸಪ್ತಮ್ಯಂತ ವಾದುದರಿಂದ '**ತಸ್ಮಿನ್ ಇತಿ ನಿರ್ದಿಷ್ಟೇ ಪೂರ್ವಸ್ಯ**' ಎಂಬ ಪರಿಭಾಷೆಯಿಂದ 'ಪರೇ' ಎಂದು ಲಬ್ಧವಾಗುವುದು. ಪೂರ್ವೋಕ್ತ ಪ್ರಕೃತಿಭಾವವು ಪ್ಲುತವಿಷಯಕವಾದುದರಿಂದ ಇದು ಹ್ರಸ್ವ-ದೀರ್ಘ-ವಿಷಯಕವೆಂದು ಹೇಳಬೇಕು. ಅದರಲ್ಲಿ ಕ್ರಮವಾಗಿ —'ಅ ಆ ಇ ಈ, ಉ ಊ, ಋ ೠ, ಎ ಏ ಐ, ಒ ಓ ಔ' ಎಂಬಿವನ್ನೇ ಗ್ರಹಿಸಬೇಕು. 'ಠಿ' ಎಂಬಲ್ಲಿ ಋ ೠ ವರ್ಣಗಳಿಗೆ ಸಮಾಹಾರದ್ವಂದ್ವ-ಸಮಾಸವನ್ನು ಮಾಡಿ ಎರಡಕ್ಕೂ ಸವರ್ಣದೀರ್ಘವನ್ನು ಮಾಡಿ ಸಪ್ತಮಿಯನ್ನು ಮಾಡಲು 'ಠಿ' ಎಂದಾಗಿರುವುದು. ಕೆಲವರು ಋ ವರ್ಣ ೠ ವರ್ಣಗಳಿಗೆ ಪರಸ್ಪರ ಸವರ್ಣ-ಸಂಜ್ಞೆಯನ್ನಂಗೀಕರಿಸಿರುವುದರಿಂದ ಒಂದನ್ನುಚ್ಚರಿಸಲು ಎರಡಕ್ಕೂ ಬೋಧೆಯಾಗುವುದೆಂದು ಹೇಳುವರು. ಪ್ರಕೃತದಲ್ಲಿ ೠ ಕಾರಾದಿ ಪದವಿಲ್ಲವಾದುದರಿಂದ ಅದಕ್ಕೆ ಅಷ್ಟು ಪ್ರಯೋಜನವೇನೂ ತೋರುವುದಿಲ್ಲ. ಇಲ್ಲಿ 'ಠಿ' ಎಂಬುದರಿಂದ ಪ್ಲುತಕ್ಕೂ ಬೋಧೆಯಾಗುತ್ತಿದ್ದರೂ ಭಾಷೆಯಲ್ಲಿ ಪ್ಲುತಾದಿಯಾದ ಪದವಿಲ್ಲವೆಂದು ಹ್ರಸ್ವ-ದೀರ್ಘಗಳೇ ಗ್ರಹಿಸಲ್ಪಡುವುವು. ತಥಾಚ— ಅ ಕಾರಾದಿ ಸ್ವರಗಳಿಗೆ ಋ ವರ್ಣವು ಪರವಾಗಲು ಪ್ರಕೃತಿಭಾವವು ಬರುವುದೆಂದು ಫಲಿತವಾಗುವುದು. ಇದರಿಂದ ಪೂರ್ವೋಕ್ತ ಯಗಾದಿಗಳಿಲ್ಲವೆಂದು ತಾತ್ಪರ್ಯವಾಗುವುದು. ಮತ್ತು ದೀರ್ಘಾಂತಾದ್ವ್ಯಾದಿಗಳ ಮುಂದಿರುವ ಋ ಕಾರಕ್ಕೆ — '**ದೀರ್ಘಾದೃತೋ ರುರದ್ವ್ಯಾದೇಃ**' ಎಂಬ ಸೂತ್ರದಿಂದ ಈ ಸೂತ್ರಕ್ಕೆ ಲಕ್ಷ್ಯವಾದವುಗಳಲ್ಲಿ 'ರು' ಎಂಬಾದೇಶವನ್ನೂ ವಿಧಿಸಿರುವುದರಿಂದ ಆ ವಿಷಯದಲ್ಲಿ 'ರು' ಎಂಬಾದೇಶವೂ ಪ್ರಕೃತಿಭಾವವೂ ಪರ್ಯಾಯವಾಗಿ ಬರುವುವೆಂದು ತಿಳಿಯಬೇಕು.

ಈ ಶಾಸ್ತ್ರದಲ್ಲಿ ಉದ್ದೇಶ್ಯಗಳಾಗಿ ಏರ್ಪಡುವ 'ೠ, ಎ, ಏ, ಒ' ಎಂಬ ಸ್ವರಗಳಿಗೆ ಪ್ರಯೋಗಗಳನ್ನು ತೋರಿಸದಿದ್ದರೂ ಮಹಾಕವಿ ಪ್ರಯೋಗಗಳನ್ನು ನೋಡಿ ಊಹಿಸಿಕೊಳ್ಳುವುದು. ೠ ವರ್ಣಾಂತ ಶಬ್ದಗಳೇ ಲೋಕದಲ್ಲಿಲ್ಲವೆಂದು ಅದಕ್ಕೆ ಪ್ರಯೋಗವನ್ನು ತೋರಿಸಿಲ್ಲ. ೠ ವರ್ಣಾದಿಯಾದುದರಲ್ಲಿ ಸ್ವಲ್ಪ ವಿಶೇಷವುಂಟೆಂದು ಅದಕ್ಕೆ ಮಾತ್ರ ಪ್ರಯೋಗಗಳನ್ನು ಕಲ್ಪಿಸಿ ಹೇಳಿರುವುದು. ಹೀಗೆಯೇ ೠ ವರ್ಣಪರಕವಾದ ಅ ಕಾರಗಳಿಗೂ ಪ್ರಯೋಗಗಳನ್ನು ಊಹಿಸಿಕೊಳ್ಳುವುದು.

**ಅವತಾರಿಕೆ ೪೩**

ಹಿಂದೆ ಸಾಮಾನ್ಯವಾಗಿ ಹ್ರಸ್ವ-ದೀರ್ಘ ಸ್ವರಗಳಿಗೆ ಋ ವರ್ಣ ೠ ವರ್ಣಗಳು ಪರವಾಗಲು ಸಂಧಿಕಾರ್ಯವು ಬರುವುದಿಲ್ಲವೆಂದು ಹೇಳಲ್ಪಟ್ಟಿತು. ಈಗ ಆ ಕಾರ ಮಾತ್ರಕ್ಕೆ ಅ ವರ್ಣವು ಪರವಾದರೆ ಸಂಧಿಕಾರ್ಯವಿಲ್ಲವೆಂದು ಹೇಳುತ್ತಾನೆ.

**ಸೂತ್ರಂ || ಆದೇ || ೪೩ ||**

**ಅರ್ಥ || ಆಕಾರವು ಅ ವರ್ಣಪರವಾಗಲು ಪ್ರಕೃತಿಭಾವವನ್ನು ಹೊಂದುವುದು.**

**ಉದಾಹರಣೆ ||** ಆ ಅರಸಂ, ಆ ಅಂಚೆಂ, ಮೃಡನಾ ಅರ್ಧೇಂದು, ಸಕಿಯಾ ಅಯಲ್ಲಕಂ,

ಆ ಐಶ್ವರ್ಯಂ, ಆ ಐಲಬಿಲಂ, ಆ ಔನ್ನತ್ಯಂ, ಆ ಔಗು-ಮೊದಲಾದುವನ್ನು ಇದಕ್ಕೆ ಲಕ್ಷ್ಯಗಳನ್ನಾಗಿ ತೆಗೆದುಕೊಳ್ಳುವುದು.

**ವಿಚಾರ ೪೩**

ಈ ಸೂತ್ರದಲ್ಲಿ — 'ಆತ್' ಎಂದರೆ ಆ ಕಾರವು. 'ಏ' ಅಂದರೆ ಅ ವರ್ಣಕ್ಕೆ ಸಪ್ತಮೀ ನಿರ್ದೇಶವು. ತಥಾಚ ಅ ವರ್ಣ ಪರಕವಾದ ಆ ಕಾರವು ಪೂರ್ವೋಕ್ತ ಸಂಧಿಕಾರ್ಯವನ್ನು ಹೊಂದುವುದಿಲ್ಲವೆಂದರ್ಥವಾಗುವುದು. ಆದುದರಿಂದ — ಆ ಅರಸಂ, ಆ ಅಂಚೆ, ಮೊದಲಾದ ಪ್ರಯೋಗಗಳಲ್ಲಿ — ಆತಂ ಅರಸಂ, ಅಥವಾ ಅವಂ ಅರಸಂ, ಅದು ಅಂಚೆ, ಎಂಬ ವಿಗ್ರಹವನ್ನು ಮಾಡಲು — '**ವಿಶೇಷಣಮೇಕಾರ್ಥೇನ || ೩೦೯ ||**' ಎಂಬ ಸೂತ್ರದಿಂದ ಸಮಾನಾಧಿಕರಣ-ಸಮಾಸವನ್ನು '**ವೃತ್ತೇಃ || ೨೪೮ ||**' ಎಂಬ ಸೂತ್ರದಿಂದ ವಿಭಕ್ತಿ ಲೋಪವನ್ನೂ ಅದು ಶಬ್ದಕ್ಕೆ - '**ಆದೀದೂದದ್ವಿದೂದೋಃ || ೩೬೦ ||**' ಎಂಬ ಸೂತ್ರದಿಂದ ಆ ಕಾರಾದೇಶವನ್ನೂ ಮಾಡಿ ಆ ಕಾರಕ್ಕೆ ಅರಸ, ಅಂಚೆ ಶಬ್ದಾವಯವಗಳಾದ ಅ ಕಾರವು ಪರದಲ್ಲಿರುವುದರಿಂದ ಪ್ರಕೃತಿಭಾವವು ಬಂದಿರುವುದೆಂದು ತಿಳಿಯುವುದು. ಹೀಗೆಯೇ — 'ಮೃಡಾನಾ ಅರ್ಧೇಂದು, ಸತಿಯಾ ಆಯಲ್ಲಕಂ' ಎಂಬಲ್ಲಿ 'ಮೃಡನ, ಸತಿಯ' ಎಂಬ ಷಷ್ಠ್ಯಂತಕ್ಕೆ — '**ಅದಃ || ೨೯೫ ||**' ಎಂಬ ಸೂತ್ರದಿಂದ ವೈಕಲ್ಪಿಕ ದೀರ್ಘವನ್ನು ಮಾಡಲು ದಿರ್ಘಾಂತಗಳಾಗಿ ಈ ಸೂತ್ರಕ್ಕೆ ಲಕ್ಷ್ಯಗಳಾಗುವುವು. ಇಲ್ಲಿ 'ಆಯಲ್ಲಕ' ವೆಂದರೆ 'ರಣರಣಕ' ವೆಂಬ ಶೃಂಗಾರಾವಸ್ಥಾ ವಿಶೇಷವು; ಅಥವಾ 'ಸೀಮಂತ' ವೆಂದರ್ಥವು.

ಈ ಸೂತ್ರದಲ್ಲಿ ಅ ವರ್ಣಪರಕವಾದ ಆ ಕಾರಕ್ಕೆ ಪ್ರಕೃತಿಭಾವವು ವಿಧಿಸಲ್ಪಟ್ಟಿರುವುದು. ಈ ಪ್ರಕೃತಿಭಾವವು ಸಂಧ್ಯಕ್ಷರಗಳಾದ ಐ ಕಾರ ಔ ಕಾರಗಳು ಪರದಲ್ಲಿದ್ದರೂ ತದೇಕದೇಶದಲ್ಲಿ ವಿಶಿಷ್ಟಾಕಾರವಿರುವುದರಿಂದ — ಆ ಐಶ್ವರ್ಯಂ, ಆ ಐಲಬಿಲಂ, ಆ ಐದೆ, ಆ ಐರಣೆ, ಆ ಐಕಿಲ್, ಆ ಔತ್ಕಂಠ್ಯ, ಆ ಔನ್ನತ್ಯಂ, ಆ ಔಗು, ಆ ಔಳಿ, ಆ ಔಡು ಮೊದಲಾದ ಪ್ರಯೋಗಗಳಲ್ಲಿಯೂ ಪ್ರವರ್ತಿಸುವುದೆಂದು ತಿಳಿಯಬೇಕು. ಆದರೆ ಇದರಂತೆ ಏ, ಓ ವರ್ಣಗಳೂ ಸಂಧ್ಯಕ್ಷರವಾದುದರಿಂದ ಅವು ಪರದಲ್ಲಿರುವಾಗಲೂ ಈ ಪ್ರಕೃತಿಭಾವವು ಪ್ರಸಕ್ತವಾಗುವುದು. ಆದಾಗ್ಯೂ ಸಂಧ್ಯಕ್ಷರಗಳೆಂದು ಸಕಲಶಾಬ್ದಿಕ ಸಂಪ್ರದಾಯ ಸಿದ್ಧಗಳಾದ ಏ ಕಾರಾದಿಗಳಲ್ಲಿ ಏ, ಓ ಎಂಬಿವು ಪ್ರಶ್ಲಿಷ್ಟಾಕಾರಗಳೆಂತಲೂ ಐ, ಔ ಎಂಬಿವು ವಿಶ್ಲಿಷ್ಟಾಕಾರಗಳೆಂತಲೂ ಅಂಗೀಕರಿಸಿರುವುದರಿಂದ ಪ್ರಶ್ಲಿಷ್ಟಾಕಾರಗಳಾದ ಏ ಓ ಗಳು ಪರವಾಗಲು ಬರುವುದಿಲ್ಲವೆಂದು ತಿಳಿಯಬೇಕು.

ಆದುದರಿಂದಲೇ ಪ್ರಾಚೀನರು — '**ಅಜ್ಭುಕ್ತಿಮಧ್ಯಗತರೇಫಮೃವರ್ಣಂ ಪ್ರತಿಜಾನತೇ || ಅಜ್ಭುಕ್ತಿಮಧ್ಯಗತಲಕಾರಂ ೣ ವರ್ಣಂ|| ಅಜ್ಭುಕ್ತಿಪುರೋಗತಾಕಾರಾನೇಚ ಇತಿ ನ್ಯಾಸಕಾರಃ||**' ಎಂದು ಹೇಳುವರು. ಹೀಗೆಯೇ — '**ಏಕಾರಾದೀನಿ ಸಂಧ್ಯಕ್ಷರಾಣೀತ್ಯತ್ರ ಸಂಧಿ ವಿಶಿಷ್ಟಾನ್ಯಕ್ಷರಾಣಿ ಸಂಧ್ಯಕ್ಷರಾಣೀತ್ಯನ್ವರ್ಥಸಂಜ್ಞಾ || ತತ್ರಾಕಾರಸ್ಯೇಕಾರೇಣಯೋಗೇ ಸತ್ಯೇಕಾರಃ || ತೇನ ಚೈಕಾರಃ ಉಕಾರೇಣೋಕಾರಃ || ತೇನಚೌಕಾರಃ || ಇತಿಚತ್ವಾರೋಽಪಿ ಗೂಢಸಂಧಿಕಾಃ || ಅತ ಏವಚ ತೇಷಾಂ ಕಂಠೌಷ್ಠ್ಯತ್ವಂ ಕಂಠತಾಲವ್ಯತ್ವಂ ಚೇತಿ ದ್ವಿಸ್ಥಾನಿಕತ್ವಂ**' ಎಂದು ನಿಬಂಧಕಾರರು ಹೇಳಿರುವರು. ಇವು ಗೂಢಸಂಧಿ ಎಂಬುವರಲ್ಲ —

ವರಸಂಧ್ಯಕ್ಷರದಂತಿರೆ
ಗುರುದೀರ್ಘಂ ಗೂಢಸಂಧಿಯೆನೆ ತೋಳ್ ನಾಲ್ಕುಂ
ಕರಮೆಸೆದಿರ್ಕ್ಕುಂ ಪದ್ಮೋ
ದರಂಗೆ ಶಂಖಾಸಿಚಕ್ರಶಾರ್ಙ್ಗಸಮೇತಂ

ಎಂದು ಪ್ರಯೋಗವೂ ಇರುವುದು. ಶಿಕ್ಷಾಕಾರರಾದರೋ — '**ಏಚಃ ಸಂಧ್ಯಕ್ಷರಾಣಿ || ತೇಷಾಂ ಚದ್ವಯಾಂಶಾಃ || ಪೌರಸ್ತ್ಯಾ ಅಕಾರಾಃ || ಪಾಶ್ಚಾತ್ಯಾ ಇದುದೇದೋತಃ || ತತ್ರೈದೋತೌಪ್ರಶ್ಲಿಷ್ಟಾವರ್ಣಾವಿತ್ಯಶ್ರುತಿಃ || ಐದೌತಾವಿತು ವಿಶ್ಲಿಷ್ಟಾವರ್ಣಾವಿತ್ಯರ್ಧಮಾತ್ರಾಕಾರಶ್ರುತಿಃ ||**' ಎಂದು ಹೇಳಿರುವರು. ಪ್ರಕೃತದಲ್ಲಿ ಸಂಪ್ರದಾಯಾನುಸಾರವಾಗಿ ಸಂಧ್ಯಕ್ಷರಗಳು ಪರವಾಗಿರಲು ಅ ವರ್ಣ ಪರತ್ವವನ್ನು ಅಲ್ಲಲ್ಲಿ ವರ್ಣಿಸಿರುವುದನ್ನು ನಿರ್ಣಯಿಸಿ ಪ್ರಶ್ಲಿಷ್ಟಾವರ್ಣಗಳಾದ 'ಏ, ಓ' ಗಳನ್ನು ಬಿಟ್ಟು ವಿಶ್ಲಿಷ್ಟಾವರ್ಣಗಳಾದ 'ಐ, ಔ' ಗಳು ಪರವಾಗಲು ಪ್ರಕೃತಿಭಾವವೇ ಬರುವುದೆಂದು ಹೇಳಲ್ಪಟ್ಟಿದೆ.

**ಅವತಾರಿಕೆ ||**

ಇದುವರೆಗೂ ಸಾಮಾನ್ಯವಾಗಿ ಪ್ಲುತಾದಿ ಸ್ವರಗಳಿಗೆ ಯಥಾಯೋಗ್ಯವಾಗಿ ಸ್ವರಗಳು ಪರವಾಗಿರಲು ಪ್ರಕೃತಿಭಾವವು ಹೇಳಲ್ಪಟ್ಟಿತು. ಈಗ ಸ್ವರಾಂತ ನಿಪಾತ ಸಾಮಾನ್ಯಕ್ಕೂ ಪ್ರಕೃತಿಭಾವವನ್ನು ಹೇಳುತ್ತಾನೆ.

**ಸೂತ್ರಂ || ನಿಪಾತಾಃ || ೪೪ ||**

**ಅರ್ಥ || ಸ್ವರಾಂತಗಳಾದ ನಿಪಾತಗಳು ಸ್ವರವು ಪರವಾಗಿರಲು ಪ್ರಕೃತಿಭಾವವನ್ನು ಹೊಂದುತ್ತವೆ.**

**ಉದಾಹರಣೆ ||** ಅರಮೆ ಅರಲ್ದ ತಾವರೆ, ಅರೆ ಎಡೆ ಹಸ್ತಿ ಶಿಕ್ಷಣ ವಿಚಕ್ಷಣರ್, ಎಲೆ ಇದಲ್ತೆ ತುಹಿನಕ್ಷೋಣೀಧ್ರಂ, ಅಯ್ಯೋ ಇದೇಕಿಂತಾದುದು, ರಯ್ಯಮಾವುದೊ ಅದರಿಂ, ಅಹೊ ಇರಲಿಂ ಪೆರವರ ಮಹಾತ್ಮ್ಯಂ, ಅಯ್ಯೋ ಇಂದ್ರಂಗೆ ಕೇಡಾಯ್ತು, ಹೋ ಹೋ ಎಮಗು ಮಿಂತಾಯ್ತೇ, ಎಂತೆಂತೊ ಆಃ ಕಬ್ಬಮೊಳ್ಪಿತಾಯ್ತು, ಏನೇನೋ ಓದಿನ ಪರಿ ಲೇಸುಲೇಸು, ಎಡರಿದನೋ ಅವನ ನೊಸಲಕ್ಕರಂ ತೊಡೆದುದು, ಮುತ್ತಿದನೋ ಇಂದು ಕೋಂಟೆ ಧೂಳೀಪಟ್ಟಂ, ನಿನಗಕ್ಕೆಮ ಅಬ್ಜಗರ್ಭನಾಯುಂ ಶ್ರೀಯುಂ, ಸಿಂಗವಕ್ಕೆಮ ಅಂಜೆಂ, ಅನಾ ಇರ್ಮುಡಿಯಾ ಎರಟುಂಕುದರೆಯಾ ಇರ್ಪ್ಪಗ್ಗೆರಟುಂಕ್ಕೈದುವಾ, ಪಾಲಾ ಅಮುದಾ ಇನ್ನೇಂ, ಆನೆಯೋ ಅದ್ರಿಯೋ, ನಿಜಮನಃಪ್ರಿಯನಪ್ಪಿದನೋ ಅಗಲ್ದನೋ, ಆತನೇ ಇಂದ್ರಂ, ಆತನೇ ಈತಂ, ಈತನೇ ಈವಂ || ಮೊದಲಾದುವು ಇಲ್ಲಿ ಲಕ್ಷ್ಯಗಳು.

**ವಿಚಾರ ||**

ಈ ಸೂತ್ರದಲ್ಲಿ 'ನಿಪಾತಾಃ' ಎಂಬುದೊಂದೇ ಪದವಿರುವುದು. ಆದಾಗ್ಯೂ ಇದು ಪೂರ್ವೋಕ್ತ ಸ್ವರ-ಸಂಧಿ ಕಾರ್ಯನಿಷೇಧರೂಪವಾದುದರಿಂದ ಅಲ್ಲಿರುವ ಉದ್ದೇಶ್ಯ, ನಿಮಿತ್ತಗಳೇ ಇಲ್ಲಿಯೂ ಉದ್ದೇಶ್ಯ, ನಿಮಿತ್ತಗಳೆಂದು ತಿಳಿಯಬೇಕು. ಆದರೆ ಅಲ್ಲಿ ಉದ್ದೇಶ್ಯವಾಗಿರುವ ಸ್ವರವನ್ನು ಈ ಸೂತ್ರದಲ್ಲಿ ಉಪಾತ್ತವಾದ ನಿಪಾತಕ್ಕೆ ವಿಶೇಷಣವನ್ನು ಮಾಡಿ ತದಂತಲಾಭ

ವನ್ನು ಅಂಗೀಕರಿಸಿ, ಸ್ವರಾಂತಗಳಾದ ನಿಪಾತಗಳು ಸ್ವರವು ಪರವಾಗಲು ಪ್ರಕೃತಿಭಾವವನ್ನು ಹೊಂದುವುವೆಂದರ್ಥವನ್ನು ಹೇಳಿರುವುದು.

ಇಲ್ಲಿ ಉದಾಹರಿಸಿರುವ ನಿಪಾತಗಳಿಗೆ ಅರ್ಥವನ್ನು ನಿಪಾತಸಂಜ್ಞಾಸೂತ್ರದಲ್ಲಿ ಹೇಳಿರುವುದನ್ನು ಪರ್ಯಾಲೋಚಿಸಿ ತಿಳಿದುಕೊಳ್ಳುವುದು. ಅದರಲ್ಲಿ—'ಇರಲಿಂ' ಎಂಬ ರೂಪವು 'ಇರ್' ಧಾತುವಿನ ಮೇಲೆ ಕರ್ತ್ರರ್ಥದಲ್ಲಿ ಯುಷ್ಮದನೇಕತ್ವವಿವಕ್ಷೆಯಿರುವಾಗ 'ಇರ್' ಪ್ರತ್ಯಯವನ್ನೂ ಅದಕ್ಕೆ—'**ಇಮ್ ||೪೬೭||**' ಎಂಬ ಸೂತ್ರದಿಂದ 'ಇಮ್' ಆದೇಶವನ್ನೂ—'**ಪ್ರಾಕ್‌ಪ್ರಯೋಗೇ ಚಾವಿಕೃತಾತ್ || ೫೨೯ ||**' ಎಂಬುದರಿಂದ 'ಇಮ್' ಆದೇಶಕ್ಕೆ ಪೂರ್ವದಲ್ಲಿ 'ಅಲ್' ಎಂದು ಮಾಡಲು ಸಿದ್ಧಿಸುವುದು. 'ತೊಡೆದುದು' ಎಂಬುದು ಕರ್ಮಣಿಕೃದಂತವು. ಆದುದರಿಂದಲೆ ಇಲ್ಲಿ—'**ಕೃತಿ ವಾ || ೫೩೧ ||**' ಎಂಬುದರಿಂದ ಅನುಪ್ರಯೋಗವನ್ನು ವಿಕಲ್ಪವಾಗಿ ವಿಧಿಸಿರುವುದರಿಂದ 'ಪಡು' ಧಾತುವಿಗೆ ಅನುಪ್ರಯೋಗವಿಲ್ಲ. ಇದಕ್ಕೆ ಲುಪ್ತವೆಂದರ್ಥವು. ಉಳಿದುವರಲ್ಲಿ ಯಥಾಯೋಗ್ಯವಾಗಿ ಪ್ರಕ್ರಿಯೆಗಳನ್ನೂ ಅರ್ಥಗಳನ್ನೂ ನಿರ್ಣಯಿಸಿಕೊಳ್ಳುವುದು.

**ಅವತಾರಿಕೆ ೪೬**

ಪೂರ್ವಸೂತ್ರದಲ್ಲಿ ನಿಪಾತಸಾಮಾನ್ಯಕ್ಕೂ ಸ್ವರವು ಪರವಾಗಲು ಪ್ರಕೃತಿಭಾವವು ವಿಧಿಸಲ್ಪಟ್ಟಿತು. ಈಗ ಸ್ವರಾದಿನಿಪಾತಗಳು ಪರವಾಗಲು ಅ ವರ್ಣ ಮಾತ್ರಕ್ಕೆ ಪ್ರಕೃತಿಭಾವವು ವಿಧಿಸಲ್ಪಡುವುದು.

**ಸೂತ್ರಂ || ಓ ನಿಪಾತೇ || ೪೬ ||**

**ಅರ್ಥ || ಅ ವರ್ಣವು ನಿಪಾತಸ್ವರವು ಪರವಾಗಿರಲು ಪ್ರಕೃತಿಭಾವವನ್ನು ಹೊಂದುವುದು.**

**ಉದಾಹರಣೆ ||** ಆತನ ಎ, ಅವಳ ಎ, ಆತನ ಎ ತೋರಮೊಡೆಗಳ್, ಕಂತುವ ಆಃ ಕಬ್ಬುಬಿಲ್ಲನೀತಂ ಮುರಿದಂ, ಸತಿಯಾ ಆಃ ಕಣ್ಣ ಬೆಳಗು ಬೆಳಗಿಮುದಿಳೆಯುಂ, ಎನ್ನಾ ಉಃ ಪಾಪಫಲಂ || ಈ ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೪೬**

ಈ ಸೂತ್ರದಲ್ಲಿ ನಿರ್ದೇಶಿಸಿರುವ ಅ ವರ್ಣವು ಹ್ರಸ್ವ-ದೀರ್ಘ-ಪ್ಲುತ ಸಾಧಾರಣವಾಗಿರುವುದು. ಆದಾಗ್ಯೂ ಪ್ಲುತಕ್ಕೆ ಸಾಮಾನ್ಯವಾಗಿ '**ಪ್ಲುತಃ ಪ್ರಕೃತ್ಯಾ**' ಎಂದು ಪ್ರಕೃತಿಭಾವವನ್ನು ವಿಧಿಸಿರುವುದರಿಂದ ಇಲ್ಲಿ ಹ್ರಸ್ವ-ದೀರ್ಘಗಳನ್ನು ಮಾತ್ರ ಗ್ರಹಿಸಬೇಕು. 'ನಿಪಾತೇ' ಎಂಬುದು ಸಾಮಾನ್ಯವಾಗಿದ್ದರೂ ಪ್ರಕರಣದಿಂದ ಸ್ವರಾದಿನಿಪಾತ ಬೋಧಕವಾಗಿರುವುದು. ಆದುದರಿಂದ ಅ ವರ್ಣವು ಸ್ವರಾದಿನಿಪಾತಪರಕವಾಗಿರಲು ಪ್ರಕೃತಿಭಾವವನ್ನು ಹೊಂದುವುದೆಂದು ಫಲಿತಾರ್ಥವನ್ನು ಹೇಳಿರುವುದು.

ಈ ಸೂತ್ರದಲ್ಲಿ ಉದಾಹರಿಸಿರುವ 'ಆತನ ಎ' ಎಂಬಲ್ಲಿ ಯಗಾಗಮವಿಲ್ಲವೆಂದೂ 'ಕಂತುವ ಆಃ' ಎಂಬಲ್ಲಿ ಲೋಪವಿಲ್ಲವೆಂದೂ ತಿಳಿಯಬೇಕು. ಹೀಗೆಯೇ 'ಸತಿಯಾ ಆಃ' ಮೊದಲಾದುವುಗಳಲ್ಲಿಯೂ ಯಥಾಶಾಸ್ತ್ರವಾಗಿ ಕಾರ್ಯಗಳನ್ನು ಊಹಿಸಿಕೊಳ್ಳುವುದು. ನಿಪಾತಗಳಿಗೆ ಪೂರ್ವ ಸೂತ್ರದಿಂದಲೇ ಪ್ರಕೃತಿಭಾವವು ಸಿದ್ಧಿಸುವುದರಿಂದ ಈ ಸೂತ್ರವು ನಿಪಾತಪರಕವಾದ ಅನಿಪಾತಸ್ವರಾರ್ಥವೆಂದು ಹೇಳಬೇಕು. ಇಲ್ಲಿ ಅ ವರ್ಣವನ್ನು ಉದ್ದೇಶವಾಗಿ ಹೇಳಿರು

ವುದರಿಂದ 'ವನಿತೆಗೆಯುಃ ಇಂತು ಪೋ್ಮುವೇ ತನುಮನಗಳ್, ಗ್ಲೌವಾಃ ಕರಮೊಪ್ಪಿದಂ ನಭೋ ಮಂದಿರದೊಳ್' ಮೊದಲಾದ ಪ್ರಯೋಗಗಳಲ್ಲಿ ಎ ಕಾರಾದಿಗಳಿಗೆ ಪೂರ್ವೋಕ್ತ ಯಗಾದಿಗಳೇ ಬರುವುವು. ಇಲ್ಲಿ 'ನಿಪಾತೇ' ಎಂದು ಹೇಳಿರುವುದರಿಂದ — 'ಬುಧ+ಅರ್, ಸುರ+ಅರ್' ಮೊದಲಾದುವುಗಳಲ್ಲಿ ನಿಪಾತಸ್ವರವಿಲ್ಲವಾದುದರಿಂದ ಲೋಪವು ಬಂದು 'ಬುಧರ್, ಸುರರ್' ಮೊದಲಾದುವು ಸಿದ್ಧಿಸುವುವು.

ಇಲ್ಲಿ — ಪ್ರಾಮಾಣಿಕರು ಪ್ರಯೋಗಿಸುವ—

ನಯನದೊಳಮೆರ್ದೆಯೊಳಂ ನಿ
ನ್ನಯೆ ರೂಪಿರ್ದಪುದು ನಿನ್ನ ಮಾತಿರ್ದಪುದೆ
ನ್ನಯೆ ಕಿವಿಯೊಳಗಿನಸುತ ಕೇಳ್
ವಿಯೋಗಮೆಂತಾದುದಯ್ಯ ಎನಗಂ ನಿನಗಂ ( ರನ್ನನ ಗದಾಯುದ್ಧ ೫-೨೪ )

ಎಂಬುದೇ ಮೊದಲಾದ ಪದ್ಯಾದಿಗಳಲ್ಲಿರುವ — 'ನಿನ್ನಯೆ' ಇತ್ಯಾದಿ ಪ್ರಯೋಗಗಳ ಸಾಧನಾರ್ಥವಾಗಿ ಬಹುಳಾಧಿಕಾರವನ್ನು ಮಾಡಿ ಕ್ವಚಿತ್ — 'ತನ್, ನಿನ್, ಎನ್' ಎಂಬಿವಕ್ಕೆ ಅವಧಾರಣವಾಚಿಯಾದ ನಿಪಾತಸ್ವರವು ಪರವಾಗಿರಲು ಕ್ವಾಚಿತ್ಕವಾಗಿ ಯಗಾಗಮವು ಬರುವುದೆಂದು ಅಂಗೀಕರಿಸಲ್ಪಡುವುದು. ಆದುದರಿಂದ 'ತನ್ನಯೆ, ನಿನ್ನಯೆ, ಎನ್ನಯೆ' ಎಂದು ಸಿದ್ಧಿಸುವುವು. ಹೀಗೆಯೆ ಪ್ರಯೋಗಾನುಸಾರವಾಗಿ ಇನ್ನೂ ಊಹಿಸಿಕೊಳ್ಳುವುದು. ಇಲ್ಲ **ದರ್ಪಣಕಾರನು** ಏನೂ ಹೇಳಿಲ್ಲವಾದರೂ ಅಗತಿಕಗತಿಯಿಂದ ಅಲ್ಲಿಯೂ ಕಲ್ಪಿಸಿಕೊಳ್ಳಬೇಕು.*

**ಅವತಾರಿಕೆ ೪೬**

ಅ ವರ್ಣಕ್ಕೆ ನಿಪಾತಸ್ವರವು ಪರವಾಗಲು ಪ್ರಕೃತಿಭಾವವು ಹೇಳಲ್ಪಟ್ಟಿತು. ಈಗ ಇನ್ನೂ ಕೆಲವು ಅ ಕಾರಾಂತ ಶಬ್ದಗಳಿಗೆ ಸಮಾಸದಲ್ಲಿ ಪ್ರಕೃತಿಭಾವವನ್ನು ಹೇಳುತ್ತಾನೆ.

**ಸೂತ್ರಂ || ಪೊಸತ್ವಾದಿಃ || ೪೬ ||**

**ಅರ್ಥ ||** ಅ ಕಾರಾಂತಗಳಾದ ಪೊಸತ್ವಾದಿ ಗಣಪಠಿತಗಳಾದ ಶಬ್ದಗಳಿಗೆ ಸ್ವರವು ಪರವಾಗಿರಲು ಪ್ರಕೃತಿಭಾವವು ಬರುವುದು.

**ಉದಾಹರಣೆ ||** ಪೊಸ ಅಡಕೆ, ಪೊಸ ಆನೆ, ಎಳ ಅಂಚೆ, ಪೊಱ ಅಡಿ, ಒಳ ಆಳ್, ಪೞ ಅಲಗು || ಈ ಮೊದಲಾದುವೇ ಇದಕ್ಕೆ ಲಕ್ಷ್ಯಗಳು.

**ವಿಚಾರ ೪೬**

ಇಲ್ಲಿ 'ಪೊಸತ್ವಾದಿಃ' ಎಂದರೆ — 'ಪೊಸತು, ಪೊಱಗು, ಒಳಗು, ಪೞದು, ಎಳದು' ಎಂಬ ಐದು ಶಬ್ದಗಳಿರುವುವು. ಇವು ಸಮಾಸ ವಿಷಯದಲ್ಲಿ ಹೇಳಿರುವ — '**ಅರಸ್ವಾದೀನಾಂ ದೋಲುರ್ಬುತ್ತರಪದೇ || ೩೩೨ ||**' ಎಂಬ ಸೂತ್ರಸ್ಥ ಅರಸ್ವಾದಿಗಣಕ್ಕೆ ಸೇರಿದುವು. ಆದುದರಿಂದ ಸಮಾಸ

* [ ಸೂತ್ರ ೫೩ರಲ್ಲಿ ದರ್ಪಣಕಾರನು —'.. ಅವಧಾರಣೆ ಪರೇ ಮುತ್ವಂ ಪಿಂತಾಗೆ ಷಷ್ಠಿನಿಯಮುದೆ ಯತ್ವಂ' ಎಂದು ಹೇಳಿ, ಅದರ ವೃತ್ತಿಯಲ್ಲಿ— 'ಅವಧಾರಣೆಯೆಕಾರಂ ಪರದೊಳಿರೆ ನಿಯಮುದಿಂ ಯತ್ವಂ' ಎಂದು ವಿಸ್ತರಿಸಿ ಉದಾಹರಣೆಗೆ :— 'ಆತನೆಯೆ ತೋರದೊಡೆಗಳ್' ಇತ್ಯಾದಿಗಳನ್ನು ಕೊಟ್ಟಿದ್ದಾನೆ. ಆದುದರಿಂದ ಆತನ ಅಭಿಪ್ರಾಯದಲ್ಲಿ ಇಂತಹ ಪ್ರಸಕ್ತಿಯಲ್ಲಿ ಯಕಾರಾಗಮವು ನಿಯತವೆಂದೇ ತಿಳಿಯಬೇಕು. — ಸಂಪಾದಕ]

ದಲ್ಲಿ ಅ ಕಾರಾಂತಗಳಾಗಿ ಈ ಸೂತ್ರಕ್ಕೆ ಲಕ್ಷ್ಯಗಳಾಗುವುವು. ಪೂರ್ವಸೂತ್ರದಿಂದ ಅ ವರ್ಣವನ್ನು ಅನುವರ್ತಿಸಿದ್ದರೂ ಪೊಸತ್ತಾದಿಗಳಲ್ಲಿ ದೀರ್ಘಾದಿಗಳು ಸಂಭವಿಸುವುದಿಲ್ಲವೆಂದು ಅ ಕಾರಾಂತವಾದ ಪೊಸತ್ತಾದಿಯೆಂದು ಹೇಳಲ್ಪಟ್ಟಿದೆ. ಇಲ್ಲಿ ಅ ವರ್ಣವನ್ನು ಅನುವರ್ತಿಸದಿದ್ದರೆ 'ಪೊಸತು+ಅಡಕೆ, ಪಟದು+ಅಲಗು' ಮೊದಲಾದ ವಾಕ್ಯಗಳಲ್ಲಿ ಪ್ರಕೃತಿಭಾವವು ಪ್ರಸಕ್ತವಾಗುವುದು;* ಅದನ್ನು ಹೇಳಿರುವುದರಿಂದ ಇವು ಅ ಕಾರಾಂತವಲ್ಲದೆಡೆಯಲ್ಲಿ ಪ್ರಕೃತಿಭಾವವು ಬಾರದೆ ಪೂರ್ವೋಕ್ತ ಸಂಧಿಕಾರ್ಯವೇ ಬಂದು 'ಪೊಸತಡಕೆ, ಪಟದಲಗು' ಮೊದಲಾದುವು ಸಿದ್ಧಿಸುವುವು.

**ಅವತಾರಿಕೆ ೪೮**

ಇದುವರೆಗೂ ನಿತ್ಯವಾದ ಪ್ರಕೃತಿಭಾವವನ್ನು ಹೇಳಿ ಈಗ ವಿಕಲ್ಪವಾದ ಪ್ರಕೃತಿಭಾವವನ್ನು ಹೇಳಲು ಪ್ರಾರಂಭಿಸಿ ಮೊದಲು ಧಾತುವಿಷಯದಲ್ಲಿ ಹೇಳುತ್ತಾನೆ.

**ಸೂತ್ರಂ || ವೇರದೆ || ೪೮ ||**

**ಅರ್ಥ || ಅದೆ ಎಂಬುದು ಪರವಾಗಿರಲು ಅ ಕಾರಾಂತವಾದ ಇರ್ ಧಾತುವು ವಿಕಲ್ಪವಾಗಿ ಪ್ರಕೃತಿಭಾವವನ್ನು ಹೊಂದುವುದು.**

**ಉದಾಹರಣೆ** || ಇರ ಅದೆ, ಇರದೆ ||

**ವಿಚಾರ ೪೮**

ಈ ಸೂತ್ರದಲ್ಲಿ ಪೂರ್ವಸೂತ್ರದಿಂದ ಅ ವರ್ಣವು ಅನುವರ್ತಿಸಲ್ಪಡುವುದು. ಇದನ್ನು 'ಇರ್' ಧಾತುವಿಗೆ ವಿಶೇಷಣವನ್ನು ಮಾಡಲು ತದಂತ ಲಾಭವು ಬಂದು, ಅ ಕಾರಾಂತವಾದ 'ಇರ್' ಧಾತುವೆಂದರ್ಥವಾಗುವುದು. 'ಇರ್' ಎಂಬುದು ರೇಫಾಂತವಾಗಿದ್ದರೂ — '**ವಾಕ್ ಜೇರಃ || ೫೮೩ ||**' ಎಂಬ ಸೂತ್ರದಿಂದ ಅಗಾಗಮವು ಬಂದು ಅ ಕಾರಾಂತವಾಗಿರುವುದು. 'ಅದೆ' ಎಂಬುದು — '**ಅದೆತ್ ಪ್ರತಿಷೇಧೇ || ೫೮೨ ||**' ಎಂಬ ಸೂತ್ರದಿಂದ ಪ್ರತಿಷೇದಾರ್ಥದಲ್ಲಿ ಉತ್ತರ ಕಾಲಕ್ರಿಯೆಯೊಡನೆ ಸಮಾನ ಕರ್ತೃಕಳಾದ ಪೂರ್ವಕಾಲಿಕ ಕ್ರಿಯಾವಾಚಕ ಧಾತುಗಳ ಮೇಲೆ ವಿಹಿತವಾದ ಪ್ರತ್ಯಯವು. ಇದು ಇಲ್ಲಿ ಲುಪ್ತಸಪ್ತಮೀ ವಿಭಕ್ತಿಯೆಂದು ಪರಶಬ್ದಾರ್ಥವು ಉಪಸ್ಥಿತವಾಗುವುದು. ತಥಾಚ ಅ ಕಾರಾಂತ 'ಇರ್' ಧಾತುವು 'ಅದೆ' ಎಂಬುದು ಪರದಲ್ಲಿರಲು ವೈಕಲ್ಪಿಕ ಪ್ರಕೃತಿಭಾವವನ್ನು ಹೊಂದುವುದೆಂದರ್ಥವಾಗುವುದು. ಇದು ಬಾರದ ಪಕ್ಷದಲ್ಲಿ '**ಲುಬನಾಮುಹಾನೌ || ೩೬ ||**' ಎಂಬ ಸೂತ್ರದಿಂದ ಅ ಕಾರಕ್ಕೆ ಲೋಪವು ಬರುವುದೆಂದು ತಿಳಿಯಬೇಕು.

ಇಲ್ಲಿ ಹೇಳಿರುವ 'ಅದೆ' ಎಂಬುದು ಧಾತುಗಳ ಮೇಲೆ ಬರುವ ಪ್ರತ್ಯಯವಾದುದರಿಂದ ಅದರಿಂದ ಧಾತುವು ಆಕ್ಷಿಪ್ತವಾಗುವುದು. ಆ ಧಾತುವು ಅ ಕಾರಾಂತವಾಗಬೇಕಾದರೆ ಅಗಾಗಮವಿಲ್ಲದೆ ಆಗುವುದಿಲ್ಲ. ಆ ಅಗಾಗಮವು 'ಇರ್' ಧಾತುವೊಂದಕ್ಕೇ ವಿಧಿಸಲ್ಪಡುವುದು. ತಥಾಚ 'ಅದೆತ್' ಪ್ರತ್ಯಯಪರಕವಾದ ಅ ಕಾರಾಂತ ಧಾತುವೆಂದರೆ 'ಇರ್' ಎಂಬುದೊಂದೇ ಸಂಭವಿಸುವುದರಿಂದ ಇಲ್ಲಿ 'ಇರ್ ಗ್ರಹಣಂ' ಸ್ಪಷ್ಟಾರ್ಥವೆಂದು ತಿಳಿಯಬೇಕು. 'ಅದೆ' ಎಂಬುದನ್ನು

* [ ದರ್ಪಣಕಾರನು ಸೂತ್ರ ೫೫ ರಲ್ಲಿ ಇದೇ ವಿಚಾರವನ್ನು ಹೇಳಿ ಇದೇ ಬಗೆಯ ಉದಾಹರಣೆಗಳನ್ನು ಕೊಟ್ಟಿರುವನು. — ಸಂಪಾದಕ ]

ಹೇಳದಿದ್ದರೆ — ' ನೀನಿರಿಲ್ಲಿ ' ಮೊದಲಾದ ಪ್ರಯೋಗಗಳಲ್ಲಿ — ' ಇರ ' ಎಂಬ ಅ ಕಾರಾಂತಕ್ಕೆ ' ಇಲ್ಲಿ ' ಎಂಬುದು ಪರದಲ್ಲಿರುವಾಗಲೂ ಪ್ರಸಕ್ತವಾಗುವುದು. ಆದುದರಿಂದ ' ಅದೆ ' ಎಂಬುದು ಹೇಳಲ್ಪಟ್ಟದೆ.

ಈ ಸೂತ್ರಕ್ಕೆ ' ಇರ್ ' ಧಾತುವೊಂದೇ ಲಕ್ಷ್ಯವಾಗಿರುವುದು. ಆದುದರಿಂದ ಇದಕ್ಕೆ ಅಗಾಗಮ ಪ್ರವೃತ್ತಿ-ಅಪ್ರವೃತ್ತಿ ಇವುಗಳಿಂದ ' ಇರ ಅದೆ, ಇರದೆ ' ಎಂಬ ಎರಡು ರೂಪಗಳಾಗುವುವು. ಆದರೆ ಅಗಾಗಮ ಪ್ರವೃತ್ತಿ ಪಕ್ಷದಲ್ಲಿ ಲೋಪವಾರಣಾರ್ಥವಾಗಿ ಈ ಪ್ರಕೃತಿಭಾವವು ಆರಂಭಿಸಲ್ಪಟ್ಟಿರುವುದೆಂದು ತೋರುವುದು. ಆದಾಗ್ಯೂ ಅಗಾಗಮಕ್ಕೆ ಲೋಪ ಮಾಡುವ ಪಕ್ಷದಲ್ಲಿ ಅಗಾಗಮವಿಧಿಯೇ ವ್ಯರ್ಥವಾಗುವುದು. ಆದುದರಿಂದ ಇಲ್ಲ ಲೋಪವು ಪ್ರವರ್ತಿಸದಿರಲು ' ಇರ ಅದೆ ' ಎಂಬ ರೂಪವೂ ಅಗಾಗಮವು ಬಾರದ ಪಕ್ಷದಲ್ಲಿ ' ಇರದೆ ' ಎಂಬ ರೂಪವೂ ಸಿದ್ಧಿಸುವುದರಿಂದ ಅದಕ್ಕಾಗಿ ಈ ಸೂತ್ರಕರಣವು ವ್ಯರ್ಥವೆಂದು ಕೆಲವರು ಶಂಕಿಸುವರು. ಆದರೆ ಇದು ಸರಿಯಲ್ಲ. ಏಕೆಂದರೆ ಈ ಶಾಸ್ತ್ರದಲ್ಲಿ —

**ಯಂ ವಿಧಿಂ ಪ್ರತಿ ಯ ಉಪದೇಶೋಽನರ್ಥಕಃ ಸ ವಿಧಿರ್ಬಾಧ್ಯತೇ**
**ಯಸ್ಯ ಚ ವಿಧೇರ್ನಿಮಿತ್ತಂ ನಾಸೌ ತಂ ಬಾಧತೇ**

ಎಂಬ ನ್ಯಾಯವನ್ನು ಅಂಗೀಕರಿಸಿರುವುದರಿಂದ ಪ್ರಕೃತದಲ್ಲಿ ಈ ಅಗಾಗಮ ವಿಧಿಯು ಲೋಪ ವಿಧಿಯನ್ನು ಕುರಿತು ಅನರ್ಥಕವಾಗುವುದರಿಂದ ಆ ಲೋಪವನ್ನು ಬಾಧಿಸುವುದು. ಯಗಾಗಮ ವಿಧಿಗೆ ನಿಮಿತ್ತವಾದುದರಿಂದ ಯಗಾಗಮವನ್ನು ಬಾಧಿಸಲಾರದು. ಆದುದರಿಂದ ' ಇರ ಅದೆ ' ಎಂಬಲ್ಲಿ ಯಗಾಗಮವು ಬರಬೇಕಾಗುವುದು. ಅದನ್ನು ಬಾಧಿಸಲು ಈ ಪ್ರಕೃತಿಭಾವವು **ಸೂತ್ರಕಾರ**ನಿಂದ ಅಂಗೀಕರಿಸಲ್ಪಟ್ಟಿದೆ. ಆದುದರಿಂದ ಈ ಸೂತ್ರವು ಸಾರ್ಥಕವೆಂದು ಸಹೃದಯರು ಸಂತೋಷಪಡಬೇಕು.

**ಅವತಾರಿಕೆ ೪೮**

' ಇರ್ ' ಧಾತುವಿಗೆ ಪ್ರಕೃತಿಭಾವವನ್ನು ಹೇಳಿ ' ಕರೆ ' ಧಾತುವಿಗೆ ' ಅಲ್ ' ಪರವಾಗಿರಲು ಪ್ರಕೃತಿಭಾವವನ್ನು ಹೇಳುತ್ತಾನೆ.

**ಸೂತ್ರಂ || ಕರೆದಲಿ || ೪೮ ||**

**ಅರ್ಥ || ' ಕರೆ ' ಎಂಬ ಧಾತುವಿಗೆ ಅಲ್ ಪ್ರತ್ಯಯವು ಪರವಾಗಿರಲು ವಿಕಲ್ಪವಾಗಿ ಪ್ರಕೃತಿಭಾವವಾಗುವುದು.**

**ಉದಾಹರಣೆ ||** ಕರೆಅಲ್, ಕರೆಯಲ್; ಕರೆಅಲಿಂ, ಕರೆಯಲಿಂ; ಕರೆಅಲೊಡಂ, ಕರೆಯಲೊಡಂ, ಕರೆಅಲೊಡನೆ, ಕರೆಯಲೊಡನೆ || ಇವೇ ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೪೮**

ಈ ಸೂತ್ರದಲ್ಲಿ ' ಕರತ್ ' ಎಂದು ತ ಕಾರ ಸಹಿತವಾಗಿ ಉಚ್ಚರಿಸಿರುವುದು. ' **ತಪರಸ್ತಾವಾನ್** ' ಎಂಬ ಸೂತ್ರ ಪ್ರವೃತ್ತ್ಯರ್ಥವಲ್ಲ. ಏಕೆಂದರೆ — ' ಕರೆ ' ಎಂಬುದು ಎ ಕಾರಾಂತ ಧಾತುವಿಗೆ ಅನುಕರಣವಾದುದರಿಂದ ಅದಕ್ಕೆ ' ಅಲಿ ' ಎಂಬುದರ ಸ್ವರವು ಪರವಾಗಲು ' ಕರಯಲಿ ' ಎಂದು ಅಯಾದೇಶ ಸಂಧಿಯಾಗಿ ಧಾತು ಸ್ವರೂಪನಿರ್ಧಾರಣೆಯಾಗುವುದಿಲ್ಲವಾದು

ದರಿಂದ ಸ್ಪಷ್ಟವಾಗಿ ಈ ಧಾತುವಿಗೆ ಎ ಕಾರಾಂತತ್ವವನ್ನು ಬೋಧಿಸಲು ಇಲ್ಲ ತ ಕಾರವು ಉಚ್ಚರಿಸಲ್ಪಟ್ಟಿದೆ, ಎಂದು ತಿಳಿಯಬೇಕು. ಆದುದರಿಂದಲೇ ಇಲ್ಲಿ ಅ ಕಾರಾನುವೃತ್ತಿಯಿಲ್ಲವೆಂದು ಹೇಳಬೇಕು. ಇಲ್ಲಿ 'ಅಲ್' ಎಂಬುದು ತಿಙ್-ಕೃತ್ ಸಾಧಾರಣವಾಗಿ ಸಪ್ತಮ್ಯಂತದಿಂದ ನಿರ್ದೇಶವು ಮಾಡಲ್ಪಟ್ಟಿದೆ. ಆದುದರಿಂದ ಅಲ್-ಪ್ರತ್ಯಯಪರಕ 'ಕರೆ' ಧಾತುವು ಪ್ರಕೃತಿಭಾವವನ್ನು ಹೊಂದುವುದೆಂದರ್ಥವಾಗುವುದು. ಆದುದರಿಂದ ಹಿಂದೆ ಹೇಳಿರುವ ಉದಾಹರಣೆಗಳಲ್ಲಿ ಮೊದಲಿನವು ನಾಲ್ಕೂ ತಿಙ್-ಅಲಿಗೆ ಲಕ್ಷ್ಯಗಳೆಂತಲೂ ಕೊನೆಯ ನಾಲ್ಕೂ ಕೃತ್-ಅಲಿಗೆ ಲಕ್ಷ್ಯಗಳೆಂತಲೂ ತಿಳಿಯತಕ್ಕದ್ದು. ಈ ಸೂತ್ರದಲ್ಲಿ 'ಅಲಿ' ಎಂಬುದನ್ನು ಹೇಳದಿದ್ದರೆ ಪೂರ್ವ ಸೂತ್ರದಿಂದ 'ಅದೆ' ಎಂಬುದಕ್ಕೆ ಅನುವೃತ್ತಿ ಬಂದು — ಕರೆಯದೆ' ಎಂಬಲ್ಲಿ ಅತಿಪ್ರಸಕ್ತವಾಗುವುದೆಂದು ಹೇಳಲ್ಪಟ್ಟಿದೆಯೆಂದು ತಿಳಿಯುವುದು.

**ಅವತಾರಿಕೆ ೪೯**

ಪೂರ್ವದಲ್ಲಿ — '**ನಿಪಾತಾಃ**' ಎಂಬ ಸೂತ್ರದಿಂದ ನಿಪಾತಸಂಜ್ಞಕಾವ್ಯಯಗಳಿಗೆ ಪ್ರಕೃತಿಭಾವವು ನಿತ್ಯವಾಗಿ ಹೇಳಲ್ಪಟ್ಟಿತು. ಈಗ ತದತಿರಿಕ್ತವಾದ ಕೆಲ ಅವ್ಯಯಗಳಿಗೆ ವೈಕಲ್ಪಿಕ ಪ್ರಕೃತಿಭಾವವನ್ನು ಹೇಳುತ್ತಾನೆ.

**ಸೂತ್ರಂ || ಗಡಾದಿಃ || ೪೯ ||**

**ಅರ್ಥ || ಅಣಮಾದ್ಯಂತರ್ಗಣವಾದ ಗಡಾದಿಗಣಪಠಿತಗಳಾದ ಅವ್ಯಯಗಳು ಸ್ವರಪರಕಗಳಾಗಲು ವಿಕಲ್ಪವಾಗಿ ಪ್ರಕೃತಿಭಾವವನ್ನು ಹೊಂದುತ್ತವೆ.**

**ಉದಾಹರಣೆ** || ನೀನಲ್ಲದೆ ಆವನಧಿಕನಿಳೆಯೊಳ್ ಜಿನಪಾ, ನೀನಲ್ಲದಾವನಧಿಕನಿಳೆಯೊಳ್ ಜಿನಪಾ || ತಾಂ ಗಡ ಅಂಗಜಂ ಗಡ ಅಶೋಕಶರಂ ಗಡ ಅಂಚೆಯುಂ ಗಡ, ತಾಂ ಗಡಂಗಜಂ ಗಡ ಶೋಕಶರಂ ಗಡಂಚೆಯುಂ ಗಡ || ಚಕ್ಕನೆ ಇಲ್ಲಿ ಹಾರಿದುವು, ಚಕ್ಕನಿಲ್ಲಿ ಪಾರಿದುವು ||

ಇಲ್ಲಿ ಅಣಮಾದ್ಯಂತರ್ಗಣವೇ ಗಡಾದಿಗಳೆಂಬುದು. ಅವಾವೆಂದರೆ — ಗಡ, ಗಳ; ಅಲ್ತು, ಅಲ್ಲ, ಇಲ್ಲ; ಇಲ್ಲದೆ, ಅಲ್ಲದೆ; ಆಗಡ, ಈಗಡ; ಪೊಲ್ಲಡ; ತಡಬಡ; ಅಕ್ಕಟ, ಅಕಟ; ಅಹಹ; ಬಳಿಕ್ಕೆ, ಬಳಿಕೆ; ಘೋಂಕನೆ, ಚಕ್ಕನೆ, ಘೋರನೆ; ಪಯ್ಕನೆ, ಬಯ್ಕನೆ; ಪೌವನೆ, ಪೌವಗೆ; ನೆಟ್ಟನೆ, ನೆಟ್ಟಗೆ; ತೊಟ್ಟನೆ, ತೊಟ್ಟಗೆ; ಆಯ್ಕನೆ, ಆಯ್ಕಗೆ; ಗಿಱ್ರನೆ, ಗಿಱ್ರಗೆ; ತಿಟ್ಟನೆ, ತಿಟ್ಟಗೆ; ಸುಮ್ಮನೆ, ಸುಮ್ಮಗೆ; ಬಿಮ್ಮನೆ, ಬಿಮ್ಮಗೆ; ಮೆಲ್ಲನೆ, ಮೆಲ್ಲಗೆ; ಕಮ್ಮನೆ, ಕಮ್ಮಗೆ; ತಣ್ಣನೆ, ತಣ್ಣಗೆ; ನುಣ್ಣನೆ, ನುಣ್ಣಗೆ; ಡೊಕ್ಕನೆ, ಡೊಕ್ಕಗೆ; ಪಕ್ಕನೆ, ಪಕ್ಕಗೆ; ಇವೇ ಮೊದಲಾದುವು. ಇದನ್ನು ಆಕೃತಿಗಣವೆಂದು ಅಂಗೀಕರಿಸಿರುವುದರಿಂದ ಇಲ್ಲಿ ಅಪಠಿತಗಳಾದುವೂ ಪ್ರಯೋಗಗಳನ್ನು ನೋಡಿ ಇದರಲ್ಲಿ ಸೇರಿಸಲ್ಪಡತಕ್ಕುವೆಂದು ತಿಳಿಯಬೇಕು. ಇವಕ್ಕೆಲ್ಲಾ ಲಕ್ಷ್ಯಗಳನ್ನು ಕವಿಪ್ರಯೋಗಗಳಿಂದ ಅರಿಸಿಕೊಳ್ಳುವುದು.

**ವಿಚಾರ ೪೯**

ಇಲ್ಲಿ 'ಗಡಾದಿಃ' ಎಂದು ಹೇಳಿರುವುದರಿಂದ ತದತಿರಿಕ್ತಾವ್ಯಯಗಳಿಗೆ ಬರುವುದಿಲ್ಲವೆಂದರ್ಥವಾಗುವುದು. ಆದುದರಿಂದ 'ಬೇರಿಟ್ಟುದು, ಹಿರಿದಾದುದು' ಮೊದಲಾದ ಪ್ರಯೋಗಗಳಲ್ಲಿ

ಬರುವುದಿಲ್ಲ. ಇಲ್ಲಿ ಆಕೃತಿಗಣತ್ವ ಸೂಚಕವಾದ ಬಹುವಚನಾದಿಗಳಿಲ್ಲದಿದ್ದರೂ ವ್ಯಾಖ್ಯಾನದಿಂದ ಇದು ಆಕೃತಿಗಣವೆಂದು ತಿಳಿಯಬೇಕು.

**ಅವತಾರಿಕೆ ೩೦**

ಈ ರೀತಿ ಅವ್ಯಯಗಳಿಗೆ ಪ್ರಕೃತಿಭಾವವನ್ನು ಹೇಳಿ ಛಂದೋಬದ್ಧವಾದ ಕಂದವೃತ್ತಾದಿಗಳ ಸಮಾರ್ಧಕ್ಕೆ ಸ್ವರವು ಪರವಾಗಲು ಪ್ರಕೃತಿಭಾವವನ್ನು ಹೇಳುತ್ತಾನೆ.

**ಸೂತ್ರಂ || ಶ್ಲೋಕಾರ್ಧಂ || ೩೦ ||**

**ಅರ್ಥ || ಸ್ವರಾಂತವಾದ ಪದ್ಯದ ಸಮಾರ್ಧವು ಸ್ವರಪರಕವಾಗಿರಲು ವೈಕಲ್ಪಿಕ ಪ್ರಕೃತಿಭಾವವನ್ನು ಹೊಂದುವುದು.**

**ಉದಾಹರಣೆ ||** ದೇವಾ ಕೇಳ್ ಬಿನ್ನವಿಪೆಂ
ಶ್ರೀವೀರಜಿನೇಂದ್ರ ಸಮವಸರಣಂ ಬಂದೀ
ಆವಾಸದ ಪಿತ್ತಿಲ ವನ
ದೋವರಿಯೊಳ್ ನೆಲಸಿತಖಿಳಸುರಗಣಸಹಿತಂ;

ಕಬ್ಬಿನ ಬಿಲ್ಲಲರ್ವಕ್ಕಿಯ
ತಿಬ್ಬಂ ಬಲಿದತನು ಪೂಸರಂಗಳನಿಸಲಾ
ಉಬ್ಬೆಗೆ ಕೊಬ್ಬಿದ ಪೆಣ್ಣಂ
ತಬ್ಬಿದೊಡೆದಱುಬ್ಬು ನಿಲ್ಕುಮಿಂತಿದು ಸುಖಮೇ —

ಮೊದಲಾದ ಪದ್ಯಗಳೇ ಇವಕ್ಕೆ ಲಕ್ಷ್ಯಗಳಾಗಿರುವುವು. ಈ ಪ್ರಕೃತಿಭಾವವು ವಿಕಲ್ಪವಾದುದರಿಂದ ಇದು ಬಾರದ ಪಕ್ಷದಲ್ಲಿ '**ಸಮವಸರಣಂಬಂದೀ || ಯಾವಾಸದ, ನಿಸಲಾ || ಯುಬ್ಬೆಗೆ**' ಎಂದು ಯ ಕಾರಾಗಮಾದಿಗಳಿಗೆ ಪ್ರವೃತ್ತಿಯನ್ನು ಹೇಳುವುದು.

**ವಿಚಾರ ೩೦**

ಲೋಕದಲ್ಲಿ — 'ಶ್ಲೋಕ' ಶಬ್ದವು ಅನುಷ್ಟುಪ್-ಛಂದಸ್ಸಿನಲ್ಲಿ ಪ್ರಸಿದ್ಧವಾಗಿರುವುದು. ಮತ್ತು ಅಮರಸಿಂಹನು — '**ಪದ್ಯೇ ಯಶಸಿ ಚ ಶ್ಲೋಕಃ**' ಎಂದು ಹೇಳಿರುವನು. ಆದರೆ ಪ್ರಕೃತದಲ್ಲಿ ಸಾಮಾನ್ಯವಾಗಿ ಛಂದೋಬದ್ಧವಾದ ವರ್ಣಗಣ-ಮಾತ್ರಾಗಣಗಳ ಇಯತ್ತೆಗಧೀನವಾದ ಶಬ್ದಸಮುಯಸಂದರ್ಭರೂಪ ಕಂದ-ವೃತ್ತ ಮೊದಲಾದುವೆ ಎಂದು ತಿಳಿಯಬೇಕು. ಇಲ್ಲಿ **ಕಂದ**ವೆಂದರೆ —

ಅಸಮಾಂಘ್ರಿಗೆ ಮೂಱು ಗಣಂ
ಮ ಸಾನ್ತ ಜ ನಮಧ್ಯದಿಂ ಸಮಕ್ಕಯ್ದು ಗಣಂ
ಬೆಸನೆಡೆಗಜಗಣನಿಯಮದಿ
ನೆಸೆವುದು ಕಂದಂ ಚತುಃಕಲದ್ವ್ಯಷ್ಟಗಣಂ

ಎಂಬ ಲಕ್ಷಣ ಲಕ್ಷಿತವಾದ ವಾಙ್ಮಯವು ಹೀಗೆಯೇ ಛಂದಃಶಾಸ್ತ್ರೋಕ್ತ ಲಕ್ಷಣ ಲಕ್ಷಿತವಾದುವೇ ಆದಿಶಬ್ದದಿಂದ ಗ್ರಾಹ್ಯಗಳಾದ **ವೃತ್ತ**ಗಳೆಂದು ತಿಳಿಯುವುದು. ಇಂತಹ ವೃತ್ತಗಳು— 'ಉಕ್ತಾ, ಅತ್ಯುಕ್ತಾ' ಮೊದಲಾದ ಭೇದಗಳಿಂದ ಸಾಮಾನ್ಯವಾಗಿ ಇಪ್ಪತ್ತಾರು ಬಗೆಯಾಗಿರುವುವು. ಅವು

ಗಳಲ್ಲಿ ಸಮ, ಅರ್ಧ, ವಿಷಮ ಎಂದು ಸಾಮಾನ್ಯವಾಗಿ ಮೂರು ಭೇದಗಳಿರುವುವು. ಪ್ರಸ್ತಾರ ಕ್ರಮದಿಂದ ಇನ್ನೂ ಅನೇಕ ಭೇದಗಳಿಂದ ಭಿನ್ನಗಳಾಗುವುವು. ಅವನ್ನೆಲ್ಲಾ ಇಲ್ಲಿ ವಿವರಿಸಲು ಅಸಾಧ್ಯವಾದುದರಿಂದ ಛಂದಃಶಾಸ್ತ್ರದಿಂದಲೇ ತಿಳಿದುಕೊಳ್ಳುವುದು. 'ಅರ್ಧ' ಶಬ್ದವು ಏಕದೇಶ ವಾಚಕವಾಗಿದ್ದರೂ ಇಲ್ಲಿ ನಪುಂಸಕಲಿಂಗವಾಗಿ ಹೇಳಿರುವುದರಿಂದ ಸಮಾಂಶವಾಚಿಯೆಂದು ತಿಳಿಯಬೇಕು. ಆದುದರಿಂದಲೇ ಅಮರಕೋಶದಲ್ಲಿ — **'ಪುಂಸ್ಯರ್ಧೋऽರ್ಧಂ ಸಮೇಂಶಕೇ** (೧-೧೦೦)' ಎಂಬ ವಚನದಿಂದ ಯತ್ಕಿಂಚಿದ್ ಭಾಗವಾಚಕವಾದರೆ 'ಅರ್ಧಃ' ಎಂಬ ಪುಲ್ಲಿಂಗ ವನ್ನು ಪ್ರಯೋಗಿಸಬೇಕೆಂತಲೂ ಸಮಾಂಶವಾಚಕವಾದರೆ ನಪುಂಸಕಲಿಂಗವನ್ನು ಪ್ರಯೋಗಿಸ ಬೇಕೆಂತಲೂ ಬೋಧಿಸಲ್ಪಟ್ಟಿರುವುದು. ಪ್ರಕರಣದಿಂದ ಸ್ವರಕ್ಕೆ ಉಪಸ್ಥಿತಿಯುಂಟಾಗುವುದು. ತಥಾಚ ಸ್ವರಾಂತ ಶ್ಲೋಕಾರ್ಧಭಾಗವು ಸ್ವರಪರಕವಾಗಿರಲು ಪ್ರಕೃತಿಭಾವವನ್ನು ಹೊಂದು ವುದೆಂದರ್ಥವಾಗುವುದು. ಇಲ್ಲಿ 'ಶ್ಲೋಕ' ಪದವನ್ನು ಪ್ರಯೋಗಿಸಿರುವುದರಿಂದ 'ಗದ್ಯ, ರಗಳೆ' ಮೊದಲಾದುದರಲ್ಲಿ ಈ ಪ್ರಕೃತಿಭಾವವು ಬರುವುದಿಲ್ಲ.

**ಅವತಾರಿಕೆ ೫೧**

ಹೀಗೆಯೇ ಸ್ವರಾಂತವಾದ ಅನುಕರಣಗಳಿಗೂ ಪ್ರಕೃತಿಭಾವವನ್ನು ವಿಧಿಸುತ್ತಾನೆ.

**ಸೂತ್ರಂ || ಅನುಕರಣಂ || ೫೧ ||**

**ಅರ್ಥ || ಸ್ವರಾಂತವಾದ ಅನುಕರಣ ಶಬ್ದಸ್ವರೂಪವು ಸ್ವರ ಪರಕವಾಗಿರಲು ಪ್ರಕೃತಿಭಾವ ವನ್ನು ಹೊಂದುವುದು.**

**ಉದಾಹರಣೆ ||** ಯಶ್ಲೋ ಯಾದೃಶಸ್ತಾದೃಶೋ | ಬಲಿಃ ಎಂಬುಕ್ತಿಗೆ ದುರ್ವಿದಗ್ಧರೆವಲಂ ನೋಂತರ್ ಪೆರ್ ನೋಂತರೇ || ಪ್ರಕೃತಿಭಾವವಿಲ್ಲದ ಪಕ್ಷದಲ್ಲಿ — 'ತಾದೃಶೋ ಬಲಿಃ ಯೆಂಬು ಕ್ತಿಗೆ' || ಸಮಣೋ ಅಮೋಹವಯಣೋ ಎನಿಸಿದ ಮಾರ್ಗಂ || ಪಕ್ಷಾಂತರದಲ್ಲಿ 'ಸಮಣೋ ಅಮೋಹವಯಣೋಯೆನಿಸಿದ ಮಾರ್ಗಂ' || ಎತ್ತು ಮೆಟ್ಟಿತ್ತು ಚಪ್ಪಟೆಯಾಯ್ತು ಎಂಬಿನಂ || ಪಕ್ಷಾಂತರದಲ್ಲಿ 'ಎತ್ತು ಮೆಟ್ಟಿತ್ತು ಚಪ್ಪಟೆಯಾಯ್ತೆಂಬಿನಂ' || ಮೊದಲಾದುವು ಇವಕ್ಕೆ ಲಕ್ಷ್ಯಗಳು.

**ವಿಚಾರ ೫೧**

ಇಲ್ಲಿ 'ಅನುಕರಣ'ವೆಂಬುದು 'ಅನುಕ್ರಿಯತೇ ( ಅನೂದ್ಯತೇ )' ಎಂದು ವಿಗ್ರಹವನ್ನು ಮಾಡಲು 'ಅನು' ಎಂಬ ಉಪಸರ್ಗಪೂರ್ವಕ 'ಕೃ' ಧಾತುವಿನ ಮೇಲೆ ಕರ್ಮಾರ್ಥದಲ್ಲಿ — **'ಕೃತ್ಯಲ್ಯುಟೋ ಬಹುಲಂ || ೩-೩-೧೧೩ ||'** ಎಂಬ ಸೂತ್ರಸ್ಥ ಬಹುಳಗ್ರಹಣದಿಂದ 'ಲ್ಯುಟ್' ಪ್ರತ್ಯಯವನ್ನು ಮಾಡಿ, ಅದಕ್ಕೆ 'ಅನ' ಆದೇಶವನ್ನು ಮಾಡಿ ನಿಷ್ಪನ್ನವಾದುದು. ಇದಕ್ಕೆ ಲೋಕ ದಲ್ಲಿ ಅನ್ಯತ್ರ ಇದ್ದಂತೆ ವ್ಯತ್ಯಾಮಾಡದೆ ಉಚ್ಚರಿಸಿದ ವರ್ಣಾತ್ಮಕ ಶಬ್ದವೆಂದರ್ಥವು. ಇದು ಕೆಲ ವೆಡೆಯಲ್ಲಿ ಸಂಸ್ಕೃತ ಪ್ರಾಕೃತಾದಿಗತ ಶಬ್ದವಾಕ್ಯಾನ್ಯತರ ರೂಪವಾಗಿರುವುದು. ಕೆಲವೆಡೆಯಲ್ಲಿ ಧ್ವನ್ಯಾತ್ಮಕವಾಗಿರುವುದು. ಇಂತಹ ಅನುಕರಣವು ಸ್ವೋಕ್ತಪರೋಕ್ತ ಸಾಧಾರಣವೆಂದು ತಿಳಿಯ ಬೇಕು. ಇಂತಹ ಅನುಕರಣಗಳ ಮಧ್ಯದಲ್ಲಿ ವಿಕಾರದಿಂದ ಅ ಕಾರಾಂತವಾಗಿರುವುದು ಮುಂದಿನ

ಸೂತ್ರಕ್ಕೆ ವಿಷಯವೆಂದು ಅಂತಹ ಅನುಕರಣವನ್ನು ಬಿಟ್ಟು ಪ್ರಕೃತಿ-ವಿಕೃತಿ ಸಾಧಾರಣ ಸ್ವರಾಂತಾನುಕರಣಗಳೇ ಇಲ್ಲಿ ಸಂಗ್ರಹಿಸಲ್ಪಟ್ಟಿವೆ.

ಇಲ್ಲಿ ಸ್ವರಾಂತಾನುಕರಣವೆಂದು ಹೇಳಿರುವುದರಿಂದ '**ಯಕ್ಷೋ ಯಾದೃಶಸ್ತಾದೃಶೋ ಬಲಿಃ**' ಎಂಬ ವಿಸರ್ಗಾಂತಕ್ಕೆ ಬರುವುದಿಲ್ಲವೆಂದು ತೋರುವುದು. ಆದಾಗ್ಯೂ — '**ಲುಬನವ್ಯಯಾನುಕರಣಸ್ಯ ವಿಸರ್ಗಸ್ಯ ||೮೧||**' ಎಂಬ ಸೂತ್ರದಿಂದ ವಿಸರ್ಗಕ್ಕೆ ಲೋಪವನ್ನು ಸ್ವರಮಧ್ಯದಲ್ಲ ಪಾಠಮಾಡಿರುವುದರಿಂದ ಕಥಂಚಿತ್ ಸ್ವರತ್ವವೂ ಇರುವುದೆಂದು ತಿಳಿಯುವುದು. ಆದುದರಿಂದಲೇ ಪ್ರಕೃತಿ-ವಿಕೃತಿ ಸಾಧಾರಣಾನುಕರಣಗಳು ಈ ಸೂತ್ರಕ್ಕೆ ವಿಷಯಗಳೆಂದು ಹೇಳಲ್ಪಟ್ಟಿರುವುದು. ಅಲ್ಲಿ ವಿಸರ್ಗಕ್ಕೆ ಆವ ಸ್ವರಸಂಧಿಕಾರ್ಯವೂ ಬರುವುದಿಲ್ಲವೆಂದು ಇಲ್ಲಿ ಅದನ್ನು ಬಿಟ್ಟಿರುವುದೆಂದು ತಾತ್ಪರ್ಯವು. '**ನಮೋ ಅಸ್ತೋಹನಯುಣೋ**' ಎಂಬುದು ಸ್ವಭಾವವಾಗಿಯೇ ಸ್ವರಾಂತವಾಗಿರುವುದು.

ಇಲ್ಲಿ ಎರಡು ಸೂತ್ರಗಳನ್ನು ಮಾಡುವುದಕ್ಕಿಂತಲೂ '**ಪ್ಲೋಕಾನುಕರಣಂ**' ಎಂದು ಒಂದೇ ಸೂತ್ರವನ್ನು ಮಾಡಿದರೆ ಲಾಘವವಿದ್ದಾಗ್ಯೂ ಮುಂದಿನ ಸೂತ್ರದಲ್ಲಿ — '**ಏಕಯೋಗ ನಿರ್ದಿಷ್ಟಾನಾಂ ಸಹ ವಾ ಪ್ರವೃತ್ತಿಃ ಸಹ ವಾ ನಿವೃತ್ತಿಃ**' ಎಂಬ ನ್ಯಾಯದಿಂದ '**ಪ್ಲೋಕಾರ್ಥಂ**' ಎಂಬುದೂ ಅನುವರ್ತಿಸಬೇಕಾಗುವುದೆಂದು ಬೇರೆ ಸೂತ್ರವು ಮಾಡಲ್ಪಟ್ಟಿತೆಂದು ತಿಳಿಯುವುದು.

**ಅವತಾರಿಕೆ ೫೨**

ಪೂರ್ವ ಸೂತ್ರದಲ್ಲಿ ಸ್ವರಾಂತಗಳಾದ ಅನುಕರಣಸಾಮಾನ್ಯಗಳಿಗೂ ವೈಕಲ್ಪಿಕ ಪ್ರಕೃತಿಭಾವವು ಹೇಳಲ್ಪಟ್ಟಿತು. ಇಲ್ಲ ವಿಕಾರದಿಂದ ಎಂದರೆ ಅಂತ್ಯಲೋಪದಿಂದ ಅ ಕಾರಾಂತವಾದುದಕ್ಕೆ ನಿತ್ಯಪ್ರಕೃತಿಭಾವವು ವಿಧಿಸಲ್ಪಡುವುದು.

**ಸೂತ್ರಂ || ಅದ್ವಿಕೃತ್ಯಾ || ೫೨ ||**

**ಅರ್ಥ || ವಿಕೃತಿಯಿಂದ ಅ ಕಾರಾಂತವಾದ ಅನುಕರಣವು ಸ್ವರಪರಕವಾಗಿರಲು ನಿತ್ಯವಾಗಿ ಪ್ರಕೃತಿಭಾವವನ್ನು ಹೊಂದುವುದು.**

**ಉದಾಹರಣೆ ||** ಪಂಭ್ಯೈರ್ವಿನಾ ಯಃ ಕ್ರಿಯತೇ ಸ ಧರ್ಮ ಎಂ
ಪಂಭೋಜಗರ್ಭಂ ನುಡಿದಂ ಸುಮಾರ್ಗಮಂ
ಮೂಲಸ್ಯ ನಾಶೋ ಬಲವದ್ವಿರೋಧ ಎಂ
ದೀಲೋಕದೊಳ್ ಪೇಳ್ವರಿದೇನನರ್ಥಮೋ

ಇತ್ಯಾದ್ಯನುಕರಣಗಳೇ ಇದಕ್ಕೆ ಲಕ್ಷ್ಯಗಳು.

**ವಿಚಾರ ೫೨**

ಈ ಸೂತ್ರದಲ್ಲಿ ಹೇಳಿರುವ 'ವಿಕೃತಿ' ಎಂಬುದಕ್ಕೆ 'ವಿಕಾರ' ವೆಂದರ್ಥವು. 'ವಿಕಾರ' ವೆಂದರೆ ಆದೇಶವು; ಅದರಿಂದ ಅ ಕಾರಾಂತವಾದುದು ಈ ಪ್ರಕೃತಿಭಾವಕ್ಕೆ ವಿಷಯವು. ಇಂತಹ ಅನುಕರಣಕ್ಕೂ ಪೂರ್ವದಲ್ಲಿ ಸಾಮಾನ್ಯವಾಗಿ ಹೇಳಿರುವುದರಿಂದಲೇ ಸಿದ್ಧವಾಗುತ್ತಿರಲು ಪುನಃ ಸೂತ್ರಾರಂಭಮಾಡಿರುವ ಸಾಮರ್ಥ್ಯದಿಂದ ಈ ಪ್ರಕೃತಿಭಾವವು ನಿತ್ಯವೆಂದು ತಿಳಿಯಬೇಕು. ಇಲ್ಲಿ 'ಅತ್' ಎಂದು ಹೇಳಿರುವುದರಿಂದ '**ವರ್ಣಾನಾಂ ಬ್ರಾಹ್ಮಣೋ ಗುರುಃ**' ಎಂಬುಕ್ತಿಗೆ

ಎಂಬ ರೂಪವೂ ಸಿದ್ಧಿಸುವುದು. 'ವಿಕೃತ್ಯಾ' ಎಂದು ಹೇಳಿರುವುದರಿಂದ ಆದೇಶಗಳಿಲ್ಲದೆ ಸ್ವಭಾವವಾಗಿ ಅಕಾರಾಂತವಾದ ಅನುಕರಣ ವಿಷಯವಾದ —

**ಮಾಂ ರಕ್ಷ ರಕ್ಷ ಎನುತೆ ವಿ**

**ದಾಂ ರಮಣಂಗೆಱಗಿ ನುತಿಸಿದಂ ಪಲತೆಱದಿಂ**

ಮೊದಲಾದ ಪ್ರಯೋಗಗಳಲ್ಲಿ ವೈಕಲ್ಪಿಕ ಪ್ರಕೃತಿಭಾವವೇ ಬರುವುದರಿಂದ ಪೂರ್ವೋಕ್ತ ಸಂಧಿ ಕಾರ್ಯವೂ ಬಂದು —

**ಮಾಂ ರಕ್ಷರಕ್ಷೆನುತ್ತೆ ವಿ**

**ದಾಂ ರಮಣಂಗೆಱಗಿ ನುತಿಸಿದಂ ಪಲತೆಱದಿಂ**

ಎಂದು ಮೊದಲಾಗಿ ಸಿದ್ಧಿಸುವುದು.

|| ಸ್ವರಸಂಧಿ ಸಮಾಪ್ತಂ ||

## ॥ ವ್ಯಂಜನಸಂಧಿ : ದ್ವಿತ್ವ ಪ್ರಕರಣಂ ॥

**ಅವತಾರಿಕೆ ೫೩**

ಹಿಂದಿನ ಪ್ರಕರಣದಲ್ಲಿ ಸ್ವರಗಳಿಗೆ ಸ್ವರವು ಪರವಾಗಿರಲು ಬರುವ ಸಂಧಿಕಾರ್ಯಗಳನ್ನು ವಿಧಿಸಿ, ಅವಕ್ಕೆ ಪ್ರತಿಷೇಧರೂಪವಾದ ಪ್ರಕೃತಿಭಾವ ಪ್ರಕರಣವು ಹೇಳಲ್ಪಟ್ಟಿತು. ಈಗ ವ್ಯಂಜನಗಳಿಗೆ ಬರುವ ಸಂಧಿಕಾರ್ಯಗಳನ್ನು ವಿಧಿಸಲು ಈ ಪ್ರಕರಣವನ್ನು ಪ್ರಾರಂಭಿಸುವನಾಗಿ ಅದರಲ್ಲಿ ಮೊದಲು ವ್ಯಂಜನಗಳಿಗೆ ಬರುವ ದ್ವಿರುಚ್ಚಾರಣವೂ ಸಂಧಿಕಾರ್ಯವೆ ಎಂದು ಭಾವಿಸಿ ದ್ವಿತ್ವಪ್ರಕರಣವನ್ನು ಪ್ರಾರಂಭಿಸುತ್ತಾನೆ.

**ಸೂತ್ರಂ॥ ಹ್ರಸ್ವಾತ್ ನ ಣ ಲ ಯ ಳ ತ ಟೋಽನವ್ಯಯಸ್ಯ ಲಿಂಗಾಂತ್ಯಸ್ಯ ದ್ವಿಃ ಸ್ವರಾಣಾಮಾದೇಃ ॥ ೫೩ ॥**

**ಅರ್ಥ ॥** ಪ್ರಯೋಗಗಳಲ್ಲಿರುವ ಶಬ್ದಗತಸ್ವರಗಳ ಮಧ್ಯದಲ್ಲಿ ಮೊದಲನೆಯ ಹ್ರಸ್ವಸ್ವರಕ್ಕಿಂತಲೂ ಮುಂದಿರುವ ಅವ್ಯಯಸ್ಥಳಗಳಲ್ಲದೆ ಲಿಂಗಾಂತ್ಯಗಳಾದ ನ, ಣ, ಲ, ಯ, ಳ, ತ, ಟ ಕಾರಗಳಿಗೆ ಸ್ವರವು ಪರವಾಗಿರಲು ದ್ವಿರುಚ್ಚಾರಣೆಯಾಗುವುದು.

**ಉದಾಹರಣೆ ॥** ಬೆನ್ + ಅಂ = ಬೆನ್ನಂ ॥ ಹೀಗೆಯೇ — ಎನ್ನಂ, ಪೊನ್ನುಳ್ಳಂ, ಕಿಸುವೊನ್ನಂ, ಚೆಂಬೊನ್ನುಳ್ಳಂ, ॥ ಪೆಣ್ಣೊಳ್ಳಿತ್ತು, ಮಣ್ಣಿದು, ಕಣ್ಣೊಳ್, ಅಲರ್ಗಣ್ಣೊಳ್, ನಿಡುಗಣ್ಣಾಲಿ, ॥ ಕಲ್ಲೆಲಂ, ಪುಲ್ಲೊಳ್, ಬಿಲ್ಲಿದು, ಕಬ್ಬುವಿಲ್ಲಂ, ಕುಡುವಿಲ್ಲನೊಳ್ ॥ ಮೆಯ್ಯೊಳ್, ಕಯ್ಯೊಳ್, ಪೊಯ್ಯೆ, ನಾಲ್ಗಯ್ಯಂ, ನಿಡುಮೆಯ್ಯಂ ॥ ಬೆಳ್ಳಡಕಿಲ್, ಮುಳ್ಳೊತ್ತಿತ್ತು, ಕಳ್ಳಣೆ, ತೆಳ್ಳೊಳ್, ॥ ಕಿತ್ತಡಿ, ಕಿತ್ತೀಳೆ, ಕಿತ್ತಡಕಿಲ್, ॥ ನಟ್ಟಡವಿ, ನಟ್ಟಿರುಳ್, ॥ ಮೊದಲಾದುವು ಕ್ರಮವಾಗಿ ಇದಕ್ಕೆ ಲಕ್ಷ್ಯಗಳಾಗಿರುವುವು.

**ವಿಚಾರ ೫೩**

ಈ ಸೂತ್ರದಲ್ಲಿ ‘ ಹ್ರಸ್ವಾತ್ ’ ಎಂಬುದು ಹ್ರಸ್ವಸಂಜ್ಞಕವಾದ ಸ್ವರಬೋಧಕ ಶಬ್ದವು. ಇದು ಪಂಚಮ್ಯಂತವಾಗಿರುವುದರಿಂದ ‘ ತಸ್ಮಾದುತ್ತರಸ್ಯ ॥ ೨೭ ॥ ’ ಎಂಬ ಪರಿಭಾಷೆಯಿಂದ ‘ ಉತ್ತರಸ್ಯ ’ ಎಂಬುದು ಉಪಸ್ಥಿತವಾಗುವುದು. ಅದನ್ನು ಇಲ್ಲಿ ಉದ್ದೇಶ್ಯವಾಗಿ ಹೇಳಿರುವ ‘ ನಣಲಯಳತಟ ’ ಎಂಬುದಕ್ಕೆ ವಿಶೇಷಣ ಮಾಡುವುದು. ಮತ್ತು ಈ ಉದ್ದೇಶ್ಯವರ್ಣಗಳಿಗೆ ‘ ಅನವ್ಯಯಸ್ಯ’ ‘ ಲಿಂಗಾಂತ್ಯಸ್ಯ ’ ಎಂಬೀಯೆರಡನ್ನೂ ವಿಶೇಷಣ ಮಾಡುವುದು. ‘ ಅನವ್ಯಯಸ್ಯ ’ ಎಂದರೆ ಅವ್ಯಯ ಸಂಬಂಧಿಯಲ್ಲದಿರುವ ಎಂದರ್ಥವು. ‘ ಲಿಂಗಾಂತ್ಯಸ್ಯ ’ ಎಂದರೆ ‘ **ಅರ್ಥವಲ್ಲಿಂಗಂ ॥ ೮ ॥** ’ ಎಂಬ ಸೂತ್ರಕ್ಕೆ ವಿಷಯವಾದ ಲಿಂಗಸಂಜ್ಞಕ ಶಬ್ದಗಳ ಅಂತ್ಯವಾದ — ಎಂದರ್ಥವು. ‘ ದ್ವಿಃ ’ ಎಂಬುದು ಇಲ್ಲಿ ವಿಧೇಯವು. ಇದು ಸಂಸ್ಕೃತ ವ್ಯಾಕರಣದಲ್ಲಿ ಕ್ರಿಯಾಭ್ಯಾವೃತ್ತಿಗಣನ ಮಾಡುವಾಗ ‘ ದ್ವಿ ’ ಶಬ್ದದ ಮೇಲೆ ‘ **ದ್ವಿತ್ರಿಚತುರ್ಭ್ಯಃ ಸುಚ್ ॥ ೫-೪-೧೮ ॥** ’ ಎಂಬ **ಪಾಣಿನಿ** ಸೂತ್ರದಿಂದ ವಿಹಿತವಾದ ಸುಚ್ ಪ್ರತ್ಯಯಾಂತ ಶಬ್ದವು. ಆದುದರಿಂದ

ಇದಕ್ಕೆ ಎರಡಾವರ್ತಿ ಉಚ್ಚರಿಸಬೇಕೆಂದು ಅರ್ಥವಾಗುವುದು. ಇದನ್ನು ಈ ಶಾಸ್ತ್ರದಲ್ಲಿ ದ್ವಿತ್ವವೆಂದು ವ್ಯವಹರಿಸುವುದು. 'ಸ್ವರಾಣಾಮಾದೇಃ' ಎಂಬುದು ಇಲ್ಲಿ ನಿಮಿತ್ತವಾಗಿರುವ 'ಹ್ರಸ್ವಾತ್' ಎಂಬುದಕ್ಕೆ ವಿಶೇಷಣವು. ಇಲ್ಲಿ 'ಸ್ವರಾಣಾಂ' ಎಂಬುದು ನಿರ್ಧಾರಣಾರ್ಥದಲ್ಲಿ ವಿಹಿತವಾದ ಷಷ್ಠ್ಯಂತ ಪದವು. ಇಲ್ಲಿ ನಿರ್ಧಾರಣವೆಂದರೆ ಜಾತಿಯಿಂದಾಗಲಿ, ಗುಣದಿಂದಾಗಲಿ, ಕ್ರಿಯೆಯಿಂದಾಗಲಿ, ಸಂಜ್ಞೆಯಿಂದಾಗಲಿ, ಒಂದು ಗುಂಪಿನಿಂದ ಒಂದನ್ನು ಪೃಥಕ್ಕರಣ ಮಾಡುವುದೆಂದರ್ಥವು. ಆವ ಗುಂಪಿನಿಂದ ಒಂದನ್ನು ಪೃಥಕ್ಕರಣವನ್ನು ಮಾಡುತ್ತೇವೋ ಆ ಸಮುದಾಯಬೋಧಕವಾದ ಶಬ್ದದ ಮೇಲೆ ಷಷ್ಠಿ ಬರುವುದೆಂದು ಸಂಸ್ಕೃತ ವ್ಯಾಕರಣದ ಕಾರಕ ಪ್ರಕರಣದಲ್ಲಿ ಹೇಳಿರುವುದರಿಂದ ಅದಕ್ಕೆ ಇದು ವಿಷಯವೆಂದು ನಿರ್ಧಾರಣಾರ್ಥಕ ಷಷ್ಠ್ಯಂತವೆಂದು ಹೇಳಿದೆ. ಇದಕ್ಕೆ ಸ್ವರಗಳ ಮಧ್ಯದಲ್ಲಿ — ಎಂದು ಅರ್ಥವು. ಇಲ್ಲಿ 'ಸ್ವರ' ಪದದಿಂದ ವರ್ಣಮಾಲೆಯಲ್ಲಿ ಹೇಳಿರುವ ಸ್ವರಗಳ ಮಧ್ಯದಲ್ಲಿ ಎಂದರ್ಥವಲ್ಲ; ಈ ಸೂತ್ರದಲ್ಲಿ ದ್ವಿತ್ವಕ್ಕೆ ಉದ್ದೇಶ್ಯಗಳಾಗಿ ಪರಿಗಣಿಸಲ್ಪಟ್ಟಿರುವ ಪ್ರಯೋಗಸ್ಥ ಶಬ್ದಗಳಲ್ಲಿರುವ ಸ್ವರಗಳ ಮಧ್ಯದಲ್ಲಿ ಎಂದರ್ಥವು. ಇದರಲ್ಲಿ ಮೊದಲನೆಯದಾದ ಹ್ರಸ್ವ ಸ್ವರವಾವುದೋ ಅದಕ್ಕಿಂತಲೂ ಪರದಲ್ಲಿರುವ ಎಂದರ್ಥವಾಗುವುದು. ಆದರೆ ಮೊದಲನೆಯ ಹ್ರಸ್ವಕ್ಕಿಂತಲೂ ಪರವಾಗಿಯೂ ಲಿಂಗಾಂತ್ಯವಾಗಿಯೂ ಇರುವ ನ ಕಾರಾದಿಗಳು ಏಕಸ್ವರವುಳ್ಳ ಶಬ್ದಗಳಲ್ಲೇ ಸಂಭವಿಸುವುದಲ್ಲದೆ ಅನೇಕ ಸ್ವರವುಳ್ಳವುಗಳಲ್ಲ ಸಂಭವಿಸುವುದಿಲ್ಲ. ಆದುದರಿಂದ ಈ ಸೂತ್ರವು ಏಕಸ್ವರವುಳ್ಳ ಶಬ್ದ ವಿಷಯಕವೆಂದು ತಿಳಿಯುವುದು. ಆದರೆ 'ಸ್ವರಾದೇಃ ಹ್ರಸ್ವಾತ್' ಎಂದು ಹೇಳಿದರೂ ಈ ಅರ್ಥವು ಸಿದ್ಧವಾಗುತ್ತಿರಲು ಸೂತ್ರದಲ್ಲಿ 'ಸ್ವರಾಣಾಮಾದೇಃ' ಎಂದು ಹೇಳಿರುವುದು. ವ್ಯಂಜನಾದಿಯಾದ ಏಕಸ್ವರ ಶಬ್ದಗಳಿಗೂ ಸಂಗ್ರಹ ಬರುವುದಕ್ಕೆ ಎಂದು ತಿಳಿಯಬೇಕು. ಇಲ್ಲ ಪೂರ್ವದಿಂದ 'ಸ್ವರೇ' ಎಂಬುದು ಅನುವರ್ತಿಸುವುದು. ಇದು ಸಪ್ತಮ್ಯಂತವಾದುದರಿಂದ 'ಪರೇ' ಎಂದು ಲಬ್ಧವಾಗುವುದು. ತಥಾಚ ಪ್ರಯೋಗಸ್ಥಗಳಾದ ಏಕ ಸ್ವರವುಳ್ಳ ಶಬ್ದಗಳಲ್ಲಿರುವ ಸ್ವರದಲ್ಲಿ ಮೊದಲನೆಯದಾದ ಹ್ರಸ್ವ ಸ್ವರಕ್ಕಿಂತಲೂ ಮುಂದಿರುವ ಅವ್ಯಯ ಸ್ಥಳಗಳಲ್ಲದ ಲಿಂಗಾಂತ್ಯ ನ ಕಾರಾದಿ ಸಪ್ತ ವ್ಯಂಜನಗಳಿಗೆ ಸ್ವರವು ಪರವಾಗಿರಲು ದ್ವಿರ್ಭಾವವು ಬರುವುದೆಂದರೆ — ಎರಡು ಸ್ವರಗಳ ಮಧ್ಯದಲ್ಲಿ ಉಕ್ತ ಲಕ್ಷಣವುಳ್ಳ ಲಿಂಗಾಂತ್ಯ ವ್ಯಂಜನಕ್ಕೆ ದ್ವಿತ್ವವೆಂದು ಫಲಿತವಾಗುವುದು. ಇಲ್ಲಿ ಈ ವ್ಯಂಜನಗಳಿಗೆ ಕ್ರಮವಾಗಿ ನ, ಣ, ಲ, ಯ ಇವುಗಳಿಗೆ ಐದೈದು ಪ್ರಯೋಗಗಳೂ ಳ ಕಾರಕ್ಕೆ ನಾಲ್ಕೂ ತ ಕಾರಕ್ಕೆ ಮೂರೂ ಟ ಕಾರಕ್ಕೆ ಎರಡೂ ಲಕ್ಷ್ಯಗಳು ತೋರಿಸಲ್ಪಟ್ಟಿವೆ. ಪ್ರಯೋಗವನ್ನು ಬಲ್ಲವರು ಇನ್ನೂ ಹೆಚ್ಚಾಗಿ ಊಹಿಸಿಕೊಳ್ಳುವುದು.

ಈ ಸೂತ್ರಕ್ಕೆ ಲಕ್ಷ್ಯಭೂತಗಳಾದ ಶಬ್ದಗಳು ಅಖಂಡವಾದ ಒಂದೇ ಪದವಾಗಿರಬೇಕೆಂಬ ನಿಯಮವಿಲ್ಲ. ಕಥಂಚಿತ್ ಏಕಪದವಾಗಿದ್ದರೂ ಬಾಧಕವಿಲ್ಲವೆಂದು ಇಲ್ಲಿ ವ್ಯಸ್ತಪದವನ್ನೂ ಸಮಸ್ತಪದವನ್ನೂ ಉದಾಹರಿಸಿರುವುದು. ಈ ಅರ್ಥವು ಈ ಸೂತ್ರಗಳಲ್ಲಿ ಕೊಟ್ಟಿರುವ ವಿಶೇಷಣಗಳ ಅರ್ಥಪರ್ಯಾಲೋಚನೆಯಿಂದಲೇ ಸಿದ್ಧವಾಗುವುದು.

ಇಲ್ಲಿ ಕೊಟ್ಟಿರುವ ಉದಾಹರಣೆಗಳಲ್ಲಿ 'ಬೆನ್ನಂ, ಎನ್ನಂ' ಎಂಬಿವು 'ಬೆನ್, ಎನ್' ಎಂಬ ನ ಕಾರಾಂತ ಶಬ್ದಗಳ ಮೇಲೆ — 'ಕರ್ಮಣ್ಯಮ್' ಎಂಬುದರಿಂದ ಕರ್ಮಾರ್ಥದಲ್ಲಿ 'ಅಮ್'

ಎಂಬ ದ್ವಿತೀಯಾ ವಿಭಕ್ತಿಯು ಬಂದು ಇದರಿಂದ ದ್ವಿತ್ವವು ಬಂದು ಸಿದ್ಧವಾಗಿವೆ ಎಂದು ತಿಳಿಯುವುದು. ಅಥವಾ 'ಎನ್ನಂ' ಎಂಬುದು ಭಾಷಣಾರ್ಥಕವಾದ 'ಎನ್' ಧಾತುವಿಗೆ ಪ್ರತಿಷೇದಾರ್ಥದ ರೂಪವೆಂದು ತಿಳಿಯುವುದು. 'ಪೊನ್ನುಳ್ಳಂ' ಎಂಬುದರಲ್ಲಿ — 'ಪೊನ್, ಉಳ್ಳಂ' ಎಂದು ಎರಡು ಪದಗಳುಂಟು. 'ಉಳ್ಳ' ಶಬ್ದವು ಮತ್ವರ್ಥದಲ್ಲಿ ರೂಢವಾದುದು. 'ಕಿಸುವೊನ್ನಂ, ಚೆಂಬೊನ್ನಂ' ಎಂಬಿವು ಎರಡೂ 'ಕೆಚ್ಚನೆ ಪೊನ್ ಆವಂಗೆ' ಎಂದು ಬಹುವ್ರೀಹಿ ಸಮಾಸವನ್ನು ವಿವಕ್ಷಿಸಲು — '**ಕೃದ್ಗುಣೋಕ್ತೇಃ ಪೂರ್ವಸ್ವರೇಣೈಕಾರ್ಥೇ ॥ ೩೩೩ ॥**' ಎಂಬ ಸೂತ್ರದಿಂದ ಕೆಚ್ಚನೆ, ಬೆಚ್ಚನೆ ಶಬ್ದಗಳ 'ಅನೆ' ಎಂಬುದಕ್ಕೆ ಲೋಪವನ್ನೂ — '**ಕೆಚ್ ಪೆಚ್ ಬೆಚ್ ಚಶ್ಚಾಮಃ ॥೩೪೧॥**' ಎಂಬ ಸೂತ್ರದಿಂದ ಚ ಕಾರದ್ವಯಕ್ಕೂ ಮ ಕಾರಾದೇಶವನ್ನೂ-ಒಂದಕ್ಕೆ- '**ಎತೇಃಸುರ್ಬೆಮುಶ್ಚೋಃಯರ್ಾದಿಷು ಚ ॥ ೩೪೩ ॥**' ಎಂಬುದರಿಂದ 'ಎಮ್' ಎಂಬುದಕ್ಕೆ 'ಇಸು' ಎಂಬಾದೇಶವನ್ನೂ ಮತ್ತೊಂದಕ್ಕೆ — '**ಕೆಮಃ ಕಶ್ಚೋಃ ವಾ ॥ ೩೪೨ ॥**' ಎಂಬುದರಿಂದ ಕ ಕಾರಕ್ಕೆ ಚ ಕಾರಾದೇಶವನ್ನೂ ಇವೆರಡಕ್ಕೂ — '**ವ್ಯಂಜನಾದ್ವಾSನಾದೇಶಾತ್ ॥ ೯೨ ॥**' ಎಂಬುದರಿಂದ ಪ ಕಾರಕ್ಕೆ ವ ಕಾರಾದೇಶವನ್ನೂ — '**ಅಬ್ಬಹುವ್ರೀಹೇಃ ॥ ೩೨೭ ॥**' ಎಂಬುದರಿಂದ ಸಮಾಸಾಂತವಾದ 'ಅಪ್' ಪ್ರತ್ಯಯವನ್ನೂ ಮಾಡಲು ಸಿದ್ಧಿಸುವುವು. 'ನಿಡುಗಣ್ಣಾಲಿ' ಎಂಬುದು —'ನಿಡಿದು ಕಣ್' ಎಂದು ವಿಗ್ರಹವನ್ನು ಮಾಡಲು '**ಕೃದ್ ಗುಣೋಕ್ತೇಃ**' ಇತ್ಯಾದಿ ಸೂತ್ರದಿಂದ ಸಮಾಸವನ್ನೂ 'ಇದು' ಎಂಬುದಕ್ಕೆ ಲೋಪವನ್ನೂ — '**ಕಿಱಶ್ಚ ಕುವ್ಯಂಜನೇ ॥ ೩೪೦ ॥**' ಎಂಬುದರಿಂದ 'ನಿಡ್' ಎಂಬುವದಕ್ಕೆ ಕುರಾಗಮವನ್ನೂ ಮಾಡಿ 'ಕಣ್' ಶಬ್ದದ ಆದಿಯ ಕ ಕಾರಕ್ಕೆ — '**ಕತಪಸಃತೃತೀಯ ಉತ್ತರಪದಾದೇಃ ॥ ೮೯ ॥**' ಎಂಬುದರಿಂದ ತೃತೀಯ ವರ್ಣಾದೇಶವನ್ನು ಮಾಡಿದರೆ ನಿಡುಗಣ್ ಎಂದು ಸಿದ್ಧಿಸುವುದು. ಆಮೇಲೆ 'ಆಲಿ' ಎಂಬುವದನ್ನು ಸೇರಿಸಲು ಇದರಿಂದ ದ್ವಿತ್ವವು ಬಂದಿರುವುದು. 'ಕುಡುವಿಲ್ಲನೊಳ್' ಎಂಬಲ್ಲಿ— 'ಕೊಂಕು ಬಿಲ್ ಆವಂಗೆ' ಎಂದು ಬಹುವ್ರೀಹಿಸಮಾಸವನ್ನು ಮಾಡಲು '**ಕೊಂಕೋಃ ಕುಡುಃ ॥ ೩೭೨ ॥**' ಎಂಬ ಸೂತ್ರದಿಂದ 'ಕೊಂಕು' ಶಬ್ದಕ್ಕೆ 'ಕುಡು' ಎಂಬಾದೇಶವನ್ನೂ ಸಮಾಸಾಂತ ಪ್ರತ್ಯಯವನ್ನೂ ದ್ವಿತ್ವವನ್ನೂ ಮಾಡಲು 'ಕುಡುವಿಲ್ಲ' ಎಂದು ಅ ಕಾರಾಂತವಾಗುವುದು. ಆಮೇಲೆ 'ಒಳ್' ಪ್ರತ್ಯಯವನ್ನು ಮಾಡಿದರೆ ಉಕ್ತರೂಪವು ಸಿದ್ಧಿಸುವುದು. ಹೀಗೆ 'ನಿಡುಮೆಯ್ಯಂ' ಎಂಬಲ್ಲಿ 'ನಿಡ್' ಎಂಬುದಕ್ಕೆ ಕುರಾಗಮವು ಬಂದಿರುವುದು. ಉಳಿದ ಪ್ರಕ್ರಿಯೆಯನ್ನು ಮೇಲೆ ಹೇಳಿದ ಸೂತ್ರಪರ್ಯಾಲೋಚನೆಯಿಂದ ಊಹಿಸಿಕೊಳ್ಳುವುದು. 'ಕಿತ್ತಡಿ, ಕಿತ್ತಿೞಿ, ಕಿತ್ತಡಕಿಲ್' ಎಂಬಿವುಗಳಲ್ಲಿ 'ಕಿಱಿದು' ಶಬ್ದದ 'ಱಿದು' ಎಂಬುದಕ್ಕೆ ತ ಕಾರಾದೇಶವನ್ನು ಮಾಡಿ ಇದರಿಂದ ದ್ವಿತ್ವವನ್ನು ಮಾಡಲು ಉಕ್ತರೂಪಗಳು ಸಿದ್ಧಿಸುವುವು. 'ನಟ್ಟಡವಿ, ನಟ್ಟಿರುಳ್' ಎಂಬಿವುಗಳು – '**ನಡೋಃದೋರ್ಷ್ಟಃ ॥ ೩೩೮ ॥**' ಎಂಬುದರಿಂದ 'ನಡು' ಎಂಬುದರ ಡು ವಿಗೆ ಟ ಕಾರಾದೇಶವು ಬಂದು, ಆ ಟ ಕಾರಕ್ಕೆ ಇದರಿಂದ ದ್ವಿತ್ವವನ್ನು ಮಾಡಿದರೆ ಸಿದ್ಧಿಸುವುವು. ಹೀಗೆಯೇ ಉಳಿದವುಗಳಲ್ಲಿ ಪ್ರಕ್ರಿಯೆಗಳನ್ನು ಯಥಾಯೋಗ್ಯವಾಗಿ ಊಹಿಸಿಕೊಳ್ಳುವುದು.

ಈ ಸೂತ್ರದಲ್ಲಿ — 'ಹ್ರಸ್ವಾತ್' ಎಂಬುದನ್ನು ವಿಶೇಷಣ ಮಾಡಿರುವುದರಿಂದ 'ಬಾಸಂ, ಗೋಣಂ, ಕೋಲಂ, ಬಾಯಂ, ಬಾಳಂ, ಆತಂ, ಓಟಂ' ಮೊದಲಾದ ಪ್ರಯೋಗಗಳಲ್ಲಿ

ದೀರ್ಘದ ಮುಂದಿರುವ ಣ ಕಾರಾದಿಗಳಿಗೆ ದ್ವಿತ್ವವಿಲ್ಲ. ಆ ಹ್ರಸ್ವಕ್ಕೆ — 'ಆರ್ದೇಃ' ಎಂಬುದನ್ನು ವಿಶೇಷಣ ಮಾಡಿರುವುದರಿಂದ 'ಶರಣರ್, ಪವಣೆಲ್ಲ' ಮೊದಲಾದುವುಗಳಲ್ಲಿ ಅಂತ್ಯ ಹ್ರಸ್ವಸ್ವರದ ಮುಂದಿರುವುದಕ್ಕೆ ಬರುವುದಿಲ್ಲ. 'ಸ್ವರಾಣಾಂ' ಎಂದು ಹೇಳಿರುವುದರಿಂದ 'ವನಂ, ಪಣಂ, ಜಲಂ, ಗಳಂ, ನಯಂ, ಸುತಂ, ಪಟಂ' ಮೊದಲಾದುವುಗಳಲ್ಲ ಅನಂತ್ಯಗಳಾದ ನ ಕಾರಾದಿಗಳಿಗೆ ಬರುವುದಿಲ್ಲ. 'ಅನವ್ಯಯಸ್ಯ' ಎಂದು ಹೇಳಿರುವುದರಿಂದ 'ವಲಿವಂ, ಪಳಿವಂ, ಹೋಹೋ ಪಳ್ವಳಿವಂ ಜಗದ್ವ್ಯತಿಕರಂ ಕ್ರೀಡಾವಿನೋದಂಜನಂ' ಮೊದಲಾದ ಪ್ರಯೋಗಗಳಲ್ಲ ಅವ್ಯಯ ಸಂಬಂಧಿ ನ ಕಾರಾದಿಗಳಿಗೆ ದ್ವಿತ್ವವಿಲ್ಲ. 'ನಣಲಯಳಶಟ' ಎಂದು ಹೇಳಿರುವುದರಿಂದ 'ಅಡಂ, ಸುಡಂ, ಉಗಂ, ಮಿಗಂ' ಮೊದಲಾದ ಪ್ರಯೋಗಗಳಲ್ಲ ಡ ಕಾರಾದಿಗಳಿಗೆ ದ್ವಿತ್ವವು ಬರುವುದಿಲ್ಲವೆಂದು ತಿಳಿಯಬೇಕು.

ಇಲ್ಲಿ ಪೂರ್ವೋಕ್ತ ಕ್ರಮದಿಂದ ಏಕ ಸ್ವರಗಳಾದ ಶಬ್ದಗಳೇ ಇವಕ್ಕೆ ಲಕ್ಷ್ಯಗಳೆಂದು ಏರ್ಪಡುವುದು. ಇದರಿಂದ ಹೇಗೆ 'ಶರಣ್, ಪವಣ್, ಪರಲ್, ಕೊರಲ್, ಮಗುಳ್, ಪುಗುಳ್' ಮೊದಲಾದ ಅನೇಕ ಸ್ವರವುಳ್ಳ ಶಬ್ದಗಳಲ್ಲಿ ದ್ವಿತ್ವವು ಪ್ರವರ್ತಿಸುವುದಿಲ್ಲವೋ ಹಾಗೆಯೇ 'ಪಡಿರ್ವ್ಪೊ, ಬಿಡುಗಣ್, ಕುಡುವಿಲ್, ನಿಡುಮೆಯ್' ಮೊದಲಾದುವುಗಳಲ್ಲಿಯೂ ಪ್ರವರ್ತಿಸುವುದಿಲ್ಲವೆಂದು ತೋರುವುದು. ಆದಾಗ್ಯೂ ಸಮಾಸದಿಂದ ಅನೇಕ ಸ್ವರವಾಗಿದ್ದರೂ 'ಪೊರ್, ಕಣ್, ಬಿಲ್, ಮೆಯ್' ಮೊದಲಾದುವು ಸ್ವಭಾವವಾಗಿ ಏಕ ಸ್ವರವಾಗಿರುವುದರಿಂದ ದ್ವಿತ್ವವು ಬಂದೇಬರುವುದೆಂದು ತಿಳಿಯುವುದು.

ಆದರೆ ಏಕ ಸ್ವರವುಳ್ಳ ಶಬ್ದಗಳೇ ಈ ಸೂತ್ರಕ್ಕೆ ವಿಷಯಗಳೆಂದು ಹೇಳಲು ಅವುಗಳಲ್ಲಿ ಇದು ಆದಿ ಸ್ವರವು, ಇದು ಅಂತ್ಯ ಸ್ವರವು ಎಂದು ವ್ಯವಸ್ಥೆ ಮಾಡುವುದು ಅಸಾಧ್ಯವಾಗುವುದು. ಆದಾಗ್ಯೂ ಲೋಕದಲ್ಲಿ ಒಬ್ಬನಿಗೆ ಒಬ್ಬನೇ ಮಗನಿರಲು 'ನಿನಗೆ ದೊಡ್ಡ ಮಗನಾರು? ಚಿಕ್ಕವನಾರು?' ಎಂದು ಪ್ರಶ್ನೆ ಮಾಡಲು 'ಎಲ್ಲಾ ಇವನೇ' ಎಂದು ಹೇಗೆ ಹೇಳುತ್ತಾರೋ ಹಾಗೆ ಈ ಶಾಸ್ತ್ರದಲ್ಲಿಯೂ 'ಆದಿ, ಅಂತ' ಎಂದು ವ್ಯವಹಾರವು ಒಂದೇ ಇದ್ದರೂ ಅದರಲ್ಲಿಯೇ ಮಾಡಿಕೊಳ್ಳಬೇಕೆಂದು ಸಕಲ ವೈಯ್ಯಾಕರಣರೂ ಇಂತಹ ಸಂದರ್ಭದಲ್ಲಿ ಅಂಗೀಕರಿಸಿರುವುದರಿಂದ ಪ್ರಕೃತದಲ್ಲಿಯೂ ಅಂತಹ ವ್ಯವಹಾರವು ಉಪಪನ್ನವಾಗಿರುವುದು. ಇದಕ್ಕೆ ಈ ಶಾಸ್ತ್ರದಲ್ಲಿ **'ವ್ಯಪದೇಶಿವದ್ಭಾವ'** ವೆಂದು ಹೇಳುತ್ತಾರೆ. ಆದುದರಿಂದಲೆ **ಪಾಣಿನಿ** ಹೇಳಿರುವ **'ಆದ್ಯಂತವದೇಕಸ್ಮಿನ್ ‖ ೧-೧-೨೧ ‖'** ಎಂಬ **ಸೂತ್ರಕ್ಕೆ ಪ್ರತಿಯಾಗಿ 'ವ್ಯಪದೇಶಿವದೇಕಸ್ಮಿನ್'** ಎಂಬ ಪರಿಭಾಷೆಯನ್ನು ಅಂಗೀಕರಿಸಬೇಕೆಂದು **ಪತಂಜಲಿಗಳು** ಮಹಾಭಾಷ್ಯದಲ್ಲಿ ಹೇಳಿರುವರು.

ಇಲ್ಲಿ ವ್ಯಂಜನಗಳಿಗೆ ಸಂಹಿತಾ ವಿಷಯದಲ್ಲಿ ಬರುವ ಕಾರ್ಯವಿಶೇಷಗಳನ್ನು ವಿಧಿಸುವುದರಿಂದ ಈ ಪ್ರಕರಣಕ್ಕೆ ವ್ಯಂಜನಸಂಧಿ ಪ್ರಕರಣವೆಂದು ಹೆಸರನ್ನು ಇಟ್ಟಿದೆ. ಸ್ವರಸಂಧಿ ಪ್ರಕರಣದಲ್ಲಿ ಸ್ವರಕ್ಕೆ ಸ್ವರವೇ ಪರದಲ್ಲಿರಬೇಕೆಂದು ಹೇಳಿರುವಂತೆ ಈ ಪ್ರಕರಣದಲ್ಲಿ ವ್ಯಂಜನಕ್ಕೆ ವ್ಯಂಜನವೇ ಪರದಲ್ಲಿರಬೇಕೆಂಬ ನಿಯಮವಿಲ್ಲ. ಆದುದರಿಂದ ಈ ಪ್ರಕರಣದಲ್ಲಿ ಕೆಲವು ಸೂತ್ರಗಳಲ್ಲಿ 'ಸ್ವರೇ' ಎಂಬುದನ್ನು ಅನುವರ್ತಿಸುವುದು. ಇಂತಹ ವ್ಯಂಜನಸಂಧಿಯನ್ನು ಎರಡು ಭಾಗಗಳನ್ನಾಗಿ ಮಾಡಿ ಮೊದಲು 'ದ್ವಿತ್ವ' ಪ್ರಕರಣವನ್ನು ಹೇಳಿರುವನು. ಆದರೆ ಈ ಶಾಸ್ತ್ರದಲ್ಲಿ

ವಿಧೇಯಗಳು ಆಗಮಪ್ರತ್ಯಯಾದೇಶಗಳೆಂದು ಮೂರು ಬಗೆಯಾಗಿರುವುವು. ದ್ವಿತ್ವವೆಂಬುದು ದ್ವಿರುಚ್ಚಾರಣರೂಪವಾದುದರಿಂದ ಈ ವಿಧೇಯಗಳಲ್ಲಿ ಆವುದರಲ್ಲಿಯೂ ಇದಕ್ಕೆ ಅಂತರ್ಭಾವವನ್ನು ಹೇಳುವುದಕ್ಕೆ ಆಗುವದಿಲ್ಲ. ಆದುದರಿಂದ ಇಲ್ಲಿ ವಿಧೇಯಗಳು ನಾಲ್ಕು ಬಗೆಗಳಾಗಿರುವುವೆಂದು ಹೇಳಬೇಕೆಂದು ಶಂಕೆಯುಂಟಾಗುವುದು. ಆದಾಗ್ಯೂ ಈ ದ್ವಿತ್ವವನ್ನು ಒಂದು ವರ್ಣದ ಸ್ಥಾನದಲ್ಲಿ ಸಜಾತೀಯ ವರ್ಣದ್ವಯಾದೇಶರೂಪವೆಂದು ಹೇಳುವುದರಿಂದ ಆದೇಶದಲ್ಲಿ ಅಂತರ್ಭಾವವಾಗುವುದೆಂದು ಎಲ್ಲರೂ ಅಂಗೀಕರಿಸುವರೆಂದು ತಿಳಿದು ಈ ದ್ವಿತ್ವ-ಪ್ರಕರಣವು ಇಲ್ಲಿ ಸಂಧಿಕಾರ್ಯದ ಜತೆಯಲ್ಲಿ ಪರಿಗಣಿಸಲ್ಪಟ್ಟಿದೆ.

ಈ ವಿಷಯದಲ್ಲಿ **ದರ್ಪಣಕಾರನು** ದ್ವಿತ್ವೋದ್ದೇಶಗಳಾದ ನ ಕಾರಾದಿಗಳಿಗೆ ಇಷ್ಟು ವಿಶೇಷಣಗಳನ್ನು ಕೊಡದಿದ್ದರೂ ಇದೇ ತಾತ್ಪರ್ಯವುಂಟಾಗುವಂತೆ ಇಲ್ಲಿ ಉದ್ದಿಷ್ಟಗಳಾದ ತ ಕಾರ ಟ ಕಾರಗಳನ್ನು ಬಿಟ್ಟು ನ ಕಾರಾದಿಗಳಿಗೆ ಸಾಮಾನ್ಯವಾಗಿ ದ್ವಿತ್ವವು ಸಿದ್ಧಿಸುವಂತೆ —

ಮೊದಲೊಳ್ ಹ್ರಸ್ವೈಕಸ್ವರ
ಮೊದವೆ ಪರಂ ಸ್ವರಮುವಾಗೆ ನ ಣ ಲ ಯ ಳಂಗ
ಳ್ಗುದಯಿಸುಗುಂ ದ್ವಿತ್ವಂ ಪೂ
ರ್ವದೀರ್ಘಕವ್ಯಯಕೆ ವರ್ಣತತಿಗದ್ವಿತ್ವಂ ( ಸೂತ್ರ ೬೯ )

ಮತ್ತಂ—

ಪ್ರತಿಷೇಧದ ಧಾತುಗೆ ಮುಂ
ದೆ ತಱಂಬೆ ವಿಭಕ್ತಿಪೂರ್ವ ಕಾಲಕ್ರಿಯೆಯೊಳ್
ಪ್ರತಿಷೇಧದದೆಂಬುದು ಮುಂ
ದೆ ತೋರೆ ಮೇಣ್ ದ್ವಿತ್ವವೃತ್ತಿ ಸತ್ಕವಿನಿಕ್ಕುಂ ( ಸೂತ್ರ ೭೧ )

ಎಂಬ ಸೂತ್ರಗಳನ್ನು ಹೇಳಿ ಈ ಪ್ರಯೋಗಗಳನ್ನು ಸಾಧಿಸುವನು. ತ ಕಾರ ಟ ಕಾರಗಳಿಗಾದರೊ ಅವು ಸಮಾಸದಲ್ಲಿ ಸಂಭವಿಸುವುದರಿಂದ ಆ ಪ್ರಕರಣ ಸೂತ್ರಗಳಿಂದ ಸಾಧಿಸಬೇಕಾಗುವುದು. ಶಾಸನದಲ್ಲಿ ಅವಕ್ಕೆ ಈ ಪ್ರಕರಣದಲ್ಲೇ ಹೇಳಿರುವನು. ಇದೇ ಇಲ್ಲಿ ವಿಶೇಷವು ತೋರುವುದು.

ಈ ದ್ವಿತ್ವ ಪ್ರಕರಣದಲ್ಲಿ ಮೊದಲು ಸಾಮಾನ್ಯವಾಗಿ ನ ಕಾರಾದಿಗಳಿಗೆ ದ್ವಿತ್ವವನ್ನು ವಿಧಿಸಿ '**ನ ಸಮಾಸೇ || ೬೦ ||**' ಎಂಬ ಸೂತ್ರ ಮೊದಲು ನಿಷೇಧ ಪ್ರಕರಣವನ್ನು ಪ್ರಾರಂಭಿಸುವನಾಗಿ ಅದಕ್ಕೆ ಪ್ರಾಪ್ತವಾದ ಅತಿಪ್ರಸಕ್ತಿವಾರಣಾರ್ಥವಾಗಿ ಕೆಲವು ಸೂತ್ರಗಳನ್ನೂ ಲಿಂಗಾಂತ್ಯವಲ್ಲದ ಕೆಲವು ವರ್ಣಗಳಿಗೆ ದ್ವಿತ್ವವಿಧಾಯಕ ಸೂತ್ರಗಳನ್ನೂ ವಿಧಿಕೋಟಿಯಲ್ಲಿ ಸೇರಿಸಿರುವನೆಂದು ತಿಳಿಯಬೇಕು.

**ಅವತಾರಿಕೆ ೫೪**

ಪೂರ್ವಸೂತ್ರದಿಂದ ಲಿಂಗಾಂತ್ಯಗಳಾದ ಕೆಲವು ವ್ಯಂಜನಗಳಿಗೆ ಮಾತ್ರ ದ್ವಿತ್ವವು ವಿಧಿಸಲ್ಪಟ್ಟಿತು. ಈ ದ್ವಿತ್ವವು ಕೃತ್-ಪ್ರತ್ಯಯ ವಿಷಯದಲ್ಲಿ ಪ್ರವರ್ತಿಸುವದಿಲ್ಲವೆಂದು '**ಕೃತಿ ||೬೨||**' ಎಂಬ ಸೂತ್ರದಿಂದ ನಿಷೇಧಿಸಲ್ಪಡುವುದು. ಆ ನಿಷೇಧವೂ ಅಲ್ ಪ್ರತ್ಯಯಪರಕವಾದ ಯ ಕಾರಾಂತ ಧಾತುಗಳಿಗೆ ವಿಕಲ್ಪವಾಗಿ ಬರುವುದೆಂದು — '**ಯೋ ವಾಲಿ || ೬೪ ||**' ಎಂಬ ಸೂತ್ರದಿಂದ ಹೇಳಲ್ಪಡುವುದು. ಈಗ ಧಾತು ವಿಶೇಷದಲ್ಲಿ ಅದಕ್ಕೆ ಅಪವಾದರೂಪವಾಗಿ ಹೇಳುತ್ತಾನೆ.

**ಸೂತ್ರಂ || ನೆಯುಯ'ಸುಯ್‌ಬಯಃ || ೫೪ ||**

**ಅರ್ಥ ||** ನೆಯ್, ಉಯ್, ಸುಯ್, ಬಯ್ ಎಂಬೀ ನಾಲ್ಕು ಧಾತುಗಳ ಅಂತ್ಯ ಯ ಕಾರಕ್ಕೆ ಸ್ವರವು ಪರವಾಗಿರಲು ದ್ವಿತ್ವವು ಬರುವುದು.

**ಉದಾಹರಣೆ ||** ನೆಯ್ಯಲ್, ಉಯ್ಯಲ್, ಸುಯ್ಯಲ್, ಬಯ್ಯಲ್ ಎಂಬಿವು ಇವಕ್ಕೆ ಲಕ್ಷ್ಯಗಳು.

**ವಿಚಾರ ೫೪**

ಈ ಸೂತ್ರದಲ್ಲಿ ನಿರ್ದಿಷ್ಟಗಳಾಗಿರುವ ಧಾತುಗಳು ಯ ಕಾರಾಂತಗಳಾಗಿಯೇ ಇರುವುದರಿಂದ ಆ ಯ ಕಾರಕ್ಕೆ ಲಿಂಗಾಂತ್ಯತ್ವವಿರುವುದೆಂದು ಪೂರ್ವಸೂತ್ರದಿಂದ ದ್ವಿತ್ವವು ಪ್ರಾಪ್ತವಾಗುತ್ತಿರಲು ಅದಕ್ಕೆ '**ಕೃತಿ**' ಎಂಬ ವಕ್ಷ್ಯಮಾಣ ಸೂತ್ರದಿಂದ ಧಾತು ಸಾಮಾನ್ಯಕ್ಕೂ ಕೃತ್ ಸಾಮಾನ್ಯದಲ್ಲಿ ನಿತ್ಯವಾಗಿ ವಿಹಿತವಾದ ದ್ವಿತ್ವನಿಷೇಧವು ಪ್ರಾಪ್ತವಾಗುವುದು. ಆ ನಿಷೇಧಕ್ಕೂ ಅಲ್-ಪ್ರತ್ಯಯ ವಿಷಯದಲ್ಲಿ '**ಯೋ ವಾಲಿ**' ಎಂಬ ಸೂತ್ರದಿಂದ ವಿಕಲ್ಪಿತವಾದ ನಿಷೇಧವು ಪ್ರಸಕ್ತವಾಗುವುದು. ಅದಕ್ಕೆ ಬಾಧಕವಾಗಿ ಈ ಸೂತ್ರವು ಪ್ರಾರಂಭಿಸಲ್ಪಡುವುದು. ಇದಕ್ಕೆ ಪೂರ್ವ ಸೂತ್ರದಿಂದ 'ದ್ವಿಃ' ಎಂಬುದನ್ನೂ '**ನಣಲಯಳಶತಟಃ**' ಎಂಬುದರಲ್ಲಿ ಇತರ ವರ್ಗಗಳು ಪ್ರಕೃತದಲ್ಲಿ ಅಸಂಭವವಾದುದರಿಂದ ಯ ಕಾರ ಮಾತ್ರವನ್ನೂ 'ಸ್ವರೇ' ಎಂಬುದನ್ನೂ ಅನುವರ್ತಿಸಿ 'ನೆಯ್' ಮೊದಲಾದ ಸೂತ್ರೋಪಾತ್ತ ನಾಲ್ಕು ಧಾತುಗಳ ಯ ಕಾರಕ್ಕೆ ಸ್ವರವು ಪರವಾಗಲು ದ್ವಿತ್ವವು ಬರುವುದೆಂದು ಅರ್ಥವಾಗುವುದು. ಹೀಗೆ ಹೇಳಿದ್ದರೂ ಈ ಸೂತ್ರವು '**ಕೃತಿ, ಯೋ ವಾಲಿ**' ಎಂಬ ಸೂತ್ರಗಳಿಗೆ ಬಾಧಕವಾದುದರಿಂದ ತದ್ವಿಷಯಕಗಳಾದ ಲಕ್ಷ್ಯಗಳೇ ಇದಕ್ಕೆ ಲಕ್ಷ್ಯಗಳು. ಇಲ್ಲಿ ಅಲ್-ಪ್ರತ್ಯಯಾಂತಗಳಿಗೆ ಮಾತ್ರ ಉದಾಹರಣೆಗಳು ತೋರಿಸಲ್ಪಟ್ಟಿರುವುವು. ಹೀಗೆಯೇ ಇತರ ಕೃದಂತಗಳಿಗೂ ಪ್ರಯೋಗಜ್ಞರು ಉದಾಹರಣೆಗಳನ್ನು ಊಹಿಸಿಕೊಳ್ಳುವುದು. ತಿಙಂತಗಳಿಗೆ ಪೂರ್ವಸೂತ್ರದಿಂದಲೇ ಸಿದ್ಧಿಸುವುದು. '**ಸ್ವವಿಷಯೇ ಯದ್ಯತ್ ಪ್ರಾಪ್ತಂ ತತ್ ಸರ್ವಂ ಬಾಧತೇ**' ಎಂಬ ಬಾಧ್ಯಸಾಮಾನ್ಯ ಚಿಂತಾಶ್ರಯಣವನ್ನು ವೈಯ್ಯಾಕರಣರು ಲಕ್ಷ್ಯ ಸಾಧುತ್ವ ಸಮರ್ಥನಾರ್ಥವಾಗಿ ಅಲ್ಲಲ್ಲಿ ಅಂಗೀಕರಿಸಿರುವುದರಿಂದ ಪ್ರಕೃತದಲ್ಲಿಯೂ ಈ ಸೂತ್ರವು '**ಕೃತಿ, ಯೋ ವಾಲಿ**' ಎಂಬ ಎರಡು ಸೂತ್ರಗಳಿಗೂ ಬಾಧಕವೆಂದು ತಿಳಿಯುವುದು.

ಕೆಲವರು '**ವಿಧಿರ್ವಾ ಪ್ರತಿಷೇಧೋ ವಾ ಅನಂತರಸ್ಯ ಭವತಿ ಪುರಸ್ತಾದಪವಾದಾ ಅನಂತರಾನ್ ವಿಧೀನ್ ಬಾಧಂತೇ ನೋತ್ತರಾನ್**' ಎಂಬ ನ್ಯಾಯಗಳನ್ನು ಅಂಗೀಕರಿಸಿ ಅನಂತರವಾದ '**ಕೃತಿ**' ಎಂಬುದೊಂದಕ್ಕೆ ಇದು ಅಪವಾದವು, '**ಯೋ ವಾಲಿ**' ಎಂಬುದಕ್ಕಲ್ಲವೆಂದು ಹೇಳುವರು. ಹೀಗೆ ಹೇಳಲು 'ನೆಯ್ಯಲ್, ಬಯ್ಯಲ್' ಮೊದಲಾದ ಅಲ್-ಪ್ರತ್ಯಯಾಂತ ಪ್ರಯೋಗಗಳಲ್ಲಿ ಇಷ್ಟವಾದ ನಿತ್ಯ ದ್ವಿತ್ವವು ಸಿದ್ಧಿಸುವುದಿಲ್ಲವಾದುದರಿಂದ ಲಕ್ಷ್ಯಾನುಸಾರವಾಗಿ ನ್ಯಾಯಗಳನ್ನು ಅಂಗೀಕರಿಸಬೇಕೆಂದು '**ಲಕ್ಷ್ಯಾನುರೋಧಾತ್ ಪಕ್ಷಾಣಾಮಾಶ್ರಯಣಂ**' ಎಂಬುದರಿಂದ ನ್ಯಾಸಕಾರರು ಸೂಚಿಸಿರುವರು. ಈ ವ್ಯಾಕರಣದಲ್ಲಿಯೂ ಅದೇ ಮಾರ್ಗವನ್ನವಲಂಬಿಸಿ ಇದು '**ಯೋ ವಾಲ**' ಎಂಬುದಕ್ಕೂ ಬಾಧಕವೆಂದು ಹೇಳಲ್ಪಟ್ಟಿದೆ.

ಈ ವಿಷಯದಲ್ಲಿ **ದರ್ಪಣಕಾರನು** ಸಾಮಾನ್ಯವಾಗಿ ನ ಣ ಲ ಯ ಳ ಕಾರಾಂತ ಧಾತುಗಳಿಗೆ ಅಲ್ ಪರವಾದರೆ ದ್ವಿತ್ವವಿಲ್ಲ. ಯ ಕಾರಾಂತಗಳಿಗಾದರೊ ದ್ವಿತ್ವವು ವಿಕಲ್ಪವಾಗಿ ಬರುವುದು — 'ಉಯ್, ನೆಯ್, ಸುಯ್, ಬಯ್' ಎಂಬ ನಾಲ್ಕು ಧಾತುಗಳಿಗೆ ಮಾತ್ರ ಅಲ್ ಪರವಾಗಿದ್ದರೂ ವಿಭಕ್ತಿ ಸ್ವರವು ಪರವಾಗಿದ್ದರೂ ದ್ವಿತ್ವವು ನಿತ್ಯವಾಗಿ ಬರುವುದೆಂದು —

ಧಾತುಗಲುಂ ಪರಮಾದೊಡ
ಜಾತಂ ದ್ವಿತ್ವಂ ಯ ಕಾರದಲ್ಲಿ ವಿಕಲ್ಪಂ
ಮಾತೇನುಯ್ ನೆಯ್ ಸುಯ್ ಬಯ್
ಧಾತುಗಳೊಳ್ ದ್ವಿತ್ವಮಲ್ಲದಿಲ್ಲವಿಕಲ್ಪಂ (ಸೂತ್ರ ೭೦)

ಎಂಬ ಸೂತ್ರದಿಂದ ಸೂಚಿಸಿರುವನು. ಇಲ್ಲಿ ಅಲ್ ಪರವಾಗಲು ನಿಷೇಧವನ್ನು ಹೇಳಿರುವುದರಿಂದ ಅನ್ಯತ್ರ ನಿಷೇಧವಿಲ್ಲವೆಂದು ತೋರುವುದು. ಆದಾಗ್ಯೂ ಈ ದ್ವಿತ್ವ-ಪ್ರಕರಣದಲ್ಲಿ ವ್ಯವಸ್ಥಿತ ವಿಭಾಷಾಶ್ರಯಣವನ್ನು ಮಾಡಿ ಅಂತಹ ಲಕ್ಷ್ಯಗಳನ್ನು ಸಾಧಿಸುವುದು.

**ಅವತಾರಿಕೆ ೫೫**

ಲಿಂಗಾಂತ್ಯಗಳಲ್ಲದ ಕೆಲವು ವರ್ಣಗಳಿಗೆ ನಿಮಿತ್ತವಿಶೇಷಗಳಿರಲು ಅಪ್ರಾಪ್ತವಾದ ದ್ವಿತ್ವವನ್ನು ವಿಧಿಸುತ್ತಾನೆ.

**ಸೂತ್ರಂ || ಕಮ್ ಕುಮಿ || ೫೫ ||**

**ಅರ್ಥ || ಸ್ವರಗಳ ಮಧ್ಯದಲ್ಲಿ ಆದಿಯಾದ ಹ್ರಸ್ವಸ್ವರಕ್ಕಿಂತಲೂ ಮುಂದಿರುವ ನ, ಣ, ಳ ಕಾರಗಳಿಗೆ ಕಮಾಗಮ ಕುಮಾಗಮಗಳು ಪರವಾಗಿರಲು ದ್ವಿತ್ವವು ಬರುವುದು.**

**ಉದಾಹರಣೆ ||** ಪೊನ್ನಂಗಲ್, ಚಿನ್ನಂಮುಳ್, ಕಣ್ಣಂದೊಬಲಿ, ಕಣ್ಣಂಬಾಳ್, ಬೆಳ್ಳಂಬಟ್ಟೆ, ತೆಳ್ಳಂಬನಿಜು || ಮೊದಲಾದುವು ಇದಕ್ಕೆ ಲಕ್ಷ್ಯಗಳೆಂದು ತಿಳಿಯುವುದು.

**ವಿಚಾರ ೫೫**

ಈ ಸೂತ್ರದಲ್ಲಿ ಹೇಳಿರುವ 'ಕಮ್, ಕುಮ್' ಎಂಬಿವೆರಡೂ ಕ ಕಾರೇತ್-ಸಂಜ್ಞಕವಾದುದರಿಂದ — 'ಕಿದಂತ್ಯಃ' ಎಂಬ ಪರಿಭಾಷೆಯಿಂದ ಆಗಮಗಳೆಂದು ಸೂಚಿತವಾಗುವುದು. ಪೂರ್ವಸೂತ್ರದಿಂದ 'ಹ್ರಸ್ವಾತ್, ಸ್ವರಾಣಾಮಾದೇಃ, ನ ಣ ಲ ಯ ಳ ತ ಟಃ, ದ್ವಿಃ' ಎಂಬ ಪದಗಳನ್ನು ಅನುವರ್ತಿಸಿ ಈ ಯುಗಾಗಮಗಳು ಪರವಾಗಿರಲು ಲ ಯ ತ ಟ ಗಳಿಗೆ ಸಂಭವವಿಲ್ಲವಾದುದರಿಂದ ಪ್ರಕೃತದಲ್ಲಿ ನ ಣ ಳ ಕಾರಗಳನ್ನು ಮಾತ್ರ ಸಂಬಂಧಿಸಿಕೊಳ್ಳಬೇಕು. ಹೀಗೆಯೇ ಅವ್ಯಯವೂ ಸಂಭವಿಸುವುದಿಲ್ಲವಾದುದರಿಂದ 'ಅನವ್ಯಯಸ್ಯ' ಎಂಬುದನ್ನೂ ಸಂಬಂಧಿಸಲಾಗದು. ತಥಾಚ–ಸ್ವರಗಳಲ್ಲಿ ಆದಿಯಾದ ಹ್ರಸ್ವಸ್ವರಕ್ಕೆ ಮುಂದಿರುವ ನ ಣ ಳ ಕಾರಗಳಿಗೆ ಕಮ್-ಆಗಮ ಕುಮ್-ಆಗಮಗಳು ಪರವಾಗಿರಲು ದ್ವಿತ್ವವು ಬರುವುದೆಂದು ಸೂತ್ರಾರ್ಥವಾಗುವುದು. ಆಗ 'ಪೊನ್ನಂಗಲ್' ಮೊದಲಾದ ಪ್ರಯೋಗಗಳಲ್ಲಿ ನ ಕಾರಾಂತ ಣ ಕಾರಾಂತ ಳ ಕಾರಾಂತ ಶಬ್ದಗಳಿಗೆ ಸಮಾಸ ವಿಷಯದಲ್ಲಿ — '**ಕಮ್ ನಣಃ || ೩೪೬ || ಳಃ ಕುಮ್ || ೩೪೭ ||**' ಎಂಬ ಸೂತ್ರಗಳಿಂದ ಕಮಾಗಮ-ಕುಮಾಗಮಗಳನ್ನು ಮಾಡಿ ಇದರಿಂದ ನ ಕಾರಾದಿಗಳಿಗೆ ದ್ವಿತ್ವವನ್ನು ಮಾಡಲು 'ಪೊನ್ನಂಗಲ್' ಮೊದಲಾದುವು ಸಿದ್ಧಿಸುವುವು.

ಈ ಸೂತ್ರದಲ್ಲಿ — 'ಹ್ರಸ್ವಾತ್' ಎಂಬ ವಿಶೇಷಣದಿಂದ 'ಮಿಾನಂಬುಲು, ಗೇಣಂ ಜುರಿಗೆ, ಸೀಳುಂಗಲ್ಲಂ, ಬೀಟುಂದಾಣಂ' ಮೊದಲಾದ ಪ್ರಯೋಗಗಳಲ್ಲಿ ದೀರ್ಘಕ್ಕೆ ಪರದಲ್ಲಿರುವ ನ ಕಾರಾದಿಗಳಿಗೆ ದ್ವಿರ್ಭಾವವು ಬರುವುದಿಲ್ಲ. 'ಆದೇಃ' ಎಂದು ಹೇಳಿರುವುದರಿಂದ 'ಪವಣಂಬಟ್ಟೆ, ಮುಗುಳಂಬುಗಳ್' ಮೊದಲಾದುವುಗಳಲ್ಲಿ 'ಪವಣ್, ಮುಗುಳ್' ಎಂಬ ಅನೇಕ ಸ್ವರಗಳಲ್ಲಿ ಬರುವುದಿಲ್ಲ. 'ಸ್ವರಾಣಾಂ' ಎಂದು ಹೇಳಿರುವುದರಿಂದ 'ಇನ್ನಂಮಾವು, ಒಳ್ಪುಂಗನ್ನಡಂ' ಮೊದಲಾದ ಸ್ವರಾದಿಗಳಿಗೆ ಬರುವಂತೆ 'ಪೊನ್ನಂಗಲ್' ಮೊದಲಾದ ವ್ಯಂಜನಾದಿಗಳಿಗೂ ಬರುವುದು. ಇಲ್ಲದಿದ್ದರೆ ಸ್ವರಾದಿಗಳಿಗೇ ಬರುವುದು. ಆದುದರಿಂದ ಇಲ್ಲಿ 'ಸ್ವರಾಣಾಂ' ಎಂದು ಹೇಳಿರುವುದು.

ಇಲ್ಲಿ ನ ಕಾರ ಣ ಕಾರ ಳ ಕಾರಾಂತಗಳಿಗೆ ವಿಹಿತವಾದ ಕಮಾಗಮವೂ ಕುಮಾಗಮವೂ ಅವುಗಳಿಗೆ ಅಂತ್ಯಾವಯವಗಳಾಗಿ ಬರುವುವೆಂದು — '**ಕಿದಂತ್ಯಃ ॥ ೨೫ ॥**' ಎಂಬ ಸೂತ್ರದಿಂದ ಸೂಚಿಸಲ್ಪಡುವುದು. ಆದುದರಿಂದ ನ ಕಾರಾದಿಗಳಿಗೆ ಲಿಂಗಾಂತ್ಯತ್ವವಿಲ್ಲವೆಂದು ಪೂರ್ವಸೂತ್ರದಿಂದ ದ್ವಿತ್ವವು ಅಪ್ರಾಪ್ತವಾಗಲು ಈ ಸೂತ್ರದಿಂದ ವಿಧಿಸಲ್ಪಟ್ಟಿರುವುದೆಂದು ತಿಳಿಯುವುದು.

ಈ ವಿಷಯದಲ್ಲಿ **ದರ್ಪಣಕಾರನು** ವಿಶೇಷವಿಧಿಯನ್ನು ಮಾಡದಿದ್ದರೂ ಸಾಮಾನ್ಯ ಸೂತ್ರದಿಂದಲೇ ದ್ವಿತ್ವವು ಸಿದ್ಧಿಸುವುದೆಂದು ತಿಳಿಯಬೇಕು.

**ಅವತಾರಿಕೆ ೫೬**

ಕೆಲವು ಧಾತುಗಳಿಗೆ ಸ್ವರಾದಿಯಾದ ತಿಙ್-ವಿಷಯದಲ್ಲಿ ಪೂರ್ವಸೂತ್ರದಿಂದ ನಿತ್ಯವಾಗಿ ದ್ವಿತ್ವವೂ ಕೃತ್-ವಿಷಯದಲ್ಲಿ ವಕ್ಷ್ಯಮಾಣ ಸೂತ್ರದಿಂದ ನಿಷೇಧವೂ ಪ್ರಾಪ್ತವಾಗಲು ಉಭಯತ್ರ ವಿಕಲ್ಪವಾಗಿ ವಿಧಿಸುತ್ತಾನೆ.

**ಸೂತ್ರಂ ॥ ವಾರಯ್‌ಗೆಯಃ ॥ ೫೬ ॥**

**ಅರ್ಥ ॥ ಅರಯ್, ಗೆಯ್ ಎಂಬೀ ಎರಡು ಧಾತುಗಳ ಯ ಕಾರಕ್ಕೆ ಸ್ವರವು ಪರವಾಗಿರಲು ದ್ವಿತ್ವವು ವಿಕಲ್ಪವಾಗಿ ಬರುವುದು.**

**ಉದಾಹರಣೆ ॥** ಅರಯ್ಯಲ್, ಅರಯಲ್; ಅರಯ್ಯೆ, ಅರಯೆ; ಅರಯ್ಯಿಂ, ಅರಯಿಂ; ಗೆಯ್ಯಲ್, ಗೆಯಲ್; ಗೆಯ್ಯುತ್ತುಂ, ಗೆಯುತ್ತುಂ ॥ ಮೊದಲಾದುವು ಇಲ್ಲಿ ಲಕ್ಷ್ಯಗಳಾಗಿರುವುವು.

**ವಿಚಾರ ೫೬**

ಈ ಸೂತ್ರದಲ್ಲಿ — 'ವಾ' ಎಂಬುದು ವಿಕಲ್ಪಾರ್ಥಕವು. 'ಅರಯ್' ಧಾತುವು ಅನೇಕ ಸ್ವರವಾಗಿ ದ್ವಿತ್ವವು ಅಪ್ರಾಪ್ತವಾಗಿರುವುದರಿಂದಲೂ 'ಗೆಯ್' ಧಾತುವು ಏಕಸ್ವರವಾದುದರಿಂದ ಪೂರ್ವಸೂತ್ರದಿಂದ ತಿಙ್-ವಿಷಯದಲ್ಲಿ ನಿತ್ಯವಾಗಿ ದ್ವಿತ್ವವು ಪ್ರಾಪ್ತವಾಗಿಯೂ ಕೃತ್-ವಿಷಯದಲ್ಲಿ ನಿತ್ಯವಾಗಿ ನಿಷೇಧವನ್ನು ಹೇಳಿರುವುದರಿಂದ ದ್ವಿತ್ವವು ಅಪ್ರಾಪ್ತವಾಗಿ ಇರುವುದರಿಂದಲೂ ಈ ವಿಭಾಷೆಯನ್ನು ಹೇಳಿರುವುದರಿಂದ ಇದು ಉಭಯತ್ರ ವಿಭಾಷೆಯೆನ್ನಿಸಿಕೊಳ್ಳುವುದು. ಇಲ್ಲಿ 'ಸ್ವರೇ, ದ್ವಿಃ, ಯಃ' ಎಂಬುದನ್ನು ಅನುವರ್ತಿಸಿರುವುದರಿಂದ ಈ ಧಾತುಗಳ ಯ ಕಾರಕ್ಕೆ ಸ್ವರವು ಪರವಾಗಿರಲು ವಿಕಲ್ಪವಾಗಿ ದ್ವಿತ್ವವು ಬರುವುದೆಂದರ್ಥವಾಗುವುದು. ಆದುದರಿಂದ ಈ ಸೂತ್ರಕ್ಕೆ ತಿಙ್-ಕೃತ್-ಸಾಧಾರಣವಾಗಿ ಉದಾಹರಣೆಗಳು ಕೊಡಲ್ಪಟ್ಟಿವೆ.

**ಶಾಸನಕಾರನು ಈ ಸೂತ್ರಕ್ಕೆ ವ್ಯಾಖ್ಯಾನ ಮಾಡುವಾಗ —**

**'ವಾ ಇತಿ ಪ್ರಾಪ್ತಾಪ್ರಾಪ್ತೋಭಯವಿಷಯಕೋಽಯಂ ವಿಭಾಷಾವಚನಃ'**

ಎಂದು ಹೇಳಿ ಅವನ್ನು ಉಪಪಾದನೆ ಮಾಡುವಾಗ—

**ಆರಯ್ ಗೆಯ್ ಇತ್ಯನಯೋರ್ಧಾತ್ವೋಃ ಯ ಕಾರದ್ವಿರ್ಭಾವಃ ತಿಙಾ ಪೂರ್ವೇಣ ನಿತ್ಯತಯಾ ಪ್ರಾಪ್ತೋಽನೇನ ವಿಕಲ್ಪ್ಯತೇ || ಕೃತಿ ತು — ಕೃತಿ ||೬೨|| ಇತಿ ವಕ್ಷ್ಯಮಾಣ ಸೂತ್ರೇಣ ನಿಷೇಧಾತ್ ಅಪ್ರಾಪ್ತೋ ವಿಕಲ್ಪತೋ ವಿಧೀಯತೇ ||'**

ಎಂದು ಹೇಳಿರುವನು. ಇದು 'ಗೆಯ್' ಧಾತು ವಿಷಯದಲ್ಲಿ ಉಪಪನ್ನವಾಗಿದ್ದರೂ 'ಆರಯ್' ಧಾತು ವಿಷಯದಲ್ಲಿ ಹೇಳಿರುವುದು (ಅನೇಕ ಸ್ವರವಾದುದರಿಂದ ವಿಧಿನಿಷೇಧಗಳೆರಡೂ ಅಪ್ರಸಕ್ತವಾಗಿರಲು) ಅನುಪಪನ್ನವಾಗಿರುವುದು. ಆದುದರಿಂದ 'ಆರಯ್' ಧಾತು ವಿಷಯದಲ್ಲಿ 'ಅಪ್ರಾಪ್ತೇ ವಿಭಾಷೆ' ಯೆಂತಲೂ 'ಗೆಯ್' ಧಾತು ವಿಷಯದಲ್ಲಿ ತಿಙ್ಙಿನಲ್ಲಿ ನಿತ್ಯವಾಗಿ ಪ್ರಾಪ್ತವಾದರೆ ವಿಭಾಷೆಯೆಂತಲೂ ಕೃತ್ತಿನಲ್ಲಿ ಅಪ್ರಾಪ್ತವಾದರೆ ವಿಭಾಷೆಯೆಂತಲೂ ವಿವೇಚನೆ ಮಾಡಲು ಉಭಯತ್ರ ವಿಭಾಷೆಯೆಂಬುದು ಫಲಿತವಾಗುವುದೆಂದು ತಿಳಿಯಬೇಕು.

ಮತ್ತು **ಶಾಸನಕಾರನು** ವ್ಯಾಖ್ಯಾನದಲ್ಲಿ ತಾನು ಹೇಳಿರುವ ಮಾತಿಗೆ ಉಪಷ್ಟಂಭಕವಾಗಿ '**ಕೃತಿ** || ೬೨ ||' ಎಂಬ ಸೂತ್ರದಲ್ಲಿ ಧಾತು ಸಾಮಾನ್ಯಕ್ಕೂ ಕೃತ್-ಮಾತ್ರದಲ್ಲಿ ದ್ವಿತ್ವ ನಿಷೇಧವನ್ನು ಹೇಳುವುದರಿಂದ ತಿಙ್-ವಿಷಯದಲ್ಲಿಯೇ ಇವುಗಳಿಗೆ ವಿಕಲ್ಪ ದ್ವಿತ್ವವೆಂದು ಇದು 'ಪ್ರಾಪ್ತೇ ವಿಭಾಷೆ' ಯೇ ಅಲ್ಲದೆ 'ಅಪ್ರಾಪ್ತೇ ವಿಭಾಷೆ' ಅಲ್ಲ ಎಂದು ಶಂಕಿಸಿ, ಕೃತ್ತಿನಲ್ಲಿಯೂ ಇವುಗಳಿಗೆ ದ್ವಿತ್ವವುಳ್ಳ ಪ್ರಯೋಗಗಳಿರುವುದರಿಂದ '**ಕೃತಿ**' ಎಂಬ ಸೂತ್ರವು ಈ ಎರಡು ಧಾತುಗಳನ್ನು ಬಿಟ್ಟು ಉಳಿದ ಧಾತುಮಾತ್ರವಿಷಯಕವೆಂದು ಹೇಳಿರುವನು. ಅಲ್ಲಿ ಧಾತುಮಾತ್ರವೆಂದರೆ ಏಕಸ್ವರವುಳ್ಳ ಧಾತುಮಾತ್ರವೆಂದರ್ಥವನ್ನು ಮಾಡಿಕೊಳ್ಳುವುದು. ಕೃತ್ತಿನಲ್ಲಿ ದ್ವಿತ್ವ ಬಂದಿರುವುದಕ್ಕೆ —

> ಆರಯ್ಯೆ ಸರ್ವಭೂತಾ
> ಧಾರಂ ಮುಟಿಯುಂ ನೃಪಾಲರುಂ ಮುಟಿಗಾಲಂ
> ಬಾರದೊಡಂ ಜೀವಿಸಲಹು
> ದಾರುಂ ನೃಪರಿಲ್ಲದಂದದೇಂ ಜೀವಿಪರೇ

ಹೀಗೆಯೇ —

> ಕೋಗಿಲೆವೆಣ್ ಮಾಮರದೊಳ್
> ಕಾಗೆಯ ಕೊತ್ತಟಿಯೊಳಿಟ್ಟು ಪೋಗಲು ಮಿಱಲುಂ
> ಕೂಗಲುಮೆಮೆದೆಱಿದಿಕ್ಕಲು
> ಮೇಗೆಯ್ಯಲುಮಾರ್ತುದಿಲ್ಲ ಬನದೊಳ್ ಪೆಳಱಂ

ಎಂಬಿವನ್ನು ಉದಾಹರಿಸಿರುವನು. ಆದುದರಿಂದಲೇ ಇಲ್ಲಿ ಉದಾಹರಣೆಗಳನ್ನು ಕೊಡುವಾಗ 'ಆರಯ್ಯಲ್, ಆರಯಲ್' ಎಂದು ತಿಙ್-ಕೃತ್-ಸಾಧಾರಣವಾದ ಅಲ್-ಅಂತವನ್ನು ಉದಾಹರಿಸಿ ತಿಙ್ಙಿನಲ್ಲಿಯೂ ಕೃತ್ತಿನಲ್ಲಿಯೂ ಬೇರೆಬೇರೆಯಾದ 'ಆರಯ್ಯೆ, ಆರಯೆ; ಆರಯ್ಯಂ, ಆರಯಂ', ಎಂಬುವು ಉದಾಹರಿಸಲ್ಪಟ್ಟಿರುವುವು. ಹೀಗೆಯೇ 'ಗೆಯ್' ಧಾತುವಿಗೂ ಉದಾಹರಣೆಗಳನ್ನು ಊಹಿಸಿಕೊಳ್ಳುವುದು.

**ದರ್ಪಣಕಾರನು** ಇವುಗಳಿಗೆ ವಿಶಿಷ್ಯದ್ವಿತ್ವವಿಕಲ್ಪವೆಂದು ಹೇಳದಿದ್ದರೂ ಯ ಕಾರಾಂತ ಸಾಮಾನ್ಯವಾಗಿ ವಿಕಲ್ಪವೆಂದು ಸೂತ್ರ ೭೦ರಲ್ಲಿಯೆ ಹೇಳಿರುವನು; ಅದರಿಂದಲೇ ಸಿದ್ಧಿಸುವುದೆಂದು ತಿಳಿಯಬೇಕು.

**ಅವತಾರಿಕೆ ೫೭**

ಪೂರ್ವದಲ್ಲಿ ಏಕಸ್ವರ ಸಂಬಂಧಿಯಾಗಿ ಲಿಂಗಾಂತ್ಯಗಳಾದ ನ ಣ ಲ ಯ ಳ ತ ಟ ಕಾರ ಗಳಿಗೆ ಸ್ವರವು ಪರವಾಗಿರಲು ದ್ವಿತ್ವವು ವಿಧಿಸಲ್ಪಟ್ಟಿತು. ಈಗ ಅನೇಕ ಸ್ವರಸಂಬಂಧಿಯಾದ ಲಿಂಗಾಂತ್ಯವಲ್ಲದ ಪ ಕಾರ ಮಾತ್ರಕ್ಕೆ ದ್ವಿತ್ವವನ್ನು ಹೇಳುತ್ತಾನೆ.

**ಸೂತ್ರಂ || ಇತಃ ಪೋऽಚಿ || ೫೭ ||**

**ಅರ್ಥ || ಇ ಕಾರಕ್ಕೆ ಪರವಾದ ಪ ಕಾರಕ್ಕೆ ಅಚ್ ಪ್ರತ್ಯಯವು ಪರವಾಗಿರಲು ದ್ವಿತ್ವವು ವಿಕಲ್ಪವಾಗಿ ಬರುವುದು.**

**ಉದಾಹರಣೆ ||** ತರಿಪ್ಪಂ, ತರಿಪಂ; ಬರಿಪ್ಪಂ, ಬರಿಪಂ; ಮಾಡಿಪ್ಪಂ, ಮಾಡಿಪಂ || ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೫೭**

ಈ ಸೂತ್ರದಲ್ಲಿ — 'ಇತಃ' ಎಂದು ಹ್ರಸ್ವವಾದ ಇ ಕಾರ ಮಾತ್ರವನ್ನು ಬೋಧಿಸಲು ತಪರಕರಣವನ್ನು ಮಾಡಿ ಪಂಚಮ್ಯಂತವಾಗಿ ಉಚ್ಚರಿಸಲ್ಪಟ್ಟಿರುವುದು. ಆದುದರಿಂದ 'ಪರಸ್ಯ' ಎಂದು ಉಪಸ್ಥಿತವಾಗುವುದು. ಇದು 'ಪಃ' ಎಂಬುದಕ್ಕೆ ವಿಶೇಷಣವು; 'ಅಚಿ' ಎಂಬುದು — '**ಅಚ್ ಕರ್ತೃಕರ್ಮಣೋಃ || ೫೪೩ ||**' ಎಂಬ ಸೂತ್ರದಿಂದ ವಿಹಿತವಾದ ಕೃತ್-ಪ್ರತ್ಯಯ ಬೋಧಕವಾದ ಸಪ್ತಮ್ಯಂತವು. ಆದುದರಿಂದ '**ತಸ್ಮಿನ್ನಿತಿ ನಿರ್ದಿಷ್ಟೇ**' ಎಂಬ ಪರಿಭಾಷೆಯಿಂದ 'ಪರೇ' ಎಂದು ಲಬ್ಧವಾಗುವುದು. ಪೂರ್ವಸೂತ್ರದಿಂದ 'ವಾ' ಎಂದು ಅನುವರ್ತಿಸಲ್ಪಡುವುದು. ತಥಾಚ — ಇ ಕಾರಾತ್ಪರ-ಪ ಕಾರಕ್ಕೆ ಅಚ್-ಪ್ರತ್ಯಯವು ಪರವಾಗಲು ದ್ವಿತ್ವವು ವಿಕಲ್ಪವಾಗಿ ಬರುವುದೆಂದು ಸೂತ್ರಾರ್ಥವಾಗುವುದು. ಆದುದರಿಂದ ಸ್ವಾರ್ಥದಲ್ಲಾಗಲಿ ಹೇತುಮತ್ಯರ್ಥದಲ್ಲಾಗಲಿ ವಿಹಿತವಾದ ಇಸುಪ್-ಪ್ರತ್ಯಯಾಂತ ಧಾತುಗಳ ಮೇಲೆ ಕರ್ತ್ರರ್ಥದಲ್ಲಿ ಅಚ್-ಪ್ರತ್ಯಯವನ್ನೂ — '**ಅಚಿ || ೪೪೭ ||**' ಎಂಬ ಸೂತ್ರದಿಂದ ಭಾವಿಕಾಲದಲ್ಲಿ 'ವ' ಪ್ರತ್ಯಯವನ್ನೂ 'ಇಸು' ಪ್ರತ್ಯಯದ 'ಸು' ವಿಗೆ — '**ಸೋರ್ಬಹುಸ್ವರಸ್ಯ || ೫೦೩ ||**' ಎಂಬ ಸೂತ್ರದಿಂದ ವ ಕಾರಕ್ಕೆ ಪ ಕಾರಾದೇಶವನ್ನೂ ಮಾಡಲು ಇ ಕಾರಾತ್ಪರದ ಪ ಕಾರವು ಸಿಕ್ಕುವುದರಿಂದ ಅಂತಹ ಶಬ್ದಗಳೇ ಈ ಸೂತ್ರಕ್ಕೆ ಲಕ್ಷ್ಯಗಳೆಂದು ತಿಳಿಯುವುದು. ಈ ಸೂತ್ರದಲ್ಲಿ 'ಇತಃ' ಎಂದು ಹೇಳಿರುವುದರಿಂದ — 'ಆಪಂ, ಪೋಪಂ' ಮೊದಲಾದ ಪ್ರಯೋಗಗಳಲ್ಲಿ ಅ ಕಾರಾದಿಗಳಿಗೆ ಪರದಲ್ಲಿರುವ ಪ ಕಾರಕ್ಕೆ ದ್ವಿತ್ವವು ಬರುವುದಿಲ್ಲ. 'ಪಃ' ಎಂದು ಹೇಳಿರುವುದರಿಂದ — 'ಮುಗಿವಂ, ಸುಗಿವಂ' ಮೊದಲಾದುವುಗಳಲ್ಲಿ ಇ ಕಾರಾತ್ಪರ-ವ ಕಾರಕ್ಕೆ ಬರುವುದಿಲ್ಲ. 'ಅಚಿ' ಎಂದು ಹೇಳಿರುವುದರಿಂದ ಭಾವಾರ್ಥದಲ್ಲಿ ವಿಹಿತವಾಗುವ 'ವುದು' ಪ್ರತ್ಯಯಾಂತಗಳಾದ 'ಮಾಡಿಪುದು, ಕೂಡಿಪುದು' ಮೊದಲಾದ ಪ್ರಯೋಗಗಳಲ್ಲಿ ಬರುವುದಿಲ್ಲವೆಂದು ತಿಳಿಯುವುದು.

ಈ ಸೂತ್ರವು ಪೂರ್ವಸೂತ್ರದಿಂದ ಅಪ್ರಾಪ್ತವಾದುವಕ್ಕೆ ವಿಧಾಯಕವಾದುದರಿಂದ ಆ 'ವ' ಪದವನ್ನೂ ಇಲ್ಲಿ ಅನುವರ್ತಿಸುವುದಿಲ್ಲ. ಆದುದರಿಂದಲೇ ಈ ಸೂತ್ರವಿಷಯದಲ್ಲಿಯೂ ವಕ್ಷ್ಯಮಾಣ ಸೂತ್ರದ್ವಯವಿಷಯದಲ್ಲಿಯೂ 'ಕೃತಿ' ಎಂಬ ನಿಷೇಧವಿಲ್ಲವೆಂದು ತಿಳಿಯುವುದು.

**ದರ್ಪಣಕಾರನು** ದ್ವಿತ್ವಘಟಿತವಾದ ಕೆಲವು ಶಬ್ದಗಳ ವಿಷಯದಲ್ಲಿ ದ್ವಿತ್ವಪ್ರಕರಣದಲ್ಲ ವಿಧಿಯನ್ನು ಕಲ್ಪಿಸದಿದ್ದರೂ ಆಯಾ ಶಬ್ದಗಳ ಪ್ರಕ್ರಿಯೆಯನ್ನು ಹೇಳುವ ಸಂದರ್ಭದಲ್ಲಿ ಹೇಳುವ ನಾದುದರಿಂದ ಆಯಾ ಪ್ರಕರಣಗಳ ಪರ್ಯಾಲೋಚನೆಯಿಂದಲೆ ತಿಳಿದುಕೊಳ್ಳಬೇಕು.

**ಅವತಾರಿಕೆ ೫೮**

ಹಿಂದಿನ ಸೂತ್ರದಲ್ಲಿ ಇ ಕಾರಾತ್ಪರ ಪ ಕಾರಕ್ಕೆ ದ್ವಿತ್ವವು ವಿಧಿಸಲ್ಪಟ್ಟಿತು. ಈಗ ಆ ಇ ಕಾರಾತ್ಪರ ಕ ಕಾರ 'ದಪ' ಪ್ರತ್ಯಯಗಳಿಗೂ ವಿಧಿಸಲ್ಪಡುವುದು.

**ಸೂತ್ರಂ || ಕೋ ದಪಶ್ಚ ತಿಜಃ || ೫೮ ||**

**ಅರ್ಥ ||** ಇ ಕಾರಾತ್ಪರವಾದ ಕ ಕಾರಕ್ಕೂ 'ದಪ' ಪ್ರತ್ಯಯದ ಪ ಕಾರಕ್ಕೂ ಕೇವಲ ಪ ಕಾರಕ್ಕೂ ತಿಜ್-ವಿಷಯದಲ್ಲ ವಿಕಲ್ಪವಾಗಿ ದ್ವಿತ್ವವು ಬರುವುದು.

**ಉದಾಹರಣೆ ||** ಮಾಡಿಕ್ಕುಂ, ಮಾಡಿಕುಂ; ಮಾಡಿಕ್ಕೆ, ಮಾಡಿಕೆ; ಮಾಡಿದಪ್ಪೆಂ, ಮಾಡಿದಪೆಂ; ಮಾಡಿಪ್ಪೆಂ, ಮಾಡಿಪೆಂ; || ಮೊದಲಾದುವು ಇವಕ್ಕೆ ಲಕ್ಷ್ಯಗಳು.

**ವಿಚಾರ ೫೮**

ಈ ಸೂತ್ರದಲ್ಲಿ — 'ಕಃ, ದಪಃ' ಎಂಬೀಯೆರಡೂ ಷಷ್ಠ್ಯಂತ ಪದಗಳು. 'ಚ' ಎಂಬುದರಿಂದ ಪೂರ್ವ ಸೂತ್ರದಲ್ಲಿರುವ 'ಅಚಿ' ಎಂಬುದನ್ನು ಬಿಟ್ಟು 'ಇತಃ, ಪಃ' ಎಂಬೆರಡು ಪದಗಳನ್ನೂ 'ವಾದ್ವಿಃ' ಎಂಬುದನ್ನೂ ಅನುವರ್ತಿಸುವುದು. 'ಪಃ' ಎಂಬುದನ್ನು ಎರಡಾವರ್ತಿ ಉಚ್ಚರಿಸಿ ಒಂದನ್ನು 'ದಪ' ಎಂಬುದರಲ್ಲ ಅವಯವಾವಯ ವಿಭಾವ ಸಂಬಂಧದಿಂದ ಅನ್ವಯಿಸಬೇಕು. 'ತಿಜಃ' ಎಂಬುದು ವಿಷಯ-ಸಪ್ತಮ್ಯಂತಪದವು. ತಥಾಚ — ಇ ಕಾರಾತ್ಪರ ಕ ಕಾರ, ದಪ-ಪ್ರತ್ಯಯಾವಯವವಾದ ಪ ಕಾರ, ಕೇವಲ ಪ ಕಾರ ಇವುಗಳಿಗೆ 'ತಿಜ್' ವಿಷಯದಲ್ಲ ದ್ವಿತ್ವವು ಬರುವುದು ಎಂದು ಸೂತ್ರಾರ್ಥವಾಗುವುದು. ಆದುದರಿಂದ 'ಮಾಡಿಕ್ಕುಂ' ಇತ್ಯಾದಿ ಪ್ರಯೋಗಗಳಲ್ಲ ದ್ವಿತ್ವವು ಬಂದಿರುವುದು. ಇಲ್ಲ 'ತಿಜಃ' ಎಂದು ಹೇಳಿರುವುದರಿಂದ 'ಕರಿಕಂ, ಬಿಳಿಕಂ' ಮೊದಲಾದ 'ತಿಜ್' ವಿಷಯಗಳಲ್ಲದ ಪ್ರಯೋಗಗಳಲ್ಲ ಕ ಕಾರಾದಿಗಳಿಗೆ ದ್ವಿತ್ವವಿಲ್ಲವೆಂದು ತಿಳಿಯಬೇಕು.

**ಅವತಾರಿಕೆ ೫೯**

ಧಾತುಗಳ ವಿಷಯದಲ್ಲ ಲಿಂಗಾಂತ್ಯವಲ್ಲದ ಕೆಲವು ವರ್ಣಗಳಿಗೆ ದ್ವಿತ್ವವನ್ನು ಹೇಳಿ ಧಾತ್ವತಿರಿಕ್ತದಲ್ಲಿ ಹೇಳುತ್ತಾನೆ.

**ಸೂತ್ರಂ || ತೋರ್ನಪಃ || ೫೯ ||**

**ಅರ್ಥ || ತು ಶಬ್ದಾಂತ ನಪುಂಸಕಲಿಂಗದ ಇ ಕಾರಾತ್ಪರ ತ ಕಾರಕ್ಕೆ ಸ್ವರವು ಪರವಾಗಲು ವಿಕಲ್ಪವಾಗಿ ದ್ವಿತ್ವವು ಬರುವುದು.**

**ಉದಾಹರಣೆ ||** ಒಳ್ಪಿತ್ತು, ಒಳ್ಪಿತು; ಮೆಲ್ಲಿತ್ತು, ಮೆಲ್ಲಿತು || ಮೊದಲಾದ ನಪುಂಸಕ 'ತು' ಶಬ್ದಾಂತಗಳು ಈ ಸೂತ್ರಕ್ಕೆ ವಿಷಯಗಳೆಂದು ತಿಳಿಯುವುದು.

**ವಿಚಾರ ೫೯**

ಈ ಸೂತ್ರದಲ್ಲಿ — 'ತೋಃ, ನಪಃ' ಎಂದು ಪದಗಳಿರುವುವು. ಪೂರ್ವ ಸೂತ್ರಗಳಿಂದ 'ಇತಃ, ಸ್ವರೇ, ದ್ವಿಃ, ವಾ' ಎಂಬ ಪದಚತುಷ್ಟಯವು ಅನುವರ್ತಿಸಲ್ಪಡುವುದು. ದ್ವಿತ್ವಕ್ಕೆ ಸ್ಥಾನಿಯಾದುದು ಪ್ರಕೃತದಲ್ಲಿ ತ ಕಾರ ಮಾತ್ರವೇ ಸಂಭವಿಸುವುದರಿಂದ ಇಲ್ಲಿ ಪೂರ್ವದಿಂದ ತ ಕಾರ ಮಾತ್ರವನ್ನು ಸಂಬಂಧಿಸಿಕೊಳ್ಳುವುದು. ತಥಾಚ — ತು ಶಬ್ದಾಂತ ನಪುಂಸಕಲಿಂಗ ಶಬ್ದದಲ್ಲಿರುವ ಇ ಕಾರಾತ್ಪರ ತ ಕಾರಕ್ಕೆ ಸ್ವರವು ಪರವಾಗಿರಲು ವಿಕಲ್ಪವಾಗಿ ದ್ವಿತ್ವವು ಬರುವುದೆಂದು ಸೂತ್ರಾರ್ಥವಾಗುವುದು. ಆದುದರಿಂದ 'ಒಳ್ಳಿತು' ಮೊದಲಾದ ಶಬ್ದಗಳ ಉಪಾಂತ್ಯ ತ ಕಾರವು ಇ ಕಾರಾತ್ಪರವಾಗಿರುವುದರಿಂದ ವಿಕಲ್ಪ-ದ್ವಿತ್ವವು ಬಂದು 'ಒಳ್ಳಿತ್ತು, ಒಳ್ಳಿತು' ಮೊದಲಾದುವು ಸಿದ್ಧಿಸುವುವು.

ಈ ಸೂತ್ರದಲ್ಲಿ 'ಇತಃ' ಎಂಬುದನ್ನು ಅನುವರ್ತಿಸಿರುವುದರಿಂದ 'ಎನಿತು, ಅನಿತು' ಮೊದಲಾದುವುಗಳಲ್ಲಿ ನ ಕಾರಕ್ಕೆ ದ್ವಿತ್ವವು ಬರುವುದಿಲ್ಲ.

**ವ್ಯಾಖ್ಯಾನತೋ ವಿಶೇಷಪ್ರತಿಪತ್ತಿಃ ನ ಹಿ ಸಂದೇಹಾದಲಕ್ಷಣಂ**

ಎಂಬ ನ್ಯಾಯವನ್ನು — 'ಸ್ಥಿತಿಗೊಂಡಿತು, ಮಿತಿಮಾಡಿತು, ವಿತರಣೆಸಿತು' ಮೊದಲಾದ ಪ್ರಯೋಗಗಳಲ್ಲಿ ಮೊದಲನೆಯ ತ ಕಾರವು ಇ ಕಾರಾತ್ಪರವಾಗಿದ್ದರೂ ಅದಕ್ಕೆ ದ್ವಿತ್ವವಾರಣಾರ್ಥವಾಗಿ ಈ ಸೂತ್ರದಲ್ಲಿ ಅಂಗೀಕರಿಸಬೇಕಾದುದು ಅತ್ಯಾವಶ್ಯಕವಾದುದರಿಂದ ತು ಶಬ್ದಾಂತ ನಪುಂಸಕಲಿಂಗದ ಉಪಾಂತ್ಯವಾದ ತ ಕಾರಕ್ಕೆ ದ್ವಿತ್ವವೆಂದು ವ್ಯಾಖ್ಯಾನ ಮಾಡಿ ಇನಿತು ಮೊದಲಾದುವುಗಳಲ್ಲಿ ದ್ವಿತ್ವವು ಪ್ರಸಕ್ತವಾಗುವುದಿಲ್ಲವೆಂದು ತಿಳಿಯಬೇಕು.

ಈ ವ್ಯಾಖ್ಯಾನ ಪರಿಭಾಷೆಯು ಲಕ್ಷ್ಯಾನುಸಾರವಾಗಿ ಅಂಗೀಕರಿಸತಕ್ಕುದೆಂದು **ಪತಂಜಲಿ** ಮೊದಲಾದವರು ಹೇಳಿರುವುದರಿಂದ ಇಲ್ಲಿಯೂ ಹಾಗೇ ಅಂಗೀಕರಿಸತಕ್ಕುದು. ಇಲ್ಲಿ ಅಂತಹ ವ್ಯಾಖ್ಯಾನವೇನೆಂದರೆ — '**ನ ಸಮಾಸೇ ॥ ೬೦ ॥**' ಎಂಬ ವಕ್ಷ್ಯಮಾಣ ಸೂತ್ರವೇ ಎಂದು ತಿಳಿಯಬೇಕು. ಈ ಸೂತ್ರವು ಸಮಾಸದಲ್ಲಿ ತು ಶಬ್ದಾಂತ ನಪುಂಸಕಕ್ಕೆ ದ್ವಿತ್ವಾಭಾವಾರ್ಥವಾಗಿ ಪ್ರಾರಂಭಿಸಲ್ಪಟ್ಟಿರುವುದು. ಹೇಗೆ ನಿಷೇಧವನ್ನು ಮಾಡಿರುವ ಸೂತ್ರಕಾರರಿಗೆ — ತು ಶಬ್ದಾಂತ ನಪುಂಸಕ ಶಬ್ದಗಳ ತ ಕಾರಕ್ಕೆ ಸಮಾಸ ವಿಷಯದಲ್ಲಿ ದ್ವಿತ್ವವು ಬರುವುದಾದರೆ — '**ಅರಸ್ವಾದೀನಾಂ ದೋರ್ಲುಬುತ್ತರಪದೇ ॥ ೩೩೨ ॥**' ಎಂಬ ಸೂತ್ರದಿಂದ ಪೂರ್ವಪದದ ದು ವಿಗೆ ಲೋಪವನ್ನು ಮಾಡಲು ಒಂದು ತ ಕಾರವು ಉಳಿಯುವುದು. ಅದಕ್ಕೂ ಸೂತ್ರವನ್ನು ಮಾಡಲು ಸೂತ್ರವಿಲ್ಲ. '**ಕೃದ್ಗುಣೋಕ್ತೇಃ ಪೂರ್ವಸ್ವರೇಽನ್ಯಕಾರ್ಥೇ ॥ ೩೩೩ ॥** ಎಂಬ ಸೂತ್ರದಿಂದಲೂ ದ್ವಿತ್ವಕಾರವಿರುವುದರಿಂದ ಪೂರ್ವಸ್ವರಸಹಿತವಾದುದುವೇ ಸಂಭವಿಸುವುದಿಲ್ಲ. ಆದುದರಿಂದ ಸಮಾನಾಧಿಕರಣೋತ್ತರಪದವು ಪರದಲ್ಲಿರಲು ದು-ಸಂಜ್ಞಕವಾದುದಕ್ಕೆ ಪೂರ್ವದಲ್ಲಿ ಸ್ವರವೇ ಇರಬೇಕೆಂದು ಉಪಾಂತ್ಯ ತ ಕಾರವು ದ್ವಿರುಚ್ಚಾರಿತವಾಗಬಾರದೆಂದು **ವಿಧಿನಿಷೇಧಗಳಿಗೆ ಸಮಾನವಿಷಯತೆ** ಇರಬೇಕೆಂಬ ತಾತ್ಪರ್ಯವೆಂದು **ಮಂಜರೀಮಕರಂದ**ದಲ್ಲಿ ಹೇಳಿರುವನು. ಆದರೆ ಈ ಸಮಾಧಾನವು ಸೂಕ್ಷ್ಮಬುದ್ಧಿಗಳಿಗೆ ರುಚಿಸುವುದಿಲ್ಲವಾದುದರಿಂದ — '**ನಿರ್ದಿಶ್ಯಮಾನಸ್ಯಾದೇಶಾಃ ಭವಂತಿ**' ಎಂಬ ನ್ಯಾಯವನ್ನಂಗೀಕರಿಸಿ **ಸೂತ್ರ**ದಲ್ಲಿ ಸಾಕ್ಷಾತ್ತಾಗಿ ಉಚ್ಚಾರಿತವಾದ ತು ಶಬ್ದಾವಯವ

ತ ಕಾರಕ್ಕೆ ದ್ವಿತ್ವವು ಬರುವುದೆಂದು ಹೇಳಲು ಆವ ದೋಷವೂ ಪ್ರಸಕ್ತವಾಗುವುದಿಲ್ಲವೆಂದು ವಿದ್ವಾಂಸರು ತಿಳಿಯಬೇಕು.

ಈ ಪರಿಭಾಷೆಯನ್ನು **ಪರಿಭಾಷೇಂದುಶೇಖರ**ವೆಂಬ ಸಂಸ್ಕೃತ ಗ್ರಂಥದಲ್ಲಿ —

**' ನಿರ್ದಿಶ್ಯಮಾನಸ್ಯ ಉಚ್ಚಾರ್ಯಮಾಣಸಜಾತಿ ಯಸ್ಯ ತದವಯವಸ್ಯ ವಾ ವಿಧೀಯಮಾನಾ ಆದೇಶಾ ಭವಂತಿ '**

ಎಂದು ವ್ಯಾಖ್ಯಾನ ಮಾಡಿರುವುದರಿಂದ ಸೂತ್ರಕೃತ್-ಕೃತ್ರ್ಯರ್ಕೋಚ್ಚಾರಣವಿಷಯಿಭೂತ ಸೂತ್ರ ಸಪಷ್ಟ್ಯಂತ ಪದಬೋಧ್ಯವಾದುದಕ್ಕೂ ತದವಯವಕ್ಕೂ ಬರುವುದೆಂದು ಫಲಿತವಾಗುವುದು. ಪ್ರಕೃತದಲ್ಲಿ ' ತೋಃ ' ಎಂಬುದು ಸೂತ್ರಕೃತ್-ಕರ್ತೃಕೋಚ್ಚಾರಣವಿಷಯಿಭೂತ ಷಷ್ಟ್ಯಂತಪದವಾದುದರಿಂದ ತದ್ಬೋಧ್ಯಲಕ್ಷ್ಯಸ್ಥ ' ತು ' ಶಬ್ದಾವಯವ ತ ಕಾರಕ್ಕೆ ದ್ವಿತ್ವ ಬರುವುದೆಂದು ತಿಳಿಯುವುದು.

ಈ ಸೂತ್ರದಲ್ಲಿ ' ತೋಃ ' ಎಂದು ಹೇಳಿರುವುದರಿಂದ ' ಕಱಿದು, ಬಿಳಿದು ' ಮೊದಲಾದುವುಗಳಲ್ಲಿ ದ ಕಾರಕ್ಕೆ ದ್ವಿತ್ವವಿಲ್ಲ. ' ನಪಃ ' ಎಂದು ಹೇಳಿರುವುದರಿಂದ ' ಒಳ್ಳಿದಂ, ಮೆಲ್ಲಿದಳ್ ' ಮೊದಲಾದ ಪುಲ್ಲಿಂಗ-ಸ್ತ್ರೀಲಿಂಗಗಳಲ್ಲಿ ಬರುವುದಿಲ್ಲ. ಇಲ್ಲ ' ಒಳ್ಳಿತು, ಮೆಲ್ಲಿತು ' ಶಬ್ದಗಳ ತ ಕಾರಕ್ಕೆ ಪುಲ್ಲಿಂಗ-ಸ್ತ್ರೀಲಿಂಗಗಳಲ್ಲಿ — ' **ತೋರ್ದಃ || ೧೩೭ ||** ' ಎಂಬ ಸೂತ್ರದಿಂದ ದ ಕಾರಾದೇಶವು ಬಂದಿರುವುದೆಂದು ತಿಳಿಯಬೇಕು.

ಈ ಸೂತ್ರದಲ್ಲಿ ಸಾಮಾನ್ಯವಾಗಿ ' ತು ' ಶಬ್ದಾಂತ ನಪುಂಸಕಲಿಂಗ ಶಬ್ದಕ್ಕೆ ಎಂದು ನಿರ್ದೇಶ ಮಾಡಿರುವುದರಿಂದ ಭಾಷೆಯಲ್ಲಿ ಆಖ್ಯಾತ ಪ್ರತ್ಯಯಾಂತಗಳಿಗೂ ಲಿಂಗವಿರುವುದೆಂದು ' ತು ' ಶಬ್ದಾಂತಗಳಾದ ' ಮಾಡಿತು, ಕೂಡಿತು ' ಮೊದಲಾದ ಆಖ್ಯಾತ ಪ್ರತ್ಯಯಾಂತಗಳನ್ನೂ ಇಲ್ಲಿ ಲಕ್ಷ್ಯಗಳನ್ನಾಗಿ ತೆಗೆದುಕೊಳ್ಳಬಹುದು. ಆದಾಗ್ಯೂ ' ಅಮ್ ' ಪ್ರತ್ಯಯಕ್ಕೆ ಆಖ್ಯಾತ ಪ್ರಕರಣದಲ್ಲಿ – ' **ವೇತ್ತಿತ್ತ್ವತ್ತವೋsಮೋ ಭೂತೇ || ೪೫೮ ||** ' ಎಂಬ ಸೂತ್ರದಿಂದ ' ಇತು, ಇತ್ತು ' ಎಂದು ಎರಡು ಬಗೆಯಾಗಿ ಆದೇಶಗಳನ್ನು ವಿಧಿಸಿರುವುದರಿಂದಲೇ ರೂಪದ್ವಯವು ಸಿದ್ಧಿಸುತ್ತಿರಲು ಅಂತಹ ಪ್ರಯೋಗಗಳಲ್ಲಿ ದ್ವಿತ್ವ-ವಿಧಿಯು ನಿಷ್ಪ್ರಯೋಜನವಾಗಿರುವುದರಿಂದ **ಶಬ್ದಾನುಶಾಸನ**ದ ವೃತ್ತಿಯಲ್ಲಿ ' ಮಾಡಿತ್ತು, ಮಾಡಿತು; ಕೂಡಿತ್ತು, ಕೂಡಿತು ' ಮೊದಲಾದುವನ್ನು ಇದಕ್ಕೆ ಲಕ್ಷ್ಯಗಳನ್ನಾಗಿ ಕೊಟ್ಟಿರುವುದು ಅಸಂಗತವೆಂದು ತಿಳಿದು, ಇಲ್ಲ ಗುಣವಾಚಕ ಶಬ್ದಗಳೇ ಉದಾಹರಿಸಲ್ಪಟ್ಟಿವೆ.

ಇಲ್ಲ ಕೆಲವರು ' ಒಳ್ಳಿತ್ತು, ಒಳ್ಳಿತು ' ಮೊದಲಾದ ಶಬ್ದಗಳು ದ್ವಿ ತ ಕಾರವಾಗಿಯೂ ಏಕ ತ ಕಾರವಾಗಿಯೂ ಸ್ವಭಾವವಾಗಿಯೇ ಲೋಕದಲ್ಲಿ ಪ್ರಯೋಗಿಸುವುದರಿಂದ ಈ ದ್ವಿತ್ವ ವಿಧಿಯು ಅತ್ಯಂತ ಪ್ರಯೋಜನಕಾರಿಯಲ್ಲವೆಂದು ಹೇಳುವರು. ಆದುದರಿಂದಲೇ **ದರ್ಪಣಕಾರ**ನು ಇದನ್ನು ದ್ವಿತ್ವಪ್ರಕರಣದಲ್ಲಿ ಸೇರಿಸಲಿಲ್ಲವೆಂದು ತಿಳಿಯಬೇಕು.

**ಅವತಾರಿಕೆ ೬೦**

ಇದುವರೆಗೂ ದ್ವಿತ್ವ-ವಿಧಿ-ಸೂತ್ರಗಳನ್ನು ಹೇಳಿ — ' **ಹ್ರಸ್ವಾನ್ನಣಲಯಳಶಟಃ** ' ಎಂಬ ಸೂತ್ರದಿಂದ ಅತಿಪ್ರಸಕ್ತವಾದ ದ್ವಿತ್ವಕ್ಕೆ ನಿಷೇಧವನ್ನು ಹೇಳುತ್ತಾನೆ.

**ಸೂತ್ರಂ || ನ ಸಮಾಸೇ || ೬೦ ||**

**ಅರ್ಥ ||** ತು ಶಬ್ದಾಂತ ನಪುಂಸಕಲಿಂಗಸಂಬಂಧಿಯಾದ ತ ಕಾರಕ್ಕೆ ದ್ವಿತ್ವವು ಸಮಾಸ ವಿಷಯದಲ್ಲಿ ಬರುವುದಿಲ್ಲ.

**ಉದಾಹರಣೆ ||** ಮೆಲ್ಲಡಿ, ಒಳ್ಳಾಳ್, ತೆಳ್ಗದಪು || ಮೊದಲಾದ ಸಮಾಸಗಳೇ ಇವಕ್ಕೆ ಲಕ್ಷ್ಯಗಳು.

**ವಿಚಾರ ೬೦**

ಈ ಸೂತ್ರವು ಸಮಾಸವಿಷಯದಲ್ಲಿ ದ್ವಿತ್ವನಿಷೇಧಕವಾದುದು. ಆ ನಿಷೇಧವು — '**ವಿಧಿರ್ವಾ ಪ್ರತಿಷೇಧೋ ವಾ ಅನಂತರಸ್ಯ ಭವತಿ**' ಎಂಬ ನ್ಯಾಯದಿಂದ ದ್ವಿತ್ವಸಾಮಾನ್ಯಕ್ಕೂ ಅಲ್ಲ; 'ತೋರ್ನಪಃ' ಎಂಬ ಪೂರ್ವಸೂತ್ರದಿಂದ ಪ್ರಾಪ್ತವಾದ ದ್ವಿತ್ವಕ್ಕೆ ಮಾತ್ರವೆಂದು ತಿಳಿಯ ಬೇಕು. ಆದುದರಿಂದ ಇಲ್ಲಿ ಪೂರ್ವ ಸೂತ್ರಗಳಿಂದ 'ತೋಃ, ನಪಃ, ದ್ವಿಃ' ಎಂಬ ಮೂರು ಪದ ಗಳನ್ನು ಅನುವರ್ತಿಸುವುದು. 'ಸಮಾಸೇ' ಎಂಬುದು ವಿಷಯಸಪ್ತಮ್ಯಂತವು. ನಿಷೇಧವು ಪ್ರಾಪ್ತ ವಿಷಯಕವಾದುದರಿಂದ ವಿಧಿ-ಸೂತ್ರದಲ್ಲಿ ಹೇಳಿರುವ ನಿಮಿತ್ತಗಳೇ ನಿಷೇಧದಲ್ಲಿಯೂ ನಿಮಿತ್ತ ಗಳೆಂದು ತಿಳಿಯಬೇಕು. ತಥಾಚ — ತು ಶಬ್ದಾಂತ ನಪುಂಸಕಲಿಂಗಸಂಬಂಧಿ ತ ಕಾರಕ್ಕೆ ಸಮಾಸ ವಿಷಯದಲ್ಲಿ ಸ್ವರವು ಪರವಾಗಿರಲು ದ್ವಿತ್ವವಿಲ್ಲವೆಂದು ಸೂತ್ರಾರ್ಥವಾಗುವುದು. ಆಗ ಸಮಾಸವಲ್ಲದ್ದು ಪೂರ್ವ ಸೂತ್ರಕ್ಕೆ ವಿಷಯವೆಂದು ತಿಳಿಯುವುದು. 'ಮೆಲ್ಲಿತು ಅಡಿ' ಎಂದು ಸಮಾಸಮಾಡಿ ತದಾಶ್ರಯವಾದ ಕಾರ್ಯಗಳನ್ನು ಮಾಡುವಾಗ ವಿಹಿತವಾದ ಪೂರ್ವಸ್ವರ ಸಹಿತ 'ದು' ಲೋಪವನ್ನು ಮಾಡಲು ದ್ವಿತ್ವಸಂಬಂಧಿಯಾದ ಒಂದು ತ ಕಾರಕ್ಕೆ ಶ್ರವಣವಿಲ್ಲವೆ 'ಮೆಲ್ಲಡಿ' ಎಂದು ಸಿದ್ಧವಾಗುವುದು. ಹೀಗೆಯೇ 'ಒಳ್ಳಾಳ್, ತೆಳ್ಗದಪು' ಮೊದಲಾದ ಪ್ರಯೋಗಗಳಲ್ಲಿ ಪ್ರಕ್ರಿಯೆಗಳನ್ನು ಊಹಿಸಿಕೊಂಡು ಸಾಧುತ್ವವನ್ನು ಹೇಳುವುದು.

**ಅವತಾರಿಕೆ ೬೧**

'**ತೋರ್ನಪಃ**' ಎಂಬ ಅನಂತರ ಸೂತ್ರ ವಿಹಿತ ದ್ವಿತ್ವವನ್ನು ವಿಷಯಾಂತರದಲ್ಲಿ ನಿಷೇಧಿಸಿ, '**ಹ್ರಸ್ವಾತ್ ನ ಣ ಲ ಯ ಳ ತ ಟಃ**' ಇತ್ಯಾದಿ ಸೂತ್ರದಿಂದ ಸಾಮಾನ್ಯವಾಗಿ ಪ್ರಾಪ್ತವಾದ ದ್ವಿತ್ವವನ್ನು ಳ ಕಾರಾಂತವಾದ ಕೆಲವು ಧಾತುಗಳಿಗೆ ಸ್ವರ ಸಾಮಾನ್ಯವು ಪರವಾಗಿರಲು ನಿಷೇಧಿಸುತ್ತಾನೆ.

**ಸೂತ್ರಂ || ಅಟ್ಕಳುಳಃ || ೬೧ ||**

**ಅರ್ಥ || ಅಟು, ಕಳ್, ಉಳ್ ಎಂಬ ಧಾತುಗಳ ಳ ಕಾರಕ್ಕೆ ಸ್ವರವು ಪರವಾಗಿರಲು ದ್ವಿತ್ವವಿಲ್ಲ.**

**ಉದಾಹರಣೆ ||** ಅಱ್ + ಅಂ = ಅಱಂ || ಹೀಗೆಯೇ ಅಱರ್; ಕಳಂ, ಕಳರ್; ಉಱಂ, ಉಱರ್; ಒಳಂ, ಒಳರ್ || ಮೊದಲಾದುವುಗಳನ್ನು ಇದಕ್ಕೆ ಲಕ್ಷ್ಯಗಳನ್ನಾಗಿ ತೆಗೆದುಕೊಳ್ಳುವುದು.

**ವಿಚಾರ ೬೧**

ಈ ಸೂತ್ರಾರಂಭಸಾಮರ್ಥ್ಯದಿಂದಲೇ ಪೂರ್ವಸೂತ್ರವಿಚಾರೋಕ್ತ ನ್ಯಾಯವನ್ನು ಬಾಧಿಸಿ ವ್ಯವಹಿತವಾದುದಕ್ಕೆ ಮಾತ್ರ ಬಾಧಕವೆಂದು ತಿಳಿಯಬೇಕು. ಇಲ್ಲಿ ಹೇಳಿರುವ ಮೂರು

ಧಾತುಗಳು ಳ ಕಾರಾಂತಗಳಾದುದರಿಂದ ಪೂರ್ವ ಸೂತ್ರದಿಂದ ಳ ಕಾರ ಮಾತ್ರವನ್ನು ಸಂಬಂಧಿಸಿ ಕೊಳ್ಳುವುದು. 'ಸ್ವರೇ, ದ್ವಿಃ, ನ' ಎಂಬಿವು ಪ್ರಕರಣದಿಂದ ಸಿದ್ಧವಾಗುವುವು. ತಥಾಚ — ಆಳ್-ಆದಿ ಧಾತುಗಳ ಳ ಕಾರಕ್ಕೆ ಸ್ವರವು ಪರವಾಗಲು ದ್ವಿತ್ವವಿಲ್ಲವೆಂದು ಅರ್ಥವಾಗುವುದು. ಇಲ್ಲಿ ಧಾತುಗಳ ಸ್ವರೂಪವನ್ನು ನಿರ್ದೇಶಿಸಿರುವುದರಿಂದ ಇವಕ್ಕೆ ಸ್ವರವು ಪರವಾಗಬೇಕಾದರೆ ಅವುಗಳ ಮೇಲೆ ವಿಧಿಸುವ ತಿಙ್-ಕೃತ್-ಪ್ರತ್ಯಯಸಂಬಂಧಿಯಾಗಿರುವುವೇ ಸಂಭವಿಸುವುವು. ಅವುಗಳಲ್ಲಿ ಕೃತ್-ಸ್ವರವು ಪರವಾಗಿರಲು '**ಕೃತಿ**' ಎಂಬ ಸೂತ್ರದಿಂದ ನಿಷೇಧವು ಪ್ರವೃತ್ತ ವಾಗುವುದೆಂದು ಇಲ್ಲಿ ತಿಙಂತಗಳೇ ಉದಾಹರಿಸಲ್ಪಟ್ಟಿವೆ.

ಇಲ್ಲಿ ಹೇಳಿರುವ 'ಉಳ್'* ಧಾತುವು 'ಉಳುವುದು, ಇರುವಿಕೆ' ಎಂಬ ಅರ್ಥದ್ವಯ ವುಳ್ಳುದು. ಆ ಅರ್ಥದ್ವಯದಲ್ಲಿಯೂ ದ್ವಿತ್ವವಿಲ್ಲ. ಳ ಕಾರಾಂತವೆಂದು ಸಾಮಾನ್ಯವಾಗಿ ಹೇಳದೆ ಸ್ವರೂಪ ನಿರ್ದೇಶ ಮಾಡಿರುವುದರಿಂದ 'ಕೊಳ್' ಮೊದಲಾದ ಧಾತ್ವಂತರಗಳಲ್ಲಿ ನಿಷೇಧವಿಲ್ಲ.

**ಅವತಾರಿಕೆ ೬೨**

ಹಿಂದೆ ತಿಙ್-ವಿಷಯದಲ್ಲಿ ಕೆಲವು ಧಾತುಗಳಿಗೆ ಪ್ರಾಪ್ತವಾದ ದ್ವಿತ್ವವು ನಿಷೇಧಿಸಲ್ಪಟ್ಟಿತು. ಈಗ ಸಾಮಾನ್ಯವಾಗಿ ನ ಕಾರಾದ್ಯಂತಗಳಾದ ಧಾತುಗಳಿಗೆ ಕೃತ್-ವಿಷಯದಲ್ಲಿ ನಿಷೇಧಿಸುತ್ತಾನೆ.

**ಸೂತ್ರಂ ॥ ಕೃತಿ ॥ ೬೨ ॥**

**ಅರ್ಥ ॥ ನ, ಣ, ಲ, ಯ, ಳ, ತ, ಟ ಕಾರಾಂತ ಧಾತುಗಳಿಗೆ ಸ್ವರಾದಿ ಕೃತ್-ಪ್ರತ್ಯಯವು ಪರವಾಗಲು ದ್ವಿತ್ವವು ಬರುವುದಿಲ್ಲ.**

**ಉದಾಹರಣೆ** ॥ ತಿನ್ + ಇಸು = ತಿನಿಸು; ಹೀಗೆಯೇ — ತಿನುತ್ತುಂ; ಉಣಿಸು, ಉಣುತ್ತುಂ; ಮಲಿಸು, ಮಲುತ್ತುಂ; ಕೊಲೆ; ಪೊಯ್ಯೆ; ಗೆಯ್ಯೆ; ಬಳವಿ, ಬೆಳಸು; ಕಲ್ಕುಟಿಗಂ, ಮರಕುಟಿಗಂ ॥ ಮೊದಲಾದ ಕೃದಂತಗಳು ಇದಕ್ಕೆ ಲಕ್ಷ್ಯಗಳಾಗುವುವು.

**ವಿಚಾರ ೬೨**

ಈ ಸೂತ್ರದಲ್ಲ ಹೇಳಿರುವ 'ಕೃತಿ' ಎಂಬುದು – '**ಅಚ್ ಕರ್ತೃಕರ್ಮಣೋಃ ॥ ೫೪೩ ॥**' ಎಂಬುದೇ ಮೊದಲಾಗಿ ಈ ಶಾಸ್ತ್ರದ ಕೊನೆಯವರೆಗೂ ಹೇಳಿರುವ ಸೂತ್ರಗಳಿಂದ ಧಾತುಗಳಮೇಲೆ ವಿಹಿತಗಳಾದ ಪ್ರತ್ಯಯಬೋಧಕವಾದ ಸಪ್ತಮ್ಯಂತಪದವು. ಆದುದರಿಂದ 'ಪರೇ' ಎಂಬರ್ಥವು ಉಪಸ್ಥಿತವಾಗುವುದು. ವಿಧಿ-ನಿಷೇಧಗಳಿಗೆ ಸಮಾನವಿಷಯಕತ್ವ ನಿಯಮವಿರುವುದರಿಂದ ಇಲ್ಲಿಯೂ 'ಸ್ವರೇ' ಎಂಬುದು ಉಪಸ್ಥಿತವಾಗುವುದು. ಇದನ್ನು 'ಕೃತಿ' ಎಂಬುದಕ್ಕೆ ವಿಶೇಷಣ ಮಾಡುವುದರಿಂದ ತದಾದಿಲಾಭವು ಬರುವುದು. 'ನ ಣ ಲ ಯ ಳ ತ ಟಃ, ದ್ವಿಃ, ನ' ಎಂಬಿವು ಅನುವರ್ತಿಸಲ್ಪಡುವುವು. ತಥಾಚ — ಸ್ವರಾದಿಕೃತ್ಪ್ರತ್ಯಯಪರಕ ನ ಕಾರಾದ್ಯಂತ ಧಾತುಗಳ ಕೊನೆಯ ನ ಕಾರಾದಿಗಳಿಗೆ ದ್ವಿತ್ವವಿಲ್ಲವೆಂದು ಸೂತ್ರಾರ್ಥವಾಗುವುದು. ಆದುದರಿಂದ ಇಲ್ಲ ಉದ್ದೇಶ್ಯವಾದ ಪ್ರತಿವರ್ಣಕ್ಕೂ ಎರಡೆರಡು ಉದಾಹರಣೆಗಳನ್ನು ಕೊಟ್ಟಿರುವುದು. ಆದರೆ ಕರ್ಣಾಟಕ ಭಾಷೆಯಲ್ಲಿ ತ ಕಾರಂತ ಧಾತುಗಳು ದುರ್ಲಭವಾದುದರಿಂದ ಅದನ್ನು ಬಿಟ್ಟು ಉಳಿದ ವರ್ಣಗಳಿಗೆ ಪ್ರಯೋಗಗಳನ್ನು ತೋರಿಸಿರುವುದೆಂದು ತಿಳಿಯಬೇಕು.

---

* [ ಹಳಗನ್ನಡದಲ್ಲಿ 'ಇರುವಿಕೆ' ಎಂಬರ್ಥದಲ್ಲಿ 'ಉಳ್' ಎಂದೂ 'ಉಳುವುದು' ಎಂಬರ್ಥದಲ್ಲಿ 'ಉೞ್' ಎಂದೂ ಬೇರೆ ಬೇರೆಯಾಗಿ ವ್ಯವಹಾರವಾಗುವುವು — ಸಂಪಾದಕ ]

ಇಲ್ಲಿ — 'ತಿನಿಸು, ತಿಸುತ್ತುಂ' ಎಂಬಿವು ಕೃತ್-ಪ್ರಕರಣದಲ್ಲಿ '**ಇಸುಪ್ತಿನಃ || ೫೭೮ ||**' ಎಂಬ ಸೂತ್ರದಿಂದ ಭಾವಾರ್ಥದಲ್ಲಿ 'ಇಸುಪ್' ಪ್ರತ್ಯಯವು '**ಉತಿ ದುತ್ತಿ ದುತುಮುತ್ತುಮ್ ಸತ್ಯಚೋ ವಾ || ೫೪೪ ||**' ಎಂಬ ಸೂತ್ರದಿಂದ ಅಚ್ ಪ್ರತ್ಯಯಕ್ಕೆ 'ಉತ್ತುಂ' ಎಂಬ ಆದೇಶವೂ ಬಂದು ಸಿದ್ಧಿಸಿರುವುವು. ಹೀಗೆಯೇ 'ಉಣಿಸು' ಮೊದಲಾದುವುಗಳಲ್ಲಿಯೂ ಣ ಕಾರಾದ್ಯಂತ ಧಾತುಗಳಿಗೂ ಆಯಾ ಕಾರ್ಯಗಳು ಬಂದು ಉಕ್ತೋದಾಹರಣೆಗಳು ನಿಷ್ಪನ್ನವಾಗಿರುವುವೆಂದು ತಿಳಿಯುವುದು.

ಇಲ್ಲಿ — '**ಇಸುಪ್ತಿನಃ**' ಎಂಬ ಸೂತ್ರದಲ್ಲಿ 'ತಿನಃ' ಎಂದು ಧಾತು ಸ್ವರೂಪವನ್ನು ನಿರ್ದೇಶಿಸಿರುವುದರಿಂದ ಕೃತ್ತಾದ 'ಇಸುಪ್-ತಿನ್' ಎಂಬೊಂದೇ ಧಾತುವಿಗೆ ಬರುವುದು. ಅದರಿಂದ 'ಉಣಿಸು, ಮೆಲಿಸು' ಎಂಬಿವನ್ನುದಾಹರಿಸಿರುವುದು ಅನುಚಿತವೆಂದು ತೋರುವುದು. ಆದಾಗ್ಯೂ ಪ್ರಾಮಾಣಿಕ ಪ್ರಯೋಗವಿರುವುದರಿಂದ ಆ ಸೂತ್ರದಲ್ಲಿ 'ತಿನ್'-ಅರ್ಥಕವಾದ ವ್ಯಂಜನಾಂತ ಧಾತುಗಳಿಗೆಲ್ಲಾ 'ಇಸುಪ್' ಪ್ರತ್ಯಯವು ಬರುವುದೆಂದು ವ್ಯಾಖ್ಯಾನವನ್ನಂಗೀಕರಿಸಿ ಸಾಧಿಸುವುದರಿಂದ ದೋಷವಿಲ್ಲವೆಂದು ತಿಳಿಯಬೇಕು. ವ್ಯಂಜನಾಂತ ಧಾತುಗಳಿಗೆ ಎಂದು ಹೇಳಿರುವುದರಿಂದ 'ಊಡು' ಮೊದಲಾದ ಸ್ವರಾಂತ ಧಾತುಗಳಿಗೆ ಬರುವುದಿಲ್ಲವೆಂದು ಅತಿಪ್ರಸಕ್ತಿಯೂ ವಾರಿತವಾಗುವುದು. 'ಕೊಲೆ' ಎಂಬುದು — '**ಕೊಲ್ನಗೋರೆತ್ || ೫೭೭ ||**' ಎಂಬ ಸೂತ್ರದಿಂದ 'ಕೊಲ್' ಧಾತುವಿನ ಮೇಲೆ 'ಎತ್' ಪ್ರತ್ಯಯವನ್ನು ಮಾಡಲು ಸಿದ್ಧಿಸುವುದು. 'ಪೊಯೆ' ಎಂಬುದಾದರೂ 'ಪೋಯ್' ಧಾತುವಿನ ಮೇಲೆ — '**ಪುದುಮೆವನ್ನಂ ವನ್ನೆಗಂ ಏನಂ ಏನೆಗಂ || ೫೮೮ ||**' ಎಂಬ ಸೂತ್ರದಿಂದ ಭಾವಲಕ್ಷಣಾರ್ಥದಲ್ಲಿ ವಿಹಿತವಾದ 'ಎ' ಪ್ರತ್ಯಯವನ್ನು ಮಾಡಲು ಸಿದ್ಧವಾಗುವುದು. 'ಬಳವಿ, ಬೆಳಸು' ಎಂಬಿವು 'ಬಳೆ, ಬೆಳೆ' ಎಂಬ ಧಾತುಗಳ ಮೇಲೆ — '**ಬಳೆಬೆಳೆತೋರವ್ಯಸೂ || ೫೬೩ ||**' ಎಂಬ ಸೂತ್ರದಿಂದ ಕ್ರಮವಾಗಿ ವಿಹಿತಗಳಾದ 'ಅವಿ, ಅಸು' ಎಂಬ ಪ್ರತ್ಯಯಗಳು ಬಂದು ಆಗಿವೆ. 'ಕಲ್ಕುಟಿಗಂ, ಮರಕುಟಿಗಂ' ಎಂಬಿವು 'ಕಲ್, ಮರ' ಶಬ್ದೋಪಪದಕ 'ಕುಟ್ಟು' ಧಾತುವಿನ ಮೇಲೆ — '**ಕುಟ್ಟೋರಿಗೋ ದುಲುಪ್ಚ || ೫೪೮ ||**' ಎಂಬ ಸೂತ್ರದಿಂದ 'ಇಗ' ಪ್ರತ್ಯಯವನ್ನು ಮಾಡಲು ಸಿದ್ಧಿಸುವುವು.

ಈ ಸೂತ್ರದಲ್ಲಿ ತ ಕಾರಾನುವೃತ್ತಿಗೆ ಪ್ರಯೋಜನವಿಲ್ಲದಿದ್ದರೂ ಮುಂದಿನ ಸೂತ್ರದಲ್ಲಿ ಅನುವೃತ್ತಿಗಾಗಿ ಇಲ್ಲಿಯೂ ಅನುವರ್ತಿಸಲ್ಪಟ್ಟಿದೆ ಎಂದು ತಿಳಿಯುವುದು.

ಈ ಸೂತ್ರವು ಕೃನ್ಮಾತ್ರವಿಷಯಕವೆಂಬುದು 'ಕೃತಿ' ಎಂಬ ಪದೋಚ್ಚಾರಣೆಯಿಂದಲೇ ತಿಳಿದು ಬರುವುದರಿಂದ 'ತಿನ್ನಂ, ಉಣ್ಣಂ' ಮೊದಲಾದ ಆಖ್ಯಾತ-ಪ್ರತ್ಯಯಾಂತಗಳಲ್ಲಿ ಈ ನಿಷೇಧವಿಲ್ಲವೆಂದು ತಿಳಿಯಬೇಕು.

**ಅವತಾರಿಕೆ ೬೩**

ಪೂರ್ವ ಸೂತ್ರದಿಂದ ಸ್ವರಾದಿ ಕೃದ್ವಿಷಯದಲ್ಲಿ ನ ಕಾರಾದ್ಯಂತ ಧಾತುಗಳಿಗೆ ದ್ವಿತ್ವವನ್ನು ನಿಷೇಧಿಸಿ ಧಾತುವಿನ ಮೇಲೆ ವಿಹಿತವಾದ ಕೃತ್ತು-ಆಖ್ಯಾತ ಈ ಉಭಯವ್ಯತಿರಿಕ್ತಪ್ರತ್ಯಯ ವಿಷಯದಲ್ಲಿ ದ್ವಿತ್ವವನ್ನು ನಿಷೇಧಿಸುತ್ತಾನೆ.

**ಸೂತ್ರಂ || ಇಸುಪಿ || ೬೩ ||**

**ಅರ್ಥ || ಇಸುಪ್ ಪ್ರತ್ಯಯವು ಪರವಾಗಿರಲು ನ ಣ ಲ ಯ ಳ ಶ ಟ ಕಾರಗಳಿಗೆ ದ್ವಿತ್ವವಿಲ್ಲ.**

**ಉದಾಹರಣೆ** || ತಿನಿಸಿದಂ, ಉಣಿಸಿದಂ, ಕೊಲಿಸಿದಂ, ಬಯಿಸಿದಂ, ಉಳಿಸಿದಂ, ನುತಿಸಿದಂ, ನಟ್ಟಿಸಿದಂ || ಮೊದಲಾದುವೇ ಇದಕ್ಕೆ ಲಕ್ಷ್ಯಗಳು.

**ವಿಚಾರ ೬೩**

ಈ ಸೂತ್ರದಲ್ಲಿಯೂ — ' ಇಸುಪಿ ' ಎಂಬುದೊಂದೇ ಪದವಿರುವುದು. ಇದು ' **ಇಸುಪ್ ತತ್ಕರೋತಿ** ' ಇತ್ಯಾದಿ || ೫೩೩ || ನೆಯ ಸೂತ್ರದಿಂದ ವಿಹಿತವಾದುದು. ಸಪ್ತಮ್ಯಂತ ನಿರ್ದೇಶ ವಿರುವುದರಿಂದ ' ಪರೇ ' ಎಂದುಪಸ್ಥಿತವಾಗುವುದು. ' ನ ಣ ಲ ಯ ಳ ತ ಟಃ, ದ್ವಿಃ, ನ ' ಎಂಬ ಪದತ್ರಯವು ಅನುವರ್ತಿಸಲ್ಪಡುವುದು. ತಥಾಚ — ಇಸುಪ್-ಪರಕ ನ ಕಾರಾದಿಗಳಿಗೆ ದ್ವಿತ್ವ ವಿಲ್ಲವೆಂದು ಸೂತ್ರಾರ್ಥವಾಗುವುದು. ಆದುದರಿಂದ ನ ಕಾರಾದಿಗಳಿಗೆ ಕ್ರಮವಾಗಿ ಒಂದೊಂದು ' ಇಸುಪ್ ' ಅಂತವನ್ನು ಉದಾಹರಿಸಿರುವೆವು. ' ಇಸುಪ್ ' ಸಾಮಾನ್ಯವೂ ಇದಕ್ಕೆ ಲಕ್ಷ್ಯವೆಂದು ತೋರಿಸುವದಕ್ಕಾಗಿಯೇ ಕೊನೆಯಲ್ಲಿ ಪುನಃ ' ಹನಿಸಿದಂ, ತಿನಿಸಿದಂ ' ಎಂದು — ' **ಭುಂಜಾದೇರಿಸುಪ್** || ೫೩೯ || ' ಎಂಬ ಸೂತ್ರದಿಂದ ' ಕಿನ, ಹನ ' ಎಂಬ ಶಬ್ದಗಳ ಮೇಲೆ ವಿಹಿತವಾದ ' ಇಸುಪ್ ' ಪ್ರತ್ಯಯದಿಂದ ನಿಷ್ಪನ್ನವಾದ ಶಬ್ದಗಳನ್ನುದಾಹರಿಸಿರುವುದು.

ಈ ಶಾಸ್ತ್ರದಲ್ಲಿ ಕೃತ್ತಾದ ' ಇಸುಪ್ ' — ' **ಇಸುಪ್ತಿನಃ** || ೫೬೮ || ' ಎಂಬ ಸೂತ್ರದಿಂದ ವಿಹಿತವಾಗುವದೊಂದೇ ಅಲ್ಲದೆ ಬೇರೆಯಿಲ್ಲ. ಅದಕ್ಕೆ ಪೂರ್ವಸೂತ್ರದಿಂದಲೇ ನಿಷೇಧವು ಸಿದ್ಧಿಸುವುದು. ಆದುದರಿಂದ ಇಲ್ಲಿ ಕೃದತಿರಿಕ್ತವಾದ —' **ಇಸುಪ್ತತ್ಕರೋತಿ ಭಾವೇ ಲ್ಯುಟೋಽಶಯುನಾದೇರ್ಲುಪ್ತ ದೋಃ** || ೫೩೩ || ' ಇತ್ಯಾದಿ ಸೂತ್ರಗಳಿಂದ ಆಖ್ಯಾತ ಪ್ರಕರಣದಲ್ಲಿ ವಿಧಿಸುವ ಇಸುಪ್-ಸಾಮಾನ್ಯಕ್ಕೂ ಗ್ರಹಣವೆಂದು ತಿಳಿಯುವುದು. ಆದುದರಿಂದ ಈ ಇಸುಪ್-ಅಂತಗಳು ಆಖ್ಯಾತ-ಪ್ರತ್ಯಯಗಳನ್ನು ಹೊಂದುವುದಕ್ಕೆ ಯೋಗ್ಯವಾದ ಪ್ರಕೃತಿಗಳಾಗುವುವು. ಆದುದರಿಂದಲೇ ಇಲ್ಲಿ — ' ತಿನಿಸಿದಂ, ಉಣಿಸಿದಂ ' ಮೊದಲಾದ ಆಖ್ಯಾತ-ಪ್ರತ್ಯಯಾಂತಗಳೇ ಉದಾಹರಿಸಲ್ಪಟ್ಟಿವೆ.

**ಅವತಾರಿಕೆ ೬೪**

ಹಿಂದೆ — ' **ಕೃತಿ** ' ಎಂಬುದರಿಂದ ಸ್ವರಾದಿಕೃತ್ಸಾಮಾನ್ಯದಲ್ಲಿಯೂ ದ್ವಿತ್ವವು ನಿತ್ಯವಾಗಿ ನಿಷೇಧಿಸಲ್ಪಟ್ಟಿತು. ಈಗ ಕೃದ್ವಿಶೇಷದಲ್ಲಿ-ಸ್ಥಾನವಿಶೇಷದಲ್ಲಿ-ವಿಕಲ್ಪವಾಗಿ ನಿಷೇಧಿಸುತ್ತಾನೆ.

**ಸೂತ್ರಂ || ಯೋ ವಾಲಿ || ೬೪ ||**

**ಅರ್ಥ || ಯ ಕಾರಾಂತ ಧಾತುವಿನ ಯ ಕಾರಕ್ಕೆ ಅಲ್ ಪ್ರತ್ಯಯವು ಪರವಾಗಿರಲು ' ಕೃತಿ ' ಎಂಬ ಸೂತ್ರದಿಂದ ಪ್ರಾಪ್ತವಾದ ನಿಷೇಧವು ವಿಕಲ್ಪವಾಗಿ ಬರುವುದು.**

**ಉದಾಹರಣೆ** || ಪೊಯ್ + ಅಲೊಡಂ = ಪೊಯಲೊಡಂ, ಪೊಯ್ಯಲೊಡಂ || ಹೀಗೆಯೇ ಬಯಲೊಡಂ, ಬಯ್ಯಲೊಡಂ || ಮೊದಲಾದ ಕೃತ್-ಅಲ್ ಪರಕವಾದುವು ಇದಕ್ಕೆ ಲಕ್ಷ್ಯಗಳು. ನಿಷೇಧವು ವಿಕಲ್ಪವೆಂದು ಹೇಳಿರುವುದರಿಂದ ನಿಷೇಧವು ಪ್ರವರ್ತಿಸದ ಪಕ್ಷದಲ್ಲಿ ವಿಧಿಸೂತ್ರದಿಂದ ದ್ವಿತ್ವವು ಬರುವುದು. ಆದುದರಿಂದ ಎರಡೆರಡು ರೂಪಗಳಾಗುವುವೆಂದು ತಿಳಿಯಬೇಕು.

**ವಿಚಾರ ೬೪**

ಈ ಸೂತ್ರದಲ್ಲಿ ' ಯಃ, ವಾ, ಅಲಿ ' ಎಂದು ಪದತ್ರಯವಿರುವುದು. ಈ ಸೂತ್ರವು —

'**ವಿಧಿರ್ವಾ ಪ್ರತಿಷೇಧೋ ವಾ ಅನಂತರಸ್ಯ ಭವತಿ**' ಎಂಬ ನ್ಯಾಯದಿಂದ ಸಾಮಾನ್ಯವಾಗಿ '**ಕೃತಿ**' ಎಂಬುದರಿಂದ ಪ್ರಾಪ್ತವಾದ ನಿಷೇಧಕ್ಕೆ ವೈಕಲ್ಪಿಕತ್ವವನ್ನು ಬೋಧಿಸುವುದು. ಆದುದರಿಂದ ಇದು ಕೃತ್-ಅಲ್-ವಿಷಯಕವೆಂದು ತಿಳಿಯುವುದು. ಇಲ್ಲಿಯೂ 'ನ, ದ್ವಿಃ' ಎಂಬ ಪದಗಳನ್ನು ಸಂಬಂಧಿಸಿಕೊಳ್ಳುವುದು. ಆದುದರಿಂದ ಯ ಕಾರಕ್ಕೆ ಕೃತ್-ಅಲ್ ಪರವಾಗಲು ದ್ವಿತ್ವ-ನಿಷೇಧವು ವಿಕಲ್ಪವಾಗಿ ಬರುವುದೆಂದು ಸೂತ್ರಾರ್ಥವಾಗುವುದು. ಇಲ್ಲಿ ನಿಷೇಧವು ವಿಕಲ್ಪವೆಂದರೂ ದ್ವಿತ್ವವು ವಿಕಲ್ಪವೆಂದರೂ ಫಲದಲ್ಲಿ ಒಂದೇ ಆಗಿರುವುದೆಂದು ತಿಳಿದು ದ್ವಿತ್ವ ತ-ದ ಭಾವಘಟಿತವಾದ ರೂಪದ್ವಯವೂ ಉದಾಹರಿಸಲ್ಪಟ್ಟಿದೆ.

ಇಲ್ಲಿ ನಿಮಿತ್ತವಾದ ಅಲ್ — '**ಅಲಹಾರ್ಥೇ || ೫೮೫ ||**' ಮೊದಲಾದ ಸೂತ್ರಗಳಿಂದ ವಿಹಿತವಾಗುವ ಕೃತ್ತೇ ಗ್ರಹಿಸಲ್ಪಡಬೇಕೆಂಬ ತಾತ್ಪರ್ಯದಿಂದ ಉದಾಹರಣೆಗಳಲ್ಲಿ 'ಒಡಂ' ಶಬ್ದವು ಪ್ರಯೋಗಿಸಲ್ಪಟ್ಟಿರುವುದು. ಇದರಿಂದ ತಿಙ್-ಅಲ್-ವಿಷಯದಲ್ಲಿ — '**ಹ್ರಸ್ವಾನ್ನಣಲ ಯಳತಟಃ**' ಇತ್ಯಾದಿ ಸೂತ್ರದಿಂದ ನಿತ್ಯವಾಗಿ ದ್ವಿತ್ವವೇ ಬರುವುದೆಂದು 'ಪೊಯ್ಯಲ್ವೇಡ, ಬಯ್ಯಲ್ವೇಡ' ಮೊದಲಾದ 'ಬೇಡ' ಶಬ್ದಘಟಿತ ಪ್ರಯೋಗಗಳನ್ನು ನೋಡಿಕೊಳ್ಳುವುದು.

**ಶಾಸನ**ದಲ್ಲಿ — 'ಗೆಯಲೊಡಂ, ಗೆಯ್ಯಲೊಡಂ' ಎಂಬವು ಈ ಸೂತ್ರಕ್ಕೆ ಲಕ್ಷ್ಯಗಳಾಗಿ ತೋರಿಸಲ್ಪಟ್ಟಿರುವುದು. ಆದರೆ ಇವು '**ವಾರಯ್ಗೆಯಃ || ೫೬ ||**' ಎಂಬ ಸೂತ್ರದಲ್ಲಿ ಸಾಕ್ಷಾತ್ತಾಗಿ 'ಗೆಯ್' ಧಾತು ನಿರ್ದೇಶಿಸಿರುವುದರಿಂದ ಆ ಸೂತ್ರಕ್ಕೇ ವಿಷಯಗಳಾದ್ದರಿಂದ ಇಲ್ಲಿ ಹೇಳುವುದು ಉಚಿತವಲ್ಲವೆಂದು ಈ ಗ್ರಂಥದಲ್ಲಿ ಅವನ್ನು ಬಿಟ್ಟಿರುವೆವು. ಹೀಗೆಯೇ ಪ್ರತ್ಯುದಾಹರಣೆಯನ್ನು ತೋರಿಸುವಾಗ ಕೊಟ್ಟಿರುವ '**ಗೆಯ್ಯುತ್ತೆ**' ಎಂಬುದರ ವಿಷಯದಲ್ಲಿಯೂ ತಿಳಿಯುವುದು.

ಈ ಸೂತ್ರದಲ್ಲಿ 'ಯಃ' ಎಂದು ಉದ್ದೇಶ್ಯವನ್ನು ತೋರಿಸಿರುವುದರಿಂದ – 'ತಿನಲೊಡಂ ಉಣಲೊಡಂ' ಮೊದಲಾದುವುಗಳಲ್ಲಿ ನಿಷೇಧವು ನಿತ್ಯವಾಗಿ ಬಂದಿರುವುದು. 'ಅಲಿ' ಎಂದು ಹೇಳಿರುವುದರಿಂದ 'ಪೊಯುತ್ತೆ, ಕೊಯುತ್ತೆ' ಮೊದಲಾದವುಗಳಲ್ಲಿಯೂ ನಿತ್ಯನಿಷೇಧವೆಂದು ತಿಳಿಯಬೇಕು.

**ಅವತಾರಿಕೆ ೬೫**

ಪೂರ್ವದಲ್ಲಿ — '**ಹ್ರಸ್ವಾತ್ ನ ಣ ಲ ಯ ಳ ತ ಟಃ**' ಇತ್ಯಾದಿ ಸೂತ್ರದಿಂದ ಕೆಲವು ವ್ಯಂಜನಾಂತಗಳಿಗೆ ಸ್ವರವು ಪರವಾಗಿರಲು ದ್ವಿತ್ವವು ಬರುವುದೆಂದು ಹೇಳಿ ಅತಿಪ್ರಸಕ್ತಿ ವಾರಣಾರ್ಥವಾಗಿ '**ನ ಸಮಾಸೇ**' ಮೊದಲಾದ ನಿಷೇಧ-ಸೂತ್ರಗಳೂ ಹೇಳಲ್ಪಟ್ಟವು. ಈ ನಿಷೇಧವೂ ಅತಿಪ್ರಸಕ್ತವಾಗಲು ಪ್ರತಿಪ್ರಸವಾರ್ಥವಾಗಿ — '**ನೆಯುಯ್ಯುಯ್ಯುಯಃ**' ಎಂಬ ಸೂತ್ರವು ಪ್ರಾರಂಭಿಸಲ್ಪಟ್ಟಿತು. ಅನಂತರದಲ್ಲಿ '**ಕೃತಿ**' ಎಂಬ ಸೂತ್ರದಿಂದ 'ಗೆಯ್' ಧಾತುವಿಗೆ ಕೃತ್ತಿನಲ್ಲಿ ನಿಷೇಧವೂ ತಿಙ್-ವಿಷಯದಲ್ಲಿ ನಿತ್ಯವಾಗಿ ದ್ವಿತ್ವವೂ 'ಆರಯ್' ಧಾತುವನೇಕ ಸ್ವರವಾದುದರಿಂದ ತಿಙ್-ಕೃತ್ತುಗಳೆರಡರಲ್ಲಿಯೂ ದ್ವಿತ್ವಾಪ್ರಾಪ್ತಿಯೂ ಪ್ರಸಕ್ತವಾಗಲು — ಉಭಯತ್ರ ವಿಕಲ್ಪವಿಧಾನಾರ್ಥವಾಗಿ — '**ವಾರಯ್ಗೆಯಃ**' ಎಂಬ ಸೂತ್ರವು ಪ್ರಾರಂಭಿಸಲ್ಪಟ್ಟಿತು. ಅನಂತರದಲ್ಲಿ ಲಿಂಗಾಂತ್ಯಗಳಲ್ಲದ ಕೆಲವು ವ್ಯಂಜನಗಳಿಗೂ ದ್ವಿತ್ವವು ಬರಬೇಕೆಂದು –

'**ಇತಃ ಪ್ರೋಽಚಿ || ಕೋ ದಪಶ್ಚ ತಿಙಃ || ತೋರ್ನಪಃ ||**' ಎಂಬ ಸೂತ್ರಗಳು ಹೇಳಲ್ಪಟ್ಟುವು. ಇವೆಲ್ಲ ಪೂರ್ವಪದ ಪ್ರಕೃತಿಸ್ಥವರ್ಣೋದ್ದೇಶ್ಯಕವೆಂದು ಆಯಾ ಸೂತ್ರಸಂದರ್ಭ ಪರ್ಯಾಲೋಚನೆಯಿಂದ ತಿಳಿದು ಬರುವುದು. ಈಗ ಪೂರ್ವಪದಾಂತ್ಯ ವ್ಯಂಜನದ ಮುಂದಿರುವ ಮುಂದಿನ ಪದದ ಆದಿಯ ವ್ಯಂಜನಕ್ಕೆ ದ್ವಿತ್ವವನ್ನು ಹೇಳುತ್ತಾನೆ.

**ಸೂತ್ರಂ || ರೋ ದ್ವಿರ್ವ್ಯಂಜನಸ್ಯಾಹಾದೇಃ || ೬೫ ||**

**ಅರ್ಥ || ರೇಫದ ಮುಂದಿರುವ ಹ, ೞ, ಳ ಗಳನ್ನು ಬಿಟ್ಟುಳಿದ ವ್ಯಂಜನಕ್ಕೆ ದ್ವಿತ್ವವು ಬರುವುದು.**

**ಉದಾಹರಣೆ ||** ಕುಳಿರ್ + ಕೋಡುಗುಂ = ಕುಳಿರ್ಕ್ಕೋಡುಗಂ || ಹೀಗೆಯೇ ಇವರ್ಕ್ಖಂಸಿದರ್, ಉಗ್ರರ್ಗ್ಗಳ್, ಸುರರ್ಗ್ಘನಮಹಿಮರ್, ಜಿನರ್ಙ್ಙವನಪಂಡಿತರ್, ಬುಧರ್ಚ್ಚದುರರ್, ಇವರ್ಚ್ಛತ್ರರ್, ಸುರರ್ಜ್ಜಯಿಸಿದರ್, ಅಲರ್ಝ್ಝಷಕೇತನಂಗೆ, ಅವರ್ಞ್ಞಕಾರಮನುಚ್ಚರಿಸಿದರ್, ಬುಧರ್ಟ್ಟಕಿಸಿದರ್, ಬಟರ್ಠ್ಠಣದೊಳ್, ಬಡಗರ್ಡ್ಡೊಂಬರ್, ನುಡಿವರ್ಢ್ಢಾಳಕರ್, ಅವರ್ಣ್ಣಕಾರಮಂ ಬರೆದರ್, ಸೂತರ್ತ್ತಂದರ್, ಪರರ್ತ್ಥಟ್ಟುತಾರಾದರ್, ನೃಪರ್ದ್ದಾನಶೂರರ್, ವಣಿಜರ್ಧ್ಧನವಂತರ್, ಪಂಡಿತರ್ನ್ನೀತಿವಂತರ್, ಇವರ್ಪ್ಪಂಡಿತರ್, ಅಲರ್ಫ್ಫಲಮಾದುದು, ಬಂದರ್ಬ್ಬಟ್ಟೆಗರ್, ಸತಿಯರ್ಭ್ಭೀರುಗಳ್, ಚಪಲೆಯರ್ಮ್ಮಾನಿನಿಯರ್, ಪಾರ್ವರ್ಯ್ಯಾಜಕರ್, ವಿದ್ವಾಂಸರ್ಲ್ಲಕ್ಷಣಿಯರ್, ಗಾಯಕರ್ವ್ವಾದಕರ್, ಕ್ಷತ್ರಿಯರ್ಶ್ಶೂರರ್, ನಪುಂಸಕರ್ಷ್ಷಂಡರ್, ಋಷಿಯರ್ಸ್ಸಾಧುಗಳ್ || ಮೊದಲಾದುವು ಇವಕ್ಕೆ ಲಕ್ಷ್ಯಗಳು.

**ವಿಚಾರ ೬೫**

ಈ ಸೂತ್ರದಲ್ಲಿ ' ರಃ, ದ್ವಿಃ, ವ್ಯಂಜನಸ್ಯ, ಅಹಾದೇಃ ' ಎಂದು ನಾಲ್ಕು ಪದಗಳಿರುವುವು. ' ರಃ ' ಎಂಬುದು ರ ವರ್ಣಬೋಧಕವಾದ ಪಂಚಮ್ಯಂತಪದವು. ಆದುದರಿಂದ ' ಉತ್ತರಸ್ಯ ' ಎಂದು ಲಬ್ಧವಾಗುವುದು. ಇದನ್ನೂ ' ಅಹಾದೇಃ ' ಎಂಬುದನ್ನೂ ' ವ್ಯಂಜನಸ್ಯ ' ಎಂಬುದಕ್ಕೆ ವಿಶೇಷಣ ಮಾಡುವುದು. ' ಅಹಾದೇಃ ' ಎಂದರೆ ' ವರ್ಣಮಾಲೆಯಲ್ಲಿ ಪಠಿತವಾಗಿರುವ ಹ, ೞ, ಳ ಕಾರಗಳನ್ನು ಬಿಟ್ಟು ' ಎಂದರ್ಥವು. ಇಲ್ಲಿ ' ದ್ವಿಃ ' ಎಂಬುದು ಪೂರ್ವ ಸೂತ್ರದಿಂದ ಅನುವರ್ತಿಸುತ್ತಿದ್ದರೂ ಪುನಃ ' ದ್ವಿಃ ' ಎಂದು ಹೇಳಿರುವುದರಿಂದ ' ನ ' ಎನ್ನುವುದೇ ಆಗಲಿ, ' ವಾ ' ಎನ್ನುವುದೇ ಆಗಲಿ, ಸಂಬಂಧಿಸಲಾಗದೆಂದು ತಾತ್ಪರ್ಯವಾಗುವುದು. ಆದುದರಿಂದ ಈ ದ್ವಿತ್ವವು ನಿತ್ಯವೆಂದು ತೋರುವುದು.. ತಥಾಚ — ರೇಫದ ಮುಂದಿರುವ ಹ, ೞ, ಳ ಕಾರ ವರ್ಜಿತ ವ್ಯಂಜನಕ್ಕೆ ನಿತ್ಯವಾಗಿ ದ್ವಿತ್ವವು ಬರುವುದೆಂದು ಸೂತ್ರಾರ್ಥವಾಗುವುದು. ಆದುದರಿಂದಲೆ — ಪ್ರತಿವ್ಯಂಜನಕ್ಕೂ ಕ್ರಮವಾಗಿ ಒಂದೊಂದು ಉದಾಹರಣೆ ತೋರಿಸಲ್ಪಟ್ಟಿದೆ. ಆದರೆ ಇಲ್ಲಿ ರೇಫವು ವ್ಯಂಜನಾಂತರ್ಭೂತವಾಗಿದ್ದರೂ ಅದನ್ನು ದ್ವಿತ್ವಕ್ಕೆ ನಿಮಿತ್ತವಾಗಿ ತೆಗೆದುಕೊಂಡಿರುವುದರಿಂದ ಅದಕ್ಕೆ ಈ ಸೂತ್ರದಲ್ಲಿ ಉದ್ದೇಶ್ಯತ್ವವಿಲ್ಲವೆಂದು ಅದಕ್ಕೆ ಉದಾಹರಣೆಯನ್ನು ಕೊಟ್ಟಿಲ್ಲ. ಎಲ್ಲಿ ಅವುದಕ್ಕೆ ನಿಮಿತ್ತತ್ವವನ್ನು ಹೇಳುವೆವೋ ಅಲ್ಲಿ ಅದಕ್ಕೆ ಉದ್ದೇಶತ್ವವನ್ನು ಹೇಳಲಾಗದೆಂದು **ಪತಂಜಲಿ ಮಹಾಭಾಷ್ಯದಲ್ಲಿ — ' ನ ಹಿ ಕಾರ್ಯೀ ನಿಮಿತ್ತತಯಾ ನಾಶ್ರಿಯತೇ '** ಎಂಬ ನ್ಯಾಯವನ್ನಂಗೀಕರಿಸಿ ಹೇಳಿರುವುದರಿಂದ ಅದರಂತೆ ಇಲ್ಲಿಯೂ ಹೇಳಬೇಕೆಂದು ತಿಳಿಯಬೇಕು. ಆದುದರಿಂದ ' ಇವರ್ ರಮಣಿಯರ್, ಅವರ್ ರಾಮಲಕ್ಷ್ಮಣರ್, ' ಮೊದಲಾದುವು

ಗಳಲ್ಲಿ ರೇಫಕ್ಕೆ ದ್ವಿತ್ವವು ಬಂದಿಲ್ಲ. ಆದುದರಿಂದ ಸಾಮಾನ್ಯವಾಗಿ **ಪಾಣಿನೀಯ** ವ್ಯಾಕರಣದಲ್ಲಿ '**ರೇಫೋಷ್ಮಣಾಮನುನಾಸಿಕ ಪರಸವರ್ಣದ್ವಿತ್ವಾನಿ ನ ಸಂತಿ**' ಎಂದು ಹೇಳಿರುವರು.

ಈ ಸೂತ್ರದಲ್ಲಿ 'ರಃ' ಎಂಬುದನ್ನು ನಿಮಿತ್ತವಾಗಿ ಹೇಳಿರುವುದರಿಂದ 'ಕಯ್ಕೊಂಡು, ಮೆಯ್ಗಲಿ' ಮೊದಲಾದ ಪ್ರಯೋಗಗಳಲ್ಲಿ ಯ ಕಾರದ ಮುಂದಿನ ವ್ಯಂಜನಕ್ಕೆ ದ್ವಿತ್ವವು ಬರುವುದಿಲ್ಲ. 'ವ್ಯಂಜನಸ್ಯ' ಎಂದು ಹೇಳಿರುವುದರಿಂದ — 'ಅಲರಿದು, ಎಲಡೊಳ್' ಮೊದಲಾದ ಪ್ರಯೋಗಗಳಲ್ಲಿ ರೇಫದ ಮುಂದಿನ ಸ್ವರಕ್ಕೆ ದ್ವಿತ್ವವು ಬರುವುದಿಲ್ಲ. 'ಅಹಾದೇಃ' ಎಂದು ಹೇಳಿರುವುದರಿಂದ — 'ಬಂದರ್ಹನುಮಂತರ್, ಇವರ್ಅೋಡಾಡಿದರ್, ಕನ್ನಡಿಗರ್ಕಾರಮನೊಡಂಬಟ್ಟರ್' ಮೊದಲಾದುವುಗಳಲ್ಲಿ ಹ ಕಾರಾದಿಗಳಿಗೆ ದ್ವಿತ್ವವಿಲ್ಲ.

ಇಲ್ಲ ರೇಫದ ಮುಂದಿನ ರೇಫಕ್ಕೆ ದ್ವಿತ್ವವಿಲ್ಲವೆಂಬುದಕ್ಕೆ ಉದಾಹರಿಸಲ್ಪಟ್ಟಿರುವ ಪ್ರಯೋಗಗಳ ವಿಷಯದಲ್ಲಿ **ದರ್ಪಣಕಾರನು** —

ಎರಡುಂ ರೇಫೆಗಳಂತಂ<br>
ದುರವಣೆಯಿಂ ಕೂಡಿದಂತೆವೋಲ್ ಶ್ರುತಿಕಷ್ಟಂ<br>
ಬರೆ ಸಂಧಿಮಾಡಲಾಗದು<br>
ಕರಡೆಯ ಗಿರ್ಗಟದ ದನಿವೊಲಮುರವನೆಂದುಂ ( ಸೂತ್ರ ೬೩ )

ಎಂಬ ಸೂತ್ರವನ್ನು ಹೇಳಿ ಸಂಹಿತೆಯಾಗಿಯೇ ಉಚ್ಚರಿಸಲಾಗದೆಂದು ಹೇಳಿರುವನು. 'ಶ್ರುತಿಕಷ್ಟಂ ಬರೆ' ಎಂದು ಹೇಳಿರುವುದರಿಂದ ರೇಫ ಮಾತ್ರವಲ್ಲದೆ ಇತರ ವ್ಯಂಜನಗಳ ವಿಷಯದಲ್ಲಿಯೂ ಶ್ರುತಿಕಷ್ಟವಾದರೆ ದ್ವಿತ್ವವನ್ನು ಮಾಡಲಾಗದೆಂದು ತಾತ್ಪರ್ಯವನ್ನು ಕಲ್ಪಿಸಬೇಕು. ಮತ್ತು ಇಲ್ಲ ರೇಫರೂಪವಾದ ವ್ಯಂಜನದ ಮುಂದಿನ ವ್ಯಂಜನಕ್ಕೆ ದ್ವಿತ್ವವನ್ನು ಮಾಡಲು ವ್ಯಂಜನತ್ರಯಕ್ಕೆ ಉಚ್ಚಾರಣೆಯಾದಂತೆಯಾಗುವುದು. ಇದರ ಮೇಲೆ ದ್ವಿತ್ವೋದ್ದೇಶ್ಯವಾದ ವ್ಯಂಜನಕ್ಕೆ ವ್ಯಂಜನವು ಪರದಲ್ಲಿರಲು ನಾಲ್ಕು ವ್ಯಂಜನಗಳಾಗುವುವು. ಇವನ್ನು ಉಚ್ಚರಿಸಲು ಅತ್ಯಂತ ಶ್ರುತಿಕಷ್ಟವಲ್ಲದೆ ನಾಲ್ಕಕ್ಕೂ ಸ್ಪಷ್ಟೋಚ್ಚಾರಣೆಯಾಗುವುದೇ ಇಲ್ಲವಾದುದರಿಂದ ಇಲ್ಲಿ ಸ್ವರವು ಪರವಾಗಿರುವಾಗಲೇ ದ್ವಿತ್ವವು ಬರುವುದೆಂದು ತಿಳಿಯಬೇಕು. **ಮಹಾಭಾಷ್ಯಾಧಿಕಾರ**ರೂ ದ್ವಿತ್ವಾನವಸ್ಥೆಯನ್ನು ಶಂಕಿಸಿ ಸ್ವರಾವ್ಯವಹಿತವಾಗಿ ಮೂರು ವ್ಯಂಜನಕ್ಕಿಂತಲೂ ಹೆಚ್ಚು ವ್ಯಂಜನೋಚ್ಚಾರಣದಲ್ಲಿ ಪ್ರಯೋಜನವಿಲ್ಲವೆಂದು ತ್ರಿಪ್ರಭೃತಿವ್ಯಂಜನಗಳಿದ್ದರೆ ದ್ವಿತ್ವವು ಬರುವುದಿಲ್ಲವೆಂದು ಸಮಾಧಾನವನ್ನು ಹೇಳಿರುವರು. ಅದರಂತೆ ಇಲ್ಲಿಯೂ ಮೂರು ವ್ಯಂಜನಕ್ಕಿಂತಲೂ ಹೆಚ್ಚಾಗಿ ಸ್ವರವ್ಯವಧಾನವಿಲ್ಲದೆ ಉಚ್ಚರಿಸಲಾಗದೆಂದಂಗೀಕರಿಸಿ — 'ಇವರ್ ಭ್ರಷ್ಟರ್, ಅವರ್ ಕ್ಷತ್ರಿಯರ್' ಮೊದಲಾದ ಪ್ರಯೋಗಗಳಲ್ಲ ದ್ವಿತ್ವವನ್ನು ಮಾಡಲಾಗದು.

ಇಲ್ಲ ಉದಾಹರಣೆಗಳನ್ನು ಕೊಡುವಾಗ ಮಹಾಪ್ರಾಣಾಕ್ಷರಗಳಿಗೂ ಕೊಟ್ಟಿರುವುದು. ಆದರೆ ಮಹಾಪ್ರಾಣಗಳಿಗೆ ದ್ವಿತ್ವವು ಬರಲು ಎರಡು ಮಹಾಪ್ರಾಣಗಳನ್ನು ಉಚ್ಚರಿಸಬೇಕಾಗುವುದು. ಇದು ಶ್ರುತಿಕಷ್ಟವಾಗಿ ತೋರುವುದು. ಇಂತಹ ಸಂದರ್ಭದಲ್ಲಿ ಸಂಸ್ಕೃತ ವ್ಯಾಕರಣಕಾರರು ಒಂದಕ್ಕೆ ಅಲ್ಪಪ್ರಾಣಾದೇಶವು ಬರುವಂತೆ–'**ಖರಿಚ** ||೮-೪-೫೫|| **ಝಲಾಂಜಶೋಽನ್ತೇ** ||೮-೨-೩೬||

**ಝಲಾಂಜಶ್‌ಝಶಿ || ೮-೪-೫೩ ||**' ಮೊದಲಾದ ಸೂತ್ರಗಳನ್ನು ಕಲ್ಪಿಸಿಕೊಂಡಿರುವರು. ಈ ಭಾಷಾ-ವ್ಯಾಕರಣದಲ್ಲಿ ಅಂತಹ ಕಲ್ಪನೆಗಳಾವುವೂ ಇಲ್ಲದಿದ್ದರೂ ಉಚ್ಚಾರಣ ಸೌಕರ್ಯಕ್ಕಾಗಿ ದ್ವಿರುಕ್ತವಾದುವರಲ್ಲಿ ಒಂದನ್ನು ಅಲ್ಪಪ್ರಾಣವನ್ನಾಗಿ ಉಚ್ಚರಿಸಬೇಕೆಂದು ತಿಳಿಯುವುದು. ಅಥವಾ **ಶಾಸನಕಾರನು** ತದ್ಭವ ಪ್ರಕರಣಸ್ಥ — '**ಬವೋರ್ವಃ || ೧೪೪ ||**' ಎಂಬ ಸೂತ್ರ ವ್ಯಾಖ್ಯಾನದಲ್ಲಿ ಪ್ರಯೋಗಾನುಸಾರವಾಗಿ ಕರ್ಣಾಟಕ ಶಬ್ದಗತವಾದ ಮಕಾರಕ್ಕೂ ವಕಾರಾದೇಶವನ್ನಂಗೀಕರಿಸಬೇಕೆಂದು ಹೇಳಿರುವುದರಿಂದ ಅದರಂತೆ —'**ದ್ವಿತೀಯಸ್ಯ ಪ್ರಥಮೋ ವರ್ಗಾಣಾಂ || ೧೪೨ || ತೃತೀಯಃ ಪ್ರಥಮಚತುರ್ಥಯೋಃ || ೧೪೩ ||**' ಮೊದಲಾದ ಸೂತ್ರಗಳಿಗೂ ಭಾಷಾ-ಶಬ್ದಗತ ವರ್ಣವಿಷಯಕತ್ವವನ್ನು ಕಲ್ಪಿಸಿ ಬಹುಳಗ್ರಹಣದಿಂದ ವ್ಯವಸ್ಥೆ ಮಾಡಿಕೊಳ್ಳಬೇಕು. ಆದುದರಿಂದ ಹಾಗೆಯೇ ಈ ಪುಸ್ತಕದಲ್ಲಿ ಬರೆಯಲ್ಪಟ್ಟಿದೆ.

ಇಲ್ಲಿ 'ಕುಳಿರ್ಕೊರ್ಡುಗಂ' ಎಂದರೆ ಶೀತವಾಗಿ ಆಗುತ್ತೆಂದರ್ಥವು. ಕೆಲವರು — 'ಕುಳಿರ್+ಕೋಡು' ಎಂಬೆರಡೂ ಶೈತ್ಯವಾಚಿಗಳಾದ ಬೇರೆ ಬೇರೆ ಧಾತುಗಳು; ಇವೆರಡನ್ನೂ ಮಹಾಕವಿಗಳು —

ಮಿಳಿರ್ವೆಳಪಳಿರ್ದೊರಂಗಲ ಬಿ
ಜ್ಜಳಿಗೆಯ ಸುಟಿಸುಟಿದು ಪಾಱುವೆಳಗಿಳಿಗಳ ಸು
ತ್ತರ್ಗಳಿಗೊಂಡೆಱಂಕೆಯೆಲರಿಂ
ಕುಳಿರ್ದಿರ್ದು ಮೆಯ್ ಬನದೊಳೊಯ್ಯನಾ ಅರಮಗನಾ

ತೀಡುವ ತಣ್ಣನಸ್ಪ ನಱುಗಂಪಿನೆಲರ್ಗ್ಗೆದಿರಾಂತು ತಣ್ಣೆಲರ್-
ಗೂಡಿ ಕುಳಿರ್ವ್ವನುಣ್ಬುಱಲೊಳೊಯ್ಯನೆ ಮೆಯ್ಯನಮರ್ಚ್ಚಿ ತುಂಬಿ ತು
ಳ್ಕಾಡುವ ಮಾಡುವೊಚ್ಚಗಳ ಕೋಡುವ ಸೀರ್ಗ್ಗಳನೀಂಟಿ ಮಿಂದು ಮು
ಟ್ಕಾಡಿ ಬಟಲ್ಕೆಯುಂ ಕಳೆವರಾವಗಮಿಟ್ಟಳಮಲ್ಲಿ ಬಟ್ಟಿಗರ್

ಎಂಬ ಪದ್ಯಗಳಲ್ಲಿ ಬೇರೆ ಬೇರೆ ಪ್ರಯೋಗಿಸಿರುವರು. ಹಾಗೆಯೇ ಕೆಲವರು —

ಇಸಿತಾನುಂ ಕಾಲಮೋರಂತಿರೆಯಗಣಿತಜನ್ಮಾಟವೀಮಧ್ಯದೊಳ್ ಕೆ
ಮ್ಮನೆ ಕಣ್ಗೆಟ್ಟನ್ಯಮಾರ್ಗ್ಗಾಚರಣವಿಧಿಗಳೊಳ್ ಪೊರ್ದ್ದಿ ದುರ್ಬ್ಬಾವದಿಂದಂ
ಘನಮಿಥ್ಯಾತ್ವಾಗ್ನಿ ದಳ್ಳೆಂದಡರ್ದು ಸುಡುವಿನಂ ಬೆಂದನಾಂ ಮುನ್ನಮೀಗಳ್
ಜಿನಪಾದಾಂಭೋಜಯುಗ್ಮಂ ನೆಲಸಿ ಸಲೆ ಕುಳಿರ್ಕೊರ್ಡಿತೆನ್ನಂತರಂಗಂ

ಎಂಬ ಪದ್ಯದಲ್ಲಿ ಸಹಪ್ರಯೋಗವನ್ನು ಮಾಡಿರುವರು. ಇದರಿಂದ 'ಕುಳಿರ್ಕೊರ್ಡು' ಎಂಬ ಸಮುದಾಯವೇ ಶೈತ್ಯವಾಚಕ ಧಾತುವೆಂದು ತಿಳಿಯಬೇಕು. ಅಥವಾ 'ಕುಳಿರ್' ಎಂಬುದು ಹಿಮಾಖ್ಯ ದ್ರವ್ಯವಾಚಕವಲ್ಲದೆ ಧಾತುವಲ್ಲ. ಇದರಲ್ಲಿ —

ಮುಸುಱಿದ ಕುಳಿರೊಳ್ ದೆಸೆಯಾ
ಗಸಮಿಳೆ ಬೆಟ್ಟಡವಿಯೆಂಬಿವೆಂತಾನುಂ ಕಾ
ಣೆಸಲಾರ್ತ್ತುರ್ದಿಲ್ಲಮೆನೆ ಮಾ
ಮಸಗಿರ್ದ್ದುರ್ದು ಮಾಗೆ ಮಾಗೆ ಸೆಕೆವೆಸರಿಳಿಯೊಳ್

ಎಂಬ ಪದ್ಯಸ್ಥ ಪ್ರಯೋಗವೇ ಪ್ರಮಾಣವಾಗಿರುವುದು.

ಇಲ್ಲ ಉದ್ದೇಶ್ಯವಾಗಿ ಪರಿಗಣಿಸಲ್ಪಟ್ಟಿರುವ ವ್ಯಂಜನಗಳಲ್ಲಿ ಕೆಲವು ವ್ಯಂಜನಾದಿಗಳಾದ ಪದಗಳು ಸಂಭವಿಸುವುದಿಲ್ಲ. ಆದಾಗ್ಯೂ ಕೆಲವು ಕಲ್ಪಿಸಿ ಉದಾಹರಿಸಲ್ಪಟ್ಟಿವೆ. 'ಜನರ್ಜವನ ಪಂಡಿತರ್' ಇಲ್ಲ 'ಜವನ' ವೆಂಬುದು ಶಬ್ದಾರ್ಥಕ 'ಜು' ಎಂಬ ಸಂಸ್ಕೃತ ಧಾತುವಿನ ಮೇಲೆ 'ಅನ' ಎಂಬ ಪ್ರತ್ಯಯವು ಬಂದು ನಿಷ್ಪನ್ನವಾಗಿರುವುದು. ಇದು ಶಬ್ದಸಾಮಾನ್ಯ ಬೋಧಕ ವಾಗಿದ್ದರೂ ಪ್ರಕೃತದಲ್ಲ ದಿವ್ಯಧ್ವನಿಬೋಧಕವೆಂದು ತಿಳಿಯುವುದು. ಇದಕ್ಕೆ ಪ್ರಾಚೀನರು ಹೇಳಿರುವ —

ಜವನಂ ಭಾವಲಯಂ ಕಿಂ
ಪವಿಷ್ಟರಂ ಚಮರಮುರತೂರ್ಯ್ಯಾರ್ಪುಶೋಕಂ
ಧವಳಚ್ಛತ್ರಂ ಸುರಪು
ಷ್ಪವೃಷ್ಟಿ ಜಿನನಾಥ ನಿಮ್ಮೊಳೆಸೆವುದು ನಿಚ್ಚಂ

ಎಂಬುದೇ ಪ್ರಮಾಣವಾಗಿರುವುದು 'ಬುಧಟ್ಟೀಕಿಸಿದರ್' ಎಂಬಲ್ಲಿ 'ಟೀಕಾ' ಶಬ್ದವು ವ್ಯಾಖ್ಯಾನಾಪರಪರ್ಯಾಯವಾದ ಒಂದು ಗ್ರಂಥವಿಶೇಷಬೋಧಕವಾದುದು. ಇದರ ಮೇಲೆ 'ಭೋಗಾದಿಭಃ || ೫೩೫ ||' ಎಂಬ ಸೂತ್ರದಿಂದ 'ಇಸು' ಪ್ರತ್ಯಯವನ್ನು ಮಾಡಲು ನಿಷ್ಪನ್ನವಾಗಿರುವುದು. 'ಪರರ್ತ್ಥಟ್ಟಿತಾಜ್ಞಾದರ್' ಎಂಬೆಡೆ ಶತ್ರುಗಳು ಬದ್ಧವಾಗಿಯೂ ಮೇಲೂ ಬಿದ್ದು ನತ್ತರೆಂದರ್ಥವು. ಇದನ್ನು ಭಾಷೆಯಲ್ಲಿ 'ತಾಜಿಸಿಬಲು' ಯೆಂತಲೂ 'ನಾಸುಪ್ಪೊಕ್ಕು' ಎಂತಲೂ ಹೇಳುವುದುಂಟು 'ಧನವಂತರ್' 'ಧನವತ್' ಎಂಬ ಸಂಸ್ಕೃತ ಮತ್ವಂತಕ್ಕೆ ಜಸಂತವದ್ಭ್ರಾತಿದೇಶದಿಂದಾಗಲಿ 'ಧನ' ಶಬ್ದದ ಮೇಲೆ ಮತ್ವರ್ಥದಲ್ಲ ಭಾಷೆಯಲ್ಲಿ ವಿಹಿತ ವಾದ 'ವಂತ' ಪ್ರತ್ಯಯದಿಂದಾಗಲಿ ಸಿದ್ಧವಾದ 'ಧನವಂತ' ಎಂಬ ಲಿಂಗದ ಮೇಲೆ ಬಹುವಚನವಾದ 'ಅರ್' ಪ್ರತ್ಯಯವು ಬಂದು ಸಿದ್ಧವಾಗಿರುವುದು. 'ನೀತಿವಂತರ್' 'ನೀತಿ' ಶಬ್ದದ ಮೇಲೆ ಭಾಷೆಯಲ್ಲಿ ಮತ್ವರ್ಥಕ 'ವಂತ' ಪ್ರತ್ಯಯವನ್ನೂ ಬಹುವಚನದ 'ಅರ್' ಪ್ರತ್ಯಯವನ್ನೂ ಮಾಡಲು ನಿಷ್ಪನ್ನವಾಗಿರುವುದು. ಸಂಸ್ಕೃತ ಮತ್ವಂತಕ್ಕೆ ಜಸಂತವದ್ಭ್ರಾತಿ ದೇಶವನ್ನು ಮಾಡಿದರೆ 'ನೀತಿಮಂತರ್' ಎಂದಾಗಬೇಕು. ಆದುದರಿಂದ ಇಲ್ಲಿ ಆ ಅತಿದೇಶವು ಬರುವುದಿಲ್ಲ. ಹೀಗೆಯೇ ಯಥಾಸಂಭವವಾಗಿ ಪ್ರಕ್ರಿಯಾದಿಕಾರ್ಯಗಳನ್ನು ಊಹಿಸಿ ಶಬ್ದ ನಿಷ್ಪತ್ತಿಯನ್ನು ಮಾಡಿಕೊಳ್ಳುವುದು.

**ಅವತಾರಿಕೆ ೬೬**

ಪೂರ್ವಸೂತ್ರದಲ್ಲಿ ರೇಫದ ಮುಂದಿನ ಹ ಕಾರಾದ್ಯತಿರಿಕ್ತ ವ್ಯಂಜನಕ್ಕೆ ದ್ವಿತ್ವವು ವಿಧಿಸ ಲ್ಪಟ್ಟಿತು. ಈಗ ಲ ಕಾರ ಳ ಕಾರಗಳ ಮುಂದಿರುವ ಅಂತ್ಯಸ್ಥಾವರ್ಜಿತ ಹ ಕಾರಾದ್ಯತಿರಿಕ್ತ ವ್ಯಂಜನಕ್ಕೆ ದ್ವಿತ್ವವು ಬರುವುದೆಂದು ಹೇಳುತ್ತಾನೆ.

**ಸೂತ್ರಂ || ಲಳೋಽನಂತಸ್ಥಾಯಾಶ್ಚ || ೬೬ ||**

**ಅರ್ಥ || ಲ ಕಾರ ಳ ಕಾರಗಳ ಮುಂದಿರುವ ಅಂತಸ್ಥಗಳಾದ ಯ ರ ಲ ವ ಗಳನ್ನೂ ಹ ಕಾರಾದಿಗಳನ್ನೂ ಬಿಟ್ಟುಳಿದ ವ್ಯಂಜನಕ್ಕೆ ದ್ವಿತ್ವವು ಬರುವುದು.**

**ಉದಾಹರಣೆ** || ಕಲ್ + ಕಡಿಯಾದುದು = ಕಲ್ಕ್ಕಡಿಯಾದುದು || ಹೀಗೆಯೇ ಸಿಲ್ತ್ತಂ, ಬಲ್ತ್ತಂ, ಬಲ್ಸ್ಸಾಹಸಿ, ಮುಳ್ಮ್ಮೊಂಗಲ್, ಆಳ್ತ್ತನಂ, ಕಳ್ಗ್ಗುಡಿವಂ || ಮೊದಲಾದುವೇ ಈ ಸೂತ್ರಕ್ಕೆ ಲಕ್ಷ್ಯಗಳಾಗುವುವು.

**ವಿಚಾರ ೭೭**

ಈ ಸೂತ್ರದಲ್ಲಿ — 'ಲಳಃ, ಅನಂತಸ್ಥಾಯಾಃ, ಚ' ಎಂದು ಮೂರು ಪದಗಳಿರುವುವು. 'ಲಳಃ' ಎಂಬುದು 'ಲ್, ಳ್' ಎಂಬ ವರ್ಣಬೋಧಕವಾದುವುಗಳಿಗೆ ಸಮಾಹಾರದ್ವಂದ್ವ ಸಮಾಸ ಮಾಡಿ ಪಂಚಮ್ಯಂತವಾಗಿ ನಿರ್ದೇಶಿಸಲ್ಪಟ್ಟ ಪದವು. ಆದುದರಿಂದ 'ಉತ್ತರಸ್ಯ' ಎಂದು ಲಭ್ಯವಾಗುವುದು. ಇದನ್ನು ಚ ಕಾರ ಬಲದಿಂದ ಅನುವರ್ತಿತವಾದ 'ವ್ಯಂಜನಸ್ಯ' ಎಂಬುದಕ್ಕೆ ವಿಶೇಷಣ ಮಾಡುವುದು. ಮತ್ತು ಚ ಕಾರದಿಂದ 'ಅಹಾದೇಃ, ದ್ವಿಃ' ಎಂಬ ಪದಗಳನ್ನೂ ಅನುವರ್ತಿಸಿ, 'ಅಹಾದೇಃ, ಅನಂತಸ್ಥಾಯಾಃ' ಎಂಬೆರಡನ್ನೂ 'ನಞ್' ತತ್ಪುರುಷ ಸಮಾಸವನ್ನು ಮಾಡಿ ವ್ಯಂಜನಕ್ಕೆ ವಿಶೇಷಣ ಮಾಡುವುದು. 'ಅಂತಸ್ಥಾ' ಎಂದರೆ 'ಯ ರ ಲ ವ' ಗಳು ಅಹಾದಿ ಎಂದರೆ — ಹ, ಙ, ಳ ವರ್ಣಗಳು; ತಥಾಚ — ಯ ರ ಲ ವ ಗಳನ್ನೂ ಹ, ಙ, ಳ ಗಳನ್ನೂ ಬಿಟ್ಟು ಉಳಿದ ಲ ಕಾರ ಳ ಕಾರಗಳ ಮುಂದಿನ ವ್ಯಂಜನಕ್ಕೆ ದ್ವಿತ್ವವು ಬರುವುದೆಂದು ಸೂತ್ರಾರ್ಥವಾಗುವುದು. ಆದುದರಿಂದ ಲ ಕಾರಕ್ಕೆ ಮೂರೂ ಳ ಕಾರಕ್ಕೆ ಮೂರೂ ಇಲ್ಲಿ ಉದಾಹರಣೆಗಳು ಕೊಡಲ್ಪಟ್ಟಿವೆ. ಹೀಗೆ ಪ್ರಯೋಗದಿಂದ ಇನ್ನೂ ಲ ಕಾರ ಳ ಕಾರಗಳ ಮುಂದಿರುವ ವ್ಯಂಜನಗಳಿಗೆಲ್ಲಾ ಉದಾಹರಣೆಗಳನ್ನು ಊಹಿಸಿಕೊಳ್ಳುವುದು.

ಪೂರ್ವಸೂತ್ರದಲ್ಲಿ — ರೇಫವು ನಿಮಿತ್ತವಾಗಿ ನಿರ್ದೇಶಿಸಲ್ಪಟ್ಟಿರುವುದರಿಂದ ಅದಕ್ಕೆ ಉದ್ದೇಶತ್ವವು ಹೇಗೆ ಇಲ್ಲವೋ ಹಾಗೆಯೇ ಈ ಸೂತ್ರದಲ್ಲಿಯೂ ಲ ಕಾರವನ್ನು ನಿಮಿತ್ತ ಕೋಟಿಯಲ್ಲಿ ಸೇರಿಸಿರುವುದರಿಂದ ಅದಕ್ಕೆ ಉದ್ದೇಶತ್ವವು ಬಾಧಿತವಾಗುವುದೆಂದು ಪ್ರಕೃತಸೂತ್ರದಲ್ಲಿ 'ಅಂತಸ್ಥಾ' ಪದದಿಂದ 'ಯ ರ ಲ ವ' ಗಳನ್ನೇ ಗ್ರಹಿಸಬೇಕೆಂದು ಹೇಳಿರುವುದು ಅಸಂಗತವೆಂದು ತೋರುವುದು. ಆದಾಗ್ಯೂ ಆ ಸೂತ್ರದಲ್ಲಿ ಅವುದಕ್ಕೆ ನಿಮಿತ್ತತ್ವವಿರುವುದೋ ಆ ಸೂತ್ರದಲ್ಲಿ ಅದಕ್ಕೆ ಉದ್ದೇಶತ್ವವಿಲ್ಲವೆಂದು ವ್ಯಾಖ್ಯಾನ ಮಾಡಿರುವುದರಿಂದ ಅಂತಹ ಶಂಕೆಗೆ ಅವಕಾಶವಿಲ್ಲವೆಂದು ತಿಳಿಯಬೇಕು.

ಈ ಸೂತ್ರದಲ್ಲಿ 'ಲಳಃ' ಎಂದು ಹೇಳಿರುವುದರಿಂದ — 'ಅಂತಂ, ಸೋಂತಂ' ಮೊದಲಾದ ಪ್ರಯೋಗಗಳಲ್ಲಿ ನ ಕಾರದ ಮುಂದಿನ ವ್ಯಂಜನಕ್ಕೆ ದ್ವಿತ್ವವಿಲ್ಲ. 'ಅನಂತಸ್ಥಾಯಾಃ' ಎಂದು ಹೇಳಿರುವುದರಿಂದ — 'ಬಲ್ಯತನಂ, ಪೇಲ್ರ್ನಿಮ್ನಂ, ಬಲ್ಲಂಡಂ, ಕಲ್ವಾಲಿಕೆ, ಪೊಗಳ್ಯಶಮಂ, ಇವಳ್ರಮಣಿ, ಪೇಳ್ಲಕ್ಷಣಮಂ, ತೆಳ್ವಸಿಱು' ಮೊದಲಾದ ಪ್ರಯೋಗಗಳಲ್ಲಿ ಲ ಕಾರ ಳ ಕಾರಗಳ ಮುಂದಿನ ಅಂತಸ್ಥವರ್ಣಗಳಿಗೆ ದ್ವಿತ್ವವಿಲ್ಲ. 'ಅಹಾದೇಃ' ಎಂದು ಹೇಳಿರುವುದರಿಂದ 'ಬಲ್ಹಂಸೆ, ಬೀಱ್ಱಿಕಾರಂ, ಮರುಳ್ಱೋಡಗುಂ' ಮೊದಲಾದ ಪ್ರಯೋಗಗಳಲ್ಲಿ ಲ ಳ ಕಾರಗಳ ಮುಂದಿನ ಹ ಕಾರಾದಿಗಳಿಗೆ ದ್ವಿತ್ವವಿಲ್ಲ. ಈ ಸೂತ್ರವನ್ನೂ ಹಿಂದಿನ ಸೂತ್ರದಲ್ಲೇ ಸೇರಿಸದೆ **ಪೃಥಕ್ಸೂತ್ರಮಾಡಿರುವುದರಿಂದ ಪೂರ್ವಸೂತ್ರದಿಂದ** ರೇಫದ ಮುಂದಿನ ಅಂತಸ್ಥಗಳಿಗೂ

ದ್ವಿತ್ವವು ಬರುವುದೆಂದು ಗೊತ್ತಾಗುವುದು. ಆದುದರಿಂದ ‘ ಪಾರ್ವಯ್ಯಾರ್ಜಕರ್ ’ ಮೊದಲಾದುವುಗಳಲ್ಲಿ ದ್ವಿತ್ವವು ಪ್ರವರ್ತಿಸುವುದು.

**ಅವತಾರಿಕೆ ೬೭**

ಇದುವರೆಗೂ ಕೆಲವು ವ್ಯಂಜನದ ಮುಂದಿನ ವ್ಯಂಜನಕ್ಕೆ ಸ್ವರವು ಪರವಾಗಿರಲು ದ್ವಿತ್ವವನ್ನು ವಿಧಿಸಿ, ಈಗ ಸ್ವರದ ಮುಂದಿನ ವ್ಯಂಜನಕ್ಕೆ ವ್ಯಂಜನವು ಪರವಾಗಿರಲು ದ್ವಿತ್ವವನ್ನು ವಿಧಿಸುತ್ತಾನೆ.

**ಸೂತ್ರಂ ॥ ಸ್ವರಾದರೋ ವ್ಯಂಜನೇ ॥ ೬೭ ॥**

**ಅರ್ಥ ॥ ಸ್ವರದ ಮುಂದಿರುವ ರೇಫವರ್ಜಿತ ವ್ಯಂಜನಕ್ಕೆ ವ್ಯಂಜನವು ಪರವಾಗಿರಲು ದ್ವಿತ್ವವು ಬರುವುದು.**

**ಉದಾಹರಣೆ** ॥ ಬರಿಸಿ+ಪ್ರಧಾನರಂ = ಬರಸಿಪ್ಪ್ರಧಾನರಂ, ॥ ಪೋಗೆಯೋ — ಕಂಡುಕ್ಷ್ಕತ್ರಿಯರಂ. ಇದುಸ್ಸ್ವಾದು, ಅದುವ್ವ್ಯವಸಾಯಂ ॥ ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೬೭**

ಇಲ್ಲಿ ‘ ಸ್ವರಾತ್, ಅರಃ, ವ್ಯಂಜನೇ ’ ಎಂದು ಮೂರುಪದಗಳಿರುವುವು. ಪೂರ್ವಸೂತ್ರದಿಂದ ‘ ವ್ಯಂಜನಸ್ಯ, ದ್ವಿಃ ’ ಎಂಬ ಪದದ್ವಯವು ಅನುವರ್ತಿಸಲ್ಪಡುವುದು. ‘ ಸ್ವರಾತ್ ’ ಎಂಬುದು ಪಂಚಮ್ಯಂತನಿರ್ದೇಶವಾದುದರಿಂದ ಉಪಸ್ಥಿತವಾದ ‘ ಉತ್ತರಸ್ಯ ’ ಎಂಬುದನ್ನೂ ‘ ಅರಃ ’ ಎಂಬ ನಞ್-ತತ್ಪುರುಷ ಸಮಾಸ ಸಂಜ್ಞೆಯನ್ನು ಹೊಂದಿದ ಷಷ್ಠ್ಯಂತವನ್ನೂ ವ್ಯಂಜನಕ್ಕೆ ವಿಶೇಷಣ ಮಾಡುವುದು. ‘ ವ್ಯಂಜನೇ ’ ಎಂಬುದು ಸಪ್ತಮ್ಯಂತವಾದುದರಿಂದ ‘ ಪರೇ ’ ಎಂದು ಉಪಸ್ಥಿತವಾಗುವುದು. ತಥಾಚ — ಸ್ವರದ ಮುಂದಿರುವ ರೇಫವರ್ಜಿತ ವ್ಯಂಜನಕ್ಕೆ ವ್ಯಂಜನವು ಪರವಾಗಿರಲು ದ್ವಿತ್ವವು ಬರುವುದೆಂದು ಸೂತ್ರಾರ್ಥವಾಗುವುದು. ಇದರಿಂದ ಸಂಯುಕ್ತಾಕ್ಷರಗಳುಳ್ಳ ಪದಗಳೇ ಈ ಸೂತ್ರಕ್ಕೆ ವಿಷಯಗಳೆಂದು ತೋರುವುದು. ಆದುದರಿಂದ ಇಂತಹ ಪ್ರಯೋಗಗಳಲ್ಲಿ ದ್ವಿತ್ವವಿಧಿ ನಿಷ್ಪ್ರಯೋಜನವೆಂದು **ದರ್ಪಣಕಾರನು** —

ಪರಪದಪೂರ್ವ್ವಂ ದ್ವಿತ್ವಾ
ಕ್ಷರಮಾಗಿರೆ ಪೂರ್ವಪದದ ಚರಮಂ ಪ್ರಸ್ವಾ
ಕ್ಷರಮಾಗೆ ಸಂಧಿದೋಷಂ
ಸರೇಫಮಿದಿರಾಗೆ ಶಿಥಿಲಮೆಂದನುಸರಿಪರ್ (ಸೂತ್ರ ೫೯)

ಎಂಬ ಸೂತ್ರದಿಂದ ಸಂಧಿಕಾರ್ಯಕ್ಕೆ ದೋಷವನ್ನು ಸೂಚಿಸಿ —

ಬರಿಸಿ ಪ್ರಧಾನರಂ ಕು
ಳ್ಳಿರಿಸಿ ಪ್ರಿಯಕುಶಲವಾರ್ತೆಯಂ ನೆಱೆ ಕೇಳ್ದು
ಸ್ಥಿರಮಿರ್ದು ಪ್ರಭು ನುಡಿಯೆ
ಪ್ರರೂಢಮುದನಾದನಾತನೆಂಬುದಮಾರ್ಗಂ

ಎಂಬ ಪದ್ಯವನ್ನುದಾಹರಿಸಿರುವನು. ಇದಕ್ಕೆ ಮೊದಲೇ ಸಂಯುಕ್ತಾಕ್ಷರವಿರುವುದರಿಂದ ಪುನಃ ದ್ವಿತ್ವವನ್ನು ಮಾಡಲು ಪ್ರಯೋಜನವಿಲ್ಲವೆಂದು ತಾತ್ಪರ್ಯವು. ಮತ್ತು ಇಂತಹ ಸಂಯುಕ್ತಾಕ್ಷರ

ಗಳು ರೇಫಶಿರಸ್ಕವಾಗಿದ್ದರೆ ಶೈಥಿಲ್ಯವನ್ನು ಹೇಳಿಕೊಳ್ಳಬೇಕೆಂದು ಹೇಳಿರುವುದರಿಂದ ಸಂಯುಕ್ತಾಕ್ಷರಗಳಿದ್ದರೂ ಪೂರ್ವ ಸ್ವರವು ಗುರುವಲ್ಲವೆಂದು ತಿಳಿದು ವೃತ್ತಲಕ್ಷಣಕ್ಕೆ ಪ್ರಾಪ್ತವಾದ ದೋಷಗಳನ್ನು ಪರಿಹರಿಸಬಹುದೆಂದು ಸೂಚಿತವಾಗುವುದು. ಇದು ಕೇವಲ ಕವಿತಾವಿಷಯವಾದುದರಿಂದ ಶಬ್ದಸಾಧುತ್ವವನ್ನು ಬೋಧಿಸುವ ವ್ಯಾಕರಣದಲ್ಲಿ ಅದರ ವಿಚಾರವನ್ನು ಮಾಡುವುದಿಲ್ಲವೆಂದು ಈ ಸೂತ್ರವನ್ನು ಹೇಳುವ **ಶಾಸನಕಾರ**ನಿಗೆ ಅಭಿಪ್ರಾಯವೆಂದು ತಿಳಿಯಬೇಕು. ಹೀಗೆಯೇ ಕೆಲವು ಸಂಯುಕ್ತಾಕ್ಷರಗಳ ವಿಷಯದಲ್ಲಿ **ದರ್ಪಣಕಾರ**ನು ಶೈಥಿಲ್ಯವನ್ನು ಹೇಳುವನು. **ಶಾಸನಕಾರ**ನು ಶೈಥಿಲ್ಯವೆಂಬುದನ್ನೇ ಹೇಳಿಲ್ಲ. ಆದಾಗ್ಯೂ ಶಬ್ದಸಾಧುತ್ವಾರ್ಥವಾಗಿ ದ್ವಿತ್ವವನ್ನು ಹೇಳದಿದ್ದರೂ ಆಲಂಕಾರಿಕರ ಸಮಯದಿಂದ ಶೈಥಿಲ್ಯವನ್ನೂ ಊಹಿಸಿಕೊಳ್ಳುವುದು. ಇದು **ದರ್ಪಣಕಾರ**ನು ಉದಾಹರಿಸಿರುವ ಪದ್ಯಸ್ಥವಾದ ' ಅಮಾರ್ಗ್ಗಂ ' ಎಂಬ ಪದದಿಂದ ಸೂಚಿತವಾಗುವುದು. **ಶಾಸನಕಾರ**ನು ವ್ಯಂಜನದ್ವಯವಿಷಯದಲ್ಲಿ ಎಲ್ಲಿ ದ್ವಿತ್ವನಿಷೇಧವನ್ನು ಅಂಗೀಕರಿಸುವನೋ ಅಲ್ಲಿ **ದರ್ಪಣಕಾರ**ನ ಮತದಲ್ಲಿ ಶೈಥಿಲ್ಯವನ್ನು ಅಂಗೀಕರಿಸಬೇಕೆಂದು ತಾತ್ಪರ್ಯವನ್ನು ಕಲ್ಪಿಸಬೇಕು.* ಇಲ್ಲಿ ಮತಭೇದಗಳಿರುವುದರಿಂದ ಜೈಮಿನ್ಯಾದಿ ಷಟ್ಪದ ಗ್ರಂಥಗಳಲ್ಲಿ ಯಥೇಚ್ಛೆಯಾಗಿ ಶೈಥಿಲ್ಯವನ್ನಂಗೀಕರಿಸಿರುವರು.

ಇಲ್ಲಿ ' ಸ್ವರಾತ್ ' ಎಂದು ಸಾಮಾನ್ಯವಾಗಿ ಹೇಳಿರುವುದರಿಂದ ದೀರ್ಘಪ್ಲುತಗಳಿಗೂ ಸಂಗ್ರಹ ಬಂದು — ' ಆಳ್ವರಿ, ಕೇಳ್ವಿ, ಆ ಪ್ರಕಾರಂ, ಈ ಸ್ತೋತ್ರ ' ಮೊದಲಾದ ಪ್ರಯೋಗಗಳಲ್ಲಿ ದೀರ್ಘದ ಮುಂದಿನ ವ್ಯಂಜನಕ್ಕೂ ' ಮಗನೇ ಮಗನೇ ತ್ವರಿತಂ ಮಾಡು, ಮಗಳೇ ಮಗಳೇ ಪ್ರಾಕೃತಮನೋದು ' ಮೊದಲಾದ ಪ್ರಯೋಗಗಳಲ್ಲಿ ಪ್ಲುತಗಳ ಮುಂದಿನ ವ್ಯಂಜನಕ್ಕೂ ದ್ವಿತ್ವವು ಪ್ರಸಕ್ತವಾಗುವುದು. ಹಾಗೆಯೇ ಅನುಸ್ವಾರ, ವಿಸರ್ಗಗಳೂ ವ್ಯಂಜನಸ್ಥಾನಿಕವಾದುದರಿಂದ ವ್ಯಂಜನಗಳಾಗುವುವೆಂದು — ' ಪುತ್ರಂಗೆ, ಮಿತ್ರಂಗೆ, ಉಃ ಕೆಟ್ಟಿಂ, ಚಿಃ ಪೆಣನಾದೆಂ ' ಮೊದಲಾದ ಪ್ರಯೋಗಗಳಲ್ಲಿ ಅನುಸ್ವಾರ ವಿಸರ್ಗಗಳಿಗೂ — ' ತೆಙ್ಕಲ್, ಬಿಙ್ಕಂ, ಅಞ್ಚಿ, ಮಞ್ಜಗೆ, ತೊಣ್ಡು, ಬಣ್ಡು, ಕನ್ದಲ್, ತನ್ದಲ್, ಕಮ್ಬಿ, ಇಮ್ಬು, ಮೊದಲಾದ ಪ್ರಯೋಗಗಳಲ್ಲಿಯೂ ಅನುನಾಶಿಕ ವರ್ಣಗಳಿಗೂ ' ಚಕ್ಕುಲಿ, ದೆಕ್ಖಾಳಂ, ಸುಗ್ಗಿ, ಒಗ್ಘರಣೆ, ಅಚ್ಚು, ಪುಚ್ಛಂ, ಸಜ್ಜುಕಂ, ಮಜ್ಝು, ಕಟ್ಟೆಳೆ, ಅಟ್ಠವಣೆ, ಅಡ್ಡಿಕೆ, ಒಡ್ಢಾರಂ, ಕೊತ್ತಲಿ, ಕತ್ಥಳಂ, ಸದ್ದು, ಮದ್ಧಳೆ, ದುಪ್ಪಟಿ, ಪೊಪ್ಫಳಿ, ಕಬ್ಬಿ, ಅಬ್ಭರಣೆ ' ಮೊದಲಾದ ಪ್ರಯೋಗಗಳಲ್ಲಿ ಸ್ವಭಾವವಾಗಿ ದ್ವಿತ್ವವಿಶಿಷ್ಟವಾದ ವ್ಯಂಜನಗಳಿಗೂ ' ಬಯ್ತಲೆ, ಆಯ್ಕಿಲ್, ಉರ್ದು, ಮರ್ದು, ನಿಲ್ಕೆ, ನಲ್ಕೆ, ಕವ್ವರಿ, ಅವ್ವಳಿ ' ಮೊದಲಾದ ಪ್ರಯೋಗಗಳಲ್ಲಿ ಅಂತಸ್ಥಾಕ್ಷರಗಳಿಗೂ ಉಕ್ತನಿಮಿತ್ತಗಳಿರುವುದರಿಂದ ದ್ವಿತ್ವವು ಪ್ರಸಕ್ತವಾಗುವುದು. ಹೀಗೆಯೇ ಪುನಃ ಪುನಃ ದ್ವಿತ್ವವು ಬರಲು ಅನವಸ್ಥೆಯುಂಟಾಗುವುದು. ಎಂದರೆ ಇಂತಹ ಪ್ರಯೋಗಗಳಲ್ಲಿ ಪ್ರಾಚೀನರಿಗೆ ದ್ವಿತ್ವವು ಅಸಮ್ಮತವಾಗಿರುವುದರಿಂದ

---

*** [ ಇಲ್ಲಿ ದರ್ಪಣಕಾರನು ಶೈಥಿಲ್ಯವನ್ನು ಅಂಗೀಕರಿಸಿಲ್ಲ; ಕೆಲವರು ಅಂಗೀಕರಿಸಿರುವರೆಂದು ಮಾತ್ರ ಹೇಳಿರುವನು. ಮತ್ತು ಹೀಗೆ ಪ್ರಯೋಗ ಮಾಡುವುದು ಅಮಾರ್ಗವೆಂದೂ ಅದು 'ಸಂಧಿದೋಷ'ವೆಂಬುದಕ್ಕೆ ಒಳಗಾಗುವುದೆಂದೂ ಸ್ಪಷ್ಟವಾಗಿ ಹೇಳಿದ್ದಾನೆ; ಅದಕ್ಕೆ ಉದಾಹರಣೆಯಾಗಿರುವ ಪದ್ಯವನ್ನು ನೃಪತುಂಗನ ಕವಿರಾಜಮಾರ್ಗದಿಂದ ಎತ್ತಿದ್ದಾನೆ. ಅದರಲ್ಲಿಯೂ ಇದು ಸಂಧಿದೋಷವೆಂದೇ ಹೇಳಲಾಗಿದೆ—ಸಂಪಾದಕ]**

ಈ ಸೂತ್ರದಲ್ಲಿ ಪೂರ್ವಸೂತ್ರದಿಂದ ಮಂಡೂಕಪುತ್ಯಾಶ್ರಯಣವನ್ನು ಮಾಡಿ 'ಹ್ರಸ್ವಾತ್' ಎಂಬುದನ್ನು ಅನುವರ್ತಿಸಿ ಸ್ವರಕ್ಕೆ ವಿಶೇಷಣವನ್ನು ಮಾಡಲು ದೀರ್ಘಪ್ಲುತಗಳಿಗೂ ಅನುಸ್ವಾರ-ವಿಸರ್ಗಗಳನ್ನು ಕಥಂಚಿತ್ ಸ್ವರವೆಂದು ಅಂಗೀಕರಿಸಿರುವುದರಿಂದ ಮುಖ್ಯ ವ್ಯಂಜನತ್ವವಿಲ್ಲವಾದುದರಿಂದ ಅವುಗಳಿಗೂ ಅನುನಾಸಿಕಗಳು ಉಕ್ತಪ್ರಯೋಗಗಳಲ್ಲಿ ಬಿಂದು ಸ್ಥಾನಿಕಗಳಾದುದರಿಂದ— ಸ್ಥಾನಿವದಾದೇಶಃ' ಎಂಬ ಸೂತ್ರದಿಂದ ಜಿಹ್ವಾಮೂಲೀಯೋಪಧ್ಮಾನೀಯಗಳು ವಿಸರ್ಗಸ್ಥಾನಿಕಗಳಾದುದರಿಂದ ವಿಸರ್ಗಗಳೇ ಆಗುವುವೆಂದು **ಕಾತಂತ್ರ** ವ್ಯಾಕರಣದಲ್ಲಿ ಹೇಳಿರುವಂತೆ ಅವೂ ಅನುಸ್ವಾರಗಳಾದುವರಿಂದ, ಅನುಸ್ವಾರಗಳು ಸ್ವರಾತ್ಮಕಗಳಾದುದರಿಂದ, ಆ ಅನುನಾಸಿಕ ವರ್ಣಗಳಿಗೂ ಸ್ವಭಾವವಾಗಿ ದ್ವಿತ್ವವಿಶಿಷ್ಟಗಳಾದ ಕ ಕಾರಾದಿಗಳಿಗೆ ಪುನಃ ಪುನಃ ದ್ವಿತ್ವವನ್ನು ಮಾಡಲು ಅನವಸ್ಥಾದೋಷವು ಪ್ರಸಕ್ತವಾಗುವುದರಿಂದಲೂ ಪ್ರಯೋಜನವಿಲ್ಲದಿರುವುದರಿಂದಲೂ ಆ ಕ ಕಾರಾದಿಗಳಿಗೂ 'ಅರ' ಎಂದು ಹೇಳಿರುವುದರಿಂದ ರೇಫಕ್ಕೂ ಉತ್ತರಸೂತ್ರ ನಿಯಮದಿಂದ ಲ ಕಾರಕ್ಕೂ ದ್ವಿತ್ವವು ನಿಷಿದ್ಧತ್ವವಾಗುವುದರಿಂದ ದೋಷವಿಲ್ಲವೆಂದು ತಿಳಿಯಬೇಕು. ವ ಕಾರಕ್ಕಾದರೂ —'ಎನ್ನನ್ವ್ವವಸಾಯಂ, ತನ್ನ[illegible]ವ್ವಸಾರಂ' ಮೊದಲಾದ ಪ್ರಯೋಗಗಳು ಪ್ರಾಮಾಣಿಕರಿಗೆ ಸಮ್ಮತವಾದುದರಿಂದ ದ್ವಿತ್ವವು ಇಷ್ಟವೇ ಆಗಿರುವುದು. ಯ ಕಾರಮಾತ್ರದಲ್ಲಿ ಅತಿ ಪ್ರಸಕ್ತಿಯು ವಾರಿತವಾಗುವುದಿಲ್ಲವೆಂದು ಈ ಸೂತ್ರದಲ್ಲಿ ಪೂರ್ವಸೂತ್ರದಿಂದ ಸಮುಚ್ಚಯಾರ್ಥಕ ಚ ಕಾರವನ್ನು ಅನುವರ್ತಿಸಿ 'ಅರಃ' ಎಂಬುದಕ್ಕೆ ಸೇರಿಸಿ 'ಅರಶ್ಚ' ಎಂದು ಹೇಳಲು ರೇಫವರ್ಜಿತಸ್ಯ, ಸನ್ನಿಧಾನದಿಂದ ಯ ಕಾರ ವರ್ಜಿತಸ್ಯ ಚ ಎಂದರ್ಥವಾಗಿ ಯ ಕಾರಕ್ಕೂ ವ್ಯಾವರ್ತಿಯುಂಟಾಗುವುದು. ಆದುದರಿಂದ ಯ ಕಾರಕ್ಕೆ ದ್ವಿತ್ವವಿಲ್ಲವೆಂದು ಹೇಳಬೇಕು. ಅಥವಾ ಅನುಷಕ್ತವಾದ ಚ ಕಾರಕ್ಕೆ ಬಹ್ವರ್ಥಕತ್ವವನ್ನಂಗೀಕರಿಸಿ ಲಕ್ಷ್ಯಾನುಸಾರವಾಗಿ ಚಾತುರ್ವಿಧ್ಯವನ್ನೂ ಅಂಗೀಕರಿಸಿ ಅನುಪಪತ್ತಿಯನ್ನು ಪರಿಹರಿಸಿಕೊಳ್ಳುವುದು. ಅಥವಾ '**ಪ್ರಯೋಗಶರಣಾ ವೈಯಾಕರಣಾ ಲಕ್ಷ್ಯಾನುಸಾರಿತ್ವಲ್ಲಕ್ಷಣೋಪದೇಶಸ್ಯ**' ಎಂದು ಪ್ರಾಚೀನ ವೈಯ್ಯಾಕರಣರು ಹೇಳಿರುವುದರಿಂದ ಹೇಗೆ ಸಂಸ್ಕೃತದಲ್ಲಿ 'ಕುಂಭಕಾರ' ಎಂಬುದನ್ನು ಸಾಧಿಸುವಂತೆ 'ಗ್ರಾಮ ಗಾಮ' ಎಂಬುದನ್ನು ಸಾಧಿಸುವುದಿಲ್ಲವೋ ಹಾಗೆ ಲಕ್ಷ್ಯಾನುಸಾರವಾಗಿಯೇ ಲಕ್ಷ್ಯಗಳಿಗೆ ಪ್ರವೃತ್ತಿಯನ್ನು ಹೇಳಬೇಕೆಂದು ಭಾಷಾ ವ್ಯಾಕರಣದಲ್ಲಿಯೂ ಅಂಗೀಕರಿಸುವುದರಿಂದ ಆವ ದೋಷವೂ ಪ್ರಸಕ್ತವಾಗುವುದಿಲ್ಲ. ಸಾಧಕಬಾಧಕಗಳು ಒಂದೇ ಬಾರಿ ಪ್ರಸಕ್ತಗಳಾಗುವುವೆಂದು,

**ಸಾಧನಂ ಬಾಧನಂ ವಾಪಿ ಸಕೃದೇವ ಹಿ ನಾಸಕೃತ್**
**ಕೃತಸ್ಯ ಕರಣಾಭಾವಾತ್ ಮೃತಸ್ಯ ಮರಣಂ ಯಥಾ**

ಎಂಬುದರಿಂದ ಸೂಚಿತವಾಗುವುದರಿಂದ ಅನವಸ್ಥಾದೋಷವೂ ಪರಿಹೃತವಾಗುವುದೆಂದು ತಿಳಿದು ವಿದ್ವಾಂಸರು ಸಂತೋಷಪಡಬೇಕು.

ಈ ಸೂತ್ರವಲ್ಲಿ 'ಸ್ವರಾತ್' ಎಂದು ಹೇಳಿ ಸ್ವರದ ಮುಂದಿನ ವ್ಯಂಜನಕ್ಕೆ ದ್ವಿತ್ವವನ್ನು ವಿಧಿಸಿರುವುದರಿಂದ 'ಕ್ಷತ್ರಿಯರ್, ಪ್ರಧಾನರ್' ಮೊದಲಾದ ಪ್ರಯೋಗಗಳಲ್ಲಿ ಮೊದಲಿನ ಕ ಕಾರ ಪ ಕಾರಗಳಿಗೆ ದ್ವಿತ್ವವಿಲ್ಲ. 'ಅರಃ' ಎಂದು ಹೇಳಿರುವುದರಿಂದ — 'ಇನಕರ್ಮ್ಮಲಟಿಯರ್, ಅವರ್ಸ್ಯತಿಯರ್' ಮೊದಲಾದುವುಗಳಲ್ಲಿ ರೇಫಕ್ಕೆ ದ್ವಿತ್ವವು ಬರುವುದಿಲ್ಲ. 'ವ್ಯಂಜನೇ' ಎಂದು

ಹೇಳಿರುವುದರಿಂದ ' ಪ್ರಧಾನಂ, ಪ್ರಘಾನಂ ' ಮೊದಲಾದ ಪ್ರಯೋಗಗಳಲ್ಲಿ ಸ್ವರದ ಮುಂದಿನ ದ ಘ ಗಳಿಗೆ ಸ್ವರವು ಸ್ವರವು ಪರವಾಗಿರುವುದರಿಂದ ದ್ವಿತ್ವವಿಲ್ಲವೆಂದು ತಿಳಿಯುವುದು.

**ಅವತಾರಿಕೆ ೬೮**

ಪೂರ್ವದಲ್ಲಿ — ' **ರೋ ದ್ವಿರ್ವ್ಯಂಜನಸ್ಯಾಹಾದೇಃ** ' ಮೊದಲಾದ ಸೂತ್ರಗಳಿಂದ ಲಿಂಗಾಂತ್ಯಗಳಲ್ಲಿದ್ದರೂ ಕೆಲವು ವ್ಯಂಜನಗಳ ಮುಂದೆ ಇರುವ ಸ್ವರಪರಕವಾದ ವ್ಯಂಜನಕ್ಕೂ ದ್ವಿತ್ವವು ಹೇಳಲ್ಪಟ್ಟಿತು. ಈಗ ಸ್ವರಾಂತವಾದ ಶಬ್ದವಿಶೇಷದ ಮುಂದಿನ ವ್ಯಂಜನಕ್ಕೆ ಸ್ವರ, ವ್ಯಂಜನಗಳಲ್ಲಿ ಆವುದೊಂದು ಪರದಲ್ಲಿದ್ದರೂ ದ್ವಿರ್ಭಾವವು ಬರುವುದೆಂದು ಹೇಳುತ್ತಾನೆ.

**ಸೂತ್ರಂ || ಮೋಃ || ೬೮ ||**

**ಅರ್ಥ || ಮು ಶಬ್ದದ ಮುಂದಿನ ವ್ಯಂಜನವು ದ್ವಿರ್ಭಾವವನ್ನು ಹೊಂದುವುದು.**

**ಉದಾಹರಣೆ ||** ಮು + ಕೊಡೆ = ಮುಕ್ಕೊಡೆ, ಮುಚ್ಚವಡಿ, ಮುಕ್ಕೊಳ್ದೆರ || ಮುಂತಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೬೮**

ಈ ಸೂತ್ರದಲ್ಲಿ ' ಮೋಃ ' ಎಂಬುದೊಂದೇ ಪದವಿರುವುದು ಇದು ಪ್ರಯೋಗಸ್ಥವಾದ ' ಮು ' ಎಂಬುದಕ್ಕೆ ಅನುಕರಣವಾದ ಶಬ್ದವು. ಪಂಚಮ್ಯಂತವಾಗಿ ನಿರ್ದೇಶವಮಾಡಿರುವುದರಿಂದ ' ಉತ್ತರಸ್ಯ ' ಎಂದು ಲಬ್ಧವಾಗುವುದು. ಇದನ್ನು ಪೂರ್ವಸೂತ್ರದಿಂದ ಅನುವೃತ್ತವಾದ ' ವ್ಯಂಜನೇ ' ಎಂಬುದಕ್ಕೆ ವಿಶೇಷಣ ಮಾಡುವುದು. ' ದ್ವಿಃ ' ಎಂಬುದು ಇದ್ದೇ ಇದೆ. ತಥಾಚ — ' ಮು ' ಶಬ್ದದ ಮುಂದಿನ ವ್ಯಂಜನಕ್ಕೆ ದ್ವಿತ್ವವು ಬರುವುದೆಂದರ್ಥವಾಗುವುದು ಇಲ್ಲಿ ' ವ್ಯಂಜನೇ ' ಎಂಬ ಸಪ್ತಮ್ಯಂತಪದವನ್ನು ಅನುವರ್ತಿಸದಿರುವುದರಿಂದ ಸ್ವರ-ವ್ಯಂಜನಗಳೆರಡೂ ನಿಮಿತ್ತವಾಗಿರುವುದೆಂದು ತಿಳಿದು ಸ್ವರಕ್ಕೆ ' ಮುಕ್ಕೊಡೆ ' ಮೊದಲಾದುವನ್ನೂ ವ್ಯಂಜನಕ್ಕೆ ' ಮುಕ್ಕೊಳ್ದೆರಂ ' ಮೊದಲಾದುವನ್ನೂ ಉದಾಹರಣೆಗಳನ್ನಾಗಿ ತೋರಿಸಿರುವುದು. ' ಮುಕ್ಕೊಡೆ ' ಮೊದಲಾದುವು ' ಮೂಱು ' ಶಬ್ದಕ್ಕೆ ವ್ಯಂಜನಾದ್ಯುತ್ತರಪದದೊಡನೆ ಸಮಾಸವನ್ನು ಮಾಡಲು ' **ಮೂಱೋಃ || ೩೫೨ ||** ' ಎಂಬ ಸೂತ್ರದಿಂದ ' ಱು ' ಲೋಪವನ್ನೂ — ' **ಹ್ರಸ್ವಸ್ತತ್ರ ವಾ || ೩೫೩ ||** ' ಎಂಬ ಸೂತ್ರದಿಂದ ' ಮೂ ' ಎಂಬುದಕ್ಕೆ ಹ್ರಸ್ವವನ್ನೂ ಮಾಡಲು ' ಮು ' ಎಂದಾಗುವುದು ಅದರ ಮುಂದಿರುವ ವ್ಯಂಜನಕ್ಕೆ ಇದರಿಂದ ದ್ವಿತ್ವವು ಬಂದು ' ಮುಕ್ಕೊಡೆ ' ಎಂದಾಗಿರುವುದು. ' ಮುಚ್ಚವಡಿ ' ಎಂಬಲ್ಲಿ ' ಮೂಱು ಸವಡಿ ' ಎಂದು ವಿಗ್ರಹವನ್ನು ಮಾಡಲು — ' **ಸಶ್ಚೋ ಬಹುಲಮಲಯೋಃ || ೯೩ ||** ' ಎಂಬ ಸೂತ್ರದಿಂದ ಸ ಕಾರಕ್ಕೆ ಚ ಕಾರಾದೇಶವೊಂದು ವಿಶೇಷವಾಗಿರುವುದು ಹೀಗೆಯೇ ಅನ್ಯತ್ರವೂ ಪ್ರಕ್ರಿಯೆಗಳನ್ನು ಊಹಿಸಿಕೊಳ್ಳುವುದು.

ಈ ಸೂತ್ರದಲ್ಲಿ ' ಮೋಃ ' ಎಂದು ಸಾಮಾನ್ಯವಾಗಿ ನಿರ್ದೇಶ ಮಾಡಿರುವುದರಿಂದ ' ಮು ' ಎಂದು ಇರುವ ಪ್ರಯೋಗಗಳಲ್ಲಿ ಈ ದ್ವಿತ್ವವು ಪ್ರಸಕ್ತವಾಗುವುದು. ಅದರಿಂದ ' ಮುಕುಂದಂ, ಮುಳಿಸು ' ಮೊದಲಾದ ಅಖಂಡಪದೈಕ ದೇಶದಲ್ಲಿರುವ ' ಮು ' ಶಬ್ದದ ' ದ ' ಮುಂದಿರುವ ಕ ಕಾರಾದಿಗಳಿಗೂ ದ್ವಿತ್ವವು ಬಂದು — ' ಮುಕ್ಕುಂದಂ, ಮುಳ್ಳಿಸು ' ಮೊದಲಾದ ಅನಿಷ್ಟರೂಪ

ಗಳು ಆಗುವುವು. ಆದುದರಿಂದ **ಪಾಣಿನಿ** ವ್ಯಾಕರಣದಲ್ಲಿ ಅಂಗೀಕರಿಸಿರುವ — '**ಅರ್ಥವದ್ ಗ್ರಹಣೇನಾನರ್ಥಕಸ್ಯ ಗ್ರಹಣಂ**' ಎಂಬ ಲೋಕನ್ಯಾಯವನ್ನು ಈ ಶಾಸ್ತ್ರದಲ್ಲಿಯೂ ಅಂಗೀಕರಿಸಿ ಅರ್ಥವತ್ತಾದ 'ಮು' ಎಂಬುದನ್ನೇ ಗ್ರಹಿಸಿ, ಅರ್ಥವತ್ತಾದ 'ಮು' ಶಬ್ದದ ಮುಂದಿನ ವ್ಯಂಜನಕ್ಕೆ ದ್ವಿತ್ವವೆಂದು ವ್ಯಾಖ್ಯಾನ ಮಾಡಿ 'ಮುಕುಂದ' ಮೊದಲಾದ ಶಬ್ದೈಕದೇಶ 'ಮು' ಶಬ್ದವು ನಿರರ್ಥಕವೆಂದು ಅದಕ್ಕೆ ವ್ಯಾವೃತ್ತಿ ಮಾಡಬೇಕೆಂದು ತಿಳಿಯಬೇಕು.

ಇಲ್ಲಿ 'ಮೋಃ' ಎಂದು ಹ್ರಸ್ವಾಂತವಾಗಿ ನಿರ್ದೇಶಿಸಿರುವುದರಿಂದ 'ಮೂಗಾವುದಂ, ಮೂಲೋಕಂ' ಮೊದಲಾದ ದೀರ್ಘಾಂತಗಳಲ್ಲಿ ಪ್ರವರ್ತಿಸುವುದಿಲ್ಲ.

'ಮುಯ್ಯಾಳ್, ಮುಯ್ಯೇಳು, ಮುಯ್ಯಾರಡಿ' ಮೊದಲಾದ ಸ್ವರಾದ್ಯುತ್ತರಪದಕ ಸಮಾಸದಲ್ಲಿ — '**ಸ್ವರೇ ಮುಯ್ಮೂಱಕೋಃ ||೩೬೦||**' ಎಂಬ ಸೂತ್ರದಿಂದ 'ಮೂಱು' ಶಬ್ದಕ್ಕೆ 'ಮುಯ್' ಎಂದು ಯ ಕಾರಾಂತಾದೇಶವನ್ನು ವಿಧಿಸುವುದರಿಂದ ಅಲ್ಲ — '**ಹ್ರಸ್ವಾನ್ನಣಲಯಳಶಟಃ**' ಇತ್ಯಾದಿ ಸೂತ್ರದಿಂದಲೆ ದ್ವಿತ್ವವು ಸಿದ್ಧಿಸುವುದೆಂದು ತಿಳಿಯಬೇಕು.

**ಅವತಾರಿಕೆ ೬೯**

ಕೆಲವು ವ್ಯಂಜನಾಂತ ಶಬ್ದಗಳಿಗೆ ಮುಂದೆ ಆಗಮಗಳನ್ನು ವಿಧಿಸುವುದರಿಂದ ಆ ಆಗಮ ಗಳೆಲ್ಲಾ ಆವುದಕ್ಕೆ ವಿಧಿಸಲ್ಪಡುವುವೋ ಅದಕ್ಕೆ ಅವು ಅವಯವಗಳಾಗುವುವೆಂದು — '**ಕಿದಂತ್ಯಃ**' ಎಂಬ ಸೂತ್ರದಿಂದ ಬೋಧಿಸಲ್ಪಡುವುದರಿಂದಲೂ — '**ಯದಾಗಮಾಸ್ತದ್ಗುಣೀಭೂತಾಸ್ತದ್ ಗ್ರಹಣೇ ನ ಗೃಹ್ಯಂತೇ**' ಎಂಬ ಭಾಷೋಕ್ತನ್ಯಾಯದಿಂದಲೂ ಆಗಮ ಸಮಭಿವ್ಯಾಹಾರದಶೆಯಲ್ಲಿ ಆಗಮವಿಶಿಷ್ಟವೇ ಲಿಂಗವಾಗುವುದರಿಂದ ಅಲ್ಲಿ ವ್ಯಂಜನಗಳಿಗೆ ಲಿಂಗಾಂತ್ಯತ್ವವಿಲ್ಲವೆಂದು ದ್ವಿತ್ವವು ಅಪ್ರಸಕ್ತವಾಗಲು ಅಂತಹ ಕೆಲವು ಪ್ರಯೋಗಗಳಲ್ಲಿಯೂ ದ್ವಿತ್ವವನ್ನು ವಿಧಿಸಲು ಪ್ರಾರಂಭಿಸುತ್ತಾನೆ.

**ಸೂತ್ರಂ || ಉಕಿ || ೬೯ ||**

**ಅರ್ಥ || ಉಗಾಗಮಪರಕವಾದ ವ್ಯಂಜನಕ್ಕೆ ದ್ವಿತ್ವವು ಬರುವುದು.**

**ಉದಾಹರಣೆ ||** ಮನಸ್+ಉ=ಮನಸ್ಸು. ಹೀಗೆಯೇ — ವಯಸ್ಸು, ಯಶಸ್ಸು, ಪಯಸ್ಸು, ನಭಸ್ಸು, ಅಪ್ಪು || ಮೊದಲಾದುವು ಈ ಸೂತ್ರಕ್ಕೆ ವಿಷಯಗಳಾಗುವುವು.

**ವಿಚಾರ ೬೯**

ಈ ಸೂತ್ರದಲ್ಲಿ 'ಉಕಿ' ಎಂಬುದೊಂದೇ ಪದವಿರುವುದು. ಇದು '**ಉಗಲೋಪೇ ||೧೩೩||** **ಉಗಬಾದೀನಾಂ ||೧೩೫||**' ಇತ್ಯಾದಿ ಸೂತ್ರಗಳಿಂದ ವಕ್ಷ್ಯಮಾಣೋಗಾಗಮಬೋಧಕವಾದ ಸಪ್ತಮ್ಯಂತ ನಿರ್ದೇಶವು. 'ವ್ಯಂಜನಸ್ಯ, ದ್ವಿಃ' ಎಂಬ ಪದದ್ವಯವು ಅನುವರ್ತಿತವಾಗುವುದು. ತಥಾಚ — ಉಗಾಗಮಪರಕವ್ಯಂಜನಕ್ಕೆ ದ್ವಿತ್ವವು ಬರುವುದೆಂದು ಸೂತ್ರಾರ್ಥವಾಗುವುದು. ಆದುದರಿಂದ — ಮನಸ್ಸು ಮೊದಲಾದ ಉಗಂತಗಳು ಇದಕ್ಕೆ ಲಕ್ಷ್ಯಗಳಾಗಿ ಕೊಟ್ಟಿವೆ.

ಇಲ್ಲಿ '**ವ್ಯಾಖ್ಯಾನತೋ ವಿಶೇಷಪ್ರತಿಪತ್ತಿರ್ನ ಹಿ ಸಂದೇಹಾದಲಕ್ಷಣಂ**' ಎಂಬ ನ್ಯಾಯವನ್ನಂಗೀಕರಿಸಿ ಎಲ್ಲಿ ಆಗಮಾಂತರಸಾಹಚರ್ಯವಿಲ್ಲದೆ ಉಗಾಗಮ ಮಾತ್ರವು ವಿಧಿಸಲ್ಪಡುವುದೋ ಅಂತಹ ಉಗ್-ವಿಷಯದಲ್ಲಿಯೆ ದ್ವಿತ್ವವು ಬರುವುದಲ್ಲದೆ-'**ಅಗಿಗುಗ್ವ್ಯಂಜನೇ ವ್ಯಂಜನಸ್ಯ||೧೯೭||**'

ಎಂಬ ಸೂತ್ರದಿಂದ ಆಗಮಾಂತರಸಹಕೃತವಾಗಿ ವಿಧಿಸಲ್ಪಡುವ ಉಗ್-ವಿಷಯದಲ್ಲಿ ಈ ದ್ವಿತ್ವವು ಬರುವುದಿಲ್ಲವೆಂದು ಹೇಳಬೇಕು. ಹೀಗೆ ಹೇಳುವುದರಿಂದ — 'ಮುಕುತಿ, ಯುಕುತಿ' ಮೊದಲಾದ ಪ್ರಯೋಗಗಳಲ್ಲಿ ಉಗಾಗಮವಿದ್ದರೂ ದ್ವಿತ್ವವು ಬರುವುದಿಲ್ಲವೆಂದು ತಿಳಿಯುವುದು. ಸರ್ವತ್ರ ಬರುವುದಾದರೆ ಈ ಸೂತ್ರವು '**ಕರ್ಮ ಕುಮಿ || ೫೫ ||**' ಎಂಬ ಸೂತ್ರದಲ್ಲಿ ಸೇರಿಸಿ ಒಂದೇ ಸೂತ್ರವನ್ನು ಮಾಡಬಹುದಾಗಿತ್ತು. ಬೇರೆ ಸೂತ್ರವನ್ನು ಮಾಡಿರುವ ಸೂತ್ರಕಾರರಿಗೆ ಇದೇ ತಾತ್ಪರ್ಯವೆಂದು ತಿಳಿಯಬೇಕು.

**ಅವತಾರಿಕೆ ೭೦**

ಆಗಮವಿಷಯದಲ್ಲಿ ದ್ವಿತ್ವಪ್ರವೃತ್ತಿಯನ್ನು ಹೇಳಿ '**ಸ್ವರಾದರೋರ್ವ್ಯಂಜನೇ**' ಎಂಬ ಪೂರ್ವ ಸೂತ್ರದಿಂದ ಪ್ರಾಪ್ತವಾದ ದ್ವಿತ್ವಕ್ಕೆ ನಿಯಮಸೂತ್ರವನ್ನು ಹೇಳುತ್ತಾನೆ.

**ಸೂತ್ರಂ || ಲೋಽಂತಸ್ಥಾಯಾಂ || ೭೦ ||**

**ಅರ್ಥ || ಅಂತಸ್ಥಾಸಂಜ್ಞಕ ಯ ರ ಲ ವ ಪರಕವಾದ ಲ ಕಾರಕ್ಕೆ ದ್ವಿತ್ವವು ಬರುವುದು.**

**ಉದಾಹರಣೆ** || ಬಲ್ + ಯತನಂ = ಬಲ್ಲ್ಯತನಂ || ಹೀಗೆಯೇ — ಮೇಲ್ಲ್ರನ್ನಂ, ಬಲ್ಲ್ಲಿಂಡಂ, ಕಲ್ಲ್ವಟಿ || ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೭೦**

ಈ ಸೂತ್ರದಲ್ಲಿ — 'ಲಃ, ಅಂತಸ್ಥಾಯಾಂ' ಎಂದು ಎರಡು ಪದವಿರುವುವು. 'ಸ್ವರಾತ್, ದ್ವಿಃ' ಎಂಬುವು ಅನುವರ್ತಿಸಲ್ಪಡುವುವು. 'ಲಃ' ಎಂಬುದು ಸ್ಥಾನಷಷ್ಠ್ಯಂತವು. ಅದಕ್ಕೆ 'ಸ್ವರಾತ್' ಎಂಬುದು ವ್ಯಧಿಕರಣ ವಿಶೇಷಣವು. 'ಅಂತಸ್ಥಾಯಾಂ' ಎಂಬುದು ಸಪ್ತಮ್ಯಂತವಾಗಿರುವುದರಿಂದ 'ಪರೇ' ಎಂದು ಉಪಸ್ಥಿತವಾಗುವುದು. ತಥಾಚ — ಸ್ವರದ ಮುಂದಿನ ಲಕಾರಕ್ಕೆ ಅಂತಸ್ಥಾವರ್ಣಗಳು ಪರವಾಗಲು ದ್ವಿತ್ವವು ಬರುವುದೆಂದು ಅರ್ಥವಾಗುವುದು. ಆದುದರಿಂದ 'ಬಲ್ಲ್ಯತನಂ' ಮೊದಲಾದುವು ಇದಕ್ಕೆ ಉದಾಹರಣೆಗಳಾಗಿವೆ.

ಈ ಸೂತ್ರಕ್ಕೆ ಲಕ್ಷ್ಯಗಳಾಗಿರುವ 'ಬಲ್ಲ್ಯತನಂ' ಮೊದಲಾದುವು '**ಸ್ವರಾದರೋರ್ವ್ಯಂಜನೇ || ೬೭ ||**' ಎಂಬ ಸೂತ್ರದಿಂದಲೇ ಸಿದ್ಧಿಸುತ್ತಿರಲು ಪುನಃ ಈ ಸೂತ್ರಾರಂಭವು — 'ಅಂತಸ್ಥಾ' ವರ್ಣಗಳು ಪರವಾಗಿರಲು ಲ ಕಾರಕ್ಕೆ ದ್ವಿರ್ಭಾವವು 'ಸ್ವರಾದರೋರ್ವ್ಯಂಜನೇ' ಎಂಬುದರಿಂದಲೇ ಬರುವುದಾದರೆ ಅಂತಸ್ಥಾವರ್ಣವೇ ಪರದಲ್ಲಿರಲು ಬರುವುದು; ಇತರ ವರ್ಣವು ಪರದಲ್ಲಿರಲು ಬರುವುದಿಲ್ಲ ಎಂಬರ್ಥದ್ಯೋತಕವಾದ — '**ಸಿದ್ಧೇ ಸತ್ಯಾರಭ್ಯಮಾಣೋ ವಿಧಿರ್ನಿಯಮಾಯ ಭವತಿ**' ಎಂಬ ನ್ಯಾಯದಿಂದ — ನಿಯಮಾರ್ಥವೆಂದು ತಿಳಿಯುವುದು. 'ನಿಯಮ' ವೆಂದರೆ ಸ್ವಸಜಾತೀಯೇತರಕ್ಕೆ ವ್ಯಾವೃತ್ತಿಯನ್ನು ಹೇಳುವುದು. ಆದುದರಿಂದ 'ನಿಲ್ಲಂ, ಕಲ್ಲಂ' ಮೊದಲಾದ ಪ್ರಯೋಗಗಳಲ್ಲಿ ಅಂತಸ್ಥಾವರ್ಣವು ಪರದಲ್ಲಿಲ್ಲವಾದುದರಿಂದ ಪೂರ್ವಸೂತ್ರದಿಂದಲೂ ದ್ವಿತ್ವವು ಬರುವುದಿಲ್ಲ. ಇಲ್ಲಿ ಅಂತಸ್ಥಾವರ್ಣವು ಪರವಾಗಿರಲು ಲ ಕಾರಕ್ಕೇ ದ್ವಿತ್ವವು ಬರುವುದೆಂದು ವಿಪರೀತನಿಯಮವನ್ನು ವ್ಯಾಖ್ಯಾನಪರಿಭಾಷೆಯಿಂದ ವಾರಣಮಾಡಬೇಕು.

ಆದರೆ ಅಂತಸ್ಥಾವರ್ಣವೇ ಪರದಲ್ಲಿರುವಾಗ ಲ ಕಾರಕ್ಕೆ ದ್ವಿತ್ವವು ಬರುವುದೆಂದು ಹೇಳಿದರೆ 'ಕಲ್ಯಾಣಂ, ಪಲ್ಯಯನಂ, ಹಲ್ರಾಳಿ, ಕುಲ್ರುಜತಂ, ಗಲ್ಲಂ, ಫುಲ್ಲಂ, ಪಲ್ವಲಂ, ಖಲ್ವಂ' ಮೊದ

ಲಾದ ಪ್ರಯೋಗಗಳಲ್ಲಿಯೂ ಉಕ್ತನಿಮಿತ್ತಗಳಿರುವುದರಿಂದ ದ್ವಿತ್ವವು ಪ್ರಸಕ್ತವಾಗಲು ಈ ದ್ವಿತ್ವ ಪ್ರಕರಣವು, ಸ್ಥಾನಿನಿಮಿತ್ತಗಳು ಎಲ್ಲಿ ಭಾಷಾಶಬ್ದಗತವಾಗುವುದೋ ಅಲ್ಲಿಯೇ, ಪ್ರವರ್ತಿಸುವುದೆಂದು ತಿಳಿದು ಸಂಸ್ಕೃತ ಶಬ್ದಗಳ ವಿಷಯದಲ್ಲಿ ಈ ದ್ವಿತ್ವವಿಧಿಯು ಪ್ರವರ್ತಿಸುವುದಿಲ್ಲವೆಂದು ತಿಳಿಯಬೇಕು. ತದ್ಭವವಿಧಿಯಲ್ಲಾದರೋ ಸಂಸ್ಕೃತ ಶಬ್ದಗಳೇ ಲಕ್ಷ್ಯಗಳಾಗುವುವು. ಆದುದರಿಂದಲೇ ಅದಕ್ಕೆ — ' ತತ್ರ ಭವಃ ತದ್ಭವಃ ' ಎಂಬ ವ್ಯುತ್ಪತ್ತಿಯಿಂದ ತದ್ಭವವೆಂದು ವ್ಯವಹಾರವಿರುವುದು.

**ಅವತಾರಿಕೆ ೭೧**

ಪೂರ್ವಸೂತ್ರದಂತೆ ನಿಯಮಾಂತರವನ್ನು ಹೇಳುತ್ತಾನೆ.

**ಸೂತ್ರಂ || ಳಃ || ೭೧ ||**

**ಅರ್ಥ ||** ಅಂತಸ್ಥಾವರ್ಣಪರಕನಾದ ಳ ಕಾರಕ್ಕೆ ದ್ವಿತ್ವವು ಬರುವುದು.

**ಉದಾಹರಣೆ ||** ಒಳ್ + ಯತನಂ = ಒಳ್ಳ್ಯತನಂ || ಹೀಗೆಯೇ — ಒಳ್ಳ್ರನ್ನಂ, ಒಳ್ಳ್ವಣಿಗೆ || ಮೊದಲಾದುವೇ ಇದಕ್ಕೆ ಲಕ್ಷ್ಯಗಳು.

**ವಿಚಾರ ೭೧**

ಈ ಸೂತ್ರದಲ್ಲಿ — ' ಳ ' ಎಂಬುದೊಂದೇ ಪದವಿರುವುದು ಇದು ಸ್ಥಾನಷಷ್ಠ್ಯಂತವು. ಪೂರ್ವದಿಂದ ' ಅಂತಸ್ಥಾಯಾಂ, ದ್ವಿಃ ' ಎಂಬಿವು ಅನುವರ್ತಿಸಲ್ಪಡುವುವು. ತಥಾಚ—ಅಂತಸ್ಥಾಪರಕವ್ಯಂಜನಕ್ಕೆ ದ್ವಿತ್ವವು ಬರುವುದು. ಆದುದರಿಂದ ' ಒಳ್ಳ್ಯತನಂ ' ಮೊದಲಾದುವುಗಳಲ್ಲಿ ಳ ಕಾರಕ್ಕೆ ದ್ವಿತ್ವವು ಬಂದಿರುವುದು. ಪೂರ್ವಸೂತ್ರದಂತೆ ಇದೂ ನಿಯಮಸೂತ್ರವಾದುದರಿಂದ ' ಕಳ್ಗುಡಿದಂ, ಮುಳ್ಕಿಟ್ಟಿದಂ ' ಮೊದಲಾದ ಪ್ರಯೋಗಗಳಲ್ಲಿ ಅಂತಸ್ಥಾವರ್ಣಗಳಲ್ಲದ ಗ ಕಾರಾದಿಗಳು ಪರವಲ್ಲಿರುವಾಗ ಳ ಕಾರಕ್ಕೆ ದ್ವಿತ್ವವಿಲ್ಲವೆಂದು ತಿಳಿಯುವುದು. ಇದನ್ನು ಪೂರ್ವಸೂತ್ರದಲ್ಲಿಯೇ ಸೇರಿಸಿ ನಿಯಾಮಕತ್ವವನ್ನು ಹೇಳಲು ಲಾಘವವಿರಲು ಸೂತ್ರವಿಭಾಗವನ್ನಂಗೀಕರಿಸಿರುವುದು — ' ಏಕಯೋಗನಿರ್ದಿಷ್ಟಾನಾಂ ಸಹವಾ ಪ್ರವೃತ್ತಿಃ ಸಹವಾ ನಿವೃತ್ತಿಃ ' ಎಂಬ ವೈಯ್ಯಾಕರಣನ್ಯಾಯದಿಂದ ಲ ಕಾರಕ್ಕೂ ಉತ್ತರಸೂತ್ರದಲ್ಲಿ ಸಂಬಂಧವಾಗಬಾರದೆಂದು ತಿಳಿಯಬೇಕು. ಆದುದರಿಂದ ಮುಂದಿನ ಸೂತ್ರದಲ್ಲಿ ' ಳಃ ' ಎಂಬುದೊಂದೇ ಉದ್ದೇಶ್ಯವಾಗಿ ಹೇಳಲ್ಪಡುವುದು.

**ಅವತಾರಿಕೆ ೭೨**

ಪೂರ್ವದಲ್ಲಿ ಏಕಸ್ವರವಿಷಯದಲ್ಲಿ ದ್ವಿತ್ವವು ವಿಧಿಸಲ್ಪಟ್ಟಿತು. ಈಗ ಅನೇಕಸ್ವರವಿಷಯದಲ್ಲಿ ಅಪ್ರಾಪ್ತವಾದ ದ್ವಿತ್ವವು ವಿಕಲ್ಪವಾಗಿ ವಿಧಿಸಲ್ಪಡುವುದು.

**ಸೂತ್ರಂ || ವಿ ವಾನೇಕಸ್ವರಸ್ಯ || ೭೨ ||**

**ಅರ್ಥ ||** ಅನೇಕ ಸ್ವರವುಳ್ಳ ಶಬ್ದದ ಳ ಕಾರಕ್ಕೆ ವ ಕಾರವು ಪರವಾಗಿರಲು ವಿಕಲ್ಪವಾಗಿ ದ್ವಿತ್ವವು ಬರುವುದು.

**ಉದಾಹರಣೆ ||** ಎಸಳ್ + ವಳೆ = ಎಸಳ್ವಳೆ, ಎಸಳ್ಳ್ವಳೆ || ಹೀಗೆಯೇ — ನುಸುಳ್ವಾಗಿಲ್ ನುಸುಳ್ಳ್ವಾಗಿಲ್ || ಮೊದಲಾದುವು ಸಿದ್ಧಿಸುವುವು.

**ವಿಚಾರ ೭೨**

ಈ ಸೂತ್ರದಲ್ಲಿ — 'ವಿ, ವಾ, ಅನೇಕಸ್ವರಸ್ಯ' ಎಂದು ಮೂರು ಪದಗಳಿರುವುವು. ಪೂರ್ವದಿಂದ 'ಳಃ, ದ್ವಿಃ' ಎಂದು ಅನುವರ್ತಿತವಾಗುವುವು. 'ವಿ' ಎಂಬುದು ಕೇವಲ ವ ಕಾರ ಬೋಧಕ ಸಪ್ತಮ್ಯಂತಪದವು. 'ವಾ' ಎಂಬುದು ವಿಕಲ್ಪಾರ್ಥಕವಾದ ಅವ್ಯಯವು. 'ಅನೇಕ ಸ್ವರಸ್ಯ' ಎಂಬುದನ್ನು ಬಹುವ್ರೀಹಿಸಮಾಸವಾಗಿ ಅಂಗೀಕರಿಸಿರುವುದರಿಂದ ಅನೇಕ ಸ್ವರವುಳ್ಳ ಶಬ್ದವು ಎಂದರ್ಥವಾಗುವುದು. ಇದು ಅನುವರ್ತಿತವಾದ ಷಷ್ಠ್ಯಂತವಾದ 'ಳಃ' ಎಂಬುದಕ್ಕೆ ಅವಯವಾವಯವಿಭಾವ ಸಂಬಂಧದಿಂದ ವಿಶೇಷಣವು. ತಥಾಚ - ಅನೇಕ ಸ್ವರವುಳ್ಳ ಶಬ್ದಾವಯವ ಳ ಕಾರಕ್ಕೆ ವ ಕಾರವು ಪರವಾಗಲು ವಿಕಲ್ಪವಾಗಿ ದ್ವಿತ್ವವು ಬರುವುದೆಂದು ಸೂತ್ರಾರ್ಥವಾಗುವುದು. ಆದುದರಿಂದ 'ಎಸಳ್ವಳಿ' ಮೊದಲಾದುವು ಸಿದ್ಧಿಸುವುವು. ಇದು 'ಅಪ್ರಾಪ್ತೇ ವಿಭಾಷೇ' ಎಂದು ತಿಳಿಯಬೇಕು.

ಈ ಸೂತ್ರದಲ್ಲಿ 'ವಿ' ಎಂದು ನಿಮಿತ್ತವನ್ನು ಹೇಳಿರುವುದರಿಂದ 'ನುಸುಳ್ಮಾವಣಿಗೆ' ಮೊದಲಾದ ಪ್ರಯೋಗಗಳಲ್ಲಿ ಮ ಕಾರಾದಿಗಳು ಪರದಲ್ಲಿರುವಾಗ ದ್ವಿತ್ವವಿಲ್ಲ. 'ಅನೇಕ ಸ್ವರಸ್ಯ' ಎಂದು ಹೇಳಿರುವುದರಿಂದ ಏಕಸ್ವರವಾದ 'ಮುಳ್ವಾಗಿಲ್' ಮೊದಲಾದುವುಗಳಲ್ಲಿ 'ಮುಳ್' ಮೊದಲಾದ ಶಬ್ದಗಳ ಳ ಕಾರಕ್ಕೆ ದ್ವಿತ್ವವು ಬರುವುದಿಲ್ಲವೆಂದು ತಿಳಿಯಬೇಕು.

**ಅವತಾರಿಕೆ ೭೩**

ಪೂರ್ವದಲ್ಲಿ ಲಿಂಗಾಂತ್ಯಕ್ಕೆ '**ಹ್ರಸ್ವಾನ್ನಣಲಯಳತಟಃ**' ಇತ್ಯಾದಿ ಸೂತ್ರದಿಂದ ಪ್ರಾಪ್ತವಾದ ದ್ವಿತ್ವಕ್ಕೆ '**ಸಮಾಸೇ**' ಇತ್ಯಾದಿ ಸೂತ್ರಗಳಿಂದ ಕೆಲವು ನಿಮಿತ್ತವಿಶೇಷಗಳಲ್ಲಿ ನಿಷೇಧವು ಹೇಳಲ್ಪಟ್ಟಿತು. ಈಗ '**ರೋ ದ್ವಿರ್ವ್ಯಂಜನಸ್ಯಾಹಾದೇಃ**' ಇತ್ಯಾದಿ ಸೂತ್ರಗಳಿಂದ ವಿಹಿತವಾದ ದ್ವಿತ್ವಕ್ಕೆ ಕೆಲವು ನಿಮಿತ್ತವಿಶೇಷಗಳಲ್ಲಿ ನಿಷೇಧವನ್ನು ಹೇಳುತ್ತಾನೆ.

**ಸೂತ್ರಂ || ನ ಲಘ್ವಾದಿಲಘೂಪಾಂತ್ಯಾದಲೋ ಗದವಜೋ ವೃತ್ತೌ || ೭೩ ||**

**ಅರ್ಥ ||** ಲಘ್ವಕ್ಷರಾದಿಯಾಗಿಯೂ ಲಘ್ವಕ್ಷರೋಪಾಂತ್ಯವಾಗಿಯೂ ಇರುವ ಅನೇಕ ಸ್ವರವುಳ್ಳ ಲ ಕಾರಾಂತವಲ್ಲದ ಶಬ್ದದ ಮುಂದಿನ ಗ ದ ವ ಜ ಕಾರಗಳಿಗೆ ಕೃತ್ತದ್ಧಿತ ಸಮಾಸಾದಿವೃತ್ತಿ ವಿಷಯದಲ್ಲಿ ದ್ವಿತ್ವವು ಬರುವುದಿಲ್ಲ.

**ಉದಾಹರಣೆ ||** ಉಸಿರ್+ದಂ=ಉಸಿರ್ದಂ || ಹೀಗೆಯೇ - ಉಸಿರ್ದನಂ; ಉಸಿರ್ವಂ, ಉಸಿರ್ವನಂ; ಬಿದಿರ್ದಂ, ಬಿದಿರ್ದನಂ; ಪೊಗಲ್ದಂ, ಪೊಗಲ್ದನಂ; ಮುಗುಲ್ದಂ, ಮುಗುಲ್ದನಂ; ಅದಿರ್ವಂ, ಅದಿರ್ದನಂ, ಅದಿರ್ವೊಡೆ, ಜಗುಲ್ದಂ, ಜಗುಲ್ದನಂ, ಜಗುಲ್ಕೊಡೆ, ಜಗುಲ್ವನಂ, ಜಗುಳ್ಚಿನಂ || ಮೊದಲಾದುವು ಕೃದ್-ವೃತ್ತಿಗೂ - ಉಸಿರ್ಗಂ, ಬೆಮರ್ಗಂ, ನೆಗಲ್ಗಂ, ಅಗಲ್ಗಂ, ಕದಿರ್ವಳಂ, ಬಿದಿರ್ವಳಂ, ಮುಗುಳ್ಕೋಲ್, ನೆಗಲ್ಕೋಲ್ || ಮೊದಲಾದುವು ತದ್ಧಿತ-ವೃತ್ತಿಗೂ ತಳಿರ್ಗೆಂಪು, ಬೆಳರ್ಗೆಂಪು, ಮುಗುಳ್ಗಾಯ್, ಎಸಳ್ಗಂದಂ, ಅಲರ್ದೋಂಟಂ, ಬಿದಿರ್ದಟ್ಟಿ, ಮುಗುಳ್ದೊಂಗಲ್, ಎಸಳ್ದಾಣಂ, ಬೆಮರ್ವನಿ, ಪೊಗರ್ವಟ್ಟೆ, ಅಮುಳ್ವಾಸು, ಎಸಳ್ವಸೆ, ಅಲರ್ಜೋಂಪಂ, ಕದಿರ್ಜೊನ್ನಂ, ಅಮುಳ್ಜಂತ್ರಂ, ಎಸಳ್ಜಾಪೆ || ಮೊದಲಾದುವು ಸಮಾಸವೃತ್ತಿಗೂ ಉದಾಹರಣೆಗಳಾಗಿರುವುವು.

**ವಿಚಾರ ೭೩**

ಈ ಸೂತ್ರದಲ್ಲಿ ' ನ, ಲಘ್ವಾದಿ, ಲಘೂಪಾಂತ್ಯಾತ್, ಅಲಃ, ಗದವಜಃ, ವೃತ್ತೌ ' ಎಂದು ಐದು ಪದಗಳಿರುವುವು. ಪೂರ್ವಸೂತ್ರದಿಂದ ' ಅನೇಕಸ್ವರಸ್ಯ, ದ್ವಿಃ ' ಎಂಬಿವನ್ನು ಅನುವರ್ತಿಸಿ ' ಅನೇಕಸ್ವರಸ್ಯ ' ಎಂದು ಹೇಳುವುದು. ಇದು ಪೂರ್ವದಂತೆಯೇ ಬಹುವ್ರೀಹಿ ಸಮಾಸವಾದುದರಿಂದ ' ಶಬ್ದಾತ್ ' ಎಂದು ವಿಶೇಷ್ಯವನ್ನು ಅಧ್ಯಾಹಾರವಾಡಿ ಅದಕ್ಕೆ ' ಲಘ್ವಾದಿ, ಲಘೂಪಾಂತ್ಯಾತ್, ಅಲಃ, ಅನೇಕ ಸ್ವರಾತ್ ' ಎಂಬಿವುಗಳನ್ನು ವಿಶೇಷಣ ಮಾಡುವುದು. ' ಗದವಜಃ ' ಎಂಬುದು ಷಷ್ಠ್ಯಂತವಾದುದರಿಂದ ಅದೇ ಇಲ್ಲಿ ನಿಷೇಧಕ್ಕೆ ಉದ್ದೇಶ್ಯವು. ' ವೃತ್ತೌ ' ಎಂಬುದು ವಿಷಯಸಪ್ತಮ್ಯಂತ ಪದವು. ವೃತ್ತಿಯೆಂದರೆ — ಕೃತ್-ತದ್ಧಿತ-ಸಮಾಸ-ಏಕಶೇಷ-ಸನಾದ್ಯಂತಧಾತುರೂಪಗಳೆಂದು ಪಂಚವೃತ್ತಿಗಳು ಸಂಸ್ಕೃತ ವ್ಯಾಕರಣದಲ್ಲಿ ಪ್ರಸಿದ್ಧವಾಗಿರುವುವು. ಪ್ರಕೃತ ಭಾಷಾವ್ಯಾಕರಣದಲ್ಲಿ ' ಸನಾದಿ ' ಪ್ರತ್ಯಯಗಳೇ ಇಲ್ಲವಾದುದರಿಂದ ಸನಾದ್ಯಂತಧಾತುರೂಪವೃತ್ತಿಯನ್ನೂ ಏಕಶೇಷವನ್ನಂಗೀಕರಿಸಿದರೂ ಅಲ್ಲಿ ದ್ವಿತ್ವಕ್ಕೆ ವಿಷಯತೆಯನ್ನು ಹೇಳಲು ಪ್ರಯೋಜನವಿಲ್ಲದಿರುವುದರಿಂದ ಏಕಶೇಷವೃತ್ತಿಯನ್ನೂ ಬಿಟ್ಟು ಮೂರು ವೃತ್ತಿಗಳನ್ನೇ ಇಲ್ಲಿ ಗ್ರಹಿಸಬೇಕು. ' ಲಘ್ವಾದಿ ' ಎಂಬುದನ್ನೂ ' ಲಘೂಪಾಂತ್ಯ ' ಎಂಬುವನ್ನೂ ಮೊದಲು ಬಹುವ್ರೀಹಿ ಮಾಡಿ, ಅವೆರಡಕ್ಕೂ ಕರ್ಮಧಾರಯವನ್ನು ಮಾಡಲು ಲಘ್ವಕ್ಷರಾದಿಯಾಗಿಯೂ ಲಘ್ವಕ್ಷರೋಪಾಂತವಾಗಿಯೂ ಇರುವ ಶಬ್ದಗಳನ್ನು ತೆಗೆದುಕೊಳ್ಳಬೇಕೆಂದರ್ಥವಾಗುವುದು. ' ಅಲಃ ' ಎಂಬುದು ' ನಞ್ ' ತತ್ಪುರುಷವಾದುದರಿಂದ ಲ ಕಾರಾಂತ ಶಬ್ದಕ್ಕೆ ವ್ಯಾವೃತ್ತಿಯಾಗುವುದು. ತಥಾಚ — ಲಘ್ವಾದಿಯಾಗಿಯೂ ಲಘೂಪಾಂತ್ಯವಾಗಿಯೂ ಲ ಕಾರಾಂತವಲ್ಲದೆಯೂ ಇರುವ ಅನೇಕ ಸ್ವರವುಳ್ಳ ಶಬ್ದದ ಮುಂದಿನ ಗ ದ ವ ಜ ಕಾರಗಳಿಗೆ ವೃತ್ತಿತ್ರಯ ವಿಷಯದಲ್ಲಿ ಪೂರ್ವೋಕ್ತ ದ್ವಿತ್ವವು ಬರುವುದಿಲ್ಲವೆಂದು ಸೂತ್ರಾರ್ಥವಾಗುವುದು. ಆದುದರಿಂದ ಉಕ್ತೋದಾಹರಣೆಗಳಲ್ಲಿ ದ್ವಿರುಚ್ಚಾರಣೆಯಿಲ್ಲವೆಂದು ತಿಳಿಯುವುದು. ಇಂತಹ ಸಂದರ್ಭದಲ್ಲಿ **ದರ್ಪಣಕಾರನು** —

ಗ ದ ವ ಜ ಕಾರಮವಿದಿರೆ
ಮುದಮುಧ್ಯಂ ವಿಷಯಮಾಗನೇಕಾಕ್ಷರದೊಳ್
ವುದಿಯ ಲಘೂಪಧೆ ಕೆಲಕೆಲ
ವೊದವಿರ್ಕುಂ ರಾಂತಳಾಂತಮವು ಶಿಥಿಲತೆಯಂ ( ಸೂತ್ರ ೪೩ )

ಮೊದಲಾದ ಸೂತ್ರಗಳಿಂದ ಶಿಥಿಲತ್ವವನ್ನು ಹೇಳಿರುವನು. **ಶಾಸನಕಾರನು** ದ್ವಿತ್ವಕ್ಕೆ ನಿಷೇಧವನ್ನು ಹೇಳಿರುವುದರಲ್ಲಿ ಕೆಲವನ್ನು **ದರ್ಪಣಕಾರನು** ಶಿಥಿಲದ್ವಿತ್ವವೆಂದು ವ್ಯವಹರಿಸುವನೆಂದು ತಿಳಿಯುವುದು.

ಉದಾಹರಣೆಗಳಲ್ಲಿ ಕೊಟ್ಟಿರುವ ' ಉಸಿರ್ದಂ ' ಎಂಬುದು ಭಾಷಣಾರ್ಥಕವಾದ ' ಉಸಿರ್ ' ಧಾತುವಿನ ಮೇಲೆ ಕರ್ತ್ರರ್ಥದಲ್ಲಿ ' ಅಚ್ ' ಪ್ರತ್ಯಯವನ್ನು ಮಾಡಲು ನಿಷ್ಪನ್ನವಾಗಿರುವುದು. ತದ್ಧಿತದಲ್ಲಿ ' ಉಸಿರ್ಗಂ ' ಎಂಬುದು ' ಉಸಿರ್ ' ಎಂಬ ಉಚ್ಛ್ವಾಸವಾಯು ದ್ರವ್ಯವಾಚಕ ನಾಮದ ಮೇಲೆ - ' **ತೇನ ಜೀವತಿ ಗವಣಿಗೌ || ೪೧೫ ||** ' ಎಂಬ ಸೂತ್ರದಿಂದ ' ಗ ' ಪ್ರತ್ಯಯವು

ಬಂದು ಸಿದ್ಧವಾಗಿರುವುದು. 'ಕದಿರ್ವಳಂ' ಎಂಬುದು ಕಣಿಶವಾಚಕ ಅಥವಾ ಕಿರಣವಾಚಕವಾದ 'ಕದಿರ್' ಶಬ್ದದ ಮೇಲೆ 'ವಳವಳ್ಳಾ || ೪೨೬ ||' ಎಂಬ ಸೂತ್ರದಿಂದ ಅಲ್ಲಿ ಅಧಿಕೃತವೆಂಬರ್ಥದಲ್ಲಿ 'ವಳ' ಪ್ರತ್ಯಯವು ಬಂದು ನಿಷ್ಪನ್ನವಾಗಿರುವುದು. 'ತಳಿರ್ಗೆಂಪು' ಎಂಬುದು 'ತಳಿರ ಕೆಂಪುವೋಲ್ ಕೆಂಪು' ಅಥವಾ 'ತಳಿರ ಕೆಂಪು' ಎಂದು ವಿಗ್ರಹವನ್ನು ಮಾಡಲು ಸಮಾಸಸಂಜ್ಞೆ ಬಂದು ತತ್ಸಂಸಕ್ತ ಕಾರ್ಯಗಳೂ ಬಂದು ಸಿದ್ಧವಾಗಿರುವುದು. 'ಎಸಳ್ಗಂದಂ' ಎಂಬುದು 'ಗಂಧ' ಎಂಬ ತದ್ಭವ ಶಬ್ದದಿಂದ ಸಮಾಸವು ಬಂದಿರುವುದರಿಂದ ಆಗಿರುವುದು. 'ಬಿದಿರ್ವಟ್ಟಿ' ಎಂಬುದು ಚಾಪೆ ಎಂಬರ್ಥಕವಾದ 'ತಟ್ಟಿ' ಶಬ್ದದೊಡನೆ 'ಬಿದಿರ್' ಶಬ್ದಕ್ಕೆ ಸಮಾಸ ಬಂದು ಆಗಿರುವುದು. ಇದಕ್ಕೆ ಸೇಣುಕಟಿವೆಂಬರ್ಥವು. 'ರೋ ದ್ವಿವ್ಯಂಜನಸ್ಯಾಹಾದೇಃ ||೬೫||' ಎಂಬ ಸೂತ್ರದಿಂದಲೂ ಕೆಲವಕ್ಕೆ — 'ಲಳೋऽನನ್ತಸ್ಥಾಯಾಶ್ಚ || ೬೬ ||' ಎಂಬ ಸೂತ್ರದಿಂದಲೂ ಈ ದ್ವಿತ್ವವು ಪ್ರಾಪ್ತವಾಗಲು ಇದರಿಂದ ನಿಷೇಧಿಸಲ್ಪಟ್ಟಿರುವುದು.

ಈ ಸೂತ್ರದಲ್ಲಿ 'ಲಘ್ವಾದೇಃ' ಎಂದು ವಿಶೇಷಣವನ್ನು ಕೊಟ್ಟಿರುವುದರಿಂದ — 'ನೇಸರ್ವ್ವೋಲ್, ಬಾಸುಱ್ವ್ವೋಲ್, ನೇಸರ್ದ್ದಾಣಂ, ಬಾಸುಱ್ಗ್ಗಂಟು' ಮೊದಲಾದ ದೀರ್ಘಾದಿಯಾದ ಪ್ರಯೋಗಗಳಲ್ಲಿ ನಿಷೇಧವಿಲ್ಲ. 'ಲಘೂಪಾಂತ್ಯಾತ್' ಎಂದು ಹೇಳಿರುವುದರಿಂದ — 'ಪೊಱಮಾಗ್ಗಂಟು, ಪೊಱಮಾರ್ದ್ದನಂ, ಗಱಿಗೂಱ್ಜ್ಜಾರಿ, ಒಳನಾಱ್ಜ್ಜಗಳಂ' ಮೊದಲಾದ ಗುರೂಪಾಂತ್ಯಗಳಾದ ಪ್ರಯೋಗಗಳಲ್ಲಿ ಬರುವುದಿಲ್ಲ. 'ಅನೇಕಸ್ವರಾತ್' ಎಂದು ಹೇಳಿರುವುದರಿಂದ ಏಕಸ್ವರಗಳಾದ 'ಇರ್ದ್ದ, ಒಗ್ಗೇಣ್, ಮುಳ್ಗೊಂಚಲ್, ಅಗಳ್ದ್ದು' ಮೊದಲಾದುವುಗಳಲ್ಲಿ ಬರುವುದಿಲ್ಲ. 'ಅಲಃ' ಎಂದು ಹೇಳಿರುವುದರಿಂದ ಲ ಕಾರವುಳ್ಳ — 'ಅರಲ್ದ್ದು, ಅರಲ್ದ್ದೋಟಂ' ಮೊದಲಾದುವುಗಳಲ್ಲಿ ನಿಷೇಧವಿಲ್ಲ. 'ಗದವಜಃ' ಎಂದು ಹೇಳಿರುವುದರಿಂದ — 'ಬಿಗುತ್ತ್ಮ, ಬಿಗುತ್ತ್ಮ, ಮುಗುಳ್ತ್ತು, ಅಗಲ್ತ್ತೆ' ಮೊದಲಾದುವುಗಳಲ್ಲಿ ತ ಕಾರಾದಿಗಳಿಗೆ ನಿಷೇಧವಿಲ್ಲ. 'ವೃತ್ತೌ' ಎಂದು ಹೇಳಿರುವುದರಿಂದ — 'ವಿಾನ ಪೊಣಗ್ಗಂಗೆಯೊಳ್, ಅವಳ್ಗ್ಗಾಡಿಕಾರ್ತ್ತಿ, ಇವರ್ದ್ದಕ್ಷರ್, ಇವಳ್ದ್ದಾಕ್ಷಾಯಣಿ, ಬುಧರ್ ವ್ವಿಶಿಷ್ಟರ್, ಪೊಗೞ್ವ್ವಾಸವನಂ, ಕುಡಿವರ್ಜ್ಜೋನ್ನಮುಂ, ಪೊಗೞ್ಜ್ಜಾನಕಿಯುಂ' ಮೊದಲಾದ ವಾಕ್ಯಗಳಲ್ಲಿ ನಿಷೇಧವು ಪ್ರವರ್ತಿಸುವುದಿಲ್ಲವೆಂದು ಅರಿಯುವುದು.

**ಅವತಾರಿಕೆ ೭೪**

ಪೂರ್ವಸೂತ್ರದಲ್ಲಿ ದ್ವಿತ್ವಕ್ಕೆ ನಿಷೇಧವು ಹೇಳಲ್ಪಟ್ಟಿತು. ಈಗ ಆ ನಿಷೇಧವು ಲಘ್ವಾದಿ ಲಘೂಪಾಂತ್ಯಗಳಾದ ಅನೇಕ ಸ್ವರವುಳ್ಳ ಅಲಕಾರಾಂತಗಳಾದ ಕೆಲವು ಶಬ್ದಗಳ ವಿಷಯದಲ್ಲಿ ಅಪ್ರಾಪ್ತವಾಗಿರಲು ಅಂತಹ ಶಬ್ದಗಳ ಮುಂದಿರುವ ಕೆಲವು ಪ್ರತ್ಯಯನಿಷ್ಠವಾದ ಗ ದ ವ ಕಾರಗಳಿಗೆ ವಿಕಲ್ಪವಾಗಿ ದ್ವಿತ್ವವನ್ನು ವಿಧಿಸುತ್ತಾನೆ.

**ಸೂತ್ರಂ || ವಾ ಗೆಗಳ್ದದಪವಗುಮಿ || ೭೪ ||**

**ಅರ್ಥ || ಲಘ್ವಕ್ಷರಾದಿಯಾಗಿಯೂ ಲಘೂಪಾಂತ್ಯವಾಗಿಯೂ ಇರುವ ಅಲಕಾರಾಂತವಾದ ಅನೇಕ ಸ್ವರವುಳ್ಳ ಶಬ್ದದ ಮುಂದಿನ ಗೆ, ಗಳ್, ದ, ದಪ, ವ, ಗುಮ್ ಎಂಬ ಪ್ರತ್ಯಯಗಳ ಅವಯವಗಳಾದ ಗ ದ ವ ಗಳಿಗೆ ದ್ವಿತ್ವವು ವಿಕಲ್ಪವಾಗಿ ಬರುವುದು.**

**ಉದಾಹರಣೆ** ॥ ಕೊನರ್+ಗೆ=ಕೊನಗ್ಗೆ, ಕೊನಗೆ — 'ಅದಿಗ್ಗೆ, ಅದಿರ್ಗೆ; ಎಸಳ್ಗ್ಗೆ, ಎಸಳ್ಗೆ; ಪೊಗಲ್ಗ್ಗೆ, ಪೊಗಲ್ಗೆ; ಸುರಗ್ಗಳ್, ಸುರಗಳ್; ಎಸಳ್ಗ್ಗಳ್, ಎಸಳ್ಗಳ್; ಉಸಿರ್ದ್ದರ್, ಉಸಿರ್ದರ್; ಅಗುಲ್ದ್ದಯ್, ಅಗುಲ್ದಯ್; ಉಸಿರ್ದ್ದಪೆಂ, ಉಸಿರ್ದಪೆಂ; ಪೊಗಲ್ದ್ದಪೆಂ, ಪೊಗಲ್ದಪೆಂ; ಕಿಸುರ್ವ್ವಯ್, ಕಿಸುರ್ವಯ್; ತೆಗಲ್ವ್ವೆಂ, ತೆಗಲ್ವೆಂ; ಒಸರ್ಗ್ಗುಂ, ಒಸರ್ಗುಂ; ಮುಗುಲ್ಗ್ಗುಂ, ಮುಗುಲ್ಗುಂ' ಮೊದಲಾದುವು ಇದಕ್ಕೆ ಕ್ರಮವಾಗಿ ಉದಾಹರಣೆಗಳೆಂದು ತಿಳಿಯುವುದು.

**ವಿಚಾರ ೭೪**

ಈ ಸೂತ್ರದಲ್ಲಿ — 'ವಾ, ಗೆಗಳ್ದಪವಗುಮಿ' ಎಂದು ಎರಡು ಪದಗಳಿರುವುವು. ಪೂರ್ವ ಸೂತ್ರದಲ್ಲಿ 'ನ, ವೃತ್ತೌ' ಎಂಬ ಎರಡು ಪದಗಳನ್ನು ಬಿಟ್ಟು ಸೂತ್ರವನ್ನೇ ಅನುವರ್ತಿಸುವುದು. 'ದ್ವಿಃ' ಎಂಬುದು ಈ ಪ್ರಕರಣದಲ್ಲೆಲ್ಲಾ ಇದ್ದೇ ಇರುವುದು. ಗೆಗಳಾದಿ ಪ್ರತ್ಯಯಗಳಲ್ಲಿ ಜ ಕಾರವು ಸಂಭವಿಸುವುದಿಲ್ಲವಾದುದರಿಂದ ಅದನ್ನು ಬಿಟ್ಟು ಗ ದ ವ ಕಾರಗಳನ್ನು ಮಾತ್ರ ಸಂಬಂಧಿಸಬೇಕು. 'ಲಘ್ವಾದಿ' ಮೊದಲಾದುವನ್ನು ಪೂರ್ವದಂತೆಯೇ ಸಮಾಸಮಾಡಿ ಶಬ್ದ ಸ್ವರೂಪಕ್ಕೆ ವಿಶೇಷಣ ಮಾಡುವುದು. ಅದು ಪಂಚಮ್ಯಂತವಾಗಿರುವುದರಿಂದ 'ಉತ್ತರಸ್ಯ' ಎಂದು ಉಪಸ್ಥಿತವಾಗುವುದು. ಅದನ್ನು 'ಗೆಗಳ್ದದಪವಗುಮಿ' ಎಂಬ ಸಪ್ತಮ್ಯಂತವನ್ನು — **'ಉಭಯನಿರ್ದೇಶೇ ಪಂಚಮೀನಿರ್ದೇಶೋ ಬಲವಾನ್'** ಎಂಬ ನ್ಯಾಯದಿಂದ ಪಂಚಮ್ಯಂತಸಪ್ತಮ್ಯಂತೋಭಯನಿರ್ದೇಶವಿದ್ದೆಡೆಯಲ್ಲಿ ಪಂಚಮೀನಿರ್ದೇಶವು ಪ್ರಬಲವಾದುದರಿಂದ ಅದನ್ನು ವಿಪರಿಣಮಿಸದೆ ದುರ್ಬಲವಾದ ಸಪ್ತಮ್ಯಂತವನ್ನು ಷಷ್ಠ್ಯಂತವಾಗಿ ವಿಪರಿಣಮಿಸಿ ಅದಕ್ಕೆ ವಿಶೇಷಣ ಮಾಡುವುದು. ವಿಪರಿಣತವಾದ ಷಷ್ಠ್ಯಂತವನ್ನು ಅವಯವಾವಯವಿಭಾವರೂಪಸಂಬಂಧದಿಂದ ಅನುವರ್ತಿತವಾದ ಗ ದ ವ ಕಾರಗಳಿಗೆ ವಿಶೇಷಣ ಮಾಡುವುದು. ಆದುದರಿಂದ — ಲಘ್ವಕ್ಷರಾದಿಯಾಗಿಯೂ ಲಘ್ವಕ್ಷರೋಪಾಂತ್ಯವಾಗಿಯೂ ಅಲಕಾರಾಂತವಾಗಿಯೂ ಅನೇಕ ಸ್ವರವುಳ್ಳುದಾಗಿಯೂ ಇರುವ ಶಬ್ದದ ಮುಂದಿನ ಗೆ ಗಳಾದಿ ಪ್ರತ್ಯಯಾವಯವಗಳಾಗದ ವ ಕಾರಗಳಿಗೆ ವಿಕಲ್ಪವಾಗಿ ದ್ವಿತ್ವವು ಬರುವುದೆಂದು ಸೂತ್ರಾರ್ಥವಾಗುವುದು. ಇದರಿಂದ —'ಕೊನಗ್ಗೆ' ಮೊದಲಾದುವು ಸಿದ್ಧಿಸುವುವು.

ಇಲ್ಲಿ—'ಗೆ' ಎಂಬುದು ಸುಪ್-ತಿಙ್-ಸಾಧಾರಣ ಪ್ರತ್ಯಯವು. ಆದುದರಿಂದ ಸುಪ್-ತಿಙ್ಗಳೆರಡಕ್ಕೂ ಮೂಲದಲ್ಲಿ ಉದಾಹರಣೆಗಳು ಕೊಡಲ್ಪಟ್ಟಿವೆ. ಅಲ್ಲಿ 'ಕೊನಗ್ಗೆ' ಎಂಬುದು ಅಂಕುರ ವಾಚಕ 'ಕೊನರ್' ಎಂಬ ನಾಮದ ಮೇಲೆ ಸಂಪ್ರದಾನಾರ್ಥದಲ್ಲಿ ಚತುರ್ಥಿಯ ಪ್ರತ್ಯಯವನ್ನು ಮಾಡಲು ಸಿದ್ಧವಾಗಿರುವುದು. ಕಂಪನವಾಚಿಯಾದ 'ಅದಿರ್' ಧಾತುವಿನ ಮೇಲೆ ಆಶಿರಾದ್ಯರ್ಥದಲ್ಲಿ 'ಗೆತ್' ಪ್ರತ್ಯಯವನ್ನು ಮಾಡಲು 'ಅದಿರ್ಗೆ' ಎಂದು ಸಿದ್ಧವಾಗುವುದು. ಹೀಗೆಯೇ ಮುಂದೆ ಕೊಟ್ಟಿರುವ ಉದಾಹರಣೆಗಳಲ್ಲಿಯೂ ನಾಮಧಾತುಗಳ ವಿಭಾಗಗಳಿಂದ ಸುಪ್ತಿಙ್ವಿಭಾಗಗಳನ್ನು ಅರಿಯುವುದು. 'ಗಳ್' ಎಂಬುವದು ತಿಙ್ಙನಲ್ಲಲ್ಲವಾದುದರಿಂದ ನಾಮವಿಭಕ್ತಿಯನ್ನೇ ಗ್ರಹಿಸಿರುವುದು. 'ದ, ದಪ, ವ' ಈ ಮೂರೂ ತಿಙ್ಪರದಲ್ಲಿರುವಾಗ ಅತೀತಾದಿ ಕಾಲವಿಶೇಷದ್ಯೋತಕ

ವಾಗಿ ಧಾತುಗಳ ಮೇಲೆ ಬರುವ ಪ್ರತ್ಯಯಗಳು ‘ ಗುಮ್ ’ ಎಂಬುದು ತಿಙ್ಙಿಗೆ ಆದೇಶವಾಗಿ ಬಂದುದು— ಎಂದು ವಿಭಾಗ ಮಾಡಿಕೊಂಡು ಅಂತಹವುಗಳನ್ನೇ ಇಲ್ಲಿ ಉದಾಹರಿಸಲ್ಪಟ್ಟಿವೆ.

ಈ ಸೂತ್ರದಲ್ಲಿ - ‘ ಲಘ್ವಾದಿ ’ ಎಂಬುದನ್ನು ಅನುವರ್ತಿಸಿರುವುದರಿಂದ — ‘ ತಾಯ್ವಿಗ್ಗೆ, ತಾಯ್ವಿಗ್ಗಳ್; ಕಣ್ಮಲದ್ವೆಯರ್, ಕಣ್ಮಲದ್ವೆಪಯರ್; ಕಣ್ಮಲಗ್ಗೆಂ; ಕಣ್ಮಲವ್ವೆಯರ್; ಬಾಸುಳ್ಗ್ಗೆ, ಬಾಸುಳ್ಗ್ಗಳ್; ಸೂರುಳ್ಗ್ಗೆ, ಸೂರುಳ್ಗ್ಗುಂ ’ ಮೊದಲಾದ ಗುರ್ವಕ್ಷರಾದಿ ಶಬ್ದಗಳಲ್ಲಿಯೂ ‘ ಲಘೂಪಾಂತ್ಯಾತ್ ’ ಎಂದು ಹೇಳಿರುವುದರಿಂದ — ‘ ಪೊಱಮಾಗ್ಗೆ, ಪೊಱಮಾಗ್ಗೆಳ್; ಒಳಸೋಗ್ಗೆ, ಒಳಸೋಗ್ಗೆಳ್; ಒಳಸೋದ್ದೆಂ, ಒಳಸೋದ್ದೆಪಂ, ಒಳಸೋವ್ವೆಂ, ಒಳಸೋವ್ವೆಯರ್, ಒಳಸೋಗ್ಗೆಂ, ನೆಲದಾಳ್ಗ್ಗೆ, ನೆಲದಾಳ್ಗ್ಗಳ್; ನೆಲೆಬಾಳ್ಗ್ಗೆ; ನೆಲೆಬಾಳ್ಗಳ್, ನೆಲೆಬಾಳ್ದ್ದಂ, ನೆಲೆಬಾಳ್ದ್ದಪಂ, ನೆಲೆಬಾಳ್ವ್ವಂ, ನೆಲೆಬಾಳ್ಗ್ಗುಂ ’ ಮೊದಲಾದ ದೀರ್ಘೋಪಾಂತ್ಯ ಶಬ್ದಗಳಲ್ಲಿಯೂ ‘ ಅನೇಕಸ್ವರಾತ್ ’ ಎಂದು ಹೇಳಿರುವುದರಿಂದ ಏಕಸ್ವರಗಳಾದ — ‘ ಮುಳ್ಗ್ಗೆ, ಮುಳ್ಗ್ಗಳ್; ಕಳ್ಗ್ಗೆ, ಕಳ್ಗ್ಗಳ್; ಕಳ್ದ್ದಂ, ಕಳ್ದ್ದಪಂ; ಕಳ್ವ್ವಂ, ಕಳ್ಗ್ಗುಂ ’ ಮೊದಲಾದುವುಗಳಲ್ಲಿಯೂ ‘ ಅಲಃ ’ ಎಂದು ಹೇಳಿರುವುದರಿಂದ — ‘ ಬಿಸಿಲ್ಗ್ಗೆ, ಬಿಸಿಲ್ಗ್ಗಳ್; ಕವಲ್ಗ್ಗೆ, ಕವಲ್ಗ್ಗಳ್; ಕವಲ್ದ್ದುದು, ಕವಲ್ದ್ದಪುದು; ಕವಲ್ವ್ವಂ, ಕವಲ್ಗ್ಗುಂ ’ ಮೊದಲಾದ ಲ ಕಾರಾಂತ ಶಬ್ದಗಳಲ್ಲಿಯೂ ಗೆ ಗಳಾದಿಗಳನ್ನು ಹೇಳಿರುವುದರಿಂದ — ‘ ಅಲಗ್ಗೋರಟೆಯಾ, ಪೊಗಳ್ಗ್ಗಾಂಗೇಯನಂ, ಪಾರ್ವದ್ದ್ವಾನಪ್ರಿಯರ್, ಮುಗುಳ್ದ್ದಾಳಿಂಬದ; ಜನವ್ವೆಂದ್ಯರ್ ’ ಮೊದಲಾದುವುಗಳಲ್ಲ ನಾಮಸ್ಥನಾದ ಗ ಕಾರಾದಿಗಳಲ್ಲಿಯೂ ಈ ವಿಕಲ್ಪದ್ವಿತ್ವವು ಪ್ರವರ್ತಿಸುವುದಿಲ್ಲವಾದುದರಿಂದ ಪೂರ್ವೋಕ್ತ ನಿತ್ಯದ್ವಿತ್ವವೇ ಬಂದಿರುವುದೆಂದು ತಿಳಿಯಬೇಕು.

ಇಲ್ಲ **ದರ್ಪಣಕಾರನು** —

ಪ್ರಗೆ ದ ದ ಸ ವ ಕಾರಂ ವಿಧಿ
ಯಂ ಗೆಕಾರಂ ವರ್ತಮಾನಕಾಲದ ಗುಂ ಧಾ
ತುಗೆ ೞ ಲ ಕುಳ ರೇಫಾಂತ
ಕ್ಕೊಗೆಗುಂ ಶಿಥಿಲತ್ವಮುಗುರುಪೂರ್ವಸ್ಥಿತಿಯಿಂ (**ಸೂತ್ರ ೪೪**)

ಎಂಬ ಸೂತ್ರದಿಂದ ಶಿಥಿಲದ್ವಿತ್ವವನ್ನು ಅಂಗೀಕರಿಸಿರುವನು. ಸುಪ್ಪಾದ ಗೆ-ಗಳ್ ವಿಷಯದಲ್ಲಿ ಬೇರೆ ಸೂತ್ರವನ್ನು ಮಾಡಿರುವನು ಅದರಿಂದಲೇ ಮುಂದಿನ ಸೂತ್ರದ ಅರ್ಥವೂ ಸಿದ್ಧಿಸುವುದು.

**ಅವತಾರಿಕೆ ೭೫**

ದೀರ್ಘಾದಿ ಶಬ್ದದಲ್ಲಿ ಪೂರ್ವಸೂತ್ರವು ಅಪ್ರವೃತ್ತವಾಗಲು ಅಂತಹ ಶಬ್ದದ ಮುಂದಿನ ಗೆ-ಗಳ್ ವಿಷಯದಲ್ಲಿ ವೈಕಲ್ಪಿಕ ದ್ವಿತ್ವವನ್ನು ಹೇಳುತ್ತಾನೆ.

**ಸೂತ್ರಂ ‖ ಕಾದಲರಃ ‖ ೭೫ ‖**

**ಅರ್ಥ ‖** ‘ ಕಾದಲರ್ ’ ಎಂಬ ಶಬ್ದದ ಮುಂದಿನ ಗೆ, ಗಳ್ ಪ್ರತ್ಯಯಗಳ ಗ ಕಾರಕ್ಕೆ **ದ್ವಿತ್ವವು ವಿಕಲ್ಪವಾಗಿ ಬರುವುದು.**

**ಉದಾಹರಣೆ ‖** ಕಾದಲರ್ + ಗೆ = ಕಾದಲಗ್ಗೆ, ಕಾದಲಗೆ ‖ ಹೀಗೆಯೇ ಕಾದಲ ಗಳ್, ಕಾದಲಗ್ಗಳ್ ಎಂದು ಎರಡೆರಡು ರೂಪಗಳು ಸಿದ್ಧಿಸುವುವು.

**ವಿಚಾರ ೭೫**

ಈ ಸೂತ್ರದಲ್ಲಿ ' ಕಾದಲರಃ ' ಎಂಬುದೊಂದೇ ಪದವಿರುವುದು. ಇದು — ' **ಸ್ತ್ರೀಪುಂಸಾದರ್ದಿರ್ವಿರ್ಬಹುಲಂ || ೨೩೯ ||** ಎಂಬ ಸೂತ್ರದಿಂದ ವಿಹಿತವಾದ ' ಅರ್ ' ಪ್ರತ್ಯಯಾಂತವಾದ ರಮಣವಾಚಕ ಶಬ್ದವು. ಆದುದರಿಂದ ಈ ಶಬ್ದದ ಮುಂದೆ ದ ದಪಾದಿಗಳು ಸಂಭವಿಸುವುದಿಲ್ಲವೆಂದು ' ಗೆ, ಗಳ್ ' ಗಳನ್ನು ಮಾತ್ರ ಇಲ್ಲಿ ಸಂಬಂಧಿಸುವುದು. ಪ್ರಕೃತಿಪ್ರತ್ಯಯಾಂತರಗಳನ್ನು ವ್ಯಾವೃತ್ತಿ ಮಾಡುವುದಕ್ಕಾಗಿ ' ಕಾದಲರಃ ' ಎಂದು ಸ್ವರೂಪವನ್ನೇ ನಿರ್ದೇಶಿಸಿರುವುದು. ಇದು ಪಂಚಮ್ಯಂತವಾದುದರಿಂದ ' ಉತ್ತರಸ್ಯ ' ಎಂಬುದು ಉಪಸ್ಥಿತವಾಗುವುದು. ಪೂರ್ವಸೂತ್ರದಿಂದ ' ವಾ, ದ್ವಿಃ ' ಎಂಬ ಎರಡು ಪದಗಳೂ ಅನುವರ್ತಿಸಲ್ಪಡುವುವು. ತಥಾಚ — ' ಕಾದಲರ್ ' ಎಂಬುದರ ಮುಂದಿನ ' ಗೆ, ಗಳ್ ' ಪ್ರತ್ಯಯಗಳ ಗ ಕಾರವು ವಿಕಲ್ಪದಿಂದ ದ್ವಿರುಚ್ಚಾರಿತವಾಗುವುದೆಂದು ಸೂತ್ರಾರ್ಥವಾಗುವುದು. ಇದರಿಂದ ' ಕಾದಲಗ್ಗೆ ' ಮೊದಲಾದುವು ಸಿದ್ಧಿಸುವುವು. ಇಲ್ಲಿ ' ಕಾದಲರ್ ' ಎಂದು ಸ್ವರೂಪನಿರ್ದೇಶಮಾಡಿರುವುದರಿಂದ ರಮಣೀವಾಚಕ ' ಕಾದಲೆಯರ್ ' ಶಬ್ದಕ್ಕೂ ' ಕಾದಲದಿರ್, ಕಾದಲವಿರ್ ' ಎಂಬ ದಿರ್-ವಿರಂತ ಶಬ್ದಗಳಿಗೂ ಗ್ರಹಣವಿಲ್ಲೆಂದರಿದು — ' ಕಾದಲೆಯಗ್ಗೆ, ಕಾದಲೆಯಗ್ಗಳ್; ಕಾದಲದಿಗ್ಗೆ, ಕಾದಲದಿಗ್ಗಳ್; ಕಾದಲವಿಗ್ಗೆ, ಕಾದಲವಿಗ್ಗಳ್ ' ಎಂಬಲ್ಲಿ ನಿತ್ಯವಾಗಿಯೇ ದ್ವಿತ್ವವನ್ನು ಗಳಿಗೆ ಮಾಡಬೇಕು.

**ದರ್ಪಣಕಾರನು** ಈ ಶಬ್ದಕ್ಕೆ ವಿಶಿಷ್ಟವಾಗಿ ಹೇಳದಿದ್ದರೂ ಸಾಮಾನ್ಯವಾಗಿ ' ಗೆ, ಗಳ್ ' ಹೇಳಿರುವ —

ಪಿಂತಮದಿರೆ ಱ ಟ ಕುಳ ರೇ
ಫಾಂತಂ ಹ್ರಸ್ವಾದಿ ಲಿಂಗಮಂತವುಗಳ್ ಮೇಣ್
ಅಂತೆ ಚತುರ್ಥಿಯ ಗೆಯುಂ ಮೇಣ್
ಮುಂತಮದಿರೆಪಿರಿದುಮೊದವುಂಗುಂಶಿಥಿಲತ್ವಂ (ಸೂತ್ರ ೪೨)

ಎಂಬ ಸೂತ್ರದಿಂದಲೇ ಸಿದ್ಧವಾಗುವುದು. ಇಲ್ಲಿ ಬಹುಳಾರ್ಥಕ ' ಪಿರಿದು ' ಶಬ್ದವನ್ನು ಹೇಳುವುದರಿಂದ ಅತಿಪ್ರಸಕ್ತಿಯೂ ವಾರಿತವಾಗುವುದೆಂದು ತಿಳಿಯುವುದು.

**ಅವತಾರಿಕೆ ೭೬**

ಹೀಗೆ ವಿಶಿಷ್ಟದ್ವಿತ್ವವನ್ನು ವಿಧಿಸಿ ಅದಕ್ಕೆ ಕೆಲವೆಡೆಗಳಲ್ಲಿ ನಿಷೇಧವನ್ನೂ ಕಲ್ಪಿಸಿ ಈಗ ಆ ನಿಷೇಧಕ್ಕೆ ವಿಷಯಗಳಲ್ಲದ ನಾನಾಬಗೆಯ ಶಬ್ದಗಳಿಗೆ ಸಂಗ್ರಹವಾಗಿ ಒಂದು ನಿಷೇಧಲಕ್ಷಣವನ್ನು ಕಲ್ಪಿಸುವುದು ಅಸಾಧ್ಯವೆಂದು ತೋರಿ ಅಂತಹ ಶಬ್ದಗಳನ್ನು ದ್ವಿತ್ವರಹಿತವಾಗಿಯೇ ಉಚ್ಚರಿಸಿ ಒಂದು ಗಣವನ್ನು ಮಾಡಿ ಹೇಳುತ್ತಾನೆ.

**ಸೂತ್ರಂ || ಬರ್ದಿಲಾದಯಃ || ೭೬ ||**

**ಅರ್ಥ ||** ಬರ್ದಿಲಾದಿ ಗಣದಲ್ಲಿ ಪಠಿತವಾದ ಶಬ್ದಗಳು ದ್ವಿರ್ಭಾವರಹಿತಗಳಾಗಿಯೇ ಇರುವುವೆಂದು ತಿಳಿಯುವುದು.

**ಉದಾಹರಣೆ ||** ಬರ್ದಿಲಂ, ಗರ್ದುಗು, ಅದಿರ್ಮುತ್ತೆ, ಕರ್ದುಕು, ಕರ್ದುಂಕು, ಬರ್ದುಕು, ಬರ್ದುಂಕು, ಅಮರ್ದು, ಅಮರ್ದುವಳ್ಳಿ, ಎರ್ದೆ, ಮೊದಲಾದುವೇ ಬರ್ದಿಲಾದಿ

ಗಣವು. ಇಲ್ಲಿ ಬಹುವಚನ ನಿರ್ದೇಶವನ್ನು ಮಾಡಿರುವುದರಿಂದ ಇದು ಆಕೃತಿಗಣವೆಂದು ತಿಳಿದು ಇದಕ್ಕೆ ಸಜಾತೀಯವಾದ ಇನ್ನೂ ಕೆಲಶಬ್ದಗಳು ಈ ಗಣಕ್ಕೆ ಸೇರಿದುವು ಪ್ರಯೋಗಗಳಲ್ಲಿವೆ ಎಂದು ತಿಳಿಯುವುದು.

**ವಿಚಾರ ೭೬**

ಇಲ್ಲಿ ' ಬರ್ದಿಲಾದಯಃ ' ಎಂಬುದೊಂದೇ ಪದವಿರುವುದು. ಉಚ್ಚಾರಣೆಯ ಬಲದಿಂದಲೆ ದ್ವಿತ್ವವಿಲ್ಲವೆಂದು ತಿಳಿಯಬೇಕು. ಈ ಸೂತ್ರವನ್ನು ಹೇಳದಿರಲು ' **ರೋ ದ್ವಿರ್ವ್ಯಂಜನಸ್ಯಾಹಾದೇಃ** ' ಎಂಬ ಸೂತ್ರದಿಂದ ದ್ವಿತ್ವವು ಬರಬೇಕಾಗುವುದು. ಆದುದರಿಂದ ಈ ಸೂತ್ರವು ಪ್ರಾರಂಭಿಸಲ್ಪಟ್ಟಿದೆ. ಇಲ್ಲಿ ಕೊಟ್ಟಿರುವ — ' ಬರ್ದಿಲಂ ' ಎಂಬುದಕ್ಕೆ ಸ್ವರ್ಗವೆಂದು, ' ಗರ್ದುಗು ' ಎಂದರೆ ' ಕುಬೇರಾಕ್ಷಿ ' ಎಂಬ ಮೂಲಿಕೆಯೂ ' ಅದಿರ್ಮುತ್ತೆ ' ಎಂದರೆ ' ವಸಂತದೂತಿ ' ಎಂಬ ಲತೆಯೂ ' ಕರ್ದುಕು, ಕರ್ದುಂಕು ' ಎಂದರೆ ' ಚುಂಚುಕ್ರಿಯೆ ' ಎಂದೂ ' ಬರ್ದುಕು, ಬರ್ದುಂಕು ' ಎಂದರೆ ' ಜೀವನಕ್ರಿಯೆ ' ಎಂದೂ ' ಅಮರ್ದು ' ಎಂದರೆ ' ಅಮೃತ ' ಎಂದೂ ' ಅಮರ್ದುವಳ್ಳಿ ' ಎಂದರೆ ' ಸೋಮಲತೆ ' ಎಂದೂ ' ಎರ್ದೆ ' ಎಂದರೆ ' ಹೃದಯ ' ವೆಂದೂ ಅರ್ಥವಾಗುವುದು. **ದರ್ಪಣಕಾರ**ನು ಈ ವಿಷಯದಲ್ಲಿ —

> ಬರ್ದಿಲಂ ಸಗ್ಗಕ್ಕೆ ಸೆಸ
> ಗರ್ದುಗೆಸೆವಮರ್ದಮರ್ದುವಳ್ಳಿಕಂಪಲರ್ದುದೆನ
> ಲ್ಕೆರ್ದೆವಾಯ್ದದಿರ್ಮುತ್ತೆ ಪೊದ
> ರ್ದೆರ್ದೆಯೆಂಬಿವು ಸಹಜಶಿಥಿಲವೃತ್ತಿಯನಾಳ್ಗುಂ ( ಸೂತ್ರ ೪೫)

ಎಂದು ಸಹಜಶಿಥಿಲವೃತ್ತಿಯನ್ನು ಹೇಳಿರುವನು. ಇದರಿಂದ ಸ್ವಭಾವವಾಗಿ ಸಂಯುಕ್ತವಾದುದರಲ್ಲಿ **ಶಾಸನಕಾರ**ನು ಎಲ್ಲಿ ದ್ವಿತ್ವನಿಷೇಧವನ್ನು ಮಾಡುವನೋ ಅಲ್ಲಿ **ದರ್ಪಣಕಾರ**ನ ಮತದಲ್ಲಿ ಶಿಥಿಲದ್ವಿತ್ವವೆಂದು ತಿಳಿಯಬೇಕು. ವಿಕಲ್ಪವನ್ನು ಹೇಳಿರುವ ಕಡೆ ಉಭಯವು ಉಂಟೆಂದೂ ಬಹುಳಗ್ರಹಣಾದಿಗಳಿಂದ ಪರಸ್ಪರವಾಗಿ ಐಕಕಂಠ್ಯವನ್ನು ಕಲ್ಪಿಸಬೇಕೆಂದೂ ತಿಳಿಯಬೇಕು. ಈ ಶೈಥಿಲ್ಯಾಂಗೀಕಾರವು ಕವಿತಾವಿಷಯದಲ್ಲಿ ವೃತ್ತಲಕ್ಷಣಗಳಿಗೆ ಅತ್ಯಂತೋಪಕಾರಕವಾಗುವುದು. ಇದಕ್ಕೆಲ್ಲಾ ಪ್ರಾಮಾಣಿಕ ಪ್ರಯೋಗಗಳನ್ನು ನೋಡಿ ಉಪಪತ್ತಿಯನ್ನು ವಿದ್ವಾಂಸರು ಕಲ್ಪಿಸಬೇಕು.

ವ್ಯಂಜನಸಂಧಿಯೊಳ್ ದ್ವಿತ್ವಪ್ರಕರಣಂ ಸಮಾಪ್ತಂ

## ॥ ಅಥ ವ್ಯಂಜನಾದೇಶಸಂಧಿ ಪ್ರಕರಣಂ ॥

**ಅವತಾರಿಕೆ ೭೭**

ಇದುವರೆಗೂ ಕೆಲವು ವ್ಯಂಜನಗಳಿಗೆ ದ್ವಿರುಚ್ಚಾರಣರೂಪಕಾರ್ಯವನ್ನು ವಿಧಿಸಿ ಅದಕ್ಕುಂಟಾದ ಅತಿಪ್ರಸಕ್ತಿಯನ್ನು ಪರಿಹರಿಸಿದನು. ಈಗ ಈ ಪಾದವುಗಿಯುವವರೆಗೂ ಸಂಹಿತಾವಿಷಯದಲ್ಲಿ ವ್ಯಂಜನಕ್ಕೆ ಬರುವ ಆದೇಶಗಳನ್ನೂ ಅದಕ್ಕೆ ಅಪವಾದಗಳನ್ನೂ ಹೇಳಲು ಮೊದಲು ಪದಾಂತ ಮ ಕಾರಕ್ಕೆ ಬರುವ ಆದೇಶವನ್ನು ಹೇಳುತ್ತಾನೆ.

**ಸೂತ್ರಂ ॥ ಮೋ ನಃ ಸ್ವರೇ ॥ ೭೭ ॥**

**ಅರ್ಥ ॥ ಸ್ವರಪರಕವಾದ ಪದಾಂತ ಮ ಕಾರಸ್ಥಾನದಲ್ಲಿ ನ ಕಾರಾದೇಶವು ಬರುವುದು.**

**ಉದಾಹರಣೆ ॥** ಜನಮ್ + ಈತಂ = ಜನನೀತಂ ಹೀಗೆಯೇ -- ' ಸುಜನನಿಷಿಪಂವ್ಯಂ ಅಕ್ಕನೀಕೆ, ಅಮ್ಮನಿವಳ್ ' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೭೭**

ಈ ಸೂತ್ರದಲ್ಲಿ ' ಮಃ, ನಃ, ಸ್ವರೇ ' ಎಂಬ ಮೂರು ಪದಗಳಿರುವುವು. ಇವುಗಳಲ್ಲಿ ' ಮಃ ' ಎಂಬುದು ಮ ವರ್ಣಬೋಧಕವಾದ ಷಷ್ಠ್ಯಂತಪದವು. ಆದುದರಿಂದ ' ಸ್ಥಾನೇ ' ಎಂಬುದು ಉಪಸ್ಥಿತವಾಗುವುದು. ' ನಃ ' ಎಂಬುದು ಉಚ್ಚಾರಣಾರ್ಥಕಾಕಾರವುಳ್ಳ ನ ಕಾರ ಬೋಧಕವಾದ ಪ್ರಥಮಾಂತಪದವು. ' ಸ್ವರೇ ' ಎಂಬುದು ನಿಮಿತ್ತಬೋಧಕ ಸಪ್ತಮ್ಯಂತ ನಿರ್ದೇಶವಾದುದರಿಂದ ' ಪರೇ ' ಎಂದು ಉಪಸ್ಥಿತವಾಗುವುದು. ಪ್ರಾಮಾಣಿಕ ಪ್ರಚುರ ಪ್ರಯೋಗ ಬಲದಿಂದ ಇಲ್ಲ ' ಪದಾಂತಸ್ಯ ' ಎಂಬುದನ್ನು ಇಟ್ಟುಕೊಂಡು **' ಮಃ '** ಎಂಬುದಕ್ಕೆ ವಿಶೇಷಣ ಮಾಡುವುದು. ಆದುದರಿಂದ ಸ್ವರಪರಕವಾದ ಪದಾಂತ ಮ ಕಾರಕ್ಕೆ ನ ಕಾರಾದೇಶವು ಬರುವುದೆಂದು ಸೂತ್ರಾರ್ಥವಾಗುವುದು. ಇದರಿಂದ ಪದದ್ವಯಸಮಭಿವ್ಯಾಹಾರದಲ್ಲಿಯೇ ನ ಕಾರಾದೇಶವು ಬರುವುದೆಂದು ' ಜನನೀತಂ ' ಮೊದಲಾದುವನ್ನೆ ಇಲ್ಲ ಉದಾಹರಿಸಿರುವೆವು. ಮತ್ತು ಮುಂದೆ ನಪುಂಸಕಲಿಂಗವಿಷಯದಲ್ಲಿ ವಿಕಲ್ಪವಾಗಿ ನ ಕಾರಾದೇಶವನ್ನು ವಿಧಿಸುವುದರಿಂದ ಪುಲ್ಲಂಗ-ಸ್ತ್ರೀಲಿಂಗಗಳೇ ಈ ಸೂತ್ರಕ್ಕೆ ವಿಷಯಗಳೆಂದು ಅಂತಹ ಪ್ರಯೋಗಗಳೇ ತೋರಿಸಲ್ಪಟ್ಟವೆ. ಇಲ್ಲ ' ಪದಾಂತ ' ಎಂದು ಹೇಳಿರುವುದರಿಂದ ' ತೆಮರ್, ಬೆಮರ್, ಮಾಳಿಗೆ, ಮಂಚಿಗೆ ' ಮೊದಲಾದ ಪದಮಧ್ಯಗತ ಮ ಕಾರಕ್ಕೆ ನ ಕಾರಾದೇಶವು ಬರುವುದಿಲ್ಲ. ' ಸ್ವರೇ ' ಎಂದು ಹೇಳಿರುವುದರಿಂದ ' ಅಣ್ಣಂ ಬಂದಂ, ಅಕ್ಕಂ ಪೋದಳ್ ' ಮೊದಲಾದ ಪ್ರಯೋಗಗಳಲ್ಲಿ ವ್ಯಂಜನವು ಪರಕವಾದ ಮ ಕಾರಕ್ಕೆ ನ ಕಾರಾದೇಶವನ್ನು ಮಾಡಲಾಗದು. ಈ ಸೂತ್ರದಲ್ಲಿ ಪದಾಂತ ಮ ಕಾರಕ್ಕೆ ನ ಕಾರಾದೇಶವೆಂದು ಹೇಳಿರುವುದರಿಂದ ಅದು ಅ ಕಾರದ ಮುಂದಿನ ನಕಾರಕ್ಕೇ ಬರುವುದೆಂದು ತಿಳಿಯುವುದು.

ಇಲ್ಲಿ ಕೆಲವರು ಅ ಕಾರಾಂತ ನಪುಂಸಕ ಶಬ್ದಗಳಿಗೆ ' ಅಮ್ ' ಪ್ರತ್ಯಯವು ಪರವಾಗಿರಲು- **' ನಪ್ಯಮಿ ಚ ಬಹುಲಂ ॥ ೨೫೯ ॥ '** ಎಂಬ ಸೂತ್ರದಿಂದ ಮ ಕಾರಾಗಮವು ವಿಧಿಸಲ್ಪಡುವುದು.

ಆ ಮುಗಾಗಮವು ಅ ಕಾರಾಂತ ಪ್ರಕೃತಿಗೆ ಅಂತ್ಯಾವಯವವಾದುದರಿಂದ ಅಪದಾಂತಸ್ಥವಾಯಿತು. ಆದಕ್ಕೆ ಈ ಸೂತ್ರದಿಂದ ನ ಕಾರಾದೇಶವು ಪ್ರವರ್ತಿಸಿದರೆ 'ಜೆಟ್ಟಿಮಂ' ಮೊದಲಾದ ಪ್ರಯೋಗಗಳಲ್ಲಿ ನ ಕಾರವೇ ಶ್ರೂಯಮಾಣವಾಗಬೇಕು. ಆಗ ಮುಗಾಗಮವಿಧಿಯು ನಿರರ್ಥಕವಾಗುವುದು. ಆದುದರಿಂದ '**ವ್ಯಾಖ್ಯಾನತೋ ವಿಶೇಷಪ್ರತಿಪತ್ತಿಃ ನ ಹಿ ಸಂದೇಹಾದಲಕ್ಷಣಂ**' ಎಂಬ ಪರಿಭಾಷೆಯನ್ನು ಕಲ್ಪಿಸಿ, ಈ ನ ಕಾರವು ಪದಾಂತವಿಷಯಕವೆಂದು ಈ ಸೂತ್ರಕ್ಕೆ ವ್ಯಾಖ್ಯಾನ ಮಾಡಲಮುಗಾಗಮ ವಿಧಿಯು ಸಾರ್ಥಕವಾಗುವುದೆಂದೂ ಹೇಳುವರು.

ಇನ್ನು ಕೆಲವರು ಮುಗಾಗಮವಿಧಿಯು ನ ಕಾರಾದೇಶಕ್ಕೆ ಸ್ಥಾನಿಯನ್ನು ಸಂಪಾದಿಸಿಕೊಡುವುದರಿಂದ ಸಾರ್ಥಕವೆಂದು ಹೇಳಿ ಇದರಿಂದ ಆ ಮು ಕಾರಕ್ಕೆ ನ ಕಾರಾದೇಶವು ಬರಲಿ; ಇಲ್ಲ 'ಪದಾಂತಸ್ಯ' ಎಂದು ಹೇಳುವುದಕ್ಕೆ ಅದು ಸಾಧಕವಾಗುವುದಿಲ್ಲವೆಂದು ಹೇಳುತ್ತಾರೆ. ಆದರೆ— '**ನಕ್ ಸ್ವರೇ || ೨೬೦ ||**' ಎಂಬ ಸೂತ್ರದಿಂದ ಸಾಮಾನ್ಯವಾಗಿ ವಿಹಿತವಾದ ನಗಾಗಮದಿಂದಲೇ ನಪುಂಸಕಲಿಂಗದಲ್ಲಿಯೂ ನ ಕಾರ ಶ್ರವಣವಾಗುತ್ತಿರಲು — '**ನಪ್ಯಮಿ ಚ ಬಹುಲಂ || ೨೫೯ ||**' ಎಂಬ ಸೂತ್ರವನ್ನು ಪ್ರಾರಂಭಿಸಿರುವ **ಸೂತ್ರಕಾರ**ರಿಗೆ ಈ ನ ಕಾರಾದೇಶವು ಪದಾಂತ ವಿಷಯಕವಾದದ್ದೆಂದು ತಾತ್ಪರ್ಯವನ್ನು ಕಲ್ಪಿಸಬೇಕಾದುದರಿಂದ ಇವರು ಹೇಳುವುದು ಯುಕ್ತಾಯುಕ್ತವಾಗಿ ತೋರುವುದಿಲ್ಲವೆಂದು ಹೇಳುತ್ತಾರೆ.

ಇನ್ನು ಕೆಲವರು — '**ಮೋ ನಃ ಸ್ವರೇ || ನಪಿ ವಾ ||**' ಎಂಬೆರಡು ಸೂತ್ರಗಳೂ ಪದಾಂತ ವಿಷಯಕಗಳು. '**ನಪಿ ವಾ**' ಎಂಬುದು '**ಮೋ ನಃ ಸ್ವರೇ**' ಎಂಬ ಸೂತ್ರದಿಂದ ಸಾಮಾನ್ಯವಾಗಿ ಪ್ರಾಪ್ತವಾದುದಕ್ಕೆ ಬಾಧಕವಾಗಿ ವೈಕಲ್ಪಿಕತ್ವಬೋಧಕವು ಈ ಆದೇಶಾಭಾವಪಕ್ಷದಲ್ಲಿ '**ನಪ್ಯಮಿ ಚ ಬಹುಲಂ || ೨೫೯ ||**' ಎಂಬ ಸೂತ್ರದಿಂದ ವಿಹಿತವಾದ ಮುಗಾಗಮವು ಉಚ್ಚಾರಣೆಯಾಗುವುದು. ಅದು ವ್ಯಾಖ್ಯಾನ ಪರಿಭಾಷೆಯನ್ನು ಜ್ಞಾಪಿಸುವುದರಲ್ಲಿ ಸಮರ್ಥವಾಗುವುದಿಲ್ಲ. ಆದುದರಿಂದ — '**ಪ್ರಯೋಗಶರಣಾ ವೈಯಾಕರಣಾಃ**' ಎಂಬ ನ್ಯಾಯಬಲದಿಂದ ಪ್ರಾಮಾಣಿಕರ ಪ್ರಚುರ ಪ್ರಯೋಗಗಳನ್ನು ಪರಿಶೀಲಿಸಿ ಈ ಸೂತ್ರದಲ್ಲಿ 'ಪದಾಂತಸ್ಯ' ಎಂಬ ಪದವನ್ನು ಹೇಳಿಕೊಳ್ಳಬೇಕೆಂದು ಹೇಳುತ್ತಾರೆ.

ಇನ್ನು ಕೆಲವರು—'ನಪಿ ವಾ' ಎಂಬುದು ವ್ಯವಸ್ಥಿತವಿಭಾಷಾವಚನವಾದುದರಿಂದ ಒಂದೇ ಲಕ್ಷ್ಯದಲ್ಲಿ ಪ್ರವೃತ್ತ್ಯಪ್ರವೃತ್ತಿರೂಪವಿಕಲ್ಪವಚನವನ್ನು ಹೇಳದು. ಪಕ್ಷಾಂತರದಲ್ಲಿ ಮ ಕಾರೋಚ್ಚಾರಣೆಯಾಗುವುದರಿಂದ ಮುಗಾಗಮವಿಧಿಗೆ ಸಾರ್ಥಕ್ಯವನ್ನು ಕಲ್ಪಿಸುವುದು ಸರಿಯಲ್ಲ. ಆದುದರಿಂದ ಆ ಸೂತ್ರವೇ ವ್ಯಾಖ್ಯಾನಪರಿಭಾಷೆಯನ್ನು ಜ್ಞಾಪಿಸುವುದರಲ್ಲಿ ವ್ಯರ್ಥಕರವಾಗಿರುವುದೆಂದೂ ಹೇಳುತ್ತಾರೆ.

ಈ ಸೂತ್ರವಿಷಯದಲ್ಲಿ **ದರ್ಪಣಕಾರ**ನು ಮ ಕಾರಕ್ಕೆ ನ ಕಾರಾದೇಶವೆಂದು ಹೇಳದೆ— ವೈಯಾಕರಣರ ಮತದಲ್ಲಿ ಪ್ರಸಿದ್ಧವಾಗಿರುವ ಪದಸಂಸ್ಕಾರ, ವಾಕ್ಯಸಂಸ್ಕಾರಗಳೆಂಬ ಎರಡು ಪಕ್ಷಗಳಲ್ಲಿ ಮಂದಾಧಿಕಾರರಿಗೆ ಸುಗಮವಾಗಿರುವ ಪದಸಂಸ್ಕಾರಪಕ್ಷವನ್ನವಲಂಬಿಸಿ —

**ಬಿಂದುವದಂತಕ್ಕುಟಾದೆಡೆ**
**ಗೆಂದುಂ ಪ್ರಥಮೈಕವಚನದೊಳ್ ಲೋಪಮುದಂ**
**ತ ದೊರೆವಡೆದಿದಿರೊಳ್ ಸ್ವರ**
**ಮೊಂದಿರೆ ಪುಲ್ಲಿಂಗದಲ್ಲಿ ನಾಗಮುಮಕ್ಕುಂ** (ಸೂತ್ರ ೧೦೫)

ಎಂಬ ಸೂತ್ರದಿಂದ ಪ್ರಥಮೈಕವಚನದ ಮ ಕಾರಕ್ಕೆ ಬಿಂದುವನ್ನೂ ಸಾಮಾನ್ಯವಾಗಿ ಮ ನ ಕಾರಗಳಿಗೆ ವ್ಯಂಜನವು ಪರದಲ್ಲಿರುವಾಗಲೂ ಏನೂ ಪರದಲ್ಲಿಲ್ಲದಿರುವಾಗಲೂ —

**ಮ ನ ಕಾರದ ಪರದೊಳ್ ವ್ಯಂ**
**ಜನಮಿರ್ದೊಡಮಿಲ್ಲದೊಡಮನುಸ್ವಾರಂ ಸಂ**
**ಜನಯಿಪುದು** (ಸೂತ್ರ ೧೬೧)

ಎಂಬ ಸೂತ್ರದಿಂದ ಅನುಸ್ವಾರವನ್ನೂ ಹೇಳಿ ಅನಂತರದಲ್ಲಿ ಅನುಸ್ವಾರಕ್ಕೆ ಪದಾಂತರ ಸಮುಛ ವ್ಯವಹಾರವಿರಲು —

**ಪರದೊಳ್ ಸ್ವರಮಿರೆ ಬಿಂದುಗೆ**
**ದೊರಕೊಳ್ಗುಂ ನತ್ವಮತ್ವಂ** (ಸೂತ್ರ ೧೦೪)

ಎಂಬ ಸೂತ್ರದಿಂದ ನ ಕಾರ ಮ ಕಾರಾದೇಶಗಳನ್ನು ವಿಧಿಸಿರುವನು. ಇಲ್ಲಿಯೂ ಪದಾಂತವೆಂದು ಸ್ಪಷ್ಟವಾಗಿ ಹೇಳದಿದ್ದರೂ ಸೂತ್ರಾರ್ಥ ಪರ್ಯಾಲೋಚನೆಯಿಂದ ಪದಾಂತ ವಿಷಯಕವೆಂದು ಗೊತ್ತಾಗುವುದು. ಇದರಲ್ಲಿ ಲಿಂಗವಿಶೇಷವನ್ನು ನಿರ್ದೇಶಿಸದೆ ಸಾಮಾನ್ಯವಾಗಿ ಹೇಳಿದ್ದರೂ ಪ್ರಯೋಗಾನುಸಾರವಾಗಿ ಪುಲ್ಲಿಂಗ ಸ್ತ್ರೀಲಿಂಗಗಳಲ್ಲಿ ನಿತ್ಯವಾಗಿ ನ ಕಾರಾದೇಶವೆಂದೂ ನಪುಂಸಕ ಲಿಂಗವಿಷಯದಲ್ಲಿ ನ ಕಾರ ಮ ಕಾರಗಳೆರಡೂ ಬರುವುವೆಂದೂ ವಿವೇಚನೆ ಮಾಡಿಕೊಳ್ಳಬೇಕು.

**ಶಾಸನಕಾರನು** ಲೋಕದಲ್ಲಿ ವಾಕ್ಯರೂಪವಾಗಿಯೇ ವ್ಯವಹಾರವಿರುವುದರಿಂದ ವಾಕ್ಯ ಸಂಸ್ಕಾರ ಪಕ್ಷವೇ ಮುಖ್ಯವೆಂದು ಮ ಕಾರಕ್ಕೇ ನ ಕಾರಾದೇಶವನ್ನು ವಿಧಿಸಿರುವನು.

**ಅವತಾರಿಕೆ ೭೮**

ಪೂರ್ವ ಸೂತ್ರದಲ್ಲಿ ಸಾಮಾನ್ಯವಾಗಿ ವಿಧಿಸಿರುವ ನ ಕಾರಾದೇಶಕ್ಕೆ ನಪುಂಸಕಲಿಂಗದಲ್ಲಿ ವೈಕಲ್ಪಿಕತ್ವವನ್ನು ಹೇಳುತ್ತಾನೆ.

**ಸೂತ್ರಂ || ನಪಿ ವಾ || ೭೮ ||**

**ಅರ್ಥ || ಸ್ವರಪರಕವಾದ ಪದಾಂತ ಮ ಕಾರಕ್ಕೆ ನಪುಂಸಕದಲ್ಲಿ ವಿಕಲ್ಪವಾಗಿ ನ ಕಾರಾದೇಶ ಬರುವುದು. ಇದು ಬಾರದ ಪಕ್ಷದಲ್ಲಿ ಮ ಕಾರವೇ ಶ್ರೂಯಮಾಣವಾಗುವುದು.**

**ಉದಾಹರಣೆ ||** ನೆಲಮ್ + ಇದು = ನೆಲನಿದು ಹೀಗೆಯೇ — 'ಪೊಲನಿದು, ನೆಲನೊಳ್ಳಿತ್ತು, ಪೊಲನೊಳ್ಳಿತ್ತು' ಮೊದಲಾದುವು ಇದಕ್ಕೆ ಲಕ್ಷ್ಯಗಳು. ಇದು ಬಾರದುದಕ್ಕೆ — 'ವೃಕ್ಷಮಿದು, ಪ್ಲಕ್ಷಮಿದು, ನಿದ್ರಾಣಮೆಸೆದುದು, ಕಾಳಗಮೊಪ್ಪಿತ್ತು' ಮೊದಲಾದುವು.

**ವಿಚಾರ ೭೮**

ಈ ಸೂತ್ರದಲ್ಲಿ 'ನಪಿ, ವಾ' ಎಂಬೆರಡು ಪದಗಳಿರುವುವು. ಪೂರ್ವಸೂತ್ರಕ್ಕೆ ಇದು ಬಾಧಕವಾದುದರಿಂದ ಸಂಪೂರ್ಣವಾಗಿ ಆ ಸೂತ್ರವೇ ಅನುವರ್ತಿಸಲ್ಪಡುವುದು. ಪೂರ್ವದಂತೆ ಇಲ್ಲಿಯೂ 'ಪದಾಂತಸ್ಯ' ಎಂಬುದನ್ನು ಇಟ್ಟುಕೊಳ್ಳಬೇಕು. ಪೂರ್ವದಂತೆಯೇ ವಿಶೇಷಣ-ವಿಶೇಷ್ಯ ಭಾವಗಳನ್ನು ಹೇಳುವುದು. 'ನಪಿ' ಎಂಬುದು ವಿಷಯಸಪ್ತಮ್ಯಂತ ಪದವು. ತಥಾಚ - ಸ್ವರಪರಕವಾದ ಪದಾಂತ ಮ ಕಾರಕ್ಕೆ ನಪುಂಸಕಲಿಂಗ ವಿಷಯದಲ್ಲಿ ವಿಕಲ್ಪವಾದ ನ ಕಾರಾದೇಶವು ಬರುವುದೆಂದು ಸೂತ್ರಾರ್ಥವಾಗುವುದು. ಇದರಿಂದ ಮಾಂತ ನಪುಂಸಕಲಿಂಗಗಳೆಲ್ಲಾ

ನ ಕಾರವುಳ್ಳವುಗಳಾಗಿಯೂ ಮ ಕಾರವುಳ್ಳವುಗಳಾಗಿಯೂ ಆಗುವುವೆಂದು ತೋರುವುದು. ಆದರೆ — ಇಲ್ಲಿ 'ವಾ' ಎಂಬುದು ವ್ಯಾಖ್ಯಾನಪರಿಭಾಷೆಯಿಂದ ಕ್ವಚಿತ್‌ಪ್ರವೃತ್ತಿ, ಕ್ವಚಿದಪ್ರವೃತ್ತಿರೂಪದ್ವಿವಿಧವ್ಯವಸ್ಥೆಯನ್ನು ಬೋಧಿಸುವುದರಿಂದ ವ್ಯವಸ್ಥಿತವಿಭಾಷಾದ್ಯೋತಕವೆಂದು ತಿಳಿಯಬೇಕು. ಆದುದರಿಂದ 'ನೆಲನಿದು' ಮೊದಲಾದುವುಗಳಲ್ಲಿ ಪ್ರವೃತ್ತಿಯನ್ನೂ 'ಪ್ಲಕ್ಷಮಿದು, ನಿರ್ದ್ಧಾರಣಮೆಸೆದುದು, ಕಾಳಗಮೊಪ್ಪಿತ್ತು' ಮೊದಲಾದುವುಗಳಲ್ಲಿ ಅಪ್ರವೃತ್ತಿಯನ್ನೂ ಲಕ್ಷ್ಯಾನುಸಾರವಾಗಿ ಹೇಳಬೇಕು. ಇಲ್ಲಿ ಸಂಸ್ಕೃತ-ಭಾಷಾ ಶಬ್ದಗಳೆರಡೂ ವಿಷಯಗಳೆಂದು ಉಭಯ ಶಬ್ದಗಳೂ ಉದಾಹರಿಸಲ್ಪಟ್ಟಿವೆ. ಸೂತ್ರದಲ್ಲಿ 'ನಪಿ' ಎಂದು ಹೇಳಿರುವುದರಿಂದ — 'ಜನಕನೀತಂ, ಅಕ್ಕನೀಕೆ' ಮೊದಲಾದ ಪುಲ್ಲಿಂಗ ಸ್ತ್ರೀಲಿಂಗಗಳಲ್ಲಿ ಪೂರ್ವಸೂತ್ರದಿಂದ ನ ಕಾರವು ನಿತ್ಯವಾಗಿಯೇ ಬರುವುದೆಂದು ತಿಳಿಯಬೇಕು.

**ಅವತಾರಿಕೆ ೭೯**

ಪೂರ್ವಸೂತ್ರದಲ್ಲಿ ಪದಾಂತವಿಷಯದಲ್ಲಿ ಮ ಕಾರಕ್ಕೆ ಸ್ವರವು ಪರವಾಗಿರಲು ನ ಕಾರಾದೇಶವು ವಿಧಿಸಲ್ಪಟ್ಟಿತು. ಈಗ ಸ್ವರಾತಿರಿಕ್ತ ವಿಷಯದಲ್ಲಿ ಅನುಸ್ವಾರಾದೇಶಗಳನ್ನು ಮ ಕಾರ ನ ಕಾರಗಳಿಗೆ ಹೇಳುತ್ತಾನೆ.

**ಸೂತ್ರಂ ॥ ನಶ್ಚ ಬಿಂದುರನ್ಯತ್ರ ॥ ೭೯ ॥**

**ಅರ್ಥ** ॥ ಮ ಕಾರ ನ ಕಾರಗಳಿಗೆ ಸ್ವರವು ಪರದಲ್ಲಿಲ್ಲದಿರುವಾಗ ಅನುಸ್ವಾರಾದೇಶವು ಬರುವುದು; ಎಂದರೆ ವ್ಯಂಜನವು ಪರದಲ್ಲಿದ್ದರೂ ಪರದಲ್ಲಿಲ್ಲದಿದ್ದರೂ ಬರುವುದೆಂದು ತಾತ್ಪರ್ಯವು.

**ಉದಾಹರಣೆ** ॥ 'ತಾಮ್ + ಯಜಮಾನರ್ = ತಾಂ ಯಜಮಾನರ್' ಹೀಗೆಯೇ — 'ನೀಂ ರಸಿಕರ್, ಆಂ ಲಾಕ್ಷಣಿಕರ್, ಎಸೆಗುಂ ವಧುಗಳ್, ತಾಂ ಶಠಂ, ನೀಂ ಷಣ್ಮುಖಂ, ಆಂ ಸಾಧು, ಆವೊಂ ಹರಿಹಯಂ' ಮೊದಲಾದುವು ವ್ಯಂಜನವು ಪರದಲ್ಲಿರುವುದಕ್ಕೆ ಲಕ್ಷ್ಯಗಳು. 'ಪೋದರ್ತಾರ್ಗಂ, ಬಂದಿನ್ನೀರ್ಗಂ, ಕಂಡೆವಾಂ, ಅಟ್ಟಂ ತಾಂ, ಇಕ್ಕಿದಯ್ನಾಂ, ಉಂಡೆನಾಂ' ಮೊದಲಾದುವು ಏನೂ ಪರದಲ್ಲಿಲ್ಲದುದಕ್ಕೆ ಲಕ್ಷ್ಯಗಳೆಂದು ತಿಳಿಯುವುದು.

**ವಿಚಾರ ೭೯**

ಈ ಸೂತ್ರದಲ್ಲಿ — 'ನಃ, ಚ, ಬಿಂದುಃ, ಅನ್ಯತ್ರ' ಎಂಬ ನಾಲ್ಕು ಪದಗಳಿರುವುವು. ಇಲ್ಲಿ ಚ ಕಾರವು ಸಮುಚ್ಚಯಾರ್ಥಕವಾಗಿ 'ನಃ' ಎಂಬ ಷಷ್ಠ್ಯಂತದ ಮುಂದೆ ಹೇಳಿರುವುದರಿಂದ ಪೂರ್ವಸೂತ್ರದಲ್ಲಿ ಉದ್ದೇಶ್ಯವಾಗಿರುವ 'ಮಃ' ಎಂಬ ಷಷ್ಠ್ಯಂತ ಪದವನ್ನು ಅನುವರ್ತಿಸಿ 'ನಃ, ಮಃ' ಎಂಬೆರಡಕ್ಕೂ 'ಸ್ಥಾನೇ' ಎಂಬುದನ್ನು ಸಂಬಂಧಿಸಬೇಕು. 'ಬಿಂದುಃ' ಎಂಬುದು ಅನುಸ್ವಾರಬೋಧಕವಾದ ಪ್ರಥಮಾಂತಪದವಾದುದರಿಂದ ಇದೇ ಇಲ್ಲಿ ವಿಧೇಯವೆಂದು ತಿಳಿಯಬೇಕು. 'ಅನ್ಯತ್ರ' ಎಂಬುದು ಬೇರೆ ಎಂಬರ್ಥದಲ್ಲಿರುವ 'ಅನ್ಯ' ಶಬ್ದದ ಮೇಲೆ ಸಪ್ತಮ್ಯರ್ಥದಲ್ಲಿ ವಿಹಿತವಾದ 'ತ್ರ' ಪ್ರತ್ಯಯಾಂತವಾದ ಅವ್ಯಯವು. ಇದು 'ಅವುದಕ್ಕಿಂತ ಬೇರೆ' ಎಂದು ಒಂದವಧಿಯನ್ನು ಅಪೇಕ್ಷಿಸುವುದರಿಂದ ಪೂರ್ವಸೂತ್ರದಲ್ಲಿ ಸಪ್ತಮ್ಯಂತವಾಗಿ ನಿರ್ದೇಶಿಸಲ್ಪಟ್ಟಿರುವ 'ಸ್ವರಕ್ಕಿಂತ ಬೇರೆ' ಎಂದರ್ಥವಾಗುವುದು. ಇಲ್ಲಿ ವರ್ಣಗಳು ಸ್ವರವ್ಯಂಜನಗಳೆಂದು ಸಾಮಾನ್ಯವಾಗಿ ಎರಡೇ ಬಗೆಯಾಗಿರುವುದರಿಂದ ಸ್ವರಕ್ಕಿಂತ ಬೇರೆಯಾದುದು

ವ್ಯಂಜನವಲ್ಲದೆ ಇನ್ನಾವುದೂ ಸಂಭವಿಸುವುದಿಲ್ಲ. ಆದರೆ ಸ್ಪಷ್ಟವಾಗಿ 'ವ್ಯಂಜನ' ಎಂದು ಹೇಳದೆ 'ಅನ್ಯತ್ರ' ಎಂದು ಹೇಳಿರುವುದರಿಂದ 'ವ್ಯಂಜನಪರವಲ್ಲದ್ದರೂ ಪರದಲ್ಲಿಲ್ಲದಿದ್ದರೂ' ಎಂದರೆ 'ವಿರಾಮದಲ್ಲಿಯೂ' ಎಂದರ್ಥವಾಗುವುದು. ಆದುದರಿಂದ ಮ ಕಾರ ನ ಕಾರಗಳಿಗೆ ವ್ಯಂಜನವು ಪರವಾಗಿರಲು ವಿರಾಮದಲ್ಲಿಯೂ ಅನುಸ್ವಾರಾದೇಶವು ಬರುವುದೆಂದು ಸೂತ್ರಾರ್ಥವಾಗುವುದರಿಂದ ಉಭಯವಿಧವಾದ ಉದಾಹರಣೆಗಳನ್ನೂ ಮೂಲದಲ್ಲಿ ಕೊಟ್ಟಿರುವುದು.

ಈ ಸೂತ್ರದಲ್ಲಿಯೂ 'ಪದಾಂತಸ್ಯ' ಎಂದು ಹೇಳಿಕೊಳ್ಳಬೇಕು. ಇದರಲ್ಲಿ—

**'ನ ಕೇವಲಾಃ ಪ್ರಕೃತಯಃ ಪ್ರಯೋಕ್ತವ್ಯಾಃ ನಾಪಿ ಪ್ರತ್ಯಯಾಃ'**

ಎಂದು ಪ್ರಾಚೀನರು ವ್ಯವಸ್ಥೆ ಮಾಡಿರುವುದರಿಂದ ಕೇವಲ ಪ್ರಕೃತಿಗೆ ಪ್ರಯೋಗಾರ್ಹತೆಯಿಲ್ಲವೆಂದು ವಿರಾಮದಲ್ಲಿ ಮ ಕಾರ ನ ಕಾರಗಳಿಗೆ ಅನುಸ್ವಾರವನ್ನು ವಿಧಿಸಿರುವುದೇ ಜ್ಞಾಪಕವೆಂದು ಕೆಲವರು ಹೇಳುತ್ತಾರೆ. ಆದರೆ ಭಾಷೆಯಲ್ಲಿ ಅಪದಾಂತದಲ್ಲಿಯೂ ಅನುಸ್ವಾರವನ್ನು ಬರೆಯುವ ಪದ್ಧತಿಯು ಬಹುಕಾಲದಿಂದ ಅನುವರ್ತಿಸಿಕೊಂಡು ಬಂದಿರುವುದರಿಂದ ಅದಕ್ಕೆ ಉಪಪತ್ತಿಯನ್ನು ಹೇಳುವುದಕ್ಕೆ ಪೂರ್ವಸೂತ್ರದಿಂದ 'ವಾ' ಎಂಬುದನ್ನನುವರ್ತಿಸಿ, ವ್ಯವಸ್ಥಿತ ವಿಭಾಷಾಶ್ರಯಣವನ್ನೂ ಮಾಡಿ, ಅತಿಪ್ರಸಕ್ತಿಯನ್ನು ವಾರಣಮಾಡಬೇಕೆಂದು ತಿಳಿಯುವುದು.

ಮುಂದಿನ ಸೂತ್ರದಲ್ಲಿ ವರ್ಗಾಕ್ಷರಗಳು ಪರವಾಗಿರಲು ಆ ವರ್ಗಗಳ ಅಂತ್ಯ ವರ್ಣಾದೇಶವನ್ನು ವಿಧಿಸುವುದರಿಂದ ಅವರ್ಗಾಕ್ಷರಗಳು ಈ ಸೂತ್ರಕ್ಕೆ ವಿಷಯವೆಂದು ಅಂತಹ ಪ್ರಯೋಗಗಳನ್ನೇ ತೋರಿಸಿರುವನು. ಆದಾಗ್ಯೂ ಅದು ವಿಕಲ್ಪವಾದುದರಿಂದ ಅಂತ್ಯವರ್ಣಾದೇಶವು ಬಾರದ ಪಕ್ಷದಲ್ಲಿ ಈ ಸೂತ್ರದಿಂದಲೇ ಅನುಸ್ವಾರಾದೇಶವನ್ನು ಹೇಳಬೇಕಾದುದರಿಂದ ವರ್ಗಾಕ್ಷರಗಳೂ ಇದಕ್ಕೆ ವಿಷಯಗಳೆಂದು ತಿಳಿಯಬೇಕು.

**ಅವತಾರಿಕೆ ೮೦**

ಪೂರ್ವದಲ್ಲಿ ಪದಾಂತಗಳಾದ ನ ಕಾರ ಮ ಕಾರಗಳಿಗೆ ಸ್ವರ-ವ್ಯಂಜನಗಳಲ್ಲಿ ಸಂಸ್ಕೃತ-ಕರ್ಣಾಟಕ ಪುಲ್ಲಿಂಗ-ಸ್ತ್ರೀಲಿಂಗ ಸಾಧಾರಣವಾಗಿ ನ ಕಾರಾನುಸ್ವಾರಾದೇಶಗಳು ವಿಧಿಸಲ್ಪಟ್ಟುವು. ಈಗ ವರ್ಗಾಕ್ಷರಗಳು ಪರವಾಗಿರಲು ಆ ವರ್ಗದ ಅಂತ್ಯಾಕ್ಷರಾದೇಶವನ್ನು ವಿಕಲ್ಪವಾಗಿ ವಿಧಿಸುತ್ತಾನೆ.

**ಸೂತ್ರಂ ॥ ತದಂತ್ಯೋ ವಾ ವರ್ಗೇ ॥ ೮೦ ॥**

**ಅರ್ಥ ॥ ವರ್ಗಾಕ್ಷರ ಪರಕವಾದ ಮ ಕಾರ ನ ಕಾರಗಳಿಗೆ ಆಯಾ ವರ್ಗದ ಕೊನೆಯ ಅಕ್ಷರವು ವಿಕಲ್ಪವಾಗಿ ಬರುವುದು. ಎಂದರೆ ಆಯಾ ವರ್ಗದ ಅನುನಾಸಿಕಾಕ್ಷರವನ್ನು ಮ ಕಾರ ನ ಕಾರಗಳ ಸ್ಥಾನದಲ್ಲಿ ಬರೆಯಬೇಕೆಂದರ್ಥವು.**

**ಉದಾಹರಣೆ** ॥ ಆವರ್ + ಕುಲೀನರ್ = ಆಙ್ಕುಲೀನರ್, ಆಂಕುಲೀನರ್ ॥ ಪೀಗೆಯೇ ನಿಙ್ಗಾಡಿಕಾಱಂ, ನೀಂ ಗಾಡಿಕಾಱಂ; ತಾಞ್ಚಲಚಿತ್ತರ್, ತಾಂ ಚಲಚಿತ್ತರ್; ಆಞ್ಜಗನ್ನುತಂ, ಆಂ ಜಗನ್ನುತಂ; ತಾಣ್ಟಕ್ಕಿಗರ್, ತಾಂ ಟಕ್ಕಿಗರ್; ನೀಣ್ಡಾಳಕಂ, ನೀಂ ಡಾಳಕಂ; ತಾನ್ತನ್ದೆಗಳ್; ತಾಂ ತಂದೆಗಳ್; ಆನ್ಧರ್ಮ್ಮಜ್ಞಂ, ಆಂ ಧರ್ಮ್ಮಜ್ಞಂ; ಅಕ್ಕುಮ್ಭವ್ರಂ, ಅಕ್ಕುಂ ಭವ್ರಂ; ಆವೊಮ್ಮಹಿತಂ, ಆವೊಂ ಮಹಿತಂ' ॥ ಮೊದಲಾದುವು ಇದಕ್ಕೆ ಲಕ್ಷ್ಯಗಳು.

ವಿಚಾರ ೮೦

ಈ ಸೂತ್ರದಲ್ಲಿ 'ತದಂತ್ಯಃ, ವಾ, ವರ್ಗೇ' ಎಂದು ಮೂರು ಪದಗಳಿರುವುವು. ಪೂರ್ವ ಸೂತ್ರಗಳಿಂದ 'ಮಃ, ನಃ' ಎಂಬೆರಡು ಪದಗಳನ್ನು ಅನುವರ್ತಿಸುವುದು. 'ಮಃ, ನಃ' ಎಂಬಿವು ಸ್ಥಾನಷಷ್ಠ್ಯಂತಗಳು. 'ತದಂತ್ಯಃ' ಎಂಬಲ್ಲಿ 'ತಸ್ಯ ಅಂತ್ಯಃ, ತದಂತ್ಯಃ' ಎಂದು ಷಷ್ಠೀ ತತ್ಪುರುಷಸಮಾಸವು. ಇಲ್ಲಿ ತತ್ಪದವು ಸರ್ವನಾಮವಾದುದರಿಂದ ಪ್ರಕೃತದಲ್ಲಿ ನಿಮಿತ್ತವಾಗಿ ಹೇಳಿರುವ ವರ್ಗವನ್ನು ಬೋಧಿಸುವುದು. ಆದುದರಿಂದ ಆವ ಲಕ್ಷ್ಯದಲ್ಲಿ ಆವ ವರ್ಗವು ಪದದಲ್ಲಿ ರುವುದೋ ಆ ವರ್ಗದ ಅಂತ್ಯಾಕ್ಷರವು ಎಂದು 'ತದಂತ್ಯಃ' ಎಂಬ ಸಮುದಾಯಕ್ಕೆ ಅರ್ಥವಾಗು ವುದು. ಇದೇ ಇಲ್ಲಿ ವಿಧೇಯವು. ವರ್ಗವೆಂದರೆ —'ಮಾಂತಾಃ ಪಂಚ ಪಂಚ ವರ್ಗಾಃ ॥ ೭ ॥' ಎಂಬ ಸೂತ್ರದಿಂದ ಸಂಕೇತಿತವಾದ ವ್ಯಂಜನಾಕ್ಷರಗಳೆಂಬರ್ಥವು. ಈ ವರ್ಗವೆಂಬುದು ಕಕಾರ ಮೊದ ಲಾದ ಐದೈದು ವ್ಯಂಜನವುಳ್ಳ ಒಂದೊಂದು ವ್ಯಂಜನಸಮುದಾಯರೂಪವಾಗಿ ಐದು ಸಮು ದಾಯಕ್ಕೆ ಲೋಕದಲ್ಲಿ ರೂಢಿಯಾಗಿರುವುದರಿಂದ ಆವ ಲಕ್ಷ್ಯದಲ್ಲಿಯೂ ಇಂತಹ ಸಮುದಾಯ ರೂಪವರ್ಗಾಕ್ಷರಪರಕತ್ವವು ಸಂಭವಿಸುವುದಿಲ್ಲವಾದುದರಿಂದ ಲಕ್ಷ್ಯಾನುಸಾರವಾಗಿ —'ಪ್ರತ್ಯೇಕಂ ವಾಕ್ಯಪರಿಸಮಾಪ್ತಿಃ ॥ ಸಮುದಾಯೇऽವತರಂತೀ ಸಂಜ್ಞಾ ಅವಯವೇಷು ವಿಶ್ರಾಮ್ಯತಿ' ಎಂಬ ನ್ಯಾಯಗಳಿಂದ ಪ್ರತ್ಯೇಕ ವರ್ಣಗಳಿಗೂ ವರ್ಗಪದವಾಚ್ಯತ್ವವುಂಟೆಂದೂ ಒಂದೊಂದು ವರ್ಣಗಳಿಗೂ ನಿಮಿತ್ತತ್ವವು ಸಂಭವಿಸುವುದೆಂದೂ ತಿಳಿಯಬೇಕು. 'ವಾ' ವಿಕಲ್ಪಾರ್ಥಕವು. ಇದು ಪೂರ್ವಸೂತ್ರದಿಂದ ಪ್ರಾಪ್ತವಾದ ಅನುಸ್ವಾರಾದೇಶಕ್ಕೆ ಬಾಧಕವಾದುದರಿಂದ ಪದಾಂತ ವಿಷಯಕವೆಂದು ತಿಳಿಯಬೇಕು. ತಥಾಚ —ವರ್ಗಾಕ್ಷರಪರಕವಾದ ಪದಾಂತ ಮಕಾರ ನಕಾರ ಗಳಿಗೆ ವಿಕಲ್ಪವಾಗಿ ಆಯಾ ವರ್ಗದ ಪಂಚಮಾಕ್ಷರವು ಬರುವುದೆಂದು ಫಲಿತವಾಗುವುದು. ಇದ ರಿಂದ 'ಆಙ್ಕುಲೀನರ್' ಮೊದಲಾದ ಪ್ರಯೋಗಗಳು ಸಿದ್ಧಿಸುವುವು. ಇಲ್ಲಿ 'ವರ್ಗೇ' ಎಂದು ಹೇಳಿರುವುದರಿಂದ — 'ಆಂ ಯಜಮಾನರ್, ನೀಂ ಲಂಚಗುಳಿ' ಮೊದಲಾದ ವರ್ಗಾಕ್ಷರವಿಲ್ಲದ ಪ್ರಯೋಗಗಳಲ್ಲಿ ಪೂರ್ವಸೂತ್ರದಿಂದ ಅನುಸ್ವಾರಾದೇಶವೇ ಬರುವುದು.

ಈ ಸೂತ್ರವೂ ಪೂರ್ವಸೂತ್ರಗಳಂತೆ ಪದಾಂತವಿಷಯಕವೆಂದು ಹೇಳಲು — 'ತೆಙ್ಕಲ್, ತೆಂಕಲ್; ಬಿಙ್ಕಂ, ಬಿಂಕಂ; ವಙ್ಗಡಂ, ವಂಗಡಂ; ಮುಞ್ಚಿಗೆ, ಮುಂಚಿಗೆ; ಕುಞ್ಚಿಗೆ, ಕುಂಚಿಗೆ; ಅಞ್ಜಿಕೆ, ಅಂಜಿಕೆ; ಪುಞ್ಜ, ಪುಂಜ; ಸಂಞ್ಜೆ, ಸಂಜೆ; ಗಣ್ಟು, ಗಂಟು; ಎಣ್ಟು, ಎಂಟು; ತೊಣ್ಡಿಲ್, ತೊಂಡಿಲ್; ಸೊಣ್ಡಿಲ್, ಸೊಂಡಿಲ್; ಉನ್ತೆ, ಉಂತೆ; ಅನ್ತುಕಂ, ಅಂತುಕಂ; ಕನ್ದಲ್, ಕಂದಲ್; ತನ್ದಲ್, ತಂದಲ್; ಸೊಮ್ಪು, ಸೊಂಪು; ಕಮ್ಪು, ಕಂಪು; ಅಮ್ಬಲಿ, ಅಂಬಲಿ; ತಮ್ಬುಲಂ, ತಂಬುಲಂ' ಮೊದಲಾದ ಶಬ್ದಗಳು ಅಪದಾಂತ ವಿಷಯದಲ್ಲಿಯೂ ಸಾನುನಾಸಿಕ ಗಳಾಗಿಯೂ ಸಬಿಂದುಕಗಳಾಗಿಯೂ ಶಿಷ್ಟರಿಂದ ಪ್ರಯೋಗಿಸಲ್ಪಟ್ಟಿರುವುವು. ಅವುಗಳಲ್ಲಿ ಕೆಲವು ಸಾನುನಾಸಿಕಗಳು —

ಬಿಙ್ಕಂ ಬೆತ್ತೆ ಸೆವಙ್ಚಿಯ
ಸಙ್ಕುಳಮುಂ ತೊಣ್ಡುಗೆಡೆವ ಶುಕಶಾರಿಕೆಯುಂ
ಸೊಜ್ಕೆ ಬಲವನ್ದು ತೀಡುವ
ತೆಙ್ಕಣಗಾಳಿಯುಮದೇಂ ಮನಜ್ಕೊಳಿಸಿದುವೋ

ಮೊದಲಾದ ಪ್ರಯೋಗಗಳಿಂದ ತಿಳಿಯಲ್ಪಡುವುವು. ಹೀಗೆಯೇ ಸಬಿಂದುಕಗಳನ್ನು ಶಿಷ್ಟಪ್ರಯೋಗದಿಂದ ಊಹಿಸಿಕೊಳ್ಳುವುದು. ಇಂತಹ ಪ್ರಯೋಗಗಳಲ್ಲಿ ಈ ಸೂತ್ರಕ್ಕೆ ಪ್ರವೃತ್ತಿಯಿಲ್ಲದಿರುವುದರಿಂದ ಇವು ಹೇಗೆ ಸಾಧುಗಳಾಗುವುವೆಂದು ಶಂಕೆಯುಂಟಾಗುವುದು. ಆದರೆ — ಈ ಶಾಸ್ತ್ರದಲ್ಲಿ ನಾಮಗಳು — 'ಅನ್ವರ್ಥ, ಅಂಕಿತ, ರೂಢ' ಗಳೆಂದು ಮೂರು ಬಗೆಯಾಗಿರುವುವು. ಅವುಗಳಲ್ಲಿ ಅನುಗತವಾದರ್ಥವುಳ್ಳ — 'ಕೆಂಪಂ, ಕರಿಕಂ, ಬಿಳಿಕಂ, ಮುಮುಕಂ' ಮೊದಲಾದವು ಅನ್ವರ್ಥಕಗಳೆಂತಲೂ ಕೆಲವು ವ್ಯವಹಾರಕ್ಕಾಗಿ ಸ್ವೇಚ್ಛೆಯಿಂದ ಪರಿಕಲ್ಪಿತಗಳಾದ 'ಕಾಚಂ, ಪೋಚಂ, ತಿಪ್ಪಂ, ಬೊಪ್ಪಂ' ಮೊದಲಾದುವು ಅಂಕಿತಗಳೆಂತಲೂ ತತ್ತದ್ದೇಶದಲ್ಲಿ ಮಾತ್ರ ಪ್ರವೃತ್ತಿರೂಪಸಕಲಜನಗಳ ವ್ಯವಹಾರದಲ್ಲಿ ಪ್ರಸಿದ್ಧವಾದ — 'ಬೆಟ್ಟಂ, ನೆಲಂ, ಪೊಲಂ' ಮೊದಲಾದುವು ರೂಢಗಳೆಂತಲೂ ತಿಳಿಯುವುದು. ಇವುಗಳಲ್ಲಿ ಅನ್ವರ್ಥ ಶಬ್ದಗಳೇ ಶಾಸ್ತ್ರಾನುಸಾರ ವ್ಯುತ್ಪತ್ತಿಯನ್ನು ಹೊಂದುವುವು. ಅಂಕಿತ-ರೂಢಗಳು ಪ್ರಕೃತಿ-ಪ್ರತ್ಯಯವಿಭಾಗಪೂರ್ವಕ ವ್ಯಾಕರಣಶಾಸ್ತ್ರೋಕ್ತ ಕಾರ್ಯವನ್ನಪೇಕ್ಷಿಸುವುವು. ಹೀಗೆಯೇ ಸಂಸ್ಕೃತವ್ಯಾಕರಣಕಾರರೂ 'ಘಟ, ಕುಮ್ಭ' ಮೊದಲಾದ ಶಬ್ದಗಳು ವ್ಯುತ್ಪತ್ತ್ಯನಪೇಕ್ಷಗಳಾಗಿ ಅಖಂಡ ಶಬ್ದಗಳೇ ಲೋಕದಲ್ಲಿ ಪ್ರಯೋಗಿಸಲ್ಪಡುವುವೆಂದು ಅವುಗಳ ವಿಷಯದಲ್ಲಿ ಕೆಲವರು ವೈಯ್ಯಾಕರಣರು ಉಣಾದಿಗಣವೆಂದು ಒಂದು ಗಣವನ್ನು ಮಾಡಿ ಅದರಲ್ಲಿ ಪ್ರಕೃತಿಪ್ರತ್ಯಯಾದಿಗಳನ್ನು ಕಲ್ಪಿಸಿಕೊಂಡಿರುವರು. **ಆದುದರಿಂದಲೇ ಪತಂಜಲಿ**ಗಳು **ಮಹಾಭಾಷ್ಯ**ದಲ್ಲಿ —

**'ಉಣಾದಯೋ ವ್ಯುತ್ಪನ್ನಾನಿ ಪ್ರಾತಿಪದಿಕಾನಿ || ವ್ಯುತ್ಪನ್ನಾನೀತಿ'**

ಎಂದು ಎರಡು ಬಗೆಯಾಗಿಯೂ ಹೇಳಿರುವರು. ಈ ಭಾಷೆಯಲ್ಲಿ 'ತೆಂಕಲ್' ಮೊದಲಾದುವು ಅವ್ಯುತ್ಪನ್ನಗಳಾಗಿಯೇ ವ್ಯವಹಾರಕ್ಕೆ ವಿಷಯಗಳಾಗಿವೆ ಎಂದು ತಿಳಿಯಬೇಕು.

ಸಂಸ್ಕೃತವ್ಯಾಕರಣದಲ್ಲಿ ಸಾಮಾನ್ಯವಾಗಿ ಪದಾಂತ ಮ ಕಾರಕ್ಕೆ ವ್ಯಂಜನಾಕ್ಷರವು ಪರವಾಗಿರಲು ಅನುಸ್ವಾರವನ್ನು — '**ಮೋऽನುಸ್ವಾರಃ || ೮-೩-೨೩ ||**' ಎಂಬ ಸೂತ್ರದಿಂದ ವಿಧಿಸಿ ಅದಕ್ಕೆ ವರ್ಗಾಕ್ಷರಗಳೂ ಯ ವ ಲ ಗಳೂ ಪರವಾಗಿರಲು ವಿಕಲ್ಪವಾಗಿ ಅದರದರ ಅನುನಾಸಿಕವೂ ಬರುವುದೆಂದು '**ವಾ ಪದಾನ್ತಸ್ಯ || ೮-೪-೫೯ ||**' ಎಂಬ ಸೂತ್ರದಿಂದ ವಿಧಿಸಿ ಅಪದಾನ್ತ ವಿಷಯದಲ್ಲಿ — '**ನಶ್ಚಾಪದಾನ್ತಸ್ಯ ಝಲಿ || ೮-೩-೨೪ ||**' ಎಂಬ ಸೂತ್ರದಿಂದ ಅಪದಾಂತ ನ ಕಾರ ಮ ಕಾರಗಳೆರಡಕ್ಕೂ ವರ್ಗಾಕ್ಷರಗಳು ಪರದಲ್ಲಿರುವಾಗಲೂ ಊಷ್ಮವರ್ಣಗಳು ಪರದಲ್ಲಿರುವಾಗಲೂ ಅನುಸ್ವಾರವನ್ನು ಹೇಳಿ ಆ ಅನುಸ್ವಾರಕ್ಕೆ—'**ಅನುಸ್ವಾರಸ್ಯ ಯಯಿ ಪರಸವರ್ಣಃ || ೮-೪-೫೮ ||**' ಎಂಬ ಸೂತ್ರದಿಂದ ವರ್ಗಾಕ್ಷರವು ಪರವಾಗಿರಲು ನಿತ್ಯವಾಗಿ ಅನುನಾಸಿಕವು ಬರುವುದೆಂದು ಹೇಳಿರುವರು. ಮತ್ತು ಇವರ ಮತದಲ್ಲಿ ವಿರಾಮದಲ್ಲಿ ವರ್ಣಾಂತವಾದ ಮ ಕಾರಕ್ಕೂ ನ ಕಾರಕ್ಕೆ ವಿರಾಮಾವಿರಾಮಗಳಲ್ಲಲ್ಲಿಯೂ ಅನುಸ್ವಾರವು ಬರುವುದಿಲ್ಲ. ಭಾಷೆಯಲ್ಲಾದರೂ —'**ನಶ್ಚ ಬಿಂದುರನ್ಯತ್ರ || ೭೯ ||**' ಎಂಬ ಸೂತ್ರದಿಂದ ವಿರಾಮದಲ್ಲಿಯೂ ವ್ಯಂಜನ ಪರದಲ್ಲಿರುವಾಗಲೂ ಪದಾಂತದಲ್ಲಿ ನ ಕಾರ ಮ ಕಾರಗಳಿಗೆ ಒಂದು ಬರುವುದು. ಮ ಕಾರಕ್ಕೆ ಸ್ವರವು ಪರವಾಗಿರಲು ಪುಂಸ್ತ್ರೀಲಿಂಗಗಳಲ್ಲಿ ನಿತ್ಯವಾಗಿ ನಪುಂಸಕತ್ವದಲ್ಲಿ ವಿಕಲ್ಪವಾಗಿ ನ ಕಾರಾದೇಶವು ಬರುವುದೆಂದು ವಿಧಿಸಲ್ಪಟ್ಟಿರುವುದರಿಂದ ನ ಕಾರ ಮ ಕಾರ

ಗಳೆರಡಕ್ಕೂ ಅನುಸ್ವಾರವನ್ನು ಪದಾಂತದಲ್ಲಿಯೂ ವಿರಾಮದಲ್ಲಿಯೂ ಬರೆಯಬಹುದೆಂದು ತೋರುವುದು. ಸಂಸ್ಕೃತದಲ್ಲಿ ಪದಾಂತದಲ್ಲಿ ನ ಕಾರಕ್ಕೆ ಯಾವಾಗಲೂ ಅನುಸ್ವಾರವನ್ನು ವರ್ಗಾಕ್ಷರ ಯ ವ ಲ ಗಳು ಪರವಾಗಿರಲು ಅನುಸ್ವಾರಾನುನಾಸಿಕಗಳೆರಡನ್ನೂ ಬರೆಯಬಹುದು. ಅವಸಾನದಲ್ಲಿ ಮ ಕಾರವನ್ನೇ ಬರೆಯಬೇಕು. ಅಪದಾಂತದಲ್ಲಿ ಎಲ್ಲಾ ಕಡೆಯಲ್ಲಿಯೂ ವರ್ಗಾಕ್ಷರಗಳಾದ ಯ ವ ಲ ಗಳು ಪರವಾಗಿರಲು ನಿತ್ಯವಾಗಿ ಅನುನಾಸಿಕವನ್ನೂ ಊಷ್ಮವರ್ಣಗಳು ಪರವಾಗಿರಲು ಅನುಸ್ವಾರವನ್ನೂ ಬರೆಯಬೇಕೆಂದು ತಿಳಿಯಬೇಕು. ಇವೆಲ್ಲಾ ಕೇವಲ ಲೇಖನವನ್ನು ನೋಡಿ ವೈಯ್ಯಾಕರಣರು ವ್ಯವಸ್ಥೆ ಮಾಡಿರುವಂತೆ ತೋರುವುದು. ಇದರಲ್ಲಿ ಅತಿಸೂಕ್ಷ್ಮವಾದ ಉಚ್ಚಾರಣ-ರೂಪಧ್ವನಿಯಲ್ಲಿ ವ್ಯತ್ಯಾಸವು ತೋರುತ್ತಿದ್ದರೂ ಅರ್ಥವ್ಯತ್ಯಾಸವೇನೂ ಇಲ್ಲದಿರುವುದರಿಂದ ಲೇಖನದ ಸೌಕರ್ಯಕ್ಕಾಗಿ ಇಂತಹ ಪ್ರಯೋಗಗಳಲ್ಲೆಲ್ಲಾ ಬಿಂದುವನ್ನು ಅಂಗೀಕರಿಸುವುದೇ ಉಚಿತವೆಂದು ತೋರುವುದು.

ಇಲ್ಲಿ ಬಿಂದೂತ್ತರದಲ್ಲಿ ಮಹಾಪ್ರಾಣಾಕ್ಷರಗಳುಳ್ಳ — 'ಇಂಘಾರಿಗೆ (ಕಂಧಾರಿಯುಂ), ಅಂಘವಣೆ' ಮೊದಲಾದ ಶಬ್ದಗಳು ಇದ್ದರೂ ಭಾಷೆಯಲ್ಲಿ ಪ್ರಚುರ ಪ್ರಯೋಗವಿಲ್ಲವೆಂದು ಅಲ್ಪಪ್ರಾಣಗಳುಳ್ಳ ಶಬ್ದಗಳೇ ಉದಾಹರಿಸಲ್ಪಟ್ಟಿವೆ. ಇಲ್ಲಿ ಕೊಟ್ಟಿರುವ 'ಪುಞ್ಜ' ಶಬ್ದವು ರಾಶಿವಾಚಕವಾದ ಸಂಸ್ಕೃತ ಶಬ್ದವಲ್ಲ. ಪುಂಸ್ಕುಕ್ಕುಟವಾಚಕವಾದ ಭಾಷಾಶಬ್ದವೆಂದು ತಿಳಿಯಬೇಕು. ಇದನ್ನು ಈಗಿನವರು ಹುಂಜವೆಂದು ವ್ಯವಹರಿಸುತ್ತಾರೆ. 'ಅಂಗಾಲ್, ಮೇಂಗಯ್, ಮುಂಜೂಲ್, ಪ್ರೊಂಬೆಳೆ, ಪಂಡಾಣೆ, ಪ್ರೊಂಡವಕೆ, ಸಂದಲೆ, ಬೆಂದೊವಲ್, ಬೆಂಬಟ್, ಪ್ರೊಂಬಸಿಱು' ಮೊದಲಾದ ಸಮಸ್ತಪದಗಳಲ್ಲಿ ಮ ಕಾರ ನ ಕಾರಗಳು ಅಪದಾಂತಗಳಾಗಿ ತೋರುತ್ತಿದ್ದರೂ ಅಂತರಾಳಿಕಸುಬಮಿತ್ತಕ ಪದತ್ವವನ್ನಂಗೀಕರಿಸಿ ಪದಾಂತವಿಷಯಕಗಳೆಂದು ಈ ಸೂತ್ರಕ್ಕೆ ಪ್ರವೃತ್ತಿಯನ್ನು ಹೇಳುವುದು.

'ತೆಂಕಲ್' ಮೊದಲಾದುವು ಹೇಗೆ ಸಬಿಂದುಕಾಬಿಂದುಕಗಳಾಗಿಯೇ ಸ್ವಭಾವದಿಂದಿರುವುವೋ ಹಾಗೆಯೇ ಕೆಲವು ಶಬ್ದಗಳು ಸ್ವಭಾವವಾಗಿ ದ್ವಿತ್ವವಿಶಿಷ್ಟಾಕ್ಷರಗಳಾಗಿಯೂ ಕೆಲವು ಶಿಥಿಲದ್ವಿತ್ವಾಕ್ಷರಗಳಾಗಿಯೂ ಇರುವುವೆಂದು ಕೇಶಿರಾಜನೂ —

> ಕೆಲವು ನಿಜಬಿಂದುಗಳ್ ಕೆಲ
> ಕೆಲವು ವಿಕಲ್ಪಾರ್ಧಬಿಂದುಗಳ್ ದ್ವಿತ್ವಂಗಳ್
> ಕೆಲವಾಶಿಥಿಲದ್ವಿತ್ವಂ
> ಕೆಲವುಭಯಮುಮಾಗಿ ಕೆಲವು ಪದನಱಿವುದವಂ (ಸೂತ್ರ ೩೬)

ಎಂಬ ಸೂತ್ರದಿಂದ ಸೂಚಿಸಿರುವನು. ನಿತ್ಯಬಿಂದುಕಗಳಾಗಿರುವ — 'ತೊಡಂಬೆ, ಕೊಡಂತಿ, ಕಡುಂಬು, ಸಿಡುಂಬು, ತುಱುಂಬು, ಕುಱುಂಬು, ಕುಸುಂಬೆ, ಪಸುಂಬೆ, ಪೊಸಂತಿಲ್, ಮೆಂಟೆ, ಬೆಂಟೆ, ಕೂಂಟು, ಕೂಂಟಣಿ, ಒಂಟೆ' ಮೊದಲಾದ ಕೆಲವು ಶಬ್ದಗಳೂ ವಿಕಲ್ಪಬಿಂದುಗಳಾಗಿರುವ—'ಕದಂಪು, ಕದಪು; ಕೊಡಂಕೆ, ಕೊಡಕೆ; ಬಣಂಜು, ಬಣಜು; ನೊರಂಜು, ನೊರಜು; ಕಣಂಜು, ಕಣಜು; ಕಱುಂಕೆ, ಕಱುಕೆ; ಇಱುಂಪೆ, ಇಱುಪೆ; ಅಣಂಬೆ, ಅಣಬೆ' ಮೊದಲಾದ ಕೆಲವು ಶಬ್ದಗಳೂ ದ್ವಿತ್ವಾಕ್ಷರಗಳಾಗಿರುವ—'ಮುಬ್ಬುರ್, ಪುಬ್ಬುರ್, ತೆಬ್ಬುರ್, ಕೊಬ್ಬುರ್, ಸೊಬ್ಬುರ್, ಉದ್ದುರ್, ಮದ್ದುರ್, ಗುದ್ದುರ್, ಗದ್ದೆರ್, ಎಕ್ಕೆರ್, ಉಕ್ಕುರ್, ಪುಱ್ಗ್ಗು, ಪಱ್ತ್ತಿ, ತೊಱ್ತ್ತು,

ಎಬ್ಬೆತ್ತು, ಕಬ್ಬೆತ್ತಿ, ಕಬ್ಬೆತ್ತಲೆ' ಮೊದಲಾದ ಶಬ್ದಗಳೂ ಶಿಥಿಲಾಕ್ಷರಗಳಾಗಿರುವ ಬರ್ದಿಲಾದಿ ಶಬ್ದಗಳೂ ಉಭಯರೂಪಗಳಾಗಿರುವ-'ಅದಿಮುರ್ತ್ತಿ,ಅದಿಮ್ಮುರ್ತ್ತಿ' ಮೊದಲಾದುವುಗಳೂ ನಾಮರೂಪಗಳಾಗಿ ಪ್ರಸಿದ್ಧವಾಗಿರುವುವು. ಹೀಗೆಯೇ ಧಾತುಗಳಲ್ಲಿಯೂ -'ಅಡಂಗು,ಕಡಂಗು,ತೊಡಂಕು, ದಾಂಟು, ದೂಂಟು' ಮೊದಲಾದ ನಿತ್ಯಬಿಂದುಕಗಳೂ — 'ಕುಱುಂಕು, ಕುಱುಕು; ಇಱುಂಕು, ಇಱುಕು; ಕಲಂಕು, ಕಲಕು; ಮುಲಂಗು, ಮುಲಗು' ಮೊದಲಾದ ವಿಕಲ್ಪಬಿಂದುಕಗಳೂ — 'ಉರ್ಕ್ಕು, ಸೂರ್ಕ್ಕು, ಉರ್ಬ್ಬು, ಸೂರ್ಬ್ಬು, ಕೊರ್ಬ್ಬು' ಮೊದಲಾದ ದ್ವಿತ್ವಾಕ್ಷರವುಳ್ಳವುಗಳೂ- 'ಕರ್ದುಂಕು, ಕರ್ದುಕು; ಬರ್ದುಂಕು, ಬರ್ದುಕು' ಮೊದಲಾದ ಶಿಥಿಲಾಕ್ಷರವುಳ್ಳವುಗಳೂ — 'ತೆಮುಳ್ದು, ತೆಮುಳ್ದ್ದು; ಅಗಳ್ದು, ಅಗಳ್ದ್ದು' ಮೊದಲಾದ ಉಭಯರೂಪವುಳ್ಳವುಗಳೂ ಇರುವುವು. ಈ ಉದಾಹೃತ ನಾಮಭೇದ-ಧಾತುಭೇದಗಳೆಲ್ಲಾ ಸ್ವಭಾವವಾಗಿಯೇ ಇದೇ ರೀತಿಯಲ್ಲಿ ಸಕಲಶಿಷ್ಟವ್ಯವಹಾರರೂಢವಾಗಿರುವುವೆಂದು ಅವುಗಳ ಸಿದ್ಧ್ಯರ್ಥವಾಗಿ ಈ ವ್ಯಾಕರಣಶಾಸ್ತ್ರದಲ್ಲಿ ಯಾವ ಯತ್ನವನ್ನೂ ಮಾಡಲಿಲ್ಲ.

ಈ ವಿಷಯದಲ್ಲಿ **ದರ್ಪಣಕಾರನು** —

> ಮ ನ ಕಾರದ ಪರದೊಳ್ ವ್ಯಂ
> ಜನಮಿರ್ದೊಡಮಿಲ್ಲದೊಡಮನುಸ್ವಾರಂ ಸಂ
> ಜನಿಯಿಪುದು ವರ್ಗಮಿದಿರಿರೆ
> ತನಗೆ ವಿಕಲ್ಪದೆ ತದೀಯಪಂಚಮುಮಕ್ಕುಂ (ಸೂತ್ರ ೧೬೧)

ಎಂದು ಹೇಳಿರುವನು. ಈ ಸೂತ್ರದಲ್ಲಿ **ದರ್ಪಣಕಾರನೂ** ಪದಾಂತವೆಂದು ಹೇಳಿಲ್ಲ. ಆದಾಗ್ಯೂ ಪ್ರಯೋಗಬಲದಿಂದ ಪದಾಂತವಿಷಯಕವೆಂದು ಕಲ್ಪಿಸಿಕೊಳ್ಳಬೇಕು.

**ಅವತಾರಿಕೆ ೮೧**

ಹಿಂದೆ ಅನುಸ್ವಾರವನ್ನೂ ಪದಾಶ್ರಯವಾದ ಕಾರ್ಯವನ್ನೂ ವಿಧಿಸಿ ಅದರ ಸಾಹಚರ್ಯದಿಂದ ವಿಸರ್ಗವೂ ಉಪಸ್ಥಿತವಾಗಲು ಭಾಷೆಯಲ್ಲಿ ವಿಸರ್ಗಾಂತಪದವು ಅನುಕರಣವಲ್ಲದೆ ಸಂಭವಿಸುವುದಿಲ್ಲವಾದುದರಿಂದ ಅಂತಹ ಅನುಕರಣದಲ್ಲಿ ಅಂತ್ಯವಾದ ವಿಸರ್ಗಕ್ಕೆ ಲೋಪವನ್ನು ಹೇಳುತ್ತಾನೆ.

**ಸೂತ್ರಂ || ಲುಬನವ್ಯಯಾನುಕರಣಸ್ಯ ವಿಸರ್ಗಸ್ಯ || ೮೧ ||**

**ಅರ್ಥ ||** ವಿಸರ್ಗಾಂತವಾದ ಅವ್ಯಯಸಂಜ್ಞಕವಲ್ಲದ ಅನುಕರಣ ಶಬ್ದದ ಕೊನೆಯ ವಿಸರ್ಗಕ್ಕೆ ಲೋಪವು ವಿಕಲ್ಪವಾಗಿ ಬರುವುದು.

**ಉದಾಹರಣೆ ||** 'ಕಃ ಕೇನಾರ್ಥೀ ಕೋ ದರಿದ್ರಃ' 'ಎನುತುಮನಿತುಮಂ ಧರ್ಮಜಂ ಸೂಱೆಗೊಟ್ಟಂ;'ಕಃ ಕೇನಾರ್ಥೀ ಕೋ ದರಿದ್ರ'ಎನುತುಮನಿತುಮಂ ಧರ್ಮಜಂ ಸೂಱೆಗೊಟ್ಟಂ|| 'ವರ್ಣಾನಾಂ ಬ್ರಾಹ್ಮಣೋ ಗುರುಃ' ಎಂಬ ವಚನಂ; 'ವರ್ಣಾನಾಂ ಬ್ರಾಹ್ಮಣೋ ಗುರು' ಎಂಬ ವಚನಂ || ಯಕ್ಷೋ ಯಾದೃಶಸ್ತಾದೃಶೋ ಬಲಿಃ ಎಂಬುಕ್ತಿಗೆ;....ತಾದೃಶೋ ಬಲಿ ಎಂಬುಕ್ತಿಗೆ|| ಇವು ಮೊದಲಾದ ವಿಸರ್ಗಾಂತಾನುಕರಣಗಳೆಲ್ಲಾ ಲಕ್ಷ್ಯಗಳು.

**ವಿಚಾರ ೮೧**

ಈ ಸೂತ್ರದಲ್ಲಿ — ' ಲುಪ್; ಅನವ್ಯಯಾನುಕರಣಸ್ಯ, ವಿಸರ್ಗಸ್ಯ ' ಎಂಬ ಮೂರು ಪದಗಳಿರುವುವು. ' ಲುಪ್ ' ಎಂದರೆ ಪ್ರಸಕ್ತವಾದುದನ್ನು ಉಚ್ಚರಿಸದಿರುವುದು; ಕೇವಲ ವಿಸರ್ಗಕ್ಕೆ ಪ್ರಯೋಗವಿಲ್ಲವಾದುದರಿಂದ ' ಅನವ್ಯಯಾನುಕರಣಸ್ಯ ' ಎಂಬುದು ವಿಶೇಷಣವು. ' ಅನವ್ಯಯಾನುಕರಣಸ್ಯ ' ಎಂದರೆ — ' ನ ಅವ್ಯಯಂ, ಅನವ್ಯಯಂ, ಅವ್ಯಯಾತಿರಿಕ್ತ ಮಿತ್ಯರ್ಥಃ, ಅನುಕ್ರಿಯತ ಇತ್ಯನುಕರಣಂ, ಅನವ್ಯಯಂ ಚ ತತ್, ಅನುಕರಣಂ ಚೇತಿ ಕರ್ಮಧಾರಯಃ, ತಸ್ಯ ' ಎಂಬ ವಿಗ್ರಹ ಸಮಾಸಗಳನ್ನು ಅಂಗೀಕರಿಸಿರುವುದರಿಂದ ' ಅವ್ಯಯವಲ್ಲದ ಅನುಕ್ರಿಯಮಾಣಶಬ್ದದ ' ಎಂದರ್ಥವಾಗುವುದು. ' ವಿಸರ್ಗಸ್ಯ ' ಎಂಬುದನ್ನು ವಿಶೇಷಣ ಮಾಡಲು ' **ಯೇನ ವಿಧಿಸ್ತದಂತಸ್ಯ** ' ಎಂಬುದರಿಂದ ತದಂತಲಾಭವು ಬರುವುದು. ಆದುದರಿಂದ ವಿಸರ್ಗಾಂತವಾದ ಅವ್ಯಯಾತಿರಿಕ್ತಾನುಕರಣ ಶಬ್ದಕ್ಕೆ ಲೋಪವೆಂದು ಹೇಳಲು — ' **ಷಷ್ಠ್ಯಾಃ ಸ್ಥಾನೇಽಂತಸ್ಯ॥೨೨॥**'ಎಂಬ ಪರಿಭಾಷೆಯಿಂದ ಅಂತ್ಯವಾದ ವಿಸರ್ಗಕ್ಕೇ ಲೋಪವು ಬರುವುದೆಂದು ಸೂತ್ರಾರ್ಥವು ಫಲಿತವಾಗುವುದು. ವಿಸರ್ಗಾಂತಪದವೇ ಆಗಲಿ ವಾಕ್ಯವೇ ಆಗಲಿ ಪ್ರಾಯಶಃ ಭಾಷೆಯಲ್ಲಿ ಇಲ್ಲವಾದುದರಿಂದ ಸಂಸ್ಕೃತ ವಾಕ್ಯಗಳೇ ಇಲ್ಲ ಅನುಸರಿಸಲ್ಪಟ್ಟಿವೆ, ಎಂದು ತಿಳಿಯುವುದು. ಆದುದರಿಂದ —' ಕಃ ಕೇನಾರ್ಥೀ ಕೋ ದರಿದ್ರಃ, ವರ್ಣಾನಾಂ ಬ್ರಾಹ್ಮಣೋ ಗುರುಃ ' ಮೊದಲಾದ ವಾಕ್ಯಗಳು ಉಕ್ತಲಕ್ಷಣೋಪೇತಗಳಾಗಿರುವುವೆಂದು ಲೋಪವನ್ನು ಮಾಡಲು ಮೊದಲನೆಯ ಉದಾಹರಣೆಯಲ್ಲಿ — ' ಅಧಿಕೃತ್ಯಾ ' ಎಂಬುದರಿಂದ ಪ್ರಕೃತಿಭಾವವೂ ' ವರ್ಣಾನಾಂ ಬ್ರಾಹ್ಮಣೋ ಗುರುಃ ' ಮೊದಲಾದುವುಗಳಲ್ಲಿ ' ಅನುಕರಣಂ ' ಎಂಬುದರಿಂದ ವೈಕಲ್ಪಿಕ ಪ್ರಕೃತಿಭಾವವೂ ಬರುವುದೆಂದು ತಿಳಿಯುವುದು. ವಿಸರ್ಗವು ವ್ಯಂಜನಸ್ಥಾನಿಕವಾದುದರಿಂದ ವ್ಯಂಜನಾತ್ಮಕವೆಂದು ಇದನ್ನು ಈ ಪ್ರಕರಣದಲ್ಲಿ ಸೇರಿಸಿರುವುದು.

**ದರ್ಪಣಕಾರನು** ಈ ವಿಷಯದಲ್ಲಿ ಲೋಪವನ್ನು ಮಾಡದೆ — ಸಂಧಿಪ್ರಕರಣದಲ್ಲಿ ' ಕಃ ಕೇನಾರ್ಥೀ ಕೋ ದರಿದ್ರೋ ' ಎಂದು ಓ ಕಾರಾಂತವನ್ನೇ ಅನುಕರಣಮಾಡಿ ಸಂಧಿವಿಕಲ್ಪವೆಂದು ಹೇಳಿರುವನು. ಇದನ್ನು **ವಾಕ್ಯವೇಷ್ಟನ**ವೆಂದು ಹೇಳುತ್ತಾನೆ.

**ಅವತಾರಿಕೆ ೮೨**

ಹಿಂದೆ ವ್ಯಂಜನಮಾತ್ರಕ್ಕೆ ಆದೇಶವು ವಿಧಿಸಲ್ಪಟ್ಟಿತು. ಈಗ ಸ್ವರರಹಿತವಾದ ಕೆಲವು ವ್ಯಂಜನಕ್ಕೆ ಆದೇಶವನ್ನು ಹೇಳುತ್ತಾನೆ.

**ಸೂತ್ರಂ ॥ ಱುಡೋರ್ದೋರ್ ರಲಂ ವ್ಯಂಜನೇ ॥ ೮೨ ॥**

**ಅರ್ಥ ॥ ದು ಸಂಜ್ಞಕಗಳಾದ ಱು, ಡು ಎಂಬಿವುಗಳಿಗೆ ವ್ಯಂಜನವು ಪರವಾಗಿರಲು ಕ್ರಮವಾಗಿ ಱು, ಎಂಬುದಕ್ಕೆ ರೇಫಾದೇಶವೂ ಡು, ಎಂಬುದಕ್ಕೆ ಳ ಕಾರಾದೇಶವೂ ವಿಕಲ್ಪವಾಗಿ ಬರುವುದು.**

**ಉದಾಹರಣೆ** ॥ ನೇಸಱು+ಬಟ್ಟು= ನೇಸರ್ಬಟ್ಟು । ಹೀಗೆಯೇ ' ಬೇಸರ್ನುಡಿ, ನೂಱ್ಚಾರ್ಸಿರಂ, ಕಾಲ್ಕಿಚ್ಚು, ಕೋಲ್ಮಿನೆ, ಬೀಳ್ದಾಣಂ ' ಮೊದಲಾದುವೇ ಇದಕ್ಕೆ ಲಕ್ಷ್ಯಗಳು.

**ವಿಚಾರ ೮೨**

ಈ ಸೂತ್ರದಲ್ಲಿ 'ಋಡೋಃ, ದೋರ್ಃ, ರಳಂ, ವ್ಯಂಜನೇ' ಎಂಬ ನಾಲ್ಕು ಪದಗಳಿರುವುವು. ಪೂರ್ವಸೂತ್ರದಿಂದ 'ವಾ' ಎಂಬುದು ಅನುವರ್ತಿಸಲ್ಪಡುವುದು. 'ಋಡೋಃ' ಎಂಬುದು– 'ಋಶ್ಚ, ಡುಶ್ಚ, ಅನಯೋಃ, ಸಮಾಹಾರಃ' ಎಂಬ ವಿಗ್ರಹದಿಂದ ಸಮಾಹಾರದ್ವಂದ್ವೈಕವದ್ಭಾವವಿಶಿಷ್ಟ ಷಷ್ಠ್ಯಂತಪದವು. ಇದಕ್ಕೆ 'ದೋಃ' ಎಂಬುದು ವಿಶೇಷಣವು. 'ದೋಃ' ಎಂದರೆ – 'ದುರನ್ತ್ಯವ್ಯಂಜನಾದಿಃ' ಎಂಬ ಸೂತ್ರದಿಂದ ಅಂತ್ಯವ್ಯಂಜನಾದಿ ಸ್ವರಾಂತವಾದ ಒಂದು ಶಬ್ದದ ಕೊನೆಯ ಭಾಗವು 'ರಳಂ' ಎಂಬುದೂ ಸಮಾಹಾರದ್ವಂದ್ವವು. ಇದೇ ಇಲ್ಲಿ ವಿಧೇಯವು. ಇಲ್ಲಿ ಉದ್ದೇಶ್ಯ ನಿಮಿತ್ತಗಳೆರಡೂ ಸಮಸಂಖ್ಯಾಕಗಳಾಗಿರುವುದರಿಂದ ಕ್ರಮಾನ್ವಯವನ್ನು ಹೇಳಬೇಕು. ಈ ವಿಷಯದಲ್ಲಿ **ಆಲಂಕಾರಿಕರು** —

**'ಯಥಾಸಂಖ್ಯಂ ಕ್ರಮೇಣೈವ ಕ್ರಮಿಕಾಣಾಂ ಸಮನ್ವಯಃ**
**ಶತ್ರುಂ ಮಿತ್ರಂ ವಿಪತ್ತಿಂ ಚ ಜಯ ರಂಜಯ ಭಂಜಯ'**

ಎಂದು ಹೇಳಿರುವರು. **ಪಾಣಿನಿಯೂ** — **'ಯಥಾಸಂಖ್ಯಮನುದೇಶಃ ಸಮಾನಾಂ'** ಎಂದು ಹೇಳಿರುವನು. ಈ ಭಾಷೆಯಲ್ಲಿ ಅಂತಹ ವಚನಗಳನ್ನು ಹೇಳದಿದ್ದರೂ ಬೇರೆ ಸ್ಥಲದಲ್ಲಿ ಸಿದ್ಧವಾದುದನ್ನೇ ಅಲ್ಲಿಯೂ ವ್ಯವಹರಿಸಬಹುದೆಂದು ಪ್ರಕೃತದಲ್ಲಿ ಕ್ರಮಾನ್ವಯವು ಅಂಗೀಕರಿಸಲ್ಪಟ್ಟಿದೆ. ಆದುದರಿಂದ — ದು ಸಂಜ್ಞಕವಾದ 'ಋ' ಎಂಬುದಕ್ಕೆ ರೇಫಾದೇಶವೂ 'ಡು' ಎಂಬುದಕ್ಕೆ ಳ ಕಾರಾದೇಶವೂ ವ್ಯಂಜನವು ಪರವಾಗಿರಲು ವಿಕಲ್ಪವಾಗಿ ಬರುವುದೆಂದು ಸೂತ್ರಾರ್ಥವಾಗುವುದು. ದು ಸಂಜ್ಞಕವೆಂದು ಹೇಳಿರುವುದರಿಂದ ಶಬ್ದದ ಕೊನೆಯ ಋ, ಡು ಗಳಿಗೆ ಬರುವುದೇ ಅಲ್ಲದೆ ಆದಿಮಧ್ಯಗಳಲ್ಲಿರುವುದಕ್ಕೆ ಬರುವುದಿಲ್ಲವೆಂದು ತಿಳಿಯಬೇಕು. ಆದುದರಿಂದ 'ನೇಸರ್ಬೆಟ್ಟು' ಮೊದಲಾದುವು ಇದಕ್ಕೆ ಉದಾಹರಣೆಗಳಾಗುವುವು. 'ನೇಸರ್ಬೆಟ್ಟು' ಎಂದರೆ ಸೂರ್ಯಮಂಡಲವೆಂದರ್ಥವು. 'ನೂಚ್ಚಾರ್ಸಿರಂ' ಎಂಬುದು – '**ಸಂಖ್ಯಾಯಾಂ ಛಃ ||೯೪||**' ಎಂಬ ಸೂತ್ರದಿಂದ 'ಸಾಸಿರ' ಶಬ್ದದ ಮೊದಲನೆಯ ಸ ಕಾರಕ್ಕೆ ಛ ಕಾರಾದೇಶವು ಬಂದು ಸಿದ್ಧವಾಗಿರುವುದು. 'ಕೋಟಿಳ್ಕೊನೆ' ಎಂದರೆ ಶೃಂಗಾಗ್ರವೆಂದರ್ಥವು. 'ಬೀಟಿಳ್ತಾಣ' ವೆಂದರೆ ಶಿಬಿರವೆಂದರ್ಥವು.

ಈ ಸೂತ್ರದಲ್ಲಿ 'ಋಡೋಃ' ಎಂದು ಹೇಳಿರುವುದರಿಂದ ಕಲಹಶೀಲಸ್ತ್ರೀವಾಚಕ 'ಪಾಱುವೆಣ್' ವಿಭೀತಕವೃಕ್ಷವಾಚಕ 'ತಾಱಿಮರಂ' ಪ್ರತಿಗಂಧಿಸೂಚಕ 'ಸೂಡಿಗಂಟು' ತಟಾಕಪ್ರಾಂತೋದಕವಾಚಕ 'ಕೋಡಿನೀರ್' ಮೊದಲಾದ ಪ್ರಯೋಗಗಳಲ್ಲಿ ದು ಸಂಜ್ಞಕಗಳಾದ 'ಋ, ಡು' ಎಂಬಿವುಗಳಿಗೆ ಈ ಆದೇಶಗಳು ಬರುವುದಿಲ್ಲವೆಂದು ತಿಳಿಯಬೇಕು. 'ದೋಃ' ಎಂದು ಹೇಳಿರುವುದರಿಂದ —'**ಷಷ್ಠ್ಯಾಃ ಸ್ಥಾನೇಽಂತ್ಯಸ್ಯ**' ಎಂಬ ಸೂತ್ರದಿಂದ ಪ್ರಾಪ್ತವಾದ ಅಂತ್ಯಾದೇಶವು ನಿವೃತ್ತವಾಗುವುದು. 'ವ್ಯಂಜನೇ' ಎಂದು ಹೇಳಿರುವುದರಿಂದ '**ನೇಸಱೊಳ್, ಕಾಡೊಳ್**' ಮೊದಲಾದುವುಗಳಲ್ಲಿ ಸ್ವರವು ಪರವಾಗಿರಲು ಬರುವುದಿಲ್ಲವೆಂದು ತಿಳಿಯಬೇಕು.

ಈ ಸೂತ್ರದಲ್ಲಿ ಸಮಾಸಪದಗಳನ್ನೇ ಉದಾಹರಿಸಿರುವುದರಿಂದ ಸಮಾಸವಿಷಯದಲ್ಲಿಯೇ ಈ ಆದೇಶಗಳು ಬರುವುವು. 'ದೂಱು ಪುಟ್ಟಿತು, ಅಳಱು ಪೆರ್ಚ್ಚಿತು, ಕೋಡು ಮುರಿದುದು,

ಕೋಡು ಮೂಡಿತು ' ಮೊದಲಾದ ವಾಕ್ಯಗಳಲ್ಲಿ ಬರುವುದಿಲ್ಲವೆಂದು ಕೆಲವರು ಹೇಳುವರು. ಆದರೆ — ' ನೇಸರ್ಮೂಡಿತ್ತು, ಬೇಸೂತ್ರ್ಗಲಿಗಿತ್ತು, ನಾಲ್ಕಿಟ್ಟುದು, ಬಾಲ್ಸವಿಯಾದುದು ' ಮೊದಲಾದ ಅಸಮಸ್ತ ಪ್ರಯೋಗಗಳೂ ಉಪಲಭ್ಯಮಾನವಾಗುವುದರಿಂದ ಇಲ್ಲಿ ಸಮಾಸ ದಲ್ಲಿಯೇ ಬರುವುದೆಂದು ಹೇಳಲಾಗದು. ' ದೂಱುಪುಟ್ಟಿತು ' ಮೊದಲಾದುವುಗಳಲ್ಲಿ ಬಹುಳಾಧಿ ಕಾರದಿಂದಾಗಲಿ ' ಬೆಸಕೋಲಾ ' ದಿಗಣ ಪಾಠದಿಂದಾಗಲಿ ಅನಭಿಧಾನದಿಂದಾಗಲಿ ನಿವಾರಣೆ ಮಾಡಬೇಕು. ಸಮಸ್ತಗಳೇ ಪ್ರಚುರವಾಗಿ ಸಿಕ್ಕಿರುವುದರಿಂದ ಮು ವ ದಲ್ಲಿ ಸಮಸ್ಯಗಳೇ ಉದಾಹ ರಿಸಲ್ಪಟ್ಟಿವೆ. ಹೀಗೆಯೇ ಅಸಮಾಸವಿಷಯದಲ್ಲಿ ಪ್ರಾಚೀನ ಕವಿಗಳು —

' ಮುಗಮುಗಿಸಿತ್ತು ತೋಳ ಮೊದಲಾನನಮೊಳ್ಪಲರಾಯ್ತು ಕಣ್ಮಲರ್
ಮಿಗೆ ಸಿಡಿದಾಯ್ತು ಮೂಡಿದುವು ಪೇರುರದೊಳ್ ಮುಕುಳಸ್ತನಂಗಳೂ
ರುಗಳೆಡೆ ನುಣ್ಪನಾಳ್ದುದು ಬಸಿಱ್ಬಡವಾದುದು ಬಾಸೆ ಸೀಳ್ದುದಾ
ಕೆಗೆ ಬರೆ ಜವ್ವನಂ ಬಱಿಕೆ ಬಂದುದು ಕಾಮನ ಕಯ್ಗೆ ಕಾಮುರ್ಕಂ

ಪರಪಾಕಕ್ಕೊಂದೆರಟು್ಟಕ್ಕರಿರದವನಕ್ಕರಱ್ಮೂಱು ನಾಕಾಧಿನಾಥ
ದ್ವಿರದಕ್ಕಂ ಮೂಱುನಾಲ್ಕಿಂದುವಿನ ರುಚಿಗೆ ನಾಲ್ಕಯ್ದು ದುಗ್ಧಾಬ್ಧಿಗಯ್ದಾ
ಱರವಿಂದಕ್ಕತ್ತಲಾಱೇಟಮುರನದಿಗಮೇೞೆಂಟು ಕೈಲಾಸಧಾತ್ರೀ
ಧರಕೆಂಟೊಂಬತ್ತು ಮೇಲಾಯ್ತೆನೆ ಪಸರಿಸಿದಂ ಕೀರ್ತಿಯಂ ನಾಗವರ್ಮಂ '

ಮೊದಲಾದುವುಗಳಲ್ಲಿ ' ಬಸುರ್ಬಡವಾದುದು, ಒಂದೆರಟ್ಟಕ್ಕರಿ ' ಎಂಬಿವು ವ್ಯಸ್ತವಾಗಿದ್ದರೂ ರ ಱ ಆದೇಶಗಳನ್ನು ಮಾಡಿರುವರು. **ದರ್ಪಣಕಾರ**ನಾದರೊ —

ಪದದ ಕಡೆಯಣ ಡ ಕಾರ
ಕ್ಕುದಯಿಪುದು ಟಕಾರಮಾ ಱಕಾರಕ್ಕೊದವಿ
ರ್ಪುದು ರೇಫಂ ವ್ಯಂಜನಪದ
ಮಿದಿರೊಳ್ ಸಂಧಿಸೆ ಸಮಾಸದೊಳ್ ಬಹುಳತೆಯಿಂ (ಸೂತ್ರ ೧೮೩)

ಎಂಬ ಸೂತ್ರದಲ್ಲಿ ' ಸಮಾಸದೊಳ್ಬಹುಳತೆಯಿಂ ' ಎಂದು ಹೇಳಿರುವನು. ಆದಾಗ್ಯೂ ' ಬಹುಳ ತೆಯಿಂ ' ಎಂದು ಹೇಳಿರುವುದರಿಂದ ಸಮಸ್ತಪ್ರಯೋಗಗಳು ಪ್ರಚುರವಾಗಿದ್ದರೂ ಕ್ವಚಿತ್ ಅಸಮಸ್ತಗಳೂ ಉಂಟೆಂದೇ ತಿಳಿಯಬೇಕು. ಈ ಸೂತ್ರದಲ್ಲಿ ಪದದ ಕಡೆಯಣ ಡ ಕಾರಕ್ಕೆ ಱ ಕಾರಕ್ಕೆ ಎಂದು ವರ್ಣಮಾತ್ರಗ್ರಹಣವನ್ನು ಮಾಡಿದ್ದರೂ ' ಡು, ಱು ' ಎಂಬಿವನ್ನೇ ಗ್ರಹಿಸ ಬೇಕೆಂದು ' ಕಾಳ್ಕಿಚ್ಚು ' ಮೊದಲಾದ ಉದಾಹರಣೆಗಳನ್ನು ಕೊಟ್ಟಿರುವುದರಿಂದ ತಿಳಿಯಬೇಕು.

**ಅವತಾರಿಕೆ ೮೩**

ಹೀಗೆ ಸಾಮಾನ್ಯವಾಗಿ ಪ್ರಾಪ್ತವಾದ ರೇಫ ಟ ಕಾರಾದೇಶಗಳು ' ಱು, ಡು ' ಶಬ್ದಾಂತ ಗಳಾದ ಹ್ರಸ್ವಾದಿ ಶಬ್ದಗಳ ವಿಷಯದಲ್ಲಿ ' **ಹ್ರಸ್ವಾದೇರಸಮಾಸೇ || ೮೭ ||** ' ಎಂಬ ಸೂತ್ರದಿಂದ ನಿಷೇಧಿಸಲ್ಪಡಲು ಅದಕ್ಕೆ ಬಾಧಕವಾಗಿ ಹೇಳುತ್ತಾನೆ.

**ಸೂತ್ರಂ || ಬಹುಸ್ವರಸ್ಯ || ೮೩ ||**

**ಅರ್ಥ || ಬಹುಸ್ವರವುಳ್ಳ ಶಬ್ದದ ದು ಸಂಜ್ಞಕ ಱು, ಡು ಗಳಿಗೆ ವ್ಯಂಜನವು ಪರವಾಗಿರಲು ರೇಫ ಟ ಕಾರಾದೇಶಗಳು ವಿಕಲ್ಪವಾಗಿ ಬರುವುವು.**

**ಉದಾಹರಣೆ** || ' ಬೆದಗ್ಗಂಟೆ, ಬೆದಱುಗಂಟೆ; ಕೆದತ್ತಲೆ, ಕೆದಱುದಲೆ; ಮುದುಟ್ಗಂಟು, ಮುದುಡುಗಂಟು; ಕವಟ್ಗೊಳೆ, ಕವಡುಗೊಳೆ || ' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೮೪**

ಇಲ್ಲಿ ' ಬಹುಸ್ವರಸ್ಯ ' ಎಂಬುದೊಂದೇ ಪದವಿರುವುದು. ಇದು ' ಬಹವಃ ಸ್ವರಾಃ ಯಸ್ಯ ಸಃ ' ಎಂಬ ವಿಗ್ರಹದಿಂದ ಬಹುವ್ರೀಹಿಸಮಾಸ ಮಾಡಿ ಷಷ್ಠ್ಯಂತವಾಗಿ ನಿರ್ದೇಶಿಸಲ್ಪಟ್ಟಿರುವುದು. ಪೂರ್ವಸೂತ್ರವು ಸಂಪೂರ್ಣವಾಗಿ ಅನುವರ್ತಿಸಲ್ಪಡುವುದು. ಪೂರ್ವದಂತೆ ' ದೋಃ ' ಎಂಬುದು ' ಱಡೋಃ ' ಎಂಬುದಕ್ಕೆ ವಿಶೇಷಣವು. ' ಬಹುಸ್ವರಸ್ಯ ' ಎಂಬುದು ಅವಯವಾವಯವಿಭಾವ ಸಂಬಂಧದಿಂದ ' ಱಡೋಃ ' ಎಂಬುದಕ್ಕೆ ವಿಶೇಷಣವು. ಇದು — ' **ಹ್ರಸ್ವಾದೇರಸಮಾಸೇ || ೮೭ ||** ' ಎಂಬ ಸೂತ್ರಕ್ಕೆ ಬಾಧಕವಾದುದರಿಂದ ಇಲ್ಲಿ ' ಬಹುಸ್ವರಸ್ಯ ' ಎಂಬುದು ಮೂರು ಮೊದಲಾದ ಸ್ವರವುಳ್ಳ ಶಬ್ದಬೋಧಕವಾಗುವುದು. ತಥಾಚ – ' ಬಹುಸ್ವರ ' ಶಬ್ದಸಂಬಂಧಿ ದುಸಂಜ್ಞಕ ' ಱ, ಡು ' ಶಬ್ದಗಳಿಗೆ ವ್ಯಂಜನವು ಪರವಾಗಿರಲು ವಿಕಲ್ಪವಾಗಿ ' ಱ ' ಎಂಬುದಕ್ಕೆ ರೇಫಾದೇಶವೂ ' ಡು ' ಎಂಬುದಕ್ಕೆ ಟ ಕಾರಾದೇಶವೂ ಬರುವುದು – ಎಂದು ಸೂತ್ರಾರ್ಥವಾಗುವುದು. ಆದುದರಿಂದ ಬಹುಸ್ವರವಾದ 'ಬೆದಱು, ಕೆದಱು ' ಮೊದಲಾದುವು ಇದಕ್ಕೆ ಉದಾಹರಣೆಗಳಾಗಿ ಕೊಡಲ್ಪಟ್ಟಿವೆ. ' ಬೆದಗ್ಗಂಟೆ ' ಎಂದರೆ ಚಕಿತಗವಿ ಎಂದರ್ಥವು. ' ಮುದುಟ್ಗಂಟು ' ಎಂದರೆ ಆಮೂಲಾಗ್ರಗ್ರಂಥಿ ಎಂದರ್ಥವು.

**ಅವತಾರಿಕೆ ೮೫**

ವ್ಯಂಜನ ಸಾಮಾನ್ಯದಲ್ಲಿಯೂ ವಿಕಲ್ಪವಾಗಿ ರ ಟಾದೇಶಗಳು ಬರುವುವೆಂದು ಹಿಂದಿನ ಸೂತ್ರದಿಂದ ವಿಧಿಸಲ್ಪಟ್ಟಿತು. ಈಗ ವ್ಯಂಜನಾದಿ ಪ್ರತ್ಯಯವು ಪರವಾಗಿರಲು ನಿತ್ಯವಾಗಿ ಬರುವುವೆಂದು ಹೇಳುತ್ತಾನೆ.

**ಸೂತ್ರಂ || ಪ್ರತ್ಯಯೇ || ೮೫ ||**

**ಅರ್ಥ || ವ್ಯಂಜನಾದಿ ಪ್ರತ್ಯಯವು ಪರವಾಗಿರಲು ದು ಸಂಜ್ಞಕಗಳಾದ ಱ ಡು ಗಳಿಗೆ ಕ್ರಮವಾಗಿ ರೇಫ ಟ ಕಾರಾದೇಶಗಳು ನಿತ್ಯವಾಗಿ ಬರುವುವು.**

**ಉದಾಹರಣೆ** || ' ತೋಱು+ಕೆ=ತೋರ್ಕೆ || ' ಹೇಗೆಯೇ — ' ತೋರ್ಕುಂ, ಮಾಟ್ಕೆ, ಮಾಟ್ಕುಂ || ' ಮೊದಲಾದ ಪ್ರತ್ಯಯಾಂತಗಳು ಇದಕ್ಕೆ ಲಕ್ಷ್ಯಗಳು.

**ವಿಚಾರ ೮೫**

ಈ ಸೂತ್ರದಲ್ಲಿ ' ಪ್ರತ್ಯಯೇ ' ಎಂಬುದೊಂದೇ ಪದವಿರುವುದು. ಪೂರ್ವಸೂತ್ರದಲ್ಲಿ ' ವಾ ' ಎಂಬುದನ್ನು ಬಿಟ್ಟು ಉಳಿದುದನ್ನು ಅನುವರ್ತಿಸುವುದು. ' ಪ್ರತ್ಯಯೇ ' ಎಂಬುದಕ್ಕೆ ' ವ್ಯಂಜನೇ ' ಎಂಬುದು ವಿಶೇಷಣವು. ಇದು ವರ್ಣಬೋಧಕ ಸಪ್ತಮ್ಯಂತವಾದುದರಿಂದ — ' **ಯಸ್ಮಿಂಸ್ತದಾದೇರ್ವರ್ಣಗ್ರಹಣೇ** ' ಎಂಬ ಪರಿಭಾಷೆಯಿಂದ ತದಾದಿ ಲಾಭವು ಬಂದು ' ವ್ಯಂಜನಾದೌ ' ಎಂದರ್ಥವಾಗುವುದು. ಯೋಗವಿಭಾಗ ಸಾಮರ್ಥ್ಯದಿಂದಲೂ ಮುಂದಿನ ಸೂತ್ರದಲ್ಲಿ ' ವಾ ' ಗ್ರಹಣ ಮಾಡಿರುವುದರಿಂದಲೂ ಇದು ನಿತ್ಯವೆಂದು ತೋರುವುದು. ಆದುದರಿಂದ ವ್ಯಂಜನಾದಿಪ್ರತ್ಯಯಪರಕವಾದುದು ಸಂಜ್ಞಕ ' ಱ ' ಎಂಬುದಕ್ಕೂ ' ಡು ' ಎಂಬು

ದಕ್ಕೂ ನಿತ್ಯವಾಗಿ ರೇಫ ಲ ಕಾರಗಳು ಬರುವುವೆಂದು ಸೂತ್ರಾರ್ಥವು ಹೇಳಲ್ಪಟ್ಟಿದೆ. 'ತೋರ್ಕೆ' ಮೊದಲಾದುವು ಇದಕ್ಕೆ ಉದಾಹರಣೆಗಳಾಗಿ ಕೊಡಲ್ಪಟ್ಟಿವೆ. ದರ್ಶನಾರ್ಥಕ 'ತೋಱು' ಧಾತುವಿಗೆ ಅತೀತಾದ್ಯರ್ಥದಲ್ಲಿ 'ಗೆತ' ಪ್ರತ್ಯಯವನ್ನು ಮಾಡಲು 'ತೋರ್ಕೆ' ಎಂದು ಸಿದ್ಧವಾಗುವುದು. ಇದೇ ಧಾತುವಿನ ಮೇಲೆ 'ಅಮ್' ಪ್ರತ್ಯಯವನ್ನು ಮಾಡಲು ಅದಕ್ಕೆ — 'ಅಮರೋರ್ಗುಮ್ ॥ ೪೬೩ ॥' ಎಂಬುದರಿಂದ ಗುಮಾದೇಶವನ್ನೂ 'ವಾಗು, ಪೋಗ್ಸಿತ್ಯಾದಿ ॥ ೪೭೨ ॥' ಸೂತ್ರದಿಂದ ಗ ಕಾರಕ್ಕೆ ಕ ಕಾರಾದೇಶವನ್ನೂ ಮಾಡಲು 'ತೋರ್ಕುಂ' ಎಂದಾಗುವುದು. ಹೀಗೆಯೇ — 'ಮಾಳ್ಕೆ, ಮಾಳ್ಕುಂ' ಎಂಬಲ್ಲಿಯೂ ಪ್ರಕ್ರಿಯೆಗಳನ್ನು ಊಹಿಸಿಕೊಳ್ಳುವುದು.

**ಅವತಾರಿಕೆ ೮೫**

ವ್ಯಂಜನಾದಿ ಪ್ರತ್ಯಯವು ಪರವಾಗಲು ಸಾಮಾನ್ಯವಾಗಿ ರೇಫ ಲ ಕಾರಾದೇಶಗಳು ಬರುವುವೆಂದು ಹೇಳಲ್ಪಟ್ಟಿತು. ಈಗ ಗ ಕಾರಾದಿ ಪ್ರತ್ಯಯವು ಪರವಾಗಿರಲು ವಿಕಲ್ಪವಾಗಿ ಬರುವುದೆಂದು ಹೇಳುತ್ತಾನೆ.

**ಸೂತ್ರಂ ॥ ವಾ ಗಿ ॥ ೮೫ ॥**

**ಅರ್ಥ ॥ ಗ ಕಾರಾದಿ ಪ್ರತ್ಯಯಪರಕ ದು ಸಂಜ್ಞಕ ಱು, ದು ಗಳಿಗೆ ವಿಕಲ್ಪವಾಗಿ ರೇಫ ಲ ಕಾರಾದೇಶಗಳು ಬರುತ್ತವೆ.**

**ಉದಾಹರಣೆ ॥** 'ತೋರ್ಗಳ್, ತೋಱುಗಳ್; ತೋರ್ಗುಂ, ತೋಱುಗುಂ; ಮಾರ್ಗೆ, ಮಾಱುಗೆ; ನೋಲ್ಗೆ ನೋಡುಗೆ; ಮಾಲ್ಗುಂ, ಮಾಡುಗುಂ; ಮೂಲ್ಗುಂ, ಮೂಡುಗುಂ; ಕೋಲ್ಗುಂ, ಕೋಡುಗುಂ; ॥ ಮೊದಲಾದ ಗ ಕಾರಾದಿ ಪ್ರತ್ಯಯಾಂತಗಳೇ ಇದಕ್ಕೆ ಲಕ್ಷ್ಯಗಳು.

**ವಿಚಾರ ೮೫**

ಈ ಸೂತ್ರದಲ್ಲಿ 'ವಾ, ಗಿ' ಎಂದು ಎರಡು ಪದಗಳಿರುವುವು. ಪೂರ್ವದಿಂದ 'ಱುಡೋಃ, ದೋಃ, ರ ಲಂ ಪ್ರತ್ಯಯೇ' ಎಂಬ ನಾಲ್ಕು ಪದಗಳು ಅನುವರ್ತಿಸಲ್ಪಡುವುವು. ॥ 'ಗಿ' ಎಂಬುದು ವರ್ಣಬೋಧಕ ಸಪ್ತಮ್ಯಂತ ಪದವು. ಇದನ್ನು 'ಪ್ರತ್ಯಯೇ' ಎಂಬುದಕ್ಕೆ ವಿಶೇಷಣ ವನ್ನು ಮಾಡಲು 'ಗ ಕಾರಾದೌ' ಎಂದರ್ಥವಾಗುವುದು. ತಥಾಚ – ಗ ಕಾರಾದಿ ಪ್ರತ್ಯಯವು ಪರವಾಗಲು ದು ಸಂಜ್ಞಕವಾದ 'ಱು' ಶಬ್ದಕ್ಕೆ ರೇಫಾದೇಶವೂ 'ಡು' ಶಬ್ದಕ್ಕೆ ಲ ಕಾರವೂ ವಿಕಲ್ಪವಾಗಿ ಬರುವುದು ಎಂದು ಸೂತ್ರಾರ್ಥವಾಗಲು 'ತೋರ್ಗಳ್' ಮೊದಲಾದ ಪ್ರಯೋಗಗಳು ಸಿದ್ಧಿಸುವುವು. ಇಲ್ಲಿ 'ಗಿ' ಎಂದು ಹೇಳಿರುವುದರಿಂದ — 'ಮಾಳ್ಕುಂ, ತೋರ್ಕೆ' ಮೊದ ಲಾದುವು ಪೂರ್ವಸೂತ್ರಕ್ಕೇ ವಿಷಯಗಳೆಂದು ತಿಳಿಯಬೇಕು.

**ಅವತಾರಿಕೆ ೮೬**

'ಪ್ರತ್ಯಯೇ' ಎಂಬ ಸೂತ್ರದಿಂದ ಪ್ರತ್ಯಯಸಾಮಾನ್ಯದಲ್ಲಿಯೂ ನಿತ್ಯವಾಗಿ ಪ್ರಾಪ್ತವಾ ದುದಕ್ಕೆ 'ವಾ ಗಿ' ಎಂಬ ಸೂತ್ರದಿಂದ ಗ ಕಾರಾದಿ ಪ್ರತ್ಯಯದಲ್ಲ ವೈಕಲ್ಪಿಕತ್ವವನ್ನು ವಿಧಿಸಿ ಈಗ ಪ್ರತ್ಯಯ ವಿಶೇಷದಲ್ಲಿ ನಿಷೇಧವನ್ನು ಹೇಳುತ್ತಾನೆ.

**ಸೂತ್ರಂ || ನ ವಿ ಮುಖ್ಯೇ || ೮೬ ||**

**ಅರ್ಥ ||** ಮುಖ್ಯ ವ ಕಾರಾದಿ ಪ್ರತ್ಯಯವು ಪರವಾಗಿರಲು ದು ಸಂಜ್ಞಕ ಱು, ಡು ಗಳಿಗೆ ರೇಫ ಟ ಕಾರಾದೇಶಗಳು ಬರುವುದಿಲ್ಲ.

**ಉದಾಹರಣೆ ||** 'ತೋಱುವಂ, ತೋಱುವಿನಂ; ಬೀಱುವನ್ನಂ, ಬೀಱುವುದು, ಬೀಱುವೊಡಂ; ಮಾಡುವಂ, ಮಾಡುವಿನಂ, ಮಾಡುವನ್ನಂ, ಮಾಡುವುದು, ಮಾಡುವೊಡಂ' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೮೬**

ಈ ಸೂತ್ರದಲ್ಲಿ 'ನ,ವಿ,ಮುಖ್ಯೇ' ಎಂದು ಮೂರು ಪದಗಳಿರುವುವು. ಇದು ಪೂರ್ವಸೂತ್ರದಿಂದ ಪ್ರಾಪ್ತವಾದುದಕ್ಕೆ ನಿಷೇಧಕವಾದುದರಿಂದ 'ಱುಡೋಃ, ದೋಃ, ರಟಂ, ಪ್ರತ್ಯಯೇ' ಎಂಬ ಪದಗಳು ಅನುವರ್ತಿಸಲ್ಪಡುವುವು. '**ಶ್ರುತಾನುಮಿತಯೋಃ ಶ್ರುತಸಂಬಧೋ ಬಲೀಯಾನ್**' ಎಂಬ ವೈಯ್ಯಾಕರಣ ನ್ಯಾಯದಿಂದ ಅನುವರ್ತಿತವಾದ ಪ್ರತ್ಯಯದಲ್ಲಿ ಸಂಬಂಧ ಮಾಡುವುದಕ್ಕಿಂತಲೂ ಸೂತ್ರದಲ್ಲಿ ಶ್ರುತವಾದ 'ವಿ' ಎಂಬುದಕ್ಕೆ ವಿಶೇಷಣ ಮಾಡುವುದು. 'ವಿ' ಎಂಬುದನ್ನು ಅನುವರ್ತಿತವಾದ 'ಪ್ರತ್ಯಯೇ' ಎಂಬುದಕ್ಕೆ ವಿಶೇಷಣ ಮಾಡಲು ತದಾದಿ ಲಾಭವು ಉಂಟಾಗಿ 'ಮುಖ್ಯೆ ವ ಕಾರಾದೌ ಪ್ರತ್ಯಯೇ' ಎಂದರ್ಥವಾಗುವುದು. ತಥಾಚ — ಮುಖ್ಯ ವ ಕಾರಾದಿ ಪ್ರತ್ಯಯವು ಪರವಾಗಲು ದು ಸಂಜ್ಞಕವಾದ 'ಱು' ಎಂಬುದಕ್ಕೆ ರೇಫಾದೇಶವೂ 'ಡು' ಎಂಬುದಕ್ಕೆ ಟ ಕಾರಾದೇಶವೂ ಬರುವುದಿಲ್ಲವೆಂದು ಸೂತ್ರಕ್ಕೆ ಅರ್ಥವಾಗಲು 'ತೋಱುವಂ' ಮೊದಲಾದ ಪ್ರಯೋಗಗಳಲ್ಲಿ ಮುಖ್ಯ ವ ಕಾರಾದಿ ಪ್ರತ್ಯಯಗಳು ಪರವಾಗಿರುವುದರಿಂದ ಆದೇಶವು ಬಂದಿಲ್ಲವೆಂದು ತಿಳಿಯುವುದು.

ಈ ಸೂತ್ರದಲ್ಲಿ 'ವಿ' ಎಂದು ಹೇಳಿರುವುದರಿಂದ — 'ತೋರ್ಕೆ, ತೋರ್ಕುಂ; ಮಾಟ್ಕೆ, ಮಾಟ್ಕುಂ' ಮೊದಲಾದ ಕ ಕಾರಾದಿ ಪ್ರತ್ಯಯಪರಕವಾದ ಪ್ರಯೋಗಗಳಲ್ಲಿ ನಿಷೇಧವು ಬರುವುದಿಲ್ಲ. 'ಮುಖ್ಯೇ' ಎಂದು ಹೇಳಿರುವುದರಿಂದ 'ತೋರ್ಪಂ, ಮಾಟ್ಪಂ' ಮೊದಲಾದ ಪ್ರಯೋಗಗಳಲ್ಲಿ ವ ಪ್ರತ್ಯಯಸ್ಥಾನವಲ್ಲಿ — '**ಆದಿಷ್ಟಾದ್ರಟಃ || ೫೧೪ ||**' ಎಂಬ ಸೂತ್ರದಿಂದ ಪ ಕಾರಾದೇಶವನ್ನು ಮಾಡಿ ಅದಕ್ಕೆ — '**ಸ್ಥಾನಿವದಾದೇಶಃ**' ಎಂಬುದರಿಂದ ಸ್ಥಾನಿತ್ವವನ್ನು ಅತಿದೇಶ ಮಾಡಲು ವ ಕಾರಾದಿ ಪ್ರತ್ಯಯ ಪರಕತ್ವವು ಪ್ರಾಪ್ತವಾಗುವುದರಿಂದ ಅಲ್ಲಿ ಈ ನಿಷೇಧವು ಬರುವುದಿಲ್ಲವೆಂದು ತಿಳಿಯಬೇಕು. ಆದರೆ ಇಲ್ಲಿ ಮುಖ್ಯಗ್ರಹಣವು ಅಮುಖ್ಯವ್ಯಾವೃತ್ಯರ್ಥವೆಂದು ಹೇಳಬೇಕು. ಪ ಕಾರಕ್ಕೆ ಅಮುಖ್ಯತ್ವವು ವರ್ಣಾಂತರವನ್ನು ಆದೇಶ ಮಾಡಿ ಆ ಆದೇಶದಲ್ಲಿ — ಸ್ಥಾನಿವತ್ ಸೂತ್ರದಿಂದ ಸ್ಥಾನಿರೂಪಾತಿದೇಶ ಮಾಡಲು ಸಂಭವಿಸುವುದು. ಪ್ರಕೃತದಲ್ಲಿ ವ ಕಾರಕ್ಕೆ ಪ ಕಾರಾದೇಶವು ಬರುವುದಕ್ಕೆ ಮೊದಲು 'ಱು, ಡು' ಎಂಬಿವುಗಳಿಗೆ ರೇಫ ಟ ಕಾರಾದೇಶಗಳನ್ನು ಮಾಡಿದನಂತರದಲ್ಲಿಯೇ '**ಆದಿಷ್ಟಾದ್ರಟಃ || ೫೧೪ ||**' ಎಂಬ ಸೂತ್ರದಿಂದ ಪ ಕಾರಾದೇಶಕ್ಕೆ ಪ್ರವೃತ್ತಿಯಿರುವುದರಿಂದ ಪ್ರವೃತ್ತ್ಯವಾದುದನ್ನು ನಿಷೇಧಿಸುವುದು- '**ಭುಕ್ತವಂತಂ ಪ್ರತಿಮಾಭುಙ್ಕ್ಷ್ವಾಃ**' ಎಂದು ಹೇಳಿದಂತಾಗುವುದು. ತಥಾಚ ಮುಖ್ಯ ಗ್ರಹಣಕ್ಕೆ ವ್ಯಾವರ್ತ್ಯವೇ ಇಲ್ಲವಾದುದರಿಂದ ತದ್ಗ್ರಹಣವು ವ್ಯರ್ಥವೆಂದು ಹೇಳಬೇಕು. ಅಥವಾ ಕೃತ್ವಾ

ಚಿಂತಾನ್ಯಾಯದಿಂದ ಈ ಸೂತ್ರದಲ್ಲಿ ಮುಖ್ಯಗ್ರಹಣವಿಲ್ಲದಿದ್ದರೆ ಈ ನಿಷೇಧವು ಸಾಮಾನ್ಯವಾಗಿ ವ ಕಾರಾದಿ ಪ್ರತ್ಯಯಗಳಲ್ಲೆಲ್ಲಾ ಪ್ರಾಪ್ತವಾಗುವುದು. ಇದರಿಂದ '**ಅದಿಷ್ವಾದ್ರಟಃ || ೫೧೪ ||**' ಎಂಬ ಸೂತ್ರವು ನಿರರ್ಥಕವಾಗುವುದು. ಆದುದರಿಂದ ಈ ನಿಷೇಧವನ್ನೇ ವಿಕಲ್ಪವೆಂದು ಹೇಳು ವುದಕ್ಕೆ ಪ್ರತಿಯಾಗಿ ಮುಖ್ಯ 'ವ ಕಾರಾದೌ ಪ್ರತ್ಯಯೇ' ಎಂದು ಹೇಳಿರುವನು — ಎಂದು ಕಥಂಚಿತ್‌ಪ್ರಯೋಜನವನ್ನು ಕಲ್ಪಿಸಿಕೊಳ್ಳುವುದು.

**ಅವತಾರಿಕೆ ೮೭**

ಪ್ರತ್ಯಯಾತಿರಿಕ್ತವ್ಯಂಜನಾದಿಗಳು ಪರವಾಗಿರಲು ನಿಷೇಧವನ್ನು ಹೇಳುತ್ತಾನೆ.

**ಸೂತ್ರಂ || ಹ್ರಸ್ವಾದೇರಸಮಾಸೇ || ೮೭ ||**

**ಅರ್ಥ || ಸಮಾಸದಿಂದ ಯಾವುದು ಹ್ರಸ್ವಾದಿಯಲ್ಲವೋ ತತ್‌ಸಂಬಂಧಿಗಳಾದ ದು ಸಂಜ್ಞಕ ೞು, ಡು ಗಳಿಗೆ ವ್ಯಂಜನವು ಪರವಾಗಿರಲು ರೇಫ ೞ ಕಾರಾದೇಶಗಳು ಬರುವುದಿಲ್ಲ.**

**ಉದಾಹರಣೆ ||** ಕೆೞು+ಕೋಲ್ = ಕೆೞುಗೋಲ್ || ಹೀಗೆಯೇ — ತುೞುಗಾಡು, ಕುೞುಗಂಟು, ಕುಡುಗೋಲ್, ಕಡುಗಂಪು, ಸಿಡುಸೂಳ್ || ಮೊದಲಾದ ಪ್ರಯೋಗಗಳೇ ಇದಕ್ಕೆ ಲಕ್ಷ್ಯಗಳು.

**ವಿಚಾರ ೮೭**

ಈ ಸೂತ್ರದಲ್ಲಿ — 'ಹ್ರಸ್ವಾದೇಃ, ಅಸಮಾಸೇ' ಎಂದು ಎರಡು ಪದಗಳಿರುವುವು. ಇದು ಪ್ರತ್ಯಯಾತಿರಿಕ್ತವಿಷಯವಾದುದರಿಂದ 'ವ್ಯಂಜನೇ' ಎಂಬುದು ಅನುವರ್ತಿಸಲ್ಪಡುವುದು. 'ೞುಡೋರ್ದೋರ್‌ರೞಂ, ನ' ಎಂಬುದೂ ಅನುವರ್ತಿಸುವುದು. 'ಹ್ರಸ್ವಾದೇಃ' ಎಂಬುದು 'ಹ್ರಸ್ವಃ ಆದಿಃ ಯಸ್ಯ ಸಃ' ಎಂದು ಬಹುವ್ರೀಹಿಸಮಾಸವನ್ನು ಮಾಡಿ ಷಷ್ಠ್ಯಂತವಾಗಿ ನಿರ್ದೇಶಿಸಲ್ಪಟ್ಟಿರುವುದು. ಇದು ಅವಯವಾವಯವಿಭಾವಸಂಬಂಧದಲ್ಲಿ ವಿಹಿತವಾದ ಷಷ್ಠಿ 'ೞುಡೋಃ' ಎಂಬುದಕ್ಕೆ ವಿಶೇಷಣವು. 'ಅಸಮಾಸೇ' ಎಂಬುದು 'ನ ಸಮಾಸೇ, ಅಸಮಾಸೇ' ಎಂದು ನಞ್-ತತ್ಪುರುಷವನ್ನಂಗೀಕರಿಸಿ ಅಸಮಾಸವಿಷಯದಲ್ಲಿ ಹ್ರಸ್ವಾದಿಯಾದ ಶಬ್ದಗಳ ದು ಸಂಜ್ಞಕ 'ೞು, ಡು' ಗಳಿಗೆ ವ್ಯಂಜನವು ಪರವಾಗಿರಲು ರೇಫ ೞ ಕಾರಾದೇಶಗಳು ಬರುವುದಿಲ್ಲ ವೆಂದು ಸೂತ್ರಾರ್ಥವನ್ನು ಹೇಳಿದರೆ 'ಕೆೞುಗೋಲ್, ಕುೞುಗಂಟು, ಸಿಡುದೋಳ್, ಕಡುಚಾಗಂ' ಮೊದಲಾದ ಸಮಸ್ತ ಪ್ರಯೋಗಗಳಲ್ಲಿ ನಿಷೇಧವು ಪ್ರವರ್ತಿಸದೆ ರೇಫ ೞ ಕಾರಗಳೇ ಬರಬೇಕಾ ಗುವುದು. ಅಥವಾ ಅಸಮಾಸದಲ್ಲಿ ಯಾವುದು ಹ್ರಸ್ವಾದಿಯೋ ತತ್‌ಸಂಬಂಧಿಯಾದ 'ೞು, ಡು' ಗಳಿಗೆ ರ ೞ ಗಳೇ ಬರುವುದಿಲ್ಲ ಎಂದು ಸೂತ್ರಾರ್ಥವನ್ನು ಹೇಳಿದರೆ — 'ಎಳದುೞು ವಿಂಡು, ಪೊಸಬಿಡುಮುತ್ತು' ಮೊದಲಾದುವುಗಳಲ್ಲ ಸಮಾಸದಲ್ಲಿ ಹ್ರಸ್ವಾದಿಯಾದುದರಿಂದ ಆದೇಶವೇ ಪ್ರಸಕ್ತವಾಗುವುದು. ಆದುದರಿಂದ ಇಲ್ಲಿ 'ಅಸಮಾಸೇ' ಎಂಬಲ್ಲಿರುವ ನಿಷೇಧಾರ್ಥಕ 'ನಞ್' ಗೆ ಹ್ರಸ್ವಾದಿಯಲ್ಲಿ ವಿಶೇಷಣಮಾಡಿ ಸಮಾಸಕೃತ ಹ್ರಸ್ವಾದಿಯಲ್ಲದ ಶಬ್ದಸಂಬಂಧಿ ಯಾದ 'ೞು, ಡು' ಗಳಿಗೆ ವ್ಯಂಜನಪರದಲ್ಲಿರುವಾಗ ರೇಫ ೞ ಕಾರಾದೇಶಗಳು ಬರುವುದಿಲ್ಲ ವೆಂದು ಸೂತ್ರಾರ್ಥವನ್ನು ಮಾಡಲು ಆವ ಶಬ್ದಗಳು ಸ್ವಭಾವವಾಗಿ ಹ್ರಸ್ವಾದಿಯಲ್ಲದೆ ಸಮಾಸ ವನ್ನು ಮಾಡಿದರೇ ಹ್ರಸ್ವಾದಿಯಾಗುವುವೊ ತದತಿರಿಕ್ತವಾದ ಶಬ್ದವಾವುದೋ ಅದು ಸಮಸ್ತ

ವಾಗಿದ್ದರೂ ಸರಿ, ವ್ಯಸ್ತವಾಗಿದ್ದರೂ ಸರಿ, ಅಂತಹ ಹ್ರಸ್ವಾದಿ ಶಬ್ದಸಂಬಂಧಿಗಳೇ ಆದ ದು ಸಂಜ್ಞಕ 'ಱು, ಡು' ಗಳಿಗೆ ರ ಱ ಆದೇಶವು ಬರುವುದಿಲ್ಲವೆಂದು ಸೂತ್ರಕ್ಕೆ ಫಲಿತಾರ್ಥವನ್ನು ಹೇಳಬೇಕು. ಆದುದರಿಂದ — ' ಎಳಗಱು, ಪೊಸಮಡು ' ಮೊದಲಾದ ಸಮಸ್ತ ಪ್ರಯೋಗಗಳಲ್ಲಿ ಕೆಲವಕ್ಕೂ ಹ್ರಸ್ವಾದಿತ್ವವಿರುವುದರಿಂದ ನಿಷೇಧವು ಪ್ರವರ್ತಿಸುವುದು.'ಪೊಱಮಾಱು, ಪೊಸಬೀಡು' ಮೊದಲಾದುವುಗಳಲ್ಲಿ ಹ್ರಸ್ವಾದಿತ್ವವು ಸಮಾಸಕೃತವೇ ಅಲ್ಲದೆ ಸ್ವಭಾವವಾಗಿ ಇಲ್ಲದಿರುವುದರಿಂದ ನಿಷೇಧವು ಪ್ರವರ್ತಿಸದೆ ಆದೇಶವೇ ಬಂದು ' ಪೊಱಮಾರ್ಗಂಟೆ, ಪೊಸಬೀಳ್ಪಾಣಂ ' ಮೊದಲಾದುವು ಸಿದ್ಧಿಸುವುವು. ಆದುದರಿಂದಲೇ 'ಬಾಱ್ದುಱುವಿಂಡು, ಸಾಲ್ಗಱುದಾಣಂ, ನೀರ್ಮ್ಮಡುದಾಣಂ, ಕಾಲ್ಗಡುವೇರ್ ' ಮೊದಲಾದುವುಗಳಲ್ಲಿ ಸಮಾಸದಿಂದ ದೀರ್ಘಾದಿತ್ವವಿದ್ದರೂ ಸ್ವಭಾವವಾಗಿ ' ತುಱು, ಮಡು ' ಮೊದಲಾದುವು ಹ್ರಸ್ವಾದಿಯಾಗಿರುವುದರಿಂದ ನಿಷೇಧವೇ ಬರುವುದು. ' ಬೆದರ್ಗ್ಗಱಂಟೆ, ಮುದುಲ್ಗಱಂಟು ' ಮೊದಲಾದುವು ಹ್ರಸ್ವಾದಿಯಾಗಿದ್ದರೂ — ' ಬಹುಸ್ವರಸ್ಯ' ಎಂಬ ಸೂತ್ರಕ್ಕೆ ವಿಷಯವಾದುದರಿಂದ ಸಿದ್ಧಿಸುವುವು. **ದರ್ಪಣಕಾರನ** ಮತದಲ್ಲಿ ಬಹುಳಗ್ರಹಣದಿಂದ ಇಂತಹ ಪ್ರಯೋಗಗಳಿಗೆಲ್ಲಾ ಉಪಸಮಿತಿಯನ್ನು ಕಲ್ಪಿಸಬೇಕು.

**ಅವತಾರಿಕೆ ೮೯**

ಇದುವರೆಗೂ ಸಾಮಾನ್ಯವಾಗಿ ನಿಷೇಧವನ್ನು ಹೇಳಿ ಈಗ ಸಂಖ್ಯಾವಾಚಕ ಶಬ್ದಗಳಿಗೆ ವಿಶಿಷ್ಟನಿರ್ದೇಶ ಮಾಡಿ ನಿಷೇಧವನ್ನು ಹೇಳುತ್ತಾನೆ.

**ಸೂತ್ರಂ || ಆಱುಮೂಱುಱೋಃ || ೮೯ ||**

**ಅರ್ಥ ||** ಆಱು, ಮೂಱು ಶಬ್ದಗಳ ದು ಸಂಜ್ಞಕವಾದ ಱು ವಿಗೆ ವ್ಯಂಜನವು ಪರವಾಗಿರಲು ರೇಫಾದೇಶವು ಬರುವುದಿಲ್ಲ.

**ಉದಾಹರಣೆ ||** ಆಱು+ಗಾವುದಂ=ಆಱುಗಾವುದಂ, ಮೂಱು+ಗಾವುದಂ = ಮೂಱುಗಾವುದಂ || ಮೊದಲಾದುವೇ ಇದಕ್ಕೆ ಲಕ್ಷ್ಯಗಳು.

**ವಿಚಾರ ೮೯**

ಈ ಸೂತ್ರದಲ್ಲಿ ' ಆಱುಮೂಱುಱೋಃ ' ಎಂದು ಒಂದೇ ಪದವಿರುವುದು. ಇದರಲ್ಲಿ ನಿರ್ದಿಷ್ಟಗಳಾದ ' ಆಱು, ಮೂಱು ' ಇವೆರಡೂ ' ಱು ' ಶಬ್ದಾಂತಗಳಾದುದರಿಂದ ' **ಱುಡೋರ್ದೋರ್ ರಱಂ ವ್ಯಂಜನೇ** ' ಎಂಬ ಸೂತ್ರದಿಂದ ' ಱೋಃ, ರಃ, ವ್ಯಂಜನೇ ' ಎಂಬಿವೇ ಅನುವರ್ತಿಸಲ್ಪಡುವುವು. ನಿಷೇಧಪ್ರಕರಣವಾದುದರಿಂದ 'ನ' ಎಂಬುದೂ ಅನುವರ್ತಿಸಲ್ಪಡುವುದು. ತಥಾಚ — ' ಆಱು, ಮೂಱು ' ಶಬ್ದಗಳ ದು ಸಂಜ್ಞಕ ' ಱು ' ವಿಗೆ ವ್ಯಂಜನವು ಪರವಾಗಿರಲು ರೇಫಾದೇಶವು ಬರುವುದಿಲ್ಲವೆಂದು ಸೂತ್ರಾರ್ಥವಾಗುವುದು. ಆದುದರಿಂದ ' ಆಱುಗಾವುದಂ, ಮೂಱುಗಾವುದಂ ' ಎಂಬ ಸಮಾಸಗಳಲ್ಲಿ ಇದರಿಂದ ರೇಫಾದೇಶಕ್ಕೆ ನಿಷೇಧವು ಬರಲು ' ಆಱು ' ಶಬ್ದಕ್ಕೆ ' **ಆಱೋಃ || ೩೫೫** || ' ಎಂಬ ಸೂತ್ರದಿಂದ ವೈಕಲ್ಪಿಕ ಹ್ರಸ್ವವೂ ' ಮೂಱು ' ಶಬ್ದಕ್ಕೆ — ' **ಮೂಱೋಃ || ೩೫೨** || ' ಎಂಬ ಸೂತ್ರದಿಂದ ದು ಲೋಪವೂ ಬರಲು ' ಅಱುಗಾವುದಂ, ಮೂಗಾವುದಂ ' ಎಂದು ಸಿದ್ಧವಾಗುವುದು.

ಈ ಸೂತ್ರದಲ್ಲಿ — ' **ಸಂಖ್ಯಾಲ್ಪಾ ಸಮಾಸೇ || ೨-೧-೧೨೨** || ' ಎಂಬ **ಶಾಕಟಾಯನ** ಸೂತ್ರದಿಂದಾಗಲಿ, '**ಸಂಖ್ಯಾಯಾ ಅಲ್ಪೀಯಾಸ್ಯಾಃ**' ಎಂಬ **ಪಾಣಿನಿ**ಸೂತ್ರದಿಂದಾಗಲಿ '**ಮೂಱು**'

ಶಬ್ದಕ್ಕೆ ಪ್ರಥಮತಃ ನಿರ್ದೇಶಮಾಡಿ 'ಮೂಱಾಱ್ಕೋಃ' ಎಂದು ಹೇಳದೆ 'ಆಱು, ಮೂಱ್ಕೋಃ' ಎಂದು ಹೇಳುವ **ಸೂತ್ರಕಾರರಿಗೆ** ' ಮೂಱು ' ಶಬ್ದಕ್ಕೆ ನಿಷೇಧವು ಕ್ವಾಚಿತ್ಕವೆಂದು ತಾತ್ಪರ್ಯವನ್ನು ಕಲ್ಪಿಸಬೇಕು. ಇದರಿಂದ ' ಮೂರ್ಮೆ, ಮೂರ್ಮಡಿ ' ಎಂದು ಸಿದ್ಧಿಸುವುದು. ಹೀಗೆ ಮಹಾಕವಿಪ್ರಯೋಗವೂ ಇರುವುದು —

ಕೂರ್ಮೆಯಿನಾ ಮುನಿಯಂ ಕಂ
ಡಾರ್ಮೆಂ ನೀನಲ್ಲದಿಲ್ಲ ಪೆಱತೆಂದರಸಂ
ಮೂರ್ಮೆ ಬಲವಂದು ನುತಿಸಿ ಪ
ಲರ್ಮೆ ತುೞಿಲ್ಗೆಯ್ದು ಭಕ್ತಿಯಿಂ ಬೆಸಗೊಂಡಂ

ಮೊದಲಾದುವನ್ನು ಪ್ರಯೋಗಜ್ಞರು ಅರಿದುಕೊಳ್ಳುವುದು.

**ಅವತಾರಿಕೆ ೮೯**

ಇದುವರೆಗೂ ಸಮಾಸಾಸಮಾಸಸಾಧಾರಣವಾಗಿ ಪೂರ್ವಭಾಗದ ಅಂತ್ಯಕ್ಕೆ ಬರುವ ವ್ಯಂಜನಾದೇಶಗಳನ್ನು ಹೇಳಿ ಈಗ ಸಮಾಸಮಾತ್ರದಲ್ಲಿ ಪರಪದದ ಆದಿವ್ಯಂಜನಕ್ಕೆ ಬರುವ ಆದೇಶವನ್ನು ವಿಧಿಸುತ್ತಾನೆ.

**ಸೂತ್ರಂ || ಕತಪಸ್ತೃತೀಯ ಉತ್ತರಪದಾದೇಃ || ೮೯ ||**

**ಅರ್ಥ || ಉತ್ತರಪದದ ಆದಿಭೂತಗಳಾದ ಕ ಕಾರ ತ ಕಾರ ಪ ಕಾರಗಳಿಗೆ ಆಯಾ ವರ್ಗದ ತೃತೀಯವರ್ಣಾದೇಶವು ಬರುವುದು.**

**ಉದಾಹರಣೆ ||** ಪೞದು+ಕನ್ನಡಂ = ಪೞಗನ್ನಡಂ || ಹೀಗೆಯೇ — ' ಗೞಿಗೂೞ್, ತಣ್ಗದಿರ್, ಸುಣ್ಗದಿರ್, ಸುಣ್ಗದಪು, ನುಣ್ಗಱಿ, ಕಣ್ದೆಱವಿ, ಉಡಿದೊವಲ್, ಬಾಯ್ದೆಱಿ, ಕಣ್ಬೊಲಂ, ತಣ್ಬೞಿಲ್, ಸುಣ್ಬೊಗರ್, ಕಣ್ಬಾಪೆ || ' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೮೯**

ಈ ಸೂತ್ರವಲ್ಲಿ ' ಕತಪಃ, ತೃತೀಯಃ, ಉತ್ತರಪದಾದೇಃ ' ಎಂದು ಮೂರು ಪದಗಳಿರುವುವು. ' ಕತಪಃ ' ಎಂಬುದು ' ಕ, ತ, ಪ ' ಎಂಬ ವರ್ಣತ್ರಯಬೋಧಕ ಷಷ್ಠ್ಯಂತ ಪದವು. ಇದಕ್ಕೆ ' ಉತ್ತರಪದಾದೇಃ ' ಎಂಬುದು ವಿಶೇಷಣವು. ' ಉತ್ತರಪದ ' ಶಬ್ದವು ವ್ಯಾಕರಣಶಾಸ್ತ್ರದಲ್ಲಿ ಸಮಾಸದ ಚರಮಾವಯವದಲ್ಲಿ ರೂಢವಾಗಿರುವುದು ಅದರ ' ಆದಿ ' ಎಂದು ಷಷ್ಠಿತತ್ಪುರುಷಸಮಾಸವನ್ನು ಹೇಳಬೇಕು. ' ತೃತೀಯಃ ' ಎಂಬುದು ಪ್ರಥಮಾಂತವಾದುದರಿಂದ ಇದೇ ಇಲ್ಲಿ ವಿಧೇಯವಾಗಿರುವುದು. ' ತೃತೀಯಃ ' ಎಂದರೆ ಆವ ವರ್ಗದ ಅಕ್ಷರವು ಸ್ಥಾನಿಯಾಗುವುದೋ ಆ ವರ್ಗದಲ್ಲಿ ಮೂರನೆಯದೆಂದರ್ಥವು. ತಥಾಚ — ಸಮಾಸದ ಕೊನೆಯ ಪದದ ಆದಿಭೂತಗಳಾದ ಕ ಕಾರ ತ ಕಾರ ಪ ಕಾರಗಳ ಸ್ಥಾನದಲ್ಲಿ ಆಯಾ ವರ್ಗದ ಮೂರನೆಯ ವರ್ಣವು ಆದೇಶವಾಗಿ ಬರುವುದೆಂದು ಸೂತ್ರಕ್ಕೆ ಅರ್ಥವಾಗುವುದು. ಇದರಿಂದ ' ಪೞಗನ್ನಡಂ ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು. ಈ ಸೂತ್ರದಲ್ಲಿ ' ಕತಪಃ ' ಎಂದು ಹೇಳಿರುವುದರಿಂದ — ' ಕಡುಚಾಗಿ, ಕಣ್ಚಲ್ಲಂ, ಕಡುಟಕ್ಕು, ಪೊಸಟೊಪ್ಪಿಗೆ ' ಮೊದಲಾದುವುಗಳಲ್ಲಿ ಉತ್ತರ ಆದಿಯಲ್ಲಿರುವ ಚ ಕಾರಾದಿಗಳಿಗೆ ತೃತೀಯ ವರ್ಣಾದೇಶವಿಲ್ಲ. ' ಉತ್ತರಪದಾದೇಃ ' ಎಂಬುದರಲ್ಲಿ ' ಉತ್ತರಪದ ' ಎಂದು ಹೇಳಿರುವುದರಿಂದ — ' ತಣ್ಗದಿರ್, ಕಣ್ಸೋಲಂ ' ಮೊದಲಾ

ದುವುಗಳಲ್ಲಿ ಪೂರ್ವಪದದ ಆದಿಭೂತ ತ ಕಾರ ಕ ಕಾರಾದಿಗಳಿಗೆ ಬರುವುದಿಲ್ಲ. 'ಆದೇಃ' ಎಂದು ಹೇಳಿರುವುದರಿಂದ 'ಪೊಸಸಕ್ಕರೆ, ಮನೆಸರಕು' ಮೊದಲಾದ ಪ್ರಯೋಗಗಳಲ್ಲಿ ಮಧ್ಯಾಂತಗಳಿಗೆ ಬರುವುದಿಲ್ಲ. ಇಲ್ಲಿ 'ಉತ್ತರಪದ' ವೆಂಬುದು ಸಮಾಸಚರಮಾವಯವದಲ್ಲೇ ರೂಢವೆಂದು ಹೇಳಿರುವುದರಿಂದ 'ಕಣ್ಣ ಕಡೆ, ರನ್ನದ ಕಣಿ, ಪೊನ್ನ ತಗಡು, ಅಲತೆಗೆಯ ಪಪಲಂ' ಮೊದಲಾದ ವಾಕ್ಯಗಳಲ್ಲಿ ಬರುವುದಿಲ್ಲವೆಂದು ತಿಳಿಯಬೇಕು.

ಈ ವಿಷಯದಲ್ಲಿ **ದರ್ಪಣಕಾರನು** —

> ಇರೆ ವರ್ಗಪ್ರಥಮಂಗಳ್
> ಪರದೊಳ್ ಚ ಟ ವರ್ಗಮುಱಿಯೆ ತಮ್ಮ ತೃತೀಯಾ
> ಕ್ಷರಮುಕ್ಕುಂ ಪದವಿಧಿಯೊಳ್
> ಪರಿಹರಿಸಲ್ ಬಾರದಲ್ಲಿ ಬಹುಳಸ್ಥಿತಿಯಿಂ (ಸೂತ್ರ ೬೫)

ಎಂಬ ಸೂತ್ರವನ್ನು ಹೇಳಿರುವನು. ಇಲ್ಲಿ ಪದವಿಧಿಯೊಳೆಂದರೆ ಸಮಾಸದಲ್ಲಿ ಎಂದರ್ಥವು. ಬಹುಳವೆಂದು ಹೇಳಿರುವುದರಿಂದ **ಶಾಸನ**ದಲ್ಲಿ — '**ಬೆಸೆಕೋಲಾದಯಃ || ೧೦೧ ||**' ಎಂಬ ಗಣಪಠಿತವಾದ ಶಬ್ದಗಳೂ ಸಂಗ್ರಹಿತವಾಗುವುವು.

**ಅವತಾರಿಕೆ ೯೦**

ಪೂರ್ವಸೂತ್ರದಿಂದ ಸಾಮಾನ್ಯವಾಗಿ ಪ್ರಾಪ್ತವಾದ ತೃತೀಯವರ್ಣಾದೇಶಕ್ಕೆ ಕೆಲವೆಡೆಗಳಲ್ಲಿ ನಿಷೇಧವನ್ನು ಹೇಳುತ್ತಾನೆ.

**ಸೂತ್ರಂ || ನಾದಿಷ್ಟಾದ್ರಱಃ || ೯೦ ||**

**ಅರ್ಥ || ಆದೇಶವಾಗಿ ಬಂದ ರೇಫ ಱ ಕಾರಗಳ ಮುಂದಿನ ಉತ್ತರಪದಾದಿಭೂತ ಕ ಕಾರ ತ ಕಾರ ಪ ಕಾರಗಳಿಗೆ ತೃತೀಯವರ್ಣಾದೇಶವು ಬರುವುದಿಲ್ಲ.**

**ಉದಾಹರಣೆ** || ಮಾಱು + ಕೋಲ್ = ಮಾರ್ಕೋಲ್ || ಹೀಗೆಯೇ — ಬೇರ್ತ್ಗಡೆ, ಬೇರ್ಪ್ಪಟ್ಟಂ, ಕಾಱ್ಕಿಚ್ಚು, ನಾಱ್ತೊಲೆ, ನಾಱ್ಪಗರಣಂ, ಒರ್ಕ್ಕಯ್, ಇರ್ಪ್ಪನಿ, ಕೀಱ್ತೊಪ್ಪೆ|| ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೯೦**

ಈ ಸೂತ್ರದಲ್ಲಿ 'ನ, ಆದಿಷ್ಟಾತ್, ರಱಃ' ಎಂದು ಮೂರು ಪದಗಳಿರುವುವು. '**ಕತಪಸ್ತೃತೀಯ ಉತ್ತರಪದಾದೇಃ**' ಎಂಬ ಸೂತ್ರವು ಸಂಪೂರ್ಣವಾಗಿ ಅನುವರ್ತಿಸಲ್ಪಡುವುದು. 'ಆದಿಷ್ಟಾತ್' ಎಂದರೆ — '**ಱಡೋಽದೋರ್ರಱಂ ವ್ಯಂಜನೇ**' ಇತ್ಯಾದಿ ಸೂತ್ರಗಳಿಂದ ವಿಧಿಸಲ್ಪಟ್ಟುದು ಎಂದರ್ಥವು. ಇದು 'ರಱಃ' ಎಂಬುದಕ್ಕೆ ವಿಶೇಷಣವು. ಪಂಚಮ್ಯಂತವಾದುದರಿಂದ 'ಉತ್ತರಸ್ಯ' ಎಂದು ಉಪಸ್ಥಿತವಾಗುವುದು. ಅದನ್ನು 'ಕತಪಃ' ಎಂಬುದಕ್ಕೆ ವಿಶೇಷಣ ಮಾಡುವುದು. ತಥಾಚ — ಆದೇಶವಾಗಿ ಬಂದ ರೇಫ ಱ ಕಾರಗಳಿಗೆ ಪರವಾಗಿರುವ ಉತ್ತರಪದಾದಿಯ ಕ ತ ಪ ಗಳಿಗೆ ತೃತೀಯವರ್ಣಾದೇಶವು ಬರುವುದಿಲ್ಲವೆಂದು ಸೂತ್ರಾರ್ಥವಾಗುವುದರಿಂದ 'ಮಾರ್ಕೋಲ್' ಮೊದಲಾದ ಪ್ರಯೋಗಗಳಲ್ಲಿ ಕ ಕಾರಾದ್ಯಾದಿಗಳಿಗೆ ಗ ಕಾರಾದ್ಯಾದೇಶಗಳು ಬಂದಿಲ್ಲ. ಇಲ್ಲಿ ಕೊಟ್ಟಿರುವ 'ಮಾರ್ಕೋಲ್' ಎಂಬಲ್ಲ 'ಮಾರ್' ಎಂಬುದು ಪ್ರತಿಪ್ರಯೋಗವಾಚಿಯಾದ 'ಮಾಱು' ಶಬ್ದಕ್ಕೆ — '**ಱಡೋಽದೋರ್ರಱಂ ವ್ಯಂಜನೇ**' ಎಂಬ

ಸೂತ್ರದಿಂದ ರೇಫಾದೇಶವು ಬಂದು ಸಿದ್ಧವಾಗಿರುವುದರಿಂದ ಇದಕ್ಕೆ ಲಕ್ಷ್ಯವಾಗುವುದು. ಶತ್ರುವಿನಿಂದ ಮೊದಲು ಬಿಡಲ್ಪಟ್ಟ ಬಾಣವನ್ನು ಕತ್ತರಿಸುವುದಕ್ಕೆ ಪ್ರತಿಯಾಗಿ ಬಿಡಲ್ಪಟ್ಟ ಬಾಣವು ‘ಮಾರ್ಕೊರ್ಲ್’ ಎನ್ನಿಸಿಕೊಳ್ಳುವುದು. (ಸ್ವಭಾವವಾಗಿ ರೇಫಾಂತವಾದ ವ್ಯಾಮವಾಚಕ ‘ಮಾರ್’ ಶಬ್ದವೊಂದಿರುವುದು. ಅಲ್ಲಿ ರೇಫವು ಆದಿಷ್ಟವಲ್ಲವಾದುದರಿಂದ ತೃತೀಯವರ್ಣಾದೇಶವು ಬಂದು ‘ಮಾರ್ಗೊರ್ಲ್’ ಎಂದೇ ಆಗುವುದು.) ಹೀಗೆಯೇ — ‘ಬೇರ್ತ್ತಡೆ’ ಮೊದಲಾದುವುಗಳಲ್ಲಿಯೂ ರೇಫಾದ್ಯಾದೇಶವು ಬಂದಿದೆ ಎಂದು ತಿಳಿಯಬೇಕು. ಇಲ್ಲಿ ಉದಾಹರಣೆಗಳನ್ನು ಕೊಡುವುದರಲ್ಲಿ — ‘ಒರ್ಕ್ಕಯ್, ಇರ್ಪ್ಪನಿ, ಕೀೞ್ಪೊಟ್ಟೆ’ ಎಂದು ಕೊಟ್ಟಿರುವುದು. ಇವುಗಳಲ್ಲಿ — ಒಂದು ಶಬ್ದಕ್ಕೆ — ‘**ಒರೊಂದೋಃ ॥ ೩೫೮ ॥**’ ಎಂಬ ಸೂತ್ರದಿಂದ ‘ಒರ್’ ಆದೇಶವನ್ನು ಮಾಡಲು ‘ಒರ್ಕ್ಕಯ್’ ಎಂತಲೂ ಎರಡು ಶಬ್ದಕ್ಕೆ — ‘**ಎರಡೋರಿರ್ ॥ ೩೫೯ ॥**’ ಎಂಬ ಸೂತ್ರದಿಂದ ಇರಾದೇಶವನ್ನು ಮಾಡಲು ‘ಇರ್ಪ್ಪನಿ’ ಎಂತಲೂ ಕೆೞಗು ಶಬ್ದಕ್ಕೆ — ‘**ಕೆೞಗೋಃ ಕೀೞ್ಕಿನಾ ॥ ೩೬೮ ॥**’ ಎಂಬ ಸೂತ್ರದಿಂದ ‘ಕೀೞ್’ ಆದೇಶವನ್ನು ಮಾಡಲು ‘ಕೀೞ್ಪೊಟ್ಟೆ’ ಎಂತಲೂ ಆಗುವುವು. ಇಲ್ಲಿ ‘ಒರ್, ಇರ್, ಕೀೞ್’ ಎಂಬ ಸಮುದಾಯಗಳೇ ಆದಿಷ್ಟಗಳಾಗಿರುವುದರಿಂದ ತದೇಕದೇಶಗಳಾದ ರೇಫ ೞ ಕಾರಗಳಿಗೆ ಆದಿಷ್ಟತ್ವವಿಲ್ಲವಾದುದರಿಂದ ಇದಕ್ಕೆ ಉದಾಹರಣೆಗಳನ್ನಾಗಿ ಕೊಟ್ಟಿರುವುದು ಅಸಂಗತವೆಂದು ತೋರುವುದು. ಆದಾಗ್ಯೂ ಸಮುದಾಯನಿಷ್ಠಧರ್ಮಕ್ಕೆ ಕ್ವಚಿದ್ದೇಶದಲ್ಲಿಯೂ ಔಪಚಾರಿಕವಾಗಿ ಹೇಳುವ ಪದ್ಧತಿಯುಂಟೆಂದು ತಿಳಿದು ಉದಾಹರಿಸಲ್ಪಟ್ಟಿದೆಯಾದುದರಿಂದ ಅಸಂಗತವಲ್ಲವೆಂದು ತಿಳಿಯಬೇಕು. ಈ ಸೂತ್ರದಲ್ಲಿ ‘ಆದಿಷ್ಟಾತ್’ ಎಂದು ಹೇಳಿರುವುದರಿಂದ ‘ಸಿರ್ಗ್ಗಂಡಿ, ಕೂರ್ಗ್ಗಲಿ, ಕೂೞ್ಗಟ್ಟಿ, ಬಾೞ್ದಾಣಂ’ ಮೊದಲಾದ ಸ್ವಭಾವಸಿದ್ಧವಾದ ರೇಫವಿದ್ದ ಪ್ರಯೋಗಗಳಲ್ಲಿ ಈ ನಿಷೇಧವು ಬರುವುದಿಲ್ಲ. ‘ಸೀರ್ಗ್ಗಂಡಿ’ ಎಂದರೆ ತೂಬು ಅಥವಾ ಜಲನಿರ್ಗಮನ ಮಾರ್ಗವೆಂದರ್ಥವು. ‘ಕೂರ್ಗ್ಗಲಿ’ ಎಂಬಲ್ಲಿ — ‘ಕೂರಿದಂ ಕಲಿ’ ಎಂದು ವಿಗ್ರಹವನ್ನು ಮಾಡಿ ಸಮಾಸದಲ್ಲಿ ಉಪಾಂತ್ಯಸ್ವರಾದಿಗೆ ಲೋಪವನ್ನು ಮಾಡಲು ‘ಕೂರ್’ ಎಂದುಳಿದ ಶಬ್ದವೆಂದು ತಿಳಿದು ಈ ನಿಷೇಧಕ್ಕೆ ಪ್ರವೃತ್ತಿಯಿಲ್ಲವೆಂದು ತಿಳಿಯಬೇಕು. ಕ್ರೂರ ಶಬ್ದಕ್ಕೆ ಆದಿಷ್ಟವಾದ ‘ಕ್ರೂರ್’ ಶಬ್ದವನ್ನು ತೆಗೆದುಕೊಳ್ಳುವ ಪಕ್ಷದಲ್ಲಿ ಈ ನಿಷೇಧವು ಬಂದು ‘ಕೂರ್ಕ್ಕಲಿ’ ಎಂದೇ ಆಗುವುದು. ಇದಕ್ಕೆ ಮಹಾಕವಿಪ್ರಯೋಗವೂ ಇರುವುದು.

ಬೇರ್ಕ್ಕಯ್ದುರೆಬರನವರೊಳ್
ಕೂರ್ಕ್ಕಲಿಗಳನಾತ್ಮನಿಕಟದೊಳ್ ಮಿಕ್ಕವರಂ
ತಾರ್ಕ್ಕಣಿಸಿ ಸವರಕೇಳಿಗೆ
ಸೂರ್ಕ್ಕಡಿಗಡಿದಂ ನೃಪಾಲಕಂ ರಿಪುಬಲಮುಂ

ವೆಂದು ಮೊದಲಾದುವನ್ನು ಊಹಿಸಿಕೊಳ್ಳುವುದು. ‘ಕೂೞ್ಗಟ್ಟಿ’ ಎಂಬಲ್ಲಿ ‘ಕೂೞ್’ ಎಂಬುದು ಓದನವಾಚಿ ೞ ಕಾರಾಂತ ದೇಶ್ಯ ಶಬ್ದವು. ಓದನವಾಚಿ ‘ಕೂರ’ ಶಬ್ದಕ್ಕೆ ‘ಕರಂಬಾದಿ’ ॥೧೬೦॥ ಪಾಠದಿಂದ ನಿಷ್ಪನ್ನವಾದ ‘ಕೂಳ್’ ಶಬ್ದಕ್ಕಾಗಲಿ, ‘ಕೂಡು’ ಶಬ್ದಕ್ಕೆ ಳ ಕಾರಾದೇಶವನ್ನು ಮಾಡಿ ಸಾಧಿತವಾದ ‘ಕೂಳ್’ ಶಬ್ದಕ್ಕಾಗಲಿ ಗ್ರಹಣವಲ್ಲ. ‘ಬಾೞ್ದಾಣಂ’ ಎಂಬಲ್ಲಿಯೂ ಜೀವನವಾಚಿ ಅಥವಾ ಖಡ್ಗವಾಚಿಯಾದ ‘ಬಾಳ್’ ಎಂಬ ಅಖಂಡ ಶಬ್ದವೇ|ಅಲ್ಲದೆ ಮಾಂಸವಾಚಿಯಾಗಲಿ ಶಾಕ

ವಾಚಿಯಾಗಲಿ ಆದ ‘ ಬಾಡು ’ ಶಬ್ದದಿಂದ ನಿಷ್ಪನ್ನವಾದುದಲ್ಲವೆಂದು ತಿಳಿಯುವುದು. ‘ ರಱಃ ’ ಎಂದು ಹೇಳಿರುವುದರಿಂದ ‘ ತೊಂಬತ್ತು’ ಮೊದಲಾದ ಪ್ರಯೋಗಗಳಲ್ಲಿ ತೊವಾದಿಗಳು ಆದಿಷ್ಟ ವಾಗಿರುವುದರಿಂದ ಅಲ್ಲ ಈ ನಿಷೇಧವು ಬರುವುದಿಲ್ಲವೆಂದು ತಿಳಿಯಬೇಕು.

ಇಲ್ಲ **ದರ್ಪಣಕಾರನು** —

ಒಂದೆರಡಕ್ಕೆ ಱ ಕಾರ
ಕ್ಕಂದಾದಾದೇಶರೇಫೆಗಂ ಡತ್ವಕ್ಕಂ
ಬಂದಾದೇಶಱಟಕ್ಕಂ
ಸಂಧಿಸದು ತೃತೀಯವೃತ್ತಿ ಕ ತ ಪಕ್ಕೆಂದುಂ (ಸೂತ್ರ ೬೬)

ಎಂಬ ಸೂತ್ರವನ್ನು ಹೇಳಿ ಲಕ್ಷ್ಯಸಿದ್ಧಿಯನ್ನು ಮಾಡಿರುವನು.

**ಅವತಾರಿಕೆ ೯೧**

ಪೂರ್ವದಲ್ಲಿ ಉತ್ತರಪದಾದಿಭೂತವಾದ ಕ ತ ಪ ಗಳಿಗೆ ತೃತೀಯ ವರ್ಣಾದೇಶವನ್ನು ವಿಧಿಸಿ ಆದಿಷ್ಟ ರೇಫ ಱ ಕಾರಗಳಿಗೆ ಪರದಲ್ಲಿರುವುದಕ್ಕೆ ನಿಷೇಧಮಾಡಲ್ಪಟ್ಟಿತು. ಈಗ ಸ್ವರದ ಮುಂದಿರುವ ಉತ್ತರಪದಾದಿಭೂತ ಪವರ್ಗೀಯ ವರ್ಣಗಳಿಗೆಲ್ಲಾ ಆದೇಶಾಂತರವನ್ನು ಹೇಳುತ್ತಾನೆ.

**ಸೂತ್ರಂ || ಸ್ವರಾದ್ವಃ ಪವರ್ಗಸ್ಯ || ೯೧ ||**

**ಅರ್ಥ || ಸ್ವರಕ್ಕೆ ಮುಂದಿರುವ ಉತ್ತರಪದಾದಿಯ ಪ ವರ್ಗದ ವರ್ಣಗಳಿಗೆ ಯಥಾಸಂಭವ ವಾಗಿ ವ ಕಾರಾದೇಶವು ಬರುವುದು.**

**ಉದಾಹರಣೆ ||** ಎಳದು + ಪೆಱೆ = ಎಳವೆಱೆ || ಪೀಗೆಯೋ ಬೆಳವೊಲಂ, ಮೂವಣ್ಣಂ, ನಸುವಿರಿದು, ಮರವಣೆ, ಪಱವಾನಿಸಂ|| ಮೊದಲಾದುವನ್ನು ಇವಕ್ಕೆ ಲಕ್ಷ್ಯಗಳನ್ನಾಗಿ ಊಹಿಸಿ ಕೊಳ್ಳುವುದು.

**ವಿಚಾರ ೯೧**

ಈ ಸೂತ್ರವಲ್ಲಿ ‘ ಸ್ವರಾತ್, ವಃ, ಪವರ್ಗಸ್ಯ ’ ಎಂದು ಮೂರು ಪದಗಳಿರುವುವು. ‘ ಸ್ವರಾತ್ ’ ಎಂಬುದು ಪಂಚಮ್ಯಂತವಾದುದರಿಂದ ‘ ಉತ್ತರಸ್ಯ ’ ಎಂದು ಉಪಸ್ಥಿತವಾಗು ವುದು. ಇದು ‘ ಪವರ್ಗಸ್ಯ’ ಎಂಬುವಕ್ಕೆ ವಿಶೇಷಣವು. ಪೂರ್ವಸೂತ್ರದಿಂದ ‘ ಉತ್ತರಪದಾದೇಃ ’ ಎಂಬುದನ್ನು ಅನುವರ್ತಿಸಿ ಅದನ್ನೂ ಪವರ್ಗಕ್ಕೆ ವಿಶೇಷಣ ಮಾಡುವುದು. ಈ ಪವರ್ಗವು ಐದು ವರ್ಣಗಳನ್ನೊಡಗೊಂಡಿದ್ದರೂ ಪ್ರಯೋಗಾನುಸಾರವಾಗಿ ಅಲ್ಪಪ್ರಾಣಗಳನ್ನೇ ತೆಗೆದುಕೊಳ್ಳ ಬೇಕು. ತಥಾಚ — ಸ್ವರದ ಮುಂದಿನ ಉತ್ತರಪದಾದಿ ಪವರ್ಗೀಯ ವರ್ಣಗಳಿಗೆ ವ ಕಾರಾ ದೇಶವು ಬರುವುದೆಂದು ಸೂತ್ರಾರ್ಥವಾಗುವುದರಿಂದ ‘ ಎಳವೆಱೆ ’ ಮೊದಲಾದ ಪ್ರಯೋಗಗಳು ಸಿದ್ಧವಾಗುವುವು. ಮೂಲದಲ್ಲಿ ಉದಾಹರಿಸಿರುವ ‘ ಮೂವಣ್ಣಂ ’ ಎಂಬ ಶಬ್ದವು ಮೂಱು ಶಬ್ದಕ್ಕೆ — ‘ **ಮೂಱೋಃ || ೩೫೨ ||** ’ ಎಂಬ ಸೂತ್ರದಿಂದ ವೈಕಲ್ಪಿಕ ದು ಲೋಪವನ್ನು ಮಾಡಿ ಇದರಿಂದ ವ ಕಾರಾದೇಶವನ್ನು ಮಾಡಲು ಸಿದ್ಧವಾಗಿರುವುದು. **ಈ ಸೂತ್ರದಲ್ಲಿ ‘ಸ್ವರಾತ್’** ಎಂದು ನಿಮಿತ್ತವನ್ನು ಹೇಳಿರುವುದರಿಂದ — **‘ ಸೀಳ್ಪೊಟ್ಟೆ, ಕಾಱ್ಪೊಡೆ ’ ಮೊದಲಾದ** ಪ್ರಯೋಗ

ಗಳಲ್ಲಿ ವ್ಯಂಜನದ ಮುಂದಿನ ಪವರ್ಗೀಯ ವರ್ಣಕ್ಕೆ ವ ಕಾರಾದೇಶವು ಬರುವುದಿಲ್ಲ. 'ಪವರ್ಗಸ್ಯ' ಎಂದು ಹೇಳಿರುವುದರಿಂದ — 'ಪೊಸಚಾವಡಿ, ಪೊಸಜವಳ' ಮೊದಲಾದ ಪ್ರಯೋಗಗಳಲ್ಲಿ ವರ್ಗಾಂತಕ್ಕೆ ಆದೇಶವಿಲ್ಲ,

ಇಲ್ಲಿ 'ಉತ್ತರಪದಾದೇಃ' ಎಂಬುದನ್ನು ಅನುವರ್ತಿಸಿರುವುದರಿಂದ ಈ ವ ಕಾರಾದೇಶವು ಸಮಾಸವಿಷಯದಲ್ಲಿಯೇ ಬರುವುದೆಂದು ತೋರುವುದು. ಆದರೆ ಪ್ರಾಚೀನರು ಅಸಮಾಸದಲ್ಲಿಯೂ ಈ ನಿಯಮವನ್ನು ಅಂಗೀಕರಿಸಿರುವರು. ಆದ್ದರಿಂದ ಉತ್ತರಸೂತ್ರಸ್ಥ ಬಹುಳಗ್ರಹಣವನ್ನು ಈ ಸೂತ್ರದಲ್ಲಿ ಅಪಕರ್ಷಣ ಮಾಡಿ —

ದಿವದಿಂ ಭರದಿಂ ಕೆಲಸ
ಕ್ಕೆ ವರ್ಪ್ಪ ದೇವಾಂಗನಾಜನಂ ಕರಮೆಸೆಗುಂ

ಎಂಬುದರಲ್ಲಿರುವ 'ಕೆಲಸಕ್ಕೆ ವರ್ಪ' ಎಂಬ ಪ್ರಯೋಗವನ್ನೂ ಹಾಗೆಯೇ —

ಅವಧಾನಮೆಚ್ಚ ಱಿಂದುಲಿ
ವ ವಂದಿಸಂದೋಹದುಲಿಯನಾಲಿಸುತುಂ ವಾ
ಸವಲೀಲೆಯಿನಾನೆಯ ಬೆಂ
ಗೆ ವಂದನುದಯಾದ್ರಿಗೆಯ್ದು ವಿನನವೊಲರಸಂ

ಎಂಬ ಪದ್ಯದಲ್ಲಿರುವ 'ಬೆಂಗೆ ವಂದಂ' ಎಂಬುದನ್ನೂ ಸಮರ್ಥನಮಾಡಬಹುದು. ಅಥವಾ ವ ಕಾರ ಬ ಕಾರಗಳಿಗೆ ಅಭೇದವನ್ನಂಗೀಕರಿಸಿ ನಿರ್ವಾಹವನ್ನಾದರೂ ಮಾಡಬಹುದು.

**ದರ್ಪಣಕಾರನು** ಈ ಸೂತ್ರದ ಅರ್ಥವನ್ನೂ '**ವ್ಯಂಜನಾದ್ವಾನಾದೇಶಾತ್ || ೬೨ ||**' ಎಂಬ ಮುಂದಿನ ಸೂತ್ರಾರ್ಥವನ್ನೂ ಸಂಗ್ರಹಿಸಿ ಸಮಾಸಾಸಮಾಸಸಾಧಾರಣವಾಗಿ —

ವಿದಿತಸ್ವರದಿನನಾದೇ
ಶದ ಸಹಜವ್ಯಂಜನಂಗಳಿಂ ಪರದ ಪವ
ರ್ಗದ ನೆಲೆಗಕ್ಕುಂ ವತ್ವಂ
ಪದವಿಧಿಯೊಳ್ ಬಹುಳವೃತ್ತಿಯಿಂ ವಾಕ್ಯದೊಳಂ (**ಸೂತ್ರ ೬೭**)

ಎಂಬ ಸೂತ್ರವನ್ನು ಹೇಳಿ ಈ ಪ್ರಯೋಗಗಳನ್ನೆಲ್ಲಾ ಸಾಧಿಸಿರುವನು.

**ಅವತಾರಿಕೆ ೬೨**

ಸ್ವರದ ಮುಂದಿನ ಪವರ್ಗಕ್ಕೆ ಆದೇಶವನ್ನು ಹೇಳಿ ಕೆಲವು ವ್ಯಂಜನದ ಮುಂದಿನ ಪ ವರ್ಗಕ್ಕೆ ಹೇಳುತ್ತಾನೆ.

**ಸೂತ್ರಂ || ವ್ಯಂಜನಾದ್ವಾನಾದೇಶಾತ್ || ೬೨ ||**

**ಅರ್ಥ || ಆದಿಷ್ಟವಲ್ಲದ ವ್ಯಂಜನದ ಮುಂದಿನ ಉತ್ತರಪದಾದಿಭೂತ ಪ ವರ್ಗಕ್ಕೆ ವ ಕಾರಾದೇಶವು ವಿಕಲ್ಪವಾಗಿ ಬರುವುದು.**

**ಉದಾಹರಣೆ ||** ಕಯ್ + ಪೊಯ್ದಂ = ಕಯ್ವೊಯ್ದಂ || ಹೀಗೆಯೇ 'ನೀರ್ವೊಯ್ದಂ, ಬೇರ್ವೆರಸಿ, ಮೇಲ್ವಣ್ಣಂ, ಮೆಲ್ವಾತು, ಸೂಳ್ವಾತು' || ಮೊದಲಾದುವುಗಳಲ್ಲಿ ವ ಕಾರಾದೇಶವು

ಬಂದಿರುವುದರಿಂದ ಇವು ಇದಕ್ಕೆ ಲಕ್ಷ್ಯಗಳಾಗಿವೆ. ' ಪಾಲ್ಮನೆ, ಬಾಟಿಸ್ಕೊದಲ್, ನೀರ್ಮ್ಮಜ್ಜಿಗೆ, ಬಾಂಬಟ್ಟೆ ' ಮೊದಲಾದುವುಗಳಲ್ಲಿ ಈ ಸೂತ್ರಗಳಲ್ಲಿ ಹೇಳುವ ನಿಮಿತ್ತಗಳಿದ್ದರೂ ಇಲ್ಲಿ ಕ್ವಚಿತ್ಪ್ರವೃತ್ತಿ—ಕ್ವಚಿದಪ್ರವೃತ್ತಿರೂಪವ್ಯವಸ್ಥಿತ ವಿಭಾಷೆಯನ್ನಾಶ್ರಯಿಸುವುದರಿಂದ ವ ಕಾರಾದೇಶವು ಬಂದಿಲ್ಲವೆಂದು ತಿಳಿಯಬೇಕು.

**ವಿಚಾರ ೯೨**

ಈ ಸೂತ್ರದಲ್ಲಿ ' ವ್ಯಂಜನಾತ್, ವಾ, ಅನಾದೇಶಾತ್ ' ಎಂದು ಮೂರು ಪದಗಳಿರುವುವು. ಪೂರ್ವಸೂತ್ರದಿಂದ ' ವಃ, ಪವರ್ಗಸ್ಯ, ಉತ್ತರಪದಾದೇಃ ' ಎಂದು ಮೂರು ಪದಗಳು ಅನುವರ್ತಿಸಲ್ಪಡುವುವು. ' ಅನಾದೇಶಾತ್ ' ಎಂಬುದು ' ವ್ಯಂಜನಾತ್ ' ಎಂಬುದಕ್ಕೆ ವಿಶೇಷಣವು. ' ವ್ಯಂಜನಾತ್ ' ಎಂಬುದು ' ಪೌರ್ವಾಪರ್ಯ ಸಂಬಂಧದಿಂದ ಪ ವರ್ಗಕ್ಕೆ ವಿಶೇಷಣವು. ಆ ಪ ವರ್ಗಕ್ಕೆ ' ಉತ್ತರಪದಾದೇಃ ' ಎಂಬುದು ಸಮಾನಾಧಿಕರಣ ವಿಶೇಷಣವು. ' ವಃ ' ಎಂಬುದೇ ವಿಧೇಯವು. ' ವಾ ' ಎಂಬುದು ವಿಭಾಷಾದ್ಯೋತಕವು. ತಥಾಚ ಆದಿಷ್ಟವಲ್ಲದ ವ್ಯಂಜನವೆಂದರೆ ಸಹಜವ್ಯಂಜನದ ಮುಂದಿನ ಉತ್ತರಪದಾದಿಭೂತ ಪ ವರ್ಗದ ವರ್ಣಸ್ಥಾನದಲ್ಲಿ ವಿಕಲ್ಪವಾಗಿ ವ ಕಾರಾದೇಶವು ಬರುವುದೆಂದು ಸೂತ್ರಾರ್ಥವಾಗುವುದರಿಂದ ಮೂಲದಲ್ಲಿ ಕೊಟ್ಟಿರುವ ' ಕಯ್ವೊಯ್ದಂ ' ಮೊದಲಾದ ಪ್ರಯೋಗಗಳೂ ವ್ಯವಸ್ಥಿತವಿಭಾಷಾಶ್ರಯಣದಿಂದ ' ಪಾಲ್ಮನೆ ' ಮೊದಲಾದುವೂ ಸಿದ್ಧಿಸುವುವು. ಈ ಸೂತ್ರದಲ್ಲಿ ' ವ್ಯಂಜನಾತ್ ' ಎಂದು ಹೇಳಿರುವುದರಿಂದ — ' ಎಳವೆಱಿ, ಪೊಸವೆಟ್ಟಂ ' ಮೊದಲಾದ ಪೂರ್ವಸೂತ್ರಕ್ಕೆ ವಿಷಯವಾದ ಪ್ರಯೋಗಗಳಲ್ಲಿ ಈ ವಿಕಲ್ಪವಿಧಿಯು ಪ್ರವರ್ತಿಸುವುದಿಲ್ಲ. ' ಅನಾದೇಶಾತ್ ' ಎಂದು ಹೇಳಿರುವುದರಿಂದ ' ಇಬ್ಬಾಗಳ್, ಇರ್ಮ್ಮನೆ ' ಮೊದಲಾದ ಆದಿಷ್ಟವ್ಯಂಜನವಿಷಯದಲ್ಲಿ ಪ್ರವರ್ತಿಸುವುದಿಲ್ಲ ಎಂದು ತಿಳಿಯಬೇಕು. ಪೂರ್ವದಂತೆ ಇದೂ ಕೆಲವು ವಾಕ್ಯದಲ್ಲಿಯೂ ಬರುವುದೆಂದು **ದರ್ಪಣಕಾರ**ನು ಹೇಳಿರುವನು. ಪ್ರಯೋಗವನ್ನು ನೋಡಿ ವ್ಯವಸ್ಥೆ ಮಾಡಿಕೊಳ್ಳಬೇಕೆಂದು ತಾತ್ಪರ್ಯವು.

**ಅವತಾರಿಕೆ ೯೩**

ಹೀಗೆಯೇ ವ್ಯಂಜನಾಂತರಕ್ಕೆ ಆದೇಶಾಂತರವನ್ನು ಹೇಳುತ್ತಾನೆ.

**ಸೂತ್ರಂ || ಸಶ್ಚೋ ಬಹುಲಮಲಯಃ || ೯೩ ||**

**ಅರ್ಥ || ಲ ಕಾರ ಯ ಕಾರವರ್ಜಿತ ವ್ಯಂಜನದ ಮುಂದಿರುವ ಉತ್ತರಪದಾದಿಭೂತ ಸ ಕಾರಕ್ಕೆ ಚ ಕಾರಾದೇಶವು ಬಹುಳವಾಗಿ ಬರುವುದು. ಬಹುಳವೆಂದು ಹೇಳಿರುವುದರಿಂದ —**

**ಉದಾಹರಣೆ** || ' ಇಂಚರಂ, ಇರ್ಚವಡಿ, ಇಚ್ಚಾಸವಡಿ, ಇರ್ಚಱಂಗು, ಒಚ್ಚೆರೆಗಣ್ ' ಮೊದಲಾದ ಕೆಲವು ಪ್ರಯೋಗಗಳಲ್ಲಿ ಪ್ರವೃತ್ತಿಯೂ ' ಕಣ್ಸೋಲಂ, ಮುಳ್ಸೆಱಂಗು, ಕಳ್ಸವಿಗೆ, ಕೀಟಸ್ಸೊಳ್ಳಿಗೆ ' ಮೊದಲಾದ ಕೆಲವೆಡೆಗಳಲ್ಲಿ ಅಪ್ರವೃತ್ತಿಯೂ ' ನುಣ್ಚರಂ, ನುಣ್ಸರಂ; ಬೆಳ್ಚರಿ, ಬೆಳ್ಸರಿ; ಮುಳ್ಚಱಿ, ಮುಳ್ಸೆಱಿ ' ಮೊದಲಾದ ಕೆಲವೆಡೆಗಳಲ್ಲಿ ವಿಕಲ್ಪವೂ ' ಮುಂಜೂರ್, ಪೊಂಜುರಿಗೆ, ಮುಂಜೆಱಂಗು, ಕಣ್ಜೊಡರ್, ಪೊಂಜೆಳೆ, ಪಿಂಜೆಱಂಗು' ಮೊದಲಾದ ಕೆಲವೆಡೆಗಳಲ್ಲಿ

ಬೇರೆ ಆದೇಶವೂ ಬರುವುದರಿಂದ ಬಹುಳವೆಂಬುದು — 'ಬಹೂನ್ ಅರ್ಥಾನ್ ಲಾತಿ' ಎಂಬ ವ್ಯುತ್ಪತ್ತಿಯಿಂದ ಅನೇಕಾರ್ಥಪ್ರತಿಪಾದಕವೆಂದು ಅದರಲ್ಲಿ ಪ್ರಸಿದ್ಧವಾದ ಅರ್ಥವನ್ನು ಸಂಗ್ರಹಿಸಿ-

**ಕ್ವಚಿತ್ಪ್ರವೃತ್ತಿಃ ಕ್ವಚಿದಪ್ರವೃತ್ತಿಃ ಕ್ವಚಿದ್ವಿಭಾಷಾ ಕ್ವಚಿದನ್ಯದೇವ**
**ವಿಧೇರ್ವಿಧಾನಂ ಬಹುಧಾ ಸಮೀಕ್ಷ್ಯ ಚಾತುರ್ವಿಧಂ ಬಾಹುಳಕಂ ವದಂತಿ**

ಎಂದು ಸಂಸ್ಕೃತವ್ಯಾಕರಣಜ್ಞರು ಹೇಳಿರುವಂತೆ ಇಲ್ಲಿಯೂ ಹೇಳಿದೆ.

**ವಿಚಾರ ೯೩**

ಈ ಸೂತ್ರದಲ್ಲಿ — 'ಸಃ, ಚಃ, ಬಹುಳಂ, ಅಲಯಃ' ಎಂದು ನಾಲ್ಕು ಪದಗಳಿರುವುವು. ಪೂರ್ವಸೂತ್ರದಿಂದ 'ವ್ಯಂಜನಾತ್' ಎಂಬುದನ್ನು ಅನುವರ್ತಿಸಿ 'ಅಲಯಃ' ಎಂಬುದನ್ನು ವಿಶೇಷಣ ಮಾಡುವುದು. 'ಅಲಯಃ' ಎಂದರೆ ಲ ಕಾರ ಯ ಕಾರರೂಪ ವ್ಯಂಜನವನ್ನು ಬಿಟ್ಟು ಎಂದರ್ಥವು. 'ವ್ಯಂಜನಾತ್' ಎಂಬುದು ಪೌರ್ವಾಪರರೂಪಸಂಬಂಧದಿಂದ 'ಸಃ' ಎಂಬ ಷಷ್ಠ್ಯಂತಕ್ಕೆ ವಿಶೇಷಣವು. 'ಉತ್ತರಪದಾದೇಃ' ಎಂಬುದೂ ಇದಕ್ಕೆ ಸಂಬಂಧಿಸುವುದು. 'ಚಃ' ಎಂಬುದು ಉಚ್ಚಾರಣಾರ್ಥಕವಾದ ಅ ಕಾರದಿಂದ ಕೂಡಿದ ಚ ಕಾರ ಮಾತ್ರ ಬೋಧಕ ಪ್ರಥಮಾಂತಪದವು. 'ಬಹುಳಂ' ಎಂಬುದು ಉಕ್ತಾರ್ಥಕವು. ತಥಾಚ — ಲ ಕಾರ ಯ ಕಾರಾತಿರಿಕ್ತ ವ್ಯಂಜನದ ಮುಂದಿನ ಉತ್ತರಪದಾದಿಭೂತವಾದ ಸ ಕಾರಕ್ಕೆ ಬಹುಳವಾಗಿ ಚ ಕಾರಾದೇಶವು ಬರುವುದೆಂದು ಸೂತ್ರಾರ್ಥವಾಗುವುದರಿಂದ ಮೂಲದಲ್ಲಿ ಕೊಟ್ಟಿರುವ ಲಕ್ಷ್ಯಗಳು ಸಿದ್ಧಿಸುವುವು. ಈ ಸೂತ್ರದಲ್ಲಿ — 'ಸಃ' ಎಂದು ಉದ್ದೇಶ್ಯವನ್ನು ಹೇಳಿರುವುದರಿಂದ ಪೂರ್ವಸೂತ್ರದಲ್ಲಿ ಹೇಳಿರುವ 'ಪವರ್ಗಸ್ಯ' ಎಂಬುದು ನಿವೃತ್ತವಾಗಿ — 'ಕಣ್ಮಲರ್' ಮೊದಲಾದ ಪ್ರಯೋಗಗಳಲ್ಲಿ ಪ ವರ್ಗಕ್ಕೂ 'ಪೊಂದಗಡು' ಮೊದಲಾದ ಪ್ರಯೋಗಗಳಲ್ಲಿ ವರ್ಗಾಂತರಕ್ಕೂ ಈ ಆದೇಶವು ಬರುವುದಿಲ್ಲ. 'ಅಲಯಃ' ಎಂದು ಹೇಳಿರುವುದರಿಂದ 'ಬಲ್ಸೋನೆ, ಕಲ್ಸರಿ, ಬಾಯ್ಸವಿ, ಮೆಯ್ಸವಿ' ಮೊದಲಾದುವುಗಳಲ್ಲಿ ಲ ಕಾರ ಯ ಕಾರಗಳ ಮುಂದಿನ ಸ ಕಾರಕ್ಕೂ ಚ ಕಾರಾದೇಶವಿಲ್ಲವೆಂದು ತಿಳಿಯಬೇಕು. ಇಲ್ಲಿ 'ವಾ, ವಿಭಾಷಾ' ಮೊದಲಾದ ವಿಕಲ್ಪ ಬೋಧಕ ಶಬ್ದಗಳನ್ನು ಹೇಳದೆ 'ಬಹುಳಂ' ಎಂದು ಹೇಳಿರುವುದರಿಂದ 'ಪೊಸಚಿಗುರ್, ಕಡುಚೋಜಿಗಂ, ಸಿಡುಚಾಲ್, ಮುಚ್ಚವಡಿ, ಮುಚ್ಚಾವಡಿ, ಮುಚ್ಚೆಱಂಗು' ಮೊದಲಾದ ಕೆಲವೆಡೆಗಳಲ್ಲಿ ಸ್ವರದ ಮುಂದಿನ ಸ ಕಾರಕ್ಕೂ ಚ ಕಾರವುಂಟೆಂದು ತಿಳಿಯುವುದು. ಈ ಬಹುಳವೆಂಬುದರಿಂದಲೇ ಲ ಕಾರ ಯ ಕಾರ ವರ್ಜನವು ಸಿದ್ಧವಾಗುತ್ತಿರಲು ಮತ್ತೆ ಸೂತ್ರದಲ್ಲಿ 'ಅಲಯಃ' ಎಂದು ಉಚ್ಚರಿಸುವ **ಸೂತ್ರಕಾರ**ರಿಗೆ ಲ ಕಾರ ಯ ಕಾರಗಳ ಮುಂದಿನ ಸ ಕಾರವು ಅವಾಗಲೂ ವಿಕಾರವನ್ನು ಹೊಂದುವುದಿಲ್ಲವೆಂದು ತಾತ್ಪರ್ಯವು.

**ದರ್ಪಣಕಾರ**ನು ಈ ಅರ್ಥವನ್ನೇ ಸ್ಪಷ್ಟಪಡಿಸಿ ಮುಂದಿನ ಸೂತ್ರಾರ್ಥವೂ ಸಂಗ್ರಹೀತವಾಗುವಂತೆ —

**ಇರೆ ಯ ಲ ರಹಿತವ್ಯಂಜನ**
**ಪರಮಾಗಿ ಸ ಕಾರಮಲ್ಲಿ ಬಹುಳಂ ಚತ್ವಂ**
**ಅರೆಯೆಡೆಯೊಳ್ ಜತ್ವಂ ಮೇ**
**ಣರೆಯೆಡೆಯೊಳ್ ಸಂಖ್ಯೆಯಾಗೆ ನಿಯತಂ ಛತ್ವಂ (ಸೂತ್ರ ೬೮)**

ಎಂಬ ಸೂತ್ರವನ್ನು ಮಾಡಿರುವನು. ಇದರಿಂದ ಯಥಾಪ್ರಯೋಗವಾಗಿ ಆದೇಶವನ್ನೂ ಸ್ಥಾನಿಯನ್ನೂ ನಿಮಿತ್ತವನ್ನೂ ಕಲ್ಪಿಸಿಕೊಂಡು ಪ್ರಾಮಾಣಿಕ ಪ್ರಯೋಗಗಳನ್ನು ಸಮರ್ಥಿಸಬೇಕೆಂದು ತಾತ್ಪರ್ಯವು.

**ಅವತಾರಿಕೆ ೯೫**

ಹಿಂದೆ ಸಾಮಾನ್ಯವಾಗಿ ಉತ್ತರಪದಾದಿಭೂತ ಸ ಕಾರಕ್ಕೆ ಚ ಕಾರಾದೇಶವು ಹೇಳಲ್ಪಟ್ಟಿತು. ಈಗ ಸಂಖ್ಯಾವಾಚಕ ಶಬ್ದಗತ ಸ ಕಾರಕ್ಕೆ ಛ ಕಾರವನ್ನು ಹೇಳುತ್ತಾನೆ.

**ಸೂತ್ರಂ || ಸಂಖ್ಯಾಯಾಂ ಛಃ || ೯೫ ||**

**ಅರ್ಥ || ಲ ಯ ಕಾರವರ್ಜಿತ ವ್ಯಂಜನದ ಮುಂದಿನ ಉತ್ತರಪದಾದಿಭೂತ ಸಂಖ್ಯಾವಾಚಕ ಶಬ್ದದಲ್ಲಿರುವ ಸ ಕಾರಕ್ಕೆ ಛ ಕಾರಾದೇಶವು ಬರುವುದು.**

**ಉದಾಹರಣೆ ||** ಎಂಟು + ಸಾಸಿರಂ = ಎಣ್ಛಾಸಿರಂ, ಹೀಗೆಯೇ — ಇರ್ಚ್ಛಾಸಿರಂ, ಒರ್ಚ್ಛಾಸಿರಂ, ನೂರ್ಚ್ಛಾಸಿರಂ || ಮೊದಲಾದ ಸ ಕಾರವುಳ್ಳ ಸಂಖ್ಯಾಶಬ್ದಗಳು ಇದಕ್ಕೆ ಲಕ್ಷ್ಯಗಳು.

**ವಿಚಾರ ೯೫**

ಈ ಸೂತ್ರದಲ್ಲಿ — 'ಸಂಖ್ಯಾಯಾಂ, ಛಃ' ಎಂದು ಎರಡು ಪದಗಳಿರುವುವು. ಪೂರ್ವಸೂತ್ರಗಳಿಂದ 'ಸಃ, ಅಲಯಃ, ವ್ಯಂಜನಾತ್, ಉತ್ತರಪದಾದೇಃ' ಎಂಬ ನಾಲ್ಕು ಪದಗಳು ಅನುವರ್ತಿಸಲ್ಪಡುವುವು. ಪೂರ್ವದಂತೆಯೇ ಅನ್ವಯವನ್ನು ಮಾಡಲು ಲ ಕಾರ ಯ ಕಾರ ವರ್ಜಿತ ವ್ಯಂಜನಕ್ಕೆ ಮುಂದಿರುವ ಉತ್ತರಪದಾದಿಭೂತ ಸಂಖ್ಯಾವಾಚಕಶಬ್ದಗತ ಸ ಕಾರದ ಸ್ಥಾನದಲ್ಲಿ ಛ ಕಾರಾದೇಶವು ಬರುವುದೆಂದು ಸೂತ್ರಾರ್ಥವಾಗುವುದು. ಇದರಿಂದ 'ಎಂಟು ಸಾಸಿರಂ' ಎಂದಿರಲು—'**ಎಂಟುನಾಲ್ಕ್ವಯ್ದೋಃ....|| ೩೫೧ ||**' ಎಂಬ ಸೂತ್ರದಿಂದ 'ಎಂಟು' ಶಬ್ದದ ಕೊನೆಯ 'ಟು' ಶಬ್ದಕ್ಕೆ ಲೋಪವನ್ನು ಮಾಡಲು 'ಎಣ್' ಎಂಬಲ್ಲಿ ವ್ಯಂಜನವಿರುವುದರಿಂದ ಅದರ ಮುಂದಿನ ಸ ಕಾರಕ್ಕೆ ಛ ಕಾರಾದೇಶವು ಬಂದು 'ಎಣ್ಛಾಸಿರಂ' ಎಂದಾಗಿರುವುದು. 'ನೂರ್ಚ್ಛಾಸಿರಂ' ಎಂಬಲ್ಲಿ 'ನೂಱು' ಶಬ್ದದ 'ಱು' ಶಬ್ದಕ್ಕೆ '**ಉಡೋಡೋರ್ ರಟಂ ವ್ಯಂಜನೇ ||೮೨||**' ಎಂಬ ಸೂತ್ರದಿಂದ ರೇಫಾದೇಶವು ಬಂದು ಇದಕ್ಕೆ ವಿಷಯವಾಗಿರುವುದು. ಈ ಸೂತ್ರದಲ್ಲಿ 'ಸಂಖ್ಯಾಯಾಂ' ಎಂದು ಹೇಳಿರುವುದರಿಂದ — 'ಒರ್ಚ್ಚಿರ್ಱಿಂಗು, ಇರ್ಚ್ಚರ್ವಡಿ' ಮೊದಲಾದ ಪ್ರಯೋಗಗಳಲ್ಲಿ ಬರುವುದಿಲ್ಲ. 'ಅಲಯಃ' ಎಂದು ಹೇಳುವುದರಿಂದ 'ನಾಲ್ಸಾಸಿರಂ, ಅಯ್ಸಾಸಿರಂ' ಮೊದಲಾದುವುಗಳಲ್ಲಿ ಬರುವುದಿಲ್ಲ. ಇಲ್ಲಯೂ ಬಹುಳಗ್ರಹಣವನ್ನು ಸಂಬಂಧಿಸಲು 'ಎರಟ್ಸಾಸಿರಂ, ಏಟ್ಸಾಸಿರಂ' ಮೊದಲಾದುವುಗಳಲ್ಲಿ ಬಂದಿಲ್ಲ. 'ಕ್ವಚಿದನ್ಯದೇವ' ಎಂದು ಮುಚ್ಛಾಸಿರಂ, ಮುಚ್ಛಟ್ಟಿ, ಮುಚ್ಛೋಡಸಂ' ಎಂಬಿವೂ 'ಪಯಿಂಚಾಸಿರಂ' ಎಂಬುದೂ ಸಿದ್ಧಿಸುವುವು.

**ಅವತಾರಿಕೆ ೯೬**

ವ್ಯಂಜನವಿಶೇಷಕ್ಕೆ ಆದೇಶವಿಶೇಷವನ್ನು ವಿಧಿಸುತ್ತಾನೆ.

**ಸೂತ್ರಂ || ಣೋ ನೋ ಣಃ || ೯೫ ||**

**ಅರ್ಥ ||** ಣ ಕಾರದ ದೆಸೆಯಿಂದ ಮುಂದಿರುವ ಉತ್ತರಪದಾದಿಯ ನ ಕಾರಕ್ಕೆ ಬಹುಳವಾಗಿ ಣ ಕಾರಾದೇಶವು ಬರುವುದು.

**ಉದಾಹರಣೆ ||** ತಣ್ಣೀರ್, ತಣ್ಣೆಲಲ್, ಕಣ್ಣೀರ್, ಪುಣ್ಣಾಲ್ || ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೯೫**

ಈ ಸೂತ್ರದಲ್ಲಿ 'ಣಃ, ನಃ, ಣಃ ಎಂದು ಮೂರು ಪದಗಳಿರುವುವು. ಮೊದಲಿನ 'ಣಃ' ಎಂಬುದು ಪಂಚಮ್ಯಂತವಾದುದರಿಂದ 'ಉತ್ತರಸ್ಯ' ಎಂದು ಉಪಸ್ಥಿತವಾಗುವುದು. ಅದನ್ನು 'ನಃ' ಎಂಬ ಷಷ್ಠ್ಯಂತಕ್ಕೆ ವಿಶೇಷಣ ಮಾಡುವುದು. 'ಣಃ' ಎಂಬುದು ಪ್ರಥಮಾಂತವು. ಪೂರ್ವದಂತೆ 'ಉತ್ತರಪದಾದೇಃ ಬಹುಳಂ' ಎಂಬುದನ್ನು ಸಂಬಂಧಿಸಿಕೊಳ್ಳುವುದು. ಆದುದರಿಂದ ಣ ಕಾರಕ್ಕಿಂತಲೂ ಮುಂದಿರುವ ಉತ್ತರಪದಾದಿಯ ನ ಕಾರಕ್ಕೆ ಣ ಕಾರವು ಬಹುಳವಾಗಿ ಬರುವುದೆಂದು ಸೂತ್ರಾರ್ಥವಾಗುವುದು. ಇದರಿಂದ 'ತಣ್ಣೀರ್' ಮೊದಲಾದ ರೂಪಗಳು ಸಿದ್ಧಿಸುವುವು. ಬಹುಳಗ್ರಹಣವನ್ನು ಮಾಡಿರುವುದರಿಂದ ಈ ವಿಧಿಯು ಕ್ವಚಿತ್ ಅಸಮಾಸದಲ್ಲಿಯೂ ಬರುವುದೆಂದು ಅರ್ಥವಾಗುವುದು. ಆಗ — 'ಕಣ್ಣೊಂದಪುದು, ಕಣ್ನೊಂದಪುದು; ಪುಣ್ಣಾಲ್ ಪೋದುದು, ಪುಣ್ಣಾಲ್ವೋದುದು; ಜಾಣ್ಣೆನ್ನ, ಜಾಣ್ನೆನ್ನ' ವಿಕಲ್ಪವಾಗಿಯೂ 'ಗೇಣ್ನೇಳಂ, ಕಣ್ನೆಯ್ದಲ್, ಗೋಣ್ನಾಲ್' ಮೊದಲಾದುವುಗಳಲ್ಲಿ ನಿಷೇಧವೂ ಬರುವುದು. ಈ ಸೂತ್ರದಲ್ಲಿ 'ಣಃ' ಎಂದು ಪಂಚಮ್ಯಂತವನ್ನು ಹೇಳಿರುವುದರಿಂದ — 'ಇನ್ನಗೆ, ಅರಲ್ನನೆ' ಮೊದಲಾದುವುಗಳಲ್ಲಿ ನ ಕಾರಾದಿ ವರ್ಣಗಳ ಮುಂದಿನ ನ ಕಾರಕ್ಕೆ ಬರುವುದಿಲ್ಲ. 'ನಃ' ಎಂದು ಉದ್ದೇಶ್ಯ ಪದವನ್ನು ಹೇಳಿರುವುದರಿಂದ 'ತಣ್ಗದಿರ್, ತಣ್ಬುೞಲ್' ಮೊದಲಾದುವುಗಳಲ್ಲಿ ಗ ಕಾರಾದಿಗಳಿಗೆ ಬರುವುದಿಲ್ಲ.

ಇದೇ ಅರ್ಥವನ್ನು ಬೋಧಿಸುವಂತೆ **ದರ್ಪಣಕಾರನು** —

> ಅಸಮಾಸದೊಳಂ ದೊರೆವೆ
> ತ್ತ ಸಮಾಸದೊಳಂ ಣ ಕಾರದಿಂ ಪರದೊಳ್ ಸಂ
> ಧಿಸಿದ ನ ಕಾರಂ ಣತ್ವಂ
> ಪ್ರಸಿದ್ಧಮುಚ್ಚರಿಸುವರ್ಗೆ ದುಷ್ಕರಮುದುವುಂ (ಸೂತ್ರ ೧೫೮)

ಎಂಬ ಸೂತ್ರದಲ್ಲಿ ಈ ಉಚ್ಚಾರಣೆಯು ದುಷ್ಕರವೆಂದು ಹೇಳಿರುವನು. ಆದುದರಿಂದ ಈ ಸೂತ್ರವು ಅಷ್ಟು ಪ್ರಯೋಜನಕಾರಿಯಲ್ಲವೆಂದು ತೋರುವುದು. ಇಂತಹ ಪ್ರಯೋಗಗಳಲ್ಲಿ ನ ಕಾರವನ್ನು ಬರೆಯುವುದೇ ಉಚಿತವಾಗಿರುವುದು.

**ಅವತಾರಿಕೆ ೯೬**

'**ಕತಪಸ್ತೃತೀಯ ಉತ್ತರಪದಾದೇಃ**' ಮೊದಲಾದ ಸೂತ್ರಗಳಿಂದ ಪ್ರಾಪ್ತವಾದ ವ್ಯಂಜನಾದೇಶಗಳಿಗೆ ನಿಷೇಧಾಪರಪರ್ಯಾಯವಾದ ಪ್ರಕೃತಿಭಾವವನ್ನು ಹೇಳುತ್ತಾನೆ.

**ಸೂತ್ರಂ || ಅಕಃ ಪ್ರಕೃತ್ಯಾ || ೯೬ ||**

**ಅರ್ಥ** || ಅಗಾಗಮದ ದೆಸೆಯಿಂದ ಪರದಲ್ಲಿರುವ ಉತ್ತರಪದಾದಿಯ ವರ್ಣಗಳಿಗೆ ಪ್ರಕೃತಿ ಭಾವವು ಬರುವುದು.

**ಉದಾಹರಣೆ** || ಎತ್ತುವುದು + ಕೋಲ್ = ಎತ್ತುವ ಕೋಲ್ ಹೀಗೆಯೇ — ಪೊತ್ತುವ ಕೊಱಡು, ಸುರ್ಕ್ಕುವ ಕುರುಳ್, ತೂಗುವ ತೊಟ್ಟಿಲ್, ಉಕ್ಕುವ ತೊಱೆ, ತೊಳಗುವ ತಳಿಗೆ, ಆಡುವ ಪೊಲಂ, ಓದುವ ಪೊತ್ತಗೆ, ಪೊಣ್ಮುವ ಬಣ್ಣಂ, ಸೊರ್ಕ್ಕುವ ಬೆಲೆವೆಣ್, ಪೊಯ್ವ ಮಟಿ, ಕೂಗುವ ಮಾರಿ, ತೂಗುವ ಸೊಡರ್, ಕೇಗುವ ಸೋಗೆ, ಕುಣಿವ ಸಾಸಿರಕುದುರೆ ಮೊದಲಾದು ವುಗಳಲ್ಲಿ ಪೂರ್ವೋಕ್ತ ಆದೇಶಗಳಾವುವೂ ಬರುವುದಿಲ್ಲ.

**ವಿಚಾರ ೯೬**

ಈ ಸೂತ್ರದಲ್ಲಿ — 'ಅಕಃ, ಪ್ರಕೃತ್ಯಾ' ಎಂದು ಎರಡು ಪದಗಳಿರುವುವು. 'ಅಕಃ' ಎಂಬುದು ಸಮಾಸವಿಷಯದಲ್ಲಿ ಪೂರ್ವಪದದ ಉಪಾಂತ್ಯಸ್ವರಾದಿಗೆ ಲೋಪವನ್ನು ಮಾಡಲು ಸಮಾನಾಧಿಕರಣೋತ್ತರಪದವು ಪರದಲ್ಲಿರುವಾಗ — '**ಅಗ್ಬಹುಲಂ || ೩೪೫ ||**' ಎಂಬ ಸೂತ್ರ ದಿಂದ ವಿಹಿತವಾದ ಅಗಾಗಮಬೋಧಕವು. ಪ್ರಕೃತಿಭಾವವು ಪೂರ್ವದಲ್ಲಿ ಪ್ರಾಪ್ತವಾದ ಆದೇಶಕ್ಕೆ ಬಾಧಕವಾದುದರಿಂದ ಆ ಆದೇಶಕ್ಕೆ ಉದ್ದೇಶ್ಯವಾದುದೇ ಇದಕ್ಕೂ ಉದ್ದೇಶ್ಯವೆಂದು ತಿಳಿದು ಉತ್ತರಪದಾದಿವರ್ಣಗಳಿಗೆ ಎಂದು ಹೇಳಬೇಕು. ತಥಾಚ — ಅಗಾಗಮಕ್ಕೆ ಪರದಲ್ಲಿರುವ ಉತ್ತರಪದಾದಿವರ್ಣಗಳಿಗೆ ಪ್ರಕೃತಿಭಾವವು ಬರುವುದೆಂದು ಸೂತ್ರಾರ್ಥವಾಗುವುದು. ಪ್ರಕೃತಿ ಭಾವವೆಂದರೆ ಆವ ವಿಕಾರವನ್ನೂ ಹೊಂದದೆ ಮೊದಲಿದ್ದಂತೆಯೇ ಇರುವುದು. ಇದೂ ಇಲ್ಲಿ — ನಿಮಿತ್ತವಶದಿಂದ ಪ್ರಾಪ್ತವಾದ ಆದೇಶಗಳನ್ನು ನಿವೇದಿಸಿ ಸ್ವಭಾವಸ್ಥಿತಿಯನ್ನು ಪರಿಪಾಲಿಸುವು ದರಿಂದ ವಿಧೇಯವಾಗಿರುವುದು. ಆದುದರಿಂದ ಅಗಾಗಮಕ್ಕೆ ಪರವಾದ ವರ್ಣಗಳು ಪೂರ್ವೋಕ್ತ ಕಾರ್ಯಗಳನ್ನು ಹೊಂದುವುದಿಲ್ಲ ಎಂದು ಫಲಿತವಾಗುವುದು. ಇದರಿಂದ — 'ಎತ್ತುವುದು ಕೋಲ್' ಎಂದು ಮೊದಲಾಗಿ ವಿಗ್ರಹಗಳನ್ನು ಮಾಡಲು ಪೂರ್ವಸಹಿತ 'ದು' ವಿಗೆ ಲೋಪವನ್ನು ಮಾಡಿ '**ಅಗ್ಬಹುಲಂ || ೩೪೫ ||**' ಎಂಬ ಸೂತ್ರದಿಂದ ಅಗಾಗಮವನ್ನು ಮಾಡಿ 'ಎತ್ತುವ ಕೋಲ್' ಮೊದಲಾದ ರೂಪಗಳನ್ನು ಸಾಧಿಸಿ '**ಕತಪಸ್ತೃತೀಯ ಉತ್ತರಪದಾದೇಃ ||೮೯||**' ಎಂಬ ಸೂತ್ರದಿಂದ ಪ್ರಾಪ್ತವಾದ ತೃತೀಯವರ್ಣಾದೇಶಗಳಿಗೆ ಇದರಿಂದ ನಿಷೇಧವನ್ನು ಹೇಳಲು 'ಎತ್ತುವ ಕೋಲ್' ಮೊದಲಾದುವು ಸಿದ್ಧಿಸುವುವು. 'ಪೊಣ್ಮುವ ಬಣ್ಣಂ' ಮೊದಲಾದುವುಗಳಲ್ಲಿ '**ಸ್ವರಾದ್ವಃ ಪವರ್ಗಸ್ಯ || ೯೦ ||**' ಎಂಬ ಸೂತ್ರದಿಂದ ಪ್ರಾಪ್ತವಾದ ವ ಕಾರಾದೇಶವನ್ನೂ 'ತೂಗುವ ಸೊಡರ್' ಮೊದಲಾದುವುಗಳಲ್ಲಿ — '**ಸಶ್ಚೋ ಬಹುಲಮಲಯೋಃ || ೯೩ ||**' ಎಂಬ ಸೂತ್ರದಿಂದ ಪ್ರಾಪ್ತವಾದ ಚ ಕಾರಾದೇಶವನ್ನೂ ಬಾಧಿಸಿ 'ಕುಣಿವ ಸಾಸಿರಕುದುರೆ' ಮೊದ ಲಾದುವುಗಳಲ್ಲಿ — '**ಸಂಖ್ಯಾಯಾಂ ಛಃ || ೯೪ ||**' ಎಂಬ ಸೂತ್ರದಿಂದ ಪ್ರಾಪ್ತವಾದ ಛ ಕಾರಾದೇಶವನ್ನೂ ಬಾಧಿಸಿ ಪ್ರಕೃತಿಭಾವವು ಬಂದಿರುವುದು. ಯದ್ಯಪಿ ಚ ಕಾರ ಛ ಕಾರಾದೇಶ ಗಳು ಬರಲು ವ್ಯಂಜನದ ದೆಸೆಯಿಂದ ಪರದಲ್ಲಿರುವ ಸ ಕಾರಕ್ಕೆ ಎಂದು ಹೇಳಿರುವುದರಿಂದ ಅಗಾ ಗಮದ ದೆಸೆಯಿಂದ ಪರವಾದುದಕ್ಕೆ ಸಂಭವಿಸುವುದೇ ಇಲ್ಲ. ಆದಾಗ್ಯೂ ಬಹುಳಗ್ರಹಣವಿರುವುದ ರಿಂದ ಕ್ವಚಿತ್ ಸ್ವರಪರಕ್ಕೂ ಸಂಭವಿಸುವುದೆಂದು ಇಲ್ಲಿ 'ತೂಗುವ ಸೊಡರ್' ಮೊದಲಾದುವು

ಉದಾಹರಿಸಲ್ಪಟ್ಟಿವೆ. ಸೂತ್ರದಲ್ಲಿ 'ಅಕಃ' ಎಂದು ಹೇಳಿರುವುದರಿಂದ 'ಎತ್ತುಂಗೋಲ್, ತೂಗುಂದೊಟ್ಟಿಲ್, ಆಡುಂಬೊಲಂ, ಮಾನಂಬುಲು' ಮೊದಲಾದುವುಗಳಲ್ಲಿ ಪ್ರಕೃತಿಭಾವವಿಲ್ಲ. ಇಲ್ಲಿ — 'ಕೃತೋ ಮೋ ಗದಬಜ್ಯನಕಿ ॥ ೩೧೧ ॥' ಎಂಬ ಸೂತ್ರದಿಂದ ಮ ಕಾರಾದೇಶವು ಬಂದಿರುವುದೆಂದು ತಿಳಿಯಬೇಕು. **ದರ್ಪಣಕಾರನು** ವಿಧಿಸೂತ್ರ*ದಲ್ಲಿಯೇ ಬಹುಳಗ್ರಹಣವನ್ನು ಮಾಡಿ ಇಂತಹ ಕೆಲವು ಪ್ರಯೋಗಗಳನ್ನು ಸಾಧಿಸಿರುವನು.

ಇಲ್ಲಿ — 'ಎತ್ತುವ, ಪೊತ್ತುವ, ನೋಡುವ, ಬೇಡುವ' ಮೊದಲಾದ ವರ್ತಮಾನ ಕ್ರಿಯಾದ್ಯೋತಕಗಳೂ 'ಎತ್ತಿದ, ಪೊತ್ತಿದ, ನೋಡಿದ, ಬೇಡಿದ' ಮೊದಲಾದ ಭೂತಕಾಲ ಕ್ರಿಯಾದ್ಯೋತಕಗಳೂ ಆಗಿರುವ ಕೆಲವು ಶಬ್ದಗಳು ವಿಶೇಷಣವಾಚಕಗಳಾಗಿ ಉತ್ತರಪದಗಳೊಡನೆ ಸಮಸ್ತಗಳಾಗಿಯೇ ಇರುವುವು ಎಂದು ಒಂದು ಪಕ್ಷವಿರುವುದು; ವ್ಯಸ್ತಗಳಾಗಿಯೇ ಅರ್ಥಾನುಗುಣವಾಗಿ ಸಂಬಂಧಿಸುವುವು ಎಂದು ಒಂದು ಪಕ್ಷವಿರುವುದು. ಈ ಎರಡು ಪಕ್ಷಗಳೂ ಸಾಂಪ್ರದಾಯಿಕಗಳೇ ಎಂಬುದು —

ಪಾಡುವ ತುಂಬಿ ತೀಡುವೆಲರಾಡುವ ಸೋಗೆ ಕೊಳಂಗಳೊಳ್ ತುಳುಂ
ಕಾಡುವ ಬಾಳೆ ಕೋಡುವ ಪುಟಂಲ್ ಸಲೆ ಕೂಡುವ ಕೊಂಚೆ ಮುಟ್ಟಿ ಮು
ಟ್ಟಾಡುವ ಜಕ್ಕವಕ್ಕಿ ನಲಿದಾಡುವ ಕನ್ನಡವಕ್ಕಿ ಮುದ್ದುಮಾ
ತಾಡುವ ಜಾಣವಕ್ಕಿ ನಡೆನೋಡುವರಟ್ಟೆಯನುಂಟು ಮಾಡುಗುಂ

ನನೆಯಂಬಂ ಕಂತುವಿಂದಂ ಬಿಸುಡಿಸಿದಲರ್ಗಣ್ ಚಂದ್ರಬಿಂಬೋದಯಪ್ರಾ
ರ್ಥನೆಯಂ ಕನ್ನೆಯ್ದಿಲಿಂ ಪಿಂಗಿಸಿ ಕಳೆದ ಮೊಗಂ ಜನ್ಮಸಾಫಲ್ಯಮಂ ಭೂ
ಜನನೇತ್ರಾನೀಕದಿಂದೆಯ್ದಿಸಿದನುಪಮಸೌಂದರ್ಯಮೊಳ್ಗೊಂಡರಂ ಬ
ದ್ದರನ ಬಲ್ಪಿಂ ಗಂಡುದೊಱ್ತಾಳ್ದಿಸಕದ ಸೊಬಗಾನಾಡ ಪೆಂಡಿರ್ಗೆ ಸಾಜಂ

ಎಂದು ಮೊದಲಾದ ಪದ್ಯಗಳಲ್ಲಿ — 'ಪಾಡುವ' ಇತ್ಯಾದಿ ವರ್ತಮಾನಕ್ರಿಯಾವಾಚಿಗಳೂ 'ಬಿಸುಡಿದ' ಇತ್ಯಾದಿ ಭೂತಕಾಲಕ್ರಿಯಾವಾಚಿಗಳೂ 'ತುಂಬಿ, ಅಲರ್ಗಣ್' ಎಂದು ಮೊದಲಾದ ಅವ್ಯವಹಿತೋತ್ತರ ಪದಗಳೊಡನೆ ಸಮಸ್ತಗಳಾಗಿಯೇ ಪ್ರಯೋಗಿಸುವುದರಿಂದ ತಿಳಿಯುವುದು. ಹೀಗೆಯೇ ವ್ಯಸ್ತಗಳೆಂಬುದೂ —

ಅರಲ ಸರಲ್ಗದಾರ ಮನಮಂ ಗುಱಿಮಾಡದೊ ನಾಡ ಸೀಱಿವೆಂ
ಡಿರ ನಡೆದೊಪ್ಪುವಪ್ಪುವೊಡಗೂಡುವ ನೋಡುವ ಸುತ್ತುವೊತ್ತುವಾ
ದರಿಪೊಲಿಪೊಲ್ವ ಗೆಲ್ವ ಬಸದಾಗಿಪ ಭೋಗಿಪ ಪೊಯ್ವ ಬಯ್ವ ನಾ
ಣ್ಗರೆವೆಱಿವಿಂಬುಕೆಯ್ವುವೊಳಕೆಯ್ವುವನೇಕವಿಚಿತ್ರಚೇಷ್ಟೆಗಳ್

ಇಲ್ಲಿ 'ಅಪ್ಪುವ, ಒಪ್ಪುವ' ಮೊದಲಾದುವು ಕೊನೆಯಲ್ಲಿರುವ ಅನೇಕ 'ವಿಚಿತ್ರಚೇಷ್ಟೆಗಳ್' ಎಂಬುದಕ್ಕೆ ವಿಶೇಷಣವಾಗಿದ್ದರೂ ಸಾಮರ್ಥ್ಯವಿಲ್ಲದುದರಿಂದ ಸಮಸ್ತವಾಗದು ಎಂಬುದು ಈ ಮೊದಲಾದ ಪ್ರಯೋಗಗಳಿಂದ ತಿಳಿಯಲ್ಪಡುವುದು. ಹೀಗೆಯೇ ವ್ಯಸ್ತವಾದುದರಿಂದ ಇಂತಹ ಶಬ್ದಗಳಿಗೆ ವಿಶೇಷ್ಯವಾಚಕದ ಪೂರ್ವದಲ್ಲಿಯೇ ಪ್ರಯೋಗವಿರಬೇಕೆಂಬ ನಿಯಮವಿಲ್ಲವೆಂಬುದು-

* [ ಸೂತ್ರ ೧೬೬ರಲ್ಲಿ — ಸಂಪಾದಕ ]

ಶ್ರೀರಾಮನಾಟಿ ಕೌಸ್ತುಭದ್ಯುತಿಕಿರತ್ಪುಷ್ಪಾಂಜಲಿಕ್ಷೀರಪ
ಕ್ಷೋರಂಗಸ್ಥಿತಿಯಾದ ಪಾದನಖರೋಚಿಗ್ಗಂಗೆ ಸ್ವರ್ಧಿಃಶಕೋ
ಟೀರವ್ಯಾಪ್ತಿಗೆ ಸಂದ ಚಕ್ರಿವಿ ದೈತ್ಯಧ್ವಾಂತಮಂ ಗೆಲ್ದು ಭೂ
ಭಾರಚ್ಛೇದನನೋದಿ ಕೃಷ್ಣನೆಮಗೀಗಾನಂದಸಂದೋಹಮಂ

ಎಂಬ ಪ್ರಯೋಗಗಳಿಂದ ತಿಳಿಯುವುದು. ಹೀಗೆ ಪಕ್ಷದ್ವಯವಿರಲು ಪ್ರಕೃತಸೂತ್ರದಲ್ಲಿ ಸಮಾಸ ಪಕ್ಷವನ್ನೇ ಅವಲಂಬಿಸಿ ಈ ಪ್ರಕೃತಿಭಾವವನ್ನು ವಿಧಿಸಿರುವುದೆಂದು **ಸೂತ್ರಕಾರ**ರಿಗೆ ತಾತ್ಪರ್ಯ ವೆಂದು ತಿಳಿಯಬೇಕು. ಇಲ್ಲಿ ಕಾರ್ಯಾಂತರವು ಪ್ರಾಪ್ತವಾದರಲ್ಲವೆ ಪ್ರಕೃತಿಭಾವವು ವಿಧಿಸಲ್ಪಡುವುದು ? ಆ ಕಾರ್ಯಾಂತರವೂ ಸಮಾಸದಲ್ಲಿಯೆ ಪ್ರವರ್ತಿಸುವುದರಿಂದ ಪ್ರಕೃತಿಭಾವವೂ ಸಮಾಸದಲ್ಲಿಯೇ ವಿಧಿಸಲ್ಪಡುವುದು. ವ್ಯಾಸಪಕ್ಷದಲ್ಲಿ ಬಹುಳಗ್ರಹಣದಿಂದ ಅತಿಪ್ರಸಕ್ತಿಯನ್ನು ಪರಿಹರಿಸಿಕೊಳ್ಳುವುದು.

**ಅವತಾರಿಕೆ ೯೭**

ಆಗಾಗಮಾತ್ಪರ ವ್ಯಂಜನಕ್ಕೆ ಪ್ರಕೃತಿಭಾವವನ್ನು ವಿಧಿಸಿ ಕೆಲವು ಸಂಖ್ಯಾವಾಚಕಾತ್ಪರ ವ್ಯಂಜನಕ್ಕೆ ಪ್ರಕೃತಿಭಾವವನ್ನು ವಿಧಿಸುತ್ತಾನೆ.

**ಸೂತ್ರಂ || ಅವಿಕೃತೇಃ ಸಂಖ್ಯಾಯಾಃ || ೯೭ ||**

**ಅರ್ಥ || ವಿಕಾರವನ್ನು ಹೊಂದದ ಸಂಖ್ಯಾವಾಚಕ ಶಬ್ದಕ್ಕೆ ಪರದಲ್ಲಿರುವ ಉತ್ತರಪದಾದಿ ಭೂತ ವರ್ಣಗಳಿಗೆ ಪ್ರಕೃತಿಭಾವವು ಬರುವುದು.**

**ಉದಾಹರಣೆ ||** ಒಂದುಕಣ್ಣಂ, ಮೂಱುಕಯ್ಯಂ, ನಾಲ್ಕುತಲೆಯಂ, ಅಯ್ದುತಲೆಯಂಗೆ|| ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೯೭**

ಈ ಸೂತ್ರದಲ್ಲಿ — ' ಅವಿಕೃತೇಃ, ಸಂಖ್ಯಾಯಾಃ ' ಎಂಬ ಎರಡು ಪದಗಳಿರುವುವು. ಇವೆರಡೂ ಪಂಚಮ್ಯಂತಗಳು. ' ಅವಿಕೃತೇಃ ' ಎಂಬುದು ' ಸಂಖ್ಯಾಯಾಃ ' ಎಂಬುದಕ್ಕೆ ಕೃತ ಬಹುವ್ರೀಹಿಯಾದ ವಿಶೇಷಣವು. ಪೂರ್ವಸೂತ್ರಗಳಿಂದ ' ಉತ್ತರಪದಾದೇಃ, ಪ್ರಕೃತ್ಯಾಃ ' ಎಂಬಿವು ಅನುವರ್ತಿಸಲ್ಪಡುವುವು. ತಥಾಚ — ಆದೇಶಾದಿಗಳಿಂದ ವಿಕಾರವನ್ನು ಹೊಂದದ ಸಂಖ್ಯಾವಾಚಕದ ಮುಂದಿನ ಉತ್ತರಪದಾದಿವ್ಯಂಜನ ವರ್ಣಗಳಿಗೆ ಪೂರ್ವೋಕ್ತ ಕಾರ್ಯಗಳಾವುವೂ ಬಾರದೆ ಪ್ರಕೃತಿಭಾವವು ಬರುವುದೆಂದು ಸೂತ್ರಾರ್ಥವಾಗುವುದರಿಂದ — ' ಒಂದುಕಣ್ಣಂ ' ಮೊದಲಾದುವು ಸಿದ್ಧಿಸುವುವು. ಸೂತ್ರದಲ್ಲಿ — ' ಅವಿಕೃತೇಃ ' ಎಂದು ಹೇಳಿರುವುದರಿಂದ ' ಮೂಗಯ್ಯಂ, ನಾಲ್ದಲೆಯಂ ' ಮೊದಲಾದ ಪ್ರಯೋಗಗಳಲ್ಲಿ ಸಂಖ್ಯಾವಾಚಕವು ಲೋಪಾದಿಗಳಿಂದ ವಿಕೃತವಾಗಿರುವುದರಿಂದ ಈ ಪ್ರಕೃತಿಭಾವವು ಪ್ರವರ್ತಿಸದಿರಲು ತೃತೀಯ ವರ್ಣಾದೇಶವೇ ಬಂದಿರುವುದು. ' ಸಂಖ್ಯಾಯಾಃ ' ಎಂದು ಹೇಳಿರುವುದರಿಂದ — ' ಕುಱುಗಯ್ಯಂ, ನಿಡುವಲೆಯಂ ' ಮೊದಲಾದುವುಗಳಲ್ಲಿ ಸಂಖ್ಯಾವಾಚಕವಿಲ್ಲದಿರುವುದರಿಂದ ಬರುವುದಿಲ್ಲ.

**ಅವತಾರಿಕೆ ೯೮**

ಪೂರ್ವಸೂತ್ರದಲ್ಲಿ ಸಂಖ್ಯಾಶಬ್ದವು ಪ್ರಸಕ್ತವಾದುದರಿಂದ ಕೆಲವು ಸಂಖ್ಯಾವಾಚಕಗಳಿಗೆ ಪರವಲ್ಲಿರುವ ವ್ಯಂಜನಕ್ಕೆ ಆದೇಶವನ್ನು ವಿಧಿಸುತ್ತಾನೆ.

**ಸೂತ್ರಂ || ಒಂಬತ್ತುಪತ್ತ್ರೋರ್ವರೋ ವೋ ಬಃ || ೯೮ ||**

**ಅರ್ಥ ||** 'ಒಂಬತ್ತು, ಪತ್ತು' ಎಂಬ ಶಬ್ದಗಳ ಮುಂದಿರುವ 'ವರ್' ಪ್ರತ್ಯಯದ ವ ಕಾರಸ್ಥಾನದಲ್ಲಿ ಬ ಕಾರಾದೇಶವು ಬರುವುದು.

**ಉದಾಹರಣೆ ||** ಒಂಬದಿಂಬರ್, ಪದಿಂಬರ್, ತೊಂಬರ್, ಪಯಿಂಬರ್ || ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೯೮**

ಈ ಸೂತ್ರದಲ್ಲಿ — 'ಒಂಬತ್ತುಪತ್ತ್ರೋಃ, ವರಃ, ವಃ, ಬಃ' ಎಂದು ನಾಲ್ಕು ಪದಗಳಿರುವುವು. 'ಒಂಬತ್ತುಪತ್ತ್ರೋಃ' ಪಂಚಮ್ಯಂತವಾದುದರಿಂದ 'ಪರಸ್ಯ' ಎಂದು ಉಪಸ್ಥಿತವಾಗುವುದು. ಅದು 'ವರಃ' ಎಂಬುದಕ್ಕೆ ವಿಶೇಷಣವು. 'ವರಃ' ಎಂಬುದು ಅವಯವಾವಯವಿಭಾವ ಸಂಬಂಧದಲ್ಲಿ ವಿಹಿತವಾದ ಷಷ್ಠ್ಯಂತಪದವು. ಇದು 'ವಃ' ಎಂಬುದಕ್ಕೆ ವಿಶೇಷಣವು. 'ಬಃ' ಎಂಬುದೇ ವಿಧೇಯವು. ತಥಾಚ — 'ಒಂಬತ್ತು, ಪತ್ತು' ಶಬ್ದಗಳ ಮುಂದಿರುವ 'ವರ್' ಪ್ರತ್ಯಯಾವಯವ ವ ಕಾರಕ್ಕೆ ಬ ಕಾರಾದೇಶವು ಬರುವುದೆಂದು ಸೂತ್ರಾರ್ಥವಾಗುವುದರಿಂದ 'ಒಂಬದಿಂಬರ್' ಮೊದಲಾದ ಪ್ರಯೋಗಗಳು ಸಿದ್ಧಿಸುವುವು. 'ಒಂಬದಿಂಬರ್, ಪದಿಂಬರ್' ಎಂಬಿವು — '**ಒಂಬತ್ತುಪತ್ತ್ರೋಸ್ತಾ ದಿವ್ || ೧೭೩ ||**' ಎಂಬ ಸೂತ್ರದಿಂದ ತ ಕಾರಾದಿಗೆ ದಿವ್ ಆದೇಶವೂ 'ವರ್' ಪ್ರತ್ಯಯ ವ ಕಾರಕ್ಕೆ ಈ ಸೂತ್ರದಿಂದ ಬ ಕಾರಾದೇಶವೂ ಬಂದು ಸಿದ್ಧವಾಗಿರುವುವು. 'ತೊಂಬರ್' ಎಂಬುದು — '**ಒಂಬತ್ತೋಸ್ತೊಂ ಪತ್ತಾ || ೩೬೧ ||** ಎಂಬ ಸೂತ್ರದಿಂದ ತೊಮ್ ಆದೇಶವನ್ನು ಮಾಡಲು ಸಿದ್ಧವಾಗಿರುವುದು. 'ಪಯಿಂಬರ್' ಎಂಬುದು— '**ಪಯಿರ್ ಪತ್ತ್ರೋಃ || ೩೬೩ ||**' ಎಂಬ ಸೂತ್ರದಿಂದ 'ಪಯಿರ್' ಆದೇಶವು ಬಂದು ಆಗಿರುವುದು. ಇಲ್ಲಿ 'ಪಯಿರ್' ಎಂಬುದು 'ಪತ್ತು' ಶಬ್ದಕ್ಕೆ ಆದೇಶವಾಗಿರುವುದರಿಂದ '**ಸ್ಥಾನಿವದಾದೇಶಃ**' ಎಂಬುದರಿಂದ ಸ್ಥಾನಿವದ್ಭಾವವನ್ನು ಮಾಡಲು 'ಪತ್ತು' ಶಬ್ದಕ್ಕೆ ವಿಹಿತವಾದ ಕಾರ್ಯವು 'ಪಯಿರ್' ಎಂಬುದಕ್ಕೂ . ಬರುವುದೆಂದು ತಿಳಿಯಬೇಕು. 'ಒಂಬಯ್' ಎಂಬುದಕ್ಕಾದರೂ ಮುಂದೆ ನಿಷೇಧವನ್ನು ಹೇಳುವುದರಿಂದ ಬರುವುದಿಲ್ಲ. ಈ ಸೂತ್ರದಲ್ಲಿ 'ಒಂಬತ್ತುಪತ್ತ್ರೋಃ' ಎಂದು ಹೇಳಿರುವುದರಿಂದ 'ಮೂವರ್, ನಾಲ್ವರ್' ಮೊದಲಾದ ಪ್ರಯೋಗಗಳಲ್ಲಿಯೂ 'ವರಃ' ಎಂದು ಪ್ರತ್ಯಯಸ್ವರೂಪನಿರ್ದೇಶ ಮಾಡಿರುವುದರಿಂದ — 'ಒಂಬತ್ತುವರುಷಂ, ಪತ್ತುವಂಗಡಂ' ಮೊದಲಾದ ಪ್ರಯೋಗಗಳಲ್ಲಿ ನಾಮಪದದ ವ ಕಾರಕ್ಕೂ 'ವಃ' ಎಂದು ಹೇಳಿರುವುದರಿಂದ '**ಷಷ್ಠ್ಯಾಃ ಸ್ಥಾನೇಽಂತ್ಯಸ್ಯ || ೨೨ ||**' ಎಂಬುದರಿಂದ 'ವರ್' ಪ್ರತ್ಯಯ ಸಂಬಂಧಿ ರೇಫಕ್ಕೂ ಬ ಕಾರಾದೇಶವು ಬರುವುದಿಲ್ಲವೆಂದು ತಿಳಿಯಬೇಕು.

ದರ್ಪಣದಲ್ಲಿ ಇದರ ವಿಶೇಷನಿರ್ದೇಶವನ್ನು ಮಾಡಿ 'ವರ್' ಎಂಬುದಕ್ಕೆ ಬ ಕಾರಾದೇಶವನ್ನು ಹೇಳದಿದ್ದರೂ ಸಾಮಾನ್ಯವಾಗಿ ಹೇಳಿರುವ —

**ಪವಣೊಳಮಾ ಸಂಖ್ಯೆಯೊಳಂ**
**ವ್ಯವಹರಿಕುಂ ವತ್ವಮುಲ್ಲಿ ಬಶ್ರುತಿಯುಂ ಸಂ**
**ಭವಿಕುಂ**　　**(ಸೂತ್ರ ೯೯)**

ಎಂಬ ಸೂತ್ರದಿಂದ ಸಿದ್ಧವಾಗುವುದು.

**ಅವತಾರಿಕೆ ೯೯**

ಶಬ್ದಾಂತರ ಸಂಬಂಧವಾದ ವರ್-ಪ್ರತ್ಯಯ ವ ಕಾರಕ್ಕೂ ಬ ಕಾರಾದೇಶವನ್ನುವಿಧಿಸುತ್ತಾನೆ.

**ಸೂತ್ರಂ || ಎಂಟೋಃ || ೯೯ ||**

**ಅರ್ಥ ||** ಎಂಟು ಶಬ್ದದ ಮುಂದಿನ 'ವರ್' ಪ್ರತ್ಯಯದ ವ ಕಾರಕ್ಕೆ ಬ ಕಾರಾದೇಶವು ಬರುವುದು.

**ಉದಾಹರಣೆ ||** 'ಎಣ್ಬರ್' ಎಂಬುದೊಂದೇ ಇದಕ್ಕೆ ಲಕ್ಷ್ಯವು.

**ವಿಚಾರ ೯೯**

ಈ ಸೂತ್ರದಲ್ಲಿ 'ಎಂಟೋಃ' ಎಂಬುದೊಂದೇ ಪದವಿರುವುದು. ಪೂರ್ವಸೂತ್ರದಿಂದ 'ವರೋ, ವೋ, ಬಃ' ಎಂಬುವನ್ನನುವರ್ತಿಸಿ ಸಂಬಂಧಿಸುವುದು. ತಥಾಚ — 'ಎಂಟು' ಶಬ್ದದ ಮುಂದಿನ 'ವರ್' ಪ್ರತ್ಯಯದ ವ ಕಾರಕ್ಕೆ ಬ ಕಾರಾದೇಶವು ಬರುವುದೆಂದು ಸೂತ್ರಾರ್ಥವಾಗುವುದರಿಂದ 'ಎಣ್ಬರ್' ಎಂಬ ರೂಪವು ಸಿದ್ಧಿಸುವುದು. ಈ ಸೂತ್ರಕ್ಕೆ 'ಎಣ್ಬರ್' ಎಂಬುದೊಂದೇ ಉದಾಹರಣೆಯಾಗಿರುವುದು. ಆದರೆ — '**ನಹ್ಯೇಕಮುದಾಹರಣಂ ಪ್ರಯೋಜಯಂತಿ**' ಎಂದು **ಪತಂಜಲಿಯು** ಹೇಳಿರುವಂತೆ ಈ ಒಂದು ಉದಾಹರಣೆಗಾಗಿ ಬೇರೆ ಸೂತ್ರವನ್ನು ಪ್ರಾರಂಭಿಸಿರುವುದು ಅಸಂಗತವೆಂದು ತೋರುವುದು. ಆದಾಗ್ಯೂ ಪೂರ್ವಸೂತ್ರದಲ್ಲಿಯೇ ಇದನ್ನು ಸೇರಿಸಲು ಸ್ವರಸಂಧಿಕಾರ್ಯವು ಪ್ರಾಪ್ತವಾಗಿ 'ಎಂಟು' ಎಂಬ ಸ್ವರೂಪಬೋಧೆಯಾಗುವುದಿಲ್ಲವಾದುದರಿಂದ ಪೃಥಕ್‌ಸೂತ್ರವು ಮಾಡಲ್ಪಟ್ಟಿದೆ ಎಂದು ತಿಳಿಯಬೇಕು.

**ಅವತಾರಿಕೆ ೧೦೦**

ಪೂರ್ವಸೂತ್ರದಿಂದ 'ಒಂಬತ್ತು' ಶಬ್ದಕ್ಕೆ ಆದಿಷ್ಟವಾದ 'ಒಂಬಯ್' ಶಬ್ದವೂ ಸ್ಥಾನಿವದ್ಭಾವದಿಂದ 'ಒಂಬತ್ತು' ಶಬ್ದವಾಗಲು ಅದರ ಪರದಲ್ಲಿರುವ 'ವರ್' ಪ್ರತ್ಯಯದ ವ ಕಾರಕ್ಕೂ ಬ ಕಾರಾದೇಶವು ಪ್ರಾಪ್ತವಾಗಲು ಅದಕ್ಕೆ ನಿಷೇಧವನ್ನು ಹೇಳುತ್ತಾನೆ.

**ಸೂತ್ರಂ || ಒಂಬಯೋ ನ || ೧೦೦ ||**

**ಅರ್ಥ ||** 'ಒಂಬಯ್' ಎಂಬ ಶಬ್ದಕ್ಕೆ ಪರದಲ್ಲಿರುವ 'ವರ್' ಪ್ರತ್ಯಯದ ವ ಕಾರಕ್ಕೆ ಬ ಕಾರಾದೇಶವು ಬರುವುದಿಲ್ಲ.

**ಉದಾಹರಣೆ ||** 'ಒಂಬಯ್ವರ್' ಎಂಬುದೊಂದೇ ಇದಕ್ಕೆ ಉದಾಹರಣೆಯಾಗಿರುವುದು.

**ಅವತಾರಿಕೆ ೧೦೧**

'**ಕತಪಸ್ತೃತೀಯ ಉತ್ತರಪದಾದೇಃ**' ಇತ್ಯಾದಿ ಸೂತ್ರಗಳಿಂದ ಪ್ರಾಪ್ತವಾದ ವ್ಯಂಜನಾದೇಶಗಳಿಗೆ ಶಿಷ್ಟಪ್ರಯೋಗಾನುಸಾರವಾಗಿ ಕೆಲವೆಡೆಗಳಲ್ಲ ಬರುವುದಿಲ್ಲವೆಂದು ಅಂತಹ ಶಬ್ದಗಳನ್ನೇ ಗಣಪಾಠರೂಪವಾಗಿ ಹೇಳುತ್ತಾನೆ.

**ಸೂತ್ರಂ || ಬೆಸೆಕೋಲಾದಯಃ || ೧೦೧ ||**

**ಅರ್ಥ || ಬೆಸೆಕೋಲಾದಿಗಣಪಠಿತವಾದ ಶಬ್ದಗಳು ಶಿಷ್ಟರಿಂದ ಹೇಗೆ ಉಚ್ಚರಿಸಲ್ಪಟ್ಟಿರುವುವೋ ಹಾಗೆಯೇ ಸಾಧುಗಳೆಂದು ಇಲ್ಲಿ ಉಚ್ಚರಿಸಲ್ಪಟ್ಟಿವೆ ಎಂದು ತಿಳಿಯಬೇಕು. ಇದು ಈ**

ಪ್ರಕರಣದ ಕೊನೆಯಲ್ಲಿ ಹೇಳಿರುವುದರಿಂದ ಪೂರ್ವೋಕ್ತ ತೃತೀಯವರ್ಣಾದಿ ಆದೇಶಗಳು ಇವುಗಳಲ್ಲಿ ಪ್ರವರ್ತಿಸುವುದಿಲ್ಲವೆಂದು ತಾತ್ಪರ್ಯವು.

**ಉದಾಹರಣೆ ||** 'ಬೆಸಕೋಲ್, ತಲೆಕಟ್ಟು, ಒಳಕಯ್, ಮೊಲಕಯ್, ಪೊಲಕಯ್, ಒಳಕೋಟೆ, ಪೊಱಕೋಟೆ, ಪೊಱಕಟ್ಟು, ಬಲಾಕಾಲ್, ಪೊಸತೊಲೆ, ಒಳತೋಟಂ, ಪೊಸತೋಟಂ, ಕಪ್ಪುಜಸಿ, ಕತ್ತುಱಮಿಗಂ, ಸೂಸೆಮುದ್ದು, ನಸುಮುಳಿಸು, ಇಕ್ಕೋಡಿ, ಇತ್ತಡಿ, ಇಪ್ಪಾನಿ, ಒಕ್ಕೋಲ್, ಒಕ್ಕಯ್, ಒಕ್ಕಣ್ಣಂ, ಮುಕ್ಕಣ್ಣಂ, ಮುಕ್ಕೊಡೆ, ಮುಕ್ಕೋಡಿ, ಮುತ್ತಲಿ, ಮುಕ್ಕಪ್ಪೆ' ಮೊದಲಾದುವು ಬೆಸಕೋಲಾದಿಗಳು. ಇದು ಆಕೃತಿಗಣವೆಂದು ತಿಳಿದು ಇವರಂತೆ ಪ್ರಯೋಗದಲ್ಲಿರುವ ಬೇರೆ ಶಬ್ದಗಳನ್ನೂ ಈ ಗಣದಲ್ಲಿ ಸೇರಿಸಿ ಸಾಧುತ್ವವನ್ನು ಕಲ್ಪಿಸಿಕೊಳ್ಳುವುದು.

**ವಿಚಾರ ೧೦೧**

ಈ ಸೂತ್ರದಲ್ಲಿ 'ಬೆಸಕೋಲಾದಯಃ' ಎಂಬುದೊಂದೇ ಪದವಿರುವುದು. 'ಬೆಸಕೋಲ್ ಆದಿಃ ಯೇಷಾಮ್' ಎಂದು ಬಹುವ್ರೀಹಿಸಮಾಸವನ್ನಂಗೀಕರಿಸಲು ಅನ್ಯಪದಾರ್ಥವು ಗಣವೆಂದಾಗುವುದು. ಆದರೆ ಆ ಗಣವೆಂಬುದು ಅನೇಕಶಬ್ದಘಟಿತವಾದ ಸಮುದಾಯವು. ಆ ಸಮುದಾಯಕ್ಕೆ ಆದಿಯಾದುದು 'ಬೆಸಕೋಲ್' ಎಂಬುದು. ಏತದಾದಿಯಾದ ಸಮುದಾಯವು ಒಂದೇ ಆದುದರಿಂದ ಸೂತ್ರದಲ್ಲಿ ಏಕವಚನ ನಿರ್ದೇಶವನ್ನು ಮಾಡದೆ ಬಹುವಚನ ನಿರ್ದೇಶವನ್ನು ಮಾಡಿರುವುದು. ಈ ಗಣವು ಆಕೃತಿಗಣವೆಂಬರ್ಥಸೂಚಕವಾಗುವುದು. ಆಕೃತಿಗಣವೆಂದರೆ ಇಲ್ಲಿ ಪಠಿತವಾದ ಶಬ್ದಗಳ ಆಕಾರದಿಂದ ಗಣಿಸಲ್ಪಡುವುದೆಂಬರ್ಥವು. ಆದುದರಿಂದ ಇಲ್ಲಿ ಪಾಠಮಾಡದೆ ಇರುವ ಶಬ್ದಗಳು ಇಲ್ಲಿ ಪಾಠಮಾಡಿರುವ ಶಬ್ದಗಳಿಗೆ ಸಜಾತೀಯವಾಗಿದ್ದರೆ ಅವೂ ಈ ಗಣಕ್ಕೆ ಸೇರಿದುವುಗಳೆಂದು ತಿಳಿಯಬೇಕು.

**ಶಾಸನಕಾರನು** ಈ ಗಣವನ್ನು ಪಾಠಮಾಡುವಾಗ ಅದರಲ್ಲಿ — 'ಇಕ್ಕೋಡಿ, ಇತ್ತಡಿ, ಇಪ್ಪಾನಿ, ಒಕ್ಕೋಲ್, ಒಕ್ಕಯ್' ಎಂಬ ಶಬ್ದಗಳನ್ನೂ ಸೇರಿಸಿರುವನು. ಇವು — 'ನಾದಿಷ್ವಾದ್ರಟಃ' ಎಂಬ ಸೂತ್ರವಿಹಿತನಿಷೇಧಕ್ಕೆ ವಿಷಯವಾಗಿರುವುದರಿಂದ ಇಲ್ಲಿ ಪಾಠಮಾಡಿರುವುದು ನಿರರ್ಥಕವೆಂದು ತೋರುವುದು. ಇವುಗಳಲ್ಲಿ ಯಥಾಶಾಸ್ತ್ರವಾಗಿ ಕಾರ್ಯಪ್ರವೃತ್ತಿಯನ್ನು ಊಹಿಸಿಕೊಳ್ಳಬೇಕು.

**ಇತಿ ವ್ಯಂಜನಸಂಧಿಪ್ರಕರಣಂ ಸಮಾಪ್ತಂ.**

**ಇತಿ ಶ್ರೀಭಟ್ಟಾಕಳಂಕದೇವವಿರಚಿತ ಶಬ್ದಾನುಶಾಸನದಲ್ಲಿ ಪ್ರಥಮಪಾದವು ಸಮಾಪ್ತವು.**

ಶ್ರೀವೆಂಕಟಾರ್ಯಸಂಭೂತಕುಂಡಲಾರ್ಯವಿನಿರ್ಮಿತಾ
ಯಾ ಕರ್ಣಾಟಕ ಶಬ್ದಾನುಶಾಸನಸ್ಯ ಪ್ರಕಾಶಿಕಾ
ತಸ್ಯಾಂ ಚ ಪ್ರಥಮಃ ಪಾದಃ ಪೂರ್ಣಃ ಪೂರ್ಣಕೃಪಾಬಲಾತ್
ಬುಧಾಸ್ತತ್ರ ಗುಣಾ ದೋಷಾ ಬೋಧಯಂತು ಮಮಾದರಾತ್

**ಇತಿ ಶ್ರೀಮದ್ಭಟ್ಟಾಕಳಂಕದೇವವಿರಚಿತ ಕರ್ಣಾಟಕ ಶಬ್ದಾನುಶಾಸನದ ಸೂತ್ರದ ಭಾಷಾವ್ಯಾಖ್ಯಾನರೂಪವಾದ ಪ್ರಕಾಶಿಕೆಯಲ್ಲಿ ಮೊದಲನೆಯ ಪಾದವು ಸಂಪೂರ್ಣವಾದುದು. ಶ್ರೀರಸ್ತು.**

# ಅಥ ದ್ವಿತೀಯಪಾದ ಪ್ರಾರಂಭಃ

## ಅಥ ಲಿಂಗಾನುಶಾಸನ ಪ್ರಾರಂಭಃ

**ಅವತಾರಿಕೆ ೧೦೨**

ಪೂರ್ವಪಾದದಲ್ಲಿ ಸಾಮಾನ್ಯವಾಗಿ ವಿಧಿ-ಉಪಕಾರಕಗಳಾದ ಸಂಜ್ಞಾ ಪರಿಭಾಷಾತಿದೇಶ ಸೂತ್ರಗಳನ್ನೂ ಸಂಹಿತಾವಿಷಯದಲ್ಲಿ ಬರುವ ಆಗಮಾದೇಶಗಳನ್ನೂ ಹೇಳಿದನು. ಅಲ್ಲಿ — '**ಮೋಃ ನಃ ಸ್ವರೇ**' ಎಂಬ ಸೂತ್ರದಲ್ಲಿ ಉದ್ದೇಶ್ಯವಾಗಿರುವ ಮ ಕಾರವು ಪದಾಂತವಿಷಯಕವು. ಅಂತಹ ಪದಾಂತದಲ್ಲಿ ಪ್ರಚುರವಾಗಿ ಸುಪ್-ವಿಭಕ್ತಿಯೇ ಸಂಭವಿಸುವುದರಿಂದ ಆ ಸುಪ್-ವಿಧಿಯನ್ನು ಪೂರ್ವಪ್ರಕರಣಾನಂತರದಲ್ಲಿ ಪ್ರಾರಂಭಿಸುವುದು ಉಚಿತವು. ಮುಂದೆ ಕೆಲವು ಸುಬಾಪ್ರಯ ವಿಧಿಗಳಲ್ಲಿ — '**ಳುಕ್ಟ ಸ್ತ್ರಿಯಾಂ || ೧೮೧ ||**' '**ಆತೇತೋತಂ ಪುಂಸ್ಯದ್ವಿದೂದೋಃ || ೧೬೨ ||**' '**ದಗಿಮಾದೌ ನಪಿ || ೨೬೧ ||**' ಮೊದಲಾದ ಸೂತ್ರಗಳಿಂದ ಸ್ತ್ರೀಪುನ್ನಪುಂಸಕಲಿಂಗೋದ್ದೇಶ್ಯದಿಂದ 'ಳುಗಾದಿ' ಕಾರ್ಯಗಳು ವಿಧಿಸಲ್ಪಡುವುವು. ಅಲ್ಲಿ ಉದ್ದೇಶ್ಯಲಿಂಗಸ್ವರೂಪವು ತಿಳಿಯದಿದ್ದರೆ ಕಾರ್ಯಗಳನ್ನು ವಿಧಿಸುವುದು ಅಶಕ್ಯವಾದುದರಿಂದ ಆ ಉದ್ದೇಶ್ಯಸ್ವರೂಪವನ್ನು ತಿಳಿದುಕೊಳ್ಳಲು ಲಿಂಗಾನುಶಾಸನವು ಆರಂಭಕ್ಕೆ ವಿಷಯವಾಗಿರುವುದು. ಆದರೆ ಸಾಮಾನ್ಯವಾಗಿ ಲಿಂಗಸ್ವರೂಪವನ್ನು ತಿಳಿಸಿ ಅನಂತರದಲ್ಲಿ ಆದರ ವಿಶೇಷಸ್ವರೂಪವನ್ನು ತಿಳಿಸಬೇಕು. ಆದಾಗ್ಯೂ ಲಿಂಗ ಸಾಮಾನ್ಯೋದ್ದೇಶದಿಂದ ಯಾವ ಕಾರ್ಯವೂ ಈ ಶಾಸ್ತ್ರದಲ್ಲಿ ವಿಧಿಸಲ್ಪಡುವುದಿಲ್ಲವಾದುದರಿಂದ ಲಿಂಗವಿಶೇಷಗಳನ್ನೇ ತಿಳಿಸಲು ಮೊದಲು ಸ್ತ್ರೀಲಿಂಗವನ್ನು ತಿಳಿಸುತ್ತಾನೆ.

**ಸೂತ್ರಂ || ಸ್ತ್ರ್ಯರ್ಥಃ ಸ್ತ್ರೀ || ೧೦೨ ||**

**ಅರ್ಥ || ಸ್ತ್ರೀವಾಚಕ ಶಬ್ದಗಳು ಸ್ತ್ರೀಲಿಂಗಗಳಾಗುತ್ತವೆ.**

**ಉದಾಹರಣೆ ||** ನಾರಿ ಕೂರ್ತಳ್, ಸತಿ ನೋಡಿದಳ್, ಕಾಮಿನಿ ಕೂಡಿದಳ್, ರಂಭೆ ನರ್ತಿಸಿದಳ್, ಅಚ್ಚರಸಿ ಪಾಡಿದಳ್, ಅವಳ್ ಬಂದಳ್, ಇವಳ್ ಪೋದಳ್ || ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೧೦೨**

ಈ ಸೂತ್ರದಲ್ಲಿ — 'ಸ್ತ್ರ್ಯರ್ಥಃ, ಸ್ತ್ರೀ' ಎಂದು ಎರಡು ಪದಗಳಿರುವುವು. 'ಸ್ತ್ರೀ' ಎಂಬುದು '**ಸ್ತ್ಯಾಯೇತೇ ಶುಕ್ಲಶೋಣಿತೇ ಯಸ್ಯಾಂ**' ಎಂದು ವಿಗ್ರಹವನ್ನು ಮಾಡಲು ಸಂಘಾತಾರ್ಥಕಸ್ತ್ಯೈ ಧಾತುವಿನ ಮೇಲೆ ಅಧಿಕರಣಾರ್ಥದಲ್ಲಿ '**ಸ್ತ್ಯಾಯತೇರ್ಡ್ರಟ್**' ಎಂಬ ಉಣಾದಿ ಸೂತ್ರದಿಂದ 'ಡ್ರಟ್' ಪ್ರತ್ಯಯವನ್ನೂ ಆ ಪ್ರತ್ಯಯದ ಡ ಕಾರ ಟ ಕಾರಗಳಿಗೆ ಇತ್-ಸಂಜ್ಞಾ ಲೋಪಗಳನ್ನೂ ಅದು ಪರದಲ್ಲಿರುವಾಗ ಧಾತುವಿನ ಕೊನೆಯ ಯ ಕಾರ ಐ ಕಾರಗಳಿಗೆ ಲೋಪವನ್ನೂ ಮಾಡಿ ನಿಷ್ಪನ್ನವಾದ 'ಸ್ತ್ರ' ಎಂಬುದಕ್ಕೆ 'ಈ' ಎಂಬ ಸ್ತ್ರೀಪ್ರತ್ಯಯವನ್ನು ಸೇರಿಸಿ ಪ್ರಕೃತಿಯ ಅ ಕಾರಕ್ಕೆ ಲೋಪವನ್ನು ಮಾಡಲು ನಿಷ್ಪನ್ನವಾದುದರಿಂದ ಶುಕ್ಲಶೋಣಿತಗಳು

ಸೇರುವುದಕ್ಕೆ ಆಧಾರವಾದ ವಸ್ತುವೆಂದರ್ಥವಾಗುವುದು. ಇದಕ್ಕೆ 'ಅರ್ಥ' ಶಬ್ದದೊಡನೆ ಬಹುವ್ರೀಹಿ ಸಮಾಸವನ್ನು ಮಾಡಲು 'ಸ್ತ್ರ್ಯರ್ಥಃ' ಎಂದಾಗುವುದು. ಸ್ತ್ರ್ಯರ್ಥವೆಂದರೆ ಸ್ತ್ರೀವಾಚಕ ಶಬ್ದ ವೆಂದರ್ಥವಾಗುವುದು. ತಥಾಚ — ಸ್ತ್ರೀವಾಚಕ ಶಬ್ದವು ಸ್ತ್ರೀಲಿಂಗವಾಗುವುದೆಂದು ಸೂತ್ರಾರ್ಥ ವಾಗುವುದರಿಂದ 'ನಾರಿ ಕೂರ್ತ್ತಳ್' ಮೊದಲಾದುವು ಸ್ತ್ರೀಲಿಂಗಗಳು. ಅವಕ್ಕೇ ಸ್ತ್ರೀಲಿಂಗ ಪ್ರಯುಕ್ತ ವಕ್ಷ್ಯಮಾಣ ಕಾರ್ಯಗಳು ಬರುವುವೆಂದು ತಿಳಿಯಬೇಕು. ಇಲ್ಲಿ ಅರ್ಥಗ್ರಹಣವನ್ನು ಮಾಡಿರುವುದರಿಂದ ಸ್ತ್ರೀಪರ್ಯಾಯತದ್ವಿಶೇಷಾದಿಗಳೆಲ್ಲಕ್ಕೂ ಸಂಗ್ರಹ ಬರುವುದು. ಈ ಲಿಂಗ ಸಂಜ್ಞೆಯನ್ನಂಗೀಕರಿಸುವುದರಿಂದ — '**ಆಳಮಃ ಸ್ತ್ರಿಯಾಂ || ೪೫೩ ||**' ಮೊದಲಾದ ಸ್ತ್ರೀಪದ ವುಳ್ಳ ಸೂತ್ರಗಳಲ್ಲಿ ಈ ಸೂತ್ರದಿಂದ ಬೋಧ್ಯವಾದುವುಗಳನ್ನೇ ಸ್ತ್ರೀಪದವಾಚ್ಯಾರ್ಥಗಳೆಂದು ತಿಳಿಯಬೇಕು.

ಇಲ್ಲಿ ಲಿಂಗವೆಂದರೇನು? ಅದನ್ನು ತಿಳಿದುಕೊಳ್ಳುವ ಬಗೆ ಹೇಗೆ? '**ಅರ್ಥವಲ್ಲಿಂಗಂ**' ಎಂಬ ಸೂತ್ರದಲ್ಲಿ ಸಂಕೇತ ಮಾಡಿರುವ ಲಿಂಗಕ್ಕೂ ಈ ಸೂತ್ರದಲ್ಲಿ ತಿಳಿಸುವ ಲಿಂಗಕ್ಕೂ ವ್ಯತ್ಯಾಸವೇನು? ಇಂತಿಷ್ಟು ಬಗೆ ಎಂಬ ಶಂಕೆಗಳು ತಲೆದೋರುವುವು. ಅವುಗಳಲ್ಲಿ ಲಿಂಗವೆಂದರೆ 'ಚಿಹ್ನ, ನಿಮಿತ್ತ' ಮೊದಲಾದ ಅನೇಕಾರ್ಥಗಳು ಲೋಕದಲ್ಲಿ ಪ್ರತೀಯಮಾನವಾಗುವುವು. ಪ್ರಕೃತದಲ್ಲಿ ನಿಮಿತ್ತವೆಂದು ತಿಳಿಯಬೇಕು. ಆ ನಿಮಿತ್ತವು ಸಾಮಾನ್ಯವಾಗಿ ತೋರುತ್ತಿದ್ದರೂ 'ಇವಳ್, ಇವಂ, ಇಡು' ಎಂಬ ವ್ಯವಸ್ಥೆಗೆ ಹೇತುಭೂತವಾದ ಪ್ರಕೃತ್ಯರ್ಥಧರ್ಮಸ್ವರೂಪ ವೆಂದು ತಿಳಿಯಬೇಕು. ಆದುದರಿಂದಲೇ ಲೋಕದಲ್ಲಿ ಇದೇ ನಿಮಿತ್ತವನ್ನವಲಂಬಿಸಿ — 'ಸತಿ, ಸುತೆ, ಪೆಂಡತಿ, ಮಗಳ್' ಮೊದಲಾದ ಕೆಲವೆಡೆಗಳಲ್ಲಿ 'ಇವಳ್' ಎಂಬ ಸರ್ವನಾಮ ಶಬ್ದವೂ – 'ಪತಿ, ಸುತ, ಗಂಡ, ಮಗ' ಮೊದಲಾದ ಕೆಲವೆಡೆಗಳಲ್ಲಿ 'ಇವಂ' ಎಂಬ ಶಬ್ದವೂ – 'ಲತೆ, ವೃಕ್ಷ, ವನ, ಬಳ್ಳಿ, ಮರ, ಬನ' ಮೊದಲಾದ ಕೆಲವೆಡೆಗಳಲ್ಲಿ 'ಇದು' ಎಂಬ ಶಬ್ದವೂ ಸ್ವರೂಪದಿಂದಲೇ ಭಿನ್ನ ಭಿನ್ನವಾಗಿರುವ — 'ಬಂದಳ್, ಬಂದಂ, ಬಂದುದು, ಪೋದಳ್, ಪೋದಂ, ಪೋದುದು' ಮೊದಲಾದ ಕೆಲವೆಡೆಯಲ್ಲಿ ಆಯಾ ಶಬ್ದಗಳೂ ವ್ಯವಸ್ಥಿತ ವಾಗಿರುವುವು. ಅಲ್ಲಿ ಈ ವ್ಯವಸ್ಥೆಗೆ ಕಾರಣಭೂತವಾದ ಪ್ರಾತಿಪದಿಕಾರ್ಥಗತ ಧರ್ಮವೇ ಲಿಂಗವೆಂದು ತಿಳಿಯುವುದು.

ಆದರೆ ಲಿಂಗಪ್ರಯುಕ್ತವಾದ ವಿಕಾರಗಳು ಈ ವ್ಯಾಕರಣಶಾಸ್ತ್ರದಲ್ಲಿ ಶಬ್ದಗಳಿಗೇ ಹೇಳಲ್ಪ ಡುವುದರಿಂದ — 'ಇವಳವಳುವಳಿವನವನುವನಿದುವದುವುದು' ಮೊದಲಾದ ಸರ್ವನಾಮ ಶಬ್ದಗಳೂ 'ಬಂದಳ್, ಬಂದಂ, ಬಂದುದು; ಪೋದಳ್, ಪೋದಂ, ಪೋದುದು' ಮೊದಲಾದ ಆಖ್ಯಾತಾಂತ ಶಬ್ದಗಳೂ ವಿಕೃತವಾಗುವುವು. ಆ ಸಂದರ್ಭದಲ್ಲಿ ಅರ್ಥಗತ ಧರ್ಮವು ಲಿಂಗವೆಂದು ಹೇಳುವುದು ಕಾರ್ಯಕಾರಣಗಳಿಗೆ ಸಾಮಾನಾಧಿಕರಣ್ಯವಿಲ್ಲದಿದ್ದರೂ ಅರಣ್ಯದಲ್ಲಿರುವ ದಂಡಾದಿ ಗಳಿಗೆ ನಗರದಲ್ಲಿರುವ ಘಟಾದಿಗಳನ್ನು ಕುರಿತು ಕಾರಣತ್ವವನ್ನು ಹೇಳುವಂತೆ ಅಯುಕ್ತವಾಗಿ ತೋರುವುದು. ಹಾಗೆ ವೈಯಧಿಕರಣ್ಯವಿದ್ದರೂ ಕಾರ್ಯಕಾರಣಭಾವವನ್ನಂಗೀಕರಿಸುವ ಪಕ್ಷ ದಲ್ಲಿ ಗೊಲ್ಲರ ಮನೆಯಲ್ಲಿ ಮಜ್ಜಿಗೆಯಿರಲು ಪಟ್ಟಣದಲ್ಲಿರುವ ಹಾಲಿಗೆ ಘನೀಭಾವವು ಪ್ರಸಕ್ತ ವಾಗಬೇಕಾಯಿತು. ಇದು ಪ್ರಯತ್ನಪಟ್ಟರೂ ಎಂದಿಗೂ ಆಗುವುದಿಲ್ಲವೆಂಬುದು ಸರ್ವಲೋಕ ಪ್ರಸಿದ್ಧವಾಗಿರುವುದು. ಆದುದರಿಂದ ಕಾರ್ಯಕಾರಣಗಳಿಗೆ ಏಕಾಧಿಕರಣವೃತ್ತಿತ್ವವು ನಿಯತ

ವೆಂದು ತೋರುವುದು. ಪ್ರಕೃತದಲ್ಲಿಯೂ ಅರ್ಥನಿಷ್ಠ ಧರ್ಮದಿಂದ ಶಬ್ದಕ್ಕೆ ವಿಕಾರವನ್ನು ಹೇಳುವುದು ಅಸಂಗತವಾದುದರಿಂದ ಶಬ್ದಧರ್ಮವೇ ಲಿಂಗವೆಂದು ಹೇಳಬೇಕು. ಇದಕ್ಕೆ ಉಪಷ್ಟಂಭಕವಾಗಿ **ವಾಮನಾಚಾರ್ಯರೂ** ಲಕ್ಷಣಗ್ರಂಥದಲ್ಲಿ —

**' ಇಯಮಯಮಿದಮಿತಿ ಶಬ್ದವ್ಯವಸ್ಥಾಹೇತುಃ ಶಬ್ದಧರ್ಮೋ ಲಿಂಗಂ '**

ಎಂದು ಹೇಳಿರುವರು ಎಂದು ಕೆಲವರು ಆಕ್ಷೇಪಿಸುವರು. ಹೀಗೆ ಆಕ್ಷೇಪಿಸುವವರಿಗೂ ಅನುಪಪತ್ತಿಯು ಇರುವುದು. ಹ್ಯಾಗಂದರೆ — ಲಿಂಗವು ಶಬ್ದಧರ್ಮವೆಂಬುದು ಔಪಚಾರಿಕವೇ ? ಅಥವಾ ಮುಖ್ಯವೆ ? ಮೊದಲನೆಯದನ್ನು ಅಂಗೀಕರಿಸುವ ಪಕ್ಷದಲ್ಲಿ ವಾಚ್ಯಧರ್ಮಕ್ಕೆ ವಾಚಕದಲ್ಲಿ ಉಪಚಾರವೃತ್ತಿಯಿಂದ ಅವಸ್ಥಿತಿಯನ್ನು ಹೇಳುವುದು ಸಕಲ ವೈಯ್ಯಾಕರಣರಿಗೂ ಸಮ್ಮತವಾಗಿರುವುದರಿಂದ ನಮಗೇನೂದೋಷವಿಲ್ಲ. ಮುಖ್ಯವೆಂಬ ಎರಡನೆಯ ಪಕ್ಷವನ್ನಂಗೀಕರಿಸುವ ಪಕ್ಷದಲ್ಲ ಲಿಂಗವು ಶಬ್ದಧರ್ಮವೇ ಆದುದರಿಂದ — ' ಕರಿಯಳ್ ಪಾರ್ವತಿ, ಕರಿಯಂ ಕೃಷ್ಣಂ, ಕರಿದು ಕಸ್ತುರಿ; ಬಿಳಿಯಳ್ ಸರಸತಿ, ಬಿಳಿಯಂ ಬಗ್ಗಂ, ಬಿಳಿದು ಕಪ್ಪುರಂ; ಪಾಡಿದಂ ಗಾಯಕಂ, ಪಾಡಿದಳ್ ಗಾಯಿಕೆ, ಪಾಡಿತು ಭೃಂಗಂ; ಓದಿದನರಸಂ, ಓದಿದಳರಸಿ, ಓದಿದುದು ಗಿಳಿ; ನಾಲ್ವರ್ ಗಂಡರ್, ನಾಲ್ವರ್ ಪೆಂಡಿರ್, ನಾಲ್ಕು ಸಮುದ್ರಂಗಳ್; ಅಯ್ವರ್ ಪುರುಷರ್, ಅಯ್ವರ್ ಸತಿಯರ್, ಅಯ್ದು ಗಿರಿಗಳ್ ' ಮೊದಲಾದ ಪ್ರಯೋಗಗಳಲ್ಲಿ ಗುಣವಚನ, ಕೃದ್ವಚನ, ಸಂಖ್ಯಾವಚನಗಳಾದ ' ಕರಿದು, ಬಿಳಿದು, ಪಾಡಿದ, ಓದಿದ, ನಾಲ್ಕು, ಅಯ್ದು ' ಮೊದಲಾದ ಶಬ್ದಗಳಿಂದ ವಾಚ್ಯವಾದ ' ಕಪ್ಪು ' ಮೊದಲಾದ ಗುಣಕ್ರಿಯಾದಿಗಳಿಗೆ ' ಪಾರ್ವತಿ ' ಮೊದಲಾದ ಅರ್ಥವೇ ಆಶ್ರಯವಾಗಿರುವುದಲ್ಲದೆ ಶಬ್ದಸ್ವರೂಪಗಳು ಆಶ್ರಯವಲ್ಲದೆ ಅವಕ್ಕೆ ಆಶ್ರಯಲಿಂಗತ್ವವ್ಯವಹಾರವು ಅನುಪಪನ್ನವಾಗುವುದು. ಆದುದರಿಂದ ಲಿಂಗವು ಅರ್ಥಧರ್ಮವೆಂದು ಅಂಗೀಕರಿಸುವುದೇ ಉಚಿತವೆಂದು ಹೇಳಬೇಕು. ಹೀಗೆಯೇ ಶಾಕಟಾಯನ ವ್ಯಾಕರಣಸೂತ್ರಕ್ಕೆ ವ್ಯಾಖ್ಯಾರೂಪವಾದ ಅಮೋಘವೃತ್ತಿಯಲ್ಲಿ

**ಇಯಮಯಮಿದಮಿತಿ ಶಬ್ದವ್ಯವಸ್ಥಾಹೇತುರುಪದೇಶಗಮ್ಯಃ** ಪ್ರಾತಿಪದಿಕಾರ್ಥಧರ್ಮೋ ಲಿಂಗಂ ಎಂದು ಹೇಳಿರುವರು. ಪ್ರಾತಿಪದಿಕದ ಅರ್ಥವು ' ಮೂರು ' ಎಂಬ ಪಕ್ಷದಲ್ಲಯೂ —

ಜಾತಿರ್ವ್ಯಕ್ತಿಶ್ಚ ಲಿಂಗಂ ಚ ಪ್ರಕೃತ್ಯರ್ಥೋಽಭಿಧೀಯತೇ
ಸಂಖ್ಯಾ ಚ ಕಾರಕಂ ಚೈವ ಪ್ರತ್ಯಯಾರ್ಥೋ ನಿಗದ್ಯತೇ

ಎಂಬುದರಿಂದ ಲಿಂಗವು ಪ್ರಕೃತ್ಯರ್ಥವೆಂದು ಹೇಳಲ್ಪಟ್ಟಿರುವುದು — ಅರ್ಥಧರ್ಮಕ್ಕೂ ಅರ್ಥತ್ವವಿರುವುದೆಂಬ ಅಭಿಪ್ರಾಯದಿಂದಲೇ ಅರ್ಥಧರ್ಮವೇ ಲಿಂಗವೆಂದು ಸಿದ್ಧಾಂತ ಮಾಡಿರುವರು. **' ಪಂಚಕಂ ಚತುಷ್ಕಂ ಪ್ರಾತಿಪದಿಕಾರ್ಥಃ '** ಇತ್ಯಾದಿ ಪಕ್ಷಗಳಲ್ಲಿಯೂ ಇದೇ ರೀತಿಯೆಂದು ತಿಳಿಯುವುದು.

ಹೀಗೆ ಲಿಂಗವು ಅರ್ಥಧರ್ಮವೆಂದು ಹೇಳಿದರೆ ಲಿಂಗಪ್ರಯುಕ್ತವಾದ ವಿಕಾರಗಳು ' ಕಾರ್ಯಕಾರಣಗಳಿಗೆ ಸಾಮಾನಾಧಿಕರಣ್ಯವು ನಿಯತವು ' ಎಂದು ಹೇಳಿರುವುದರಿಂದ ಅರ್ಥಗಳಲ್ಲೇ ಬರಬೇಕಲ್ಲದೆ ಶಬ್ದಗಳಲ್ಲಿ ಬರಲಾಗದು. ಆದರೆ ಲೋಕದಲ್ಲಿ ಶಬ್ದಗಳಲ್ಲಿಯೇ ವಿಕಾರವು ಕಾಣಲ್ಪಡುವುದು. ಆ ವಿಕಾರದ ಕಾರಣವು ' ಆಂತರ, ಬಾಹ್ಯ ' ಎಂದು ಎರಡು ಬಗೆಯಾಗಿರು

ವುದು. ಅವುಗಳಲ್ಲಿ ಯಾವುದು ಕಾರ್ಯಾತ್ಮನಾಪರಿಣಾಮವಾಗುವುದರಲ್ಲಿ ಯೋಗ್ಯತೆಯೆಂಬ ಶಕ್ತಿವಿಶೇಷವೊ ಅವೇ ಅಂತರಹೇತುವೆಂಬುದು. ಅವಕ್ಕೇ ಕಾರ್ಯದೊಡನೆ ಸಾಮಾನಾಧಿಕರಣ್ಯ ವಿರಬೇಕೆಂಬ ನಿಯಮವು. ಬಾಹ್ಯವಾದ ನಿಮಿತ್ತಾಪರನಾಮಕ ಹೇತುಮಾತ್ರಕ್ಕೂ ಅಲ್ಲ. ಹಾಗಲ್ಲದಿದ್ದರೆ — 'ದಣ್ಡಚಕ್ರತುರೀವೇಮ' ಮೊದಲಾದ ನಿಮಿತ್ತಕಾರಣಗಳಿಗೂ 'ಘಟ, ಪಟ' ಮೊದಲಾದ ಕಾರ್ಯಾಶ್ರಯಗಳಾದ 'ಮೃತ್ಪಿಂಡ, ತಂತು' ಮೊದಲಾದ ಉಪಾದಾನ ವೃತ್ತಿತ್ವದಿಂದಲೇ ಕಾರಣತ್ವವುಂಟಾದೀತು. ಆದುದರಿಂದ ಬಾಹ್ಯಕಾರಣಗಳಿಗೆ ಸಾಮಾನಾಧಿಕರಣ್ಯವಿರಬೇಕೆಂಬ ನಿಯಮವಿಲ್ಲವೆಂದು ಹೇಳಬೇಕು. ಪ್ರಕೃತದಲ್ಲಿ ನಿಮಿತ್ತವಾವುದೆಂದರೆ 'ಸ್ತ್ರೀತ್ವಾದಿ'. ಆದುದರಿಂದ ಇದಕ್ಕೆ ಕಾರ್ಯದೊಡನೆ ಸಾಮಾನಾಧಿಕರಣ್ಯ ನಿಯಮವಿಲ್ಲ. ಅತಿಪ್ರಸಕ್ತಿಯನ್ನಾದರೋ ಸಂಬಂಧವಶದಿಂದಲೇ ಪರಿಹರಿಸಬೇಕು. ಪ್ರಕೃತದಲ್ಲಿ ಸಂಬಂಧವು ವಾಚ್ಯವಾಚಕ ಭಾವರೂಪವೆಂದು ತಿಳಿಯಬೇಕು. ಮತ್ತು ಲೋಕದಲ್ಲಿ ಚಕ್ರಾದಿಸಾಮಗ್ರಿಗಳಿಂದ ಮೃದಾದಿಗಳಿಗೆ ಹೇಗೆ ವಿಕಾರವುಂಟಾಗುವುದೋ ಹಾಗೆ ಲಿಂಗಾದಿ ಸಾಮಗ್ರಿಗಳಿಂದ ಶಬ್ದಗಳಿಗೆ ವಿಕಾರವಿಲ್ಲವೆಂಬುದು ಶಬ್ದಗಳು ವೈಯ್ಯಾಕರಣರ ಮತದಲ್ಲಿ ನಿತ್ಯಗಳಾದುದರಿಂದಲೂ ಸಿದ್ಧಗಳಾದ ಶಬ್ದಗಳಿಗೇ ಪ್ರಕೃತಿಪ್ರತ್ಯಯವಿಭಾಗಪೂರ್ವಕಾನ್ವಾಖ್ಯಾನವೇ ವ್ಯಾಕರಣವೆಂದು ಪ್ರಾಚೀನರು ಅಂಗೀಕರಿಸುವುದರಿಂದಲೂ ತಿಳಿಯುವುದು. ಪ್ರಕ್ರಿಯಾಪ್ರತಿಪಾದನವಾದರೋ ಈ ಶಬ್ದಗಳು ಹೇಗೆ ಸಾಧುಗಳು ? ಎಂದು ವಿಚಾರಮಾಡುವ ಬಾಲಕರಿಗೆ ರೇಖಾಗವಪ್ರದರ್ಶನಮೂಲಕವಾಗಿ ಸತ್ಯಗವವನ್ನು ಬೋಧಿಸುವಂತೆ ಪ್ರಕೃತಿಪ್ರತ್ಯಯವಿಭಾಗಪರಿಕಲ್ಪನೆಯಿಂದ ಸಾಧುತ್ವವನ್ನು ತಿಳಿಸುವುದಕ್ಕೆ ಮಾಡಲ್ಪಟ್ಟಿದೆ ಎಂದು ತಿಳಿಯಬೇಕು.

ಆದರೆ ಲಿಂಗವು ಅರ್ಥಧರ್ಮವೆಂದು ಅಂಗೀಕರಿಸಲ್ಪಟ್ಟರೆ — ಈ ಶಬ್ದವು ಸ್ತ್ರೀಲಿಂಗವು, ಇದು ಪುಲ್ಲಿಂಗವು, ಇದು ನಪುಂಸಕಲಿಂಗವು ಎಂದು ಸಕಲ ಶಾಬ್ದಿಕಸಂಪ್ರದಾಯಸಿದ್ಧವಾದ ಸಾಮಾನಾಧಿಕರಣ್ಯವ್ಯವಹಾರ ವಿರುದ್ಧವಾಗುವುದು. ಮತ್ತು 'ಕಳತ್ರ, ದಾರ, ಸಜ್ಜನ' ಮೊದಲಾದ ಶಬ್ದಗಳು ಭಾಷೆಯಲ್ಲಿ ನಪುಂಸಕಲಿಂಗಗಳೆಂದು ಪ್ರಸಿದ್ಧವಾಗಿದ್ದರೂ ಅವುಗಳ ಅರ್ಥದಲ್ಲಿ ಸ್ತ್ರೀತ್ವವೇ ಪ್ರಸಿದ್ಧವಾಗಿರುವುದಲ್ಲದೆ ನಪುಂಸಕತ್ವವು ಇಲ್ಲ. ಹಾಗೆಯೇ ಸೂರ್ಯ, ಚಂದ್ರ ಮೊದಲಾದ ಕೆಲವು ಶಬ್ದಗಳೂ ಪುನ್ನಪುಂಸಕಗಳಾಗಿದ್ದರೂ ಅವುಗಳ ಅರ್ಥದಲ್ಲಿ ನಪುಂಸಕತ್ವವು ತೋರುವುದಿಲ್ಲ. ಹೀಗಿರಲು ಲಿಂಗವು ಶಬ್ದಧರ್ಮವೆಂದಂಗೀಕರಿಸಿದರೆ ಈ ಅನುಪಪತ್ತಿಗಳೆಲ್ಲಾ ಸಂಭವಿಸುವುದಿಲ್ಲ. ಶಬ್ದಗಳೇ ಏಕದ್ವಿತ್ರಿಲಿಂಗವುಳ್ಳುವಾದುದರಿಂದ ತದಧೀನಪ್ರಕ್ರಿಯಾವಿಷಯ ಗಳಾಗಿ ಪ್ರಯೋಗಿಸುವುದಕ್ಕೂ ಅವೇ ಅರ್ಹಗಳೆಂದು ಹೇಳಬೇಕು — ಎಂದು ಪುನಃ ಶಂಕೆ ಯುಂಟಾಗುವುದು. ಆದರೂ ಸರ್ವನಾಮಗಳಾದ 'ಅದು, ಇದು' ಮೊದಲಾದುವು ಬುದ್ಧಿಸ್ಥ ವಾಚಕಗಳೆಂದು ಪ್ರಸಿದ್ಧವಾಗಿರುವುವು. ಅಲ್ಲಿ ಯಾವಾಗ ಕಚಕುಚಾದಿ ಸ್ತ್ರೀವ್ಯಂಜನೋಪ ಲಕ್ಷಿತವಾದ ಅರ್ಥವು ಬುದ್ಧಿಗೆ ವಿಷಯವಾಗುವುದೋ ಆಗಲೇ 'ಅವಳ್, ಇವಳ್, ಆಕೆ, ಈಕೆ' ಎಂದು ಪ್ರಯೋಗಿಸಲ್ಪಡುವುದು. ಯಾವಾಗ ಶ್ಮಶ್ರುಕೂರ್ಚಾದಿ ಪುಂವ್ಯಂಜನೋಪಲಕ್ಷಿತಾರ್ಥವು ಬುದ್ಧಿಗೆ ವಿಷಯವಾಗುವುದೋ ಆಗ 'ಅವಂ, ಇವಂ, ಆತಂ, ಈತಂ' ಎಂದು ಪ್ರಯೋಗಿ ಸಲ್ಪಡುವುದು. ಯಾವಾಗ ತದುಭಯವ್ಯಂಜನವ್ಯತಿರಿಕ್ತ ಧರ್ಮೋಪಲಕ್ಷಿತಾರ್ಥವು ಬುದ್ಧಿಗೆ

ವಿಷಯವಾಗುವುದೋ ಆಗಲೆ 'ಅದು, ಇದು' ಎಂದು ಪ್ರಯೋಗಿಸಲ್ಪಡುವುದು. ಅಲ್ಲಿ ಶಬ್ದಗಳನ್ನು ಪ್ರಯೋಗಿಸುವವರ ಬುದ್ಧಿಯಲ್ಲಿ ಅಂತಹ ಅರ್ಥಗಳು ತೋರುವುದೇ ನಿಯಾಮಕವಾಗಿರುವುದು. ಆದುದರಿಂದ ಅರ್ಥಗತ ಸ್ತ್ರೀತ್ವಾದಿ ಧರ್ಮಗಳನ್ನು ಔಪಚಾರಿಕವಾಗಿ ಶಬ್ದಗಳಲ್ಲಿಯೂ ಅಂಗೀಕರಿಸಿ ಶಬ್ದಗಳಲ್ಲಿ ವಿಕಾರಗಳು ಬಂದಿವೆಯೆಂದು ಹೇಳಲು ಸರ್ವವ್ಯವಹಾರವೂ ಉಪಪನ್ನವಾಗುವುದು. ಇದು ಪುಲ್ಲಿಂಗ ಶಬ್ದವು ಇದು ಸ್ತ್ರೀಲಿಂಗ ಶಬ್ದವು ಎಂದು ಸಾಮಾನಾಧಿಕರಣ್ಯ ವ್ಯವಹಾರವಾದರೋ ವಾಚ್ಯಧರ್ಮಕ್ಕೆ ವಾಚಕದಲ್ಲಿ ಉಪಚಾರದಿಂದುಂಟಾಗಿರುವುದೆಂದು ತಿಳಿಯಬೇಕು. 'ಕಳತ್ರ, ದಾರ' ಮೊದಲಾದುವುಗಳಲ್ಲಿಯೂ ಕಳತ್ರಾದಿ ಪದಾರ್ಥಗಳಿಗೆ ಸ್ತ್ರೀತ್ವವೇ ನಿಯತವೆಂದು ಹೇಳುವುದಕ್ಕಾಗುವುದಿಲ್ಲ. ಪ್ರಪಂಚದಲ್ಲಿರುವ ಎಲ್ಲಾ ವಸ್ತುವೂ ಎಲ್ಲಾ ಲಿಂಗವುಳ್ಳುದು. ಆದರೆ ಅನಾದಿ ಪ್ರಯೋಗಬಲದಿಂದ ಕೆಲವು ಏಕಲಿಂಗಗಳು, ಕೆಲವು ದ್ವಿಲಿಂಗಗಳು, ಕೆಲವು ತ್ರಿಲಿಂಗಗಳು, ಎಂಬುದನ್ನು ತಿಳಿಯಬೇಕು. ಆದುದರಿಂದಲೇ **ಪತಂಜಲಿ** ಭಾಷ್ಯದಲ್ಲಿ '**ಲಿಂಗಮಶಿಷ್ಯಂ ಲೋಕಾಶ್ರಯತ್ವಾತ್**' ಎಂದು ಹೇಳಿ ಲೋಕಪ್ರಯೋಗದಿಂದಲೂ ಕೋಶಾದಿಗಳಿಂದಲೂ ಲಿಂಗನಿರ್ಣಯವನ್ನು ಮಾಡಿಕೊಳ್ಳಬೇಕಾಗಿರುವುದರಿಂದ ಲಿಂಗಾನುಶಾಸನ ಮಾಡುವುದು ವ್ಯರ್ಥವೆಂದು ಸೂಚಿಸಿರುವರು. ಅಮೋಘವೃತ್ತಿಕಾರರೂ —

**'ಸರ್ವಲಿಂಗಸಂಖ್ಯೇ ವಸ್ತುನಿ ಸ್ಯಾದ್ವಾದಮನುಪತತಿ ಮುಖ್ಯೋಪಚರಿತಾರ್ಥಾನುಪಾತಿನಿ ಚ ಶಬ್ದಾತ್ಮನಿ ರೂಢಿತಃ ತ್ರಲ್ಲಿಂಗಸಂಖ್ಯೋಪಾದಾನವ್ಯವಸ್ಥಾ ಅನುಸರ್ತವ್ಯಾಃ'**

ಎಂದು ಹೇಳಿರುವರು. ಇನ್ನು ಕೆಲವರು —

**'ಸ್ತನಕೇಶವತೀ ಸ್ತ್ರೀ ಸ್ಯಾತ್ ಲೋಮಶಃ ಪುರುಷಃ ಸ್ಮೃತಃ'**

ಮೊದಲಾದ ಪ್ರಮಾಣವನ್ನು ಲಿಂಗಜ್ಞಾನಕ್ಕೆ ಸಾಧಕವೆಂದು ಹೇಳುವರು. ಇದು ಅಚೇತನ ವಿಷಯದಲ್ಲಿ ಉಪಪನ್ನವಾಗುವುದಿಲ್ಲವಾದುದರಿಂದ ಪೂರ್ವೋಕ್ತ ವ್ಯವಸ್ಥೆಯಿಂದಲೇ ಲಿಂಗ ನಿರ್ಣಯವನ್ನು ಮಾಡಿಕೊಳ್ಳಬೇಕೆಂದು ತಿಳಿಯಬೇಕು.

ಹೀಗೆ ಈ ಲಿಂಗವು ಅರ್ಥಧರ್ಮವೆಂದು ಹೇಳಿರುವುದರಿಂದ — '**ಅರ್ಥವಲ್ಲಿಂಗಂ**' ಎಂಬ ಸೂತ್ರದಲ್ಲಿ ಹೇಳಿರುವ ಲಿಂಗವು ವಾಚಕಸಾಮಾನ್ಯದಲ್ಲಿಯೂ ಸಂಕೇತಿತವಾದುದೆಂದು ತಿಳಿಯಬೇಕು.

ಈ ಲಿಂಗವು ಸಾಮಾನ್ಯವಾಗಿ ಮೂರು ಬಗೆಯಾಗಿದ್ದರೂ ಶುದ್ಧ, ಮಿಶ್ರ, ಸಂಕೀರ್ಣ, ಉಪಸರ್ಜನ, ಆವಿಷ್ಟ, ಅವ್ಯಕ್ತ ಎಂದು ಆರು ಬಗೆಯಾಗಿರುವುದು. ಅವುಗಳಲ್ಲಿ ನಿಯತೈಕ ಸಂಸ್ಕಾರೋಪಗ್ರಾಹಿಲಿಂಗವೇ ಶುದ್ಧವೆಂಬುದು. ಇದು ಸ್ತ್ರೀಲಿಂಗ, ಪುಲ್ಲಿಂಗ, ನಪುಂಸಕಲಿಂಗವೆಂದು ಮೂರು ಬಗೆಯಾಗಿರುವುದು. ಅವುಗಳಲ್ಲಿ — 'ಅಕ್ಕನಿವಳ್, ತಂಗಿಯೀಕೆ' ಮೊದಲಾದುವು ಸ್ತ್ರೀಲಿಂಗವೆಂತಲೂ 'ಅಣ್ಣನಿವಂ, ತಮ್ಮನೀತಂ' ಮೊದಲಾದುವು ಪುಲ್ಲಿಂಗವೆಂತಲೂ, 'ನೆಲನಿದು, ಪೊಲನಿದು' ಮೊದಲಾದುವು ನಪುಂಸಕಲಿಂಗವೆಂತಲೂ ತಿಳಿಯಬೇಕು. ಸಂಸ್ಕಾರದ್ವಯೋಪಗ್ರಾಹಿಯಾದುದು ಮಿಶ್ರಲಿಂಗವು. ಅದೂ — ಸ್ತ್ರೀಪುಂಸಲಿಂಗವೆಂತಲೂ ಸ್ತ್ರೀನಪುಂಸಕಲಿಂಗವೆಂತಲೂ ಪುನ್ನಪುಂಸಕಲಿಂಗವೆಂತಲೂ ಮೂರು ಬಗೆಯಾಗಿರುವುದು. ಅದರಲ್ಲಿ 'ತೊಟ್ಟಿವಳ್, ತೊಟ್ಟೀತಂ' ಮೊದಲಾದುವು ಸ್ತ್ರೀಪುಂಸಲಿಂಗವೆಂತಲೂ 'ದೇವತೆ ಇವಳ್, ದೇವತೆ ಇದು'

ಮೊದಲಾದುವು ಸ್ತ್ರೀನಂಪುಸಕಲಿಂಗವೆಂತಲೂ 'ಸೂರ್ಯನೀತಂ, ಸೂರ್ಯನಿದು' ಮೊದಲಾದುವು ಪುನ್ನಪುಂಸಕಲಿಂಗವೆಂತಲೂ ತಿಳಿಯುವುದು. ಸಂಸ್ಕಾರತ್ರಯೋಪಗ್ರಾಹಿಯಾದುದು ಸಂಕೀರ್ಣಲಿಂಗವು. ಇದು ಒಂದೇ ಬಗೆಯಾಗಿರುವುದು. ಅದಾವುದೆಂದರೆ 'ದೈವತಮಿವಳ್, ದೈವತಮಿಾತಂ, ದೈವತಮಿದು' ಮೊದಲಾದುವೆಂದು ತಿಳಿಯಬೇಕು. ವಿಶೇಷಣವಾಗಿ ವಿಶೇಷ್ಯ ಲಿಂಗಾಯತ್ತಸಂಸ್ಕಾರೋಪಗ್ರಾಹಿಯಾದುದು ಉಪಸರ್ಜನಲಿಂಗವು. ಇದು — ಸ್ತ್ರೀಲಿಂಗ, ಪುಲ್ಲಿಂಗ, ನಪುಂಸಕಲಿಂಗ, ಸ್ತ್ರೀಪುಂಸಲಿಂಗ, ಸ್ತ್ರೀನಪುಂಸಕಲಿಂಗ, ಪುನ್ನಪುಂಸಕಲಿಂಗ, ಸ್ತ್ರೀಪುನ್ನಪುಂಸಕಲಿಂಗವೆಂದು ಏಳು ಬಗೆಯಾಗಿರುವುದು. ಅವುಗಳಲ್ಲಿ — 'ಇನಿಯಳ್ ಕಾದಲೆ, ಇನಿಯಳ್ ಅಂಗನೆ' ಮೊದಲಾದುವು ಮೊದಲನೆಯದಕ್ಕೂ 'ಇನಿಯಂ ಕಾದಲಂ, ಇನಿಯಂ ಕಾಂತಂ' ಮೊದಲಾದುವು ಎರಡನೆಯದಕ್ಕೂ 'ಇನಿದು ಘೃತಂ, ಇನಿದು ಪಾಲ್' ಮೊದಲಾದುವು ಮೂರನೆಯದಕ್ಕೂ 'ಕಿಱಿಯಳ್ ತೊೞ್ತು, ಕಿಱಿಯಂ ತೊೞ್ತು' ಮೊದಲಾದುವು ನಾಲ್ಕನೆಯದಕ್ಕೂ 'ಬೆಟ್ಟಿದಳ್ ದೇವತೆ, ಬೆಟ್ಟಿತು ದೇವತೆ' ಮೊದಲಾದುವು ಅಯ್ದನೆಯದಕ್ಕೂ 'ಪಿರಿಯಂ ಸೂರ್ಯಂ, ಪಿರಿದು ಸೂರ್ಯಂ' ಮೊದಲಾದುವು ಆರನೆಯದಕ್ಕೂ 'ಒಳ್ಳಿದಳ್ ದೈವತಂ, ಒಳ್ಳಿದಂ ದೈವತಂ, ಒಳ್ಳಿತು ದೈವತಂ' ಮೊದಲಾದುವು ಏಳನೆಯದಕ್ಕೂ ಉದಾಹರಣೆಗಳಾಗಿರುವುವು. ವಿಶೇಷಣವಾಗಿದ್ದರೂ ವಿಶೇಷ್ಯಲಿಂಗಕ್ಕೆ ಅನಧೀನವಾಗಿ ನಿಯತಸಂಸ್ಕಾರೋಪಗ್ರಾಹಿಯಾದುದು ಆವಿಷ್ಟ ಲಿಂಗವೆಂಬುದು. ಅದು ಸ್ತ್ರೀಲಿಂಗ, ಪುಲ್ಲಿಂಗ, ನಪುಂಸಕಲಿಂಗ ಭೇದಗಳಿಂದ ಮೂರು ಬಗೆಯಾಗಿರುವುದು. ಇದಕ್ಕೆ ಕ್ರಮವಾಗಿ — 'ಅರಸಂ ಜಗಕ್ಕೆ ತಾಯ್, ಗುರುವೆ ಜಗಕ್ಕೆ ಮಾತೆ; ಸತ್ಯಮೇ ತಂದೆ, ಸ್ವೈರಣೆಯೇ ಬಂಧು; ಈಯೆಡೆಯೊಳೆಮಗೆ ಗುರುವೆ ಪ್ರಮಾಣಂ, ಅಂಗನೆ ಮದನನ ಕೈಪಿಡಿ' ಮೊದಲಾದುವು ಉದಾಹರಣೆಗಳೆಂದು ತಿಳಿಯಬೇಕು. ಲಿಂಗಾಯತ್ತವಾದ ಸಂಸ್ಕಾರಾನುಪಗ್ರಾಹಿಯಾದುದು ಅವ್ಯಕ್ತಲಿಂಗವೆನಿಸಿಕೊಳ್ಳುವುದು. ಇದರಲ್ಲಿ ಯಾವ ಭೇದವೂ ಇಲ್ಲ. ಇದಕ್ಕೆ 'ನೀಂ ತಾಯ್, ನೀಂ ಮಗಳ್, ನೀಂ ತಂದೆ, ನೀಂ ಮಗಂ, ನೀಂ ಮರಂ, ನೀಂ ಗಿಡು' ಮೊದಲಾದುವು ಉದಾಹರಣೆಗಳಾಗಿರುವುವು.

ಹೀಗೆ ಸಾಮಾನ್ಯವಾಗಿ ಲಿಂಗವು ಒಂದು ಬಗೆಯಾಗಿದ್ದರೂ ಪರಾಪರವ್ಯವಹಾರವಶದಿಂದ ಮೊದಲು ಸಾಮಾನ್ಯವಾಗಿ ಮೂರು ಬಗೆಯಾಗಿರುವುದು. ಮಧ್ಯಮ ಪಕ್ಷದಲ್ಲಿ ಆರು ಬಗೆಯಾಗುವುದು. ಇನ್ನೂ ವಿಸ್ತರಿಸಲು ಹದಿನೆಂಟು ಭೇದಗಳಾದರೂ ಅಲ್ಲೆಲ್ಲಾ ಸ್ತ್ರೀಪುನ್ನಪುಂಸಕರೂಪ ತ್ರಿಭೇದಾವಲಂಬನವೇ ಇರುವುದೆಂದು ಆ ಮೂರರ ಸ್ವರೂಪವನ್ನೇ ಈ ಶಾಸ್ತ್ರದಲ್ಲಿ ನಿರೂಪಿಸಲುದ್ಯುಕ್ತನಾಗಿ ಮೊದಲು ಸ್ತ್ರೀಲಿಂಗಸ್ವರೂಪವನ್ನು ನಿರೂಪಿಸಿರುವನು.

ಯದ್ಯಪಿ ಸಂಸ್ಕೃತದಲ್ಲಿ ಸ್ತ್ರೀವ್ಯಂಜನರಹಿತಗಳಾದ 'ಕುಟೀ, ಕುಂಭೀ' ಮೊದಲಾದ ಅಚೇತನಗಳೂ ಸ್ತ್ರೀಲಿಂಗಗಳೆಂದು ವ್ಯವಹರಿಸುವರು. ಹೀಗೆಯೇ ಪುಂವ್ಯಂಜನರಹಿತಗಳಾದ 'ಸ್ತಂಭ,ಕುಂಭ' ಮೊದಲಾದುವುಗಳೂ ಪುಲ್ಲಿಂಗಗಳಾಗಿರುವುವು. ಆದಾಗ್ಯೂ ಅಲ್ಲಿ ಲಿಂಗವ್ಯವಸ್ಥೆಯು ಎಲ್ಲಾ ವಸ್ತುಗಳೂ ಸತ್ವರಜಸ್ತಮೋರೂಪಗುಣತ್ರಯಾತ್ಮಕಗಳಾದುದರಿಂದ ಅವುಗಳ ಉಪಚಯಾಪಚಯ ಸಮತಾಭೇದಗಳಿಂದ ಮಾಡಲ್ಪಡಬೇಕೆಂದು **ಪತಂಜಲಿ** ಮಹಾಭಾಷ್ಯದಲ್ಲಿ ಹೇಳಿರುವುದರಿಂದ ಅಚೇತನಗಳಲ್ಲಿಯೂ ಸ್ತ್ರೀತ್ವಾದಿಗಳುಂಟೆಂದು ತಿಳಿಯಬೇಕು. ಭಾಷೆಯಲ್ಲಾದರೋ

ತತ್ತದ್ವ್ಯಂಜನೋಪಲಕ್ಷಿತಾರ್ಥವಾಚಕಗಳೇ ತತ್ತಲ್ಲಿಂಗಗಳೆಂದು ತಿಳಿಯಬೇಕು. ಆದುದರಿಂದ 'ನಾರಿ' ಮೊದಲಾದುವು ಸ್ತ್ರೀಲಿಂಗಕ್ಕೆ ಉದಾಹರಣೆಗಳು. ಇಲ್ಲಿ 'ನಾರಿ' ಮೊದಲಾದುವುಗಳಿಗೆ ಸ್ತ್ರೀತ್ವದ್ಯೋತನಾರ್ಥವಾಗಿಯೇ 'ಕೂರ್ತಳ್' ಮೊದಲಾದ ಕ್ರಿಯಾಪದಗಳನ್ನು ಉದಾಹರಣೆಯಲ್ಲಿ ಪ್ರಯೋಗಿಸಿರುವುದೆಂದು ತಿಳಿಯಬೇಕು.

**ಅವತಾರಿಕೆ ೧೦೩**

ಸ್ತ್ರೀವಾಚಕಕ್ಕೆ ಸ್ತ್ರೀಲಿಂಗಸಂಜ್ಞೆಯನ್ನು ಹೇಳಿ ಪುಂವಾಚಕಕ್ಕೆ ಪುಲ್ಲಿಂಗಸಂಜ್ಞೆಯನ್ನು ಹೇಳುತ್ತಾನೆ.

**ಸೂತ್ರಂ || ಪುಮಾನ್ ಪುಮರ್ಥಃ || ೧೦೩ ||**

**ಅರ್ಥ || ಪುರುಷವಾಚಕ ಶಬ್ದಗಳು ಪುಲ್ಲಿಂಗಗಳಾಗುತ್ತವೆ.**

**ಉದಾಹರಣೆ ||** ಮದನನೆಚ್ಚಂ, ಕಾಮಿ ನೊಂದಂ, ಬಿದಿ ಸೃಜಿಸಿದಂ, ಜನಂ ಜಗಮನುದ್ಧರಿಸಿದಂ, ಸುರರ್ ಪೂವಲೆಗಳಿರ್ದರ್ || ಮೊದಲಾದುವು ಇದಕ್ಕೆ ಲಕ್ಷ್ಯಗಳು. '**ಅತೀತೋಽತಂ ಪುಂಸ್ತ್ವದ್ವಿದೂದೋಃ** || ೧೬೨ ||' ಮೊದಲಾದ ಪುಂಪದವುಳ್ಳ ಸೂತ್ರಗಳಲ್ಲಿ ಪುಂಪದಕ್ಕೆ ಪುಂವಾಚಕ ಶಬ್ದವೆ ಅರ್ಥವೆಂದು ತಿಳಿಯಬೇಕು.

**ವಿಚಾರ ೧೦೩**

ಈ ಸೂತ್ರದಲ್ಲಿ 'ಪುಮಾನ್, ಪುಮರ್ಥಃ' ಎಂದು ಎರಡು ಪದಗಳಿರುವುವು. 'ಪುಮರ್ಥಃ' ಎಂಬುದು 'ಪುಮಾನ್ ಅರ್ಥಃ ಯಸ್ಯ ಸಃ' ಎಂದು ಬಹುವ್ರೀಹಿಸಮಾಸವು. ಅಲ್ಲಿ 'ಪುಮಾನ್' ಎಂದರೆ ಪುಂವ್ಯಂಜನೋಪಲಕ್ಷಿತವಾದ ಅರ್ಥವು. ಅದೇ 'ಅರ್ಥಃ' ಎಂದರೆ ಅಭಿಧೇಯವಾಗುಳ್ಳುದು ಪುಮರ್ಥವೆನಿಸಿಕೊಳ್ಳುವುದು. ಎಂದರೆ ಪುಂವಾಚಕಶಬ್ದವೆಂದು ತಾತ್ಪರ್ಯವಾಗುವುದು. ಆದುದರಿಂದ ಅಂತಹ ಪುಂವಾಚಕಶಬ್ದವು ಪುಲ್ಲಿಂಗವೆಂದು ವ್ಯವಹರಿಸಲ್ಪಡಬೇಕೆಂದು ಸೂತ್ರಾರ್ಥವಾಗುವುದು. ಇದರಿಂದಲೇ ಉದಾಹರಣೆಗಳಲ್ಲಿ 'ಮದನನೆಚ್ಚಂ' ಮೊದಲಾದ ಪುಂವಾಚಕಶಬ್ದಗಳೆ ಉದಾಹರಿಸಲ್ಪಟ್ಟಿರುವುವು.

ಆದರೆ ಈ ಸೂತ್ರವನ್ನೂ ಪೂರ್ವಸೂತ್ರವನ್ನೂ ಸೇರಿಸಿ – '**ಸ್ತ್ರೀಪುಮರ್ಥೌ ಸ್ತ್ರೀಪುಮಾಂಸೌ**' ಎಂದು ಒಂದೇ ಸೂತ್ರವನ್ನು ಮಾಡಿ ಒಂದು 'ಅರ್ಥ' ಶಬ್ದವನ್ನು ಬಿಡುವುದರಿಂದ ಲಾಘವವಿದ್ದರೂ ಪ್ರಥಕ್ಸೂತ್ರವನ್ನು ಮಾಡಿರುವ **ಸೂತ್ರಕಾರನಿಗೆ** — '**ಸ್ತ್ರ್ಯರ್ಥಏವಃ ಸ್ತ್ರೀ, ಪುಮರ್ಥಃ ಏವ ಪುಮಾನ್**' ಎಂದು ಸಾವಧಾರಣ ವ್ಯಾಖ್ಯಾನಮಾಡುವುದರಿಂದ ಇತರ ವ್ಯವಚ್ಛೇದವುಂಟಾಗುವುದೆಂದು ತಾತ್ಪರ್ಯವನ್ನು ಕಲ್ಪಿಸಬೇಕು. ಹೀಗೆ ಕಲ್ಪಿಸಲು — '**ಸ್ತ್ರ್ಯರ್ಥಃ ಸ್ತ್ರ್ಯೇವ, ಪುಮರ್ಥಃ ಪುಮಾನೇವ**' ಎಂದು ವಿಧೇಯದಲ್ಲಿ ಏವಕಾರಸಂಬಂಧ ಮಾಡಿ ಇತರ ಲಿಂಗಕ್ಕೆ ವ್ಯಾವೃತ್ತಿಯಿಲ್ಲವೆಂದು ತಿಳಿಯಬೇಕು. ಆದುದರಿಂದ ಸ್ತ್ರೀಪುಂವಾಚಕಗಳಿಗೆ ಲಿಂಗಾಂತರವೂ ಇರುವುದೆಂದು ಮುಂದೆ ಹೇಳುವುದು ಉಪಪನ್ನವಾಗುವುದು.

**ಅವತಾರಿಕೆ ೧೦೪**

ಹೀಗೆಯೇ ನಪುಂಸಕ ಲಕ್ಷಣವನ್ನೂ ಹೇಳುತ್ತಾನೆ.

**ಸೂತ್ರಂ || ನಬನ್ಯತ್ || ೧೦೪ || ***

**ಅರ್ಥ || ಸ್ತ್ರೀಪುರುಷವಾಚಕವಲ್ಲದುದು ನಪುಂಸಕಲಿಂಗವಾಗುವುದು.**

**ಉದಾಹರಣೆ ||** ಮಲ್ಲಿಗೆ ಮುಗುಳ್ತುದು, ಮಾವು ಪೂತುದು, ಪಿಶಾಚಂ ಪಿಡಿಸಿತ್ತು, ಭೂತಂ ಪಿಡಿದುದು|| ಮೊದಲಾದುವು ಇದಕ್ಕೆ ಉದಾಹರಣೆಗಳು. **'ನಪ್ಯಮಿ ಚ ಬಹುಲಂ ||೨೫೯||'** ಮೊದಲಾದ ನಪ್-ಪದವುಳ್ಳ ಸೂತ್ರಗಳಲ್ಲಿ ' ನಪ್ ' ಎಂಬ ಪದಕ್ಕೆ ಸ್ತ್ರೀಪುರುಷವಾಚಕವಲ್ಲದ ಶಬ್ದಗಳೇ ಅರ್ಥವೆಂದು ತಿಳಿಯಬೇಕು.

**ವಿಚಾರ ೧೦೪**

ಈ ಸೂತ್ರದಲ್ಲಿ — ' ನಪ್, ಅನ್ಯತ್ ' ಎಂದು ಎರಡು ಪದಗಳಿರುವುವು. ' ಅನ್ಯತ್ ' ಎಂಬುದು ಸಾಪೇಕ್ಷಕವಾದುದರಿಂದ ಪೂರ್ವದಲ್ಲಿ ಉಪಸ್ಥಿತಗಳಾದ ಸ್ತ್ರೀಪುರುಷರಿಗಿಂತ ಅನ್ಯವಾದ ಪದಾರ್ಥವೆಂದರ್ಥವು. ತದ್ವಾಚಕ ಶಬ್ದವು ನಪುಂಸಕಲಿಂಗವಾಗುವುದೆಂದು ಸೂತ್ರಾರ್ಥವು ಫಲಿತವಾಗುವುದು. ಆದುದರಿಂದ ಉದಾಹರಣೆಯಲ್ಲಿ ಕೊಟ್ಟಿರುವ ಪ್ರಯೋಗಗಳು ನಪುಂಸಕ ಲಿಂಗವೆಂದು ತಿಳಿಸುವುದಕ್ಕಾಗಿ ಅಲ್ಲಿ ' ಮುಗುಳ್ತುದು ' ಮೊದಲಾದ ಕ್ರಿಯಾಪದಗಳನ್ನು ಪ್ರಯೋಗಿಸಿರುವುದು.

ಶಾಸ್ತ್ರದಲ್ಲಿ ಉದ್ದೇಶ್ಯವಿಧೇಯಭಾವಗಳನ್ನು ಹೇಳಬೇಕಾದರೆ ಮೊದಲು ಉದ್ದೇಶ್ಯವಾಚಕ ಪದವನ್ನೂ ಆಮೇಲೆ ವಿಧೇಯವಾಚಕಪದವನ್ನೂ ಉಚ್ಚರಿಸಬೇಕೆಂಬ ನಿಯಮವು —

' ಯಚ್ಛಬ್ದಯೋಗಃ ಪ್ರಾಥಮ್ಯಮಿತ್ಯಾದ್ಯುದ್ದೇಶ್ಯ ಲಕ್ಷಣಂ '

ಇತ್ಯಾದಿ ಪ್ರಾಚೀನ ವಚನನಿಚಯದಿಂದ ತಿಳಿದುಬರುವುದು. ಮತ್ತು ಸಕಲ **ಸೂತ್ರಕಾರರ** ಶೈಲಿಯೂ ಹಾಗೆಯೇ ಇರುವುದು. ಆದರೆ ಕೆಲವು ಸೂತ್ರಗಳಲ್ಲಿ ಪ್ರಯೋಜನಾಂತರವನ್ನು ಬೋಧಿಸಲು ಪೌರ್ವಾಪರ್ಯವನ್ನು ಅತಿಕ್ರಮಿಸಿ ಉಚ್ಚರಿಸುವರು. ಈ ಪದ್ಧತಿಯು **ಪಾಣಿನ್ಯಾದಿ ಸೂತ್ರಕಾರರ** ಮತದಲ್ಲಿಯೂ ಉಂಟು. ಆ ಆ ಶಾಸ್ತ್ರಪರ್ಯಾಲೋಚನೆಯಿಂದಲೇ ತಿಳಿದುಕೊಳ್ಳ ಬೇಕು. ಪ್ರಕೃತದಲ್ಲಿ **' ಸ್ತ್ರ್ಯರ್ಥಃ ಸ್ತ್ರೀ '** ಎಂಬ ಸೂತ್ರದಲ್ಲಿ ಸ್ತ್ರೀವಾಚಕಕ್ಕೆ ಸ್ತ್ರೀಲಿಂಗತ್ವವು ವಿಧಿಸಲ್ಪಡುವುದರಿಂದ ' ಸ್ತ್ರ್ಯರ್ಥಃ ' ಎಂಬುದು ಉದ್ದೇಶ್ಯವಾಚಕವಾಗಿರುವುದು. ಆದುದರಿಂದ ಈ ಸೂತ್ರದಲ್ಲಿ ಅದಕ್ಕೆ ಪ್ರಥಮೋಚ್ಚಾರಣೆಯು ಉಚಿತವಾಗಿಯೇ ಇರುವುದು. ಇದರಂತೆ ' ಪುಮರ್ಥಃ ಪುಮಾನ್, ಅನ್ಯನ್ನಪ್ ' ಎಂದು ಉದ್ದೇಶ್ಯವಾಚಕಕ್ಕೆ ಪ್ರಥಮೋಚ್ಚಾರಣೆಯನ್ನು ಮಾಡಬೇಕಾ ಗಿದ್ದರೂ ಆ ಮರ್ಯಾದೆಯನ್ನುಲ್ಲಂಘಿಸಿ ' ಪುಮಾನ್ಪುಮರ್ಥಃ, ನಬನ್ಯತ್ ' ಎಂದು ವ್ಯತ್ಯಸ್ತವಾಗಿ ಉಚ್ಚರಿಸುವುದಕ್ಕೆ ಇನ್ನಾವ ಪ್ರಯೋಜನವೂ ಇಲ್ಲವಾದುದರಿಂದ ಈ ಸೂತ್ರಗಳನ್ನು ' ಪುಮರ್ಥಃ ಪುಮಾನ್, ಅನ್ಯನ್ನಪ್ ' ಎಂದು ಪಾಠ ಮಾಡುವುದೇ ಉಚಿತವೆಂದು ತೋರುವುದು.

ಆದರೆ ಈ ಪ್ರಕರಣದಲ್ಲಿ ಹಿಂದೆ ' ಸ್ತ್ರ್ಯರ್ಥಃ ಸ್ತ್ರೀ, ಪುಮಾನ್ ಪುಮರ್ಥಃ ' ಎಂದು ಹೇಳಿರು ವಂತೆ ' ನಬರ್ಥೋ ನಪ್ ' ಎಂದು ಹೇಳದೆ ' ನಬನ್ಯತ್ ' ಎಂದು ಹೇಳಿರುವುದರಿಂದ ' ಘಟ, ಪಟ, ನೆಲ, ಪೊಲ ' ಮೊದಲಾದ ಅಚೇತನಗಳಿಗೆ ನಪುಂಸಕ ವ್ಯಂಜನೋಪಲಕ್ಷಿತತ್ವವಿಲ್ಲದಿದ್ದರೂ ನಪುಂಸಕಲಿಂಗವ್ಯವಹಾರಕ್ಕೆ ವಿಷಯಗಳಾಗುವುವು — ಎಂದು ತಿಳಿಯುವುದು.

*[ ' ಅನ್ಯನ್ನಪ್ ' ಎಂಬ ಪಾಠಾಂತರವನ್ನು ಈ ಗ್ರಂಥದ ಮೊದಲನೆಯ ಆವೃತ್ತಿಯಲ್ಲಿ ಕೊಟ್ಟಿದೆ.—ಸಂ. ]

ಈ ವಿಷಯದಲ್ಲಿ ದರ್ಪಣಕಾರನು —

ನೀನದಂ ಕರ್ಣಾಟಕದೊಳ್
ಪೇನಂ ಸ್ತ್ರೀಪುಂನಪುಂಸಕೋಭಯ ಪುಂಸ್ತ್ರೀ
ಸ್ತ್ರೀನಪ್ಸಮಸ್ತವಾಚ್ಯಾ
ನೂನಾವ್ಯಯಮೆಂದು ಲಿಂಗಮೊಂಬತ್ತು ತೆಱಂ (ಸೂತ್ರ ೮೮)

ಎಂಬ ಸೂತ್ರದಿಂದ 'ಒಂಬತ್ತು ತೆಱ' ಎಂದು ಸೂಚಿಸಿ ಅವುಗಳಲ್ಲಿ ಪುಲ್ಲಿಂಗ, ಸ್ತ್ರೀಲಿಂಗ, ನಪುಂಸಕಲಿಂಗಗಳಿಗೆ —

ಪುರುಷರೆ ಪುಲ್ಲಿಂಗಂ ಸ್ತ್ರೀ
ಯರೆ ತಾಂ ಸ್ತ್ರೀಲಿಂಗಮುಳಿದುವೆಲ್ಲಂ ನಪ್ಪಾ
ಗಿರೆ ಸಲ್ಗುಂ ಕನ್ನಡದೊಳ್
ಪರಿವರ್ತಿಸವುಱಂದ ಲಿಂಗಮೊಳವಾಗಿದ್ದುಂ ೯೦

ಎಂಬ ಸೂತ್ರದಿಂದ ಲಕ್ಷಣವನ್ನು ಹೇಳಿ ಇವುಗಳ ಪರಸ್ಪರಮೇಳನದಿಂದ — 'ಪುನ್ನಪುಂಸಕ, ಪುಂಸ್ತ್ರೀ, ಸ್ತ್ರೀನಪ್' ತ್ರಿವಿಧ ಲಿಂಗಗಳಾಗುವುವೆಂದು ತಿಳಿದು ಅವಕ್ಕೆ ಬೇರೆ ಲಕ್ಷಣವನ್ನು ಹೇಳದೆ ವಾಚ್ಯಲಿಂಗಕ್ಕೂ ಅವ್ಯಯಲಿಂಗಕ್ಕೂ —

ಬಗೆ ನೀನಾನ್‌ತಾನೆಂಬು
ಕ್ತಿಗಳುಂ ಗುಣವಚನ ಸರ್ವನಾಮ ಬಹುವ್ರೀ
ಹಿಗಳುಂ ಕೃತ್ತದ್ಧಿತಸಂ
ಖ್ಯೆಗಳುಂ ಸಲೆ ವಾಚ್ಯಲಿಂಗಮೆಂದೀ ಕ್ರಮದಿಂ (ಸೂತ್ರ ೮೯)

ದೊರೆವಡೆದವ್ಯಯಲಿಂಗಂ
ಸರಿ ಸರ್ವವಿಭಕ್ತಿಗಂ ತ್ರಿಲಿಂಗಕ್ಕಂ ತಾಂ
ಸರಿ ವಚನತ್ರಿತಯಕ್ಕಂ
ಸರಿಯೆನಿಸಿ ವಿಕಾರಮಿಲ್ಲದರ್ಥಮನೀಗುಂ (ಸೂತ್ರ ೯೦)

ಎಂಬ ಸೂತ್ರಗಳಿಂದ ಲಕ್ಷಣವನ್ನು ಹೇಳಿರುವನು. ಇಲ್ಲ 'ನೀನ್, ಆನ್, ತಾನ್' ಎಂಬಿವನ್ನು ವಾಚ್ಯಲಿಂಗದಲ್ಲಿ ಸೇರಿಸಿರುವನು. ಆದರೆ ಇವುಗಳಿಗೆ ಲಿಂಗಪ್ರಯುಕ್ತವಾದ ವಿಕಾರಗಳಾವುವೂ ಇಲ್ಲವಾದುದರಿಂದ ಇವನ್ನು ಅಲಿಂಗವೆಂದೇ ಹೇಳಬೇಕು. ಆದುದರಿಂದಲೇ **ಶಾಸನಕಾರನು**— 'ನಿನೆನ್‌ತನಲಿಂಗಂ ॥ ೧೧೪ ॥' ಎಂಬ ಸೂತ್ರದಿಂದ ಇವುಗಳಿಗೆ ಅಲಿಂಗತ್ವವನ್ನೇ ಹೇಳಿರುವನು. **ದರ್ಪಣಕಾರನು** ಇವು ಸರ್ವಲಿಂಗಕ್ಕೂ ವಿಶೇಷಣವಾಗುವುದರಿಂದ ವಾಚ್ಯಲಿಂಗವೆಂದು ವ್ಯವಹರಿಸಲ್ಪಡುವುವೆಂಬ ತಾತ್ಪರ್ಯದಿಂದ ಹೇಳಿರುವನೆಂದು ತಿಳಿಯಬೇಕು. ಹೀಗೆಯೇ ಅವ್ಯಯಗಳೂ ಆಗಿರುವುದರಿಂದ ಅವೂ ಅಲಿಂಗಗಳೆಂದೇ ವ್ಯವಹರಿಸಲ್ಪಡುವುವು. ಆದುದರಿಂದಲೇ ಪ್ರಾಚೀನರು —

**ಸದೃಶಂ ತ್ರಿಷು ಲಿಂಗೇಷು ಸರ್ವಾಸು ಚ ವಿಭಕ್ತಿಷು**
**ವಚನೇಷು ಚ ಸರ್ವೇಷು ಯನ್ನವ್ಯೇತಿ ತದವ್ಯಯಂ**

ಎಂದು ಹೇಳಿರುವ ಶ್ಲೋಕದಿಂದ ಅವ್ಯಯಗಳು ಯಾವ ವಿಕಾರವನ್ನೂ ಹೊಂದದೆ ಇರುವುದರಿಂದ ಇವು ಅವ್ಯಯಗಳೆಂದು ವ್ಯವಹರಿಸಲ್ಪಡುವುವೆಂದು ಸೂಚಿತವಾಗುವುದು. ಇದೇ ಅರ್ಥ

ವನ್ನು **ದರ್ಪಣಕಾರನು** ' ದೊರೆವಡೆವವ್ಯಯಲಿಂಗಂ ' ಮೊದಲಾದ ಸೂತ್ರದಿಂದ ಸೂಚಿಸಿರುವನು.

**ಅವತಾರಿಕೆ ೧೦೫**

ಪೂರ್ವೋಕ್ತವಾದ ಸ್ತ್ರೀಲಿಂಗಾದಿ ಲಕ್ಷಣಗಳಿಗೆ ಅತಿಪ್ರಸಕ್ತಿಯುಂಟಾಗಲು ತದ್-ವಾರಣಾರ್ಥವಾಗಿ ಹೇಳುತ್ತಾನೆ.

**ಸೂತ್ರಂ || ಕಲತ್ರಾದಯಃ || ೧೦೫ ||**

**ಅರ್ಥ || ಕಲತ್ರ ಮೊದಲಾದ ಶಬ್ದಗಳು ನಪುಂಸಕಲಿಂಗಗಳಾಗುತ್ತವೆ.**

**ಉದಾಹರಣೆ ||** ಕಲತ್ರಮೊಳಿತ್ತು ಕೂಸು ಸೊಗಯಿಸಿತ್ತು, ಗೃಹಂ ಬಂದುದು, ಮೊದಲಾದ ಕಲತ್ರಾದಿ ಗಣಪಠಿತವಾದ ಶಬ್ದಗಳು ಇದಕ್ಕೆ ಲಕ್ಷ್ಯಗಳು. ಈ ಗಣಪಠಿತಶಬ್ದಗಳಾವುವೆಂದರೆ — ' ' ಕಳತ್ರ, ದಾರ, ಗೃಹ, ಅಪತ್ಯ, ತೋಕ, ಶಿಶು, ಕೂಸು, ಪಸುಳೆ, ಮಗು* ' ಮೊದಲಾದುವು. ಇದು ಆಕೃತಿಗಣವಾದುದರಿಂದ ಏತತ್-ಸಜಾತೀಯವಾದ ಸೂತ್ರಾಂತರವಿಷಯದ ಶಬ್ದಗಳನ್ನೂ ಪ್ರಯೋಗಾನುಸಾರವಾಗಿ ಈ ಗಣದಲ್ಲಿ ಪಾಠಮಾಡಿಕೊಂಡು ಲಿಂಗವನ್ನು ಹೇಳಬೇಕೆಂದು ತಾತ್ಪರ್ಯವು.

**ವಿಚಾರ ೧೦೫**

ಈ ಸೂತ್ರದಲ್ಲಿ ' ಕಲತ್ರಾದಯಃ ' ಎಂದು ಒಂದೇ ಪದವಿರುವುದು. ಪೂರ್ವಸೂತ್ರದಿಂದ ' ನಪ್ ' ಎಂಬುದು ಅನುವರ್ತಿಸಲ್ಪಡುವುದು. ' ಕಲತ್ರಾದಯಃ ' ಎಂದರೆ ' ಕಲತ್ರ ' ಶಬ್ದವೇ ಮೊದಲಾದ ಕೆಲವು ಶಬ್ದಗಳು ' ನಪ್ ' ನಪುಂಸಕಲಿಂಗಗಳಾಗುತ್ತವೆ, ಎಂದು ಸೂತ್ರಾರ್ಥವಾಗುವುದು. ಇಲ್ಲಿ ಪಠಿತವಾಗಿರುವ ' ಕಲತ್ರ, ದಾರ, ಗೃಹ ' ಶಬ್ದಗಳು ಸ್ತ್ರೀವಾಚಕಗಳಾದುದರಿಂದ ಪ್ರಾಪ್ತವಾದ ಸ್ತ್ರೀತ್ವವನ್ನು ಬಾಧಿಸಲು ಅದನ್ನು ಪಾಠಮಾಡಿರುವುದು ಸಂಗತವಾಗಿರುವುದು. ಅಪತ್ಯಾದಿ ಶಬ್ದಗಳಾದರೋ ಸಾಮಾನ್ಯಬೋಧಕವಾಗಿರುವುದರಿಂದ ಅವಕ್ಕೆ ಪೂರ್ವಸೂತ್ರದಿಂದಲೇ ನಪುಂಸಕತ್ವವು ಸಿದ್ಧಿಸುತ್ತಿರಲು ಪುನಃ ಈ ಗಣದಲ್ಲಿ ಅವನ್ನು ಪಠಿಸಿರುವುದು ವ್ಯರ್ಥವೆಂದು ತೋರುವುದು. ಆದಾಗ್ಯೂ ಸಾಮಾನ್ಯವು ವಿಶೇಷದಲ್ಲಿಯೇ ಪರ್ಯವಸನ್ನವಾಗುವುದರಿಂದ ತತ್ತದ್ವಿಶೇಷ ಧರ್ಮಪುರಸ್ಕಾರದಿಂದ ತತ್ತಲ್ಲಿಂಗವು ಪ್ರಾಪ್ತವಾಗಲು ನಪುಂಸಕತ್ವಾರ್ಥವಾಗಿ ಇಲ್ಲಿ ಪಾಠಮಾಡಿರುವುದು ಸಾರ್ಥಕವೆಂದು ತಿಳಿಯಬೇಕು. ಮತ್ತು ಇಲ್ಲಿ ಗೃಹಶಬ್ದವು ಪಠಿಸಿರುವುದು. ಇದಕ್ಕೆ ' ಪತ್ನಿ ' ಮೊದಲಾದ ಅನೇಕಾರ್ಥಗಳಿರುವುವು. ಆದಾಗ್ಯೂ ಕಲತ್ರಾದಿ ಸಾಹಚರ್ಯದಿಂದ ಪತ್ನಿವಾಚಕವಾದುದನ್ನೇ ಗ್ರಹಿಸಬೇಕು. ' **ಗೃಹಾರ್ಥಃ ಪುಮಾಂಶ್ಚ** ||೧೦೮||' ಎಂಬ ಸೂತ್ರದಲ್ಲಿ ಸೂರ್ಯಾದಿಗ್ರಹಪರ್ಯಾಯಶಬ್ದಗಳಿಗೆ ಗ್ರಹಣವೆಂದು ತಿಳಿಯುವುದು.

ಈ ಗಣದಲ್ಲಿ — ' ಮಗು ' ಎಂಬ ಶಬ್ದವು ಪಠಿತವಾಗಿರುವುದು. ಇದು 'ಮಗ' ಎಂಬ ಅ ಕಾರಾಂತ ಶಬ್ದಕ್ಕೆ—'**ಉಕ್ ಸಾಮಾನ್ಯೇ** ||೧೮೭||' ಎಂಬ ಸೂತ್ರದಿಂದ ಉಗಾಗಮವನ್ನು ಮಾಡಿ ಅದು ಪರವಲ್ಲಿರುವಾಗ ಬಹುಳಗ್ರಹಣದಿಂದ ವಗಾಗಮವನ್ನು ಮಾಡಲು ' ಮಗುವು ' ಸಿದ್ಧವಾಗುವುದು.

---

* [ ' ಮಗುವು ' ಎಂದು ಈ ಗ್ರಂಥದ ಮೊದಲನೆಯ ಅವೃತ್ತಿಯಲ್ಲಿದೆ. ಆದರೆ ಶಬ್ದಾನುಶಾಸನದ ಮೂಲದಲ್ಲಿ ಇಲ್ಲಿ ' ಮಗು ' ವೆಂದೇ ಇರುವುದು. —ಸಂಪಾದಕ ]

ಆದರೆ **ಶಾಸನಕಾರನು** ಉಗಾಗಮ ವಿಧಾಯಕ ಸೂತ್ರದಲ್ಲಿ 'ಮಗು' ಎಂದು ಪ್ರಯೋಗಿಸಿರುವನು. ಇವೆರಡರಲ್ಲಿ 'ಮಗು' ಎಂಬ ಪ್ರಯೋಗವು ಪ್ರಸಿದ್ಧವಾಗಿರುವುದರಿಂದ — ನಾಮಹಾನ್ಯಹಾನಿಗಳನ್ನು ಶಿಷ್ಟಪ್ರಯೋಗದಿಂದಲೇ ತಿಳಿದುಕೊಳ್ಳಬೇಕೆಂದು ಪೂರ್ವದಲ್ಲಿಯೇ ಸೂಚಿಸಲ್ಪಟ್ಟಿರುವುದೆಂದು ಲೋಪಮಾಡಿ ಹೇಳಿರುವನೆಂದು ತಿಳಿಯಬೇಕು. ಹಾಗೆಯೇ 'ಮಗುವು' ಎಂಬ ಪ್ರಯೋಗ ಸಂಭಾವನೆಯಿಂದ ಕ್ವಚಿತ್ ವಗಾಗಮವನ್ನಂಗೀಕರಿಸಿ ಇಲ್ಲಿ ಉದಾಹರಿಸಿರುವನೆಂದು ತಿಳಿಯುವುದು. ಅಪತ್ಯಾದಿ ಶಬ್ದಗಳು ನಿತ್ಯ ನಪುಂಸಕಗಳು 'ಮಗ' ಶಬ್ದವು ಲಿಂಗತ್ರಯಾತ್ಮಕವಾದುದು. ಆದುದರಿಂದಲೇ — ಸ್ತ್ರೀಲಿಂಗದಲ್ಲಿ '**ಮಗಸ್ಯ ॥ ೧೮೬ ॥**' ಎಂಬ ಸೂತ್ರದಿಂದ ಳು ಗಾಗಮವನ್ನು ವಿಧಿಸಿ 'ಮಗಳ್' ಎಂದೂ ಪುಲ್ಲಿಂಗದಲ್ಲಿ 'ಮಗಂ' ಎಂದೂ ಉದಾಹರಿಸಲ್ಪಡುವುದು. ಆದುದರಿಂದ ಇದು ಯಾವಾಗ ಸಾಮಾನ್ಯಬೋಧಕವಾಗುವುದೋ ಆಗ ನಪುಂಸಕಲಿಂಗವು ಸ್ವತಃ-ಸಿದ್ಧವಾಗಿ ಇದರ ಪಾಠವು ಅತ್ಯಂತ ಪ್ರಯೋಜನಕಾರಿಯಲ್ಲವೆಂದು ತೋರುವುದು. ಆದಾಗ್ಯೂ 'ಮಗ' ಎಂಬ ಅಕಾರಾಂತ ಪ್ರಕೃತಿಗೆ ಲಿಂಗತ್ರಯಾಭಿಧಾಯಕತ್ವವಿದ್ದರೂ ಉಗಂತವಾದುದಕ್ಕೆ ಇಲ್ಲವಾದುದರಿಂದ ಸಾಮಾನ್ಯವಲ್ಲಿ ವಿಶೇಷವು ಒಳಗೊಂಡಿದೆ, ಎಂಬ ಪೂರ್ವೋಕ್ತಯುಕ್ತಿಯಿಂದ ಬುದ್ಧಿಯಲ್ಲಿ ಲಿಂಗವಿವೇಚನೆ ಮಾಡಿ ಅದಕ್ಕೆ ಪ್ರಾಪ್ತವಾದ ಸ್ತ್ರೀತ್ವಾದಿಗಳನ್ನು ವ್ಯಾವೃತ್ತಿ ಮಾಡುವವಕ್ಕೋಸ್ಕರ ಇಲ್ಲಿ ಪಾಠಮಾಡಿರುವನೆಂದು ತಿಳಿಯಬೇಕು. ಈ ಸೂತ್ರದಲ್ಲಿ ಬಹುವಚನವಿರುವುದರಿಂದ ಆಕೃತಿಗಣವೆಂದು ತಿಳಿಯಬೇಕು. ಆಕೃತಿಯೆಂದರೆ ವರ್ಗಿಕಾಪ್ರಕಾರವು. ಆ ಪ್ರಕಾರವನ್ನು ತೋರಿಸುವ ಗಣವೇ ಆಕೃತಿಗಣವೆಂಬುದಲ್ಲದೆ ಶಬ್ದಗಳ ಪ್ರಮಾಣವನ್ನು ಅವಚ್ಛೇದಿಸುವುದಲ್ಲ. ಆದುದರಿಂದ — 'ಭೂತ, ಪ್ರೇತ, ಪಿಶಾಚ, ಶಾಕಿನೀ, ಡಾಕಿನೀ' ಮೊದಲಾದ ಕೆಲವು ಸಂಸ್ಕೃತ ಶಬ್ದಗಳೂ 'ಮಾರಿ, ಮಸಣಿ, ಬಳಹರಿ, ಚೌಡಿ, ಚಿಳಿ' ಮೊದಲಾದ ಭಾಷಾಶಬ್ದಗಳೂ ಸಂಗ್ರಹೀತವಾಗುವುವು.

**ಅವತಾರಿಕೆ ೧೦೬**

ಶಬ್ದಾಂತರದಲ್ಲಿ ಪ್ರಾಪ್ತವಾದ ಅತಿಪ್ರಸಕ್ತಿಯನ್ನು ವಾರಿಸಲು ಸೂತ್ರಾಂತರವನ್ನು ಪ್ರಾರಂಭಿಸುತ್ತಾನೆ.

**ಸೂತ್ರಂ ॥ ಏಕತ್ವೇ ಜನೋಽಕುಸುದುಃಪರಃ ॥ ೧೦೬ ॥**

**ಅರ್ಥ ॥ ಏಕತ್ವವಿಶಿಷ್ಟವಾದ ಅರ್ಥದಲ್ಲಿರುವ 'ಜನ' ಶಬ್ದವು ನಪುಂಸಕಲಿಂಗವಾಗುವುದು. ಆ ಜನ ಶಬ್ದವು 'ಕು, ಸು, ದುಃ' ಎಂಬ ನಿಪಾತಗಳ ಮುಂದಿದ್ದರೆ ಆಗುವುದಿಲ್ಲ.**

**ಉದಾಹರಣೆ ॥** ಜನಂ ಪೇಳ್ದುದು, ಸ್ತ್ರೀಜನಮಿರ್ದುದು, ಮಹಾಜನಂ ಮೆಚ್ಚಿದುದು, ಬಹುಜನಮಂಗೀಕರಿಸಿತ್ತು॥ ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೧೦೬**

**ಈ** ಸೂತ್ರದಲ್ಲಿ — 'ಏಕತ್ವೇ, ಜನಃ, ಅಕುಸುದುಃಪರಃ' ಎಂದು ಮೂರು ಪದಗಳಿರುವುವು. ಪೂರ್ವಸೂತ್ರದಿಂದ 'ನಪ್' ಎಂಬುದು ಅನುವರ್ತಿಸಲ್ಪಡುವುದು. 'ಏಕತ್ವೇ' ಎಂದರೆ ಏಕತ್ವರೂಪಸಂಖ್ಯಾವಿಶೇಷದಲ್ಲಿ ಎಂದರ್ಥವು. ಇದು 'ಜನಃ' ಎಂಬುದರಲ್ಲಿ ಆಧಾರಾಧೇಯಭಾವರೂಪ ಸಂಬಂಧದಿಂದ ಅನ್ವಯಿಸಲ್ಪಡುವುದು. ಏಕತ್ವದಲ್ಲಿರುವ 'ಜನ' ಶಬ್ದವೆಂದರೆ

ಏಕತ್ವವಿಶಿಷ್ಟಾರ್ಥಪ್ರತಿಪಾದಕ 'ಜನ' ಶಬ್ದವೆಂದರ್ಥವು. 'ಅಕುಸುದುಃಪರಃ' ಎಂದು ದ್ವಂದ್ವಗರ್ಭಪಂಚಮೀತತ್ಪುರುಷಸಮಾಸವನ್ನು ಅಂಗೀಕರಿಸಿ ನಿಷೇಧಾರ್ಥಕ 'ನಞ್' ನೊಡನೆ ಸಮಾಸವನ್ನು ಮಾಡಲು 'ಅಕುಸುದುಃಪರಃ' ಎಂದಾಗಿರುವುದು. ಇಲ್ಲಿ 'ನಞ್'ನ್ನ ಪ್ರಸಜ್ಯಪ್ರತಿಷೇಧಾರ್ಥಕವೆಂದೂ ಪರ್ಯುದಾಸಾರ್ಥಕವೆಂದೂ ಎರಡು ತೆರನಾಗಿರುವುದೆಂದು ಪ್ರಾಚೀನರು ಹೇಳಿರುವ —

ಅಪ್ರಾಧಾನ್ಯಂ ವಿಧೇರ್ಯತ್ರ ಪ್ರತಿಷೇಧೇ ಪ್ರಧಾನತಾ
ಪ್ರಸಜ್ಯ ಪ್ರತಿಷೇಧೋಽಸೌ ಕ್ರಿಯಯಾ ಸಹ ಯತ್ರ ನಞ್
ಪ್ರಧಾನತ್ವಂ ವಿಧೇರ್ಯತ್ರ ಪ್ರತಿಷೇಧೇ ಪ್ರಧಾನತಾ
ಪರ್ಯುದಾಸಃ ಸ ವಿಜ್ಞೇಯೋ ಯತ್ರೋತ್ತರಪದೇ ನ ನಞ್

ಎಂಬ ಕಾರಿಕೆಗಳಿಂದ ತಿಳಿದು ಬರುವುದು. ಇವುಗಳಲ್ಲಿ ಪ್ರಕೃತದಲ್ಲಿ ಪ್ರಸಜ್ಯಪ್ರತಿಷೇಧಾರ್ಥಕವೆಂದು ತಿಳಿಯಬೇಕು. ಆದರೆ ಪ್ರಸಜ್ಯ ಪ್ರತಿಷೇಧಾರ್ಥಕ 'ನಞ್'ಗೆ ಕ್ರಿಯೆಯಲ್ಲಿ ಅನ್ವಯವನ್ನು ಹೇಳುವುದರಿಂದ ಉತ್ತರಪದಾರ್ಥದೊಡನೆ ಸಾಮರ್ಥ್ಯವಿಲ್ಲವೆಂದು ಸಮಾಸವು ಬಾರದೆ ಇಂತಹ ಸಂದರ್ಭಗಳಲ್ಲಿ ವ್ಯಸ್ತವಾಗಿಯೇ ಪ್ರಯೋಗಿಸಬೇಕಾಗುವುದು. ಆದಾಗ್ಯೂ ಪ್ರಾಚೀನರು ಕೆಲವೆಡೆ '**ಅಸೂರ್ಯಂ ಪಶ್ಯನ್ತಿ ರಾಜದಾರಾಃ**' ಎಂಬಂತೆ ಅಸಮರ್ಥಸಮಾಸವನ್ನೂ ಆಶ್ರಯಿಸಿರುವುದರಿಂದ ಅಥವಾ ಸೌತ್ರನಿರ್ದೇಶ ಬಲದಿಂದ ಸಮಾಸವು ಮಾಡಲ್ಪಟ್ಟಿದೆ ಎಂದು ತಿಳಿದು 'ಅಕುಸುದುಃಪರಃ' ಎಂಬುದನ್ನು ಬೇರೆ ನಿಷೇಧವಾಕ್ಯವನ್ನಾಗಿ ಮಾಡಿಕೊಂಡು — ಏಕತ್ವ ವಿಶಿಷ್ಟಾರ್ಥ ಪ್ರತಿಪಾದಕ 'ಜನ' ಶಬ್ದವು ನಪುಂಸಕಲಿಂಗವಾಗುವುದು. ಆ ಜನ ಶಬ್ದವು 'ಕುಸುದುಃ' ಪರವಾಗಿದ್ದರೆ ನಪುಂಸಕಲಿಂಗವಾಗುವುದಿಲ್ಲವೆಂದು ಸೂತ್ರಾರ್ಥವು ವರ್ಣಿಸಲ್ಪಟ್ಟಿದೆ. ಇಲ್ಲಿ 'ಕುಸುದುಃ' ಪರವಾದ 'ಜನ' ಶಬ್ದಕ್ಕೆ ನಿಷೇಧವನ್ನು ಮಾಡಿರುವ ಸಾಮರ್ಥ್ಯದಿಂದ ಪೂರ್ವವಾಕ್ಯದಲ್ಲಿ 'ಜನ' ಶಬ್ದವೊಂದೇ ಉಚ್ಚರಿಸಲ್ಪಟ್ಟಿದ್ದರೂ ತದಂತವಾದುದನ್ನೂ ಗ್ರಹಿಸಿ ಅದಕ್ಕೂ ನಪುಂಸಕತ್ವವು ಇಲ್ಲಿ ಬೋಧಿಸಲ್ಪಟ್ಟಿದೆ. 'ಸ್ತ್ರೀಜನಮಿದ್ದುದು, ಮಹಾಜನಂ ಮೆಚ್ಚಿದುದು' ಮೊದಲಾದುವು ಉದಾಹರಿಸಲ್ಪಟ್ಟಿರುವುವು. ಈ ಸೂತ್ರದಲ್ಲಿ 'ಏಕತ್ವೇ' ಎಂದು ಹೇಳಿರುವುದರಿಂದ 'ಜನಂಗಳ್ ಪೇಳ್ವರ್, ಮಹಾಜನಂಗಳುಪದೇಶಿಸಿದರ್' ಮೊದಲಾದುವು ಬಹುತ್ವ ವಿಶಿಷ್ಟಾರ್ಥದಲ್ಲಿ ಪುಲ್ಲಿಂಗಗಳಾಗುವುವು. 'ಅಕುಸುದುಃಪರಃ' ಎಂದು ಹೇಳಿರುವುದರಿಂದ — 'ಕುಜನನೀತಂ, ಸುಜನಂಪೇಳ್ದಂ, ದುರ್ಜನನಜ್ಞಂ' ಮೊದಲಾದ ಪ್ರಯೋಗಗಳಲ್ಲಿ ಪುಲ್ಲಿಂಗವೇ ಆಗಿರುವುದು. ಇದು ಪುಲ್ಲಿಂಗವೆಂದು ಸ್ಪಷ್ಟೀಕರಿಸುವುದಕ್ಕಾಗಿಯೇ – 'ಈತಂ, ಪೇಳ್ದಂ, ಅಜ್ಞಂ' ಎಂಬುವು ಪ್ರಯೋಗಿಸಲ್ಪಟ್ಟಿರುವುವು.

**ದರ್ಪಣಕಾರನು** —

ಜನಶಬ್ದಮದು ನಪುಂಸಕ
ಮೆನಿಕುಂ ದುಸ್ಸತ್ಸ್ವಕಾರಮುವುಪೆಱಗಿರೆ ನೆ
ಟ್ಟನೆ ಪುಲ್ಲಿಂಗಂ ಮತ್ತಾ
ಜನಂ ಮಹಚ್ಛಬ್ದಮಿರೆ ನಪುಂಸಕಮಕ್ಕುಂ (ಸೂತ್ರ ೯೨)

ಎಂಬ ಸೂತ್ರದಿಂದ ' ಜನ ' ಶಬ್ದವು ಸಾಮಾನ್ಯವಾಗಿ ನಪುಂಸಕಲಿಂಗವು. ' ದುಸ್, ಸತ್, ಸು ' ಎಂಬಿವುಗಳ ಪರದಲ್ಲಿದ್ದರೆ ಪುಲ್ಲಿಂಗವಾಗುವುದು. ಮಹತ್-ಶಬ್ದಪೂರ್ವಕವಾಗಿದ್ದರೂ ನಪುಂಸಕವಾಗುವುದೆಂದು ಹೇಳಿರುವನು. ಇವನ ಮತದಲ್ಲಿ ಕು ಪರವಾದುದಕ್ಕೆ ಪುಂಸ್ತ್ವವನ್ನು ಹೇಳಿಲ್ಲ. ' ಸಜ್ಜನ ' ಶಬ್ದಕ್ಕೆ ಸಾಮಾನ್ಯವಾಗಿ ಪುಂಸ್ತ್ವವನ್ನು ಹೇಳಿರುವನು. **ಶಾಸನಕಾರನ** ಮತದಲ್ಲಿ ಕುಲಸ್ತ್ರೀವಾಚಕ ' ಸಜ್ಜನ ' ಶಬ್ದಕ್ಕೆ ನಪುಂಸಕತ್ವವನ್ನು ಮುಂದಿನ ಸೂತ್ರದಿಂದ ಬೋಧಿಸುವುದರಿಂದ ಅನ್ಯತ್ರಪುಲ್ಲಿಂಗವೆಂಬುದು ಅರ್ಥಾತ್ ಸಿದ್ಧವಾಗುವುದು. ' ಕುಜನ ' ಶಬ್ದಕ್ಕೆ ಸೂತ್ರಾಕ್ಷರದಿಂದಲೇ ಸಿದ್ಧವಾಗಿರುವುದು. ಇವರಿಗೆ ಈ ಭೇದಗಳಿದ್ದರೂ–' **ಲಿಂಗಮಶಿಷ್ಯಂ ಲೋಕಾಶ್ರಯತ್ವಾತ್ ಲಿಂಗಸ್ಯ** ' ಎಂಬ **ಪತಂಜಲಿ** ವಚನದಿಂದ ಶಿಷ್ಟಪ್ರಯೋಗದಿಂದ ಲಿಂಗನಿರ್ಣಯಮಾಡಿಕೊಳ್ಳುವುದು. ದಿಙ್ಮಾತ್ರಪ್ರದರ್ಶನಾರ್ಥವಾಗಿ ಈ ಪ್ರಕರಣವು ಪ್ರಾರಂಭಿಸಲ್ಪಟ್ಟಿದೆ ಎಂದು ಪಂಡಿತರು ತಿಳಿದು ಸಂತೋಷಪಡಬೇಕು.

**ಅವತಾರಿಕೆ ೧೦೭**

ಪೂರ್ವಸೂತ್ರದಿಂದ ಕೇವಲ ' ಜನ ' ಶಬ್ದಕ್ಕೂ ' ಜನ ' ಶಬ್ದಾಂತವಾದ ಕೆಲವಕ್ಕೂ ಏಕತ್ವದಲ್ಲಿ ನಪುಂಸಕತ್ವವನ್ನು ಹೇಳಲು ' ಸಜ್ಜನ ' ಶಬ್ದವೂ ' ಜನ ' ಶಬ್ದಾಂತವಾದುದರಿಂದ ಏಕತ್ವದಲ್ಲಿ ಇದಕ್ಕಿರುವ ಅರ್ಥಸಾಮಾನ್ಯದಲ್ಲಿಯೂ ನಪುಂಸಕತ್ವವು ಪ್ರಾಪ್ತವಾಗಲು ಅದಕ್ಕೆ ಅರ್ಥಾಂತರದಲ್ಲಿ ವ್ಯಾವೃತ್ತಿ ಮಾಡುವುದಕ್ಕೂ ಬಹುತ್ವದಲ್ಲಿಯೂ ನಪುಂಸಕತ್ವವನ್ನು ಬೋಧಿಸುವುದಕ್ಕೂ ಸೂತ್ರಾಂತರವನ್ನು ಪ್ರಾರಂಭಿಸುತ್ತಾನೆ.

**ಸೂತ್ರಂ || ಸಜ್ಜನಃ ಕುಲಸ್ತ್ರಿಯಾಂ || ೧೦೭ ||**

**ಅರ್ಥ || ಕುಲಸ್ತ್ರೀ ರೂಪಾರ್ಥಕ ' ಸಜ್ಜನ ' ಶಬ್ದವು ನಪುಂಸಕಲಿಂಗವಾಗುವುದು.**

**ಉದಾಹರಣೆ** || ಇದು ಸಜ್ಜನಂ, ಇವು ಸಜ್ಜನಂಗಳ್, ಮೊದಲಾದುವು ಇದಕ್ಕೆ ಉದಾಹರಣೆಗಳು.

**ವಿಚಾರ ೧೦೭**

ಈ ಸೂತ್ರವಲ್ಲಿ ' ಸಜ್ಜನಃ, ಕುಲಸ್ತ್ರಿಯಾಂ ' ಎಂದು ಎರಡು ಪದಗಳು ಇರುವುವು. ಪೂರ್ವ ಸೂತ್ರದಿಂದ ' ನಪ್ ' ಎಂಬುದು ಅನುವರ್ತಿಸಲ್ಪಡುವುದು. ಇಲ್ಲಿ ' ಏಕತ್ವೇ ' ಎಂಬುದಕ್ಕೆ ಸಂಬಂಧವಿಲ್ಲವಾದುದರಿಂದ ಇದು ಏಕತ್ವಾನೇಕತ್ವೋಭಯಸಾಧಾರಣವೆಂದು ತಿಳಿಯಬೇಕು. ತಥಾಚ — ಕುಲಸ್ತ್ರೀವಾಚಕ ' ಸಜ್ಜನ ' ಶಬ್ದವು ಏಕಾನೇಕತ್ವಗಳಲ್ಲಿ ನಪುಂಸಕಲಿಂಗವಾಗುವುದೆಂದು ಸೂತ್ರಾರ್ಥವಾಗುವುದು. ಇದರಿಂದ ' ಇದು ಸಜ್ಜನಂ, ಇವು ಸಜ್ಜನಂಗಳ್ ' ಮೊದಲಾದ ಪ್ರಯೋಗಗಳು ಸಿದ್ಧವಾಗುವುವು. ಈ ಸೂತ್ರವಲ್ಲಿ ' ಸಜ್ಜನಃ ' ಎಂದು ಹೇಳದಿದ್ದರೆ — ' ಇವಳ್ ಸತಿ, ಇವಳ್ ಸಾಧ್ವಿ ' ಮೊದಲಾದ ಪ್ರಯೋಗಗಳಲ್ಲಿ ' ಸತಿ ಸಾಧ್ವಿ ' ಎಂಬಿವು ಕುಲಸ್ತ್ರೀವಾಚಕವಾದುದರಿಂದ ಇವಕ್ಕೂ ನಪುಂಸಕತ್ವವು ಪ್ರಾಪ್ತವಾಗುವುದು. ' ಕುಲಸ್ತ್ರಿಯಾಂ ' ಎಂಬುದನ್ನು ಹೇಳದಿದ್ದರೆ ಸತ್ಪುರುಷಾರ್ಥಕ ' ಸಜ್ಜನ ' ಶಬ್ದಕ್ಕೂ ನಪುಂಸಕತ್ವವು ಬರುಬೇಕಾಗುವುದೆಂದು ತಿಳಿದು ಅವೆರಡೂ ಸೂತ್ರದಲ್ಲಿ ಉಚ್ಚರಿಸಲ್ಪಟ್ಟಿರುವುವು.

ಇಲ್ಲಿ ಕೆಲವರು ' **ಸತಃ ಕುಲಸ್ತ್ರಿಯಾಂ** ' ಎಂದು ಸೂತ್ರವಿನ್ಯಾಸವನ್ನು ಮಾಡಿ ಪೂರ್ವ ಸೂತ್ರದಿಂದ ಜನ ಶಬ್ದವನ್ನು ಅನುವರ್ತಿಸಿ ' ಸತಃ ' ಎಂಬುದು ಪಂಚಮ್ಯಂತವಾದುದರಿಂದ ' ಪರಸ್ಯ ' ಎಂದು ಉಪಸ್ಥಿತವಾಗಿ ' ಸತ್ ' ಎಂಬುದರ ಮುಂದಿರುವ ' ಜನ ' ಶಬ್ದವು ಕುಲಸ್ತ್ರೀ ರೂಪಾರ್ಥದಲ್ಲಿ ನಪುಂಸಕಲಿಂಗವಾಗುವುದೆಂದು ಸೂತ್ರಾರ್ಥವನ್ನು ಹೇಳುವರು. ಹೀಗೆ ಹೇಳು ವುದರಿಂದ ದೋಷವೇನೂ ಇಲ್ಲ. ಆದರೆ ' ಸಜ್ಜನಃ ' ಎಂದು ಸ್ವರೂಪನಿರ್ದೇಶಮಾಡಿರುವ **ಸೂತ್ರಕಾರ**ರಿಗೆ ಕುಲಸ್ತ್ರೀರೂಪಾರ್ಥದಲ್ಲಿ ' ಸಜ್ಜನ ' ಎಂಬುದು ಅಖಂಡಶಬ್ದವೇ ಪ್ರಯೋಗಿ ಸಲ್ಪಟ್ಟಿದೆ ಎಂಬ ಅಭಿಪ್ರಾಯವು. ಆದುದರಿಂದ ಯೌಗಿಕವಾದ ' ಸಜ್ಜನ 'ಶಬ್ದವು ಸಾಮಾನ್ಯ ಪುಲ್ಲಿಂಗವೆಂದು **ದರ್ಪಣಕಾರ**ನು ಸೂಚಿಸಿರುವನು.

**ಅವತಾರಿಕೆ ೧೦೮**

ಸೂರ್ಯಾದಿ ಗ್ರಹಗಳು ಪುಂವ್ಯಂಜನೋಪಲಕ್ಷಿತಗಳೆಂದು ಜ್ಯೋತಿಶ್ಶಾಸ್ತ್ರದವರು ಹೇಳು ವುದರಿಂದ ಅವುಗಳಿಗೆ ಪೂರ್ವಸೂತ್ರದಿಂದ ಪುಂಸ್ತ್ವಮಾತ್ರವು ಪ್ರಾಪ್ತವಾಗಲು ಅವಕ್ಕೆ ನಪುಂಸ ಕತ್ವವನ್ನೂ ಬೋಧಿಸಿ ಉಭಯಲಿಂಗಸಮಾವೇಶಾರ್ಥವಾಗಿ ಸೂತ್ರಾಂತರವನ್ನು ಪ್ರಾರಂಭಿ ಸುತ್ತಾನೆ.

**ಸೂತ್ರಂ || ಗ್ರಹಾರ್ಥಃ ಪುಮಾಂಶ್ಚ || ೧೦೮ ||**

**ಅರ್ಥ || ಸೂರ್ಯ ಮೊದಲಾದ ಗ್ರಹವಾಚಕ ಶಬ್ದಗಳು ಪುಲ್ಲಿಂಗಗಳಾಗುತ್ತವೆ. ಸಮುಚ್ಚ ಯಾರ್ಥಕ ಚ ಕಾರದಿಂದ ನಪುಂಸಕಲಿಂಗಗಳೂ ಆಗುತ್ತವೆ — ಎಂದು ತಿಳಿಯಬೇಕು.**

**ಉದಾಹರಣೆ ||** ಸೂರ್ಯನುದಯಿಸಿದಂ, ಸೂರ್ಯನುದಯಿಸಿತ್ತು; ರವಿ ಮೂಡಿದಂ, ರವಿ ಮೂಡಿತ್ತು; ವಿಧುವೆಸೆದಂ, ವಿಧುವೆಸೆದತ್ತು; ಚಂದ್ರಂ ಬೆಳಗಿದಂ, ಚಂದ್ರಂ ಬೆಳಗಿತ್ತು; ಈತಂ ಮಂಗಳಂ, ಇದು ಮಂಗಳಂ|| ಮೊದಲಾದ ಗ್ರಹವಾಚಕಗಳೆಲ್ಲಾ ಇದಕ್ಕೆ ಲಕ್ಷ್ಯಗಳು.

**ವಿಚಾರ ೧೦೮**

ಈ ಸೂತ್ರದಲ್ಲಿ ' ಗ್ರಹಾರ್ಥಃ, ಪುಮಾ, ಚ ' ಎಂದು ಮೂರು ಪದಗಳಿರುವುವು. ಇವುಗಳಲ್ಲಿ ' ಗ್ರಹಾರ್ಥಃ ' ಎಂಬುದು ಬಹುವ್ರೀಹಿಸಮಾಸವು. ಇಲ್ಲಿ ಗ್ರಹವೆಂದರೆ — 'ಗೃಹ್ಣಂತೀತಿ ಗ್ರಹಾಃ' ಎಂಬ ವ್ಯುತ್ಪತ್ತಿಯಿಂದ ಭೂತಪ್ರೇತಾದಿಗಳು ಗ್ರಹಗಳೆಂದರ್ಥವಾಗುವುದು. ಆದುದರಿಂದ ವ್ಯಾಖ್ಯಾನಪರಿಭಾಷೆಯಿಂದ ಜ್ಯೋತಿಶ್ಶಾಸ್ತ್ರದಲ್ಲಿ ಪ್ರಸಿದ್ಧವಾದ ಸೂರ್ಯಾದಿ ನವ ಗ್ರಹಗಳನ್ನೇ ಪ್ರಕೃತದಲ್ಲಿ ಗ್ರಹಿಸಬೇಕೆಂದು ತಿಳಿಯಬೇಕು. ಚ ಕಾರದಿಂದ ' ನಪ್ ' ಎಂಬುದು ಅನುವರ್ತಿಸಲ್ಪಡುವುದು. ತಥಾಚ — ಸೂರ್ಯಾದಿ ಗ್ರಹವಾಚಕಗಳು ಪುಲ್ಲಿಂಗ ನಪುಂಸಕಲಿಂಗ ಗಳಾಗುವುವೆಂದು ಸೂತ್ರಾರ್ಥವಾಗಲು ಉಭಯಕ್ಕೂ ಮೂಲದಲ್ಲಿ ಉದಾಹರಣೆಗಳು ಕೊಡಲ್ಪ ಟ್ಟಿವೆ.

**ಅವತಾರಿಕೆ ೧೦೯**

ಅಚೇತನಬೋಧಕಗಳಾದ ಕೆಲವು ಶಬ್ದಗಳಿಗೆ — ' **ನಬಸ್ಮತ್ ||೧೦೪||** ' ಎಂಬ ಸೂತ್ರ ದಿಂದ ನಪುಂಸಕಲಿಂಗವು ಪ್ರಾಪ್ತವಾಗಲು ಅವುಗಳಿಗೆ ಅದರೊಡನೆ **ಲಿಂಗಾಂತರಸಮಾವೇಶಾರ್ಥ ವಾಗಿ ಸೂತ್ರಾಂತರವನ್ನು** ಹೇಳುತ್ತಾನೆ.

**ಸೂತ್ರಂ || ವಸಂತಾದಯಃ || ೧೦೯ ||**

**ಅರ್ಥ || 'ವಸಂತ' ಮೊದಲಾದ ಶಬ್ದಗಳು ಪುಲ್ಲಿಂಗಗಳೂ ನಪುಂಸಕಲಿಂಗಗಳೂ ಆಗುತ್ತವೆ.**

**ಉದಾಹರಣೆ ||** ವಸಂತಂ ಬಂದಂ, ವಸಂತಂ ಬಂದುದು; ಮಲಯಾನಿಲಂ ತೀಡಿದಂ, ಮಲಯಾನಿಲಂ ತೀಡಿತ್ತು; ಚೈತ್ರನೊಪ್ಪಿದಂ, ಚೈತ್ರಮೊಪ್ಪಿತ್ತು; ಚೈತ್ರನೆಸೆದಂ, ಚೈತ್ರಮೆಸೆದುದು|| ಮೊದಲಾದುವು ಇದಕ್ಕೆ ಉದಾಹರಣೆಗಳು. ವಸಂತಾದಿಗಳಾವುವೆಂದರೆ — ' ವಸಂತ, ಚೈತ್ರ, ಮಲಯಾನಿಲ, ಮಂದಮಾರುತ, ಮಧು, ಚೈತ್ರಾನಿಲ ' ಮೊದಲಾದುವು. ಇದೂ ಆಕೃತಿಗಣವೆಂದು ತಿಳಿದು ಪ್ರಯೋಗಬಲದಿಂದ ವಸಂತಾದಿಗಣಗಳನ್ನರಿಯುವುದು.

**ವಿಚಾರ ೧೦೯**

ಈ ಸೂತ್ರದಲ್ಲಿ — ' ವಸಂತಾದಯಃ ' ಎಂದು ಒಂದೇ ಪದವಿರುವುದು. ಪೂರ್ವಸೂತ್ರದಿಂದ ' ಪುಮ್ಸ್ತ್ರೀ, ನಪ್ ' ಎಂಬ ಎರಡು ಪದಗಳು ಅನುವರ್ತಿಸಲ್ಪಡುವುವು. ತಥಾಚ — ವಸಂತಾದಿಗಣಪಠಿತವಾದ ಶಬ್ದಗಳು ಪುಲ್ಲಿಂಗಗಳೂ ನಪುಂಸಕಲಿಂಗಗಳೂ ಆಗುವುವೆಂದು ಸೂತ್ರಾರ್ಥವಾಗುವುದರಿಂದ ' ವಸಂತಂ ಬಂದಂ ' ಮೊದಲಾದುವು ಸಿದ್ಧಿಸುವುವು. ಇಲ್ಲಿ ' ವಸಂತಾದಯಃ ' ಎಂದು ಹೇಳಿರುವುದರಿಂದ ವಸಂತಾದಿ ಗಣದಲ್ಲಿ ಸೇರಿದ ಗ್ರೀಷ್ಮಾದಿ ಶಬ್ದಗಳಿಗೆ ಉಭಯಲಿಂಗವಿಲ್ಲ. ಪೂರ್ವದಿಂದ ನಪುಂಸಕಲಿಂಗವೊಂದೇ ಆಗಿ — ' ಗ್ರೀಷ್ಮಂ ಬಂದುದು, ಶಿಶಿರಂ ಪೋದುದು ' ಮೊದಲಾದುವು ಸಿದ್ಧಿಸುವುವು.

**ಅವತಾರಿಕೆ ೧೧೦**

ಹೀಗೆಯೇ ಮಿಶ್ರಲಿಂಗಗಳನ್ನು ಹೇಳುತ್ತಾನೆ.

**ಸೂತ್ರಂ || ದೇವತಾದಯೋ ನಪ್ಸ್ತ್ರೀ || ೧೧೦ ||**

**ಅರ್ಥ || ದೇವತಾದಿಗಣಪಠಿತಗಳಾದ ಶಬ್ದಗಳು ನಪುಂಸಕಲಿಂಗಗಳೂ ಸ್ತ್ರೀಲಿಂಗಗಳೂ ಆಗುವುವು.**

**ಉದಾಹರಣೆ ||** ದೇವತೆ ವರಮನಿತ್ತಳ್, ದೇವತೆ ವರಮನಿತ್ತುದು; ಸರಸ್ವತಿ ಕಯ್ಸೆರಮಾಗಿ ಪೇಳ್ದಪಳ್, ಸರಸ್ವತಿ ಕೂರ್ತ್ತುರ್ ನಿಂದುದಾತನ ಮುಖದೊಳ್; ಸಿರಿ ಕೂರ್ತ್ತರ್ಳ್, ಸಿರಿ ಕೂರ್ತ್ತುದು || ಮೊದಲಾದುವು ಇವಕ್ಕೆ ಉದಾಹರಣೆಗಳು. ದೇವತಾದಿ ಗಣಪಠಿತ ಶಬ್ದಗಳಾವುವೆಂದರೆ — ' ದೇವತೆ, ಶ್ರೀ, ಸಿರಿ, ಸರಸ್ವತಿ, ವಾಣಿ, ಪೆಣ್, ಪೆಣ್ಮಾತಿ, ತೊೞ್ತು ' ಮೊದಲಾದುವು. ಇದೂ ಆಕೃತಿಗಣವೆಂದು ತಿಳಿಯಬೇಕು.

**ವಿಚಾರ ೧೧೦**

ಈ ಸೂತ್ರದಲ್ಲಿ — ' ದೇವತಾದಯಃ, ನಪ್, ಸ್ತ್ರೀ ' ಎಂದು ಮೂರು ಪದಗಳಿರುವುವು. ' ದೇವತಾದಯಃ ' ಎಂದರೆ — ದೇವತಾದಿಗಣಪಠಿತಗಳಾದ ಶಬ್ದಗಳೆಂದರ್ಥವು. ಇದು ಆಕೃತಿಗಣವಾದುದರಿಂದ ಪ್ರಯೋಗಗಳನ್ನುಗಳೆಂದು ತಿಳಿಯಬೇಕು. ಇವು ನಪುಂಸಕಲಿಂಗಗಳಾಗಿಯೂ ಸ್ತ್ರೀಲಿಂಗಗಳಾಗಿಯೂ ಆಗುತ್ತವೆಂದು ಸೂತ್ರಾರ್ಥವಾಗುವುದರಿಂದ —' ದೇವತೆ ವರಮನಿತ್ತಳ್ ' ಮೊದಲಾದ ಪ್ರಯೋಗಗಳು ಸಿದ್ಧಿಸಿರುವುವು. ಈ ಸೂತ್ರದಲ್ಲಿ ' ದೇವತಾದಯಃ ' ಎಂದು ನಿರ್ದೇಶ ಮಾಡಿರುವುದರಿಂದ ' ದೇವಂ ಮೆಚ್ಚಿದಂ, ಶಚಿ ಕೂರ್ತಳ್ ' ಮೊದಲಾದ ಪ್ರಯೋಗ

ಗಳಲ್ಲಿ ದೇವತಾದಿಗಣದಲ್ಲಿ ಸೇರಿದ ದೇವಾದಿಶಬ್ದಗಳಿಗೆ ಈ ಲಿಂಗದ್ವಯಸಮಾವೇಶವಿಲ್ಲದೆ ಪೂರ್ವದಲ್ಲಿ ಹೇಳಿದ ಆ ಆ ಲಿಂಗಗಳೇ ಬಂದಿವೆ ಎಂದು ತಿಳಿಯಬೇಕು.

ಆದರೆ ' ದೇವತಾ ' ಶಬ್ದಕ್ಕೆ ' ಜಿನಂ ದೇವತೆ, ಇಂದ್ರಂ ದೇವತೆ ' ಎಂದು ಮೊದಲಾಗಿ ಪುಲ್ಲಿಂಗದೊಡನೆ ಸಾಮಾನಾಧಿಕರಣ್ಯವು ತೋರುವುದರಿಂದ ಪುಲ್ಲಿಂಗವೂ ಸಂಭವಿಸುವುದು. ತಥಾಪಿ ' ದೇವತೆ ಬಂದಳ್, ದೇವತೆ ಪೋದುದು ' ಮೊದಲಾದ ಸ್ತ್ರೀನಪುಂಸಕಲಿಂಗದಂತೆ ' ದೇವತೆ ಬಂದಂ, ದೇವತೆ ಪೋದಂ ' ಎಂದು ತಿಙಂತಪುಲ್ಲಿಂಗಸಾಮಾನಾಧಿಕರಣ್ಯವ್ಯವಹಾರವು ಎಲ್ಲಿಯೂ ದೃಷ್ಟವಾಗಿಲ್ಲವಾದುದರಿಂದ ಇದಕ್ಕೆ ಪುಲ್ಲಿಂಗತೆಯನ್ನು ಅಂಗೀಕರಿಸುವುದಿಲ್ಲವೆಂದು ತಿಳಿಯಬೇಕು. ' ದೈವತ ' ಶಬ್ದಕ್ಕಾದರೊ ಅಂತಹ ಪ್ರಯೋಗವಿರುವುದರಿಂದ ತ್ರಿಲಿಂಗತ್ವವೂ ಅಂಗೀಕರಿಸಲ್ಪಡುವುದು. ಈ ಗಣದಲ್ಲಿ ಪಠಿತವಾದ ' ತೊಱ್ತು ' ಶಬ್ದವು ' ಸೇವೋಪಜೀವಿ ' ವಾಚಕವು. ಅದು ಯಾವಾಗ ಪುಂವ್ಯಂಜನೋಪಲಕ್ಷಿತವಾಗುವುದೋ ಆವಾಗ ಪುಲ್ಲಿಂಗವಾಗುವುದು; ಯಾವಾಗ ಸ್ತ್ರೀವ್ಯಂಜನೋಪಲಕ್ಷಿತವಾಗುವುದೋ ಆಗ ಸ್ತ್ರೀಲಿಂಗವಾಗುವುದು ಎಂಬುದು ಸಾಮಾನ್ಯವಾಗಿಯೇ ಸಿದ್ಧಿಸುವುದು. ಆದುದರಿಂದ ಇದಕ್ಕೆ ಇಲ್ಲಿ ವಿಶಿಷ್ಟಾನುಶಾಸನ ವಿಲ್ಲೆಂದು ತಿಳಿಯುವುದು. ಈ ಗಣಪಠಿತವಾದುದರಿಂದ ಅದಕ್ಕೆ ನಪುಂಸಕತ್ವವೂ ಉಂಟೆಂದು ಹೇಳಬೇಕು. ಆದುದರಿಂದ ಅದು ತ್ರಿಲಿಂಗವು.

**ಅವತಾರಿಕೆ ೧೧೧**

ಇನ್ನು ವಾಚ್ಯಲಿಂಗವನ್ನು ಹೇಳುತ್ತಾನೆ.

**ಸೂತ್ರಂ || ಭೇದ್ಯವದ್ಭೇದಕಂ || ೧೧೧ ||**

**ಅರ್ಥ || ವಿಶೇಷಣವಾಚಕಗಳಾದುವು ವಿಶೇಷ್ಯದ ಲಿಂಗಗಳಾಗುವುವು.**

**ಉದಾಹರಣೆ ||** ಅಯ್ವರ್ ಪುರುಷರ್, ಅಯ್ವರ್ ಸತಿಯರ್, ಅಯ್ದು ಗಿರಿಗಳ್; ಎಣ್ಬರ್ ಪುತ್ರರ್, ಎಣ್ಬರ್ ಪುತ್ರಿಯರ್, ಎಂಟುಪತ್ರಂಗಳ್, ಎಂಟು ಕೂಸುಗಳ್; ಅವರ್ ದೇವರ್, ಇವರ್ ದೇವಿಯರ್, ಅವು ಕಲ್ಲುಂಗಳ್; ಈತನೊಳ್ಳಿದಂ, ಈಕೆಯೊಳ್ಳಿದಳ್, ಇದೊಳ್ಳಿತ್ತು; ಇನಿಯಂ ನಲ್ಲಂ, ಇನಿಯಳ್ ನಲ್ಲಳ್, ಇನಿದು ಪಾಲ್; ಕರಿಯಳ್ ಪಾರ್ವತಿ, ಕರಿಯಂ ಕೃಷ್ಣಂ, ಕರಿದು ಕತ್ತುರಿ; ಈತಂ ದೇವಡಿಗಂ, ಈಕೆ ದೇವಡಿಗಿತ್ತಿ, ಕೆಜ್ಜಗಣ್ಣಸೀತಂ, ಕೆಜ್ಜಗಣ್ಣೆಯವಳ್|| ಮೊದಲಾದ ವಾಕ್ಯಗಳೂ —

ಪಾಡುವುವಂ ತುಂಬಿಗಳಂ
ಕೂಡುವುವಂ ಜಕ್ಕವಕ್ಕಿಗಳನತಿಬಿನದಂ
ಮಾಡುವುವಂ ಪುಲ್ಲೆಗಳಂ
ನೋಡಿದನದಂ ವಿವೇಕನಿಧಿ ಸಂತಸದಿಂ

ಮೊದಲಾದ ಪದ್ಯದಲ್ಲಿರುವುವುಗಳೂ ಇದಕ್ಕೆ ಉದಾಹರಣೆಗಳಾಗಿರುವುವು.

**ವಿಚಾರ ೧೧೧**

ಸೂತ್ರದಲ್ಲಿ — ' ಭೇದ್ಯವತ್, ಭೇದಕಂ ' ಎಂಬ ಎರಡು ಪದಗಳಿರುವುವು. 'ಭೇದ್ಯವತ್' ಎಂದರೆ — ' ಭಿದ್ಯತೇ, ವಿಶಿಷ್ಯತೇ, ವ್ಯಾವರ್ತ್ಯತೇ ' ಎಂಬ ವ್ಯುತ್ಪತ್ತಿಯಿಂದ ' ಭೇದ್ಯಂ '

ಎಂದಾಗುವದು. ' ವಿಶೇಷ್ಯಂ, ವ್ಯಾವರ್ತ್ಯಂ ' ಎಂದೂ ಪರ್ಯಾಯಗಳನೇಕವಿರುವುವು. ಭೇದ್ಯದಿಂದ ಸಮುಪಾದುದು ' ಭೇದ್ಯವತ್ ' ಎನಿಸಿಕೊಳ್ಳುವುದು. ' ಭೇದಕಂ ' ಎಂದರೆ —' ಭೇದಯತಿ, ವಿಶೇಷಯತಿ, ವ್ಯಾವರ್ತಯತಿ ' ಎಂಬ ವ್ಯುತ್ಪತ್ತಿಯಿಂದ ' ಭೇದಕಂ ' ಎಂದಾಗುವುದು. ಇದಕ್ಕೆ ' ವಿಶೇಷಣಂ, ವ್ಯಾವರ್ತಕಂ ' ಎಂದೂ ಪರ್ಯಾಯಗಳುಂಟು. ತಥಾಚ — ವಿಶೇಷಣವು ವಿಶೇಷ್ಯದ ಲಿಂಗದಂತೆ ಆಗುವುದೆಂದು ಸೂತ್ರಾರ್ಥವಾಗುವುದು. ಇದಕ್ಕೇ **ವಾಚ್ಯಲಿಂಗ**ವೆಂದು ಹೆಸರು. ಈ ವಾಚ್ಯಲಿಂಗವು — ಕೃತ್‌ಸಂಖ್ಯಾಗುಣವಚನಾದ್ಯುಪಸರ್ಜನವು ಪ್ರಧಾನಾನುಯಾಯಿಯಾದುದರಿಂದ ಸ್ವತಂತ್ರವಾದ ಲಿಂಗವಿಲ್ಲವೆಂದು ವಿಶೇಷ್ಯಲಿಂಗವು ಹೇಳಲ್ಪಡುವುದರಿಂದ ಸಿದ್ಧವಾಗುವುದು. ವಿಶೇಷ್ಯ-ವಿಶೇಷಣಭಾವ ನಿರ್ಧಾರಣೆಯು ಸಮಾನಾಧಿಕರಣಸಮಾಸದ ಪ್ರಕರಣದಲ್ಲಿ ಸ್ಪಷ್ಟವಾಗಿ ವಿವರಿಸಲ್ಪಡುವುದು.

**ಅವತಾರಿಕೆ ೧೧೨**

ಅನೇಕ ಲಿಂಗಗಳಿಗೆ ಸಮಾಸದಲ್ಲಿ ಸಮಾವೇಶವುಂಟಾಗಲು ಸಮುದಾಯದಲ್ಲಿ ಲಿಂಗ ಸಂಶಯವುಂಟಾಗುವುದರಿಂದ ಅಲ್ಲಿ ವ್ಯವಸ್ಥಾಪಕಸೂತ್ರವನ್ನು ಹೇಳುತ್ತಾನೆ.

**ಸೂತ್ರಂ || ಪರವತ್ ದ್ವಂದ್ವಃ || ೧೧೨ ||**

**ಅರ್ಥ || ದ್ವಂದ್ವಸಮಾಸವು ಪರಪದದ ಲಿಂಗದಂತೆ ಲಿಂಗವುಳ್ಳುದಾಗುವುದು.**

**ಉದಾಹರಣೆ ||** ಇವು ಮರಗಿಡುಗಳ್, ಆನೆಕುದುರೆಬಂಟರ್ ಬಂದರ್, ಮಾವ ಭಾವ ತಂಗಿಯರಿರ್ದರ್ || ಮೊದಲಾದುವು ಇವಕ್ಕೆ ಉದಾಹರಣೆಗಳು.

**ವಿಚಾರ ೧೧೨**

ಈ ಸೂತ್ರದಲ್ಲಿ ' ಪರವತ್, ದ್ವಂದ್ವಃ ' ಎಂದು ಎರಡು ಪದಗಳಿರುವುವು. ' ದ್ವಂದ್ವಃ ' ಎಂದರೆ — ದ್ವಂದ್ವಸಂಜ್ಞಕ ಸರ್ವಪದಾರ್ಥಪ್ರಧಾನ ಸಮಾಸವು. ಅದರಲ್ಲಿ ಕೊನೆಯ ಪದಕ್ಕೆ ಸಾಕ್ಷಾತ್ ಸುಪ್-ವಿಭಕ್ತಿಸಂಬಂಧವಿರುವುದರಿಂದ ಆ ಪದದ ಲಿಂಗವೇ ಸಮುದಾಯಕ್ಕೂ ಬರುವುದೆಂದು ಈ ಸೂತ್ರಕ್ಕೆ ಅರ್ಥವಾಗುವುದರಿಂದ ಅಂತಹ ದ್ವಂದ್ವಸಮಾಸಗಳೇ ಇಲ್ಲ ಉದಾಹರಿಸಲ್ಪಟ್ಟಿವೆ.

ಸಂಸ್ಕೃತವ್ಯಾಕರಣದಲ್ಲಿ — **' ಪರವಲ್ಲಿಂಗಂ ದ್ವಂದ್ವ-ತತ್ಪುರುಷಯೋಃ '** ಎಂದು ಸೂತ್ರವನ್ನು ಹೇಳಿ, ದ್ವಿಗು-ಕರ್ಮಧಾರಯಸಮಾಸವಿಶೇಷಗಳನ್ನೊಳಗೊಂಡಿರುವ ತತ್ಪುರುಷಸಮಾಸದಲ್ಲಿಯೂ ಪರಪದಲಿಂಗಾತಿದೇಶವನ್ನು ಮಾಡಿರುವರು. ಭಾಷೆಯಲ್ಲಿ ತತ್ಪುರುಷವದವನ್ನು ಬಿಟ್ಟು ದ್ವಂದ್ವಸಮಾಸವೊಂದಕ್ಕೇ ಅತಿದೇಶಮಾಡಿರುವುದು — ದ್ವಂದ್ವಸಮಾಸದಲ್ಲಿ ಎಲ್ಲಾ ಪದಾರ್ಥಕ್ಕೂ ಪ್ರಾಧಾನ್ಯವಿರುವುದರಿಂದ ಸಮುದಾಯಕ್ಕೆ ಇದೇ ಲಿಂಗವಿದೆ ಎಂದು ನಿರ್ಧರಿಸುವುದು ಅಶಕ್ಯವೆಂದು ತೋರುವುದರಿಂದ — ಎಂದು ತಿಳಿಯಬೇಕು. ತತ್ಪುರುಷದಲ್ಲಾದರೋ **' ಉತ್ತರಪದಾರ್ಥಪ್ರಧಾನಸ್ತತ್ಪುರುಷಃ '** ಎಂಬ ಪ್ರಾಚೀನರ ವಚನದಿಂದ ಉತ್ತರಪದಾರ್ಥಕ್ಕೇ ಪ್ರಾಧಾನ್ಯವಿರುವುದರಿಂದ ಸಮುದಾಯಕ್ಕೂ ತಲ್ಲಿಂಗವು ಸ್ವತಃ ಸಿದ್ಧವಾಗಿರುವುದೆಂದು ಇಲ್ಲ ಅದನ್ನು ಬಿಟ್ಟಿರುವನು. ಸಂಸ್ಕೃತದಲ್ಲಿ **' ಉತ್ತರಪದಾರ್ಥಃ ಪ್ರಧಾನಃ '** ಎಂಬ ಪ್ರಾಚೀನರ ಪ್ರವಾದವು ಪ್ರಾಯೋಭಿಪ್ರಾಯವಾದುದರಿಂದ ಕೆಲವೆಡೆಗಳಲ್ಲಿ ಪೂರ್ವಪದಾರ್ಥಕ್ಕೂ ಪ್ರಾಧಾನ್ಯವು ಸಂಭ

ವಿರುವುದರಿಂದ ಆ ಲಿಂಗವನ್ನು ವ್ಯಾವರ್ತಿ ಮಾಡುವುದಕ್ಕಾಗಿ ಸೂತ್ರವಲ್ಲ ಸೇರಿಸಿರುವರೆಂದು ತಿಳಿಯಬೇಕು. ಭಾಷೆಯಲ್ಲಿ ಪ್ರಾಯಶಃ ತತ್ಪುರುಷವು ಉತ್ತರಪದಾರ್ಥಪ್ರಧಾನವಾಗಿಯೇ ಇರುವುದು. ಹಾಗೆ ಇಲ್ಲದ ಕೆಲವು ಅಂಶಿಸಮಾಸಗಳಿಗೆ ಮಾತ್ರ ಪೂರ್ವಪದಾರ್ಥಪ್ರಾಧಾನ್ಯ ವಿರುವುದರಿಂದ ಆ ಲಿಂಗವು ಪ್ರಾಪ್ತವಾಗಲು ವಕ್ಷ್ಯಮಾಣಸೂತ್ರದಿಂದ ವ್ಯಾವರ್ತಿ ಮಾಡುವನು.

**ಅವತಾರಿಕೆ ೧೧೩**

ಸಮಾಸದಲ್ಲಿ — '**ಗೌಣಮುಖ್ಯಯೋರ್ಮುಖ್ಯೇ ಕಾರ್ಯಸಂಪ್ರತ್ಯಯಃ**' ಎಂಬ ನ್ಯಾಯದಿಂದ ಯಾವ ಅರ್ಥಕ್ಕೆ ಮುಖ್ಯತ್ವವು ತೋರುವುದೋ ಆ ಅರ್ಥದ ಲಿಂಗವೇ ಸಮುದಾಯಕ್ಕೂ ಬರಬೇಕೆಂದು ಪ್ರಾಪ್ತವಾಗಲು ಕೆಲವು ಅಂಶಿಸಮಾಸದಲ್ಲಿ ಪೂರ್ವಪದಾರ್ಥಕ್ಕೇ ಮುಖ್ಯತ್ವವಿರುವುದರಿಂದ ಅದರ ಲಿಂಗವೇ ಸಮುದಾಯಕ್ಕೂ ಬರಲಿ ಎಂದು ಪ್ರಾಪ್ತವಾದ ಅತಿಪ್ರಸಕ್ತಿಯನ್ನು ವಾರಣೆಮಾಡುವುದಕ್ಕೆ ಸೂತ್ರಾಂತರವನ್ನು ಪ್ರಾರಂಭಿಸುತ್ತಾನೆ.

**ಸೂತ್ರಂ || ಅಂಶಿಸಮಾಸಃ || ೧೧೩ ||**

**ಅರ್ಥ ||** ಅಂಶಿಸಮಾಸವು **ಪರಪದದ ಲಿಂಗದಂತೆ ಲಿಂಗವುಳ್ಳುದಾಗುವುದು.**

**ಉದಾಹರಣ ||** ಇದು ಮೇಂಗಾಲ್, ಅದು ಮುಂಗಯ್ || ಮೊದಲಾದ ಏಕದೇಶಿ ಸಮಾಸಗಳೆಲ್ಲಾ ಇದಕ್ಕೆ ಉದಾಹರಣೆಗಳಾಗುವುವು.

**ವಿಚಾರ ೧೧೩**

ಈ ಸೂತ್ರದಲ್ಲಿ 'ಅಂಶಿಸಮಾಸಃ' ಎಂಬ ಒಂದೇ ಪದವಿರುವುದು. ಪೂರ್ವಸೂತ್ರದಿಂದ 'ಪರವತ್' ಎಂಬುದು ಅನುವರ್ತಿಸಲ್ಪಡುವುದು. ಅಂಶಿಸಮಾಸವೆಂದರೆ ಏಕದೇಶಿಸಮಾಸವು. ಏಕದೇಶಿಸಮಾಸವೆಂದರೆ — ಎಲ್ಲಿ ಅವಯವಾವಯವಿವಾಚಿ ಪದಗಳಿಗೆ — '**ಅಂಶಿನಾಽಭಿನ್ನೇನ** || ೩೦೬ ||' ಎಂಬ ಸೂತ್ರದಿಂದ ಸಮಾಸವು ಬರುವುದೋ ಅದು ಎಂದು ತಿಳಿಯಬೇಕು. ಅದು ಪರಪದದಂತೆ ಲಿಂಗವುಳ್ಳದಾಗುವುದೆಂದು ಸೂತ್ರಾರ್ಥವಾಗುವುದರಿಂದ 'ಮೇಂಗಾಲ್' ಮೊದಲಾದುವು ಈ ಸೂತ್ರಕ್ಕೆ ಉದಾಹರಣೆಗಳಾಗುವುವು. 'ಇದು, ಅದು' ಎಂಬಿವು ನಪುಂಸಕತ್ವ ದ್ಯೋತನಾರ್ಥವಾಗಿ ಎಂದು ತಿಳಿಯುವುದು.

**ಅವತಾರಿಕೆ ೧೧೪**

ತನಾದಿಗಳು ಸ್ತ್ರ್ಯಾದಿಬೋಧಕಗಳಾಗಿರುವುದರಿಂದ ಸ್ತ್ರೀತ್ವಾದಿಗಳು ಬಂದು ತತ್ತಲ್ಲಿಂಗ ಪ್ರಯುಕ್ತವಾದ ವಿಕಾರಗಳೂ ಅವುಗಳಿಗೆ ಪ್ರಾಪ್ತವಾಗಲು ತದ್ವಾರಣಾರ್ಥವಾಗಿ ಸೂತ್ರವನ್ನು ಹೇಳುತ್ತಾನೆ.

**ಸೂತ್ರಂ || ನಿನೆನ್ ತನಲಿಂಗಂ || ೧೧೪ ||**

**ಅರ್ಥ || ನೀ, ಎ, ತ ಎಂಬ ಸರ್ವನಾಮ ಶಬ್ದಗಳು ಅಲಿಂಗಗಳಾಗುವುವು. ಎಂದರೆ ಲಿಂಗಪ್ರಯುಕ್ತವಿಕಾರಶೂನ್ಯಗಳೆಂದು ತಾತ್ಪರ್ಯವು.**

**ಉದಾಹರಣೆ ||** ನೀಂಗಳ್ ತಂದೆಯರ್, ನೀಂಗಳ್ ತಾಯ್ವಿರ್, ನೀಂಗಳ್ ಮರಂಗಳ್; ಆಂ ತಂದೆ, ಆಂ ತಾಯ್, ಆಂ ಮರಂ; ತಾಂ ಮಾಡಿದಂ, ತಾಂ ಮಾಡಿದಳ್, ತಾಂ ಮಾಡಿತ್ತು || ಮೊದಲಾದುವು ಇದಕ್ಕೆ ಉದಾಹರಣೆಗಳು.

**ವಿಚಾರ ೧೧೪**

ಈ ಸೂತ್ರದಲ್ಲಿ 'ನಿೞ, ಎೞ, ತೞ, ಅಲಿಂಗಂ' ಎಂದು ನಾಲ್ಕು ಪದಗಳಿರುವುವು. 'ಅಲಿಂಗಂ' ಎಂದರೆ ಲಿಂಗವಿಲ್ಲದಿರುವುದೆಂಬರ್ಥವು. ಆದುದರಿಂದ 'ನಿೞ' ಎಂಬುದೂ 'ಎೞ' ಎಂಬುದೂ 'ತೞ' ಎಂಬುದೂ ಲಿಂಗವಿಲ್ಲದಿರುವುವು ಎಂದು ಸೂತ್ರಾರ್ಥವಾಗುವುದು. ಆದರೆ ನಿಸಾದಿಗಳಿಗೆ ವಾಚ್ಯವಾದುವು ಸಲಿಂಗವಾಗಿರುವುದರಿಂದ ಇವುಗಳಿಗೆ ಅಲಿಂಗತ್ವವನ್ನು ಹೇಳು ವುದು ಅನುಚಿತವೆಂದು ತೋರುವುದು. ಆದಾಗ್ಯೂ 'ಅಲಿಂಗಂ' ಎನ್ನುವುದಕ್ಕೆ ಲಿಂಗಪ್ರಯುಕ್ತ ವಾದ ಕಾರ್ಯಶೂನ್ಯವೆಂದರ್ಥವೆಂದು ಹೇಳುವುದರಿಂದ ಅನುಪಪತ್ತಿಯಿಲ್ಲವೆಂದು ತಿಳಿಯಬೇಕು. ಸಂಸ್ಕೃತವ್ಯಾಕರಣದಲ್ಲಿಯೂ '**ಅಲಿಂಗೇ ಯುಷ್ಮದಸ್ಮದೀ**' ಎಂಬ ವಚನದಲ್ಲಿರುವ 'ಅಲಿಂಗ' ಎಂಬುದಕ್ಕೆ 'ಲಿಂಗಪ್ರಯುಕ್ತ ಕಾರ್ಯಶೂನ್ಯೇ' ಎಂದು **ನಾಗೇಶಭಟ್ಟ**ನು ವ್ಯಾಖ್ಯಾನ ಮಾಡಿ ರುವನು. ಅದರಂತೆ ಇಲ್ಲಿಯೂ ಹೇಳಬೇಕು.

ಈ ಸೂತ್ರದಲ್ಲಿ ಅವ್ಯಯಗಳಿಗೂ ಅಲಿಂಗತ್ವವನ್ನು ಹೇಳಬೇಕಾಗಿರುವುದರಿಂದ ಅವ್ಯಯ ಗ್ರಹಣವನ್ನೂ ಮಾಡಬೇಕು. ಆದರೂ '**ಅನವ್ಯೇತೀತ್ಯವ್ಯಯಂ**' ಎಂಬ ವ್ಯುತ್ಪತ್ತಿಯಿಂದ ಅವ್ಯಯವೆಂಬುದು ಅನ್ವರ್ಥಕವಾದುದರಿಂದಲೇ ಲಿಂಗಸಂಖ್ಯಾಕಾರಕಾದಿಗಳಾವುದರಲ್ಲಿಯೂ ಇದಕ್ಕೆ ವಿಕಾರವಿಲ್ಲವೆಂದು ತೋರುವುದರಿಂದ **ಸೂತ್ರಕಾರ**ರು ಇದಕ್ಕೆ ಅಲಿಂಗತ್ವವನ್ನು ಹೇಳಲು ಪ್ರಯತ್ನ ಮಾಡಿಲ್ಲವೆಂದು ತಿಳಿಯಬೇಕು. ಇದೇ ವಿಷಯವು —

**ಸದೃಶಂ ತ್ರಿಷು ಲಿಂಗೇಷು ಸರ್ವಾಸು ಚ ವಿಭಕ್ತಿಷು**
**ವಚನೇಷು ಚ ಸರ್ವೇಷು ಯನ್ನವ್ಯೇತಿ ತದವ್ಯಯಂ**

ಎಂಬುದರಿಂದ ಸೂಚಿತವಾಗುವುದು.

**ಅವತಾರಿಕೆ ೧೧೫**

ಪೂರ್ವಸೂತ್ರಗಳಲ್ಲಿ — ಸ್ತ್ರೀಪುನ್ನಪುಂಸಕಲಿಂಗಾನುಶಾಸನವನ್ನು ಸಂಕ್ಷೇಪವಾಗುಪದೇಶಿಸಿ ಅನಂತರದಲ್ಲಿ — '**ಲಿಂಗಾತ್ ಸುಪ್ || ೩೦೩ ||**' ಎಂಬ ಸೂತ್ರವಿಹಿತಸುಬುತ್ಪತ್ತಿಸಾಧಕವಾದ ಪ್ರಾತಿಪದಿಕವೆಂಬ ಲಿಂಗವನ್ನು ನಿರ್ಣಯಿಸಬೇಕೆಂಬಿಚ್ಛೆಯಿಂದ ಸಂಸ್ಕೃತಶಬ್ದಗಳನ್ನು ಭಾಷಾ ವಿಷಯಗಳನ್ನಾಗಿ ಮಾಡಿ ತೋರಿಸಲು, ಸಮಸಮಭಿವ್ಯಾಹಾರವಿಷಯಗಳಾದ 'ಘಟ, ಪಟ, ಸ್ತಂಭ, ಕುಂಭ' ಮೊದಲಾದ ಶಬ್ದಗಳಲ್ಲಿ ವಿಶೇಷವಿಲ್ಲವಾದುದರಿಂದ ಏಕದೇಶದಲ್ಲಾಗಲಿ, ಸಮುದಾಯ ದಲ್ಲಾಗಲಿ, ವಿಕಾರವನ್ನು ಹೊಂದಿರುವ ತದ್ಭವ* ಶಬ್ದಗಳಲ್ಲಿಯೇ ವಿಶೇಷಗಳನ್ನು ಪ್ರಕಟಿಸುವನಾಗಿ ಮೊದಲು ಸ್ವರಾಂತಗಳಲ್ಲಿ ವಿಶೇಷದರ್ಶನಾರ್ಥವಾಗಿ ಸೂತ್ರವನ್ನು ಪ್ರಾರಂಭಿಸುತ್ತಾನೆ.

**ಸೂತ್ರಂ || ಹ್ರಸ್ವೋಽನೇಕಸ್ವರಸ್ಯಾಸಮಾಸೇಽಪೂರ್ವಪದಸ್ಯ || ೧೧೫ ||**

**ಅರ್ಥ || ಅವುದಕ್ಕೆ ಸಮಾಸಕೃತವಾಗಿಯೇ ಅನೇಕಸ್ವರತ್ವವಿರುವುದಿಲ್ಲವೋ ಅಂತಹ ಪೂರ್ವಪದವಲ್ಲದ ಅನೇಕಸ್ವರವುಳ್ಳ ದೀರ್ಘಸ್ವರಾಂತ ಶಬ್ದಕ್ಕೆ ಹ್ರಸ್ವಾದೇಶವು ಬರುವುದು.**

**ಉದಾಹರಣೆ ||** ನದಿ, ಲಕ್ಷ್ಮಿ, ನಾರಿ, ಸರಸ್ವತಿ, ವಧು, ಅಲಾಬು, ಸರಯು, ಕುಹು, ಪ್ರಿಯಗ್ರು || ಮೊದಲಾದ ಸ್ವಭಾವವಾಗಿ ಅನೇಕಸ್ವರವುಳ್ಳ ಸಂಸ್ಕೃತಶಬ್ದಗಳೇ ಇದಕ್ಕೆ ಲಕ್ಷ್ಯಗಳು.

* [ ಇಂತಹ ಶಬ್ದಗಳಿಗೆ ದರ್ಪಣಕಾರನು 'ಸಮಸಂಸ್ಕೃತ' ಎಂದು ವ್ಯವಹರಿಸಿರುವನು ( ದರ್ಪಣ : ಸೂತ್ರ ೪೦ ) — ಸಂಪಾದಕ ]

## ವಿಚಾರ ೧೧೫

ಈ ಸೂತ್ರದಲ್ಲಿ 'ಹ್ರಸ್ವಃ, ಸ್ವರಸ್ಯ, ಅಸಮಾಸೇ, ಅಪೂರ್ವಪದಸ್ಯ' ಎಂದು ನಾಲ್ಕು ಪದಗಳಿರುವುವು. 'ಹ್ರಸ್ವಃ' ಎಂಬುದು ಇಲ್ಲಿ ವಿಧೇಯವು. ಆದುದರಿಂದ 'ಸ್ವರಸ್ಯ' ಎಂಬ ಸೂತ್ರದಿಂದ 'ಸ್ವರಸ್ಯ' ಎಂಬ ಷಷ್ಠ್ಯಂತಪದವು ಉಪಸ್ಥಿತವಾಗುವುದು. 'ಅನೇಕಸ್ವರಸ್ಯ' ಎಂಬುದು ಬಹುವ್ರೀಹಿಸಮಾಸವಾದುದರಿಂದ ಅನೇಕಸ್ವರವುಳ್ಳ ಶಬ್ದಕ್ಕೆ ಎಂದರ್ಥವಾಗುವುದು. ಇದೇ ಇಲ್ಲಿ ಸ್ಥಾನಿಯೆಂದು ತಿಳಿಯಬೇಕು. ಇದಕ್ಕೆ ಈ ಸೂತ್ರದಲ್ಲಿರುವ 'ಅಸಮಾಸೇ' ಎಂಬುದನ್ನೂ 'ಅಪೂರ್ವಪದಸ್ಯ' ಎಂಬುದನ್ನು ಉಪಸ್ಥಿತವಾದ 'ಸ್ವರಸ್ಯ' ಎಂಬುದನ್ನು ವಿಶೇಷಣ ಮಾಡುವುವು. 'ಅಸಮಾಸೇ, ಅಪೂರ್ವಪದಸ್ಯ' ಎಂಬಿವೆರಡೂ ನಞ್ತತ್ಪುರುಷಸಮಾಸವು. 'ಅಸಮಾಸೇ' ಎಂಬುದನ್ನು ಅಸಮರ್ಥಸಮಾಸಾಶ್ರಯಣ ಮಾಡಿರುವುದರಿಂದ ಅದರಲ್ಲಿರುವ ನಿಷೇಧಾರ್ಥಕ ನಞಿಗೆ 'ಅನೇಕ ಸ್ವರಸ್ಯ' ಎಂಬುದರಲ್ಲಿ ಅನ್ವಯವು. ಸಪ್ತಮ್ಯರ್ಥವು, ವಿಷಯತ್ವವು, ಇದರಿಂದ ಸಮಾಸವಿಷಯದಲ್ಲಿ ಅನೇಕಸ್ವರವಾಗದಿರುವ, ಎಂದರೆ ಸ್ವಭಾವವಾಗಿ ಅನೇಕಸ್ವರವುಳ್ಳ, ಶಬ್ದಕ್ಕೆ ಎಂದರ್ಥವಾಗುವುದು. ಇದಕ್ಕೆ 'ಸ್ವರಸ್ಯ' ಎಂದು ವಿಶೇಷಣ ಮಾಡಿರುವುದರಿಂದ – '**ಯೇನ ವಿಧಿಸ್ತದಂತಸ್ಯ**' ಎಂಬ ಸೂತ್ರದಿಂದ ತದಂತಲಾಭವು ಬಂದು 'ಸ್ವರಾಂತಸ್ಯ' ಎಂದರ್ಥವಾಗುವುದು. ಇಲ್ಲಿ 'ಸ್ವರಸ್ಯ' ಎಂದು ಸಾಮಾನ್ಯವಾಗಿ ಹೇಳಿದ್ದರೂ ಹ್ರಸ್ವಕ್ಕೆ ಹ್ರಸ್ವವನ್ನು ವಿಧಿಸಲು ಪ್ರಯೋಜನವಿಲ್ಲವಾದುದರಿಂದ ಹ್ರಸ್ವಕ್ಕೂ ಈ ಸೂತ್ರಕ್ಕೆ ಸಂಸ್ಕೃತಶಬ್ದಗಳೇ ವಿಷಯಗಳಾದುದರಿಂದ ಅಲ್ಲಿ ಪ್ಲುತಾಂತ ಶಬ್ದಗಳು ನಿಯತವಾಗಿಲ್ಲವಾದುದರಿಂದ ಪ್ಲುತಕ್ಕೂ ವ್ಯಾವೃತ್ತಿಯುಂಟಾಗುವುದರಿಂದ ಪ್ರಕೃತದಲ್ಲಿ 'ಸ್ವರಸ್ಯ' ಎಂಬುದು ದೀರ್ಘಮಾತ್ರವನ್ನು ಬೋಧಿಸುವುದೆಂದು ತಿಳಿಯಬೇಕು. ತಥಾಚ — ಸಮಾಸಕೃತಾನೇಕಸ್ವರಾಭಾವವುಳ್ಳ ಪೂರ್ವಪದಭೂತವಲ್ಲದ ದೀರ್ಘಸ್ವರಾಂತಶಬ್ದಕ್ಕೆ ಹ್ರಸ್ವಾದೇಶವು ಬರುವುದೆಂದು ಅಕ್ಷರಶಃ ಸೂತ್ರಾರ್ಥವಾಗಲು '**ಷಷ್ಠ್ಯಾಃ ಸ್ಥಾನೇಽಂತ್ಯಸ್ಯ**' ಎಂಬ ಪರಿಭಾಷೆಯಿಂದ ಅಂತಹ ಶಬ್ದದ ಕೊನೆಯಲ್ಲಿರುವ ದೀರ್ಘಕ್ಕೆ ಹ್ರಸ್ವಾದೇಶವು ಬರುವುದೆಂದು ಫಲಿತಾರ್ಥವಾಗುವುದು. ಇದರಿಂದ 'ನದಿ, ಲಕ್ಷ್ಮಿ' ಮೊದಲಾದುವು ಸಿದ್ಧಿಸುವುವು. ಸೂತ್ರದಲ್ಲಿ 'ಅಸಮಾಸೇ, ಅನೇಕಸ್ವರಸ್ಯ' ಎಂಬುದನ್ನು ಅಸಮರ್ಥಸಮಾಸವೆಂದು ಹೇಳಿರುವುದರಿಂದಲೂ 'ಅನೇಕಸ್ವರಸ್ಯ' ಎಂದು ಹೇಳಿರುವುದರಿಂದಲೂ ಸಮಾಸದಿಂದಲೇ ಅನೇಕಸ್ವರವಾಗಿರುವುದನ್ನೂ ಏಕಸ್ವರಶಬ್ದಗಳನ್ನೂ ವ್ಯಾವೃತ್ತಿಸುವುದಲ್ಲದೆ ಸಮಾಸವನ್ನು ವ್ಯಾವರ್ತಿಸುವುದಿಲ್ಲವೆಂದು ತಿಳಿಯಬೇಕು. ಇಲ್ಲಿ ಉದಾಹರಣೆಗಳನ್ನು ಕೊಡುವಾಗ 'ನದಿ, ಲಕ್ಷ್ಮಿ' ಮೊದಲಾದ ಸಂಸ್ಕೃತ ಸ್ತ್ರೀಲಿಂಗಶಬ್ದಗಳೇ ಉದಾಹರಿಸಲ್ಪಟ್ಟಿರುವುವು. ಆದಾಗ್ಯೂ 'ಕ್ಷೀರಪಂ, ಸೋಮಪಂ, ಯುವಕ್ರಿ, ಸೇನಾನಿ, ಖಲಪು, ಶರಲು' ಮೊದಲಾದ ಪುಲ್ಲಿಂಗ ದೀರ್ಘಾಂತ ಶಬ್ದಗಳಿಗೂ ಹ್ರಸ್ವ ಬಂದು ಇದಕ್ಕೆ ಉದಾಹರಣೆಗಳಾಗುವುವೆಂದು ತಿಳಿಯಬೇಕು. ಉದಾಹರಣೆಯಲ್ಲಿ ತೋರಿಸಿರುವ 'ಪ್ರಿಯಗ್ರ' ಎಂಬುದು ಪ್ರಿಯಶಬ್ದೋಪಪದಕ 'ಗ್ರ' ಧಾತುವಿನಿಂದ ನಿಷ್ಪನ್ನವಾಗಿರುವುದರಿಂದ ಸಮಾಸದಿಂದಲೇ ಅನೇಕಸ್ವರವೆಂದು ತೋರುವುದು. ಆದಾಗ್ಯೂ 'ಸೇನಾನೀ, ಯುವಕ್ರೀ' ಇತ್ಯಾದಿ ಶಬ್ದಗಳಂತೆ ಇದೂ ಅಖಂಡವಾದ ದೀರ್ಘಾಂತಶಬ್ದವೆಂದು ಈ ಸೂತ್ರಕ್ಕೆ ವಿಷಯವಾಗಿ ತೆಗೆದುಕೊಳ್ಳಲ್ಪಟ್ಟಿದೆ. ಇದರಿಂದ ಎಲ್ಲಿ ಯಾವುದಕ್ಕೆ ಧಾತುವಿನೊಡನೆ ಸುಬುತ್ಪತ್ತಿಯು ಪೂರ್ವ

ಎಲ್ಲಿ ಯೋ ಉಪಪದಸಮಾಸವನ್ನು ಮಾಡುವೆವೋ ಅಲ್ಲಿ ಅದು ಅಖಂಡಶಬ್ದವೆಂದು ಈ ಸೂತ್ರಕ್ಕೆ ವಿಷಯವನ್ನಾಗಿ ಭಾವಿಸಬೇಕು. ಎಲ್ಲಿ 'ಪ್ರಿಯಶ್ಚಾಸೌ ಗ್ಲಾಶ್ಚ' ಎಂದು ಸುಬುತ್ಪತ್ತ್ಯನಂತರದಲ್ಲಿ ಕರ್ಮಧಾರಯಸಮಾಸವನ್ನಂಗೀಕರಿಸುವೆವೋ ಅಲ್ಲಿ ಅದು ಸಮಾಸದಿಂದಲೇ ಅನೇಕ ಸ್ವರವಾಗುವ್ರದೆಂದೂ ಇದಕ್ಕೆ ಪ್ರತ್ಯುದಾಹರಣೆಯಾಗುವುದೆಂದೂ ಭಾವಿಸಬೇಕು. ಈ ಸೂತ್ರದಲ್ಲಿ 'ಅನೇಕಸ್ವರಸ್ಯ' ಎಂದು ಹೇಳಿರುವುದರಿಂದ ಏಕಸ್ವರವಾದ — 'ಶ್ರೀ, ಹ್ರೀ, ಭೀ, ಧೀ, ಈ, ನೀ, ಭ್ರೂ, ಭೂ, ಪೂ, ಗ್ಲಾ, ಖೂ, ರೈ, ಗೋ, ನೌ, ಗ್ಲೌ' ಮೊದಲಾದುವುಗಳಿಗೆ ಬರುವುದಿಲ್ಲ. 'ಅಸಮಾಸೇ' ಎಂದು ಹೇಳಿರುವುದರಿಂದ ಸಮಾಸವಲ್ಲಯೇ ಅನೇಕಸ್ವರವಾಗಿರುವ — 'ಮಹಾಶ್ರೀ, ಪುಣ್ಯಸ್ತ್ರೀ, ಸುಭ್ರೂ, ಪ್ರಿಯಗ್ಲಾ, ಅತಿಹ್ರೀ, ಸುರೈ, ಸುದ್ಯೋ, ಶರದ್ಗ್ಲೌ' ಮೊದಲಾದುವುಗಳಲ್ಲ ಬರುವುದಿಲ್ಲ. 'ಮಹಾನದಿ, ಮಹಾಲಕ್ಷ್ಮಿ' ಮೊದಲಾದುವು ಸಮಸ್ತಗಳಾಗಿದ್ದರೂ ಸ್ವತಃ ಅನೇಕ ಸ್ವರಗಳಾಗಿರುವುದರಿಂದ ಹ್ರಸ್ವಾದೇಶಕ್ಕೆ ವಿಷಯಗಳೇ ಆಗಿರುವುವು. 'ಅಪೂರ್ವಪದಸ್ಯ' ಎಂದು ಹೇಳಿರುವುದರಿಂದ — 'ನದೀಪತಿ, ಗಂಗಾಜಲಂ, ವಧೂವರರ್' ಈ ಮೊದಲಾದ ಸಮಾಸಗಳಲ್ಲಿ ಪೂರ್ವಪದಭೂತಗಳಾದ 'ನದೀ, ಗಂಗಾ'ದಿ ಶಬ್ದಗಳಿಗೆ ಹ್ರಸ್ವಾದೇಶವಿಲ್ಲವೆಂದು ತಿಳಿಯಬೇಕು. ವಕ್ಷ್ಯಮಾಣ ವಿಶೇಷಸೂತ್ರಗಳಿಗೆ ಅವಿಷಯಗಳಾದ ಲಕ್ಷ್ಯಗಳಲ್ಲಿ ಪ್ರವರ್ತಿಸುವುದೆಂದರಿಯುವುದು.

**ಅವತಾರಿಕೆ ೧೧೬**

ಹೀಗೆ ಸಾಮಾನ್ಯವಾಗಿ ಸಂಸ್ಕೃತ ದೀರ್ಘಾಂತ ಶಬ್ದಗಳಿಗೆ ಹ್ರಸ್ವಾದೇಶವನ್ನು ವಿಧಿಸಲು ಆ ಕಾರಾಂತ ಸ್ತ್ರೀಲಿಂಗಶಬ್ದಗಳಿಗೂ ಹ್ರಸ್ವಾದೇಶವು ಪ್ರಸಕ್ತವಾಗುವುದೆಂದು ಅದಕ್ಕೆ ಬಾಧಕವಾಗಿ — 'ಏದಾತಃ ಸ್ತ್ರಿಯಾಂ ‖ ೧೧೮ ‖' ಎಂಬ ಸೂತ್ರವನ್ನು ಹೇಳುವುದಕ್ಕೆ ಅಲ್ಲಿ ಉಂಟಾಗುವ ಅತಿಪ್ರಸಕ್ತಿಯನ್ನು ವಾರಣೆಮಾಡುವದಕ್ಕೋಸ್ಕರ ಹ್ರಸ್ವವಿಧಾಯಕಗಣಸೂತ್ರವನ್ನು ಹೇಳುತ್ತಾನೆ —

**ಸೂತ್ರಂ ‖ ಕರುಣಾದೀನಾಂ ‖ ೧೧೬ ‖**

**ಅರ್ಥ ‖ ಕರುಣಾದಿಗಣಪಠಿತ ಪೂರ್ವಪದಭೂತವಲ್ಲದ ಶಬ್ದಗಳಿಗೆ ಹ್ರಸ್ವಾದೇಶವು ಬರುವುದು.**

**ಉದಾಹರಣೆ ‖** ಕರುಣಂ, ಉಪತ್ಯಕಂ, ಅಧಿತ್ಯಕಂ ‖ ಮೊದಲಾದುವು ಇದಕ್ಕೆ ಲಕ್ಷ್ಯಗಳು. ಕರುಣಾದಿಗಳಾವುವೆಂದರೆ – 'ಕರುಣಾ, ಖಟ್ವಾ, ಉಪತ್ಯಕಾ, ಅಧಿತ್ಯಕಾ, ದಂಷ್ಟ್ರಾ, ವಾಲುಕಾ, ಕಸ್ತೂರಾ, ಮೋಚಾ' ಮೊದಲಾದುವು. ಇದು ಆಕೃತಿಗಣವಾದುದರಿಂದ 'ಮುಸ್ತುರಾ, ಘೃಣಾ, ಪಥ್ಯಾ, ಪಾಟಲಾ' ಮೊದಲಾದುವನ್ನು ಯಥಾಲಕ್ಷ್ಯವಾಗಿ ಊಹಿಸಿಕೊಳ್ಳುವುದು.

**ವಿಚಾರ ೧೧೬**

ಈ ಸೂತ್ರದಲ್ಲಿ 'ಕರುಣಾದೀನಾಂ' ಎಂದು ಒಂದೇ ಪದವಿರುವುದು. ಪೂರ್ವಸೂತ್ರದಿಂದ 'ಹ್ರಸ್ವಃ, ಅಪೂರ್ವಪದಸ್ಯ' ಎಂಬ ಎರಡು ಪದಗಳು ಅನುವರ್ತಿಸಲ್ಪಡುವುವು. ಆದುದರಿಂದ ಅಪೂರ್ವಪದಭೂತಗಳಾದ ಕರುಣಾದಿಗಣಪಠಿತ ಶಬ್ದಗಳಿಗೆ ಹ್ರಸ್ವವು ಬರುವುದೆಂದು ಸೂತ್ರಾರ್ಥವಾಗುವುದು. ಈ ಸೂತ್ರವು ವಕ್ಷ್ಯಮಾಣ 'ಏದಾತಃ ಸ್ತ್ರಿಯಾಂ' ಎಂಬುದಕ್ಕೆ ಬಾಧಕವಾದುದರಿಂದ ಇಲ್ಲ ಆ ಕಾರಾಂತ ಸ್ತ್ರೀಲಿಂಗಗಳೇ ಪಾಠ ಮಾಡಲ್ಪಟ್ಟಿವೆ. ಇಲ್ಲಿ ಇವಕ್ಕೆ ಅಪೂರ್ವ

ಪದತ್ವವಿಶೇಷಣವನ್ನು ಕೊಟ್ಟಿರುವುದರಿಂದ —' ಕರುಣಾಶರಧಿ, ದಂಷ್ಟ್ರಾಮೂಲಂ ' ಮೊದಲಾದ ಸಮಾಸಗಳಲ್ಲಿ ಪೂರ್ವಪದಕ್ಕೆ ಬರುವುದಿಲ್ಲ. ಈ ಸೂತ್ರಾರಂಭವನ್ನು ಮಾಡಿರುವುದರಿಂದ ಈ ಸೂತ್ರಕ್ಕೆ ವಿಷಯವಾದುವನ್ನು ಬಿಟ್ಟುಳಿದ ಆ ಕಾರಾಂತ ಸ್ತ್ರೀಲಿಂಗಗಳನ್ನು ವಕ್ಷ್ಯಮಾಣಸೂತ್ರಕ್ಕೆ ವಿಷಯಗಳನ್ನಾಗಿ ತೆಗೆದುಕೊಳ್ಳುವುದು.

**ಅವತಾರಿಕೆ ೧೧೭**

ಹೀಗೆಯೇ ಅರ್ಥವಿಶೇಷದಲ್ಲಿ ವಕ್ಷ್ಯಮಾಣಸೂತ್ರಕ್ಕೆ ಸಂಕೋಚವನ್ನು ಕಲ್ಪಿಸುವ ಸೂತ್ರವನ್ನು ಹೇಳುತ್ತಾನೆ.

**ಸೂತ್ರಂ || ರಂಭಾಯಾಃ ಕದಲ್ಯಾಂ || ೧೧೭ ||**

**ಅರ್ಥ || ಕದಳೀರೂಪಾರ್ಥಕ ರಂಭಾಶಬ್ದಕ್ಕೂ ಪೂರ್ವಪದವಲ್ಲದಿದ್ದರೆ ಹ್ರಸ್ವಾದೇಶವು ಬರುವುದು.**

**ಉದಾಹರಣೆ** || ರಂಭಂ, ರಂಭಂಗಳ್ || ಮೊದಲಾದುವು ಉದಾಹರಣೆಗಳು.

**ವಿಚಾರ ೧೧೭**

ಈ ಸೂತ್ರದಲ್ಲಿ ' ರಂಭಾಯಾಃ, ಕದಲ್ಯಾಂ ' ಎಂದು ಎರಡು ಪದಗಳಿರುವುವು. ಪೂರ್ವ ಸೂತ್ರದಿಂದ ' ಹ್ರಸ್ವಃ, ಅಪೂರ್ವಪದಸ್ಯ ' ಎಂಬ ಎರಡು ಪದಗಳು ಅನುವರ್ತಿಸಲ್ಪಡುವುವು. ಆದುದರಿಂದ ' ಕದಲ್ಯರ್ಥಕರಂಭಾ ' ಶಬ್ದಕ್ಕೆ ಪೂರ್ವಪದವಲ್ಲದಿದ್ದರೆ ಹ್ರಸ್ವಾದೇಶವಾಗುವುದೆಂದು ಸೂತ್ರಾರ್ಥವಾಗುವುದು. ಈ ಸೂತ್ರವೂ ಮುಂದಿನ ಸೂತ್ರದಿಂದ ಪ್ರಾಪ್ತವಾದ ಎತ್ವಕ್ಕೆ ಬಾಧಕ ವಾದುದರಿಂದ ' ರಂಭಾ ' ಶಬ್ದವು ಕದಳೀವಾಚಕವಲ್ಲದೆ ಅಪ್ಸರಸ್ತ್ರೀವಾಚಕವಾದರೆ ಮುಂದಿನ ಸೂತ್ರದಿಂದ ಎ ಕಾರಾದೇಶವನ್ನೇ ಮಾಡಬೇಕು. ಅದರಿಂದ ' ರಂಭೆ ಕಳೆಕುಂ ಪಕ್ಕಣಮಂ ' ಮೊದಲಾದುವು ಸಿದ್ಧಿಸುವುವು. ' ಅಪೂರ್ವಪದಸ್ಯ ' ಎಂದು ಹೇಳಿರುವುದರಿಂದ ' ರಂಭಾ ಸ್ತಂಭಂಗಳ್ ' ಮೊದಲಾದ ಸಮಾಸಗಳಲ್ಲಿ ಪೂರ್ವದಲ್ಲಿರುವ ' ರಂಭಾ ' ಶಬ್ದಕ್ಕೆ ಬರುವುದಿಲ್ಲ.

**ಅವತಾರಿಕೆ ೧೧೮**

ಸಾಮಾನ್ಯವಾಗಿ ಸಂಸ್ಕೃತ ದೀರ್ಘಾಂತ ಶಬ್ದಗಳಿಗೆಲ್ಲಾ ಹ್ರಸ್ವಾದೇಶವು ಪ್ರಾಪ್ತವಾಗಲು ಆ ಕಾರಾಂತ ಸ್ತ್ರೀಲಿಂಗ ವಿಷಯದಲ್ಲಿ ಅದಕ್ಕೆ ಬಾಧಕವಾಗಿ ಎ ಕಾರಾದೇಶವನ್ನು ಹೇಳುತ್ತಾನೆ.

**ಸೂತ್ರಂ || ಎದಾತಃ ಸ್ತ್ರಿಯಾಂ || ೧೧೮ ||**

**ಅರ್ಥ || ಸಮಾಸಕೃತಾನೇಕಸ್ವರವಲ್ಲದೆಯೂ ಪೂರ್ವಪದವಲ್ಲದೆಯೂ ಇರುವ ಸ್ತ್ರೀಲಿಂಗ ವಾದ ಆ ಕಾರಾಂತ ಶಬ್ದಕ್ಕೆ ಎ ಕಾರಾದೇಶವು ಬರುವುದು.**

**ಉದಾಹರಣೆ** || ಮಾಲೆ, ಬಾಲೆ, ಶಾಲೆ, ಶಯ್ಯೆ, ಕಾಂತೆ, ವನಿತೆ || ಮೊದಲಾದುವು ಇದಕ್ಕೆ ಉದಾಹರಣೆಗಳು.

**ವಿಚಾರ ೧೧೮**

ಈ ಸೂತ್ರದಲ್ಲಿ — ' ಎತ್, ಆತಃ, ಸ್ತ್ರಿಯಾಂ ' ಎಂದು ಮೂರು ಪದಗಳಿರುವುವು. ಪೂರ್ವಸೂತ್ರದಿಂದ ' ಅಸಮಾಸೇ, ಅನೇಕಸ್ವರಸ್ಯ, ಅಪೂರ್ವಪದಸ್ಯ ' ಎಂಬ ಪದಗಳು ಅನುವರ್ತಿಸುವುವು. ' ಎತ್ ' ಎಂಬುದು ಎ ಕಾರ ಮಾತ್ರ ಬೋಧಕವು. ಇದೇ ಇಲ್ಲಿ ಪ್ರಥಮೆಯ

ವಾಗಿರುವುದು. 'ಆತಃ' ಎಂಬುದು ಆ ಕಾರವಮಾತ್ರಬೋಧಕ ಷಷ್ಠ್ಯಂತಪದವು. ಇದೇ ಇಲ್ಲಿ ಉದ್ದೇಶ್ಯವಾಗಿರುವುದು. 'ಅಸಮಾಸೇ ಅನೇಕಸ್ವರಸ್ಯ, ಸ್ತ್ರಿಯಾಂ' ಇವೆರಡೂ ವಿಶೇಷಣಗಳು 'ಅಸಮಾಸೇ ಅನೇಕಸ್ವರಸ್ಯ' ಎಂಬುದಕ್ಕೆ ಪೂರ್ವದಂತೆ ಸಮಾಸಕೃತಾನೇಕಸ್ವರವಲ್ಲದ ಎಂದರ್ಥವನ್ನು ಹೇಳಬೇಕು. ಇದು ಕೇವಲ ಆ ಕಾರದಲ್ಲಿ ಸಂಭವಿಸುವುದಿಲ್ಲವಾದುದರಿಂದ 'ಆ ಕಾರಾಂತಸ್ಯ' ಎಂದರ್ಥವಾಗುವುದು. 'ಸ್ತ್ರಿಯಾಂ, ಅಪೂರ್ವಪದಸ್ಯ' ಎಂಬ ವಿಶೇಷಣಗಳಿಂದ ಸ್ತ್ರೀಲಿಂಗವಾಗಿಯೂ ಅಪೂರ್ವಪದವಾಗಿಯೂ ಇರಬೇಕೆಂದು ತಿಳಿಯುವುದು. ಆದುದರಿಂದ ಸಮಾಸದಲ್ಲಿ ಅನೇಕಸ್ವರವಲ್ಲದೆಯೂ ಸ್ತ್ರೀಲಿಂಗವಾಗಿಯೂ ಪೂರ್ವಪದಭೂತವಲ್ಲದೆಯೂ ಇರುವ ಆ ಕಾರಾಂತ ಶಬ್ದಕ್ಕೆ ಎ ಕಾರಾದೇಶವು ಬರುವುದೆಂದು ಸೂತ್ರಾರ್ಥವಾಗಲು - '**ಷಷ್ಠೀಸ್ಥಾನೇಽಂತ್ಯಸ್ಯ**' ಎಂಬ ಸೂತ್ರದಿಂದ ಅಂತ್ಯದ ಆ ಕಾರಕ್ಕೆ ಬರುವುದೆಂದು ತಾತ್ಪರ್ಯವಾಗುವುದರಿಂದ 'ಮಾಲೆ, ಬಾಲೆ' ಮೊದಲಾದ ಲಕ್ಷ್ಯಗಳು ಸಿದ್ಧಿಸುವುವು. ಈ ಸೂತ್ರದಲ್ಲಿ — 'ಅನೇಕಸ್ವರಸ್ಯ' ಎಂದು ಸಂಬಂಧಿಸುವುದರಿಂದ ಏಕಸ್ವರಗಳಾದ - 'ಜ್ಯಾ, ಮಾ, ಸ್ತ್ಯಾ, ಸಾ' ಮೊದಲಾದುವುಗಳಲ್ಲಿ ಎ ಕಾರಾದೇಶವಿಲ್ಲ. 'ಅಸಮಾಸೇ' ಎಂದು ಹೇಳಿರುವುದರಿಂದ 'ಮಹಾಜ್ಯಾ, ಪರಮಾ, ಪಿರಂಗಸ್ತ್ಯಾ, ಪರಮುಸಾ' ಮೊದಲಾದುವುಗಳಲ್ಲಿಯೂ ಬರುವುದಿಲ್ಲ. 'ಆತಃ' ಎಂದು ಹೇಳಿರುವುದರಿಂದ — 'ನದೀ, ವಧೂ' ಮೊದಲಾದ ಈ ಕಾರಾಂತಾದಿಗಳಲ್ಲಿ ಬರುವುದಿಲ್ಲ. 'ಸ್ತ್ರಿಯಾಂ' ಎಂದು ಹೇಳಿರುವುದರಿಂದ —'ಕ್ಷೀರಪಂ, ಸೋಮಪಂ' ಮೊದಲಾದ ಆ ಕಾರಾಂತ ಪುಲ್ಲಿಂಗಗಳಲ್ಲಿ ಪೂರ್ವಪದಗಳಿಗೆ ಬರುವುದಿಲ್ಲ.

ಇಲ್ಲಿ ಸ್ತ್ರೀಲಿಂಗವೆಂಬ ವ್ಯವಸ್ಥೆಯು ಸಂಸ್ಕೃತರೀತಿಯಿಂದಲೇ ಹೇಳಬೇಕಲ್ಲದೆ ಭಾಷಾರೀತಿಯಿಂದ ಹೇಳಲಾಗದು. ಏಕೆಂದರೆ 'ಮಾಲಾ, ಶಯ್ಯಾ' ಮೊದಲಾದುವು ಭಾಷೆಯಲ್ಲಿ ನಪುಂಸಕಲಿಂಗಗಳಾಗಿಯೇ ಪ್ರಸಿದ್ಧವಾಗಿರುವುವು. ಆದುದರಿಂದ ಸಂಸ್ಕೃತದಲ್ಲಿ ಸ್ತ್ರೀಲಿಂಗಗಳಾದುವು ಇದಕ್ಕೆ ಲಕ್ಷ್ಯಗಳೆಂದು ತಿಳಿಯಬೇಕು. ಹಿಂದೆ ಹೇಳಿರುವ ಏಕಾಕ್ಷರ ಶಬ್ದಗಳಲ್ಲಿರುವ 'ಸ್ತ್ಯಾ' ಎಂಬುದಕ್ಕೆ 'ಜಪೆ' ಯೆಂದರ್ಥವು. 'ಪರಮುಸಾ' ಎಂಬಲ್ಲಿರುವ 'ಸಾ' ಎಂಬುದು ವಿಷ್ಣುವಾಚಕ 'ಅ' ಎಂಬುದರೊಡನೆ ಸಹಾರ್ಥಕ 'ಸ' ಶಬ್ದದೊಡನೆ ಸಮಾಸಮಾಡಲು ನಿಷ್ಪನ್ನವಾಗಿರುವುದರಿಂದ 'ಲಕ್ಷ್ಮೀ' ಎಂದರ್ಥವಾಗುವುದು.

**ಅವತಾರಿಕೆ ೧೧೯**

ಪೂರ್ವಸೂತ್ರದಿಂದ ಸಾಮಾನ್ಯವಾಗಿ ದೀರ್ಘಾಂತ ಶಬ್ದಗಳಿಗೆ ಪ್ರಾಪ್ತವಾದ ಹ್ರಸ್ವವು ಆಕಾರಾಂತ ಸ್ತ್ರೀಲಿಂಗಕ್ಕೂ ಪ್ರಾಪ್ತವಾಗಲು ಅದಕ್ಕೆ ಬಾಧಕವಾಗಿ ಎ ಕಾರಾದೇಶವು ಹೇಳಲ್ಪಟ್ಟಿತು. ಈಗ ಆ ಕಾರಾಂತ 'ಪಾತ್ರ' ಶಬ್ದಕ್ಕೆ ಅರ್ಥವಿಶೇಷದಲ್ಲಿ ಎ ಕಾರಾದೇಶವನ್ನು ವಿಕಲ್ಪವಾಗಿ ವಿಧಿಸುತ್ತಾನೆ.

**ಸೂತ್ರಂ ॥ ಪಾತ್ರಸ್ಯ ಭಾಂಡೇ ವಾ ॥ ೧೧೯ ॥**

**ಅರ್ಥ ॥ ಭಾಂಡಾರ್ಥಕವಾದ 'ಪಾತ್ರ' ಶಬ್ದಕ್ಕೆ ವಿಕಲ್ಪವಾಗಿ ಎ ಕಾರಾದೇಶವು ಬರುವುದು. ಇದು ಸಮಾಸದಲ್ಲಿ ಪೂರ್ವವಾಗಿದ್ದರೆ ಬರುವುದಿಲ್ಲ ಮೊದಲಾದುವನ್ನು ಪೂರ್ವಸೂತ್ರಗಳಂತೆಯೇ ತಿಳಿದುಕೊಳ್ಳುವುದು. ಇದು ವಿಕಲ್ಪವಾದುದರಿಂದ ಬಾರದ ಪಕ್ಷದಲ್ಲಿ ಇದ್ದಂತೆಯೇ ಪ್ರಯೋಗಿಸಲ್ಪಡುವುದು.**

**ಉದಾಹರಣೆ ||** ಪಾತ್ರೆ, ಪಾತ್ರೆಗಳ್, ಪಾತ್ರಂ, ಪಾತ್ರಂಗಳ್ || ಮೊದಲಾದುವು ಸಿದ್ಧಿಸುವುವು.

**ವಿಚಾರ ೧೧೯**

ಈ ಸೂತ್ರದಲ್ಲಿ — ' ಪಾತ್ರಸ್ಯ, ಭಾಂಡೇ, ವಾ ' ಎಂದು ಮೂರು ಪದಗಳಿರುವುವು. ಪೂರ್ವಸೂತ್ರದಿಂದ ' ಎತ್, ಅಪೂರ್ವಪದಸ್ಯ ' ಎಂಬೆರಡು ಪದಗಳು ಅನುವರ್ತಿಸಲ್ಪಡುವುವು. ' ಭಾಂಡೇ, ಅಪೂರ್ವಪದಸ್ಯ ' ಎಂಬಿವೆರಡೂ ' ಪಾತ್ರಸ್ಯ ' ಎಂಬುದಕ್ಕೆ ವಿಶೇಷಣವು. ಆದುದರಿಂದ ಭಾಂಡರೂಪಾರ್ಥದಲ್ಲಿರುವ ' ಪಾತ್ರ ' ಶಬ್ದವೆಂದರೆ ವಾಚ್ಯವಾಚಕತಾಸಂಬಂಧದಿಂದ ಭಾಂಡದಲ್ಲಿ ' ಪಾತ್ರ ' ಶಬ್ದವಿದೆ ಎಂದರ್ಥವಾಗಲು ಭಾಂಡವಾಚಕ ' ಪಾತ್ರ ' ಶಬ್ದಕ್ಕೆ ಎಂದು ಫಲಿತವಾಗುವುದು. ಇಂತಹ ' ಪಾತ್ರ ' ಶಬ್ದವು ಸಮಾಸದಲ್ಲಿ ಪೂರ್ವಪದವಾಗದಿದ್ದರೆ ಅದಕ್ಕೆ ವಿಕಲ್ಪವಾಗಿ ಎ ಕಾರಾದೇಶವು ಬರುವುದೆಂದು ಸೂತ್ರಾರ್ಥವಾಗುವುದು. ಇದರಿಂದ ' ಪಾತ್ರೆ ' ಮೊದಲಾದ ಉದಾಹರಣೆಗಳು ಸಿದ್ಧಿಸುವುವು. ಈ ಸೂತ್ರದಲ್ಲಿ ' ಭಾಂಡೇ ' ಎಂದು ಹೇಳಿರುವುದರಿಂದ ಯೋಗ್ಯಾರ್ಥದ ಅಥವಾ ' ನರ್ತಕಿ ' ಎಂಬರ್ಥದ ' ಪಾತ್ರ ' ಶಬ್ದಕ್ಕೆ ಬರುವುದಿಲ್ಲವೆಂದು ತಿಳಿಯುವುದು. ' ಪಾತ್ರಸ್ಯ ' ಎಂದು ಹೇಳಿರುವುದರಿಂದ ' ಭಾಜನ ' ಶಬ್ದಕ್ಕೆ ಬರುವುದಿಲ್ಲ.

ಇಲ್ಲಿ ಭಾಂಡವೆಂದರೆ ಉಪಕರಣವೆಂದರ್ಥವು. ತದ್ವಾಚಕವಾದುದಕ್ಕೇ ಎ ಕಾರಾದೇಶವೆಂದು ಸೂತ್ರದಲ್ಲಿ ಹೇಳಿರುವುದು. ಬೇರೆ ಅರ್ಥದಲ್ಲಿ ಬರುವುದೇ ಇಲ್ಲವೆಂದಲ್ಲ. ಭಾಂಡಾರ್ಥದಲ್ಲಿಯೆ ಪ್ರಚುರಪ್ರಯೋಗವಿರುವುದೆಂಬ ಅಭಿಪ್ರಾಯದಿಂದ **ಸೂತ್ರಕಾರರು** ಹೇಳಿರುವರೆಂದು ತಿಳಿಯಬೇಕು. ಆದುದರಿಂದ ಪ್ರಾಚೀನರು —

ದಯೆಯುಂ ಸ್ಥೈರಣೆಯುಂ ಶ್ರ
ದ್ಧೆಯುಮುಱುವುಂ ಶಕ್ತಿಯುಂ ವದಾನ್ಯತೆಯುಂ ಭ
ಕ್ತಿಯುಮೆಂಬೀಯೇೞುಂ ಪಾ
ತ್ರೆಯಸಿಕ್ಕುವ ದಾತೃಗೊಪ್ಪುವಮಲಗುಣಂಗಳ್

ಮೊದಲಾಗಿ ಇತರಾರ್ಥದಲ್ಲಿಯೂ ಪ್ರಯೋಗಿಸಿರುವರು. ಇಂತಹ ಪ್ರಯೋಗಗಳನ್ನು ಸಂಗ್ರಹಿಸುವುದಕ್ಕೋಸ್ಕರ ' ವಾ ' ಗ್ರಹಣವು ಬಹುಲಾರ್ಥಕವೆಂದು ಹೇಳಬೇಕು. ಅಥವಾ ಇಂತಹ ಪ್ರಯೋಗಗಳಲ್ಲಿ ' ಭಾಂಡ ' ಎಂದರೆ ಆಧಾರ, ಆಶ್ರಯ ಎಂದರ್ಥವಾಗುವುದರಿಂದ ಔಪಚಾರಿಕವಾಗಿ ಆಧಾರಾಧೇಯಭಾವಕಲ್ಪನೆಯನ್ನು ಮಾಡಿ ಉಪಪತ್ತಿಮಾಡಬಹುದು.

**ಅವತಾರಿಕೆ ೧೨೦**

ಇನ್ನು ಕೆಲವು ಸಂಸ್ಕೃತಶಬ್ದವಿಷಯದಲ್ಲಿಯೂ ವ್ಯಂಜನಾಂತಶಬ್ದಗಳ ವಿಷಯದಲ್ಲಿಯೂ ಎ ಕಾರಾದೇಶವು ಅಪ್ರಾಪ್ತವಾಗಲು ಕೆಲವು ಆ ಕಾರಾಂತ ಸ್ತ್ರೀಲಿಂಗವಿಷಯದಲ್ಲಿ ನಿತ್ಯವಾಗಿ ಪ್ರಾಪ್ತವಾಗಲು ಉಭಯತ್ರ ವಿಭಾಷೆಯನ್ನು ಹೇಳುತ್ತಾನೆ.

**ಸೂತ್ರಂ || ಊಷ್ಮಾದೀನಾಂ || ೧೨೦ ||**

**ಅರ್ಥ ||** ಪೂರ್ವಪದಭೂತಗಳಲ್ಲದ ಊಷ್ಮಾದಿಗಣಪಠಿತಗಳಾದ ಶಬ್ದಗಳಿಗೆ ವಿಕಲ್ಪವಾಗಿ ಎ ಕಾರಾದೇಶವು ಬರುವುದು. ಇದು ಬಾರದ ಪಕ್ಷದಲ್ಲಿ ಯಥಾಯೋಗವಾಗಿ ವಕ್ಷ್ಯಮಾಣ ಕಾರ್ಯಗಳೂ ಬರುವುವೆಂದು ತಿಳಿಯಬೇಕು.

**ಉದಾಹರಣೆ ||** ಊಷ್ಮೆ, ಊಷ್ಮಂ; ಗ್ರೀವೆ, ಗ್ರೀವಂ; ದರ್ಭೆ, ದರ್ಭಂ; ಮಾತೆ, ಮಾತರಂ, ಮಾತೃ || ಮೊದಲಾದುವು ಇದಕ್ಕೆ ಉದಾಹರಣೆಗಳು.

ಊಷ್ಮಾದಿಗಣಪಠಿತಗಳಾದ ಶಬ್ದಗಳಾವುವೆಂದರೆ — ' ಊಷ್ಮನ್, ದರ್ಭ, ಅಕ್ಷತ, ಹಂಸ, ಶಾಣ, ಫಲಕ, ಘಟಿಕ,* ಕುಂಭ, ಶಾಕ, ಘೂಕ, ಪ್ರಹರಣ, ಜೀರಕ, ಅಸ್ಥುಕ, ಕಲಮ, ಊಹ, ಪೃಶ್ನಿ, ಉದಾಹರಣ, ಕೋಣ, ವಧ, ಅಭಿಲಾಷ, ಕನ್ಯಾರಾ, ಗ್ರೀವಾ, ಭಿಕ್ಷಾ, ಆಸ್ತೀಕ್ಷಾ, ಕುಮಾಸ್ತಾ, ಘಟಿಕಾ,* ಆಖ್ಯಾ, ಆಹ್ವಾ, ನಾಸಿಕಾ, ಉತ್ಕಣ್ಠಾ, ಉತ್ಕಲಿಕಾ, ವನ್ಯಾ, ಮಾತೃ, ಅಮುತ್ರ, ಪರತ್ರ, ಉಭಯತ್ರ, ಸರ್ವತ್ರ ' ಮೊದಲಾದುವೇ ಊಷ್ಮಾದಿಗಳು. ಇದೂ ಆಕೃತಿಗಣವಾದುದರಿಂದ ಶಿಷ್ಟಪ್ರಯೋಗಾನುಸಾರವಾಗಿ ಇಲ್ಲಿ ಅಪಠಿತವಾದ ಶಬ್ದಗಳನ್ನೂ ಊಹಿಸಿಕೊಳ್ಳುವುದು.

**ವಿಚಾರ ೧೨೦**

ಈ ಸೂತ್ರದಲ್ಲಿ — ' ಊಷ್ಮಾದೀನಾಂ ' ಎಂಬ ಒಂದೇ ಪದವಿರುವುದು. ಪೂರ್ವದಿಂದ ' ಎತ್, ವಾ, ಅಪೂರ್ವಪದಸ್ಯ ' ಎಂಬಿವು ಅನುವರ್ತಿಸಲ್ಪಡುವುವು. ಆದುದರಿಂದ ಅಪೂರ್ವಪದಭೂತಗಳಾದ ಊಷ್ಮಾದಿಗಣಪಠಿತ ಶಬ್ದಗಳಿಗೆ ವಿಕಲ್ಪವಾಗಿ ಎ ಕಾರಾದೇಶವು ಬರುವುದೆಂದು ಸೂತ್ರಾರ್ಥವಾಗುವುದು. ಇದರಿಂದ ' ಊಷ್ಮನ್ ' ಎಂಬ ನ ಕಾರಾಂತ ಅಂತ್ಯದ ನ ಕಾರಕ್ಕೆ ಎ ಕಾರದೇಶವನ್ನು ಮಾಡಿ — ' **ಉಬನಾಮಹಾನ್** ' ಎಂಬುದರಿಂದ ಆ ಕಾರಕ್ಕೂ ಲೋಪವನ್ನು ಮಾಡಲು ' ಊಷ್ಮೆ ' ಎಂದು ಸಿದ್ಧಿಸುವುದು. ಹೀಗೆಯೇ ವ್ಯಂಜನಾಂತ ಶಬ್ದಗಳಲ್ಲೆಲ್ಲಾ ಊಹಿಸಿಕೊಳ್ಳಬೇಕು. ಈ ಆದೇಶವು ಬಾರದಪಕ್ಷದಲ್ಲಿ – **ನೋऽಶ್ವಪಥಿಮಥಃ || ೧೩೦ ||** ಎಂಬ ಸೂತ್ರದಿಂದ ಅಂತ ನ ಕಾರಕ್ಕೆ ಲೋಪವು ಬಂದು 'ಊಷ್ಮಂ' ಎಂದಾಗುವುದು. ' ಮಾತೃ ' ಶಬ್ದದ ಋ ಕಾರಕ್ಕೆ ಎ ಕಾರಾದೇಶವನ್ನು ಮಾಡಲು ಮಾತೆಯೆಂದಾಗಿದೆ. ಇದುಬಾರದಿದ್ದರೆ ' **ಋತೋऽರಃ || ೧೨೨ ||** ' ಎಂಬುದರಿಂದ ವೈಕಲ್ಪಿಕ-ಅರ್-ಆದೇಶವನ್ನು ಮಾಡಲು ' ಮಾತರಂ ' ಎಂದಾಗಿದೆ. ಅದೂ ಬಾರದಿದ್ದರೆ ' ಮಾತೃ ' ಎಂದು ಪ್ರಕೃತಿ ಮಾತ್ರವೇ ನಿಲ್ಲುವುದು.

ಇದು ಆಕೃತಿಗಣವೆಂದು ಮೂಲದಲ್ಲಿ ಹೇಳಿರುವುದರಿಂದ 'ಪ್ರಥಿಮನ್, ದ್ರಾಘಿಮನ್, ಗರಿಮನ್, ಲಘಿಮನ್ ' ಮೊದಲಾದ ಕೆಲವು ಇಮನ್ ಪ್ರತ್ಯಯಾಂತಗಳನ್ನು ಶಿಷ್ಟಪ್ರಯೋಗಾನುಸಾರವಾಗಿ ಈ ಗಣದಲ್ಲಿ ಪಾಠಮಾಡಿಕೊಳ್ಳಬೇಕು. ಆದುದರಿಂದ ಪ್ರಾಚೀನರು ಪ್ರಯೋಗಿಸಿರುವ —

ಗರಿಮಮುಯಕ್ಕೆ ಮಿಕ್ಕಣಿಮಮುಜ್ಜಾತೆಗರ್ಚ್ಚಜಿನೇಶ್ವರಾರ್ಚ್ಚನಾ
ಪರಿಕರವೃದ್ಧಿಯೊಳ್ ಮಹಿಮೆಯಿಾಶಿತೆ ತತ್‌ಪರಿಚರ್ಯ್ಯೆಯಲ್ಲಿ ಬಿ
ತ್ತರಿಸುವ ಕಾಮರೂಪತೆ ಸುಭೃತ್ಯವಶಿತ್ವಮದೊಪ್ಪೆ ವಿಶ್ರುತಾಂ
ಬರತಲಯಾನದೊಳ್ ಲಘಿಮೆಯಾಪ್ತಿಯೊಳಾಪ್ತಿ ಸುರಂ ವಿರಾಜಿಪಂ

* [ ರಾ। ಬ। ನರಸಿಂಹಾಚಾರ್ಯರು ಸಂಪಾದಿಸಿದ ಮೂಲಗ್ರಂಥದಲ್ಲಿ ಇದಕ್ಕೆ ' ಘಟಿಕ ' ಎಂದು ಪಾಠಾಂತರವನ್ನು ಕೊಟ್ಟಿರುವುದು. ಈ ಪ್ರಕಾಶಿಕೆಯ ಮೊದಲನೆಯ ಆವೃತ್ತಿಯಲ್ಲಿ ' ಘಟಿಕಾ ' ಎಂದು ಆಕಾರಾಂತವಾಗಿ ಕೊಟ್ಟಿರುವುದರಿಂದ ಇಲ್ಲಿ ಎರಡೂ ಶಬ್ದಗಳನ್ನು ಇಟ್ಟುಕೊಳ್ಳಲಾಗಿದೆ. —ಸಂಪಾದಕ ]

ಮೊದಲಾದ ಪದ್ಯಸ್ಥ ಪ್ರಯೋಗಗಳು ಸಿದ್ಧಿಸುವುವೆಂದು ತಿಳಿಯುವುದು.

**ದರ್ಪಣಕಾರನು** ಈ ವಿಷಯದಲ್ಲಿ ಬೇರೆ ಬೇರೆ ಸೂತ್ರವನ್ನು ಹೇಳದಿದ್ದರೂ ಹ್ರಸ್ವ, ಎ ಕಾರಾದೇಶಗಳೆರಡಕ್ಕೂ ಸಂಗ್ರಹಬರುವಂತೆಯೂ ಅತಿಪ್ರಸಕ್ತಿವಾರಣೆಯಾಗುವಂತೆಯೂ —

ಆದಂ ಹ್ರಸ್ವೈದಂತಮು
ಪಾದತ್ವಂ ಹ್ರಸ್ವಮೆನಿಸಿದೀದೂದಂತಂ
ಜ್ಯಾದಿಸಮುಸ್ತ್ರೈಕಾಕ್ಷರ
ಮಾದ ವಿಕೃತಿಶಬ್ದಮುಕ್ತಿವಿದರಿಂ ಲಿಂಗಂ (ಸೂತ್ರ ೮೪)

ಎಂಬ ಸೂತ್ರವನ್ನು ಹೇಳಿ 'ಆದಂ' ಎಂಬ ಬಹುಲಾರ್ಥಕ ಶಬ್ದದಿಂದ ಎಲ್ಲವನ್ನು ಸಮರ್ಥನ ಮಾಡಿರುವನು.

**ಅವತಾರಿಕೆ ೧೨೧**

ಇನ್ನು ಕೆಲವು ಸ್ವರಾಂತಶಬ್ದಗಳ ವಿಷಯದಲ್ಲಿ ಆದೇಶಾಂತರವನ್ನು ಹೇಳಲು ಮೊದಲು 'ರೂಪ' ಶಬ್ದಕ್ಕೆ ಹೇಳುತ್ತಾನೆ.

**ಸೂತ್ರಂ ॥ ಉದ್ರೂಪಸ್ಯ ॥ ೧೨೧ ॥**

**ಅರ್ಥ ॥ ಪೂರ್ವಪದಭೂತವಲ್ಲದ ರೂಪಶಬ್ದದ ಕೊನೆಗೆ ಉ ಕಾರಾದೇಶವು ವಿಕಲ್ಪವಾಗಿ ಬರುವುದು.**

**ಉದಾಹರಣೆ** ॥ ರೂಪು, ರೂಪುಗಳ್; ರೂಪಂ, ರೂಪಂಗಳ್ ॥ ಮೊದಲಾದುವು ಉದಾಹರಣೆಗಳು.

**ವಿಚಾರ ೧೨೧**

ಈ ಸೂತ್ರದಲ್ಲಿ 'ಉತ್, ರೂಪಸ್ಯ' ಎಂದು ಎರಡು ಪದಗಳಿರುವುವು. ಪೂರ್ವದಿಂದ 'ಅಪೂರ್ವಪದಸ್ಯ, ವಾ' ಎಂಬಿವು ಅನುವರ್ತಿಸಲ್ಪಡುವುವು. 'ಉತ್' ಎಂಬಲ್ಲಿ ತ ಕಾರೋಚ್ಚಾರಣೆಯು ಅಸಂದೇಹಾರ್ಥವಾಗಿ ಮಾಡಲ್ಪಟ್ಟಿರುವುದರಿಂದ ಪೂರ್ವಪದವಲ್ಲದ 'ರೂಪ'ಶಬ್ದದ ಕೊನೆಯ ಅ ಕಾರಕ್ಕೆ ಉ ಕಾರಾದೇಶವು ವಿಕಲ್ಪವಾಗಿ ಬರುವುದೆಂದು ಸೂತ್ರಾರ್ಥವಾಗಲು 'ರೂಪು, ರೂಪುಗಳ್' ಮೊದಲಾದುವು ಸಿದ್ಧಿಸುವುವು. ಇದು ಬಾರದ ಪಕ್ಷದಲ್ಲಿ 'ರೂಪಂ' ಮೊದಲಾಗಿ ಇದ್ದಂತೆಯೇ ಇರುವುದು. ಇಲ್ಲಿ 'ವಾ' ಎಂಬುದು ಬಹುಲಾರ್ಥಕವೆಂದಂಗೀಕರಿಸಲು ಶಿಷ್ಟಪ್ರಯೋಗಾನುಸಾರವಾಗಿ ದಂಡ, ಬಿರುದಾದಿ ಶಬ್ದಗಳಿಗೂ ಬರುವುದೆಂದು ತಿಳಿಯಬೇಕು. ಆದುದರಿಂದಲೇ —

**ತಡೆಯದೆ ಮುಂ ಕಿರಿದ ಶಿರಂ**
**ಜಡೆಗಟ್ಟಲ್ಬಾರದೆಂದು ಬೋಳಿಸಿ ಬೋದಂ**
**ಕುಡಿ ಕೊಂಡನವಂ ತಪಮಂ**
**ಗೆಡೆಗೊಂಡಿರೆ ದಂಡು ಬೂದಿ ಸೂರೆ ರುದ್ರಾಕ್ಷಂ**

**ನಿರವಿಸಿದುದಸೇವ್ಯತೆಯಂ**
**ಸೂರೆ ಭಸ್ಮಂ ಸ್ವಪದವೃತ್ತಿಯಂ ದಂಡು ವಿನಿ**
**ಷ್ಕುರದಂಡಧರತೆಯಂ ತಾಂ**
**ಧರಿಯಿಸೆ ರೌದ್ರಾಕ್ಷನೆಂಬುದಂ ರುದ್ರಾಕ್ಷಂ**

ನೆರೆಯಱಿಯದ ಪೊಱೆಯಱಿಯದ
ಬಿರುದುಗಳೇಕೆಮಗೆ ಕೃತಿಯನೀಕ್ಷಿಸಿ ಮಿಗೆ ಮ
ಚ್ಚರಿಸುವ ಕವಿಯೆರ್ದೆ ಬಿಕ್ಕನೆ
ಬಿರಿದೊಡದೇ ಬಿರುದು ಮಿಕ್ಕ ಬಿರುದುಂ ಬಿರುದೇ

ಮೊದಲಾದ ಪ್ರಾಚೀನರ ಪ್ರಯೋಗಗಳು ಸಿದ್ಧಿಸುವುವು.

**ಅವತಾರಿಕೆ ೧೨೨**

ಇನ್ನು ಋ ಕಾರಾಂತ ಶಬ್ದಗಳ ವಿಷಯದಲ್ಲಿ ಆದೇಶ-ವ್ಯವಸ್ಥಾಪಕವಾದ ಸೂತ್ರವನ್ನು ಹೇಳುತ್ತಾನೆ.

**ಸೂತ್ರಂ || ಋತೋಽರಃ || ೧೨೨ ||**

**ಅರ್ಥ || ಪೂರ್ವಪದವಲ್ಲದ ಋ ಕಾರಾಂತ ಶಬ್ದದ ಕೊನೆಯ ಋ ಕಾರಕ್ಕೆ ' ಅರ ' ಎಂಬ ಆದೇಶವು ವಿಕಲ್ಪವಾಗಿ ಬರುವುದು. ಇದು ಬಾರದಿದ್ದರೆ ಪ್ರಕೃತಿ ಮಾತ್ರವೇ ಇರುವುದು.**

**ಉದಾಹರಣೆ ||** ಪಿತರಂ, ಪಿತೃ; ಮಾತರಂ, ಮಾತೃ; ಭ್ರಾತರಂ, ಭ್ರಾತೃ; ಜಾಮಾತರಂ, ಜಾಮಾತೃ|| ಮೊದಲಾದ ಋ ಕಾರಾಂತಗಳಾದ ಸಂಜ್ಞಾಶಬ್ದಗಳೇ ಇದಕ್ಕೆ ಲಕ್ಷ್ಯಗಳು.

**ವಿಚಾರ ೧೨೨**

ಈ ಸೂತ್ರದಲ್ಲಿ ' ಋತಃ, ಅರಃ ' ಎಂದು ಎರಡು ಪದಗಳಿರುವುವು. ಪೂರ್ವದಿಂದ ' ವಾ, ಅಪೂರ್ವಪದಸ್ಯ ' ಎಂಬಿವು ಅನುವರ್ತಿಸಲ್ಪಡುವುವು. ' ಋತಃ ' ಎಂದು ' ತ 'ಪರಕರಣ ಮಾಡಿರುವುದರಿಂದ ಹ್ರಸ್ವ ಋ ಕಾರ ಮಾತ್ರವೇ ಗ್ರಹಿಸಲ್ಪಡುವುದು. ಕೇವಲ ಋ ವರ್ಣಕ್ಕೆ ಪ್ರಯೋಗವಿಲ್ಲವಾದುದರಿಂದಲೂ ' ಅಪೂರ್ವಪದಸ್ಯ ' ಎಂಬ ವಿಶೇಷಣಸಾಮರ್ಥ್ಯದಿಂದಲೂ ಇಲ್ಲಿ ' ಋಕಾರಾಂತಶಬ್ದಸ್ಯ ' ಎಂದು ಅರ್ಥವನ್ನು ಹೇಳಬೇಕು. ಹೀಗೆ ಹೇಳಿದರೂ ' ಷಷ್ಠ್ಯಾಃ ಸ್ಥಾನೇಽಂತ್ಯಸ್ಯ ' ಎಂಬ ಪರಿಭಾಷೆಯಿಂದ ಅಂತ್ಯ ಋ ಕಾರಕ್ಕೆ ಬರುವುದೆಂದರ್ಥವಾಗುವುದು. ಆದುದರಿಂದ ಪೂರ್ವಪದವಲ್ಲದ ಋ ಕಾರಾಂತಶಬ್ದದ ಕೊನೆಯ ಋಕಾರಕ್ಕೆ ' ಅರ ' ಎಂಬ ಆದೇಶವು ವಿಕಲ್ಪವಾಗಿ ಬರುವುದೆಂದು ಸೂತ್ರಾರ್ಥವಾಗುವುದರಿಂದ ' ಪಿತರಂ, ಪಿತೃ ' ಮೊದಲಾದ ಮೂಲದಲ್ಲಿ ಕೊಟ್ಟಿರುವ ಲಕ್ಷ್ಯಗಳೂ —

ಮಾತರರುಂ ಪಿತರರುಮಾ
ಭ್ರಾತರರುಂ ಸತಿಯರುಂ ನಿಜಾತ್ಮಜರುಂ ಜಾ
ಮಾತರರುಮೆಲ್ಲರುಂ ಸಲೆ
ಸ್ವೈತಿಪ್ಪರ್ ಜವನನಾರುಮೇಂ ಬಾರಿಪರೇ

ಮೊದಲಾದ ಕವಿಪ್ರಯೋಗಗಳೂ ಸಿದ್ಧಿಸುವುವು. ವಕ್ಷ್ಯಮಾಣಬಾಧಕಸೂತ್ರಗಳಿಗೆ ಅವಿಷಯವಾದುವು ಇದಕ್ಕೆ ವಿಷಯಗಳೆಂದು ತಿಳಿಯಬಹುದು.

ಈ ಸೂತ್ರದಲ್ಲಿ ' ಋತಃ ' ಎಂದು ' ತ 'ಪರಕರಣ ಮಾಡಿರುವುದರಿಂದ ' ಪ್ರಿಯಗ್ನಾ ' ಮೊದಲಾದ ದೀರ್ಘಾಂತ ಶಬ್ದಗಳಲ್ಲಿ ಈ ಅರಾದೇಶವು ಬರುವುದಿಲ್ಲವೆಂದು ತಿಳಿಯಬೇಕು. ಇಲ್ಲಿ ' ಪ್ರಿಯಶ್ಚಾಸೌ ಗ್ನಾಶ್ಚ ' ಎಂದು ವಿಗ್ರಹವನ್ನು ಮಾಡಿ ಸಮಾಸಮಾಡಲು ' ಪ್ರಿಯಗ್ನಾ 'ಶಬ್ದವು

ಸಮಾಸಕೃತಾನೇಕಸ್ವರವುಳ್ಳುದಾಮುದರಿಂದ '**ಹ್ರಸ್ವೋಽನೇಕಸ್ವರಸ್ಯಾಸಮಾಸೇಽಪೂರ್ವಪದಸ್ಯ**' ಎಂಬ ಸೂತ್ರದಿಂದ ಹ್ರಸ್ವವು ಬಾರದ್ದರಿಂದ ದೀರ್ಘಾಂತವಾಗಿರಲು ಇದರಿಂದ ಅರಾದೇಶವು ಬರುವುದಿಲ್ಲ. 'ಪ್ರಿಯಂ ಗೃಣಾತಿ' ಎಂದು ವಿಗ್ರಹವನ್ನು ಮಾಡಿ ಉಪಪದಸಮಾಸವನ್ನು ಮಾಡಲು ಹ್ರಸ್ವವು ಪ್ರಾಪ್ತವಾಗುವುದರಿಂದ 'ಪ್ರಿಯಗೃ' ಎಂದು ಋ ಕಾರಾಂತವು ಸಂಭವಿಸುವುದೆಂದು 'ಪ್ರಿಯಗ್ರ್ಯಾ' ಎಂದು ರೂಪವು ಪ್ರಸಕ್ತವಾಗುವುದು. ಆದರೆ ಈ ತದ್ಭವ ಪ್ರಕರಣದಲ್ಲಿ ಸಂಸ್ಕೃತರುದ್ಧ ಪ್ರಾತಿಪದಿಕಗಳೇ ಸ್ಥಾನಿಗಳಾಗಿ ಅಂಗೀಕರಿಸಲ್ಪಟ್ಟಿರುವುದರಿಂದ ಹ್ರಸ್ವಾದೇಶವನ್ನು ಹೊಂದಿದ ಶಬ್ದವು ಏಕದೇಶದಲ್ಲಿ ವಿಕೃತವಾಮುದರಿಂದ ತದ್ಭವದಲ್ಲಿಯೇ ಅಂತರ್ಭೂತವಾಗಿ ಅದು ಕರ್ಣಾಟಕ ಶಬ್ದವೇ ಆಗಿರುವುದರಿಂದ ಅರಾದೇಶವಿಲ್ಲವೆಂದು ತಿಳಿಯಬೇಕು. ಇಲ್ಲಿ **ಪಾಣಿನಿ-ಶಾಕಟಾಯನರ** ಮತದಲ್ಲಿ ಋ ಕಾರಾಂತ ಧಾತುಗಳಿಗೆ '**ಋತ ಇದ್ಧಾತೋಃ ಅನ್ತ್ಯೋಪಾನ್ತ್ಯತ್ರ್ಯಾಂ**' ಇತ್ಯಾದಿ ಸೂತ್ರಗಳಿಂದ 'ಇರ್' ಆದೇಶವನ್ನು ವಿಧಿಸಿ ಪದಾಂತದಲ್ಲಿ ದೀರ್ಘವನ್ನು ವಿಧಿಸುವುದರಿಂದ 'ಪ್ರಿಯಗೀಃ' ಎಂದೇ ರೂಪವಾಗುವುದಲ್ಲದೆ 'ಪ್ರಿಯಗ್ರ್ಯಾ' ಎಂದು ಆಗುವುದಿಲ್ಲವಾದುದರಿಂದ 'ಪ್ರಿಯಗ್ರ್ಯಾ' ಎಂದು ದೀರ್ಘ ಋ ಕಾರಾಂತವನ್ನು ಇಲ್ಲಿ ಕೊಟ್ಟಿರುವುದು ಹೇಗೆ ಸಂಗತವಾಗುವುದೆಂದು ಕೆಲವರು ಶಂಕಿಸುವರು. **ಪಾಣಿನ್ಯಾ**ದಿ ಮತಗಳಲ್ಲಿ ಆಗದಿದ್ದರೂ **ದೇವನಂದಿ** ಮತದಲ್ಲಿ 'ಇರ್' ಆದೇಶವನ್ನು ವಿಕಲ್ಪವಾಗಿ ವಿಧಿಸಿರುವುದರಿಂದ ಅದು ಬಾರದ ಪಕ್ಷದಲ್ಲಿ ಋ ಕಾರಾಂತ ಶಬ್ದವೂ ಸಂಭವಿಸುವುದೆಂದು ಇಲ್ಲಿ ಉದಾಹರಿಸಲ್ಪಟ್ಟಿದೆ ಎಂದು ತಿಳಿಯಬೇಕು.

ಇಲ್ಲಿ **ದರ್ಪಣಕಾರನು** ವಕ್ಷ್ಯಮಾಣಸೂತ್ರಾರ್ಥಗಳನ್ನೂ ಸಂಗ್ರಹಿಸಿ ಒಂದೇ ಸೂತ್ರದಲ್ಲಿ-

> ಅತ್ವಾಂತಮುಮಿತ್ವಾಂತಮು
> ಮುತ್ವಾಂತಮುಮಾ ಋದಂತಮುಂ ನಿಜಲಿಂಗಂ
> ಋತ್ವಕ್ಕಾರಾದೇಶಂ
> ತತ್ತಂ ಪೀನಂ ವಿಧಾತೃಶಬ್ದಾಂರಾಂತಂ (ಸೂತ್ರ ೮೪)

ಎಂದು ಹೇಳಿರುವನು. ಇಲ್ಲಿ 'ಪೀನಂ' ಎಂಬ ಬಹುಲಾರ್ಥಕ ಶಬ್ದಗ್ರಹಣದಿಂದ ಅತಿಪ್ರಸಕ್ತಿಯೇನುಂಟಾದರೂ ಪರಿಹರಿಸಿಕೊಳ್ಳಬೇಕೆಂದು ತಿಳಿಯಬೇಕು. 'ಪಿತೃ' ಶಬ್ದಕ್ಕೆ ಮಾತ್ರ ಅರಾದೇಶವನ್ನು (ಸ್ವರ್ಗಸ್ಥರಾದ 'ಪಿತೃ' ಶಬ್ದಕ್ಕೆ ಎಂದು ವೃತ್ತಿಯಲ್ಲಿ ಹೇಳಿರುವನು)

> ಪಿತೃಶಬ್ದದೆಡೆಗರಾದೇ
> ಶತೆ .... .... ... (ಸೂತ್ರ ೮೫)

ಮೊದಲಾದ ಸೂತ್ರದಿಂದ ವಿಧಿಸಿರುವನು. ಆದರೂ ಜಾಮಾತಾದಿಗಳಿಗೂ ಪಿತೃಸಾಮಾನ್ಯವಾಚಕಕ್ಕೂ ಬಹುಲವೆಂಬುದರಿಂದ ಊಹಿಸಿಕೊಳ್ಳಬೇಕು.

**ಅವತಾರಿಕೆ ೧೨೩**

ಪೂರ್ವಸೂತ್ರದಿಂದ ಸಾಮಾನ್ಯವಾಗಿ ಪ್ರಾಪ್ತವಾದ ಅರಾದೇಶಕ್ಕೆ ಬಾಧಕವಾದ **ಸೂತ್ರ**ವನ್ನು ಹೇಳುತ್ತಾನೆ.

**ಸೂತ್ರಂ ॥ ಋದಾರೌ ತುಃ ॥ ೧೨೩ ॥**

**ಅರ್ಥ ||** ಪೂರ್ವಪದವಲ್ಲದ ತೃ ಪ್ರತ್ಯಯಾಂತ ಶಬ್ದದ ಕೊನೆಯ ಋ ಕಾರಕ್ಕೆ ಋ ಕಾರಾದೇಶವೂ ಅರಾದೇಶವೂ ಬರುವುದು.

**ಉದಾಹರಣೆ ||** ಭರ್ತೃ, ಭರ್ತಾರಂ; ಹರ್ತೃ, ಹರ್ತಾರಂ; ಸ್ಮರ್ತೃ, ಸ್ಮರ್ತಾರಂ; ಧರ್ತೃ, ಧರ್ತಾರಂ || ಮೊದಲಾದ ತೃ ಪ್ರತ್ಯಯಾಂತಗಳು ಇದಕ್ಕೆ ಲಕ್ಷ್ಯಗಳಾಗುವುವು.

**ವಿಚಾರ ೧೨೩**

ಈ ಸೂತ್ರದಲ್ಲಿ — 'ಋದಾರೌ, ತುಃ' ಎಂದು ಎರಡು ಪದಗಳಿರುವುವು. ಪೂರ್ವದಿಂದ 'ಅಪೂರ್ವಪದಸ್ಯ' ಎಂಬುದೊಂದೇ ಪದವು ಅನುವರ್ತಿಸಲ್ಪಡುವುದು. 'ಋದಾರೌ' ಎಂಬುದು 'ಋತ್ ಚ ಅರಶ್ಚ = ಋದಾರೌ' ಎಂದು ದ್ವಂದ್ವಸಮಾಸವು. ಇವೇ ಇಲ್ಲಿ ವಿಧೇಯಗಳು. 'ತುಃ ಎಂಬುದು 'ತೃ' ಎಂಬ ಪ್ರತ್ಯಯಬೋಧಕ ಷಷ್ಠ್ಯಂತಪದವು. ಇದು —

**'ನ ಕೇವಲಾಃ ಪ್ರಕೃತಯಃ ಪ್ರಯೋಕ್ತವ್ಯಾ ನಾಪಿ ಪ್ರತ್ಯಯಾಃ'**

ಎಂಬುದರಿಂದ ಕೇವಲ ಪ್ರತ್ಯಯಕ್ಕೆ ಪ್ರಯೋಗವಿಲ್ಲವೆಂದು —

**'ಪ್ರತ್ಯಯಗ್ರಹಣೇ ಯಸ್ಮಾತ್ ಸವಿಹಿತಸ್ತದಾದೇಸ್ತದಂತಸ್ಯ ಗ್ರಹಣಂ'**

ಎಂಬ ಪರಿಭಾಷೆಯಿಂದ ತದಂತಲಾಭವು ಬರಲು 'ತೃ ಪ್ರತ್ಯಯಾಂತಸ್ಯ' ಎಂದರ್ಥವಾಗುವುದು. ಅದಕ್ಕೆ 'ಅಪೂರ್ವಪದಸ್ಯ' ಎಂಬುದು ವಿಶೇಷಣವು. ಆದುದರಿಂದ ಪೂರ್ವಪದವಲ್ಲದ 'ತೃ' ಪ್ರತ್ಯಯಾಂತಕ್ಕೆ 'ಋ, ಅರ' ಎಂಬಾದೇಶಗಳು ಪರ್ಯಾಯವಾಗಿ ಬರುತ್ತವೆ- ಎಂದರೆ **'ಷಷ್ಠ್ಯಾಃ ಸ್ಥಾನೇಽಂತ್ಯಸ್ಯ'** ಎಂಬುದರಿಂದ ಅಂತ್ಯ ಋ ಕಾರಕ್ಕೆ ಬರುವುವೆಂದು ಫಲಿತಾರ್ಥವಾಗುವುದು. ಇದರಿಂದ 'ಭರ್ತೃ, ಭರ್ತಾರಂ' ಮೊದಲಾದುವು ಸಿದ್ಧಿಸುವುವು.

ಆದರೆ ಇಲ್ಲಿ 'ವಾ' ಎಂಬುದನ್ನನುವರ್ತಿಸಿ ಅರಾದೇಶವನ್ನು ಮಾತ್ರ ವಿಧಿಸಲು ಇದು ಬಾರದ ಪಕ್ಷದಲ್ಲಿ ಋ ಕಾರವೇ ಬರುವುದರಿಂದ 'ಭರ್ತೃ' ಮೊದಲಾದ ಋ ಕಾರಾಂತ ರೂಪಗಳೂ ಸಿದ್ಧಿಸುತ್ತಿರಲು ಮತ್ತೆ ಋ ಕಾರಕ್ಕೆ ಋ ಕಾರಾದೇಶವಿಧಾನವು ವ್ಯರ್ಥವೆಂದು ತೋರುವುದು. ಆದಾಗ್ಯೂ ಈ ಋ ಕಾರಾದೇಶವನ್ನು ಹೇಳದೆ ಅರಾದೇಶವೊಂದನ್ನೇ ವಿಕಲ್ಪವಾಗಿ ವಿಧಿಸಲು ಇದು ಬಾರದ ಪಕ್ಷದಲ್ಲಿ ಪೂರ್ವಸೂತ್ರದಿಂದ ಅರಾದೇಶವು ಬಂದು 'ಭರ್ತರಂ' ಎಂದು ಮೊದಲಾದ ಅನಿಷ್ಟರೂಪಗಳೂ ಪ್ರಸಕ್ತವಾಗುವುವು. ಆದುದರಿಂದ ಋ ಕಾರಕ್ಕೆ ಋ ಕಾರ ವಿಧಾನವು ಅರಾದೇಶವ್ಯಾವರ್ತಕವಾದುದರಿಂದ ಸಾರ್ಥಕವೆಂದು ತಿಳಿಯಬೇಕು. ಋ ಕಾರಾದೇಶವಿಧಾನಸಾಮರ್ಥ್ಯದಿಂದಲೇ ಮತ್ತೆ ಅರಾದೇಶವು ಪ್ರವರ್ತಿಸುವುದಿಲ್ಲ. 'ತುಃ' ಎಂದು ಹೇಳಿರುವುದರಿಂದ ತೃ ಪ್ರತ್ಯಯಾಂತ ಋ ಕಾರಾಂತಗಳು ಈ ಸೂತ್ರಕ್ಕೆ ಉದಾಹರಣೆಗಳೆಂದೂ ಅವ್ಯುತ್ಪನ್ನಗಳಾದ 'ಪಿತೃ, ಭ್ರಾತೃ' ಮೊದಲಾದ ಋ ಕಾರಾಂತ ಶಬ್ದಗಳು ಪೂರ್ವಸೂತ್ರಕ್ಕೆ ಉದಾಹರಣೆಗಳೆಂತಲೂ ತಿಳಿಯಬೇಕು.

**ಅವತಾರಿಕೆ ೧೨೪**

ಇನ್ನು ಕೆಲವು ಋ ಕಾರಾಂತಗಳಿಗೆ ಪ್ರಾಪ್ತವಾದ ಅರಾದೇಶಬಾಧನಾರ್ಥವಾಗಿ ಸೂತ್ರಾಂತರವನ್ನು ಹೇಳುತ್ತಾನೆ.

**ಸೂತ್ರಂ || ಸ್ವಸ್ರಾದೇಃ || ೧೨೪ ||**

**ಅರ್ಥ ||** ಪೂರ್ವಪದಗಳಲ್ಲದ ಸ್ವಸ್ರಾದಿಗಣಪಠಿತಗಳಾದ ಶಬ್ದಗಳ ಋ ಕಾರಕ್ಕೆ ಋ ಕಾರಾದೇಶವೂ ಆರಾದೇಶವೂ ಬರುವುವು.

**ಉದಾಹರಣೆ ||** ಸ್ವಸೃ, ಸ್ವಸಾರಂ; ನಪ್ತೃ, ನಪ್ತಾರಂ; ನೇಷ್ಟೃ, ನೇಷ್ಟಾರಂ; ತ್ವಷ್ಟೃ, ತ್ವಷ್ಟಾರಂ || ಮೊದಲಾದುವು ಇವಕ್ಕೆ ಲಕ್ಷ್ಯಗಳು. ಸ್ವಸ್ರಾದಿಗಳಾವುವೆಂದರೆ — ' ಸ್ವಸೃ, ನಪ್ತೃ, ನೇಷ್ಟೃ, ತ್ವಷ್ಟೃ, ಕ್ಷತ್ತೃ, ಹೋತೃ, ಪೋತೃ, ಪ್ರಶಾಸ್ತೃ' ಎಂಬಿವು ಎಂದು ತಿಳಿಯುವುದು.

**ವಿಚಾರ ೧೨೪**

ಈ ಸೂತ್ರದಲ್ಲಿ ' ಸ್ವಸ್ರಾದೇಃ ' ಎಂದು ಒಂದೇ ಪದವಿರುವುದು. ಪೂರ್ವದಿಂದ ' ಅಪೂರ್ವಪದಸ್ಯ, ಋದಾರೌ ' ಎಂಬೆರಡು ಪದಗಳು ಅನುವರ್ತಿಸಲ್ಪಡುವುವು. ' ಅಪೂರ್ವಪದಸ್ಯ ' ಎಂಬುದು ' ಸ್ವಸ್ರಾದೇಃ ' ಎಂಬುದಕ್ಕೆ ವಿಶೇಷಣವು ' ಸ್ವಸ್ರಾದೇಃ ' ಎಂಬುದು ' ಸ್ವಸಾ ಆದಿರ್ಯಸ್ಯ ಸಃ ' ಎಂದು ಬಹುವ್ರೀಹಿಸಮಾಸವನ್ನಂಗೀಕರಿಸಲು ' ಸ್ವಸೃ ' ಮೊದಲಾದ ಗಣವೆಂದರ್ಥವಾಗುವುದು. ಆ ಗಣವಾವುದೆಂದರೆ —

**' ಅಪ್ತೃನ್ ತೃಚ್‌ಸ್ವಸೃ ನಪ್ತೃನೇಷ್ಟೃತ್ವಷ್ಟೃಕ್ಷತ್ತೃ ಹೋತೃ ಪೋತೃ ಪ್ರಶಾಸ್ತೄಣಾಂ '**

ಎಂಬ **ಪಾಣಿನಿ** ವ್ಯಾಕರಣಸೂತ್ರದಲ್ಲ ' ಅಪ್ತೃನ್ ತೃಚ್ ' ಎಂಬಿವನ್ನು ಬಿಟ್ಟುಳಿದುವೇ ಇಲ್ಲಿ ಸ್ವಸ್ರಾದಿಗಣಪಠಿತಶಬ್ದಗಳೆಂದು ತಿಳಿಯಬೇಕು. ಆದುದರಿಂದ ಪೂರ್ವಪದವಲ್ಲದ ಸ್ವಸ್ರಾದಿಗಣಪಠಿತಶಬ್ದಗಳ ಅಂತ್ಯವಾದ ಋ ಕಾರಕ್ಕೆ ಋ ಕಾರಾದೇಶವೂ ಆರಾದೇಶವೂ ಬರುವುವೆಂದು ಸೂತ್ರಾರ್ಥವಾಗುವುದು. ಇದರಿಂದ ' ಸ್ವಸೃ, ಸ್ವಸಾರಂ ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು. ಇಲ್ಲಿ ' ಸ್ವಸ್ರಾದೇಃ ' ಎಂದು ಹೇಳಿರುವುದರಿಂದ ' ಮಾತರಂ, ಭ್ರಾತರಂ ' ಮೊದಲಾದುವುಗಳಲ್ಲಿ ಬರುವುದಿಲ್ಲ. ಈ ಸ್ವಸ್ರಾದಿಯಲ್ಲಿ ' ನಪ್ತ್ರಾದಿ ' ಶಬ್ದಗಳು ಪಠಿಸಲ್ಪಡುವುವು. ಇವು ' ತೃ ' ಎಂಬುದೇ ಅಂತ್ಯದಲ್ಲಿವುಳ್ಳುವಾದುದರಿಂದ ಪೂರ್ವಸೂತ್ರಕ್ಕೇ ವಿಷಯಗಳಾಗಿ ಋದಾರಾದೇಶಗಳನ್ನು ಹೊಂದುತ್ತಿರಲು ಮತ್ತೆ ಇಲ್ಲಿ ಅವಕ್ಕೆ ಋದಾರಗಳನ್ನು ವಿಧಿಸುವುದು ವ್ಯರ್ಥವೆಂದು ತೋರುವುದು. ಆದಾಗ್ಯೂ ಸಂಜ್ಞಾಶಬ್ದಗಳು ಪ್ರಕೃತಿಪ್ರತ್ಯಯವಿಭಾಗವುಳ್ಳುವುಗಳಾಗಿ ವ್ಯುತ್ಪನ್ನಗಳೆಂತಲೂ ಈ ವಿಭಾಗಗಳಾವುವೂ ಇಲ್ಲದೆ ಅವ್ಯುತ್ಪನ್ನಗಳಾಗಿಯೇ ಅಖಂಡ ಶಬ್ದಗಳೇ ಇರುವುವೆಂತಲೂ ಪೂರ್ವವ್ಯಾಕರಣಶಾಸ್ತ್ರದಲ್ಲಿ ಎರಡು ಮತಗಳಿರುವುವು. ಅವುಗಳಲ್ಲಿ ವ್ಯುತ್ಪನ್ನಪಕ್ಷವನ್ನು ಅವಲಂಬಿಸಲು ನಪ್ತ್ರಾದಿಗಳೂ ' ತೃ ' ಪ್ರತ್ಯಯಾಂತವಾದುದರಿಂದ ಇವಕ್ಕೆ ಪೂರ್ವದಿಂದಲೇ ಸಿದ್ಧವಾಗಲು ಮತ್ತೆ ಆರಂಭವು —

**' ಸಿದ್ಧೇ ಸತ್ಯಾರಭ್ಯಮಾಣೋ ವಿಧಿರ್ನಿಯಮಾಯ ಭವತಿ '**

ಎಂಬ ನ್ಯಾಯದಿಂದ ನಿಯಮಾರ್ಥಕವೆಂದು ತಿಳಿದು ' ತೃ ' ಪ್ರತ್ಯಯಾಂತ ಸಂಜ್ಞಾಶಬ್ದಗಳಿಗೆ ಋದಾರಗಳು ಪೂರ್ವಸೂತ್ರದಿಂದ ಬರುವುದಾದರೆ ನಪ್ತ್ರಾದಿಗಳಿಗೇ ಬರುವುವು. ' ಪಿತೃ, ಭ್ರಾತೃ ' ಮೊದಲಾದುವುಗಳಿಗೆ ಬರುವುದಿಲ್ಲವೆಂದು ಇತರ ವ್ಯಾವರ್ತನ ಮಾಡುವುದರಿಂದ ಸಾರ್ಥಕವಾಗುವುದೆಂದು ತಿಳಿಯಬೇಕು. ಯಾವಾಗ ಸಂಜ್ಞಾಶಬ್ದಗಳು ಪ್ರಕೃತಿಪ್ರತ್ಯಯವಿಭಾಗಶೂನ್ಯವಾಗಿ

ಅವ್ಯುತ್ಪನ್ನಾಖಂಡಗಳಾಗಿಯೇ ಇರುವುವೆಂದು ಹೇಳುವೆವೊ ಆಗ ನಪ್ತೃ ಮೊದಲಾದುವುಗಳಿಗೆ ಪೂರ್ವಸೂತ್ರದಿಂದ ಅಪ್ರಾಪ್ತವಾಗಲು ವಿಧ್ಯರ್ಥವಾಗಿ ಈ ಸೂತ್ರದಲ್ಲಿ ತದ್ಗ್ರಹಣವನ್ನು ಮಾಡಿದೆ ಎಂದು ತಿಳಿದು ಸಾರ್ಥಕ್ಯವನ್ನು ಹೇಳಬೇಕು.

' ವಿಧಿನಿಯಮಯೋರ್ಮಧ್ಯೇ ವಿಧಿರೇವ ಜ್ಯಾಯಾನ್ '

ಎಂದು ಪ್ರಾಚೀನರು ವಿಧಿಗೆ ಮುಖ್ಯತ್ವವನ್ನು ಹೇಳಿರುವುದರಿಂದ ಅವ್ಯುತ್ಪತ್ತಿರೂಪ ಮುಖ್ಯ ಪಕ್ಷವನ್ನೇ ಅವಲಂಬಿಸಿ ಇವಕ್ಕೆ ವಿಧ್ಯರ್ಥಕತ್ವವನ್ನು ಹೇಳುವುದೇ ಉಚಿತವೆಂದು ಇಲ್ಲಿ ವಿಧಿರೂಪ ವಾಗಿಯೇ ಹೇಳಲ್ಪಟ್ಟಿದೆ.

**ಅವತಾರಿಕೆ ೧೨೫**

ಪೂರ್ವಸೂತ್ರದಿಂದ ಪ್ರಾಪ್ತವಾದ ಆದೇಶಗಳೊಡನೆ ಶಬ್ದವಿಶೇಷದಲ್ಲಿ ಅ ಕಾರಾದೇಶಕ್ಕೂ ಸಮಾವೇಶಾರ್ಥವಾಗಿ ಸೂತ್ರವನ್ನು ಹೇಳುತ್ತಾನೆ.

**ಸೂತ್ರಂ || ದಾತುರಚ್ಚ || ೧೨೫ ||**

**ಅರ್ಥ || ಪೂರ್ವಪದವಲ್ಲದ ' ದಾತೃ ' ಶಬ್ದಕ್ಕೆ ' ಅ ಕಾರ, ಋ ಕಾರ, ಆರ ' ಎಂಬ ಮೂರಾದೇಶಗಳು ಬರುತ್ತವೆ.**

**ಉದಾಹರಣೆ ||** ದಾತಂ, ದಾತೃ, ದಾತಾರಂ || ಎಂಬಿವು ಇದಕ್ಕೆ ಲಕ್ಷ್ಯಗಳು.

**ವಿಚಾರ ೧೨೫**

ಈ ಸೂತ್ರದಲ್ಲಿ ' ದಾತುಃ, ಅತ್, ಚ ' ಎಂದು ಮೂರು ಪದಗಳಿರುವುವು. ಸಮುಚ್ಚಯಾರ್ಥಕ ಚ ಕಾರದಿಂದ ' ಋದಾರೌ ' ಎಂಬುದು ಅನುವರ್ತಿಸಲ್ಪಡುವುದು. ' ಅಪೂರ್ವ ಪದಸ್ಯ ' ಎಂಬುದು ಇದ್ದೇ ಇದೆ. ಆದುದರಿಂದ ' ದಾತೃ ' ಶಬ್ದಕ್ಕೆ ಮೂರು ಆದೇಶಗಳು ಬಂದು ಮೂರು ರೂಪಗಳು ಸಿದ್ಧಿಸುವುವೆಂದು ತಿಳಿಯಬೇಕು. ಈ ಮೂರು ರೂಪಗಳನ್ನೂ ಸೇರಿಸಿ ಪ್ರಾಚೀನರು —

ಈತಂ ಪುಟ್ಟಿದ ಮುನ್ನಮುರ್ವರೆಗೆ ಕರ್ಣಾರಂ ದಾತೃ ಮಾಂಧಾತನುಂ
ದಾತಂ ಸಂದ ದಧೀಚಿಯುಂ ಕರಮೆ ದಾತಾರಂ ಬಲೆಂದಾಯ್ತು ಮು
ತ್ತೀತಂ ಪುಟ್ಟಿ ಬಱಿಕ್ಕಮೀತನಿದಿರೊಳ್ ದಾತೃತ್ವಮಾಗ್ಗುರಂಟು ಋ
ದ್ಧ್ಯೋತಂಗಳ್ಗಿದುಳಲ್ಲವರ್ಕನಿದಿರೊಳ್ ಮೆಯ್ಯೊಕ್ಕರಿಯೇನಾಕ್ಕುರಮೇ

ಎಂದು ಪ್ರಯೋಗಿಸಿರುವರು.

**ಅವತಾರಿಕೆ ೧೨೬**

ಹೀಗೆಯೇ ' ಮಾಂಧಾತೃ ' ಶಬ್ದ ವಿಷಯದಲ್ಲಿ ಋ ಕಾರಕ್ಕೆ ಅ ಕಾರಾದೇಶಮಾತ್ರವನ್ನು ಸೂತ್ರದಲ್ಲಿಯೇ ನಿಪಾತನೆಮಾಡಿ ಹೇಳುತ್ತಾನೆ.

**ಸೂತ್ರಂ || ಮಾಂಧಾತಂ || ೧೨೬ ||**

**ಅರ್ಥ || ಪೂರ್ವಪದವಲ್ಲದ ' ಮಾಂಧಾತೃ ' ಶಬ್ದವು ' ಮಾಂಧಾತ ' ಎಂದಕಾರಾಂತವಾಗಿ ನಿಪಾತನ ಮಾಡಲ್ಪಡುವುದು.**

**ಉದಾಹರಣೆ** || ಛಾಗಮೋಳೀತಂ ಮಾಂಧಾತಂ || ಪೂರ್ವಪದವಾಗಿದ್ದರೆ ಬರುವುದಿಲ್ಲವೆಂದು ಹೇಳಿರುವುದರಿಂದ 'ಮಾಂಧಾತೃಚಕ್ರೇಶ್ವರಂ' ಎಂಬಲ್ಲಿ ಬಂದಿಲ್ಲ.

**ವಿಚಾರ ೧೨೬**

ಇಲ್ಲಿ 'ಮಾಂಧಾತೃ' ಶಬ್ದವು 'ತೃ' ಪ್ರತ್ಯಯಾಂತವಾಗಿರಲಿ ಅಥವಾ ರೂಢವಾಗಿರಲಿ ಇದಕ್ಕೆ ಋಕಾರಾದೇಶವಾಗಲಿ ಅರಾದೇಶವಾಗಲಿ ಅಥವಾ ಆರಾದೇಶವಾಗಲಿ ಯಾವುದೂ ವಿಧಿಸಲ್ಪಡುವುದಿಲ್ಲ. ಮತ್ತೇನೆಂದರೆ ಅ ಕಾರಾಂತವಾಗಿ ಲೋಕಪ್ರಸಿದ್ಧವಾದ ಒಂದೇ ರೂಪವು ಉಚ್ಚರಿಸಲ್ಪಡುವುದು. ಇದಕ್ಕೇ ನಿಪಾತವೆಂದು ವ್ಯವಹಾರವು.

**ಅವತಾರಿಕೆ ೧೨೭**

ವಿಧಾತೃ ಶಬ್ದವಿಷಯದಲ್ಲಿ ವ್ಯವಸ್ಥಾಪಕವಾದ ಸೂತ್ರವನ್ನು ಹೇಳುತ್ತಾನೆ.

**ಸೂತ್ರಂ || ವೇಧಸಿ ಋದಾ್ರೌ ವಿಧಾತುಃ || ೧೨೭ ||**

**ಅರ್ಥ || ಪೂರ್ವಪದವಲ್ಲದ ಚತುರ್ಮುಖವಾಚಕವಾದ ವಿಧಾತೃ ಶಬ್ದಕ್ಕೆ ಋ ಕಾರವೂ** ರ ಎಂಬಾದೇಶವೂ ಬರುವುದು.

**ಉದಾಹರಣೆ** || ವಿಧಾತೃ, ವಿಧಾತ್ರಂ || ಎಂಬಿವು ಉದಾಹರಣೆಗಳು.

**ವಿಚಾರ ೧೨೭**

ಈ ಸೂತ್ರದಲ್ಲಿ 'ವೇಧಸಿ, ಋದಾ್ರೌ, ವಿಧಾತುಃ' ಎಂದು ಮೂರು ಪದಗಳಿರುವುವು. ಪೂರ್ವದಿಂದ 'ಅಪೂರ್ವಪದಸ್ಯ' ಎಂದು ಸಂಬಂಧಿಸಲ್ಪಡುವುದು. 'ವೇಧಸಿ' ಎಂದರೆ '**ಸ್ರಷ್ಟಾ ಪ್ರಜಾಪತಿರ್ವೇಧಾ ವಿಧಾತಾ ವಿಶ್ವಸೃಡ್ವಿಧಿಃ**' ಎಂಬ ಕೋಶದಿಂದ 'ವೇಧಃ' ಶಬ್ದಕ್ಕೆ ಚತುರ್ಮುಖ (ನಂದರ್ಥ) ವೆಂದು ತಿಳಿದು ಆ ಅರ್ಥದಲ್ಲಿರುವ 'ವಿಧಾತೃ' ಶಬ್ದವೆಂದರೆ ಚತುರ್ಮುಖವಾಚಕ ವಿಧಾತೃಶಬ್ದವೆಂದರ್ಥವಾಗುವುದು. ಆ ವಿಧಾತೃ ಶಬ್ದವು 'ತೃ' ಪ್ರತ್ಯಯಾಂತವಾದುದರಿಂದ — '**ಋದಾರೌ ತುಃ**' ಎಂಬ ಸೂತ್ರದಿಂದ ಪ್ರಾಪ್ತವಾದ ಋ ದಾರುಗಳನ್ನು ಬಾಧಿಸಿ ಈ ಸೂತ್ರದಿಂದ ಋ ಕಾರಾದೇಶವನ್ನೂ ರ ಎಂಬಾದೇಶವನ್ನೂ ವಿಧಿಸುವುದರಿಂದ 'ವಿಧಾತೃ, ವಿಧಾತ್ರಂ' ಎಂದು ಎರಡು ರೂಪುಗಳಾಗುವುವು. ಇಲ್ಲಿ 'ವೇಧಸಿ' ಎಂದು ಹೇಳಿರುವುದರಿಂದ ವಿಧಾಯಕ ಎಂಬರ್ಥವುಳ್ಳ 'ವಿಧಾತೃ' ಶಬ್ದಕ್ಕೂ ಋ ದಾರಾದೇಶಗಳು ಬಂದು 'ವಿಧಾತೃ, ವಿಧಾತಾರಂ' ಎಂದಾಗುವುವು. 'ವಿಧಾತುಃ' ಎಂದು ಹೇಳಿರುವುದರಿಂದ ಕೇವಲ 'ಧಾತೃ' ಶಬ್ದಕ್ಕೆ ಬರುವುದಿಲ್ಲವಾದುದರಿಂದ ಅಲ್ಲ 'ಧಾತೃ, ಧಾತಾರಂ' ಎಂದಾಗುವುವು. ಇಲ್ಲಿಯೂ ಪೂರ್ವದಂತೆ ಋ ಕಾರಕ್ಕೆ ಋ ಕಾರಾದೇಶ ವಿಧಾನವು ಆರಾದೇಶ ಬಾಧನಾರ್ಥವೆಂದು ತಿಳಿಯಬೇಕು.

ಆದರೆ ಇಲ್ಲಿ 'ವಿಧಾತುಃ' ಎಂದು ಸ್ವರೂಪವನ್ನೇ ಉಚ್ಚರಿಸುವುದರಿಂದ ಕೇವಲ 'ಧಾತೃ' ಶಬ್ದಕ್ಕೆ ಬರುವುದಿಲ್ಲವೆಂದು ತೋರುವುದು. ಆದಾಗ್ಯೂ ಪ್ರಾಚೀನರು ಕೇವಲಕ್ಕೂ ರಾದೇಶವನ್ನೂ ಮಾಡಿ ಪ್ರಯೋಗಿಸುವುದರಿಂದ 'ಧಾತೃ' ಶಬ್ದಕ್ಕೂ ರಾದೇಶವು ಬರುವುದು. ಆದುದರಿಂದ —

ಅತ್ರಿದಿವದಾಯುರಬ್ಧಿಯ
ನಾ ತ್ರಿದಶಂ ತೀರ್ಚೆ ಕೂಡೆ ಬಯಲಾದುದೆನಲ್
ಧಾತ್ರಂ ಮಾಡಿದ ಸಂಸ್ಕೃತಿ
ಸೂತ್ರಮನಾರ್ ಮಾಜಲಾಪ್ಪರವನೀತಳದೊಳ್

ಮೊದಲಾದುವು ಸಾಧುವಾಗುವುದೆಂದು ತಿಳಿಯುವುದು.

**ಅವತಾರಿಕೆ ೧೨೮**

ಇದುವರೆಗೂ ಋ ಕಾರಾಂತ ಶಬ್ದಗಳಿಗೆ ತದ್ಭವಮಾಡುವಾಗ ಬರತಕ್ಕ ವಿಕಾರಗಳನ್ನು ತಿಳಿಸಿದನು. ಈಗ ಇ ಕಾರಾಂತ 'ಸಖಿ' ಶಬ್ದ ವಿಷಯದಲ್ಲುಂಟಾಗುವ ವಿಕಾರವನ್ನು ಹೇಳುತ್ತಾನೆ.

**ಸೂತ್ರಂ || ಸಖ್ಯುರದಾಯೌ || ೧೨೮ ||**

**ಅರ್ಥ || ಪೂರ್ವಪದವಲ್ಲದ ಸಖಿ ಶಬ್ದದ ಕೊನೆಯ ಇ ಕಾರಕ್ಕೆ ಅ ಕಾರಾದೇಶವೂ ಆಯ ಆದೇಶವೂ ಬರುವುವು.**

**ಉದಾಹರಣೆ** || ಸಖಂ, ಸಖಾಯಂ || ಇವೇ ಇದಕ್ಕೆ ಉದಾಹರಣೆಗಳು.

**ವಿಚಾರ ೧೨೮**

ಈ ಸೂತ್ರದಲ್ಲಿ 'ಸಖ್ಯುಃ, ಅದಾಯೌ' ಎಂದು ಎರಡು ಪದಗಳಿರುವುವು. ಪೂರ್ವದಿಂದ 'ಅಪೂರ್ವಪದಸ್ಯ' ಎಂಬುದು ಸಂಬಂಧಿಸಲ್ಪಡುವುದು. 'ಸಖ್ಯುಃ' ಎಂದು ಹೇಳಿರುವುದರಿಂದ ಈ ಕಾರಾಂತ 'ಸಖೀ' ಶಬ್ದಕ್ಕೆ ಗ್ರಹಣವಿಲ್ಲ. ಆದುದರಿಂದ ಪೂರ್ವಪದವಲ್ಲದ ಸಖಿ ಶಬ್ದಕ್ಕೆ ಎಂದರೆ ಅದರ ಅಂತ್ಯದ ಇ ಕಾರಕ್ಕೆ ಅ ಕಾರ ಮತ್ತು ಆಯ ಎಂಬಾದೇಶಗಳು ಬರುತ್ತವೆ ಎಂದು ಸೂತ್ರಾರ್ಥವಾಗುವುದರಿಂದ 'ಸಖಿ' ಮೊದಲಾದುವು ಸಿದ್ಧಿಸುವುವು. ಸೂತ್ರದಲ್ಲಿ 'ಸಖಿ' ಎಂದು ಸ್ವರೂಪ ನಿರ್ದೇಶ ಮಾಡಿರುವುದರಿಂದ — ಪರಿಚ್ಛಿನ್ನ ಪರಿಮಾಣವಲ್ಲಿ '**ಏಕದೇಶವಿಕೃತ ಮನನ್ಯವದ್ಭವತಿ**' ಎಂಬ ನ್ಯಾಯವು ಅಂಗೀಕರಿಸಲ್ಪಡುವದಿಲ್ಲವೆಂದು — 'ಅಗ್ನಿಸಖ, ವಾಯುಸಖ' ಮೊದಲಾದ ಸಮಾಸಾಂತ ಪ್ರತ್ಯಯವನ್ನು ಹೊಂದಿದ ಶಬ್ದಗಳಲ್ಲಿ ಬರುವುದಿಲ್ಲವೆಂದು ತಿಳಿಯಬೇಕು.

ಇಲ್ಲಿ **ದರ್ಪಣಕಾರನು** —

ಪಿತೃ ಶಬ್ದದೆಡಗರಾದೇ
ಶತೆ ಸಖಿ ಶಬ್ದಕ್ಕೆ ನೆಟ್ಟನತ್ವಾದೇಶ
ಸ್ಥಿತಿಯಾಗೆ ಲಿಂಗಮಕ್ಕುಂ
ವಿತರ್ಕಮೇಂ ಪೇಟ್ ಸ್ವರಾಂತಮಿದು ಲಿಂಗಗಳ್ (ಸೂತ್ರ ೮೫)

ಎಂದು ಸೂತ್ರವನ್ನು ಹೇಳಿರುವನು. ಇಲ್ಲಿ ಬಹುಳ ಗ್ರಹಣದಿಂದ ಇತರ ರೂಪಗಳೂ ಸಾಧುವಾಗಬಹುದು.

**ಅವತಾರಿಕೆ ೧೨೯**

ಹೀಗೆ ಸ್ವರಾಂತಗಳಲ್ಲಿ ಉಂಟಾಗುವ ವಿಕಾರಗಳನ್ನು ಹೇಳಿ ವ್ಯಂಜನಾಂತಗಳಲ್ಲಾಗುವ ವಿಕಾರಗಳನ್ನು ಬೋಧಿಸಲು ಮೊದಲು ವ್ಯಂಜನಾಂತಸಾಮಾನ್ಯದಲ್ಲಿ ಹೇಳುತ್ತಾನೆ.

**ಸೂತ್ರಂ ॥ ವ್ಯಂಜನಸ್ಯಾನಬ್ಜಸನ್ತವಲ್ಲುಪ್ಚ ತಸ್ಯ ॥ ೧೨೯ ॥**

**ಅರ್ಥ ॥ ಪೂರ್ವಪದವಲ್ಲದ ವ್ಯಂಜನಾಂತ ಶಬ್ದಕ್ಕೆ ಅದರ ಅನಪುಂಸಕಲಿಂಗ ಪ್ರಥಮಾ ಬಹುವಚನಾಂತದ ರೂಪದಂತೆ ರೂಪವಾಗುವುದು. ಅದರ ಕೊನೆಯ ವಿಸರ್ಗಕ್ಕೆ ಲೋಪವೂ ಬರುವುದು.**

**ಉದಾಹರಣೆ ॥** ಸುವಾಚ್, ಸುವಾಚಂ ಹೀಗೆಯೇ — ಗುಣಭಾಜಂ, ಅಶ್ವಯುಜಂ, ಋತ್ವಿಜಂ, ದೇವೇಜಂ, ಮರುತಂ ಭಗವಂತಂ, ಮಹಾಂತಂ, ಅಗ್ನಿಮಥಂ, ಸೂತ್ರಗ್ರಥಂ, ದ್ವಿಪಾದಂ, ಚತುಃಪಾದಂ, ವೀರುಧಂ, ತತ್ವಬುಧಂ, ಕಕುಭಂ, ಪ್ರಶಾಮಂ, ಪ್ರಿಯಚತ್ವಾರಂ, ದಿವಂ, ವಿಶಂ, ತಾದೃಶಂ, ತ್ವಿಷಂ, ರತ್ನಮುಷಂ, ಗೋದುಹಂ, ಮಧುಲಿಹಂ, ಅನಡ್ವಾಹಂ, ಪ್ರಷ್ಠವಾಹಂ ॥ ಮೊದಲಾದ ವ್ಯಂಜನಾಂತಪ್ರಕೃತಿಕ ಶಬ್ದಗಳೆಲ್ಲಾ ಇದಕ್ಕೆ ಲಕ್ಷ್ಯಗಳಾಗುವುವು.

**ವಿಚಾರ ೧೨೯**

ಈ ಸೂತ್ರದಲ್ಲಿ — 'ವ್ಯಂಜನಸ್ಯ, ಅನಬ್ಜಸಂತವತ್, ಲುಪ್, ಚ, ತಸ್ಯ' ಎಂದು ಅಯ್ದು ಪದಗಳಿರುವುವು. 'ಅಪೂರ್ವಪದಸ್ಯ' ಎಂಬುದು ಇರುವುದು. ಕೇವಲ ವ್ಯಂಜನಕ್ಕೆ ಪ್ರಯೋಗ ವಿಲ್ಲದೆ ಇರುವುದರಿಂದ 'ವ್ಯಂಜನಾಂತಸ್ಯ' ಎಂದು ಲಬ್ಧವಾಗುವುದು. ಇದಕ್ಕೆ 'ಅಪೂರ್ವ ಪದಸ್ಯ' ಎಂಬುದು ವಿಶೇಷಣವು. 'ಅನಬ್ಜಸಂತವತ್' ಎಂಬುದು — ನ ನಪ್ = ಅನಪ್, ಅನಪ್ಯಾಸೌ ಜಸಂತಶ್ಚ = ಅನಬ್ಜಸಂತಃ, ಅನಬ್ಜಸಂತಸ್ಯೇವ = ಅನಬ್ಜಸಂತವತ್ ಎಂಬ ವಿಗ್ರಹ ದಿಂದ 'ನಪುಂಸಕವಲ್ಲದ ಶಬ್ದದಜಸಂತದಂತೆ' ಎಂಬರ್ಥವುಳ್ಳುದಾಗುವುದು. ಇದು ರೂಪಾತಿ ದೇಶವಾದುದರಿಂದ ಅದರ ರೂಪದಂತೆ ರೂಪವಾಗುವುದೆಂದರ್ಥವಾಗುವುದು. 'ತಸ್ಯ ಲುಪ್' ಎಂದರೆ 'ತಸ್ಯ' ಎಂಬುದು ಸರ್ವನಾಮ ಶಬ್ದವಾದುದರಿಂದ ಪೂರ್ವೋಕ್ತವಾದ ಜಸಂತ ಪರಾ ಮರ್ಶಕವಾಗುವುದು. ಅದಕ್ಕೆ 'ಲುಪ್' ಎಂದರೆ ಅದರ ಅಂತ್ಯದ ವಿಸರ್ಗಕ್ಕೆ 'ಲುಪ್' ಎಂದು ತಾತ್ಪರ್ಯವಾಗುವುದು. ಆದುದರಿಂದ ಪೂರ್ವಪದವಲ್ಲದೆಯೂ ವ್ಯಂಜನಾಂತವಾಗಿಯೂ ಇರುವ ಸಂಸ್ಕೃತ ಶಬ್ದಗಳಿಗೆ ಅನಪುಂಸಕಲಿಂಗದಲ್ಲಿ ಪ್ರಥಮಾಬಹುವಚನವು ಹೇಗಾಗುವುದೋ ಆ ರೂಪವೇ ಕನ್ನಡಕ್ಕೆ ಪ್ರಯೋಗಾರ್ಹವಾಗುವುದು. ಆದರೆ ಅದರ ಕೊನೆಯ ವಿಸರ್ಗಕ್ಕೆ ಲೋಪವು ಬರುವುದು. ಆದುದರಿಂದ 'ಸುವಾಚ್' ಎಂಬ ವ್ಯಂಜನಾಂತ ಶಬ್ದದ ಬಹುವಚನಾಂತವು 'ಸುವಾಚಃ' ಎಂಬುದು ಇವರಲ್ಲಿ ವಿಸರ್ಗಕ್ಕೆ ಲೋಪವನ್ನು ಮಾಡಲು 'ಸುವಾಚ' ಎಂದು ಅಕಾರಾಂತವಾಗಿ ಕನ್ನಡಕ್ಕೆ ಪ್ರಕೃತಿಯಾಗುವುದು. ಹೀಗೆಯೇ ಗುಣಭಾಜಾದಿಗಳನ್ನೂ ಊಹಿಸಿ ಕೊಳ್ಳಬೇಕು. ಇದೇ ವಿಷಯವನ್ನೂ ಸ್ಪಷ್ಟವಾಗಿ **ದರ್ಪಣಕಾರನು** —

> **ಪ್ರಚುರತೆಯಿಂ ಪ್ರಥಮಾಬಹು**
> **ವಚನಂಗಳವೇಕವಚನಕೃತಲಿಂಗಂಗಳ್**
> **ನಿಚಿತವಿಸರ್ಗಮನುಳಿದಂ**
> **ದುಚಿತಜ್ಞರ್ ತಿಳಿವುದಿವನುದಾಹೃತಿಮುಖದಿಂ** (ಸೂತ್ರ ೮೭)

ಎಂಬ ಸೂತ್ರದಿಂದ ತಿಳಿಸಿರುವನು.

ಈ ಸೂತ್ರದಲ್ಲಿ – ‘ ವ್ಯಂಜನಸ್ಯ ’ ಎಂದು ಹೇಳಿರುವುದರಿಂದ ‘ ಘಟಂ, ಪಟಂ ’ ಮೊದಲಾದ ಸ್ವರಾಂತ ಶಬ್ದಗಳ ಪ್ರಥಮಾ ಬಹುವಚನಕ್ಕೆ ಅತಿದೇಶವಿಲ್ಲ. ‘ ಅನಪ್ ’ ಎಂದು ನಪುಂಸಕ ಲಿಂಗಕ್ಕೆ ವ್ಯಾವರ್ತಿ ಮಾಡಿರುವುದರಿಂದ ನಪುಂಸಕಲಿಂಗದ ಪ್ರಥಮಾ ಬಹುವಚನಾಂತಗಳಾದ ‘ ಗುಣಭಾಂಜಿ ’ ಮೊದಲಾದುವಕ್ಕೆ ಈ ಅತಿದೇಶವಿಲ್ಲ. ‘ ತಸ್ಯ ’ ಎಂದು ಹೇಳಿರುವುದರಿಂದ ಅತಿದಿಷ್ಟ ರೂಪದ ಅಂತ್ಯಕ್ಕೇ ಲೋಪವು ಬರುವುದೆಂದರ್ಥವಾಗುವುದು.

**ಅವತಾರಿಕೆ ೧೩೦**

ಪೂರ್ವಸೂತ್ರದಿಂದ ಸಾಮಾನ್ಯವಾಗಿ ವ್ಯಂಜನಾಂತಗಳಿಗೆಲ್ಲಾ ವಿಧಿಸಲ್ಪಟ್ಟ ಜಸನ್ತ ರೂಪಾತಿ ದೇಶವು ನ ಕಾರಾಂತ ವಿಷಯದಲ್ಲಿಯೂ ಪ್ರಸಕ್ತವಾಗಲು ಅದಕ್ಕೆ ಅಪವಾದವಾಗಿ ಲೋಪಮಾತ್ರವನ್ನು ವಿಧಿಸುತ್ತಾನೆ.

**ಸೂತ್ರಂ || ನೋಽಶ್ವಪಥಿಮಥಃ || ೧೩೦ ||**

**ಅರ್ಥ || ಶ್ವನ್, ಪಥಿನ್, ಮಥಿನ್ ಶಬ್ದಗಳನ್ನು ಬಿಟ್ಟು ನ ಕಾರಾಂತವಾದ ಪೂರ್ವಪದವಲ್ಲದ ಶಬ್ದಕ್ಕೆ ಲೋಪವು ಬರುವುದು.**

**ಉದಾಹರಣೆ** || ರಾಜನ್, ರಾಜಂ ಹೀಗೆಯೇ — ಮೂರ್ಧಂ, ಪೂಷಂ, ಅರ್ಯಮಂ, ಕರಿ, ದಂಡಿ, ಹಸ್ತಿ, ವ್ರತಿ || ಮೊದಲಾದ ನ ಕಾರಾಂತಗಳೆಲ್ಲಾ ಇದಕ್ಕೆ ಲಕ್ಷ್ಯಗಳು.

**ವಿಚಾರ ೧೩೦**

ಈ ಸೂತ್ರದಲ್ಲಿ — ‘ ನಃ, ಅಶ್ವಪಥಿಮಥಃ ’ ಎಂದು ಪದಚ್ಛೇದವು. ಪೂರ್ವದಿಂದ ‘ ಲುಪ್, ಅಪೂರ್ವಪದಸ್ಯ ’ ಎಂಬೆರಡು ಪದಗಳನ್ನು ಅನುವರ್ತಿಸಿಕೊಳ್ಳುವುದು. ‘ ನಃ ’ ಎಂಬುದು ನ ಕಾರಮಾತ್ರಬೋಧಕಷಷ್ಠ್ಯಂತಪದವು. ಕೇವಲ ನ ಕಾರಕ್ಕೆ ಪ್ರಯೋಗವಿಲ್ಲ ವಾದುದರಿಂದ ನ ಕಾರಾಂತಕ್ಕೆ ಎಂದರ್ಥವಾಗುವುದು. ‘ ಶ್ವನ್ ’ ಮೊದಲಾದುವೂ ನ ಕಾರಾಂತ ಗಳಾದುದರಿಂದ ಅವಕ್ಕೆ ವ್ಯಾವೃತ್ತಿಮಾಡಲು ‘ ಅಶ್ವಪಥಿಮಥಃ ’ ಎಂದು ಹೇಳಲ್ಪಟ್ಟಿದೆ. ‘ ಅಪೂರ್ವಪದಸ್ಯ ’ ಎಂಬುದೂ ನ ಕಾರಾಂತಕ್ಕೆ ವಿಶೇಷಣವು. ಆದುದರಿಂದ ಪೂರ್ವಪದವಲ್ಲದ ‘ ಶ್ವನ್, ಪಥಿನ್, ಮಥಿನ್ ’ ಶಬ್ದವರ್ಜಿತ ನ ಕಾರಾಂತ ಶಬ್ದಕ್ಕೆ ಲೋಪ ಬರುವುದೆಂದರೆ ಅದರ ಕೊನೆಯ ನ ಕಾರಕ್ಕೆ ಲೋಪವು ಬರುವುದೆಂದು ಸೂತ್ರಾರ್ಥವಾಗುವುದು. ಇದರಿಂದ ‘ ರಾಜಂ ’ ಮೊದಲಾದ ನ ಕಾರಾಂತ ಶಬ್ದಗಳು ಕನ್ನಡಕ್ಕೆ ಅ ಕಾರಾಂತಗಳಾಗುವುವು. ಇಲ್ಲಿ ‘ ನಃ ’ ಎಂದು ಹೇಳಿರುವುದರಿಂದ — ‘ ಗುರುತ್ಮಂತಂ, ಗುಣವಂತಂ ’ ಮೊದಲಾದ ತ ಕಾರಾದ್ಯಂತಗಳಲ್ಲಿ ಇದ ರಿಂದ ಲೋಪವು ಬಾರದೆ ಪೂರ್ವಸೂತ್ರದಿಂದ ಜಸಂತವದ್ರೂಪಾತಿದೇಶವೇ ಬಂದು ಕನ್ನಡಕ್ಕೆ ಪ್ರಕೃತಿಗಳಾಗಿರುವುವು. ‘ **ಸಗರುತ್ಮೇವ ಮಹೇಂದ್ರಮೂಪ ಕೋಪಾತ್** ’ ಎಂಬ ಪ್ರಯೋಗಬಲ ದಿಂದ ‘ ಗರುತ್ಮನ್ ’ ಶಬ್ದವು ನ ಕಾರಾಂತವಾಗಿಯೂ ಇರುವುದೆಂದು ತೋರುವುದು. ಅದಕ್ಕೆ ಇದರಿಂದ ಲೋಪವನ್ನು ಮಾಡಲು ‘ ಗರುತ್ಮಂ ’ ಎಂದೂ ಒಂದು ರೂಪವಾಗುವುದು. ‘ ಅಶ್ವಪಥಿಮಥಃ ’ ಎಂಬ ಶ್ವನಾದಿಗಳಿಗೆ ಪರ್ಯುದಾಸ ಮಾಡಿರುವುದರಿಂದ ಅವುಗಳಲ್ಲಿಯೂ ಪೂರ್ವಸೂತ್ರದಿಂದ ಜಸಂತವದ್ರೂಪಾತಿದೇಶವಾಗಿ ‘ ಶ್ವಾನಂ, ಪಂಥಾನಂ, ಮಂಥಾನಂ ’ ಎಂದಾಗಿರುವುದು.

ಇಲ್ಲಿ ಯದ್ಯಪಿ ಸರ್ವವರ್ಮಾಚಾರ್ಯರ ಮತದಲ್ಲಿ ' ಪನ್ಥಿ, ಮನ್ಥಿ ' ಎಂಬಿವೆರಡು ಶಬ್ದಗಳೂ ಇ ಕಾರಾಂತಗಳೆಂದು — ' **ಪನ್ಥಿಮನ್ಥಿಋಭುಕ್ಷೀಣಾಂ ಸೌ** ' || **ಕಾತಂತ್ರ ೨-೨-೩೫** || ಎಂಬ ಸೂತ್ರದಿಂದ ಸೂಚಿಸಲ್ಪಡುವುವು. ಆದಾಗ್ಯೂ **ಶಾಕಟಾಯನ** ಮತದಲ್ಲಿ ಇವು ನ ಕಾರಾಂತಗಳೆಂದು — ' **ನಃ ಪಥಿಮಥಿ ಋಭುಕ್ಷಃ** ' || ೧-೨-೧೦೮ || ಎಂಬುದರಿಂದ ಸೂಚಿತವಾಗುವುದೆಂದು ಅವುಗಳಿಗೆ ಇಲ್ಲಿ ವ್ಯಾವೃತ್ತಿಮಾಡಲ್ಪಟ್ಟಿದೆ ಎಂದು ತಿಳಿಯಬೇಕು.

**ಅವತಾರಿಕೆ ೧೩೧**

ಪೂರ್ವಸೂತ್ರದಿಂದ ನ ಕಾರಕ್ಕೆ ನಿತ್ಯವಾಗಿ ಲೋಪವು ಪ್ರಾಪ್ತವಾಗಲು ಕೆಲವು ನ ಕಾರಾಂತ ಶಬ್ದಗಳಿಗೂ ' ಜಗತ್ ' ಎಂಬ ಶಬ್ದಕ್ಕೂ ವಿಕಲ್ಪವಾಗಿ ಲೋಪವನ್ನು ಹೇಳುತ್ತಾನೆ.

**ಸೂತ್ರಂ || ಋಭುಕ್ಷಯುವಾಧ್ವಮಘವಜಗತೋ ವಾ || ೧೩೧ ||**

**ಅರ್ಥ || ಪೂರ್ವಪದಭೂತಗಳಲ್ಲದ ಋಭುಕ್ಷಾದಿ ಶಬ್ದಗಳಿಗೆ ಲೋಪವು ವಿಕಲ್ಪವಾಗಿ ಬರುವುದು. ಇದು ಬಾರದ ಪಕ್ಷದಲ್ಲಿ ಜಸಂತವತ್‌ರೂಪಾತಿದೇಶವೇ ಬರುವುದು.**

**ಉದಾಹರಣೆ ||** ಋಭುಕ್ಷ್, ಋಭುಕ್ಷಂ, ಋಭುಕ್ಷಾಣಂ ಹೀಗೆಯೇ — ಯುವಂ, ಯುವಾನಂ; ಅಧ್ವಂ, ಅಧ್ವಾನಂ; ಮಘವಂ, ಮಘವಾನಂ; ಜಗಂ, ಜಗತ್ತು || ಎಂಬಿವು ಇದಕ್ಕೆ ಲಕ್ಷ್ಯಗಳು. ಜಗತ್-ಶಬ್ದಕ್ಕೆ ಮಾತ್ರ ವಕ್ಷ್ಯಮಾಣವಾದ — ' **ಉಗಬಾದೀನಾಂ || ೧೩೫ ||** ' ಎಂಬ ಸೂತ್ರದಿಂದ ಉಗಾಗಮವು ಬಂದು ' ಜಗತ್ತು ' ಎಂದಾಗಿದೆ ಎಂದು ತಿಳಿಯಬೇಕು.

**ವಿಚಾರ ೧೩೧**

ಈ ಸೂತ್ರದಲ್ಲಿ ' ಋಭುಕ್ಷಯುವಾಧ್ವಮಘವಜಗತಃ, ವಾ ' ಎಂದು ಎರಡು ಪದಗಳಿರುವುವು. ' ಅಪೂರ್ವಪದಸ್ಯ, ಲುಪ್ ' ಎಂಬೆರಡು ಪದಗಳು ಅನುವರ್ತಿಸಲ್ಪಡುವುವು. ' ಅಪೂರ್ವಪದಸ್ಯ ' ಎಂಬುದು ' ಋಭುಕ್ಷಯುವಾಧ್ವಮಘವಜಗತಃ ' ಎಂಬುದಕ್ಕೆ ವಿಶೇಷಣವು. ' ಋಭುಕ್ಷ್, ಯುವನ್, ಅಧ್ವನ್, ಮಘವನ್ ' ಎಂಬ ನಾಲ್ಕು ಶಬ್ದಗಳೂ ಅನ್ನಂತಗಳು. **ಪಾಣಿನಿ** ಮತದಲ್ಲಿ ' ಋಭುಕ್ಷಿನ್ ' ಎಂದು ಇನ್ನಂತವಾಗಿದ್ದರೂ **ಶಾಕಟಾಯನ** ಮತದಲ್ಲಿ ' ಋಭುಕ್ಷ್ ' ಶಬ್ದವಿರುವುದೆಂದು ಅದನ್ನೇ ಇಲ್ಲಿ ಗ್ರಹಣಮಾಡಿರುವುದು. ಹೀಗೆಯೇ ' ಮಘವನ್ ' ಎಂಬ ನ ಕಾರಾಂತ ಶಬ್ದವೇ ಗ್ರಹಿಸಲ್ಪಟ್ಟಿದೆ. ತ ಕಾರಾಂತವನ್ನು ಗ್ರಹಿಸುವ ಪಕ್ಷದಲ್ಲಿ ' ಮಘವಜ್ಜಗತಃ ' ಎಂದು ಹೇಳಬೇಕಾಗುವುದು. ಆದುದರಿಂದ ಆ ತ ಕಾರಾಂತಕ್ಕೆ ಜಸಂತವತ್ ರೂಪಾತಿದೇಶವು ಬಂದು ' ಮಘವಂತಂ ' ಎಂದೇ ಆಗುವುದು. ಇವುಗಳಲ್ಲಿ ನ ಕಾರಾಂತಗಳಿಗೆ ಪೂರ್ವಸೂತ್ರದಿಂದ ನಿತ್ಯವಾಗಿ ಲೋಪವು ಪ್ರಾಪ್ತವಾಗಲು ಜಗತ್-ಶಬ್ದಕ್ಕೆ ಅಪ್ರಾಪ್ತವಾಗಲು ಉಭಯತ್ರ ವಿಕಲ್ಪವಾಗಿ ಇದರಿಂದ ಲೋಪವು ವಿಧಿಸಲ್ಪಡುವುದರಿಂದ ಇದು ಉಭಯತ್ರ ವಿಭಾಷೆಯೆಂದು ತಿಳಿಯುವುದು. ತಥಾಚ — ಪೂರ್ವಪದಗಳಲ್ಲದ ಋಭುಕ್ಷಾದಿ ಶಬ್ದಗಳ ಕೊನೆಯ ವರ್ಣಕ್ಕೆ ಲೋಪವು ವಿಕಲ್ಪವಾಗಿ ಬರುವುದೆಂದು ಫಲಿತವಾಗುವುದು. ಇದರಿಂದ ಲೋಪವು ಬರಲು ' ಋಭುಕ್ಷಂ ' ಎಂದೂ ಬಾರದಿರಲು ಜಸಂತವದ್ಭಾವವನ್ನು ಮಾಡಲು ' ಋಭುಕ್ಷಾಣಂ ' ಎಂದೂ ಆಗಿದೆ ಎಂದು ತಿಳಿಯುವುದು. ಜಗತ್-ಶಬ್ದವು

ನಪುಂಸಕಲಿಂಗವಾದುದರಿಂದ ಜಸಂತವದ್ಭಾವಕ್ಕೆ ಪ್ರಾಪ್ತಿಯಿಲ್ಲವೆಂದು ಉಗಾಗಮವೂ ದ್ವಿತ್ವವೂ ಬಂದು ' ಜಗತ್ತು ' ಎಂದಾಗಿದೆ ಎಂದು ತಿಳಿಯಬೇಕು.

**ಅವತಾರಿಕೆ ೧೩೨**

ಸ ಕಾರಾಂತ ವಿಷಯದಲ್ಲಿ ಲೋಪವನ್ನು ಹೇಳುತ್ತಾನೆ.

**ಸೂತ್ರಂ || ಸೋಽವಸಃ || ೧೩೨ ||**

**ಅರ್ಥ || ಪೂರ್ವಪದಭೂತವಲ್ಲದ ವಸ್ ಪ್ರತ್ಯಯಾಂತಭಿನ್ನವಾದ ಸ ಕಾರಾಂತ ಶಬ್ದದ ಕೊನೆಯ ಸ ಕಾರಕ್ಕೆ ಲೋಪವು ವಿಕಲ್ಪವಾಗಿ ಬರುವುದು. ಇದು ಬಾರದ ಪಕ್ಷದಲ್ಲಿ ಯಥಾಯೋಗ್ಯ ವಾಗಿ ಕಾರ್ಯಗಳು ಬರುವುವು.**

**ಉದಾಹರಣೆ ||** ಮನಸ್ — ಮನಂ ಹೀಗೆಯೇ — ಪಯಂ, ಯಶಂ, ಶಿರಂ, ಧನು, ಸರ್ಪಿ, ಚಂದ್ರಮಂ, ಪುರೂರವಂ, ರಜಂ, ಅಂಗಿರಂ, ಉಶನಂ || ಮೊದಲಾದುವು ಇದಕ್ಕೆ ಲಕ್ಷ್ಯಗಳು. ಲೋಪಾಭಾವಪಕ್ಷದಲ್ಲಿ ಉಗಾಗಮವನ್ನು ಮುಂದೆ ಹೇಳುವನು.

**ವಿಚಾರ ೧೩೨**

ಇಲ್ಲಿ ' ಸಃ, ಅವಸಃ ' ಎಂದು ಎರಡು ಪದಗಳಿರುವುವು. ' ಅಪೂರ್ವಪದಸ್ಯ, ವಾ, ಉಕ್ ' ಎಂಬಿವು ಅನುವರ್ತಿಸಲ್ಪಡುವುವು. ' ಅವಸಃ ' ಎಂಬುದು ' ನ ವಸ್=ಅವಸ್, ತಸ್ಯ ಅವಸಃ ' ವಿಗ್ರಹವನ್ನು ಮಾಡಿ ನಿಷ್ಪನ್ನವಾಗಿರುವುದರಿಂದ ' ವಸ್‌ಪ್ರತ್ಯಯಭಿನ್ನಸ್ಯ ' ಎಂದರ್ಥವಾಗು ವುದು. ' ವಸ್ ' ಎಂಬುದು ಪ್ರತ್ಯಯವಾದುದರಿಂದ ತದಂತಬೋಧಕವಾಗುವುದು. ' ಸಃ ' ಎಂಬುದು ಕೇವಲ ಸ ಕಾರಬೋಧಕವಾಗಿದ್ದರೂ ತದಂತವೆಂದು ಅರ್ಥವಾಗುವುದು. ತಥಾಚ— ಪೂರ್ವಪದಭೂತವಲ್ಲದ ' ವಸ್ ' ಪ್ರತ್ಯಯಾಂತಭಿನ್ನ ಸ ಕಾರಾಂತಕ್ಕೆ ವಿಕಲ್ಪವಾಗಿ ಲೋಪವು ಬರುವುದೆಂದು ಸೂತ್ರಾರ್ಥವಾಗುವುದು. ಇದರಿಂದ ' ಮನಂ ' ಮೊದಲಾದ ಶಬ್ದಗಳು ಸಿದ್ಧಿಸುವುವು. ಸೂತ್ರದಲ್ಲ ' ಸಃ ' ಎಂದು ಹೇಳಿರುವುದರಿಂದ ' ಅಶ್ವಯುಜಂ, ಗುಣಭಾಜಂ ' ಮೊದಲಾದುವು ಸಿದ್ಧಿಸುವುವು. ' ಅವಸಃ ' ಎಂದು ಹೇಳಿರುವುದರಿಂದ ' ವಿದ್ವಾಂಸಂ, ಪೇಚಿ ವಾಂಸಂ ' ಮೊದಲಾದ ವಸ್ ಪ್ರತ್ಯಯಾಂತಗಳಲ್ಲಿ ಬರುವುದಿಲ್ಲ.

**ಅವತಾರಿಕೆ ೧೩೩**

ಪೂರ್ವಸೂತ್ರದಿಂದ ವಿಹಿತವಾದ ಲೋಪವು ವಿಕಲ್ಪಿತವಾದುದರಿಂದ ಆ ಲೋಪವು ಬಾರದ ಪಕ್ಷದಲ್ಲಿ ಆ ಸ ಕಾರಾಂತ ಶಬ್ದಕ್ಕೆ ಉಗಾಗಮವನ್ನು ವಿಧಿಸುತ್ತಾನೆ.

**ಸೂತ್ರಂ || ಉಗಲೋಪೇ || ೧೩೩ ||**

**ಅರ್ಥ || ವಸ್ ಪ್ರತ್ಯಯಾಂತಭಿನ್ನವಾಗಿಯೂ ಪೂರ್ವಪದವಲ್ಲದೆಯೂ ಇರುವ ಸ ಕಾರಾಂತ ಶಬ್ದಕ್ಕೆ ಲೋಪವು ಬಾರದ ಪಕ್ಷದಲ್ಲಿ ಉಗಾಗಮವು ಅಂತಾವಯವವಾಗಿ ಬರುವುದು.**

**ಉದಾಹರಣೆ ||** ಮನಸ್ಸು, ಪಯಸ್ಸು, ಯಶಸ್ಸು, ಶಿರಸ್ಸು, ಧನುಸ್ಸು, ಸರ್ಪಿಸ್ಸು, ಚಂದ್ರ ಮಸ್ಸು, ಪುರೂರವಸ್ಸು, ಅಂಗಿರಸ್ಸು, ಉಶನಸ್ಸು || ಮೊದಲಾದ ಸಕಾರಾಂತಗಳೆಲ್ಲಾ ಇದಕ್ಕೆ ಲಕ್ಷ್ಯಗಳು.

**ವಿಚಾರ ೧೩೩**

**ಈ** ಸೂತ್ರದಲ್ಲಿ —' ಉಕ್, ಅಲೋಪೇ ' ಎಂದು ಎರಡು ಪದಗಳಿರುವುವು. ' **ಸೋsವಸಃ, ಅಪೂರ್ವಪದಸ್ಯ** ' ಎಂಬಿವು ಸಂಬಂಧಿಸಲ್ಪಡುವುವು. ' ಸಃ ' ಎಂದರೆ ' ಸ ಕಾರಾಂತಸ್ಯ ' ಎಂದರ್ಥವು. ಇದಕ್ಕೆ ' ಅವಸಃ, ಅಪೂರ್ವಪದಸ್ಯ ' ಎಂಬಿವೆರಡೂ ಪೂರ್ವಪದದಂತೆಯೇ ವಿಶೇಷಣವು. ' ಅಲೋಪೆ ' ಎಂದರೆ — ಲೋಪವು ವಿಕಲ್ಪವಾದುದರಿಂದ ' ಲೋಪಾಭಾವ ಪಕ್ಷದಲ್ಲಿ ' ಎಂದರ್ಥವು. ' ಉಕ್ ' ಎಂಬುದು ಕ ಕಾರೇತ್ಸಂಜ್ಞಕವಾದ ವಿಧೇಯವಾದುದರಿಂದ ' ಕಿದಂತ್ಯಃ ' ಎ[illegible]ಭಾಷಾಸೂತ್ರದಿಂದ ಅಂತಾವಯವವಾಗಿ ಬರುವುದೆಂದರ್ಥವಾಗುವುದು. ತಥಾಚ — ಪೂರ್ವಪದವಲ್ಲದ ವಸ್ ಪ್ರತ್ಯಯಾಂತರಹಿತವಾದ ಸ ಕಾರಾಂತ ಶಬ್ದಕ್ಕೆ — ' **ಸೋsವಸಃ**' ಎಂಬ ಸೂತ್ರದಿಂದ ವಿಹಿತವಾದ ವೈಕಲ್ಪಿಕ ಲೋಪವು ಬಾರದ ಪಕ್ಷದಲ್ಲಿ ಉಗಾಗಮವು ಬರುವುದೆಂದು ಸೂತ್ರಾರ್ಥವಾಗುವುದರಿಂದ ' ಮನಸ್ಸು ' ಮೊದಲಾದ ಪ್ರಯೋಗಗಳು ಸಿದ್ಧವಾಗುವುವು. ಇಲ್ಲಿ ' ಅಲೋಪ ' ಎಂದು ಹೇಳಿರುವುದರಿಂದ ಉಗಾಗಮಲೋಪಗಳೆರಡೂ ಏಕ ವಿಷಯಕಗಳಾಗಿದ್ದರೂ ಇವಕ್ಕೆ ಪರ್ಯಾಯತ್ವವು ಸಿದ್ಧವಾಗುವುದು. ಅದರಿಂದ ' ಮನಃ, ಮನಸ್ಸು ' ಮೊದಲಾದ ಎರಡೆರಡು ರೂಪಗಳು ಸಿದ್ಧಿಸುವುವು. ಇಲ್ಲಿ ಎಲ್ಲಾ ಕಡೆಯಲ್ಲಿಯೂ ಉಗಾಗಮವು ಪರದಲ್ಲಿರುವಾಗ –' **ಉಕಿ || ೬೯ ||** ' ಎಂಬ ಸೂತ್ರದಿಂದ ಸ ಕಾರಕ್ಕೆ ದ್ವಿರ್ಭಾವವು ಬಂದಿರುವುದೆಂದು ತಿಳಿಯಬೇಕು.

**ಅವತಾರಿಕೆ ೧೩೪**

ಸ ಕಾರಾಂತ ವಿಶೇಷಗಳಲ್ಲಿ ಸಾಮಾನ್ಯಸೂತ್ರದಿಂದ ವಿಹಿತವಾದ ಲೋಪವು ಬಾರದ ಪಕ್ಷದಲ್ಲಿ ವೈಕಲ್ಪಿಕವಾದ ಉಗಾಗಮವನ್ನು ಹೇಳುತ್ತಾನೆ.

**ಸೂತ್ರಂ || ವೇಯಸಃ || ೧೩೪ ||**

**ಅರ್ಥ || ಪೂರ್ವಪದಭೂತವಲ್ಲದ ಈಯಸ್-ಪ್ರತ್ಯಯಾಂತಶಬ್ದಕ್ಕೆ ಲೋಪಾಭಾವಪಕ್ಷದಲ್ಲಿ ಉಗಾಗಮವು ವಿಕಲ್ಪವಾಗಿ ಬರುವುದು. ಇದು ಬಾರದಿದ್ದರೆ ಜಸಂತವದ್ಭಾವವು ಬರುವುದು.**

**ಉದಾಹರಣೆ ||** ಶ್ರೇಯಸ್ — ಶ್ರೇಯಂ, ಶ್ರೇಯಸ್ಸು, ಶ್ರೇಯಾಂಸಂ ಹೀಗೆಯೇ — ಜ್ಯಾಯಂ, ಜ್ಯಾಯಸ್ಸು, ಜ್ಯಾಯಾಂಸಂ; ಕನೀಯಂ, ಕನೀಯಸ್ಸು, ಕನೀಯಾಂಸಂ; ಲಘೀಯಂ, ಲಘೀಯಸ್ಸು, ಲಘೀಯಾಂಸಂ || ಮೊದಲಾದ ಈಯಸ್ ಪ್ರತ್ಯಯಾಂತಗಳೆಲ್ಲಾ ಇದಕ್ಕೆ ಲಕ್ಷ್ಯಗಳೆಂದು ತಿಳಿಯಬೇಕು.

**ವಿಚಾರ ೧೩೪**

ಈ ಸೂತ್ರದಲ್ಲಿ — ' ವಾ, ಈಯಸಃ ' ಎಂದು ಎರಡು ಪದಗಳಿರುವುವು. ಪೂರ್ವಸೂತ್ರ ದಿಂದ ' ಉಕ್, ಅಲೋಪೇ, ಅಪೂರ್ವಪದಸ್ಯ ' ಎಂಬಿವು ಅನುವರ್ತಿಸಲ್ಪಡುವುವು. ' ವಾ ' ಎಂಬುದು ವಿಕಲ್ಪಾರ್ಥಕವು. ' ಈಯಸಃ ' ಎಂಬುದು ಪ್ರತ್ಯಯಬೋಧಕವಾದುದರಿಂದ —

**' ಪ್ರತ್ಯಯಗ್ರಹಣೇ ಯಸ್ಮಾತ್ ಸ ವಿಹಿತಸ್ತದಾದೇಸ್ತದಂತಸ್ಯ ಗ್ರಹಣಂ '**

ಎಂಬ ಪರಿಭಾಷೆಯಿಂದ ತದಂತಲಾಭವು ಬಂದು ' ಈಯಸ್ ಪ್ರತ್ಯಯಾಂತಸ್ಯ ' ಎಂದರ್ಥ ವಾಗುವುದು. ಇದಕ್ಕೆ ' ಅಪೂರ್ವಪದಸ್ಯ ' ಎಂಬುದು ವಿಶೇಷಣವು. ' ಅಲೋಪೇ ' ಎಂದರೆ

ಲೋಪಾಭಾವೇ ' ಎಂದರ್ಥವು. ಆದುದರಿಂದ ಪೂರ್ವಪದಭೂತವಲ್ಲದ ಈಯಸ್ ಪ್ರತ್ಯಯಾಂತ ಶಬ್ದಕ್ಕೆ — ' **ಸೋಽವಸಃ** ' ಎಂಬ ಸೂತ್ರದಿಂದ ಲೋಪವು ಬಾರದ ಪಕ್ಷದಲ್ಲಿ ವಿಕಲ್ಪವಾಗಿ ಉಗಾಗಮವು ಬರುವುದೆಂದು ಸೂತ್ರಾರ್ಥವಾಗುವುದರಿಂದ ಅಲೋಪಪಕ್ಷದಲ್ಲಿ ಉಗಾಗಮಾಪ್ರವೃತ್ತಿಪಕ್ಷದಲ್ಲಿ ವ್ಯಂಜನಾಂತಸಾಮಾನ್ಯಕ್ಕೆ ಹೇಳಿದ ಜಸಂತವದ್ಭಾವವನ್ನು ಮಾಡಲು ಶ್ರೇಯಾಂಸಂ' ಎಂದೂ ಉಗಾಗಮಪ್ರವೃತ್ತಿಪಕ್ಷದಲ್ಲಿ ' ಶ್ರೇಯಸ್ಸು ' ಎಂದೂ ಲೋಪ ಬರುವ ಪಕ್ಷದಲ್ಲಿ ' ಶ್ರೇಯಂ ' ಎಂದೂ ಮೂರು ರೂಪಗಳಾಗುವುವು. ಹೀಗೆಯೇ ಈಯಸ್-ಅಂತಗಳೆಲ್ಲಾ ಊಹಿಸಿಕೊಳ್ಳುವುದು. ಈ ವಿಷಯವಿಭಾಗದಿಂದ ರೂಪತ್ರಯಸಿದ್ಧಿಯಾಗಿಯೇ ಈ ಸೂತ್ರದಲ್ಲಿಯೂ ' ಅಲೋಪೇ ' ಎಂದು ಸಂಬಂಧಿಸಲ್ಪಟ್ಟಿರುವುದೆಂದು ತಿಳಿಯುವುದು. ಈ ಸೂತ್ರದಲ್ಲಿ ' ಈಯಸಃ ' ಎಂದು ಹೇಳಿರುವುದರಿಂದ ' ಮನಂ, ಮನಸ್ಸು ' ಮೊದಲಾದುವುಗಳಲ್ಲಿ ವಿಕಲ್ಪವಿಲ್ಲ..

ಇಲ್ಲಿ ಕೆಲವರು — ' **ವ್ಯಂಜನಸ್ಯಾನಬ್ಜಸನ್ತವಲ್ಲುಪ್ತ ತಸ್ಯ || ೧೨೯ ||** ' ಎಂಬ ಸೂತ್ರದಲ್ಲಿ ' ಅನಪ್ ' ಎಂದು ನಪುಂಸಕಲಿಂಗ ಮಾತ್ರಕ್ಕೆ ಪರ್ಯುದಾಸಮಾಡಿರುವುದರಿಂದ ಸ್ತ್ರೀಪುಂಸ ವಿಷಯಕ ಜಸನ್ತರೂಪಕ್ಕೆ ಅತಿದೇಶವೆಂದು ತೋರುವುದು. ಆದರೂ ಕೆಲವು ವ್ಯಂಜನಾಂತಗಳಲ್ಲಿ ಸ್ತ್ರೀಲಿಂಗಪುಲ್ಲಿಂಗಗಳಿಗೆ ವ್ಯತ್ಯಾಸವೇನೂ ತೋರುವುದಿಲ್ಲವಾದುದರಿಂದ ಅಲ್ಲಿ ಯಾವ ಲಿಂಗದ ಜಸನ್ತಕ್ಕಾದರೂ ಅತಿದೇಶವೆಂದು ಹೇಳಬಹುದು. ಕೆಲವು ವ್ಯಂಜನಾಂತಗಳು ಮಾತ್ರ ಸ್ತ್ರೀಲಿಂಗದಲ್ಲಿ ಈ ಕಾರಾಂತಗಳಾಗಿ ಪರಿಣಮಿಸುವುದರಿಂದ ಅವು ಸ್ವರಾಂತಗಳಾಗಿ — ' **ಹ್ರಸ್ವೋಽನೇಕಸ್ವರಸ್ಯ** ' ಇತ್ಯಾದಿ ಸೂತ್ರಕ್ಕೆ ವಿಷಯಗಳೆಂದು ಅಲ್ಲಿ ಈ ಜಸನ್ತವದ್ರೂಪಾತಿದೇಶವು ಬರುವುದಿಲ್ಲ. ಅಂತಹ ಶಬ್ದಗಳ ವಿಷಯದಲ್ಲಿ ಮಾತ್ರ ಪುಲ್ಲಿಂಗವಿಷಯಕ ಜಸನ್ತವದ್ರೂಪಾತಿದೇಶವೆಂದು ತಿಳಿಯಬೇಕು. ಪ್ರಕೃತದಲ್ಲಿ ' ಈಯಸ್ ' ಪ್ರತ್ಯಯಾಂತಗಳೆಲ್ಲಾ ಸ್ತ್ರೀಲಿಂಗದಲ್ಲಿ ಈ ಕಾರಾಂತಗಳಾಗುವುದರಿಂದ ಅವು ಹ್ರಸ್ವ ವಿಷಯಕಗಳಾಗಿ ಆ ಸೂತ್ರಕ್ಕೆ ಲಕ್ಷ್ಯಗಳಾಗುವುವು. ಪುಲ್ಲಿಂಗದಲ್ಲಿ ಮಾತ್ರ ಸ ಕಾರಾಂತಗಳೇ ಆಗಿರುವುದರಿಂದ ಜಸನ್ತವದ್ರೂಪಾತಿದೇಶವೂ ಲೋಪವೂ ಉಗಾಗಮವೂ ಬರುವುವೆಂದು ತೋರುವುದು. ಆದಾಗ್ಯೂ ಪ್ರಯೋಗಬಲದಿಂದ ಕೆಲವು ನಪುಂಸಕ ವಿಷಯದಲ್ಲಿಯೂ ಜಸನ್ತವದ್ರೂಪಾತಿದೇಶವುಂಟೆಂದು ಹೇಳಿ ಅದಕ್ಕೆ —

ಜ್ಯಾಯಾಂಸನೆಂದುದೆಮಗಂ
ಶ್ರೇಯಾಂಸಮೆ ತನುಧನಾಂಗನಾವಿಷಯಸುಖಂ
ಸ್ಥೇಯಾಂಸಮಲ್ತೆ ದೆಂದು ಕ
ನೀಯಾಂಸಂಗಿಳೆಯನಿತ್ತು ದೀಕ್ಷೆಗೆ ಪೂಣ್ದರ್

ಎಂಬ ಪ್ರಯೋಗವನ್ನು ಉದಾಹರಣೆಯಾಗಿ ಕೊಡುವರು. ಆದರೆ ಇಲ್ಲಿ ನಪುಂಸಕಲಿಂಗದ ಜಸನ್ತರೂಪವು ' ಶ್ರೇಯಾಂಸಿ, ಸ್ಥೇಯಾಂಸಿ ' ಎಂದಾಗುವುದು. ಈ ರೂಪಗಳಿಗೆ ಅತಿದೇಶವೆಂದು ಹೇಳಲು ಪ್ರಯೋಗಗಳು ಸಿದ್ಧಿಸುವುದಿಲ್ಲ. ಆದುದರಿಂದ ಸಂಸ್ಕೃತ ಪುಲ್ಲಿಂಗ ಜಸನ್ತರೂಪಕ್ಕೇ ಅತಿದೇಶಮಾಡಿ ಅನಂತರದಲ್ಲಿ ಭಾಷಾರೀತಿಯಿಂದ ಅವು ನಪುಂಸಕ ವಿಷಯದಲ್ಲಿ ಪ್ರಯೋಗಿಸಲ್ಪಟ್ಟವೆ — ಎಂದು ಹೇಳುವುದೇ ಉಚಿತವೆಂದು ತೋರುವುದು.

**ಅವತಾರಿಕೆ ೧೩೫**

ಇನ್ನು ಕೆಲವು ವ್ಯಂಜನಾಂತ ಶಬ್ದಗಳಿಗೆ ನಿತ್ಯವಾಗಿ ಉಗಾಗಮವನ್ನು ವಿಧಿಸುತ್ತಾನೆ.

**ಸೂತ್ರಂ॥ ಉಗಬಾದೀನಾಂ ॥ ೧೩೫ ॥**

**ಅರ್ಥ ॥ ಪೂರ್ವಪದಭೂತಗಳಲ್ಲದ ಅಬಾದಿಗಣಪಠಿತಗಳಾದ ವ್ಯಂಜನಾಂತ ಶಬ್ದಗಳಿಗೆ ಉಗಾಗಮವು ನಿತ್ಯವಾಗಿ ಬರುವುದು.**

**ಉದಾಹರಣೆ ॥** ಅಪ್=ಅಪ್ಪು ॥ ಹೀಗೆಯೇ — ವಿಯತ್ತು, ಸಂಯತ್ತು, ಜಗತ್ತು ॥ ಮೊದಲಾದುವು. ಅಬಾದಿಗಳಾವುವೆಂದರೆ — 'ಅಪ್, ವಿಯತ್, ಸಂಯತ್, ವಿದ್ಯುತ್, ಜಗತ್, ದ್ಯುತ್, ಪುರೀತತ್ ( ಪರೀಕ್ಷಿತ್ ), ಅಗ್ನಿಚಿತ್, ಯಜುಸ್, ಸದಸ್, ತಟಿತ್' ಮೊದಲಾದುವು. ಇದೂ ಆಕೃತಿಗಣವಾದುದರಿಂದ ಇದರಂತೆಯೇ ಇರುವ ಶಬ್ದಗಳನ್ನೆಲ್ಲಾ ಇಲ್ಲಿ ಪಾಠಮಾಡಿಕೊಂಡು ಉಗಾಗಮವನ್ನು ಹೇಳಿಕೊಳ್ಳುವುದು.

**ವಿಚಾರ ೧೩೫**

ಈ ಸೂತ್ರದಲ್ಲಿ— ' ಉಕ್, ಅಬಾದೀನಾಂ ' ಎಂದು ಎರಡು ಪದಗಳಿರುವುವು. ' ಉಕ್ ' ಎಂಬುದು ಅನುವರ್ತಿಸಲ್ಪಡುತ್ತಿದ್ದರೂ ಮತ್ತೆ ಗ್ರಹಣ ಮಾಡಿರುವುದು ನಿತ್ಯಾರ್ಥವೆಂದು ತಿಳಿಯಬೇಕು. ' ಅಬಾದೀನಾಂ ' ಎಂಬುದು ಬಹುವ್ರೀಹಿಸಮಾಸವಾದುದರಿಂದ ಅಬಾದಿಗಣವೆಂದರ್ಥವಾಗುವುದು. ಬಹುವಚನದಿಂದ ಆಕೃತಿಗಣವೆಂದು ತಿಳಿಯುವುದು. ' ಅಪೂರ್ವಪದಸ್ಯ ' ಎಂಬುದು ಅಬಾದಿಗಳಿಗೆ ಸಂಬಂಧಿಸಲ್ಪಡುವುದು. ಆದುದರಿಂದ ಪೂರ್ವಪದಭೂತಗಳಲ್ಲದ ಅಬಾದಿಗಣಪಠಿತ ಶಬ್ದಗಳಿಗೆ ನಿತ್ಯವಾಗಿ ಉಗಾಗಮವು ಬರುವುದೆಂದು ಸೂತ್ರಾರ್ಥವಾಗಲು — ' ಉಕಿ ' ಎಂಬುದರಿಂದ ದ್ವಿತ್ವವನ್ನು ಮಾಡಲು ' ಅಪ್ಪು ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು.

**ಅವತಾರಿಕೆ ೧೩೬**

ಇನ್ನು ಕೆಲವು ವ್ಯಂಜನಾಂತಶಬ್ದಗಳಿಗೆ ಪ್ರಥಮೈಕವಚನರೂಪಾತಿದೇಶಸನ್ನಿಯೋಗಶಿಷ್ಟವಾಗಿ ಉಗಾಗಮವಿಧಾಯಕ ಸೂತ್ರವನ್ನು ಹೇಳುತ್ತಾನೆ.

**ಸೂತ್ರಂ ॥ ವಾಗಾದೀನಾಂ ಸ್ವಂತವಚ್ಚ ॥ ೧೩೬ ॥**

**ಅರ್ಥ ॥ ಪೂರ್ವಪದಭೂತಗಳಲ್ಲದ ' ವಾಚ್ ' ಮೊದಲಾದ ಕೆಲವು ಶಬ್ದಗಳಿಗೆ ಅದರದರ ಪ್ರಥಮೈಕವಚನಾಂತದಂತೆ ರೂಪವೂ ಉಗಾಗಮವೂ ಬರುವುದು.**

**ಉದಾಹರಣೆ ॥** ವಾಚ್, ವಾಕ್ಕು॥ ಹೀಗೆಯೇ — ದಿಕ್ಕು, ತ್ವಕ್ಕು, ಮುಕ್ಕು, ಉಷ್ಣಿಕ್ಕು, ಕ್ಷುತ್ತು, ಪ್ರತಿಪತ್ತು, ಪರಿಷತ್ತು॥ ಮೊದಲಾದುವು ಇದಕ್ಕೆ ಉದಾಹರಣೆಗಳು. ವಾಗಾದಿಗಣಪಠಿತಶಬ್ದಗಳಾವುವೆಂದರೆ — 'ವಾಚ್, ತ್ವಚ್, ಮುಚ್, ಕ್ಷುಧ್, ವೀರುಧ್, ಸಮಿಧ್, ಸಂಪದ್, ಪ್ರತಿಪದ್, ಪರಿಷದ್, ವಿಪದ್, ಉಷ್ಣಿಹ್, ರುಚ್, ಸ್ರುಜ್, ದ್ವಿಷ್,ದಿಶ್, ವಿಶ್' ಮೊದಲಾದುವು. ಈ ಗಣವೂ ಆಕೃತಿಗಣವಾದುದರಿಂದ 'ನಭ್ರಾಜ್, ಜಲಮುಚ್, ಭುಜಂಗಭುಜ್' ಮೊದಲಾದುವನ್ನೂ ಯಥಾಲಕ್ಷ್ಯವಾಗಿ ಇಲ್ಲಿ ಪಾಠ ಮಾಡಿಕೊಳ್ಳುವುದು.

**ವಿಚಾರ ೧೩೬**

**ಈ** ಸೂತ್ರದಲ್ಲಿ 'ವಾಗಾದೀನಾಂ, ಸ್ವಂತವತ್, ಚ' ಎಂದು ಮೂರು ಪದಗಳಿರುವುವು. 'ಅಪೂರ್ವಪದಸ್ಯ' ಎಂಬುದು ಸಂತತವಾಗಿ ಇದ್ದೇ ಇರುವುದು. ವಾಗಾದಿಗಳೆಂದರೆ ಗಣಪಠಿತಗಳಾದ ಶಬ್ದಗಳು. 'ಸ್ವಂತವತ್'-'ಸು' ಎಂದರೆ ಸಂಸ್ಕೃತದಲ್ಲಿ ಪ್ರಥಮೈಕವಚನ ಪ್ರತ್ಯಯವು. ಅದೇ ಅಂತರದಲ್ಲಿರುವುದು ಸ್ವಂತವೆನಿಸಿಕೊಳ್ಳುವುದು. 'ಸ್ವಂತಸ್ಯೇವ ಸ್ವಂತವತ್' ಎಂಬ ವಿಗ್ರಹದಿಂದ ಸ್ವಂತದಂತೆ ಎಂದರ್ಥವಾಗುವುದು. ಇದೂ ರೂಪಾತಿದೇಶವಾದುದರಿಂದ ವಾಗಾದಿ ಗಣಪಠಿತವಾದ ಶಬ್ದಗಳಿಗೆ ಪೂರ್ವಪದಭೂತಗಳಾಗಿಲ್ಲದಿದ್ದರೆ ಆ ಆ ಶಬ್ದದ ಸಂಸ್ಕೃತದ ಪ್ರಥಮೈಕವಚನಾಂತರೂಪದಂತೆ ರೂಪವಾಗುವುದು. ಮತ್ತು ಅದಕ್ಕೆ ಉಗಾಗಮವೂ ಬರುವುದು. ಇವೆರಡು ಸನ್ನಿಯೋಗಶಿಷ್ಟಗಳಾದುದರಿಂದ '**ಸನ್ನಿಯೋಗಶಿಷ್ಟಾನಾಂ ಸಹ ವಾ ಪ್ರವೃತ್ತಿಃ ಸಹ ವಾ ನಿವೃತ್ತಿಃ**' ಎಂಬ ನ್ಯಾಯದಿಂದ ಎರಡೂ ಏಕಕಾಲದಲ್ಲಿಯೇ ಬರುವುದರಿಂದ 'ವಾಕ್ಕು, ತ್ವಕ್ಕು' ಮೊದಲಾದುವು ಸಿದ್ಧಿಸುವುವು.

ಇಲ್ಲಿ ಅಬಾದಿ ಪ್ರಕೃತಿಗಳಿಗೇ ಹೇಗೆ ಉಗಾಗಮವು ಬರುವುದೋ ಹಾಗೆ ಕೇವಲ ವಾಗಾದಿ ಪ್ರಕೃತಿಗಳಿಗೆ ಉಗಾಗಮವಿಲ್ಲ. ಪ್ರಕೃತಿಗಳಿಗೆ ಉಗಾಗಮವನ್ನು ಮಾಡಿದರೆ 'ವಾಚ್ಚು, ತ್ವಚ್ಚು' ಮೊದಲಾದುವು ಆಗುವುವೇ ಅಲ್ಲದೆ 'ವಾಕ್ಕು, ತ್ವಕ್ಕು' ಮೊದಲಾದುವು ಆಗುವುದಿಲ್ಲ. ಆದುದರಿಂದ ಪ್ರಥಮೈಕವಚನಾಂತರೂಪವನ್ನು ಅತಿದೇಶ ಮಾಡಿ ಉಗಾಗಮವು ವಿಧಿಸಲ್ಪಟ್ಟಿದೆ. ಹೀಗೆ ಅತಿದೇಶವನ್ನು ಮಾಡಿದರೂ ಸಂಸ್ಕೃತಪ್ರಥಮೈಕವಚನದಲ್ಲಿ ಜಸ್ತ್ವವನ್ನೂ ವಿಕಲ್ಪವಾಗಿ ಅಂಗೀಕರಿಸಿರುವುದರಿಂದ 'ವಾಕ್, ತ್ವಕ್' ಎಂಬಂತೆ 'ವಾಗ್, ತ್ವಗ್' ಎಂದು ಮೊದಲಾಗಿ ತೃತೀಯವರ್ಣಾಂತ ಪ್ರಯೋಗಗಳೂ ಸಂಭವಿಸುವುವು. ಆದುದರಿಂದ ಅವುಗಳಿಗೆ ಇದರಿಂದ ಉಗಾಗಮವನ್ನು ವಿಧಿಸಲು 'ವಾಗ್ಗು, ತ್ವಗ್ಗು' ಮೊದಲಾದ ರೂಪಾಂತರಗಳೂ ಸಂಭವಿಸುವುವು. ಆದಾಗ್ಯೂ ಲೋಕದಲ್ಲಿ ಪ್ರಚುರವಾಗಿ — 'ವಾಕ್, ತ್ವಕ್, ದಿಕ್, ಉಷ್ಣಿಕ್, ದ್ವಿಟ್, ವಿಟ್, ಕ್ಷುತ್, ಸಮಿತ್, ಕಕುಪ್' ಮೊದಲಾದ ಕ ಟ ತ ಪ ಗಳುಳ್ಳ ಪ್ರಯೋಗಗಳೇ ಬಹಳವಾಗಿರುವುದರಿಂದ ಅವುಗಳಿಗೇ ಈ ಅತಿದೇಶವೂ ಉಗಾಗಮವೂ ಬರುವುವು. 'ವಾಗ್, ತ್ವಗ್' ಮೊದಲಾದ ಗ ಡ ದ ಬ ಗಳುಳ್ಳ ಪ್ರಯೋಗಗಳು ಅತಿ ವಿರಳವಾದುದರಿಂದ ಅವಕ್ಕೆ ಅತಿದೇಶವಿಲ್ಲವೆಂದು ಅತಿಪ್ರಸಕ್ತಿವಾರಣೆಯನ್ನು ಮಾಡಿಕೊಳ್ಳುವುದು; ಅಥವಾ 'ಸು' ಎಂಬುದು ಅನುಬಂಧ (ಇತ್‌ಸಂಜ್ಞೆ) ರಹಿತವಾದ ಸಪ್ತಮಿ ಬಹುವಚನ ಪ್ರತ್ಯಯವೆಂದು ಹೇಳಲ್ಪಡುವುದು. ಅದು ಪರದಲ್ಲಿರಲು ಪ್ರಕೃತಿಭಾವವು ಯಾವ ರೂಪವಾಗುವುದೋ ಆ ಪ್ರಕೃತಿರೂಪವು ಇಲ್ಲಿ ಅತಿದೇಶಕ್ಕೆ ವಿಷಯವೆಂದು ಹೇಳಲು ಯಾವ ದೋಷಕ್ಕೂ ಅವಕಾಶವಿಲ್ಲವೆಂದು ತಿಳಿಯಬೇಕು.

**ಅವತಾರಿಕೆ ೧೩೭**

ಹೀಗೆಯೇ ಇನ್ನೂ ಕೆಲವು ವ್ಯಂಜನಾಂತಗಳಿಗೆ ಸ್ವಂತವದತಿದೇಶಸನ್ನಿಯೋಗದಿಂದ ಉಗಾಗಮವನ್ನು ವಿಧಿಸುತ್ತಾನೆ.

**ಸೂತ್ರಂ ॥ ಮಹದಾದೀನಾಂ ನಪಿ ॥ ೧೩೭ ॥**

**ಅರ್ಥ ॥ ಪೂರ್ವಪದಭೂತಗಳಲ್ಲದ ಮಹದಾದಿಗಣಪಠಿತ ಶಬ್ದಗಳಿಗೆ ನಪುಂಸಕಲಿಂಗ ವಿಷಯದಲ್ಲಿ ಸ್ವಂತವದ್ರೂಪಾತಿದೇಶವೂ ಉಗಾಗಮವೂ ಬರುವುದು.**

**ಉದಾಹರಣೆ** || ಮಹತ್ — ಮಹತ್ತು || ಹೀಗೆಯೇ — ಬೃಹತ್ತು, ಪ್ರಾಕ್ಕು, ಅವಾಕ್ಕು ಸಮ್ಯಕ್ಕು, || ಮೊದಲಾದುವು ಇದಕ್ಕೆ ಉದಾಹರಣೆಗಳಾಗುವುವು. ಮಹದಾದಿ ಗಣಪಠಿತ ಶಬ್ದಗಳಾವುವೆಂದರೆ —

' ಮಹತ್, ಬೃಹತ್, ಪ್ರಾಚ್, ಅವಾಚ್, ಪ್ರತ್ಯಚ್, ಉದಚ್, ತಿರ್ಯಚ್, ವಿಷ್ವಚ್ ನ್ಯಚ್, ಅಮುಮುಪ್ರ್ಯಚ್, ಅವದ್ರ್ಯಚ್, ಅಮುಮುಯಚ್, ಅದಮುಯಚ್, ಸಧ್ರ್ಯಚ್, ಸಮ್ಯಚ್ ' ಮೊದಲಾದುವು. ಇದು ಆಕೃತಿಗಣವಾದುದರಿಂದ ಪ್ರಯೋಗಾನುಸಾರವಾಗಿ ವ್ಯಂಜನಾಂತಗಳಾದ ಇನ್ನೂ ಕೆಲವು ಶಬ್ದಗಳು ಇಲ್ಲಿ ಗ್ರಹಿಸಲ್ಪಡುವುವೆಂದು ತಿಳಿಯುವುದು.

**ವಿಚಾರ ೧೩೭**

ಈ ಸೂತ್ರದಲ್ಲಿ ' ಮಹದಾದೀನಾಂ, ನಪಿ, ' ಎಂದು ಎರಡು ಪದಗಳಿರುವುವು. ಪೂರ್ವ ಸೂತ್ರದಿಂದ ' ಸ್ವಂತವತ್, ಉಕ್, ಅಪೂರ್ವಪದಸ್ಯ ' ಎಂದು ಅನುವರ್ತಿಸಲ್ಪಡುವುವು. ಆದುದರಿಂದ ಪೂರ್ವಪದಭೂತಗಳಲ್ಲದ ಮಹದಾದಿಗಣಪಠಿತಗಳಾದ ಶಬ್ದಗಳಿಗೆ ನಪುಂಸಕಲಿಂಗದಲ್ಲಿ ಸ್ವಂತವದ್ರೂಪಾತಿದೇಶವೂ ಉಗಾಗಮವೂ ಬರುವುದೆಂದು ಸೂತ್ರಾರ್ಥವಾಗುವುದರಿಂದ ' ಮಹತ್ತು ' ಮೊದಲಾದುವು ಸಿದ್ಧಿಸುವುವು.

ಪೂರ್ವದಲ್ಲಿ ಹೇಳಿರುವ ಅಬಾದಿಗಳೂ ವಾಗಾದಿಗಳೂ ಸ್ವತಂತ್ರವಸ್ತುವಾಚಕಗಳಾದುದರಿಂದ ಅವು ಸ್ವತಂತ್ರಗಳಾಗಿ ನಿಯತ-ಲಿಂಗಗಳಾಗಿರುವುವು. ಅಲ್ಲಿ ಆವ ವಿಶೇಷವೂ ಇರುವುದಿಲ್ಲ. ಮಹದಾದಿಗಳಾದರೋ ವಿಶೇಷ್ಯಾಯತ್ತಗಳಾದುದರಿಂದ ಸ್ವತಂತ್ರಗಳಲ್ಲ. ಆದುದರಿಂದ ಇವು ಉಪಸರ್ಜನ-ಲಿಂಗಗಳಾಗುವುವು. ಅವುಗಳಲ್ಲಿ ಯಾವಾಗ ಇವು ನಪುಂಸಕಲಿಂಗದಲ್ಲಿರುವುವೋ ಆವಾಗಲೇ ಸ್ವಂತವದ್ರೂಪಾತಿದೇಶವೂ ಉಗಾಗಮವೂ ಬರುವುದು. ನಪುಂಸಕಲಿಂಗಗಳಲ್ಲದಿದ್ದರೆ ಸಾಮಾನ್ಯವಾಗಿ ಹೇಳಿರುವ ಜಸಂತವದ್ರೂಪಾತಿದೇಶವೇ ಬಂದು ' ಮಹಾಂತಂ, ಪ್ರಾಂಚಂ, ಪ್ರತ್ಯಂಚಂ ' ಮೊದಲಾದ ರೂಪಗಳಾಗುವುವು.

ಈ ಗಣದಲ್ಲಿ — ' ಅಮುಮುದ್ರ್ಯಚ್ ' ಮೊದಲಾದ ನಾಲ್ಕು ಶಬ್ದಗಳು ಪಠಿಸಿರುವುವು. ಇವು ' ಅದಸ್ ' ಶಬ್ದೋಪಪದಕ 'ಅಂಚ್' ಧಾತುವಿನಿಂದ ನಿಷ್ಪನ್ನವಾದ 'ಅದಸ್, ಅಚ್' ಎಂಬಲ್ಲಿ ' ಅದಸ್ ' ಎಂಬುದರ ' ಅಸ್ ' ಎಂಬುದಕ್ಕೆ ' ಅದ್ರಿ ' ಎಂದು ಆದೇಶವನ್ನು ಮಾಡಲು ' ಅದದ್ರ್ಯಚ್ ' ಎಂಬುದಾಗಿಯೂ 'ಅದಸ್' ಶಬ್ದದ ' ದ ' ಎಂಬುದಕ್ಕೆ ಮಾತ್ರ ' ಮು ' ಎಂಬಾದೇಶವನ್ನು ಮಾಡಲು ' ಅಮುದ್ರ್ಯಚ್ ' ಎಂಬುದಾಗಿಯೂ ' ಅದದ್ರ್ಯಚ್ ' ಎಂಬಲ್ಲಿ ಎರಡು ದ ಕಾರಕ್ಕೂ ಮಾಡಲು ' ಅಮುಮುಯಚ್ ' ಎಂಬುದಾಗಿಯೂ ಅದ್ರ್ಯಾದೇಶದ ದ ಕಾರಕ್ಕೆ ಮಾತ್ರ ಮಾಡಲು ' ಅದಮುಯಚ್ ' ಎಂಬುದಾಗಿಯೂ ಆಗಿವೆಯೆಂದು ತಿಳಿಯಬೇಕು. ಈ ವಿಷಯವನ್ನು ಸಂಸ್ಕೃತ ವ್ಯಾಕರಣದಲ್ಲಿ —

ಅದಸೋದ್ರೇಃ ಪೃಥಙ್ಮುತ್ವಂ ಕೇಚಿದಿಚ್ಛಂತಿ ಲತ್ವವತ್
ಕೇಚಿದಂತ್ಯಸದೇಶಸ್ಯ ನೇತ್ಯೇಕೇಽಸೇರ್ಹಿದೃಶ್ಯತೇ

ಎಂಬುದರಿಂದ ಸ್ಪಷ್ಟವಾಗಿ ತಿಳಿಸಿರುವರು. ಆದರೆ ಈ ಶಬ್ದಗಳು ಭಾಷೆಯಲ್ಲಿ ವಿಶೇಷ ರೂಢಿಯಿಲ್ಲವಾದುದರಿಂದ ಇದರ ಪಾಠಕ್ಕೆ ಅಷ್ಟು ಪ್ರಯೋಜನವಿಲ್ಲವೆಂದು ತೋರುವುದು. ಈ ವಿಷಯದಲ್ಲಿ **ದರ್ಪಣಕಾರನು** ಸಾಮಾನ್ಯವಾಗಿ —

ಜನಮುಲಿವ ಸಂಸ್ಕೃತವ್ಯಂ
ಜನಾಂತಲಿಂಗಗಳತ್ವಮುಂ ದ್ವಿತ್ವದಿನು
ತ್ವಸಿಯೋಗಮನಂತ್ಯಾದ
ರ್ಶನಮಂ ಮೇಣ್ ತಾಳ್ದು ಕನ್ನಡಕ್ಕಿವು ಲಿಂಗಂ(ಸೂತ್ರ ೭೭)

ಎಂದು ಹೇಳಿರುವನು.

**ದರ್ಪಣಕಾರ**ನ ಮತದಲ್ಲಿ ಮೇಲೆ ಹೇಳಿರುವ ವಿಷಯಗಳಿಗೆಲ್ಲಾ ಸ್ಪಷ್ಟವಾಗಿ ಸೂತ್ರವನ್ನು ಹೇಳದಿದ್ದರೂ ಸಂಗ್ರಹರೂಪವಾಗಿ ಹೇಳಿ ಉಳಿದುವನ್ನು ಬಹುಳಗ್ರಹಣದಿಂದ ಸಾಧಿಸಬೇಕೆಂದು ಹೇಳಿರುವನು. ಮತ್ತು ಇವನ ಮತದಲ್ಲಿ ಇವೆಲ್ಲಾ ಸಮಸಂಸ್ಕೃತಗಳೆಂದು —

ಸಮುದಿತಸಂಖ್ಯಾನ್ವಯರಹಿ
ತಮೆನಿಸಿ ವರ್ತಿಪ ನಿಘಂಟುವಿನ ನಾಮಪದೋ
ತ್ತಮವರ್ಣಪ್ರಕೃತಿಗಳಂ
ಸಮಸಂಸ್ಕೃತವೆಸರನಿಟ್ಟು ಲಿಂಗಂ ಮಾಟ್ಪರ್ (ಸೂತ್ರ ೮೦)

ಎಂಬ ಸೂತ್ರದಿಂದ ನಾಮಪ್ರಕೃತಿಗಳನ್ನು ಕನ್ನಡಕ್ಕೆ ಸರಿ ಮಾಡಿ ಎಂದು ಹೇಳಿರುವುದರಿಂದ ಏಕದೇಶವಿಕೃತಗಳಾದ 'ವೀಣೆ, ಮಾಲೆ, ನದಿ' ಮೊದಲಾದುವೆಲ್ಲಾ ಸಮಸಂಸ್ಕೃತವೆಂದು ತಿಳಿದು ಲಿಂಗವನ್ನು ಮಾಡಬೇಕೆಂದು ತಿಳಿಯಬೇಕು. ಆದುದರಿಂದಲೇ **ದರ್ಪಣಕಾರ**ನು ಇಂತಹ ಏಕದೇಶದಲ್ಲಿ ವಿಕೃತವಾಗುವ ಶಬ್ದಗಳನ್ನೆಲ್ಲಾ ತದ್ಭವಪ್ರಕರಣದಲ್ಲಿ ಪಾಠಮಾಡದೆ ಲಿಂಗಪ್ರಕರಣದಲ್ಲಿಯೇ ಹೇಳಿರುವನು. **ಶಾಸನಕಾರ**ನ ಮತದಲ್ಲಾದರೋ ಏಕದೇಶವಿಕೃತವಾಗಲಿ ಸಮುದಾಯವಿಕೃತವಾಗಲಿ ಎಲ್ಲಾ ತದ್ಭವಗಳೇ ಎಂದು ಇವೆಲ್ಲವನ್ನೂ ತದ್ಭವಪ್ರಕರಣದಲ್ಲಿಯೇ ಸೇರಿಸಿರುವನು. ಪ್ರಕರಣಗಳು ಭಿನ್ನವಾಗಿದ್ದರೂ ಕನ್ನಡಕ್ಕೆ ಲಿಂಗವಾಗುವ ವಿಷಯದಲ್ಲಿ ಏನೂ ಭೇದವಿರುವುದಿಲ್ಲ. ಆದರೆ **ದರ್ಪಣಕಾರ**ನು ಸಮಸಂಸ್ಕೃತವೆಂಬ ವ್ಯವಹಾರಕ್ಕೆ ವಿಷಯಗಳಾದ ಶಬ್ದಗಳಿಗೂ ಅಚ್ಚಕನ್ನಡಶಬ್ದಗಳಿಗೂ ಬೆರಸಿ ಸಮಾಸವನ್ನು ಮಾಡಲಾಗದು ಎಂದು ಹೇಳಿರುವನು. ಆದಾಗ್ಯೂ ಮಹಾಕವಿಪ್ರಯೋಗಗಳಿದ್ದೆಡೆಯಲ್ಲಿ ಕ್ವಚಿತ್ ಸಮಾಸವನ್ನು ಅಂಗೀಕರಿಸಬಹುದು ಎಂಬ ವಿಷಯವು ಸಮಾಸಪ್ರಕರಣದಲ್ಲಿ ವಿಶದವಾಗಿ ತಿಳಿಸಲ್ಪಡುವುದು.

**ಅವತಾರಿಕೆ ೧೩೮**

ಹೀಗೆ ಸ್ವರಾಂತಗಳಿಗೂ ವ್ಯಂಜನಾಂತಗಳಿಗೂ ಅಂತ್ಯಕ್ಕೆ ವಿಧೀಯಮಾನವಾದ ಕಾರ್ಯವಿಶೇಷಗಳನ್ನು ಹೇಳಿ ಈಗ ಆದಿ, ಮಧ್ಯ, ಅವಸಾನ, ಸಮಾಸ, ವ್ಯಾಸ—ವಿಷಯರೂಪ ವಿಶೇಷವನ್ನೂ ಪೂರ್ವೋತ್ತರ ಕೇವಲ ಪದರೂಪವಿಶೇಷವನ್ನೂ ಅಪೇಕ್ಷಿಸದೆ, ಕೇವಲ ಸಂಸ್ಕೃತ ಪದಗಳಾದ ವರ್ಣಗಳಿಗೆ ಆಗಮಾದೇಶಾದಿಗಳನ್ನು ಹೇಳಲು ಮೊದಲು ಶ ಷ ಗಳಿಗೆ ಸ ಕಾರಾದೇಶವನ್ನು ಹೇಳುತ್ತಾನೆ.

**ಸೂತ್ರಂ ॥ ಶಷೋರ್ವಾ ಸಃ ॥ ೧೩೮ ॥**

**ಅರ್ಥ ॥ ಶ ಕಾರ ಷ ಕಾರಗಳಿಗೆ ವಿಕಲ್ಪವಾಗಿ ಸ ಕಾರಾದೇಶವು ಬರುವುದು.**

**ಉದಾಹರಣೆ** ॥ ಶಶಿ, ಸಸಿ; ಶಿಶು, ಸಿಸು; ಶಂಕೆ, ಸಂಕೆ; ಶಂಬರ, ಸಂಬರ; ಸಂಶಯ, ಸಂಸಯ; ವೇಷ, ವೇಸ; ದೋಷ, ದೋಸ; ರೋಷ, ರೋಸ; ದೂಷಣ, ದೂಸಣ; ಅನಿಮಿಷ,

ಅನಿಮಿಸ; ಕಷಾಯ, ಕಸಾಯ || ಮೊದಲಾದ ಶ ಷ ಗಳುಳ್ಳ ಸಂಸ್ಕೃತ ಶಬ್ದಗಳೆಲ್ಲಾ ಇದಕ್ಕೆ ಲಕ್ಷ್ಯಗಳಾಗುವುವು.

**ವಿಚಾರ ೧೩೮**

ಈ ಸೂತ್ರದಲ್ಲಿ — 'ಶಷೋಃ, ವಾ, ಸಃ' ಎಂದು ಮೂರು ಪದಗಳಿರುವುವು. ಇಲ್ಲಿಂದ ಮುಂದಕ್ಕೆ 'ಪೂರ್ವಪದಸ್ಯ' ಎಂಬುದು ನಿವೃತ್ತವಾದುದರಿಂದ ಸಂಬಂಧಿಸಲ್ಪಡುವುದಿಲ್ಲ. ಇಲ್ಲಿಂದ '**ಕರಂಬಾದಯಃ || ೧೬೦ ||**' ಎಂಬ ಸೂತ್ರದವರೆಗೂ ಯಾವುದು ಹೇಳಲ್ಪಡುವುದೋ ಅದು ಪೂರ್ವಕ್ಕಾಗಲಿ, ಉತ್ತರಕ್ಕಾಗಲಿ, ಉಭಯಕ್ಕೂ ಆಗಲಿ, ಕೇವಲ ಪದಕ್ಕಾಗಲಿ, ಸಮಾಸಕ್ಕಾಗಲಿ, ವ್ಯಾಸಕ್ಕಾಗಲಿ, ಆದಿಮಧ್ಯಾವಸಾನಗಳಲ್ಲಿ ಎಲ್ಲಿಯಾದರೂ ಲಕ್ಷ್ಯಾನುಸಾರವಾಗಿ ಬರುವುದೆಂದು ತಿಳಿಯಬೇಕು. 'ಶಷೋಃ' ಎಂಬುದು ಷಷ್ಠಿ ದ್ವಿವಚನಾಂತ ಪದವು. ಶ ಕಾರ ಷ ಕಾರಗಳು ಒಂದು ಪದದ ಆದಿಮಧ್ಯಾವಸಾನಗಳಲ್ಲಿ ಎಲ್ಲಿದ್ದರೂ ಈ ಸ ಕಾರಾದೇಶಕ್ಕೆ ಸ್ಥಾನಿಯಾಗುವುದು. 'ವಾ' ಎಂಬುದು ಬಹುಳಾರ್ಥಕವು. ಆದುದರಿಂದ ಶ ಕಾರ ಷ ಕಾರಗಳಿಗೆ ಲಕ್ಷ್ಯಾನುಸಾರವಾಗಿ ಸ ಕಾರಾದೇಶವು ಬರುವುದೆಂದು ಸೂತ್ರಾರ್ಥವಾಗುವುದೆಂದು 'ಸಸಿ' ಮೊದಲಾದ ಲಕ್ಷ್ಯಗಳು ಸಿದ್ಧಿಸುವುವು.

ಆದರೆ ಇಲ್ಲಿ ವ್ಯಸ್ತಗಳಾದ ಶಬ್ದಗಳೇ ಉದಾಹರಿಸಲ್ಪಟ್ಟಿವೆ. ಆದಾಗ್ಯೂ ವ್ಯಸ್ತವಾಗಿರುವುವೇ ಬಹುಳಪ್ರಯೋಗಗಳೆಂದು ತಿಳಿದು ಅಂತಹವುಗಳನ್ನೇ ಇಲ್ಲಿ ಉದಾಹರಿಸಿರುವುದು. 'ಶಶಿಶೇಖರ' ಮೊದಲಾದ ಸಮಸ್ತಪದಗಳಲ್ಲಿಯೂ ಈ ಸೂತ್ರಕ್ಕೆ ಪ್ರವೃತ್ತಿಯನ್ನು ಹೇಳಲು ಆವ ಪ್ರತಿಬಂಧಕವೂ ಇಲ್ಲವಾದುದರಿಂದ 'ಸಸಿಸೇಖರಂ, ಶಶಿಸೇಖರಂ, ಸಶಿಶೇಖರಂ, ಸಶಿಸೇಖರಂ' ಮೊದಲಾದ ಸಮಾಸಪದಗಳು ತದ್ಭವಗಳಾಗಿ ಎಣಿಸಲ್ಪಡುವುವು. ಆದುದರಿಂದ ಪೂರ್ವಕ್ಕಾಗಲಿ ಉತ್ತರಕ್ಕಾಗಲಿ ಒಂದಕ್ಕೇ ಆದೇಶವನ್ನು ಮಾಡಲು ಉಳಿದುದು ಸಂಸ್ಕೃತವೇ ಆಗಿರುವುದು. ಸಂಸ್ಕೃತಾಸಂಸ್ಕೃತಗಳಿಗೆ ಸಮಾಸವಿಲ್ಲವೆಂದು ಹೇಳಿರುವುದರಿಂದ ಇವುಗಳಿಗೆ ಸಮಾಸವು ಹೇಗೆ? ಎಂದು ಶಂಕಿಸುವುದಾದರೆ ಸಮಾಸಾನಂತರದಲ್ಲಿಯೆ ಈ ಆದೇಶವನ್ನು ಯಥಾಲಕ್ಷ್ಯವಾಗಿ ಹೇಳುವುದರಿಂದ ಅದಕ್ಕೆ ಅವಕಾಶವಿಲ್ಲವೆಂದು ತಿಳಿಯುವುದು.

**ದರ್ಪಣಕಾರ**ನು ತದ್ಭವ ಪ್ರಕರಣವನ್ನು ಆರಂಭಿಸುವುದಕ್ಕೆ ಮೊದಲು —

> **ಈಕ್ಷಿಸಿ ಶಿಕ್ಷಾಸೂತ್ರದ**
> **ಲಕ್ಷಣಮುಂ ಲೋಕರೂಢಿ ಕೆಡದವೊಲಱವರ್**
> **ಲಕ್ಷಿಪುದು ನುಡಿಗಳೊಳ್ ಬಹು**
> **ಳಾಕ್ಷೇಪಣವಿಲ್ಲದಿರೆಯುಮುಱಯದ ಕೆಲವಂ** (ಸೂತ್ರ ೨೫೩)

ಎಂಬ ಸೂತ್ರದಿಂದ ಸಾಮಾನ್ಯವಾಗಿ ತದ್ಭವವನ್ನು ಲೋಕದ ರೂಢಿಯು **ಕೆಡದಂತೆ ಮಾಡಬೇಕೆಂದು ಸೂಚಿಸಿ**—

> **ಸಕ್ಕದದ ತದ್ಭವಂಗಳ**
> **ಲಕ್ಕಣಮುಂ ಕನ್ನಡಕ್ಕೆ ಲಕ್ಷಿಸಿ ಪೇೞ್ವೆಂ**

ಎಂದು ಪ್ರತಿಜ್ಞೆಯನ್ನು ಮಾಡಿ —

ಸಕ್ಕದದ ಶಷದ್ವಿತಯು
ಕ್ಕಕ್ಟುಂ ಸತ್ವಂ ಪ್ರಸಿದ್ಧಿಯಿಂದೆಲ್ಲೆಡೆಯೊಳ್ (ಸೂತ್ರ ೩೫೪)

ಎಂದು ಹೇಳಿರುವನು.

**ಅವತಾರಿಕೆ ೧೩೯**

ಪೂರ್ವದಂತೆ ಅವಿಶೇಷವಾಗಿ ಲ ಕಾರಕ್ಕೆ ಳ ಕಾರವನ್ನು ವಿಕಲ್ಪವಾಗಿ ಹೇಳುತ್ತಾನೆ.

**ಸೂತ್ರಂ || ಲೋ ಳಃ || ೧೩೯ ||**

**ಅರ್ಥ ||** ಲ ಕಾರಕ್ಕೆ ಳ ಕಾರಾದೇಶವು ವಿಕಲ್ಪವಾಗಿ ಬರುವುದು.

**ಉದಾಹರಣೆ ||** ಜಲ, ಜಳ; ತಿಲ, ತಿಳ; ತಿಲಕ, ತಿಳಕ; ಫಲ, ಫಳ; ಕುಲ, ಕುಳ; ಅಲಿ, ಅಳಿ; ಸಲಿಲ, ಸಳಿಳ|| ಮೊದಲಾದ ಲ ಕಾರವುಳ್ಳ ಪದಗಳೇ ಇವಕ್ಕೆ ಲಕ್ಷ್ಯಗಳು.

**ವಿಚಾರ ೧೩೯**

ಈ ಸೂತ್ರದಲ್ಲಿ — 'ಲಃ, ಳಃ' ಎಂದು ಎರಡು ಪದಗಳಿರುವುವು. ಪೂರ್ವದಿಂದ 'ವಾ' ಎಂಬುದು ಅನುವರ್ತಿಸಲ್ಪಡುವುದು. 'ಲಃ' ಎಂಬುದು ಷಷ್ಠ್ಯಂತವು. 'ಳಃ' ಎಂಬುದು ಪ್ರಥಮಾಂತವು. ಆದುದರಿಂದ ಲ ಕಾರಕ್ಕೆ ಳ ಕಾರಾದೇಶವು ವಿಕಲ್ಪವಾಗಿ ಬರುವುದೆಂದು ಸೂತ್ರಾರ್ಥವಾಗುವುದು. ಇದರಿಂದ 'ಜಳ' ಮೊದಲಾದುವು ಸಿದ್ಧಿಸುವುವೆಂದು ಹೇಳಿರುವನು.

ಸಂಸ್ಕೃತದಲ್ಲಿ ಹೇಗೆ ಲ ಕಾರವನ್ನು ಉಚ್ಚಾರಣಸೈಲಕ್ಷಣ್ಯದಿಂದ ಳ ಕಾರವೆಂದು ವ್ಯವಹರಿಸುವರೋ ಹಾಗೆಯೇ ಭಾಷೆಯಲ್ಲಿಯೂ ಅಂಗೀಕರಿಸಿ ಈ ಸೂತ್ರವನ್ನು ಪ್ರತ್ಯಾಖ್ಯಾನ ಮಾಡುವುದು.

**ಅವತಾರಿಕೆ ೧೪೦**

ಹೀಗೆಯೇ ವ್ಯಂಜನಾಂತರಕ್ಕೂ ಳ ಕಾರವು ಲಕ್ಷ್ಯಗಳಲ್ಲಿ ಉಪಲಭ್ಯಮಾನವಾಗಿರುವುದರಿಂದ ಅದರ ವಿಧಿಯನ್ನು ಹೇಳುತ್ತಾನೆ.

**ಸೂತ್ರಂ || ಡೋ ಬಹುಲಂ || ೧೪೦ ||**

**ಅರ್ಥ || ಡ ಕಾರಕ್ಕೂ ಳ ಕಾರಾದೇಶವು ಬಹುಲಂ ಎಂದರೆ ಯಥಾಲಕ್ಷ್ಯವಾಗಿ ಬರುವುದು.**

**ಉದಾಹರಣೆ ||** ಗುಡ, ಗುಳ; ವಿಡಂಗ, ವಿಳಂಗ; ಗೌಡೀ, ಗೌಳಿ; ನಾಡೀ, ನಾಳಿ; ಖಡ್ಗ, ಖಳ್ಗ; ಷಾಡ್ಗುಣ್ಯ, ಷಾಳ್ಗುಣ್ಯ || ಮೊದಲಾದ ಡ ಕಾರವುಳ್ಳ ಪದಗಳೇ ಇವಕ್ಕೆ ಲಕ್ಷ್ಯಗಳು. ಇಲ್ಲಿ 'ಬಹುಲಂ' ಎಂದು ಹೇಳಿರುವುದರಿಂದ — 'ಕಾಂಡಪಟ, ಮುಂಡನ, ಮುಂಡಿತ, ಮಂಡನ, ಮಂಡಿತ, ಕಡಾರ, ಗಡುಲ' ಮೊದಲಾದ ಕೆಲವೆಡೆಗಳಲ್ಲಿ ಬಂದಿಲ್ಲವೆಂದು ತಿಳಿಯುವುದು.

**ವಿಚಾರ ೧೪೦**

ಈ ಸೂತ್ರದಲ್ಲಿ 'ಡಃ, ಬಹುಲಂ' ಎಂದಿರುವುದು. ಪೂರ್ವಸೂತ್ರದಿಂದ 'ಳಃ' ಎಂಬುದು ಅನುವರ್ತಿಸಲ್ಪಡುವುದು. ತಥಾಚ — ಡ ಕಾರಕ್ಕೆ ಳ ಕಾರಾದೇಶವು ಬಹುಳವಾಗಿ ಬರುವುದೆಂದು ಸೂತ್ರಾರ್ಥವಾಗುವುದರಿಂದ 'ಗುಳ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು. ಇಲ್ಲಿ 'ಬಹುಲ' ಎಂಬುದು — 'ಬಹೂನ್ ಅರ್ಥಾನ್ ಲಾತೀತಿ ಬಹುಲಂ' ಎಂಬ ವ್ಯುತ್ಪತ್ತಿಯಿಂದ ನಿಷ್ಪನ್ನವಾಗಿರುವುದರಿಂದ —

ಕ್ವಚಿತ್ಪ್ರವೃತ್ತಿಃ ಕ್ವಚಿದಪ್ರವೃತ್ತಿಃ ಕ್ವಚಿದ್ವಿಭಾಷಾ ಕ್ವಚಿದನ್ಯದೇವ
ವಿಧೇರ್ವಿಧಾನಂ ಬಹುಧಾ ಸಮೀಕ್ಷ್ಯ ಚಾತುರ್ವಿಧಂ ಬಾಹುಲಕಂ ವದಂತಿ

ಎಂದು ಚಾತುರ್ವಿಧ್ಯಬೋಧಕವಾಗಿರುವುದು. ಆ ಚಾತುರ್ವಿಧ್ಯವನ್ನೂ ಲಕ್ಷ್ಯಾನುಸಾರವಾಗಿ ವ್ಯವಸ್ಥೆಮಾಡಿಕೊಳ್ಳಬೇಕು. ಆದುದರಿಂದ 'ಗೌಳಿ, ಪಿಳಂಗ' ಮೊದಲಾದ ಕೆಲವು ಪ್ರಯೋಗಗಳಲ್ಲಿ ಪ್ರವೃತ್ತಿಯೂ 'ಮೃಡಂ, ಕುಂಡಂ, ಕಾಂಡಪಟಂ' ಮೊದಲಾದ ಕೆಲವು ಪ್ರಯೋಗಗಳಲ್ಲಿ ಅಪ್ರವೃತ್ತಿಯೂ 'ಖಡ್ಗಂ, ಖಗ್ಗಂ; ಗುಡಂ, ಗುಳಂ; ಜಡಂ, ಜಳಂ; ಬಿಡಾಲಂ, ಬಿಳಾಳಂ' ಮೊದಲಾದ ಕೆಲವು ಪ್ರಯೋಗಗಳಲ್ಲಿ ವಿಭಾಷೆಯೂ ಲಕ್ಷ್ಯಾನುಸಾರವಾಗಿ ಕೆಲವೆಡೆಗಳಲ್ಲಿ ಬೇರೊಂದಾದೇಶವೂ ಬರುವುದೆಂದು ತಿಳಿಯಬೇಕು. ಈ ಆದೇಶವನ್ನೇ ಭಾಷೆಯಲ್ಲಿ 'ಳ'ವೆಂದು ವ್ಯವಹರಿಸುವರು. ಯದ್ಯಪಿ ಸಕಲ ಪದಾರ್ಥಗಳೂ ಜೈನಮತದಲ್ಲಿ ಏಕಾನೇಕಾತ್ಮಕಗಳಾಗಿರುವುದರಿಂದ ವರ್ಣಗಳೂ ಏಕಾನೇಕಾತ್ಮಕಗಳಾಗುವುವೆಂಬುದು ಸ್ವತಃ ಸಿದ್ಧವಾಗಿಯೇ ಇರುವುದು. ಆದಾಗ್ಯೂ ಳ ಕಾರ ವಿಷಯದಲ್ಲಿ ಪ್ರಯೋಜನವಶದಿಂದ ಇಲ್ಲಿ ಕಿಂಚಿತ್ ಪ್ರದರ್ಶಿಸಲ್ಪಡುವುದು. ಹೇಗೆಂದರೆ — ಈ ಕರ್ಣಾಟಕ ಭಾಷೆಯಲ್ಲಿ ಳ ಕಾರವು ಸಾಮಾನ್ಯವಾಗಿ ಒಂದೇ ಆಗಿರುವುದು. ವಿಶೇಷ ವಿವಕ್ಷೆ ಮಾಡಿದರೋ 'ವಿಹಿತ, ಅವಿಹಿತ' ಎಂದು ಎರಡು ವಿಧವಾಗಿರುವುದು. ಅವುಗಳಲ್ಲಿ — ವಿಹಿತವಾದುದು 'ಆಗತ, ಪ್ರತೀತ, ಆದಿಷ್ಟ' ಎಂದು ಮೂರು ಬಗೆಯಾಗಿರುವುದು. ಅವುಗಳಲ್ಲಿ ಯಾವುದು —'ಳುಕ್' ಸ್ತ್ರಿಯಾಂ ||೧೮೧|| ಅಡ್ವಾಣಾಚಃ ||೧೮೨||' ಮೊದಲಾದ ಸೂತ್ರಗಳಿಂದ ಯಾವ ಲಕ್ಷ್ಯಗಳಲ್ಲಿ ಆಗಮರೂಪವಾಗಿ ವಿಧಿಸಲ್ಪಡುವುದೋ ಅದೇ ಆಗತವು. ಆದುದರಿಂದ 'ಬರ್ದಳ್, ನೆಲ್ಲಿದಿರಯುಳ್, ಪೆಱವಣೆಯುಳ್, ಅಲ್ಲವಳ್, ಇಲ್ಲವಳ್, ಮೂಡಣಳ್, ಪಡುವಣಳ್; ಬಂದಳ್, ಪೋದಳ್, ಇವಳ್, ಅವಳ್, ಕರಿಯುಳ್, ಬಿಳಿಯುಳ್' ಮೊದಲಾದ ಪ್ರಯೋಗಗತವಾದುದು ಆಗತವೆಂದು ತಿಳಿಯುವುದು. ಎಲ್ಲಿ — 'ಗಳನೇಕತ್ವೇ ಸುಪಿ ||೨೩೨|| ವಳವಳ್ಳೌ ||೪೨೬|| ಕುಳಿಸ್ತ್ರ್ಯಚ್ಛೇಲ್ತ್ವೇ ||೫೪೫||' ಮೊದಲಾದ ಸೂತ್ರಗಳಿಂದ ಪ್ರತ್ಯಯರೂಪವಾಗಿ ಳ ಕಾರವು ವಿಧಿಸಲ್ಪಡುವುದೋ ಅಲ್ಲ ಅದು ಪ್ರತೀತವೆನಿಸಿಕೊಳ್ಳುವುದು. ಆದುದರಿಂದ — 'ಘಟಂಗಳ್, ಪಟಂಗಳ್, ನೆಲಗಳ್, ಪೊಲಗಳ್, ಮಡಿವಳಂ, ಪಡೆವಳಂ, ಅದಪವಳ್ಳಂ, ಕೆಯ್ಪವಳ್ಳಂ, ಅಂಜುಕುಳಿ, ಓಡುಕುಳಿ, ಜೂದಾಳಿ, ಮಾತಾಳಿ, ಲಂಚಂಗುಳಿ, ಆಟಂಗುಳಿ' ಮೊದಲಾದ ಪ್ರಯೋಗಗತವಾದುದು ಪ್ರತೀತವೆಂದರಿಯುವುದು. ಎಲ್ಲಿ — 'ಲೋಳಃ ||೧೪೯|| ಡೋ ಬಹುಲಂ ||೧೫೦||' ಮೊದಲಾದ ಸೂತ್ರಗಳಿಂದ ಆದೇಶರೂಪವಾಗಿ ವಿಧಿಸಲ್ಪಡುವುದೋ ಅದೇ ಆದಿಷ್ಟವೆಂಬುದು. ಅದು 'ಲಕ್ಷಣಸಿದ್ಧ, ನಿಪಾತಸಿದ್ಧ' ಎಂದು ಎರಡು ಬಗೆಯಾಗಿರುವುದು. ಅವುಗಳಲ್ಲಿ ಮೊದಲನೆಯದು ಎಂದರೆ ಲಕ್ಷಣಸಿದ್ಧವಾದುದು ಈ ಸೂತ್ರಗಳಿಂದ ಹೇಳಲ್ಪಟ್ಟಿರುವುದು. ಎರಡನೆಯದು — 'ಕರಂಬಾದಯಃ ||೧೬೦||' ಎಂಬ ಸೂತ್ರದಿಂದ 'ನಾಳಿ, ಗೌಳಿ, ವಿಳಂಗಂ, ಪಳಿಕಂ, ಕುಂಬಳಂ, ಮೆಟಿಸು, ಪೞಹತ್ತಂ, ದಾಳಿಂಬಂ' ಮೊದಲಾದುವುಗಳಲ್ಲಿ ನಿಪಾತಿತವಾದುದು. ಹೀಗೆ ಮೂರು ಬಗೆಯಾದ ವಿಹಿತವಿಕಲ್ಪಗಳಲ್ಲಿ ಯಾವುದು ಆಗತವಾಗಿಯೂ ಪ್ರತೀತವಾಗಿಯೂ ಇರುವುದೋ ಆ ಎಲ್ಲಾ ಳ ಕಾರವೂ ಪ್ರಾಚೀನ ಮಹಾಕವಿಗಳಿಂದ 'ಕುಳ' ವೆಂದೇ ವ್ಯವಹರಿಸಲ್ಪಡುವುದು. ಯಾವುದು ಲಕ್ಷಣದಿಂದಾಗಲಿ

ನಿಪಾತನದಿಂದಾಗಲಿ ಆದಿಷ್ಟವಾಗುವುದೋ ಅದು 'ೞ, ಱ, ಕುಳ' ಎಂದು ಮೂರು ತೆರನಾಗಿರುವುದು. ಅವುಗಳಲ್ಲಿ ಸಂಸ್ಕೃತ ಪದಗತ ಲ ಕಾರದ ಸ್ಥಾನದಲ್ಲಿ ಯಾವುದು ಆದಿಷ್ಟವೋ ('ಬೞಂ, ತೀೞಂ, ಮೞಂ, ಜೞಜಂ, ಕಮೞಂ, ಮರಾೞಂ' ಮೊದಲಾದುವುಗಳಲ್ಲಿ) ಅದು ೞವೇ ಎಂದು ತಿಳಿಯುವುದು. ಯಾವುದು ಡ ಕಾರ ಮೊದಲಾದ ವರ್ಣಗಳ ಸ್ಥಾನದಲ್ಲಿ ವಿಹಿತವಾಗುವುದೋ ಅದು ಪ್ರಾಯಶಃ 'ಱ' ವೆನ್ನಿಸಿಕೊಳ್ಳುವುದು; ಕೆಲವು ಸಂದರ್ಭದಲ್ಲಿ ಕುಳವೆಂದೂ ಕರೆಯಲ್ಪಡುವುದುಂಟು. ಇದರಲ್ಲಿ ಪ್ರಾಯಶಃ ಸ್ಥಾನಿಯು ಡ ಕಾರವೆಂದೇ ತಿಳಿಯಬೇಕು. ಆದರೂ ಕ್ವಚಿತ್ ಟ, ಠ, ತ, ರೇಫ ೞಗಳೂ ಸ್ಥಾನಿಗಳಾಗುವುದುಂಟು. ಅದರಲ್ಲಿ ಟ, ಠ, ತ, ರೇಫಗಳು ಸಂಸ್ಕೃತ ಶಬ್ದಗತಗಳೇ ಎಂದು ತಿಳಿಯಬೇಕು. ೞವಾದರೋ ಸಂಸ್ಕೃತದಲ್ಲಿಲ್ಲವಾದುದರಿಂದ ಕರ್ಣಾಟಕ ಶಬ್ದಗತವನ್ನು ಗ್ರಹಿಸಬೇಕೆಂದು ತಿಳಿಯಬೇಕು. ಡ ಕಾರವಾದರೋ ಲಕ್ಷ್ಯಾನುಸಾರವಾಗಿ ಸಂಸ್ಕೃತ-ಕರ್ಣಾಟಕೋಭಯಗತವಾದುದೂ ಸ್ಥಾನಿಯಾಗುವುದು. ಅವುಗಳಲ್ಲಿ — ದಾಡಿಮಾದಿವ್ಯತಿರಿಕ್ತ ಡ ಕಾರದ ಸ್ಥಾನದಲ್ಲಿಯೂ ಸ್ಫಟಿಕಾದಿವ್ಯತಿರಿಕ್ತವಾದ ಟ ಕಾರದ ಸ್ಥಾನದಲ್ಲಿಯೂ ಠ ಕಾರ, ತ ಕಾರ, ರೇಫಗಳ ಸ್ಥಾನದಲ್ಲಿಯೂ ೞದ ಸ್ಥಾನದಲ್ಲಿಯೂ ಆದಿಷ್ಟವಾದುದು 'ಱ' ಎಂದು ಹೇಳಲ್ಪಡುವುದು. ಇದರಲ್ಲಿ ಡ ಕಾರಕ್ಕೆ 'ನಾಡಿ, ನಾಱು; ಗೌಡಿ, ಗೌಱು; ವ್ರೀಡಾ, ವ್ರೀಱು; ಈಡಿತಂ, ಈಱುತಂ; ಚೂಡಾ, ಚೂಱಂ; ಕ್ರೀಡಾ, ಕೇಱು; ಖಡ್ಗಂ, ಖಱ್ಗಂ; ಷಾಡ್ಗುಣ್ಯಂ, ಷಾಱ್ಗುಣ್ಯಂ' ಮೊದಲಾದ ಸಂಸ್ಕೃತಪದಗಳಲ್ಲಿ ಆದಿಷ್ಟವಾಗಿರುವುದು— 'ಕಾಱ್ಕಿಚ್ಚು, ಮಾಱ್ಕಟ್ಟಿ, ಕೋಱ್ಮಿನೆ, ಎರಱ್ಮಾಱು' ಮೊದಲಾದ ಭಾಷಾಶಬ್ದಗಳಲ್ಲಿಯೂ ಡ ಕಾರಕ್ಕೆ ಆದಿಷ್ಟವಾಗಿ ಱ ಕಾರವು ಬಂದಿರುವುದು. ಹೀಗೆಯೇ— 'ಘಟಿಕಾ, ಗಱಿಗೆ; ಘೋಟಿಕಾ, ಗೋಱಿಗೆ; ಪರ್ಪಟಂ, ಹಪ್ಪಱಂ; ವರಾಟಂ, ವರಾಱಂ; ಥಾಟಿ, ದಾಱು; ಪಾಟಿ, ಪಾಱು; ಲಾಟಂ, ಲಾಱಂ; ಘೋಟಾರೂಢಂ, ಘೋಱಾಯ್ಲಂ; ಆಕ್ಷೋಟಂ, ಆಕ್ಷೋಱಂ' ಮೊದಲಾದುವುಗಳಲ್ಲಿ ಟ ಕಾರಕ್ಕೆ ಱ ಕಾರಾದೇಶವೂ 'ಪೀಠಿಕಾ, ಪೀಱಿಗೆ; ಮಠಿಕಾ, ಮಱಿಗೆ; ಮಾಠರಂ, ಮಾಱಲಂ; ಪಾಠೀನಂ, ಪಾಱಿಲ್' ಮೊದಲಾದುವುಗಳಲ್ಲಿ ಠ ಕಾರಕ್ಕೆ ಱ ಕಾರಾದೇಶವೂ 'ಪ್ರತಿಹಸ್ತಂ, ಪಱಿಹತ್ತಂ; ಪ್ರತಿಪಾದುಕಾ, ಪಱಿಪಾವುಗೆ; ಅತಿಪಾತಂ, ಅಱಿವಾದಂ' ಮೊದಲಾದುವುಗಳಲ್ಲಿ ತ ಕಾರಕ್ಕೆ ಱ ಕಾರಾದೇಶವು; 'ಝಲ್ಲರಿ, ಜಲ್ಲಱಿ; ಮರಿಚಂ, ಮೆಱಸು; ವಾಗುರಾ, ಬಾಗುಱು; ಭೃಂಗಾರಿ, ಬಿಂಗಱಿ; ಅಂಗಾರಂ, ಇಂಗಱಂ; ಕೂರಂ, ಕೂಱ್' ಮೊದಲಾದುವುಗಳಲ್ಲಿ ರೇಫಕ್ಕೆ ಱ ಕಾರಾದೇಶವೂ; 'ಪುೞಿನಂ, ಪುಱಿಲ್; ಕೞಮಂ, ಕಱವ; ಅರ್ಗಲಂ, ಅಗುಱು; ಮಾನ್ಯಾೞಿ, ಮನ್ನಱು; ವಾಹ್ಯಾೞಿ, ವೈಹಱು' ಮೊದಲಾದುವುಗಳಲ್ಲಿ ೞಕ್ಕೆ ಱ ಕಾರಾದೇಶವೂ ಬಂದಿದೆ ಎಂದು ತಿಳಿಯಬೇಕು.

ಆದರೆ ಇಲ್ಲಿ ವಿಚಾರಮಾಡಲು ೞಕ್ಕೆ ಸಾಕ್ಷಾತ್ತಾಗಿ ಸ್ಥಾನಿತ್ವವನ್ನು ಹೇಳಿಲ್ಲ. ಆದಾಗ್ಯೂ 'ಕರಂಬಾದಿ' ಸೂತ್ರದಿಂದ 'ಅರ್ಗಲಾದಿ' ಶಬ್ದಗಳಿಗೆ 'ಅಗುಱು' ಎಂದು ಮೊದಲಾದ ರೂಪಗಳನ್ನು ನಿಪಾತನ ಮಾಡಿರುವ ಬಲದಿಂದ ಅದಕ್ಕೆ ಸ್ಥಾನಿತ್ವವು ಊಹಿಸಲ್ಪಡುವುದು. ಕೆಲವರು 'ಅರ್ಗಲಂ' ಎಂಬ ಸಮುದಾಯಕ್ಕೆ 'ಗ' ದಲ್ಲಿಯ ಅ ಕಾರಕ್ಕೆ ಉ ಕಾರ, ಲ ಕಾರಕ್ಕೆ ೞ ಕಾರ, ಕೊನೆಯ ಅ ಕಾರಕ್ಕೆ ಇ ಕಾರ ಇವುಗಳನ್ನು ಮಾಡಿ 'ಅಗುೞಿ' ಎಂದು ನಿಪಾತನ ಮಾಡುವುದರಿಂದ

ರಿಂದ ಅಲ್ಲಿ ಕ್ಷಳವೇ ಇರುವುದಿಲ್ಲ, ಹೇಗೆ ಅದಕ್ಕೆ ಸ್ಥಾನಿತ್ವವು ಊಹಿಸಲ್ಪಡುವುದು ? ಎಂದು ಶಂಕಿಸುವರು. ಆದರೆ ಲ ಕಾರಕ್ಕೆ 'ಲೋಳಃ' ಎಂಬ ಪೂರ್ವಸೂತ್ರದಿಂದಲೇ ಳ ಕಾರವು ಸಿದ್ಧಿಸುತ್ತಿರಲು ಇದರಿಂದ ನಿಪಾತನಮಾಡುವುದರಲ್ಲಿ ಪ್ರಯೋಜನವಿಲ್ಲ. ಮತ್ತು ಸೂತ್ರಾಂತರದಿಂದ ಅಪ್ರಾಪ್ತಾನ್ಯಥಾಪ್ರಾಪ್ತಗಳಿಗೆ ನಿಪಾತನವೆಂಬುದು ವೈಯಾಕರಣರ ಸಿದ್ಧಾಂತವು. ಆದುದರಿಂದ ಳ ಕಾರವು ಸೂತ್ರಾಂತರದಿಂದ ಸಿದ್ಧವಾಗಿರಲು ಅಲ್ಲಿ ನಿಪಾತನವು ಪ್ರಯೋಜನಕಾರಿಯಲ್ಲವೆಂದು ಅದಕ್ಕೇ ಸ್ಥಾನಿತ್ವವು ಊಹಿಸಲ್ಪಡುವುದರಿಂದ ಆ ಶಂಕೆಗೆ ಅವಕಾಶವಿರುವುದಿಲ್ಲ. ಮತ್ತು ಮೊದಲು ಕ್ಷಳಕ್ಕೆ ಅವಸ್ಥಿತಿಯಿರಲು ತತ್ಸಹಚರಿತಗಳಾದ ಇತರ ವರ್ಣಗಳಿಗೆ ಯಥಾವಸ್ಥಿತಿನಿಯಮದಿಂದ ವಿಕೃತಿಭಾವಾಭಾವಪ್ರಸಕ್ತಿಯುಂಟಾಗುವುದರಿಂದ 'ಅರ್ಗಳ' ಶಬ್ದೈಕದೇಶಕ್ಕೆ ಕ್ಷಳತ್ವವಿದ್ದರೂ ಅದರ ಸ್ಥಾನದಲ್ಲಿ ಇನ್ನಾವ ಆದೇಶವೂ ಮಾಡುವುದಿಲ್ಲವಾದುದರಿಂದ ಕ್ಷಳಕ್ಕೆ ಸ್ಥಾನಿತ್ವವು ಹೇಗೆಂದು ಶಂಕಿಸುವುದಕ್ಕಾಗುವುದಿಲ್ಲ. ಏತಕ್ಕೆಂದರೆ ಪೂರ್ವೋಕ್ತ ರೀತಿಯಲ್ಲಿ ಮೊದಲಿನ ಕ್ಷಳವೇ ಅಲ್ಲಿ ಇರುವ ಪಕ್ಷದಲ್ಲಿ ತತ್ಸಹಚರಿತಗಳಾದ ಇತರ ವರ್ಣಗಳೂ ಯಾವ ವಿಕಾರವನ್ನೂ ಹೊಂದದೆ ಇರಬೇಕಾಗುವುದು. ಇದರಿಂದ 'ಅರ್ಗಲಂ' ಎಂದೇ ಆಗುವುದು ಅಲ್ಲದೆ 'ಅಗುಳ' ಎಂದಾಗಲಾರದು. ಆದುದರಿಂದ ವರ್ಣಾಂತರದಲ್ಲಿ ವಿಕಾರವನ್ನು ಬಯಸುವವನು ಕ್ಷಳಸ್ಥಾನದಲ್ಲಿಯೂ ಳ ಕಾರಾದೇಶವನ್ನು ಮಾಡಬೇಕು. ಇದೇ ಇಲ್ಲಿ 'ಜಬ' ಎಂದು ಹೇಳಲ್ಪಡುವುದು. ಹೀಗೆಯೇ — 'ಪ್ರಬಾಲ್, ಕಲಶ' ಮೊದಲಾದುವುಗಳಲ್ಲಿಯೂ ತಿಳಿಯಬೇಕು.

ಆದರೆ ಒಂದು ವರ್ಣಕ್ಕೆ ವಿಕಾರವುಂಟಾದರೆ ತತ್ಸಹಚರಿತಗಳಾದ ಎಲ್ಲಕ್ಕೂ ವಿಕಾರವುಂಟಾಗಬೇಕೆಂಬ ನಿಯಮವಿಲ್ಲ. ಏಕದೇಶವಿಕಾರವನ್ನೂ ಬೇರೆ ಸ್ಥಲದಲ್ಲಿ ಅಂಗೀಕರಿಸುವುದರಿಂದ ಇಲ್ಲಿ ಕ್ಷಳವನ್ನು ಬಿಟ್ಟೇ ಇತರ ವರ್ಣಗಳಿಗೆ ವಿಕಾರವನ್ನು ಹೇಳಬಹುದು. ಕ್ಷಳಕ್ಕೆ ಆದೇಶಾಂತರಪ್ರಾಪ್ತಿಯಿದ್ದು ಅದನ್ನು ಬಾಧಿಸುವುದಕ್ಕೆ ಇಲ್ಲಿ ಸ್ಥಾನಿತ್ವವನ್ನು ಕಲ್ಪಿಸಿ ಆದೇಶಾಂತರವನ್ನು ಹೇಳಬೇಕು. ಅಂತಹ ಆದೇಶಾಂತರವಾದರೂ ಇಲ್ಲಿ ಪ್ರಸಕ್ತವಾಗುವುದಿಲ್ಲ. ಆದುದರಿಂದ ಇದಕ್ಕೆ ಸ್ಥಾನಿತ್ವಕಲ್ಪನೆಯನ್ನು ಮಾಡುವುದು ಶಬ್ದಸಾಧುತ್ವಬೋಧನಾರ್ಥವಲ್ಲ. ಪ್ರಾಚೀನರು ಕವಿತಾವಿಷಯದಲ್ಲಿ ಪ್ರಾಸಸ್ಥಾನದಲ್ಲಿ ಮೊದಲು ಪ್ರಾರಂಭಿಸುವುದನ್ನೇ ಕೊನೆಯವರೆಗೂ ಹೇಳಬೇಕೆಂದು ಸಂಕೇತಮಾಡಿಕೊಂಡಿರುವುದರಿಂದ ತತ್ಸಿದ್ಧ್ಯರ್ಥವಾಗಿ ಇಲ್ಲಿ ಸ್ಥಾನಿತ್ವವನ್ನು ಕಲ್ಪಿಸಿರುವುದೆಂದು ತಾತ್ಪರ್ಯವು.

**ಈ ವಿಷಯವು ಕೇಶಿರಾಜನಿಂದಲೂ—**

**ಕೃತಿಮಾರ್ಗದೊಳುಂಟು ಟಕಾ**
**ರ ತ ಕಾರ ಠ ಕಾರ ರೇಫದೆಡೆಗಂ ಬಹುಳ**
**ಸ್ಥಿತಿಯಿಂ ಕ್ಷಳಕಮುಪಭ್ರಂ**
**ಶತೆಯೊಳ್ ಸುಕವೀಂದ್ರರಿಂದೆ ಱಱವಾದೇಶಂ ( ಸೂತ್ರ ೨೧ )**

ಎಂಬುದರಿಂದ ಹೇಳಲ್ಪಟ್ಟಿರುವುದು — ದಾಡಿಮಸ್ಫಟಿಕಾದಿಗಳ ಡ ಕಾರ ಟ ಕಾರಗಳಿಗೆ ಆದಿಷ್ಟವಾದುದು ಕುಳವೇ. ಹೇಗೆಂದರೆ — ದಾಳಿಂಬಂ, ಕುಂಬಳಂ, ಗೌಳಂ, ಗುಳಂ, ಝುಗಳೆ, ವಿಳಂಗಂ,

ಪಳಿಕು, ಪೀಳಿಗೆ, ವೀಳೆಯಂ[1], ಗುಳಿಗೆ, ವರಾಳಂ, ರಗಳೆ, ಪೋಳಿಗೆ, ಲಂಪಳಿಕೆ ' ಮೊದಲಾದ ಶಬ್ದಗಳಲ್ಲಿರುವ ಳ ಕಾರವು ಡ ಕಾರ ಟ ಕಾರ ಸ್ಥಾನಗಳಲ್ಲಿ ಆದಿಷ್ಟವಾಗಿರುವುದೆಂದು ಅದನ್ನು ಕುಳ ವೆಂದೇ ಹೇಳಬೇಕು. ಇದರಲ್ಲಿ ಪ್ರಾಚೀನರ —

ಪಳಿಕಂ ಮುತ್ತಂ ಬಿದಿ ಕುಂ
ಬಳಬಿತ್ತಿನ ತೆಱದೆ ಕೊಱೆದು ಸೇರಿಸಲಧರಂ
ಪೊಳೆಯಲ್ ದಾಡಿಮಬೀಜಂ
ಗಳ ತೆಱದಿಂ ಮೆಱೆವುವವಳ ಮೊನೆಕೆಂಬಲ್ಗಳ್

ಎಂಬ ಪ್ರಯೋಗವೂ ಇರುವುದು.

ಇಲ್ಲಿ ಪ್ರಾಸಭೂತ ಳ ಕಾರಚತುಷ್ಟಯದಲ್ಲಿ ಮೊದಲನೆಯದು ಟ ಕಾರಾದಿಷ್ಟವು; ಎರಡನೆ ಯದು ಡ ಕಾರಾದಿಷ್ಟವು; ಇವೆರಡೂ ಕುಳಗಳೆಂದೇ ತಿಳಿಯಬೇಕು. ಹಾಗಿಲ್ಲದಿದ್ದರೆ ಪ್ರಸಿದ್ಧ ಕುಳಗಳಿಗೆ ಇತರಗಳೊಡನೆ ಪ್ರಾಸಸ್ಥಾನದಲ್ಲಿ ಪ್ರಯೋಗಿಸುವುದು ಅಸಂಗತವಾಗುವುದೆಂದು ತಿಳಿಯುವುದು. ಇದು ವಿಹಿತ ವಿಭಾಗವು.

ಅವಿಹಿತವಾದರೋ ಸ್ವಭಾವಸಿದ್ಧವಾಗಿರುವುದು. ಇದು ವ್ಯುತ್ಪತ್ತಿಯನ್ನು ಅಪೇಕ್ಷಿಸದೆಯೇ ಅನಾದಿಶಿಷ್ಟವ್ಯವಹಾರಪ್ರಸಿದ್ಧಿಯಿಂದ ಧಾತ್ವವಯವವಾಗಿಯೂ ನಾಮಾವಯವವಾಗಿಯೂ ಇರುವ ಳ ಕಾರವೆಂದು ತಿಳಿಯಬೇಕು. ಅದು 'ಅೞ, ಕುಳ' ಎಂದು ಎರಡು ತೆರನಾಗಿ ವ್ಯವಹರಿಸಲ್ಪಡುವುದು. ಅವುಗಳಲ್ಲಿ — 'ಕುೞಿ' ಮೊದಲಾದ ಧಾತ್ವವಯವವೂ 'ಅವಗೞಿಯ' ಮೊದಲಾದ ನಾಮಾವಯವವೂ ಆದ ಳ ಕಾರವಾವುದೋ ಅದು 'ಅೞ' ಎಂದು ಹೇಳಲ್ಪಡುವುದು. ಏತದತಿರಿಕ್ತ ಧಾತುಗತ-ನಾಮಗತವಾದ ಎಲ್ಲಾ ಳ ಕಾರವೂ ಕುಳವೆಂದು ವ್ಯವಹರಿಸಲ್ಪಡುವುದು. ಇವುಗಳಲ್ಲಿ 'ಕುೞಿ' ಮೊದಲಾದ ಗಣವು ಧಾತು ಪ್ರಕರಣದಲ್ಲಿ ಹೇಳಲ್ಪಡುವುದರಿಂದ ಅದನ್ನು ಅಲ್ಲಿಯೇ ತಿಳಿದುಕೊಳ್ಳಬೇಕು. 'ಅವಗೞಿಯ' ಮೊದಲಾದ ಗಣವಾದರೋ ಇಲ್ಲಿ ಹೇಳಲ್ಪಡುವುದು. ಅದಾವುದೆಂದರೆ - 'ಅವಗೞಿಯ, ಆೞ್ವಾೞಿಗ, ಬೋೞತರ, ದಂಡುೞಿಗ, ಜೀರ್ಕೊೞವಿ, ದೞವುೞ, ಉೞಿಕೞಿ, ಕೞಕುೞ, ರಾೞಿಕೞಿ, ಬೞುವೞಿ, ಪೞಯಿಗೆ, ತೊೞಲಿಕಲ್[2], ಅಪವೞಲ್, ತುೞಿಕಲ್, ಗುೞಿಕಲ್, ಉೞಿಕಲ್, ಮೊೞಕಾಲ್, ಬೞಿಯಂ, ಬೞಿಕಂ, ಬೞಿಕ್ಕಂ, ಗೞಪ, ಕೆೞವ, ಪೆೞವ, ಉೞಿಲ, ಪೞಗ, ಪೞಹ, ಬಾೞುಕ, ದಲ್ಲೞಿ[3], ಅೞ್ಕೞ, ನೆೞ್ಕೞ, ಅೞ್ಕಜ, ಕೊೞ್ತೞಿ, ತೊೞ್ತೞಿ, ಧೞ್ಟೞಿ, ಮುಂಮೞಿ, ಮಣ್ಮೞಿ, ಚಪ್ಪೞಿ, ಪುಚ್ಚೞಿ, ಸೂಂಪುೞಿ, ಪೊಂಪುೞಿ, ಜಲ್ಲೞಿ, ಮಲ್ಲೞಿ, ಕೊಲ್ಲೞಿ, ಉಂಬೞಿ, ಬೆಂಬೞಿ, ಕಂಬೞಿ, ಅಗುೞಿ, ಕೊೞವಿ, ಉೞುಗು, ಬೆೞಗು, ಮೊೞಗು, ಪೆೞಕು, ಪೊೞಕು, ಪೞಪು, ಪೊೞಪು, ಎೞದು, ಪೞದು, ಗೆೞಸು, ಗೊೞಸು, ಸೆೞಸು, ಎೞವು, ಸೆೞವು, ಪೆೞವು, ನೊೞವು, ಪೊೞ್ತುೞು[4], ಅೞ್ಕೞು, ಎೞ್ಚೞು, ಬೞಿಕೆ, ಬೞಿಕ್ಕೆ, ಕೞ್ತಲೆ, ಬೞ್ತಲೆ, ಜಾೞಿಗೆ, ಜೋೞಿಗೆ, ಸಾೞಿಗೆ, ಏೞಿಗೆ, ಈಸುೞ್, ಬಾಸುೞ್, ತಿಪ್ಪುೞ್, ತುಪ್ಪುೞ್, ಇರ್ಕುೞ್, ಪೊರ್ಕುೞ್, ಕೌಂಕುೞ್, ನೆಗೞ್, ಮುಗುೞ್, ನೆಮೞ್, ತೆಮೞ್, ಎಸೞ್, ತಮೞ್, ಪಸೞ್, ತುೞಿಲ್, ತೞಲ್, ಮೞಲ್, ಕೞಲ್, ಕೊೞಲ್, ಪೊೞಲ್, ಬಿೞಿಲ್, ಬೀೞಲ್[5], ನೆೞಲ್,

ಪಾಠಾಂತರಗಳು : ೧ ವೀಳಿಗೆ ೨ ತೊಳಲಿಕಲ್ ೩ ದಲ್ಲೞ ೪ ಪೊೞ್ತುೞು ೫ ಬೀೞಿಲ್

ನಾಱಲ್, ಪೋಱಲ್, ಖೂಱ, ಬೋಱ, ನಾಱ, ಕೆಱ, ಗುಱ, ಮೊಱ, ಕುಱ, ತಱ, ಮುಱ್ತ, ಎಱ್ತ, ಬಱ್ತ, ಎಱ್ಗ, ಪೆಱ್ಗ, ಗಿಱಿ, ಅಱಿ, ಉಱಿ, ಬಱಿ, ಪಱಿ, ತಱಿ, ಚಱಿ, ತುಱಿ[1], ಸುಱಿ, ಇಱಿ, ಆಱಿ, ಪಾಱಿ, ಕೇಱಿ, ನಾಱಿ, ಮೂಱಿ, ಬೋಱಿ, ಪುಱಿ, ಮುಱ್ಗ, ಅಱ್ತ, ಪಱ್ತ, ಮುಱ್ತು, ಕಱ್ತು, ತೊಱ್ತು, ಎಱ್ತು, ಪೊಱ್ತು, ಉಱ್ಕು, ಬಿಱ್ಕು, ತೋಱು, ಏಱು, ಪೋಱು, ತಾಱು, ಕಾಱು, ಕುಱು, ಪುಱು, ಬೆಱೆ, ಎಱೆ, ಮೆಱೆ, ಮಱೆ, ಮೊಱೆ, ತಱೆ, ತೊಱೆ, ಕೆಱೆ, ಬೊಱೆ, ಜೆಱೆ,[2] ಕಱ್ತೆ, ಬಾಱ್ತೆ, ಆಱ್ತೆ, ಅಱ್ತೆ, ಅಱ್ಕೆ, ಬಿಱ್ಕೆ, ಕಱ್ಕೆ, ಎಱ್ಕೆ, ಪಾಱ್, ಪೋಱ್, ತೋಱ್, ಗೋಱ್, ಚಾಱ್, ಬಾಱ್, ತಾಱ್, ಕೇಱ್, ಗೀಱ್, ಬೀಱ್, ಸೂಱ್' ಮೊದಲಾದುವನ್ನು ಅವಗಱಿಯಾದಿಗಣಪಠಿತಗಳೆಂದು ತಿಳಿಯಬೇಕು. 'ಘಱಿಲನೆ, ಫಱಿಲನೆ, ಘುಱುಮ್ಮನೆ, ಛಱುಮ್ಮನೆ' ಮೊದಲಾದುವು ಮಹಾಪ್ರಾಣಾಕ್ಷರವುಳ್ಳ ಅನುಕರಣಗತ ವಿಕಲ್ಪಿತ ಱಗಳಾದ ಪದಗಳು. 'ಚೞಿಲನೆ, ಕಿೞಿಲನೆ, ಗೞಗೞನೆ, ಕಿೞಕಿೞನೆ' ಮೊದಲಾದುವು ಅಲ್ಪಪ್ರಾಣಾಕ್ಷರವುಳ್ಳ ಅನುಕರಣಗತ ವಿಕಲ್ಪ ಱಗಳಾದ ಪದಗಳು. ಇಲ್ಲಿ ಪಕ್ಷಾಂತರದಲ್ಲಿ ಕುೞಗಳೂ ಆಗಿರುವುವೆಂದು ತಿಳಿಯಬೇಕು. ಇವಕ್ಕತಿರಿಕ್ತಗಳಾದ — 'ಓಕುೞ, ಸೂಕುೞಿ, ಈೞಿಗ, ಮಾೞಿಗೆ[3], ತೞಿಗೆ, ಅೞಿಯು, ಪೇೞ, ಜೋೞ, ಪುೞಿ, ಕೞಿ' ಮೊದಲಾದ ನಾಮಪದಗಳೂ 'ಬೞಿ, ನೞಿ, ಮುೞಿ, ತೞಿ, ಬೇೞ್, ಸೀೞ್, ತೂೞ್, ಕೇೞ್, ಉರುೞ್, ಸುರುೞ್' ಮೊದಲಾದ ಧಾತುಗತನಿಸರ್ಗಸಿದ್ಧ ೞಕಾರಗಳೂ ಕುೞವೆಂಬ ವ್ಯವಹಾರವನ್ನು ಹೊಂದಿರುವುವು. ಇದೇ ಅವಿಹಿತವಿಭಾಗವೆಂದು ತಿಳಿಯಬೇಕು. ಹೀಗೆ ವಿಹಿತಾವಿಹಿತವಿಭಾಗದಿಂದ ಱ, ಕುೞ, ಕ್ಷಳ ವಿಭಾಗವೂ ಅಲ್ಲಲ್ಲಿ ತಿಳಿಯತಕ್ಕದ್ದು. ಇಲ್ಲಿ – ಲಕಾರಸ್ಥಾನಿಕವಾದುದೆಲ್ಲಾ ಕ್ಷಳವೆಂದೂ ಅವಾಡಿಮುಸ್ಫಟಿಕಾದ್ಯನ್ಯಸ್ಥಾನಿಕಗಳಾದ ಗಣಪಠಿತಗಳಾದುವು ಱಗಳೆಂದೂ ಉಳಿದುವೆಲ್ಲಾ ಕುೞಗಳೆಂದೂ ನಿರ್ಣಯಿಸಲ್ಪಟ್ಟಿರುವುದು.

ವಿಚಾರ ಮಾಡಲು ಈ ವಿಭಾಗವು ಶಬ್ದಸಿದ್ಧಿಗೆ ಸಾಧಕವಾದುದರಿಂದ ವ್ಯಾಕರಣಕ್ಕೆ ವಿಷಯವಾಗುವುದಿಲ್ಲ. ಆದುದರಿಂದಲೇ ಸೂತ್ರಕಾರರೂ ಇದಕ್ಕಾಗಿ ಸೂತ್ರವನ್ನು ಮಾಡಿಲ್ಲ. ವೃತ್ತಿಕಾರರೂ ಇದನ್ನು ಬೋಧಿಸಲು ಪ್ರವರ್ತಿಸಲಿಲ್ಲ. ಆದಾಗ್ಯೂ ಕವಿತಾವಿಷಯದಲ್ಲಿ ಪ್ರಾಸ ಮೊದಲಾದುವುಗಳಲ್ಲಿ ಉಪಯುಕ್ತವಾಗಿರುವುದೆಂದು ಇಲ್ಲಿ ಸಂಕ್ಷೇಪವಾಗಿ ವಿವರಿಸಲ್ಪಟ್ಟಿದೆ. ಕಂದವೃತ್ತಾದಿಛಂದೋಬದ್ಧ ಪ್ರಬಂಧಗಳಲ್ಲಿ ಮೊದಲು ಪ್ರಾಸಸ್ಥಾನದಲ್ಲಿ ಯಾವುದು ಪ್ರಯುಕ್ತವಾಗುವುದೋ ಅದೇ ಎಲ್ಲಾಕಡೆಯಲ್ಲಿಯೂ ಪ್ರಯೋಗಿಸಲ್ಪಡಬೇಕು ಎಂಬುದು ಪ್ರಾಚೀನ ಮಹಾಕವಿಗಳ ಸಂಪ್ರದಾಯವಾಗಿರುವುದು. ಈ ವಿಷಯದಲ್ಲಿ ಮೊದಲು ಱಕ್ಕೆ —

ದಾಱಿಯೊಳರಿಗಳನಳಱಿಸಿ
ಪಾಱಿಯೊಳಳವಡಿಸಿ ನೆಲನನಱಿನಂ ಕಱೆವಾ
ಕೇಱಿಯೊಳೆ ನಲಿದು ತನ್ನಯ
ಪೇಱಿಗೆಯಂ ನೆಱೆಯೆ ನಿಱಿಸಿದಂ ಧರಣೀಶಂ

ಎಂದು ಮೊದಲಾದುವೂ, ಕುೞಕ್ಕೆ —

---

ಪಾಠಾಂತರಗಳು: ೧ ಕುಱು ೨ ಚೆಱೆ ೩ ಮೋೞಿಗೆ

ತಿೞಪೆೞಗಿನ ತೆಳ್ವೆೞಗಿನ
ಬೞಪೆೞಗಿನ ಬಳ್ಪೆೞಗಿನೊಳ್ಪೆೞಗಿನ ಬೆಳ್[೧]
ಪೆೞಗಿನ ಬೆೞಸಿನ ಸಿರಿಯೆನೆ
ತೊೞತೊೞತೊೞಗಿದುದು ಮೂರ್ತಿ ಚಂದ್ರಪ್ರಭನಾ

ಮೊದಲಾದುವೂ, ಕ್ಷಳಕ್ಕೆ —

ಚೞಪೞಕಂ ಹರ್ಷೋದ್ಗತ
ಪುೞಕಂ ನಖಮುಖವಿದಾರಿತೋಗ್ರೇಭಶಿರಃ
ಫೞಕಂ ಮೃಗತಿೞಕಂ ಪಿಂ
ಗೞಕಂ ಪೋಗೆಂದು ಕೞಪಿದಂ ಪವನಸಕಸಂ

ಎಂದು ಮೊದಲಾದುವೂ ಪ್ರಯೋಗಿಸಲ್ಪಟ್ಟಿರುವುವು. ಇದು ಮೊದಲು ಹೇಳಿದುದನ್ನೇ ಎಲ್ಲಾ ಕಡೆಯಲ್ಲಿಯೂ ಹೇಳಬೇಕೆಂದು ನಿರ್ಬಂಧವನ್ನಂಗೀಕಾರಮಾಡುವ ಪಕ್ಷದಲ್ಲಿ ಲಕ್ಷ್ಯವಾಗಿರುವುದು. ಈ ಮೂರರಲ್ಲಿ ಎಲ್ಲೆಲ್ಲಿ ಯಾವುದನ್ನು ಹೇಳಿದರೂ ಶ್ರುತಿವೈಲಕ್ಷಣ್ಯರೂಪದೋಷವಿಲ್ಲದಿರುವುದರಿಂದ ಇವುಗಳಲ್ಲಿ ಯಾವುದನ್ನು ಬೇಕಾದರೂ ಪ್ರಯೋಗಿಸಬಹುದು. ಆದುದರಿಂದ ಮೊದಲು ಹೇಳಿದುದನ್ನೇ ಎಲ್ಲಾ ಪ್ರಾಸಸ್ಥಾನದಲ್ಲಿಯೂ ಹೇಳಬೇಕೆಂಬ ನಿಯಮವಿಲ್ಲ ಎನ್ನುವ ಪಕ್ಷದಲ್ಲಿ ಱಕುಳಗಳಿಗೆ —

ಪಱಿವುಱಿವಾಱದಿ ಸೆಱೆಯದ
ಪಱಲಱಲಿಪಱುಂಚಲಿಂಚೆ ಮುಂಚಲುಲಂಚಂ
ಕೞವು ಪಿಸುಣ್ ಪಸವು ಬಱಂ
ಪಱಿಪಱಿವಲಸೊಲಸು ಕುತ್ತುಮಿಲ್ಲಾ ನಾಡೊಳ್

ಮೊದಲಾದುವೂ, ಱಕ್ಷಳಗಳಿಗೆ —

ಪ್ರೀಱಿಯಿನೆಱಗಲ್ ಕಣ್ಗಳ್
ಪಾಱಲ್ಕೊಣರಂತೆ ಪೊಳೆಯೆ ನಖದೊಳ್ ಭಯದಿಂ
ದಾೞಿಯನಪ್ಪುವ ವಧು ಭೂ
ಪಾಳಕನೊಳ್ ಮಾಡಿದಳ್ ಪರಸ್ಮಿತಕೃತಿಯಂ

ಮೊದಲಾದುವೂ, ಕುೞಕ್ಷಳಗಳಿಗೆ —

ತೊೞಗುವ ನಭದೊಳ್ ಪಿತ್ತಾ
ಖಿೞವೃಷ್ಟಿಗವಿದ್ಯಮಾನಮೇಚಕರುಚಿಯೊಂ
ದೆೞಸಿ ಮಿಗೆ ತೋರ್ಪ್ಪ ತೆಱದಿಂ
ಖಳಂಗೆ ಪೊಲನಲ್ತೆ ಕೃತಿಯೊಳಿಲ್ಲದ ದೋಷಂ

ಮೊದಲಾದುವೂ, ಇವು ಮೂರೂ ಒಂದೆಡೆಯಲ್ಲಿರುವುದಕ್ಕೆ —

ತೞಥೞಿಪ ಪದಾರ್ಥಮನೇಂ
ಗೞ ಕಾಣ್ಬನೆ ದೋಷವೃಷ್ಟಿ ದುರ್ಮತಿ ಗಡದೇಂ
ತಿೞವನೆ ಗುಣಸಂತತಿಯಂ
ಖಳಂ ಗಡೆಂತುಂ ರಸಂಗಳೊಳ್ ಪೊರೆದಪನೆ

ಪಾಠಾಂತರ : ೧ ಬಳ್, ಬಲ್

ಮೊದಲಾದುವೂ ಲಕ್ಷ್ಯಗಳಾಗಿರುವುವು. ಇಲ್ಲಿ ಎಲ್ಲಾ ಕಡೆಯಲ್ಲಿಯೂ ಱಳಾದಿಗಳಿಗೆ ವ್ಯಪದೇಶ ಭೇದವಿದ್ದರೂ ಪ್ರತ್ಯಾಸುಗುಣ್ಯವಿರುವುದೆಂದು ಪ್ರಾಸವನ್ನು ಮಾಡಿರುವರು.

ಇಲ್ಲಿ ಲ ಕಾರ ಳ ಕಾರಗಳಿಗೂ ರೇಫ ಱ ಕಾರಗಳಿಗೂ ಪ್ರಾಸನಿಯಮವು **ದರ್ಪಣಕಾರ**ನಿಂದ —

ಅತಿಪೀಡನದಿಂ ರೇಫಾ
ಶ್ರಿತಮಾದ ಱಕಾರಮುಂ ಸಮಂತು ದಕಾರಾ
ಶ್ರಿತಮಾದ ಱಳಮುಮಂಗೀ
ಕೃತಪದಲತ್ವಕ್ಕೆ ಸಮನೆ ಸಲ್ಲದ ಕುಳನುಂ (ಸೂತ್ರ ೧೮)

ಇವು ವರ್ಣಾವೃತ್ತಿಗೆ ಸ
ಲ್ವುವು ಸಂದುಂ ಪ್ರಾಸದೆಡೆಗೆ ಸಲ್ಲವು ಯಮಕ
ಸ್ಥಾನಪ್ರತಿಗಾಗವು ದೇಶೀ
ಯವೆನಿಪುವಾ ಹ್ರಸ್ವಮೆನಿಸಿದೇ ಓ ಸಹಿತಂ (ಸೂತ್ರ ೧೯)

ಎಂಬ ಸೂತ್ರಗಳಿಂದ ನಿಷೇಧಿಸಲ್ಪಟ್ಟು —

ನೆಲನಂ ಪುಗೆ ಪಗೆ ಫಣಿಯುಮೊ
ಲೊಳಪೊಕ್ಕಳಱಿಪನೆಂಬ ನಿಯಮಂ ದೂಷ್ಯಂ
ಘೂರದೊಳ್ ಪಱಿಮುಱಿಯಾಡುವ
ತೆಱದಿಂದುಱಿದಿಱದನೆಂಬ ನಿಯಮಂ ದೂಷ್ಯಂ

ಎಂದು ಮೊದಲಾದುವು ಉದಾಹರಿಸಲ್ಪಟ್ಟಿರುವುವು. ಆದಾಗ್ಯೂ ಪ್ರಾಚೀನ ಮಹಾಕವಿಗಳು ಈ ದೋಷವನ್ನೆಣಿಸದೆ ಸ್ವೇಚ್ಛೆಯಾಗಿ —

ಒಲಗಸಾಲೆ ಪೂಗಿಡುಗಳೋಳಿಗೆ ಜೇವಣಸಾಲೆ ಮತ್ತಭೃಂ
ಗಾಳಿಗೆ ಜನ್ಮಶಾಲೆ[1] ಕುಸುಮೇಷುಗೆ ಸೌರಭಶಸ್ತ್ರಶಾಲೆ ತಂ
ಗಾಳಿಗೆ ನಾಟ್ಯಶಾಲೆ ಕುಸುಮಾಸವಯುಕ್ತಚರತ್ಪುರಾಂಗನಾ
ಲೋಲಕಟಾಕ್ಷಲಕ್ಷ್ಮಿಗೆನಲೊಪ್ಪುವುವಲ್ಲಿಯ ಪುಷ್ಪವಾಟಿಗಳ್

ಅಲರ್ಗಣೆ ತುಂಬಿವಂಬುಜದ ಮೊಗ್ಗೆಯ ಮೂಡಿಗೆ ನೀಳ್ದ ಕೇತಕೀ
ದಳದಲಗಾಮ್ರದೊಳ್ ಪಳಿರ ಕಯ್ಸೊಡೆ ಕಬ್ಬಿನ ಬಿಲ್ ತದಗ್ರದೊಳ್
ಮಿಳಿರ್ವ ತಮಾಲಪಲ್ಲವದ ಚಾಮರದುಸ್ಸರವಟ್ಟಮೊಪ್ಪೆ ಬಂ
ದೆಱಿದಿಸುವಂ ಬನಂಬಿಡಿದು ಪಾಂಥರನಾಪರಿಪಂಥಿ ಮನ್ಮಥಂ

ಮುಱಿಗೆಂದುಂ ಕೋಡದುಗ್ರಾತಪಕೆ ನಡೆಯದುದ್ಯದ್ಧಿಮಕ್ಕಳ್ಕದೋರಂ
ತೊಲವಿಂ ಸಮ್ಯಕ್‌ತಪೋಮಾರ್ಗದೊಳೊದವಿದವಂಗಕ್ಷಯಶ್ರೀ ಕರಂ ಕ
ಯ್ಯೊಳಗಪ್ಪಳ್ ತಪ್ಪದೆಂದುರ್ವರೆಗನುಪಿಸುವಂತಾವಗಂ ತೋಱುವೀ ನಿ
ಶ್ಚಲಮೂರ್ತಿಶ್ರೀಯ ಸಾಮರ್ಥ್ಯಮನಱಿಮುರುಳರ್ ಬಲ್ಲರೇ ಗುಮ್ಮಟೇಶಾ

ಪಾಠಾಂತರ: ೧ ಜೇನಸಾಲೆ, ೨ ದಲೆ.

ತಿಳಿಗೊಳನೆಂಬ ಮಂದಿರದೊಳಂಬುಜಶೈಶವಶಯ್ಯೆಯಲ್ಲಿ ಸಾ
ರ್ದ್ರಲುಗುವ ವೀಚಿ ತೂಗೆ ಸಲೆ ನಿದ್ರಿಸಲೊಲ್ಲದೆ ಚಂಚರೀಕಸಂ
ಕುಳರವವಟ್ಟಿಯಿಂದೆ ನಳಿನೀರಜದೊಳ್ ಪೊರಳುತ್ತೆ ಕರ್ಣ್ಣಿಕಾ
ದಳನಯನೋಪಕಂ ತುಳುಕೆ ಬಂದುದು ಬಾಲಕನಂತೆ ಮಾರುತಂ

ಮೊದಲಾದುವನ್ನು ಪ್ರಯೋಗಿಸುವರು. ಹೀಗೆಯೇ ರೇಫ ಱ ಕಾರಗಳಿಗೂ —

ತೊರೆದುಗುವ ಬಾಷ್ಪವಾರಿಯಿ
ನೆಱಂಕೆಗಳ್ ನಾಂದು ಮುಗುಱಿ ವಿರಹಾನಲಸಿಂ
ನೆಱೆ ಬೆಱೆಪ್ಪ ಹಾಱಿ ಪಡುನೇ
ಸಱೊಳಿರ್ದ್ದದಗಲ್ದು ಚಕ್ರವಾಕದ್ವಂದ್ವಂ

ಎಂದೂ ಪ್ರಯೋಗಿಸಿರುವರು. ಹೀಗೆ ಪ್ರಯೋಗಿಸುವವರಿಗೆ — ವಿಚಾರ ಮಾಡಲಾಗಿ ಪ್ರಾಸಸ್ಥಾನದಲ್ಲಿ ಪ್ರತ್ಯಾಸುಗುಣ್ಯಕ್ಕೋಸ್ಕರ ಸಮಾನಶಬ್ದವೇ ಪ್ರಯೋಗಿಸಲ್ಪಡಬೇಕು. ಆದಾಗ್ಯೂ ಕೆಲವೆಡೆಗಳಲ್ಲಿ ಎಂದರೆ ಯುಕ್ತಾಕ್ಷರಪ್ರಾಸಸ್ಥಲದಲ್ಲಿ ಅತ್ಯಂತ ಪ್ರತಿಸ್ವೈಗುಣ್ಯವುಂಟಾಗುತ್ತಿದ್ದರೂ ಸ್ಥಾನಾದಿಭೇದವಿದ್ದರೂ ಒಂದೆಡೆ ರೇಫಯುಕ್ತವಾಗಿಯೂ ಒಂದೆಡೆ ಱ, ೞ ಯುಕ್ತವಾಗಿಯೂ ಮಹಾಕವಿಗಳಿಂದ ನಿಶ್ಶಂಕವಾಗಿ ಪ್ರಯೋಗಿಸಲ್ಪಡುವುದು. ಹೇಗೆಂದರೆ —

ಒಕ್ಕರ್ಡಿತೆನೀಗ್ರ್ಗ ಪೞಪ
ಟ್ಟಿಕ್ಕ್ರ್ಯ ನಕ್ಷ್ತ್ರೆಯ ಮುೞಿಗೆ ದೇಸಿಗರಂ ದೇ
ವಕ್ಕ್ರ್ಳ್ಗೊಡೆಯುವನ್ಕ್ರ್ಱ್ಸರ್
ನಿಚ್ಕರಿಸಿದ ನಿಮ್ಮ ದೊರೆಗೆ ಬೋಟೞಿಯರೊಳರೇ

ಹೀಗೆಯೇ —

ಬೞ್ವದು ಬಳ್ವಾಡಿ ನೆಱನಂಬಿದುದಾರುಹತಂ ಜಿನೇಂದ್ರನಂ
ತಿರ್ದ್ದ ಮಹಾನುಭಾವರ್

ಮೊದಲಾದುವು. ಮತ್ತು —

ಖಱ್ಗಕರನಾಗಿ ಪಿರಿದುಂ
ಸಿಱ್ಗರ ಸೂಳೆಯರ ಸಂಗವಿಸ್ಪರ್ದು ಭೂದೇ
ವಗ್ಗ್ರದು ತಕ್ಕುದೆ ನಿಜನಿಜ
ಮಾರ್ಗ್ಗದೊಳಿರವೇೞ್ವುದಾವನುಂ ದ್ವಿಜತಿಲಕಾ

ಚುಚ್ಚ್ರ್ದವೊಲ್ ಬಿಸಿಲಳುರೆ ಕಿ
ಮುೞ್ಚಿದ ತಳಿರಂತೆ ನೊಂದು ಗುಣನಂದಿ....

ಮೊದಲಾದುವು. ಹೀಗೆ ಅನೇಕ ಲಕ್ಷ್ಯಗಳು ಪ್ರಾಚೀನ ಗ್ರಂಥಗಳಲ್ಲಿ ದೊರೆಯುವುವೆಂದು ತಿಳಿಯಬೇಕು. ಹೀಗೆ ರೇಫ ಱ ಕಾರಾದಿಗಳಿಗೆ ಸ್ಥಾನಾದಿಸಾಮ್ಯವಿರುವುದರಿಂದ ಪ್ರತಿಸ್ವೈಗುಣ್ಯವಿಲ್ಲವೆಂಬ ತಾತ್ಪರ್ಯದಿಂದ ಱ, ಳ ಕುಳಾದಿಗಳನ್ನು ಪ್ರಾಸಸ್ಥಾನದಲ್ಲಿ ಪ್ರಯೋಗಿಸುವರೆಂದು ತಿಳಿಯುವುದು. ಆದುದರಿಂದ ಈ ಱೞ, ಕುಳ, ಕ್ಷಳ ಭೇದವನ್ನಿಟ್ಟುಕೊಂಡು ಪ್ರಯೋಗಗಳಲ್ಲಿ ನಿರ್ಬಂಧಪಡಿಸುವುದು ಯುಕ್ತವಲ್ಲವೆಂದು ತೋರುವುದು. ಇವುಗಳಿಗೆ ಅರ್ಥವೈಲಕ್ಷಣ್ಯವನ್ನು

ನಾನಾರ್ಥಕ ಶಬ್ದಗಳಿಗೆ ಹೇಗೆ ಪ್ರಕರಣಾದಿಗಳಿಂದ ನಿರ್ಣಯಿಸುವೆವೋ ಹಾಗೆ ನಿರ್ಣಯಿಸಿ ಕೊಂಡು ಪ್ರಯೋಗಿಸಬೇಕೆಂದು ಭಾಷಾವಿಶಾರದರು ಸಂತೋಷಪಡಬೇಕು. ಈ ಪ್ರಾಸಾದಿ ಸಂಕೇತಗಳೆಲ್ಲಾ ಆಲಂಕಾರಿಕ ಮತವಲ್ಲಿಯೇ ಶಬ್ದಸಾಧುತ್ವವನ್ನು ಬೋಧಿಸುವ ವೈಯಾಕರಣರಿಗೆ ಇದು ನಿಷ್ಪ್ರಯೋಜನವಾದುದರಿಂದ ಇಲ್ಲಿ ಅದರ ವಿಚಾರವಿಲ್ಲ ಉದಾಸೀನರಾಗಿರುವರೆಂದು ತಿಳಿಯಬೇಕು.

**ದರ್ಪಣಕಾರನು** ಇವನ್ನು ಸಂಜ್ಞಾಕಾಂಡದಲ್ಲಿಯೇ ಹೇಳಿ ಕೆಲವು ಅಳ, ಕುಳ, ಕ್ಷಳ ಸ್ವರೂಪಗಳನ್ನೂ —

ದಾಡಿಮಮಾ ಕೂಷ್ಮಾಂಡಂ
ಗೌಡಂ ಗುಡಮುಡಸಿ ಪೊಡೆವ ಝಗಡೆ ವಿಡಂಗಂ
ಕೂಡೆ ಕುಳನೇದಕಮುಮುಂ
ರೂಢಿಯ ಕುಳನೆಂದು ಅಱಿದಪಭ್ರಂಶತೆಯೊಳ್ (ಸೂತ್ರ ೨೦)

ಎಂದು ಮೊದಲಾದುವುಗಳಿಂದ ತಿಳಿಸಿ —

ಏಕ ದ್ವಿ ತ್ರಿ ಚತುಃ ಷಂ
ಟಾಕಲಿತಾರ್ಥಂಗಳಾಗಿ ಅಱನೊಳವು ನಿಜ
ಗ್ರಾಕೃತಿಯಿಂದವನಾದಿದು
ಹಾಕಸಿಕೃತಿಪ್ರಸ್ವನುಂ ನಿರಾಕುಳಮುಸಿರ್ಗಂ (ಸೂತ್ರ ೨೪)

ಎಂಬ ಸೂತ್ರದಿಂದ ಇವುಗಳ ಅರ್ಥಭೇದವನ್ನೂ ಪ್ರಮಾಣಪುರುಷರ ಕಾವ್ಯಮಾರ್ಗದಿಂದ ಕಂಡು ಹೇಳುವೆನೆಂದು ಸೂಚಿಸಿರುವನು. ಆದುದರಿಂದ ಇದರ ವ್ಯವಸ್ಥೆಯು ಪ್ರಯೋಗಪರಿಶೀಲನೆಯಿಂದೇ ಮಾಡಿಕೊಳ್ಳತಕ್ಕದ್ದು.

**ಅವತಾರಿಕೆ ೧೪೧**

ಯ ಕಾರಸ್ಥಾನದಲ್ಲಿ ಬರುವ ಆದೇಶವನ್ನು ತಿಳಿಸುತ್ತಾನೆ.

**ಸೂತ್ರಂ || ಯೋ ಜಃ || ೧೪೧ ||**

**ಅರ್ಥ ||** ಯ ಕಾರಸ್ಥಾನದಲ್ಲಿ ಜ ಕಾರಾದೇಶವು ಬಹುಳವಾಗಿ ಬರುವುದು.

**ಉದಾಹರಣೆ ||** ಯಾಗ, ಜಾಗ; ಯೋಗಿ, ಜೋಗಿ; ಯುದ್ಧ, ಜುದ್ದ; ಯಾವಕ, ಜಾವಕ; ದುರ್ಯೋಧನ, ದುಜ್ಜೋದನ; ಯಮ, ಜಮ || ಮೊದಲಾದ ಯ ಕಾರವುಳ್ಳ ಸಂಸ್ಕೃತ ಪದಗಳೆಲ್ಲಾ ಇವಕ್ಕೆ ಲಕ್ಷ್ಯಗಳೆಂದು ತಿಳಿಯಬೇಕು.

**ವಿಚಾರ ೧೪೧**

ಈ ಸೂತ್ರದಲ್ಲಿ — 'ಯಃ, ಜಃ' ಎಂದು ಎರಡು ಪದಗಳಿರುವುವು. ಪೂರ್ವಸೂತ್ರದಿಂದ 'ಬಹುಳಂ' ಎಂಬುದು ಅನುವರ್ತಿಸಲ್ಪಡುವುದು. 'ಯಃ' ಎಂಬುದು ಯ ಕಾರ ಮಾತ್ರ ಬೋಧದ ಷಷ್ಠ್ಯಂತಪದವು. ಆದುದರಿಂದ 'ಸ್ಥಾನೇ' ಎಂಬುದು ಸಂಬಂಧಿಸಲ್ಪಡುವುದು. 'ಜಃ' ಉಚ್ಚಾರಣಾರ್ಥಕ ಅ ಕಾರವಿಶಿಷ್ಟ ಜ ಕಾರಬೋಧಕ ಪ್ರಥಮಾಂತಪದವು. ಇದೇ ಇಲ್ಲಿ ವಿಧೇಯವು. 'ಬಹುಳಂ' ಎಂಬುದರಿಂದ ಯಥಾಲಕ್ಷ್ಯವಾಗಿ ಎಂದು ಸಿದ್ಧವಾಗುವುದು. ಅದು

ದರಿಂದ ಯ ಕಾರಕ್ಕೆ ಜ ಕಾರವು ಯಥಾಲಕ್ಷ್ಯವಾಗಿ ಬರುವುದೆಂದು ಸೂತ್ರಾರ್ಥವಾಗುವುದು. ಇದರಿಂದ ' ಜಾಗ ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು. ಬಹುಳಗ್ರಹಣಮಾಡಿರುವುದರಿಂದ ' ನಯ, ಭಯ, ಜಯ, ನ್ಯಾಯ, ಪ್ರಾಯ ' ಮೊದಲಾದುವುಗಳಲ್ಲಿ ಜ ಕಾರಾದೇಶವು ಬರುವುದಿಲ್ಲವೆಂದು ತಿಳಿಯಬೇಕು. ಇಲ್ಲಿಯೂ ಪೂರ್ವದಂತೆ—ಪೂರ್ವದಲ್ಲಾಗಲಿ ಉತ್ತರದಲ್ಲಾಗಲಿ ಸರ್ವತ್ರ ಇರುವ ವರ್ಣಗಳು ಈ ತರದ ಸೂತ್ರಗಳಿಗೆ ವಿಷಯಗಳೆಂದು—ಎಲ್ಲಾ ಸೂತ್ರಗಳಲ್ಲಿಯೂ ಊಹಿಸಿಕೊಳ್ಳುವುದು.

**ದರ್ಪಣಕಾರನು** ಈ ಸೂತ್ರವಿಷಯದಲ್ಲಿ —

ಘನಮಿಲ್ಲ ಯತ್ವದೊಳ್ ಗ
ತ್ವ ನತ್ವವಿಧಿ ಪಿರಿದು ಜತ್ವವಿಧಿ ಮತ್ತಂ ದ
ತ್ವನಿಯುಕ್ತ ಯತ್ವನುಮಂ ಜ
ತ್ವನಿಯತಮಂ ಕೆಲವು ಶಬ್ದದೊಳ್ ತಾಳ್ದುಕ್ಕುಂ (ಸೂತ್ರ ೬೫)

ಎಂಬ ಸೂತ್ರವನ್ನು ಹೇಳಿ ಯ ಕಾರಕ್ಕೆ ಗ ಕಾರ ನ ಕಾರಾದೇಶಗಳನ್ನು ವಿಧಿಸಿರುವನು. **ಶಾಸನಕಾರನ** ಮತದಲ್ಲಿ ಹೀಗೆ ವಿಶಿಷ್ಯ ಹೇಳದಿದ್ದರೂ ' ಕರಂಬಾದಿ ' ಪಾಠದಿಂದಾಗಲಿ ಬಹುಳ ಗ್ರಹಣದಿಂದಾಗಲಿ ಸಾಧಿಸಲ್ಪಡುವುದು.

**ಅವತಾರಿಕೆ ೧೪೨**

ಹೀಗೆಯೇ ವರ್ಗಾಕ್ಷರಗಳ ವಿಷಯದಲ್ಲಿ ವ್ಯವಸ್ಥಾಪಕವಾದ ಸೂತ್ರವನ್ನು ಹೇಳುತ್ತಾನೆ.

**ಸೂತ್ರಂ || ದ್ವಿತೀಯಸ್ಯ ಪ್ರಥಮೋ ವರ್ಗಾಣಾಂ || ೧೪೨ ||**

**ಅರ್ಥ || ವರ್ಗಾಕ್ಷರಗಳ ಮಧ್ಯದಲ್ಲಿ ಆ ಆ ವರ್ಗದ ಎರಡನೆಯ ವರ್ಣಕ್ಕೆ ಆ ಆ ವರ್ಗದ ಮೊದಲನೆಯ ವರ್ಣಾದೇಶವು ಬಹುಳವಾಗಿ ಬರುವುದು.**

**ಉದಾಹರಣೆ** || ಖದಿರ, ಕದಿರ; ಖಲ, ಕಲ; ಖಂಡ, ಕಂಡ; ಖಾಸ, ಕಾಸ; ಸಖ, ಸಕ; ಛನ್ದ, ಚಂದ; ಛಿನ್ನ, ಚಿನ್ನ; ಛವಿ, ಚವಿ; ಛಾನ್ದಸ, ಚಾಂದಸ; ಛನ್ನ, ಚನ್ನ; ಕಣ್ಠಿಕೆ, ಕಂಟಿಕೆ; ಶುಣ್ಠಿ, ಸುಂಟಿ; ಮಠ, ಮಟ; ಕುಣ್ಠ, ಕುಂಟ; ಕಣ್ಠ, ಕಂಟ; ಕಥೆ, ಕತೆ; ಕನ್ಥೆ, ಕಂತೆ; ಪನ್ಥ, ಪಂತ; ಮಿಥಿಲೆ, ಮಿತಿಳೆ; ಪಥ, ಪತ; ಫಲ, ಪಲ; ಫಾಲ, ಪಾಲ; ಫಣೆ, ಪಣೆ; ಕಫ, ಕಪ; ಗುಮ್ಫನ, ಗುಂಪನ || ಮೊದಲಾದ ವರ್ಗದ್ವಿತೀಯಾಕ್ಷರವುಳ್ಳ ಶಬ್ದಗಳೆಲ್ಲಾ ಇದಕ್ಕೆ ಲಕ್ಷ್ಯಗಳೆಂದು ತಿಳಿಯುವುದು.

**ವಿಚಾರ ೧೪೨**

ಈ ಸೂತ್ರದಲ್ಲಿ — ' ದ್ವಿತೀಯಸ್ಯ, ಪ್ರಥಮಃ, ವರ್ಗಾಣಾಂ ' ಎಂದು ಮೂರು ಪದಗಳಿರುವುವು. ' ಬಹುಳಂ ' ಎಂಬುದಕ್ಕೆ ಅನುವೃತ್ತಿ ಇರುವದು. ' ದ್ವಿತೀಯಸ್ಯ ' ಎಂದರೆ ಎರಡನೆಯದು ಎಂದರ್ಥವಾಗುವುದು. ಆ ದ್ವಿತೀಯತ್ವವು ವರ್ಗಾಪೇಕ್ಷೆಯಿಂದಲ್ಲದೆ ಪಾಠಾಪೇಕ್ಷೆಯಿಂದಲ್ಲ. ಇದೇ ಅರ್ಥವನ್ನು ಬೋಧಿಸಲು ಸೂತ್ರದಲ್ಲಿ ವರ್ಗಗ್ರಹಣವು ಮಾಡಲ್ಪಟ್ಟಿದೆ. ಹೀಗೆಯೇ ' ಪ್ರಥಮಃ ' ಎಂಬಲ್ಲಿಯೂ ತಿಳಿಯಬೇಕು. ತಥಾಚ ವರ್ಗಗಳ ಮಧ್ಯದಲ್ಲಿ ಆ ಆ

ವರ್ಗದ ಎರಡನೆಯ ಅಕ್ಷರದ ಸ್ಥಾನದಲ್ಲಿ ಆ ಆ ವರ್ಗದ ಮೊದಲನೆಯ ಅಕ್ಷರವು ಬಹುಳವಾಗಿ ಆದೇಶವಾಗುವುದೆಂದು ಸೂತ್ರಾರ್ಥವಾಗಲು 'ಕದಿರ' ಮೊದಲಾದುವು ಸಿದ್ಧಿಸುವುವು.

**ಅವತಾರಿಕೆ ೧೪೩**

ಹಿಂದೆ ವರ್ಗದ್ವಿತೀಯವರ್ಣಕ್ಕೆ ವರ್ಗಪ್ರಥಮವರ್ಣಾದೇಶವು ವಿಧಿಸಲ್ಪಟ್ಟಿತು. ಈಗ ಪ್ರಥಮ-ಚತುರ್ಥಗಳಿಗೆ ತೃತೀಯವರ್ಣಾದೇಶವನ್ನು ವಿಧಿಸುತ್ತಾನೆ.

**ಸೂತ್ರಂ || ತೃತೀಯಃ ಪ್ರಥಮಚತುರ್ಥಯೋಃ || ೧೪೩ ||**

**ಅರ್ಥ || ವರ್ಗಗಳ ಮಧ್ಯದಲ್ಲಿ ಆ ಆ ವರ್ಗದ ಪ್ರಥಮ-ಚತುರ್ಥ ವರ್ಣಗಳಿಗೆ ತೃತೀಯ ವರ್ಣಾದೇಶವು ಬಹುಳವಾಗಿ ಬರುವುದು.**

**ಉದಾಹರಣೆ ||** ವಾಸುಕಿ, ವಾಸುಗಿ; ಡಮರುಕಂ, ಡಮರುಗಂ; ಆಕರ, ಆಗರ; ಮಲ್ಲಿಕೆ, ಮಲ್ಲಿಗೆ; ಜೀರಕೆ, ಜೀರಗೆ; ಸೂಚಿ, ಸೂಜಿ; ಮೋಚನ, ಮೋಜನ; ವಚೆ, ಬಜೆ; ವಾಚನೆ, ಬಾಜನೆ; ಸಂಚಯ, ಸಂಜಯ; ಕೋಟೆ, ಗೋಡೆ; ಮಕುಟ, ಮಗುಡ; ಅಟವಿ, ಅಡವಿ; ಪಾಟಿ, ಪಾಡ; ತಟಿ, ದಡ; ಜಾತಿ, ಜಾದಿ; ವಸತಿ, ಬಸದಿ; ಚತುರ, ಚದುರ; ಮೂತಿ, ಮೂದಿ; ಕೈತವ, ಕೈದವ || ಇವೇ ಮೊದಲಾದುವು ಪ್ರಥಮಾಕ್ಷರಕ್ಕೆ ತೃತೀಯಾಕ್ಷರ ಬಂದುದಕ್ಕೆ ಲಕ್ಷ್ಯಗಳು. ಚತುರ್ಥಾಕ್ಷರಕ್ಕೆ ತೃತೀಯಾದೇಶವು ಬಂದುದಕ್ಕೆ; ಘಣ್ಟಾ, ಗಂಟೆ; ಘಟೆ, ಗಟೆ; ಓಘ, ಓಗ; ಮಾಘ, ಮಾಗ; ಸಙ್ಘ, ಸಂಗ; ಝಙ್ಕೆ, ಜಂಕೆ; ಝಕಟ, ಜಗಳ; ಝಮ್ಪೆ, ಜಂಪೆ; ಝಡಿತಿ, ಜಡಿತಿ; ಝಷ, ಜಸ; ಢಕ್ಕೆ, ಡಕ್ಕೆ; ಗಾಢ, ಗಾಡ; ರೂಢಿ, ರೂಡಿ; ಷಣ್ಢ, ಸಂಡ; ದೃಢ, ದಿಡ; ಧನ, ದನ; ಧರ್ಮ, ದಮ್ಮ; ಧರೆ, ದರೆ; ನಿಧಿ, ನಿದಿ; ಸಾಧಕ, ಸಾದಕ; ಭೈರವ, ಬೈರವ; ಭೋಗಿ, ಬೋಗಿ; ಭಯ, ಬಯ; ಶಮ್ಭು, ಸಂಬು; ಶೋಭೆ, ಸೋಬೆ || ಮೊದಲಾದುವು ಲಕ್ಷ್ಯಗಳೆಂದು ತಿಳಿಯುವುದು.

**ವಿಚಾರ ೧೪೩**

ಈ ಸೂತ್ರದಲ್ಲಿ – 'ತೃತೀಯಃ, ಪ್ರಥಮಚತುರ್ಥಯೋಃ' ಎಂದು ಎರಡು ಪದಗಳಿರುವುವು. ಪೂರ್ವಸೂತ್ರದಿಂದ 'ವರ್ಗಾಣಾಂ, ಬಹುಳಂ' ಎಂಬಿವು ಅನುವರ್ತಿಸಲ್ಪಡುವುವು. 'ವರ್ಗಾಣಾಂ' ಎಂಬುದು 'ಪ್ರಥಮಚತುರ್ಥಯೋಃ' ಎಂಬುದಕ್ಕೆ ವಿಶೇಷಣವು. ಆದುದರಿಂದ ಆ ಆ ವರ್ಗಗಳ ಪ್ರಥಮವರ್ಣಕ್ಕೂ ಚತುರ್ಥವರ್ಣಕ್ಕೂ ಆ ಆ ವರ್ಗದ ತೃತೀಯವರ್ಣಾದೇಶವು ಬರುವುದೆಂಬುದರಿಂದ ಕ ಘ, ಚ ಝ, ಟ ಢ, ತ ಧ, ಪ ಭ ಗಳಿಗೆ ಕ್ರಮವಾಗಿ ಗ, ಜ, ಡ, ದ, ಬ ಗಳು ಯಥಾ ಲಕ್ಷ್ಯಗಳಾಗಿ ಬರುತ್ತವೆಂದು ಸೂತ್ರಾರ್ಥವಾಗುವುದು. ಇದರಿಂದ 'ವಾಸುಗಿ, ಗಂಟೆ' ಮೊದಲಾದುವು ಸಿದ್ಧಿಸುವುವು. ಇಲ್ಲಿ ಉದಾಹರಣೆಗಳನ್ನು ಕೊಡುವಾಗ ಪವರ್ಗಚತುರ್ಥಕ್ಕೆ 'ಶಮ್ಭು' ಮೊದಲಾದುವನ್ನು ಕೊಟ್ಟಿದ್ದರೂ ಪವರ್ಗದ ಪ್ರಥಮವರ್ಣಕ್ಕೆ ಉದಾಹರಣೆಗಳನ್ನು ಕೊಟ್ಟಿಲ್ಲ. ಆದುದರಿಂದ ಅವಕ್ಕೆ ಪ್ರಯೋಗವಿಲ್ಲವೆಂದು ತಿಳಿದು ಇಲ್ಲಿ ಪವರ್ಗವನ್ನು ಬಿಟ್ಟುಳಿದ ವರ್ಗಪ್ರಥಮ-ಚತುರ್ಥಗಳೇ ಲಕ್ಷ್ಯಗಳೆಂದು ತಿಳಿಯಬೇಕು. ಆದುದರಿಂದಲೇ ಈ ವಿಷಯದಲ್ಲಿ **ದರ್ಪಣಕಾರನು** —

---

ಪಾಠಾಂತ : ೧. ತಡ

ವರ್ಗಪ್ರಥಮಂಗಳ್
ತದ್ವರ್ಗತೃತೀಯಂಗಳಪ್ಪುವುಟಿಂಯೆ ಪವರ್ಗಂ
ವರ್ಗದ್ವಿತೀಯವರ್ಣಂ
ವರ್ಗ ಪ್ರಥಮಂ ಚತುರ್ಥಮಱಿಗೆ ತೃತೀಯಂ (ಸೂತ್ರ ೨೨೫)

ಎಂಬ ಸೂತ್ರವನ್ನು ಹೇಳಿ ಅದರಲ್ಲಿ ಪೂರ್ವಸೂತ್ರಾರ್ಥವೂ ಸಂಗ್ರಹೀತವಾಗುವಂತೆ ಹೇಳಿರುವನು. ಉಳಿದುವುಗಳನ್ನು ಬಹುಳಗ್ರಹಣದಿಂದ ಸಾಧಿಸಿಕೊಳ್ಳಬೇಕೆಂದು ತಾತ್ಪರ್ಯವು.

**ಅವತಾರಿಕೆ ೧೪೪**

ಹೀಗೆಯೇ ಪವರ್ಗದ ಕೆಲವು ವರ್ಣಕ್ಕೆ ಮಾತ್ರ ವ ಕಾರಾದೇಶವನ್ನು ವಿಧಿಸುತ್ತಾನೆ.

**ಸೂತ್ರಂ || ಬಮೋರ್ವಃ || ೧೪೪ ||**

**ಅರ್ಥ || ಬ ಕಾರ ಮ ಕಾರಗಳಿಗೆ ವ ಕಾರಾದೇಶವು ಬಹುಳವಾಗಿ ಬರುವುದು.**

**ಉದಾಹರಣೆ ||** ಕಬಲ, ಕವಳ; ಶಿಬಿಕೆ, ಸಿವಿಕೆ; ಶಮ್ಬು, ಸಂವ; ಬನ್ಧನ, ವಂದನ; ವಿಬಾಧ, ವಿವಾದ; ಕಾಮ, ಕಾವ; ಭೀಮ, ಬೀವ; ಗ್ರಾಮ, ಗಾವ; ಯಾಮ, ಜಾವ; ಕುಙ್ಕುಮ. ಕುಂಕುವ || ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೧೪೪**

ಈ ಸೂತ್ರದಲ್ಲಿ — 'ಬಮೋಃ, ವಃ' ಎಂದು ಎರಡು ಪದಗಳಿರುವುವು. ಪೂರ್ವದಿಂದ 'ಬಹುಳಂ' ಎಂಬುದು ಸಂಬಂಧಿಸಲ್ಪಡುವುದು. 'ಬಮೋಃ' ಎಂಬುದು ಸ್ಥಾನಷಷ್ಠೀದ್ವಿವಚನಾಂತವು. 'ವಃ' ಎಂಬುದು ವಿಧೇಯವು. ಆದುದರಿಂದ ಬ ಕಾರ ಮ ಕಾರಗಳ ಸ್ಥಾನವಲ್ಲಿ ವ ಕಾರಾದೇಶವು ಯಥಾಲಕ್ಷ್ಯವಾಗಿ ಬರುವುದೆಂದು ಸೂತ್ರಾರ್ಥವಾಗುವುದು. ಆದುದರಿಂದ 'ಕವಳ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು.

ಇಲ್ಲಿ ವಿಚಾರ ಮಾಡಲು ಸಂಸ್ಕೃತಪವಗತವಾದ ವರ್ಣವೇ ಎಲ್ಲಾ ತದ್ಭವಸೂತ್ರಸಹಿತ ಕಾರ್ಯಗಳಿಗೂ ಸ್ಥಾನಿಯೆಂಬುದು ಸಿದ್ಧವಾಗುವುದು. ಆದರೂ —

ಅವಧರಿಪುದು ವಿಬುಧರ್ ದೋ
ಷವಿದಱಿೊಳೇನಾನುಮುಳ್ಳೊಡಂ ಪ್ರಿಯದಿಂ ತಿ
ದ್ದುವುದು ಗುಣಯುಕ್ತಮುಂ ದೋ
ಷವಿದೂರಮುಮಾಗೆ ಮೆಚ್ಚಿ ಕೆಯ್ಕೊಳ್ವುದಿದಂ

ಅವಧಾರಣೆಯ ನಿಯೋಗ
ವ್ಯವಸ್ಥಿತಿಯಿಂದಿರೆ ನಿಪಾತವಿಷಯದೊಳಲ್ಪಾ
ರ್ಥವನಾಳ್ದಿರೆ ವಸ್ತುವಿನ
ರ್ಥವನುಸಿರುತ್ತಿರೆ ತಗುಳ್ಪುವುದು ಸಂಹಿತೆಯಂ

ಮೊದಲಾದ ಪ್ರಯೋಗಗಳಿರುವುದರಿಂದ ಕ್ವಚಿತ್ ಮ ಕಾರವು ಕರ್ಣಾಟಕಪವಗತವಾಗಿದ್ದರೂ ಸ್ಥಾನಿಯಾಗುವುದೆಂದು ತಿಳಿಯಬೇಕು.

**ಅವತಾರಿಕೆ ೧೪೫**

ಹೀಗೆಯೇ ಪ ಕಾರಕ್ಕೆ ಹ ಕಾರಾದೇಶವನ್ನು ವಿಧಿಸುತ್ತಾನೆ.

**ಸೂತ್ರಂ || ಪೋ ಹಶ್ಚ || ೧೪೫ ||**

**ಅರ್ಥ || ಪ ಕಾರಕ್ಕೆ ಹ ಕಾರಾದೇಶವೂ ವ ಕಾರಾದೇಶವೂ ಬಹುಳವಾಗಿ ಬರುವುದು.**

**ಉದಾಹರಣೆ ||** ಗೋಪುರ, ಗೋಹುರ; ಪರವಶ, ಹರವಸ; ಪಟ್ಟಿಕೆ, ಹಟ್ಟಿಗೆ; ಪೀವರ, ಹೀವರ; ಕಪಿ, ಕವಿ; ದೀಪಿಕೆ, ದೀವಿಗೆ; ಚಾಪಲ, ಜಾವಳ; ಸೂಪ, ಸೂವ; ಕೂಪ, ಕೂವ || ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೧೪೫**

ಈ ಸೂತ್ರದಲ್ಲಿ ' ಪಃ, ಹಃ, ಚ ' ಎಂದು ಮೂರು ಪದಗಳಿರುವುವು. ' ಪಃ ' ಎಂಬುದು ಸ್ಥಾನಷಷ್ಠ್ಯಂತಪದವು. ' ಹಃ ' ಎಂಬುದು ಉಚ್ಚಾರಣಾರ್ಥವಾದ ಅ ಕಾರದಿಂದ ಕೂಡಿದ ಪ್ರಥಮಾಂತಪದವು. ಇದೂ ಚ ಕಾರದಿಂದ ಅನುವರ್ತಿತವಾದ ' ವಃ ' ಎಂಬುದೂ ಇಲ್ಲಿ ವಿಧೇಯಗಳು. ' ಬಹುಳಂ ' ಎಂಬುದು ಇರುವುದರಿಂದ ಲಕ್ಷ್ಯಾನುಸಾರವಾಗಿ ಚಾತುರ್ವಿಧ್ಯ ವನ್ನಂಗೀಕರಿಸುವುದು. ತಥಾಚ — ಪ ಕಾರದ ಸ್ಥಾನದಲ್ಲಿ ಹ ಕಾರಾದೇಶವೂ ವ ಕಾರಾದೇಶವೂ ಯಥಾಲಕ್ಷ್ಯವಾಗಿ ಬರುವುದೆಂದು ಸೂತ್ರಾರ್ಥವಾಗುವುದರಿಂದ ' ಗೋಹುರ, ದೀವಿಗೆ ' ಮೊದ ಲಾದುವು ಸಿದ್ಧಿಸುವುವೆಂದು ತಿಳಿಯಬೇಕು.

**ಅವತಾರಿಕೆ ೧೪೬**

ಹೀಗೆಯೇ ವ ಕಾರಕ್ಕೆ ಬ ಕಾರಾದೇಶವಿಧಾಯಕ ಸೂತ್ರವನ್ನು ಹೇಳುತ್ತಾನೆ.

**ಸೂತ್ರಂ || ವೋ ಬಃ || ೧೪೬ ||**

**ಅರ್ಥ || ವ ಕಾರಕ್ಕೆ ಬ ಕಾರಾದೇಶವು ಬಹುಳವಾಗಿ ಬರುವುದು.**

**ಉದಾಹರಣೆ ||** ವಸೆ, ಬಸೆ; ವೇಗ, ಬೇಗ; ವಞ್ಚನೆ, ಬಂಚನೆ; ವಸನ್ತ, ಬಸಂತ; ವೀಣೆ, ಬೀಣೆ || ಮೊದಲಾದುವು ಇವಕ್ಕೆ ಲಕ್ಷ್ಯಗಳು.

**ವಿಚಾರ ೧೪೬**

ಈ ಸೂತ್ರದಲ್ಲಿ — ' ವಃ, ಬಃ ' ಎಂದು ಎರಡು ಪದಗಳಿರುವುವು, ' ವಃ ' ಎಂಬುದು ಸ್ಥಾನಷಷ್ಠ್ಯಂತಪದವು. ' ಬಃ ' ಎಂಬುದು ವಿಧೇಯಪದವು. ' ಬಹುಳಂ ' ಅನುವರ್ತಿತವಾಗು ವುದು. ಆದುದರಿಂದ ವ ಕಾರದ ಸ್ಥಾನದಲ್ಲಿ ಬ ಕಾರಾದೇಶವು ಲಕ್ಷ್ಯಾನುಸಾರವಾಗಿ ಬರುವು ದೆಂದು ಸೂತ್ರಾರ್ಥವಾಗಲು ' ಬಸೆ, ಬೇಗ ' ಮೊದಲಾದ ಶಬ್ದಗಳು ಸಿದ್ಧಿಸುವುವೆಂದು ತಿಳಿಯುವುದು.

**ಅವತಾರಿಕೆ ೧೪೭**

ಇದುವರೆಗೂ ಅನಿಮಿತ್ತಕವಾಗಿ ಕೆಲವು ವ್ಯಂಜನಗಳ ಸ್ಥಾನದಲ್ಲಿ ಭಾವರೂಪಾದೇಶಗಳು ವಿಧಿಸಲ್ಪಟ್ಟುವು. ಈಗ ವ್ಯಂಜನಪರಕವಾದ ಕೆಲವು ವ್ಯಂಜನಗಳಿಗೆ ಆಗಮವಿಧಿಯನ್ನು ಹೇಳುತ್ತಾನೆ.

**ಸೂತ್ರಂ ॥ ಅಗಿಗುಗ್ವ್ಯಂಜನೇ ವ್ಯಂಜನಸ್ಯ ॥ ೧೪೭ ॥**

**ಅರ್ಥ ॥** ವ್ಯಂಜನವು ಪರವಾಗಿರಲು ವ್ಯಂಜನಕ್ಕೆ ಲಕ್ಷ್ಯಾನುಸಾರವಾಗಿ ಅಗಾಗಮ, ಇಗಾಗಮ, ಉಗಾಗಮಗಳು ಬರುವುವು.

**ಉದಾಹರಣೆ ॥** ಯತ್ನ, ಯತನ[೧]; ಇನ್ದ್ರ, ಇಂದರ; ಪ್ರಶ್ನ, ಪರಸನ; ವ್ರತ, ಬರತ; ಶ್ರಮ, ಸರಮ; ವರ್ಷ, ಬರಿಸ; ಚನ್ದ್ರ, ಚಂದಿರ; ಮನ್ದಿರ, ಮಂದಿರ; ಶ್ರೀ, ಸಿರಿ; ಹ್ರೀ, ಹಿರಿ; ಮುಕ್ತಿ, ಮುಕುತಿ; ಯುಕ್ತಿ, ಯುಕುತಿ; ಅಲ್ಪ, ಅಲುಪ; ಯುಗ್ಮ, ಜುಗುಮ; ಅರ್ಹ, ಅರುಹ ॥ ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೧೪೭**

ಈ ಸೂತ್ರದಲ್ಲಿ — 'ಅಕ್, ಇಕ್, ಉಕ್, ವ್ಯಂಜನೇ, ವ್ಯಂಜನಸ್ಯ' ಎಂದು ಅಯ್ದು ಪದಗಳಿರುವುವು. 'ಅಕ್, ಇಕ್, ಉಕ್' ಎಂಬೀ ಮೂರೂ ಕಕಾರೇತ್-ಸಂಜ್ಞಕವಿಧೇಯಗಳಾಗಿ 'ಕಿದಂತ್ಯಃ' ಎಂಬ ಪರಿಭಾಷೆಯಿಂದ ಉದ್ದೇಶ್ಯಕ್ಕೆ ಅಂತಾವಯವಗಳಾಗಿ ಬರುವುವೆಂದು ಬೋಧಿತವಾಗುವುದರಿಂದ ಇವು ಆಗಮಗಳೆಂದು ತಿಳಿಯಬೇಕು. 'ವ್ಯಂಜನಸ್ಯ' ಎಂಬುದು ಉದ್ದೇಶ್ಯಬೋಧಕವಾದ ಷಷ್ಠ್ಯಂತಪದವು. 'ವ್ಯಂಜನೇ' ಎಂಬುದು ನಿಮಿತ್ತಬೋಧಕವಾದ ಸಪ್ತಮ್ಯಂತಪದವು. 'ಬಹುಳಂ' ಎಂಬುದು ಅನುವರ್ತಿತವಾಗುವುದು. ತಥಾಚ—ವ್ಯಂಜನವು ಪರವಾಗಿರಲು ವ್ಯಂಜನಕ್ಕೆ ಲಕ್ಷ್ಯಾನುಸಾರವಾಗಿ ಅಗಾಗಮ, ಇಗಾಗಮ, ಉಗಾಗಮಗಳು ಬರುವುವೆಂದು ಸೂತ್ರಾರ್ಥವಾಗುವುದರಿಂದ — 'ಯತನ, ಮಂದಿರ, ಮುಕುತಿ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು.

ಈ ಸೂತ್ರದಲ್ಲಿ ವಿಧೇಯಗಳು ಮೂರಾಗಿದ್ದರೂ ಒಂದೇ ಕಾಲದಲ್ಲಿ ಎಲ್ಲಾ ಪ್ರವರ್ತಿಸಲು ವಿರೋಧವುಂಟಾಗುವುದರಿಂದಲೂ ಬಹುಳಾಧಿಕಾರಬಲದಿಂದಲೂ ಒಂದು, ಎರಡು, ಮೂರು ಯಥಾಸಂಭವವಾಗಿ ಬರುವುವೆಂದು ತಿಳಿಯಬೇಕು. ಆದುದರಿಂದ 'ನೂತ್ನ, ನೂತನಂ; ಕುಘ್ರಂ, ಕುಘರಂ' ಮೊದಲಾದುವುಗಳಲ್ಲಿ ಅಗಾಗಮವೊಂದೇ ಬಂದಿರುವುದು. ಹೀಗೆಯೇ — 'ವರ್ಷಂ, ಬರಿಸಂ; ಹರ್ಷಂ, ಹರಿಸಂ' ಮೊದಲಾದುವುಗಳಲ್ಲಿ ಇಗಾಗಮವೂ, 'ಪದ್ಮಂ, ಪದುಮಂ; ಸದ್ಮಂ, ಸದುಮಂ' ಮೊದಲಾದುವುಗಳಲ್ಲಿ ಉಗಾಗಮವೂ ಬಂದಿರುವುದು. 'ಚಂದ್ರಂ, ಚಂದರಂ; ಚಂದಿರಂ; ಮಂದ್ರ, ಮಂದರಂ, ಮಂದಿರಂ' ಮೊದಲಾದುವುಗಳಲ್ಲಿ ಅಗಾಗಮ-ಇಗಾಗಮಗಳೆರಡೂ 'ಅರ್ಹಂ, ಅರಿಹಂ, ಅರುಹಂ; ಸರ್ಷಪಂ, ಸರಿಸಪಂ, ಸರುಸಪಂ' ಮೊದಲಾದುವುಗಳಲ್ಲಿ ಇಗಾಗಮ-ಉಗಾಗಮಗಳೆರಡೂ 'ಮುಕ್ತಿ, ಮುಕತಿ, ಮುಕುತಿ; ಭುಕ್ತಿ, ಬುಗತಿ, ಬುಗುತಿ' ಮೊದಲಾದುವುಗಳಲ್ಲಿ ಅಗಾಗಮ-ಉಗಾಗಮಗಳೆರಡೂ ಬಂದಿರುವುವು. 'ಅರ್ಹನ್ತಂ, ಅರಹಂತಂ, ಅರಿಹಂತಂ, ಅರುಹಂತಂ; ತನ್ದ್ರಿ, ತಂದರಿ, ತಂದಿರಿ, ತಂದುರಿ' ಮೊದಲಾದುವುಗಳಲ್ಲಿ ಈ ಮೂರೂ ಪರ್ಯಾಯವಾಗಿ ಬಂದಿವೆಯೆಂದು ಪ್ರಯೋಗಬಲದಿಂದ ತಿಳಿಯಬೇಕು. ಇಲ್ಲಿ ಎಲ್ಲಾಕಡೆಯಲ್ಲಿಯೂ ಅಗಾಗಮಸಹಚರಿತವಾದ ಉಗಾಗಮವಾದುದರಿಂದ ಕೇವಲ ಉಗಾಗಮವು ಪರದಲ್ಲಿರುವಾಗ 'ಉಕಿ ॥ ೬೯ ॥' ಎಂಬ ಸೂತ್ರದಿಂದ ವಿಧೇಯವಾದ ವಾದ ದ್ವಿತ್ವವು ಬರುವುದಿಲ್ಲವೆಂದು ತಿಳಿಯಬೇಕು.

[೧ 'ಜತನ' ವೆಂದೂ ವ್ಯವಹಾರದಲ್ಲಿದೆ—ಸಂಪಾದಕ]

ಈ ಸೂತ್ರವಿಷಯದಲ್ಲಿ **ದರ್ಪಣಕಾರನು** —

ವಿರಳಂಮಾಡಿದ ದತ್ತ
ಕ್ಕರದ ಮೊದಲ್ಗತ್ವಮಿತ್ವಮುತ್ವಮುಮಕ್ಕುಂ
ದೊರೆಕೊಳ್ಗುಮತ್ವದಿತ್ವದ
ಪರವರ್ಣಂ ದೀರ್ಘಮಾದ ಪಕ್ಷಂ ಹ್ರಸ್ವಂ (ಸೂತ್ರ ೨೫೪)

ಎಂಬ ಸೂತ್ರವನ್ನು ಹೇಳಿ ಅಲ್ಲಿ ಅ ಕಾರ ಇ ಕಾರದ ಮುಂದಣ ದೀರ್ಘಕ್ಕೆ ಹ್ರಸ್ವಮಕ್ಕುಂ ಎಂದು ಹೇಳಿ — 'ಪ್ರಾಯಂ, ಹರಯಂ; ಪ್ರಾಣಂ, ಹರಣಂ; ತ್ರಾಸಂ, ತರಸಂ; ತ್ರಾಣಂ, ತರಣಂ' ಮೊದಲಾದ ಪ್ರಯೋಗಗಳನ್ನೂ ಉದಾಹರಿಸಿರುವನು. ಇಂತಹ ಪ್ರಯೋಗಗಳು **ಶಾಸನಕಾರನ** ಮತದಲ್ಲಿ ಬಹುಳಗ್ರಹಣದಿಂದಾಗಲಿ ಕರಂಬಾದಿಗಣಪಾಠದಿಂದಾಗಲಿ ಸಿದ್ಧಿಸುವುವೆಂದು ತಿಳಿಯಬೇಕು.

**ಅವತಾರಿಕೆ ೧೪೪**

ಇದುವರೆಗೂ ವ್ಯಂಜನಕ್ಕೆ ಬರುವ ಆದೇಶಾಗಮಗಳನ್ನು ಹೇಳಿ ಮುಂದೆ ಕೆಲವು ಸ್ವರ-ವ್ಯಂಜನ ಸಾಧಾರಣವಾಗಿ ಲೋಪರೂಪಾದೇಶವನ್ನು ವಿಧಿಸಲು ಮೊದಲು ಕೆಲವು ಶಬ್ದಗಳ ಅಂತ್ಯಸ್ವರಕ್ಕೆ ಲೋಪವನ್ನು ವಿಧಿಸುತ್ತಾನೆ.

**ಸೂತ್ರಂ || ಲುಪ್ ಕೀಲಮೀನಕೀರನೀರಕೂರಸ್ಯ || ೧೪೪ ||**

**ಅರ್ಥ || ಕೀಲ, ಮೀನ, ಕೀರ, ನೀರ, ಕೂರ ಎಂಬ ಶಬ್ದಗಳ ಕೊನೆಯ ಸ್ವರಕ್ಕೆ ಬಹುಳವಾಗಿ ಲೋಪವು ಬರುವುದು.**

**ಉದಾಹರಣೆ ||** ಕೀಲ, ಕೀಲ್; ಮೀನ, ಮೀನ್; ಕೀರ, ಕೀರ್; ನೀರ, ನೀರ್; ಕೂರ, ಕೂರ್ || ಇವೇ ಇದಕ್ಕೆ ಲಕ್ಷ್ಯಗಳು. ಇಲ್ಲಿ ಬಹುಳಗ್ರಹಣಮಾಡಿರುವುದರಿಂದ ಕ್ವಚಿತ್ 'ಕೂಲ' ಶಬ್ದಕ್ಕೂ ಲೋಪವು ಬಂದು 'ಕೂಲ್' ಎಂದಾಗುವುದು.

**ವಿಚಾರ ೧೪೪**

ಈ ಸೂತ್ರದಲ್ಲಿ — 'ಲುಪ್, ಕೀಲಮೀನಕೀರನೀರಕೂರಸ್ಯ' ಎಂದು ಎರಡು ಪದಗಳಿರುವುವು. 'ಲುಪ್' ಎಂದರೆ ಉಚ್ಚಾರಪ್ರಸಕ್ತವಾದ ವರ್ಣಕ್ಕೆ ಉಚ್ಚಾರಣೆ ಮಾಡದಿರುವುದು ಇದೇ ಅರ್ಥವು — 'ಅದರ್ಶನಂ ಲೋಪಃ' ಎಂಬ **ಪಾಣಿನಿ** ಸೂತ್ರದಿಂದ ಬೋಧಿತವಾಗುವುದು. ಕೀಲಾದಿಗಳೇ ಇಲ್ಲಿ ಉದ್ದೇಶ್ಯಗಳು. ಇದು ಸ್ಥಾನಷಷ್ಠ್ಯಂತವಾದುದರಿಂದ — 'ಷಷ್ಠ್ಯಾಃಸ್ಥಾನೇಽಂತ್ಯಸ್ಯ' ಎಂಬ ಪರಿಭಾಷೆಯಿಂದ ಇಲ್ಲಿ ವಿಧೀಯಮಾನ ಲೋಪವು ಇವುಗಳ ಅಂತವರ್ಣವಾದ ಅ ಕಾರಕ್ಕೆ ಬರುವುದೆಂದು ತಿಳಿಯಬೇಕು. 'ಬಹುಳಂ' ಎಂಬುದೂ ಸಂಬಂಧಿಸಲ್ಪಡುವುದು. ಆದುದರಿಂದ—ಕೀಲಾದಿ ಶಬ್ದಗಳ ಅಂತ್ಯವರ್ಣಕ್ಕೆ ಬಹುಳವಾಗಿ ಲೋಪವು ಬರುವುದೆಂದು ಸೂತ್ರಾರ್ಥವಾಗಲು 'ಕೀಲ್' ಮೊದಲಾದ ರೂಪಗಳು ಸಿದ್ಧಿಸುವುವು. ಇಲ್ಲಿ ಬಹುಳಗ್ರಹಣದಿಂದ ಸಾಧಿತವಾದ 'ಕೂಲ್' ಎಂಬುದು ಪ್ರತಿಮಾದಿಗಳಲ್ಲಿ ದಾರ್ಢ್ಯಾರ್ಥವಾಗಿ ಮಾಡುವ ಪೀಠರಂಧ್ರಪ್ರವೇಶ್ಯಭಾಗವಾಚಕವಾದ ಕೂಲಶಬ್ದ ಸ್ಥಾನಿಕವೆಂದು ತಿಳಿಯಬೇಕು. ನದೀ ಕೂಲಾದಿವಾಚಕಕ್ಕಾದರೋ ಭಾಷೆಯಲ್ಲಿ 'ಕೂಲ್' ಎಂದು ಪ್ರಯೋಗವಿಲ್ಲವಾದುದರಿಂದ ಅದಕ್ಕೆ ಈ ಲೋಪವು ಬರುವುದಿಲ್ಲವೆಂದು ತಿಳಿಯಬೇಕು.

**ದರ್ಪಣಕಾರನು** ಈ ವಿಷಯದಲ್ಲಿ ಸಾಮಾನ್ಯವಾಗಿ —

**ಅಂತ್ಯಸ್ಥಲಸ್ವರಕ್ಕೊರ್ಮೆ ಲೋಪಮುಂ ಸಂಭವಿಕುಂ (ಸೂತ್ರ ೨೭೯)** :

ಎಂದು ಹೇಳಿ — ' ಕೀಲಂ, ಕೀಲ್; ಕೋಣಂ, ಕೋಣ್; ಪ್ರಮಾಣಂ, ಪವಣ್; ಮುಕುಳಂ, ಮುಗುಳ್ ' ಮೊದಲಾದುವನ್ನು ಸಾಧಿಸಿರುವನು. ಇವನ ಮತದಲ್ಲಿ ಇಂತಹ ಪ್ರಯೋಗಗಳು ಅತಿ ವಿರಳವಾದುದರಿಂದ ಸೂತ್ರದಲ್ಲಿ ಸ್ಪಷ್ಟವಾಗಿ ಉಚ್ಚರಿಸಲ್ಪಟ್ಟಿಲ್ಲವೆಂದು ಬಹುಳಗ್ರಹಣದಿಂದ ಸಾಧಿಸಿಕೊಳ್ಳಬೇಕು. ಹೀಗೆಯೇ **ಶಾಸನ—ದರ್ಪಣಕಾರ**ರಿಗೆ ಈ ತದ್ಭವ ಪ್ರಕರಣದಲ್ಲಿ ತಾತ್ಪರ್ಯವನ್ನು ಕಲ್ಪಿಸಿಕೊಂಡು ಉಪಪತ್ತಿಯನ್ನು ಹೇಳಬೇಕು.

**ಅವತಾರಿಕೆ ೧೪೯**

ಹೀಗೆಯೇ ವ್ಯಂಜನಕ್ಕೆ ಕೆಲವೆಡೆ ಲೋಪವನ್ನು ವಿಧಿಸುತ್ತಾನೆ.

**ಸೂತ್ರಂ || ಸ್ಥಿ || ೧೪೯ ||**

**ಅರ್ಥ || ಸ ಕಾರಕ್ಕೆ ಥ ಕಾರವು ಪರವಾಗಿರಲು ಬಹುಳವಾಗಿ ಲೋಪವು ಬರುವುದು.**

**ಉದಾಹರಣೆ ||** ಸಂಸ್ಥೆ, ಸಂತೆ; ಸ್ಥಾನ, ತಾಣ[1]; ಸ್ಥಿತಿ, ತಿತಿ; ಸ್ಥಣ್ಡಿಲ, ತಂಡಿಲ; ಅವಸ್ಥೆ, ಅವತೆ || ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೧೪೯**

ಈ ಸೂತ್ರದಲ್ಲಿ ' ಸಃ, ಥಿ ' ಎಂದು ಎರಡು ಪದಗಳಿರುವುವು. ' ಸಃ ' ಎಂಬುದು ಸ್ಥಾನ ಷಷ್ಠ್ಯಂತಪದವು. ' ಥಿ ' ಎಂಬುದು ನಿಮಿತ್ತಸಪ್ತಮ್ಯಂತಪದವು. ಪೂರ್ವಸೂತ್ರದಿಂದ ' ಲುಪ್, ಬಹುಳಂ ' ಎಂಬೀ ಪದಗಳು ಅನುವರ್ತಿಸಲ್ಪಡುವುವು. ತಥಾಚ ಥ ಕಾರಪರಕ ಸ ಕಾರಕ್ಕೆ ಲಕ್ಷ್ಯಾನುಸಾರವಾಗಿ ಆದಿಮಧ್ಯಾವಸಾನಗಳಲ್ಲಿ ಲೋಪವು ಬರುವುದೆಂದು ಸೂತ್ರಾರ್ಥವಾಗುವುದರಿಂದ ' ಸಂತೆ ' ಮೊದಲಾದುವು ಸಿದ್ಧಿಸುವುವು.

ಈ ಸೂತ್ರವು ಏಕಪದವಿಷಯಕವು. ಎಲ್ಲಿ ಸ್ಥಾನಿನಿಮಿತ್ತಗಳು ಭಿನ್ನಪದಗಳಲ್ಲಿರುವುವೋ ಅಲ್ಲಿ ಲೋಪವಿಲ್ಲ. ' ಅಪ್ಸುಸ್ಥಿತನಂ, ಸರಸ್ಥೋಟಂ ' ಎಂಬಲ್ಲಿ ಲೋಪಮಾಡಲಾಗದು.

**ಅವತಾರಿಕೆ ೧೫೦**

ಹೀಗೆಯೇ ಕೆಲವು ಶಬ್ದಗಳಲ್ಲಿ ಲೋಪವು ಅವ್ಯವಸ್ಥಿತವಾಗಿ ಬರುವುದೆಂದು ಅಂತಹ ಶಬ್ದಗಳನ್ನೇ ಸಂಗ್ರಹಿಸಿ ಗಣಪಾಠಮಾಡಿ ಹೇಳುತ್ತಾನೆ.

**ಸೂತ್ರಂ || ಸ್ಪರ್ಶಾದಿಷು || ೧೫೦ ||**

**ಅರ್ಥ || ಸ್ಪರ್ಶಾದಿ ಗಣಪಠಿತಗಳಾದ ಶಬ್ದಗಳಲ್ಲಿರುವ ಸ ಕಾರಕ್ಕೆ ಬಹುಳವಾಗಿ ಲೋಪವು ಬರುವುದೆಂದರೆ ಯಾವ ವ್ಯಂಜನವು ಪರವಾಗಿದ್ದರೂ ಬರುವುದೆಂದು ತಿಳಿಯಬೇಕು.**

**ಉದಾಹರಣೆ ||** ಸ್ಪರ್ಶ, ಪರುಸ; ಸ್ಫಟಿಕ, ಪಟಿಕ; ಸ್ಫಿಕ್ಕೆ, ಹಿಕ್ಕೆ; ಸ್ತುತಿ, ತುತಿ || ಮೊದಲಾದುವು ಇದಕ್ಕೆ ಲಕ್ಷ್ಯಗಳು. ಸ್ಪರ್ಶಾದಿಗಣಗಳಾವುವೆಂದರೆ — ' ಸ್ಪರ್ಶ, ಸ್ಫಟಿಕ, ಸ್ಫೋಟಿಕ, ಸ್ಫಿಕ್ಕಾ, ಸ್ಖಾಲನ, ಸ್ಪನ್ದನ, ಸ್ಕನ್ದ, ಸ್ಕನ್ದನ, ಸ್ತಮ್ಭ, ಸ್ತಮ್ಭನ, ಸ್ತೋಭ, ಸ್ತೋಭನ,

ಪಾಠಾಂತರ : ೧ ತಾನ

ಸ್ತುತಿ, ಸ್ತವನ, ಸ್ತಿಮಿತ, ಸ್ತೋಮ, ಸ್ರವ, ಸ್ಫುರಣ, ಸ್ಮರಣ, ಸ್ಫಾರ ' ಮೊದಲಾದುವು. ಇದೂ ಆಕೃತಿಗಣವೆಂದು ತಿಳಿಯುವುದು.

**ವಿಚಾರ ೧೫೦**

ಈ ಸೂತ್ರದಲ್ಲಿ — ' ಸ್ಪರ್ಶಾದಿಷು ' ಎಂದು ಒಂದೇ ಪದವಿರುವುದು ಪೂರ್ವಸೂತ್ರ ದಿಂದ ' ಸಃ, ಲುಪ್, ಬಹುಳಂ ' ಎಂದು ಪದತ್ರಯವು ಅನುವರ್ತಿಸಲ್ಪಡುವುದು. ' ಸ್ಪರ್ಶಾದಿಷು ' ಎಂಬುದು ಅಧಿಕರಣ ಸಪ್ತಮ್ಯಂತವು. ಆದಿ ಪದವು ಗಣಪಾಠ ಸೂಚಕವು. ಬಹುವಚನವು ಆಕೃತಿಗಣ ಸೂಚಕವು. ತಥಾಚ — ಸ್ಪರ್ಶಾದಿ ಗಣಪಠಿತಶಬ್ದಗಳಲ್ಲಿರುವ ಸ ಕಾರಕ್ಕೆ ಯಥಾ ಸಂಭವವಾಗಿ ಲೋಪವು ಬರುವುದೆಂದು ಸೂತ್ರಾರ್ಥವಾಗುವುದರಿಂದ ' ಪರುಸ, ಪಟಕ ' ಮೊದಲಾದ ಶಬ್ದಗಳು ಸಿದ್ಧಿಸುವುವು. ಆಕೃತಿಗಣವಾದುದರಿಂದ ಇಲ್ಲಿ ಅಪಠಿತವಾದ ಶಬ್ದಗಳಲ್ಲಿ ಸ ಕಾರಕ್ಕೆ ಲೋಪವನ್ನು ಮಾಡಿ ಮಹಾಕವಿಗಳು ಪ್ರಯೋಗಿಸಿದ್ದರೆ ಅವನ್ನೂ ಇಲ್ಲಿ ಪಾಠ ಮಾಡಿಕೊಳ್ಳಬೇಕೆಂದು ತಿಳಿಯಬೇಕು.

**ಅವತಾರಿಕೆ ೧೫೧**

ಇದುವರೆಗೂ ಸ ಕಾರಕ್ಕೆ ವ್ಯಂಜನವು ಪರದಲ್ಲಿರುವಾಗ ಲೋಪವು ವಿಧಿಸಲ್ಪಟ್ಟಿತು. ಸ ಕಾರದ ಮುಂದಿನ ವ ಕಾರಕ್ಕೆ ವರ್ಣಸಾಮಾನ್ಯವೂ ಪರದಲ್ಲಿರುವಾಗ ಲೋಪವನ್ನು ವಿಧಿಸುತ್ತಾನೆ.

**ಸೂತ್ರಂ || ಸೋ ವಃ || ೧೫೧ ||**

**ಅರ್ಥ || ಸ ಕಾರದ ಮುಂದಿನ ವ ಕಾರಕ್ಕೆ ಬಹುಳವಾಗಿ ಲೋಪವು ಬರುವುದು.**

**ಉದಾಹರಣೆ ||** ಸ್ವರ್ಗ್ಗ, ಸಗ್ಗ; ಸ್ವಾಮಿ, ಸಾಮಿ; ಸ್ವಯಂಭೂ, ಸಯಂಬು; ಸ್ವಭೂ, ಸಬು; ಸ್ವರ, ಸರ, ತಪಸ್ವಿ, ತಪಸಿ; ಶ್ವಾನ, ಸೋನ;[1] ಶ್ವೇತ, ಸೇತ; ಶಾಶ್ವತ, ಸಾಸತ; ಈಶ್ವರ, ಈಸರ; ಪರಿಷ್ವಙ್ಗ, ಪರಿಸಂಗ; ಅಭಿಷ್ವಙ್ಗ, ಅಪಿಸಂಗ || ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೧೫೧**

ಈ ಸೂತ್ರದಲ್ಲಿ — ' ಸಃ, ವಃ ' ಎಂದು ಎರಡು ಪದಗಳಿರುವುವು, ' ಸಃ ' ಎಂಬುದು ನಿಮಿತ್ತಪಂಚಮ್ಯಂತವು. ಆದುದರಿಂದ ' ಉತ್ತರಸ್ಯ ' ಎಂದು ಲಬ್ಧವಾಗುವುದು. ಅದು ಸ್ಥಾನ ಷಷ್ಠ್ಯಂತವಾದ ' ವಃ ' ಎಂಬುದಕ್ಕೆ ವಿಶೇಷಣವು. ಪೂರ್ವಸೂತ್ರದಿಂದ ' ಲುಪ್, ಬಹುಳಂ ' ಎಂಬೆರಡು ಪದಗಳು ಅನುವರ್ತಿಸಲ್ಪಡುವುವು. ತಥಾಚ — ಸ ಕಾರದ ವ ಕಾರಕ್ಕೆ ಲಕ್ಷ್ಯಾನು ಸಾರವಾಗಿ ಲೋಪವು ಬರುವುದೆಂದು ಸೂತ್ರಾರ್ಥವಾಗುವುದರಿಂದ ' ಸಗ್ಗ ' ಮೊದಲಾದುವು ಸಿದ್ಧಿಸುವುವು. ಇಲ್ಲಿ ' ಸ್ವರ್ಗ್ಗ ' ಎಂಬುದು ಸಂಸ್ಕೃತಮತದಲ್ಲಿ ದ್ವಿತ್ವವಿಶಿಷ್ಟವಾದ ಗ ಕಾರವಿರು ವುದರಿಂದ ಅದರ ವ ಕಾರಕ್ಕೆ ಲೋಪವನ್ನು ಮಾಡಿ ಅನಂತರದಲ್ಲಿ ರೇಫಕ್ಕೂ ಲೋಪವನ್ನು ಮಾಡಲು ' ಸಗ್ಗ ' ಎಂದು ದ್ವಿ ಗ ಕಾರಕ ಶಬ್ದವು ನಿಷ್ಪನ್ನವಾಗುವುದು. ಸಂಸ್ಕೃತದಲ್ಲಿ ದ್ವಿತ್ವವು ವಿಕಲ್ಪವಾಗಿದ್ದರೂ ಪ್ರಯೋಗಾನುಸಾರವಾಗಿ ದ್ವಿತ್ವವಿಶಿಷ್ಟವಾದುದನ್ನೇ ಇದಕ್ಕೆ ಲಕ್ಷ್ಯವಾಗಿ

---

ಪಾಠಾಂತರ : ೧ ಸಾನ

ತೆಗೆದುಕೊಳ್ಳತಕ್ಕದ್ದು. ಅಥವಾ ವ ಕಾರ ಲೋಪಾನಂತರದಲ್ಲಿ ಏಕದೇಶವಿಕೃತವಾದುದೂ ತದ್ವವೆಂದು ಅಂಗೀಕರಿಸಿರುವುದರಿಂದ 'ಸಗ್ಗ' ಎಂಬುದು ಭಾಷಾ ಶಬ್ದವೆಂದು ತಿಳಿದು — 'ರೋ ದ್ವಿರ್ವ್ಯಂಜನಸ್ಯಾಹಾದೇಃ' ‖ ೬೫ ‖ ಎಂಬ ಸೂತ್ರದಿಂದ ದ್ವಿತ್ವವನ್ನು ಮಾಡಿ ಅನಂತರದಲ್ಲಿ ರೇಫಕ್ಕೆ ಲೋಪವನ್ನು ಮಾಡಲು 'ಸಗ್ಗ' ಎಂದಾಗುವುದೆಂದು ತಿಳಿಯಬೇಕು. ಇಲ್ಲಿ — '**ನಿಮಿತ್ತಸ್ಯಾಪಾಯೇ ನೈಮಿತ್ತಿಕಸ್ಯಾಪ್ಯಪಾಯಃ**' ಎಂಬ ನ್ಯಾಯವು ಲೋಕದಲ್ಲಿ ನಿಮಿತ್ತಭೂತವಾದ ತಂದೆಯು ಮೃತನಾಗಲು ಪುತ್ರನಿಗೆ ಮರಣವು ದೃಷ್ಟವಿಲ್ಲವಾದುದರಿಂದ ಸಾರ್ವತ್ರಿಕವಲ್ಲವೆಂದು ತಿಳಿಯುವುದು. ಹೀಗೆಯೇ ದ್ವಿತ್ವವಿಶಿಷ್ಟಗಳಾದ ಶಬ್ದಗಳ ವಿಷಯದಲ್ಲೆಲ್ಲಾ ಊಹಿಸಿಕೊಳ್ಳಬೇಕು.

ಇಲ್ಲಿ ನಿಮಿತ್ತವಾದ ಸ ಕಾರವು ಅಹಿತಾನಾಹಿತ ಸಾಧಾರಣವೆಂದು — ವ್ಯಾಖ್ಯಾನಪರಿಭಾಷೆಯಿಂದ ತಿಳಿಯಬೇಕು. ಆದುದರಿಂದ 'ಶ್ವೇತ, ಶಾಶ್ವತ, ಈಶ್ವರ, ಅಭಿಷ್ವಙ್ಗ, ಪರಿಷ್ವಙ್ಗ' ಮೊದಲಾದ ಶಬ್ದಗಳಲ್ಲಿ ಯತ್ನಾಂತರವನ್ನು ಮಾಡದಿದ್ದರೂ — '**ಶಷೋರ್ವಾ ಸಃ**' ಎಂಬ ಸೂತ್ರದಿಂದ ಶ ಕಾರ ಷ ಕಾರಗಳಿಗೆ ಸ ಕಾರಾದೇಶವನ್ನು ಮಾಡಿ ಅನಂತರದಲ್ಲಿ ಸ ಕಾರದ ಮುಂದಿನ ವ ಕಾರಕ್ಕೆ ಇದರಿಂದ ಲೋಪವು ಬರುವುದೆಂದು ತಿಳಿಯಬೇಕು.

**ಅವತಾರಿಕೆ ೧೫೩**

ಹೀಗೆಯೇ ಶಬ್ದಾಂತರಸ್ಥ ಧ ಕಾರಕ್ಕೆ ಲೋಪವನ್ನು ವಿಧಿಸುತ್ತಾನೆ.

**ಸೂತ್ರಂ ‖ ಧೋ ವಿನ್ಧ್ಯವನ್ಧ್ಯಾಸನ್ಧ್ಯಾಧ್ಯಾನೇ ‖ ೧೫೩ ‖**

**ಅರ್ಥ ‖ ವಿನ್ಧ್ಯ, ವನ್ಧ್ಯಾ, ಸನ್ಧ್ಯಾ, ಧ್ಯಾನ ಈ ಶಬ್ದಗಳಲ್ಲಿರುವ ಧ ಕಾರಕ್ಕೆ ಬಹುಳವಾಗಿ ಲೋಪವು ಬರುವುದು.**

**ಉದಾಹರಣೆ ‖** ವಿನ್ಧ್ಯ, ಬಿಂಜ; ವನ್ಧ್ಯಾ, ಬಂಜೆ; ಸನ್ಧ್ಯಾ, ಸಂಜೆ; ಧ್ಯಾನ, ಜಾನ ‖ ಮೊದಲಾದುವು ಇದಕ್ಕೆ ಲಕ್ಷ್ಯಗಳು. ಇವುಗಳಲ್ಲಿ ಯಥಾಲಕ್ಷಣವಾಗಿ ಕಾರ್ಯಾಂತರಗಳನ್ನು ಊಹಿಸಿಕೊಳ್ಳುವುದು.

**ವಿಚಾರ ೧೫೩**

ಈ ಸೂತ್ರದಲ್ಲಿ — 'ಧಃ, ವಿನ್ಧ್ಯವನ್ಧ್ಯಾಸನ್ಧ್ಯಾಧ್ಯಾನೇ' ಎಂದು ಎರಡು ಪದಗಳಿರುವುವು. ಪೂರ್ವಸೂತ್ರದಿಂದ 'ಲುಪ್, ಬಹುಳಂ' ಎಂಬ ಎರಡು ಪದಗಳು ಅನುವರ್ತಿಸಲ್ಪಡುವುವು. ತಥಾಚ — 'ವಿನ್ಧ್ಯಾದಿ' ಶಬ್ದಗತ ಧ ಕಾರಕ್ಕೆ ಲಕ್ಷ್ಯಾನುಸಾರವಾಗಿ ಲೋಪವು ಬರುವುದೆಂದು ಸೂತ್ರಾರ್ಥವಾಗಲು 'ಬಿಂಜ' ಮೊದಲಾದುವು ಸಿದ್ಧಿಸುವುವು.

ಈ ವಿಷಯದಲ್ಲಿ **ದರ್ಪಣಕಾರನು** —

> ವ್ಯವಹರಿಕುಂ ಲೋಪಂ ದ್ಯೂ
> ತ ವಿಂಧ್ಯ ವಂಧ್ಯಾಪ್ರಶಸ್ತಸಂಧ್ಯಾ ಧ್ಯಾನ
> ಪ್ರವಿದಿತ ದ ಧ ಕಾರಂಗ
> ಳ್ಗವಶಿಷ್ಟ ಯ ಕಾರಮಂತೆ ಜತ್ವಮುನಾಳ್ಗುಂ (**ಸೂತ್ರ** ೨೬೦)

ಎಂಬ ಸೂತ್ರವನ್ನು ಹೇಳಿ ಅದರಲ್ಲಿದ್ದ ದ-ಧ ಕಾರಕ್ಕೆ ಲೋಪವನ್ನು ವಿಧಿಸಿ ಯ ಕಾರಕ್ಕೆ ಜತ್ವವನ್ನೂ ವಿಧಿಸಿ 'ಜೂದು' ಮೊದಲಾದುವನ್ನು ಸಾಧಿಸಿರುವನು. ಆದರೆ ಇಲ್ಲಿ – '**ಯೋ ಜಃ ‖ ೧೯೦ ‖**'

ಎಂಬ ಸೂತ್ರವನ್ನು ಬೇರೆ ಮಾಡಿರುವುದರಿಂದಲೇ ಜ ಕಾರಾದೇಶವು ಸಿದ್ಧವಾಗುವುದೆಂದು ತಿಳಿಯಬೇಕು. ದ ಕಾರಕ್ಕೆ ಲೋಪವನ್ನು ವಿಶಿಷ್ಯವಾಗಿ ಹೇಳದಿದ್ದರೂ ಕರಂಬಾದಿಪಾಠದಿಂದಾಗಲಿ ಬಹುಳಗ್ರಹಣದಿಂದಾಗಲಿ ಸಿದ್ಧಿಸುವುದೆಂದು ತಿಳಿಯಬೇಕು.

**ಅವತಾರಿಕೆ ೧೫೩**

ಹೀಗೆಯೇ ಸಂಯುಕ್ತಾಕ್ಷರದ ರೇಫಕ್ಕೆ ಲೋಪವನ್ನು ವಿಧಿಸುತ್ತಾನೆ.

**ಸೂತ್ರಂ || ರೋ ವ್ಯಂಜನೇ || ೧೫೩ ||**

**ಅರ್ಥ || ವ್ಯಂಜನವು ಪರದಲ್ಲಿರುವಾಗ ರೇಫಕ್ಕೆ ಬಹುಳವಾಗಿ ಲೋಪವು ಬರುವುದು.**

**ಉದಾಹರಣೆ ||** ವರ್ಗ, ವಗ್ಗ; ದುರ್ಗ, ದುಗ್ಗ; ವರ್ತಿ, ಬತ್ತಿ; ಕರ್ತರಿ, ಕತ್ತರಿ; ಮರ್ಕಟ, ಮಕ್ಕಡ || ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೧೫೩**

ಈ ಸೂತ್ರದಲ್ಲಿ — ' ರಃ, ವ್ಯಂಜನೇ ' ಎಂದು ಎರಡು ಪದಗಳಿರುವುವು. ಪೂರ್ವದಿಂದ ' ಲುಪ್, ಬಹುಳಂ ' ಎಂಬಿವು ಅನುವರ್ತಿಸಲ್ಪಡುವುವು. ' ರಃ ' ಎಂಬುದು ಸ್ಥಾನಷಷ್ಠ್ಯಂತವು. ' ವ್ಯಂಜನೇ ' ಎಂಬುದು ಪರನಿಮಿತ್ತಸಪ್ತಮ್ಯಂತವು. ಆದುದರಿಂದ ವ್ಯಂಜನವು ಪರವಾಗಿರಲು ರೇಫಕ್ಕೆ ಲಕ್ಷ್ಯಾನುಸಾರವಾಗಿ ಲೋಪವು ಬರುವುದು — ಎಂದು ಸೂತ್ರಾರ್ಥವಾಗಲು ' ವಗ್ಗ ' ಮೊದಲಾದ ರೂಪಗಳು ಸಿದ್ಧಿಸುವುವು. ಇಲ್ಲಿ ' ವ್ಯಂಜನೇ ' ಎಂದು ಹೇಳಿರುವುದರಿಂದ — ' ರತ್ನಂ, ರಾಶಿ ' ಮೊದಲಾದ ಶಬ್ದಗಳಲ್ಲಿ ಸ್ವರಪರಕವಾದ ರೇಫಕ್ಕೆ ಲೋಪವು ಬರುವುದಿಲ್ಲವೆಂದು ತಿಳಿಯಬೇಕು.

ಇಲ್ಲಿ **ದರ್ಪಣಕಾರನೂ** —

ನೆಗಱ್ಗುಂ ದ್ವಿತ್ವಾಗ್ರದ ರೇ
ಫೆಗೆ ಲೋಪಂ ವರ್ಣಮಿಶ್ರರೇಫಕ್ಕಂ ತಾಂ
ನೆಗಟ್ಗುಂ ಲೋಪಂ ಬಹುಳದೆ
ನೆಗಟ್ಗುಂ ವೃತರೇಫಮಡಿಯೊಳಾ ವರ್ಣದ **ಪೋಲ್ ( ಸೂತ್ರ ೨೬೧ )**

ಎಂಬ ಸೂತ್ರವನ್ನು ಹೇಳಿ — **' ಪೂರ್ವಶ್ಚ ವ್ಯಂಜನಾತ್ '** ಎಂಬ ಮುಂದಿನ ಸೂತ್ರದ ಅರ್ಥವನ್ನು ಸಂಗ್ರಹಿಸಿ ಇಲ್ಲಿ ದ್ವಿತ್ವವು ಕೆಲವೆಡೆಯಲ್ಲಿ ಬರುವುದೆಂದು ಸೂಚಿಸಿ ' ಬಬ್ಬರಂ, ಸಬ್ಬಂ ' ಮೊದಲಾಗಿ ಉದಾಹರಿಸಿರುವನು.

**ಅವತಾರಿಕೆ ೧೫೪**

ಪೂರ್ವದಲ್ಲಿ ವ್ಯಂಜನಪರಕವಾದ ರೇಫಕ್ಕೆ ಲೋಪವು ವಿಧಿಸಲ್ಪಟ್ಟಿತು. ಈಗ ವ್ಯಂಜನದ ಮುಂದಿನ ರೇಫಕ್ಕೆ ಲೋಪವೂ ಪೂರ್ವವರ್ಣಾದೇಶವೂ ವಿಧಿಸಲ್ಪಡುವುದು.

**ಸೂತ್ರಂ || ಪೂರ್ವಶ್ಚ ವ್ಯಂಜನಾತ್ || ೧೫೪ ||**

**ಅರ್ಥ || ವ್ಯಂಜನದ ಮುಂದಿನ ರೇಫಕ್ಕೆ ಲೋಪವೂ ಪೂರ್ವವರ್ಣಾದೇಶವೂ ಬಹುಳವಾಗಿ ಬರುವುದು.**

**ಉದಾಹರಣೆ ||** ದ್ರೋಣಿ, ದೋಣಿ; ಕ್ರೇಣಿ, ಕೇಣಿ; ಶ್ರೇಣಿ, ಸೇಣಿ; ಶ್ರೋಣಿ, ಸೋಣಿ; ಚಂದ್ರ, ಚಂದ; ಪ್ರಭು, ಹಬು; ಪ್ರಸರ, ಹಸರ; ಮುದ್ರಿಕೆ, ಮುದ್ದಿಗೆ; ನಿದ್ರೆ, ನಿದ್ದೆ; ಪತ್ರಿಕೆ, ಹತ್ತಿಗೆ; ವೇತ್ರ, ಬೆತ್ತ; ವಪ್ರ, ಬಪ್ಪ || ಮೊದಲಾದುವು ಲಕ್ಷ್ಯಗಳಾಗಿರುವುವು.

**ವಿಚಾರ ೧೫೪**

ಈ ಸೂತ್ರದಲ್ಲಿ — ' ಪೂರ್ವಃ, ಚ, ವ್ಯಂಜನಾತ್ ' ಎಂದು ಮೂರು ಪದಗಳಿರುವುವು. ಪೂರ್ವಸೂತ್ರದಿಂದ 'ರಃ, ಲುಪ್, ಬಹುಳಂ ' ಎಂಬ ಮೂರು ಪದಗಳು ಅನುವರ್ತಿಸಲ್ಪಡುವುವು. ' ಪೂರ್ವಃ ' ಎಂದರೆ ಇಲ್ಲಿ ಉದ್ದೇಶ್ಯವಾದ ರೇಫಕ್ಕೆ ಪೂರ್ವದಲ್ಲಿರುವ ವರ್ಣವೆಂದರ್ಥವು. ಚ ಕಾರವು ಪೂರ್ವವರ್ಣಾದೇಶಲೋಪಗಳಿಗೆ ಪರ್ಯಾಯತ್ವವನ್ನು ಬೋಧಿಸುವುದು. ' ವ್ಯಂಜನಾತ್ ' ಎಂಬುದು ಪೂರ್ವನಿಮಿತ್ತಪಂಚಮ್ಯಂತಪದವು. ತಥಾಚ — ವ್ಯಂಜನದ ಮುಂದಿನ ರೇಫಕ್ಕೆ ಲೋಪವೂ ಪೂರ್ವವರ್ಣಾದೇಶವೂ ಯಥಾಸಂಭವವಾಗಿ ಬರುವುದು ಎಂದು ಸೂತ್ರಾರ್ಥವಾಗುವುದರಿಂದ ' ದೋಣಿ, ಚಿತ್ತ ' ಮೊದಲಾದುವು ಸಿದ್ಧಿಸುವುವು.

**ಅವತಾರಿಕೆ ೧೫೫**

ಷ ಕಾರಕ್ಕೆ ಲೋಪವನ್ನೂ ಪೂರ್ವವರ್ಣಾದೇಶವನ್ನೂ ವಿಧಿಸುತ್ತಾನೆ.

**ಸೂತ್ರಂ || ಷಃ ಕಃ || ೧೫೫ ||**

**ಅರ್ಥ || ಕ ಕಾರದ ಮುಂದಿನ ಷ ಕಾರಕ್ಕೆ ಲೋಪವೂ ಪೂರ್ವವರ್ಣಾದೇಶವೂ ಬಹುಳವಾಗಿ ಬರುವುದು.**

**ಉದಾಹರಣೆ ||** ಕ್ಷಾರ, ಕಾರ; ಕ್ಷೀರ, ಕೀರ; ಭೈಕ್ಷ, ಬೈಕೆ[೧]; ದೀಕ್ಷೆ, ದೀಕೆ; ಕ್ಷೇಪಣ, ಕೇವಣ; ರಕ್ಷೆ, ರಕ್ಕೆ; ಅಕ್ಷರ, ಅಕ್ಕರ; ಭಿಕ್ಷೆ, ಬಿಕ್ಕೆ; ಲಕ್ಷಣ, ಲಕ್ಕಣ; ಪಕ್ಷ, ಪಕ್ಕ || ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೧೫೫**

ಈ ಸೂತ್ರದಲ್ಲಿ 'ಷಃ, ಕಃ' ಎಂದು ಎರಡು ಪದಗಳಿರುವುವು. ಪೂರ್ವಸೂತ್ರದಿಂದ ' ಲುಪ್, ಪೂರ್ವಃ, ಬಹುಳಂ ' ಎಂಬ ಮೂರು ಪದಗಳು ಅನುವರ್ತಿಸಲ್ಪಡುವುವು. ' ಷಃ ' ಎಂಬುದು ಸ್ಥಾನಷಷ್ಠ್ಯಂತವು. ' ಕಃ ' ಎಂಬುದು ಪಂಚಮ್ಯಂತ ಪದವು. ತಥಾಚ — ಕ ಕಾರದ ದೆಸೆಯಿಂದ ಪರದಲ್ಲಿರುವ ಷ ಕಾರಕ್ಕೆ ಲೋಪವೂ ಪೂರ್ವವರ್ಣಾದೇಶವೂ ಯಥಾಸಂಭವವಾಗಿ ಬರುವುದೆಂದು ಸೂತ್ರಾರ್ಥವಾಗುವುದರಿಂದ ' ಕಾರ, ರಕ್ಕೆ ' ಮೊದಲಾದುವು ಸಿದ್ಧಿಸುವುವು.

**ದರ್ಪಣಕಾರ**ನು ಇಲ್ಲಿ—

ದ್ವಿತ್ವಂ ಬೆರಸಿದ ಕತ್ವಂ
ಚತ್ವಂ ಖತ್ವಂ ಯಥಾಪ್ರಯೋಗದಿನಕ್ಕುಂ
ಕ್ಷತ್ವಕ್ಕೆ ಬಹುಳದಿಂದಂ
ಸತ್ವಂ ಕತ್ವಂ ದ್ವಿರುಕ್ತಿಯಿಲ್ಲರೆ ಎಡೆಯೊಳ್ (ಸೂತ್ರ ೨೬೨)

ಎಂಬ ಸೂತ್ರದಿಂದ ಕೆಲವೆಡೆಗಳಲ್ಲಿ ' ಕ್ಷ ' ಎಂಬುದಕ್ಕೆ ದ್ವಿತ್ವಂ ಬೆರಸಿದ ' ಕ ಕಾರಮುಂ, ಚ ಕಾರಮುಂ, ಖ ಕಾರಮುಂ ' ಪ್ರಯೋಗಾನುಸಾರವಾಗಿ ಬರುವುವು, ಎಂದು ಹೇಳಿ, ಆ ಕ್ಷ ಕಾರಕ್ಕೆ ಕ ಕಾರವೂ ಬರುವುದುಂಟೆಂದು ಹೇಳಿ ' ರಕ್ಕೆ, ಅಚ್ಚಿ, ಪಖ್ಖಿಳಂ, ಸವಣಂ ' ಮೊದಲಾದುವನ್ನು ಉದಾಹರಿಸಿರುವನು.

---

ಪಾಠಾಂತರ : ೧. ಬೈಕ

**ಅವತಾರಿಕೆ ೧೫೬**

ಪೂರ್ವದಲ್ಲಿ ವ್ಯಂಜನಕ್ಕೆ ವ್ಯಂಜನಾದೇಶವೂ ಲೋಪವೂ ವಿಧಿಸಲ್ಪಟ್ಟಿತು. ಈಗ ಕೆಲವು ಸ್ವರಕ್ಕೆ ಆದೇಶವನ್ನು ವಿಧಿಸುತ್ತಾನೆ.

**ಸೂತ್ರಂ || ಹ್ರಸ್ವಃ ಸ್ವರಾಣಾಮಾದೇಃ || ೧೫೬ ||**

**ಅರ್ಥ ||** ಸ್ವರಗಳ ಮಧ್ಯದಲ್ಲಿ ಆದಿಭೂತವಾದ ಸ್ವರಕ್ಕೆ ಬಹುಳವಾಗಿ ಹ್ರಸ್ವಾದೇಶವು ಬರುವುದು.

**ಉದಾಹರಣೆ ||** ಸಾಕ್ಷಿ, ಸಕ್ಕಿ; ಪ್ರೇಕ್ಷಣ, ಪೆಕ್ಕಣ; ಕಾಞ್ಚೀ, ಕಂಚಿ; ರಾಕ್ಷಸ, ರಕ್ಕಸ; ಕಾಣ್ಡಪಟ, ಕಂಡಪಟ; ಕಾರ್ಯ, ಕಜ್ಜ; ಆರ್ಯ, ಅಜ್ಜ || ಮೊದಲಾದ ಶಬ್ದಗಳು ಇದಕ್ಕೆ ಲಕ್ಷ್ಯಗಳು.

**ವಿಚಾರ ೧೫೬**

ಈ ಸೂತ್ರದಲ್ಲಿ — 'ಹ್ರಸ್ವಃ, ಸ್ವರಾಣಾಂ, ಆದೇಃ' ಎಂದು ಮೂರು ಪದಗಳಿರುವುವು. 'ಬಹುಳಂ' ಎಂಬುದು ಅನುವರ್ತಿಸಲ್ಪಡುವುದು. 'ಹ್ರಸ್ವಃ' ಎಂಬುದು ಹ್ರಸ್ವಸಂಜ್ಞಕವಾದ ಏಕಮಾತ್ರಕಸ್ವರಬೋಧಕವಾದ ವಿಧೇಯವಾಚಕಪದವು. 'ಸ್ವರಾಣಾಂ' ಎಂಬುದು ನಿರ್ಧಾರಣ ಷಷ್ಠ್ಯಂತಪದವು. 'ಆದೇಃ' ಎಂಬುದು ಆ ಸ್ವರಗಳ ಮಧ್ಯದಲ್ಲಿ ಮೊದಲನೆಯದು ಆವುದೋ ಅದನ್ನು ಬೋಧಿಸುವುದು. ಅದು ಅರ್ಥಾತ್ ಸ್ವರವೇ ಆಗಿರುವುದು. ಇಲ್ಲಿ ವರ್ಣಮಾಲೆಯಲ್ಲಿ ಹೇಳಿರುವ ಪಾಠಕ್ರಮದಲ್ಲಿ ಮೊದಲನೆಯ ಸ್ವರವೆಂದರ್ಥವಲ್ಲ, ಉದ್ದೇಶ್ಯಪದಗತ ಸ್ವರಗಳ ಮಧ್ಯದಲ್ಲಿ ಮೊದಲನೆಯ ಸ್ವರವೆಂದು ತಿಳಿಯಬೇಕು. ಆ ಸ್ವರವು ಹ್ರಸ್ವಕ್ಕೆ ಉದ್ದೇಶ್ಯವಾಗಿರುವುದರಿಂದ ದೀರ್ಘವಾಗಿರಬೇಕೆಂದು ಹೇಳಬೇಕು. ತಥಾಚ — ಉದ್ದೇಶ್ಯಪದಗತಸ್ವರಗಳ ಮಧ್ಯದಲ್ಲಿ ಮೊದಲನೆಯ ದೀರ್ಘಸ್ವರಕ್ಕೆ ಹ್ರಸ್ವಾದೇಶವು ಯಥಾಲಕ್ಷ್ಯವಾಗಿ ಬರುವುದೆಂದು ಸೂತ್ರಾರ್ಥವಾಗುವುದರಿಂದ 'ಸಕ್ಕಿ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು. ಇಲ್ಲಿ 'ಸ್ವರಾಣಾಮಾದೇಃ' ಎಂದು ಹೇಳಿರುವುದರಿಂದ ವ್ಯಂಜನಾದಿಗಳಲ್ಲಿಯೂ ಪ್ರವರ್ತಿಸುವುದು.

**ಅವತಾರಿಕೆ ೧೫೭**

ಸ್ವರಗಳ ಮಧ್ಯದಲ್ಲಿ ಆದಿಭೂತವಾದ ಉ ಕಾರಕ್ಕೆ ಆದೇಶವನ್ನು ವಿಧಿಸುತ್ತಾನೆ.

**ಸೂತ್ರಂ || ಒದುತಃ || ೧೫೭ ||**

**ಅರ್ಥ ||** ಸ್ವರಗಳ ಮಧ್ಯದಲ್ಲಿ ಮೊದಲನೆಯದಾದ ಉ ಕಾರಕ್ಕೆ ಒ ಕಾರಾದೇಶವು ಬಹುಳವಾಗಿ ಬರುವುದು.

**ಉದಾಹರಣೆ ||** ಕುಣ್ಡ, ಕೊಂಡ; ಕುನ್ತ, ಕೊಂತ; ತುವರಿ, ತೊವರಿ[1]; ಭುಜಙ್ಗ, ಬೊಜಂಗ; ಸುಖ, ಸೊಗ; ಸುಭಗ, ಸೊಬಗ || ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೧೫೭**

ಈ ಸೂತ್ರದಲ್ಲಿ — 'ಒತ್, ಉತಃ' ಎಂದು ಎರಡು ಪದಗಳಿರುವುವು. ಪೂರ್ವಸೂತ್ರದಿಂದ 'ಸ್ವರಾಣಾಂ, ಆದೇಃ, ಬಹುಳಂ' ಎಂದು ಮೂರು ಪದಗಳು ಅನುವರ್ತಿಸಲ್ಪಡುವುವು.

---

ಪಾಠಾಂತರ : ೧. ತೊಗರಿ

' ಒತ್ ' ಎಂಬುದು ಹ್ರಸ್ವ ಒ ಕಾರಬೋಧಕವು. ' ಉತಃ ' ಎಂದು ತ ಪರಕರಣದಿಂದ ಉ ಕಾರ ಮಾತ್ರವೇ ಇಲ್ಲಿ ಸ್ಥಾನಿಯೆಂದು ತಿಳಿಯಬೇಕು. ಇದಕ್ಕೆ ' ಸ್ವರಾಣಾಮಾದೇಃ ' ಎಂಬುದು ವಿಶೇಷಣವು. ಆದುದರಿಂದ ಸ್ವರಗಳ ಮಧ್ಯದಲ್ಲಿ ಆದಿಭೂತವಾದ ಉ ಕಾರಸ್ಥಾನದಲ್ಲಿ ಹ್ರಸ್ವವಾದ ಒ ಕಾರಾದೇಶವು ಬಹುಳವಾಗಿ ಬರುವುದೆಂದು ಸೂತ್ರಾರ್ಥವಾಗುವುದು. ಇದರಿಂದ — ' ಕೊಂಡ, ತೊಬರಿ ' ಮೊದಲಾದ ಶಬ್ದಗಳು ಸಿದ್ಧಿಸುವುವು.

ಇಲ್ಲಿ **ದರ್ಪಣಕಾರನು** —

ಪದವಾದಿಯುವರ್ಣಕ್ಕಾ
ತ್ವದತ್ವದೆಡೆಗೊತ್ವಮುಂ ಪೊದಟ್ಟೋತ್ವಮುಮು
ಪ್ಪುದು ಸೈಕಲ್ಪಕದಿಂ ಶ
ಬ್ದಾದಿದೀರ್ಘಕ್ಕೆ ಹಿರಿದುಮುಕ್ಕುಂ ಹ್ರಸ್ವಂ ( ಸೂತ್ರ ೨೬೨ )

ಎಂಬ ಸೂತ್ರದಿಂದ ' ಉ, ಊ, ಓ, ಅ ' ಎಂಬಿವಕ್ಕೆ ಹ್ರಸ್ವೋತ್ವವನ್ನೂ ದೀರ್ಘೋತ್ವವನ್ನೂ ವಿಧಿಸಿ — ' ಕೊಂತ, ಗೋರಂಟೆ, ಕೋಟು, ಮೋಡಂ, ಸೂರಟಂ, ಕೋವಣಂ, ಸೂಸ್ಕೆ, ಮೋರಂ ' ಮೊದಲಾದುವನ್ನು ಸಾಧಿಸಿರುವನು. ಮತ್ತು ಹ್ರಸ್ವಾದೇಶವನ್ನು ವಿಧಿಸಿ ಪೂರ್ವ ಸೂತ್ರದ ಅರ್ಥವನ್ನೂ ಸಂಗ್ರಹಿಸಿ ' ಕಜ್ಜಂ ' ಮೊದಲಾದುವನ್ನು ಉದಾಹರಿಸಿರುವನು. ಇವೆಲ್ಲಾ ಕರಂಬಾದಿಗಳಾದುದರಿಂದ ಇಲ್ಲಿ ಅವನ್ನೂ ಬಿಟ್ಟು ಹ್ರಸ್ವಕ್ಕೆ ಮಾತ್ರ ಉದಾಹರಣೆಗಳನ್ನು ಕೊಟ್ಟಿದೆ ಎಂದು ತಿಳಿಯುವುದು.

**ಅವತಾರಿಕೆ ೧೫೯**

ಹೀಗೆಯೇ ಸ್ವರಾಂತರಕ್ಕೆ ಆದೇಶಾಂತರವನ್ನು ವಿಧಿಸುತ್ತಾನೆ.

**ಸೂತ್ರಂ || ಇದೃತಃ || ೧೫೯ ||**

**ಅರ್ಥ || ಸ್ವರಗಳ ಮಧ್ಯದಲ್ಲಿ ಆದಿಭೂತವಾದ ಋ ಕಾರದ ಸ್ಥಾನದಲ್ಲಿ ಇ ಕಾರಾದೇಶವು ಬಹುಳವಾಗಿ ಬರುವುದು.**

**ಉದಾಹರಣೆ ||** ತೃಣ, ತಿಣ; ವೃಢ, ದಿಡ; ಭೃಙ್ಗ, ಬಿಂಗ; ಶೃಙ್ಗ, ಸಿಂಗ; ಕೃಷ್ಣ, ಕಿಷ್ಣ;[೧] ಮೃಗ, ಮಿಗ || ಮೊದಲಾದುವು ಇವಕ್ಕೆ ಲಕ್ಷ್ಯಗಳು.

**ವಿಚಾರ ೧೫೯**

**ಈ** ಸೂತ್ರದಲ್ಲಿ — ' ಇತ್, ಋತಃ ' ಎಂದು ಎರಡು ಪದಗಳಿರುವುವು. ಪೂರ್ವದಿಂದ ' ಸ್ವರಾಣಾಂ, ಆದೇಃ, ಬಹುಳಂ ' ಎಂದು ಮೂರು ಪದಗಳು ಅನುವರ್ತಿಸಲ್ಪಡುವುವು. ' ಇತ್ ' ಎಂಬುದು ವಿಧೇಯವು. 'ಋತಃ' ಎಂಬುದು ಸ್ಥಾನಷಷ್ಠ್ಯಂತವು, ಇದಕ್ಕೆ ' ಸ್ವರಾಣಾಮಾದೇಃ ' ಎಂಬುದು ವಿಶೇಷಣವು. ತಥಾಚ — ಸ್ವರಗಳ ಮಧ್ಯದಲ್ಲಿ ಆದಿಭೂತವಾದ ಋ ಕಾರದ ಸ್ಥಾನದಲ್ಲಿ ಬಹುಳವಾಗಿ ಇ ಕಾರಾದೇಶವು ಬರುವುದೆಂದು ಸೂತ್ರಾರ್ಥವಾಗುವುದರಿಂದ ' ತಿಣ ' ಮೊದಲಾದುವು ಸಿದ್ಧಿಸುವುವು. ಇಲ್ಲಿಯೂ ಪೂರ್ವದಂತೆ ' ಸ್ವರಾಣಾಮಾದೇಃ ' ಎಂದು ಹೇಳಿರುವುದರಿಂದ ' ಅಮೃತ, ಪ್ರಕೃತಿ, ಪ್ರಾಕೃತ, ಸರೀಸೃಪ ' ಮೊದಲಾದುವುಗಳಲ್ಲಿ ಮಧ್ಯಗತವಾದ ಋ ಕಾರಕ್ಕೆ ಈ ಆದೇಶವಿಲ್ಲವೆಂದು ತಿಳಿಯಬೇಕು.

ಪಾಠಾಂತರ : ೧. ಕಿಸ್ನ

**ಅವತಾರಿಕೆ ೧೫೯**

ಹೀಗೆಯೇ ಪದಾದಿಯಾದ ಋ ಕಾರಕ್ಕೆ ಆದೇಶಾಂತರವನ್ನು ವಿಧಿಸುತ್ತಾನೆ.

**ಸೂತ್ರಂ || ರಿರನುತ್ತರಸ್ಯ || ೧೫೯ ||**

**ಅರ್ಥ ||** ಆವ ವರ್ಣಕ್ಕೂ ಪರದಲ್ಲಿಲ್ಲದ ಎಂದರೆ ಪದದ ಮೊದಲಲ್ಲಿರುವ ಋ ಕಾರದ ಸ್ಥಾನದಲ್ಲಿ ' ರಿ ' ಎಂಬಾದೇಶವು ಬಹುಳವಾಗಿ ಬರುವುದು.

**ಉದಾಹರಣೆ ||** ಋಷಿ, ರಿಸಿ; ಋಣ, ರಿಣ; ಋತು, ರಿತು; ಋದ್ಧಿ, ರಿದ್ಧಿ; ಋಷಭ, ರಿಸಬ || ಮೊದಲಾದ ಋ ಕಾರಾದಿಪದಗಳು ಇದಕ್ಕೆ ಲಕ್ಷ್ಯಗಳು.

**ವಿಚಾರ ೧೫೯**

ಈ ಸೂತ್ರದಲ್ಲಿ — ' ರಿಃ, ಅನುತ್ತರಸ್ಯ ' ಎಂದು ಎರಡು ಪದಗಳಿರುವುವು. ' ಋತಃ, ಬಹುಳಂ ' ಎಂದು ಅನುವರ್ತಿತವಾಗುವುವು. ' ರಿಃ ' ಎಂಬುದು ಇ ಕಾರ ವಿಶಿಷ್ಟವಾದ ರೇಫ ವು ವಿಧೇಯವಾಚಕಪದವು. ' ಅನುತ್ತರಸ್ಯ ' ಎಂಬುದು ' ನ ಉತ್ತರಸ್ಯ ' ಎಂದು ವಿಗ್ರಹ ವನ್ನು ಮಾಡಿ ತತ್ಪುರುಷ ಸಮಾಸವನ್ನಂಗೀಕರಿಸುವುದರಿಂದ ಯಾವ ವರ್ಣಕ್ಕೂ 'ಉತ್ತರದಲ್ಲಿಲ್ಲದ' ಎಂದರೆ 'ತಾನೇ ಆದಿಯಾಗಿರುವ' ಎಂದರ್ಥವಾಗುವುದು. ಇದು ಅನುವರ್ತಮಾನವಾದ 'ಋತಃ' ಎಂಬುದಕ್ಕೆ ವಿಶೇಷಣವು. ಇದು ಸ್ಥಾನಷಷ್ಠ್ಯಂತವು. ಆದುದರಿಂದ ಆವ ವರ್ಣಕ್ಕೂ ಪರದಲ್ಲಿಲ್ಲದ ಋ ಕಾರಕ್ಕೆ ಬಹುಳವಾಗಿ ' ರಿ ' ಎಂಬಾದೇಶವು ಬರುವುದೆಂದು ಸೂತ್ರಾರ್ಥವಾಗುವುದು. ಇದರಿಂದ ' ರಿಸಿ ' ಮೊದಲಾದುವು ಸಿದ್ಧಿಸುವುವು.

ಇಲ್ಲಿ **ದರ್ಪಣಕಾರನು** ಸಾಮಾನ್ಯವಾಗಿ ಪದದ ಮೊದಲಿರುವ ಋ ಕಾರಕ್ಕೆ ಇ ಕಾರವೂ ಎ ಕಾರವೂ ಅ ಕಾರವೂ ಬಹುಳವಾಗಿ ಉ ಕಾರವೂ ಬರುವುವೆಂದು —

ಪದದಾದಿಯ ಋತ್ವಕ್ಕಿ
ತ್ವದತ್ವದತ್ವದ ವಿಧಾನಮುತ್ವಂ ಬಹುಳಂ
ವುದಿದಿಕ್ಕುರ್ಗಮವ್ಯತಶಬ್ದಾಂ
ತದಲ್ಲಿಯುಂ ಬೃಷ್ಟ ಶಬ್ದದಂತೆ ರೇಫಂ (ಸೂತ್ರ ೨೬೮)

ಎಂಬ ಸೂತ್ರದಿಂದ ಸೂಚಿಸಿ ' ರಿತು, ಪೆರ್ಪಂ, ಬಸವ, ಅಮುರ್ದು, ಮುದ್ದಿಗೆ ' ಮೊದಲಾದು ವನ್ನು ಉದಾಹರಿಸಿರುವನು. ಇಲ್ಲಿ ಋತ್ವಕ್ಕೆ ಇತ್ವವೆಂದು ಹೇಳಿ ' ರಿಸಿ, ರಿತು ' ಎಂದು ಉದಾಹರಣೆಯನ್ನು ಕೊಟ್ಟಿರುವುದು ಅಸಂಗತವು. ಏಕೆಂದರೆ ' ಋಷಿ ' ಶಬ್ದದ ಋ ಕಾರ ಸ್ಥಾನದಲ್ಲಿ ಇ ಕಾರಾದೇಶವನ್ನು ಮಾಡಲು — ' ತೃಣ ' ಶಬ್ದದಲ್ಲಿ ಬಂದು ' ತಿಣ ' ಎಂದು ಆಗುವಂತೆ ' ಇಸಿ, ಇತು ' ಮೊದಲಾದ ರೂಪಗಳು ಆಗುವುವು. ಆದುದರಿಂದ ' ರಿಸಿ, ರಿತು ' ಮೊದಲಾದುವು **ದರ್ಪಣಕಾರನ** ಮತದಲ್ಲಿ ಸಿದ್ಧಿಸುವುದಿಲ್ಲ. **ಶಾಸನಕಾರನ** ಮತದಲ್ಲಾದರೋ ' ಇ, ರಿ ' ಎಂದು ಬೇರೆ ಬೇರೆ ಹೇಳಿರುವುದರಿಂದ ಎರಡು ರೂಪಗಳೂ ಸಿದ್ಧಿಸುವುವು. ಆದಾಗ್ಯೂ **ದರ್ಪಣಕಾರನ** ಮತದಲ್ಲಿ ಬಹುಳಗ್ರಹಣದಿಂದ ಕ್ವಚಿತ್ ಋ ಕಾರಕ್ಕೇ ಇ ಕಾರಾದೇಶವೆಂದೂ ಕ್ವಚಿತ್ ಋ ಕಾರದ ಸ್ವರಭಾಗಕ್ಕೆ ಬುದ್ಧಿಯಿಂದ ವಿಭಾಗ ಮಾಡಿಕೊಂಡು ಅಷ್ಟಕ್ಕೇ ಇ ಕಾರಾ ದೇಶವೆಂದೂ ವ್ಯವಸ್ಥೆ ಮಾಡಿಕೊಳ್ಳಬೇಕು. ಅಥವಾ ಬಹುಳಗ್ರಹಣದಿಂದ ಕ್ವಚಿತ್ ರೇಫ ವಿಶಿಷ್ಟಾದೇಶವೇ ವಿಧಿಸಲ್ಪಡುವುವೆಂದು ತಿಳಿದು ಲಕ್ಷ್ಯಸಿದ್ಧಿಯನ್ನು **ಮಾಡಬೇಕು.**

**ಅವತಾರಿಕೆ ೧೬೦**

ಇದುವರೆಗೂ ಲಕ್ಷ್ಯಬಾಹುಳ್ಯವನ್ನುದ್ದೇಶಿಸಿ ಲಕ್ಷಣಗಳನ್ನು ಕಲ್ಪಿಸಿ ಕೆಲವು ಕಾರ್ಯಗಳನ್ನು ಹೇಳಿ ಈಗ ಒಂದೊಂದು ಲಕ್ಷ್ಯವು ಒಂದೊಂದು ಬಗೆಯಾಗಿರುವುದರಿಂದ ಅವುಗಳಿಗೆ ಸಾಮಾನ್ಯವಾಗಿ ಲಕ್ಷಣಗಳನ್ನು ಮಾಡುವುದು ಅಶಕ್ಯವೆಂದು ಅಂತಹ ಲಕ್ಷ್ಯಗಳನ್ನೆಲ್ಲಾ ಸಂಗ್ರಹಿಸಿ ಗಣಪಾಠಮಾಡಿ ಕೆಲವು ಕಾರ್ಯಾಂತರಗಳನ್ನು ನಿಪಾತಮಾಡಿ ಹೇಳುತ್ತಾನೆ.

**ಸೂತ್ರಂ || ಕರಮ್ಬಾದಯಃ || ೧೬೦ ||**

**ಅರ್ಥ || ಕರಂಬಾದಿ ಗಣಪಠಿತಗಳಾದ ಶಬ್ದಗಳು ಕರಂಬಾದಿಗಳಿಗೆ ಬಹುಳವಾಗಿ ನಿಪಾತನ ಮಾಡಲ್ಪಟ್ಟವೆ.**

**ಉದಾಹರಣೆ ||** 'ಕದಮ್ಬ, ಕರಂಬ'-ಇಲ್ಲಿ ದ ಕಾರಕ್ಕೆ ರೇಫಾದೇಶವೂ, 'ಅಪ್ಸರಸ್, ಅಚ್ಚರಸೆ' ಇಲ್ಲಿ ಪ ಕಾರ ಸ ಕಾರಗಳಿಗೆ ದ್ವಿ ಚ ಕಾರಾದೇಶವೂ ಅಂತ್ಯ ಸ ಕಾರಕ್ಕೆ ಎ ಕಾರಾಗಮವೂ, 'ಗಹನ, ಗಾನ' ಇಲ್ಲಿ ಮೊದಲನೆಯ ಅ ಕಾರಕ್ಕೆ ದೀರ್ಘವೂ ಹ ಶಬ್ದಕ್ಕೆ ಲೋಪವೂ, 'ಪ್ರಗ್ರಹ, ಹಗ್ಗ' ಇಲ್ಲ ಪ್ರ ಶಬ್ದಕ್ಕೆ ಲೋಪವೂ ರೇಫಕ್ಕೆ ಪೂರ್ವರೂಪವೂ ಹ ಕಾರ ಗ ಕಾರಗಳಿಗೆ ವಿಪರ್ಯಾಸವೂ ನಿಪಾತನೆ ಮಾಡಲ್ಪಟ್ಟಿವೆ. ಹೀಗೆಯೇ ಮುಂದೆ ಹೇಳುವ ಗಣಪಠಿತಶಬ್ದಗಳ ವಿಷಯದಲ್ಲಿಯೂ ಯಥಾಯೋಗ್ಯವಾಗಿ ವರ್ಣಾಗಮ, ವರ್ಣವಿಕಾರ, ವರ್ಣಾದರ್ಶನ, ವರ್ಣವಿಪರ್ಯಾಸ ಇವುಗಳಿಂದ ವ್ಯುತ್ಪತ್ತಿಯನ್ನು ಬಹುಳವಾಗಿ ಹೇಳಿಕೊಳ್ಳಬೇಕೆಂದು ತಿಳಿಯಬೇಕು. ಕರಂಬಾದಿಗಣಪಠಿತಗಳಾದ ಶಬ್ದಗಳಾವುವೆಂದರೆ — ತುಲಸಿ, ತೊಳಚಿ; ಕಾಂಸ್ಯ, ಕಂಚು; ನರ್ತಕಿ, ನಚ್ಚಣಿ; ವತ್ಸಲಾ, ಬಚ್ಚಳೆ; ಸಿತ್ಯ, ಸಿಚ್ಚ; ಕುಹಕ, ಕುಯಕ; ಸಿಂಹ, ಸಿಂಗ; ಸಂನಾಹ, ಸನ್ನಣ; ಶುಕ್ತಿ, ಸುತ್ತಿ; ಯುಕ್ತಿ, ಜುತ್ತಿ; ವಿಸ್ತಾರ, ಬಿತ್ತರ; ಕಸ್ತೂರಿ, ಕತ್ತುರಿ; ಪುಸ್ತಕ, ಹೊತ್ತಗೆ; ಕುಸ್ತುಮ್ಬುರು, ಕೊತ್ತುಂಬರಿ[೧]; ಗುಪ್ತ, ಗುತ್ತ; ಚಿಹ್ನ, ಚಿನ್ನ; ಪುಷ್ಕರಿಣಿ, ಹೊಕ್ಕರಿಣೆ[೨]; ಮಸ್ಕರಿ, ಮಕ್ಕರಿ; ಶಷ್ಕುಲಿ, ಚಕ್ಕುಲಿ; ಉತ್ಪಟ, ಉತ್ತಡ; ಉತ್ಪಾಟ, ಉಬ್ಬಟೆ; ರತ್ನ, ರನ್ನ; ಕರ್ಣಾಟ, ಕನ್ನಡ; ಉನ್ಮತ್ತ, ಉಮ್ಮತ್ತ; ಉಜ್ಜ್ವಲ, ಉಜ್ಜಳ; ಪ್ರಜ್ವಲ, ಪಜ್ಜಳ; ಬಿಲ್ವಪತ್ರ, ಬೆಲ್ಲವತ್ತ; ಸತ್ವಕ, ಸತ್ತುಗೆ[೩]; ಅನ್ಯಾಯೆ, ಅನ್ನೆಯ[೪]; ಕನ್ಯಕಾ, ಕನ್ನಿಕೆ; ಪಲ್ಯಯನ, (ಪಲ್ಯಾಣ), ಪಲ್ಲಣ; ಮೃತ್ಯು, ಮಿತ್ತು (ಮಿಟ್ಟು); ಕಾವ್ಯ, ಕಬ್ಬ; ಲೇಪ್ಯ, ಲೆಪ್ಪ; ಅಗ್ನಿ, ಅಗ್ಗಿ[೫]; ಲಾಗ್ನಿಕ, ಲಗ್ಗಿಗ; ಪಾದುಕಾ, ಹಾವುಗೆ[೬]; ಗದಾ, ಗಜೆ; ದನ್ತ, ಜಂತ; ಮದನ, ಮಯಣ; ಪವ, ಪಯ; ಯಶೋದಾ, ಜಸೋಯೆ; ಅಮರಿ, ಅವರೆ; ದಂಷ್ಟ್ರಾ, ದಾಡೆ; ಕಾಹಳ, ಕಾಳೆ; ಹೃಷ್ಟ, ಹೆಟ್ಟ; ಹೃದಯ, ಹಿದಯ (ಎರ್ದೆ); ಶೃಙ್ಖಲಾ, ಸಂಕಲೆ; ಕೃತಕ, ಗತಕ; ಪ್ರಾಕೃತ, ಪಾಗದ; ಸಂಸ್ಕೃತ, ಸಕ್ಕದ; ಪ್ರಾಕಾರ, ಪಾಗರ (ಪಾಕಲ್); ಅಮೃತ, ಅಮರ್ದು; ಮೃದ್ವೀಕಾ, ಮಿದ್ದಿಗೆ; ಅಙ್ಗುಷ್ಠ, ಉಂಗುಟ; ತ್ವರಿತ, ತುರಿಹ; ವಿಜ್ಞಾಪನ, ಬಿನ್ನಹ; ಸಂಜ್ಞಾ, ಸನ್ನೆ; ಶೂನ್ಯ, ಸೊನ್ನೆ; ಯಜ್ಞ, ಜನ್ನ; ಜ್ಯೋತ್ಸ್ನಾ, ಜೊನ್ನ; ಆಜ್ಞಾ, ಆಣೆ; ಕುಕ್ಕುಟ, ಕೋಟಿ; ಕುಮಾರ, ಕೋರ (ಕುವರ); ಮಯೂರ, ಮೋರ; ಕುರಣ್ಟ, ಗೋರಂಟಿ[೭]; ಮೂಷ, ಮೋಡ; ಕೂಟ,

ಪಾಠಾಂತರ : ೧. ಕೊತ್ತುಂಬುರಿ; ೨. ಒಕ್ಕರಣೆ; ೩. ಸತ್ತುಕ; ೪. ಅನ್ನಯ; ೫. ಹಗ್ಗಿ; ೬. ಪಾವುಗೆ; ೭. ಗೋರಟಿ

ಕೋಡು; ಸೌರಾಷ್ಟ್ರ, ಸೊರಟ; ಸೌಭಾಗ್ಯ, ಸೊಬಗು; ಕ್ರೌಞ್ಚ, ಕೊಂಚೆ; ಕೌಪೀನ, ಕೋವಣ; ವ್ಯಾಘ್ರ, ಬಗ್ಗ; ತಾತ, ತಂದೆ; ತೀಕ್ಷ್ಣ, ತಿಕ್ಕ; ವಿನಾಯಕ, ಬೆನಕ; ಚೇಲ, ಸೇಲೆ; ಶೀಲಾ, ಸೀಲೆ; ಶಿಲಾ, ಸಿಲೆ[1]; ನಿಯಮ, ನೇಮ; ಜಟಾ, ಜಡೆ; ಶಯ್ಯಾ, ಸೆಜ್ಜೆ; ವ್ಯಞ್ಜನ, ಬೆಂಜನ; ವ್ಯತಿರೇಕ, ಬೆತಿರೇಕ; ವ್ಯಥಾ, ಬೆತೆ; ವ್ಯವಹಾರ, ಬೇಹಾರ; ಸೈನ್ಧವ, ಸಂದವ; ವೈದ್ಯ, ಬೆಜ್ಜ; ವೈಶಾಖ, ಬೇಸಗೆ; ವೈರ, ಬೇರ; ಹಿಙ್ಗು, ಇಂಗು; ಸಿನ್ದೂರ, ಸಂದುರ[2]; ದಿವಸ, ದೆವಸ; ದಿಶಾ, ದೆಸೆ; ದುಕೂಲ, ದುಗುಲ; ಆಕಾಶ, ಆಗಸ; ಶಲಾಕಾ, ಸಲಗೆ; ತಾಮ್ಬೂಲ, ತಂಬುಲ; ಆರಾಮ, ಆರವೆ; ವಿಲಾಸ, ಬಿಲಸ; ಬನ್ಧೂಕ, ಬಂದುಗೆ; ಗೋಧೂಮ, ಗೋದುವೆ; ಬರ್ಬೂರ, ಬೊಬ್ಬುಲಿ; ಕೂರ್ಪಾಸ, ಕುಪ್ಪಸ; ಶ್ಮಶಾನ, ಮಸಣ; ಪ್ರಯಾಣ, ಪಯಣ; ಅಶೋಕ, ಅಸುಗೆ; ಕಠೋರ, ಕಟುರ; ಉದ್ಯೋಗ, ಉಜ್ಜುಗ; ಉದ್ಯಾಪನ, ಉಜ್ಜವಣೆ; ಆಯುಷ್ಯ, ಆಯುಸ[3]; ಜ್ಯೋತಿಷ, ಜೋಯಿಸ; ಮಾನುಷ, ಮಾನಿಸ; ಆಲೇಖ, ಅಳಕೆ; ರಸಾಯನ, ರಸಯಣ; ಸಾಹಸ, ಸಾಸ; ಸಹಜ, ಸಾಜ; ವಾಹಳಿ, ವಾಳಿ; ಮಹಿಮನ್, ಮಹಿಮೆ (ಮೈಮೆ); ಬಾಹ್ಯಾಳಿ, ವೈಯಾಳಿ; ಯಮುನಾ, ಜಗುನೆ; ಜಲೂಕಾ, ಜಿಗುಳೆ; ಶೀಕರ, ಸೀವರ; ಅಧ್ಯಕ್ಷ, ಅದಿಕ; ಉತ್ಕಟ, ಉಗ್ಗಡ; ಅಗಸ್ತ್ಯ, ಅಗಸೆ; ಸಙ್ಘಾತ, ಸಂಗಡ; ಖನಿ, ಕಣಿ; ಸ್ಥಾನ, ತಾಣ; ಪಿಶುನ, ಪಿಸುಣ; ವಿಜ್ಞಾನ, ಬಿನ್ನಣ; ನರ್ತನ, ನಚ್ಚಣ; ಶುನಕ, ಸೊಣಗ; ಕುಸುಮ್ಭ, ಕುಸುಂಬೆ[4]; ಧೂಮ, ದೂವೆ; ಕಮ್ಬಲ, ಕಂಬಳಿ; ಪಾಟಲಾ, ಪಾದರಿ; ಅರ್ಗಲ, ಅಗುಳಿ; ಕುದ್ದಾಲ, ಗುದ್ದಲಿ; ಕಾಚ, ಗಾಜು; ಅಕ್ಷ, ಅಚ್ಚು; ಅಕ್ಷಿ, ಅಚ್ಚಿ; ಲಕ್ಷ್ಮೀ, ಲಚ್ಚಿ; ದಾಮನ್, ದಾವು; ದ್ಯೂತ, ಜೂದು; ಪಿಷ್ಟ, ಹಿಟ್ಟು (ಪಿಟ್ಟು); ಆಶ್ಚರ್ಯ, ಅಚ್ಚರಿ; ಕಪಿಞ್ಜಲ, ಕವಿಂಜು; ಗ್ರಹಣ, ಗರಣ; ಗ್ರಾಮೀಣ, ಗಾವಿಲ; ದ್ವೀಪ, ದೀವಿ; ದ್ವಾರಪಟ್ಟ, ದಾರವಟ್ಟ; ಧ್ವನಿ, ದನಿ; ಜ್ವರ, ಜರ; ಸ್ನುಷಾ, ಸೊಸೆ; ಸಸ್ಯ, ಸಸಿ; ಆಲಸ್ಯ, ಅಲಸು; ಮಾಣಿಕ್ಯ, ಮಾಣಿಕ; ನ್ಯಾಸ, ನೂಸ; ನ್ಯಾಯ, ನಾಯ; ರಾಜನ್, ರಾಯ; ಕುಟಜ, ಕೊಡಸಿಗೆ; ಲಾಮಜ್ಜಕ, ಲಾಮಂಚ; ಮುಞ್ಜ, ನೊಪೆ ( ಮೊದೆ ); ವಲ್ಲಭ, ಬಲ್ಲಹ; ಕುಠಾರ, ಕೊಡಲಿ; ವರ್ಧಕಿ, ಬಡಗಿ; ವಿದ್ಯಾ, ಬಿಜ್ಜೆ; ಕಾಷ್ಠ, ಕಡ್ಡಿ; ನಿಷ್ಠಾ, ನಿಟ್ಟೆ; ಗೋಷ್ಠಿ, ಗೊಟ್ಟಿ; ಕೋಷ್ಠ, ಕೊಟ್ಟ; ಮಂಜಿಷ್ಠಾ, ಮಂಜಿಟಿಗೆ ( ಮಂಜಿಟಿಗೆ ); ಪ್ರತಿಷ್ಠಾ, ಹದಿಟೆ (ಹದಿಡೆ); ಜ್ಯೇಷ್ಠಾ, ಜಟ್ಟಿ; ಸೃಷ್ಟಿ, ಸಿಟ್ಟಿ (ಸುಟ್ಟಿ); ಕಷ್ಟ, ಕಟ್ಟ; ಮುಷ್ಟಿಕಾ, ಮುಟ್ಟಿಗೆ; ಇಷ್ಟಕಾ, ಇಟ್ಟಿಗೆ; ದಾಡಿಮ, ದಾಳಿಂಬ; ಕೂಷ್ಮಾಣ್ಡ, ಕುಂಬಳ; ಮರ್ಕಟ, ಮಂಕಡ; ಕ್ರಮುಕ, ಕವುಂಗು; ಲಾಞ್ಛನ, ಲಚ್ಚಣ; ಉಜ್ಜಯಿನೀ, ಉಜ್ಜನಿ[5]; ನಿರೂಪ, ನಿರವ; ಪ್ರಸಾಧನ, ಹಸದನ; ಉತ್ತರೀಯ, ಉತ್ತರಿಗೆ; ವರ್ಧಮಾನ, ಬದ್ದವಣ; ಆಟರೂಷ, ಆಡಸೋಗೆ; ಮರುವಕ, ಮರುಗ; ಖದಿರ, ಕೈರ; [6]ಶ್ರೀಯ, ಸಯ; ವಕ್ರ, ವಂಕ; ಪಾನೀಯ, ಪಾಣಿಯ; ಕಣ್ಟಕ, ಕಂಟಯ; ಪ್ರಾಣ, ಹರಣ[7]; ತ್ರಾಸ, ತರಸ; ಮುಖ, ಮೊಗ; ಯುಗ, ನೊಗ; ಮತ್ಸ್ಯ, ಮಚ್ಚ; ಸ್ವಚ್ಛ, ಸೊಚ್ಚ; ವಿಚ್ಛನ್ದ, ಬಿಚ್ಚಂದ; ಛುರಿಕಾ, ಸುರಿಗೆ; ಘಟಿಕಾ, ಗಳಿಗೆ; ವೀಟಿಕಾ, ವೀಳೆಯ; ಘುಟಿಕಾ, ಗುಳಿಗೆ; ಪೇಟಿಕಾ, ಪೇಳಿಗೆ; ತುರಮ್ಬ,

ಪಾಠಾಂತರ : ೧. ಸಿಲೆ; ೨. ಸಿಂದುರ; ೩. ಆಯಿಸ; ೪. ಕುಸುಬೆ; ೫. ಉಜ್ಜೆಣಿ; ೬. ಶ್ರೀ, ಸೀಯ; ೭. ಪರಣ

ತುರುಂಬು; ಮೂತ, ಮೂಡೆ; ಸನ್ಧಿ, ಸಂದು; ಗ್ರನ್ಥಿ, ಗಂಟು; ಮಾನ್ಯತಾ, ಮನ್ನಣೆ; ಸ್ಫೋಟಕ, ಪೋಳಿಗೆ; ಸ್ಫಟಿಕ, ಪಳಿಕು; ರಘಟಾ, ರಗಳೆ; ಲಾಮ್ಪಟ್ಯ, ಲಂಪಳಿಗೆ[1]; ಬ್ರಹ್ಮ, ಬೊಮ್ಮ, (ಬಮ್ಮ); ಪ್ರಮಾಣ, ಪವಣ್; ಮುಕುಲ, ಮುಗುಳ್; ಶುಲ್ಬ, ಸುಲ್; ಕೂರ, ಕೂಟ್; ಪ್ರತಿಪತ್, ಪಾಡಿವ; ದ್ವಿತೀಯಾ, ಬಿದಿಗೆ; ತೃತೀಯಾ, ತದಿಗೆ; ಚತುರ್ಥೀ, ಚೌತಿ; ಪಞ್ಚಮೀ, ಪಂಚಮಿ; ಷಷ್ಠೀ, ಚಟ್ಟಿ; ಸಪ್ತಮೀ, ಸತ್ತಮಿ; ಅಷ್ಟಮೀ, ಅಟ್ಟಮಿ; ನವಮೀ, ನೌಮಿ; ದಶಮೀ, ದಸಮಿ; ಏಕಾದಶೀ, ಏಯಾರಸಿ; ದ್ವಾದಶೀ, ಬಾರಸಿ[2]; ತ್ರಯೋದಶೀ, ತೇರಸಿ; ಚತುರ್ದಶೀ, ಚೌದಸಿ; ಪೌರ್ಣಮಾಸೀ[3], ಹುಣ್ಣಿಮೆ, (ಪುಣ್ಣಮೆ); ಅಮಾವಾಸ್ಯಾ, ಅಮಸೆ || ಮೊದಲಾದುವು. ಇವುಗಳಲ್ಲಿ ಪ್ರಯೋಗಾನುಸಾರವಾಗಿ ಕಾರ್ಯಗಳನ್ನು ಊಹಿಸಿಕೊಳ್ಳುವುದು. ಇದೂ ಆಕೃತಿಗಣವಾದುದರಿಂದ ಇನ್ನೂ ಕೆಲವು ಎಂದರೆ—' ಲಕ್ಷ್ಮೀ, ಲಕುಮಿ; ಲಕ್ಷ್ಮಣ, ಲಕುಮಣ; ವ್ಯಾಧಿ, ಬಿಯದಿ; ವ್ಯಾಧ, ಬಿಯದ; ವ್ಯಾಳ, ಬಿಯಳ; ವ್ಯಾಸಙ್ಗ, ಬಿಯಸಂಗ; ಝಞ್ಝಾ, ಜಂಜು; ಛತ್ರಿಕಾ, ಸತ್ತಿಗೆ; ಮಠಿಕಾ, ಮಟಿಗೆ; ಪೀಠಿಕಾ, ಪೀಟಿಗೆ; ಪಾಠೀನ, ಪಾಟೀಲ್; ಮಾಠರ, ಮಾಟರ; ಗಾಥಾ, ಗಾಹೆ; ಪುತ್ರಿಕಾ, ಪುತ್ತಳಿ; ಪ್ರಕ್ಷಾಲನ, ಪಕ್ಖಳನ; ಅಕ್ಷೋಟ, ಅಕ್ಖೋಳ[4]; ಕ್ರಕಚ, ಕರಗಸ; ಶಿಲ್ಪಿಕ, ಚಿಪ್ಪಿಗ; ಶಿಖರಿ, ಚಿಕರಿ; ನಿಶ್ಚಲ, ನಿಚ್ಚಳ; ಸನ್ನಾಹ, ಸನ್ನಣ; ಸತ್ಫಲ, ಸಪ್ಪಳ; ವೃಷಭ, ಬಸವ; ಸುವಾಸಿನಿ, ಸೋವಾಸಿಣಿ[5]; ತೈಲಿಕ, ತೆಲ್ಲಗ; ಹಿಂಗೂಲಕ, ಇಂಗಲಿಕ; ಅಯೋಗ್ರ, ಅಯೋಗ; ಮಹಿಷಿ, ಮ್ಹೈಸಿ; ಪತ್ತನ, ಪಟ್ಟಣ; ಆಷಾಢ, ಆಸಡಿ; ಮನ್ಥನಿ, ಮಂತನೆ; ಫಲ್ಗುನ, ಪಲುಗುಣ; ಅಙ್ಗನ, ಅಂಗಣ; ಅಙ್ಗಾರ, ಇಂಗಲ; ಶೃಙ್ಗಾರ, ಸಿಂಗರ; ಗೋಪಾಲ, ಗೋವಳ; ಸುರಪರ್ಣಿ, ಸುರಹೊನ್ನೆ; ಚಿಕಿತ್ಸಾ, ಚಿಕಿಚ್ಚೆ[6]; ಉಚ್ಚ, ಉದ್ದ; ವಂಶ, ಬಂಚ; ಹಂಸ, ಅಂಚೆ; ಹಾರ, ಆರ; ಊಷ್ಮ, ಉಬ್ಬೆ; ಇಲಾ, ಎಳೆ; ದೈವ, ದೆವ್ವ; ಕುಕ್ಷಿ, ಕುಕ್ಕೆ; ಮೇಠಿ[7], ಮೇಂಟಿ; ಅರ್ಕ, ಎಕ್ಕ (ಎಲಕ್ಕಿ); ಭಿಕ್ಷು, ಬಿಚ್ಚು; ಕಕ್ಷ, ಕಚ್ಚ; ಚರ್ಮ, ಸಮ್ಮ; ಚೂರ್ಣ, ಸುಣ್ಣ; ಸ್ವರ್ಣ, ಸೊನ್ನೆ; ಮಾಘ, ಮಾಗಿ ' ಮೊದಲಾದುವುಗಳನ್ನೂ ಈ ಗಣದಲ್ಲಿ ಪಾಠಮಾಡಿಕೊಳ್ಳಬಹುದು.

**ವಿಚಾರ ೧೬೦**

ಈ ಸೂತ್ರದಲ್ಲಿ — ' ಕರಂಬಾದಯಃ ' ಎಂದೊಂದೇ ಪದವಿರುವುದು. ಆದಾಗ್ಯೂ ಗಣಪಾಠದಿಂದ ಸ್ಥಾನ್ಯಾದೇಶಭಾವಗಳನ್ನು ಲಕ್ಷ್ಯಾನುಸಾರವಾಗಿ ಕಲ್ಪಿಸಿಕೊಂಡು ಸೂತ್ರಾರ್ಥವನ್ನು ಹೇಳಬೇಕೆಂದು ತಾತ್ಪರ್ಯವು. ಇದೇ ರೀತಿ ಸಂಸ್ಕೃತ ವ್ಯಾಕರಣಕಾರರೂ ' **ಪೃಷೋದರಾದೀನಿ ಯಥೋಪದಿಷ್ಟಂ** ' ಎಂದು ಮೊದಲಾಗಿ ಹೇಳಿ ಆ ಪೃಷೋದರಾದಿ ಗಣದಲ್ಲಿ ಲಕ್ಷ್ಯಾನುಸಾರವಾಗಿ ಸ್ಥಾನ್ಯಾದೇಶಭಾವಗಳನ್ನು ಕಲ್ಪಿಸಿಕೊಂಡು ಶಿಷ್ಟಪ್ರಯೋಗಗಳಿಗೆ ಸಾಧುತ್ವವನ್ನು ಹೇಳಬೇಕೆಂಬ ತಾತ್ಪರ್ಯದಿಂದ ಅಲ್ಲಿ ಬರುವ ಕಾರ್ಯವಿಶೇಷಗಳನ್ನು ನಾಲ್ಕು ಬಗೆಯಾಗಿ ವಿಭಾಗಿಸಿ —

**ಭವೇದ್ವರ್ಣಾಗಮಾದ್ಧಂಸಃ ಸಿಂಹೋ ವರ್ಣವಿಪರ್ಯಯಾತ್**
**ಗೂಢಾತ್ಮಾ ವರ್ಣವಿಕೃತೇರ್ವರ್ಣನಾಶಾತ್ ಪೃಷೋದರಂ**

ಪಾಠಾಂತರ : ೧. ಲಂಪಳಿಕೆ; ೨. ಬಾದಸೆ; ೩. ಪೂರ್ಣಮಾ; ೪. ಅಕ್ರೋಳ; ೫. ಸೋವಾಸಿನಿ; ೬. ಚಿಕಿಚ್ಚೆ; ೭. ಮೇಥಿ

ಎಂಬ ಸಂಗ್ರಹಕಾರಿಕೆಯನ್ನು ಹೇಳಿರುವರು. ಹೀಗೆಯೇ ಈ ವ್ಯಾಕರಣದಲ್ಲಿಯೂ ಪ್ರಾಚೀನರ ಪ್ರಯೋಗಗಳ ಪರಿಶೀಲನೆಯಿಂದ ಈ ಕರಂಜಾದಿಗಣಪಠಿತಶಬ್ದಗಳನ್ನು ಐದು ಬಗೆಯಾಗಿ ಭಾಗಿಸಿ ಐದು ಬಗೆಯಾದ ಕಾರ್ಯನಿಪಾತವನ್ನು ಮಾಡಬೇಕೆಂಬ ತಾತ್ಪರ್ಯದಿಂದ —

ವರ್ಣಾಗಮೋ ವರ್ಣವಿಪರ್ಯಯಶ್ಚದ್ವೌ ಚಾಪರೌ ವರ್ಣವಿಕಾರನಾಶೌ
ಧಾತೋಸ್ತದರ್ಥಾತಿಶಯೇನ ಯೋಗಸ್ತದುಚ್ಯತೇ ಪಂಚವಿಧಂ ನಿರುಕ್ತಂ

ಎಂದು ಸಂಗ್ರಹಶ್ಲೋಕವನ್ನು ಹೇಳಿರುವರು. ಇದರಿಂದ ಲಕ್ಷ್ಯಾನುಸಾರವಾಗಿ ಆ ಆ ಕಾರ್ಯಗಳನ್ನು ಮಾಡಬೇಕೆಂದು ತಾತ್ಪರ್ಯವಾಗುವುದು. **ದರ್ಪಣಕಾರ**ನು ತದ್ಭವ ಪ್ರಕರಣದಲ್ಲಿ ಹೇಳಿರುವ ಪ್ರಯೋಗವಿಶೇಷಗಳೆಲ್ಲಾ ಈ ಗಣದಿಂದಲೂ ಬಹುಳಗ್ರಹಣದಿಂದಲೂ ಸಾಧಿಸಲ್ಪಡುವುವೆಂದು ಅವನ್ನು ಇಲ್ಲಿ ವಿವರಿಸಿಲ್ಲವೆಂದು ತಿಳಿಯಬೇಕು.

|| ತದ್ಭವಪ್ರಕರಣಂ ಸಮಾಪ್ತಂ ||

## ॥ ಅಥ ದೇಶ್ಯಲಿಂಗ ಪ್ರಕರಣಂ ॥

**ಅವತಾರಿಕೆ ೧೬೧**

ಪೂರ್ವದಲ್ಲಿ — ' **ಹ್ರಸ್ವೋಽನೇಕಸ್ವರಸ್ಯಾ ಸಮಾಸೇಽಪೂರ್ವಪದಸ್ಯ** ' ಎಂಬ ಸೂತ್ರ ಮೊದಲು ' **ಕರಂಬಾದಯಃ** ' ಎಂಬ ಸೂತ್ರದವರೆಗೂ ಹೇಳಿರುವ ಸೂತ್ರಗಳಿಂದ ತದ್ಧಿತಾಂಗ ಸ್ವರೂಪವು ತಿಳಿಸಲ್ಪಟ್ಟಿತು. ತತ್ಕ್ರಮಗಳಲ್ಲಿ ಯಾವ ವಿಶೇಷವೂ ತೋರಿಸಲ್ಪಡಲಿಲ್ಲವಾದುದರಿಂದ ಇಲ್ಲಿಂದ ಮುಂದೆ ' **ಜಾತಿಶಬ್ದಾದಿತಿಃ ॥ ೧೯೦ ॥** ' ಎಂಬ ಸೂತ್ರದವರೆಗೂ ದೇಶ್ಯಲಿಂಗಸ್ವರೂಪವನ್ನು ತಿಳಿಸಬೇಕೆಂಬಿಚ್ಛೆಯಿಂದ ಮೊದಲು ಲಿಂಗತ್ರಯಸಾಧಾರಣವಾದ ಅವ್ಯಯಗಳಲ್ಲಿ ಸ್ತ್ರೀಲಿಂಗ, ಪುಲ್ಲಿಂಗಗಳಲ್ಲಿ ವಿಶೇಷವನ್ನು ತೋರಿಸುವನಾಗಿ ನಿತ್ಯನಪುಂಸಕಲಿಂಗಗಳಾದ ' ಪಿಂದು, ಮುಂದು ' ಶಬ್ದಗಳಲ್ಲಿ ವಿಶೇಷವನ್ನು ಹೇಳುತ್ತಾನೆ.

**ಸೂತ್ರಂ ॥ ಪಿಂದುಮುಂದೋರ್ದಸ್ತಃ ॥ ೧೬೧ ॥**

**ಅರ್ಥ ॥ ಪಿಂದು, ಮುಂದು ಎಂಬೀ ಎರಡು ಶಬ್ದಗಳ ದ ಕಾರಕ್ಕೆ ತ ಕಾರಾದೇಶವು ಬಹುಳವಾಗಿ ಬರುವುದು.**

**ಉದಾಹರಣೆ ॥** ಪಿಂದು, ಪಿಂತು; ಮುಂದು, ಮುಂತು ॥ ಎಂಬಿವು ಇವಕ್ಕೆ ಲಕ್ಷ್ಯಗಳು.

**ವಿಚಾರ ೧೬೧**

ಈ ಸೂತ್ರದಲ್ಲಿ — ' ಪಿಂದುಮುಂದೋಃ, ದಃ, ತಃ ' ಎಂದು ಮೂರು ಪದಗಳಿರುವುವು. ' ಬಹುಳಂ ' ಎಂಬುದು ಅನುವರ್ತಿತವಾಗುವುದು. ' ಪಿಂದುಮುಂದೋಃ ' ಎಂಬುದು ಅವಯವಾವಯವಿಭಾವಸಂಬಂಧದಲ್ಲಿ ವಿಹಿತವಾದ ಷಷ್ಠ್ಯಂತವು. ' ತಃ ' ಎಂಬುದು ಉಚ್ಚಾರಣಾರ್ಥಕವಾದ ಅ ಕಾರ ವಿಶಿಷ್ಟ ತ ಕಾರಮಾತ್ರಬೋಧಕ ಪ್ರಥಮಾಂತವು. ಆದುದರಿಂದ ಇದೇ ಇಲ್ಲಿ ವಿಧೇಯವಾಗಿರುವುದು. ತಥಾಚ — ' ಪಿಂದು, ಮುಂದು ' ಶಬ್ದಗಳ ದ ಕಾರಕ್ಕೆ ಬಹುಳವಾಗಿ ತ ಕಾರಾದೇಶವು ಬರುವುದೆಂದು ಸೂತ್ರಾರ್ಥವಾಗಲು ' ಪಿಂದು, ಪಿಂತು ' ಮೊದಲಾದುವು ಸಿದ್ಧಿಸುವುವು.

**ಅವತಾರಿಕೆ ೧೬೨**

ಇದುವರೆಗೂ ಬಹುಳವಾಗಿ ಬರುವ ವಿಧಿಯನ್ನು ಹೇಳಿ ಮುಂದೆ ನಿತ್ಯವಾದುದನ್ನು ಹೇಳುವನಾಗಿ ಮೊದಲು ಅದ್ವಾದಿಗಳಿಗೆ ಪುಲ್ಲಿಂಗವಿಷಯದಲ್ಲಿ ಬರುವ ಆದೇಶವಿಶೇಷವನ್ನು ಹೇಳುತ್ತಾನೆ.

**ಸೂತ್ರಂ ॥ ಆತೇತೂತಂ ಪುಂಸ್ಯದ್ವಿದೂದೋಃ ॥ ೧೬೨ ॥**

**ಅರ್ಥ ॥ ಅದು, ಇದು, ಉದು ಎಂಬ ಶಬ್ದಗಳ ಸ್ಥಾನದಲ್ಲಿ ಕ್ರಮವಾಗಿ ಆತ, ಈತ, ಊತ ಎಂಬಾದೇಶಗಳು ಪುಲ್ಲಿಂಗವಿಷಯದಲ್ಲಿ ನಿತ್ಯವಾಗಿ ಬರುವುವು.**

**ಉದಾಹರಣೆ ॥** ಆತಂ, ಈತಂ, ಊತಂ; ಆತನಂ, ಈತನಂ, ಊತನಂ ॥ ಮೊದಲಾದುವು ಇವಕ್ಕೆ ಲಕ್ಷ್ಯಗಳು.

**ವಿಚಾರ ೧೬೨**

ಈ ಸೂತ್ರದಲ್ಲಿ — 'ಆತ್ಈತ್ಊತಂ, ಪುಂಸಿ, ಅದ್ವಿದೂದೋಃ' ಎಂದು ಮೂರು ಪದಗಳಿರುವುವು. 'ಆತ್ಈತ್ಊತಂ' ಎಂಬುದು 'ಆತ, ಈತ, ಊತ' ಎಂಬ ಪದಗಳಿಗೆ ಸಮಾಹಾರ ದ್ವಂದ್ವವಾಗಿ ನಿರ್ದೇಶಿಸಲ್ಪಟ್ಟಿರುವುದು. ಇದು ಪ್ರಥಮಾಂತವಾದುದರಿಂದ ವಿಧೇಯವೆಂದು ತಿಳಿಯಬೇಕು. ಹಾಗೆಯೇ — 'ಅದ್ವಿದೂದೋಃ' ಎಂಬುದೂ ಸಮಾಹಾರದ್ವಂದ್ವದ ಮೇಲೆ ವಿಹಿತಷಷ್ಠ್ಯಂತಪದವು. ಆದುದರಿಂದ 'ಅದು, ಇದು, ಉದು' ಎಂಬ ಮೂರು ಸ್ಥಾನಿಗಳಾಗುವುವು. ಸ್ಥಾನಾದೇಶಗಳು ಯಥಾಸಂಖ್ಯವಾಗಿರುವುದರಿಂದ ಕ್ರಮಾನ್ವಯವನ್ನು ಹೇಳಬೇಕು. ಇಲ್ಲಿ ಆದೇಶಗಳನ್ನು ಅದ್ವಾದಿಗಳಿಗೆ ವಿಧಿಸುವುದರಿಂದ — '**ಷಷ್ಠ್ಯಸ್ಥಾನೇಽಂತ್ಯಸ್ಯ**' ಎಂಬ ಪರಿಭಾಷೆಯನ್ನು ಬಾಧಿಸಿ — '**ತಿಜದ್ವಾದೇಃ**' ಎಂಬುದರಿಂದ ಸರ್ವಾದೇಶವಾಗಿ ಬರುವುದೆಂದರ್ಥವಾಗುವುದು. 'ಪುಂಸಿ' ಎಂಬುದು ವಿಷಯಸಪ್ತಮ್ಯಂತವು. ತಥಾಚ — 'ಅದು, ಇದು, ಉದು' ಗಳಿಗೆ 'ಆತ, ಈತ, ಊತ' ಆದೇಶಗಳು ಪುಲ್ಲಿಂಗದಲ್ಲಿ ಕ್ರಮವಾಗಿ ಬರುವುವೆಂದು ಸೂತ್ರಾರ್ಥವಾಗುವುದರಿಂದ 'ಆತಂ, ಈತಂ, ಊತಂ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು. ಇಲ್ಲಿ ಬಹುಳಗ್ರಹಣಾನುವೃತ್ತಿಯಿಲ್ಲವಾದುದರಿಂದ ನಿತ್ಯವೆಂದು ತಿಳಿಯಬೇಕು. ಇಲ್ಲಿ 'ಪುಂಸಿ' ಎಂದು ಹೇಳಿರುವುದರಿಂದ 'ಅದು, ಇದು, ಉದು' ಎಂಬ ನಪುಂಸಕಲಿಂಗದಲ್ಲಿ ಆದೇಶವಿಲ್ಲ.

**ಅವತಾರಿಕೆ ೧೬೩**

ಪುಲ್ಲಿಂಗವಿಷಯದಲ್ಲಿ ಅದ್ವಾದಿಗಳಿಗೆ ಆದೇಶವಿಶೇಷವನ್ನು ವಿಧಿಸಿ ಸ್ತ್ರೀಲಿಂಗವಿಷಯದಲ್ಲಿ ಆದೇಶವಿಶೇಷವನ್ನು ವಿಧಿಸುತ್ತಾನೆ.

**ಸೂತ್ರಂ || ಸ್ತ್ರಿಯಾಮಾಕೆದೀಕೆದೂಕೆತ್ || ೧೬೩ ||**

**ಅರ್ಥ || 'ಅದು, ಇದು, ಉದು' ಎಂಬಿವುಗಳಿಗೆ ಕ್ರಮವಾಗಿ ಸ್ತ್ರೀಲಿಂಗದಲ್ಲಿ 'ಆಕೆ, ಈಕೆ, ಊಕೆ' ಎಂಬಾದೇಶಗಳು ಬರುವುವು.**

**ಉದಾಹರಣೆ ||** ಆಕೆ, ಈಕೆ, ಊಕೆ, ಆಕೆಯುಂ, ಈಕೆಯುಂ, ಊಕೆಯುಂ; ಆಕೆಯಿಂ, ಈಕೆಯಿಂ, ಊಕೆಯಿಂ || ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೧೬೩**

ಈ ಸೂತ್ರದಲ್ಲಿ — 'ಸ್ತ್ರಿಯಾಂ, ಆಕೆತ್, ಈಕೆತ್, ಊಕೆತ್' ಎಂದು ನಾಲ್ಕು ಪದಗಳಿರುವುವು. ಪೂರ್ವಸೂತ್ರದಿಂದ 'ಅದ್ವಿದೂದೋಃ' ಎಂಬುದು ಅನುವರ್ತಿಸಲ್ಪಡುವುದು. 'ಸ್ತ್ರಿಯಾಂ' ಎಂಬುದು ವಿಷಯಸಪ್ತಮ್ಯಂತವು; ಸ್ತ್ರೀಲಿಂಗವಿಷಯದಲ್ಲಿ ಎಂದರ್ಥವಾಗುವುದು. 'ಆಕೆತ್, ಈಕೆತ್, ಊಕೆತ್' ಎಂಬಿವು ವಿಧೇಯಗಳು. ಇಲ್ಲಿ ತ ಕಾರೋಚ್ಚಾರಣೆಯು ಸ್ಪಷ್ಟಾರ್ಥಕವು. ಅದಿಲ್ಲದಿದ್ದರೆ ಎ ಕಾರಕ್ಕೆ ಸ್ವರವು ಪರವಾದಾಗ ಸ್ವರಸಂಧಿಕಾರ್ಯವು ಪ್ರಾಪ್ತವಾಗಿ ಆದೇಶಸ್ವರೂಪವು ಎ ಕಾರಾಂತವೆಂದು ತಿಳಿಯುವುದಿಲ್ಲ. ಆದುದರಿಂದ ತ ಕಾರೋಚ್ಚಾರಣೆಯನ್ನು ಇಲ್ಲಿ ಮಾಡಿರುವುದೆಂದು ತಿಳಿಯಬೇಕು. ಇಲ್ಲಿಯೂ 'ಅದ್ವಿದೂದೋಃ' ಎಂಬಿವೇ ಉದ್ದೇಶ್ಯಗಳಾಗಿರುವುದರಿಂದ ಕ್ರಮಾನ್ವಯವನ್ನು ಹೇಳಬೇಕು. ತಥಾಚ — ಸ್ತ್ರೀಲಿಂಗದಲ್ಲಿ

'ಅದು, ಇದು, ಉದು' ಶಬ್ದಗಳಿಗೆ ಕ್ರಮವಾಗಿ 'ಆಕೆ, ಈಕೆ, ಊಕೆ' ಎಂಬಾದೇಶಗಳು ಬರುವುವೆಂದು ಸೂತ್ರಾರ್ಥವಾಗುವುದರಿಂದ ಸ್ತ್ರೀಲಿಂಗದಲ್ಲಿ 'ಆಕೆ, ಈಕೆ, ಊಕೆ' ಮೊದಲಾದುವು ಸಿದ್ಧಿಸುವುವು.

**ಅವತಾರಿಕೆ ೧೬೪**

ಹೀಗೆಯೇ ಅದ್ವಾದಿಗಳಿಗೆ ಪುಲ್ಲಿಂಗ-ಸ್ತ್ರೀಲಿಂಗಗಳಲ್ಲಿ ಆದೇಶಾಂತರವನ್ನು ಹೇಳುತ್ತಾನೆ.

**ಸೂತ್ರಂ || ದೋರ್ವಃ || ೧೬೪ ||**

**ಅರ್ಥ || 'ಅದು, ಇದು, ಉದು' ಎಂಬಿವುಗಳ 'ದು' ವಿಗೆ 'ವ' ಎಂಬಾದೇಶವು ಪುಲ್ಲಿಂಗ-ಸ್ತ್ರೀಲಿಂಗಗಳೆರಡರಲ್ಲಿಯೂ ಬರುವುದು.**

**ಉದಾಹರಣೆ ||** ಅವಂ, ಇವಂ, ಉವಂ; ಅವನಂ, ಇವನಂ, ಉವನಂ; ಅವಳ್, ಇವಳ್, ಉವಳ್; ಅವಳಂ, ಇವಳಂ, ಉವಳಂ || ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೧೬೪**

ಈ ಸೂತ್ರದಲ್ಲಿ — 'ದೋಃ, ವಃ' ಎಂದು ಎರಡು ಪದಗಳಿರುವುವು. ಪೂರ್ವಸೂತ್ರದಿಂದ 'ಅದ್ವಿದೂದೋಃ, ಪುಂಸಿ, ಸ್ತ್ರಿಯಾಂ' ಎಂಬ ಮೂರು ಪದಗಳು ಅನುವರ್ತಿಸಲ್ಪಡುವುವು. 'ದೋಃ' ಎಂಬುದು — '**ದುರಂತ್ಯವ್ಯಂಜನಾದಿಃ || ೧೩ ||**' ಎಂಬ ಸೂತ್ರದಿಂದ ಸಂಕೇತಿತವಾದುದು. ಇದು ಸ್ಥಾನಷಷ್ಠ್ಯಂತಪದವು. 'ವಃ' ಎಂಬುದು ಅ ಕಾರವಿಶಿಷ್ಟ ವ ಕಾರಬೋಧಕವಾದ ಪ್ರಥಮಾಂತಪದವು. ಇಲ್ಲ ಇದೇ ವಿಧೇಯವು. 'ಅದ್ವಿದೂದೋಃ' ಎಂಬುದು ಅವಯವಾವಯವಿಭಾವಸಂಬಂಧಾರ್ಥಕ ಷಷ್ಠ್ಯಂತಪದವು. 'ಪುಂಸಿ, ಸ್ತ್ರಿಯಾಂ' ಎಂಬಿವೆರಡೂ ವಿಷಯಸಪ್ತಮ್ಯಂತಗಳು. ತಥಾಚ — 'ಅದು, ಇದು, ಉದು' ಗಳ 'ದು' ವಿಗೆ ಪುಲ್ಲಿಂಗ, ಸ್ತ್ರೀಲಿಂಗ ವಿಷಯಗಳಲ್ಲಿ 'ವ' ಎಂಬಾದೇಶವು ಬರುವುದೆಂದು ಸೂತ್ರಾರ್ಥವಾಗುವುದರಿಂದ 'ಅವಂ, ಅವಳ್' ಮೊದಲಾದ ಪ್ರಯೋಗಗಳು ಸಿದ್ಧಿಸುವುವು. ಇಲ್ಲಿ ದು ಗ್ರಹಣವನ್ನು ಮಾಡಿರುವುದರಿಂದ – '**ಷಿಐದ್ವಾದೇಃ**' ಎಂಬ ಪರಿಭಾಷೆಯಿಂದ ಪ್ರಸಕ್ತವಾದ ಸರ್ವಾದೇಶವನ್ನು ಬಾಧಿಸಿ 'ದು' ಮಾತ್ರಕ್ಕೆ ಬರುವುದೆಂದರ್ಥವಾಗುವುದು. ಮತ್ತು ಇದು — '**ಒಪ್ಪತ್ತು ಪತ್ತೋಸ್ತಾದಿಮ್ || ೧೬೩ ||**' ಎಂಬ ಸೂತ್ರದವರೆಗೂ ಅನುವರ್ತಿಸಲ್ಪಡುವುದು. ಹೀಗೆಯೇ 'ಸ್ತ್ರಿಯಾಂ, ಪುಂಸಿ' ಎಂಬಿವೂ — '**ಅವೋನಾವೌ ಚೈಕತ್ವೇ || ೧೬೫ ||**' ಎಂಬ ಸೂತ್ರದವರೆಗೆ ಬರುವುದೆಂದು ತಿಳಿಯುವುದು. 'ಅವಳ್, ಇವಳ್' ಮೊದಲಾದ ಸ್ತ್ರೀಲಿಂಗದಲ್ಲಿ ಈ ಸೂತ್ರದಿಂದ 'ದು' ಮಾತ್ರಕ್ಕೆ ವ ಆದೇಶವನ್ನು ಮಾಡಿ—'**ಅತೋSನೇಕತ್ವೇ ಚಾದ್ವಾದಿ ಗುಣೋಕ್ತೇಃ || ೧೮೪ ||**' ಎಂಬ ವಕ್ಷ್ಯಮಾಣ ಸೂತ್ರದಿಂದ 'ಳುಗ್' ಆಗಮವು ಬರುವುದೆಂದು ತಿಳಿಯುವುದು.

**ಅವತಾರಿಕೆ ೧೬೫**

ಅದ್ವಾದಿಗಣದಲ್ಲಿ ಸೇರಿರುವ '**ಪೆಱತು**' ಶಬ್ದದ 'ದು' ವಿಗೆ ಲಿಂಗವ್ಯಯದಲ್ಲಿ **ಲೋಪ**ವನ್ನು ವಿಧಿಸುತ್ತಾನೆ.

**ಸೂತ್ರಂ || ಪೆಱತೋರ್ಲುಪ್ || ೧೬೫ ||**

**ಅರ್ಥ** || ‘ ಪೆಱತು ’ ಶಬ್ದದ ‘ ದು ’ ವಿಗೆ ಪುಲ್ಲಿಂಗ-ಸ್ತ್ರೀಲಿಂಗವಿಷಯಗಳಲ್ಲಿ ಲೋಪವು ಬರುವುದು.

**ಉದಾಹರಣೆ** || ಪೆಱಂ, ಪೆಱನಂ, ಪೆಱನಿಂ; ಪೆಱಳ್, ಪೆಱಳಂ, ಪೆಱಳಿಂ || ಮೊದಲಾದುವು ಇವಕ್ಕೆ ಲಕ್ಷ್ಯಗಳಾಗುವುವು.

**ವಿಚಾರ ೧೬೫**

ಈ ಸೂತ್ರದಲ್ಲಿ — ‘ ಪೆಱತೋಃ, ಲುಪ್ ’ ಎಂದು ಎರಡು ಪದಗಳಿರುವುವು. ಪೂರ್ವದಿಂದ ‘ ದೋಃ, ಸ್ತ್ರಿಯಾಂ, ಪುಂಸಿ ’ ಎಂಬ ಪದಗಳು ಅನುವರ್ತಿಸಲ್ಪಡುವುವು. ‘ ಪೆಱತೋಃ ’ ಎಂಬುದು ಅವಯವಾವಯವಿಭಾವಸಂಬಂಧದಿಂದ ‘ ದೋಃ ’ ಎಂಬುದಕ್ಕೆ ವಿಶೇಷಣವು. ‘ ದೋಃ ’ ಎಂಬುದೇ ಸ್ಥಾನಿಯು. ‘ ಸ್ತ್ರಿಯಾಂ, ಪುಂಸಿ ’ ಎಂಬಿವು ವಿಷಯಸಪ್ತಮ್ಯಂತಗಳು. ತಥಾಚ — ‘ ಪೆಱತು ’ ಶಬ್ದದ ‘ ದು ’ ಸಂಜ್ಞಕವಾದ ‘ ತು ’ ಎಂಬುದಕ್ಕೆ ಪುಲ್ಲಿಂಗ-ಸ್ತ್ರೀಲಿಂಗಗಳಲ್ಲಿ ಲೋಪವು ಬರುವುದೆಂದು ಸೂತ್ರಾರ್ಥವಾಗುವುದರಿಂದ ‘ ಪೆಱಂ, ಪೆಱಳ್ ’ ಮೊದಲಾದುವು ಸಿದ್ಧಿಸುವುವು. ‘ ಪೆಱಳ್ ’ ಎಂಬಲ್ಲಿ ಪೂರ್ವದಂತೆ ಳುಗಾಗಮವು ಬಂದಿರುವುದೆಂದು ತಿಳಿಯಬೇಕು.

**ದರ್ಪಣಕಾರನು** ಅದ್ವಾದಿಗಳ ವಿಷಯದಲ್ಲಿ **ಶಾಸನಕಾರನಂತೆ** ‘ ಅತ, ಈತ ’ ಮೊದಲಾದ ಸಮುದಾಯಾದೇಶಗಳನ್ನು ವಿಧಿಸದಿದ್ದರೂ ಪುಲ್ಲಿಂಗವಿಷಯದಲ್ಲಿ—

ಅದುವಿದುವುದುವೆಂಬಿವಱಂ
ತ್ಯದುಕಾರಕ್ಕೊದವುಗುಂ ಅಕಾರಂ ಪುಲ್ಲಿಂ
ಗದೊಳಲ್ಲಿ ತಕಾರಂ ಪೋ
ಕೊದವಿರೆ ಚೆಚ್ಚರದೆ ಬರ್ಪುದಾದಿಗೆ ದೀರ್ಘಂ (ಸೂತ್ರ ೧೫೦)

ಎಂಬ ಸೂತ್ರವನ್ನೂ, ಸ್ತ್ರೀಲಿಂಗವಿಷಯದಲ್ಲಿ—

ಅದುವಿದುವುದುವೆಂಬಿವಱಂ
ತ್ಯದೊಳ್ಳಾದೇಶವಿಧಿ ಕೆಕಾರಂ ಮೇಣ್ ಬಂ
ದೊದವಿರೆ ಬಕ್ಕುರಂ ಸ್ತ್ರೀಲಿಂ
ಗದೊಳಂ ಪುಲ್ಲಿಂಗದಂತಿರಾದಿಗೆ ದೀರ್ಘಂ (ಸೂತ್ರ ೧೫೪)

ಎಂಬ ಸೂತ್ರವನ್ನು, ‘ ಪೆಱತು ’ ಶಬ್ದದ ವಿಷಯದಲ್ಲಿಯೂ —

ಪೆಱತೆಂಬಿವಱಂತ್ಯಾಕ್ಷರ
ವಱಿಗುಂ ಗುಣವಚನದಂತ್ಯದುತ್ವಕ್ಕತ್ವಂ (ಸೂತ್ರ ೧೪೨)

ಎಂಬ ಸೂತ್ರಭಾಗವನ್ನೂ ಹೇಳಿ ಈ ಪ್ರಯೋಗಗಳನ್ನು ಸಾಧಿಸಿರುವನು. ಇವರಿಬ್ಬರಿಗೂ ಶಬ್ದಸಾಧನೋಪಾಯಗಳು ಬೇರೆ ಬೇರೆಯಾಗಿದ್ದರೂ ಫಲದಲ್ಲಿ ಒಂದೇ ಆಗಿರುವುದೆಂದು ತಿಳಿಯಬೇಕು. ಆದುದರಿಂದಲೇ ಪ್ರಾಚೀನರು —

ಉಪಾಯಾಃ ಶಿಕ್ಷಮಾಣಾನಾಂ ಬಾಲಾನಾಮುಪಲಾಲನಾಃ
ಉಪೇಯ ಪ್ರತಿಪತ್ತ್ಯರ್ಥಮುಪಾಯಾ ಅವ್ಯವಸ್ಥಿತಾಃ

ಎಂದು ಹೇಳಿರುವುದರಿಂದ 'ಸಾಧು' ಶಬ್ದಬೋಧನಾರ್ಥವಾಗಿ ಉಪಾಯಗಳನ್ನು ಅನೇಕಧಾ ಕಲ್ಪಿಸಬಹುದೆಂದು ತಿಳಿಯುವುದು. ಹೀಗೆಯೇ ಸಂಸ್ಕೃತ ವ್ಯಾಕರಣದಲ್ಲಿಯೂ 'ರಾಮಃ' ಎಂಬ ರೂಪಸಾಧನಾರ್ಥವಾಗಿ **ಪಾಣಿನಿಯು** 'ಸು' ಪ್ರತ್ಯಯವನ್ನಂಗೀಕರಿಸಿರುವನು. **ಚಾಂದ್ರಾದಿ**ಗಳು 'ಸಿ' ಪ್ರತ್ಯಯವೆಂದು ಹೇಳುವರು. ಹೀಗೆಯೇ 'ಪಾಚಿತಂ' ಎಂಬಲ್ಲಿ ಕಲವರು 'ತ' ಪ್ರತ್ಯಯವೆಂದೂ ಕೆಲವರು 'ಇತ' ಪ್ರತ್ಯಯವೆಂದೂ 'ತಾವಾನ್' ಎಂಬಲ್ಲಿ ಕೆಲವರು 'ಡಾವತ್' ಪ್ರತ್ಯಯವೆಂದೂ ಕೆಲವರು 'ವತ್' ಪ್ರತ್ಯಯವೆಂದೂ ಹೇಳಿ ಪ್ರಕ್ರಿಯಾ ಚಮತ್ಕಾರಗಳನ್ನು ತೋರಿಸಿರುವರು. ಆದಾಗ್ಯೂ ಎಲ್ಲರಿಗೂ ಪರಿನಿಷ್ಠಿತರೂಪಗಳು ಒಂದೇ ಆಗಿರುವುದರಿಂದ ಪರಸ್ಪರದೋಷೋದ್ಘಾಟನವನ್ನು ಮಾಡಲಾಗದು. ಇವುಗಳಲ್ಲಿ ಸುಗಮ-ದುರ್ಗಮೋಪಾಯಗಳು ಮಾತ್ರ ವಿಚಾರಣೀಯಗಳಾಗಿರುವುವು. ಬುದ್ಧಿಶಾಲಿಗಳು ತಮ್ಮ ಸೂಕ್ಷ್ಮಬುದ್ಧಿಯಿಂದ ವಿಚಾರಮಾಡಿ ಸುಗಮವಾಗಿರುವುದನ್ನು ಅಂಗೀಕರಿಸಬೇಕು. ಈಗ ವಿಚಾರ ಮಾಡುವುದರಲ್ಲಿ **ಶಾಸನಕಾರನ** ಕ್ರಮವೇ 'ಅವ್ಯಾಪ್ತಿ, ಅತಿವ್ಯಾಪ್ತಿ, ಅಸಂಭವ' ರೂಪಗಳಾದ ದೋಷತ್ರಯರಹಿತವಾಗಿಯೂ ಲಕ್ಷ್ಯಸಿದ್ಧಿಯನ್ನು ಮಾಡುವುದರಲ್ಲಿ ಸುಗಮವಾಗಿಯೂ ಅನೇಕ ಲಕ್ಷ್ಯಗಳನ್ನು ಸಾಧಿಸುವುದಕ್ಕೆ ಅರ್ಹವಾಗಿಯೂ ಇರುವುದರಿಂದ ಇದೇ ಉತ್ತಮಕಲ್ಪವೆಂದು ತೋರುವುದು.

**ಅವತಾರಿಕೆ ೧೬೬**

ಪೂರ್ವದಲ್ಲಿ ಸರ್ವನಾಮಗಳಾದ ಅದ್ವಾದಿಗಳ ವಿಷಯದಲ್ಲಿ ಕಾರ್ಯವಿಶೇಷಗಳು ಹೇಳಲ್ಪಟ್ಟಿರುವುವು. ಈಗ ಗುಣವಾಚಕಗಳ ವಿಷಯದಲ್ಲಿ ಹೇಳುತ್ತಾನೆ.

**ಸೂತ್ರಂ ॥ ಅದ್ಗುಣೋಕ್ತೇಃ ॥ ೧೬೬ ॥**

**ಅರ್ಥ ॥** ಗುಣವಾಚಕಗಳಾದ ಶಬ್ದಗಳ 'ದು' ವಿಗೆ **ಪುಲ್ಲಿಂಗ-ಸ್ತ್ರೀಲಿಂಗವಿಷಯಗಳಲ್ಲಿ** **ಅ ಕಾರಾದೇಶವು ಬರುವುದು.**

**ಉದಾಹರಣೆ** ॥ ಕರಿಯಂ, ಕರಿಯನಂ; ಇನಿಯಂ, ಇನಿಯನಂ; ಪಿರಿಯಂ, ಪಿರಿಯನಂ; ಕಿಱಿಯಂ, ಕಿಱಿಯನಂ; ಕರಿಯಳ್, ಕರಿಯಳಂ; ಇನಿಯಳ್, ಇನಿಯಳಂ; ಪಿರಿಯಳ್, ಪಿರಿಯಳಂ; ಕಿಱಿಯಳ್, ಕಿಱಿಯಳಂ ॥ ಮೊದಲಾದ ಗುಣವಾಚಕಶಬ್ದಗಳೆಲ್ಲಾ ಇದಕ್ಕೆ ಲಕ್ಷ್ಯಗಳು.

**ವಿಚಾರ ೧೬೬**

ಈ ಸೂತ್ರದಲ್ಲಿ — 'ಅತ್, ಗುಣೋಕ್ತೇಃ' ಎಂದು ಎರಡು ಪದಗಳಿರುವುವು. ಪೂರ್ವಸೂತ್ರದಿಂದ 'ದೋಃ, ಪುಂಸಿ, ಸ್ತ್ರಿಯಾಂ' ಎಂಬ ಮೂರು ಪದಗಳು ಅನುವರ್ತಿಸಲ್ಪಡುವುವು. 'ಅತ್' ಎಂಬುದು ಇಲ್ಲಿ ವಿಧೇಯವು. ಇಲ್ಲಿ ತ ಕಾರವು ಸುಖೋಚ್ಚಾರಣಾರ್ಥಕವು. 'ಗುಣಸ್ಯ' ಎಂದು ಹೇಳಿದರೂ ಗುಣರೂಪಾರ್ಥದಲ್ಲಿ ಅ ಕಾರ ರೂಪಾದೇಶವು ಸಂಭವಿಸುವುದಿಲ್ಲವಾದುದರಿಂದ ಗುಣಕ್ಕೂ ಈ ಪ್ರಕರಣದಲ್ಲಿ 'ದೇಶ್ಯ' ಶಬ್ದಗಳಿಗೆ ಉದ್ದೇಶ್ಯತ್ವವನ್ನು ಅಂಗೀಕರಿಸಿರುವುದರಿಂದ ಪ್ರಕರಣಾನುಸಾರವಾಗಿ 'ದೇಶ್ಯ' ಶಬ್ದಗಳೇ ಇಲ್ಲಿ 'ಉದ್ದೇಶ' ಗಳೆಂದು 'ಗುಣ' ಶಬ್ದಕ್ಕೂ ವ್ಯಾವೃತ್ತಿಯುಂಟಾಗಿ 'ಗುಣ' ಪದಕ್ಕೆ 'ಗುಣವಾಚಕ' ಶಬ್ದವೆಂದು ಅರ್ಥವಾಗು

ತ್ತಿರಲು ' ಗುಣೋಕ್ತೇಃ ' ಎಂದು ಉಕ್ತಿಗ್ರಹಣವನ್ನು ಮಾಡಿರುವುದರಿಂದ ಗುಣದ್ವಾರಾ ಗುಣಿಯಲ್ಲಿ ಇರುವುದೇ ಗುಣೋಕ್ತಿಯೆಂದರ್ಥವಾಗುವುದು. ಇಲ್ಲಿ ' ಗುಣ ' ವೆಂದರೆ ಶುಕ್ಲನೀಲಾದಿ ವರ್ಣವಲ್ಲ. ವಸ್ತ್ವಾಶ್ರಯವಾದ ಧರ್ಮಸಾಮಾನ್ಯವೆಂದು ತಿಳಿಯಬೇಕೆಂದು ಪ್ರಾಚೀನರು—

ಸತ್ತ್ವೇ ನಿವಿಶತೇಽಪೈತಿ ಪೃಥಗ್ಜಾತಿಷು ದೃಶ್ಯತೇ
ಆಧೇಯಶ್ಚಾಕ್ರಿಯಾಜಶ್ಚಾಸೌ ಸತ್ತ್ವಪ್ರಕೃತಿರ್ಗುಣಃ

ಎಂಬುದರಿಂದ ಸೂಚಿಸಿರುವರು. ಇಂತಹ ಗುಣೋಪಸರ್ಜನದ್ರವ್ಯವಾಚಕವೇ ಇಲ್ಲಿ ಗುಣವಾಚಕವೆಂದು ವ್ಯವಹರಿಸಲ್ಪಡುವುದೆಂದು —

ಸಂಖ್ಯಾಸಂಜ್ಞಾಭಿಧಾ ಸಮಸ್ತಜಾತಿ ಕೃತ್ತದ್ಧಿತೇತರತ್
ಗುಣೋಪಸರ್ಜನದ್ರವ್ಯವಾಚಕಂ ಗುಣವಾಚಿ ತತ್

ಎಂಬುದರಿಂದ ಸೂಚಿತವಾಗುವುದು. ಪ್ರಕೃತದಲ್ಲಿಯೂ ' ಕರಿದು, ಬಿಳಿದು, ಇನಿದು, ಸಿಹಿದು ' ಮೊದಲಾದ ಗುಣವಾಚಕಗಳನ್ನೇ ಗುಣೋಕ್ತಿಪದದಿಂದ ಗ್ರಹಿಸಬೇಕಲ್ಲದೆ ' ಕಪ್ಪು, ಬೆಳ್ಪು ' ಮೊದಲಾದ ಕೇವಲ ಗುಣವಾಚಕವಾದುವನ್ನು ಗ್ರಹಿಸತಕ್ಕದ್ದಲ್ಲ. ಈ ' ಗುಣೋಕ್ತೇಃ ' ಎಂಬುದು ಅವಯವಾವಯವಿಭಾವಸಂಬಂಧದಿಂದ ' ದೋಃ ' ಎಂಬುದಕ್ಕೆ ವಿಶೇಷಣವು. ತಥಾಚ – ಪುಲ್ಲಿಂಗ, ಸ್ತ್ರೀಲಿಂಗ ವಿಷಯಗಳಲ್ಲಿ ಗುಣವಾಚಕ ಶಬ್ದಗಳ ದು ಸಂಜ್ಞಕವಾದ ಭಾಗಕ್ಕೆ ಅ ಕಾರಾದೇಶವು ಬರುವುದೆಂದು ಸೂತ್ರಾರ್ಥವಾಗುವುದರಿಂದ ' ಕರಿದು ' ಮೊದಲಾದ ಶಬ್ದಗಳಲ್ಲಿ ' ದು ' ಎಂಬುದಕ್ಕೆ ಅ ಕಾರಾದೇಶವನ್ನು ಮಾಡಲು ಅದು ಪರದಲ್ಲಿರುವಾಗ — ' **ಯಕ್ ಸ್ವರೇ ಸ್ವರಸ್ಯ || ೩೫ ||** ' ಎಂಬ ಸೂತ್ರದಿಂದ ಯ ಕಾರಾಗಮವನ್ನು ಮಾಡಲು ' ಕರಿಯಂ, ಬಿಳಿಯಂ ' ಮೊದಲಾದ ಶಬ್ದಗಳು ಸಿದ್ಧಿಸುವುವು. ಆದರೆ ವಿಧೀಯಮಾನವಾದ ಅ ಕಾರಾದೇಶವು ' **ಷಷ್ಠ್ಯಾಃ ಸ್ಥಾನೇಽಂತ್ಯಸ್ಯ** ' ಎಂಬ ಪರಿಭಾಷೆಯಿಂದ ಅಂತ್ಯವಾದ ಉ ಕಾರಕ್ಕೆ ಪ್ರಾಪ್ತವಾಗುವುದೆಂದು ತೋರುವುದು. ಆದಾಗ್ಯೂ ಇಲ್ಲಿ ' ದೋಃ ' ಎಂಬುದರ ಸಂಬಂಧವಿಲ್ಲದಿದ್ದರೂ ಅಂತ್ಯಾದೇಶವು ಸಿದ್ಧವಾಗುತ್ತಿರಲು ಪುನಃ ' ದೋಃ ' ಎಂಬುದನ್ನು ಸಂಬಂಧಿಸಿರುವುದರ ಸಾಮರ್ಥ್ಯದಿಂದಲೂ ' **ನಾನರ್ಥಕೇಲೋಽಂತ್ಯವಿಧಿಃ** ' ಎಂಬ ನ್ಯಾಯದಿಂದಲೂ ' ದುಃ ' ಎಂಬ ಸಮುದಾಯಕ್ಕೇ ಅ ಕಾರಾದೇಶವು ಬರುವುದೆಂದು ತಿಳಿಯಬೇಕು.

**ಅವತಾರಿಕೆ ೧೬೭**

ಪೂರ್ವೋಕ್ತ ಗುಣವಾಚಕಗಳಲ್ಲಿ ' ತು ' ಶಬ್ದಾಂತಗಳಾವುವೋ ಅವುಗಳ ವಿಷಯದಲ್ಲಿ ' ದು ' ವಿಗೆ ' ದ ' ಶಬ್ದಾದೇಶವನ್ನು ವಿಧಿಸುತ್ತಾನೆ.

**ಸೂತ್ರಂ || ತೋರ್ದಃ || ೧೬೭ ||**

**ಅರ್ಥ || ಗುಣವಾಚಕ ಶಬ್ದಗಳ ' ದು ' ಸಂಜ್ಞಕವಾದ ' ತು ' ಶಬ್ದಕ್ಕೆ ' ದ ' ಎಂಬ ಆದೇಶವು ಪುಲ್ಲಿಂಗ-ಸ್ತ್ರೀಲಿಂಗವಿಷಯದಲ್ಲಿ ಬರುವುದು.**

**ಉದಾಹರಣೆ ||** ಕೂರಿದಂ, ಕೂರಿದನಂ; ನೇರಿದಂ, ನೇರಿದನಂ; ಕೂರಿದಳ್, ಕೂರಿದಳಂ; ನೇರಿದಳ್, ನೇರಿದಳಂ || ಮೊದಲಾದ ' ತು ' ಶಬ್ದಾಂತ ಗುಣವಾಚಕಗಳೆಲ್ಲಾ ಇದಕ್ಕೆ ಲಕ್ಷ್ಯಗಳು.

**ವಿಚಾರ ೧೬೮**

ಈ ಸೂತ್ರದಲ್ಲಿ — ' ತೋಃ, ದಃ ' ಎಂದು ಎರಡು ಪದಗಳಿರುವುವು. ಪೂರ್ವಸೂತ್ರದಿಂದ ' ಗುಣೋಕ್ತೇಃ, ದೋಃ, ಪುಂಸಿ, ಸ್ತ್ರಿಯಾಂ ' ಎಂಬಿವು ಅನುವರ್ತಿಸಲ್ಪಡುವುವು. 'ತೋಃ' ಎಂಬುದು ಷಷ್ಠ್ಯಂತಪದವು. ಇದಕ್ಕೆ ' ದೋಃ ' ಎಂಬುದು ಸಂಜ್ಞಾಸಂಜ್ಞಿಭಾವಸಂಬಂಧದಿಂದ ವಿಶೇಷಣವು. ' ಗುಣೋಕ್ತೇಃ ' ಎಂಬುದೂ ಅವಯವಾವಯವಿಭಾವಸಂಬಂಧದಿಂದ ' ತೋಃ ' ಎಂಬುದಕ್ಕೇ ವಿಶೇಷಣವು. ' ದಃ ' ಎಂಬುದು ಅಕಾರಸಹಿತ ದಕಾರಬೋಧಕವಾದ ವಿಧೇಯಪದವು. ' ಪುಂಸಿ, ಸ್ತ್ರಿಯಾಂ ' ಎಂಬಿವು ವಿಷಯಸಪ್ತಮ್ಯಂತಪದಗಳು. ತಥಾಚ — ಪುಲ್ಲಿಂಗ-ಸ್ತ್ರೀಲಿಂಗವಿಷಯಗಳಲ್ಲಿ ಗುಣವಾಚಕಗಳ ದು ಸಂಜ್ಞಕ ' ತು ' ಎಂಬುದಕ್ಕೆ ' ದ ' ಎಂಬಾದೇಶವು ಬರುವುದು ಎಂದು ಸೂತ್ರಾರ್ಥವಾಗುವುದರಿಂದ ' ಕೂರಿದಂ ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು. ಇಲ್ಲಿ ದು ಸಂಜ್ಞಕವಾದ ' ತು ' ಶಬ್ದಕ್ಕೆ ' ದ ' ಎಂಬಾದೇಶವು ಬರುವುದೆಂದು ' ಗುಣೋಕ್ತೇಃ ' ಎಂಬುದನ್ನು ಬಿಟ್ಟು ವ್ಯಾಖ್ಯಾನವನ್ನು ಮಾಡಲು ' ಕೂರಿದಂ ' ಮೊದಲಾದುವು ಸಿದ್ಧಿಸುತ್ತಿದ್ದರೂ ' ಮಾತು, ಬೂತು ' ಮೊದಲಾದುವುಗಳಲ್ಲಿ ಅತಿಪ್ರಸಕ್ತಿಯುಂಟಾಗುವುದೆಂದು ' ಗುಣೋಕ್ತೇಃ ' ಎಂಬುದು ಸಂಬಂಧಿಸಲ್ಪಟ್ಟಿರುವುದೆಂದು ತಿಳಿಯಬೇಕು. ' ತೋಃ ' ಎಂದು ಹೇಳಿರುವುದರಿಂದ ' ನಿಡಿಯಂ, ನಿಡಿಯನಂ, ನಿಡಿಯಳ್, ನಿಡಿಯಳಂ ' ಮೊದಲಾದ ದು ಶಬ್ದಾಂತಗಳಿಗೆ ಬರುವುದಿಲ್ಲ.

ಇಲ್ಲಿ **ವರ್ಣಕಾರನು** — ' ಅದ್ಗುಣೋಕ್ತೇಃ, ತೋರ್ದಃ ' ಎಂಬೀಯೆರಡೂ ಸೂತ್ರಾರ್ಥಗಳನ್ನೂ ಸಂಗ್ರಹಿಸಿ —

> **ಪೆಱತೆಂಬಿವಱಂತ್ಯಾಕ್ಷರ**
> **ವೆಱೆಗುಂ ಗುಣವಚನದಂತ್ಯದುತ್ವಕ್ಕತ್ವಂ**
> **ನೆಱೆಗುಂ ತುಕಾರವಿರೆ ಬಂ**
> **ದೆಱೆಗುಗುಮಾ ತಾಣದೊಳ್ದಕಾರಾದೇಶಂ** ( **ಸೂತ್ರ ೧೫೨** )

ಎಂಬ ಸೂತ್ರವನ್ನು ಹೇಳಿರುವನು.

**ಅವತಾರಿಕೆ ೧೬೯**

' **ಅದ್ಗುಣೋಕ್ತೇಃ** ' ಎಂಬ ಸೂತ್ರದಿಂದ ಪ್ರಾಪ್ತವಾದ ಅ ಕಾರಾದೇಶಕ್ಕೆ ' ಎಳದು, ಪಬದು ' ಶಬ್ದಗಳ ವಿಷಯದಲ್ಲಿ ಬಾಧಕವಾಗಿ ಎ ಆದೇಶವನ್ನು ವಿಧಿಸುತ್ತಾನೆ.

**ಸೂತ್ರಂ ॥ ಎಳದುಪಬದೋರೆಯಃ ॥ ೧೬೯ ॥**

**ಅರ್ಥ ॥** ' **ಎಳದು, ಪಬದು** ' ಎಂಬ ಎರಡು **ಶಬ್ದಗಳ ದು ವಿನ ಸ್ಥಾನದಲ್ಲಿ** ' **ಎಯ** ' **ಎಂಬ ಆದೇಶವು ಪುಲ್ಲಿಂಗ-ಸ್ತ್ರೀಲಿಂಗವಿಷಯಗಳಲ್ಲಿ ಬರುವುದು.**

**ಉದಾಹರಣೆ ॥** ಎಳೆಯಂ, ಎಳೆಯನಂ; ಪಬೆಯಂ, ಪಬೆಯನಂ; ಎಳೆಯಳ್, ಎಳೆಯಳಂ; ಪಬೆಯಳ್, ಪಬೆಯಳಂ ॥ ಮೊದಲಾದುವು ಇವಕ್ಕೆ ಲಕ್ಷ್ಯಗಳು.

**ವಿಚಾರ ೧೬೯**

ಈ ಸೂತ್ರದಲ್ಲಿ — ' ಎಳದುಪಬದೋಃ, ಎಯಃ ' ಎಂದು ಎರಡು ಪದಗಳಿರುವುವು. ಪೂರ್ವದಿಂದ ' ದೋಃ, ಪುಂಸಿ, ಸ್ತ್ರಿಯಾಂ ' ಎಂಬಿವು ಅನುವರ್ತಿಸಲ್ಪಡುವುವು. ' ಎಳದು,

ಪಟಿದೋಃ' ಎಂಬುದು ಅವಯವಾವಯವಿಭಾವಸಂಬಂಧದಿಂದ 'ದೋಃ' ಎಂಬುದಕ್ಕೆ ವಿಶೇಷಣವು. 'ಎಯು' ಎಂಬ ಆ ಕಾರಾಂತ ಸಮುದಾಯವೇ ವಿಧೇಯವು. ತಥಾಚ — ಪುಲ್ಲಿಂಗ-ಸ್ತ್ರೀಲಿಂಗಗಳಲ್ಲಿ 'ಎಳದು, ಪಟಿದು' ಶಬ್ದಗಳ ಅವಯವವಾದ 'ದ' ಎಂಬುದಕ್ಕೆ 'ಎ' ಆದೇಶವು ಬರುವುದು ಎಂದು ಸೂತ್ರಾರ್ಥವಾಗುವುದರಿಂದ 'ಎಳದು, ಪಟಿದು' ಎಂಬಲ್ಲಿ 'ದು' ವಿಗೆ ಎ ಆದೇಶವನ್ನು ಮಾಡಲು 'ಎಳ+ಎಯು, ಪಟ+ಎಯು' ಎಂದಾಗಲು — 'ಉಬನಾಮಹಾನಾ' ಎಂಬುದರಿಂದ ಸ್ವರಕ್ಕೆ ಲೋಪವನ್ನು ಮಾಡಲು 'ಎಳೆಯಂ, ಪಟಿಯಂ' ಮೊದಲಾದುವು ಸಿದ್ಧಿಸುವುವು.

**ಅವತಾರಿಕೆ ೧೬೯**

ಹೀಗೆಯೇ 'ತೋರ್ದಃ' ಎಂಬ ಸೂತ್ರದಿಂದ ಪ್ರಾಪ್ತವಾದ ದ ಕಾರಕ್ಕೆ ಬಾಧಕವಾದ ಸೂತ್ರವನ್ನು ಹೇಳುತ್ತಾನೆ.

**ಸೂತ್ರಂ || ಪೊಸತೋರಂಬಃ || ೧೬೯ ||**

**ಅರ್ಥ || ಪುಲ್ಲಿಂಗ-ಸ್ತ್ರೀಲಿಂಗವಿಷಯದಲ್ಲಿ 'ಪೊಸತು' ಶಬ್ದದ 'ದು' ಸಂಜ್ಞಕವಾದ 'ತು' ವಿಗೆ 'ಅಂಬ' ಎಂಬಾದೇಶವು ಬರುವುದು.**

**ಉದಾಹರಣೆ ||** ಪೊಸಂಬಂ, ಪೊಸಂಬನಂ; ಪೊಸಂಬಳ್, ಪೊಸಂಬಳಂ || ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೧೬೯**

ಈ ಸೂತ್ರದಲ್ಲಿ 'ಪೊಸತೋಃ, ಅಂಬಃ' ಎಂಬ ಎರಡು ಪದಗಳಿರುವುವು. ಪೂರ್ವಸೂತ್ರದಿಂದ 'ದೋಃ, ಪುಂಸಿ, ಸ್ತ್ರಿಯಾಂ' ಎಂಬಿವು ಅನುವರ್ತಿಸಲ್ಪಡುವುವು. 'ಪೊಸತೋಃ' ಎಂಬುದು 'ದೋಃ' ಎಂಬುದಕ್ಕೆ ವಿಶೇಷಣವು. 'ಅಂಬಃ' ಎಂಬುದು ಆದೇಶವು. ತಥಾಚ — 'ಪೊಸತು' ಶಬ್ದದ 'ದು' ಸಂಜ್ಞಕವಾದ 'ದು' ವಿಗೆ ಪುಲ್ಲಿಂಗ-ಸ್ತ್ರೀಲಿಂಗವಿಷಯಗಳಲ್ಲಿ 'ಅಂಬ' ಎಂಬಾದೇಶವು ಬರುವುದೆಂದು ಸೂತ್ರಾರ್ಥವಾಗಲು 'ಪೊಸಂಬಂ' ಮೊದಲಾದ ರೂಪಗಳು ಸಿದ್ಧಿಸುವುವು.

ಇಲ್ಲಿ **ದರ್ಪಣಕಾರನು** —

ಎಳದುಪಟಿದೆಂಬಶಬ್ದಂ
ಗಳ ಮಧ್ಯಕ್ಕಂಟಿಕಾರಮುತ್ವಂ ಬಱಿದೆಂ
ದೊಳರುವಱುಕಾರದೊಳ್ ಸೇರ
ತೆ ಪೊಸತಱ ಕಡೆಗೆ ಬಿಂದುವೆರಸು ಬಕಾರಂ (ಸೂತ್ರ ೧೫೩)

ಎಂಬ ಸೂತ್ರವನ್ನು ಹೇಳಿ 'ಬಱು' ಎಂಬುದಕ್ಕೆ 'ಬಱುವಂ' ಎಂಬ ರೂಪವನ್ನೂ ಸಾಧಿಸಿರುವನು.

**ಅವತಾರಿಕೆ ೧೭೦**

ಅಪವಾದ ಸೂತ್ರಗಳನ್ನು ಹೇಳಿ ಇನ್ನು ಸ್ವತಂತ್ರವಿಧಿಯನ್ನು ಹೇಳುತ್ತಾನೆ.

**ಸೂತ್ರಂ || ಕೆಲವುಪಲವ್ರೋರದಬೌ ಚ || ೧೭೦ ||**

**ಅರ್ಥ ||** **ಕೆಲವು, ಪಲವು ಎಂಬೀ ಎರಡು ಶಬ್ದಗಳ ' ದು ' ವಿಗೆ ಪುಲ್ಲಿಂಗ-ಸ್ತ್ರೀಲಿಂಗ ವಿಷಯಗಳಲ್ಲಿ ' ಅತ್, ಅಬ, ಅಂಬ ' ಎಂಬ ಮೂರು ಆದೇಶಗಳೂ ಪರ್ಯಾಯದಿಂದ ಬರುವುವು.**

**ಉದಾಹರಣೆ ||** ಕೆಲರ್, ಕೆಲರಂ; ಕೆಲಬರ್, ಕೆಲಬರಂ; ಕೆಲಂಬರ್, ಕೆಲಂಬರಂ; ಪಲರ್, ಪಲರಂ; ಪಲಬರ್, ಪಲಬರಂ; ಪಲಂಬರ್, ಪಲಂಬರಂ || ಮೊದಲಾದುವು ಇದಕ್ಕೆ ಲಕ್ಷ್ಯಗಳು. ಸ್ತ್ರೀಲಿಂಗದಲ್ಲಿಯೂ ಹೀಗೆಯೇ ಆಗುವುವು.

**ವಿಚಾರ ೧೭೦**

ಈ ಸೂತ್ರದಲ್ಲಿ — ' ಕೆಲವುಪಲವ್ರೋಃ, ಅದಬೌ, ಚ ' ಎಂದು ಮೂರು ಪದಗಳಿರುವುವು. ಚ ಕಾರದಿಂದ ' ಅಂಬ ' ಎಂಬುದೂ ಸಂಬಂಧಿಸಲ್ಪಡುವುದು. ಪೂರ್ವದಿಂದ ' ದೋಃ, ಪುಂಸಿ, ಸ್ತ್ರಿಯಾಂ ' ಎಂಬಿವು ಸಂಬಂಧಿಸಲ್ಪಡುವುವು. ತಥಾಚ — ಪುಲ್ಲಿಂಗ-ಸ್ತ್ರೀಲಿಂಗವಿಷಯಗಳಲ್ಲಿ 'ಕೆಲವು, ಪಲವು ' ಶಬ್ದಗಳ ' ದು ' ವಿಗೆ ಅ ಕಾರಾದೇಶವೂ ' ಅಬ ' ಎಂಬಾದೇಶವೂ ' ಅಂಬ ' ಎಂಬಾದೇಶವೂ ಬರುವುವೆಂದು ಸೂತ್ರಾರ್ಥವಾಗುವುದರಿಂದ ' ಕೆಲರ್, ಕೆಲಬರ್, ಕೆಲಂಬರ್ ' ಮೊದಲಾದುವು ಸಿದ್ಧಿಸುವುವು. ಇಲ್ಲಿ ' ಅತ್ ' ಎಂಬಲ್ಲಿ ತ ಕಾರೋಚ್ಚಾರಣೆಯು ಸ್ಪಷ್ಟಾರ್ಥವೆಂದು ತಿಳಿಯುವುದು. ಚ ಕಾರವು ವಿಧೇಯಪದೋತ್ತರದಲ್ಲಿ ಪ್ರಯುಕ್ತವಾಗಿರುವುದರಿಂದ ' ಅಂಬ ' ಎಂದು ಪೂರ್ವಸೂತ್ರದಲ್ಲಿ ವಿಧೇಯವಾದುದನ್ನೇ ಪರಾಮರ್ಶೆ ಮಾಡುವುದು. ಇಲ್ಲಿ ' ಕೆಲವು, ಪಲವು ' ಗಳು ನಿತ್ಯ ಬಹುವಚನಗಳಾದುದರಿಂದ ಸ್ತ್ರೀಲಿಂಗ-ಪುಲ್ಲಿಂಗಗಳಲ್ಲಿ ಏನೂ ಭೇದವಿಲ್ಲ. ಆದುದರಿಂದ ಉಭಯ ಲಿಂಗಕ್ಕೂ ' ಕೆಲರ್ ' ಮೊದಲಾದುವೇ ಉದಾಹರಣೆಗಳೆಂದು ತಿಳಿಯಬೇಕು.

**ಅವತಾರಿಕೆ ೧೭೧**

ಹೀಗೆಯೇ ಶಬ್ದಾಂತರದಲ್ಲಿ ' ಬ ' ಆದೇಶವಿಧಾಯಕ ಸೂತ್ರವನ್ನು ಹೇಳುತ್ತಾನೆ.

**ಸೂತ್ರಂ || ನಿತೋರ್ಬಃ || ೧೭೧ ||**

**ಅರ್ಥ ||** **' ನಿತು ' ಪ್ರತ್ಯಯಾಂತ ಶಬ್ದದ ' ದು ' ವಿಗೆ ಪುಲ್ಲಿಂಗ-ಸ್ತ್ರೀಲಿಂಗ ವಿಷಯಗಳಲ್ಲಿ ಬ ಆದೇಶವು ಬರುವುದು.**

**ಉದಾಹರಣೆ ||** ಅನಿಬರ್, ಅನಿಬರಂ; ಇನಿಬರ್, ಇನಿಬರಂ; ಎನಿಬರ್, ಎನಿಬರಂ || ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೧೭೧**

ಈ ಸೂತ್ರದಲ್ಲಿ — ' ನಿತೋಃ, ಬಃ ' ಎಂದು ಎರಡು ಪದಗಳಿರುವುವು. ಪೂರ್ವದಿಂದ ' ದೋಃ, ಪುಂಸಿ, ಸ್ತ್ರಿಯಾಂ ' ಎಂದು ಅನುವರ್ತಿಸಲ್ಪಡುವುವು. ಇಲ್ಲಿ ' ನಿತೋಃ ' ಎಂಬುದು — ' **ಅದ್ವಿದೂದೋರ್ನಿತುಃ ಪರಿಮಾಣೇ ದೋರ್ಲುಕ್ಚ || ೯೩೫ ||** ' ಎಂಬ ಸೂತ್ರದಿಂದ ವಿಧಿಸುವ ' ನಿತು ' ಪ್ರತ್ಯಯಬೋಧಕಷಷ್ಠ್ಯಂತಪದವು. ಕೇವಲ ಪ್ರತ್ಯಯಕ್ಕೆ ಪ್ರಯೋಗವಿಲ್ಲದಿರುವುದರಿಂದ — ' **ಪ್ರತ್ಯಯಗ್ರಹಣೇ ಯಸ್ಮಾತ್ಸವಿಹಿತಸ್ತದಾದೇಸ್ತದಂತಸ್ಯ ಗ್ರಹಣಂ** ' ಎಂಬ ಪರಿಭಾಷೆಯಿಂದ ತದಂತಲಾಭವು ಬರುವುದರಿಂದ ' ನಿತು ಪ್ರತ್ಯಯಾಂತಸ್ಯ '

ಎಂದು ಅರ್ಥವಾಗುವುದು. ಇದು 'ದೋಃ' ಎಂಬುದಕ್ಕೆ ವ್ಯಧಿಕರಣವಿಶೇಷಣವು. 'ದೋಃ' ಎಂಬುದೇ ಸ್ಥಾನಿಯು; 'ಬಃ' ಎಂಬ ಅ ಕಾರ ವಿಶಿಷ್ಟವಾದುದೇ ಆದೇಶವು. ತಥಾಚ — ಪುಲ್ಲಿಂಗದಲ್ಲಿಯೂ ಸ್ತ್ರೀಲಿಂಗದಲ್ಲಿಯೂ 'ನಿತು' ಪ್ರತ್ಯಯಾಂತ ಶಬ್ದದ 'ದು' ಸಂಜ್ಞಕವಾದ 'ತು' ಎಂಬುದಕ್ಕೆ 'ಬ' ಎಂಬಾದೇಶವು ಬರುವುದೆಂದು ಸೂತ್ರಾರ್ಥವಾಗಲು 'ಅನಿಬರ್' ಮೊದಲಾದುವು ಸಿದ್ಧಿಸುವುವು. ಸ್ತ್ರೀಲಿಂಗದಲ್ಲಿಯೂ ಇದೇ ರೀತಿಯಾಗಿ ಆಗುವುವು.

ಇಲ್ಲಿ **ದರ್ಪಣಕಾರನು** —

ಪವಣೊಳಮಾ ಸಂಖ್ಯೆಯೊಳಂ
ವ್ಯವಹರಿಕುಂ ವತ್ವಮಲ್ಲಿ ಬಶ್ರುತಿಯುಂ ಸಂ
ಭವಿಕುಮದಂತಂ ಸಿಲೆ ಬಿಂ
ದುವಿಕಲ್ಪಂ ಬತ್ವಮೊರ್ಮೆಲೋಪಮನಾಳ್ಗುಂ (ಸೂತ್ರ ೯೯)

ಪವಣಂಸೂಚಿಪ ಸಂಖ್ಯೆಯ
ನವಿಶೇಷದಿನುಸಿರ್ವ ರೂಢಿಯನಿತಿನಿತೆನಿತೆ
ಲ್ಲವು ಕೆಲವು ಪಲವು ತಾಮುಂ
ತ್ಯವರ್ಣಲೋಪಮನೆ ವತ್ವಮೊದವಿರೆ ಪಡೆಗುಂ (ಸೂತ್ರ ೧೦೦)

ಎಂಬ ಸೂತ್ರಗಳನ್ನು ಹೇಳಿ ಪುಂಸ್ತ್ರೀಲಿಂಗವಿಷಯವಾದ ಪ್ರಮಾಣವಾಚಿಯಲ್ಲಿಯೂ ಸಂಖ್ಯಾವಾಚಿಯಲ್ಲಿಯೂ ಸಾಮಾನ್ಯವಾಗಿ ವ ಕಾರವು ಬರುವುದು. ಆ ವ ಕಾರಕ್ಕೆ ಕದಾಚಿತ್ ಬ ಕಾರವು ಬರುವುದು. ಆ ಬ ಕಾರಕ್ಕೆ ಅ ಕಾರಾಂತದಲ್ಲಿ ಬಿಂದು ವಿಕಲ್ಪದಿಂದ ಬರುವುದು. ಕದಾಚಿತ್ ಆ ಬ ಕಾರಕ್ಕೆ ಲೋಪವೂ ಬರುವುದೆಂದು ಹೇಳಿ 'ಕೆಲರ್, ಕೆಲಂಬರ್, ಕೆಲಬರ್' ಮೊದಲಾದ ಪ್ರಯೋಗಗಳನ್ನು ಸಾಧಿಸಿರುವನು. ಮತ್ತು 'ಅನಿತು' ಮೊದಲಾದುವಕ್ಕೆ ವತ್ವವು ಪರದಲ್ಲಿದ್ದರೂ ಅಂತ್ಯಲೋಪವಾಗುವುದೆಂದು ಹೇಳಿ 'ಅನಿಬರ್' ಮೊದಲಾದುವನ್ನೂ ಸಾಧಿಸಿರುವನು. ಆದರೆ ಇವನ ಮತದಲ್ಲಿ 'ಕೆಲವರ್, ಎಲ್ಲವರ್' ಮೊದಲಾದ ವ ಕಾರ ಘಟಿತವಾದ ಪ್ರಯೋಗಗಳೂ ಸಿದ್ಧಿಸುವುವು. ಇಲ್ಲಿ 'ಎಲ್ಲವು' ಎಂಬ ಶಬ್ದವನ್ನು ಸೇರಿಸಿರುವನು. ಇದು ಸರ್ವನಾಮವಾಗಿರುವುದು. ಆದಾಗ್ಯೂ ಪ್ರಮಾಣವಾಚಕವೆಂದು ಇಲ್ಲಿ ಪರಿಗಣಿಸಲ್ಪಟ್ಟಿದೆ ಎಂದು ತಿಳಿಯುವುದು. ಅಥವಾ 'ಅನಿತಿನಿತೆನಿತು' ಎಂಬೆಲ್ಲವು — ಎಂದು ಪೂರ್ವೋಕ್ತವಾದ 'ಅನಿತು' ಮೊದಲಾದುವನ್ನು ಸಂಕ್ಷೇಪಭೂತವಾಗಿ ಪರಾಮರ್ಶಿಸಲು ಪ್ರಯುಕ್ತವಾಗಿರುವುದು ಎಂದು ತಿಳಿಯಬೇಕು.

**ಅವತಾರಿಕೆ ೧೭೨**

ಹೀಗೆಯೇ 'ಬಱಿದು' ಶಬ್ದಕ್ಕೂ ಆದೇಶವಿಶೇಷವನ್ನು ತಿಳಿಸುತ್ತಾನೆ.

**ಸೂತ್ರಂ || ಬಱಿದೋರುವೊಂಬೌ || ೧೭೨ ||**

**ಅರ್ಥ ||** 'ಬಱಿದು' ಎಂಬ ಶಬ್ದದ 'ದು' ವಿಗೆ **ಪುಲ್ಲಿಂಗ-ಸ್ತ್ರೀಲಿಂಗವಿಷಯಗಳಲ್ಲಿ 'ಉವ, ಉಂಬ' ಎಂಬ ಆದೇಶಗಳು ಪರ್ಯಾಯವಾಗಿ ಬರುವುವು.**

**ಉದಾಹರಣೆ ||** ಬಱುವಂ, ಬಱುವನಂ; ಬಱುಂಬಂ, ಬಱುಂಬನಂ; ಬಱುವಳ್, ಬಱುವಳಂ; ಬಱುಂಬಳ್, ಬಱುಂಬಳಂ || **ಮೊದಲಾದುವು** ಇದಕ್ಕೆ ಲಕ್ಷ್ಯಗಳು.

**ವಿಚಾರ ೧೭೩**

ಈ ಸೂತ್ರದಲ್ಲಿ — 'ಬಱಿದೋಃ, ಉವೊಂಬೌ' ಎಂದು ಎರಡು ಪದಗಳಿರುವುವು. ಪೂರ್ವದಿಂದ 'ದೋಃ, ಪುಂಸಿ, ಸ್ತ್ರಿಯಾಂ' ಎಂದು ಅನುವರ್ತಿಸಲ್ಪಡುವುವು. 'ಬಱಿದೋಃ' ಎಂಬುದು 'ದೋಃ' ಎಂಬುದಕ್ಕೆ ವಿಶೇಷಣವು. ಇದು ಸ್ಥಾನಷಷ್ಠ್ಯಂತವು. 'ಉವ, ಉಂಬ' ಇವೆರಡೂ ವಿಧೇಯಗಳು. ಇವು ಪರ್ಯಾಯಗಳಾಗಿ ಬರುವುವು. ತಥಾಚ — 'ಬಱಿದು' ಶಬ್ದದ 'ದು' ಸಂಜ್ಞಕವಾದ 'ದು' ಎಂಬುದಕ್ಕೆ ಪುಲ್ಲಿಂಗ ಸ್ತ್ರೀಲಿಂಗಗಳಲ್ಲಿ 'ಉವ, ಉಂಬ' ಎಂದು ಎರಡಾದೇಶಗಳು ಬರುವುವೆಂದು ಸೂತ್ರಾರ್ಥವಾಗುವುದರಿಂದ 'ಬಱುವಂ, ಬಱುವಳ್' ಮೊದಲಾದುವು ಸಿದ್ಧಿಸುವುವು.

**ಅವತಾರಿಕೆ ೧೭೪**

ಹೀಗೆಯೇ ಕೆಲವು ಸಂಖ್ಯಾವಾಚಕಗಳಿಗೆ ದಿಮ್ ಆದೇಶವು ಬರುವುದೆಂದು ಹೇಳುತ್ತಾನೆ.

**ಸೂತ್ರಂ ॥ ಒಂಬತ್ತು ಪತ್ತ್ರೋಸ್ತಾ ದಿಮ್ ॥ ೧೭೪ ॥**

**ಅರ್ಥ ॥ 'ಒಂಬತ್ತು, ಪತ್ತು' ಎಂಬ ಎರಡು ಶಬ್ದಗಳ ತ ಕಾರ ಸಹಿತವಾದ 'ದು' ವಿನ ಸ್ಥಾನದಲ್ಲಿ ದಿಮಾದೇಶವು ಪುಂಸ್ತ್ರೀಲಿಂಗಗಳೆರಡರಲ್ಲಿಯೂ ಬರುವುದು.**

**ಉದಾಹರಣೆ** ॥ ಒಂಬದಿಂಬರ್, ಒಂಬದಿಂಬರಂ; ಪದಿಂಬರ್, ಪದಿಂಬರಂ ॥ ಸ್ತ್ರೀಲಿಂಗ ದಲ್ಲಿಯೂ ಇವೇ ರೂಪಗಳಾಗುವುವು.

**ವಿಚಾರ ೧೭೪**

ಈ ಸೂತ್ರದಲ್ಲಿ —'ಒಂಬತ್ತುಪತ್ತ್ರೋಃ, ತಾ, ದಿಮ್' ಎಂದು ಮೂರು ಪದಗಳಿರುವುವು. ಪೂರ್ವದಿಂದ 'ದೋಃ, ಪುಂಸಿ, ಸ್ತ್ರಿಯಾಂ' ಎಂದು ಅನುವರ್ತಿಸಲ್ಪಡುವುವು. 'ಒಂಬತ್ತು ಪತ್ತ್ರೋಃ' ಎಂಬುದು ಸಂಖ್ಯಾವಾಚಕವಾದ ಷಷ್ಠ್ಯಂತಪದವು. ಇದು 'ದೋಃ' ಎಂಬುದಕ್ಕೆ ವಿಶೇಷಣವು. 'ತಾ' ಎಂಬುದು ತ ಕಾರ ಮಾತ್ರಬೋಧಕ ಸಹಾಯಾರ್ಥಕ ತೃತೀಯಾಂತ ಪದವು. ಇದೂ 'ದೋಃ' ಎಂಬುದಕ್ಕೆ ವಿಶೇಷಣವು. 'ದಿಮ್' ಎಂಬುದು ವಿಧೇಯವು. ತಥಾಚ — ಪುಂಸ್ತ್ರೀಲಿಂಗಗಳಲ್ಲಿ 'ಒಂಬತ್ತು, ಪತ್ತು' ಎಂಬ ಸಂಖ್ಯಾವಾಚಕ ಶಬ್ದಗಳ ತ ಕಾರದಿಂದ ಕೂಡಿದ ದು ಸಂಜ್ಞಕವಾದ 'ತು' ಎಂಬುದಕ್ಕೆ ದಿಮಾದೇಶವು ಬರುವುದೆಂದು ಸೂತ್ರಾರ್ಥವಾಗುವುದರಿಂದ 'ಒಂಬದಿಂಬರ್' ಮೊದಲಾದ ಪ್ರಯೋಗಗಳು ಸಿದ್ಧಿಸುವುವೆಂದು ತಿಳಿಯಬೇಕು.

ಆದರೆ ಇಲ್ಲಿ ಸಂಖ್ಯಾಶಬ್ದಗಳೆಲ್ಲವೂ ಅವ್ಯಕ್ತಲಿಂಗಗಳಾದುದರಿಂದ ಅವಕ್ಕೆ ಸ್ತ್ರೀಪುಂಸಲಿಂಗಾಧೀನವಾದ ದಿಮಾದೇಶವನ್ನು ವಿಧಿಸುವುದು ಅಸಂಗತವೆಂದು ತೋರುವುದು. ಆದಾಗ್ಯೂ — ಲೋಕದಲ್ಲಿ ಸಂಖ್ಯಾಶಬ್ದಗಳು ಕೇವಲ ಸಂಖ್ಯಾಬೋಧಕಗಳೆಂದೂ ಸಂಖ್ಯೇಯಬೋಧಕಗಳೆಂದೂ ಎರಡು ತೆರನಾಗಿರುವುವು ಎಂಬುದು —

**'ಆದಶತಃ ಸಂಖ್ಯಾಃ ಸಂಖ್ಯೇಯೇ, ಅತ ಊರ್ಧ್ವಂ ಸಂಖ್ಯಾನೇ ಸಂಖ್ಯೇಯೇ ಚ'**

ಎಂಬ ವಚನದಿಂದಲೂ—

**'ವಿಂಶತ್ಯಾದ್ಯಾಸ್ಸದೈಕತ್ವೇ ಸರ್ವಾಸ್ಸಂಖ್ಯೇಯಸಂಖ್ಯಯೋಃ'**

ಮೊದಲಾದ ಕೋಶದಿಂದಲೂ ತಿಳಿದುಬರುವುದು. ವಿಚಾರ ಮಾಡಲು ಇಲ್ಲಿ ಈ ವಚನದಲ್ಲಿ 'ಆದಶತಃ' ಎಂದು ದರ್ಶ ಶಬ್ದವನ್ನು ಅವಧಿಯಾಗಿ ಪಾಠಮಾಡಿರುವುದರಿಂದ 'ಏಕ ದ್ವಿ ತ್ರಿ' ಮೊದಲಾದ ಸಂಸ್ಕೃತಸಂಖ್ಯಾಶಬ್ದಗಳಿಗೇ ಈ ವಿಭಾಗಗಳಲ್ಲದೆ ಭಾಷಾಶಬ್ದಗಳಿಗಲ್ಲವೆಂದು ತೋರುವುದು. ಆದಾಗ್ಯೂ ತದರ್ಥಕವಾದ 'ಒಂದು, ಎರಡು, ಮೂರು' ಮೊದಲಾದ ಪತ್ತು ಶಬ್ದಪರ್ಯಂತ ಭಾಷಾಶಬ್ದಗಳಿಗೂ ಸಂಖ್ಯೇಯವಾಚಿತ್ವವೂ ಅಲ್ಲಿಂದ ಮುಂದೆ 'ಪನ್ನೊಂದು, ಪನ್ನೆರಡು' ಮೊದಲಾದುವುಗಳಿಗೆ ಸಂಖ್ಯಾಸಂಖ್ಯೇಯೋಭಯವಾಚಕತ್ವವೂ ಭಾಷೆಯಲ್ಲಿಯೂ ರೂಢಿಯಾಗಿರುವುದರಿಂದ ಉಂಟೆಂದು ತಿಳಿದು — ಕೇವಲ ಸಂಖ್ಯಾವಾಚಿಗಳಿಗೇ ಲಿಂಗಾಧೀನ ಪ್ರಕ್ರಿಯೆಯಿಲ್ಲವಾದುದರಿಂದ ಅವ್ಯಕ್ತಲಿಂಗವೆಂಬ ವ್ಯವಹಾರವು. ಸಂಖ್ಯೇಯವಾಚಿಗಳಿಗಾದರೊ ಲಿಂಗಾಯತ್ತಪ್ರಕ್ರಿಯೆಯಿರುವುದರಿಂದ ವ್ಯಕ್ತಲಿಂಗವೆಂಬ ವ್ಯವಹಾರವು ಸಿದ್ಧವಾಗುವುದು. ಆದುದರಿಂದ ಸಂಖ್ಯಾಶಬ್ದಗಳೂ ಕಥಂಚಿತ್ ವ್ಯಕ್ತಲಿಂಗಗಳಾಗುವುವೆಂದು ಇಲ್ಲಿ 'ಪುಲ್ಲಿಂಗ, ಸ್ತ್ರೀಲಿಂಗವಿಷಯಗಳಲ್ಲಿ' ಎಂದು ಹೇಳಿರುವುದು.

ಇಲ್ಲಿ 'ತಾ' ಎಂದು ನಿರ್ದೇಶ ಮಾಡಿರುವುದರಿಂದ 'ಒಂಬತ್ತುಪತ್ತು' ಎಂಬಲ್ಲಿ ತ ಕಾರ ದಿಂದ 'ಸಹಿತವಾದುದು' ಎಂಬುದೇ 'ದಿಮ್' ಆದೇಶಕ್ಕೆ 'ಸ್ಥಾನಿ' ಎಂದು ಏರ್ಪಡುವುದು. ಇಲ್ಲದಿದ್ದರೆ 'ದು' ಮಾತ್ರಕ್ಕೆ 'ದಿಮ್' ಆದೇಶವನ್ನು ವಿಧಿಸಲು ಒಂದು ತ ಕಾರವು ಉಳಿಯ ಬೇಕಾಗುವುದು. ಆದುದರಿಂದ 'ತಾ' ಎಂಬ ವಿಶೇಷಣಮಾಡಲ್ಪಟ್ಟಿದೆ ಎಂದು ತಿಳಿಯಬೇಕು. ಈ ವಿಶೇಷಣವು 'ಒಂಬತ್ತುಪತ್ತು' ಎಂದು ದ್ವಿ ತ ಕಾರಕ ಶಬ್ದವನ್ನುದ್ದೇಶಿಸಿ ಹೇಳಲ್ಪಟ್ಟಿದೆ. 'ಒಂಬತು, ಪತು' ಎಂಬ ಏಕ ತ ಕಾರವುಳ್ಳ ಶಬ್ದಗಳೂ ಇರುವುವೆಂದು —

> ನಂದನನುತ್ಸಂಗದೊಳಿ
> ದ್ರ್ದೊಂದಯ್ದೆರಡೊಂಬತೆಂದು ತೊದಳಿಸೆವಿನಮೋ
> ರೊಂದನೆ ಕುಡಿಪೆರಲಿಂದಮು
> ದೆಂದೆಣಿಸುಗುಮೆನ್ನ ಕೊರಲ ಹಾರದ ಮುತ್ತಂ

ಮೊದಲಾದ ಪ್ರಯೋಗಗಳಿಂದ ತಿಳಿಯುವುದು. ಈಗ ಇಲ್ಲಿ 'ತಾ' ಎಂಬ ವಿಶೇಷಣವು ವ್ಯರ್ಥ ವೆಂದು ತಿಳಿಯಬೇಕು.

**ಅವತಾರಿಕೆ ೧೭೪**

ಇನ್ನು ಸರ್ವನಾಮವಿಶೇಷದಲ್ಲಿ ಆದೇಶ ವಿಧಿಯನ್ನು ಹೇಳುತ್ತಾನೆ.

**ಸೂತ್ರಂ || ಆವುದೋೞರಾರ್ || ೧೭೪ ||**

**ಅರ್ಥ ||** ಪುಲ್ಲಿಂಗ-ಸ್ತ್ರೀಲಿಂಗವಿಷಯಗಳಲ್ಲಿ **'ಆವುದು'** ಶಬ್ದಕ್ಕೆ **'ಆರ್'** ಎಂಬ **ಆದೇಶವು ಬರುವುದು.**

**ಉದಾಹರಣೆ ||** ಆರ್, ಆರಂ, ಆರಿಂ || ಇವೇ ಸ್ತ್ರೀಲಿಂಗದಲ್ಲಿಯೂ ಉದಾಹರಣೆಗಳು.

**ವಿಚಾರ ೧೭೪**

ಈ ಸೂತ್ರದಲ್ಲಿ — 'ಆವುದೋಃ, ಆರ್' ಎಂದು ಎರಡು ಪದಗಳಿರುವುವು. 'ಪುಂಸಿ, ಸ್ತ್ರಿಯಾಂ' ಎಂದು ಅನುವರ್ತಿಸಲ್ಪಡುವುವು. 'ಆವುದೋಃ' ಎಂಬುದು ಸ್ಥಾನಷಷ್ಠ್ಯಂತವು.

'ಆರ್' ಎಂಬುದು ಆದೇಶವು. ಇಲ್ಲಿ 'ದೋಃ' ಎಂಬುದಕ್ಕೆ ನಿವೃತ್ತಿಯಾದುದರಿಂದ ಸರ್ವಾದೇಶವಾಗುವುದು. ತಥಾಚ — ಪುಂಸ್ತ್ರೀಲಿಂಗಗಳಲ್ಲಿ 'ಆವುದು' ಶಬ್ದಕ್ಕೆ 'ಆರ್' ಎಂಬ ಆದೇಶವು ಬರುವುದೆಂದು ಸೂತ್ರಾರ್ಥವಾಗುವುದರಿಂದ 'ಆರ್, ಆರಂ' ಮೊದಲಾದ ರೂಪಗಳು ಸಿದ್ಧಿಸುವುವು.

**ಅವತಾರಿಕೆ ೧೭೬**

ಹೀಗೆಯೇ ಆವುದು ಶಬ್ದಕ್ಕೆ ಅರ್ಥವಿಶೇಷದಲ್ಲಿ ಆದೇಶಾಂತರವನ್ನು ವಿಧಿಸುತ್ತಾನೆ.

**ಸೂತ್ರಂ || ಆವೊನಾವಾ ಚೈಕತ್ವೇ || ೧೭೬ ||**

**ಅರ್ಥ || ಪುಲ್ಲಿಂಗ-ಸ್ತ್ರೀಲಿಂಗಗಳಲ್ಲಿ ಏಕತ್ವವು ತೋರುತ್ತಿರಲು 'ಆವುದು' ಶಬ್ದಕ್ಕೆ— 'ಆವೊ, ಆವ, ಆರ್' ಎಂಬ ಮೂರು ಆದೇಶಗಳು ಬರುವುವು.**

**ಉದಾಹರಣೆ ||** ಆವೊ, ಆವೊನಂ; ಆವಂ, ಆವನಂ; ಆರ್, ಆರಂ; ಆವೊಳ್, ಆವೊಳಂ; ಆವಳ್, ಆವಳಂ; ಆರ್, ಆರಂ || ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೧೭೬**

ಈ ಸೂತ್ರದಲ್ಲಿ — 'ಆವೊನಾವೌ, ಚ, ಏಕತ್ವೇ' ಎಂದು ಮೂರು ಪದಗಳಿರುವುವು. ಪೂರ್ವಸೂತ್ರದಿಂದ 'ಆವುದೋಃ, ಆರ್, ಪುಂಸಿ, ಸ್ತ್ರಿಯಾಂ' ಎಂಬಿವು ಅನುವರ್ತಿಸಲ್ಪಡುವುವು. 'ಆವುದೋಃ' ಎಂಬುದು ಸ್ಥಾನಷಷ್ಠ್ಯಂತಪದವು. 'ಆವೊ, ಆವ, ಆರ್' ಎಂಬ ಮೂರು ವಿಧೇಯಗಳು. ಚ ಕಾರವು ಇವಕ್ಕೆ ಪರ್ಯಾಯತ್ವವನ್ನು ಬೋಧಿಸುವುದು. 'ಏಕತ್ವೇ' ಎಂಬುದೂ ವಿಷಯಸಪ್ತಮ್ಯಂತವು. ತಥಾಚ — ಏಕತ್ವವು ತೋರುವಾಗ ಪುಲ್ಲಿಂಗ-ಸ್ತ್ರೀಲಿಂಗಗಳಲ್ಲಿ 'ಆವುದು' ಶಬ್ದಕ್ಕೆ 'ಆವೊ, ಆವ, ಆರ್' ಎಂಬಾದೇಶಗಳು ಪರ್ಯಾಯವಾಗಿ ಬರುವುದೆಂದು ಸೂತ್ರಾರ್ಥವಾಗುವುದರಿಂದ 'ಆವೊ' ಮೊದಲಾದ ಉದಾಹರಣೆಗಳು ಸಿದ್ಧಿಸುವುವು. 'ಆವೊಳ್' ಮೊದಲಾದ ಉದಾಹರಣೆಗಳಲ್ಲಿ ಳ ಕಾರವು ಪರದಲ್ಲಿರುವಾಗ 'ಆವೊನ್' ಆದೇಶ ಸಂಬಂಧಿ ನ ಕಾರಕ್ಕೆ— ಲುಪ್ತ ನಃ || ೧೮೩ || ಎಂಬ ಸೂತ್ರದಿಂದ ಲೋಪವು ಬಂದಿರುವುದೆಂದು ತಿಳಿಯಬೇಕು.

**ಅವತಾರಿಕೆ ೧೭೭**

ಹೀಗೆಯೇ 'ಆವುದು' ಶಬ್ದಕ್ಕೆ ನಪುಂಸಕದಲ್ಲಿ ಆದೇಶಾಂತರವನ್ನು ವಿಧಿಸುತ್ತಾನೆ.

**ಸೂತ್ರಂ || ವಾ ನಪ್ಯೇತುಃ || ೧೭೭ ||**

**ಅರ್ಥ || ನಪುಂಸಕಲಿಂಗದಲ್ಲಿ ಏಕತ್ವವು ತೋರುವಾಗ 'ಆವುದು' ಶಬ್ದಕ್ಕೆ ವಿಕಲ್ಪವಾಗಿ 'ಏತು' ಎಂಬಾದೇಶವು ಬರುವುದು.**

**ಉದಾಹರಣೆ ||** ಏತಱಂ, ಆವುದಱಂ; ಏತಱ, ಆವುದಱ; ಏತಱತ್ತಣಿಂ, ಆವುದಱತ್ತಣಿಂ; ಏತಱೊಳ್, ಆವುದಱೊಳ್ || ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೧೭೭**

ಈ ಸೂತ್ರದಲ್ಲಿ — 'ವಾ, ನಪಿ, ಏತುಃ' ಎಂದು ಮೂರು ಪದಗಳಿರುವುವು. ಪೂರ್ವಸೂತ್ರದಿಂದ 'ಆವುದೋಃ, ಏಕತ್ವೇ' ಎಂಬೆರಡು ಪದಗಳು ಅನುವರ್ತಿಸಲ್ಪಡುವುವು. ಇಲ್ಲಿ

' ನಪಿ ' ಎಂದು ಹೇಳಿರುವುದರಿಂದ ' ಪುಂಸಿ, ಸ್ತ್ರಿಯಾಂ ' ಎಂಬುದು ನಿವೃತ್ತವಾಗುವುದು. ತಥಾಚ ನಪುಂಸಕಲಿಂಗದಲ್ಲಿ ಏಕತ್ವವು ತೋರುವಾಗ ' ಆವುದು ' ಶಬ್ದಕ್ಕೆ ವಿಕಲ್ಪವಾಗಿ ' ಏತು ' ಎಂಬಾದೇಶವು ಬರುವುದು ಎಂದು ಸೂತ್ರಾರ್ಥವಾಗಲು ' ಏತಱಿಂ ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು. ಇದು ವಿಕಲ್ಪವಾದುದರಿಂದ ಈ ಆದೇಶವು ಬಾರದಿದ್ದರೆ ' ಆವುದಱಿಂ ' ಎಂದಾಗುವುದು. ಇಲ್ಲಿ — ' ನಪಿ ' ಎಂದು ಹೇಳಿರುವುದರಿಂದ ಪುಲ್ಲಿಂಗ-ಸ್ತ್ರೀಲಿಂಗಗಳಲ್ಲಿ ಆರಾದ್ಯಾದೇಶಗಳೇ ......ವು. ಪ್ರಥಮಾ, ದ್ವಿತೀಯಾ, ಚತುರ್ಥೀ ವಿಭಕ್ತಿಗಳಲ್ಲಿ ವಕ್ಷ್ಯಮಾಣ ವಿಶೇಷಗಳಿರುವುದರಿಂದ ಇಲ್ಲಿ ಅವುಗಳನ್ನು ಉದಾಹರಿಸದೆ ತೃತೀಯಾ, ಪಂಚಮೀ, ಷಷ್ಠೀ, ಸಪ್ತಮೀ ವಿಭಕ್ತಿಗಳನ್ನೆ ಉದಾಹರಿಸಿರುವುದೆಂದು ತಿಳಿಯಬೇಕು.

**ಅವತಾರಿಕೆ ೧೭೭**

ಹೀಗೆಯೇ ' ಆವುದು ' ಶಬ್ದಕ್ಕೆ ಚತುರ್ಥೀ ನಪುಂಸಕೈಕವಚನದಲ್ಲಿ ಆದೇಶವಿಶೇಷವನ್ನು ವಿಧಿಸುತ್ತಾನೆ.

**ಸೂತ್ರಂ || ಕೆತ್ಯೇಚ್ಚ || ೧೭೭ ||**

**ಅರ್ಥ ||** ನಪುಂಸಕಲಿಂಗದಲ್ಲಿ ಏಕತ್ವವು ತೋರುವಾಗ ' ಆವುದು ' **ಶಬ್ದಕ್ಕೆ ಏ ಕಾರಾದೇಶವೂ** ' ಏತು ' ಎಂಬ ಆದೇಶವೂ ವಿಕಲ್ಪವಾಗಿ ಬರುವುವು.

**ಉದಾಹರಣೆ ||** ಏಕೆ, ಏತರ್ಕ್ಕೆ, ಆವುದರ್ಕ್ಕೆ || ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೧೭೭**

ಈ ಸೂತ್ರದಲ್ಲಿ — ಕೆತಿ, ಏತ್, ಚ ' ಎಂದು ಮೂರು ಪದಗಳಿರುವುವು. ' ಕೆತಿ ' ಎಂಬುದು ಉಚ್ಚಾರಣಾರ್ಥಕ ಕ ಕಾರದಿಂದ ಕೂಡಿದ ಚತುರ್ಥ್ಯೇಕವಚನಕ್ಕೆ ಅನುಕರಣವಾದ ಸಪ್ತಮ್ಯಂತವು. ' ಏತ್ ' ಎಂಬುದೂ ಏ ಕಾರಮಾತ್ರಬೋಧಕವು. ಚ ಕಾರದಿಂದ ಪೂರ್ವಸೂತ್ರದಲ್ಲಿ ವಿಧೇಯವಾದ ' ಏತುಃ ' ಎಂಬುದನ್ನು ಅನುವರ್ತಿಸುವುದು. ಆದುದರಿಂದ ಈ ಸೂತ್ರದಲ್ಲಿ ವಿಧೇಯಗಳೆರಡೆಂದು ತಿಳಿಯುವುದು. ' ಆವುದೋಃ, ನಪಿ, ಏಕತ್ವೇ, ವಾ ' ಎಂಬ ನಾಲ್ಕು ಪದಗಳೂ ಅನುವರ್ತಿಸಲ್ಪಡುವುವು. ತಥಾಚ — ನಪುಂಸಕಲಿಂಗದಲ್ಲಿ ಏಕತ್ವವು ತೋರುವಾಗ ' ಆವುದು ' ಶಬ್ದಕ್ಕೆ ' ಕೆತ್ ' ಎಂಬ ಚತುರ್ಥೀವಿಭಕ್ತಿಯು ಪರವಾಗಲು ' ಏ ' ಕಾರಾದೇಶವೂ ' ಏತು ' ಎಂಬ ಆದೇಶವೂ ವಿಕಲ್ಪವಾಗಿ ಬರುವುವೆಂದು ಸೂತ್ರಾರ್ಥವಾಗಲು ' ಏಕೆ, ಏತರ್ಕ್ಕೆ ' ಮೊದಲಾದುವು ಸಿದ್ಧಿಸುವುವು. ಈ ಆದೇಶಗಳು ಬಾರದಿದ್ದರೆ ' ಆವುದರ್ಕ್ಕೆ ' ಎಂದಾಗುವುದು.

ಇಲ್ಲಿ ಉದಾಹರಿಸಿರುವ — ' ಏತರ್ಕ್ಕೆ, ಆವುದರ್ಕ್ಕೆ ' ಎಂಬ ಪ್ರಯೋಗಗಳಲ್ಲಿ ' ಆವುದು ' ಶಬ್ದಕ್ಕೆ ಗೆತ್-ಪ್ರತ್ಯಯದಲ್ಲಿ ' **ಅದ್ವಾದೇಃ ಕಿತ್ || ೨೬೯ ||** ' ಎಂಬ ಸೂತ್ರದಿಂದ ' ಅಱು ' ಎಂಬಾದೇಶವನ್ನೂ ಅದಕ್ಕೆ ರೇಫಾದೇಶವನ್ನೂ ಮಾಡಿ — ' **ಱೋರ್ವಿಕೃತಾತ್ || ೨೭೫ ||** ' ಎಂಬ ಸೂತ್ರದಿಂದ ಗೆತ್-ಪ್ರತ್ಯಯದ ಗ ಕಾರಕ್ಕೆ ಕ ಆದೇಶವನ್ನು ಮಾಡಲು ' ಏತರ್ಕ್ಕೆ, ಆವುದರ್ಕ್ಕೆ ' ಎಂಬ ರೂಪಗಳಾಗಿರುವುವು. ' ಏಕೆ ' ಎಂದು ರೂಪವು ಸಿದ್ಧಿಸುವುದಿಲ್ಲ. ' **ಗೆತಃ ಕ ಆದೇಃ || ೨೭೪ ||** ' ಎಂಬ ಸೂತ್ರವಾದರೋ ಅ ಕಾರಾಂತ ವಿಷಯಕವಾಗಿರುವುದು. ಆದುದರಿಂದ ಈ ಸೂತ್ರದಲ್ಲಿ ಕೆತ್-ಪ್ರತ್ಯಯವು ಪರವಾಗಿರಲು ಏ ಕಾರಾದೇಶ ವಿಧಾನವು ವ್ಯರ್ಥವೆಂದು

ತೋರಲು ಇಲ್ಲಿ ಕ ಕಾರೋಚ್ಚಾರಣೆಯನ್ನು ಮಾಡಿರುವ ಸೂತ್ರಕಾರರಿಗೆ ಕ್ವಚಿತ್ ಬೇರೆ ಕಡೆ ಯಲ್ಲಿಯೂ ಕ ಕಾರಾದೇಶವು ಇಷ್ಟವೆಂದು ತಾತ್ಪರ್ಯವನ್ನು ಕಲ್ಪಿಸಿ 'ಏಕೆ' ಎಂಬುದಕ್ಕೆ ಸಾಧುತ್ವವನ್ನು ಹೇಳಬೇಕು.

**ಅವತಾರಿಕೆ ೧೭೮**

ಹೀಗೆಯೇ 'ಆವುದು' ಶಬ್ದಕ್ಕೆ ವಿಭಕ್ತಿವಿಶೇಷಗಳಲ್ಲಿ ಆದೇಶಾಂತರವನ್ನು ವಿಧಿಸುತ್ತಾನೆ.

**ಸೂತ್ರಂ || ಏನ್ಮ್ವೋಃ || ೧೭೮ ||**

**ಅರ್ಥ ||** ನಪುಂಸಕಲಿಂಗದಲ್ಲಿ ಏಕತ್ವವು ತೋರುವಾಗ ಪ್ರಥಮಾ, ದ್ವಿತೀಯಾ ವಿಭಕ್ತಿಗಳು ಪರವಾಗಿರಲು 'ಆವುದು' ಶಬ್ದಕ್ಕೆ 'ಏನ್' ಎಂಬಾದೇಶವು ವಿಕಲ್ಪವಾಗಿ ಬರುವುದು.

**ಉದಾಹರಣೆ ||** ಏನ್, ಆವುದು; ಏನಂ, ಆವುದಂ || ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೧೭೮**

ಈ ಸೂತ್ರದಲ್ಲಿ — 'ಏನ್, ಮ್ವೋಃ' ಎಂದು ಎರಡು ಪದಗಳಿರುವುವು. ಪೂರ್ವ ಸೂತ್ರದಿಂದ — 'ಆವುದೋಃ, ಏಕತ್ವೇ, ವಾ, ನಪಿ' ಎಂದು ನಾಲ್ಕು ಪದಗಳು ಅನುವರ್ತಿ ಸಲ್ಪಡುವುವು. 'ಏನ್' ಎಂಬುದು ಇಲ್ಲಿ ವಿಧೇಯವು. 'ಮ್ವೋಃ' ಎಂಬುದು ಪರ ಸಪ್ತಮ್ಯಂತವು. 'ಆವುದೋಃ' ಎಂಬುದು ಸ್ಥಾನಷಷ್ಠ್ಯಂತವು. 'ಏಕತ್ವೇ, ನಪಿ' ಇವೆರಡೂ ವಿಷಯಸಪ್ತಮ್ಯಂತಗಳು. ತಥಾಚ — ನಪುಂಸಕಲಿಂಗದಲ್ಲಿ ಏಕತ್ವವು ತೋರುವಾಗ 'ಆವುದು' ಶಬ್ದಕ್ಕೆ 'ಮ್, ಅಮ್' ಪ್ರತ್ಯಯಗಳು ಪರವಾಗಲು ವಿಕಲ್ಪವಾಗಿ 'ಏನ್' ಎಂಬಾದೇಶವು ಬರುವುದೆಂದು ಸೂತ್ರಾರ್ಥವಾಗುವುದರಿಂದ 'ಏನ್, ಏನಂ' ಎಂದಾಗುವುವು. ಈ ಆದೇಶವು ಬಾರದಿದ್ದರೆ 'ಆವುದು' ಎಂದೇ ಇರುವುದು. ಇಲ್ಲಿ 'ಏನ್, ಆವುದು' ಎಂಬಲ್ಲಿ ಪ್ರಥಮಾ ವಿಭಕ್ತಿಗೆ — '**ಮ್ಃ || ೨೫೧ ||**' ಎಂಬ ಸೂತ್ರದಿಂದ ಲೋಪವು ಬಂದಿರುವುದೆಂದು ತಿಳಿಯ ಬೇಕು.

ಈ ವಿಷಯದಲ್ಲಿ **ದರ್ಪಣಕಾರನು** —

ಏನೇತಱಿನಿಕುವಾವಿಯೊ
ಳಾ ನೆಗಱ್ದ ಚತುರ್ಥಿಗಕ್ಕುಮೇತಕ್ಕೇಕೆಂ
ಬೀ ನುಡಿಯೇತರ್ಪ್ರಕ್ಕುಮು
ತಾನಕ್ಕುಂ ತತ್ತೃತೀಯೆ ಮೊದಲಾದುವಱೊಳ್ (ಸೂತ್ರ ೧೧೨)

ಎಂಬ ಸೂತ್ರವನ್ನು ಹೇಳಿರುವನು.

**ಅವತಾರಿಕೆ ೧೭೯**

ಇದುವರೆಗೂ ಕೆಲವು ಸರ್ವನಾಮಗಳಿಗೆ ಆದೇಶವು ವಿಧಿಸಲ್ಪಟ್ಟಿತು. ಈಗ ಕೃದಂತಕ್ಕೆ ಬರುವ ಆದೇಶವನ್ನು ವಿಧಿಸುತ್ತಾನೆ.

**ಸೂತ್ರಂ || ಒನಚಃ || ೧೭೯ ||**

**ಅರ್ಥ || ಏಕತ್ವವಿಷಯದಲ್ಲಿ ಅಚ್-ಪ್ರತ್ಯಯಾಂತ ಶಬ್ದಕ್ಕೆ 'ಒನ್' ಎಂಬಾದೇಶವು ವಿಕಲ್ಪವಾಗಿ ಬರುವುದು.**

**ಉದಾಹರಣೆ ||** ಮಾಡಿದೊಂ, ಮಾಡಿದೊಳ್; ಮಾಡಿದಂ, ಮಾಡಿದಳ್; ಕೂಡಿದೊಂ, ಕೂಡಿದೊಳ್; ಕೂಡಿದಂ, ಕೂಡಿದಳ್ || ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೧೭೯**

ಈ ಸೂತ್ರದಲ್ಲಿ 'ಒನ್, ಅಚಃ' ಎಂದು ಎರಡು ಪದಗಳಿರುವುವು. ಪೂರ್ವದಿಂದ 'ವಾ, ಏಕತ್ವೇ' ಎಂದು ಅನುವರ್ತಿಸಲ್ಪಡುವುವು. 'ಒನ್' ಎಂಬುದು ವಿಧೇಯವು. 'ಅಚಃ' ಎಂಬುದು — '**ಅಚ್ ಕರ್ತೃಕರ್ಮಣೋಃ || ೫೪೩ ||**' ಎಂಬ ಸೂತ್ರದಿಂದ ವಿಹಿತವಾದ ಕೃತ್-ಪ್ರತ್ಯಯಬೋಧಕಷಷ್ಠ್ಯಂತವು. ಇದೇ ಇಲ್ಲಿ ಸ್ಥಾನಿಯಾಗಿರುವುದು. ಇದು ಪ್ರತ್ಯಯಬೋಧಕವಾಗುವುದು. 'ಏಕತ್ವೇ' ಎಂಬುದು ವಿಷಯಸಪ್ತಮಿಯು. ಇಲ್ಲಿ ಲಿಂಗವಿಶೇಷವನ್ನು ಸಂಬಂಧಿಸದಿರುವುದರಿಂದ ಮೂರು ಲಿಂಗದಲ್ಲಿಯೂ ಈ ಆದೇಶವು ಬರುವುದೆಂದು ತಿಳಿಯುವುದು. ತಥಾಚ ಏಕತ್ವವಿಷಯದಲ್ಲಿ ಅಚ್-ಪ್ರತ್ಯಯಾಂತವಾದ ಶಬ್ದಕ್ಕೆ ವಿಕಲ್ಪವಾಗಿ 'ಒನ್' ಆದೇಶವು ಬರುವುದೆಂದು ಸೂತ್ರಾರ್ಥವಾಗಲು '**ಷಷ್ಠ್ಯಾಃ ಸ್ಥಾನೇಽಂತ್ಯಸ್ಯ**' ಎಂಬ ಪರಿಭಾಷೆಯಿಂದ ಅಂತವಾದ ಅಚ್-ಪ್ರತ್ಯಯದ ಸ್ಥಾನದಲ್ಲಿಯೇ 'ಒನ್' ಆದೇಶವು ಬಂದು '**ಮಾಡಿದೊಂ**' ಮೊದಲಾದ ರೂಪಗಳು ಸಿದ್ಧಿಸುವುವು. ಇಲ್ಲಿ 'ಅಚಃ' ಎಂದು ಹೇಳಿರುವುದರಿಂದ '**ಮಾಡಿದಂ, ಮಾಡಿದಳ್**' ಎಂಬ ಅ... ...ಪಗಳಲ್ಲಿ ಬರುವುದಿಲ್ಲವೆಂದು ತಿಳಿಯಬೇಕು.

**ಅವತಾರಿಕೆ ೧೮೦**

'ಒಂದು' ಶಬ್ದಕ್ಕೆ ಪುಲ್ಲಿಂಗವಿಷಯದಲ್ಲಿ ಬರುವ ಆದೇಶವಿಧಿಯನ್ನು ಹೇಳುತ್ತಾನೆ.

**ಸೂತ್ರಂ || ಒಂದೋಃ ಪುಂಸ್ಯೊರ್ವರ್ಶ್ || ೧೮೦ ||**

**ಅರ್ಥ || ಪುಲ್ಲಿಂಗದಲ್ಲಿ ಏಕತ್ವವು ತೋರುವಾಗ 'ಒಂದು' ಶಬ್ದದ ಸ್ಥಾನದಲ್ಲಿ 'ಒರ್ವರ್' ಆದೇಶವು ನಿತ್ಯವಾಗಿ ಬರುವುದು.**

**ಉದಾಹರಣೆ ||** ಒರ್ವರ್ಂ, ಒರ್ವರ್ನಂ, ಒರ್ವರ್ನಿಂ || ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೧೮೦**

ಈ ಸೂತ್ರದಲ್ಲಿ 'ಒಂದೋಃ, ಪುಂಸಿ, ಒರ್ವರ್ಶ್' ಎಂದು ಮೂರು ಪದಗಳಿರುವುವು. 'ಏಕತ್ವೇ' ಎಂಬುದು ಅನುವರ್ತಿಸಲ್ಪಡುವುದು. 'ಒಂದೋಃ' ಎಂಬುದು ಸಂಖ್ಯಾವಾಚಕ ಷಷ್ಠ್ಯಂತಪದವು. ಇದೇ ಇಲ್ಲಿ ಉದ್ದೇಶ್ಯವು. 'ಪುಂಸಿ' ಎಂಬುದು ವಿಷಯಸಪ್ತಮ್ಯಂತವು. 'ಒರ್ವರ್ಶ್' ಎಂಬುದು ವಿಧೇಯವು. ಇಲ್ಲಿ ಶಿತ್ವವನ್ನು ಹೇಳಿರುವುದರಿಂದ — '**ಶಿತ್ ಸರ್ವಸ್ಯ**' ಎಂಬ ಪರಿಭಾಷೆಯಿಂದ ಇದು ಸರ್ವಾದೇಶವಾಗುವುದು. 'ವಾ' ಎಂಬುದು ನಿವೃತ್ತವಾದುದರಿಂದ ಇದು ನಿತ್ಯವೆಂದು ತಿಳಿಯಬೇಕು. ತಥಾಚ — ಪುಲ್ಲಿಂಗದಲ್ಲಿ ಏಕತ್ವವು ತೋರುವಾಗ ಒಂದು ಶಬ್ದಕ್ಕೆ 'ಒರ್ವರ್' ಎಂಬಾದೇಶವು ನಿತ್ಯವಾಗಿ ಬರುವುದೆಂದು ಸೂತ್ರಾರ್ಥವಾಗುವುದರಿಂದ 'ಒರ್ವರ್ಂ, ಒರ್ವರ್ನಂ, ಒರ್ವರ್ನಿಂ' ಮೊದಲಾದುವು ಸಿದ್ಧಿಸುವುವು.

ಇಲ್ಲಿ '**ಒಂದು**' ಎಂಬ **ಶಬ್ದವು ಯಾವಾಗಲೂ** ಏಕತ್ವಬೋಧಕವಾಗಿಯೇ ಇರುವುದರಿಂದ ಇದಕ್ಕೆ 'ಏಕತ್ವೇ' **ಎಂಬ ವಿಶೇಷಣವು** ನಿಷ್ಫಲವಾದುದರಿಂದ 'ಏಕತ್ವೇ' ಎಂಬುದನ್ನು ಅನುವರ್ತಿಸಿರುವುದು **ಅಯುಕ್ತವೆಂದು** ತೋರುವುದು. ಆದಾಗ್ಯೂ 'ಒಂದು' ಶಬ್ದವು ಸಂಖ್ಯೇಯ

ವಾಚಕವಾಗಲು ನಿತ್ಯೈಕವಚನವಾಗಿದ್ದರೂ ಕತಿಪಯವಾಚಕವಾದುದು ಬಹುವಚನವಾಗಿಯೂ ಇರುವುದೆಂದು —

ಒರ್ವರ್ ಜಡಾತ್ಮವಾದಿಗ
ಳೊರ್ವರ್ ಕ್ಷಣಿಕಾತ್ಮವಾದಿಗಳ್ ದುರ್ದ್ವರಶರಿಂ
ಕೊರ್ವರ್ ವಿಭುತ್ವವಾದಿಗ
ಳೊರ್ವರುಮೊಕ್ಕೊರಲೊಳಾಡರಾತ್ಮನ ತೆಱನಂ

ಎಂದು ಪ್ರಾಚೀನರು ಪ್ರಯೋಗಿಸಿರುವುದರಿಂದ ತದ್ವ್ಯಾವೃತ್ತ್ಯರ್ಥವಾಗಿ ಇಲ್ಲಿ 'ಏಕತ್ವೇ' ಎಂಬುದರ ಅನುವೃತ್ತಿಯು ಅವಶ್ಯಕವೆಂದು ತಿಳಿಯಬೇಕು. ಮತ್ತು ಉತ್ತರಾರ್ಥವಾಗಿಯೂ ಬೇಕೆಂದು ತಿಳಿಯುವುದು. ಆದರೆ ಅನೇಕತ್ವದಲ್ಲಿಯೂ ಮೇಲೆ ಹೇಳಿರುವ ಪ್ರಯೋಗದಲ್ಲಿ 'ಒರ್ವರ್' ಎಂದಾಗಿರುವುದರಿಂದ 'ಏಕತ್ವೇ' ಎಂದು ಹೇಳುವುದು ಅಸಂಗತವೆಂದು ತೋರುವುದು. ಆದಾಗ್ಯೂ ಉಕ್ತಪ್ರಯೋಗದಲ್ಲಿ 'ಒಂದು' ಶಬ್ದಕ್ಕೆ ವರ್-ಪ್ರತ್ಯಯವನ್ನು ಮಾಡಿ-'ಒರೊಂದೋಃ ॥ ೩೫೮ ॥' ಎಂಬ ಸೂತ್ರದಿಂದ ಒರ್ ಆದೇಶವನ್ನು ಮಾಡಲು 'ಒರ್ವರ್' ಎಂದು ಸಿದ್ಧಿಸುವುದರಿಂದ ಇಲ್ಲಿ 'ಏಕತ್ವೇ' ಎಂಬುದನ್ನು ಸಂಬಂಧಮಾಡುವುದರಿಂದ ಯಾವ ದೋಷವೂ ಇಲ್ಲವೆಂದು ತಿಳಿಯಬೇಕು.

**ಅವತಾರಿಕೆ ೧೮೧**

ಪೂರ್ವಸೂತ್ರದಲ್ಲಿ 'ಒಂದು' ಶಬ್ದಕ್ಕೆ ಪುಲ್ಲಿಂಗದಲ್ಲಿ 'ಒರ್ವ' ಎಂಬ ಆದೇಶವು ವಿಧಿಸಲ್ಪಟ್ಟಿತು. ಈಗ ಸ್ತ್ರೀಲಿಂಗದಲ್ಲಿ ಆದೇಶಸನ್ನಿಯೋಗಶಿಷ್ಟವಾಗಿ ಉಗಾಗಮವನ್ನು ವಿಧಿಸುತ್ತಾನೆ.

**ಸೂತ್ರಂ ॥ ಉಕ್ಚ ಸ್ತ್ರಿಯಾಂ ॥ ೧೮೧ ॥**

**ಅರ್ಥ ॥ ಸ್ತ್ರೀಲಿಂಗವಿಷಯದಲ್ಲಿ ಏಕತ್ವವು ತೋರುತ್ತಿರಲು 'ಒಂದು' ಶಬ್ದಕ್ಕೆ 'ಒರ್ವಶ್' ಎಂಬ ಆದೇಶವೂ ತತ್ಸನ್ನಿಯೋಗದಿಂದ ಉಗಾಗಮವೂ ಬರುವುವು.**

**ಉದಾಹರಣೆ ॥** 'ಒರ್ವಳ್, ಒರ್ವಳಂ, ಒರ್ವಳಿಂ' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೧೮೧**

ಈ ಸೂತ್ರದಲ್ಲಿ — 'ಉಕ್, ಚ, ಸ್ತ್ರಿಯಾಂ' ಎಂದು ಮೂರು ಪದಗಳಿರುವುವು. ಪೂರ್ವದಿಂದ 'ಒಂದೋಃ, ಒರ್ವಶ್, ಏಕತ್ವೇ' ಎಂದು ಅನುವರ್ತಿಸಲ್ಪಡುವುವು. 'ಉಕ್' ಎಂಬುದು ಉಚ್ಚಾರಣಾರ್ಥಕ-ಉ ಕಾರಸಹಿತ ಕಿತ್ತಾದ ವಿಧೇಯಬೋಧಕವು. ಚ ಕಾರವು ಸಮುಚ್ಚಯಾರ್ಥಕವಾದುದರಿಂದ 'ಒರ್ವಶ್' ಎಂಬ ವಿಧೇಯವನ್ನು ಪರಾಮರ್ಶಿಸುವುದು. ಇದು 'ಶಿತ್' ಆದುದರಿಂದ ಸರ್ವಾದೇಶವಾಗಿಯೂ 'ಉಕ್' ಎಂಬುದು 'ಕಿತ್' ಆದುದರಿಂದ — 'ಕಿದಂತ್ಯಃ' ಎಂಬುದರಿಂದ ಆ 'ಒರ್ವ' ಎಂಬುದಕ್ಕೆ ಅಂತಾವಯವವಾಗಿಯೂ ಬರುವುದೆಂದು ತಿಳಿಯಬೇಕು. ಇಲ್ಲಿ ಒಂದು ಆದೇಶವೂ ಒಂದು ಆಗಮವೂ ಆದುದರಿಂದ ಪರ್ಯಾಯವಲ್ಲದೆ ಸನ್ನಿಯೋಗವಾಗಿ ಬರುವುವು. 'ಸ್ತ್ರಿಯಾಂ, ಏಕತ್ವೇ' ಇವೆರಡೂ ವಿಷಯಸಪ್ತಮ್ಯಂತಗಳು.

ತಥಾಚ — ಸ್ತ್ರೀಲಿಂಗದಲ್ಲಿ ಏಕತ್ವವು ತೋರುವಾಗ 'ಒಂದು' ಶಬ್ದಕ್ಕೆ ಒರ್ವ್ವಾದೇಶವೂ ಅದಕ್ಕೆ ಳುಗಾಗಮವೂ ಬರುವುವೆಂದು ಸೂತ್ರಾರ್ಥವಾಗುವುದರಿಂದ 'ಒರ್ವ್ವಳ್' ಮೊದಲಾದ ಪ್ರಯೋಗಗಳು ಸಿದ್ಧಿಸುವುವು.

**ಅವತಾರಿಕೆ ೧೮೨**

ಇನ್ನು ಕೆಲವು ಪ್ರತ್ಯಯಾಂತ ಶಬ್ದಗಳಿಗೂ ಸ್ತ್ರೀಲಿಂಗದಲ್ಲಿ ಏಕತ್ವವು ತೋರುವಾಗ ಳುಗಾಗಮವನ್ನು ವಿಧಿಸುತ್ತಾನೆ.

**ಸೂತ್ರಂ || ಅಡ್ದಾಣಾಚಃ || ೧೮೨ ||**

**ಅರ್ಥ || ಸ್ತ್ರೀಲಿಂಗದಲ್ಲಿ ಏಕತ್ವವು ತೋರುವಾಗ 'ಅಟ್, ದ, ಅಣ, ಅಚ್' ಎಂಬ ಪ್ರತ್ಯಯಾಂತ ಶಬ್ದಗಳಿಗೆ ಳುಗಾಗಮವು ಬರುವುದು.**

**ಉದಾಹರಣೆ** || 'ಮೆಲ್ಲಿರ್ದೆಯಳ್, ಸುಕ್ಕೊಡೆಯಳ್, ಪೆಱಿವಣೆಯಳ್' ಮೊದಲಾದುವು ಅಟ್-ಪ್ರತ್ಯಯಾಂತಕ್ಕೂ 'ಅಲ್ಲಿದಳ್, ಇಲ್ಲಿದಳ್, ಎಲ್ಲಿದಳ್' ಮೊದಲಾದುವು ದ-ಪ್ರತ್ಯಯಾಂತಕ್ಕೂ 'ತೆಂಕಣಳ್, ಬಡಗಣಳ್, ನಡುವಣಳ್, ಕಡೆಯಣಳ್' ಮೊದಲಾದುವು ಅಣ-ಪ್ರತ್ಯಯಾಂತಕ್ಕೂ 'ನೋಡಿದಳ್, ಬೇಡಿದಳ್, ಕಾಡಿದಳ್, ಕೂಡಿದಳ್' ಮೊದಲಾದುವು ಅಚ್-ಪ್ರತ್ಯಯಾಂತಕ್ಕೂ ಉದಾಹರಣೆಗಳೆಂದು ತಿಳಿಯುವುದು.

**ವಿಚಾರ ೧೮೨**

ಈ ಸೂತ್ರದಲ್ಲಿ — 'ಅಡ್ದಾಣಾಚಃ' ಎಂದು ಒಂದೇ ಪದವಿರುವುದು. ಇದು 'ಅಟ್, ದ, ಅಣ, ಅಚ್' ಎಂಬ ನಾಲ್ಕು ಪ್ರತ್ಯಯಗಳಿಗೂ ಸಮಾಹಾರದ್ವಂದ್ವಮಾಡಿ ಷಷ್ಠ್ಯಂತವಾಗಿ ನಿರ್ದೇಶಿಸಲ್ಪಟ್ಟಿರುವ ಉದ್ದೇಶ್ಯಪದವು. ಇದು ಕೇವಲ ಪ್ರತ್ಯಯಬೋಧಕವಾದುದರಿಂದ ಪ್ರತ್ಯಯಗ್ರಹಣಪರಿಭಾಷೆಯಿಂದ ತದಂತಬೋಧಕವಾಗುವುದು. ಪೂರ್ವದಿಂದ 'ಳುಕ್, ಸ್ತ್ರಿಯಾಂ, ಏಕತ್ವೇ' ಎಂದು ಅನುವರ್ತಿಸಲ್ಪಡುವುವು. ತಥಾಚ — 'ಅಟ್' ಮೊದಲಾದ ಪ್ರತ್ಯಯಾಂತ ಶಬ್ದಗಳಿಗೆ ಸ್ತ್ರೀಲಿಂಗದಲ್ಲಿ ಏಕತ್ವವು ತೋರುವಾಗ ಳುಗಾಗಮವು ಬರುವುದೆಂದು ಸೂತ್ರಾರ್ಥವಾಗುವುದರಿಂದ 'ಮೆಲ್ಲಿರ್ದೆಯಳ್' ಮೊದಲಾದುವು ಸಿದ್ಧಿಸುವುವು. ಇಲ್ಲಿ '**ಅಟ್ ಸ್ವರಾತ್ || ೩೨೮ ||**' ಎಂಬ ಸೂತ್ರದಿಂದ ಸಮಾಸಾಂತವಾದ ಅಟ್-ಪ್ರತ್ಯಯವೂ 'ಅಲ್ಲಿದಳ್' ಮೊದಲಾದುವರಲ್ಲಿ '**ದಶ್ಚೇತಃ || ೪೨೨ ||**' ಎಂಬ ಸೂತ್ರದಿಂದ ತದ್ಧಿತ ದ-ಪ್ರತ್ಯಯವೂ 'ತೆಂಕಣಳ್' ಮೊದಲಾದುವರಲ್ಲಿ — '**ದಿಕ್ಪೂರ್ವಾದಣಃ || ೪೨೧ ||**' ಎಂಬ ಸೂತ್ರದಿಂದ ತದ್ಧಿತ ಅಣ-ಪ್ರತ್ಯಯವೂ 'ನೋಡಿದಳ್' ಮೊದಲಾದುವರಲ್ಲಿ '**ಅಚ್ ಕರ್ತೃಕರ್ಮಣೋಃ || ೫೮೩ ||**' ಎಂಬ ಸೂತ್ರದಿಂದ ಕೃತ್ತಾದ ಅಚ್-ಪ್ರತ್ಯಯವೂ ಬಂದು ಇದಕ್ಕೆ ಲಕ್ಷ್ಯಗಳಾಗಿವೆ ಎಂದು ತಿಳಿಯಬೇಕು. ಇಲ್ಲಿ ಪ್ರತ್ಯಯಗಳ ಸ್ವರೂಪವನ್ನೇ ನಿರ್ದೇಶಿಸಿರುವುದರಿಂದ 'ಲಂಚಂಗುಳಿ, ಅಡುಕುಳಿ' ಮೊದಲಾದ '**ಗುಳಿರ್ಗ್ರಹ್ಣಾತಿ || ೪೧೮ || ಕುಳಿಸ್ತಾಚ್ಛೀಲ್ಯೇ || ೫೪೫ ||** ಎಂದು ಮೊದಲಾದ ಸೂತ್ರಗಳಿಂದ ವಿಹಿತವಾದ 'ತದ್ಧಿತಗುಳಿ, ಕೃತ್ಕುಳಿ' ಮೊದಲಾದ ಪ್ರತ್ಯಯಾಂತಗಳಿಗೆ ಳುಗಾಗಮವು ಬರುವುದಿಲ್ಲವೆಂದು ತಿಳಿಯಬೇಕು. 'ಸ್ತ್ರಿಯಾಂ' ಎಂದು ಹೇಳಿರುವುದ

ರಿಂದ ' ಮೆಲ್ಲೆರ್ದೆಯಂ ' ಮೊದಲಾದ ಪುಲ್ಲಿಂಗದಲ್ಲಿ ಬರುವುದಿಲ್ಲ. ' ಏಕತ್ವೇ ' ಎಂದು ಹೇಳಿರುವುದರಿಂದ ಬಹುತ್ವದಲ್ಲಿ ಬರುವುದಿಲ್ಲವೆಂದು ತಿಳಿಯಬೇಕು.

**ಅವತಾರಿಕೆ ೧೮೩**

ಪೂರ್ವದಲ್ಲಿ ಸ್ತ್ರೀಲಿಂಗನಿಮಿತ್ತಕವಾಗಿ ವಿಧಿಸಿದ ಳುಗಾಗಮವನ್ನೂ ತದಾಶ್ರಯಕಾರ್ಯವನ್ನೂ ಶಬ್ದವಿಶೇಷದಲ್ಲಿ ಹೇಳುತ್ತಾನೆ.

**ಸೂತ್ರಂ || ಲುಪ್ಚ ನಃ || ೧೮೩ ||**

**ಅರ್ಥ || ಸ್ತ್ರೀಲಿಂಗದಲ್ಲಿ ಏಕತ್ವವು ತೋರುವಾಗ ನ ಕಾರಾಂತ ಶಬ್ದಗಳಿಗೆ ಲೋಪವೂ ತತ್ಸನ್ನಿಯೋಗದಿಂದ ಳುಗಾಗಮವೂ ಬರುವುವು.**

**ಉದಾಹರಣೆ||** ಆಪೊಳ್, ಮಾಡಿದೊಳ್, ಕೂಡಿದೊಳ್, ಮಾಡುವೊಳ್, ಮಾಟಿಪ್ಪೊಳ್|| ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೧೮೩**

ಈ ಸೂತ್ರದಲ್ಲಿ ' ಲುಪ್, ಚ, ನಃ ' ಎಂದು ಮೂರು ಪದಗಳಿರುವುವು. ' ಲುಪ್ ' ಎಂದರೆ ಪ್ರಸಕ್ತವಾದ ವರ್ಣಕ್ಕೆ ಅನುಚ್ಚಾರಣೆಯು ಚ ಕಾರದಿಂದ ' ಳುಕ್, ಸ್ತ್ರಿಯಾಂ, ಏಕತ್ವೇ ' ಎಂದು ಅನುವರ್ತಿಸಲ್ಪಡುವುವು. ' ನಃ ' ಎಂಬುದು ನ ಕಾರಮಾತ್ರಬೋಧಕಷಷ್ಠ್ಯಂತಪದವು. ಕೇವಲ ನ ಕಾರಕ್ಕೆ ಪ್ರಯೋಗವಿಲ್ಲವಾದುದರಿಂದ ' ನ ಕಾರಾಂತಸ್ಯ ' ಎಂದು ತದಂತಗ್ರಾಹಕವಾಗುವುದು. ತಥಾಚ — ಸ್ತ್ರೀಲಿಂಗದಲ್ಲಿ ಏಕತ್ವವು ತೋರುವಾಗ ನ ಕಾರಾಂತ ಶಬ್ದಕ್ಕೆ ಲೋಪವೂ ಳುಗಾಗಮವೂ ಬರುವುವು ಎಂದು ಸೂತ್ರಾರ್ಥವಾಗುವುದರಿಂದ ' ಷಷ್ಠ್ಯಾಃ ಸ್ಥಾನೇಽಂತ್ಯಸ್ಯ ' ಎಂಬ ಪರಿಭಾಷೆಯಿಂದ ತದಂತವಾದ ನ ಕಾರಮಾತ್ರಕ್ಕೆ ಲೋಪವು ಬಂದು ' ಆಪೊಳ್ ' ಮೊದಲಾದುವು ಸಿದ್ಧಿಸುವುವು.

**ಅವತಾರಿಕೆ ೧೮೪**

ಇದುವರೆಗೂ ಏಕತ್ವದಲ್ಲಿಯೇ ಕೆಲವು ಶಬ್ದಗಳಿಗೆ ಳುಗಾಗಮವು ವಿಧಿಸಲ್ಪಟ್ಟಿತು. ಈಗ ಕೆಲವು ಅ ಕಾರಾಂತಗಳಾದ ಅದ್ವಾದಿಗಳಿಗೂ ಗುಣವಾಚಕಗಳಿಗೂ ಏಕತ್ವಾನೇಕತ್ವಸಾಧಾರಣವಾಗಿ ವಿಧಿಸುತ್ತಾನೆ.

**ಸೂತ್ರಂ || ಅತೋಽನೇಕತ್ವೇ ಚಾದ್ವಾದಿಗುಣೋಕ್ತೇಃ || ೧೮೪ ||**

**ಅರ್ಥ || ಸ್ತ್ರೀಲಿಂಗದಲ್ಲಿ ಏಕತ್ವಾನೇಕತ್ವಗಳು ತೋರುತ್ತಿರಲು ಅ ಕಾರಾಂತಗಳಾದ ಅದ್ವಾದಿಗಣಪಠಿತಶಬ್ದಗಳಿಗೂ ಗುಣವಾಚಕಶಬ್ದಗಳಿಗೂ ಳುಗಾಗಮವು ಬರುವುದು.**

**ಉದಾಹರಣೆ ||** ಅವಳ್, ಇವಳ್, ಉವಳ್, ಆವಳ್, ಪೆಱಳ್, ಕರಿಯಳ್, ಬಿಳಿಯಳ್, ಇನಿಯಳ್, ತೋರಿದಳ್, ನೇರಿದಳ್, ಪಿರಿಯಳ್, ಕಿಱಿಯಳ್; ಅವಳ್ದಿರ್, ಇವಳ್ದಿರ್, ಉವಳ್ದಿರ್, ಆವಳ್ದಿರ್, ಪೆಱಳ್ದಿರ್, ಕರಿಯಳ್ದಿರ್, ಬಿಳಿಯಳ್ದಿರ್ || ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೧೮೪**

ಈ ಸೂತ್ರದಲ್ಲಿ — ' ಅತಃ, ಅನೇಕತ್ವೇ, ಚ, ಅದ್ವಾದಿಗುಣೋಕ್ತೇಃ ' ಎಂದು ನಾಲ್ಕು

ಪದಗಳಿರುವುವು. ಪೂರ್ವಸೂತ್ರದಿಂದ ' ಸ್ತ್ರಿಯಾಂ, ಏಕತ್ವೇ, ಳುಕ್ ' ಎಂಬಿವು ಅನುವರ್ತಿ ಸಲ್ಪಡುವುವು. ' ಅತಃ ' ಎಂಬುದು ಕೇವಲ ಹ್ರಸ್ವಾಕಾರಬೋಧಕಷಷ್ಠ್ಯಂತಪದವು. ಇದು ' ಅದ್ವಾದಿಗುಣೋಕ್ತೇಃ ' ಎಂಬುದಕ್ಕೆ ವಿಶೇಷಣವು. ಅದ್ವಾದಿಯೆಂದರೆ ' ಅದು, ಇದು, ಉದು, ಆವುದು, ಎಲ್ಲ, ಪೆಱತು ' ಎಂಬಿವು. ಇಲ್ಲಿ ' ಎಲ್ಲಳ್ ' ಎಂಬ ಪ್ರಯೋಗವಿಲ್ಲವಾದುದರಿಂದ ಅದನ್ನು ಬಿಟ್ಟುಳಿದ ಶಬ್ದಗಳನ್ನೇ ಗ್ರಹಿಸಬೇಕು. ಇವುಗಳಲ್ಲಿ ' ಅದು, ಇದು, ಉದು ' ಎಂಬಿವಕ್ಕೆ ಆದೇಶಾನಂತರವಲ್ಲಿಯೂ ಆವುದು ಶಬ್ದಕ್ಕೆ ಆವಾದೇಶಾನಂತರವಲ್ಲಿಯೂ ' ಪೆಱತು ' ಶಬ್ದಕ್ಕೆ ದು ಲೋಪಾನಂತರವಲ್ಲಿಯೂ ಅ ಕಾರಾಂತತ್ವವು ಸಂಭವಿಸುವುದು. ಗುಣವಚನಗಳಿಗಾದರೋ— '**ಅದ್ಗುಣೋಕ್ತೇಃ||೧೬೬||**' ಎಂಬ ಸೂತ್ರದಿಂದ ಅ ಕಾರಾದೇಶಾನಂತರದಲ್ಲಿ ಸಂಭವಿಸುವುದು. ಆದುದ ರಿಂದ ಅಂತಹ ಶಬ್ದಗಳನ್ನೇ ಇಲ್ಲಿ ಲಕ್ಷ್ಯಗಳನ್ನಾಗಿ ತೆಗೆದುಕೊಳ್ಳುವುದು. 'ಅನೇಕತ್ವೇ ಚ' ಎಂದು ಚ ಕಾರವನ್ನು ಹೇಳಿರುವುದರಿಂದ ' ಏಕತ್ವೇ ' ಎಂದು ಸಂಬಂಧಿಸುವುದು. ಉಳಿದುದೆಲ್ಲಾ ಪೂರ್ವ ದಂತೆಯೇ ಸಂಬಂಧಿಸುವುದು. ತಥಾಚ — ಸ್ತ್ರೀಲಿಂಗದಲ್ಲಿ ಏಕತ್ವಾನೇಕತ್ವಗಳು ತೋರುವಾಗ ಅ ಕಾರಾಂತಗಳಾದ ಅದ್ವಾದಿಗಳಿಗೂ ಗುಣವಾಚಕಗಳಿಗೂ ಳುಗಾಗಮವು ಬರುವುದೆಂದು ಸೂತ್ರಾರ್ಥವಾಗುವುದರಿಂದ ' ಅವಳ್, ಕರಿಯಳ್ ' ಮೊದಲಾದುವು ಸಿದ್ಧಿಸುವುವು. ಇಲ್ಲಿ 'ಅತಃ' ಎಂದು ವಿಶೇಷಣವನ್ನು ಕೊಟ್ಟಿರುವುದರಿಂದ ' ಆಕೆ, ಈಕೆ, ಕರಿದು ' ಮೊದಲಾದುವುಗಳಲ್ಲಿ ಈ ಆಗಮವು ಬರುವುದಿಲ್ಲವೆಂದು ತಿಳಿಯುವುದು.

**ಅವತಾರಿಕೆ ೧೮೫**

ಹೀಗೆಯೇ ಕೆಲವು ' ಆನೆಯ ' ಪ್ರತ್ಯಯಾಂತಗಳಿಗೂ ಳುಗಾಗಮವನ್ನು ವಿಧಿಸುತ್ತಾನೆ.

**ಸೂತ್ರಂ || ಅನೆಯಸ್ಯ || ೧೮೫ ||**

**ಅರ್ಥ || ಸ್ತ್ರೀಲಿಂಗದಲ್ಲಿ ಏಕತ್ವಾನೇಕತ್ವಗಳು ತೋರುವಾಗ ಅನೆಯ ಪ್ರತ್ಯಯಾಂತ ಶಬ್ದ ಗಳಿಗೂ ಳುಗಾಗಮವು ಬರುವುದು.**

**ಉದಾಹರಣೆ ||** ಪತ್ತನೆಯಳ್, ಪತ್ತನೆಯಳ್ದಿರ್; ಎರಡನೆಯಳ್, ಎರಡನೆಯಳ್ದಿರ್; ಮೂಱನೆಯಳ್, ಮೂಱನೆಯಳ್ದಿರ್; ಅನಿತನೆಯಳ್, ಅನಿತನೆಯಳ್ದಿರ್ || ಮೊದಲಾದ ಪೂರ ಣಾರ್ಥಕ ಪ್ರತ್ಯಯಾಂತಗಳಾದ ಪರಿಮಾಣವಾಚಕ - ಸಂಖ್ಯಾವಾಚಕಗಳು ಇದಕ್ಕೆ ಲಕ್ಷ್ಯ ಗಳಾಗುವುವು.

**ವಿಚಾರ ೧೮೫**

ಈ ಸೂತ್ರದಲ್ಲಿ — ' ಅನೆಯಸ್ಯ ' ಎಂಬುದೊಂದೇ ಶಬ್ದವಿರುವುದು. ಇದು ಕೇವಲ ಪ್ರತ್ಯಯಬೋಧಕವಾದುದರಿಂದ ಪ್ರತ್ಯಯಗ್ರಹಣಪರಿಭಾಷೆಯಿಂದ ತದಂತಬೋಧಕವಾಗು ವುದು. ಪೂರ್ವದಿಂದ ' ಳುಕ್, ಏಕತ್ವೇ, ಅನೇಕತ್ವೇ, ಸ್ತ್ರಿಯಾಂ ' ಎಂದು ಅನುವರ್ತಿಸಲ್ಪಡು ವುವು. ತಥಾಚ – ಸ್ತ್ರೀಲಿಂಗದಲ್ಲಿ ಏಕತ್ವಾನೇಕತ್ವಗಳು ತೋರುವಾಗ ' ಆನೆಯ ' ಪ್ರತ್ಯಯಾಂತ ಶಬ್ದಗಳಿಗೆ ಳುಗಾಗಮವು ಬರುವುದೆಂದು ಸೂತ್ರಾರ್ಥವಾಗುವುದರಿಂದ ' ಪತ್ತನೆಯಳ್ ' ಮೊದ ಲಾದುವು ಸಿದ್ಧಿಸುವುವು. ಇಲ್ಲಿ ' **ಪರಿಮಾಣಾಚ್ಚಾನೆಯಃ ಪೂರಣೇ || ೪೩೪ ||** ' ಎಂಬ ಸೂತ್ರ ದಿಂದ ' ಆನೆಯ ' ಪ್ರತ್ಯಯವು ಬಂದಿರುವುದೆಂದು ತಿಳಿಯಬೇಕು.

**ಅವತಾರಿಕೆ ೧೮೬**

ಹೀಗೆಯೇ 'ಮಗ' ಶಬ್ದಕ್ಕೂ ಳುಗಾಗಮವನ್ನು ವಿಧಿಸುತ್ತಾನೆ.

**ಸೂತ್ರಂ || ಮಗಸ್ಯ || ೧೮೬ ||**

**ಅರ್ಥ || ಸ್ತ್ರೀಲಿಂಗದಲ್ಲಿ ಏಕತ್ವಾನೇಕತ್ವಗಳು ತೋರುವಾಗ 'ಮಗ' ಶಬ್ದಕ್ಕೆ ಳುಗಾಗಮವು ಬರುವುದು.**

**ಉದಾಹರಣೆ ||** ಮಗಳ್, ಮಗಳ್ದಿರ್, ಮಗಳಂ, ಮಗಳ್ದಿರಂ || ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೧೮೬**

ಈ ಸೂತ್ರದಲ್ಲಿ — 'ಮಗಸ್ಯ' ಎಂದು ಒಂದೇ ಪದವಿರುವುದು. ಇದು ಅವಶ್ಯವಾಚಕವು. ಇಲ್ಲಿ 'ಮಗ' ಶಬ್ದವು ಸ್ತ್ರ್ಯಪ್ರತ್ಯಯವಾಚಕವಾದಾಗ ಳುಗಾಗಮವು ವಿಧಿಸಲ್ಪಡುವುದು. ಪೂರ್ವದಿಂದ 'ಳುಕ್, ಏಕತ್ವೇ, ಅನೇಕತ್ವೇ, ಸ್ತ್ರಿಯಾಂ' ಎಂಬಿವು ಅನುವರ್ತಿಸಲ್ಪಡುವುವು. ತಥಾಚ— 'ಮಗ' ಶಬ್ದಕ್ಕೆ ಸ್ತ್ರೀಲಿಂಗದಲ್ಲಿ ಏಕತ್ವಾನೇಕತ್ವಗಳು ತೋರುತ್ತಿರಲು ಳುಗಾಗಮವು ಬರುವುದೆಂದು ಸೂತ್ರಾರ್ಥವಾಗುವುದರಿಂದ 'ಮಗಳ್' ಮೊದಲಾದುವು ಸಿದ್ಧಿಸುವುವು.

**ಅವತಾರಿಕೆ ೧೮೭**

'ಮಗ' ಶಬ್ದಕ್ಕೆ ಸ್ತ್ರೀತ್ವಾದಿವಿಶೇಷವಿವಕ್ಷೆಯಿಲ್ಲದಿರುವಾಗ ಉಗಾಗಮವನ್ನು ವಿಧಿಸುತ್ತಾನೆ.

**ಸೂತ್ರಂ || ಉಕ್ ಸಾಮಾನ್ಯೇ || ೧೮೭ ||**

**ಅರ್ಥ || 'ಮಗ' ಶಬ್ದಕ್ಕೆ ಲಿಂಗಸಾಮಾನ್ಯದಲ್ಲಿ ಏಕತ್ವವು ತೋರುವಾಗ ಉಗಾಗಮವು ಬರುವುದು.**

**ಉದಾಹರಣೆ ||** ಮಗು || ಎಂಬುದು ಇದಕ್ಕೆ ಲಕ್ಷ್ಯವು.

**ವಿಚಾರ ೧೮೭**

ಈ ಸೂತ್ರದಲ್ಲಿ — 'ಉಕ್, ಸಾಮಾನ್ಯೇ' ಎಂದು ಎರಡು ಪದಗಳಿರುವುವು. ಪೂರ್ವದಿಂದ 'ಮಗಸ್ಯ, ಏಕತ್ವೇ' ಎಂಬೆರಡು ಪದಗಳು ಅನುವರ್ತಿಸಲ್ಪಡುವುವು. 'ಉಕ್' ಎಂಬುದು ಕಿತ್ತಾದ ವಿಧೇಯವಾದುದರಿಂದ ಆಗಮವೆಂದು ತಿಳಿಯಬೇಕು. 'ಸಾಮಾನ್ಯೇ' ಎಂದರೆ 'ಸಮಾನಾನಾಂ ಭಾವಃ ಸಾಮಾನ್ಯಂ' ಎಂಬ ವ್ಯುತ್ಪತ್ತಿಯಿಂದ ಸಾಧಾರಣಧರ್ಮವೆಂದರ್ಥವಾಗುವುದು. ಇದು ಪ್ರಕೃತದಲ್ಲಿ — ಲಿಂಗತ್ರಯಸಾಧಾರಣವೆಂದು ತಿಳಿಯುವುದು. ಎಂದರೆ - 'ಇದು ಸ್ತ್ರೀ, ಇದು ಪುರುಷ' ಎಂಬ ವಿಶೇಷವನ್ನು ಅಪೇಕ್ಷಿಸದೆ ಅಪತ್ಯಮಾತ್ರವಿವಕ್ಷೆಯಿರಲು ಎಂದರ್ಥವು. ಅನೇಕತ್ವದಲ್ಲಿ ಮುಂದೆ ವಿಶೇಷವನ್ನು ಹೇಳುವುದರಿಂದ ಇಲ್ಲಿ 'ಏಕತ್ವೇ' ಎಂಬುದೊಂದನ್ನೇ ಸಂಬಂಧಿಸಿರುವುದು. ತಥಾಚ — 'ಮಗ' ಶಬ್ದಕ್ಕೆ ಸಾಮಾನ್ಯವಿಷಯದಲ್ಲಿ ಏಕತ್ವವು ತೋರುವಾಗ ಉಗಾಗಮವು ಬರುವುದು ಎಂದು ಸೂತ್ರಾರ್ಥವಾಗುವುದರಿಂದ 'ಮಗ' ಶಬ್ದಕ್ಕೆ ಉಗಾಗಮವು ಬರಲು — **'ಲುಬನಾಮಹಾನೌ'** ಎಂಬುದರಿಂದ 'ಮಗ' ಶಬ್ದದ ಅ ಕಾರಕ್ಕೆ ಲೋಪವನ್ನು ಮಾಡಲು 'ಮಗು' ಎಂದು ಸಿದ್ಧಿಸುವುದು.

**ಅವತಾರಿಕೆ ೧೮೮**

ಹೀಗೆಯೇ ' ಮಗ ' ಶಬ್ದಕ್ಕೆ ಬಹುವಚನದಲ್ಲಿ ' ಕಳ್ ' ಆದೇಶವನ್ನು ವಿಧಿಸುತ್ತಾನೆ.

**ಸೂತ್ರಂ ॥ ದೋಃ ಕ್ಕಳನೇಕತ್ವೇ ॥ ೧೮೮ ॥**

**ಅರ್ಥ ॥ ಲಿಂಗಸಾಮಾನ್ಯವಿಷಯದಲ್ಲಿ ಅನೇಕತ್ವವು ತೋರುವಾಗ ' ಮಗ ' ಶಬ್ದದ ' ದು ' ಸಂಜ್ಞಕ ' ಗ ' ಎಂಬುದರ ಸ್ಥಾನದಲ್ಲಿ ' ಕಳ್ ' ಆದೇಶವು ಬರುವುದು.**

**ಉದಾಹರಣೆ** ॥ ಮಕ್ಕಳ್, ಮಕ್ಕಳಂ ॥ ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೧೮೮**

ಈ ಸೂತ್ರದಲ್ಲಿ — ' ದೋಃ, ಕ್ಕಳ್, ಅನೇಕತ್ವೇ ' ಎಂದು ಮೂರು ಪದಗಳಿರುವುವು. ಪೂರ್ವದಿಂದ ' ಮಗಸ್ಯ, ಸಾಮಾನ್ಯೇ ' ಎಂಬೆರಡು ಪದಗಳು ಅನುವರ್ತಿಸಲ್ಪಡುವುವು. ' ಮಗಸ್ಯ ' ಎಂಬುದು ' ದೋಃ ' ಎಂಬುದಕ್ಕೆ ವಿಶೇಷಣವು. ' ದೋಃ ' ಎಂಬುದು ಸ್ಥಾನಷಷ್ಠ್ಯಂತಪದವು. ' ಅನೇಕತ್ವೇ, ಸಾಮಾನ್ಯೇ ' ಎಂಬಿವು ವಿಷಯಸಪ್ತಮ್ಯಂತಗಳು. ' ಕ್ಕಳ್ ' ಎಂದು ಎರಡು ಕ ಕಾರವುಳ್ಳ ನಿರ್ದೇಶಕವು. ಇಲ್ಲಿ ' ಅನೇಕತ್ವೇ ' ಎಂಬುದು ಅನುವರ್ತಿತವಾಗುತ್ತಿದ್ದರೂ ಪುನಃ ' ಅನೇಕತ್ವೇ ' ಎಂದು ಸೂತ್ರದಲ್ಲಿ ಹೇಳಿರುವುದು. ಅನೇಕತ್ವದಲ್ಲಿಯೇ ಬರುವುದೆಂದು ನಿಯಮಾರ್ಥವಾಗಿ ಎಂದು ತಿಳಿಯಬೇಕು. ತಥಾಚ — ಅನೇಕತ್ವವು ತೋರುತ್ತಿರಲು ' ಮಗ ' ಶಬ್ದದ ' ದು ' ಸಂಜ್ಞಕವಾದ ಭಾಗಕ್ಕೆ ಲಿಂಗಸಾಮಾನ್ಯದಲ್ಲಿದ್ದ ' ಕ್ಕಳ್ ' ಎಂಬಾದೇಶವು ಬರುವುದೆಂದು ಸೂತ್ರಾರ್ಥವಾಗುವುದರಿಂದ ' ಮಕ್ಕಳ್ ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು.

**ಅವತಾರಿಕೆ ೧೮೯**

ಪೂರ್ವದಲ್ಲಿ ಸ್ತ್ರೀಲಿಂಗದಲ್ಲಿ ವಿಧಿಸಿದ ಳು ಗಾಗಮಕ್ಕೆ ' ಅರ್, ವಿರ್ ' ಎಂಬ ಪ್ರತ್ಯಯ ವಿಶೇಷಗಳಲ್ಲಿ ನಿಷೇಧವನ್ನು ಹೇಳುತ್ತಾನೆ.

**ಸೂತ್ರಂ ॥ ನಾರ್ವಿರಿ ॥ ೧೮೯ ॥**

**ಅರ್ಥ ॥ ಸ್ತ್ರೀಲಿಂಗದಲ್ಲಿ ' ಅರ್, ವಿರ್ ' ಪ್ರತ್ಯಯಗಳ ವಿಷಯದಲ್ಲಿ ಳು ಗಾಗಮವು ಬರುವುದಿಲ್ಲ.**

**ಉದಾಹರಣೆ** ॥ ಅವರ್, ಇವರ್, ಇಸಿಯರ್, ಕೂಿದರ್, ಅತ್ತೆವಿರ್, ಸೊಸೆವಿರ್ ॥ ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೧೮೯**

ಈ ಸೂತ್ರದಲ್ಲಿ ' ನ, ಅರ್ವಿರಿ ' ಎಂದು ಎರಡು ಪದಗಳಿರುವುವು. ಇಲ್ಲಿ ' ನ ' ಎಂಬುದು ನಿಷೇಧಾರ್ಥಕವಾದುದರಿಂದ ನಿಷೇಧ್ಯವನ್ನಪೇಕ್ಷಿಸುವುದು. ಇಲ್ಲಿ ನಿಷೇಧ್ಯವನ್ನು ಸಾಕ್ಷಾತ್ತಾಗಿ ನಿರ್ದೇಶಿಸಿಲ್ಲ. ಆದುದರಿಂದ ನಿಷೇಧ್ಯವು ಹಿಂದೆ ಹೇಳಿರುವುದೇ ? ಅಥವಾ ಮುಂದೆ ಹೇಳಿರುವುದೇ? ಅಥವಾ ಇಲ್ಲಿ ಹೇಳಬೇಕೇ ? ಎಂದು ಶಂಕೆಯುಂಟಾಗಲು ಈ ಸೂತ್ರದಲ್ಲಿ ನಿಮಿತ್ತವಲ್ಲದೆ ಬೇರೊಂದನ್ನು ಹೇಳಿಲ್ಲವಾದುದರಿಂದಲೂ ಮುಂದೆ ಹೇಳುವುದಕ್ಕೆ ಪೂರ್ವದಲ್ಲಿಯೇ ನಿಷೇಧಿಸುವುದು ಅಪ್ರಸಕ್ತಕಲ್ಪನೆಯಾಗುವುದರಿಂದಲೂ ಹಿಂದೆ ಹೇಳಿರುವುದಕ್ಕೇ ಇಲ್ಲಿ ನಿಷೇಧವೆಂದು

ತಿಳಿಯುವುದರಿಂದ ಪ್ರತ್ಯಾಸನ್ನವಾದ ಳುಗಾಗಮವೇ ಇಲ್ಲಿ ನಿಷೇಧವೆಂದು ತಿಳಿದು 'ಳುಕ್ಸ್ತ್ರಿಯಾಂ' ಎಂಬ ಸೂತ್ರವು ವ್ಯವಹಿತವಾಗಿದ್ದರೂ —

ಗೋಯೂಥನದೀಸ್ರೋತೋಮಂಡೂಕಪ್ಲವನಬದ್ಧದಾರುಕವತ್
ತಿಲತಂಡುಲಮುದ್ಗಗತಿವದ್ಗತಯಃ ಶಬ್ದಾನುಶಾಸನೇ ಸೂತ್ರಾಣಾಂ

ಎಂದು ವಿಚಿತ್ರವಾಗಿ ವ್ಯಾಕರಣದಲ್ಲಿ ಅಧಿಕಾರಗತಿಯನ್ನು ಅಂಗೀಕರಿಸಿರುವುದರಿಂದ ಪ್ರಕೃತದಲ್ಲಿ ಮಂಡೂಕಪ್ಲುತಿಯನ್ನು ಅಂಗೀಕರಿಸಿ 'ಳುಕ್, ಸ್ತ್ರಿಯಾಂ' ಎಂಬಿವು ಅನುವರ್ತಿಸಲ್ಪಡುವುವು. 'ಅರ್ದಿರಿ, ಸ್ತ್ರಿಯಾಂ' ಎಂಬುವೂ ವಿಷಯಸಪ್ತಮ್ಯಂತಗಳು. ತಥಾಚ-ಸ್ತ್ರೀಲಿಂಗದಲ್ಲಿ ಅರ್ದಿರ್ ಪ್ರತ್ಯಯವಿಷಯದಲ್ಲಿ ಳುಗಾಗಮವು ಬರುವುದಿಲ್ಲವೆಂದು ಸೂತ್ರಾರ್ಥವಾಗುವುದರಿಂದ 'ಅವರ್, ಇವರ್' ಮೊದಲಾದುವಕ್ಕೆ ಳುಗಾಗಮವು ಬರುವುದಿಲ್ಲವೆಂದು ತಿಳಿಯಬೇಕು. ಇಲ್ಲಿ 'ಅರ್ದಿರಿ' ಎಂದು ನಿಮಿತ್ತವಿಶೇಷವನ್ನು ಹೇಳಿರುವುದರಿಂದ — 'ಅವಳ್ದಿರ್, ಇವಳ್ದಿರ್' ಮೊದಲಾದ ಪ್ರಯೋಗಗಳಲ್ಲಿ ಈ ನಿಷೇಧವು ಬರುವುದಿಲ್ಲ.

|| ದೇಶ್ಯಶಬ್ದಪ್ರಕರಣಂ ಸಮಾಪ್ತಂ ||

## ಅಥ ಸ್ತ್ರೀಪ್ರತ್ಯಯ ಪ್ರಕರಣ ಪ್ರಾರಂಭಃ

**ಅವತಾರಿಕೆ ೧೯೦**

ಇಲ್ಲಿಂದ ಮುಂದೆ — 'ಅರಸ್ಯಾದಯಃ ॥ ೨೦೨ ॥' ಎಂಬ ಸೂತ್ರದವರೆಗೂ ಸ್ತ್ರೀ ಪ್ರತ್ಯಯಗಳನ್ನು ವಿಧಿಸಲು ಮೊದಲು ಜಾತಿವಾಚಕದ ಮೇಲೆ ಇತಿ ಪ್ರತ್ಯಯವನ್ನು ವಿಧಿಸುತ್ತಾನೆ.

**ಸೂತ್ರಂ ॥ ಜಾತಿಶಬ್ದಾದಿತಿಃ ॥ ೧೯೦ ॥**

**ಅರ್ಥ** ॥ ಸ್ತ್ರೀಲಿಂಗವಿಷಯದಲ್ಲಿ ಅ ಕಾರಾಂತವಾದ **ಜಾತಿವಾಚಕಕ್ಕೆ** ಪರವಾಗಿ '**ಇತಿ**' **ಪ್ರತ್ಯಯವು ಬರುವುದು.**

**ಉದಾಹರಣೆ** ॥ ಬ್ರಾಹ್ಮಣಿತಿ, ಪಾರ್ಸ್ವಿಗತಿ, ಕ್ಷತ್ರಿಯಿತಿ, ಅರಸಿತಿ, ಒಕ್ಕಲಿಗಿತಿ, ಗಾಣಿಗಿತಿ, ಅಸಗಿತಿ, ಕನ್ನಡಿಗಿತಿ, ಕೊಂಕಣಿತಿ ॥ ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೧೯೦**

ಈ ಸೂತ್ರದಲ್ಲಿ — 'ಜಾತಿಶಬ್ದಾತ್, ಇತಿಃ' ಎಂದು ಎರಡು ಪದಗಳಿರುವುವು. ಪೂರ್ವದಿಂದ 'ಅತಃ, ಸ್ತ್ರಿಯಾಂ' ಎಂದು ಅನುವರ್ತಿಸಲ್ಪಡುವುವು. ಇಲ್ಲಿ 'ಜಾತಿಶಬ್ದಾತ್' ಎಂಬುದು ಪ್ರಕೃತಿನಿರ್ದೇಶವು. ಜಾತಿಯೆಂದರೆ —

ಆಕೃತಿಗ್ರಹಣಾ ಜಾತಿಃ ಲಿಂಗಾನಾಂ ಚ ನ ಸರ್ವಭಾಕ್
ಸಕೃದಾಖ್ಯಾನನಿರ್ಗ್ರಾಹ್ಯಾ ಗೋತ್ರಂ ಚ ಚರಣೈಸ್ಸಹ

ಎಂದು **ಪತಂಜಲಿ**ಗಳು ಹೇಳಿರುವ ಲಕ್ಷಣಗಳಿಗೆ ವಿಷಯಗಳಾದ ಬ್ರಾಹ್ಮಣತ್ವಾದಿಗಳು ಇದನ್ನೇ '**ಏಕತ್ವೇ ಸತ್ಯನೇಕಾನುಗತಂ ಸಾಮಾನ್ಯಂ ಜಾತಿಃ**' ಎಂದು **ನೈಯಾಯಿಕರು** ಹೇಳುವರು. **ಅಮರಸಿಂಹನೂ** — '**ಜಾತಿರ್ಜಾತಂ ಚ ಸಾಮಾನ್ಯಂ**' ಎಂದು ಹೇಳಿರುವನು. ಇದು ವ್ಯಾಪ್ಯಜಾತಿಯೆಂದೂ ವ್ಯಾಪಕಜಾತಿಯೆಂದೂ ಎರಡು ತೆರನಾಗಿರುವುದು. ಇಂತಹ ಧರ್ಮರೂಪವಾದ ಜಾತಿಯಲ್ಲಿ ವರ್ಣಾತ್ಮಕ ಪ್ರತ್ಯಯವನ್ನು ಸೇರಿಸುವುದು ಅಸಾಧ್ಯವಾದುದರಿಂದ '**ಜಾತಿಶಬ್ದಾತ್**' ಎಂದು 'ಶಬ್ದ' ಶಬ್ದವು ಉಚ್ಚರಿಸಲ್ಪಟ್ಟಿರುವುದು. ಆದಾಗ್ಯೂ '**ಜಾತಿ**' ಎಂಬ ಶಬ್ದದ ಮೇಲೆ '**ಇತಿ**' **ಪ್ರತ್ಯಯವು** ಬರುವುದೆಂದು ಅರ್ಥವಾಗುತ್ತಿದ್ದರೂ 'ಶಬ್ದ' ಶಬ್ದವಿಲ್ಲದೆಯೇ ಈ ಅರ್ಥವು ಸಿದ್ಧವಾಗುತ್ತಿರಲು ಪುನಃ 'ಶಬ್ದ' ಶಬ್ದವನ್ನು ಉಚ್ಚರಿಸುವ ಸೂತ್ರಕಾರರಿಗೆ ಜಾತಿವಾಚಕಶಬ್ದಸಾಮಾನ್ಯವೂ ಇಲ್ಲಿ 'ಇತಿ' ಪ್ರತ್ಯಯಕ್ಕೆ ಪ್ರಕೃತಿಯೆಂದು ತಾತ್ಪರ್ಯವು. ಇದಕ್ಕೆ 'ಅತಃ' ಎಂಬುದನ್ನು ವಿಶೇಷಣ ಮಾಡಲು ತದಂತಲಾಭವು ಬಂದು 'ಅಕಾರಾಂತಾತ್' ಎಂದರ್ಥವಾಗುವುದು. ಇದು ಪಂಚಮ್ಯಂತವಾದುದರಿಂದ ಇತಿ ಎಂಬುದು ಪರವಾಗಿ ವಿಧಿಸಲ್ಪಡುವುದು. ಆದುದರಿಂದ — '**ಪಂಚಮ್ಯಾಃ ಪ್ರತ್ಯಯಃ ಪರಃ ॥೧೪॥**' ಎಂಬ ಸೂತ್ರದಿಂದ ಇದಕ್ಕೆ ಪ್ರತ್ಯಯ ಸಂಜ್ಞೆಯೂ ಸಿದ್ಧಿಸುವುದು. ತಥಾಚ — ಅ ಕಾರಾಂತ ಜಾತಿವಾಚಕಶಬ್ದಕ್ಕೆ ಪರವಾಗಿ ಸ್ತ್ರೀವಿಷಯದಲ್ಲಿ 'ಇತಿ' ಪ್ರತ್ಯಯವು ಬರುವುದೆಂದು ಸೂತ್ರಾರ್ಥವಾಗುವುದರಿಂದ '**ಬ್ರಾಹ್ಮಣಿತಿ**' **ಮೊದಲಾದುವು** ಸಿದ್ಧಿಸುವುವು. ಇಲ್ಲಿ '**ಅತಃ**' ಎಂದು ಅನುವರ್ತಿಸಿ ಹೇಳಿರುವುದರಿಂದ —

' ಕಾರು, ಚಕ್ರಿ, ದಿವಾಕೀರ್ತಿ ' ಮೊದಲಾದ ಅ ಕಾರಾಂತವಲ್ಲದ ಶಬ್ದಗಳಲ್ಲಿ ಅತಿಪ್ರಸಕ್ತಿಯಿಲ್ಲವೆಂದು ತಿಳಿಯಬೇಕು. ಈ ಸೂತ್ರಕ್ಕೆ ಜಾತಿವಾಚಕಗಳಾದ ಸಂಸ್ಕೃತ-ಕರ್ಣಾಟಕೋಭಯ ಶಬ್ದಗಳೂ ಲಕ್ಷ್ಯಗಳಾಗುವುವೆಂದು ಉಭಯಶಬ್ದಗಳೂ ಇಲ್ಲಿ ಉದಾಹರಿಸಲ್ಪಟ್ಟಿವೆ. ' ಅರಸಿತಿ ' ಎಂಬಲ್ಲಿ ಪ್ರಕೃತಿಭೂತವಾದ ' ಅರಸ ' ಶಬ್ದವು ' ಕ್ಷತ್ರಿಯಜಾತಿ ' ವಾಚಕವು. ಕೇವಲ 'ರಾಜ' ವಾಚಕವಾದುದಕ್ಕೆ ಇಲ್ಲಿ ಗ್ರಹಣವಿಲ್ಲ. ಅದಕ್ಕೆ ಪುಂಯೋಗದಲ್ಲಿ ಪ್ರತ್ಯಯವು ಮುಂದೆ ಹೇಳಲ್ಪಡುವುದು. ಉ ಕಾರಾಂತ ' ಅರಸು ' ಶಬ್ದಕ್ಕಾದರೂ—ಅರಸ್ಯಾದಿಗಣದಿಂದ ' ಇ ' ಪ್ರತ್ಯಯವು ಬಂದು ' ಅರಸಿ ' ಎಂದಾಗುವುದು. ' ಒಕ್ಕಲಿಗಿತಿ, ಗಾಣಿಗಿತಿ ' ಎಂಬಲ್ಲಿ — ' ಒಕ್ಕಲಿಗ ' ಶಬ್ದವು 'ಶೂದ್ರ'ವಚನವೆಂದು 'ಗಾಣಿಗ' ಶಬ್ದವು 'ತಿಲಂತುದ' ವಚನವೆಂದು ತಿಳಿಯಬೇಕು. ಇವೆರಡೂ ಅಖಂಡಶಬ್ದಗಳೇ ಅಲ್ಲದೆ — ' ಒಕ್ಕಲ್, ಗಾಣ ' ಎಂಬ ಶಬ್ದಗಳ ಮೇಲೆ ವಿಹಿತವಾದ ತದ್ಧಿತ ' ಇಗ ' ಪ್ರತ್ಯಯಾಂತಗಳಾದುವಲ್ಲ. ಇವುಗಳಿಗೆ ' ಇತಿ ' ಪ್ರತ್ಯಯವು—**' ವಡಿಗೇಗೋಣಿಗಾತ್ || ೧೯೨ ||'** ಎಂಬ ಸೂತ್ರದಿಂದಲೇ ಸಿದ್ಧಿಸುವುದು. ' ಕನ್ನಡಿಗಿತಿ, ಕೊಂಕಣಿಗಿತಿ ' ಎಂಬಲ್ಲಿಯೂ ' ಕನ್ನಡಿಗ, ಕೊಂಕಣಿಗ ' ಎಂಬೆರಡು ಶಬ್ದಗಳೂ ' ಕಾರ್ಣಾಟಿಕ, ಕೌಂಕಣಿಕ ' ಶಬ್ದಗಳಿಗೆ ಕರಂಬಾದಿಗಣದಲ್ಲಿ ನಿಪಾತಿತಗಳಾದ ಶಬ್ದಗಳು. 'ಕನ್ನಡ-ಕೊಂಕಣ' ಶಬ್ದಪ್ರಕೃತಿಗಳಾದ ಇಗ ಪ್ರತ್ಯಯಾಂತಗಳಿಗಾದರೋ ವಕ್ಷ್ಯಮಾಣ ಸೂತ್ರದಿಂದಲೇ ಸಿದ್ಧವಾಗುವುದು. ಹೀಗೆಯೇ ' ಕನ್ನಡಿತಿ, ಕೊಂಕಣಿತಿ ' ಎಂಬಲ್ಲಿ ' ಕನ್ನಡ, ಕೊಂಕಣ ' ಶಬ್ದಗಳು ಜಾತಿವಾಚಕಗಳೇ ಅಲ್ಲದೆ ಕೇವಲ ದೇಶವಾಚಿಗಳಲ್ಲವೆಂದು ತಿಳಿಯಬೇಕು. ' ಅಕ್ಕಸಾಲಿತಿ, ಸಟ್ಟಿತಿ, ಒಕ್ಕಲಿತಿ ' ಮೊದಲಾದುವು ಅ ಕಾರಾಂತಗಳಲ್ಲದಿದ್ದರೂ ಅರಸ್ಯಾದಿಗಣಪಾಠದಿಂದ ಸಿದ್ಧಿಸುವುವೆಂದು ತಿಳಿಯಬೇಕು.

**ಅವತಾರಿಕೆ ೧೯೧**

ಹೀಗೆ ಜಾತಿವಾಚಕದ ಮೇಲೆ ಸ್ತ್ರೀಲಿಂಗದಲ್ಲಿ ' ಇತಿ ' ಪ್ರತ್ಯಯವನ್ನು ವಿಧಿಸಿ ಜಾತಿವಾಚಕಗಳಲ್ಲದ ಕೆಲವು ಪುಂವಾಚಕ ಶಬ್ದಗಳ ಮೇಲೆ ಪುಂಸಂಬಂಧದಿಂದಲೇ ಸ್ತ್ರೀಲಿಂಗದಲ್ಲಿ ಪ್ರಯೋಗಿಸುವಾಗ ' ಇತಿ ' ಪ್ರತ್ಯಯವನ್ನು ವಿಧಿಸುತ್ತಾನೆ.

**ಸೂತ್ರಂ || ಪುಂಯೋಗೇ || ೧೯೧ ||**

**ಅರ್ಥ || ಅಕಾರಾಂತ ಶಬ್ದವು ಪುಂಯೋಗದಿಂದಲೇ ಸ್ತ್ರೀಲಿಂಗದಲ್ಲಿದ್ದರೆ ಅದಕ್ಕೆ ಪರವಾಗಿ ' ಇತಿ ' ಪ್ರತ್ಯಯವು ಬರುವುದು.**

**ಉದಾಹರಣೆ ||** ಅರಸನ ಪೆಂಡತಿ —' ಅರಸಿತಿ ' ಹೀಗೆಯೇ –' ಪ್ರಧಾನಿತಿ, ತಳವಱಿತಿ, ಸುಂಕಿಗಿತಿ, ತೋಟಿಗಿತಿ ' ಮೊದಲಾದುವು ಇದಕ್ಕೆ ಲಕ್ಷ್ಯಗಳಾಗುವುವು.

**ವಿಚಾರ ೧೯೧**

ಈ ಸೂತ್ರದಲ್ಲಿ — ' ಪುಮ್, ಯೋಗೇ ' ಎಂದು ಎರಡು ಪದಗಳಿರುವುವು. ಪೂರ್ವದಿಂದ — ' ಅತಃ, ಇತಿಃ, ಸ್ತ್ರಿಯಾಂ ' ಎಂದು ಮೂರು ಪದಗಳು ಅನುವರ್ತಿಸಲ್ಪಡುವುವು. ಇಲ್ಲಿ ' ಪುಮ್ ' ಎಂಬುದು ಲುಪ್ತವಿಭಕ್ತ್ಯಂತಪದವು. ಇದನ್ನು ಆವರ್ತಿಸಿ ಒಂದನ್ನು ಷಷ್ಠ್ಯಂತವಾಗಿ ಮಾಡಿಕೊಂಡು ' ಯೋಗೇ ' ಎಂಬುವರಲ್ಲಿ ಸಂಬಂಧಿಸುವುದು. ಇಲ್ಲಿ ' ಯೋಗ ' ಎಂದರೆ ಸಂಬಂಧವು. ಆ ಸಂಬಂಧವು ಅನೇಕ ವಿಧವಾಗಿದ್ದರೂ ಪ್ರಕೃತದಲ್ಲಿ ದಾಂಪತ್ಯರೂಪವಾದ

ಸಂಬಂಧವೂ, ಕ್ವಚಿತ್ ಜನ್ಯಜನಕಭಾವರೂಪಸಂಬಂಧವೂ ವಿವಕ್ಷಿತವಾಗಿರುವುದು. ಹೀಗೆಯೇ **ಪಾಣಿನಿ** ವ್ಯಾಕರಣದಲ್ಲಿಯೂ — **'ಪುಂಯೋಗಾಖ್ಯಾಯಾಂ'** ಎಂಬ ಸ್ತ್ರೀಪ್ರತ್ಯಯವಿಧಾಯಕ ಸೂತ್ರದಲ್ಲಿ ಹೇಳಿ ಕೇಕಯನ ಮಗಳು 'ಕೇಕಯಿ' ಎನ್ನಿಸಿಕೊಳ್ಳುವಳೆಂದು ಹೇಳಿರುವುದು. ಇಲ್ಲಿಯೂ ಪ್ರಧಾನನ ಹೆಂಡತಿ 'ಪ್ರಧಾನಿತಿ' ಎಂಬಂತೆ ಪ್ರಧಾನನ ಮಗಳೂ 'ಪ್ರಧಾನಿತಿ' ಎಂದೆನ್ನಿಸಿಕೊಳ್ಳುವಳೆಂದು ತಿಳಿಯಬೇಕು. ಇನ್ನೊಂದು 'ಪುಮ್' ಎಂಬುದು ಪುಂವಾಚಕ ಶಬ್ದಪರವು. ಇದು ಲುಪ್ತಪಂಚಮ್ಯಂತವೆಂದು ತಿಳಿಯಬೇಕು. ಆದುದರಿಂದ ಇದೇ ಇಲ್ಲಿ ಪ್ರತ್ಯಯಕ್ಕೆ ಪ್ರಕೃತಿಯು. ಇದಕ್ಕೆ 'ಅತಃ' ಎಂಬುದನ್ನು ವಿಶೇಷಣಮಾಡಿ ತದಂತಲಾಭವನ್ನು ಅಂಗೀಕರಿಸಿ 'ಸ್ತ್ರಿಯಾಂ' ಎಂಬುದರಲ್ಲಿ ಅನ್ವಯಿಸಲು ಅ ಕಾರಾಂತ ಪುಂವಾಚಕ ಶಬ್ದವು ಪುಂಸಂಬಂಧದಿಂದ ಸ್ತ್ರೀಲಿಂಗದಲ್ಲಿ ಪ್ರಯೋಗಿಸಲ್ಪಟ್ಟರೆ ಅದಕ್ಕೆ 'ಇತಿ' ಪ್ರತ್ಯಯವು ಬರುವುದೆಂದು ಸೂತ್ರಾರ್ಥವಾಗುವುದು. ಇದರಿಂದ 'ಅರಸಿತಿ, ಪ್ರಧಾನಿತಿ' ಮೊದಲಾದುವು ಸಿದ್ಧಿಸುವುವು.

ಇಲ್ಲಿ ಹೀಗೆ 'ಪುಮ್' ಎಂಬುದನ್ನು ಆವೃತ್ತಿಮಾಡಿ ಪುಂಸಂಬಂಧದಿಂದಲೇ ಸ್ತ್ರೀಲಿಂಗದಲ್ಲಿ ಪ್ರಯುಕ್ತವಾದ ಪುಂವಾಚಕಶಬ್ದಕ್ಕೆ ಈ ಪ್ರತ್ಯಯವು ಬರುವುದೆಂದು ವ್ಯಾಖ್ಯಾನ ಮಾಡಿರುವುದರಿಂದ 'ಆಕೆ ಬಸುಱಿ, ಈಕೆ ಬಾಣತಿ' ಇತ್ಯಾದಿ ಪ್ರಯೋಗಗಳಲ್ಲಿರುವ 'ಬಸುಱಿ, ಬಾಣತಿ' ಮೊದಲಾದ ಶಬ್ದಗಳು ಪುಂಯೋಗವಿದ್ದರೇ ಸ್ತ್ರೀಲಿಂಗದಲ್ಲಿ ಪ್ರಯುಕ್ತಗಳಾಗುವುವು; ಆದಾಗ್ಯೂ ಇವು ಲೋಕದಲ್ಲಿ ಪುಂವಾಚಕಗಳೆಂದು ಪ್ರಸಿದ್ಧವಲ್ಲ. 'ಅರಸಿತಿ, ಕ್ಷತ್ರಿಯಿತಿ, ಒಕ್ಕಲಿಗಿತಿ, ಶೂದ್ರಿತಿ' ಮೊದಲಾದುವುಗಳಲ್ಲಿ—'ಅರಸ, ಕ್ಷತ್ರಿಯ, ಒಕ್ಕಲಿಗ, ಶೂದ್ರ' ಮೊದಲಾದ ಶಬ್ದಗಳು ಪುಂವಾಚಕಗಳಾದರೂ — 'ಅರಸನ ಪೆಂಡತಿ, ಕ್ಷತ್ರಿಯನ ಪೆಂಡತಿ' ಎಂದು ಪುಂಸಂಬಂಧವನ್ನು ವಿವಕ್ಷೆಮಾಡಲು ಸ್ತ್ರೀವಾಚಕಗಳೂ ಆಗುವುವೆಂದು ಅವುಗಳಿಗೇ ಪರವಾಗಿ ಪ್ರತ್ಯಯವು ಬರುವುದು. 'ಅರಸಿತಿ' ಇವಳು ಸ್ವಯಂಕ್ಷತ್ರಿಯ ಜಾತಿಯವಳಲ್ಲದಿದ್ದರೂ ಕ್ಷತ್ರಿಯನ ಹೆಂಡತಿಯೆಂದು ತಿಳಿಯಬೇಕು. ಜಾತಿವಾಚಕವಾದರೆ ಪೂರ್ವಸೂತ್ರದಿಂದಲೇ ಸಿದ್ಧಿಸುವುವು. ಪ್ರಧಾನಾದಿ ಶಬ್ದಗಳಾದರೋ ಜಾತಿವಾಚಕಗಳಲ್ಲಿದ್ದುದರಿಂದ ಇವುಗಳ ಮೇಲೆ ಪುಂಯೋಗದಲ್ಲಿಯೇ 'ಸ್ತ್ರೀ' ಪ್ರತ್ಯಯವು ಬರುವುದೆಂದು ತಿಳಿಯಬೇಕು. ಹೀಗೆಯೇ ಪ್ರಯೋಗಗಳನ್ನು ನೋಡಿ ಜಾತಿ-ಪುಂಯೋಗಗಳನ್ನು ವ್ಯವಸ್ಥೆಮಾಡಿಕೊಳ್ಳುವುದು. ಸಂಸ್ಕೃತದಲ್ಲಿಯೂ ಪ್ರಯೋಗಬಲದಿಂದಲೇ ವ್ಯವಸ್ಥೆಯನ್ನು ಮಾಡಿರುವರು.

**ದರ್ಪಣಕಾರನು** ಈ ಸ್ತ್ರೀಪ್ರತ್ಯಯವನ್ನು ತದ್ಧಿತಪ್ರಕರಣದಲ್ಲಿಯೇ ಸೇರಿಸಿ —

> **ಕಾಂತಾವಿಷಯದೊಳಾದಮ**
> **ದಂತಕ್ಕಿತಿಯುಂ ತದಾದಿಲೋಪಮುಮಕ್ಕುಂ**
> **ಭ್ರಾಂತೇನಳಂತಮುಂ ನೆಗ**
> **ೞ್ಗುಂ ತೋರದಲ್ಲದರ್ಕದಂತದ ವಿಕಲ್ಪಂ** ( ಸೂತ್ರ ೨೦೬ )

ಮೊದಲಾದುವುಗಳನ್ನು ಹೇಳಿ ಸ್ತ್ರೀಪ್ರತ್ಯಯಾಂತಗಳನ್ನು ಸಾಧಿಸಿರುವನು.

**ಅವತಾರಿಕೆ ೧೯೨**

ಅಕಾರಾಂತಗಳಾದ ಕೆಲವು ತದ್ಧಿತಪ್ರತ್ಯಯಾಂತ ಶಬ್ದಗಳ ಮೇಲೆ ಸ್ತ್ರೀಪ್ರತ್ಯಯವು ಪೂರ್ವಸೂತ್ರಗಳಿಂದ ಅಪ್ರಾಪ್ತವಾಗಲು ವಿಧಿಸುತ್ತಾನೆ.

**ಸೂತ್ರಂ || ವಡಿಗೇಗೋಳಿಗಾತ್ || ೧೯೨ ||**

**ಅರ್ಥ||** ' ವಡಿಗ, ಇಗ, ಉಳಿಗ ' ಎಂಬ ಪ್ರತ್ಯಯಾಂತ ಶಬ್ದಕ್ಕೆ ಪರವಾಗಿ ಇತಿ-ಪ್ರತ್ಯಯವು ಸ್ತ್ರೀಲಿಂಗದಲ್ಲಿ ಬರುವುದು.

**ಉದಾಹರಣೆ ||** ಪಾವಡಿಗ, ಪಾವಡಿಗಿತಿ; ಪೂವಡಿಗ, ಪೂವಡಿಗಿತಿ; ಮಾಲೆವಡಿಗ, ಮಾಲೆವಡಿಗಿತಿ ಮೊದಲಾದುವು ' ವಡಿಗ ' ಪ್ರತ್ಯಯಾಂತಕ್ಕೂ ಸರವಂದಿಗಿತಿ, ಪಟ್ಟಸಾಲಿಗಿತಿ, ಗಂದಿಗಿತಿ ಮೊದಲಾದುವು ' ಇಗ ' ಪ್ರತ್ಯಯಾಂತಕ್ಕೂ ದೇವುಳಿಗಿತಿ, ಪಾಕುಳಿಗಿತಿ, ಕಯ್ದುಳಿಗಿತಿ || ಮೊದಲಾದುವು ' ಉಳಿಗ ' ಪ್ರತ್ಯಯಾಂತಕ್ಕೂ ಲಕ್ಷ್ಯಗಳೆಂದು ತಿಳಿಯುವುದು.

**ವಿಚಾರ ೧೯೨**

ಈ ಸೂತ್ರದಲ್ಲಿ — ' ವಡಿಗೇಗೋಳಿಗಾತ್ ' ಎಂದೊಂದೇ ಪದವಿರುವುದು. ಇದು ' ವಡಿಗ, ಇಗ, ಉಳಿಗ ' ಎಂಬ ಮೂರು ಪ್ರತ್ಯಯಗಳಿಗೂ ಸಮಾಹಾರದ್ವಂದ್ವದ ಮೇಲೆ ಪಂಚಮ್ಯಂತನಿರ್ದೇಶವು ಪ್ರತ್ಯಯಗ್ರಹಣಪರಿಭಾಷೆಯಿಂದ ತದಂತಲಾಭವು ಬರುವುದು. ಇದು ಸ್ವಭಾವವಾಗಿಯೇ ಅ ಕಾರಾಂತವಾಗಿರುವುದರಿಂದ ಇಲ್ಲಿ ' ಅತಃ ' ಎಂಬುದನ್ನು ಸಂಬಂಧಿಸುವುದಿಲ್ಲ. ' ಸ್ತ್ರಿಯಾಂ, ಇತಿಃ ' ಎಂಬಿವು ಮಾತ್ರ ಅನುವರ್ತಿಸಲ್ಪಡುವುವು. ತಥಾಚ — ' **ವಡಿಗೋ ಜಾತೌ || ೪೧೬ || ಇಗಃ ಪಣ್ಯಂ || ೪೧೫ || ಕುರ್ವತ್ಯುಳಿಗಶ್ಚ || ೬೦೦ ||** ' ಮೊದಲಾದ ಸೂತ್ರಗಳಿಂದ ವಿಧಿಸುವ — ' ವಡಿಗ, ಇಗ, ಉಳಿಗ ' ಪ್ರತ್ಯಯಾಂತಶಬ್ದಗಳ ದೆಸೆಯಿಂದ ಪರವಾದಾಗ ಸ್ತ್ರೀವಿಷಯದಲ್ಲಿ ಇತಿ-ಪ್ರತ್ಯಯವು ಬರುವುದೆಂದು ಸೂತ್ರಾರ್ಥವಾಗುವುದರಿಂದ ' ಪಾವಡಿಗಿತಿ, ಸರವಂದಿಗಿತಿ, ದೇವುಳಿಗಿತಿ ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು. ' ಪಾವಡಿಗಿತಿ ' ಎಂಬುದು ಜಾತಿಪುಂಯೋಗಸಾಧಾರಣವಾಗಿಯೂ ಆಗುವುದು. ಹೀಗೆಯೇ ಮುಂದೆಯೂ ಪ್ರಯೋಗಾನುಸಾರವಾಗಿ ಊಹಿಸಿಕೊಳ್ಳುವುದು.

**ಅವತಾರಿಕೆ ೧೯೩**

ಕೆಲವು ತದ್ಧಿತ-ಪ್ರತ್ಯಯಾಂತಗಳಿಗೆ ಸ್ತ್ರೀವಿಷಯದಲ್ಲಿ ಇತಿ-ಪ್ರತ್ಯಯದೊಡನೆ ಇ-ಪ್ರತ್ಯಯವನ್ನೂ ವಿಧಿಸುತ್ತಾನೆ.

**ಸೂತ್ರಂ || ಗೋಗಾದಿಶ್ಚ || ೧೯೩ ||**

**ಅರ್ಥ ||** ' ಗ ' ಪ್ರತ್ಯಯಾಂತ ಶಬ್ದಕ್ಕೂ ' ಉಗ ' ಪ್ರತ್ಯಯಾಂತ ಶಬ್ದಕ್ಕೂ ಸ್ತ್ರೀವಿಷಯದಲ್ಲಿ ' ಇ ' ಪ್ರತ್ಯಯವೂ ' ಇತಿ ' ಪ್ರತ್ಯಯವೂ ಪರ್ಯಾಯವಾಗಿ ಬರುವುವು.

**ಉದಾಹರಣೆ ||** ಮಾತುಗಿ, ಮಾತುಗಿತಿ; ಬೂತುಗಿ, ಬೂತುಗಿತಿ; ಲಂಚಗಿ, ಲಂಚಗಿತಿ; ನಾರುಗಿ, ನಾರುಗಿತಿ; ಬೇರುಗಿ, ಬೇರುಗಿತಿ; ತಾಳುಗಿ, ತಾಳುಗಿತಿ || ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೧೯೩**

ಈ ಸೂತ್ರದಲ್ಲಿ — ' ಗೋಗಾತ್, ಇಃ, ಚ ' ಎಂದು ಮೂರು ಪದಗಳಿರುವುವು. ' ಗೋಗಾತ್ ' ಎಂಬುದು ' **ತೇನ ಜೀವತಿ ಗವಣಿಗಾ || ೪೧೫ || ವ್ಯಂಜನಾದುಗಃ || ೪೨೪ ||** ' ಮೊದಲಾದ ಸೂತ್ರಗಳಿಂದ ವಿಧಿಸುವ ' ಗ, ಉಗ ' ಎಂಬ ಪ್ರತ್ಯಯಗಳಿಗೆ ಸಮಾಹಾರದ್ವಂದ್ವ

ಸಮಾಸವನ್ನು ಮಾಡಿ ಪಂಚಮ್ಯಂತವಾಗಿ ನಿರ್ದೇಶಮಾಡಿರುವುದು. ಇದು ಪ್ರತ್ಯಯಗ್ರಹಣ ಪರಿಭಾಷೆಯಿಂದ ತದಂತಬೋಧಕವಾಗಿ 'ಗ-ಪ್ರತ್ಯಯಾಂತಾತ್, ಉಗ-ಪ್ರತ್ಯಯಾಂತಾತ್' ಎಂದರ್ಥವಾಗುವುದು. 'ಇಃ' ಎಂಬುದು ಪ್ರತ್ಯಯವು. ಚ ಕಾರದಿಂದ 'ಇತಿಃ' ಎಂಬುದೂ ಅನುವರ್ತಿಸಲ್ಪಡುವುದು. 'ಸ್ತ್ರಿಯಾಂ' ಎಂಬುದಕ್ಕೆ ಈ ಪ್ರಕರಣದಲ್ಲೆಲ್ಲಾ ಸಂಬಂಧವಿರುವುದು. ತಥಾಚ — 'ಗ' ಪ್ರತ್ಯಯಾಂತಕ್ಕೂ 'ಉಗ' ಪ್ರತ್ಯಯಾಂತಕ್ಕೂ ಪರವಾಗಿ ಸ್ತ್ರೀವಿಷಯದಲ್ಲಿ 'ಇ' ಪ್ರತ್ಯಯವೂ 'ಇತಿ' ಪ್ರತ್ಯಯವೂ ಬರುವುವೆಂದು ಸೂತ್ರಾರ್ಥವಾಗಲು 'ಮಾತುಗಿ, ಮಾತುಗಿತಿ' ಮೊದಲಾದ ರೂಪಗಳು ಸಿದ್ಧಿಸುವುವು. ಇಲ್ಲಿ ಉದಾಹರಿಸಿರುವ 'ಮಾತುಗಿ' ಮೊದಲಾದ ಪ್ರಯೋಗಗಳಲ್ಲಿ — 'ಮಾತು, ಬೂತು, ಲಂಚ' ಎಂಬ ಮೂರು ಶಬ್ದಗಳಮೇಲೆ 'ಗ' ಪ್ರತ್ಯಯವನ್ನು ಮಾಡಲು ತದಂತದಮೇಲೆ ಈ ಸ್ತ್ರೀಪ್ರತ್ಯಯವು ಬರುವುದು. ನಾರುಗೀತ್ಯಾದಿಗಳಲ್ಲಾದರೊ 'ನಾರ್, ಬೇರ್' ಎಂಬ ಶಬ್ದಗಳ 'ಉಗ' ಪ್ರತ್ಯಯವನ್ನು ಮಾಡಲು ತದಂತ ಶಬ್ದಗಳ ಮೇಲೆಂತೀ ಬರುವುದು. 'ತಾಟುಗಿ' ಮೊದಲಾದುವುಗಳಲ್ಲಿ 'ತಾಟು' ಎಂಬ ಉ ಕಾರಾಂತವಾದ ತೃಣವಲ್ಲೀವ್ಯತಿರಿಕ್ತವನಸ್ಪತಿವಾಚಕ ಶಬ್ದದ ಮೇಲೆ 'ಗ' ಪ್ರತ್ಯಯವನ್ನು ಮಾಡಿ ತದಂತದ ಮೇಲಾಗಲಿ 'ತಾಟ್' ಎಂಬ ಟ ಕಾರಾಂತದ ಮೇಲೆ ಮಾಡಿದ 'ಉಗ' ಪ್ರತ್ಯಯಾಂತದ ಮೇಲಾಗಲಿ ಈ ಪ್ರತ್ಯಯಗಳು ಬಂದಿವೆ ಎಂದು ತಿಳಿಯುವುದು. 'ತಾಟು, ತಾಟ್' ಎಂದು ಉಭಯವಿಧಶಬ್ದಗಳೂ ಪ್ರಯೋಗಗಳಲ್ಲಿ ಇವೆ ಎಂಬುದು —

ಈಳೆಯ ನಿಂಬೆಯ ಮಾದುವ
ದಾಳಿಂಬದ ಬಕ್ಕೆವಲಸಿನಿಂಮಾವಿನ ಪೊಂ
ಬಾಟೆಯ ತೆಂಗಿನ ಕೌಂಗಿನ
ತಾಟುಗಳಿಂ ಮೆಱೆದುದೊಂದು ಪೊಸಸಸಿದೋಂಟಂ

ಮಾಳ್ಗಟ್ಟಿಗಳಿತ್ತ್ರಡಿಯೊಳ್
ಸೀಳ್ದಾಯ್ಗಳ್ ಬೀಗಿ ಬೆಳೆದು ಕೆಂಬಿತ್ತುಗಳಿಂ
ಪೋಳ್ಗದರ್ದಿರೆ ದಾಳಿಂಬದ
ತಾಟ್ಗಳ್ ಸಿಟ್ಟಿಪರದಿಟ್ಟಿಗಿಟ್ಟಳಮೆಸಗುಂ

ಎಂಬ ಪದ್ಯಗಳಿಂದ ತಿಳಿದುಬರುವುದು.

**ಅವತಾರಿಕೆ ೧೯೪**

ಇನ್ನು ಕೆಲವು ಪ್ರತ್ಯಯಾಂತಗಳ ಮೇಲೆ ಸ್ತ್ರೀವಿಷಯದಲ್ಲಿ ಇ ಪ್ರತ್ಯಯವನ್ನು ವಿಧಿಸುತ್ತಾನೆ.

**ಸೂತ್ರಂ ॥ ಅಷ್ಕಾತ್ ॥ ೧೯೪ ॥**

**ಅರ್ಥ॥** ಅಷ್-ಪ್ರತ್ಯಯಾಂತ ಶಬ್ದಕ್ಕೂ ಕ-ಪ್ರತ್ಯಯಾಂತ ಶಬ್ದಕ್ಕೂ ಪರವಾಗಿ ಇ-ಪ್ರತ್ಯಯವು ಸ್ತ್ರೀವಿಷಯದಲ್ಲಿ ಬರುವುದು.

**ಉದಾಹರಣೆ ॥** ಸಿಡುಗಣ್ಣಿ, ಸಿಡುವೆರಲಿ, ಸುಕ್ಕುರ್ಗುರುಳಿ, ಕರಿಕೆ, ಬಿಳಿಕಿ, ಮುದುಕಿ ॥ ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೧೯೪**

ಈ ಸೂತ್ರದಲ್ಲಿ — ' ಅಪ್ಕಾತ್ ' ಎಂದೊಂದೇ ಪದವಿರುವುದು. ಇದು — ' **ಅಬ್ಬಹು ವ್ರೀಹೇಃ ॥ ೩೨೬ ॥** ' ಎಂಬ ಸೂತ್ರದಿಂದ ವಿಧಿಸುವ ಸಮಾಸಾಂತವಾದ ಅಪ್-ಪ್ರತ್ಯಯಕ್ಕೂ ' **ಗುಣೋಕ್ತೇಃ ಕೋ ದುಲುಪ್ಚ ॥ ೪೦೩ ॥** ' ಎಂಬ ಸೂತ್ರದಿಂದ ಮತ್ವರ್ಥದಲ್ಲಿ ವಿಧಿಸುವ ಕ-ಪ್ರತ್ಯಯಕ್ಕೂ ಸಮಾಹಾರದ್ವಂದ್ವವನ್ನು ಮಾಡಿ ಪಂಚಮ್ಯಂತವಾಗಿ ನಿರ್ದೇಶಿಸಲ್ಪಟ್ಟಿರುವುದು. ಪ್ರತ್ಯಯಗ್ರಹಣಪರಿಭಾಷೆಯಿಂದ ತದಂತಲಾಭವು ಬರಲು ' ಅಪ-ಪ್ರತ್ಯಯಾಂತಾತ್, ಕ-ಪ್ರತ್ಯಯಾಂತಾತ್ ' ಎಂದರ್ಥವಾಗುವುದು. ಪೂರ್ವದಿಂದ ' ಇಃ, ಸ್ತ್ರಿಯಾಂ ' ಎಂಬುದು ಅನುವರ್ತಿತವಾಗುವುದು. ತಥಾಚ - ' ಅಪ್-ಪ್ರತ್ಯಯಾಂತಕ್ಕೂ ಕ-ಪ್ರತ್ಯಯಾಂತಕ್ಕೂ ಸ್ತ್ರೀ ವಿಷಯದಲ್ಲಿ ಇ-ಪ್ರತ್ಯಯವು ಬರುವುದೆಂದು ಸೂತ್ರಾರ್ಥವಾಗುವುದರಿಂದ ' ನಿಡುಗಣ್ಣಿ, ಕರಿಕಿ ' ಮೊದಲಾದುವು ಸಿದ್ಧಿಸುವುವು. ' ನಿಡುಗಣ್ಣಿ ' ಎಂಬಲ್ಲಿ ' ನಿಡು ' ಎಂಬುದು ' ನಿಡಿದು ' ಶಬ್ದಕ್ಕೆ ಸಮಾಸಾನಾಂತರದಲ್ಲಿ ಪೂರ್ವಸ್ವರದೊಡನೆ ದು ಲೋಪವನ್ನು ಮಾಡಲು — ' **ಕಿಅಶ್ಚ ಕುವ್ರ್ಯಂಜನೇ ॥ ೩೪೮ ॥** ' ಎಂಬ ಸೂತ್ರದಿಂದ ಕುರಾಗಮವು ಬಂದು ಆಗಿರುವುದೆಂದು ತಿಳಿಯಬೇಕು.

**ಅವತಾರಿಕೆ ೧೯೫**

ಹೀಗೆಯೇ ಪ್ರತ್ಯಯಾಂತಾಂತರಕ್ಕೆ ಎತ್-ಪ್ರತ್ಯಯವನ್ನೂ ಇ-ಪ್ರತ್ಯಯವನ್ನೂ ವಿಧಿಸುತ್ತಾನೆ.

**ಸೂತ್ರಂ ॥ ಆಯ್ತ್ವಾದೆಚ್ಚ ॥ ೧೯೫ ॥**

**ಅರ್ಥ ॥ ಆಯ್ತು-ಪ್ರತ್ಯಯಾಂತ ಶಬ್ದಕ್ಕೆ ಪರವಾಗಿ ಸ್ತ್ರೀವಿಷಯದಲ್ಲಿ ಎತ್-ಪ್ರತ್ಯಯವೂ ಇ-ಪ್ರತ್ಯಯವೂ ಬರುವುವು.**

**ಉದಾಹರಣೆ** ॥ ಸೂಳಾಯ್ತೆ, ಸೂಳಾಯ್ತಿ; ಅವಸರಾಯ್ತೆ, ಅವಸರಾಯ್ತಿ ॥ ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೧೯೫**

ಈ ಸೂತ್ರದಲ್ಲಿ — ' ಆಯ್ತ್ವಾತ್, ಎತ್, ಚ ' ಎಂದು ಮೂರು ಪದಗಳಿರುವುವು. ' ಆಯ್ತ್ವಾತ್ ' ಎಂಬುದು ' **ಆಯ್ತ್ವೋऽಧಿಕೃತೇ ಬಹುಲಂ ॥ ೪೨೫ ॥** ' ಎಂಬ ಸೂತ್ರದಿಂದ ವಿಧಿಸುವ ' ಆಯ್ತು ' ಪ್ರತ್ಯಯಬೋಧಕವಾದ ಪಂಚಮ್ಯಂತಪದವು. ಪ್ರತ್ಯಯಗ್ರಹಣ ಪರಿಭಾಷೆ ಯಿಂದ ತದಂತಬೋಧಕವಾದುದರಿಂದ ' ಆಯ್ತು-ಪ್ರತ್ಯಯಾಂತಾತ್ ' ಎಂದರ್ಥವಾಗುವುದು. ' ಎತ್ ' ಎಂಬುದು ಇಲ್ಲಿ ವಿಧೇಯವಾದ ಪದವು. ಚ ಕಾರದಿಂದ ' ಇ ' ಪ್ರತ್ಯಯವನ್ನು ಸಮುಚ್ಚಯವಾಗಿ ತೆಗೆದುಕೊಳ್ಳುವುದು ' ಸ್ತ್ರಿಯಾಂ ' ಎಂದು ಇರುವುದು. ತಥಾಚ — ಸ್ತ್ರೀ ವಿಷಯದಲ್ಲಿ ' ಆಯ್ತು ' ಪ್ರತ್ಯಯಾಂತ ಶಬ್ದಕ್ಕೆ ಪರವಾಗಿ ' ಎತ್ ' ಪ್ರತ್ಯಯ ' ಇ ' ಪ್ರತ್ಯಯಗಳು ಬರುವುವು ಎಂದು ಸೂತ್ರಾರ್ಥವಾಗಲು ' ಸೂಳಾಯ್ತೆ ' ಮೊದಲಾದುವು ಸಿದ್ಧಿಸುವುವು. ಇಲ್ಲಿ ' ಎತ್ ' ಎಂಬುದರಲ್ಲಿ ತ ಕಾರವು ಉಚ್ಚಾರಣಾರ್ಥಕವೆಂದು ತಿಳಿಯಬೇಕು.

**ಅವತಾರಿಕೆ ೧೯೬**

ಇನ್ನು ಕೆಲವು ಪ್ರತ್ಯಯಾಂತಗಳ ಮೇಲೂ ' ಎತ್ ' ಪ್ರತ್ಯಯವನ್ನು ಮಾತ್ರ ವಿಧಿಸುತ್ತಾನೆ.

**ಸೂತ್ರಂ || ವಣಿಗವಂತೇಚಾತ್ || ೧೯೬ ||**

**ಅರ್ಥ ||** ' ವಣಿಗ, ವಂತ, ಇಚ ' ಪ್ರತ್ಯಯಾಂತ ಶಬ್ದಗಳಿಗೆ ಪರವಾಗಿ ಸ್ತ್ರೀವಿಷಯದಲ್ಲಿ ' ಎತ್ ' ಪ್ರತ್ಯಯವು ಬರುವುದು.

**ಉದಾಹರಣೆ ||** ಲಂಚವಣಿಗೆ, ಊಟವಣಿಗೆ, ಸಿರಿವಂತೆ, ಗುಣವಂತೆ, ಕಾಲುರಿಚೆ, ಕರಹಡಿಚೆ || ಮೊದಲಾದುವು ಕ್ರಮವಾಗಿ ಪಣಿಗಾದಿ ಪ್ರತ್ಯಯಾಂತಗಳಿಗೆ ಉದಾಹರಣೆಗಳೆಂದು ತಿಳಿಯಬೇಕು.

**ವಿಚಾರ ೧೯೬**

ಈ ಸೂತ್ರದಲ್ಲಿ—' ವಣಿಗವಂತೇಚಾತ್ ' ಎಂದು ಒಂದೇ ಪದವಿರುವುದು. ಇದು — **ತೇನ ಜೀವತಿ ಗವಣಿಗೌ || ೪೧೫ || ತದಸ್ಯಾಸ್ತ್ಯಸ್ಮಿನ್ನಿತಿ ವಂತಃ || ೪೦೨ || ಇಚೋ ಹ್ರಸ್ವಶ್ಚೋಽಪಾನ್ತ್ಯಸ್ಯ ||೪೨೦||** ಮೊದಲಾದ ಸೂತ್ರಗಳಿಂದ ವಿಧಿಸುವ ವಣಿಗಾದಿಪ್ರತ್ಯಯಗಳಿಗೆ ಸಮಾಹಾರದ್ವಂದ್ವದ ಪಂಚಮ್ಯಂತನಿರ್ದೇಶವು. ಇದು ಪ್ರತ್ಯಯವಾದುದರಿಂದ ತದಂತಬೋಧಕವಾಗುವುದು. ಪೂರ್ವದಿಂದ ' ಎತ್, ಸ್ತ್ರಿಯಾಂ ' ಎಂದು ಅನುವರ್ತಿಸಲ್ಪಡುವುವು. ತಥಾಚ — ಸ್ತ್ರೀವಿಷಯದಲ್ಲಿ 'ವಣಿಗ, ವಂತ, ಇಚ' ಪ್ರತ್ಯಯಾಂತ ಶಬ್ದಗಳಿಗೆ ಪರವಾಗಿ 'ಎತ್ ' ಪ್ರತ್ಯಯವು ಬರುವುದೆಂದು ಸೂತ್ರಾರ್ಥವಾಗುವುದು. ಆದುದರಿಂದ ' ಲಂಚವಣಿಗೆ ' ಮೊದಲಾದುವು ಸಿದ್ಧಿಸುವುವು. ' **ಚಾನುಕೃಷ್ಟಂ ನೋತ್ತರತ್ರ** ' ಎಂದು ವೈಯಾಕರಣರು ಅಂಗೀಕರಿಸಿರುವುದರಿಂದ ಪೂರ್ವಸೂತ್ರದಲ್ಲಿ 'ಚ' ಶಬ್ದದಿಂದ ಅನುಕೃಷ್ಟವಾದ ' ಇ ' ಪ್ರತ್ಯಯಕ್ಕೆ ಇಲ್ಲಿ ಸಂಬಂಧವಿಲ್ಲವೆಂದು ' ಎತ್ ' ಪ್ರತ್ಯಯವನ್ನೇ ಇಲ್ಲಿ ವಿಧಿಸಿದೆ. ಇಲ್ಲಿಯೂ ಪೂರ್ವದಂತೆ ತ ಕಾರವು ಉಚ್ಚಾರಣಾರ್ಥಕವೆಂದು ತಿಳಿಯಬೇಕು.

**ಅವತಾರಿಕೆ ೧೯೭**

ಪೂರ್ವದಲ್ಲಿ ಕೆಲವು ತದ್ಧಿತ ಪ್ರತ್ಯಯಾಂತಗಳ ಮೇಲೆ ಸ್ತ್ರೀಪ್ರತ್ಯಯವು ವಿಧಿಸಲ್ಪಟ್ಟಿತು. ಈಗ ಕೆಲವು ಅಖಂಡಶಬ್ದಗಳ ಮೇಲೆ ವಿಧಿಸಲ್ಪಡುವುದು.

**ಸೂತ್ರಂ || ಸಿತಗಾದಿಭ್ಯಃ || ೧೯೭ ||**

**ಅರ್ಥ ||** ಸಿಗತಾದಿಗಣಪಠಿತಶಬ್ದಗಳ ಪರವಾಗಿ ಸ್ತ್ರೀವಿಷಯದಲ್ಲಿ ಎತ್-ಪ್ರತ್ಯಯವು ಬರುವುದು.

**ಉದಾಹರಣೆ ||** ಸಿತಗೆ, ಚದುರೆ, ಪಾಣ್ಬೆ, ಜೋಡೆ, ಕಳ್ಳೆ, ಬೆಳ್ಳೆ, ಹೆಡ್ಡೆ, ಎಗ್ಗೆ, ಬೊಳ್ಳೆ[1], ರುಂಚೆ[2], ಭಂಡೆ, ಮುಂಡೆ, ತುಂಟೆ || ಮೊದಲಾದುವು ಇದಕ್ಕೆ ಲಕ್ಷ್ಯಗಳು. ಈ ಸಿತಗಾದಿಗಣವು ಆಕೃತಿಗಣವೆಂದು ಅಂಗೀಕರಿಸಿ ' ಲಂಡೆ, ಕೆಪ್ಪೆ, ತೇಪೆ ' ಮೊದಲಾದ ಇನ್ನೂ ಕೆಲವು ಶಬ್ದಗಳು ಪ್ರಯೋಗದಿಂದ ಇಲ್ಲಿ ಪಾಠಮಾಡತಕ್ಕವುಗಳೆಂದು ತಿಳಿಯಬೇಕು.

ಪಾಠಾಂತರ: ೧ ಬೊಳೆ, ೨ ರುಂಜೆ.

**ವಿಚಾರ ೧೯೭**

ಈ ಸೂತ್ರದಲ್ಲಿ — 'ಸಿತಗಾದಿಭ್ಯಃ' ಎಂದು ಒಂದೇ ಪದವಿರುವುದು. ಇದು 'ಸಿತಗ ಮೊದಲಾದ ಗಣಬೋಧಕವಾದ ಪಂಚಮ್ಯಂತಪದವು. ಪೂರ್ವದಿಂದ 'ಎತ್, ಸ್ತ್ರಿಯಾಂ' ಎಂದು ಅನುವರ್ತಿಸಲ್ಪಡುವುವು. ತಥಾಚ — ಸಿತಗಾದಿಗಣಪಠಿತಶಬ್ದಗಳಿಗೆ ಪರವಾಗಿ ಸ್ತ್ರೀ-ವಿಷಯದಲ್ಲಿ 'ಎತ್' ಪ್ರತ್ಯಯವು ಬರುವುದೆಂದು ಸೂತ್ರಾರ್ಥವಾಗಲು 'ಸಿತಗೆ, ಚದುರೆ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು.

**ಅವತಾರಿಕೆ ೧೯೮**

ಇನ್ನು ಅಿ-ಪ್ರತ್ಯಯಾಂತ ಶಬ್ದದ ಮೇಲೆ ಸ್ತ್ರೀವಿಷಯದಲ್ಲಿ 'ಇತಿ' ಪ್ರತ್ಯಯವನ್ನು ವಿಧಿಸುತ್ತಾನೆ.

**ಸೂತ್ರಂ || ಆಾದಿತಿಃ || ೧೯೮ ||**

**ಅರ್ಥ ||** ಅಿಪ್ರತ್ಯಯಾಂತ ಶಬ್ದಕ್ಕೆ ಪರವಾಗಿ ಸ್ತ್ರೀವಿಷಯದಲ್ಲಿ 'ಇತಿ' ಪ್ರತ್ಯಯವು ಬರುವುದು.

**ಉದಾಹರಣೆ ||** ಕುಂಬಜಿಾತಿ, ಕಮ್ಮಜಿಾತಿ || ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೧೯೮**

ಈ ಸೂತ್ರದಲ್ಲಿ — ಆಾತ್, ಇತಿಃ' ಎಂದು ಎರಡು ಪದಗಳಿರುವುವು. 'ಆಾತ್' ಎಂಬುದು — 'ಅಿಃ ಕಮ್ಮಕುಂಬಾತ್ || ೧೭ ||' ಎಂಬ ಸೂತ್ರದಿಂದ ವಿಧಿಸುವ ಪ್ರತ್ಯಯ ಬೋಧಕಪಂಚಮ್ಯಂತಪದವು. ಪ್ರತ್ಯಯಗ್ರಹಣಪರಿಭಾಷೆಯಿಂದ ತದಂತಬೋಧಕವಾಗುವುದು. 'ಇತಿಃ' ಎಂಬುದು ಇಲ್ಲಿ ವಿಧೇಯವು. 'ಸ್ತ್ರಿಯಾಂ' ಎಂದು ಇರುವುದು. ತಥಾಚ — ಅಿ-ಪ್ರತ್ಯಯಾಂತ ಶಬ್ದಕ್ಕೆ ಪರವಾಗಿ ಸ್ತ್ರೀವಿಷಯದಲ್ಲಿ 'ಇತಿ' ಪ್ರತ್ಯಯವು ಬರುವುದು ಎಂದು ಸೂತ್ರಾರ್ಥವಾಗಲು 'ಕುಂಬಜಿಾತಿ' ಮೊದಲಾದುವು ಸಿದ್ಧಿಸುವುವು.

ಈ ಸೂತ್ರವನ್ನು — 'ಜಾತಿಶಬ್ದಾದಿತಿಃ' ಎಂಬ ಸೂತ್ರಾನಂತರದಲ್ಲಿ 'ಆಾತ್' ಎಂದು ಹೇಳಿ 'ಇತಿಃ' ಎಂಬುದನ್ನು ಅನುವರ್ತಿಸಲು ಇಷ್ಟಸಿದ್ಧಿಯಾಗುತ್ತಿರಲು ಪುನಃ 'ಇತಿಃ' ಎಂಬು ದರಿಂದ ಕೂಡಿ ಇಲ್ಲಿ ಉಚ್ಚರಿಸುವುದರಲ್ಲಿ ಗೌರವವಿರುವುದೆಂದು ತೋರುವುದು. ಆದಾಗ್ಯೂ ಮುಂದಿನ ಸೂತ್ರದಲ್ಲಿ 'ಆಾತ್' ಎಂಬುದಕ್ಕೆ ಆವಶ್ಯಕತೆಯಿರುವುದರಿಂದ ಅಲ್ಲಿ ಅನುವೃತ್ತ್ಯರ್ಥ ವಾಗಿ ಇಲ್ಲಿ ಈ ಸೂತ್ರವನ್ನು ಮಾಡಿ ಮಂಡೂಕಪ್ಲುತಿಯನ್ನಾಶ್ರಯಿಸುವುದು ಅಗತಿಕಗತಿಯೆಂದು ಇಲ್ಲಿಯೇ 'ಇತಿಃ' ಎಂದು ಹೇಳಲ್ಪಟ್ಟಿದೆ ಎಂದು ತಿಳಿಯಬೇಕು.

**ಅವತಾರಿಕೆ ೧೯೯**

ಅಿ-ಪ್ರತ್ಯಯಾಂತ ಶಬ್ದಕ್ಕೆ ಪ್ರತ್ಯಯಾಂತರವನ್ನು ವಿಧಿಸುತ್ತಾನೆ.

**ಸೂತ್ರಂ || ತಿಃ || ೧೯೯ ||**

**ಅರ್ಥ ||** ಅಿ-ಪ್ರತ್ಯಯಾಂತ ಶಬ್ದಕ್ಕೆ ಪರವಾಗಿ 'ತಿ' ಪ್ರತ್ಯಯವು ಸ್ತ್ರೀವಿಷಯದಲ್ಲಿ ಬರುವುದು.

**ಉದಾಹರಣೆ ||** ಕುಂಬಜಿತಿ, ಕಂಮಜಿತಿ || ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೧೯೯**

**ಈ** ಸೂತ್ರದಲ್ಲಿ — 'ತಿಃ' ಎಂದು ಒಂದೇ ಪದವಿರುವುದು. **ಪೂರ್ವ**ದಿಂದ '**ಅಾತ್,** ಸ್ತ್ರಿಯಾಂ' ಎಂದು ಅನುವರ್ತಿಸಲ್ಪಡುವುವು. ತಥಾಚ — ಅ-ಪ್ರತ್ಯಯಾಂತ ಶಬ್ದಕ್ಕೆ ಪರವಾಗಿ 'ತಿ' ಪ್ರತ್ಯಯವು ಸ್ತ್ರೀವಿಷಯದಲ್ಲಿ ಬರುವುದೆಂದು ಸೂತ್ರಾರ್ಥವಾಗಲು '**ಕುಂಬಅತಿ**' ಮೊದಲಾದುವು ಸಿದ್ಧಿಸುವುವು.

ಈ ಪ್ರತ್ಯಯವನ್ನೂ ಪೂರ್ವದಲ್ಲಿಯೇ ಸೇರಿಸಿ ಹೇಳದೆ ಬೇರೆ ಸೂತ್ರವನ್ನು ಹೇಳಿರುವುದು. **ಏಕಯೋಗ ನಿರ್ದಿಷ್ಟಾನಾಂ ಸಹ ವಾ ಪ್ರವೃತ್ತಿಃ ಸಹ ವಾ ನಿವೃತ್ತಿಃ** ಎಂಬುದರಿಂದ ಉತ್ತರ ಸೂತ್ರದಲ್ಲಿ 'ತಿಃ' ಎಂಬುದು ಮಾತ್ರಕ್ಕೆ ಸಂಬಂಧಿಸಲಾಗುವುದಿಲ್ಲ. ಆದುದರಿಂದ ಯೋಗ ವಿಭಾಗವು ಮಾಡಲ್ಪಟ್ಟಿದೆ ಎಂದು ತಿಳಿಯಬೇಕು.

**ಅವತಾರಿಕೆ ೨೦೦**

ಹೀಗೆಯೆ ಇನ್ನೂ ಕೆಲವು ಪ್ರತ್ಯಯಾಂತಗಳಿಗೂ ಸ್ತ್ರೀ-ಪ್ರತ್ಯಯವನ್ನು ವಿಧಿಸಿ ತತ್-ಸನ್ನಿಯೋಗದಿಂದ ಲೋಪವನ್ನೂ ವಿಧಿಸುತ್ತಾನೆ.

**ಸೂತ್ರಂ || ವಳವಳ್ಳಾಲ್ಲುಪ್ಚ || ೨೦೦ ||**

**ಅರ್ಥ || 'ವಳ, ವಳ್ಳ' ಎಂಬ ಪ್ರತ್ಯಯಾಂತಶಬ್ದಗಳಿಗೆ ಪರವಾಗಿ ತಿ-ಪ್ರತ್ಯಯವೂ 'ವಳ-ವಳ್ಳ' ಪ್ರತ್ಯಯಗಳ ಕೊನೆಗೆ ಲೋಪವೂ ಸ್ತ್ರೀ-ವಿಷಯದಲ್ಲಿ ಬರುವುವು.**

**ಉದಾಹರಣೆ ||** ಮಡಿವಳ್ತಿ, ಸಜ್ಜೆವಳ್ತಿ, ಅಡಪವಳ್ತಿ, ಪಡೆವಳ್ತಿ || ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೨೦೦**

ಈ ಸೂತ್ರದಲ್ಲಿ — 'ವಳವಳ್ಳಾತ್, ಲುಪ್, ಚ' ಎಂದು ಮೂರು ಪದಗಳಿರುವುವು. 'ವಳವಳ್ಳಾತ್' ಎಂಬುದು — '**ವಳವಳ್ಳೌ || ೪೨೬ ||**' ಎಂಬ ಸೂತ್ರದಿಂದ ಅಧಿಕೃತಾರ್ಥದಲ್ಲಿ ವಿಧಿಸುವ 'ವಳ-ವಳ್ಳ' ಪ್ರತ್ಯಯಗಳಿಗೆ ದ್ವಂದ್ವಸಮಾಸದಿಂದ ನಿರ್ದೇಶವು ಪ್ರತ್ಯಯಗ್ರಹಣ ಪರಿಭಾಷೆಯಿಂದ ತದಂತಬೋಧಕವಾಗುವುದು. 'ಲುಪ್' ಎಂದರೆ ಅದರ್ಶನ (ಅನುಚ್ಚಾರಣ) ವೆಂದರ್ಥವು. ಇದು ವಿಧೇಯವಾದ ಪ್ರತ್ಯಯಕ್ಕೆ ಉಂಟಾಗಲು ಪ್ರತ್ಯಯವಿಧಿಯೇ ನಿರರ್ಥಕವಾಗುವುದು. ಆದರಿಂದ ಆ ಪ್ರತ್ಯಯಸನ್ನಿಯೋಗವಾಗಿ ಪ್ರಕೃತಿಗಳಾದ 'ವಳ-ವಳ್ಳ' ಪ್ರತ್ಯಯಾಂತ ಶಬ್ದಗಳಿಗೆ ಲೋಪವೆಂದು ತಿಳಿಯಬೇಕು. ಅದೂ '**ಷಷ್ಠ್ಯಾಃ ಸ್ಥಾನೇಽಂತ್ಯಸ್ಯ**' ಎಂಬ ಪರಿಭಾಷೆಯಿಂದ ಅವುಗಳ ಅಂತ್ಯಕ್ಕೆ ಬರುವುವೆಂದರ್ಥವಾಗುವುದು. ಚ ಕಾರದಿಂದ 'ತಿ' ಎಂಬುದಕ್ಕೆ ಅನುವೃತ್ತಿಯು, 'ಸ್ತ್ರಿಯಾಂ' ಎಂದು ಇರುವುದು. ತಥಾಚ — 'ವಳ-ವಳ್ಳ' ಪ್ರತ್ಯಯಾಂತ ಶಬ್ದಗಳಿಗೆ ಪರವಾಗಿ 'ತಿ' ಪ್ರತ್ಯಯವೂ 'ವಳ-ವಳ್ಳ' ಪ್ರತ್ಯಯಗಳ ಅಂತ್ಯಕ್ಕೆ ಲೋಪವೂ ಸ್ತ್ರೀ-ವಿಷಯದಲ್ಲಿ ಬರುವುವೆಂದು ಸೂತ್ರಾರ್ಥವಾಗುವುದರಿಂದ 'ಮಡಿವಳ್ತಿ' ಮೊದಲಾದುವು ಸಿದ್ಧಿಸುವುವು.

ಇಲ್ಲಿ 'ವಳ-ವಳ್ಳ' ಪ್ರತ್ಯಯಾಂತ ಶಬ್ದಗಳಿಗೆ 'ತಿ' ಪ್ರತ್ಯಯ ವಿಧಿಯಲ್ಲಿ ವಿಶೇಷವಿಲ್ಲದಿದ್ದರೂ ಲೋಪವಿಷಯದಲ್ಲಿ — 'ವಳ' ಪ್ರತ್ಯಯಾಂತಕ್ಕೆ 'ತಿ' ಪ್ರತ್ಯಯವು ಪರವಾಗಿರಲು

ಪ್ರಕೃತಿಯ ಅಂತ್ಯಮಾತ್ರಕ್ಕೆ ಲೋಪವು ಬರುವುದೆಂದೂ ' ವಳ್ಳ ' ಪ್ರತ್ಯಯಾಂತಕ್ಕೆ ' ತಿ ' ಪ್ರತ್ಯಯವು ಪರವಾಗಿರಲು ಪ್ರಕೃತಿಯ ' ದು ' ಸಂಜ್ಞಕ ' ಳ ' ಎಂಬುದಕ್ಕೆ ಲೋಪವು ಬರುವುದೆಂದೂ ಲಕ್ಷ್ಯಾನುಸಾರವಾಗಿ ವಿಶೇಷವನ್ನು ಕಲ್ಪಿಸಿಕೊಳ್ಳಬೇಕು.

**ಅವತಾರಿಕೆ ೨೦೧**

ಇನ್ನೂ ಕೆಲವು ಪ್ರತ್ಯಯಾಂತಗಳಿಗೂ ' ತಿ ' ಪ್ರತ್ಯಯವನ್ನು ವಿಧಿಸಿ ' ದು ' ವಿಗೆ ರೇಫಾದೇಶವನ್ನು ವಿಧಿಸುತ್ತಾನೆ.

**ಸೂತ್ರಂ || ಕಾಱಗಾಱಾದ್ದೋರಶ್ಚ || ೨೦೧ ||**

**ಅರ್ಥ || ' ಕಾಱ ' ಪ್ರತ್ಯಯಾಂತ ಶಬ್ದಕ್ಕೂ ' ಗಾಱ ' ಪ್ರತ್ಯಯಾಂತ ಶಬ್ದಕ್ಕೂ ಪರವಾಗಿ ' ತಿ ' ಪ್ರತ್ಯಯವೂ ಪ್ರಕೃತಿಯ ' ದು ' ವಿಗೆ ರೇಫಾದೇಶವೂ ಸ್ತ್ರೀ-ಲಿಂಗದಲ್ಲಿ ಬರುವುದೆಂದು ಅರ್ಥವಾಗುವುದು.**

**ಉದಾಹರಣೆ ||** ನಗೆಕಾರ್ತಿ, ನುಡಿಕಾರ್ತಿ, ಬಗೆಕಾರ್ತಿ, ಆಟಕಾರ್ತಿ, ಬೇಟಕಾರ್ತಿ, ಒಱೆಗಾರ್ತಿ, ಮಾಲೆಗಾರ್ತಿ, ಬಳೆಗಾರ್ತಿ, ಜೂಜುಗಾರ್ತಿ || ಮೊದಲಾದುವು ಇದಕ್ಕೆ ಲಕ್ಷ್ಯಗಳಾಗಿರುವುವು.

**ವಿಚಾರ ೨೦೧**

ಈ ಸೂತ್ರದಲ್ಲಿ — **ಕಾಱಗಾಱಾತ್, ದೋಃ, ರಃ,** ಚ ' ಎಂದು ನಾಲ್ಕು ಪದಗಳಿರುವುವು. ' ಕಾಱ, ಗಾಱಾತ್ ' ಎಂಬುದು — **' ಕಾಱಃ ಪ್ರವಣವ್ಯಾಪೃತಯೋಃ || ೪೨೩ || ಗಾಱೋ ಜಾತೌ || ೪೧೧ ||** ' ಎಂಬ ಸೂತ್ರಗಳಿಂದ ವಿಧಿಸುವ ಪ್ರತ್ಯಯಗಳ ದ್ವಂದ್ವಸಮಾಸ ನಿರ್ದೇಶವು; ಪ್ರತ್ಯಯಗ್ರಹಣಪರಿಭಾಷೆಯಿಂದ ತದಂತಬೋಧಕವಾಗುವುದು. ' ದೋಃ ' ಎಂಬುದು ಷಷ್ಠ್ಯಂತಪದವು. ' ರಃ ' ಎಂಬುದು ಉಚ್ಚಾರಣಾರ್ಥಕ ಅ ಕಾರವುಳ್ಳ ' ರ್ ' ವರ್ಣಮಾತ್ರಬೋಧಕವು. ಚ ಕಾರದಿಂದ ' ತಿ ' ಎಂಬುದು ಅನುವರ್ತಿಸಲ್ಪಡುವುದು ' ಸ್ತ್ರಿಯಾಂ ' ಎಂದಿರುವುದು. ತಥಾಚ — ' ಕಾಱ-ಗಾಱ ' ಪ್ರತ್ಯಯಾಂತ ಶಬ್ದಗಳಿಗೆ ಪರವಾಗಿ ' ತಿ ' ಪ್ರತ್ಯಯವೂ ಪ್ರಕೃತಿಯ ' ದು ' ವಿಗೆ ರೇಫಾದೇಶವೂ ಸ್ತ್ರೀ-ಲಿಂಗದಲ್ಲಿ ಬರುವುದೆಂದು ಸೂತ್ರಾರ್ಥವಾಗಲು ' ನಗೆಕಾರ್ತಿ ' ಮೊದಲಾದುವು ಸಿದ್ಧಿಸುವುವು.

**ಅವತಾರಿಕೆ ೨೦೨**

ಹೀಗೆ ಪೂರ್ವದಲ್ಲಿ ಹೇಳಿರುವಂತೆ ಒಂದು ಲಕ್ಷಣಕ್ಕೆ ವಿಷಯಗಳಾಗದ ಬಗೆಬಗೆಯಾದ ಶಬ್ದಗಳನ್ನು ಸ್ತ್ರೀ-ವಿಷಯದಲ್ಲಿ ಗಣಪಾಠಮಾಡಿ ಪ್ರತ್ಯಯಗಳನ್ನು ನಿಪಾತನ ಮಾಡುತ್ತಾನೆ.

**ಸೂತ್ರಂ || ಅರಸ್ಯಾದಯಃ || ೨೦೨ ||**

**ಅರ್ಥ || ' ಅರಸಿ ' ಮೊದಲಾದ ಶಬ್ದಗಳು ಸ್ತ್ರೀ-ಲಿಂಗದಲ್ಲಿ ಕೆಲವು ಪ್ರತ್ಯಯಾಂತಗಳಾಗಿ ನಿಪಾತನ ಮಾಡಲ್ಪಡುವುವು.**

**ಉದಾಹರಣೆ ||** ಅರಸಿ, ಪಾರ್ವ್ವತಿ, ಒಕ್ಕಲಿತಿ, ಸೆಟ್ಟಿತಿ, ಗೆಣತಿ, ಜೋಗಿತಿ, ಕಣಿತಿ || ಮೊದಲಾದುವು ಅರಸ್ಯಾದಿಗಣಪಠಿತಶಬ್ದಗಳು. ಇದು ಆಕೃತಿಗಣವಾದುದರಿಂದ ಪ್ರಯೋಗ

ವಲ್ಲರುದ ಪೂರ್ವೋಕ್ತ ಲಕ್ಷಣಗಳಿಗೆ ಅವಿಷಯವಾದ ಸ್ತ್ರೀ-ಪ್ರತ್ಯಯಾಂತ ಶಬ್ದಗಳನ್ನು ಇಲ್ಲಿ ಪಾತನಾದಿಕೊಂಡು ಸಾಧುತ್ವವನ್ನು ಹೇಳಬೇಕು.

**ವಿಚಾರ ೨೦೩**

ಈ ಸೂತ್ರದಲ್ಲಿ ‘ ಅರಸ್ಯಾದಯಃ ’ ಎಂದು ಒಂದೇ ಪದವಿರುವುದು. ‘ ಸ್ತ್ರಿಯಾಂ ’ ಎಂದು ಇರುವುದು. ತಥಾಚ ಸ್ತ್ರೀ-ಲಿಂಗದಲ್ಲಿ ಅರಸ್ಯಾದಿಗಣಪಠಿತಶಬ್ದಗಳು ನಿಪಾತಿಸಲ್ಪಡುವುವು. ಆದುದರಿಂದ ‘ ಅರಸ ’ ಅಥವಾ ‘ ಅರಸು ’ ಶಬ್ದದ ಮೇಲೆ ಜಾತಿಯಲ್ಲಿಯಾಗಲಿ ಪುಂಯೋಗದಲ್ಲಿಯಾಗಲಿ ‘ ಇ ’ ಪ್ರತ್ಯಯವು ನಿಪಾತಿಸಲ್ಪಡುವುದರಿಂದ ‘ ಅರಸಿ ’ ಎಂದು ಸಿದ್ಧಿಸುವುದು. ಹೀಗೆಯೇ ಪ್ರಯೋಗಾನುಸಾರವಾಗಿ ಪ್ರತ್ಯಯಗಳನ್ನು ಕಲ್ಪಿಸಿ ಸಾಧುತ್ವವನ್ನು ಹೇಳಬೇಕು. ‘ ಅರಸ ’ ಎಂದು ಅ ಕಾರಾಂತವುಂಟೆಂಬುದು —

ಅರಸರೊಳಿಲಗೇ ಸರಸಮು
ನರಸಿಯುವೋಲಾಡುತಿರ್ಪೆ ನಿನಗಿದು ಗುಣವೇ
ಅರಸರ್ ಸರಸಮನಱಿವರೆ
ಸರಸಮನಾಡರಸರಲ್ಲದವರೊಳ್ ಮಗಳೇ

ಎಂಬ ಪ್ರಯೋಗದಿಂದ ತಿಳಿಯುವುದು. ಇದನ್ನು ಆಕೃತಿಗಣವೆಂದು ಅಂಗೀಕರಿಸಿರುವುದರಿಂದ — ‘ ಪಾರ್ವತಿ, ಅಕ್ಕಸಾಲಿತಿ, ಪಟ್ಟಸಾಲಿತಿ ’ ಮೊದಲಾದುವುಗಳನ್ನೂ ಗ್ರಹಿಸಬಹುದು.

ಇಲ್ಲಿ ‘ ಜಾತಿಶಬ್ದಾದಿತಿಃ ’ ಎಂಬ ಸೂತ್ರಮೊದಲು ಈ ಸೂತ್ರದವರೆಗೂ ಸ್ತ್ರೀ-ಪ್ರತ್ಯಯವು ವಿಧಿಸಲ್ಪಟ್ಟಿತು. ಇದೇ ಅಂತದಲ್ಲಿ ‘ ವೃಳ ’ ಶಬ್ದಗಳಿಗೂ ಅರ್ಥವತ್ತ್ವವಿರುವುದರಿಂದ — ‘ ಅರ್ಥವಲ್ಲಿಂಗಂ ’ ಎಂಬ ಸೂತ್ರದಿಂದ ಲಿಂಗ-ಸಂಜ್ಞೆಯು ಬಂದು ಸುಪ್-ಪ್ರತ್ಯಯೋತ್ಪತ್ತಿಗೆ ಇವೂ ಪ್ರಕೃತಿಗಳಾಗುವುವೆಂದು ತಿಳಿಯಬೇಕು.

॥ ಸ್ತ್ರೀಪ್ರತ್ಯಯಪ್ರಕರಣಂ ಸಮಾಪ್ತಂ ॥

## ॥ ಅಥ ಸುಪ್ ವಿಭಕ್ತಿಪ್ರಕರಣಂ ॥

**ಅವತಾರಿಕೆ ೨೦೩**

ಪೂರ್ವದಲ್ಲಿ '**ಸ್ತ್ರ್ಯರ್ಥಃ ಸ್ತ್ರೀ**' ಎಂಬ ಸೂತ್ರ ಮೊದಲು '**ಅರಸ್ಯಾದಯಃ**' ಎಂಬ ಸೂತ್ರದ ವರೆಗೂ ಸುಬುತ್ಪತ್ತಿಸಾಧಕಪ್ರಕೃತಿಗಳ ವಿಷಯದಲ್ಲಿರುವ — ಸ್ತ್ರೀ-ಪುಂನಪುಂಸಕಲಿಂಗವಿಶೇಷ ಗಳಿಂದ — 'ತದ್ಭವ, ತತ್ಸಮ, ದೇಶ್ಯ' ವೆಂಬ ಭೇದವುಳ್ಳ ಪ್ರಕೃತಿಸ್ವರೂಪವನ್ನು ತಿಳಿಸಿದನು. ಈಗ ಆ ಪ್ರಕೃತಿಗಳ ದೆಸೆಯಿಂದ ಬರುವ ಸುಬುತ್ಪತ್ತಿಕ್ರಮವನ್ನೂ ಆ ಸುಬಾಶ್ರಯಕಾರ್ಯ ಗಳನ್ನೂ ಹೇಳಲು ಮೊದಲು ಸಾಮಾನ್ಯವಾಗಿ ಸುಬುತ್ಪತ್ತಿಯನ್ನು ಹೇಳುತ್ತಾನೆ.

**ಸೂತ್ರಂ ॥ ಲಿಂಗಾತ್ಸುಪ್ ॥ ೨೦೩ ॥**

**ಅರ್ಥ ॥ ಲಿಂಗಸಂಜ್ಞಕ ಶಬ್ದದ ದೆಸೆಯಿಂದ ಪರವಾಗಿ ಸುಪ್-ಪ್ರತ್ಯಯವು ಬರುವುದು.**

**ಉದಾಹರಣೆ ॥** ಏಗಂ, ವರಂ, ವಲಂ, ಅಯ್ಯೋ, ಓಹೋ, ಅಹೋ ॥ ಮೊದಲಾದುವು ಇದಕ್ಕೆ ಉದಾಹರಣೆಗಳು.

**ವಿಚಾರ ೨೦೩**

ಈ ಸೂತ್ರದಲ್ಲಿ — 'ಲಿಂಗಾತ್, ಸುಪ್' ಎಂದು ಎರಡು ಪದಗಳಿರುವುವು. 'ಲಿಂಗಾತ್' ಎಂದರೆ — '**ಅರ್ಥವಲ್ಲಿಂಗಂ**' ಎಂಬ ಸೂತ್ರದಿಂದ ಸಂಕೇತಿತವಾದ ವಾಚಕಸಾಮಾನ್ಯವೆಂದು ತಿಳಿಯುವುದು. ಆದರೆ ಮುಂದೆ ಧಾತುರೂಪ-ಲಿಂಗಕ್ಕೆ ಆಖ್ಯಾತ-ಪ್ರತ್ಯಯವನ್ನು ವಿಧಿಸುವುದ ರಿಂದ ಅದನ್ನು ಬಿಟ್ಟುಳಿದ ಲಿಂಗವನ್ನೇ ಇಲ್ಲಿ ತೆಗೆದುಕೊಳ್ಳಬೇಕು. ತಥಾಚ — ಲಿಂಗ-ಸಂಜ್ಞಕ ಶಬ್ದದ ದೆಸೆಯಿಂದ ಪರವಾಗಿ ಸುಪ್-ಸಂಜ್ಞಕಪ್ರತ್ಯಯಗಳು ಬರುವುವೆಂದು ಸೂತ್ರಾರ್ಥವಾಗು ವುದು. ಇದರಿಂದ — 'ಏಗಂ, ವರಂ' ಮೊದಲಾದ ಅವ್ಯಯಗಳು ಇದಕ್ಕೆ ಉದಾಹರಣೆ ಗಳಾಗುವುವು.

ಯದ್ಯಪಿ ಇದು ಮುಂದೆ ಹೇಳುವ ವಿಶೇಷ ವಿಧಿಗಳಲ್ಲೆಲ್ಲಾ ಸಂಬಂಧಿಸಲ್ಪಡುವುದರಿಂದ ಅಧಿಕಾರ ಸೂತ್ರವೆಂದು ಹೇಳಬೇಕು. ಆದಾಗ್ಯೂ ಅವ್ಯಯಗಳಿಗೆ ವಿಭಕ್ತ್ಯಾದಿ ಪ್ರಯುಕ್ತವಿಕಾರ ವಿಲ್ಲದೆ ಇದ್ದರೂ ಪದತ್ವಸಂಪಾದನಾರ್ಥವಾಗಿ ವಿಭಕ್ತ್ಯುತ್ಪತ್ತಿಯು ಆವಶ್ಯಕವಾಗಿರುವುದು. ಮುಂದಿನ ಸೂತ್ರಗಳಲ್ಲಿ ಕರ್ಮಾದ್ಯರ್ಥ ವಿಶೇಷಗಳನ್ನು ನಿಮಿತ್ತಮಾಡಿಕೊಂಡು ವಿಭಕ್ತಿಗಳನ್ನು ಮಾಡುವುದರಿಂದ ಅವ್ಯಯಗಳಿಗೆ ಕರ್ಮಾಧಿಕಾರಕಗಳಿಲ್ಲವಾದುದರಿಂದ ಅವಕ್ಕೆ ಅಲ್ಲಿ ಪ್ರವೃತ್ತಿ ಯಿಲ್ಲವೆಂದು ಅವ್ಯಯಗಳ ಮೇಲೆ ಸುಬುತ್ಪತ್ತಿಯನ್ನು ಹೇಳಲು ಈ ಸೂತ್ರವು ವಿಧಾಯಕವೆಂಮೂ ಹೇಳಬೇಕು. ಆದುದರಿಂದ ಈ ಸೂತ್ರಕ್ಕೆ ಅವ್ಯಯಗಳೇ ಉದಾಹರಣೆಗಳಾಗುವುವೆಂದು ಅವೇ ಇಲ್ಲಿ ಉದಾಹರಿಸಲ್ಪಟ್ಟಿರುವುವು. ಆದುದರಿಂದಲೇ ಅವ್ಯಯಗಳ ಮೇಲೆ ಉತ್ಪನ್ನವಾದ ಸುಪ್ಪಿಗೆ ಲೋಪ ಮಾಡುವುದಕ್ಕೋಸ್ಕರ ಮಾಡಿರುವ — '**ಲ್ಲುಬವ್ಯಯಸ್ಯ ॥ ೨೪೭ ॥**' ಎಂಬ ಸೂತ್ರವು ಸಾರ್ಥಕವಾಗುವುದು.

**ದರ್ಪಣಕಾರನೂ** ಹೀಗೆಯೇ ಸಾಮಾನ್ಯವಾಗಿ ಎಲ್ಲಾ ವಿಧದ ಲಿಂಗಕ್ಕೂ ಸಪ್ತವಿಭಕ್ತಿ ಗಳು ಬರುವುವೆಂದು —

ಸಂದಿಸಿ ಮುಮಿಂಕೆಯು ದದೊಳ್
ಯೆಂದಿಪ್ಪುರ್ವು ಸಪ್ತವಿಧವಿಭಕ್ತಿಗಳವು ಮಾ
ರ್ಗಂವಪ್ಪವರ್ಗವಶದಿಂ
ಪಿಂದೆಣಿಸಿದ ವಿವಿಧವಿಧದ ಲಿಂಗಕ್ಕೆಲ್ಲಂ ( ಸೂತ್ರ ೯೩ )

ಎಂಬ ಸೂತ್ರವನ್ನು ಹೇಳಿ ಮುಂದೆ ಅವುಗಳ ವಿವರವನ್ನು ತಿಳಿಸುವನು. ಇವಕ್ಕೂ ಮುಂದೆ ಹೇಳುವ ವಿಶೇಷ ಸೂತ್ರಗಳಿಗೆ ಅವಿಷಯಗಳಾದುವೇ ಉದಾಹರಣೆಗಳೆಂದು ತಿಳಿಯಬೇಕು.

ಸಂಸ್ಕೃತ ವ್ಯಾಕರಣದಲ್ಲಿಯೂ —

**ಸ್ವೌಜಸಮೌಟ್ ಛಷ್ಟಾಭ್ಯಾಮ್ ಭ್ಯಸ್ ಜೇಭ್ಯಾಮ್ ಭ್ಯಸ್**
**ಜಸಿಭ್ಯಾಮ್ ಭ್ಯಸ್ ಜಸೋಸಾಮ್ ಜ್ಯೋಸ್ಸುಪ್**

ಎಂಬ ಸೂತ್ರದಿಂದ ಸಾಮಾನ್ಯವಾಗಿ ಸಪ್ತವಿಭಕ್ತಿಪ್ರತ್ಯಯಗಳನ್ನೂ ವಿಧಿಸಿ ಕಾರಕಪ್ರಕರಣದಲ್ಲಿ ಅರ್ಥವಿಶೇಷವನ್ನು ಪುರಸ್ಕರಿಸಿ ವಿಭಕ್ತಿವ್ಯವಸ್ಥೆಯನ್ನು ಮಾಡಿರುವರು. ಆದುದರಿಂದ ಅದೇ ಮಾರ್ಗವನ್ನವಲಂಬಿಸಿ **ಶಾಸನಕಾರ**ನೂ ಸಾಮಾನ್ಯವಾಗಿ ಮೊದಲು ವಿಭಕ್ತಿಗಳನ್ನು ವಿಧಿಸಿ ಅದನ್ನೇ ಅನುವಾದಮಾಡಿ ವಿಶೇಷ ಸೂತ್ರಗಳಿಂದ ವ್ಯವಸ್ಥೆ ಮಾಡುವನೆಂದು ತಿಳಿಯಬೇಕು. ಇಲ್ಲಿ ಈ ಏಳು ವಿಭಕ್ತಿಗಳಿಗೆ ಪ್ರಥಮಾದಿ ಸಂಜ್ಞೆಗಳನ್ನು ಮಾಡಿಲ್ಲವಾದರೂ ಲೋಕಪ್ರಸಿದ್ಧಿಯನ್ನೇ ಅವಲಂಬಿಸಿ ವ್ಯವಹಾರಮಾಡಬೇಕು. ಹೀಗೆಯೇ ವಚನಾದಿ ಸಂಜ್ಞೆಗಳನ್ನು ಹೇಳದಿದ್ದರೂ ಮುಂದೆ ಏಕತ್ವಾನೇಕತ್ವಗಳಲ್ಲಿ ಇವಕ್ಕೆ ಹೇಳುವ ಕಾರ್ಯವಿಶೇಷಗಳಿಂದ **ಏಕವಚನಾದಿ ವ್ಯವ**ಹಾರವನ್ನು ಮಾಡುವುದು.

**ಅವತಾರಿಕೆ ೨೦೪**

## ಅಥ ದ್ವಿತೀಯಾವಿಭಕ್ತಿ

ಹೀಗೆ ಸಾಮಾನ್ಯವಾಗಿ ವಿಧಿಸಲ್ಪಟ್ಟ ಸುಪ್ ಪ್ರತ್ಯಯಕ್ಕೆ ಅರ್ಥವಿಶೇಷದಲ್ಲಿ ಅತಿಪ್ರಸಕ್ತಿಯುಂಟಾಗಲು ಅದನ್ನು ನಿವಾರಣೆ ಮಾಡುವುದಕ್ಕೋಸ್ಕರ ಅರ್ಥವ್ಯವಸ್ಥಾಪಕವಾದ ಸೂತ್ರವನ್ನು ಹೇಳುತ್ತಾನೆ.

**ಸೂತ್ರಂ || ಕರ್ಮಣ್ಯಮ್ || ೨೦೪ ||**

**ಅರ್ಥ ||** ಕ್ರಿಯಾವ್ಯಾಪ್ಯವು **ಕರ್ಮವೆಂಬುದು.** ಆ ಕರ್ಮಕಾರಕವು **ತಿಙಾದಿಗಳಿಂದ ಅನುಕ್ತವಾಗಿರಲು** ಆ ಕರ್ಮರೂಪಾರ್ಥದಲ್ಲಿರುವ **ಲಿಂಗಸಂಜ್ಞಕ** ಶಬ್ದಕ್ಕೆ **ಪರವಾಗಿ ಅಮ್-ಪ್ರತ್ಯಯವು ಬರುವುದು.**

**ಉದಾಹರಣೆ ||** ಘಟಮಂ **ಮಾಡಿದಂ** ಕುಂಬಳಂ; ಮನೆಯಂ **ಮಾಡಿದಂ ಬಡಗಿ; ಕೂಟ** ನಟ್ಟಂ ಬಾಣಸಿಗಂ; ಬಿಲ್ಲಂ ಕೇಸಿದಂ ಬಡಗಿ, ಪಟುವಂ ಕಡಿವನೊಕ್ಕಲಿಗಂ; ಊರನೆಯ್ದಿದಂ ಪಥಿಕಂ; ನೇಸಱಂ ನೋಡಿದಂ ಪಾರ್ವಂ || ಮೊದಲಾದುವು ಇವಕ್ಕೆ ಲಕ್ಷ್ಯಗಳು.

**ವಿಚಾರ ೨೦೪**

ಈ ಸೂತ್ರದಲ್ಲಿ ' ಕರ್ಮಣಿ, ಅಮ್ ' ಎಂದು ಎರಡು ಪದಗಳಿರುವುವು. **ಪೂರ್ವಸೂತ್ರದಿಂದ ' ಲಿಂಗಾತ್ಸುಪ್ ' ಎಂದು ಅನುವರ್ತಿ**ಸಲ್ಪಡುವುದು. ಲೋಕದಲ್ಲಿ **ಕರ್ಮಶಬ್ದವು ಉತ್**

ಕ್ಷೇಪಣಾದಿಕ್ರಿಯಾವಾಚಕವಾಗಿದ್ದರೂ ಇಲ್ಲಿ ' ಕರ್ಮ, ಕರಣ ' ಮೊದಲಾದ ಕಾರಕಪ್ರಕರಣ ಬಲದಿಂದ ಧಾತ್ವರ್ಥವ್ಯಾಪಾರಕ್ರಿಯಾವಿಷಯಭೂತವಸ್ತುವಾಚಕವೆಂದು ಹೇಳಬೇಕು. ಇದನ್ನೇ ನೈಯಾಯಿಕರು ಕ್ರಿಯಾಜನ್ಯಫಲಶಾಲಿಯೆಂದು ವ್ಯವಹರಿಸುವರು. ಪಾಣಿನಿಯು ' ಕರ್ಮ ' ಶಬ್ದಾರ್ಥವನ್ನು ತಿಳಿಸುವುದಕ್ಕೋಸ್ಕರ — ' ಕರ್ತುರೀಪ್ಸಿತತಮಂ ಕರ್ಮ ' ಎಂದು ಸೂತ್ರವನ್ನು ಮಾಡಿರುವನು. ಇದಕ್ಕೆ ವ್ಯಾಖ್ಯಾನಕಾರರು ' ಅವ್ಯಾಪ್ತಿ, ಅತಿವ್ಯಾಪ್ತಿ ' ಮೊದಲಾದ ದೋಷಪರಿಹಾರಪೂರ್ವಕವಾಗಿ - ಪ್ರಕೃತಧಾತ್ವರ್ಥಪ್ರಧಾನೀಭೂತವ್ಯಾಪಾರಪ್ರಯೋಜ್ಯ ಪ್ರಧಾನೀಭೂತಫಲಸಂಬಂಧಪ್ರಕಾರಕಾತಿಶಯೇಚ್ಛಾವಿಷಯವಾದುದಾವುದೋ ಆ ಕಾರಕವೇ ಕರ್ಮಸಂಜ್ಞಕವಾಗುವುದೆಂದು ಅರ್ಥವನ್ನು ವರ್ಣಿಸಿರುವರು. ಇಲ್ಲಿ ಕಾರಕವೆಂಬ ಸಂಜ್ಞೆಯನ್ನು ಹೇಳದಿದ್ದರೂ — ' ಕರೋತಿ ಕರ್ತೃಕರ್ಮಾದಿವ್ಯಪದೇಶಂ ' ಎಂಬ ವ್ಯುತ್ಪತ್ತಿಯಿಂದ ಅನ್ವರ್ಥಕವಾಗಿ ಕರ್ತ್ರಾದಿಗಳಲ್ಲಿ ಯೋಗರೂಢವೆಂದು ತಿಳಿಯಬೇಕು. ಇಲ್ಲಿ ' ಕರ್ಮಣಿ ' ಎಂಬ ಸಪ್ತಮಿಗೆ ವೃತ್ತಿತ್ವವೇ ಅರ್ಥವು. ಆದುದರಿಂದ ಕರ್ಮದಲ್ಲಿರುವ ಲಿಂಗದ ಮೇಲೆಯಿಂದ ಎಂದರ್ಥವಾಗಲು ಕರ್ಮವಾಚಕಲಿಂಗದ ಮೇಲೆಯಿಂದ ಎಂದು ಫಲಿತಾರ್ಥವಾಗುವುದು. ಮುಂದೆ — ' ಮುಕ್ತೇ ॥ ೨೨೭ ॥ ' ಎಂಬ ಸೂತ್ರದಿಂದ ತಿಙಾದಿಗಳಿಂದ ಕಾರಕವು ಉಕ್ತವಾಗಲು ಪ್ರಥಮಾವಿಭಕ್ತಿಯನ್ನು ವಿಧಿಸುವುದರಿಂದ ಅರ್ಥಾತ್ ಇಲ್ಲಿ ' ಅನುಕ್ತೇ ' ಎಂದು ಲಬ್ಧವಾಗುವುದು. ' ಅನುಕ್ತೇ ' ಎಂದರೆ ಯಾವ ಕಾರಕದಲ್ಲಿ ಧಾತುವಿನ ಮೇಲೆ ಪ್ರತ್ಯಯವು ವಿಧಿಸಲ್ಪಡುವುದೋ ಅದು ಉಕ್ತವಾದುದು— ಬೇರೆಯಾದುದೆಲ್ಲಾ ಅನುಕ್ತವಾದುದೆಂದು ತಿಳಿಯಬೇಕು. ' ಸುಪ್ ' ಎಂಬುದು ' ಸ್ ' ಮೊದಲಾದ ಸಪ್ತವಿಭಕ್ತಿಗಳಲ್ಲಿ ಸಂಕೇತಿತವಾದುದು. ಇದು ' ಅಮ್ ' ಎಂಬುದಕ್ಕೆ ವಿಶೇಷಣ. ತಥಾಚ - ಕರ್ಮಕಾರಕವು ತಿಙಾದಿಗಳಿಂದ ಅನುಕ್ತವಾಗಿರಲು ಆ ಕರ್ಮರೂಪಾರ್ಥ ಬೋಧಕವಾದ ಲಿಂಗದ ಮೇಲೆ ಸುಪ್-ಸಂಜ್ಞಕವಾದ ಅಮ್-ಪ್ರತ್ಯಯವು ಬರುವುದೆಂದು ಸೂತ್ರಾರ್ಥವಾಗುವುದು. ಆದುದರಿಂದ ' ಘಟಮಂ ಮಾಡಿದಂ ಕುಂಬಾರಂ ' ಮೊದಲಾದ ತಿಙ್-ಪ್ರತ್ಯಯದಿಂದ ಕರ್ತೃಕಾರಕವು ಉಕ್ತವಾಗಿದ್ದರೂ ಕರ್ಮಕಾರಕವು ಅನುಕ್ತವಾದುದರಿಂದ ಕರ್ಮ ಬೋಧಕ ಘಟಾದಿಶಬ್ದಗಳ ಮೇಲೆ ' ಅಮ್ ' ಪ್ರತ್ಯಯವು ಬಂದು ' ಘಟಮಂ ' ಮೊದಲಾದುವು ಸಿದ್ಧಿಸುವುವು.

ಈ ಶಾಸ್ತ್ರದಲ್ಲಿ ' ಕಾರಕಂ ' ಎಂದು ಸಂಜ್ಞೆಯನ್ನು ಮಾಡದಿದ್ದರೂ —

ಕರ್ತಾ ಕರ್ಮ ಚ ಕರಣಂ ಸಂಪ್ರದಾನಂ ತಥೈವ ಚ ।
ಅಪಾದಾನಾ ಧಿಕರಣಂ ಷಡ್ವಿಧಂ ಕಾರಕಂ ಮತಂ ॥

ಎಂದು ಪ್ರಾಚೀನರು ಪರಿಗಣಿಸಿರುವ ಕರ್ತ್ರಾದಿ ಆರರಲ್ಲಿಯೂ ಕಾರಕಶಬ್ದವು ಸಮಾನಾಧಿಕರಣ ಸಂಬಂಧದಿಂದ ಪ್ರಯೋಗವಿರುವುದು. ಆದುದರಿಂದ ಕಾರಕವೆಂಬುದು ಸಾಮಾನ್ಯವೆಂದೂ ಕರ್ತ್ರಾದಿಗಳು ವಿಶೇಷಗಳೆಂದೂ ತೋರುವುದು. ಅದರೆ ' ಕರೋತೀತಿ ಕಾರಕಂ ' ಎಂದು ಕ್ರಿಯಾಸಾಮಾನ್ಯಾರ್ಥಕ ' ಕೃ ' ಧಾತುವಿಗೆ ಕರ್ತ್ರರ್ಥದಲ್ಲಿ ಅಕ-ಪ್ರತ್ಯಯವನ್ನು ಮಾಡಿ ಧಾತುವಿನ ಋ ಕಾರಕ್ಕೆ ' ಆರ್ ' ಎಂಬ ವೃದ್ಧಿಯನ್ನು ಮಾಡಲು ನಿಷ್ಪನ್ನವಾಗಿರುವುದರಿಂದ ಕ್ರಿಯಾಜನಕವಾದುದು ' ಕಾರಕ ' ಎಂದು ಕಾರಕ ಶಬ್ದವು ಅನ್ವರ್ಥಕವಾಗಿ ಕರ್ತ್ರಾದಿಗಳಲ್ಲಿ

ಯೋಗರೂಢವಾಗಿರುವುವು. ಇವು 'ಕರೋತೀತಿ ಕರ್ತಾ' ಎಂಬ ವ್ಯುತ್ಪತ್ತಿಯಿಂದ ಕರ್ತೃ ಶಬ್ದಾರ್ಥವೂ ಕಾರಕ ಶಬ್ದಾರ್ಥವೂ ಒಂದೇ ಆಗುವುದರಿಂದ ಅವುಗಳಿಗೆ ಕರ್ತೃ ಕಾರಕವೆಂದು ಸಾಮಾನಾಧಿಕರಣ್ಯದಿಂದ ಅನ್ವಯವು ಉಪಪನ್ನವಾಗಿದ್ದರೂ 'ಕ್ರಿಯತೇ ಇತಿ ಕರ್ಮ; ಕ್ರಿಯತೇ ಅನೇನೇತಿ ಕರಣಂ; ಸಂಪ್ರದೀಯತೇ ಅಸ್ಮೈ ಇತಿ ಸಂಪ್ರದಾನಂ; ಅಪಾದೀಯತೇ ಅಸ್ಮಾದಿತ್ಯಪಾದಾನಂ; ಅಧಿಕ್ರಿಯತೇ ಅಸ್ಮಿನ್ನಿತಿ ಅಧಿಕರಣಂ' ಎಂಬ ವ್ಯುತ್ಪತ್ತಿಗಳಿಂದ ಕರ್ಮಾದ್ಯರ್ಥಕ ಪ್ರತ್ಯಯಾಂತಗಳಾದ 'ಕರ್ಮ, ಕರಣ, ಸಂಪ್ರದಾನ, ಅಪಾದಾನ, ಅಧಿಕರಣ' ಎಂಬಿವುಗಳೊಡನೆ ಸಾಮಾನಾಧಿಕರಣ್ಯದಿಂದ ಅನ್ವಿತವಾಗಲು ಅರ್ಥಬಾಧೆಯಿರುವುದರಿಂದ ಪೂರ್ವೋಕ್ತಶ್ಲೋಕದಲ್ಲಿ 'ಷಡ್ವಿಧಂ ಕಾರಕಂ ಮತಂ' ಎಂದು ಹೇಳಿರುವುದು ಅಸಂಗತವೆಂದು ತೋರುವುದು. ಆದಾಗ್ಯೂ ಸ್ಥೂಲದೃಷ್ಟಿಯಿಂದ ಅಸಂಗತವೆಂದು ತೋರಿದರೂ ಸೂಕ್ಷ್ಮಬುದ್ಧಿಯಿಂದ ವಿಚಾರಮಾಡಲು ಕರ್ಮಾದಿಗಳಿಗೂ ಕರ್ತೃಸಾಧನಕಾರಕಪದದೊಡನೆ ಸಾಮಾನಾಧಿಕರಣ್ಯವು ಸಂಗತವೆಂದೇ ತಿಳಿಯಬೇಕು. ಹೇಗೆಂದರೆ — ಕ್ರಿಯೆಯೆಂಬುದು ಮುಖ್ಯೋಪಸರ್ಜನಭೇದದಿಂದ ದ್ವಿವಿಧವಾಗಿರುವುದು. ಅವುಗಳಲ್ಲಿ ಸಾಕ್ಷಾದ್ಧಾತೂಪಸ್ಥಾಪ್ಯವಾವುದೋ ಅದೇ ಮುಖ್ಯವು. ಇದೇ ಉಪಸರ್ಜನಕ್ರಿಯೆಯೆಂಬುದು ಹೇಗೆಂದರೆ — 'ದೇವದತ್ತನು ಕಟ್ಟಿಗೆಯಿಂದ ಸ್ಥಾಲಿಯಲ್ಲಿ ಅಕ್ಕಿಯನ್ನು ಬೇಯಿಸುತ್ತಾನೆ' ಎಂದು ಪ್ರಯೋಗಿಸಲು ದೇವದತ್ತನು ಬೇಯಿಸುತ್ತಾನೆ; ಕಟ್ಟಿಗೆಯು ಉರಿಯುತ್ತದೆ; ಸ್ಥಾಲಿ ನೀರನ್ನು ಧರಿಸುತ್ತದೆ; ಅಕ್ಕಿಯು ಮೆತ್ತಗಾಗುವುದು. ಇದಿಷ್ಟೂ 'ಪೇ' ಧಾತುವಿನಲ್ಲಿ ತೋರುವುದರಿಂದ ಇಲ್ಲಿ ಪಾಕ ಕ್ರಿಯೆ 'ಪೇ' ಧಾತುವಿನಿಂದ ಸಾಕ್ಷಾದುಪಸ್ಥಾಪ್ಯವಾಗುವುದು. ಇದೇ ಮುಖ್ಯ ಕ್ರಿಯೆ. ಜ್ವಲನಾದಿಗಳೆಲ್ಲಾ ಅಂತರಾಳಿಕವಾಗಿ ತತ್ಸಾಧನಸಾಮಗ್ರಿಗಳಲ್ಲಿ ತೋರುವುದರಿಂದ ಇದು ಅಮುಖ್ಯ ಕ್ರಿಯೆ. ಇದರಲ್ಲಿ ದೇವದತ್ತ ನಿಷ್ಠಕ್ರಿಯೆ. ಸಾಕ್ಷಾದ್ಧಾತುವಾಚ್ಯವೆಂದು ಅದು ಮುಖ್ಯ ಕ್ರಿಯೆಯೆಂದು ತಿಳಿದು ತದಾಶ್ರಯನಾದ ದೇವದತ್ತನು ಇಲ್ಲಿ 'ಸ್ವತಂತ್ರಃ ಕರ್ತಾ' ಎಂಬ ಸೂತ್ರದಿಂದ ಕರ್ತೃವ್ಯಪದೇಶವನ್ನು ಹೊಂದುವನು. ಇದಕ್ಕೆ ಕರ್ತೃ ಸಾಧನಕಾರಕ ಸಾಮಾನಾಧಿಕರಣ್ಯವು ಹೇಗೆ ಉಪಪನ್ನವೋ ಹಾಗೆಯೇ ಕಾಷ್ಠಾದಿಗಳು ಈ ಮುಖ್ಯ ಕ್ರಿಯೆಯಲ್ಲಿ ಪರತಂತ್ರಗಳಾಗಿದ್ದರೂ ಜ್ವಲನಾದಿರೂಪ ತಮ್ಮ ತಮ್ಮ ಕ್ರಿಯೆಗಳಲ್ಲಿ ತಾವು ಸ್ವತಂತ್ರಗಳಾಗಿರುವುದರಿಂದ ಆಯಾ ಕ್ರಿಯಾನಿರೂಪಿತ ಕರ್ತೃತ್ವವು ಕಾಷ್ಠಾದಿಗಳಿಗೂ ಸಂಭವಿಸುವುದೆಂದು ಕರ್ತೃಸಾಧನ ಕಾರಕಪದದೊಡನೆ ಸಾಮಾನಾಧಿಕರಣ್ಯವು ಉಪಪನ್ನವಾಗುವುದು.

ಹೀಗೆ ಉಕ್ತಯುಕ್ತಿಯಿಂದ ಕಾರಕ ಮಾತ್ರಕ್ಕೂ ಕರ್ತೃತ್ವವುಂಟೆಂದು ಅಂಗೀಕರಿಸಲು ಉಕ್ತವಾದ ಪ್ರಯೋಗದಲ್ಲಿ ದೇವದತ್ತನಿಗೇ ಕರ್ತೃತ್ವ ನಿರ್ದೇಶವು ಹೇಗೆ ಉಪಪನ್ನವಾಗುವುದೆಂದು ಶಂಕೆಯುಂಟಾಗುವುದು. ಆದಾಗ್ಯೂ ಇಲ್ಲಿ ಕಾರಕ ಮಾತ್ರಕ್ಕೂ ತಮ್ಮ ತಮ್ಮ ವ್ಯಾಪಾರಗಳಲ್ಲಿ ಅವವಕ್ಕೆ ಸ್ವಾತಂತ್ರ್ಯವಿರುವುದರಿಂದ ಸಾಮಾನ್ಯವಾಗಿ ಕರ್ತೃತ್ವವಿದ್ದರೂ ವಿಶೇಷ ವಿವಕ್ಷೆಯನ್ನು ಮಾಡಲು ಆವ ಕಾರಕದ ವ್ಯಾಪಾರಕ್ಕೆ ಕಾರಕಾಂತರಗಳ ಪ್ರವೃತ್ತಿ-ನಿವೃತ್ತಿಗಳು ಅಧೀನಗಳಾಗಿರುವುವೋ ಆವುದು ಸಕಲಕಾರಕ ಸಾಕಲ್ಯದಿಂದ ಸಾಧ್ಯವಾದ ಕ್ರಿಯೆಯಲ್ಲಿ ಸ್ವತಂತ್ರವಾಗಿ ಎಂದರೆ — ಹೇಗೆ ತಾನು ತನ್ನಿಂದಲೇ ಕ್ರಿಯೆಯಲ್ಲಿ ಪ್ರವರ್ತಕವೂ ನಿವರ್ತಕವೂ

**ಆಗುವುದೋ ಹಾಗೆಯೆ ಕಾರಕಾಂತರಕ್ಕೆ** ಇತರ ಯಾವುದರಿಂದಲೂ ಅಪ್ರಯುಕ್ತವಾಗಿ ಪ್ರವರ್ತಕವೂ ನಿವರ್ತಕವೂ ಆಗುವುದೋ ಅದೇ ಅಪರತಂತ್ರವಾದ ಕರ್ತೃಕಾರಕವೆಂಬುದು. ಉಳಿದುವೆಲ್ಲಾ ಕ್ರಿಯೆಯಲ್ಲಿ ' ಸಾಧಕ, ತಮತ್ವ ' ಮೊದಲಾದ ಧರ್ಮವಿಶೇಷ ವಿವಕ್ಷೆಯಿಂದ ಕರಣಾದಿ ವ್ಯವಹಾರವನ್ನು ಹೊಂದುವುವು. ಇದೇ ಅರ್ಥವನ್ನು ಹರಿಕಾರಿಕೆಯಲ್ಲಿ —

ಸ್ವವ್ಯಾಪಾರೇಷು ಕರ್ತೃತ್ವಂ ಸರ್ವತ್ರೈವಾಸ್ತಿ ಕಾರಕೇ
ವ್ಯಾಪಾರಭೇದಾಪೇಕ್ಷಾಯಾಂ ಕರಣತ್ವಾದಿಸಂಭವಃ

ಎಂಬುದರಿಂದ ವಿವರಿಸಿರುವನು. ಆದುದರಿಂದಲೇ ಪ್ರಾಚೀನರು — ' **ವಿವಕ್ಷಾತಃ ಕಾರಕವಿಭಕ್ತಯೋ ನಾನಾ ಭವಂತಿ** ' ಎಂದು ಹೇಳಿ ಆ ವಿವಕ್ಷೆಯೂ ಆವುದಾದರೂ ಪ್ರಯೋಜನೋದ್ದೇಶದಿಂದಲೇ ಪ್ರವರ್ತಿಸುವುದೆಂದು ಹೇಳಿರುವರು.

ಈ ಶಾಸ್ತ್ರದಲ್ಲಿ ಸಂಸ್ಕೃತವ್ಯಾಕರಣಕಾರರು — ' **ಕಾರಕ, ಕರ್ತೃ, ಕರ್ಮ, ಸಂಪ್ರದಾನ, ಅಪಾದಾನ, ಅಧಿಕರಣ** ' ಎಂಬುವುಗಳಿಗೆ — ' **ಕ್ರಿಯಾಜನಕಂ, ಕಾರಕಂ** ' ಅಥವಾ ' **ಕ್ರಿಯಾನ್ವಯಿ ಯತ್ ತತ್ ಕಾರಕಂ || ಸ್ವತಂತ್ರಃ ಕರ್ತಾ || ಕರ್ತುರೀಪ್ಸಿತತಮಂ ಕರ್ಮ || ಸಾಧಕತಮಂ ಕರಣಂ || ಕರ್ಮಣಾಯಮಭಿಪ್ರೈತಿ ಸ ಸಂಪ್ರದಾನಂ || ಧ್ರುವಮಪಾಯೇಽಪಾದಾನಂ || ಆಧಾರೋಧಿಕರಣಂ ||** ' ಎಂದು ಸಂಕೇತಬೋಧಕಗಳಾದ ಸಂಜ್ಞಾ-ಸೂತ್ರಗಳನ್ನು ಹೇಳಿರುವಂತೆ ಹೇಳದಿದ್ದರೂ ಅಲ್ಲಿ ಸಂಕೇತ ಮಾಡಿರುವುದನ್ನೇ ಇಲ್ಲಿಯೂ ವ್ಯವಹರಿಸುವುದರಿಂದಲೂ ಅಥವಾ ಕಾರುಕಾದಿ ಪದಗಳು ಪೂರ್ವೋಕ್ತ ವ್ಯುತ್ಪತ್ತಿಯಿಂದ ಅನ್ವರ್ಥಕವಾಗಿರುವುದರಿಂದಲೂ ಇಲ್ಲಿ ಅಂತಹ ವ್ಯವಹಾರವನ್ನು ಮಾಡಲು ಸಂಜ್ಞಾಕರಣಪ್ರಯುಕ್ತ ನ್ಯೂನತೆಯೇನೂ ಇರುವುದಿಲ್ಲವೆಂದು ತಿಳಿಯುವುದು.

ಇಲ್ಲಿ ವಿಚಾರಮಾಡಲು — ' ಮೇರುವಿರ್ದಪುದು, ರಥಂ ಪೋದಪುದು ' ಮೊದಲಾದ ಪ್ರಯೋಗಗಳಲ್ಲಿ ಕಾರಕಾಂತರಕ್ಕೆ ಅಪ್ರಯೋಜಕಗಳಾದ ' ಮೇರು ' ಮೊದಲಾದ ಅಚೇತನಗಳಲ್ಲಿಯೂ ' ಅಡಿಸಿದನನ್ನಮಂ ದೇವದತ್ತನಿಂ ಜಿನದತ್ತಂ ' ಮೊದಲಾದ ಪ್ರಯೋಗಗಳಲ್ಲಿ ಜಿನದತ್ತಾದಿಪ್ರಯುಕ್ತನಾದ ಅಸ್ವತಂತ್ರ ' ದೇವದತ್ತ ' ಮೊದಲಾದ ಚೇತನಗಳಲ್ಲಿಯೂ ' ದೇವದತ್ತಂ ನಿದ್ರಿಸಿದಂ, ಮೂರ್ಛಿಸಿದಂ, ಸತ್ತಂ ' ಮೊದಲಾದ ಪ್ರಯೋಗಗಳಲ್ಲಿ — ಧಾತ್ವರ್ಥಾನುಕೂಲಯತ್ನವನ್ನಾಗಲಿ ಕಾರಕಾಂತರ ಪ್ರಯೋಗವನ್ನಾಗಲಿ ಮಾಡದಿರುವ ಸ್ವತಂತ್ರ ದೇವದತ್ತಾದಿಗಳಲ್ಲಿಯೂ — ಆವುದು ಸಕಲಕಾರಕ ಸಾಕಲ್ಯಸಾಧ್ಯಕ್ರಿಯೆಯಲ್ಲಿ ಕಾರಕಾಂತರಕ್ಕೆ ತಾನೇ ಸ್ವತಂತ್ರವಾಗಿ ಪ್ರವರ್ತಕ ನಿವರ್ತಕವಾಗುವುದೋ ಅದು ' ಅಪರತಂತ್ರಕರ್ತೃ ' ಎಂದು ಹೇಳಿರುವ ಕರ್ತೃಲಕ್ಷಣವು ಇಲ್ಲವಾದುದರಿಂದ ಅವಕ್ಕೆ ಕರ್ತೃತ್ವವು ಹೇಗೆ ಸಿದ್ಧವಾಗುವುದೆಂದು ಶಂಕೆಯುಂಟಾಗುವುದು. ಇದಕ್ಕೆ ಉತ್ತರವನ್ನು ಹೇಳಬೇಕಾದರೆ ಬಹಳವಿರುವುದು. ಅದೆಲ್ಲಾ **ವೈಯಾಕರಣಭೂಷಸಾರ**ವೆಂಬ ಗ್ರಂಥದಲ್ಲಿಯೂ **ಮಂಜೂಷಾ**ಗ್ರಂಥದಲ್ಲಿಯೂ ವಿಸ್ತಾರವಾಗಿ ಹೇಳಲ್ಪಟ್ಟಿರುವುದು. ಅದನ್ನೆಲ್ಲಾ ಮಂದಾಧಿಕಾರಿಗಳಿಗೆ ಯೋಗ್ಯವಾದ ಈ ಭಾಷಾಗ್ರಂಥದಲ್ಲಿ ವಿವರಿಸಲು ಗ್ರಂಥಬಾಹುಲ್ಯವಾಗುವುದೆಂದು ಸಂಕ್ಷೇಪ ಮಾಡಿರುವುದು. ಮುಖ್ಯವಾಗಿ ಅಚೇತನಾದಿ ಸ್ಥಲದಲ್ಲಿ ಚೇತನತ್ವಾದಿಗಳನ್ನು ಆರೋಪಿಸಿ ಕರ್ತೃತ್ವೋಪಪತ್ತಿಯನ್ನು ಕಲ್ಪಿಸಿಕೊಳ್ಳುವುದು.

ಏತಾದೃಶಕರ್ತೃನಿಷ್ಠಕ್ರಿಯೆಯಿಂದ ಆವುದು ವಿಷಯ ವಿಷಯೀಭಾವ ಸಂಬಂಧದಿಂದ ಪ್ರಾಪ್ತವಾಗುವುದೋ ಅದೇ ಕರ್ಮಕಾರಕವೆಂಬುದು. ಇವನ್ನೇ ಕೆಲವರು — ಕ್ರಿಯಾಜನ್ಯತದ್ವ್ಯಧಿಕರಣಫಲವತ್ತಾದುದು ಕರ್ಮವೆಂದು ಹೇಳುವರು. ಕರಣಾದಿಗಳೂ ಕರ್ತೃಪ್ರಯೋಜಿತಗಳಾಗಿಯೇ ತಮ್ಮ ತಮ್ಮ ವ್ಯಾಪಾರಗಳನ್ನು ಫಲೋನ್ಮುಖಗಳನ್ನಾಗಿ ಮಾಡುವುವಾದುದರಿಂದ ಎಲ್ಲಾ ಕಾರಕಗಳಲ್ಲಿಯೂ ಕ್ರಿಯಾವ್ಯಾಪ್ತಿಯಿರುವುದರಿಂದ ಕರಣಾದಿಗಳಿಗೂ ಕರ್ಮತ್ವವು ಪ್ರಸಕ್ತವಾಗುವುದು. ಆದರೂ '**ವಿವಕ್ಷಾತಃ ಕಾರಕವಿಭಕ್ತಯೋ ನಾನಾ ಭವಂತಿ**' ಎಂದು ಇರುವುದರಿಂದ ಸಾಧಕತಮತ್ವಾದಿ ಧರ್ಮಾಂತರವಿವಕ್ಷೆಯಿಂದ ಕರಣತ್ವಾದಿಗಳೂ ಸಂಭವಿಸುವುವು. ಆದುದರಿಂದಲೇ ಪ್ರಾಚೀನರು — '**ವಸ್ತುಮಾತ್ರಸ್ಯ ಷಟ್ಕಾರಕಾತ್ಮಕತ್ವೇಽಪಿ ವಿವಕ್ಷಾತೋ ಹಿ ಕಾರಕವ್ಯವಸ್ಥಾ**' ಎಂದು ಹೇಳಿರುವರು.

ಇಂತಹ ಕರ್ಮವು ಸಾಮಾನ್ಯವಾಗಿ — 'ನಿರ್ವರ್ತ್ಯ, ವಿಕಾರ್ಯ, ಪ್ರಾಪ್ಯ' ಎಂದು ಮೂರು ತೆರನಾಗಿರುವುದೆಂದು —

ನಿರ್ವರ್ತ್ಯಂ ಚ ವಿಕಾರ್ಯಂ ಚ ಪ್ರಾಪ್ಯಂ ಚೇತಿ ತ್ರಿಧಾ ಮತಂ

ಎಂಬುದರಿಂದ **ಹರಿಯು** ಸೂಚಿಸಿರುವನೆಂದು ಭಾಷಾವ್ಯಾಕರಣದಲ್ಲಿ ಈ ಮೂರು ಭೇದಗಳನ್ನೇ ಸಾಮಾನ್ಯವಾಗಿ ಅಂಗೀಕರಿಸಿರುವರು. ಸಂಸ್ಕೃತ ವ್ಯಾಕರಣದಲ್ಲಾದರೋ — 'ನಿರ್ವರ್ತ್ಯ, ವಿಕಾರ್ಯ, ಪ್ರಾಪ್ಯರೂಪವಾದ' ಈ ಮೂರು ಈಪ್ಸಿತತಮಕರ್ಮವೆಂದೂ ಅವಾಂತರಭೇದಗಳಿಂದ ಭಿನ್ನವಾದುದು ನಾಲ್ಕು ಕಲ್ಪಿತ ಕರ್ಮವೆಂದೂ ವಿಭಾಗಿಸಿ, ಕರ್ಮವು ಏಳು ಬಗೆಯೆಂದು ಹೇಳಿರುವರು. ಇದೇ ಅರ್ಥವನ್ನು **ಹರಿಯು** —

ನಿರ್ವರ್ತ್ಯಂ ಚ ವಿಕಾರ್ಯಂ ಚ ಪ್ರಾಪ್ಯಂ ಚೇತಿ ತ್ರಿಧಾ ಮತಂ
ತಚ್ಚೇಪ್ಸಿತತಮಂ ಕರ್ಮಚತುರ್ಧಾನ್ಯತ್ತು ಕಲ್ಪಿತಂ
ಸಂಜ್ಞಾಂತರೈರನಾಖ್ಯಾತಂ ಯದ್ಯಚ್ಚಾಪ್ಯನ್ಯಪೂರ್ವಕಂ

ಎಂಬುದರಿಂದ ಸೂಚಿಸಿ ಕ್ರಮವಾಗಿ ನಿರ್ವರ್ತ್ಯಾದಿಗಳಿಗೆ ಲಕ್ಷಣಾದಿಗಳನ್ನೂ —

ಯದಸಜ್ಜಾಯತೇ ಸದ್ವಾ ಜನ್ಮನಾ ಯತ್ ಪ್ರಕಾಶತೇ
ಪ್ರಕೃತೇಸ್ತು ವಿವಕ್ಷಾಯಾಂ ವಿಕಾರ್ಯಂ ಕೈಶ್ಚಿದನ್ಯಥಾ
ತನ್ನಿರ್ವರ್ತ್ಯಂ ವಿಕಾರ್ಯಂ ಚ ಕರ್ಮ ದ್ವೇಧಾ ವ್ಯವಸ್ಥಿತಂ
ಪ್ರಕೃತ್ಯುಚ್ಛೇದಸಂಭೂತಂ ಕಿಂಚಿತ್ ಕಾಷ್ಠಾದಿಭಸ್ಮವತ್
ಕಿಂಚಿದ್ಗುಣಾಂತರಾಧಾನಾತ್ ಸುವರ್ಣಾದಿ ವಿಕಾರವತ್
ಕ್ರಿಯಾಕೃತವಿಶೇಷಾಣಾಂ ಸಿದ್ಧಿರ್ಯತ್ರ ನ ತಿಷ್ಠತಿ
ದರ್ಶನಾದನುಮಾನಾದ್ವಾ ತತ್ಪ್ರಾಪ್ಯಮಿಹ ಕಥ್ಯತೇ

ಎಂಬ ಶ್ಲೋಕಗಳಿಂದ ವಿವರಿಸಿರುವನು. ಏತದ್ಭಿನ್ನವಾದುದೇ ಕಲ್ಪಿತವಾದುದು. ಕಲ್ಪಿತವೆಂದರೆ ಕೇವಲ ಸಾಂಕೇತಿಕವಾದುದು. ಇದು — 'ಉದಾಸೀನ, ದ್ವೇಷ್ಯ, ಅಕಥಿತ, ಅನ್ಯಪೂರ್ವಕ' ಎಂದು ನಾಲ್ಕು ತೆಱನಾಗಿರುವುದು. ಇವುಗಳಲ್ಲಿ ಆವುದು ಕರ್ತೃವಿಗೆ ಉದ್ದೇಶ್ಯವಲ್ಲದಿದ್ದರೂ ಕ್ರಿಯಾಜನ್ಯಫಲಶಾಲಿಯಾದುದೋ ಅದು ಉದಾಸೀನ ಕರ್ಮವು. ಆವುದು ದ್ವೇಷಿಸಾಧನವಾಗಿ ಕ್ರಿಯಾಜನ್ಯಫಲಶಾಲಿಯಾದುದೋ ಅದು ದ್ವೇಷಕರ್ಮವು. ಆವುದು ಕಾರಕವಿಶೇಷ ಸಂಜ್ಞಾಂತರ

ದಿಂದ ಅವಿವಕ್ಷಿತವಾಗಿ ಕರ್ಮೋಪಕಾರಕವಾಗುವುದೋ ಅದು ಅಕಥಿತ ಕರ್ಮವು. ಅವುದು ಪ್ರಾಪ್ತಿವಿಷಯ ಕರ್ಮಾನ್ಯಸಂಜ್ಞಕವಾದುದೋ ಅದು ಅನ್ಯಪೂರ್ವಕ ಕರ್ಮವು. ಇವಕ್ಕೆಲ್ಲಾ ಉದಾಹರಣೆಗಳು ಸಂಸ್ಕೃತದಲ್ಲಿಯೇ ಪ್ರಸಿದ್ಧವಾಗಿರುವುದರಿಂದ ಆ ವ್ಯಾಕರಣದಿಂದಲೇ ತಿಳಿದು ಕೊಳ್ಳಬೇಕು. ಇಲ್ಲಿ ಪ್ರಸಕ್ತವಾದುದರಿಂದ ತತ್ಸ್ವರೂಪ ಮಾತ್ರವನ್ನು ಸೂಚಿಸಿರುವೆವು. ಭಾಷೆಯಲ್ಲಿ ಇಂತಹ ಪ್ರಯೋಗಗಳು ಪ್ರಚುರವಾಗಿಲ್ಲವಾದುದರಿಂದ ಇವಕ್ಕೆ ಇಲ್ಲಿ ಉಪಯೋಗ ವಿಲ್ಲವೆಂದು ಭಾಷಾವ್ಯಾಕರಣಜ್ಞರು ಇವರ ಲಕ್ಷಣಗಳನ್ನು ಬಿಟ್ಟಿರುವರು. ಮತ್ತು **ಶಾಸನಕಾರ**ನು ಸಂಸ್ಕೃತ ಭಾಷಾವಾಸನೆಯ ಬಲದಿಂದ ಕೆಲವು ಪ್ರಯೋಗಗಳನ್ನು ಕಲ್ಪಿಸಿ ಅವಕ್ಕೆ ತಕ್ಕಂತೆ ಸಂಸ್ಕೃತ ವ್ಯಾಕರಣಕಾರರ ಶೈಲಿಯನ್ನು ಅನುಸರಿಸಿ ಕೆಲವು ಸೂತ್ರಗಳನ್ನು ಮಾಡಿರುವನು. ಅದನ್ನೂ ಭಾಷಾಸ್ವಭಾವವನ್ನೂ ಚೆನ್ನಾಗಿ ಪರಿಶೀಲಿಸಿ ನೋಡಿದರೆ ಅದು ಅಷ್ಟು ಉಪಯುಕ್ತವಾಗಿರುವಂತೆ ಕಾಣುವುದಿಲ್ಲವು.

ಪ್ರಕೃತದಲ್ಲಿ — ನಿರ್ವರ್ತ್ಯ, ವಿಕಾರ್ಯ, ಪ್ರಾಪ್ಯರೂಪವಾದ ತ್ರಿವಿಧಕರ್ಮದಲ್ಲಿ—'ಗಡಿಗೆ ಯನ್ನು ಮಾಡುತ್ತಾನೆ, ನಗವನ್ನು ಮಾಡುತ್ತಾನೆ' ಮೊದಲಾದುವುಗಳಲ್ಲಿ ' ಗಡಿಗೆ ' ಮೊದಲಾ ದುವು ಪೂರ್ವದಲ್ಲಿ ಮೃದಾದಿರೂಪದಿಂದಿದ್ದರೂ ' ಗಡಿಗೆ ' ಮೊದಲಾದ ರೂಪದಿಂದ ಇಲ್ಲದೇ ಇದ್ದುವು ಪ್ರಾದುರ್ಭವಿಸುವುವಾದುದರಿಂದ ಇವು ನಿರ್ವರ್ತ್ಯ ಕರ್ಮಕ್ಕೆ ಉದಾಹರಣೆಯೆಂದು ತಿಳಿಯಬೇಕು. ಹೀಗೆಯೇ ವಿಕಾರ್ಯರೂಪವಾದ ಕರ್ಮವು ಪೂರ್ವರೂಪೋಪಮರ್ದನ-ಅನುಪ ಮರ್ದನ ಭೇದದಿಂದ ದ್ವಿವಿಧವಾಗಿರುವುದು. ಇವುಗಳಲ್ಲಿ — ' ಕಟ್ಟಿಗೆಯನ್ನು ಸುಡುತ್ತಾನೆ ' ಎಂಬಲ್ಲಿ ಕಟ್ಟಿಗೆಯ ಪೂರ್ವರೂಪಕ್ಕೆ ಉಪಮರ್ದವುಂಟಾಗಿರುವುದರಿಂದ ಅದು ಪೂರ್ವರೂಪೋಪ ಮರ್ದನರೂಪವಿಕಾರ್ಯಕರ್ಮವೆಂದೂ ಸುವರ್ಣವನ್ನು ಕುಂಡಲ ಮಾಡುತ್ತಾನೆ ಎಂಬಲ್ಲಿ ಸುವರ್ಣದ ಪೂರ್ವರೂಪಕ್ಕೆ ಉಪಮರ್ದನವಿಲ್ಲವಾದುದರಿಂದ ಅದು ಅನುಪಮರ್ದನರೂಪ ವಿಕಾರ್ಯಕರ್ಮವೆಂದೂ ತಿಳಿಯಬೇಕು. 'ವೇದವನ್ನು ಕಲಿಯುತ್ತಾನೆ, ಸೂರ್ಯನನ್ನು ನೋಡು ತ್ತಾನೆ' ಮೊದಲಾದ ಪ್ರಯೋಗಗಳಲ್ಲಿ ' ವೇದ, ಸೂರ್ಯ ' ಮೊದಲಾದುವು ಉತ್ಪಾದ್ಯಗಳೂ ಅಲ್ಲ; ಅನ್ಯಥಾಕಾರ್ಯಗಳೂ ಅಲ್ಲ. ಅಧ್ಯಯನಾದಿ ಕ್ರಿಯೆಗಳಿಂದ ತದವಸ್ಥಗಳಾಗಿಯೇ ವಿಷಯೀ ಕರಿಸಲ್ಪಡುವುದರಿಂದ ಅವು ಪ್ರಾಪ್ಯಕರ್ಮಗಳೆಂದೂ ತಿಳಿಯಬೇಕು. ಯದ್ಯಪಿ ಜೈನಸ್ಯಾಯಮತ ಗಳಲ್ಲಿ ಎಲ್ಲಾ ವಸ್ತುಗಳೂ ದ್ರವ್ಯಾರ್ಥಿಕ-ಪರ್ಯಾಯಾರ್ಥಿಕ-ನಯಪ್ರಚಾರಗಳಿಂದ ಪ್ರತಿಕ್ಷಣ ದಲ್ಲಿಯೂ ತ್ರಿಲಕ್ಷಣಗಳಾಗಿರುವುದೆಂದು ಅಂಗೀಕರಿಸಿರುವುದರಿಂದ ಉತ್ಪಾದ್ಯ, ವ್ಯಯ, ಧ್ರುವ್ಯ ರೂಪತ್ವದಿಂದ ನಿರ್ವರ್ತ್ಯವಾದುದು ವಿಕಾರ್ಯವೂ ವಿಕಾರ್ಯವಾದುದು ನಿರ್ವರ್ತ್ಯವೂ ತದುಭಯವೂ ಪ್ರಾಪ್ಯವಾಗಿಯೂ ಪ್ರಾಪ್ಯವಾದುದು ತದುಭಯವಾಗಿಯೂ ಉಪಮರ್ದವಾದುದು ಅನುಪಮರ್ದವಾಗಿಯೂ ಅನುಪಮರ್ದವಾದುದು ಉಪಮರ್ದವಾಗಿಯೂ ತದವಸ್ಥವಾದುದು ಅತದವಸ್ಥವಾಗಿಯೂ ಅತದವಸ್ಥವಾದುದು ತದವಸ್ಥವಾಗಿಯೂ ಆಗುವುದು. ಹೀಗೆ ಅನೇಕ ಭೇದಭಿನ್ನವಾಗಿದ್ದರೂ ಸಂಗ್ರಹರೂಪವಾಗಿ ನಿರ್ವರ್ತ್ಯಾದಿ ಭೇದತ್ರಯವನ್ನು ಹೇಳಿರುವುದು. ಆದುದರಿಂದ ಕ್ರಮವಾಗಿ ಈ ಮೂರಕ್ಕೂ ಮೂಲದಲ್ಲಿ ಉದಾಹರಣೆಯನ್ನು ಕೊಟ್ಟಿರುವುದು.

ಈ ವಿಷಯದಲ್ಲಿ **ದರ್ಪಣಕಾರ**ನು —

ಪ್ರವಿದಿತತತ್ತ್ವರ್ಗಂ ಕ
ರ್ತೃವಿನೀಪ್ಸಿತತಮಪದಾರ್ಥಮದು ನಾಲ್ಕುಂ ಭೇ
ದನಾಳ್ಕುಂ ನಿರ್ವ
ರ್ತ್ಯವಿಕಾರ್ಯಂ ಪ್ರಾಪ್ಯಮೆತ್ತಲುಂ ವೈಷಯಿಕಂ ( ಸೂತ್ರ ೧೨೭ )

ಎಂಬ ಸೂತ್ರದಿಂದ ಕರ್ಮಸಂಜ್ಞೆಯನ್ನೂ ತದ್ವಿಭಾಗವನ್ನೂ ಹೇಳಿ ಈ ಕರ್ಮಾರ್ಥದಲ್ಲಿ —

ಪ್ರಥಮವಿಸ್ಪದಾ ದ್ವಿತೀಯಾ
ವಿಭಕ್ತಿ ಕರ್ಮದೊಳನಾಕುಳಂ ವರ್ತಿಸುಗುಂ ( ಸೂತ್ರ ೧೨೬ )

ಎಂಬ ಸೂತ್ರಭಾಗದಿಂದ ದ್ವಿತೀಯಾವಿಭಕ್ತಿಯನ್ನು ವಿಧಿಸಿರುವನು. ಇಲ್ಲ ಲೋಕವ್ಯವಹಾರಾನುಗುಣವಾಗಿ ಪ್ರಥಮೆಯನ್ನು ಮೊದಲು ವಿಧಿಸಿ ಅನಂತರದಲ್ಲ ದ್ವಿತೀಯಾದಿಗಳನ್ನು ವಿಧಿಸುವುದು ಉಚಿತವು. ಆದಾಗ್ಯೂ **ಶಾಸನಕಾರನು** ಪ್ರಥಮಾವಿಭಕ್ತಿಯು ಉಕ್ತಕಾರಕವಿಷಯವೆಂದು ಭಾವಿಸಿ ಮೊದಲು ಅನುಕ್ತವಾದುದನ್ನು ಹೇಳಿ ಆಮೇಲೆ ಉಕ್ತವನ್ನು ಹೇಳಿರುವನೆಂದು ತಿಳಿಯಬೇಕು. ಅಥವಾ ' ಲಿಂಗಾತ್ಸುಪ್ ' ಎಂಬ ಸೂತ್ರವೇ ಸಾಮಾನ್ಯವಾಗಿ ಪ್ರಥಮೆಗೂ ವಿಧಾಯಕವೆಂದು ತಿಳಿಯಬೇಕು. ಇತರ ವೈಯಾಕರಣರೆಲ್ಲರೂ ಪ್ರಥಮಾದಿ ಕ್ರಮವನ್ನೇ ಅನುಸರಿಸಿರುವರು.

**ಅವತಾರಿಕೆ ೨೦೫**

ಪೂರ್ವದಲ್ಲಿ ಕ್ರಿಯಾವ್ಯಾಪ್ಯವಾದುದು ಕರ್ಮವೆಂದು ಕರ್ಮಸಾಮಾನ್ಯ ಲಕ್ಷಣವನ್ನು ಹೇಳಿ ಆ ಕರ್ಮರೂಪಾರ್ಥದಲ್ಲಿರುವ ಲಿಂಗದ ದೆಸೆಯಿಂದ ಪರವಾಗಿ ಅಮ್-ಪ್ರತ್ಯಯವು ಬರುವುದೆಂದು ವಿಧಿಸಲ್ಪಟ್ಟಿತು. ಈಗ ಗತ್ಯಾದ್ಯರ್ಥಕ ಧಾತುಗಳ ಸಮಭಿವ್ಯಾಹಾರದಲ್ಲಿ ಪ್ರಯೋಜ್ಯ ಕರ್ತೃವಾಚಕದ ಮೇಲೆ — ' **ಹೇತುಕರ್ತೃಕರಣೇತ್ಥಂಭೂತಲಕ್ಷಣೇ || ೨೦೯ ||** ' ಎಂಬ ವಕ್ಷ್ಯಮಾಣ ಸೂತ್ರದಿಂದ ಕರ್ತೃಸಾಮಾನ್ಯದಲ್ಲಿ ಪ್ರಸಕ್ತವಾದ ಇನ್-ಪ್ರತ್ಯಯಕ್ಕೆ ಅಪವಾದವಾಗಿ ಅಮ್-ಪ್ರತ್ಯಯವನ್ನು ವಿಧಿಸುತ್ತಾನೆ.

**ಸೂತ್ರಂ || ಗತಿಶಬ್ದಾರ್ಥಾಕರ್ಮಣಾಂ ಪ್ರಯೋಜ್ಯೇ ಕರ್ತರಿ || ೨೦೫ ||**

**ಅರ್ಥ ||** ಗತ್ಯರ್ಥಕಗಳಾಗಿಯೂ ಶಬ್ದಾರ್ಥಕಗಳಾಗಿಯೂ ಅಕರ್ಮಕಗಳಾಗಿಯೂ ಇರುವ ಧಾತುಗಳ ಸಂಬಂಧವಾದ ಪ್ರಯೋಜ್ಯ ಕರ್ತೃವನುಕ್ತವಾಗಿರಲು ಅದರಲ್ಲಿರುವ ಲಿಂಗದ ದೆಸೆಯಿಂದ ಪರವಾಗಿ ಸುಪ್‌ಸಂಜ್ಞಕವಾದ ಅಮ್-ಪ್ರತ್ಯಯವು ಬರುವುದು.

**ಉದಾಹರಣೆ ||** ಅರಸಂ ಭೃತ್ಯನನೂರನೆಯ್ದಿಸಿದಂ, ಗೋವಳಂ ತುಱುಗಳಂ ಮನೆಯಂ ಪುಗಿಸಿದಂ, ಜೋದನನರಸನಾನೆಯನೇಱಿಸಿದಂ || ಎಂದು ಮೊದಲಾದುವು ಗತ್ಯರ್ಥಕ್ಕೂ ಅರಸಂ ಕಾಂತೆಯಂ ಸಪಿವಾತಂ ನುಡಿಯಿಸಿದಂ, ಪಿತರಂ ಪುತ್ರನಂ ತೊದಲ್ನುಡಿಯನೆನಿಸಿದಂ, ಅರಸಿಯರಗಿಳಿಯಂ ಮೆಲ್ನುಡಿಯಂ ನುಡಿಯಿಸಿದಳ್ || ಎಂದು ಮೊದಲಾದುವು ಶಬ್ದಾರ್ಥಕ್ಕೂ ನಾಯಕಂ ಕೆಳದಿಯಂ ನಾಣ್ಚಿಸಿದಂ, ಕಾಂತೆಯನರಸಂ ತಲ್ಪದೊಳ್ ಮಲಗಿಸಿದಂ, ಇಂದ್ರಂ ಜಿನನಂ ಮೇರುವಿನೊಳ್ ಮಿಸಿಸಿದಂ || ಎಂದು ಮೊದಲಾದುವು ಅಕರ್ಮಕಕ್ಕೂ ಉದಾಹರಣೆಗಳೆಂದು ತಿಳಿಯುವುದು.

**ವಿಚಾರ ೨೦೫**

ಈ ಸೂತ್ರದಲ್ಲಿ — 'ಗತಿಶಬ್ದಾರ್ಥಾಕರ್ಮಣಾಂ, ಪ್ರಯೋಜ್ಯೇ, ಕರ್ತರಿ' ಎಂದು ಮೂರು ಪದಗಳಿರುವುವು. ಪೂರ್ವದಿಂದ 'ಲಿಂಗಾತ್, ಸುಪ್, ಅಮ್' ಎಂದು ಮೂರು ಪದಗಳು ಅನುವರ್ತಿಸಲ್ಪಡುವುವು. 'ಗತಿ ಶಬ್ದಾರ್ಥಾಕರ್ಮಣಾಂ' ಎಂಬಲ್ಲಿ 'ಗತಿ, ಶಬ್ದ' ಎಂಬಿವಕ್ಕೆ ದ್ವಂದ್ವಸಮಾಸವನ್ನು ಮಾಡಿ ಅಭಿಧೇಯವಾಚಕವಾದ ಅರ್ಥಶಬ್ದದೊಡನೆ ಬಹುವ್ರೀಹಿಸಮಾಸ ವನ್ನು ಮಾಡಲು — 'ದ್ವಂದ್ವಾಂತೇ ಶ್ರೂಯಮಾಣಂ ಪದಂ ಪ್ರತ್ಯೇಕಮಭಿಸಂಬಂಧ್ಯತೇ' ಎಂಬ ನ್ಯಾಯದಿಂದ ದ್ವಂದ್ವಾಂತದಲ್ಲಿ ಶ್ರೂಯಮಾಣವಾದ 'ಅರ್ಥ' ಶಬ್ದಕ್ಕೆ ದ್ವಂದ್ವದಲ್ಲಿರುವ 'ಗತಿ, ಶಬ್ದ'ಗಳೆರಡರಲ್ಲಿಯೂ ಪ್ರತ್ಯೇಕವಾಗಿ ಸಂಬಂಧ ಮಾಡುವುದು. ಅನಂತರದಲ್ಲಿ ಅಕರ್ಮಕ ಪದದೊಡನೆ ದ್ವಂದ್ವಸಮಾಸವನ್ನು ಮಾಡಿ ಷಷ್ಠೀಬಹುವಚನಾಂತವಾಗಿ ನಿರ್ದೇಶಮಾಡಲ್ಪಟ್ಟಿ ರುವುದು. ಆದುದರಿಂದ 'ಗತ್ಯರ್ಥಕ, ಶಬ್ದಾರ್ಥಕ, ಅಕರ್ಮಕಗಳ' ಎಂದರ್ಥವಾಗುವುದು. ಇಲ್ಲಿ ಕರ್ತೃತ್ವಾದಿಗಳು ಧಾತುನಿರೂಪಿತವಾಗಿಯೇ ಇರುವುದರಿಂದ ಧಾತುವಿಗೆ ಆಕ್ಷೇಪ ಮಾಡಿ ಕೊಂಡು ಅದಕ್ಕೆ 'ಗತಿಶಬ್ದಾರ್ಥಾಕರ್ಮಣಾಂ' ಎಂಬುದನ್ನು ವಿಶೇಷಣ ಮಾಡುವುದು. ಗತ್ಯರ್ಥಕವೆಂದರೆ — 'ಪೋಗು, ನಡೆ' ಮೊದಲಾದ ಧಾತುಗಳು; ಶಬ್ದಾರ್ಥಕವೆಂದರೆ — 'ನುಡಿ' ಮೊದಲಾದ ಧಾತುಗಳು; ಅಕರ್ಮಕವೆಂದರೆ — 'ನಾಣ್ಚು, ಮಲಗು' ಮೊದಲಾದ ಧಾತುಗಳೆಂದು ತಿಳಿಯುವುದು. ಅಕರ್ಮಕ ಧಾತುಗಳೆಂಬುದು —

> ಧಾತೋರರ್ಥಾಂತರೇ ವೃತ್ತೇರ್ಧಾತ್ವರ್ಥೇನೋಪಸಂಗ್ರಹಾತ್
> ಪ್ರಸಿದ್ಧೇರವಿವಕ್ಷಾತಃ ಕರ್ಮಣೋ ಕರ್ಮಿಕಾ ಕ್ರಿಯಾ

ಎಂದು ನಾನಾತೆಱನಾಗಿದ್ದರೂ ಪ್ರಕೃತದಲ್ಲಿ ವಾಖ್ಯಾನ ಪರಿಭಾಷೆಯಿಂದ ನಿತ್ಯಾಕರ್ಮಕಗಳನ್ನೇ ಗ್ರಹಿಸಬೇಕು.

ಧಾತುಗಳಾದರೋ ಅಕರ್ಮಕ, ಸಕರ್ಮಕಗಳೆಂದು ಎರಡು ತೆರನಾಗಿರುವುವು. ಅವುಗಳಲ್ಲಿ ಆವ ಧಾತುಗಳ ಪ್ರಯೋಗದಲ್ಲಿ ಕರ್ತೃಪದಸಮಭಿವ್ಯಾಹಾರವಿದ್ದರೂ ಕರ್ಮಾಕಾಂಕ್ಷೆಯುಂಟಾ ಗುವುದೋ ಅವು — ಎಂದರೆ 'ಮಾಡು, ನೋಡು' ಮೊದಲಾದುವು ಸಕರ್ಮಕವೆಂದೂ ಆವ ಧಾತುಗಳ ಪ್ರಯೋಗದಲ್ಲಿ ಕರ್ಮಾಕಾಂಕ್ಷೆಯಿರುವುದಿಲ್ಲವೋ ಅವು (ಎಂದರೆ — 'ಇರ್, ಬರ್' ಮೊದಲಾದುವು) ಅಕರ್ಮಕಗಳೆಂದೂ —

> ಕರ್ತೃಕ್ರಿಯಾಪದದ್ವಂದ್ವಾತ್ ಕರ್ಮಾಪೇಕ್ಷಾ ಯದಾ ಭವೇತ್
> ತದಾ ಸಕರ್ಮಕೋ ಧಾತುರ್ವಿಪರೀತಸ್ತ್ವಕರ್ಮಕಃ

ಎಂಬ ಪ್ರಾಚೀನ ಕಾರಿಕೆಯಿಂದ ತಿಳಿಯುವುದು. ಇನ್ನೂ ವಿಸ್ತಾರವಾಗಿ ಧಾತುಪ್ರಕರಣದಲ್ಲಿ ಸಕರ್ಮಕಾಕರ್ಮಕ ವ್ಯವಸ್ಥೆಯು ಮಾಡಲ್ಪಡುವುದು.

ಇಲ್ಲಿ — 'ದೇವದತ್ತಂ ಮಾಡಿದಂ, ಯಜ್ಞದತ್ತಂ ನೋಡಿದಂ' ಮೊದಲಾದ ಪ್ರಯೋಗ ಗಳಲ್ಲಿ ಕರ್ತೃಕ್ರಿಯಾಸಮಭಿವ್ಯಾಹಾರವಿದ್ದರೂ ಶ್ರೋತೃವಿಗೆ 'ಏನನ್ನು' ಎಂದು ಕರ್ಮಾಕಾಂಕ್ಷೆ ಯುಂಟಾಗುವುದು. ಪುನಃ 'ಘಟಮಂ' ಮೊದಲಾದ ಪದಶ್ರವಣದಿಂದ ಆ ಆಕಾಂಕ್ಷೆಯು ನಿವೃತ್ತ ವಾಗುವುದು. ಆದುದರಿಂದ ಇವು ಸಕರ್ಮಕಗಳೆಂದು ಗೊತ್ತಾಗುವುದು. 'ಆತನಿರ್ದಂ, ಈತಂ

ಬಂದಂ ' ಮೊದಲಾದ ಪ್ರಯೋಗಗಳಲ್ಲಿ ಕರ್ತೃಕ್ರಿಯಾಸಮಭಿವ್ಯಾಹಾರವಿರಲು ' ಎಲ್ಲಿ, ಎತ್ತಣಿಂ ' ಎಂದು ಕಾರಕಾಂತರಾಕಾಂಕ್ಷೆಯಿದ್ದರೂ ಕರ್ಮಾಕಾಂಕ್ಷೆಯಿಲ್ಲವಾದುದರಿಂದ ಇವು ಅಕರ್ಮಕಗಳೆಂದು ಗೊತ್ತಾಗುವುದು. ಇಲ್ಲಿ ಆಕಾಂಕ್ಷೆ ಇಲ್ಲದಿರುವುದು ಕ್ವಚಿತ್‌ಸ್ವಭಾವವಾಗಿಯೂ ಕ್ವಚಿತ್ ಸಮಭಿವ್ಯಾಹಾರವಿಶೇಷದಿಂದಲೂ ಕ್ವಚಿತ್-ಅರ್ಥಾಂತರವೃತ್ತಿಯಿಂದಲೂ ಕ್ವಚಿತ್‌ವಕ್ತೃತಾತ್ಪರ್ಯವಿಲ್ಲದಿರುವುದರಿಂದಲೂ ಉಂಟಾಗುವುದೆಂದು ಹಿಂದೆ ಹೇಳಿರುವ ಕಾರಿಕೆಯಿಂದ ತಿಳಿಯುವುದು. ಅದರಲ್ಲಿ — ' ಆತನಿರ್ದ್ದಂ, ಈತಂ ಬಂದಂ ' ಮೊದಲಾದ ಪ್ರಯೋಗಗಳಲ್ಲಿ — ' ಇರ್, ಬರ್ ' ಮೊದಲಾದುವು ಸ್ವಭಾವವಾಗಿ ಅಕರ್ಮಕಗಳು. ' ನೆಲನಂ ಕೊಂಡಂ, ಸತಿಯಂ ಕರೆದಂ ' ಮೊದಲಾದ ಪ್ರಯೋಗಗಳಲ್ಲಿ ' ಕೊಳ್, ಕರೆ ' ಮೊದಲಾದುವು ಸ್ವಯಂ ಸಕರ್ಮಕಗಳಾಗಿದ್ದರೂ — ' ಸಿರಿ ದೊರೆಕೊಂಡುದು, ತಾಂ ಮೆಯ್ಗರೆದಂ ' ಮೊದಲಾದ ಪ್ರಯೋಗಗಳಲ್ಲಿರುವ ' ದೊರೆಕೊಳ್, ಮೆಯ್ಗರೆ ' ಮೊದಲಾದುವು ಉಪಪದಸಮಭಿವ್ಯಾಹಾರದಲ್ಲಿ ಕರ್ಮಾಕಾಂಕ್ಷೆಯಿಲ್ಲವಾದುದರಿಂದ ಅಕರ್ಮಕಗಳೆಂದು ತಿಳಿಯುವುದು. ಹೀಗೆಯೇ — ' ಪೊಲನನುಲ್ದಂ, ಮಣಿಯಂ ಸರಿದಂ ' ಮೊದಲಾದ ಪ್ರಯೋಗಗಳಲ್ಲಿ —' ಉಲ್, ಸರಿ ' ಮೊದಲಾದ ಧಾತುಗಳು ಹಲವಿಲೇಖನ ಸೂತ್ರಪ್ರವೇಶನಾರ್ಥಗಳಲ್ಲಿ ಸಕರ್ಮಕಗಳಾಗಿದ್ದರೂ 'ಆತನೊಳಂ, ಅವರೊಳರ್, ಈತಂ ಸರಿದಂ, ಇವರ್ ಸರಿದರ್' ಮೊದಲಾದ ಪ್ರಯೋಗಗಳಲ್ಲಿರುವ ಸತ್ತಾಪಲಾಯನಾದ್ಯರ್ಥಗಳಲ್ಲಿ ' ಉಲ್, ಸರಿ ' ಮೊದಲಾದುವುಗಳಿಗೆ ಕರ್ಮಾಕಾಂಕ್ಷೆಯಿಲ್ಲದಿರುವುದರಿಂದ ಅಕರ್ಮಕಗಳೆಂದೇ ಹೇಳಬೇಕು. ಹೀಗೆಯೇ ' ಬೋನಮನಟ್ಟಂ, ತುಪ್ಪಮನುಂಡಂ ' ಮೊದಲಾದ ಪ್ರಯೋಗಗಳಲ್ಲಿ ' ಅಡು, ಉಣ್ ' ಮೊದಲಾದ ಧಾತುಗಳು ಸಕರ್ಮಕಗಳಾಗಿದ್ದರೂ — ' ಅಮಿನ್ನಟ್ಟಿಂಡು, ಬರ್ದುಂಕುಗೆಯ್ವುದುದಿಟಮೇ ' ಮೊದಲಾದ ಪ್ರಯೋಗಗಳಲ್ಲಿ — ಚಿತ್ತಕ್ಷೋಭವಶದಿಂದ ಪಾಕಭೋಜನಕ್ರಿಯಾಮಾತ್ರಕ್ಕೆ ನಿಷೇಧವು ತೋರುವುದರಿಂದ ತದ್ವಿಷಯಭೂತಕರ್ಮವಿಶೇಷಕ್ಕೆ ವಿವಕ್ಷೆಯಿಲ್ಲದಿರುವುದರಿಂದಲೇ ಕರ್ಮವಿದ್ದರೂ ಬುದ್ಧಿಗೋಚರವಾಗುವುದಿಲ್ಲವೆಂದು ' ಅಡು, ಉಣ್ ' ಮೊದಲಾದುವು ಅವಿವಕ್ಷಿತ ಕರ್ಮರೂಪಾಕರ್ಮಕಗಳೆಂದು ತಿಳಿಯುವುದು. ಈ ಅವಿವಕ್ಷಿತ ಕರ್ಮಕಧಾತುಗಳೂ ಅನಿತ್ಯಾಕರ್ಮಕಗಳು. ಉಳಿದುವು ನಿತ್ಯಾಕರ್ಮಕಗಳು. ಇಲ್ಲಿ ನಿತ್ಯಾಕರ್ಮಕಗಳೇ ಗ್ರಹಿಸಲ್ಪಡುವುವು. ಇವುಗಳ ' ಪ್ರಯೋಜ್ಯೇ ಕರ್ತರಿ ' ಎಂದು ' ಗತಿಶಬ್ದಾರ್ಥಾಕರ್ಮಣಾಂ ' ಎಂಬ ಪಷ್ಠ್ಯಂತಕ್ಕೆ ಅನ್ವಯವು. ' ಪ್ರಯೋಜ್ಯೇ ಕರ್ತರಿ ' ಎಂದರೆ — ಧಾತ್ವರ್ಥಾನುಕೂಲವ್ಯಾಪಾರವುಳ್ಳುದು ಕರ್ತೃವೆನ್ನಿಸಿಕೊಳ್ಳುವುದು. ಆ ಕರ್ತೃ ' ಸ್ವತಂತ್ರ, ಪರತಂತ್ರ ' ಎಂದು ಎರಡು ತೆಱನಾಗಿರುವುದು. ಅವುಗಳಲ್ಲಿ ಯಾವುದು ಇತರರಿಂದ ಅಪ್ರಯುಕ್ತವಾಗಿಯೇ ಕರ್ಮಾದಿಕಾರಕಗಳನ್ನು ತಂತಮ್ಮ ವ್ಯಾಪಾರಗಳಲ್ಲಿ ಪ್ರಯೋಗಿಸಿ ಧಾತ್ವರ್ಥವನ್ನು ಫಲೋನ್ಮುಖವಾಗಿ ಮಾಡುವುದೋ ಅದೇ ಸ್ವತಂತ್ರಕರ್ತೃವೆಂಬುದು. ಇದು ' ಆತನಟ್ಟಂ, ಈತನುಂಡಂ ' ಮೊದಲಾದ ಪ್ರಯೋಗಗಳಲ್ಲಿರುವುದು. ಆವುದು ' ಪ್ರೇಷಣ, ಅಧ್ಯೇಷಣ ' ಮೊದಲಾದ ವ್ಯಾಪಾರದಿಂದ ' ನೀನು ಹೀಗೆ ಮಾಡು ' ಎಂದು ಇನ್ನೊಬ್ಬನಿಂದ ನಿಯೋಜಿತನಾಗಿಯೇ ಕ್ರಿಯೆಯಲ್ಲಿ ಪ್ರವರ್ತಿಸುವುದೋ ಅದೇ ಪರತಂತ್ರಕರ್ತೃವೆಂಬುದು. ಇದು—' ಬಾಣಸಿಗ ನೀಂ ಬೋನಮನಡು, ಗುರುಗಳ್ ನೀಮೆಮಗೆ ತತ್ತ್ವಮಂ ದಯೆಗೆಯ್ಯಿಂ'

ಮೊದಲಾದ ಪ್ರಯೋಗಗಳಲ್ಲಿರುವುದು. ಇಲ್ಲಿ ಪಾಚಕನೂ ಗುರುವೂ ಪರರಿಂದ ಪ್ರೇರಿತರಾಗಿಯೇ ಪಾಕದಲ್ಲಿಯೂ ಉಪದೇಶದಲ್ಲಿಯೂ ಪ್ರವರ್ತಿಸುವರು. ಆದುದರಿಂದ ಇಲ್ಲಿ ಕರ್ತೃವು ಪ್ರಯೋಜ್ಯವೆಂದು ತಿಳಿಯಬೇಕು. ಪ್ರಯೋಜಕನೂ ಕರ್ತೃವೆನಿಸಿಕೊಳ್ಳುವನೆಂದು ಮುಂದೆ ಹೇಳುವೆವು. ತಥಾಚ — ಗತ್ಯಾದ್ಯರ್ಥಕಧಾತುಗಳ ಸಂಬಂಧಿಯಾದ ಇಂತಹ ಪ್ರಯೋಜ್ಯಕರ್ತೃವಿನಲ್ಲಿರುವ ಲಿಂಗದ ದೆಸೆಯಿಂದ ಪರವಾಗಿ ಸುಪ್-ಸಂಜ್ಞಕವಾದ ಅಮ್-ಪ್ರತ್ಯಯವು ಬರುವುದೆಂದು ಸೂತ್ರಾರ್ಥವಾಗುವುದರಿಂದ 'ಅರಸಂ ಭೃತ್ಯನನೂರನೆಯ್ದಿಸಿದಂ' ಮೊದಲಾದುವು ಕ್ರಮವಾಗಿ ಇದಕ್ಕೆ ಲಕ್ಷ್ಯಗಳಾಗಿರುವುವು. ಇಲ್ಲಿ — 'ಭೃತ್ಯನೂರಂ ಎಯ್ದಿದಂ' ಎಂದು ಸ್ವತಂತ್ರ ಕರ್ತೃಪ್ರಯೋಗವು. ಯಾವಾಗ ಅವನನ್ನು ಇನ್ನೊಬ್ಬನು ಪ್ರೇರಿಸುವನೋ ಆವಾಗ 'ಎಯ್ದು' ಧಾತುವಿನ ಮೇಲೆ — '**ಧಾತೋರ್ಹೇತುಮತಿ || ೫೩೬ ||**' ಎಂಬ ಸೂತ್ರದಿಂದ ಪ್ರೇರಣಾರ್ಥದಲ್ಲಿ ಇಸು-ಪ್ರತ್ಯಯವನ್ನು ಮಾಡಲು 'ಎಯ್ದಿಸಿದಂ' ಎಂದಾಗುವುದು. ಇಲ್ಲಿ ಭೃತ್ಯನು ಕರ್ತೃವಾಗಿದ್ದರೂ ಪ್ರಯೋಜ್ಯನಾಗಿರುವುದರಿಂದ 'ಭೃತ್ಯ' ಶಬ್ದದ ಮೇಲೆ ಅಮ್-ಪ್ರತ್ಯಯವು ಬಂದಿರುವುದೆಂದು ತಿಳಿಯಬೇಕು. ಹೀಗೆಯೇ 'ಗೋವಳಂ ತುಱುಗಳಂ ಮನೆಯಂ ಪುಗಿಸಿದಂ' ಎಂಬಲ್ಲಿ 'ತುಱುಗಳ್ ಮನೆಯಂ ಪೊಕ್ಕುವು' ಎಂದು ಸ್ವತಂತ್ರಕರ್ತೃಪ್ರಯೋಗವು. ಅವುಗಳನ್ನು ಗೋವಳನು ಪ್ರೇರಿಸಿದನು ಎಂದು ವಿವಕ್ಷಿಸಲು ಇಸು-ಪ್ರತ್ಯಯವು ಬಂದು 'ಪುಗಿಸಿದಂ' ಎಂದಾಗುವುದು. ಇಲ್ಲಿ ತುಱುಗಳಿಗೆ ಕರ್ತೃತ್ವವಿದ್ದರೂ ಪ್ರಯೋಜ್ಯತ್ವವಿರುವುದರಿಂದ 'ತುಱುಗಳಂ' ಎಂದು ಅಮ್-ಪ್ರತ್ಯಯವು ಬಂದಿರುವುದು. ಹೀಗೆಯೇ ಮುಂದೆ ಎಲ್ಲಾ ಕಡೆಯಲ್ಲಿಯೂ ಊಹಿಸಿಕೊಳ್ಳುವುದು. 'ಮಿಸಿಸಿದಂ' ಎಂಬಲ್ಲಿ — '**ವೇಶ್ಮಿಯಃ || ೫೪೨ ||**' ಎಂಬ ಸೂತ್ರದಿಂದ 'ಮಿಸಾ' ಧಾತುವಿಗೆ ಇಸು-ಪ್ರತ್ಯಯದಲ್ಲಿ ವೈಕಲ್ಪಿಕ ಇಸ್-ಆದೇಶವು ಬಂದು ನಿಷ್ಪನ್ನವಾಗಿರುವುದು. ಹೀಗೆಯೇ ಏತದರ್ಥಕ-ಧಾತುಪ್ರಕೃತಿಕ-ಇಸು-ಪ್ರತ್ಯಯಾಂತಕಗಳಲ್ಲೆಲ್ಲಾ ಊಹಿಸಿಕೊಳ್ಳುವುದು.

ಇಲ್ಲಿ ವಿಚಾರ ಮಾಡಲಾಗಿ ಈ ಸೂತ್ರಕ್ಕೆ ಪ್ರೇರಣಾರ್ಥಕವಾದ 'ಇಸುಪ್' ಪ್ರತ್ಯಯಾಂತ ಧಾತು ಸಮಭಿವ್ಯಾಹೃತವಾದುವು ಲಕ್ಷ್ಯಗಳಾಗಿರುವುವು. ಆ ಇಸುಪ್-ಪ್ರತ್ಯಯಾಂತ ಧಾತುಗಳು ವ್ಯಾಪಾರದ್ವಯಾರ್ಥಕಗಳಾದುದರಿಂದ ಇವುಗಳಲ್ಲಿ ಪ್ರಯೋಜಕರಾದ ರಾಜಾದಿಗಳು ಕರ್ತೃಗಳಾದುದರಿಂದ ಕನಿಷ್ಠ ನಿಯೋಜನ ಕ್ರಿಯೆಯಿಂದ ಭೃತ್ಯಾದಿಗಳು ವಿಷಯೀಕರಿಸಲ್ಪಡುವುದರಿಂದ ಅವುಗಳಿಗೂ ಕ್ರಿಯಾವ್ಯಾಪ್ಯತ್ವರೂಪಕರ್ಮತ್ವವು ಸಿದ್ಧವಾಗಲು – '**ಕರ್ಮಣ್ಯಮ್ || ೨೦೪ ||**' ಎಂಬ ಪೂರ್ವಸೂತ್ರದಿಂದಲೆ ಅಮ್-ಪ್ರತ್ಯಯವು ಸಿದ್ಧವಾಗುತ್ತಿರಲು ತದರ್ಥವಾಗಿ ಈ ಸೂತ್ರವನ್ನು ಆರಂಭಿಸುವುದು ಆವಶ್ಯಕವಿಲ್ಲವೆಂದರೆ ಇಲ್ಲಿ – ಸ್ವಾತಂತ್ರ್ಯದಿಂದಾಗಲಿ ಪಾರತಂತ್ರ್ಯದಿಂದಾಗಲಿ ಆವುದು ಸಾಕ್ಷಾದ್ಧಾತ್ವರ್ಥಾನುಕೂಲ-ಕೃತ್ತಿಮತ್ತಾಗಿರುವುದೇ ತತ್‌ಕ್ರಿಯಾವ್ಯಾಪ್ಯಕ್ಕೇ ಕರ್ಮತ್ವವನ್ನಂಗೀಕರಿಸುವುದರಿಂದ ಪ್ರಯೋಜಕಕ್ರಿಯಾವಿಷಯಕ್ಕೆ ಕರ್ಮತ್ವವಿಲ್ಲದಿರುವುದರಿಂದ ದ್ವಿತೀಯಾವಿಭಕ್ತಿಯು ಸಿದ್ಧಿಸುವುದಿಲ್ಲವೆಂದು ಈ ಸೂತ್ರವು ಪ್ರಾರಂಭಿಸಲ್ಪಟ್ಟಿದೆಯೆಂದು ತಿಳಿಯಬೇಕು. ಹೀಗೆ ಹೇಳದೆ ಪ್ರಯೋಜಕಕ್ರಿಯಾವಿಷಯಕ್ಕೂ ಕರ್ಮತ್ವವನ್ನು ಹೇಳುವುದಾದರೆ—'ಪುರೋಹಿತನರಸನಿಂ ದಾನಮಂ ಕುಡಿಸಿದಂ, ಅರಸಂ ಗೌಂಡನಿಂ ಪೊಲಮನುಟಿಸಿದಂ'

ಮೊದಲಾದ ಪ್ರಯೋಗಗಳಲ್ಲ ಪುರೋಹಿತನಿಂದ ನಿಯೋಜಿತನಾದ ರಾಜವಾಚಕ ಶಬ್ದಕ್ಕೂ ಅರಸನಿಂದ ನಿಯೋಜಿತನಾದ ಗೌಂಡವಾಚಕ ಶಬ್ದಕ್ಕೂ ಕರ್ತ್ರರ್ಥದಲ್ಲಿ ತೃತೀಯೆ ಬಾರದೆ ಹೋಗುವುದು. ಆದುದರಿಂದಲೇ ಈ ಸೂತ್ರದಲ್ಲ ' ಗತಿಶಬ್ದಾರ್ಥಾರ್ಥಕರ್ಮಣಾಂ ' ಎಂದು ಹೇಳಿ– ' ಪುರೋಹಿತನರಸನಿಂ ದಾನಮಂ ಕುಡಿಸಿದಂ ' ಮೊದಲಾದುವುಗಳಲ್ಲ ವ್ಯಾವೃತ್ತಿ ಮಾಡಿರುವುದು. ಇಲ್ಲ ' ಪ್ರಯೋಜ್ಯೇ ' ಎಂದು ಹೇಳಿರುವುದರಿಂದ — ಊರನೆಯ್ದಂ ಪಥಿಕಂ, ಕಾಂತೆ ನುಡಿಯಂ ನುಡಿದಳ್ ' ಮೊದಲಾದ ಇಸುಬಂತಗಳಿಲ್ಲದ ಪ್ರಯೋಗಗಳಲ್ಲ ಮುಖ್ಯ ಕರ್ತೃವಿಗೆ ಬರುವುದಿಲ್ಲ.

ಅಥವಾ ಸಾಮಾನ್ಯವಾಗಿ ಸಾಕ್ಷಾದ್ಧಾತುವಾಚ್ಯಕ್ರಿಯಾವ್ಯಾಪ್ಯವಾದುದೆಲ್ಲಾ ಕರ್ಮವಾಗುವುದೆಂದು ಸಾಮಾನ್ಯಲಕ್ಷಣವನ್ನು ಅಂಗೀಕರಿಸಿ ಇಸುಬಂತ ಧಾತುವಾಚ್ಯ ಕ್ರಿಯಾವ್ಯಾಪ್ಯಕ್ಕೂ ಕರ್ಮತ್ವವನ್ನು ಹೇಳುವುದರಿಂದ ಅಲ್ಲಿಲ್ಲಾ ಪೂರ್ವಸೂತ್ರದಿಂದ ಅಮ್-ಪ್ರತ್ಯಯವು ಪ್ರಾಪ್ತವಾಗಲು ಕೆಲವೆಡೆಗಳಲ್ಲ ತದ್ವ್ಯಾವೃತ್ತ್ಯರ್ಥವಾಗಿ ಈ ಸೂತ್ರವು ಪ್ರಾರಂಭಿಸಲ್ಪಟ್ಟಿರುವುದೆಂದು ತಿಳಿಯಬೇಕು. ಆದುದರಿಂದ — ' **ಸಿದ್ಧೇ ಸತ್ಯಾರಭ್ಯಮಾಣೋ ವಿಧಿರ್ನಿಯಮಾಯ ಭವತಿ** ' ಎಂಬ ನ್ಯಾಯದಿಂದ — ಇಸುಪ್ರತ್ಯಯಾಂತಧಾತುಸಮಭಿವ್ಯಾಹಾರದಲ್ಲಿ ತದ್ವಾಚ್ಯ ಕ್ರಿಯಾವ್ಯಾಪ್ಯವಾದ ಪ್ರಯೋಜ್ಯಕ್ಕೆ ' ಕರ್ಮಣ್ಯಮ್ ' ಎಂಬುದರಿಂದ ಅಮ್-ಪ್ರತ್ಯಯವು ಪ್ರಸಕ್ತವಾಗಲು ಗತಿಶಬ್ದಾರ್ಥಾರ್ಥಕರ್ಮಕಧಾತುಗಳಿಗೇ ಬರುವುದು, ಅನ್ಯಕ್ಕೆ ಬರುವುದಿಲ್ಲ ಎಂದು ಈ ಸೂತ್ರವು ನಿಯಮಾರ್ಥಕವೆಂದು ತಿಳಿಯುವುದು.

**ಅವತಾರಿಕೆ ೨೦೬**

ಹೀಗೆ ಪೂರ್ವೋಕ್ತ ನಿಯಮದಿಂದಾಗಲಿ ಪೂರ್ವೋಕ್ತ ಕರ್ಮಲಕ್ಷಣಾವಿಷಯವಾದುದರಿಂದಾಗಲಿ 'ಗುರು ಶಿಷ್ಯನಂ ವ್ಯಾಕರಣಮನೋದಿಸಿದಂ' ಮೊದಲಾದ ಪ್ರಯೋಗಗಳಲ್ಲ ಪ್ರಯೋಜ್ಯಕ್ಕೆ ಅಮ್-ಪ್ರತ್ಯಯವು ಅಪ್ರಾಪ್ತವಾಗಲು ಅಲ್ಲ ವಿಕಲ್ಪವಾಗಿ ಅಮ್-ಪ್ರತ್ಯಯವನ್ನು ವಿಧಿಸುತ್ತಾನೆ.

**ಸೂತ್ರಂ ॥ ಬೋಧಾಶನಾವನತೀನಾಂ ವಾ ॥ ೨೦೬ ॥**

**ಅರ್ಥ** ॥ ' **ಬೋಧ, ಅಶನ, ಅವನತಿ** ' ಎಂಬರ್ಥಗಳುಳ್ಳ ಧಾತುಗಳ ಪ್ರಯೋಜ್ಯ ಕರ್ತೃವಾಚಕ ಲಿಂಗಸಂಜ್ಞಕ ಶಬ್ದದ ಮೇಲೆಯಿಂದ ಪರವಾಗಿ ಸುಪ್-ಸಂಜ್ಞಕವಾದ ಅಮ್ ಪ್ರತ್ಯಯವು ವಿಕಲ್ಪವಾಗಿ ಬರುವುದು. ಇದು ಬಾರದಿದ್ದರೆ ವಕ್ಷ್ಯಮಾಣ ಸೂತ್ರದಿಂದ ಕರ್ತ್ರರ್ಥದಲ್ಲಿ ತೃತೀಯಾ ವಿಭಕ್ತಿಯೇ ಬರುವುದು.

**ಉದಾಹರಣೆ** ॥ ಗುರು ಶಿಷ್ಯನಂ ( ಶಿಷ್ಯನಿಂ ) ವ್ಯಾಕರಣಮನೋದಿಸಿದಂ, ಉಪಾಧ್ಯಾಯಂ ಮಾಣವಕನಂ (ಮಾಣವಕನಿಂ) ವೇದಮಂ ಪಠಿಸಿದಂ ॥ ಪಿತೃ ಪುತ್ರನಂ ( ಪುತ್ರನಿಂ) ಕಥೆಯಂ ಕೇಳಿಸಿದಂ ॥ ಮೊದಲಾದುವು ಬೋಧಾರ್ಥಕ್ಕೆ — ಜನನಿ ಕೂಸಂ ( ಕೂಸಿಂ ) ಪಾಯಸಮನುಣಿಸಿದಳ್, ನಂದಗೋಪನಚ್ಯುತನಂ ( ಅಚ್ಯುತನಿಂ ) **ಬೆಣ್ಣೆ**ಯಂ ತಿನಿಸಿದಂ, ದಾದಿ ಪಸುಳೆಯಂ (ಪಸುಳೆಯಿಂ) ಪಾಲಂ ಕುಡಿಯಿಸಿದಳ್ ॥ ಮೊದಲಾದುವು ಅಶನಾರ್ಥಕ್ಕೆ ತಂದೆ ಮಗನಂ ( ಮಗನಿಂ ) ಗುರುವಿಂಗೆ ನಮಸ್ಕರಿಸಿದಂ, ಗುರು ಶಿಷ್ಯನಂ (ಶಿಷ್ಯನಿಂ) ಜಿನಂಗೆ

ಜಗಿಸಿದಂ, ಅಬ್ಬೆ ಕೂಸಂ ( ಕೂಸಿಂ ) ಇಂದುವಿಂಗೆ ಪೊಡಮಡಿಸಿದಳ್ || ಮೊದಲಾದುವು ಅವಸತ್ಯರ್ಥಕ್ಕೂ ಉದಾಹರಣೆಗಳಾಗಿರುವುವು.

**ವಿಚಾರ ೨೦೭**

ಈ ಸೂತ್ರದಲ್ಲಿ — ' ಬೋಧಾಶನಾವನತೀನಾಂ, ವಾ ' ಎಂದು ಎರಡು ಪದಗಳಿರುವುವು. ಪೂರ್ವದಿಂದ ' ಪ್ರಯೋಜ್ಯೇ, ಕರ್ತರಿ, ಲಿಂಗಾತ್, ಸುಪ್, ಅಮ್ ' ಎಂಬ ಪದಗಳು ಅನುವರ್ತಿಸಲ್ಪಡುವುವು. ' ಬೋಧಾಶನಾವನತೀನಾಂ ' ಎಂಬುದು ' ಪ್ರಯೋಜ್ಯೇ ಕರ್ತರಿ ' ಎಂಬುದಕ್ಕೆ ವಿಶೇಷಣವು. ಇಲ್ಲಿ ಬೋಧವೆಂದರೆ ಜ್ಞಾನವು. ಅಶನವೆಂದರೆ ಆಹಾರವು. ಅವನತಿಯೆಂದರೆ ನಮಸ್ಕಾರವು. ಇವು ಧಾತುಗಳಲ್ಲವಾದುದರಿಂದ ಇವುಗಳ ಪ್ರಯೋಗದಲ್ಲಿ ಕರ್ತ್ರರ್ಥದಲ್ಲಿ ಅಮ್-ಪ್ರತ್ಯಯವನ್ನು ವಿಧಿಸುವುದಕ್ಕಾಗುವುದಿಲ್ಲವಾದುದರಿಂದ ಈ ಅರ್ಥವುಳ್ಳ ' ಧಾತುಗಳ ' ಎಂದು ' ಬೋಧಾಶನಾವನತೀನಾಂ ' ಎಂಬುದಕ್ಕೆ ಅರ್ಥವೆಂದು ತಿಳಿಯಬೇಕು. ತಥಾಚ—ಬೋಧಾದ್ಯರ್ಥಕ ಧಾತುಗಳ ಪ್ರಯೋಜ್ಯ ಕರ್ತೃವಿನಲ್ಲಿರುವ ಲಿಂಗಕ್ಕೆ ಪರವಾಗಿ ಸುಪ್-ಸಂಜ್ಞಕವಾದ ಅಮ್-ಪ್ರತ್ಯಯವು ವಿಕಲ್ಪವಾಗಿ ಬರುವುದೆಂದು ಸೂತ್ರಾರ್ಥವಾಗುವುದರಿಂದ ' ಗುರು ಶಿಷ್ಯನಂ ವ್ಯಾಕರಣಮನೋದಿಸಿದಂ ' ಮೊದಲಾದುವು ಕ್ರಮವಾಗಿ ಇದಕ್ಕೆ ಲಕ್ಷ್ಯಗಳಾಗಿರುವುವು. ಇಲ್ಲಿ ಅಮ್-ಪ್ರತ್ಯಯವು ವಿಕಲ್ಪವೆಂದು ಹೇಳಿರುವುದರಿಂದ ವಕ್ಷ್ಯಮಾಣ ತೃತೀಯಾವಿಭಕ್ತಿಯು ಬಂದು ' ಶಿಷ್ಯನಿಂ ' ಎಂದು ತೃತೀಯಾಂತಗಳೂ ಆಗುವುವು.

ಇಲ್ಲಿ ' ಓದು ' ಎಂಬ ಧಾತುವು ಪಾಠಾರ್ಥಕವೇ ಅಲ್ಲದೆ ಬೋಧಾರ್ಥಕವಲ್ಲವೆಂದು ತೋರುವುದು. ಆದಾಗ್ಯೂ ಪಾಠವು ಬೋಧಕಾರಣವಾದುದರಿಂದಲೂ ಬೋಧಕಾರ್ಯವಾದುದರಿಂದಲೂ ಬೋಧಾರ್ಥಕವೆಂದು ತಿಳಿಯಬೇಕು. ' ಪಠಿಸಿದಂ ' ಎಂಬುದು ' ಪಠನ ' ಶಬ್ದದ ದೆಸೆಯಿಂದ ಪರವಾಗಿ — ' **ಇಸುಪ್ ತತ್ಕರೋತಿ ಭಾವೇ ಲ್ಯುಟೋsಶಯನಾದೇರ್ಲುಪ್ತ್ಯ ದೋಃ || ೫೩೩ ||**' ಎಂಬ ಸೂತ್ರದಿಂದ ಇಸುಪ್-ಪ್ರತ್ಯಯವನ್ನೂ 'ನು' ಲೋಪವನ್ನೂ ಮಾಡಿ ಅನಂತರದಲ್ಲಿ — ' ಲುಬನಾಮಹಾನೌ ' ಎಂಬುದರಿಂದ ಪೂರ್ವಸ್ವರಕ್ಕೆ ಲೋಪವನ್ನು ಮಾಡಲು ' ಪಠಿಸು ' ಎಂದು ಕರ್ಣಾಟಕ ಧಾತುವಾಗುವುದು. ಪುನಃ ಇವರ ಮುಂದೆ ' **ಧಾತೋರ್ಹೇತುಮತಿ || ೫೩೭ ||** ' ಎಂಬುದರಿಂದ ಇಸುಪ್-ಪ್ರತ್ಯಯವನ್ನೂ ಪೂರ್ವದ ಇಸುವಿಗೆ — ' **ಇಸುಪೀಸುಪಃ ಶ್ಲುಬಸ್ವಾರ್ಥೇ || ೫೪೦ ||** ' ಎಂಬುದರಿಂದ ಲೋಪವನ್ನೂ ' **ಧಾತೋರೇಕಾನೇಕತ್ವೇ || ೪೪೨ ||** ' ಇತ್ಯಾದಿ ಸೂತ್ರದಿಂದ ಅಮ್-ಪ್ರತ್ಯಯವನ್ನೂ ' **ದಪದವಂ ತಿಙಾ ಸದ್ಭೂತಭಾವಿನಿ || ೪೪೭ ||** ' ಎಂಬುದರಿಂದ ಅತೀತಕಾಲದಲ್ಲಿ ದ-ಪ್ರತ್ಯಯವನ್ನೂ ' **ಇದುತಃ || ೪೭೭ ||** ' ಎಂಬುದರಿಂದ ಇ ಕಾರಾದೇಶವನ್ನೂ ಮಾಡಲು ಸಿದ್ಧಿಸುವುದು. ಹೀಗೆಯೇ ' ನಮಸ್ಕರಿಸಿದಂ ' ಮೊದಲಾದುವನ್ನೂ ಊಹಿಸಿಕೊಳ್ಳುವುದು.

ಈ ಅಮ್-ಪ್ರತ್ಯಯಾಂತ ಪ್ರಯೋಗಗಳು ಸಂಸ್ಕೃತ ವ್ಯಾಕರಣಕಾರರು ಹೇಳಿರುವ — ' **ಗತಿಬುದ್ಧಿ ಪ್ರತ್ಯವಸಾನಾರ್ಥ ಶಬ್ದ ಕರ್ಮಾಕರ್ಮಕಾಣಾಮಣಿ ಕರ್ತಾಸಣೌ** ' ಇತ್ಯಾದಿ ಸೂತ್ರಾರ್ಥ ಸಂಸ್ಕಾರದಿಂದ ಭಾಷೆಯಲ್ಲಿ ಸಾಧಿಸಲ್ಪಟ್ಟಿವೆ. ಇವುಗಳಿಗೂ ಮುಂದೆ ಹೇಳುವ ಇನ್ನೂ ಕೆಲವಕ್ಕೂ ಭಾಷೆಯಲ್ಲಿ ಪ್ರಯೋಗ ಮಾಡಲು ರೂಢಿಯಿಲ್ಲದುದರಿಂದ ಅಷ್ಟು ಚೆನ್ನಾಗಿ ತೋರುವುದಿಲ್ಲ.

ಆದಾಗ್ಯೂ ಪ್ರಾಚೀನಗ್ರಂಥಗಳಲ್ಲಿ ಸಂಸ್ಕೃತಪ್ರಯೋಗಪರಿಶೀಲನಾಭ್ಯಾಸದಿಂದ ಪ್ರಯೋಗಿಸಿರುವುದಕ್ಕೆ ಉಪಪತ್ತಿಯನ್ನು ಕಲ್ಪಿಸುವುದಕ್ಕೆ ಈ ಸೂತ್ರಗಳು ಸಾಧಕಗಳಾಗಿವೆಯೆಂದು ತಿಳಿಯುವುದು.

**ಅವತಾರಿಕೆ ೨೦೭**

ಹೀಗೆಯೇ ಇನ್ನೂ ಕೆಲವು ಲಿಂಗವಿಶೇಷಕ್ಕೆ ಅರ್ಥವಿಶೇಷದಲ್ಲಿ 'ಅಮ್' ಪ್ರತ್ಯಯವನ್ನು ವಿಧಿಸುತ್ತಾನೆ.

**ಸೂತ್ರಂ ॥ ಕಾಲಾಧ್ವನೋರಮ್ ವ್ಯಾಪ್ತೌ ॥ ೨೦೭ ॥**

**ಅರ್ಥ ॥ ಕಾಲಾರ್ಥದಲ್ಲಿಯೂ ಅಧ್ವಾರ್ಥದಲ್ಲಿಯೂ ಇರುವ ಲಿಂಗಕ್ಕೆ ಪರವಾಗಿ 'ಅಮ್' ಪ್ರತ್ಯಯವು, ಅತ್ಯಂತ ಸಂಯೋಗವು ತೋರುತ್ತಿರಲು ಬರುವುದು.**

**ಉದಾಹರಣೆ** ॥ 'ಆಱುದಿಂಗಳಂ ತಳ್ವಿದಂ[1], ಜಾವಮಂ ತೊಟಲ್ದಂ' ॥ ಮೊದಲಾದುವು ಕಾಲಾರ್ಥಕ್ಕೂ 'ಅರೆಗಾವುದಮಂ ಪರಿದಂ, ಗಾವುದಮನೋಡಿದಂ' ॥ ಮೊದಲಾದುವು ಅಧ್ವಾರ್ಥಕ್ಕೂ ಲಕ್ಷ್ಯಗಳೆಂದು ತಿಳಿಯುವುದು.

**ವಿಚಾರ ೨೦೭**

ಈ ಸೂತ್ರದಲ್ಲಿ — 'ಕಾಲಾಧ್ವನೋಃ, ಅಮ್, ವ್ಯಾಪ್ತೌ' ಎಂದು ಮೂರು ಪದಗಳಿರುವುವು. ಪೂರ್ವದಿಂದ 'ಲಿಂಗಾತ್, ಸುಪ್' ಎಂದು ಅನುವರ್ತಿಸಲ್ಪಡುವುದು. 'ಕಾಲಾಧ್ವನೋಃ' ಎಂಬುದು — 'ಕಾಲಶ್ಚ ಅಧ್ವಾಚ = ಕಾಲಾಧ್ವಾನೌ, ತಯೋಃ=ಕಾಲಾಧ್ವನೋಃ' ಎಂದು ದ್ವಂದ್ವಸಮಾಸದಿಂದ ಸಪ್ತಮ್ಯಂತನಿರ್ದೇಶವಾಡಿರುವುದು. ಇದು ವೃತ್ತಿತ್ವಸಂಬಂಧದಿಂದ 'ಲಿಂಗಾತ್' ಎಂಬುದಕ್ಕೆ ವಿಶೇಷಣವು. ಆದರಿಂದ 'ಕಾಲದಲ್ಲಿರುವ ಲಿಂಗ, ಅಧ್ವದಲ್ಲಿರುವ ಲಿಂಗ' ಎಂಬರ್ಥವಾಗುವುದು. ಅಲ್ಲಿರುವುದೆಂದರೆ — ತದ್ವಾಚಕವಾದುದೆಂದರ್ಥವು. ಇಲ್ಲಿ ಕಾಲವೆಂಬುದು ವರ್ತನಾಲಕ್ಷಣವಾದುದು. ಇದು ನಿಶ್ಚಯರೂಪವೆಂದೂ ವ್ಯವಹಾರರೂಪವೆಂದೂ ಎರಡು ತೆರನಾಗಿರುವುದು. ಅವುಗಳಲ್ಲಿ ಪರಮಾಣುಪುಂಜಾತ್ಮಕವಾದುದು ನಿಶ್ಚಯರೂಪಕಾಲವು. ಇದು ಅಖಂಡವಾಗಿಯೂ ನಿತ್ಯವಾಗಿಯೂ ವ್ಯಾಪ್ತವಾಗಿಯೂ ಇರುವುದು. ಲೌಕಿಕ ವ್ಯವಹಾರಕ್ಕೆ ಗೋಚರವಾದುದಲ್ಲ. ಮತ್ತು ಇಂತಹ ಕಾಲಕ್ಕೆ ಸರ್ವಪದಾರ್ಥದೊಡನೆ ನಿರಂತರ ಸಂಬಂಧವಿರುವುದರಿಂದ ಇದಕ್ಕೆ ಅತ್ಯಂತಸಂಯೋಗವಿಶೇಷಣವೂ ವ್ಯರ್ಥವಾಗುವುದು. ಆದುದರಿಂದ ಇದು ಇಲ್ಲಿ ವಿವಕ್ಷಿತವಲ್ಲ. ವ್ಯವಹಾರರೂಪವಾದುದು ಕ್ಷಣಲವಮೂಹೂರ್ತಾದಿಲಕ್ಷಣ ಕಾಲವು. ಆದಿಪದದಿಂದ ಪ್ರಹರ, ದಿನ, ಪಕ್ಷ, ಮಾಸಾದಿಗಳಿಗೆ ಸಂಗ್ರಹವು. ಇದು ಲೋಕವ್ಯವಹಾರಕ್ಕೆ ಉಪಯುಕ್ತವಾದುದರಿಂದ ಇಲ್ಲಿ ಇದೇ ವಿವಕ್ಷಿತವಾಗಿರುವುದು. ಹೀಗೆಯೇ — ಅಧ್ವವೂ ಸೂಕ್ಷ್ಮ-ಸ್ಥೂಲಭೇದಗಳಿಂದ ಎರಡು ತೆರನಾಗಿರುವುದು. ಅವುಗಳಲ್ಲಿ ಸೂಕ್ಷ್ಮವಾದುದು ಪರಮಾಣ್ವವಷ್ಟಂಭಕ್ಕೆ ಯೋಗ್ಯವಾದ ಪ್ರದೇಶರೂಪವಾದುದು. ಇದು ವ್ಯವಹಾರಕ್ಕೆ ಅವಿಷಯವಾದುದರಿಂದ ಇಲ್ಲಿ ವಿವಕ್ಷಿತವಲ್ಲ. ಸ್ಥೂಲವಾದುದು ಕ್ರೋಶಾದಿ

---

**ಪಾಠಾಂತರ : ೧ ಕಟಿದಂ**

ರೂಪವು. ಇದು ವ್ಯವಹಾರಕ್ಕೆ ಉಪಯುಕ್ತವಾದುದರಿಂದ ಇದೇ ಇಲ್ಲಿ ವಿವಕ್ಷಿತವಾದ ಅರ್ಥವು. 'ಏತದುಭಯವಾಚಕಲಿಂಗಾತ್' ಎಂದು ಫಲಿತವಾಗುವುದು. 'ವ್ಯಾಪ್ತೌ' ಎಂಬುದು ವಿಶೇಷಣ. 'ಆಪ್ತಿಃ=ವ್ಯಾಪ್ತಿಃ' ಎಂಬ ವಿಗ್ರಹಾರ್ಥಪರಾಲೋಚನೆಯಿಂದ ಅತ್ಯಂತ ಸಂಯೋಗಾರ್ಥಕ ಸಪ್ತಮ್ಯಂತಪದವೆಂದು ತೋರುವುದು. ಅತ್ಯಂತಸಂಯೋಗವೆಂದರೆ ನಿರಂತರ ಸಂಬಂಧವು. ಆ ಸಂಬಂಧವೂ ದ್ರವ್ಯ, ಗುಣ, ಕ್ರಿಯೆಗಳಿಂದ ಎಂದು ತಿಳಿಯಬೇಕು. ಸಂಸ್ಕೃತ ವ್ಯಾಕರಣದಲ್ಲಿ — '**ಕಾಲಾಧ್ವನೋರತ್ಯಂತಸಂಯೋಗೇ ದ್ವಿತೀಯಾ**' ಎಂಬ ಸೂತ್ರಕ್ಕೆ ವ್ಯಾಖ್ಯಾನ ಮಾಡುವಾಗ 'ದ್ರವ್ಯ, ಗುಣ, ಕ್ರಿಯಾಸಂಜ್ಞೆಗಳಿಂದ ಅತ್ಯಂತಸಂಯೋಗವು ತೋರುತ್ತಿರಲು' ಎಂದು ಹೇಳಿರುವರು. ಅದರಂತೆ ಇಲ್ಲಿಯೂ ಸಂಜ್ಞೆಯನ್ನೂ ಸೇರಿಸಿಕೊಂಡು ನಾಲ್ಕರಿಂದ ಕಾಲಾಧ್ವಗಳಿಗೆ ಅತ್ಯಂತಸಂಯೋಗವು ತೋರುತ್ತಿರಲು ಕಾಲವಾಚಕಾಧ್ವವಾಚಕಲಿಂಗಕ್ಕೆ ಪರವಾಗಿ ಸುಪ್-ಸಂಜ್ಞಕವಾದ 'ಅಮ್' ಪ್ರತ್ಯಯವು ಬರುವುದೆಂದು ಸೂತ್ರಾರ್ಥವಾಗಲು 'ಅಱುದಿಂಗಳಂ ತಳ್ವಿದಂ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು. ಹೀಗೆಯೇ ಕ್ವಚಿತ್ 'ಗಾವುದಮಂ ಕೊಂಕಿ ಪರಿವುದಾ ಪೊಱೆ ಸತತಂ' ಮೊದಲಾದ ಪ್ರಯೋಗಗಳಲ್ಲಿ ಗುಣದಿಂದ ವ್ಯಾಪ್ತಿಯೂ 'ಮಾಸಮಂ ಲಡ್ಡುಗೆ ಒಳ್ಳಿತು' ಮೊದಲಾದ ಪ್ರಯೋಗಗಳಲ್ಲಿ ದ್ರವ್ಯದಿಂದ ವ್ಯಾಪ್ತಿಯೂ ಇರುವುದೆಂದು ತಿಳಿಯುವುದು. ಈ ಸೂತ್ರದಲ್ಲಿ 'ವ್ಯಾಪ್ತೌ' ಎಂದು ಹೇಳಿರುವುದರಿಂದ 'ಮಾಸದೊಳೋದಿದಂ, ಗಾವುದದೊಳೋಡಿದಂ' ಮೊದಲಾದುವುಗಳಲ್ಲಿ ಕ್ರಿಯೆಗೆ ಅತ್ಯಂತಸಂಯೋಗವಿಲ್ಲವಾದುದರಿಂದ 'ಅಮ್' ಪ್ರತ್ಯಯವಿಲ್ಲ. ಪೂರ್ವಸೂತ್ರದಿಂದ 'ಅಮ್' ಎಂಬುದಕ್ಕೆ ಅನುವೃತ್ತಿ ಬರುತ್ತಿದ್ದರೂ ಪುನಃ ಅಮ್-ಗ್ರಹಣವನ್ನು ಮಾಡಿರುವುದರಿಂದ 'ವಾ' ಎನ್ನುವುದಕ್ಕೆ ಅನುವೃತ್ತಿ ಇಲ್ಲವೆಂದು ತಿಳಿದು ಇದು ನಿತ್ಯವಾಗಿ ಬರುವುದೆಂದು ತಿಳಿಯಬೇಕು. ಕಾಲಾಧ್ವಗಳು ಸರ್ವಾಧಾರವಾದುದರಿಂದ — '**ಒಳಧಿಕರಣೇ || ೨೨೨ ||**' ಎಂಬ ಸೂತ್ರದಿಂದ ಪ್ರಾಪ್ತವಾದ ಸಪ್ತಮಿಯನ್ನು ಬಾಧಿಸಿ ಅತ್ಯಂತಸಂಯೋಗದಲ್ಲಿ 'ಅಮ್' ಬಂದಿರುವುದೆಂದು ತಿಳಿಯಬೇಕು. ಇದು ಸಂಸ್ಕೃತಭಾಷಾಮರ್ಯಾದೆಯಿಂದ ಹೇಳಲ್ಪಟ್ಟಿದೆ ಎಂದು ತಿಳಿಯುವುದು.

## || ಅಥ ತೃತೀಯಾವಿಭಕ್ತಿ ಪ್ರಕರಣಂ ||

**ಅವತಾರಿಕೆ ೨೦೮**

ಪೂರ್ವದಲ್ಲಿ ಅಮ್-ಪ್ರತ್ಯಯವಿಷಯದಲ್ಲಿ ವ್ಯವಸ್ಥೆಯನ್ನು ಮಾಡಿದನು. ಈಗ ಇಮ್-ಪ್ರತ್ಯಯ ವಿಷಯದಲ್ಲಿ ವ್ಯವಸ್ಥಾಪಕ ಸೂತ್ರಗಳನ್ನು ಹೇಳಲು ಮೊದಲು ಕಾಲಾಧ್ವವಾಚಕಕ್ಕೆ ವ್ಯಾಪ್ತಿ ತೋರುವಾಗಲೇ ಕ್ರಿಯಾಫಲನಿಷ್ಪತ್ತಿರೂಪ ಸಿದ್ಧಿಯಲ್ಲಿ ಇಮ್-ಪ್ರತ್ಯಯವನ್ನು ವಿಧಿಸುತ್ತಾನೆ.

**ಸೂತ್ರಂ || ಇಮ್ ಸಿದ್ಧೌ || ೨೦೮ ||**

**ಅರ್ಥ || ಕ್ರಿಯಾಫಲನಿಷ್ಪತ್ತಿಯು ಗಮ್ಯಮಾನವಾಗುತ್ತಿರಲು ಕಾಲಾಧ್ವವಾಚಕಲಿಂಗಕ್ಕೆ ಪರವಾಗಿ ಇಮ್-ಪ್ರತ್ಯಯವು ವ್ಯಾಪ್ತಿ ತೋರುವಾಗ ಬರುವುದು.**

**ಉದಾಹರಣೆ ||** ಮಾಸದಿಂ ವ್ಯಾಕರಣಂ ಪೂರ್ಣಮಾದುದು; ಬರಿಸದಿಂ ಶಾಸ್ತ್ರಂ ಮುಗಿದುದು; ಕ್ರೋಶದಿಂ ವೇದಮನೋದಿದಂ; ಗಾವುದದಿಂ ಶಾಸ್ತ್ರಮುಂ ಪಠಿಸಿದಂ || ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೨೦೮**

ಈ ಸೂತ್ರದಲ್ಲಿ — 'ಇಮ್, ಸಿದ್ಧೌ' ಎಂದು ಎರಡು ಪದಗಳಿರುವುವು. ಪೂರ್ವದಿಂದ 'ಲಿಂಗಾತ್, ಕಾಲಾಧ್ವನೋಃ, ವ್ಯಾಪ್ತೌ' ಎಂದು ಅನುವರ್ತಿಸಲ್ಪಡುವುವು. 'ಇಮ್' ಎಂಬುದು ತೃತೀಯಾವಿಭಕ್ತಿಬೋಧಕವು. ಇದೇ ಇಲ್ಲಿ ವಿಧೇಯವು. 'ಸಿದ್ಧೌ' ಎಂಬುದು ವಿಷಯಸಪ್ತಮ್ಯಂತವು. ಸಿದ್ಧಿಯೆಂದರೆ ಲೋಕದಲ್ಲಿ ಜ್ಞಪ್ತಿ. ಲಾಭಾದ್ಯನೇಕಾರ್ಥಕವಾಗಿದ್ದರೂ ಪ್ರಕೃತದಲ್ಲಿ ಕ್ರಿಯಾಫಲನಿಷ್ಪತ್ತ್ಯರ್ಥಕವೆಂದು ತಿಳಿಯುವುದು. ಇದರಿಂದ ಈ ಸೂತ್ರದಲ್ಲಿ ಪೂರ್ವಸೂತ್ರದಲ್ಲಿ ಹೇಳಿರುವಂತೆ ವ್ಯಾಪ್ತಿಯು ದ್ರವ್ಯಾದಿಗಳಿಗಲ್ಲ. ಕ್ರಿಯಾಮಾತ್ರವ್ಯಾಪ್ತಿಯೇ ವಿವಕ್ಷಿತವೆಂದು ಸೂಚಿತವಾಗುವುದು. ತಥಾಚ — ಕ್ರಿಯಾಫಲನಿಷ್ಪತ್ತಿಯು ತೋರುತ್ತಿರಲು ಕಾಲಾಧ್ವಗಳಿಗೆ ಕ್ರಿಯೆಯಿಂದ ವ್ಯಾಪ್ತಿ ತೋರುವಾಗ ಕಾಲವಾಚಕಲಿಂಗಕ್ಕೂ ಅಧ್ವವಾಚಕ ಲಿಂಗಕ್ಕೂ ಪರವಾಗಿ ಇಮ್-ಪ್ರತ್ಯಯವು ಬರುವುದೆಂದು ಸೂತ್ರಾರ್ಥವಾಗಲು — 'ಮಾಸದಿಂ ವ್ಯಾಕರಣಂ ಪೂರ್ಣಮಾದುದು' ಮೊದಲಾದ ಪ್ರಯೋಗಗಳಲ್ಲಿ ಇಮ್-ಪ್ರತ್ಯಯವು ಸಿದ್ಧವಾಗಿರುವುದು. ಇಲ್ಲಿ ವ್ಯಾಪ್ತಿಯು ತೋರುವುದರಿಂದ ಪೂರ್ವಸೂತ್ರವಿಹಿತದ್ವಿತೀಯೆ ಪ್ರಾಪ್ತವಾಗಲು ಅದಕ್ಕೆ ಬಾಧಕವಾಗಿ ಈ ಸೂತ್ರವು ಪ್ರಾರಂಭಿಸಲ್ಪಟ್ಟಿರುವುದು. ಈ ಸೂತ್ರದಲ್ಲಿ 'ಸಿದ್ಧೌ' ಎಂದು ಹೇಳಿರುವುದರಿಂದ — 'ಮಾಸಮುಂ ವ್ಯಾಕರಣಮನೋದಿದಂ, ಕ್ರೋಶಮುಂ ಗದ್ಯಮನೋದಿದಂ' ಮೊದಲಾದ ಪ್ರಯೋಗಗಳಲ್ಲಿ ವ್ಯಾಪ್ತಿಮಾತ್ರ ತೋರುವುದು; ಸಿದ್ಧಿ ತೋರುವುದಿಲ್ಲವೆಂದು ಇಮ್-ಪ್ರತ್ಯಯವನ್ನು ಮಾಡಲಾಗದು. 'ವ್ಯಾಪ್ತೌ' ಎಂದು ಹೇಳಿರುವುದರಿಂದ 'ಮಾಸದೊಳೋದಿದಂ, ಕ್ರೋಶದೊಳೋದಿದಂ' ಮೊದಲಾದ ಪ್ರಯೋಗಗಳಲ್ಲಿ ಫಲನಿಷ್ಪತ್ತಿ ತೋರುತ್ತಿದ್ದರೂ ವ್ಯಾಪ್ತಿ ತೋರುವುದಿಲ್ಲವಾದುದರಿಂದ ಇಮ್-ಪ್ರತ್ಯಯ-ಅಮ್-ಪ್ರತ್ಯಯಗಳೆರಡೂ ಬರುವುದಿಲ್ಲವೆಂದು ತಿಳಿಯಬೇಕು.

**ಅವತಾರಿಕೆ ೨೦೯**

ಅರ್ಥಾಂತರದಲ್ಲಿಯೂ ಇಮ್-ಪ್ರತ್ಯಯವನ್ನು ವಿಧಿಸುತ್ತಾನೆ.

**ಸೂತ್ರ || ಹೇತುಕರ್ತೃಕರಣೇತ್ಥಂಭೂತಲಕ್ಷಣೇ || ೨೦೯ ||**

**ಅರ್ಥ ||** ಹೇತ್ವರ್ಥದಲ್ಲಿಯೂ ಕರ್ತ್ರರ್ಥದಲ್ಲಿಯೂ ಕರಣಾರ್ಥದಲ್ಲಿಯೂ ಇತ್ಥಂಭೂತಲಕ್ಷಣಾರ್ಥದಲ್ಲಿಯೂ ಇರುವ ಲಿಂಗಕ್ಕೆ ಪರವಾಗಿ ಕರ್ತ್ರಾದಿಕಾರಕಗಳು ಅನುಕ್ತವಾಗಿರಲು ಇಮ್-ಪ್ರತ್ಯಯವು ಬರುವುದು.

**ಉದಾಹರಣೆ ||** ಧನದಿಂ ಕುಲಂ, ಬಿಜ್ಜೆಯಿಂ ಜಸಂ, ತತ್ತ್ವಜ್ಞಾನದಿಂ ಮೋಕ್ಷಂ || ಮೊದಲಾದುವು ಹೇತ್ವರ್ಥಕ್ಕೂ, 'ಕುಂಬಅನಿಂ ಮಡಕೆ ಮಾಡಲ್ಪಟ್ಟುದು, ಅಕ್ಕಸಾಲೆಯಿಂ ಪದಕಂ ಗೆಯ್ಯಲ್ಪಟ್ಟುದು, ಅರಸನಿಂ ಬಾಣಸಿಗನಿನನ್ನಂ ಮಾಡಿಸಲ್ಪಟ್ಟುದು, ಹರಿಯಿಂದರ್ಜುನನಿಂ ಕರ್ಣಂ ಕೊಲಿಸಲ್ಪಟ್ಟಂ' || ಮೊದಲಾದುವು ಕರ್ತ್ರರ್ಥಕ್ಕೂ, 'ಕೊಡಲಿಯಿಂ ಕಡಿದಂ, ಕುಡುಗೋಲಿಂ ಕೊಯ್ದಂ'|| ಮೊದಲಾದುವು ಕರಣಾರ್ಥಕ್ಕೂ, 'ಕಮಂಡಲುವಿಂ ಛಾತ್ತ್ರನಂ ಕಂಡಂ, ಚಂಡಿಕೆಯಿಂ ವಟುವನಱಿದಂ'||ಮೊದಲಾದುವು ಇತ್ಥಂಭೂತಲಕ್ಷಣಕ್ಕೂ—ಉದಾಹರಣೆಗಳೆಂದು ತಿಳಿಯುವುದು.

**ವಿಚಾರ ೨೦೯**

ಈ ಸೂತ್ರದಲ್ಲಿ — 'ಹೇತುಕರ್ತೃಕರಣೇತ್ಥಂಭೂತಲಕ್ಷಣೇ' ಎಂದೊಂದೇ ಪದವಿರುವುದು. ಪೂರ್ವದಿಂದ 'ಲಿಂಗಾತ್, ಇಮ್' ಎಂದು ಅನುವರ್ತಿಸಲ್ಪಡುವುದು. 'ಅನುಕ್ತೇ' ಎಂಬುದು ನ್ಯಾಯಬಲದಿಂದ ಲಬ್ಧವಾಗುವುದು. ಇದನ್ನು ಯಥಾಸಂಭವವಾಗಿ ಸಂಬಂಧಿಸಬೇಕು. 'ಹೇತು' ಎಂದರೆ — 'ಹಿನೋತಿ ಗಚ್ಛತಿ ವ್ಯಾಪ್ನೋತಿ ಕಾರ್ಯಂ ಕಾರಣತಯಾ ಜ್ಞಾಪ್ಯಂ ಜ್ಞಾಪಕತಯಾ' ಎಂಬ ವ್ಯುತ್ಪತ್ತಿಯಿಂದ 'ಹೇತು' ಎಂಬುದು ಕಾರಕಜ್ಞಾಪಕ ಭೇದಗಳಿಂದ ಎರಡು ತೆರನಾಗಿರುವುದು. ಇವುಗಳಲ್ಲಿ ಕಾರಕಪ್ರಕರಣದಿಂದ ಕಾರಕವಾದುದೇ ಗ್ರಹಿಸಲ್ಪಡುವುದು. ಜ್ಞಾಪಕವಾದುದಕ್ಕೆ 'ಇತ್ಥಂಭೂತಲಕ್ಷಣೇ' ಎಂಬುವುದರಲ್ಲಿ ಅಂತರ್ಭಾವವಾಗುವುದು. ಸಂಸ್ಕೃತವ್ಯಾಕರಣದಲ್ಲಿ **ಮಂಜೂಷಾಕಾರನು** ಕ್ರಿಯಾಜನಕವ್ಯಾಪಾರವದ್ಭಿನ್ನವಾಗಿ ಪ್ರಯೋಜಕವಾವುದೋ ಅದೇ ಹೇತುವೆಂದು ಹೇಳಿ 'ಪುಣ್ಯೇನ ಸುಖಂ, ಧರ್ಮೇಣ ಧನಂ' ಮೊದಲಾದುವನ್ನು ಉದಾಹರಿಸಿರುವನು. ಮತ್ತು **ಭೂಷಣಕಾರನು** — ದ್ರವ್ಯಾದಿಸಾಧಾರಣವಾಗಿಯೂ ನಿರ್ವ್ಯಾಪಾರಸಾಧಾರಣವಾಗಿಯೂ ಇರುವುದು ಹೇತು. ಕ್ರಿಯಾಮಾತ್ರವಿಷಯವಾಗಿ ವ್ಯಾಪಾರನಿಯತವಾದುದು ಕರಣವೆಂದೂ ಹೇಳಿರುವನು. ಹೀಗೆಯೇ **ಭರ್ತೃಹರಿಯು**—

ಅನಾಶ್ರಿತೇ ತು ವ್ಯಾಪಾರೇ ಕಾರಣಂ ಹೇತುರಿಷ್ಯತೇ
ದ್ರವ್ಯಾದಿವಿಷಯೋ ಹೇತುಃ ಕರಣಂ ನಿಯತಕ್ರಿಯಂ

ಎಂದು ಹೇಳಿರುವನು. ಆದುದರಿಂದ ಇಲ್ಲಿ ಕರಣಾದಿಗಳನ್ನು ಬೇರೆ ಹೇಳಿರುವುದರಿಂದ ದ್ರವ್ಯಾದಿಸಾಧಾರಣವಾಗಿಯೂ ನಿರ್ವ್ಯಾಪಾರಸಾಧಾರಣವಾಗಿಯೂ ಇರುವ ಫಲಸಾಧನಯೋಗ್ಯವಾದ ಪದಾರ್ಥವೇ 'ಹೇತು' ಶಬ್ದಾರ್ಥವೆಂದು ತಿಳಿಯುವುದು. ಫಲಸಾಧನಯೋಗ್ಯತಾಪ್ರದರ್ಶನ ಮಾಡಿರುವುದರಿಂದ ಇದಕ್ಕೆ ಕ್ರಿಯಾನ್ವಯಿತ್ವರೂಪಕಾರಕತ್ವವು ಉಂಟೆಂದು ತಿಳಿಯಬೇಕು. ತಥಾಚ — ಫಲಸಾಧನಯೋಗ್ಯವೆಂದರೆ ಕಾರ್ಯನಿಷ್ಪಾದನಸಮರ್ಥಾರ್ಥಸಜಾತೀಯವಾದು

ದೆಂದು ಫಲಿತವಾಗುವುದು. ಇಲ್ಲಿ ಸಾಕ್ಷಾತ್ತಾಗಿ ಕಾರ್ಯವನ್ನು ಮಾಡದಿದ್ದರೂ ತಜ್ಜಾತೀಯ ವಾದುದೆಲ್ಲಾ ಹೇತುವೆಂದು ಸಂಗ್ರಹ ಬರುವುದಕ್ಕಾಗಿ ಯೋಗ್ಯಪದವನ್ನು ಹೇಳಿರುವುದೆಂದು ತಿಳಿಯಬೇಕು. ಆದರೆ ಹೇತುಪದಾರ್ಥವು ಇಂತಹ ಲಕ್ಷಣ ಲಕ್ಷಿತವಾದುದೆಂದಂಗೀಕರಿಸಲು ಕಾರಕಮಾತ್ರವೂ ತತ್ಸಜಾತೀಯವಾದುದರಿಂದ ಹೇತುಭೂತವಲ್ಲದ ಕಾರಕವೇ ಲೋಕದಲ್ಲಿಲ್ಲ ವೆಂದು ಅಲ್ಲಿಯೂ ತೃತೀಯೆಯೇ ಪ್ರಸಕ್ತವಾಗುವುದು. ಸಂಪ್ರದಾನಾದಿ ಕಾರಕಗಳಲ್ಲಿ ವಿಧಿಸುವ ಚತುರ್ಥ್ಯಾದಿಗಳಿಂದ ತೃತೀಯೆಗೆ ಬಾಧೆ ಹೇಳಿದರೂ ಕರ್ತೃಕರಣಾರ್ಥಗಳಲ್ಲಿ ಹೇತುತ್ವದಿಂದಲೇ ತೃತೀಯೆ ಸಿದ್ಧವಾಗಿರಲು ಪುನಃ ಕರ್ತೃಕರಣಗ್ರಹಣವ್ಯರ್ಥವಾಗುವುದೆಂದು ತೋರುವುದು. ಆದಾಗ್ಯೂ ಕ್ರಿಯೆಯನ್ನು ಮಾಡುವುದು ಕಾರಕವು ಎಂದು ಸಾಕ್ಷಾತ್ತಾಗಿ ಫಲಜನನೋನ್ಮುಖ ಗಳಾದುವೇ ಕಾರಕಗಳಾಗುವುವು. ಹೇತುವಾದರೋ ಯೋಗ್ಯತಾಮಾತ್ರದಿಂದಲೂ ಕಾರಕ ವಾಗುವುದೆಂದು ಇವಕ್ಕೆ ಕಥಂಚಿತ್ ಭೇದವನ್ನಂಗೀಕರಿಸಿ ಅತಿಪ್ರಸಕ್ತಿಯನ್ನು ಪರಿಹರಿಸಬೇಕು. ಅಥವಾ ' ಹೇತು, ಕರ್ತೃ, ಕರಣ ' ಮೊದಲಾದುವುಗಳಲ್ಲಿ ಧರ್ಮಿ ಸ್ವರೂಪದಿಂದ ಭೇದವಿಲ್ಲ ದಿದ್ದರೂ ' ಹೇತುತ್ವ, ಕರ್ತೃತ್ವ, ಕರಣತ್ವ ' ಮೊದಲಾದ ಧರ್ಮಭೇದಗಳಿರುವುದರಿಂದ ಧರ್ಮ ನಿಬಂಧನವಾಗಿ ವಿಭಕ್ತ್ಯುತ್ಪತ್ತಿಯನ್ನು ತೋರಿಸಲು ಪೃಥಕ್‌ಕರ್ತ್ರಾದಿಪದೋಪಾದಾನವೆಂದು ತಿಳಿಯುವುದು. ' ಧನದಿಂ ಕುಲಂ ' ಮೊದಲಾದ ಪ್ರಯೋಗಗಳಲ್ಲಿ ತೃತೀಯೆ ಧನವನ್ನು ಹೇಳುವು ದಿಲ್ಲ. ಮತ್ತೇನೆಂದರೆ ತದ್ಗತ ಹೇತುತ್ವವನ್ನು ಬೋಧಿಸುವುದು. ಹೀಗೆಯೇ ' ಕರ್ತೃ, ಕರ್ಮ ' ಮೊದಲಾದ ಕಾರಕಗಳಲ್ಲಿ ವಿಹಿತವಾದ ವಿಭಕ್ತಿಯು ಪ್ರಕೃತಿಗಳಿಂದಲೇ ಕರ್ತೃಕರ್ಮಾದ್ಯರ್ಥ ಗಳು ಅಭಿಹಿತಗಳಾಗಿರುವುದರಿಂದ ತದ್ಗತ ಕರ್ತೃತ್ವಕರ್ಮತ್ವಾದಿ ಧರ್ಮಗಳನ್ನೇ ಬೋಧಿಸುವು ದೆಂದು ತಿಳಿಯಬೇಕು. ಆದುದರಿಂದಲೇ ಪ್ರಾಚೀನರು — ಸುಪ್-ವಿಭಕ್ತಿಗಳಿಗೆ ಪ್ರಕೃತ್ಯರ್ಥಗತ ಸ್ವಾರ್ಥಬೋಧಕತ್ವವು ನಿಯತವೆಂದು ಹೇಳುವರು. ಆದುದರಿಂದ ಹೇತುತ್ವಕ್ಕಿಂತಲೂ ಕರ್ತೃತ್ವಾದಿಗಳು ಭಿನ್ನಗಳೆಂದು ತಿಳಿಯಬೇಕು.

ಕರ್ತೃವೆಂದರೆ — ಧಾತೂಪಾತ್ತವ್ಯಾಪಾರಾಶ್ರಯವಾದ ವಸ್ತುವೆಂದು ತಿಳಿಯಬೇಕು. ಇದೇ ಅರ್ಥವನ್ನು ಭರ್ತೃಹರಿಯು — ' **ಧಾತುನೋಕ್ತಕ್ರಿಯೇ ನಿತ್ಯಂ ಕಾರಕೇ ಕರ್ತೃತೇಷ್ಯತೇ** ' ಎಂಬ ಕಾರಿಕೆಯಿಂದ ಸೂಚಿಸಿರುವನು. ಈ ಕರ್ತೃ ಸಾಮಾನ್ಯವಾಗಿ ಸ್ವತಂತ್ರ-ತತ್-ಪ್ರಯೋಜಕ ಭೇದಗಳಿಂದ ದ್ವಿವಿಧವಾಗಿರುವುದು. ಇವುಗಳಲ್ಲಿ ಸ್ವತಂತ್ರವಾದುದು — ಇತರ ವ್ಯಾಪಾರಾಧೀನ ವ್ಯಾಪಾರಾಶ್ರಯವಾದುದು, ತತ್-ಪ್ರಯೋಜಕವಾದುದು ಕಾರಕಾಂತರಾಪ್ರಯೋಜಕ ವ್ಯಾಪಾ ರಾಶ್ರಯವಾದುದೆಂದು **ಹರಿಯು** —

**ಪ್ರಾಧಾನ್ಯತಃ ಶಕ್ತಿಲಾಭಾತ್ ಪ್ರಾಗ್ಭಾವಾಪಾದನಾದಪಿ**
**ತದಧೀನಪ್ರವೃತ್ತಿತ್ವಾತ್ ಪ್ರವೃತ್ತಾನಾಂ ನಿವರ್ತನಾತ್**
**ಅದೃಷ್ಟತ್ವಾತ್ ಪ್ರತಿನಿಧೇಃ ಪ್ರವಿವೇಕೇ ಚ ದರ್ಶನಾತ್**
**ಆರಾದಪ್ಯುಪಕಾರಿತ್ವಾತ್ ಸ್ವಾತಂತ್ರ್ಯಂ ಕರ್ತುರಿಷ್ಯತೇ**

ಎಂಬುದರಿಂದ ಸೂಚಿಸಿರುವನು. ಇಲ್ಲಿ ಪ್ರಯೋಜ್ಯನಿಗೂ ಕ್ರಿಯೆಯಲ್ಲಿ ಸ್ವಾತಂತ್ರ್ಯವಿರುವು **ದೆಂದು ತಿಳಿಯಬೇಕು.**

ಇಲ್ಲಿ — ಪ್ರಯೋಜಕಕರ್ತೃವು, 'ಪ್ರೇಷಕ, ಅಧ್ಯೇಷಕ, ಅನುಕೂಲ್ಯಭಾಕ್' ಎಂದು ತ್ರಿವಿಧವಾಗಿರುವುದು. ಅವುಗಳಲ್ಲಿ ಆವನು ಸಾಕ್ಷಾತ್-ಕರ್ತೃವನ್ನು ಪ್ರೇರಿಸುತ್ತಾನೋ ಎಂದರೆ (ಪ್ರಭುವಿನಂತೆ ಕ್ರಿಯೆಯಲ್ಲಿ ನಿಯಮಿಸುತ್ತಾನೋ) ಅವನೇ ಪ್ರೇಷಕನು. ಆವನು ಸತ್ಕಾರ ಪೂರ್ವಕವಾಗಿ ನಿಯಮಿಸುತ್ತಾನೋ ಅವನು ಅಧ್ಯೇಷಕನು. ಆವನು ಪ್ರೇರಿಸದೆಯೂ ಸತ್ಕಾರಪೂರ್ವಕವಾಗಿ ನಿಯಮಿಸದೆಯೂ ಅನುಕೂಲ್ಯಮಾತ್ರವನ್ನುಂಟುಮಾಡುವನೋ ಅವನು ಅನುಕೂಲ್ಯಭಾಕ್ಕೆಂಬುವನು.

ಕರಣವೆಂದರೆ — ಲೋಕದಲ್ಲಿ ಇಂದ್ರಿಯಾದ್ಯನೇಕಾರ್ಥಗಳಿದ್ದರೂ ಪ್ರಕೃತದಲ್ಲಿ '**ಸಾಧಕ ತಮಂ ಕರಣಂ**' ಎಂಬ ಸೂತ್ರದಿಂದ ಲಕ್ಷಿತವಾದ ಕ್ರಿಯಾಸಿದ್ಧಿಯಲ್ಲಿ ಪ್ರಕೃಷ್ಟೋಪಕಾರಕ ವಾದುದೆಂದು ತಿಳಿಯಬೇಕು. ಇಲ್ಲಿ ನೈಯಾಯಿಕರು **ವ್ಯಾಪಾರವತ್ಕಾರಣಂ ಕರಣಂ** ಎಂದು ಹೇಳಿರುವರು. ವೈಯಾಕರಣರು — **ಸಾಧಕತಮಂ ಕರಣಂ** ಎಂದು ಕರಣಲಕ್ಷಣವನ್ನು ಮಾಡಿದ್ದರೂ ಇದರ ವಿವರಣಾರ್ಥವಾಗಿ — ಅವ್ಯವಹಿತ ಕ್ರಿಯಾಜನಕ ವಿವಕ್ಷಿತವ್ಯಾಪಾರ ವತ್ತಾದುದು ಕರಣವೆಂದು ಹೇಳುವರು. ಹೀಗೆಯೇ **ಭರ್ತೃಹರಿಯೂ** —

ಕ್ರಿಯಾಯಾಃ ಪರಿನಿಷ್ಪತ್ತಿರ್ಯದ್ ವ್ಯಾಪಾರಾದನಂತರಂ
ವಿವಕ್ಷ್ಯತೇ ಯದಾ ಯತ್ರ ಕರಣಂ ತತ್ ತದಾ ಸ್ಮೃತಂ

ಎಂಬುದರಿಂದ ಸೂಚಿಸಿರುವನು. ಇಲ್ಲಿ 'ವಿವಕ್ಷ್ಯತೇ' ಎಂದು ಹೇಳಿರುವುದರಿಂದ ಕಾರಕಾಂತರ ಗಳಿಗೂ ಕರಣತ್ವಾದಿಸಂಭವವುಂಟೆಂದು —

ವಸ್ತುತಸ್ತದನಿರ್ದೇಶ್ಯಂ ನ ಹಿ ವಸ್ತುವ್ಯವಸ್ಥಿತಂ
ಸ್ಥಾಲ್ಯಾ ಪಚ್ಯತ ಇತ್ಯೇಷ ಪ್ರಯೋಗೋ ದೃಶ್ಯತೇ ಯತಃ

ಎಂಬುದರಿಂದ ಸೂಚಿಸಿರುವನು —

ಆದರೆ ಕ್ರಿಯಾಸಿದ್ಧಿಯಲ್ಲಿ ಅನೇಕ ಸಾಧಕಗಳಿದ್ದರೂ ಕೆಲವೆಡೆಗಳಲ್ಲಿ ಆವುದೋ ಒಂದು ಅತಿಶಯವಾಗಿ ಅನುಭೂತವಾಗುವುದು. ಹೇಗೆಂದರೆ — ಲೋಕದಲ್ಲಿ ದೊಡ್ಡವರು — 'ಈ ಅಕ್ಕಿಯು ಬಹು ಒಳ್ಳೆಯದು; ಇದರಿಂದಲೇ ಪಾಕವು ನಿರ್ವೃತ್ತವಾಯಿತು; ಈ ಕಟ್ಟಿಗಳು ಚೆನ್ನಾ ಗಿರುವುವು; ಈ ಪಾತ್ರೆಯು ಒಳ್ಳೆಯದು; ಈ ಸೌಟು ಒಳ್ಳೆಯದು' ಮೊದಲಾಗಿ ಅನೇಕ ಕಾರಣ ಸಾಮಗ್ರಿಗಳಲ್ಲಿ ಒಂದೊಂದಕ್ಕೆ ಅತಿಶಯವನ್ನು ವರ್ಣಿಸುವರು. ಈ ಅತಿಶಯವು ಕಾರಣ ವ್ಯಾಪಾರನಿಷ್ಟಕಾರ್ಯಾನುಕೂಲವಾದುದೆ ಎಂದು ತಿಳಿಯಬೇಕು. ಹೀಗೆ ಕಾರಕಗಳಿಗೆಲ್ಲಾ ಇರುವುದರಿಂದ ಆವುದು ಕರಣವೆಂದು ಹೇಳಬೇಕು ಎಂಬ ಸಂಶಯವುಂಟಾಗುವುದು. ಆದಾಗ್ಯೂ ಇಂತಹ ಅತಿಶಯವು ಆವುದರಲ್ಲಿ ವಿವಕ್ಷಿತವಾಗಿರುವುದೊ ಅದೇ ಪ್ರಕೃಷ್ಟೋಪಕಾರಕವಾದುದು ಎಂದೂ ಅದೇ ಕರಣವೆಂದೂ ತಿಳಿಯಬೇಕು.

ಇತ್ಥಂಭೂತಲಕ್ಷಣವೆಂದರೆ — 'ಇಮಂ ಕಂಚಿತ್‌ಪ್ರಕಾರಂ ಭೂತಃ — ಪ್ರಾಪ್ತಃ= ಇತ್ಥಂಭೂತಃ, ಸ ಲಕ್ಷ್ಯತೇ ಯೇನ, ತದಿತ್ಥಂಭೂತಲಕ್ಷಣಂ' ಎಂಬ ವ್ಯುತ್ಪತ್ತಿಯಿಂದ ಆವುದೋ ಒಂದು ಧರ್ಮವನ್ನು ಅವಲಂಬಿಸಿರುವವನಿಗೆ ಜ್ಞಾಪಕವಾದ ವಸ್ತುವೆಂದರ್ಥವು. ಆದುದರಿಂದ 'ಹೇತು' ಮೊದಲಾದ ಅರ್ಥಗಳಲ್ಲಿರುವ ಲಿಂಗಕ್ಕೆ ಪರವಾಗಿ 'ಇಮ್' ಪ್ರತ್ಯಯವು ಬರುವು

ದೆಂದು ಸೂತ್ರಾರ್ಥವಾಗಲು ಕ್ರಮವಾಗಿ 'ಧನದಿಂ ಕುಲಂ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು.

ಇಲ್ಲಿ **ದರ್ಪಣಕಾರನು** ಪೂರ್ವೋಕ್ತದ್ವಿತೀಯೆಯನ್ನೂ ಸೇರಿಸಿ —

ತೊಡರ್ದಿರ್ಪಾಪ್ತಿಪ್ರಸ್ತಮೊಳಿಡೆ
ಯುಡುಗದೆ ಕಾಲಾಧ್ವದೊಳ್ ದ್ವಿತೀಯೆಯೆ ಮತ್ತಾ
ನುಡಿಗುಂ ತೃತೀಯೆ ಪೇಳ
ಲ್ಪಡುಗುಂ ಸಲೆಕರ್ತೃಕರಣಹೇತುಸ್ಥಿತಿಯೊಳ್ (ಸೂತ್ರ ೧೨೪)

ಎಂಬ ಸೂತ್ರವನ್ನು ರಚಿಸಿರುವನು.

**ಅವತಾರಿಕೆ ೨೧೦**

ಹೀಗೆಯೇ ಅರ್ಥವಿಶೇಷದಲ್ಲಿಯೂ ತೃತೀಯೆಯನ್ನು ವಿಧಿಸುತ್ತಾನೆ.

**ಸೂತ್ರಂ || ಯದ್ಭೇದಾತ್ ತದ್ವದಾಖ್ಯಾ || ೨೧೦ ||**

**ಅರ್ಥ || ಆವ ವಸ್ತುವಿನ ಪ್ರಕಾರದಿಂದ ಆ ಪ್ರಕಾರವುಳ್ಳ ವಸ್ತುವನ್ನು ಹೊಂದಿರುವ ವಸ್ತುವಿಗೆ ಅಭಿಧಾನವುಂಟಾಗುವುದೋ ಆ ಪ್ರಕಾರವುಳ್ಳ ವಸ್ತುವಾಚಕಲಿಂಗಕ್ಕೆ ಪರವಾಗಿ ಇಮ್-ಪ್ರತ್ಯಯವು ಬರುವುದು.**

**ಉದಾಹರಣೆ ||** ಕಣ್ಣಿಂ ಕುರುಡಂ, ಕಾಲಿಂ ಕುಂಟಂ, ಕಯ್ಯಿಂ ಮೋಟಂ, ಜಾತಿಯಿಂ ಪಾರ್ವಂ, ಪ್ರಕೃತಿಯಿನೊಳ್ಳಿದಂ || ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೨೧೦**

ಈ ಸೂತ್ರದಲ್ಲಿ — 'ಯದ್ಭೇದಾತ್, ತದ್ವದಾಖ್ಯಾ' ಎಂದು ಎರಡು ಪದಗಳಿರುವುವು. ಪೂರ್ವದಿಂದ 'ಲಿಂಗಾತ್, ಇಮ್' ಎಂದು ಅನುವರ್ತಿಸಲ್ಪಡುವುವು. 'ಯದ್ಭೇದಾತ್' ಎಂದರೆ 'ಯಸ್ಯಭೇದಾತ್ — ಯದ್ಭೇದಾತ್' ಎಂಬ ವಿಗ್ರಹದಿಂದ ಆ ವಸ್ತುವಿನ ಪ್ರಕಾರ (ಧರ್ಮವಿಶೇಷ) ದಿಂದ ಎಂದರ್ಥವು. 'ತದ್ವದಾಖ್ಯಾ' ಎಂದರೆ 'ತತ್' ಎಂಬುದು ಆ ಪ್ರಕಾರ ರೂಪಧರ್ಮವು ಆವುದರದೋ ಆ ವಸ್ತುವನ್ನು ಬೋಧಿಸುವುದು — ಎಂದರೆ ಆ ಪ್ರಕಾರವುಳ್ಳ ವಸ್ತುವೆಂದರ್ಥವು. ಆ ವಸ್ತುವುಳ್ಳುದು 'ತದ್ವತ್' ಎಂಬುದು. ಅದರ 'ಆಖ್ಯಾ' ಎಂದರೆ ಅದನ್ನು ಹೇಳುವುದು. ಎಂದರೆ ಆವುದರ ಪ್ರಕಾರದಿಂದಲೇ ಆ ಪ್ರಕಾರವುಳ್ಳ ವಸ್ತುವುಳ್ಳ ಪದಾರ್ಥಕ್ಕೆ ಅಭಿಧಾನವಿರುವುದೋ ತದ್ವಾಚಕ ಶಬ್ದಕ್ಕೆ ಪರವಾಗಿ ಇಮ್-ಪ್ರತ್ಯಯವು ಬರುವುದೆಂದು ಸೂತ್ರಾರ್ಥವಾಗುವುದರಿಂದ 'ಕಣ್ಣಿಂ ಕುರುಡಂ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು. ಇಲ್ಲಿ 'ಕಣ್' ಎಂಬುದಕ್ಕೆ ನೇತ್ರವೆಂದರ್ಥವು. 'ಕುರುಡಂ' ಎಂಬುದು ಆ ನೇತ್ರವುಳ್ಳ ವಸ್ತುಬೋಧಕವಾಗಿರುವುದು. 'ಕುರುಡಂ' ಎಂದು ಕಾಣತ್ವವು ಕಣ್ಣಿನ ಪ್ರಕಾರವು. ಆ ಪ್ರಕಾರದಿಂದ ಆ ಪ್ರಕಾರವುಳ್ಳ ಕಣ್ಣಾವುದೋ ಆ ಕಣ್ಣುಳ್ಳ ಪುರುಷನಿಗೆ ಅಭಿಧಾನವಿರುವುದರಿಂದ ಆ 'ಕಣ್' ಶಬ್ದಕ್ಕೆ ಪರವಾಗಿ ಇಮ್-ಪ್ರತ್ಯಯವು ಬಂದಿರುವುದು. ಹೀಗೆಯೇ 'ಕಾಲಿಂ ಕುಂಟಂ' ಮೊದಲಾದ ಪ್ರಯೋಗಗಳಲ್ಲಿಯೂ ಊಹಿಸಿಕೊಳ್ಳುವುದು. ಹೀಗೆಯೇ 'ಜಾತಿ' ಯೆಂದರೆ — ಸಾಮಾನ್ಯವು, ತದ್ಭೇದವು — ಬ್ರಾಹ್ಮಣ್ಯವು. ಇದು 'ಪಾರ್ವತನ' ಎಂಬ ಶಬ್ದದಿಂದ ಹೇಳಲ್ಪಡುವುದು. ಧರ್ಮಿಪರವಾದುದರಿಂದ ಇಲ್ಲಿ ತನ-ಪ್ರತ್ಯಯಕ್ಕೆ ಪ್ರಯೋಗವಿಲ್ಲವೆಂದು ತಿಳಿಯಬೇಕು.

ಹೀಗೆ 'ಪ್ರಕೃತಿ' ಎಂದರೆ ಸ್ವಭಾವವು. ಅದರ ಭೇದವು 'ಸಾಮಾಚೀನ್ಯ' ಇದು 'ಒಳ್ಳಿತು' ಶಬ್ದದಿಂದ ಹೇಳಲ್ಪಡುವುದು.

ಸಂಸ್ಕೃತವ್ಯಾಕರಣದಲ್ಲಿ — '**ಯೇನಾಂಗವಿಕಾರಃ**' ಎಂದು ಸೂತ್ರವನ್ನು ಮಾಡಿ ಪ್ರಕೃತ್ಯಾದಿಗಳಿಗೆ ತೃತೀಯಾಸಿದ್ಧ್ಯರ್ಥವಾಗಿ '**ಪ್ರಕೃತ್ಯಾದಿಭ್ಯಃ ಉಪಸಂಖ್ಯಾನಂ**' ಎಂದು ಹೇಳಿರುವರು. ಇಲ್ಲಿ ಭೇದವನ್ನು ಉಪಯೋಗಿಸಿರುವುದರಿಂದ ಇವೆಲ್ಲಕ್ಕೂ ಸಂಗ್ರಹ ಬಂದಿರುವುದೆಂದು ತಿಳಿಯಬೇಕು.

ಇಲ್ಲಿ 'ಯದ್ಭೇದಾತ್' ಎಂದು ಯತ್-ಪದವನ್ನು ಹೇಳಿರುವುದರಿಂದ ಪ್ರಕೃತಿನಿರ್ದೇಶ ಮಾಡಿದಂತಾಗುವುದು. ಇಲ್ಲದಿದ್ದರೆ 'ಕುರುಡಂ, ಕುಂಟಂ' ಮೊದಲಾದ ಪ್ರಕಾರಿಮದ್ವಾಚಕಕ್ಕೂ ಬರುವುದು. 'ಭೇದಾತ್' ಎಂದು ಹೇಳಿರುವುದರಿಂದ — 'ಯಷ್ಟಿಗಳಂ ಪುಗಿಸು, ಕುಂತಂಗಳಂ ಬಱಸು' ಮೊದಲಾದುವುಗಳಲ್ಲಿ 'ಯಷ್ಟಿ, ಕುಂತ' ಶಬ್ದಗಳಿಂದ ಉಪಚಾರವೃತ್ತಿಯಿಂದ ಯಷ್ಟಿ, ಕುಂತಗಳನ್ನು ಧರಿಸಿರುವ ಪುರುಷರು ಹೇಳಲ್ಪಡುತ್ತಾರೆ. ಅಲ್ಲಿ ಯಾವ ಭೇದವೂ ಇಲ್ಲವೆಂದು ಅವಕ್ಕೆ ಇಮ್-ಪ್ರತ್ಯಯವು ಬರುವುದಿಲ್ಲ. 'ತದ್ವತ್' ಎಂದು ಹೇಳಿರುವುದರಿಂದ — 'ಕಣ್ ಕುರುಡೀತಂಗೆ, ಬಾಹ್ಮಣ್ಯಂ ಜಾತಿಯೀತಂಗೆ' ಮೊದಲಾದುವುಗಳಲ್ಲಿ 'ಕಣ್, ಬ್ರಾಹ್ಮಣ್ಯ' ಶಬ್ದಗಳ ದೆಸೆಯಿಂದ ತೃತೀಯೆ ಬರುವುದಿಲ್ಲ. ಆಖ್ಯಾ-ಗ್ರಹಣದಿಂದ ಪ್ರಸಿದ್ಧವಿಕಾರಿಮತ್ತಾದುದನ್ನೇ ಗ್ರಹಿಸಬೇಕೆಂದು ತೋರುವುದರಿಂದ 'ಕಣ್ಣಿಂ ದೀರ್ಘ್ಘಂ' ಮೊದಲಾದ ಪ್ರಯೋಗಗಳು ಪ್ರಸಿದ್ಧವಲ್ಲವೆಂದು ಅಲ್ಲಿ 'ಕಣ್ ದೀರ್ಘ್ಘಂ' ಈತಂಗೆ ಎಂದೇ ಸಿದ್ಧಿಸುವುದು.

**ಅವತಾರಿಕೆ ೨೧೧**

ಹೀಗೆಯೇ ಕೆಲವು ಉಪಪದವಿಭಕ್ತಿಯನ್ನು ಹೇಳುತ್ತಾನೆ.

**ಸೂತ್ರಂ || ಸಹಾರ್ಥೇನಾಪ್ರಧಾನೇ || ೨೧೧ ||**

**ಅರ್ಥ || ಸಹಾರ್ಥಕ ಶಬ್ದಗಳಿಂದ ಯೋಗವಿರಲು ಆ ಸಾಹಿತ್ಯಪ್ರತಿಯೋಗಿಯಾದ ಅಪ್ರಧಾನವಾಚಕಲಿಂಗದಿಂದ ಪರವಾಗಿ ಇಮ್-ಪ್ರತ್ಯಯವು ಬರುವುದು.**

**ಉದಾಹರಣೆ ||** ಮಗನಿಂ ಕೂಡಿ ಬಂದಂ ತಂದೆ, ಲಕ್ಷ್ಮಿಯಿಂ ಬೆರಸಿ ಹರಿಯೊಪ್ಪಿದಂ, ಉಮೆಯಿಂ ಸಂಗಡಿಸಿ ಮೆಱೆದನಾ ಪೆಱೆವಲೆಯಂ || ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೨೧೧**

ಈ ಸೂತ್ರದಲ್ಲಿ — 'ಸಹಾರ್ಥೇನ, ಅಪ್ರಧಾನೇ' ಎಂದು ಎರಡು ಪದಗಳಿರುವುವು. ಪೂರ್ವದಿಂದ 'ಲಿಂಗಾತ್, ಇಮ್' ಎಂದು ಅನುವರ್ತಿಸಲ್ಪಡುವುವು. 'ಸಹಾರ್ಥೇನ' ಎಂದರೆ 'ಸಹ' ಎಂಬ ಶಬ್ದದ ಅರ್ಥವು 'ಸಹಾರ್ಥವು'. ಇದು ತುಲ್ಯಯೋಗ ಲಕ್ಷಣವಾದ ಸಾಹಿತ್ಯವೆಂದು ತಿಳಿಯಬೇಕು. ಇಂತಹ ಸಾಹಿತ್ಯವುಳ್ಳ ಶಬ್ದವೂ 'ಸಹಾರ್ಥವು'. ಇದರ ಮುಂದೆ ಇರುವ ತೃತೀಯಾವಿಭಕ್ತಿಯೂ ಸಹಾರ್ಥಕವಾದುದರಿಂದ ಸಹಾರ್ಥಕ ಶಬ್ದದಿಂದ ಯೋಗವಿರಲು ಎಂದರ್ಥವಾಗುವುದು. ಈ ಸಹಾರ್ಥಯೋಗವು ಪ್ರಧಾನಾಪ್ರಧಾನಸಾಧಾರಣಕ್ರಿಯಾಸಂಬಂಧರೂಪವಾಗಿರುವುದರಿಂದ ಸಾಹಿತ್ಯವು ಉಭಯನಿರೂಪ್ಯವಾಗಿರುವುದು. ಅದರ ಯೋಗವೂ ಉಭಯತ್ರ ಸಮಾನವೆಂಮ ಉಭಯತ್ರವೂ ತೃತೀಯೆ ಪ್ರಸಕ್ತವಾಗುವುದು.

ಆದುದರಿಂದ ಸಾಹಿತ್ಯಪ್ರತಿಯೋಗಿಯಾದ ಅಪ್ರಧಾನದಲ್ಲಿ ಎಂದರ್ಥವಾಗುವುದು. ಇಲ್ಲಿ 'ಪ್ರತಿಯೋಗಿ' ಎಂದರೆ ನಿರೂಪಕವಾದುದು. 'ಅಪ್ರಧಾನಂ' ಅಮುಖ್ಯವು, ಯಾವುದು ಮುಖ್ಯವಾಗಿ ವಿವಕ್ಷಿಸಲ್ಪಡುವುದೋ ತದಿತರವೆಂದರ್ಥವು. ತಥಾಚ — ಸಹಾರ್ಥಕ ಶಬ್ದಗಳ ಯೋಗವಿದ್ದರೆ ಆ ಸಾಹಿತ್ಯಪ್ರತಿಯೋಗಿಯಾದ ಅಪ್ರಧಾನಲಿಂಗಕ್ಕೆ ಪರವಾಗಿ 'ಇಮ್' ಪ್ರತ್ಯಯವು ಬರುವುದು — ಎಂದು ಸೂತ್ರಾರ್ಥವಾಗಲು 'ಮಗನಿಂ ಕೂಡಿ ಬಂದಂ ತಂದೆ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು.

ಇಲ್ಲಿ 'ಮಗನಿಂ ಕೂಡಿ ಬಂದಂ ತಂದೆ' ಮೊದಲಾದ ಪ್ರಯೋಗಸ್ಥ ಧಾತುಗಳಿಂದ ಆಗಮನಾದಿ ಕ್ರಿಯೆಗಳು ವಾಚ್ಯಗಳಾಗುವುವು. ಆ ಕ್ರಿಯಾಕರ್ತೃತ್ವವು ಪಿತ್ರಾದಿಗಳಿಗಿರುವಂತೆ ಪುತ್ರಾದಿಗಳಿಗೂ ಇರುವುದು. ಇವುಗಳಲ್ಲಿ ಆಖ್ಯಾತಪ್ರತ್ಯಯದಿಂದ ಒಂದು ಕರ್ತೃ ಉಕ್ತವಾದುದರಿಂದ ತದ್ವಾಚಕಶಬ್ದಕ್ಕೆ ಪರವಾಗಿ ಪ್ರಥಮಾವಿಭಕ್ತಿ ಬರುವುದು. ಇನ್ನೊಂದು ಕರ್ತೃ ಅನುಕ್ತವಾದುದರಿಂದ ತದ್ವಾಚಕಶಬ್ದಕ್ಕೆ ಕರ್ತ್ರರ್ಥದಲ್ಲಿ ವಿಹಿತವಾದ ತೃತೀಯೆ ಬರಲು ಉಕ್ತಪ್ರಯೋಗಗಳೆಲ್ಲಾ ಸಿದ್ಧಿಸುತ್ತಿರಲು ಮತ್ತೆ ಈ ಸೂತ್ರವು ವ್ಯರ್ಥವೆಂದು ತೋರುವುದು. ಆದಾಗ್ಯೂ ಈ ಸೂತ್ರವು 'ಮಗನಿಂ ಕೂಡಿ ತಂದೆಯ ಬರವು, ಲಕ್ಷ್ಮಿಯಿಂ ಬೆರಸಿ ಹರಿಯೊಪ್ಪುಗೆ' ಮೊದಲಾದ ಭಾವ-ಪ್ರತ್ಯಯಾಂತಘಟಿತ ಪ್ರಯೋಗಗಳಲ್ಲಿ ಪ್ರತ್ಯಯದಿಂದ ಉಭಯ ಕರ್ತೃವಿಗೂ ಅಭಿಧಾನವಿಲ್ಲದಿರುವುದರಿಂದ ಎರಡಕ್ಕೂ ತೃತೀಯೆಯೇ ಪ್ರಾಪ್ತವಾಗಲು ಅದಕ್ಕಪವಾದವಾಗಿ — '**ಕರ್ತೃಕರ್ಮಣೋಃ ಕೃತಿ ಭಾವೇ || ೨೨೬ ||**' ಎಂಬ ಸೂತ್ರದಿಂದ ವಿಧಿಸುವ ಷಷ್ಠಿಯು ಉಭಯತ್ರ ಪ್ರಾಪ್ತವಾಗಲು ಅದನ್ನು ಸಹಾರ್ಥಯೋಗದಲ್ಲಿ ಅಪ್ರಧಾನಲಿಂಗಕ್ಕೆ ಬಾಧಿಸಿ ತೃತೀಯಾವಿಧಾನಾರ್ಥವಾಗಿ ಸಾರ್ಥಕವೆಂದು ತಿಳಿಯುವುದು. ಈ ಸೂತ್ರದಲ್ಲಿ 'ಅಪ್ರಧಾನೇ' ಎಂದು ಹೇಳಿರುವುದರಿಂದ 'ಮಗಳಿಂ ಕೂಡಿ ಮುಜಿದಂ ಬ್ರಹ್ಮಂ' ಮೊದಲಾದ ಪ್ರಯೋಗಗಳಲ್ಲಿ ಪ್ರಧಾನವಾದ 'ಬ್ರಹ್ಮ' ಶಬ್ದಾದಿಗಳಿಗೆ ತೃತೀಯೆ ಬರುವುದಿಲ್ಲ.

**ಅವತಾರಿಕೆ ೨೧೨**

ಪೂರ್ವಸೂತ್ರದಿಂದ ಸಾಮಾನ್ಯವಾಗಿ ಸಹಾರ್ಥಕ ಶಬ್ದಯೋಗವಿರಲು ವಿಹಿತವಾದ ತೃತೀಯೆ, 'ಒಡನೆ' ಶಬ್ದಯೋಗವಿದ್ದರೂ ಪ್ರಾಪ್ತವಾಗಲು ತನ್ನಿಷೇಧಾರ್ಥವಾಗಿ ಸೂತ್ರವನ್ನು ಹೇಳುತ್ತಾನೆ.

**ಸೂತ್ರಂ || ಒಡನೆ ನ || ೨೧೨ ||**

**ಅರ್ಥ** || 'ಒಡನೆ' ಎಂಬ **ಶಬ್ದದ ಯೋಗವಿರಲು ಇಮ್-ಪ್ರತ್ಯಯವು ಬರುವುದಿಲ್ಲ.**

**ಉದಾಹರಣೆ** || ಮಗನೊಡನೆ ಬಂದಂ, ಗುರುವಿನೊಡನೆ ಪೋದಂ || ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೨೧೨**

ಈ ಸೂತ್ರದಲ್ಲಿ — 'ಒಡನೆ, ನ' ಎಂದು ಎರಡು ಪದಗಳಿರುವುವು. 'ಒಡನೆ' ಎಂಬುದು ಅವಿಭಕ್ತಿಕ ನಿರ್ದೇಶವು. 'ನ' ಎಂಬುದು ಪೂರ್ವಸೂತ್ರದಿಂದ ಪ್ರಾಪ್ತವಾದ ತೃತೀಯೆಗೆ

ನಿಷೇಧಬೋಧಕವು. ಆದುದರಿಂದ 'ಒಡನೆ' ಶಬ್ದದ ಯೋಗವಿರಲು ಲಿಂಗಕ್ಕೆ ಪರವಾಗಿ ತೃತೀಯೆ ಬರುವುದಿಲ್ಲವೆಂದು ಸೂತ್ರಾರ್ಥವಾಗಲು, ಈ ತೃತೀಯೆ ಷಷ್ಠಿಗೆ ಬಾಧಕವಾದುದರಿಂದ ಆ ತೃತೀಯೆಗೆ ನಿಷೇಧವು ಬರಲು, ಅಲ್ಲಿ ಷಷ್ಠಿಯೇ ಬಂದು 'ಮಗನೊಡನೆ ಬಂದಂ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು.

|| ಇತಿ ತೃತೀಯಾವಿಭಕ್ತಿ ಪ್ರಕರಣಂ ಸಮಾಪ್ತಂ ||

## ॥ ಅಥ ಚತುರ್ಥೀವಿಭಕ್ತಿ ಪ್ರಕರಣಂ ॥

**ಅವತಾರಿಕೆ ೨೧೩**

ಪೂರ್ವದಲ್ಲಿ ಕೆಲವು ಅರ್ಥವಿಶೇಷಗಳಲ್ಲಿ ಕೆಲವು ಲಿಂಗಗಳಿಗೆ ತೃತೀಯಾವಿಭಕ್ತಿಯು ವಿಧಿಸಲ್ಪಟ್ಟಿತು. ಈಗ ಕೆಲವು ಅರ್ಥವಿಶೇಷಗಳಲ್ಲಿ ಚತುರ್ಥಿಯನ್ನು ವಿಧಿಸುವನಾಗಿ - ಮೊದಲು ಸಾಮಾನ್ಯವಾಗಿ ಸಂಪ್ರದಾನಾರ್ಥದಲ್ಲಿ ಚತುರ್ಥೀಸಂಜ್ಞಕ ಗೆತ್-ಪ್ರತ್ಯಯವನ್ನು ವಿಧಿಸುತ್ತಾನೆ.

**ಸೂತ್ರಂ ॥ ಗೆದಾಪ್ಯೇ ದೇಯೈಃ ॥ ೨೧೩ ॥**

**ಅರ್ಥ ॥ ದಾನಕ್ಕೆ ವಿಷಯವಾದ ವಸ್ತುಗಳಿಂದ ಹೊಂದುವುದಕ್ಕೆ ಯೋಗ್ಯವಾದ ಕಾರಕ ದಲ್ಲಿರುವ ಲಿಂಗಕ್ಕೆ ಪರವಾಗಿ ಗೆತ್-ಪ್ರತ್ಯಯವು ಬರುವುದು.**

**ಉದಾಹರಣೆ ॥** ಬ್ರಾಹ್ಮಣಂಗೆ ಗೋವಂ ಕೊಟ್ಟಂ, ಯತಿಗೆ ಭಿಕ್ಷಮನಿಕ್ಕಿದಂ, ಬಸದಿಗೆ ಪೂಮಾಲೆಯನಿತ್ತಂ ॥ ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೨೧೩**

ಈ ಸೂತ್ರದಲ್ಲಿ — 'ಗೆತ್, ಆಪ್ಯೇ, ದೇಯೈಃ' ಎಂದು ಮೂರು ಪದಗಳಿರುವುವು. 'ಲಿಂಗಾತ್' ಎಂಬುದು ಇರುವುದು. 'ಗೆತ್' ಎಂಬುದು ಚತುರ್ಥೀವಿಭಕ್ತಿ ಬೋಧಕವು. ಇದೇ ಇಲ್ಲಿ ವಿಧೇಯವು. ಇಲ್ಲಿ ತ ಕಾರವು ಉಚ್ಚಾರಣಾರ್ಥವು. 'ಆಪ್ಯೇ' ಎಂಬುದು 'ಆಪ್ತುಂ ಯೋಗ್ಯೇ' ಎಂಬ ವ್ಯುತ್ಪತ್ತಿಯಿಂದ ಸಂಬಂಧಾರ್ಥಕ 'ಆಪ್' ಧಾತುವಿಗೆ ಕರ್ಮಾರ್ಥಕ ಯ-ಪ್ರತ್ಯಯವನ್ನು ಮಾಡಿ ಸಪ್ತಮ್ಯಂತವಾಗಿ ಸಿದ್ಧಿಸ್ಯವಾಗಿರುವುದು. ಇದಕ್ಕೆ ಸಂಬಂಧಿಸು ವುದಕ್ಕೆ ಕರ್ಮವಾದ ವಸ್ತುವೆಂದು ಅರ್ಥವಾಗುವುದು. ಕಾರಕಪ್ರಕರಣದಿಂದ ಆ ವಸ್ತು ಕಾರಕವಾಗಿರಬೇಕೆಂದು ತಿಳಿಯಬೇಕು. ಸಂಬಂಧಿಸುವುದಕ್ಕೆ ಎಂದರೆ ಯತ್-ಕರ್ತೃಕ ಸಂಬಂಧ ವೆಂದು 'ದೇಯೈಃ' ಎಂಬ ವಿಶೇಷಣದಿಂದ ತಿಳಿಯುವುದು. 'ದೇಯೈಃ' ಎಂದರೆ ದಾನಾರ್ಥಕ 'ದಾ' ಧಾತುವಿಗೆ ಕರ್ಮಾರ್ಥದಲ್ಲಿ ಯ-ಪ್ರತ್ಯಯವನ್ನು ಮಾಡಿ ನಿಷ್ಪನ್ನವಾದ 'ದೇಯ' ಶಬ್ದಕ್ಕೆ ದಾನಕ್ಕೆ ಕರ್ಮೀಭೂತ ವಸ್ತುವೇ ಅರ್ಥವಾಗುವುದು. ಅದಕ್ಕೆ ಪರವಾಗಿರುವ ತೃತೀಯಾ ವಿಭಕ್ತಿಯು 'ಆಪ್' ಧಾತ್ವರ್ಥರೂಪಸಂಬಂಧನಿರೂಪಿತ ಕರ್ತ್ರರ್ಥಕವು. ಜಾತ್ಯರ್ಥದಲ್ಲಿ ಬಹುವಚನವೆಂದು ತಿಳಿಯಬೇಕು. ತಥಾಚ — ದಾನಕ್ಕೆ ಕರ್ಮೀಭೂತವಸ್ತು ಕರ್ತೃಕ ಸಂಬಂಧಕ್ಕೆ ವಿಷಯವಾದ ವಸ್ತುವಾವುದೋ ಅದು ಸಂಪ್ರದಾನವೆಂಬುದೆಂದು ಪ್ರಾಚೀನರು ಅಂಗೀಕರಿಸಿರುವರು. ಆ ಅರ್ಥದಲ್ಲಿರುವ ಲಿಂಗಕ್ಕೆ ಪರವಾಗಿ ಗೆತ್-ಪ್ರತ್ಯಯ ಬರುವುದೆಂದು ಸೂತ್ರಾರ್ಥವಾಗಲು — 'ಬ್ರಾಹ್ಮಣಂಗೆ ಗೋವಂ ಕೊಟ್ಟಂ' ಮೊದಲಾದ ಪ್ರಯೋಗಗಳಲ್ಲಿ ದಾನಕ್ಕೆ ಕರ್ಮೀಭೂತವಾದ ಗೋಕರ್ತೃಕ ಸಂಬಂಧಕ್ಕೆ ವಿಷಯವಾದ ಬ್ರಾಹ್ಮಣನಿಗೆ ಸಂಪ್ರದಾನಸಂಜ್ಞೆ ಇರುವುದರಿಂದ ಅದಕ್ಕೆ ಚತುರ್ಥಿಯು ಬಂದಿರುವುದು. ಹೀಗೆಯೇ 'ಯತಿಗೆ ಭಿಕ್ಷಮನಿಕ್ಕಿದಂ' ಮೊದಲಾದ ಪ್ರಯೋಗಗಳಲ್ಲಿಯೂ ಊಹಿಸಿಕೊಳ್ಳುವುದು.

ಸಂಸ್ಕೃತವ್ಯಾಕರಣದಲ್ಲಿ ಇದೇ ತಾತ್ಪರ್ಯದಿಂದ — '**ಕರ್ಮಣಾಯಮಭಿಪ್ರೈತಿ ಸ ಸಂಪ್ರದಾನಂ**' ಎಂಬ ಸೂತ್ರದಿಂದ ಸಂಪ್ರದಾನಸಂಜ್ಞೆಯನ್ನು ಹೇಳಿ — '**ಚತುರ್ಥೀ ಸಂಪ್ರದಾನೇ**' ಎಂದು **ಚತುರ್ಥಿಯನ್ನು ವಿಧಿಸಿರುವನು. ದರ್ಪಣಕಾರನೂ** —

ಸುತ ಸಂಪ್ರದಾನರೂಢಂ
ಚತುರ್ಥಿಯುದು ರುಚಿಂಸೊಳೀಪ್ಸ್ಯೆಯೊಳ್ ಮಚ್ಚರದೊಳ್
ಹಿತದೊಳ್ ಸಂಭೀತಿಯೊಳುಂ
ನತಿಯೊಳ್ ಸ್ವಸ್ತ್ಯಾದಿಯೊಳ್ ಸ್ವಭಾವಸ್ಥಿತಿಯೊಳ್ (ಸೂತ್ರ ೧೨೫)

ಪ್ರವಿದಿತಹೇತುವಿನೊಳ್ ಸಂ
ದವನತಿಯೊಳ್ ಪ್ರಾಣ್ಯನಾದರಸ್ಮರಣದೊಳು
ದ್ಭವಿಸಿದಸೀಪ್ಸಿತದೊಳ್ ಸದ್ಭ
ಶವೃತ್ತಿಯೊಳ್ ಪ್ರತಿನಿಧಾನದೊಳಮಿಷ್ಟದೊಳಂ (ಸೂತ್ರ ೨೩)

ಎಂಬ ಸೂತ್ರಗಳಿಂದ ಸಾಮಾನ್ಯವಾಗಿ ಸಂಪ್ರದಾನದಲ್ಲಿ ಚತುರ್ಥಿಯನ್ನು ವಿಧಿಸಿ ರುಚ್ಯಾದ್ಯರ್ಥ ವಿಶೇಷವಿಷಯದಲ್ಲಿಯೂ ಬರುವುದೆಂದು ವಿಧಿಸಿರುವನು. ಇವೆಲ್ಲಾ **ಶಾಸನಕಾರನ** ಮತದಲ್ಲಿ ಉತ್ತರ ಸೂತ್ರಗಳಿಗೆ ವಿಷಯವಾಗಿರುವುವೆಂದು ತಿಳಿಯುವುದು. ಇಲ್ಲಿ ಸಂಪ್ರದಾನಾದಿ ಸಂಜ್ಞೆಗಳನ್ನು ಮಾಡದಿದ್ದರೂ ಅವು ಅನ್ವರ್ಥಕವಾಗಿರುವುದರಿಂದ ಅರ್ಥಾನುಗುಣವಾಗಿ ಸರ್ವತ್ರ ವ್ಯವಹಾರವಿಷಯಗಳಾಗಿರುವುವೆಂದು ತಿಳಿಯಬೇಕು.

ಈ ಸಂಪ್ರದಾನವೆಂಬುದು — ಕ್ರಿಯಾಜನ್ಯಫಲಭಾಗಿಯಮತ್ತಾದ ಉದ್ದೇಶ್ಯರೂಪವೆಂದು ಕೆಲವರು ಹೇಳುವರು. ಇಂತಹ ಸಂಪ್ರದಾನವು — ' ಪ್ರೇರಕ, ಅನುಮಂತೃ, ಅನಿರಾಕರ್ತೃ ' ಎಂದು ಮೂರು ತೆರನಾಗಿರುವುದು. ಇವುಗಳಲ್ಲಿ ' ನನಗೆ ಕೊಡು ' ಎಂದು ದಾತೃವನ್ನು ಪ್ರೇರಿಸುವುದಾವುದೋ ಅದು ಪ್ರೇರಕವೆಂಬ ಸಂಪ್ರದಾನವು. ' ನಾನು ಕೊಡುತ್ತೇನೆಂದು ಹೇಳಲು ಹಾಗೆ ಮಾಡು ' ಎಂದು ಅನುಮೋದಿಸುವುದೋ ಅದೇ ' ಅನುಮಂತೃ ' ಎಂಬ ಸಂಪ್ರದಾನವು. ಆವುದು ಪ್ರೇರಿಸದೆಯೂ ಅನುಮೋದಿಸದೆಯೂ ನಿರಾಕರಿಸದೆಯೂ ಇರುವುದೋ ಅದೇ ' ಅನಿರಾಕರ್ತೃ ' ಎಂಬ ಸಂಪ್ರದಾನವು. ಇದೇ ತಾತ್ಪರ್ಯದಿಂದ **ಭರ್ತೃಹರಿಯು** —

ಅನಿರಾಕರಣಾತ್ಕರ್ತೃಸ್ತ್ಯಾಗಾಂಗಂ ಕರ್ಮಣೇಪ್ಸಿತಂ
ಪ್ರೇರಣಾನುಮತಿಭ್ಯಾಂ ಚ ಲಭತೇ ಸಂಪ್ರದಾನತಾಂ

ಎಂಬ ಕಾರಿಕೆಯನ್ನು ಹೇಳಿರುವನು. ಈ ತ್ರಿವಿಧ ಸಂಪ್ರದಾನಕ್ಕೂ ಕ್ರಮವಾಗಿ ಮೂಲದಲ್ಲಿ ಒಂದೊಂದು ಉದಾಹರಣೆಯನ್ನು ಕೊಟ್ಟಿರುವುದೆಂದು ತಿಳಿಯಬೇಕು.

ಇಲ್ಲಿ ಕೆಲವರು — **' ಬ್ರಾಹ್ಮಣಂಗೆ ಗೋವಂ ಕೊಟ್ಟಂ, ಯತಿಗೆ ಭಿಕ್ಷಮನಿಕ್ಕಿದಂ '** ಮೊದಲಾದ ವಾಕ್ಯಗಳಲ್ಲಿ ಗವಾದಿಗಳು ಬ್ರಾಹ್ಮಣಾರ್ಥವೆಂದು ಗೋವಿನಿಂ ಬ್ರಾಹ್ಮಣನಿಗೂ ಭಿಕ್ಷದಿಂದ ಯತಿಗೂ ಉಪಕಾರವಾಗುವುದರಿಂದ ತೋರುವುದು. ಹೀಗೆಯೇ ಸಂಪ್ರದಾನದಲ್ಲೆಲ್ಲಾ ದೇಯ ವಸ್ತುಗಳಿಂದ ಆಪ್ಯವಾದುದಕ್ಕೆ ಉಪಕಾರವಾದುದರಿಂದ ' **ತಾದರ್ಥ್ಯೇ** ॥ ೨೧೭ ॥ ' ಎಂಬ ಸೂತ್ರದಿಂದಲೇ ಚತುರ್ಥಿಯು ಸಿದ್ಧವಾಗುತ್ತಿರಲು ಈ ಸೂತ್ರವು ವ್ಯರ್ಥವೆಂದು ಶಂಕಿಸುವರು. ಆದರೆ ಇವರ ಮತದಲ್ಲಿ ಸರ್ವತ್ರ ತಾದರ್ಥ್ಯ ಚತುರ್ಥಿಯು ಪ್ರಾಪ್ತವಾದರೂ ' ಛಾತ್ರಂಗೆ ಚಪೇಟಿಯಂ ಕೊಟ್ಟಂ ' ಮೊದಲಾದುವುಗಳಲ್ಲಿ ದೇಯವಾದುದು ಆಪ್ಯೋಪಕಾರಕವಲ್ಲವಾದುದರಿಂದ ಎಲ್ಲಾ ಕಡೆಯಲ್ಲಿಯೂ ದೇಯವಾದುದು ಆಪ್ಯೋಪಕಾರಕವೆಂದು ನಿಯಮ ಮಾಡುವುದಕ್ಕೆ

ಆಗುವುದಿಲ್ಲ. ಏತಕೆಂದರೆ ಇಲ್ಲಿ ಚಪೇಟಿಕೆ ದುಃಖವನ್ನುಂಟುಮಾಡುವುದರಿಂದ ಅಪಕಾರಿಕೆಯೇ ಅಲ್ಲದೆ ಉಪಕಾರಿಕೆಯಲ್ಲ. ತತ್ಕಾಲದಲ್ಲಿ ಅಪಕಾರವಾಗಿದ್ದರೂ ಮುಂದೆ ಅದರಿಂದ ಉಪಕಾರವಾಗಿರುವುದು ಎಂದು ಹೇಳಲಾಗದು. ಏತಕ್ಕೆಂದರೆ — ಉಪಕಾರಾಪಕಾರಗಳು ತಾತ್ಕಾಲಿಕಗಳೇ ಪ್ರಕೃತೋಪಯೋಗಿಗಳೆಂದು ಅಂಗೀಕರಿಸಲ್ಪಟ್ಟಿರುವುದು. ಹಾಗಿಲ್ಲದಿದ್ದರೆ ದುರ್ದಾನ ವಿಷಯದಲ್ಲಿ — 'ಬ್ರಾಹ್ಮಣಂಗೆ ಭಾಗಮಂ ಕೊಟ್ಟಂ, ಉಪಾಧ್ಯಾಯಂಗೆ ಅನಡ್ವಾಹಮನಿತ್ತಂ' ಮೊದಲಾದ ಪ್ರಯೋಗಗಳಲ್ಲಿ ಸಂಪ್ರದಾನವನ್ನು ಅಪೇಕ್ಷಿಸದಿರುವರು ಚತುರ್ಥೀ ಸಮರ್ಥನೆಯನ್ನು ಮಾಡುವುದು ಹೇಗೆ? ಮುಂದೆ ಬಲವದನಿಷ್ಟಕಾರಿಯಾದುದರಿಂದ ತತ್-ಕೃತೋಪಕಾರವಿರುವುದಿಲ್ಲ. ಅಥವಾ ಚಪೇಟಿಕಾದಿಗಳು ಅನನ್ಯಾರ್ಥಕವಾದುದರಿಂದ-ತಾದರ್ಥ್ಯವಾಗಿರಲಿ ಆದಾಗ್ಯೂ-ಅದು ಅಲ್ಲಿ ತೋರುವುದಿಲ್ಲ; ಸಂಪ್ರದಾನವೇ ತೋರುವುದು. ಆದರೆ ಇಲ್ಲಿ ದೇಯ ವಸ್ತುವೇ ಇರುವುದಿಲ್ಲ. 'ಚಪೇಟಿಕಾ' ಎಂಬುದು ಉಪಾಧ್ಯಾಯ ಹಸ್ತತಲ ಶಿಷ್ಯ ಕಪೋಲಗಳಿಗೆ ಸಂಬಂಧವು. ಅದು ಬ್ರಾಹ್ಮಣನನ್ನು ಗೋವು ಹೇಗೆ ಹೊಂದುವುದೋ ಹಾಗೆ ಛಾತ್ರನನ್ನು ಹೊಂದದೆ ಉಪಾಧ್ಯಾಯನಲ್ಲಿ ಇರುವುದರಿಂದ ಚಪೇಟಿಕೆಯು ದೇಯವಸ್ತುವೆಂದು ಹೇಳಲು ಆಗುವುದಿಲ್ಲ. ಎಂದರೆ 'ಶಿಷ್ಯಂಗೆ ವಿದ್ಯೆಯುಂ ಕೊಟ್ಟಂ, ಭೃತ್ಯಂಗೆ ಭಾಗ್ಯಮಂ ಕೊಟ್ಟಂ, ಕೊಲ್ವಂಗೆ ಬೆನ್ನಂ ಕೊಟ್ಟಂ, ಬಯ್ವಂಗೆ ಕಿವಿಯಂ ಕೊಟ್ಟಂ, ತಪಕ್ಕೆ ತನುವಂ ಕೊಟ್ಟಂ, ಇನಿಯಳ್ಗೆ ಮನಮಂ ಕೊಟ್ಟಂ' ಮೊದಲಾದುವುಗಳಲ್ಲಿ ದೇಯವು ಕರ್ತೃವಿನಿಂದ ಅನಪೇತವಾಗಿ ಇರುವುದರಿಂದ ಸರ್ವತ್ರ ದೇಯುವು ಕರ್ತುರಪೇತವಾಗಿಯೇ 'ಅಪ್ಯ' ವೆಂಬ ನಿಯಮವಿಲ್ಲವಾದುದರಿಂದ ಚಪೇಟಿಕೆಯು ಅನಪೇತವಾಗಿದ್ದರೂ ಸಂಪ್ರದಾನತ್ವವು ಇರುವುದು; ಅಥವಾ 'ಚಪೇಟಾ' ಶಬ್ದದಿಂದ ತತ್-ಕೃತತಾಡನವೇ ವಿವಕ್ಷಿತವೆನ್ನುವ ಪಕ್ಷದಲ್ಲಿ ಅದು ಅವನನ್ನು ಹೊಂದುವುದು. ಅಲ್ಲಿ ಸಂಪ್ರದಾನವಿರುವುದರಿಂದ ಚತುರ್ಥೀವಿಧಾನಾರ್ಥವಾಗಿ ಸೂತ್ರವು ಅವಶ್ಯಕವೆಂದು ತಿಳಿಯುವುದು.

**ಅವತಾರಿಕೆ ೨೧೪**

ಹೀಗೆಯೇ ಅರ್ಥವಿಶೇಷಗಳಲ್ಲಿಯೂ ಚತುರ್ಥೀವಿಭಕ್ತಿ ಬರುವುದು ಎಂದು ತದ್ವಿಧೇಯಕವನ್ನು ಹೇಳುತ್ತಾನೆ.

**ಸೂತ್ರಂ || ಶಕ್ತಿರುಚೀರ್ಷ್ಯಾಸೂಯಾದ್ರೋಹಕ್ರೋಧಮತ್ಸರಭೀತ್ಯುನ್ನತಿಸ್ವಭಾವಾವನತೀಷ್ಟಾನಿಷ್ಟಸಾದೃಶ್ಯಪ್ರತಿನಿಧ್ಯರ್ಥೈಃ || ೨೧೪ ||**

**ಅರ್ಥ || ಶಕ್ತಿ—ಸಾಮರ್ಥ್ಯವು, ರುಚಿ—ಪ್ರೀತಿ, ಈರ್ಷ್ಯೆ—ಅಸಹನೆ, ಅಸೂಯೆ—ಗುಣಗಳಲ್ಲಿ ದೋಷವನ್ನು ಆರೋಪಿಸುವುದು, ದ್ರೋಹ—ಅಪಕಾರವು, ಕ್ರೋಧ—ಅಮರ್ಷವು, ಮತ್ಸರ—ಅನ್ಯರ ಶುಭದಲ್ಲಿ ದ್ವೇಷವು, ಭೀತಿ—ಭಯವು, ಉನ್ನತಿ—ಆಧಿಕ್ಯವು, ಸ್ವಭಾವ—ಪ್ರಕೃತಿಯು, ಅವನತಿ—ನಮಸ್ಕಾರವು, ಇಷ್ಟ—ಹಿತವು, ಅನಿಷ್ಟ—ಅಹಿತವು, ಸಾದೃಶ್ಯ—ಉಪಮಾನವು, ಪ್ರತಿನಿಧಿ—ಪ್ರತಿಕಲ್ಪವು. ಹೀಗೆ ಈ ಶಕ್ತ್ಯಾದ್ಯರ್ಥವುಳ್ಳ ಶಬ್ದಗಳೊಡನೆ ಯೋಗವಿರಲು ಲಿಂಗದ ದೆಸೆಯಿಂದ ಪರವಾಗಿ ಗೆತ್-ಪ್ರತ್ಯಯವು ಬರುವುದು.**

**ಉದಾಹರಣೆ ||** ' ಮಲ್ಲಂಗೆ ಮಲ್ಲಂ ಶಕ್ತಂ, ಆತಂಗೀತಂ ಸಮರ್ಥಂ ' ಮೊದಲಾದುವು ಶಕ್ತ್ಯರ್ಥಕ್ಕೆ, ' ಧಾರ್ಮಿಕಂಗೆ ಧರ್ಮಂ ರುಚಿಯಕ್ಕುಂ, ಬೆನಕಂಗುಂಡಲಿಗೆಯಕ್ಕು ' ಮೊದಲಾದುವು ರುಚ್ಯರ್ಥಕ್ಕೆ, ' ಕವಿಗೆ ಕವಿಯೀರ್ಷ್ಯೆಗೆಯ್ವಂ, ಕುಜನಂ ಸುಜನಂಗೆ ಸೈರಿಸಂ ' ಮೊದಲಾದುವು ಈರ್ಷ್ಯಾರ್ಥಕ್ಕೆ, ' ಧರ್ಮಂಗೆ ಕೌರವನಸೂಯೆ ಗೆಯ್ದಂ, ರಾಮಂಗೆ ರಾವಣಂ ದೋಷಮನಾರೋಪಿಸಿದಂ ' ಮೊದಲಾದುವು ಅಸೂಯಾರ್ಥಕ್ಕೆ, ' ಅರಸಂಗೀತಂ ದ್ರೋಹಿ, ಒಡೆಯಂಗಪಕಾರಿ ದಾಸಂ ' ಮೊದಲಾದುವು ದ್ರೋಹಾರ್ಥಕ್ಕೆ, ' ಕಳ್ಳಂಗರಸಂ ಮುನಿವಂ, ನಲ್ಲಂಗಿನಿಯಳ್ ಕಂಟಿಸಿದಳ್ ' ಮೊದಲಾದುವು ಕ್ರೋಧಾರ್ಥಕ್ಕೆ, 'ಅಜ್ಞಂಗಜ್ಞಂ ಮಚ್ಚರಿಪಂ, ಸವತಿಗೆ ಸವತಿ ಪುರುಡಿಪಳ್ ' ಮೊದಲಾದುವು ಮತ್ಸರಾರ್ಥಕ್ಕೆ, ' ಪಾಪಕ್ಕಂಜುಗುಂ ತಕ್ಕಂ, ಪುಲಿಗಳ್ಕುಗುಂ ಪೇಡಿ ' ಮೊದಲಾದುವು ಭೀತ್ಯರ್ಥಕ್ಕೆ ' ಲೋಕಕ್ಕೀತನುನ್ನತಂ, ಹರಿಗೆ ಹರನಧಿಕಂ ' ಮೊದಲಾದುವು ಉನ್ನತ್ಯರ್ಥಕ್ಕೆ, ' ಕಪಿಗೆ ಚಪಲತೆ ಸಾಜಂ, ಸಿಂಹಕ್ಕೆ ಶೌರ್ಯಂ ಪ್ರಕೃತಿ ' ಮೊದಲಾದುವು ಸ್ವಭಾವಾರ್ಥಕ್ಕೆ, 'ಜಿನಂಗೆ ನಮಸ್ಕರಿಸಿದಂ, ತಂದೆಗೆ ಪೊಡಮಟ್ಟಂ' ಮೊದಲಾದುವು ಅವನತ್ಯರ್ಥಕ್ಕೆ, ' ಯಾಜ್ಞಿಕಂಗೆ ಸ್ವರ್ಗಮಿಷ್ಟಂ, ಪಸುವಿಂಗೆ ಹಿತಂ ತೃಣಂ ' ಮೊದಲಾದುವು ಇಷ್ಟಾರ್ಥಕ್ಕೆ, ' ಲೋಕಕ್ಕನಿಷ್ಟಂ ಖಳಂ, ಮಲ್ಲಂಗೊಳ್ಳಿತಲ್ತು ವಜ್ರಮುಷ್ಟಿ ' ಮೊದಲಾದುವು ಅನಿಷ್ಟಾರ್ಥಕ್ಕೆ, ' ಗೋವಿಂಗೆ ಗವಯಂ ಸದೃಶಂ, ಚಂದ್ರಂಗೆ ಸಮಾನಂ ಮುಖಂ ' ಮೊದಲಾದುವು ಸಾದೃಶ್ಯಾರ್ಥಕ್ಕೆ, ಜೇನತುಪ್ಪಕ್ಕೆ ಸಕ್ಕರೆ ಸಲ್ವುದು, ಪುಷ್ಕರಕ್ಕೇರಂಡಮಕ್ಕುಂ ' ಮೊದಲಾದುವು ಪ್ರತಿನಿಧ್ಯರ್ಥಕ್ಕೆ, ಉದಾಹರಣೆಗಳು.

**ವಿಚಾರ ೨೧೪**

ಈ ಸೂತ್ರದಲ್ಲಿ — ' ಶಕ್ತಿರುಚೀರ್ಷ್ಯಾಸೂಯಾದ್ರೋಹಕ್ರೋಧಮತ್ಸರಭೀತ್ಯುನ್ನತಿಸ್ವಭಾವಾವನತೀಷ್ಟಾನಿಷ್ಟಸಾದೃಶ್ಯಪ್ರತಿನಿಧ್ಯರ್ಥೈಃ ' ಎಂದು ಒಂದೇ ಪದವಿರುವುದು. ಪೂರ್ವದಿಂದ ' ಲಿಂಗಾತ್, ಗೆತ್ ' ಎಂದು ಅನುವರ್ತಿಸಲ್ಪಡುವುವು. ಶಕ್ತಿರುಚೀತ್ಯಾದಿಯು ಶಕ್ತಿರುಚೀರ್ಷ್ಯಾದಿಗಳು ಹದಿನೈದಕ್ಕೂ ದ್ವಂದ್ವಸಮಾಸವನ್ನು ಮಾಡಿ ಅರ್ಥ ಶಬ್ದದೊಡನೆ ಬಹುವ್ರೀಹಿಸಮಾಸವನ್ನು ಅಂಗೀಕರಿಸಿ ಸಹಾರ್ಥಕ ತೃತೀಯಾಂತವಾಗಿ ನಿರ್ದೇಶಿಸಲ್ಪಟ್ಟಿರುವುದು. ಇಲ್ಲಿ ದ್ವಂದ್ವಾಂತದಲ್ಲಿ ಶ್ರೂಯಮಾಣವಾಗಿರುವ ಅರ್ಥಪದಕ್ಕೆ ಆ ದ್ವಂದ್ವಘಟಿತವಾದ ಎಲ್ಲಾ ಪದಗಳಲ್ಲಿಯೂ ಸಂಬಂಧ ಮಾಡುವುದರಿಂದ 'ಶಕ್ತ್ಯರ್ಥಕ, ರುಚ್ಯರ್ಥಕ, ಈರ್ಷ್ಯಾರ್ಥಕ ' ಎಂದು ಮೊದಲಾಗಿ ಆಗುವುದು. ಇವು ಸಹಾರ್ಥ ತೃತೀಯಾಂತಗಳೆಂದು ಹೇಳಿರುವುದರಿಂದ ಶಕ್ತ್ಯಾದ್ಯರ್ಥಕ ಶಬ್ದಗಳಿಂದ ಯೋಗವಿರಲು ಆವುದನ್ನುದ್ದೇಶಿಸಿ ಶಕ್ತ್ಯಾದಿಗಳು ತೋರುವುವೊ ಆ ಅರ್ಥದಲ್ಲಿರುವ ಲಿಂಗಕ್ಕೆ ಪರವಾಗಿ ' ಗೆತ್ ' ಎಂಬ ಚತುರ್ಥೀಪ್ರತ್ಯಯವು ಬರುವುದು ಎಂದು ಸೂತ್ರಾರ್ಥವಾಗಲು ' ಮಲ್ಲಂಗೆ ಮಲ್ಲಂ ಶಕ್ತಂ ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು. ಇಲ್ಲಿ ವಿಭಕ್ತಿಗಳು ಉಪಪದವಿಭಕ್ತಿಯೆಂದೂ ಕಾರಕವಿಭಕ್ತಿಯೆಂದೂ ಎರಡು ತೆರನಾಗಿರುವುವು. ಅವುಗಳಲ್ಲಿ ಕೇವಲ ಸಮೀಪೋಚ್ಚಾರಿತಪದವನ್ನು ನಿಮಿತ್ತೀಕರಿಸಿ ಬರುವ ವಿಭಕ್ತಿಗಳು ಉಪಪದವಿಭಕ್ತಿಗಳೆಂದು ತಿಳಿಯಬೇಕು. ಕ್ರಿಯಾನಿಮಿತ್ತವಾಗಿ ಬರುವ ವಿಭಕ್ತಿಗಳು ಕಾರಕವಿಭಕ್ತಿಗಳೆಂದು ತಿಳಿಯಬೇಕು. ಅವುಗಳಲ್ಲಿ ಇದು ಉಪಪದವಿಭಕ್ತಿವಿಧಾಯಕಸೂತ್ರವೆಂದು ತಿಳಿಯುವುದು. ಆದುದರಿಂದ ಈ ವಿಭಕ್ತಿಗೆ ಕ್ರಿಯಾನ್ವಯವಿಲ್ಲ. ಇಲ್ಲಿ **' ಶಕ್ತ್ಯಾದ್ಯರ್ಥೈಃ '**

ಎಂದು ಹೇಳಿರುವುದರಿಂದ — 'ದೇವದತ್ತನ ಮಗಂ, ಯಜ್ಞದತ್ತನ ಕಮಂಡಲು' ಮೊದಲಾದ ಸಂಬಂಧಸಾಮಾನ್ಯದಲ್ಲಿ ಚತುರ್ಥೀವಿಭಕ್ತಿಯಿಲ್ಲ.

ಇಲ್ಲಿ ಶಕ್ತ್ಯಾದ್ಯರ್ಥಕ ಶಬ್ದಗಳ ಯೋಗವಿರಲು ಲಿಂಗಕ್ಕೆ ಪರವಾಗಿ ಚತುರ್ಥಿ ಬರುವುದೆಂದು ಸೂತ್ರಾರ್ಥವನ್ನು ಹೇಳಲು ಆ ಚತುರ್ಥಿಗೆ ಪ್ರಕೃತಿಭೂತವಾದುದು ಶಕ್ತ್ಯಾದ್ಯರ್ಥಕ ಶಬ್ದವೆ? ಅಥವಾ ಅದರಿಂದ ಯುಕ್ತವಾದುದಾವುದೋ ತದ್ವಾಚಕ ಶಬ್ದವೆ? ಎಂದು ಶಂಕೆಯುಂಟಾಗಲು ಆವುದನ್ನುದ್ದೇಶಿಸಿ ಶಕ್ತ್ಯಾದಿಯು ಹೇಳಲ್ಪಡುವುದೋ ಆ ಅರ್ಥಬೋಧಕವಾದ ಲಿಂಗಕ್ಕೇ ಚತುರ್ಥಿ ಬರುವುದೆಂದು ತಿಳಿಯಬೇಕೇ ಅಲ್ಲದೆ, ಎಲ್ಲಿ ಶಕ್ತ್ಯಾದಿಯೋ ಅಲ್ಲಿ ಚತುರ್ಥಿಯಿಲ್ಲವೆಂದು ವ್ಯಾಖ್ಯಾನದಿಂದ ತಿಳಿಯಬೇಕು. ಹೀಗೆಯೇ ರುಚ್ಯಾದಿಗಳಲ್ಲಿಯೂ ಊಹಿಸಿಕೊಳ್ಳುವುದು. ಆದರೆ ಸ್ವಭಾವದಲ್ಲಿ ಎಲ್ಲಿ ಸ್ವಭಾವವೋ ಅಲ್ಲಿಯೇ ಚತುರ್ಥಿಯೆಂದು ತಿಳಿಯಬೇಕು. 'ಕಪಿಗೆ ಚಪಲತೆ ಸಾಜಂ' ಎಂಬಲ್ಲಿ 'ಸಾಜಂ' ಎನ್ನುವುದರಿಂದ ಸ್ವಭಾವವು ಹೇಳಲ್ಪಡುವುದು. ಅದು ಕಪಿಯಲ್ಲಿಯೇ ಇರುವುದರಿಂದ 'ಕಪಿ' ಶಬ್ದಕ್ಕೆ ಚತುರ್ಥಿ ಬಂದಿರುವುದು. ಆದರೆ — 'ರುಚಿಃ' ಎಂದರೆ ಪ್ರೀತಿ ಇದು ಆತ್ಮಧರ್ಮವಾಗಿರುವುದು. ಆದುದರಿಂದ 'ಧಾರ್ಮಿಕಂಗೆ ಧರ್ಮಂ ರುಚಿ, ಜೆನಕಂಗುಂಡಲಿಗೆಯುಟ್ಟಿ' ಮೊದಲಾದ ಪ್ರಯೋಗಗಳಲ್ಲಿ 'ರುಚಿ' ಎಂಬುದು ಧಾರ್ಮಿಕಾದಿಗಳಲ್ಲಿಯೇ ತೋರುವುದಲ್ಲದೇ ಅನ್ಯತ್ರ ತೋರುವುದಿಲ್ಲವೆಂದು 'ರುಚಿ' ವಿಷಯದಲ್ಲಿಯೂ ಎಲ್ಲಿ ರುಚಿಯೋ ಅಲ್ಲಿ ಚತುರ್ಥಿಯೆಂದು ಶಂಕೆಯುಂಟಾಗಲು 'ರುಚಿಃ ಪ್ರೀತಿಃ' ಎಂಬುದು ರೋಚಮಾನತೆಯೆಂದು ತಿಳಿಯುವುದರಿಂದ ಅದು ಧಾರ್ಮಿಕನಲ್ಲಿಲ್ಲ; ಮತ್ತೇನೆಂದರೆ ಧರ್ಮದಲ್ಲಿಯೇ ಇರುವುದು. ಧರ್ಮವಾದರೋ ಧಾರ್ಮಿಕನಿಗೆ ರೋಚಮಾನವಾಗಿರುವುದು. ಆದುದರಿಂದ ಆವುದನ್ನುದ್ದೇಶಿಸಿ ರುಚಿಯೋ ಅಲ್ಲಿ ಚತುರ್ಥಿಯೆಂದೇ ಹೇಳಬೇಕು. ಹೀಗೆಯೇ 'ಯಾಜ್ಞಿಕಂಗೆ ಸ್ವರ್ಗಂ ಇಷ್ಟಂ' ಎಂಬಲ್ಲಿಯೂ ಸ್ವರ್ಗವು ಯಾಜ್ಞಿಕನಲ್ಲಿಯೇ ಉಂಟಾಗುವುದರಿಂದ ಎಲ್ಲಿ ಇಷ್ಟವೋ ಅಲ್ಲಿಯೇ ಚತುರ್ಥಿಯೆಂದು ಶಂಕಿಸಲಾಗದು. ಏತಕ್ಕೆಂದರೆ 'ಇಷ್ಟಂ' ಎಂದರೆ ಇಚ್ಛಾವಿಷಯತ್ವವು. ಅದು ಸ್ವರ್ಗದಲ್ಲಿಯೇ ಇರುವುದಲ್ಲದೆ ಯಾಜ್ಞಿಕನಲ್ಲಿಲ್ಲ. ಯಾಜ್ಞಿಕನನ್ನು ಕುರಿತು ಸ್ವರ್ಗವು ಇಷ್ಟವಾಗಿರುವುದು. ಆದುದರಿಂದ ಇಲ್ಲಿಯೂ ಆವುದನ್ನುದ್ದೇಶಿಸಿ ಇಷ್ಟವೋ ಅಲ್ಲಿಯೇ ಚತುರ್ಥಿಯೆಂದು ಹೇಳಬೇಕು. ಹೀಗೆಯೇ ಎಲ್ಲಾ ಕಡೆಯಲ್ಲಿಯೂ ಊಹಿಸಿಕೊಳ್ಳುವುದು. ಸ್ವಭಾವದಲ್ಲಿಯಾದರೂ ಪೂರ್ವದಲ್ಲಿ ಹೇಳಿದಂತೆಯೇ ಹೇಳಬೇಕು. ಅಥವಾ ಎಲ್ಲಾ ಕಡೆಯಲ್ಲಿಯೂ ಏಕರೂಪತ್ವಸಂಪಾದನಾರ್ಥವಾಗಿ ಸ್ವಭಾವದಲ್ಲಿಯೂ ಆವುದನ್ನು ಉದ್ದೇಶಿಸಿ ಸ್ವಭಾವವೋ ಅಲ್ಲಿ ಚತುರ್ಥಿಯೆಂದು ಅಂಗೀಕರಿಸಿ ಸ್ವಭಾವವೆಂದರೆ ಸ್ವಭಾವತ್ವವೆಂದು ಕಲ್ಪಿಸಿ ಉಪಪತ್ತಿಯನ್ನು ಹೇಳುವುದು. ಹಾಗಿಲ್ಲದಿದ್ದರೆ — 'ದೇವದತ್ತನ ಶಕ್ತಿ, ಯಜ್ಞದತ್ತನ ರುಚಿ' ಮೊದಲಾದುವುಗಳಲ್ಲಿಯೂ ಚತುರ್ಥಿ ಪ್ರಸಕ್ತವಾಗುವುದು. ಇಲ್ಲಿ ಸಂಬಂಧಮಾತ್ರ ವಿವಕ್ಷೆಯಿಂದ ಷಷ್ಠಿ ಬಂದಿರುವುದೆಂದು ತಿಳಿಯುವುದು.

**ಅವತಾರಿಕೆ ೨೧೫**

ಹೀಗೆಯೇ ಅರ್ಥಾಂತರದಲ್ಲಿಯೂ ಚತುರ್ಥಿಯನ್ನು ವಿಧಿಸುತ್ತಾನೆ.

**ಸೂತ್ರ || ಆಶಿಷ್ಯುದ್ದೇಶ್ಯೇ || ೨೧೫ ||**

**ಅರ್ಥ || ಆಶೀರರ್ಥವು ತೋರುತ್ತಿರಲು, ಆಶೀರರ್ಥವು ಯಾರನ್ನುದ್ದೇಶಿಸಿ ವಿಧಿಸುವುದೋ ಆ ಉದ್ದೇಶ್ಯವಾಚಕಲಿಂಗಕ್ಕೆ ಪರವಾಗಿ ಚತುರ್ಥಿ ಬರುವುದು.**

**ಉದಾಹರಣೆ ||** ದೇವದತ್ತಂಗೆ ಭದ್ರಮಕ್ಕೆ, ಜಿನದತ್ತಂಗೆ ದೀರ್ಘಾಯುಮಕ್ಕೆ, ಲೋಕಕ್ಕೆ ಸುಖಮಕ್ಕೆ, ಪ್ರಜೆಗಳ್ಗೆ ಸ್ವಸ್ತಿಯಕ್ಕೆ || ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೨೧೫**

ಈ ಸೂತ್ರದಲ್ಲಿ — 'ಆಶಿಷಿ, ಉದ್ದೇಶ್ಯೇ' ಎಂದು ಎರಡು ಪದಗಳಿರುವುವು. ಪೂರ್ವದಿಂದ 'ಲಿಂಗಾತ್, ಗೆತ್' ಎಂದು ಅನುವರ್ತಿಸಲ್ಪಡುವುದು. 'ಆಶಿಷಿ' ಎಂಬುದು ವಿಷಯ ಸಪ್ತಮ್ಯಂತವು. 'ಆಶೀಃ' ಎಂದರೆ—'ಆಶೀರುರಗದಂಷ್ಟ್ರಾಯಾಂ ಹಿತವಾಕ್ಯಾಭಿಲಾಷಯೋಃ' ಎಂಬ ಕೋಶದಿಂದ ಅನೇಕಾರ್ಥಗಳು ತೋರುತ್ತಿದ್ದರೂ ಪ್ರಕೃತದಲ್ಲ — ಇಷ್ಟಾರ್ಥಾಶಂಸನವೆಂದು ತಿಳಿಯುವುದು. 'ಉದ್ದೇಶ್ಯೇ' ಎಂಬುದು ಅಧಿಕರಣ ಸಪ್ತಮ್ಯಂತವು 'ಲಿಂಗಾತ್' ಎಂಬುದಕ್ಕೆ ವಿಶೇಷಣವು. ಉದ್ದೇಶ್ಯವೆಂದರೆ ಆವುದನ್ನುದ್ದೇಶಿಸಿದೆಯೋ ಅದೇ ಉದ್ದೇಶ್ಯವು. ತಥಾಚ — ಆಶೀರರ್ಥವು ತೋರುವಾಗ ಉದ್ದೇಶ್ಯವಾಚಕವಾದ ಲಿಂಗಕ್ಕೆ ಪರವಾಗಿ ಗೆತ್-ಪ್ರತ್ಯಯವು ಬರುವುದೆಂದು ಸೂತ್ರಾರ್ಥವಾಗಲು 'ದೇವದತ್ತಂಗೆ ಭದ್ರಮಕ್ಕೆ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು.

ಇಲ್ಲಿ — 'ಆಶಿಷಿ' ಎಂದು ಹೇಳಿರುವುದರಿಂದ 'ದೇವದತ್ತನ ಸುಖಂ, ಗುರುದತ್ತನ ಭದ್ರಂ' ಮೊದಲಾದ ಪ್ರಯೋಗಗಳಲ್ಲಿ ಆಶೀರರ್ಥವಿಲ್ಲದೆ ಸಂಬಂಧ ಮಾತ್ರವು ತೋರುವುದರಿಂದ ಚತುರ್ಥಿಯಿಲ್ಲ. 'ಉದ್ದೇಶ್ಯೇ' ಎಂದು ಹೇಳಿರುವುದರಿಂದ 'ದೇವದತ್ತಂಗೆ ಕುಶಲಮಕ್ಕೆ' ಮೊದಲಾದ ಪ್ರಯೋಗಗಳಲ್ಲಿ ಆಶಾಸ್ಯವಾದ 'ಕುಶಲಾದಿ' ಶಬ್ದಕ್ಕೆ ಬರುವುದಿಲ್ಲವೆಂದು ತಿಳಿಯಬೇಕು.

ಇಲ್ಲಿ — ಇಷ್ಟಾರ್ಥಾಶಂಸನರೂಪಆಶೀರ್ವಿಷಯದಲ್ಲಿ ಚತುರ್ಥಿಯನ್ನು ವಿಧಿಸಿರುವುದರಿಂದ — 'ಶತ್ರುಗೆ ನಾಶಮಕ್ಕೆ, ಆತಂಗೆ ಕೇಡಕ್ಕೆ' ಮೊದಲಾದ ಪ್ರಯೋಗಗಳಲ್ಲಿ ನಾಶಾದಿಗಳು ಅನಿಷ್ಟಗಳಾದುದರಿಂದ ಇಷ್ಟಾರ್ಥಾಶಂಸನವಿಲ್ಲವೆಂದು 'ಶತ್ರು' ಮೊದಲಾದ ಶಬ್ದಗಳಿಗೆ ಚತುರ್ಥಿ ಬರಲಾರದೆಂದು ಶಂಕೆಯುಂಟಾಗುವುದು. ಆದಾಗ್ಯೂ ನಾಶಮಾತ್ರವು ಅನಿಷ್ಟವಾಗಿದ್ದರೂ ಶತ್ರುಸಂಬಂಧಿ ನಾಶವು ಇಷ್ಟವೇ ಆಗಿರುವುದರಿಂದ ನಾಶಾದಿಗಳೂ ಆಶೀರ್ವಿಷಯಗಳೆಂದು ಅಲ್ಲಿ ಚತುರ್ಥಿ ಬರುವುದೆಂದು ತಿಳಿಯಬೇಕು. 'ವಸ್ತುತಃ, ಶತ್ರುಗೆ' ಎಂದು ಚತುರ್ಥಿ ಆಶೀರ್ವಿಷಯದಲ್ಲಲ್ಲ. ಮತ್ತೇನೆಂದರೆ '**ವ್ಯತ್ಯಯೋ ಬಹುಲಂ || ೨೩೧ ||**' ಎಂಬ ಸೂತ್ರದಿಂದ ಸಂಬಂಧ ಮಾತ್ರದಲ್ಲಿ ಬಂದಿರುವುದೆಂದು ತಿಳಿಯಬೇಕು.

**ಅವತಾರಿಕೆ ೨೧೬**

ಓಗೆಯೇ ಶಬ್ದಾಂತರ ಯೋಗವಿದ್ದರೂ ಚತುರ್ಥಿ ಬರುವುದೆಂದು ಹೇಳುತ್ತಾನೆ.

**ಸೂತ್ರಂ || ಸ್ವಾಹಾಸ್ವಧಾವಷಡ್ಭಿಃ || ೨೧೬ ||**

**ಅರ್ಥ || 'ಸ್ವಾಹಾ, ಸ್ವಧಾ, ವಷಟ್' ಎಂಬ ಶಬ್ದಗಳ ಯೋಗವಿದ್ದರೂ ಲಿಂಗಕ್ಕೆ ಪರವಾಗಿ ಗೆತ್-ಪ್ರತ್ಯಯವು ಬರುವುದು.**

**ಉದಾಹರಣೆ** || ' ಅಗ್ನಿಗೆ ಸ್ವಾಹಾಕಾರಂ, ಪಿತೃಗಳ್ಗೆ ಸ್ವಧಾಕಾರಂ, ಇಂದ್ರಂಗೆ ವಷಟ್ಕಾರಂ ' || ಮೊದಲಾದುವು ಇವಕ್ಕೆ ಲಕ್ಷ್ಯಗಳು.

**ವಿಚಾರ ೨೧೬**

ಈ ಸೂತ್ರದಲ್ಲಿ — ' ಸ್ವಾಹಾಸ್ವಧಾವಷಡ್ಭಿಃ ' ಎಂದು ಒಂದೇ ಪದವಿರುವುದು. ಪೂರ್ವದಿಂದ ' ಲಿಂಗಾತ್, ಗೆತ್ ' ಎಂಬುವು ಅನುವರ್ತಿಸಲ್ಪಡುತ್ತವೆ. ' ಸ್ವಾಹಾಸ್ವಧಾವಷಡ್ಭಿಃ ' ಎಂಬುದು — ' ಸ್ವಾಹಾ, ಸ್ವಧಾ, ವಷಟ್ ' ಎಂಬ ಅವ್ಯಯಗಳಿಗೆ ದ್ವಂದ್ವಸಮಾಸವನ್ನು ಮಾಡಿ ಸಹಯೋಗೇ ತೃತೀಯಾಂತವಾಗಿ ನಿರ್ದೇಶಿಸಲ್ಪಟ್ಟಿರುವುದು. 'ಸ್ವಾಹಾಸ್ವಧಾ' ಶಬ್ದಗಳು ಅನವ್ಯಯಗಳೂ ಇರುವುವೆಂದು —

ಶಚ್ಯಾ ಸಹಾಗತಃ ಶಕ್ರಃ ಸ್ವಾಹಯಾ ಚ ಧನಂಜಯಃ
ಸ್ವಧಯಾ ಶ್ರಾದ್ಧದೇವಶ್ಚ ಸ್ವೈರೃತ್ಯಾ ನಿಕಷಾತ್ಮಜಃ

ಮೊದಲಾದ ಪ್ರಯೋಗಗಳಿಂದಲೂ ' **ತರ್ಪಣಂ ಪ್ರೀಣನಂ ಪ್ರೀತಿಃ ಸ್ವಧಾ**[1] **ಸೌಹಿತ್ಯಮಿತ್ಯಪಿ** ' ಎಂಬ ಕೋಶದಿಂದಲೂ ತಿಳಿದುಬರುತ್ತದೆ. ಆದಾಗ್ಯೂ ಪ್ರಕೃತದಲ್ಲ — ' **ಸಹಚರಿತಾ ಸಹಚರಿತಯೋಃ ಸಹಚರಿತಸ್ಯೈವ ಗ್ರಹಣಂ** ' ಎಂಬ ನ್ಯಾಯದಿಂದ ' ವಷಟ್ ' ಎಂಬ ವ್ಯಯಸಾಹಚರ್ಯದಿಂದ ಸ್ವಾಹಾಸ್ವಧಾಗಳನ್ನೂ ಅವ್ಯಯಗಳೆಂದೇ ಗ್ರಹಿಸಬೇಕು. ತಥಾಚ — ' ಸ್ವಾಹಾ, ಸ್ವಧಾ, ವಷಟ್ ' ಎಂಬ ಅವ್ಯಯಗಳಿಂದ ಯೋಗವಿರಲು ಲಿಂಗಕ್ಕೆ ಪರವಾಗಿ ಗೆತ್-ಪ್ರತ್ಯಯವು ಬರುವುದೆಂದು ಸೂತ್ರಾರ್ಥವಾಗಲು ' ಅಗ್ನಿಗೆ ಸ್ವಾಹಾಕಾರಂ ' ಮೊದಲಾದುವು ಸಿದ್ಧಿಸುವುವು.

ಇಲ್ಲ ಸಂಸ್ಕೃತಾವ್ಯಯಗಳಿಗೆ – ' **ನಾವ್ಯಯಶತೃತ್ಯದಾದಿ ||೧೦||** ' ಎಂಬ ಸೂತ್ರದಿಂದ ಲಿಂಗಸಂಜ್ಞಾನಿಷೇಧ ಮಾಡಿರುವುದರಿಂದ ಅವುಗಳಿಗೆ ಭಾಷೆಯುಲ್ಲ ಪ್ರಯೋಗವಿಲ್ಲವೆಂದು ತೋರುವುದು. ಹೀಗಿರಲು ' ಸ್ವಾಹಾ, ಸ್ವಧಾ, ವಷಟ್ ' ಎಂಬ ಅವ್ಯಯಗಳ ಯೋಗವಿದ್ದರೆ ಚತುರ್ಥಿ ಬರುವುದೆಂದು ಚತುರ್ಥೀವಿಧಾನವು ಅಯುಕ್ತವೆಂದು ತೋರುವುದು. ಆದಾಗ್ಯೂ — ' **ನಾವ್ಯಯಶತೃತ್ಯದಾದಿ** ' ಎಂಬ ಸೂತ್ರದಲ್ಲಿ ಅವ್ಯಯಪದದಿಂದ ಕೇವಲಾವ್ಯಯಗಳಿಗೆ ಗ್ರಹಣಮಾಡಿ ಅವಕ್ಕೆ ಭಾಷೆಯುಲ್ಲಿ ಪ್ರಯೋಗವಿಲ್ಲವೆಂದು ಲಿಂಗಸಂಜ್ಞಾನಿಷೇಧವನ್ನು ಮಾಡಿರುವುದು. ಸಮಸ್ತಗಳಾಗಿಯೂ ಪ್ರತ್ಯಯಾಂತಗಳಾಗಿಯೂ ಇರುವುದಕ್ಕೆ ನಿಷೇಧವಿಲ್ಲವಾದುದರಿಂದ ಭಾಷೆಯುಲ್ಲಿ ಅವಕ್ಕೆ ಪ್ರಯೋಗಗಳುಂಟೆಂದು ಪೂರ್ವದಲ್ಲಿ ವಿವರಿಸಲ್ಪಟ್ಟಿರುವುದರಿಂದ ಪ್ರಕೃತದಲ್ಲ ಕೇವಲ ' ಸ್ವಾಹಾ, ಸ್ವಧಾ, ವಷಟ್ ' ಶಬ್ದಗಳನ್ನುಪಯೋಗಿಸದೆ ' ಸ್ವಾಹಾಕಾರಂ, ಸ್ವಧಾಕಾರಂ, ವಷಟ್ಕಾರಂ ' ಎಂದು ಕಾರ-ಪ್ರತ್ಯಯಾಂತಗಳನ್ನಾಗಲಿ ' ಕಾರ ' ಎಂಬ ಕೃದಂತದೊಡನೆ ಸಮಸ್ತವಾದುವನ್ನಾಗಲಿ ಪ್ರಯೋಗಿಸುವುದೆಂದು ತಿಳಿಯಬೇಕು.

**ಅವತಾರಿಕೆ ೨೧೭**

ಹೀಗೆಯೇ ತಾದರ್ಥ್ಯ ಚತುರ್ಥಿಯನ್ನು ವಿಧಿಸುತ್ತಾನೆ.

**ಸೂತ್ರಂ || ತಾದರ್ಥ್ಯೇ || ೨೧೭ ||**

---

ಪಾಠಾಂತರ : ೧ ಸ್ವಾಹಾ

**ಅರ್ಥ || ' ಅದಕ್ಕೋಸ್ಕರ ಇದು ' ಎಂಬ ಅರ್ಥವು ತೋರುತ್ತಿರಲು ಲಿಂಗಕ್ಕೆ ಪರವಾಗಿ ಗೆತ್-ಪ್ರತ್ಯಯವು ಬರುವುದು.**

**ಉದಾಹರಣೆ ||** ಮೋಕ್ಷಕ್ಕೆ ತತ್ತ್ವಜ್ಞಾನಂ, ಕುಂಡಲಕ್ಕೆ ಚಿನ್ನಂ, ಅವಘಾತಕ್ಕೊನಕೆ, ತೇರ್ಗೆ ಮರಂ || ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೨೧೭**

ಈ ಸೂತ್ರದಲ್ಲಿ — ' ತಾದರ್ಥ್ಯೇ ' ಎಂದೊಂದೇ ಪದವಿರುವುದು. ಪೂರ್ವದಿಂದ — ' ಲಿಂಗಾತ್, ಗೆತ್ ' ಎಂದು ಅನುವರ್ತಿಸಲ್ಪಡುವುವು. ತಾದರ್ಥ್ಯವೆಂಬುದು — ' ಸಃ ಅರ್ಥಃ ಯಸ್ಯ ತತ್ ' ಅಥವಾ ' ತಸ್ಮೈ ಇದಂ ತದರ್ಥಂ ತಸ್ಯಭಾವಸ್ತಾದರ್ಥ್ಯಂ ' ಎಂಬ ವಿಗ್ರಹ ದಿಂದ ' ಅದೇ ಪ್ರಯೋಜನವಾಗುಳ್ಳುದರ ಭಾವ ' ಅಥವಾ ' ಅದಕ್ಕೋಸ್ಕರ ಇದು ಎಂಬುದರ ಭಾವ ' ಎಂಬರ್ಥವುಳ್ಳ ' ತಾದರ್ಥ್ಯ ' ಶಬ್ದಕ್ಕೆ ವಿಷಯಸಪ್ತಮ್ಯಂತನಿರ್ದೇಶವು; ಆದುದರಿಂದ ತಾದರ್ಥ್ಯ ತೋರುವಾಗ ತಾದರ್ಥ್ಯವೆಂಬುದರಲ್ಲಿ ತತ್ ಶಬ್ದದಿಂದ ನಿರ್ದಿಷ್ಟವಾದ ಕಾರ್ಯವಾಚಕ ಲಿಂಗಕ್ಕೆ ಪರವಾಗಿ ಗೆತ್-ಪ್ರತ್ಯಯವೆಂದು ಈ ಸೂತ್ರಕ್ಕೆ ತಾತ್ಪರ್ಯವಾಗುವುದು. ಇದರಿಂದ ' ಮೋಕ್ಷಕ್ಕೆ ತತ್ತ್ವಜ್ಞಾನಂ ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು. ಇಲ್ಲಿ ತತ್ತ್ವಜ್ಞಾನವು ಮೋಕ್ಷಕ್ಕೆ ಕಾರಣವಾಗಿರುವುದರಿಂದ ಮೋಕ್ಷವು ಕಾರ್ಯವಾಗಿರುವುದು. ಆದುದರಿಂದ ಅದಕ್ಕೆ ಚತುರ್ಥಿ ಬಂದಿರುವುದು. ಈ ವಿಷಯದಲ್ಲಿ ಕಾರಣವೆಂಬುದು ನಿಮಿತ್ತೋಪಾದಾನೋಭಯ ಸಾಧಾರಣವು ವಿವಕ್ಷಿತವೆಂದು ನಿಮಿತ್ತ ಕಾರಣಕ್ಕೆ – ' ಮೋಕ್ಷಕ್ಕೆ ತತ್ತ್ವಜ್ಞಾನಂ ' ಎಂಬುದನ್ನು ಕೊಟ್ಟು ಉಪಾದಾನಕಾರಣಕ್ಕೆ — ' ಕುಂಡಲಕ್ಕೆ ಚಿನ್ನಂ ' ಎಂಬುದನ್ನು ಕೊಟ್ಟಿರುವುದು. ಹೀಗೆಯೇ ಇತರ ಪ್ರಯೋಗಗಳಲ್ಲಿಯೂ ನಿಮಿತ್ತೋಪಾದಾನ ಕಾರಣಗಳನ್ನು ಊಹಿಸಕೊಳ್ಳುವುದು. ಇಲ್ಲಿ ಸಂಸ್ಕೃತವ್ಯಾಕರಣಕಾರರು ಉಪಕಾರ್ಯೋಪಕಾರಕಭಾವವು ತೋರುತ್ತಿರಲು ತಾದರ್ಥ್ಯ-ಚತುರ್ಥಿ ಬರುವುದೆಂದು ಹೇಳಿರುವರು.

**ಅವತಾರಿಕೆ ೨೧೮**

ಹೀಗೆಯೇ ಅರ್ಥಾಂತರ ತೋರುವಾಗ ಕೆಲವು ಪ್ರಕೃತಿಗಳಿಗೆ ಚತುರ್ಥಿಯನ್ನು ವಿಧಿಸುತ್ತಾನೆ.

**ಸೂತ್ರಂ || ಉತ್ಪಾತೇನ ಜ್ಞಾಪ್ಯೇ || ೨೧೮ ||**

**ಅರ್ಥ || ಅಶುಭ ಸೂಚಕವಾದ ಭೂತ ವಿಕಾರವು ಉತ್ಪಾತವು. ಅದರಿಂದ ಜ್ಞಾಪ್ಯವಾದು ದಾವುದೋ ತದ್ವಾಚಕಲಿಂಗಕ್ಕೆ ಪರವಾಗಿ ಗೆತ್-ಪ್ರತ್ಯಯವು ಬರುವುದು.**

**ಉದಾಹರಣೆ ||** ಬಱಕ್ಕೆ[೧] ಬೆಳ್ಮಿಂಚು, ಲೋಕನಾಶಕ್ಕೆ ಕಪ್ಪೆಯ ಚಂಡಿಕೆ, ಬಿಱುವಿಸಿಲ್ಗೆ ಕೆಂಮಿಂಚು || ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೨೧೮**

ಈ ಸೂತ್ರದಲ್ಲಿ — ' ಉತ್ಪಾತೇನ, ಜ್ಞಾಪ್ಯೇ ' ಎಂದು ಎರಡು ಪದಗಳಿರುವುವು. ಪೂರ್ವದಿಂದ — ' ಲಿಂಗಾತ್, ಗೆತ್ ' ಎಂದು ಅನುವರ್ತಿಸಲ್ಪಡುವುವು. ' ಉತ್ಪಾತೇನ '

ಪಾಠಾಂತರ: ೧ ಬಱಹಿಂಗೆ

ಎಂಬುದು ‘ ಜ್ಞಾಪ್ಯೇ ’ ಎಂಬುದರಲ್ಲಿ ಅನ್ವಯಿಸಲ್ಪಡುವುದು. ಆದುದರಿಂದ ಇದು ಜ್ಞಾಪಕನೆಂದು ತಿಳಿಯುವುದು. ಇದು ಭಾವ್ಯನಿಷ್ಟ ಸೂಚಕವಾಗಿ ‘ ಭೌಮ, ನಾಭಸ ’ ಮೊದಲಾದ ಭೇದಗಳಿಂದ ಭಿನ್ನವಾಗಿರುವುದು. ಇದರಿಂದ ಜ್ಞಾಪ್ಯಮಾನವಾದುದಾವುದೆಂದರೆ ಲೋಕಕ್ಕನಿಷ್ಟವಾದ ಕ್ಷಾಮಾದಿಯು ತದ್ವಾಚಕಲಿಂಗಕ್ಕೆ ಪರವಾಗಿ ಚತುರ್ಥಿ ಬರುವುದೆಂದು ಸೂತ್ರಾರ್ಥವಾಗಲು ‘ ಬಜಕ್ಕೆ ಬೆಳ್ಮಿಂಚು ’ ಮೊದಲಾದ ಪ್ರಯೋಗಗಳು ಸಿದ್ಧಿಸುವುವು.

ಇಲ್ಲೆಲ್ಲಾ ಉತ್ಪಾತಗಳು ಅನಿಷ್ಟಾರ್ಥಕಗಳಾದುದರಿಂದ — ‘ ತಾದರ್ಥ್ಯೇ ’ ಎಂಬ ಪೂರ್ವ ಸೂತ್ರದಿಂದಲೇ ಚತುರ್ಥಿಯು ಬರುತ್ತಿರಲು ಈ ಸೂತ್ರಾರಂಭವೇ ವ್ಯರ್ಥವೆಂದು ಶಂಕೆಯುಂಟಾಗುವುದು. ಆದಾಗ್ಯೂ ಪೂರ್ವಸೂತ್ರದಲ್ಲಿ — ತಾದರ್ಥ್ಯದಲ್ಲ ಚತುರ್ಥಿಯೆಂದರೆ ಕಾರ್ಯಕಾರಣಭಾವವು ತೋರುವಾಗಲೇ ಬರುವುದು—ಅನ್ಯತ್ರ ಬರುವುದಿಲ್ಲ ಎಂದು ಹೇಳಿರುವುದರಿಂದ ಇಲ್ಲಿ ಅಂತಹ ಕಾರ್ಯಕಾರಣಭಾವವಿಲ್ಲ. ಮಂಡೂಕಶಿಖಾದಿಗಳು ‘ ಕ್ಷಾಮ ’ ಮೊದಲಾದುವಕ್ಕೆ ನಿಮಿತ್ತಗಳೇ ಆಗಲಿ, ಉಪಾದಾನವೇ ಆಗಲಿ ಸಂಭವಿಸುವುದಿಲ್ಲ. ಮತ್ತೇನೆಂದರೆ ಲೋಕದಲ್ಲಿ ಹೊಗೆ, ಬೆಂಕಿಗೆ ಹ್ಯಾಗೆ ಜ್ಞಾಪಕವೇ ಆಗಿರುವುದೋ ಹಾಗೆ ಪ್ರಕೃತದಲ್ಲಿಯೂ ಜ್ಞಾಪ್ಯ-ಜ್ಞಾಪಕಭಾವ ಸಂಬಂಧವೇ ತೋರುವುದು. ಇಲ್ಲ ಸಂಬಂಧಾರ್ಥದಲ್ಲಿ ಪ್ರಾಪ್ತವಾದ ಷಷ್ಠಿಗೆ ಅಪವಾದವಾಗಿ ಈ ಸೂತ್ರದಿಂದ ಚತುರ್ಥಿ ವಿಧಿಸಲ್ಪಡುವುದೆಂದು ತಿಳಿಯುವುದು.

ಹೀಗೆಯೇ ಸಂಸ್ಕೃತವ್ಯಾಕರಣಕಾರರು — ‘ **ಉತ್ಪಾತೇನ ಜ್ಞಾಪಿತೇಚ** ’ ಎಂಬ ಸೂತ್ರವನ್ನು ಹೇಳಿ —

ವಾತಾಯ ಕಪಿಲಾ ವಿದ್ಯುದಾತಪಾಯಾತಿಲೋಹಿನೀ
ಪೀತಾ ವರ್ಷಾಯ ವಿಜ್ಞೇಯಾ ದುರ್ಭಿಕ್ಷಾಯ ಸಿತಾ ಭವೇತ್

ಎಂದು ಮೊದಲಾದುವನ್ನೂ ಉದಾಹರಿಸಿರುವರು.

ಇಲ್ಲಿ ‘ಉತ್ಪಾತೇನ’ ಎಂದು ಹೇಳಿರುವುದರಿಂದ – ‘ಅರಸನ ಸತ್ತಿಗೆ, ಗುರುಗಳ ಕಮಂಡಲು’ ಮೊದಲಾದ ಪ್ರಯೋಗಗಳಲ್ಲ ಉತ್ಪಾತದಿಂದ ಜ್ಞಾಪ್ಯವಲ್ಲವಾದುದರಿಂದ ಬರುವುದಿಲ್ಲ. ‘ ಜ್ಞಾಪ್ಯೇ ’ ಎಂದು ಹೇಳಿರುವುದರಿಂದ ಲೋಕನಾಶಕ್ಕೆ ‘ ಕಾಕಂ ಬಿಳಿದಾದುದು ’ ಎಂಬಲ್ಲಿ ಜ್ಞಾಪ್ಯ-ಜ್ಞಾಪಕಭಾವವಿದ್ದರೂ ‘ ಕಾಕ ’ ಶಬ್ದಕ್ಕೆ ಚತುರ್ಥಿ ಬರುವುದಿಲ್ಲ.

**ಅವತಾರಿಕೆ ೨೧೯**

ಹೀಗೆಯೇ ಅರ್ಥಾಂತರದಲ್ಲಿಯೂ ಕೆಲವು ಧಾತುಪ್ರಯೋಗವಿದ್ದಾಗ ಚತುರ್ಥಿಯನ್ನು ವಿಧಿಸಲು ಹೇಳುತ್ತಾನೆ.

**ಸೂತ್ರಂ || ಬಗೆತಃ ಕರ್ಮಣಿ ವಾ ಯತೋಽವಜ್ಞಾ || ೨೧೯ ||**

**ಅರ್ಥ || ಅವುದರಿಂದ ಅವಜ್ಞೆ ಇನ್ನೊಂದಕ್ಕೆ ತಿಳಿಯಲ್ಪಡುವುದೋ ತದ್ವಾಚಕವಾದ ‘ ಬಗೆ ’ ಧಾತುನಿರೂಪಿತ ಕರ್ಮಬೋಧಕವಾದ ಲಿಂಗಕ್ಕೆ ಪರವಾಗಿ ಗೆತ್-ಪ್ರತ್ಯಯವು ವಿಕಲ್ಪವಾಗಿ ಬರುವುದು. ಇದು ಬಾರದಿದ್ದರೆ ದ್ವಿತೀಯೆ ಬರುವುದು.**

**ಉದಾಹರಣೆ ||** ಅವನನಾತಂ ತೃಣಕ್ಕೆ (ತೃಣಮಂ) ಬಗೆದಂ, ಖರಾನಂ ಸೌಮಿತ್ರಿ **ಪುಳಿತ ಕವಡೆಗೆ (ಪುಳಿತ ಕವಡೆಯಂ)** ಬಗೆದಂ, ಸೀನಾತನನೊಂದಡಕೆಗೆ **(ಒಂದಡಕೆಯಂ)**

**ಪಾಠಾಂತರ : ೧ ಖಳ**

ಬಗೆದಯ್ || ಮೊದಲಾದುವು ಇದಕ್ಕೆ ಲಕ್ಷ್ಯಗಳು. ಇಲ್ಲಿ ತೃಣಾದಿಗಳಿಗಿಂತಲೂ ನಿಕೃಷ್ಟನಾಗಿ ತಿಳಿಯುತ್ತಾನೆಂದು ಅರ್ಥವು ತೋರುವುದು.

**ವಿಚಾರ ೨೧೯**

ಈ ಸೂತ್ರದಲ್ಲಿ — 'ಬಗೆತಃ, ಕರ್ಮಣಿ, ವಾ, ಯುತಃ, ಅವಜ್ಞಾ' ಎಂದು ಐದು ಪದಗಳಿರುವುವು. ಪೂರ್ವದಿಂದ 'ಲಿಂಗಾತ್, ಗೆತ್' ಎಂದು ಅನುವರ್ತಿಸಲ್ಪಡುವುವು. 'ಬಗೆತಃ' ಎಂಬುದು ಜ್ಞಾನಾರ್ಥಕವಾದ 'ಬಗೆ' ಎಂಬ ಧಾತುವಿನ ಉಚ್ಚಾರಣಾರ್ಥಕ ತ ಕಾರದಿಂದ ಸಹಿತವಾಗಿ ನಿರ್ದಿಷ್ಟ ಷಷ್ಠ್ಯಂತಪದವು. ಇದು 'ಕರ್ಮಣಿ' ಎಂಬುವುದರಲ್ಲಿ ಅನ್ವಯಿಸಲ್ಪಡುವುದು. ಇದರಿಂದ 'ಬಗೆಧಾತ್ವರ್ಥ ಜನ್ಯ ಫಲಾಶ್ರಯ ವಸ್ತುವಿನಲ್ಲಿ' ಎಂದರ್ಥವಾಗುವುದು. ಇದನ್ನು 'ಲಿಂಗಾತ್' ಎಂಬುದಕ್ಕೆ ವಿಶೇಷ ಮಾಡಲು ತದ್ಬೋಧಕವಾದ ಲಿಂಗಕ್ಕೆ ಎಂದರ್ಥವಾಗುವುದು. 'ಯುತಃ,' ಎಂಬುದು ಪ್ರಕೃತಿವಿಶೇಷಬೋಧಕವು. ಇದು ಅವಜ್ಞೆಗೆ ಅವಧಿಯನ್ನು ಸೂಚಿಸುವುದು. 'ಅವಜ್ಞೆ' ಎಂದರೆ 'ಅನಾದರ' ಅಥವಾ 'ನಿಂದೆ' ಎಂದರ್ಥವು. ತಥಾಚ — ಆವುದರ ದೆಸೆಯಿಂದ ಇನ್ನೊಂದು ವಸ್ತುವಿಗೆ ನಿಕೃಷ್ಟತ್ವವು ತೋರುವುದೋ ತದ್ಬೋಧಕವಾದ 'ಬಗೆ' ಧಾತುವಿನ ಕರ್ಮವಾಚಕ ಲಿಂಗಕ್ಕೆ ಪರವಾಗಿ ವಿಕಲ್ಪವಾಗಿ ಗೆತ್-ಪ್ರತ್ಯಯವು ಬರುವುದು. ಇದು ವಿಕಲ್ಪವಾದುದರಿಂದ ಗೆತ್-ಪ್ರತ್ಯಯವು ಬಾರದ ಪಕ್ಷದಲ್ಲಿ ದ್ವಿತೀಯಾವಿಭಕ್ತಿಯು ಬರುವುದೆಂದು ಸೂತ್ರಾರ್ಥವಾಗಲು 'ಅವನನಾತಂ ತೃಣಕ್ಕೆ (ತೃಣಮಂ) ಬಗೆದಂ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು. ಇಲ್ಲಿ 'ಬಗೆತಃ' ಎಂದು ಹೇಳಿರುವುದರಿಂದ 'ಅವನಂ ಪುಲ್ಲಂ ತಿಳಿದಂ' ಮೊದಲಾದ ಪ್ರಯೋಗಗಳಲ್ಲಿ ಜ್ಞಾನಾರ್ಥಕ ಧಾತುವಿದ್ದರೂ 'ಬಗೆ' ಧಾತುವಿಲ್ಲವಾದುದರಿಂದ ಚತುರ್ಥಿಯಿಲ್ಲವೆಂದು ತಿಳಿಯುವುದು. 'ಕರ್ಮಣಿ' ಎಂದು ಹೇಳಿರುವುದರಿಂದ — 'ಸ್ಮರಂ ಹರನಂ ಪುಲ್ಗೆ ಬಗೆದಂ' ಮೊದಲಾದ ಪ್ರಯೋಗಗಳಲ್ಲಿ ಕರ್ತೃವಾಚಕವಾದ ಸ್ಮರಾದಿ ಶಬ್ದಗಳಿಗೆ ಬರುವುದಿಲ್ಲ. 'ಯುತಃ' ಎಂದು ಹೇಳಿರುವುದರಿಂದ — 'ರಾಮಂ ರಾವಣನನೊಂದು ಕಡ್ಡಿಗೆ ಬಗೆದಂ' ಮೊದಲಾದ ಪ್ರಯೋಗಗಳಲ್ಲಿ ರಾವಣಾದಿ ಶಬ್ದಗಳಿಗೆ ಬರುವುದಿಲ್ಲ. 'ಅವಜ್ಞಾ' ಎಂದು ಹೇಳಿರುವುದರಿಂದ — 'ಭೀಮಂ ಧರ್ಮಜನನೆಸೆವ ಹರಿಯಂ ಬಗೆದಂ' ಮೊದಲಾದ ಪ್ರಯೋಗಗಳಲ್ಲಿ ಹರಿಗಿಂತಲೂ ಅಧಿಕನನ್ನಾಗಿ ತಿಳಿಯುತ್ತಾನೆ ಎಂದು ಮೊದಲಾದ ಅರ್ಥಗಳು ತೋರುವುದರಿಂದ ಅವಜ್ಞೆಯಿಲ್ಲವೆಂದು ಚತುರ್ಥಿಯನ್ನು ಮಾಡಲಾಗದು.

ಇಲ್ಲಿ ಸಂಸ್ಕೃತವ್ಯಾಕರಣಕಾರರೂ — '**ಮನ್ಯಕರ್ಮಣ್ಯನಾದರೇ ವಿಭಾಷಾ ಪ್ರಾಣಿಷು**' ಎಂಬ ಸೂತ್ರವನ್ನು ಹೇಳಿ ಅಲ್ಲಿ ಅನಾದರಾವಧಿಯು ಪ್ರಾಣಿಯಾಗಬಾರದೆಂದು ಪ್ರಾಣಿವರ್ಜನವನ್ನು ಮಾಡಿರುವರು. ಇಲ್ಲಿ ಹಾಗೆ ಹೇಳದಿದ್ದರೂ ಪ್ರಯೋಗಗಳಿಂದ ವ್ಯವಸ್ಥೆಯನ್ನು ಮಾಡಿಕೊಳ್ಳಬೇಕು.

**|| ಇತಿ ಚತುರ್ಥೀಪ್ರಕರಣಂ ಸಮಾಪ್ತಂ ||**

## ॥ ಅಥ ಪಂಚಮೀ ಪ್ರಕರಣಂ ॥

**ಅವತಾರಿಕೆ ೨೨೦**

ಪೂರ್ವದಲ್ಲಿ ಕೆಲವು ಅರ್ಥವಿಶೇಷಗಳಲ್ಲಿ ಕೆಲವು ಲಿಂಗಗಳಿಗೆ ಪರವಾಗಿ ಚತುರ್ಥೀ ವಿಧಿಸಲ್ಪಟ್ಟಿತು. ಈಗ ಪಂಚಮಿಯನ್ನು ವಿಧಿಸಲು ಪ್ರಾರಂಭಿಸುವವನಾಗಿ ಹೇತ್ವರ್ಥದಲ್ಲಿ ಪಂಚಮಿಯನ್ನು ವಿಧಿಸುತ್ತಾನೆ.

**ಸೂತ್ರಂ ॥ ಹೇತಾವತ್ತಣಿಂ ॥ ೨೨೦ ॥**

**ಅರ್ಥ ॥ ಹೇತ್ವರ್ಥದಲ್ಲಿರುವ ಲಿಂಗಕ್ಕೆ ಪರವಾಗಿ ಅತ್ತಣಿಂ-ಪ್ರತ್ಯಯವು ಬರುವುದು.**

**ಉದಾಹರಣೆ ॥** ದಾನದತ್ತಣಿಂ ಭೋಗಂ, ಜ್ಞಾನದತ್ತಣಿಂ ಮೋಕ್ಷಂ, ಉದ್ಯೋಗದತ್ತಣಿಂ ಸಿರಿ, ಕಿಚ್ಚಿನತ್ತಣಿಂ ಪೊಗೆ ॥ ಮೊದಲಾದುವು ಇವಕ್ಕೆ ಲಕ್ಷ್ಯಗಳು.

**ವಿಚಾರ ೨೨೦**

ಈ ಸೂತ್ರದಲ್ಲಿ — ' ಹೇತೌ, ಅತ್ತಣಿಂ ' ಎಂದು ಎರಡು ಪದಗಳಿರುವುವು. ಪೂರ್ವದಿಂದ ' ಲಿಂಗಾತ್ ' ಎಂಬುದು ಅನುವರ್ತಿಸಲ್ಪಡುವುದು. ಹೇತುಪದಾರ್ಥವು ಪೂರ್ವದಲ್ಲಿಯೇ ವಿವರಿಸಲ್ಪಟ್ಟಿರುವುದು. ಈ ಅರ್ಥದಲ್ಲಿರುವ ಲಿಂಗದ ಬಳಿಯಿಂದ ಪರವಾಗಿ ಅತ್ತಣಿಂ-ಪ್ರತ್ಯಯವು ಬರುವುದೆಂದು ಸೂತ್ರಾರ್ಥವಾಗಲು ' ದಾನದತ್ತಣಿಂ ಭೋಗಂ ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು. ಇಲ್ಲಿ ' ಹೇತೌ ' ಎಂದು ಹೇಳಿರುವುದರಿಂದ ' ಮೋಕ್ಷದ ಸುಖಂ ' ಮೊದಲಾದ ಪ್ರಯೋಗಗಳಲ್ಲಿ ಸಂಬಂಧಸಾಮಾನ್ಯದಲ್ಲಿ ಪಂಚಮಿಯಿಲ್ಲವೆಂದು ತಿಳಿಯುವುದು.

**ಅವತಾರಿಕೆ ೨೨೧**

ಪೂರ್ವಸೂತ್ರದಿಂದ ಹೇತುಸಾಮಾನ್ಯದಲ್ಲಿಯೂ ಪಂಚಮಿಯನ್ನು ವಿಧಿಸಿ ಈಗ ತದ್ವಿಶೇಷದಲ್ಲಿ ವಿಧಿಸುತ್ತಾನೆ.

**ಸೂತ್ರ ॥ ಅವಧಾವಪಾಯೇ ॥ ೨೨೧ ॥**

**ಅರ್ಥ ॥** ಅಪಾಯವೆಂದರೆ ವಿಶ್ಲೇಷವು. ಇದು ವಾಸ್ತವವಾಗಿರಲಿ ಅಥವಾ ಪ್ರಾತೀತಿಕವಾಗಿರಲಿ ಈ ಉಭಯ ವಿಧವಾದ **ವಿಶ್ಲೇಷವೂ ತೋರುತ್ತಿರಲು ಆ ವಿಶ್ಲೇಷಕ್ಕೆ ಅವಧಿಭೂತವಾದುದಾವುದೋ ತದ್ವಾಚಕಲಿಂಗಕ್ಕೆ ಪರವಾಗಿ ಅತ್ತಣಿಂ-ಪ್ರತ್ಯಯವು ಬರುವುದು.**

**ಉದಾಹರಣೆ ॥** ' ಮರದತ್ತಣಿಂ ಪಣ್ ಬೀಳ್ದುದು, ಗಿರಿಯತ್ತಣಿಂ ಕಲ್ಲುರುಳ್ದುದು, ಊರತ್ತಣಿಂ ಬಂದಂ, ಪುಲಿಯತ್ತಣಿಂ ಭೀತಿ, ಪಾಪದತ್ತಣಿಂ ಪೇಸುಂ ॥' ಇವಕ್ಕೆ ಚಿತ್ತಸಂಕ್ಷೋಭಣ ಪೂರ್ವಕವಾಗಿ ಅದರಿಂದ ನಿವೃತ್ತನಾಗುವನೆಂದು ತಾತ್ಪರ್ಯವು. ' ಉಪಾಧ್ಯಾಯನತ್ತಣಿಂ ಮರಸಿಯಾದಂ, ಗುರುಗಳತ್ತಣಿಂ ಕೇಲಂಬೊಕ್ಕಂ ॥' ಇವಕ್ಕೆ ಅದೃಶ್ಯನಾಗಿ ಅವರ ಕಡೆಯಿಂದ ಹೋಗುತ್ತಾನೆಂದು ತಾತ್ಪರ್ಯವು. ' ಬೀಜದತ್ತಣಿಂದಂಕುರವಾದುದು, ಶೃಂಗದತ್ತಣಿಂ ಶರವಾದುದು ॥' ಇವಕ್ಕೆ ಅದರಿಂದ ಸ್ವರೂಪವನ್ನು ಪಡೆದು ಹೊರಗೆ ಬರುವುದೆಂದು ತಾತ್ಪರ್ಯವು. ' ಮುಗಿಲತ್ತಣಿಂ ಮಿಂಚು ಮಿಂಚಿತ್ತು ॥' ಇದಕ್ಕೆ ಅದರಿಂದ ಹೊರಟ ಬೆಳಕು ಪ್ರಕಾಶಿಸುವುದು.

ಅಥವಾ ಪ್ರಕಾಶಿಸುತ್ತಲೇ ಅದರಿಂದ ಹೊರಡುವುದು ಎಂದರ್ಥವು. 'ಪಾಪದತ್ತಣಿಂ ರಕ್ಷಿಸಿದಂ, ಬಱದತ್ತಣಿಂ ಸಲಹಿದಂ ||' ಇವಕ್ಕೆ ಅದನ್ನು ಹೋಗಲಾಡಿಸುವುದರಿಂದ ಅದರಿಂದ ಬಿಡಿಸುವನು ಎಂದರ್ಥವು. 'ಹಿಮವತ್ಪರ್ವತದತ್ತಣಿಂ ಗಂಗೆ ಪುಟ್ಟಿತ್ತು ||' ಇದಕ್ಕೆ ಅಲ್ಲಿ ಮೊದಲು ಕಂಡು ಅನಂತರದಲ್ಲಿ ಅಲ್ಲಿಂದ ಹೊರಕ್ಕೆ ಬಂದಿರುವುದೆಂದರ್ಥವು. ಇಲ್ಲಿ ಪ್ರವಾಹವು ಸಂತತವಾದುದರಿಂದ ಅಲ್ಲಿಂದ ಅತ್ಯಂತಾಪಕ್ರಮವಿಲ್ಲವೆಂದು ತಿಳಿಯಬೇಕು. 'ಅಧರ್ಮದತ್ತಣಿಂ ಪೇಸಿದಂ, ಪಾಪದತ್ತಣಿಂ ಮೋಹಿಸಿದಂ ||' ಇದಕ್ಕ ಜುಗುಪ್ಸಾದಿ ಪೂರ್ವಕವಾಗಿ ಅದರಿಂದುಂಟಾದ ಭಯದಿಂದ ನಿವೃತ್ತ ನಾಗುತ್ತಾನೆಂದು ಅರ್ಥವು. 'ಅರ್ಜುನನತ್ತಣಿಂ ವಾಸುದೇವನಧಿಕಂ, ನಕುಲನತ್ತಣಿಂ ಸಹದೇವಂ ಕಿಱಿಯಂ, ಆತನತ್ತಣಿಂದೀತಂ ಪಟು ||' ಮೊದಲಾದವುಗಳಲ್ಲೆಲ್ಲಾ ವಾಸುದೇವ ಮೊದಲಾದವರು ಅರ್ಜುನಾದಿಗಳೊಡನೆ ಆಧಿಕ್ಯಾದಿ ಧರ್ಮದಿಂದ ಸಂಸೃಷ್ಟರಾಗಿ ಅತಿಶಯಾದಿ ಧರ್ಮದಿಂದ ವಿಭಕ್ತರಾಗಿ ತೋರುವುದರಿಂದ ಇಲ್ಲಿ ಬುದ್ಧಿಕಲ್ಪಿತವಾದ ಅಪಾಯವನ್ನು ಇಟ್ಟುಕೊಂಡು ಪಂಚ ಮಿಗೆ ಉಪಪತ್ತಿಯನ್ನು ಹೇಳಬೇಕು.

**ವಿಚಾರ ೨೨೧**

ಈ ಸೂತ್ರದಲ್ಲಿ — 'ಅವಧೌ ಅಪಾಯೇ' ಎಂದು ಎರಡು ಪದಗಳಿರುವುವು. ಪೂರ್ವ ದಿಂದ 'ಲಿಂಗಾತ್, ಅತ್ತಣಿಂ' ಎಂದು ಅನುವರ್ತಿಸಲ್ಪಡುವುವು. ಇಲ್ಲಿ —'ಅವಧೌ' ಎಂಬುದು ಪ್ರಕೃತಧಾತುವಾಚ್ಯವಾದ ಕ್ರಿಯೆಗೆ ಆಶ್ರಯವಲ್ಲದೆ ಅದರಿಂದುಂಟಾದ ವಿಭಾಗಮಾತ್ರಕ್ಕೆ ಆಶ್ರಯವಾದ ವಸ್ತುವಿನಲ್ಲಿ ಎಂದರ್ಥವು. ಇದೇ ತಾತ್ಪರ್ಯದಿಂದ ಸಂಸ್ಕೃತವ್ಯಾಕರಣಕಾರರು - '**ಧ್ರುವಮಪಾಯೇಽಪಾದಾನಂ**' ಎಂಬ ಅಪಾದಾನ ಸಂಜ್ಞಾಸೂತ್ರದಲ್ಲಿ — '**ವಿಭಾಗಜನಕತತ್ ಕ್ರಿಯಾನಾಶ್ರಯತ್ವೇ ಸತಿ, ತತ್ಕ್ರಿಯಾಜನ್ಯವಿಭಾಗಾಶ್ರಯತ್ವಂ**' ಎಂದು ಹೇಳಿರುವರು. ಆದುದರಿಂದ ಅದೇ ಅರ್ಥವು ಇಲ್ಲಿಯೂ ಅಂಗೀಕರಿಸಲ್ಪಟ್ಟಿದೆ. 'ಅಪಾಯೇ' ಎಂಬುದು — ಲೋಕದಲ್ಲಿ ಪ್ರತ್ಯೂಹ, ಪ್ರಮಾದ, ಅಭಾವ' ಮೊದಲಾದ ಅನೇಕಾರ್ಥವುಳ್ಳುದಾದರೂ ಪ್ರಕೃತದಲ್ಲಿ ವಿಶ್ಲೇಷಾರ್ಥಕವು ವಿವಕ್ಷಿತವೆಂದು ತಿಳಿಯಬೇಕು. ಇಲ್ಲಿ ವಿಶ್ಲೇಷವೆಂದರೆ ವಿಭಾಗವು. ಆ ವಿಭಾಗವು ಉಂಟಾಗಬೇಕಾದರೆ ಪೂರ್ವದಲ್ಲಿ ಸಂಶ್ಲಿಷ್ಟವಾದ ವಸ್ತುವಿಗೇ ಉಂಟಾಗುವುದು. ಹೀಗಿರಲು 'ಪುಲಿಯತ್ತಣಿಂ ಭೀತಿ' ಮೊದಲಾದ ಪ್ರಯೋಗಗಳಲ್ಲಿ ವಿಭಾಗವು ಪ್ರತ್ಯಕ್ಷವಾಗಿ ತೋರುವುದಿಲ್ಲವಾದುದರಿಂದ ಅಲ್ಲಿ ಪಂಚಮಿಯು ಅನುಪಪನ್ನವಾಗುವುದೆಂದು ತಿಳಿದು ಆ ವಿಭಾಗವು ವಸ್ತುಕೃತವಾಗಿರಲಿ ಅಥವಾ ಬುದ್ಧಿಕಲ್ಪಿತವಾಗಿರಲಿ ಇವೆರಡಕ್ಕೂ ಈ ವಿಶ್ಲೇಷ ಪದದಿಂದ ಸಂಗ್ರಹಮಾಡಿರುವುದೆಂದು ತಿಳಿಯಬೇಕು. ತಥಾಚ — ಇಂತಹ ವಿಶ್ಲೇಷವು ತೋರುತ್ತಿರಲು ಅವುದು ಪೂರ್ವೋಕ್ತಲಕ್ಷಣವಾದ ಅವಧಿಯೋ ಆ ಅವಧಿವಾಚಕ ಲಿಂಗಕ್ಕೆ ಪರವಾಗಿ ಅತ್ತಣಿಂ-ಪ್ರತ್ಯಯವು ಬರುವುದೆಂದು ಸೂತ್ರಾರ್ಥವಾಗಲು 'ಮರದತ್ತಣಿಂ ಪಣ್ ಬೀೞ್ದುದು' ಮೊದಲಾದ ಪ್ರಯೋಗಗಳು ಸಿದ್ಧಿಸುವುವು. ಇಲ್ಲಿ ವಾಸ್ತವಪ್ರಾತೀತಿಕ ವಿಶ್ಲೇಷ ವಿಭಾಗಗಳನ್ನು ಬುದ್ಧಿವಂತರು ಪರಿಶೀಲಿಸಿ ತಿಳಿದುಕೊಳ್ಳುವುದು. ಇದರಿಂದ ಪ್ರಾಚೀನರು ಹೇಳಿ ರುವ ಅಪಾದಾನ ಪದಾರ್ಥವು ವಿವೃತವಾಗುವುದು. ಇಂತಹ ಅಪಾದಾನವು ಚಲವೆಂದೂ ಅಚಲ ವೆಂದೂ ಎರಡು ಬಗೆಯಾಗಿರುವುದು. ಇದೇ ತಾತ್ಪರ್ಯವನ್ನು **ಭರ್ತೃಹರಿಯು** —

ಅಪಾಯೇ ಯದುದಾಸೀನಂ ಚಲಂ ವಾ ಯದಿ ವಾಚಲಂ
ಧ್ರುವಮೇವಾತದಾವೇಶಾತ್ ತ ದಪಾದಾನಮುಚ್ಯತೇ

ಎಂಬ ಶ್ಲೋಕದಿಂದ ಸೂಚಿಸಿರುವನು. ಇವುಗಳಲ್ಲಿ ಅಚಲವಾದುದಕ್ಕೆ — 'ಮರದತ್ತಣಿಂ ಪಣ್ ಬೀಳ್ಗುದು' ಮೊದಲಾದ ಉದಾಹರಣೆಗಳು. ಇಲ್ಲ — 'ಮರ, ಗಿರಿ, ಊರು' ಮೊದಲಾದುವು. 'ಪಣ್' ಮೊದಲಾದುವಕ್ಕೆ ವಿಭಾಗವುಂಟಾಗಲು ಸ್ವಯಮವಧಿ ಭೂತಗಳಾಗಿದ್ದರೂ ಅಚಲ ಗಳಾಗಿಯೇ ಇರುವುವು. ಚಲವಾದುದಕ್ಕಾದರೋ — 'ಓಡುವ ಕುದುರೆಯತ್ತಣಿಂ ಬೀಳ್ದಂ, ಪರಿವ ಬಂಡಿಯತ್ತಣಿಂದುರುಳ್ದಂ' ಮೊದಲಾದ ಉದಾಹರಣೆಗಳನ್ನು ಊಹಿಸಿಕೊಳ್ಳಬೇಕು. ಇಲ್ಲಿ 'ಮರ' ಮೊದಲಾದುವುಗಳಲ್ಲಿ ಫಲಾದಿಗಳು ಪೂರ್ವದಲ್ಲಿದ್ದುವೇ ಅವುಗಳಿಂದ ವಿಶ್ಲಿಷ್ಟ ವಾಗಿರುವುದೆಂದು ವಿಶ್ಲೇಷವು ಪ್ರತ್ಯಕ್ಷವಾಗಿ ತೋರುವುದರಿಂದ ಇದು ವಾಸ್ತವಾಪಾಯವೆಂದು ತಿಳಿಯಬೇಕು. ಪ್ರಾತೀತಿಕೋಪಾಯವಾದರೋ — 'ಪುಲಿಯತ್ತಣಿಂಭೀತಿ' ಮೊದಲಾದ ಪ್ರಯೋಗಗಳಲ್ಲಿರುವುದು. ಇದರಿಂದ ಸರ್ವತ್ರ ಬುದ್ಧಿಕೃತಾಪಾಯವನ್ನಂಗೀಕರಿಸಿ ಪ್ರಯೋಗ ಗಳನ್ನು ಸಾಧಿಸಬಹುದಾದುದರಿಂದ ಸಂಸ್ಕೃತವ್ಯಾಕರಣಕಾರರು ಇಂತಹ ಪ್ರಯೋಗಗಳನ್ನು ಸಾಧಿಸುವುದಕ್ಕೋಸ್ಕರ ಅಂಗೀಕರಿಸಿರುವ —

**ಭೀತ್ರಾರ್ಥಾನಾಂ ಭಯಹೇತುಃ || ಪರಾಜೇರಸೋಢಃ || ಅಂತರ್ಧೌಯೇನಾದರ್ಶನಮಿಚ್ಛತಿ|| ಆಖ್ಯಾತೋಪಯೋಗೇ ||** ಜನಿಕರ್ತುಃ ಪ್ರಕೃತಿಃ || **ಭುವಃ ಪ್ರಭವಃ ಜುಗುಪ್ಸಾವಿರಾಮಪ್ರಮಾದಾ ರ್ಥಾನಾಮುಪಸಂಖ್ಯಾನಂ ||** ಮೊದಲಾದ ವಚನಗಳು ನಿರರ್ಥಕವೆಂದು ತೋರುವುದು. ಆದುದ ರಿಂದಲೆ ಪತಂಜಲಿಗಳು ಮಹಾಭಾಷ್ಯದಲ್ಲಿ ಇವನ್ನೆಲ್ಲಾ ಪ್ರತ್ಯಾಖ್ಯಾನ ಮಾಡಿರುವರು. ಇಲ್ಲಿ **ಹರಿಯು ಈ** ಅಪಾದಾನವು —

ನಿರ್ದಿಷ್ಟವಿಷಯಂ ಕಿಂಚಿದುಪಾತ್ತವಿಷಯಂ ತಥಾ
ಅಪೇಕ್ಷಿತಕ್ರಿಯಂಚೇತಿ ತ್ರಿಧಾಪಾದಾನಮಿಷ್ಯತೇ

ಎಂಬುದರಿಂದ ತ್ರಿವಿಧವಾಗಿರುವುದು ಎಂದು ಹೇಳಿರುವನು. ಇದು ಪೂರ್ವೋಕ್ತವಾದುದರಲ್ಲಿಯೆ ಅಂತರ್ಭಾವವಾಗುವುದರಿಂದ ಬೇರೆ ಹೇಳಬೇಕಾದ ಅವಶ್ಯಕವಿಲ್ಲವೆಂದು ತಿಳಿಯಬೇಕು.

ಇಲ್ಲ **ದರ್ಪಣಕಾರನು ಈ** ವಿಭಾಗಗಳನ್ನು ಹೇಳದಿದ್ದರೂ —

**ಅದು ಪಂಚಮಿಯಪ್ಪುದ**
**ಪಾದಾನಸ್ಥಲದೊಳದೆದಲೊದವು ಗುಮಾತಂ**
**ಕಾದಾನೇಪ್ಸಾನಿಷ್ಟಾ**
**ಪಾದಿಕಹೇತುವಿಸೊಳುದಯದೊಳೌ ರವದೊಳ್** (ಸೂತ್ರ ೧೩೧)

ಎಂಬ ಸೂತ್ರದಿಂದ ಸಾಮಾನ್ಯವಾಗಿ ಅಪಾದಾನದಲ್ಲಿ ಪಂಚಮಿಯನ್ನು ವಿಧಿಸಿ ಭಯಾದಿ ಕೆಲ ವರ್ಥದಲ್ಲಿಯೂ 'ವರ್ತಿಸುಗುಂ' ಎಂದು ಹೇಳಿರುವನು.

**|| ಇತಿ ಪಂಚಮೀ ಪ್ರಕರಣಂ ಸಮಾಪ್ತಂ ||**

## || ಅಥ ಸಪ್ತಮೀ ಪ್ರಕರಣಂ ||

**ಅವತಾರಿಕೆ ೨೨೨**

ಹೀಗೆ ಪಂಚಮೀವಿಭಕ್ತಿಯನ್ನು ವಿಧಿಸಿ ಲೋಕವ್ಯವಹಾರಾನುಸಾರವಾಗಿ ಷಷ್ಠೀಪ್ರತ್ಯಯ ವಿಧಿಯು ಪ್ರಸಕ್ತವಾಗಿದ್ದರೂ ಅದು ಈ ಕಾರಕ ಸಾಮಾನ್ಯಕ್ಕೆ ಅಪವಾದವಾದುದರಿಂದ ಅಪವಾದ್ಯವನ್ನು ಮೊದಲು ಹೇಳುವುದು ಉಚಿತವೆಂದು ಲೋಕವ್ಯವಹಾರ ಕ್ರಮವನ್ನುಲ್ಲಂಘಿಸಿ ಸಪ್ತಮೀವಿಭಕ್ತಿಪ್ರಕರಣವನ್ನು ಆರಂಭಿಸುವನಾಗಿ ಮೊದಲು '**ಉಪಪದವಿಭಕ್ತೇಃ ಕಾರಕ ವಿಭಕ್ತಿರ್ಬಲೀಯಸೀ**' ಎಂಬ ನ್ಯಾಯವನ್ನನುಸರಿಸಿ ಅಧಿಕರಣಕಾರಕವಿಭಕ್ತಿಯನ್ನು ಹೇಳುತ್ತಾನೆ.

**ಸೂತ್ರಂ || ಒಳಧಿಕರಣೇ || ೨೨೨ ||**

**ಅರ್ಥ || ಕ್ರಿಯಾಶ್ರಯವಾದ ಕರ್ತೃವಿಗಾಗಲಿ, ಫಲಾಶ್ರಯವಾದ ಕರ್ಮಕ್ಕಾಗಲಿ, ಅವುದಾಧಾರವೋ ಅದೇ ಅಧಿಕರಣವೆಂಬುದು 'ಅಧಿಕ್ರಿಯತೇ ಅಸ್ಮಿನ್ನಿತ್ಯಧಿಕರಣಂ' ಎಂಬ ವ್ಯುತ್ಪತ್ತಿಯಿಂದ ತೋರುವುದು. ಅಂತಹ ಅಧಿಕರಣಾರ್ಥದಲ್ಲಿರುವ ಲಿಂಗಕ್ಕೆ ಪರವಾಗಿ ಒಳ್-ಪ್ರತ್ಯಯವು ಬರುವುದು.**

**ಉದಾಹರಣೆ ||** ಪಾಸಿನೊಳ್ ಮಲಗಿದಂ, ಗದ್ದುಗೆಯೊಳ್ ಕುಳ್ಳಿರ್ದಂ; ಆಗಸದೊಳ್ ಪಕ್ಕಿ, ಮಂದಿರದೊಳ್ ತುಱುಗಳ್; ಎಳ್ಳೊಳೆಣ್ಣೆ, ಪಾಲೊಳ್ ಮಧುರಂ; ಗಂಗೆಯೊಳ್ ಘೋಷಂ, ಪೊೞೆಯೊಳ್ ಗರ್ದೆ || ಮೊದಲಾದುವು ಇವಕ್ಕೆ ಲಕ್ಷ್ಯಗಳು.

**ವಿಚಾರ ೨೨೨**

ಈ ಸೂತ್ರದಲ್ಲಿ — 'ಒಳ್, ಅಧಿಕರಣೇ' ಎಂದು ಎರಡು ಪದಗಳಿರುವುವು. ಪೂರ್ವದಿಂದ 'ಲಿಂಗಾತ್' ಎಂದು ಅನುವರ್ತಿಸಲ್ಪಡುವುದು. 'ಅಧಿಕರಣೇ' ಎಂಬುದು ಲೋಕದಲ್ಲಿ — ಕೆಲವೆಡೆಗಳಲ್ಲಿ — '**ಪರಿಚ್ಛೇದೋಽಧಿಕರಣಮಧ್ಯಾಯಃ ಸ್ಥಾನಮಿತ್ಯಪಿ**' ಎಂಬ ಕೋಶದಿಂದ ಗ್ರಂಥವಿಚ್ಛಿತ್ತಿ ವಿಶೇಷದ್ಯೋತಕವಾದ ಅಧ್ಯಾಯವಾಚಕವಾಗಿಯೂ ಕೆಲವೆಡೆಗಳಲ್ಲಿ — '**ಪ್ರಸ್ತರಶ್ಶಾಯಿಕಾಸ್ತೀರ್ಣಂ ಶಯ್ಯಾಧಿಕರಣಂ ಭದಿಃ**' ಎಂಬ ವಚನದಿಂದ 'ಹಾಸಗಲ್ಲು' ಎಂಬರ್ಥವುಳ್ಳುದಾಗಿಯೂ —

> ವಿಷಯೋ ವಿಶಯಶ್ಚೈವ ಪೂರ್ವಪಕ್ಷಸ್ತಥೋತ್ತರಂ
> ಪ್ರಯೋಜನಂ ಚ ಪಂಚೈತೇ ಪ್ರಾಂಚೋಽಧಿಕರಣಂ ವಿದುಃ

ಎಂದು ಹೇಳಿರುವುದರಿಂದ ಮೀಮಾಂಸಾಧಿಕರಣಬೋಧಕವಾಗಿಯೂ ಇರುವುದರಿಂದ ಅನೇಕಾರ್ಥಕವಾಗಿದ್ದರೂ ಪ್ರಕೃತದಲ್ಲಿ ಕರ್ತೃಕರ್ಮದ್ವಾರಾಕ್ರಿಯೆಗೆ ಆಧಾರವಾದುದಾವುದೋ ಅದೇ ಅಧಿಕರಣ ಪದಾರ್ಥವೆಂದು ತಿಳಿಯಬೇಕು. ಇಂತಹ ಅಧಿಕರಣವು — 'ಔಪಶ್ಲೇಷಿಕ, ವೈಷಯಿಕ, ವ್ಯಾಪಕ, ಸಾಮೀಪಿಕ, ಎಂದು ನಾಲ್ಕು ಬಗೆಯಾಗಿರುವುದೆಂದು ಹೇಳುತ್ತಾರೆ. ಇಂತಹ ಚತುರ್ವಿಧಾಧಿಕರಣದಲ್ಲಿರುವ ಲಿಂಗಕ್ಕೆ ಪರವಾಗಿ 'ಒಳ್' ಪ್ರತ್ಯಯವು ಬರುವುದೆಂದು ಸೂತ್ರಾರ್ಥವಾಗಲು ಕ್ರಮವಾಗಿ ನಾಲ್ಕರಲ್ಲಿ ಒಂದೊಂದಕ್ಕೆ ಎರಡೆರಡಾಗಿ — 'ಪಾಸಿನೊಳ್ ಮಲಗಿದಂ' ಮೊದಲಾದ ಉದಾಹರಣೆಗಳನ್ನು ಕೊಟ್ಟಿರುವುದೆಂದು ತಿಳಿಯಬೇಕು.

ಇಲ್ಲಿ ಸಂಸ್ಕೃತವ್ಯಾಕರಣಕಾರರು — 'ಆಧಾರತ್ವಂ ನಾಮ ಕರ್ತೃ ಕರ್ಮ ವ್ಯವಹಿತ ಕ್ರಿಯಾಶ್ರಯತ್ವಂ' ಎಂದು ಹೇಳಿರುವ ಅರ್ಥವನ್ನು **ಭರ್ತೃಹರಿಯು** —

ಕರ್ತೃಕರ್ಮವ್ಯವಹಿತಾಮಸಾಕ್ಷಾದ್ಧಾರಯತ್ ಕ್ರಿಯಾಂ
ಉಪಕುರ್ವತ್ ಕ್ರಿಯಾಸಿದ್ಧೌ ಶಾಸ್ತ್ರೇಽಧಿಕರಣಂ ಸ್ಮೃತಂ

ಎಂಬುದರಿಂದ ಸೂಚಿಸಿ ಇದು ಚತುರ್ವಿಧವೆಂದು —

ಸಾಮೀಪ್ಯಾಶ್ಲೇಷವಿಷಯೈರ್ವ್ಯಾಪ್ತ್ಯಾಧಾರಶ್ಚತುರ್ವಿಧಃ

ಎಂಬುದರಿಂದ ಹೇಳಿರುವನು. ಇಲ್ಲಿ 'ವನದಲ್ಲಿ ನದಿ' ಮೊದಲಾದುವು ಸಾಮೀಪ್ಯಸಂಬಂಧದಿಂದ ತೋರುವ ಅಧಿಕರಣಕ್ಕೂ 'ಮನೆಯಲ್ಲಿ ಇರುವನು' ಮೊದಲಾದುವು ಏಕದೇಶಸಂಬಂಧರೂಪವಾದ ಔಪಶ್ಲೇಷಿಕಾಧಿಕರಣಕ್ಕೂ 'ಮೋಕ್ಷದಲ್ಲಿ ಇಚ್ಛೆ' ಮೊದಲಾದುವು ವೈಷಯಿಕಾಧಿಕರಣಕ್ಕೂ 'ಎಳ್ಳೊಳೆಣ್ಣೆ' ಮೊದಲಾದುವು ವ್ಯಾಪ್ತ್ಯಾಧಾರರೂಪಾಧಿಕರಣಕ್ಕೂ ಉದಾಹರಣೆಗಳೆಂದು ತಿಳಿಯಬೇಕು.

ಇಲ್ಲಿ **ದರ್ಪಣಕಾರನು** —

ಧೀರರಿನಾವುದು ತಾನಾ
ಧಾರಮದಧಿಕರಣಮಲ್ಲಿ ಸಪ್ತಮಿ ತಿಳಿ ನಿ
ರ್ಧಾರಣವಿಷಯವ್ಯಾಪಕ
ಸಾರವ್ಯವಹಾರಕಾಲಸತ್ಯರ್ಥಗತಂ (ಸೂತ್ರ ೧೪೩)

ಎಂಬ ಸೂತ್ರದಿಂದ ಈ ಸೂತ್ರದಲ್ಲಿ ಹೇಳಿದ್ದಕ್ಕೂ ಮುಂದಿನದಕ್ಕೂ ಸಂಗ್ರಹವು ಬರುವಂತೆ ಹೇಳಿರುವನು.

**ಅವತಾರಿಕೆ ೨೨೩**

ಹೀಗೆ ಸಾಮಾನ್ಯವಾಗಿ ಅಧಿಕರಣಾರ್ಥದಲ್ಲಿ ಸಪ್ತಮಿಯನ್ನು ವಿಧಿಸಿ ನಿರ್ಧಾರಣಾರ್ಥದಲ್ಲಿಯೂ ಸಪ್ತಮಿಯನ್ನು ವಿಧಿಸುತ್ತಾನೆ.

**ಸೂತ್ರಂ || ಯತೋ ನಿರ್ಧಾರಣಂ || ೨೨೩ ||**

**ಅರ್ಥ || ಜಾತಿ, ಗುಣ, ಕ್ರಿಯೆ, ಕ್ವಚಿತ್ ಸಂಜ್ಞೆ ಇವುಗಳಿಂದ ಏಕಜಾತೀಯವಾದ ಒಂದು ಸಮುದಾಯದಿಂದ ಆ ಸಮುದಾಯದ ಏಕದೇಶಕ್ಕೆ ಪೃಥಕ್ಕರಣಮಾಡುವುದೇ ನಿರ್ಧಾರಣವೆಂಬುದು; ಈ ನಿರ್ಧಾರಣವು ಆವ ಸಮುದಾಯದಿಂದ ಮಾಡಲ್ಪಡುವುದೋ ಆ ಸಮುದಾಯ ಬೋಧಕವಾದ ಲಿಂಗಕ್ಕೆ ಪರವಾಗಿ ಸಪ್ತಮಿ ಬರುವುದು.**

**ಉದಾಹರಣೆ ||** 'ಮಾನವರೊಳ್ ಪುರುಷರುತ್ತಮರ್, ಪುರುಷರೊಳ್ ಕ್ಷತ್ರಿಯರ್ ಶೂರರ್' ಮೊದಲಾದುವು ಜಾತಿಯಿಂದ ಪೃಥಕ್ಕರಣ ಮಾಡಿರುವುದಕ್ಕೂ 'ತುರುಗಳೊಳ್ ಕಾರಾಕಳ್ ಪಾಲುಳ್ಳುದು, ವಸ್ತ್ರಂಗಳೊಳ್ ಬೆಳ್ಪಟ್ಟೆಯೊಳ್ಳಿತ್ತು' ಮೊದಲಾದುವು ಗುಣದಿಂದ ಪೃಥಕ್ಕರಣ ಮಾಡಿರುವುದಕ್ಕೂ 'ಅವರೊಳೋಡುವಂ ಕಾಲ್ವೇಗಿ, ಪಣ್ಗಳೊಳ್ ಬೀಳ್ವುದು ತನಿವಣ್' ಮೊದಲಾದುವು ಕ್ರಿಯೆಯಿಂದ ಪೃಥಕ್ಕರಣ ಮಾಡಿರುವುದಕ್ಕೂ 'ಅವರೊಳಾತಂ ಕಲಿ, ಇವರೊಳೀತನೆಮ್ಮಾತಂ' || ಮೊದಲಾದುವು ಸಂಜ್ಞೆಯಿಂದ ಪೃಥಕ್ಕರಣ ಮಾಡಿರುವುದಕ್ಕೂ ಉದಾಹರಣೆಗಳೆಂದು ತಿಳಿಯುವುದು.

**ವಿಚಾರ ೨೨೩**

ಈ ಸೂತ್ರದಲ್ಲಿ — 'ಯತಃ, ನಿರ್ಧಾರಣಂ' ಎಂದು ಎರಡು ಪದಗಳಿರುವುವು. ಪೂರ್ವದಿಂದ — 'ಲಿಂಗಾತ್, ಒಳ್' ಎಂಬಿವು ಅನುವರ್ತಿಸಲ್ಪಡುವುವು. 'ಯತಃ' ಎಂಬುದು ನಿರ್ಧಾರಣೆಗೆ ಅವಧಿಯಾದ ಸಮುದಾಯಬೋಧಕಪಂಚಮ್ಯಂತವಾದ ಅವ್ಯಯವು. ನಿರ್ಧಾರಣ ವೆಂಬುದನ್ನು ಲೋಕದಲ್ಲಿ ಏವಕಾರಾರ್ಥದಲ್ಲಿ ಪ್ರಚುರವಾಗಿ ಪ್ರಯೋಗಿಸುವರು. ಆದರೆ ಪ್ರಕೃತದಲ್ಲ — ಜಾತಿ-ಗುಣ-ಕ್ರಿಯಾದಿಗಳಿಂದ ಒಂದು ಸಮುದಾಯದ ಏಕದೇಶಕ್ಕೆ ಪೃಥಕ್ಕರಣ ಮಾಡುವುದೆಂದು ತಿಳಿಯಬೇಕು. ಯತ್ತಚ್ಛಬ್ದಗಳಿಗೆ ನಿತ್ಯಸಂಬಂಧವಿರುವುದರಿಂದ 'ತತಃ' ಎಂದು ಇಟ್ಟುಕೊಳ್ಳಬೇಕು. **ತಥಾಚ** — ಆವ ಸಮುದಾಯದ ದೆಸೆಯಿಂದ ಏಕದೇಶಕ್ಕೆ ಜಾತ್ಯಾದಿಗಳಿಂದ ಪೃಥಕ್ಕರಣ ಮಾಡುವೆವೊ ಆ ಸಮುದಾಯಬೋಧಕಲಿಂಗದ ದೆಸೆಯಿಂದ ಪರವಾಗಿ ಒಳ್-ಪ್ರತ್ಯಯವು ಬರುವುದು ಎಂದು ಸೂತ್ರಾರ್ಥವಾಗಲು 'ಮಾನವರೊಳ್ ಪುರುಷ ರುತ್ತಮರ್' ಮೊದಲಾದ ಪ್ರಯೋಗಗಳು ಸಿದ್ಧಿಸುವುವು.

'ಮಾನವರೊಳ್ ಪುರುಷರುತ್ತಮರ್' ಎಂಬಲ್ಲಿ ಸ್ತ್ರೀ-ಪುರುಷಸಾಧಾರಣ ಮನುಷ್ಯ ಸಮುದಾಯದಿಂದ ಪುಂಲಕ್ಷಣವಾದ ಏಕದೇಶವು ಪೃಥಕ್ಕರಿಸಲ್ಪಡುವುದು. ಅಲ್ಲಿ ಪುರುಷತ್ವವು ಜಾತಿಯು. ಹೀಗೆಯೇ 'ಪುರುಷರೊಳ್ ಕ್ಷತ್ರಿಯರ್ ಶೂರರ್' ಎಂಬಲ್ಲಿ ಬ್ರಾಹ್ಮಣಾದಿ ಸಾಧಾರಣಸಮುದಾಯದಿಂದ ಕ್ಷತ್ರಿಯ ಲಕ್ಷಣೈಕದೇಶವು ಪೃಥಕ್ಕರಿಸಲ್ಪಡುವುದು. ಇಲ್ಲಿ ಕ್ಷತ್ರಿಯತ್ವವೇ ಜಾತಿಯು. ಹೀಗೆಯೇ ಗುಣಕ್ರಿಯೋದಾಹರಣೆಗಳಲ್ಲಿಯೂ ತಿಳಿಯುವುದು. ಇಲ್ಲಿ 'ಯತಃ' ಎಂದು ಹೇಳಿರುವುದರಿಂದ ನಿರ್ಧಾರ್ಯಮಾಣ ಪುರುಷಾದಿ ಶಬ್ದಗಳಿಗೆ ಸಪ್ತಮಿ ಬರುವುದಿಲ್ಲವೆಂದು ತಿಳಿಯಬೇಕು.

ಸಂಸ್ಕೃತವ್ಯಾಕರಣಕಾರರು ಇಂತಹ ನಿರ್ಧಾರವು '**ಯಸ್ಮಾನ್ನಿರ್ಧಾರ್ಯತೇ, ಯಃ ನಿರ್ಧಾರ್ಯಮಾಣಃ, ಯಶ್ಚ ನಿರ್ಧಾರಣಹೇತುಃ, ಇತಿ ತ್ರಿತಯಸಮಭಿವ್ಯಾಹಾರ ಏವ**' ಎಂಬುದ ರಿಂದ ಸಮುದಾಯ ವಾಚಕಕ್ಕೂ ನಿರ್ಧಾರ್ಯಮಾಣ ವಸ್ತುವಾಚಕಕ್ಕೂ ನಿರ್ಧಾರಣಹೇತುವಾ ವುದೋ ತದ್ವಾಚಕಕ್ಕೂ ಪ್ರಯೋಗವಿದ್ದರೇ ಅಲ್ಲಿ ನಿರ್ಧಾರಣಾರ್ಥವು ತೋರುವುದು ಎಂದು ಹೇಳಿ ಅಲ್ಲಿ ಷಷ್ಠೀಸಪ್ತಮಿಗಳೆರಡನ್ನೂ ಹೇಳಿರುವರು. ಭಾಷೆಯಲ್ಲ ಷಷ್ಠ್ಯಂತ ಪ್ರಯೋಗಗಳು ಪ್ರಚುರವಾಗಿ ಇಲ್ಲವಾದುದರಿಂದ ಇಲ್ಲಿ ಅವನ್ನು ಹೇಳಿಲ್ಲ. ಆದರೂ '**ವ್ಯತ್ಯಯೋ ಬಹುಲಂ**' ಎಂಬ ಸೂತ್ರದಿಂದ ಕೆಲವೆಡೆ ಷಷ್ಠಿಯೂ ಬರುವುದೆಂದು ಸಾಧಿಸಬಹುದು.

**ಅವತಾರಿಕೆ ೨೨೪**

ಇನ್ನೂ ಕೆಲವು ಉಪಪದ ವಿಭಕ್ತಿಯನ್ನು ಹೇಳುತ್ತಾನೆ.

**ಸೂತ್ರಂ ॥ ಸಾಧುನಿಪುಣಾರ್ಥ್ಯೈಃ ಪೂಜ್ಯೇ ॥ ೨೨೪ ॥**

**ಅರ್ಥ ॥ 'ಸಾಧು, ನಿಪುಣ' ಎಂಬರ್ಥವುಳ್ಳ ಶಬ್ದಗಳಿಂದ ಯೋಗವಿರಲು ಪೂಜ್ಯಕವಾದ ಲಿಂಗದ ದೆಸೆಯಿಂದ ಪರವಾಗಿ ಒಳ್-ಪ್ರತ್ಯಯವು ಬರುವುದು.**

**ಉದಾಹರಣೆ ॥** ತಾಯೊಳ್ ಸಾಧು, ತಾಯೊಳೊಳ್ಳಿದಂ, ಗುರುವಿನೊಳ್ ಸಹಜಂ, ಪೂಜೆಯೊಳ್ ಜಾಣಂ, ಜಪದೊಳ್ ಚದುರಂ, ವಿದ್ಯೆಯೊಳ್ ನಿಪುಣಂ, ಚಿತ್ರದೊಳ್ ಕುಶಲಂ ॥ ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೨೨೪**

ಈ ಸೂತ್ರದಲ್ಲಿ — ' ಸಾಧುನಿಪುಣಾರ್ಥೈಃ, ಪೂಜ್ಯೇ ' ಎಂದು ಎರಡು ಪದಗಳಿರುವುವು. ಪೂರ್ವದಿಂದ ' ಲಿಂಗಾತ್, ಒಳ್ ' ಎಂದು ಅನುವರ್ತಿಸಲ್ಪಡುವುವು. ' ಸಾಧುನಿಪುಣಾರ್ಥೈಃ ' ಎಂಬುದು ' ಸಾಧು, ನಿಪುಣ ' ಎಂಬ ಶಬ್ದಗಳಿಗೆ ದ್ವಂದ್ವಸಮಾಸವನ್ನು ಮಾಡಿ ' ಅರ್ಥ ' ಶಬ್ದದೊಡನೆ ಬಹುವ್ರೀಹಿಯನ್ನಂಗೀಕರಿಸಿ ' ಅರ್ಥ ' ಶಬ್ದಕ್ಕೆ ಪ್ರತ್ಯೇಕವಾಗಿ ' ಸಾಧು, ನಿಪುಣ ' ಶಬ್ದಗಳೆರಡರಲ್ಲಿಯೂ ಸಂಬಂಧಾಭಿಪ್ರಾಯದಿಂದ ಸಹಾರ್ಥಕ ತೃತೀಯಾಂತನಿರ್ದೇಶವನ್ನು ಮಾಡಿರುವುದರಿಂದ ' ಸಾಧ್ವರ್ಥಕ ನಿಪುಣಾರ್ಥ ಶಬ್ದಗಳಿಂದ ಯೋಗವಿರಲು ' ಎಂದರ್ಥವಾಗುವುದು. ' ಪೂಜ್ಯೇ ' ಎಂಬುದು ಪೂಜಾವಿಷಯವಸ್ತುಬೋಧಕವಾದ ಅಧಿಕರಣ ಸಪ್ತಮ್ಯಂತವು. ಇದು ' ಲಿಂಗಾತ್ ' ಎಂಬುದಕ್ಕೆ ವಿಶೇಷಣವು. ತಥಾಚ—ಸಾಧುನಿಪುಣಾರ್ಥಕ ಶಬ್ದಗಳಿಂದ ಯೋಗವಿರಲು ಪೂಜಾವಿಷಯಕ ವಸ್ತುವಾಚಕ ಲಿಂಗಕ್ಕೆ ಪರವಾಗಿ ಒಳ್-ಪ್ರತ್ಯಯವು ಬರುವುದೆಂದು ಸೂತ್ರಾರ್ಥವಾಗಲು ' ತಾಯೊಳ್ ಸಾಧು ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು. ಇಲ್ಲಿ ಪುತ್ರನು ಮಾತೃ ವಿಷಯದಲ್ಲಿ ವಿನೀತನಾಗಿರುವನೆಂದು ಪುತ್ರನಿಗೆ ಪ್ರಶಂಸೆ ತೋರುವುದು. ಮಾತ್ರಾದಿಗಳಾದರೋ ಪೂಜ್ಯರು. ಪುತ್ರಾದಿಗಳು ಪೂಜಕರು. ಪೂಜ್ಯರಲ್ಲಿ ಪೂಜಕರಿಗೆ ವಿನಯವು ಶ್ಲಾಘ್ಯವಾದುದೇ. ಅಲ್ಲಿ ಪೂಜ್ಯವಾಚಕ ಲಿಂಗಕ್ಕೆ ಇದರಿಂದ ಸಪ್ತಮಿ ವಿಧಿಸಲ್ಪಡುವುದು.

ಇಲ್ಲಿ ವಿಚಾರ ಮಾಡಲು ಪುತ್ರಗತನಾದ ಸಾಧುತ್ವಾದಿಗಳಿಗೆ ಮಾತ್ರಾದಿಗಳು ವಿಷಯಭೂತರಾಗುವುದರಿಂದ ವೈಷಯಿಕಾಧಾರನಿಮಿತ್ತಕ ಸಪ್ತಮಿಯು ಬಂದು ' ತಾಯೊಳ್ ಸಾಧು ' ಮೊದಲಾದ ಪ್ರಯೋಗಗಳು ಸಿದ್ಧಿಸುತ್ತಿರಲು ಈ ಸೂತ್ರವು ವ್ಯರ್ಥವೆಂದು ತೋರುವುದು. ಆದಾಗ್ಯೂ ವಿಷಯ-ವಿಷಯೀಭಾವ ಸಂಬಂಧ ವಿವಕ್ಷೆಯನ್ನು ಮಾಡಲು ಪ್ರಾಪ್ತವಾದ ಷಷ್ಠಿಯನ್ನು ಬಾಧಿಸಿ ಸಪ್ತಮೀವಿಧಾನಾರ್ಥವಾಗಿ ಇದನ್ನು ಪ್ರಾರಂಭಿಸಿರುವುದರಿಂದ ಸಾರ್ಥಕವೆಂದು ತಿಳಿಯಬೇಕು. ಇಲ್ಲಿ ' ಸಾಧುನಿಪುಣಾರ್ಥೈಃ ' ಎಂದು ಹೇಳಿರುವುದರಿಂದ — ' ತಂದೆಯ ಧನಂ, ತಾಯ ಮೊಲೆಯನುಂಡಂ ' ಮೊದಲಾದ ಪ್ರಯೋಗಗಳಲ್ಲಿ ಸಾಧುನಿಪುಣಾರ್ಥಕ ಶಬ್ದಯೋಗವಿಲ್ಲದ್ದರಿಂದ ಸಪ್ತಮಿಯಿಲ್ಲ. ' ಪೂಜ್ಯೇ ' ಎಂದು ಹೇಳಿರುವುದರಿಂದ ' ಕಳವಿನ ಜಾಣಂ ' ಮೊದಲಾದ ಪ್ರಯೋಗಗಳಲ್ಲಿ ಸಾಧುನಿಪುಣಾರ್ಥಕ ಶಬ್ದಗಳಿದ್ದರೂ ಪೂಜ್ಯವಾಚಕವಿಲ್ಲದಿರುವುದರಿಂದ ಸಪ್ತಮಿಯಿಲ್ಲವೆಂದು ತಿಳಿಯುವುದು.

**|| ಇತಿ ಸಪ್ತಮೀವಿಭಕ್ತಿಪ್ರಕರಣಂ ಸಮಾಪ್ತಂ ||**

## ॥ ಅಥ ಷಷ್ಠೀವಿಭಕ್ತಿ ಪ್ರಕರಣಂ ॥

**ಅವತಾರಿಕೆ ೨೨೫**

ಇದುವರೆಗೂ ಕರ್ತ್ರಾದಿಷಟ್ಕಾರಕಗಳಲ್ಲಿಯೂ ತತ್ತದ್ವಿಭಕ್ತಿಗಳನ್ನು ವಿಧಿಸಿ, ಈಗ ಆ ಕರ್ತ್ರಾದಿಕಾರಕರೂಪಸಂಬಂಧವಿಶೇಷವಿವಕ್ಷೆಯಿಲ್ಲದೆ ಸಂಬಂಧಸಾಮಾನ್ಯವಿವಕ್ಷೆ ಮಾಡಲು ಷಷ್ಠಿ ಬರುವುದೆಂದು ಷಷ್ಠೀವಿಧಾಯಕ ಸೂತ್ರವನ್ನು ಹೇಳುತ್ತಾನೆ.

**ಸೂತ್ರಂ ॥ ಯೋಗೇಽದ್ ॥ ೨೨೫ ॥**

**ಅರ್ಥ ॥ ಯೋಗವೆಂದರೆ ಸಂಬಂಧವು; ಅದು ಅನೇಕ ತೆರವಾಗಿರುವುದು. ಆ ಸಂಬಂಧವನ್ನು ವಿವಕ್ಷೆಮಾಡಲು ಲಿಂಗಕ್ಕೆ ಪರವಾಗಿ ಅದ್-ಪ್ರತ್ಯಯವು ಬರುವುದು.**

**ಉದಾಹರಣೆ** ॥ ಅರಲ ಕಂಪು, ಕಣ್ಣ ಬೆಳ್ಪು, ಊರೊಡೆಯಂ, ಮರದ ಕೊಂಬು ॥ ಮೊದಲಾದ ಕ್ರಿಯಾನ್ವಯರೂಪಕಾರಕವಲ್ಲದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೨೨೫**

ಈ ಸೂತ್ರದಲ್ಲಿ — ' ಯೋಗೇ, ಅದ್ ' ಎಂದು ಎರಡು ಪದಗಳಿರುವುವು. ಪೂರ್ವದಿಂದ ' ಲಿಂಗಾತ್ ' ಎಂಬುದು ಬರುವುದು. ' ಯೋಗೇ ' ಎಂಬುದು ವಿಷಯಸಪ್ತಮ್ಯಂತವು. ಯೋಗವೆಂದರೆ — ಸಂಬಂಧಾರ್ಥಕ ' ಯುಜ ' ಧಾತುವಿನಿಂದ ನಿಷ್ಪನ್ನವಾದುದರಿಂದ ಸಂಬಂಧವೆಂದರ್ಥವಾಗುವುದು. ಆ ಸಂಬಂಧವು — ' ಅವಯವಾವಯವಿಭಾವಲಕ್ಷಣ, ಗುಣಗುಣಿಭಾವಲಕ್ಷಣ, ಜ್ಞಾಪ್ಯಜ್ಞಾಪಕಭಾವಲಕ್ಷಣ, ಕಾರ್ಯಕಾರಣಭಾವಲಕ್ಷಣ, ಸ್ವಸ್ವಾಮಿಭಾವಲಕ್ಷಣ ' ಮೊದಲಾದ ಅನೇಕ ವಿಧವಾಗಿರುವುದು. ಇಂತಹ ಸಂಬಂಧವನ್ನು ವಕ್ತೃತಾತ್ಪರ್ಯವಿದ್ದಂತೆ ಹೇಳಬೇಕಾಗಿರುವುದರಿಂದ ಇಲ್ಲಿ ' ವಿವಕ್ಷಿತೇ ' ಎಂದು ಹೇಳಲ್ಪಡುವುದು. ತಥಾಚ — ಸಂಬಂಧವು ವಿವಕ್ಷಿತವಾಗಿರಲು ಲಿಂಗಕ್ಕೆ ಪರವಾಗಿ ಷಷ್ಠಿ ಬರುವುದೆಂದು ಸೂತ್ರಾರ್ಥವಾಗುವುದು. ಲೋಕದಲ್ಲಿ ಸಂಬಂಧವಿಲ್ಲದ ವಿಧಿಯೇ ಇಲ್ಲವಾದುದರಿಂದ ಸಂಬಂಧವು ಸಾರ್ವತ್ರಿಕವೆಂದು ತಿಳಿಯಬೇಕು. ಅಲ್ಲಿ – ಕ್ರಿಯಾವ್ಯಾಪ್ಯತ್ವವನ್ನು ವಿವಕ್ಷಿಸಲು ದ್ವಿತೀಯೆಯೂ ಸಾಧಕತಮತ್ವಾದಿಯನ್ನು ವಿವಕ್ಷಿಸಲು ತೃತೀಯೆಯೂ, ಸಂಪ್ರದಾನತ್ವಾದಿಯನ್ನು ವಿವಕ್ಷಿಸಲು ಚತುರ್ಥಿಯೂ ಅಪಾದಾನತ್ವಾದಿಯನ್ನು ವಿವಕ್ಷಿಸಲು ಪಂಚಮಿಯೂ ಅಧಿಕರಣತ್ವಾದಿಯನ್ನು ವಿವಕ್ಷಿಸಲು ಸಪ್ತಮಿಯೂ ಇದಕ್ಕೆ ಅಪವಾದವಾಗಿ ವಿಧಿಸಲ್ಪಟ್ಟಿರುವುದರಿಂದ ಆ ಸಂಬಂಧಗಳನ್ನು ಬಿಟ್ಟು ಸಾಮಾನ್ಯವಾಗಿ ಸಂಬಂಧಮಾತ್ರವಿವಕ್ಷೆಯನ್ನು ಮಾಡಿದಾಗಲೇ ಈ ಷಷ್ಠೀವಿಭಕ್ತಿಯು ಬರುವುದೆಂದು ತಿಳಿಯುವುದರಿಂದ— ' ಅಲರ ಕಂಪು ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು.

ಆದರೆ — ಈ ಸೂತ್ರವು ಪೂರ್ವೋಕ್ತ ರೀತಿಯಿಂದ ಕರ್ತ್ರಾದಿವಿಶೇಷವಿನಿರ್ಮುಕ್ತ ವಿಷಯಕವೆಂಬುದಿರಲಿ, ಆದಾಗ್ಯೂ ಸಂಬಂಧವೆಂಬುದು ಉಭಯನಿಷ್ಠವಾದುದರಿಂದ — ' ಮರದ ಕೊಂಬು ' ಮೊದಲಾದ ಪ್ರಯೋಗಗಳಲ್ಲಿ ಎರಡಕ್ಕೂ ಷಷ್ಠಿ ಪ್ರಸಕ್ತವಾಗುವುದೆಂದು ಶಂಕೆಯುಂಟಾಗಲು — ' ಕೊಂಬು, ಕಂಪು ' ಮೊದಲಾದ ಶಬ್ದಗಳಿಂದ ಅವಯವವಾಗಲಿ, ಗುಣವಾಗಲಿ ತೋರುವುದು. ಅದರಿಂದ ಅವು ಆವುದರ ಸಂಬಂಧಿಯೆಂದು ಅವಯವಿಗೆ ಆಗಲಿ,

ಗುಣಿಗಾಗಲಿ ಆಕಾಂಕ್ಷೆಯನ್ನುಂಟುಮಾಡುವುದರಿಂದ ಆವಯವಿ-ಗುಣಿವಾಚಕ ಶಬ್ದಗಳಾವುವೋ ಅವುಗಳ ದೆಸೆಯಿಂದಲೇ ಷಷ್ಠಿ ಬರುವುದೆಂದು ತಿಳಿಯಬೇಕು. ಇದೇ ಅರ್ಥವನ್ನು ಪ್ರಾಚೀನರು--

ಭೇದ್ಯಭೇದಕಯೋಃ ಶ್ಲಿಷ್ಟಿಃ ಸಂಬಂಧೋಽನ್ಯೋನ್ಯಮಿಷ್ಯತೇ
ದ್ವಿಷ್ಠೋ ಯದ್ಯಪಿ ಸಂಬಂಧಃ ಷಷ್ಠ್ಯುತ್ಪತ್ತಿಸ್ತು ಭೇದಕಾತ್

ಎಂಬ ಶ್ಲೋಕದಿಂದ ಸೂಚಿಸಿರುವರು.

ಸಂಸ್ಕೃತವ್ಯಾಕರಣಕಾರರೂ—"**ಷಷ್ಠ್ಯಾಃ ಸಂಬಂಧಸಾಮಾನ್ಯಮರ್ಥಃ, ಇತಿ 'ಶೇಷೇ ಷಷ್ಠೀ' ಇತಿ ಸೂತ್ರೇಣ ಜ್ಞಾಯತೇ**" ಎಂದು ಹೇಳಿರುವರು. ಇಲ್ಲಿ - ಶೇಷವೆಂದರೆ ಕ್ರಿಯಾಕಾರಕ ಭಾವಕ್ಕಿಂತಲೂ ಬೇರೆಯಾದುದೆಂದು ತಿಳಿಯಬೇಕು. ಇದೇ ಸಂಬಂಧಸಾಮಾನ್ಯವೆಂಬುದು. ಈ ಸಂಬಂಧವೂ ಕ್ರಿಯಾಮೂಲಕವೇ ಎಂದು **ಹರಿಯು** –

ಸಂಬಂಧಃ ಕಾರಕೇಭ್ಯೋಽನ್ಯಃ ಕ್ರಿಯಾಕಾರಕಪೂರ್ವಕಃ
ಅಶ್ರುತಾಯಾಂ ಶ್ರುತಾಯಾಂ ವಾ ಕ್ರಿಯಾಯಾಮಭಿಧೀಯತೇ

ಎಂಬುದರಿಂದ ಸೂಚಿಸಿ ಆ ಸಂಬಂಧವು ದ್ವಿಷ್ಠವಾಗಿದ್ದರೂ ಗುಣೀಭೂತಸಂಬಂಧವುಳ್ಳ ವಸ್ತುವಾಚಕಕ್ಕೇ ಷಷ್ಠಿ ಬರುವುದು ಎಂದು —

ದ್ವಿಷ್ಠೋಽಪ್ಯಸೌ ಪರಾರ್ಥತ್ವಾದ್ ಗುಣೇಷು ವ್ಯತಿರಿಚ್ಯತೇ
ತತ್ರಾಭಿಧೀಯಮಾನಶ್ಚ ಪ್ರಧಾನೇಽಪ್ಯುಪಚರ್ಯತೇ

ಎಂಬುದರಿಂದ ಸ್ಪಷ್ಟವಾಗಿ ವಿವರಿಸಿರುವನು.

ಇಲ್ಲಿ **ದರ್ಪಣಕಾರನು** ಈ ವಿವರಣೆಯನ್ನು ಮಾಡದಿದ್ದರೂ ಕೆಲವು ಸಂಬಂಧಗಳನ್ನು ಮಾತ್ರ ನಿರ್ದೇಶಿಸಿ ಆ ಸಂಬಂಧಗಳಲ್ಲಿ ಷಷ್ಠಿಯನ್ನು ಮಾಡಬೇಕೆಂದು —

ಪತಿ ಕುಲ ಜಾತ್ಯವಯವವಿ
ಶ್ರುತಲಕ್ಷಣ ಸಂವಿಧಾನ ಸಂಸ್ಪರ್ಶ ಸಮೂ
ಗತಸಂಬಂಧದೊಳಂ ತ
ದ್ಗತಸಂಬಂಧದೊಳಮುಂಟು ಷಷ್ಠಿಗೆ ಯೋಗಂ (ಸೂತ್ರ ೧೩೨)

ಎಂದು ಹೇಳಿರುವನು.

**ಅವತಾರಿಕೆ ೨೨೬**

ಪೂರ್ವದಲ್ಲಿ ಕರ್ತ್ರಾದಿ ಷಟ್ಕಾರಕ ರೂಪಸಂಬಂಧ ವಿಶೇಷಾತಿರಿಕ್ತಸಂಬಂಧಸಾಮಾನ್ಯ ದಲ್ಲಿ ಷಷ್ಠೀವಿಭಕ್ತಿ ವಿಧಿಸಲ್ಪಟ್ಟಿತು. ಈಗ ಪೂರ್ವೋಕ್ತ ಕರ್ತೃ, ಕರ್ಮ, ಕಾರಕರೂಪ ಸಂಬಂಧವಿಶೇಷದಲ್ಲಿಯೂ ಷಷ್ಠಿಯನ್ನು ವಿಧಿಸುತ್ತಾನೆ.

**ಸೂತ್ರಂ ॥ ಕರ್ತೃಕರ್ಮಣೋಃ ಕೃತಿ ಭಾವೇ ॥ ೨೨೬ ॥**

**ಅರ್ಥ ॥ ಭಾವಾರ್ಥದಲ್ಲಿ ವಿಹಿತವಾದ ಕೃತ್-ಪ್ರತ್ಯಯವಾವುದೋ ತದಂತಶಬ್ದಕ್ಕೆ ಪ್ರಯೋಗ ವಿರಲು ಆ ಕೃದಂತಾರ್ಥನಿರೂಪಿತ ಕರ್ತೃ-ಕರ್ಮ ರೂಪಾರ್ಥದಲ್ಲಿರುವ ಲಿಂಗಕ್ಕೆ ಪರವಾಗಿ ಅದ್-ಪ್ರತ್ಯಯವು ಬರುವುದು.**

**ಉದಾಹರಣೆ ||** ದೇವದತ್ತನ ಘಟದ ಮಾಟಕ್ಕೆ, ದೇವದತ್ತನ ಇರವು, ಯಜ್ಞದತ್ತನ ನಿದ್ರೆ || ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೨೨೬**

ಈ ಸೂತ್ರದಲ್ಲಿ — 'ಕರ್ತೃಕರ್ಮಣೋಃ, ಕೃತಿ, ಭಾವೇ' ಎಂದು ಮೂರು ಪದಗಳಿರುವುವು. ಪೂರ್ವದಿಂದ 'ಲಿಂಗಾತ್, ಅದ್' ಎಂದು ಅನುವರ್ತಿಸಲ್ಪಡುವುವು. 'ಕರ್ತೃಕರ್ಮಣೋಃ' ಎಂಬುದು ಪೂರ್ವೋಕ್ತ ಕ್ರಿಯಾಶ್ರಯ ಫಲಾಶ್ರಯ ರೂಪಲಕ್ಷಣಲಕ್ಷಿತ ಕರ್ತೃಕರ್ಮವಾಚಕ ಶಬ್ದಗಳಿಗೆ ದ್ವಂದ್ವಸಮಾಸವನ್ನು ಮಾಡಿ ಸಪ್ತಮ್ಯಂತವಾಗಿ ನಿರ್ದಿಷ್ಟವಾದ ಪದವು. ಇದು ಅನುವೃತ್ತವಾದ 'ಲಿಂಗಾತ್' ಎಂಬುದಕ್ಕೆ ವಿಶೇಷಣವು. 'ಕೃತಿ' ಎಂಬುದು '**ಅಚ್ ಕರ್ತೃಕರ್ಮಣೋಃ || ೫೪೩ ||**' ಎಂದು ಮೊದಲಾದ ಸೂತ್ರಗಳಿಂದ ಧಾತುಗಳ ಮೇಲೆ ವಿಹಿತವಾದ ಪ್ರತ್ಯಯಬೋಧಕ 'ಕೃತ್' ಎಂಬುದರ ಸಪ್ತಮ್ಯಂತನಿರ್ದೇಶವು. ಇದು ತದಂತ ಬೋಧಕವಾಗುವುದು. ಇದಕ್ಕೆ 'ಭಾವೇ' ಎಂಬುದು ವಿಶೇಷಣವು. 'ಭಾವ'ವೆಂದರೆ — '**ಧಾತ್ವರ್ಥಃ ಕೇವಲಃ ಶುದ್ಧೋ ಭಾವ ಇತ್ಯಭಿಧೀಯತೇ**' ಎಂಬ ವಚನದಿಂದ ಕಾಲಕಾರಕಾದ್ಯನಾಶ್ಲಿಷ್ಟವಾದ ಕೇವಲ ಧಾತ್ವರ್ಥವಾಗುವುದು. ತಥಾಚ — ಇಂತಹ ಭಾವಾರ್ಥದಲ್ಲಿ ವಿಹಿತವಾದ ಕೃತ್ತಾವುದೋ ತದಂತವು ಇರಲು ತನ್ನಿರೂಪಿತ ಕರ್ತೃಕರ್ಮವಾಚಕ ಲಿಂಗಕ್ಕೆ ಪರವಾಗಿ ಷಷ್ಠಿ ಬರುವುದೆಂದು ಸೂತ್ರಾರ್ಥವಾಗಲು 'ದೇವದತ್ತನ ಘಟದ ಮಾಟಕ್ಕೆ' ಮೊದಲಾದ ಭಾವ ಕೃದಂತಗಳುಳ್ಳ ಪ್ರಯೋಗಗಳಲ್ಲಿ ಪೂರ್ವೋಕ್ತ ಕರ್ತೃ-ಕರ್ಮ-ವಿಭಕ್ತಿಗಳನ್ನು ಬಾಧಿಸಿ ಷಷ್ಠಿ ಬರುವುದೆಂದು ತಿಳಿಯಬೇಕು. ಇಲ್ಲಿ 'ಕರ್ತೃಕರ್ಮಣೋಃ' ಎಂದು ಹೇಳಿರುವುದರಿಂದ — 'ಮನೆಯೊಳಿರವು, ಪೊಲದೊಳಿರ್ಕೆ' ಮೊದಲಾದ ಪ್ರಯೋಗಗಳಲ್ಲಿ ಅಧಿಕರಣಾದಿ ಕಾರಕಗಳಲ್ಲಿ ಷಷ್ಠಿಯಿಲ್ಲ. 'ಕೃತಿ' ಎಂದು ಹೇಳಿರುವುದರಿಂದ ತದ್ಧಿತದಲ್ಲಿ ಬರುವುದಿಲ್ಲ. 'ಭಾವೇ' ಎಂದು ಹೇಳಿರುವುದರಿಂದ — 'ದೇವದತ್ತನಿಂ ಮಾಡಲ್ಪಟ್ಟುದು, ದೇವದತ್ತಂ ಘಟಮಂ ಮಾಡಿದಂ' ಮೊದಲಾದ ಕರ್ಮ, ಕರ್ತೃ ಪ್ರತ್ಯಯಾಂತಗಳ ಯೋಗವಿದ್ದಲ್ಲಿ ಬರುವುದಿಲ್ಲ.

ಇಲ್ಲಿ— ವೈಯಾಕರಣರು 'ಭಾವ'ವೆಂಬುದನ್ನು—'ಶಬ್ದಪ್ರವೃತ್ತಿನಿಮಿತ್ತಲಕ್ಷಣ, ಧಾತ್ವರ್ಥಲಕ್ಷಣ' ಎಂದು ಎರಡು ಬಗೆಯಾಗಿ ವ್ಯವಹರಿಸುವರು. ಅವುಗಳಲ್ಲಿ ಶಬ್ದಪ್ರವೃತ್ತಿನಿಮಿತ್ತಲಕ್ಷಣವಾದುದು ತದ್ಧಿತಪ್ರತ್ಯಯವಾಚ್ಯವೆಂದೂ ಧಾತ್ವರ್ಥಲಕ್ಷಣವಾದುದು ಕೃದ್ವಾಚ್ಯವೆಂದೂ ತಿಳಿಯಬೇಕು. ಇವರಲ್ಲಿ — 'ಶಬ್ದಪ್ರವೃತ್ತಿನಿಮಿತ್ತಲಕ್ಷಣಭಾವವು ತದ್ಧಿತವಾಚ್ಯವು' ಎಂಬುದು ಸಂಸ್ಕೃತದಲ್ಲಿಯೂ ಭಾಷೆಯಲ್ಲಿಯೂ ಸಮಾನವಾಗಿಯೇ ಇರುವುದು. ಆದರೆ — ಸಂಸ್ಕೃತದಲ್ಲಿ 'ತ್ವ, ತಲ್' ಮೊದಲಾದ ಪ್ರತ್ಯಯಗಳಿಂದಲೂ ಭಾಷೆಯಲ್ಲಿ 'ತನ್' ಆದಿ ಪ್ರತ್ಯಯಗಳಿಂದಲೂ ವಾಚ್ಯವೆಂದು ತಿಳಿಯಬೇಕು. ಧಾತ್ವರ್ಥಲಕ್ಷಣಭಾವವಾದರೋ ಸಂಸ್ಕೃತದಲ್ಲಿ '**ಆಖ್ಯಾತ ಪ್ರತ್ಯಯಾಃ ಸಕರ್ಮಕಾತ್ ಕರ್ಮಣಿ,ಅಕರ್ಮಕಾತ್ ಭಾವೇ, ಸರ್ವಸ್ಮಾತ್ ಕರ್ತರಿ ಭವಂತಿ, ಕೃತ್ ಪ್ರತ್ಯಯಾಸ್ತು ಸರ್ವೇಷ್ವಪಿ ಕಾರಕೇಷು ಭಾವೇ ಚ ಭವಂತಿ**'ಎಂದು ಹೇಳಿರುವುದರಿಂದ ಆಖ್ಯಾತವಾಚ್ಯವಾಗಿಯೂ ಕೃದ್ವಾಚ್ಯವಾಗಿಯೂ ಆಗುವುದು. ಭಾಷೆಯಲ್ಲಾದರೋ—ಆಖ್ಯಾತ ಪ್ರತ್ಯಯಗಳು

ಕರ್ತೃಕರ್ಮರೂಪಾರ್ಥದ್ವಯದಲ್ಲಿಯೇ ಬರುವುವು. ಕೃತ್ತುಗಳು ಭಾವಾರ್ಥದಲ್ಲಿಯೂ ಕರ್ತ್ರರ್ಥದಲ್ಲಿಯೂ ಬರುವುವು. ಆದುದರಿಂದ ಧಾತ್ವರ್ಥಲಕ್ಷಣಭಾವವು ಕೃದ್ವಾಚ್ಯವೇ ಅಲ್ಲದೇ ಆಖ್ಯಾತವಾಚ್ಯವಾಗುವುದೇ ಇಲ್ಲ. ಉಕ್ತಲಕ್ಷಣಭಾವದಲ್ಲಿ ತದ್ಧಿತಕ್ಕೆ ವಿಧಾನವೇ ಇಲ್ಲವಾದುದರಿಂದ ಈ ಕರ್ತೃಕರ್ಮಾರ್ಥಕ ಷಷ್ಠಿಗೆ ತದ್ಧಿತದಲ್ಲಿ ವ್ಯಾವರ್ತ್ಯತ್ವವೇ ಇಲ್ಲ. ಆದುದರಿಂದ ಸೂತ್ರದಲ್ಲಿ ಕೃತ್-ಗ್ರಹಣವು ವ್ಯರ್ಥವೆಂದು ತೋರುವುದು. ಆದಾಗ್ಯೂ ಈ ಸೂತ್ರದಲ್ಲಿ ಭಾವಪದದಿಂದ ಧಾತ್ವರ್ಥಲಕ್ಷಣವಾದುದನ್ನೇ ಗ್ರಹಿಸಬೇಕು. ಪ್ರವೃತ್ತಿನಿಮಿತ್ತಲಕ್ಷಣವನ್ನು ಗ್ರಹಿಸಬಾರದು ಎಂಬರ್ಥವನ್ನು ಸೂಚಿಸುವುದರಿಂದ ಕೃತ್-ಗ್ರಹಣವು ಸಾರ್ಥಕವೆಂದು ತಿಳಿಯಬೇಕು.

|| ಇತಿ ಷಷ್ಠೀವಿಭಕ್ತಿ ಪ್ರಕರಣಂ ಸಮಾಪ್ತಂ ||

## ॥ ಅಥ ಪ್ರಥಮಾವಿಭಕ್ತಿ ಪ್ರಕರಣಂ ॥

**ಅವತಾರಿಕೆ ೨೨೭**

ಹೀಗೆ ಕರ್ತೃಕರ್ಮಾದಿಕಾರಕಗಳು ತಿಙಾದಿಗಳಿಂದ ಅನುಕ್ತವಾಗಿರಲು ದ್ವಿತೀಯಾದಿ ವಿಭಕ್ತಿಗಳನ್ನು ವಿಧಿಸಿ ಕಾರಕಾತಿರಿಕ್ತ ಸಂಬಂಧ ಸಾಮಾನ್ಯದಲ್ಲಿ ಷಷ್ಠಿಯನ್ನು ವಿಧಿಸಿ ಕೆಲವೆಡೆಗಳಲ್ಲಿ ಪೂರ್ವೋಕ್ತ ಕರ್ತೃಕರ್ಮಾರ್ಥಕ ತೃತೀಯಾದ್ವಿತೀಯೆಗಳಿಗೆ ಬಾಧಕವಾಗಿಯೂ ಷಷ್ಠಿಯನ್ನು ವಿಧಿಸಿ, ಈಗ ಆ ಷಟ್ಕಾರಕಗಳಲ್ಲಿ ಕರ್ತೃಕರ್ಮಕಾರಕಗಳು ತಿಙಾದಿಗಳಿಂದ ಯಥಾಸಂಭವವಾಗಿ ಉಕ್ತವಾಗಲು ಪ್ರಥಮಾವಿಭಕ್ತಿಯನ್ನು ವಿಧಿಸುತ್ತಾನೆ.

**ಸೂತ್ರಂ ॥ ಮುಕ್ತೇ ॥ ೨೨೭ ॥**

**ಅರ್ಥ ॥ ತಿಙಾದಿಗಳಿಂದ ಕರ್ತೃಕರ್ಮರೂಪಕಾರಕವು ಉಕ್ತವಾಗಲು ಆ ಕರ್ತೃಕರ್ಮ ಬೋಧಕ ಲಿಂಗಕ್ಕೆ ಪರವಾಗಿ ' ಮ್ ' ಎಂಬ ಪ್ರತ್ಯಯವು ಬರುವುದು.**

**ಉದಾಹರಣೆ ॥** ದೇವದತ್ತನಿರ್ದ್ದಪಂ, ಯಜ್ಞದತ್ತಂ ಪೋದಪಂ ॥ ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೨೨೭**

ಈ ಸೂತ್ರದಲ್ಲಿ — ' ಮ್, ಉಕ್ತೇ ' ಎಂದು ಎರಡು ಪದಗಳಿರುವುವು. ಪೂರ್ವದಿಂದ ' ಲಿಂಗಾತ್ ' ಎಂದು ಅನುವರ್ತಿಸಲ್ಪಡುವುದು. 'ಮ್' ಎಂಬುದು ಮಕಾರಾತ್ಮಕ ಸುಪ್-ವಿಭಕ್ತಿ ಬೋಧಕವು. ಇದೇ ಪ್ರಥಮಾವಿಭಕ್ತಿಯೆಂಬ ವ್ಯವಹಾರಕ್ಕೆ ವಿಷಯವಾದುದು. ' ಉಕ್ತೇ ' ಎಂಬುದು ಕಾರಕಪ್ರಕರಣದಿಂದ ಲಬ್ಧವಾದ ಕಾರಕೇ ಎಂಬುದಕ್ಕೆ ವಿಶೇಷಣವು. 'ಉಕ್ತ'ವೆಂದರೆ— ' ಅಭಿಹಿತ ' ಎಂದು ಅರ್ಥವು. ಆವ ಕಾರಕದಲ್ಲಿ ಧಾತುವಿಗೆ ಪ್ರತ್ಯಯವು ವಿಹಿತವಾಗಿರುವುದೋ ಅದು ' ಉಕ್ತ 'ವು. ಉಳಿದುದೆಲ್ಲಾ ' ಅನುಕ್ತ ' ವೆಂದು ಹೇಳಲ್ಪಡುವುದು. ' ಉಕ್ತಿ ' ಎಂಬುದು ವಕ್ತೃವಿಲ್ಲದೆ ಸಂಭವಿಸುವುದಿಲ್ಲ. ಆ ವಕ್ತೃ ಎಂಬುದು ಪ್ರತ್ಯಾಸತ್ತಿನ್ಯಾಯದಿಂದ ಅಲ್ಲಿ ವಿಹಿತವಾದ ಪ್ರತ್ಯಯವೆಂದೇ ತಿಳಿಯಬೇಕು. ಆ ಪ್ರತ್ಯಯವು ಪ್ರಕೃತದಲ್ಲಿ ತಿಙ್-ಕೃತ್ತುಗಳೆರಡರಲ್ಲಿ ಅನ್ಯತರವಾಗಿರುವುದು. ಸಂಸ್ಕೃತದಲ್ಲಿ — ತಿಙ್-ಕೃತ್-ತದ್ಧಿತ-ಸಮಾಸಗಳನ್ನೂ ಕ್ವಚಿತ್ ನಿಪಾತಗಳನ್ನೂ ಕರ್ತೃಕರ್ಮಾದಿಗಳಿಗೆ ಅಭಿಧಾಯಕಗಳನ್ನಾಗಿ ಹೇಳಿರುವರು. ಭಾಷೆಯಲ್ಲಿ ತದ್ಧಿತ-ಸಮಾಸಗಳಿಂದ ಅಭಿಧಾನವು ಸಂಭವಿಸುವುದಿಲ್ಲವಾದರೂ ಕ್ವಚಿತ್ ನಿಪಾತದಿಂದ ಅಭಿಧಾನವನ್ನು ಕಲ್ಪಿಸಬಹುದು. ಆದಾಗ್ಯೂ ಅಂತಹ ಪ್ರಯೋಗಗಳು ಭಾಷೆಯಲ್ಲಿ ವಿರಳವಾದುದರಿಂದ ತಿಙ್-ಕೃತ್ತುಗಳೆರಡೇ ಇಲ್ಲಿ ಹೇಳಲ್ಪಟ್ಟಿವೆ. ಅವುಗಳಲ್ಲಿಯೂ ಸಂಸ್ಕೃತದಲ್ಲಿ ತಿಙ್-ಪ್ರತ್ಯಯಗಳು ಕರ್ತೃಕರ್ಮಕಾರಕಗಳೆರಡರಲ್ಲಿ ವಿಧಿಸಿದ್ದರೂ ಕೃತ್ತುಗಳು ಷಟ್ಕಾರಕಗಳಲ್ಲಿಯೂ ಯಥಾಸಂಭವವಾಗಿ ವಿಧಿಸುವುದರಿಂದ ಕಾರಕಸಾಮಾನ್ಯವೂ ಉಕ್ತವಾಗಲು ಪ್ರಥಮೆ ಬರುವುದೆಂದು ಹೇಳಿರುವುದು. ಭಾಷೆಯಲ್ಲಿ ತಿಙ್-ಕೃತ್ತುಗಳೆರಡೂ ಕರ್ತೃಕರ್ಮರೂಪಕಾರಕದ್ವಯವನ್ನು ಬಿಟ್ಟು ಇತರ ಕಾರಕದಲ್ಲಿ ವಿಹಿತಗಳೇ ಅಲ್ಲವಾದುದರಿಂದ ಇಲ್ಲಿ ತಿಙ್-ಕೃತ್ತುಗಳಿಂದ ಅಭಿಹಿತಗಳಾದುವು ಕರ್ತೃ-ಕರ್ಮ ಎಂಬಿವೆರಡೇ ಕಾರಕಗಳೆಂದು ಹೇಳಲ್ಪಟ್ಟಿದೆ. ತಥಾಚ — ತಿಙ್-ಕೃತ್ತುಗಳಿಂದ ಕರ್ತೃ-ಕರ್ಮ-ರೂಪಕಾರಕಗಳು ಉಕ್ತಗಳಾಗಲು ಆ ಕರ್ತೃ-ಕರ್ಮವಿಶೇಷಬೋಧಕ ಲಿಂಗಕ್ಕೆ

ಪರವಾಗಿ ಪ್ರಥಮೆ ಬರುವುದೆಂದು ಸೂತ್ರಾರ್ಥವಾಗಲು 'ದೇವದತ್ತನಿರ್ದಪಂ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು. ಇಲ್ಲಿ—'ಉಕ್ತೇ' ಎಂದು ಹೇಳಿರುವುದರಿಂದ 'ದೇವದತ್ತನಿಂ ರಾಜಂ ನೋಡಲ್ಪಟ್ಟಂ, ಕುಲಾಲನಿಂ ಘಟಂ ಮಾಡಲ್ಪಟ್ಟುದು, ಅಕ್ಕಸಾಲೆಯಿಂ ಪದಕಂ ಗೆಯ್ಯಲ್ಪಟ್ಟುದು' ಮೊದಲಾದ ಕರ್ಮಣಿ ಪ್ರಯೋಗಗಳಲ್ಲಿ ಕರ್ತೃವು ಆಖ್ಯಾತದಿಂದ ಅನುಕ್ತವಾಗಿರುವುದರಿಂದ ಕರ್ತೃವಾಚಕಕ್ಕೆ ಪೂರ್ವದಿಂದ ತೃತೀಯಾವಿಭಕ್ತಿಯೇ ಬಂದಿರುವುದು; ಹೀಗೆಯೇ — 'ಕುಲಾಲಂ ಘಟಮಂ ಮಾಡಿದಂ' ಮೊದಲಾದ ಕರ್ತರಿಪ್ರಯೋಗದಲ್ಲಿಯೂ ಆಖ್ಯಾತದಿಂದ ಕರ್ತೃ ಉಕ್ತವಾಗಿದ್ದರೂ ಕರ್ಮವು ಅನುಕ್ತವಾಗಿರುವುದರಿಂದ ಕರ್ಮವಿಶೇಷಬೋಧಕವಾದ 'ಘಟ' ಶಬ್ದಕ್ಕೆ ದ್ವಿತೀಯೆಯೇ ಬಂದಿರುವುದು. ಇಂತು ಪ್ರಥಮಾವಿಭಕ್ತಿ ಯಾವ ಅರ್ಥ ವಿಶೇಷದಲ್ಲಿಯೂ ವಿಹಿತವಲ್ಲವಾದುದರಿಂದ — '**ಅನಿರ್ದಿಷ್ಟಾರ್ಥಾಃ ಪ್ರತ್ಯಯಾಃ ಸ್ವಾರ್ಥೇ ಭವಂತಿ**' ಎಂಬ ನ್ಯಾಯದಿಂದ ಪ್ರಕೃತ್ಯರ್ಥದಲ್ಲಿಯೇ ಬರುವುದೆಂದು ಫಲಿತಾರ್ಥವಾಗುವುದು.

ಇಲ್ಲಿ ಕೆಲವರು ಲೋಕದಲ್ಲಿ ಅರ್ಥ ಪ್ರತ್ಯಾಯನಾರ್ಥವಾಗಿ ಪ್ರತ್ಯಯವು ವಿಧಿಸಲ್ಪಡುವುದು; ಈ ಪ್ರಥಮೆ ಆವ ಅರ್ಥಕ್ಕೂ ಪ್ರತ್ಯಾಯಕವಲ್ಲ; ಕರ್ತೃಕರ್ಮರೂಪಾರ್ಥಗಳಾವರೋ ತಿಙಾದಿಗಳಿಂದಲೇ ಉಕ್ತಗಳಾಗುವುವು; ಆದುದರಿಂದ ಈ ವಿಧಿ ನಿರರ್ಥಕ—ಎಂದು ಹೇಳುವರು. ಅದರ ಇದರಂತೆ—'ಕುಲಾಲಂ ಘಟಮಂ ಮಾಡಿದಂ, ಕುಲಾಲನಿಂ ಘಟಂ ಮಾಡಲ್ಪಟ್ಟುದು' ಮೊದಲಾದ ಕರ್ತರಿಪ್ರಯೋಗದಲ್ಲಿಯೂ ಕರ್ಮಣಿಪ್ರಯೋಗದಲ್ಲಿಯೂ 'ಕುಲಾಲನು' ಕರ್ತೃ 'ಘಟವು' ಕರ್ಮ ಎಂಬುದು ನಿರ್ವಿವಾದವಾಗಿರುವುದು. ಅಲ್ಲಿ ಕರ್ತೃ, ಕರ್ಮರೂಪಾರ್ಥಗಳು 'ಕುಲಾಲ-ಘಟ' ಗಳು. ಇವು 'ಕುಲಾಲ-ಘಟ' ಶಬ್ದಗಳಿಂದಲೇ ಹೇಳಲ್ಪಡುವುವು. ಆದುದರಿಂದ ಅಂತಹ ಪ್ರಯೋಗಗಳಲ್ಲಿ ತಿಙ್-ಕೃತ್ತುಗಳೂ ನಿರರ್ಥಕಗಳೆಂದು ಶಂಕೆಯುಂಟಾಗುವುದು. ಆದಾಗ್ಯೂ—ಲೋಕದಲ್ಲಿ ಸಂಕೇತವನ್ನು ಗ್ರಹಿಸುವಾಗ ಯಾವ ಧರ್ಮದಿಂದ ಶಬ್ದಗಳ ಶಕ್ತಿಯು ಗ್ರಹಿಸಲ್ಪಡುವುದೋ ಅದೇ ಧರ್ಮದಿಂದ ಶಬ್ದಗಳಿಗೆ ವಾಚ್ಯವಾಚಕ ಭಾವವಿರುವುದು. ಇಲ್ಲಿ 'ಕುಲಾಲ-ಘಟ' ಶಬ್ದಗಳಿಗಾದರೋ 'ಕುಲಾಲ-ಘಟ' ರೂಪಾರ್ಥಗಳಲ್ಲಿ ಸಂಕೇತವು ಗ್ರಹಿಸಲ್ಪಡಲು ಆಗ ಕುಲಾಲತ್ವ, ಘಟತ್ವಗಳು ಇತರ ವಾಚ್ಯವ್ಯಾವರ್ತಕಧರ್ಮಗಳು. ಆದುದರಿಂದ ಪ್ರಕೃತದಲ್ಲಿ 'ಕುಲಾಲ-ಘಟ' ಶಬ್ದಗಳು ಕುಲಾಲತ್ವಘಟತ್ವರೂಪಧರ್ಮವುಳ್ಳ ಅರ್ಥಗಳನ್ನೇ ಹೇಳುವುವು. ಕರ್ತೃತ್ವ-ಕರ್ಮತ್ವಾವಚ್ಛಿನ್ನರೂಪಾರ್ಥಗಳನ್ನು ಹೇಳುವುದಿಲ್ಲ. ಆದುದರಿಂದ ಕರ್ತೃತ್ವಾದ್ಯವಚ್ಛಿನ್ನಾರ್ಥ ಪ್ರತ್ಯಾಯನಾರ್ಥವಾಗಿ ತಿಙಾದಿಗಳ ವಿಧಾನವು ಸಾರ್ಥಕವೆಂದು ಹೇಳಬೇಕು. ಇಲ್ಲಿ ತಿಙಾದಿಗಳಿಂದ ಸಾಮಾನ್ಯವಾಗಿ ಕರ್ತೃ-ಕರ್ಮಗಳು ಉಕ್ತಗಳಾಗಿದ್ದರೂ ತದ್ವಿಶೇಷಬೋಧನಾರ್ಥವಾಗಿ 'ಕುಲಾಲ, ಘಟ' ಶಬ್ದಗಳ ಸಮಭಿವ್ಯಾಹಾರವೂ ಆವಶ್ಯಕವೆಂದು ತಿಳಿಯಬೇಕು. ಪ್ರಥಮಾವಿಭಕ್ತಿಯಾದರೋ ಆವ ಅರ್ಥಕ್ಕೂ ಪ್ರತ್ಯಾಯಕವಲ್ಲವಾದುದರಿಂದ ನಿರರ್ಥಕವೆಂದೇ ಹೇಳಬೇಕು. ಎಂದರೆ ಈ ವ್ಯಾಕರಣಶಾಸ್ತ್ರದಲ್ಲಿ ವಿಭಕ್ತಿಗಳು — 'ಕಾರಕವಿಭಕ್ತಿ, ಉಪಪದವಿಭಕ್ತಿ, ಸಾಧ್ವನುಶಾಸನವಿಭಕ್ತಿ' ಎಂದು ತ್ರಿವಿಧಗಳಾಗಿರುವುವು. ಅವುಗಳಲ್ಲಿ — '**ಕರ್ಮಣ್ಯಮ್**' ಮೊದಲಾದ ಸೂತ್ರಗಳಿಂದ ಕರ್ಮಾದಿಕಾರಕಾರ್ಥದಲ್ಲಿ ವಿಹಿತವಾದುದು **ಕಾರಕವಿಭಕ್ತಿ**ಯೆಂಬುದು — '**ಸ್ವಾಹಾಸ್ವಧಾವಷಡ್ಭಿಃ**' ಮೊದಲಾದ ಸೂತ್ರಗಳಿಂದ ಸಮಿಪೋಚ್ಚಾರಿತಪದ ನಿಮಿತ್ತವಾಗಿ

ವಿಧಿಸಲ್ಪಡುವ ವಿಭಕ್ತಿ **ಉಪಪದವಿಭಕ್ತಿ**ಯೆಂಬುದು. ಆವುದು ಕಾರಕಾರ್ಥದಲ್ಲಿಯೂ ಪದಾಂತರ ಸಮಭಿವ್ಯಾಹಾರದಲ್ಲಿಯೂ ವಿಧಿಸದೆ '**ಸುಪ್ ತಿಙಂತಂ ಪದಂ**' ಎಂಬ ಸೂತ್ರದಿಂದ ಸುಬಂತ ಲಕ್ಷಣಪದತ್ವಸಿದ್ಧಿದ್ವಾರದಿಂದ — '**ಅಪದಂ ನ ಪ್ರಯುಂಜೀತ**' ಎಂಬ ಈ ಯಾಸ್ಕನಿರುಕ್ತ ವಚನಕ್ಕೆ ಅವಿಷಯವಾಗಿ ಶಬ್ದಸಾಧುತ್ವಾರ್ಥವಾಗಿಯೇ ವಿಧಿಸಲ್ಪಡುವುದೋ ಅದೇ **ಸಾಧ್ವನು ಶಾಸನವಿಭಕ್ತಿ**ಯೆಂಬುದು. ಇವುಗಳಲ್ಲಿ ತಿಙಾದಿಗಳಿಂದ ಕರ್ತೃಕರ್ಮಗಳು ಅನುಕ್ತವಾಗಲು ತೃತೀಯಾ, ದ್ವಿತೀಯಾವಿಭಕ್ತಿಗಳು ವಿಧಿಸಲ್ಪಟ್ಟಿರುವುದರಿಂದ ಪ್ರಥಮೆಯು ಕಾರಕವಿಭಕ್ತಿ ಯಾಗುವುದಿಲ್ಲ. ಉಪಪದನಿಮಿತ್ತದಿಂದ ವಿಧಾನವಿಲ್ಲವಾದುದರಿಂದ ಉಪಪದವಿಭಕ್ತಿಯೂ ಅಲ್ಲ. ಪರಿಶೇಷನ್ಯಾಯದಿಂದ ಸಾಧ್ವನುಶಾಸನವಿಭಕ್ತಿಯೆಂದು ಹೇಳಬೇಕು. ಆದುದರಿಂದ 'ಕುಲಾಲಂ ಘಟಮಂ ಮಾಡಿದಂ, ಕುಲಾಲನಿಂ ಘಟಂ ಮಾಡಲ್ಪಟ್ಟುದು' ಮೊದಲಾದ ಪ್ರಯೋಗಗಳಲ್ಲಿ ಸಾಮಾನ್ಯವಾಗಿ ತಿಙಾದಿಗಳಿಂದ ಕರ್ತೃಕರ್ಮಗಳು ಉಕ್ತಗಳಾಗಿದ್ದರೂ ತದ್ವಿಶೇಷಪ್ರತಿ ಪತ್ತ್ಯರ್ಥವಾಗಿ 'ಕುಲಾಲ, ಘಟಾದಿ' ಶಬ್ದಗಳು ಅಪೇಕ್ಷಿಸಲ್ಪಡುವುವು. ಅಲ್ಲ ಪ್ರಾತಿಪದಿಕಮಾತ್ರಕ್ಕೆ ತದ್ವಿಶೇಷಪ್ರತ್ಯಾಯನ ಶಕ್ತಿಯಿದ್ದರೂ — '**ನ ಕೇವಲಾ ಪ್ರಕೃತಿಃ ಪ್ರಯೋಕ್ತವ್ಯಾ ನ ಚ ಕೇವಲಶ್ಚ ಪ್ರತ್ಯಯಃ**' ಎಂದು ನಿಯಮವಿರುವುದರಿಂದ ವಿಭಕ್ತಿಯು ಅಪೇಕ್ಷಿತವಾಗಿರುವುದು. ಅಲ್ಲಿ ಪದತ್ವ ಸಂಪಾದನಾರ್ಥವಾಗಿ ಆವ ವಿಭಕ್ತಿಯನ್ನು ಮಾಡಿದರೂ ಪದಸಂಜ್ಞೆ ಸಿದ್ಧಿಸುವುದು—ಎಂದು ಅನಿಯಮವಾಗಿ ಎಲ್ಲಾ ವಿಭಕ್ತಿಗಳೂ ಪ್ರಸಕ್ತಗಳಾಗಲು ದ್ವಿತೀಯಾದಿಗಳು ಕರ್ಮಾದ್ಯರ್ಥಗಳಲ್ಲಿ ವಿಹಿತಗಳಾದ್ದರಿಂದ ಸಾವಕಾಶವಾಗಿ ಚಾರಿತಾರ್ಥಗಳಾಗಲು ಇನ್ನೆಲ್ಲಿಯೂ ವಿಧಿಸದೆ ನಿರವಕಾಶ ವಾಗಿ ಉಳಿದಿರುವ ಪ್ರಥಮೆಯೇ ಇಲ್ಲಿ ವಿಧಿಸಲ್ಪಡುವುದೆಂದು ಪ್ರಥಮಾವಿಧಾನಕ್ಕೆ ಪ್ರಯೋಜನ ವನ್ನು ಕಲ್ಪಿಸಿಕೊಳ್ಳುವುದು.

**ಅವತಾರಿಕೆ ೨೨೮**

ಹೀಗೆ ಸಾಮಾನ್ಯವಾಗಿ ಪ್ರಥಮೆಯನ್ನು ವಿಧಿಸಿ ಆಮಂತ್ರಣರೂಪ-ಅರ್ಥವಿಶೇಷದಲ್ಲಿಯೂ ಆ ಪ್ರಥಮೆಯೇ ಬರುವುದೆಂದು ವಿಧಿಸುತ್ತಾನೆ.

**ಸೂತ್ರಂ || ಆಮಂತ್ರಣೇ || ೨೨೮ ||**

**ಅರ್ಥ || ಕಾರ್ಯಾಂತರದಲ್ಲಿ ವ್ಯಾಪೃತನಾದವನನ್ನು ತನಗೆ ಅಭಿಮುಖವಾಗಿ ಮಾಡಿಕೊಳ್ಳು ವುದು ಆಮಂತ್ರಣವೆನಿಸುವುದು. ಅದು ವಿವಕ್ಷಿತವಾಗಲು ಅಲ್ಲಿರುವ ಲಿಂಗಕ್ಕೆ 'ಮ್' ಪ್ರತ್ಯಯವು ಬರುವುದು.**

**ಉದಾಹರಣೆ ||** ದೇವ ಬಿನ್ನಪಂ, ಸತಿ ಕೇಳ್, ಎಲೆ ದೇವದತ್ತ, ಎಲೆ ಭೂಪ || ಮೊದಲಾ ದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೨೨೮**

ಈ ಸೂತ್ರದಲ್ಲಿ — '**ಆಮಂತ್ರಣೇ**' ಎಂಬ ಒಂದೇ ಪದವಿರುವುದು. ಪೂರ್ವದಿಂದ 'ಲಿಂಗಾತ್, ಮ್' ಎಂದು ಅನುವರ್ತಿಸಲ್ಪಡುವುವು. ಆಮಂತ್ರಣವೆಂದರೆ ಸಮ್ಮುಖೀಕರಣವು. ಇದನ್ನೇ ಸಂಬೋಧನವೆಂದು ಕೆಲವರು ಹೇಳುತ್ತಾರೆ; ಕೆಲವೆಡೆ ಮೊದಲೇ ಸಮ್ಮುಖವಾಗಿರುವ ವಿಷಯದಲ್ಲಿಯೂ ಆಮಂತ್ರಣ ವಿಭಕ್ತಿಯು ಬರುವುದಕ್ಕೋಸ್ಕರ ಕಾರ್ಯಾಂತರ ವ್ಯಾಪೃತ

ನಾದವನಿಗೆ ಸಮ್ಮುಖೀಕರಣವೆಂದು ಹೇಳಲ್ಪಟ್ಟಿದೆ; ಇದು ಚೇತನವಿಷಯಕವಾಗಿದ್ದರೂ ಕ್ವಚಿದಚೇತನ ವಿಷಯದಲ್ಲಿಯೂ ಔಪಚಾರಿಕವಾಗಿ ಆಮಂತ್ರಣವನ್ನು ಅಂಗೀಕರಿಸಬೇಕು. ತಥಾಚ — ಆಮಂತ್ರಣಾರ್ಥದಲ್ಲಿ ಇರುವ ಲಿಂಗಕ್ಕೆ ಪರವಾಗಿ ಪ್ರಥಮೆ ಬರುವುದೆಂದು ಸೂತ್ರಾರ್ಥವಾಗುವುದು. ಇದರಿಂದ 'ದೇವ ಬಿನ್ನಪಂ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು. ಆಮಂತ್ರಣವೂ ಸಂಬಂಧಮಾತ್ರವಾದುದರಿಂದ ಷಷ್ಠಿ ಪ್ರಾಪ್ತವಾಗಲು ತದ್ಬಾಧನಾರ್ಥವಾಗಿ ಈ ಸೂತ್ರವು ಮಾಡಲ್ಪಟ್ಟಿರುವುದೆಂದು ತಿಳಿಯುವುದು.

ಸಂಸ್ಕೃತವ್ಯಾಕರಣಕಾರರು — 'ಪ್ರವರ್ತನಾವಿಷಯ ಬೋಧನಾದಿಫಲಕಾಭಿಮುಖ್ಯಂ ಸಂಬೋಧನಂ' ಎಂಬುದನ್ನು —

ಸಿದ್ಧಸ್ಯಾಭಿಮುಖೀಭಾವಮಾತ್ರಂ ಸಂಬೋಧನಂ ವಿದುಃ
ಪ್ರಾಪ್ತಾಭಿಮುಖ್ಯಃ ಪುರುಷಃ ಕ್ರಿಯಾಸು ವಿನಿಯುಜ್ಯತೇ

ಎಂಬುದರಿಂದ ಸೂಚಿಸಿರುವರು.

**ದರ್ಪಣಕಾರನು** ಈ ವಿಷಯದಲ್ಲಿ —

ಅಭಿರೂಪದಿನಾ ಪ್ರಥಮಾ
ವಿಭಕ್ತಿ ಲಿಂಗಾರ್ಥ ವಚನ ಸಂಬೋಧನದೊಳ್
ಪ್ರಥವಿಪ್ಪುದು		(ಸೂತ್ರ ೧೨೬)

ಎಂದು ಮೊದಲಾಗಿ ಹೇಳಿರುವನು.

**ಅವತಾರಿಕೆ ೨೨೯**

ಹೀಗೆಯೇ ಅರ್ಥಾಂತರದಲ್ಲಿಯೂ ಪ್ರಥಮೆ ಬರುವುದೆಂದು ಹೇಳುತ್ತಾನೆ.

**ಸೂತ್ರಂ || ಯಸ್ಯ ಭಾವೋ ಭಾವಲಕ್ಷಣಂ || ೨೨೯ ||**

**ಅರ್ಥ ||** ಭಾವವೆಂದರೆ ಕ್ರಿಯೆ — ಆವುದರ ಕ್ರಿಯೆ ಇನ್ನೊಂದು ಕ್ರಿಯೆಗೆ ಜ್ಞಾಪಕವಾಗುವುದೋ ಆ ಜ್ಞಾಪಕಕ್ರಿಯಾಶ್ರಯವಸ್ತುಬೋಧಕಲಿಂಗಕ್ಕೆ ಪರವಾಗಿ 'ಮ್' ಪ್ರತ್ಯಯವು ಬರುವುದು.

**ಉದಾಹರಣೆ ||** 'ಪಶುಕಟಿಯಲ್ ಬಂದಂ, ರಮಣಿನೋಡಲ್ ಬಂದಂ' ಮೊದಲಾದುವು ಇವಕ್ಕೆ ಲಕ್ಷ್ಯಗಳು.

**ವಿಚಾರ ೨೨೯**

ಈ ಸೂತ್ರದಲ್ಲಿ — 'ಯಸ್ಯ, ಭಾವಃ, ಭಾವಲಕ್ಷಣಂ' ಎಂದು ಮೂರು ಪದಗಳಿರುವುವು. ಪೂರ್ವದಿಂದ 'ಲಿಂಗಾತ್, ಮ್' ಎಂದು ಅನುವರ್ತಿಸಲ್ಪಡುವುವು. 'ಯಸ್ಯ' ಎಂಬುದು ಆಶ್ರಯಾಶ್ರಯಿಭಾವಸಂಬಂಧಾರ್ಥಕ ಷಷ್ಠ್ಯಂತವು. ಇದನ್ನು ಭಾವ ಎಂಬುದರಲ್ಲಿ ಅನ್ವಯಿಸುವುದು. 'ಭಾವ' ಶಬ್ದಕ್ಕೆ ಲೋಕದಲ್ಲಿ ಸ್ವಭಾವಾದ್ಯನೇಕಾರ್ಥಗಳಿದ್ದರೂ ಪ್ರಕೃತದಲ್ಲಿ 'ಕ್ರಿಯಾವಚನ'ವೆಂದು ತಿಳಿಯಬೇಕು. ಇದು 'ಭಾವಲಕ್ಷಣಂ' ಎಂಬುದಕ್ಕೆ ವಿಶೇಷಣವು. 'ಭಾವಲಕ್ಷಣ' ಎಂದರೆ ಕ್ರಿಯಾಂತರಲಕ್ಷಕವೆಂದರ್ಥವು. ಲೋಕದಲ್ಲಿ ಪ್ರಸಿದ್ಧವಾದುದರಿಂದ ಅಪ್ರಸಿದ್ಧವಾದುದು ಲಕ್ಷಣೀಯವಾಗಿರುವುದು. ಹಾಗೆ ಪ್ರಸಿದ್ಧವಾದ ಯಾವುದರ ಕ್ರಿಯೆ ಅಪ್ರಸಿದ್ಧವಾದ ಕ್ರಿಯಾಂತರಕ್ಕೆ ಲಕ್ಷಕವಾಗುವುದೋ ಆ ಕ್ರಿಯಾಶ್ರಯವಸ್ತುವಾಚಕಲಿಂಗಕ್ಕೆ ಪರವಾಗಿ ಪ್ರಥಮೆ ಬರುವುದೆಂದು ಸೂತ್ರಾರ್ಥವಾಗಲು 'ಪಶುಕಟಿಯಲ್ ಬಂದಂ' ಮೊದಲಾದ ಪ್ರಯೋಗ

ಗಳಲ್ಲಿ ಕಾಲದಿಂದ ಪ್ರಸಿದ್ಧವಾದ ಗೋದೋಹಾದಿಭಾವವು ಲಕ್ಷಣವಾದ ದೇವದತ್ತ ಮೊದಲಾದ ಪದ ಆಗಮನಾದಿ ರೂಪವಾದ ಅಪ್ರಸಿದ್ಧ ಭಾವಾಂತರಕ್ಕೆ ಜ್ಞಾಪಕವಾಗಿರುವುದರಿಂದ ಆ ಜ್ಞಾಪಕವಾದ ದೋಹನಾಕ್ರಿಯಾಶ್ರಯವಸ್ತುವಾಚಕ 'ಪಶ್ವಾದಿ' ಶಬ್ದಕ್ಕೆ ಪ್ರಥಮೆ ಬಂದಿರುವುದೆಂದು ತಿಳಿಯುವುದು. ಹೀಗೆಯೇ 'ರಮಣಿನೋಡಲ್ ಬಂದಂ' ಮೊದಲಾದ ಪ್ರಯೋಗಗಳಲ್ಲಿಯೂ ಊಹಿಸಿಕೊಳ್ಳಬೇಕು. ಇಲ್ಲಿ ಎಲ್ಲಾ ಕಡೆಯಲ್ಲಿಯೂ 'ಕಱಿಯಲ್, ನೋಡಲ್' ಮೊದಲಾದುವು '**ಯೋ ಭಾವೋ ಭಾವಲಕ್ಷಕಃ || ೫೮೭ ||**' ಎಂಬ ಸೂತ್ರದಿಂದ ಅಲ್-ಪ್ರತ್ಯಯವು ಬಂದು ನಿಷ್ಪನ್ನವಾಗಿರುವುದೆಂದು ತಿಳಿಯಬೇಕು. ಇಲ್ಲಿ ಇತ್ಥಂಭೂತಲಕ್ಷಣನಿಮಿತ್ತಕ ತೃತೀಯೆಯು ಪ್ರಾಪ್ತವಾಗಲು ತದ್ಬಾಧನಾರ್ಥವಾಗಿ ಈ ಸೂತ್ರವು ಪ್ರಾರಂಭಿಸಲ್ಪಟ್ಟಿರುವುದು. ಇಲ್ಲ 'ಯಸ್ಯ' ಎಂದು ಹೇಳದಿದ್ದರೆ ಪ್ರತ್ಯಯದ ಪ್ರಕೃತಿ ನಿರ್ಧಾರಣೆಯಾಗುವುದಿಲ್ಲವೆಂದು ಅದು ಹೇಳಲ್ಪಟ್ಟಿರುವುದು. 'ಭಾವಃ' ಎಂದು ಹೇಳಿರುವುದರಿಂದ 'ತಾಪಸಂಗೆ ಜಡೆಯಿಂದೂಟಂ' ಮೊದಲಾದ ಪ್ರಯೋಗಗಳಲ್ಲಿ ಜಟಾದಿರೂಪ ದ್ರವ್ಯವು ಭೋಜನಾದಿರೂಪ ಕ್ರಿಯೆಗೆ ಜ್ಞಾಪಕವಾಗಿರುವುದರಿಂದ ದ್ರವ್ಯಕ್ಕೆ ಜ್ಞಾಪಕತ್ವ ಪ್ರಾಪ್ತವಾಗಿರುವುದೆಂದು 'ತಾಪಸ' ಶಬ್ದಕ್ಕೆ ಪ್ರಥಮೆಯಿಲ್ಲ. 'ಭಾವಲಕ್ಷಣಂ' ಎಂದು ಹೇಳಿರುವುದರಿಂದ — 'ಆಪಂಗೂಟಮಾತಂ ದೇವದತ್ತಂ' ಮೊದಲಾದ ಪ್ರಯೋಗಗಳಲ್ಲಿ ಭೋಜನಾದಿಕ್ರಿಯೆಯಿಂದ ಲಕ್ಷಣೀಯವಾದುದು ದೇವದತ್ತಾದಿ ದ್ರವ್ಯರೂಪವಾದುದರಿಂದ 'ಆವಂಗೆ' ಎಂಬಲ್ಲಿ ಪ್ರಥಮೆ ಬರುವುದಿಲ್ಲವೆಂದು ತಿಳಿಯಬೇಕು.

ಈ ವಿಷಯದಲ್ಲಿ ಸಂಸ್ಕೃತವ್ಯಾಕರಣಕಾರರು ಸಪ್ತಮಿಯನ್ನು ಉಪಯೋಗಿಸುವರು ಎಂದು ತಿಳಿಯಬೇಕು. **ದರ್ಪಣಕಾರ**ನು ಇದನ್ನು ಪ್ರತ್ಯೇಕವಾಗಿ ಹೇಳಿಲ್ಲ.

**ಅವತಾರಿಕೆ ೨೩೦**

ಇದುವರೆಗೂ ವಿಶೇಷ್ಯವಾಚಕಗಳಿಗೆ ತತ್ತದರ್ಥವಿಶೇಷಗಳಲ್ಲಿ ಆ ಆ ವಿಭಕ್ತಿಗಳನ್ನು ವಿಧಿಸಿ ಈಗ —

ಯಲ್ಲಿಂಗಂ ಯದ್ವಚನಂ ಯಾ ಚ ವಿಭಕ್ತಿರ್ವಿಶೇಷ್ಯಸ್ಯ
ತಲ್ಲಿಂಗಂ ತದ್ವಚನಂ ಸಾ ಚ ವಿಭಕ್ತಿರ್ವಿಶೇಷಣಸ್ಯಾಪಿ

ಎಂಬ ಪ್ರಾಚೀನಕಾರಿಕೆಯಿಂದ ವಿಶೇಷಣಕ್ಕೂ ವಿಶೇಷ್ಯಾನುರೋಧವಾಗಿ ವಿಭಕ್ತಿಗಳು ಪ್ರಸಕ್ತವಾಗಿರಲು ಅದಕ್ಕೆ ಬಾಧಕವಾಗಿ ವಿಕಲ್ಪದಿಂದ ಪ್ರಥಮೆಯನ್ನು ವಿಧಿಸುತ್ತಾನೆ.

**ಸೂತ್ರಂ || ವಿಶೇಷಣಾದ್ವಾ || ೨೩೦ ||**

**ಅರ್ಥ || ವಿಶೇಷಣವಾಚಕವಾದ ಲಿಂಗಕ್ಕೆ ಪರವಾಗಿ ಮ್-ಪ್ರತ್ಯಯವು ವಿಕಲ್ಪವಾಗಿ ಬರುವುದು. ಇದು ಬಾರದಿದ್ದಾಗ ವಿಶೇಷ್ಯದ ವಿಭಕ್ತಿಯನ್ನೇ ಪಡೆಯುವುದು.**

**ಉದಾಹರಣೆ ||**

**ಧೀರನುದಾರಂ ಕಲಿ ಗಂ**
**ಭೀರಂ ಭೂಪತಿಕುಮಾರಕಂಗಾದುದಯಂ**

ಮೊದಲಾದುವು ಇದಕ್ಕೆ ಲಕ್ಷ್ಯಗಳು. ಇದು ವಿಕಲ್ಪವೆಂದು ಹೇಳಿರುವುದರಿಂದ ಇದು ಬಾರದ ಪಕ್ಷದಲ್ಲಿ 'ಧೀರಂಗೆ, ಉದಾರಂಗೆ, ಕಲಿಗೆ, ಗಂಭೀರಂಗೆ' ಮೊದಲಾದ ವಿಶೇಷ್ಯವಿಭಕ್ತಿಗಳೇ ಬರುವುವು.

**ವಿಚಾರ ೨೩೦**

ಈ ಸೂತ್ರದಲ್ಲಿ — ‘ ವಿಶೇಷಣಾತ್, ವಾ ’ ಎಂದು ಎರಡು ಪದಗಳಿರುವುವು. ಪೂರ್ವದಿಂದ ‘ ಲಿಂಗಾತ್, ಮ್ ’ ಎಂದು ಅನುವರ್ತಿಸಲ್ಪಡುವುದು. ‘ ವಿಶೇಷಣಾತ್ ’ ಎಂಬುದು ‘ ಲಿಂಗಾತ್ ’ ಎಂಬುದಕ್ಕೆ ವಿಶೇಷಣವು. ವಿಶೇಷಣವೆಂದರೆ ‘ ಭೇದಕ, ವ್ಯಾವರ್ತಕ ’ ಎಂದು ಲಿಂಗಪ್ರಕರಣದಲ್ಲಿ ವಿವರಿಸಲ್ಪಟ್ಟಿರುವುದು. ತಥಾಚ — ವಿಶೇಷಣವಾಚಕಲಿಂಗಕ್ಕೆ ಪರವಾಗಿ ಮ್-ಪ್ರತ್ಯಯವು ವಿಕಲ್ಪದಿಂದ ಬರುವುದು. ಇದು ಬಾರದ ಪಕ್ಷದಲ್ಲಿ ವಿಶೇಷಣವು ವಿಶೇಷ್ಯಾಯತ್ತವೇ ಅಲ್ಲದೆ ಸ್ವತಂತ್ರವಲ್ಲ. ಆದುದರಿಂದ ವಿಶೇಷ್ಯದಂತೆ ವಿಭಕ್ತಿಯನ್ನು ಮಾಡಬೇಕು— ಎಂದು ಸೂತ್ರಾರ್ಥವಾಗಲು ‘ ಧೀರನುದಾರಂ ’ ಮೊದಲಾದುವು ಸಿದ್ಧಿಸುವುವು.

ಇಲ್ಲಿ ವಿಶೇಷಣವು ಸಮಾನಾಧಿಕರಣ, ವ್ಯಧಿಕರಣಗಳೆಂದು ಎರಡು ತೆರನಾಗಿರುವುದು. ಅವುಗಳಲ್ಲಿ ಈ ಸೂತ್ರವು ಸಮಾನಾಧಿಕರಣವಿಶೇಷಣವಿಷಯಕವೆಂದು ತಿಳಿಯುವುದು. ವ್ಯಧಿಕರಣವಿಶೇಷಣದಲ್ಲಿಯಾದರೋ ಯಥಾಯೋಗವಾಗಿ ಆ ಆ ವಿಭಕ್ತಿಗಳು ಪ್ರವರ್ತಿಸುವುವು. ಈ ವಿಷಯದಲ್ಲಿ **ದರ್ಪಣಕಾರನು** —

ವಿದಿತವಿಶೇಷಣಪದಮುವು
ಮೊದಲ ವಿಭಕ್ತಿಗಳನಾಂತು ವಾಕ್ಯದ ಮೊದಲೊಳ್
ಪದವೆತ್ತುಮಗ್ರಕಾರಕ
ಪದದ ವಿಭಕ್ತಿಯನೆ ತಳೆವುವನ್ವಯಮುಖದೊಳ್

ಎಂದು ಹೇಳಿರುವನು.

**|| ಇತಿ ಪ್ರಥಮಾವಿಭಕ್ತಿ ಪ್ರಕರಣಂ ಸಮಾಪ್ತಂ ||**

ಚತುರ್ಥಿ, ಪಂಚಮಿ, ಷಷ್ಠಿಗಳು; ತೃತೀಯೆಯಲ್ಲಿ — ದ್ವಿತೀಯೆ, ಪಂಚಮಿ, ಸಪ್ತಮಿಗಳು; ಚತುರ್ಥಿಯಲ್ಲಿ — ದ್ವಿತೀಯೆ; ಪಂಚಮಿಯಲ್ಲಿ — ತೃತೀಯೆ; ಷಷ್ಠಿಯಲ್ಲಿ — ಚತುರ್ಥಿ; ಸಪ್ತಮಿಯಲ್ಲಿ — ಪ್ರಥಮೆ, ಚತುರ್ಥಿ, ಷಷ್ಠಿಗಳು ಪ್ರಯೋಗಿಸಲ್ಪಡುವುವು. ಇಲ್ಲಿ ನಿಯಮ ವೇನೂ ಇರುವುದಿಲ್ಲವಾದುದರಿಂದ 'ಪ್ರಯೋಗಶರಣಾ ವೈಯಾಕರಣಾಃ' ಎಂಬಂತೆ ಪ್ರಾಚೀನ ಮಹಾಕವಿಗಳ ಪ್ರಯೋಗಗಳಿಂದ ವ್ಯವಸ್ಥೆ ಮಾಡಿಕೊಳ್ಳಬೇಕೆಂದು ತಾತ್ಪರ್ಯವು.

ಇಲ್ಲಿ **ದರ್ಪಣಕಾರನು** —

ಇಂತೀ ಪೇಳ್ದ ವಿಭಕ್ತಿಗ
ಳೆಂತುಂ ಪಲ್ಲಟಿಸುಗುಂ ಯಥೇಷ್ಟಂ ಪ್ರಥಮಾ
ರ್ಥದೊಳ್ ತೋರ್ಕುಮಾ ದ್ವಿತೀಯಾ
ರ್ಥಂ ತೋರ್ಕುಮಲ್ಲಿ ಷಷ್ಠಿ ದೊರೆಕೊಂಡಿರ್ಕ್ಕುಂ (ಸೂತ್ರ ೧೩೪)

ಸ್ವಾರ್ಥಂ ಪ್ರಥಮಾರ್ಥ ತೃತೀ
ಯಾರ್ಥ ಚತುರ್ಥ್ಯರ್ಥದೊಳ್ ದ್ವಿತೀಯೆ ತೃತೀಯೋ
ಕ್ತಾರ್ಥದೊಳಾ ಸಪ್ತಮಿಯೆ ಸ
ಮರ್ಥಂ ಪಂಚಮಿಯೊಳಂ ತೃತೀಯೆ ಸಮರ್ಥಂ (ಸೂತ್ರ ೧೩೫)

ಕೃತಿಯುಕ್ತಂ ಷಷ್ಠಿಯೊಳಂ
ದ್ವಿತೀಯೆಯೊಳಮಾ ಚತುರ್ಥಿ ಸಪ್ತಮಿಯೊಳ್ ಸಂ
ಗತಮಾ ಪ್ರಥಮಾ ಷಷ್ಠೀ
ಚತುರ್ಥಿಗಳ್ ಪ್ರಥಮೆಯುಂ ದ್ವಿತೀಯೆಯೊಳಕ್ಕುಂ (ಸೂತ್ರ ೧೩೬)

ಎಂಬ ಸೂತ್ರಗಳನ್ನು ಹೇಳಿ ದಿಙ್ಮಾತ್ರವನ್ನು ಪ್ರದರ್ಶನಮಾಡಿರುವನು. ಇಲ್ಲಿಯೂ ಪ್ರಯೋಗಾ ನುಸಾರವಾಗಿ ವಿಭಕ್ತಿ ವ್ಯತ್ಯಾಸಗಳನ್ನು ಊಹಿಸಿಕೊಳ್ಳಬೇಕು. ಈ ಭಾಷೆಯಲ್ಲ ಸಪ್ತವಿಭಕ್ತಿ ಗಳನ್ನು ಕಲ್ಪಿಸಿ ವ್ಯವಹಾರವನ್ನು ಮಾಡುತ್ತಿರುವುದನ್ನು ನೋಡಿದರೆ ಈ ಕಲ್ಪನೆಯು ವಿಶೇಷ ಪ್ರಯೋಜನಕಾರಿಯಲ್ಲದಿದ್ದರೂ ಸಂಸ್ಕೃತಪ್ರಯೋಗವಾಸನಾಕ್ರಮದಿಂದ ಇಲ್ಲಿಯೂ ಕಲ್ಪಿಸಿರು ವರೆಂದು ತಿಳಿಯಬೇಕು. ವಸ್ತುತಃ ಈ ಭಾಷೆಯಲ್ಲಿ ಪ್ರಥಮೆ, ದ್ವಿತೀಯೆ, ತೃತೀಯೆ, ಚತುರ್ಥಿ, ಷಷ್ಠಿ ಎಂದು ಐದೇ ವಿಭಕ್ತಿಗಳಿಂದ ಸರ್ವ ವ್ಯವಹಾರವೂ ಉಪಪನ್ನವಾಗುವುದು. ಪಂಚಮಿ ಸಪ್ತಮಿಗಳ ವಿಷಯದಲ್ಲಿ ದಿಗ್ವಾಚಕದ 'ಅತ್ತಣಿಂ' ಮೊದಲಾದ ಶಬ್ದಗಳಿಂದಲೂ 'ಅಲ್ಲಿ' ಮೊದಲಾದ ಅವ್ಯಯಗಳಿಂದಲೂ ಯುಕ್ತವಾದ ಷಷ್ಠ್ಯಂತ ಪ್ರಯೋಗದಿಂದಲೇ ಉಪಪತ್ತಿ ಯುಂಟಾಗುವುದು. ಈ ಅರ್ಥಕ್ಕೆ **ಶಾಸನಕಾರನು** ಹೇಳುವ — '**ವ್ಯತ್ಯಯೋ ಬಹುಲಂ**' ಎಂಬ ಸೂತ್ರಸ್ಥ ಬಹುಳಗ್ರಹಣವೂ ತಾತ್ಪರ್ಯಗ್ರಾಹಕವೆಂದು ತಿಳಿಯಬೇಕು.

**॥ ಇತಿ ವಿಭಕ್ತಿವ್ಯತ್ಯಯ ಪ್ರಕರಣಂ ಸಮಾಪ್ತಂ ॥**

**॥ ಇತಿ ಸುಪ್-ವಿಭಕ್ತಿವಿಧಿಪ್ರಕರಣಂ ಸಮಾಪ್ತಂ ॥**

## ॥ ಅಥ ಸುಪ್-ಆಶ್ರಯವಿಧಿ ಪ್ರಕರಣಂ ॥

**ಅವತಾರಿಕೆ ೨೩೨**

ಪೂರ್ವದಲ್ಲಿ ಲಿಂಗಸ್ವರೂಪಗಳನ್ನು ನಿರ್ಣಯಿಸಿ ಅವುಗಳ ಮೇಲೆ ಅರ್ಥವಿಶೇಷಗಳಲ್ಲಿ ಪ್ರಥಮಾದಿ ಸಪ್ತವಿಭಕ್ತಿಗಳನ್ನೂ ಆಯಾ ಸೂತ್ರಗಳಿಂದ ವಿಧಿಸಿ ಈಗ ತದಾಶ್ರಯ ಪ್ರಕ್ರಿಯೆಯನ್ನು ಹೇಳಲು ಮೊದಲು ಬಹುತ್ವವು ತೋರುವಾಗ ಬರುವ ಕಾರ್ಯವಿಶೇಷವನ್ನು ವಿಧಿಸುತ್ತಾನೆ.

**ಸೂತ್ರಂ ॥ ಗಳನೇಕತ್ವೇ ಸುಪಿ ॥ ೨೩೨ ॥**

**ಅರ್ಥ ॥ ಅನೇಕತ್ವವು ತೋರುತ್ತಿರಲು ಸುಪ್-ಪ್ರತ್ಯಯವು ಪರವಾಗಿದ್ದರೆ ಲಿಂಗದ ದೆಸೆಯಿಂದ ಪರವಾಗಿ ಗಳ್-ಪ್ರತ್ಯಯವು ಬರುವುದು. ಎಂದರೆ ಪ್ರಕೃತಿಗೂ ವಿಭಕ್ತಿಪ್ರತ್ಯಯಕ್ಕೂ ಮಧ್ಯದಲ್ಲಿ ' ಗಳ್ ' ಎಂಬುದು ಬರವುದು. ಇದೇ ಬಹುತ್ವದ್ಯೋತಕವೆಂದು ತಾತ್ಪರ್ಯವಾಗುವುದು.**

**ಉದಾಹರಣೆ** ॥ ' ನಯನಂಗಳ್, ನಯನಂಗಳಂ, ನಯನಂಗಳಿಂ, ನಯನಂಗಳ್ಗೆ, ನಯನಂಗಳತ್ತಣಿಂ, ನಯನಂಗಳ, ನಯನಂಗಳೊಳ್ ॥ ' ಹೀಗೆಯೇ ' ಕೇಶಂಗಳ್ ' ಮೊದಲಾದ ಬಹುವಚನಾಂತಗಳು ಉತ್ತರಸೂತ್ರಗಳಿಗೆ ಅವಿಷಯಗಳಾಗಿದ್ದರೆ ಇದಕ್ಕೆ ಲಕ್ಷ್ಯಗಳೆಂದು ತಿಳಿಯಬೇಕು.

**ವಿಚಾರ ೨೩೨**

ಈ ಸೂತ್ರದಲ್ಲಿ ' ಗಳ್, ಅನೇಕತ್ವೇ, ಸುಪಿ ' ಎಂದು ಮೂರು ಪದಗಳಿರುವುವು. ' ಲಿಂಗಾತ್ ' ಎಂದರೆ ಪೂರ್ವದಲ್ಲಿ ನಿರ್ಣಯಿಸಲ್ಪಟ್ಟ ತದ್ಭವಾದ್ಯನೇಕಭೇದಭಿನ್ನವಾದ ಅರ್ಥವಚ್ಛಬ್ದರೂಪದ ದೆಸೆಯಿಂದ ಎಂದರ್ಥವು. ಇದು ಪಂಚಮ್ಯಂತವಾದುದರಿಂದ ' **ಪಂಚಮ್ಯಾಃ ಪ್ರತ್ಯಯಃ ಪರಃ** ' ಎಂಬ ಸೂತ್ರದಿಂದ ' ಪರಃ ' ಎಂದು ಉಪಸ್ಥಿತವಾಗುವುದು. ಇದು ' ಗಳ್ ' ಎಂಬುದಕ್ಕೆ ವಿಶೇಷಣವು. ಆದುದರಿಂದ ' ಗಳ್ ' ಎಂಬುದು ಪ್ರತ್ಯಯವೆಂದು ತಿಳಿಯುವುದು. ' ಅನೇಕತ್ವೇ ' ಎಂಬುದು ಒಂದಲ್ಲದ್ದು ಅನೇಕವು; ಅದರ ಭಾವವು 'ಅನೇಕತ್ವ'ವು. ಅದರಲ್ಲಿ ಎಂಬ ಸಪ್ತಮಿಗೆ ದ್ಯೋತ್ಯವೆಂದರ್ಥವು. ಅನೇಕತ್ವವೆಂದರೆ ದ್ವಿತ್ವತ್ರಿತ್ವಾದಿಗಳೆಲ್ಲಾ ಸಂಗ್ರಹೀತವಾಗುವುವು. ಭಾಷೆಯಲ್ಲಿ ದ್ವಿವಚನವು ಪ್ರಸಿದ್ಧವಾಗಿಲ್ಲದಿದ್ದರೂ ದ್ವಿತ್ವವಿಶಿಷ್ಟವಾಗಿಯೇ ಪ್ರಸಿದ್ಧವಾಗಿರುವುವು. ಲೋಕದಲ್ಲ ಎಷ್ಟೋ ಇರುವುದರಿಂದ ಅವಕ್ಕೂ ಸಂಗ್ರಹವು ಬರುವುದಕ್ಕೋಸ್ಕರ ಸೂತ್ರಕಾರರು ಸೂತ್ರದಲ್ಲಿ ' ಬಹುತ್ವೇ ' ಎಂದು ಹೇಳದೆ ' ಅನೇಕತ್ವೇ ' ಎಂದು ಹೇಳಿರುವರೆಂದು ತಿಳಿಯಬೇಕು. ಅನೇಕತ್ವವು ದ್ಯೋತ್ಯವಾಗುತ್ತಿರಲು ಎಂದರೆ ' ಗಳ್ ' ಎಂಬುದು ಅನೇಕತ್ವಕ್ಕೆ ದ್ಯೋತ್ಯಕವೆಂದು ತಿಳಿಯಬೇಕು. ' ಸುಪಿ ' ಎಂಬುದು ಮ್ ಆದಿಸಪ್ತವಿಭಕ್ತಿಯಲ್ಲಿ ಸಂಕೇತಿತವಾದ ಸಪ್ತಮ್ಯಂತಪದವು. ಆದುದರಿಂದ ' ಪರೇ ' ಎಂಬರ್ಥವು ಲಭಿಸುವುದು. ತಥಾಚ ಲಿಂಗದ ದೆಸೆಯಿಂದ ಸುಪ್ ಪರದಲ್ಲಿರಲು ಅನೇಕತ್ವದ್ಯೋತಕವಾಗಿ ' ಗಳ್ ' ಎಂಬ ಪ್ರತ್ಯಯವು ಪ್ರಕೃತಿಗೆ ಪರವಾಗಿ ಬರುವುದೆಂದು ಸೂತ್ರಾರ್ಥವಾಗುವುದರಿಂದ ' ನಯನಂಗಳ್ ' ಮೊದಲಾದುವು ಸಿದ್ಧಿಸುವುವು. ಇಲ್ಲಿ ' ನಯನಂಗಳ್ ' ಮೊದಲಾದುವು ದ್ವಿತ್ವವಿಶಿಷ್ಟಾರ್ಥಕಕ್ಕೂ 'ಕೇಶಂಗಳ್' ಮೊದಲಾದುವು ಬಹುತ್ವವಿಶಿಷ್ಟಾರ್ಥಕಕ್ಕೂ ಉದಾಹರಣೆಗಳೆಂದು ತಿಳಿಯಬೇಕು. ಮ್-ಪ್ರತ್ಯಯ ವಿಷಯದಲ್ಲಿ ಸ್ಥಾನಿವದ್ಭಾವದಿಂದ ಸುಪ್-ಪರಕತ್ವವನ್ನು ಹೇಳಬೇಕು.

ಇಲ್ಲಿ — ಏಕವಚನ, ದ್ವಿವಚನ, ಬಹುವಚನ ಎಂಬ ವಿಭಾಗವು — 'ಪುರುಷಃ, ಪುರುಷೌ, ಪುರುಷಾಃ; ಭವತಿ, ಭವತಃ, ಭವಂತಿ' ಮೊದಲಾದ ಸಂಸ್ಕೃತನಾಮಾಖ್ಯಾತಗಳಲ್ಲಿಯೇ ಪ್ರಸಿದ್ಧವಾಗಿರುವುದು. ಭಾಷೆಯಲ್ಲಾದರೋ 'ಪುರುಷಂ ಬಂದಂ, ಪುರುಷರ್ ಬಂದರ್' ಮೊದಲಾದ ನಾಮಾಖ್ಯಾತಗಳಲ್ಲಿ 'ಏಕವಚನಂ, ಬಹುವಚನಂ' ಎಂದೇ ವ್ಯವಹಾರವಿರುವುದೇ ಹೊರತು ದ್ವಿವಚನಕ್ಕೆ ವ್ಯವಹಾರವಿರುವುದಿಲ್ಲ. ಆದಾಗ್ಯೂ ಔಚಿತ್ಯದಿಂದ ದ್ವಿವಚನ ಉಂಟೆಂದು ತಿಳಿಯಬೇಕು. 'ಗಳ್' ಪ್ರತ್ಯಯವು ದ್ವಿತ್ವ-ಬಹುತ್ವ-ಸಾಧಾರಣವಾದುದರಿಂದ 'ನಯನಂಗಳ್, ಕೇಶಂಗಳ್' ಎಂಬಿವುಗಳಿಗೆ ರೂಪದಲ್ಲಿ ಯಾವ ವಿಶೇಷವೂ ತೋರುವುದಿಲ್ಲವಾದುದರಿಂದ ದ್ವಿವಚನವನ್ನು ಔಚಿತ್ಯದಿಂದ ತಿಳಿಯಬೇಕೆಂದು **ದರ್ಪಣಕಾರನೂ** —

ಏಕದ್ವಿತ್ವಬಹುತ್ವಮ
ನೇಕದ್ವಿಬಹುತ್ವವಸ್ತುಗಳೊಳಾಚರಿಪರ್
ಸ್ವೀಕಾರ್ಯಂ ಕನ್ನಡದೊಳ
ಗೇಕ ಬಹುತ್ವಂ ದ್ವಿವಚನಮುಚಿತದೆ ಬಕ್ಕುಂ (ಸೂತ್ರ ೯೪)

ಎಂಬ ಸೂತ್ರದಿಂದ ಸೂಚಿಸಿ 'ಭೀಮಾರ್ಜುನರ್, ರಾಮಲಕ್ಷ್ಮಣರ್' ಮೊದಲಾದುವನ್ನು ದ್ವಿವಚನೌಚಿತ್ಯಕ್ಕೆ ಉದಾಹರಿಸಿ ದ್ವಿವಚನದಲ್ಲಿಯೂ —

ಸಮನಿಸುಗುಮಾ ವಿಭಕ್ತಿಗ
ಳ ಮೊದಲೊಳಾದಂಗಳಾಗಮಂ ದ್ವಿತ್ವಬಹು
ತ್ವಮುದಾಗೆ ಗಳಾಗಮುಕವು
ಸಮನಿಸುಗುಂ ಸರ್ವನಾಮಗುಣವಚನದೊಳಂ (ಸೂತ್ರ ೯೫)

ಎಂಬ ಸೂತ್ರದಿಂದ 'ಗಳ್' ಎಂಬುದನ್ನು ವಿಧಿಸಿ ಅದಕ್ಕೆ 'ತೊಡೆಗಳ್, ಕಣ್ಗಳ್, ತೋಳ್ಗಳ್' ಮೊದಲಾದುವನ್ನು ಉದಾಹರಿಸಿರುವನು. ಇಲ್ಲ 'ತೊಡೆಗಳ್, ಕಣ್ಗಳ್' ಮೊದಲಾದುವಕ್ಕೂ 'ಕೇಶಂಗಳ್' ಮೊದಲಾದುವಕ್ಕೂ ಸಂಸ್ಕೃತದಂತೆ ರೂಪವೈಲಕ್ಷಣ್ಯವು ತೋರುವುದಿಲ್ಲವಾದುದರಿಂದ ಇಲ್ಲ ದ್ವಿವಚನವು ಇಲ್ಲ ಬಹುವಚನವು ಎಂದು ತಿಳಿಯುವುದು ಹೇಗೆಂದು ಶಂಕೆಯುಂಟಾಗುವುದು. ಆದಾಗ್ಯೂ ಸಂಸ್ಕೃತದಲ್ಲ 'ಅಗ್ನಯಃ, ಸಮುದ್ರಾಃ, ಪಾಂಡವಾಃ' ಮೊದಲಾದ ಪ್ರಯೋಗಗಳಲ್ಲ ಬಹುವಚನಪ್ರತ್ಯಯವು ತ್ರಿತ್ವಾದಿ ಸಾಧಾರಣವಾಗಿದ್ದರೂ ವಾಚ್ಯಾರ್ಥಪ್ರಸಿದ್ಧಿಗೆ ಅನುಗುಣವಾಗಿ 'ತ್ರಿತ್ವ, ಚತುಷ್ಟ್ವ, ಪಂಚತ್ವ' ಮೊದಲಾದ ವಿಶೇಷ ಪ್ರತೀತಿ ಹೇಗೆ ಉಂಟಾಗುವುದೋ ಹಾಗೆ ಇಲ್ಲಿ ದ್ವಿತ್ವ ಪ್ರತೀತಿಯುಂಟಾಗುವುದೆಂದು ತಿಳಿಯಬೇಕು. ಸಂಸ್ಕೃತದಲ್ಲಿ 'ಬಹುತ್ವೇ' ಎಂಬುದರಿಂದ ಹೇಗೆ ತ್ರಿತ್ವಾದಿ ಸಂಖ್ಯೆಗಳಿಗೆಲ್ಲಾ ಸಂಗ್ರಹ ಬರುವುದೋ ಹಾಗೆ ಭಾಷೆಯಲ್ಲಿ 'ಅನೇಕತ್ವೇ' ಎಂದು ಹೇಳಿರುವುದರಿಂದ ದ್ವಿತ್ವಾದಿ ಸಂಖ್ಯೆಗಳಿಗೆ ಸಂಗ್ರಹವು ಬರುವುದು.

ಇಲ್ಲಿ 'ಗಳ್' ಎಂಬುದನ್ನು ಅನೇಕತ್ವದಲ್ಲಿಯೆ ವಿಧಿಸಿರುವುದರಿಂದ ಶಾಬ್ದಬೋಧದಲ್ಲಿ ದ್ವಿತ್ವಕ್ಕೆ ಅನೇಕತ್ವಪ್ರಕಾರಕಬೋಧವಿಷಯತ್ವವಿದ್ದರೂ ದ್ವಿತ್ವಪ್ರಕಾರಕಬೋಧವಿಷಯತ್ವ ವಿರುವುದಿಲ್ಲವಾದುದರಿಂದ ದ್ವಿತ್ವಾದಿಗಳಿಗೆ ಅನೇಕತ್ವದಿಂದ ಸಂಗ್ರಹವೆಂದು ಹೇಳುವುದಕ್ಕಾಗುವುದಿಲ್ಲವೆಂದರೆ ಸಂಸ್ಕೃತದಲ್ಲಿಯೂ ಬಹುವಚನ ಪ್ರತ್ಯಯಗಳನ್ನು ಬಹುತ್ವದಲ್ಲಿಯೇ ವಿಧಿಸಿರುವುದ

ರಿಂದ ತ್ರಿತ್ವಾದಿಗಳಿಗೆ ಬಹುತ್ವಪ್ರಕಾರಕಬೋಧವಿಷಯತ್ವವಿದ್ದರೂ ತ್ರಿತ್ವಾದಿಪ್ರಕಾರಕಬೋಧ ವಿಷಯತ್ವವಿಲ್ಲವಾದುದರಿಂದ ಹಿಂದೆ ಹೇಳಿರುವ ಉದಾಹರಣೆಗಳಲ್ಲಿ ಬಹುತ್ವದಿಂದ ತ್ರಿತ್ವಾದಿ ಗಳಿಗೂ ಸಂಗ್ರಹವೆಂದು 'ತ್ರಿತ್ವ, ಚತುಷ್ಟ್ವ, ಪಂಚತ್ವ' ಮೊದಲಾದ ಸಂಖ್ಯಾವಿಶೇಷ ಪ್ರತೀತಿ ಯುಂಟಾಗುವುದಿಲ್ಲ. ಆದುದರಿಂದ ಬಹುವಚನದಿಂದ ಬಹುತ್ವ ತೋರುವುದೇ ಹೊರತು ತ್ರಿತ್ವಾದಿ ಸಂಖ್ಯಾವಿಶೇಷವು ತೋರುವುದಿಲ್ಲ. ಇಂತಹ ಸಂಖ್ಯಾವಿಶೇಷಗಳು ತೋರಬೇಕಾದರೆ 'ತ್ರಯಃ ಅಗ್ನಯಃ, ಚತ್ವಾರಸ್ಸಮುದ್ರಾಃ, ಪಂಚಪಾಂಡವಾಃ' ಎಂದು ಮೊದಲಾದ ಪದಾಂತರ ಸಮಭಿವ್ಯಾಹಾರದಸೆಯಲ್ಲಿಯೇ ಎಂದು ಹೇಳಬೇಕು. ಹೀಗೆ ಭಾಷೆಯಲ್ಲಿಯೂ 'ಎರಡು ನಯನಂಗಳ್' ಮೊದಲಾದ ಪದಾಂತರ ಸಮಭಿವ್ಯಾಹಾರದಿಂದಲೇ ದ್ವಿತ್ವಾದಿ ಪ್ರತೀತಿಯೆಂದು ತಿಳಿಯಬೇಕು. ಆದರೆ ಸಂಸ್ಕೃತದಲ್ಲಿ ದ್ವಿತ್ವಪ್ರತೀತಿಯು ಪದಾಂತರ ಸಮಭಿವ್ಯಾಹಾರನಿರಪೇಕ್ಷ ವಾಗಿರುವುದು. ಭಾಷೆಯಲ್ಲಿ ತತ್ಸಾಪೇಕ್ಷವಾಗಿರುವುದೆಂಬಿಷ್ಟೇ ಭೇದವಿರುವುದರಿಂದ ದ್ವಿವಚನವೇ ಇಲ್ಲವೆಂದು ಹೇಳುವುದಕ್ಕಾಗುವುದಿಲ್ಲ. ಆದುದರಿಂದ **ದರ್ಪಣಕಾರ**ನು ಹೇಳಿರುವ ದ್ವಿತ್ವೋಕ್ತಿಯು ಸಂಗತವಾಗಿಯೇ ಇರುವುದೆಂದು ತಿಳಿಯಬೇಕು. ಇಲ್ಲಿ **ದರ್ಪಣಕಾರ**ನು 'ಗಳ್' ಎಂಬುದನ್ನು ಆಗಮವೆಂದು ಹೇಳಿರುವನು. **ಶಾಸನಕಾರ**ನು ಪ್ರತ್ಯಯವೆಂದು ಹೇಳಿರುವನು. ಇವರಿಬ್ಬರಿಗೂ ಆಗಮ, ಪ್ರತ್ಯಯ ಎಂಬ ನಾಮವ್ಯತ್ಯಾಸವಿದ್ದರೂ ರೂಪನಿಷ್ಪತ್ತಿಯಲ್ಲಿ ಭೇದವಿಲ್ಲ. **ಶಾಸನಕಾರ**ನ ಮತದಲ್ಲಿ ಆಗಮಸೂಚಕವಾದ ಕಿತ್ವವಿಲ್ಲವಾದುದರಿಂದಲೂ ಪಂಚಮ್ಯಂತದ ಮೇಲೆ ವಿಹಿತವಾಗಿರುವುದರಿಂದಲೂ ಪ್ರತ್ಯಯವೆಂದು ತಿಳಿಯಬೇಕು. **ದರ್ಪಣಕಾರ**ನ ಮತ ದಲ್ಲಿ ಮಿತ್ರನಂತೆ ಸಮೀಪದಲ್ಲಿ ಬರುವ ಮಾತ್ರದಿಂದಲೇ ಆಗಮವೆಂದು ವ್ಯವಹಾರವೇ ಹೊರತು ಶಾಸನದಂತೆ ಆಗಮತ್ವಸೂಚಕಚಿಹ್ನಗಳಿಲ್ಲವೆಂದು ತಿಳಿಯಬೇಕು.

**ಅವತಾರಿಕೆ ೨೩೩**

ಪೂರ್ವದಲ್ಲಿ ಸಾಮಾನ್ಯವಾಗಿ ಬಹುತ್ವದ್ಯೋತಕವಾಗಿ ಗಳ್-ಪ್ರತ್ಯಯವು ವಿಧಿಸಲ್ಪಟ್ಟಿತು. ಈಗ ಅದಕ್ಕೆ ಬಾಧಕವಾಗಿ ಪ್ರಕೃತಿವಿಶೇಷಗಳ ಮೇಲೆ ವೈಕಲ್ಪಿಕ ಕಳುಪ್-ಪ್ರತ್ಯಯವನ್ನು ವಿಧಿ ಸುತ್ತಾನೆ.

**ಸೂತ್ರಂ || ನಾಡ್ವಾದಿಭ್ಯಃ ಕಳುಬ್ವಾ || ೨೩೩ ||**

**ಅರ್ಥ ||** 'ನಾಡು' **ಮೊದಲಾದ ಶಬ್ದಗಳ ದೆಸೆಯಿಂದ ಪರವಾಗಿ ಕಳುಪ್-ಪ್ರತ್ಯಯವು ಅನೇಕತ್ವವು ತೋರುತ್ತಿರಲು ಸುಪ್-ಪ್ರತ್ಯಯವು ಪರವಾಗಿದ್ದರೆ ವಿಕಲ್ಪವಾಗಿ ಬರುವುದು.**

**ಉದಾಹರಣೆ ||** 'ನಾಟ್ಕಳ್, ನಾಡುಗಳ್, ನಾಟ್ಗಳ್; ಕೋಟ್ಕಳ್, ಕೋಡುಗಳ್, ಕೋಟ್ಗಳ್; ಬೀಟ್ಕಳ್, ಬೀಡುಗಳ್, ಬೀಟ್ಗಳ್' ಮೊದಲಾದುವು ಇದಕ್ಕೆ ಲಕ್ಷ್ಯಗಳು. ನಾಡ್ವಾದಿಗಳು ಪ್ರಯೋಗಗಮ್ಯಗಳಾದುದುದರಿಂದ ಆಕೃತಿಗಣವೆಂದು ತಿಳಿಯುವುದು. ಆದುದ ರಿಂದ ಈ ಗಣದಲ್ಲಿ 'ಕಾಡು, ಸೇಡು, ಊರ್, ಬೇರ್, ನಾರ್ ||'. ಮೊದಲಾದ ಶಬ್ದಗಳನ್ನು ಪಾಠಮಾಡಿ ಕಳುಪ್-ಪ್ರತ್ಯಯವನ್ನು ಹೇಳುವುದು.

**ವಿಚಾರ ೨೩೩**

ಈ ಸೂತ್ರದಲ್ಲಿ — 'ನಾಡ್ವಾದಿಭ್ಯಃ, ಕಳುಪ್, ವಾ' ಎಂದು ಮೂರು ಪದಗಳಿರುವುವು. ಪೂರ್ವದಿಂದ 'ಅನೇಕತ್ವೇ, ಸುಪಿ' ಎಂಬಿವು ಅನುವರ್ತಿಸಲ್ಪಡುವುವು. 'ನಾಡ್ವಾದಿಭ್ಯಃ'

ಎಂದರೆ — 'ನಾಡು, ಮೊದಲಾದ ಗಣಪಠಿತ ಶಬ್ದಗಳ ದೆಸೆಯಿಂದ ಎಂದರ್ಥವು. 'ಕುಳುಪ್' ಎಂಬುದು ಪರವಾಗಿ ವಿಧಿಸುವುದರಿಂದ ಪ್ರತ್ಯಯಸಂಜ್ಞಕವಾಗುವುದು. ಇಲ್ಲಿ ಉ ಕಾರವು ಉಚ್ಚಾರಣಾರ್ಥಕವು. ಪ ಕಾರವು — 'ಕಳುಪಃ' ಎಂಬ ಸೂತ್ರದಲ್ಲಿ ವಿಶೇಷಣಾರ್ಥಕವು. 'ಕಳ್' ಎಂಬುದೇ ಲಕ್ಷ್ಯಗಳಲ್ಲಿ ಪ್ರಯುಜ್ಯಮಾನವಾಗುವುದು. 'ವಾ' ಎಂಬುದು ವಿಕಲ್ಪಾರ್ಥವಾದುದರಿಂದ ಇದು ಬಾರದ ಪಕ್ಷದಲ್ಲಿ ಪೂರ್ವಸೂತ್ರದಿಂದ ಗಳ್-ಪ್ರತ್ಯಯವು ಬರುವುದು. ತಥಾಚ — 'ನಾಡು' ಮೊದಲಾದ ಗಣಪಠಿತ ಶಬ್ದಗಳ ದೆಸೆಯಿಂದ ಪರವಾಗಿ ಕಳುಪ್-ಪ್ರತ್ಯಯವು ಅನೇಕತ್ವವು ತೋರುವಾಗ ಸುಪ್-ಪ್ರತ್ಯಯವು ಪರವಾಗಿರಲು ವಿಕಲ್ಪವಾಗಿ ಬರುವುದೆಂದು ಸೂತ್ರಾರ್ಥವಾಗಲು 'ನಾಳ್ಕಳ್' ಮೊದಲಾದುವು ಸಿದ್ಧಿಸುವುವು. 'ನಾಳ್ಕಳ್' ಮೊದಲಾದೆಡೆಗಳಲ್ಲಿ — '**ಉಡೋರ್ದೋರ್ ಳಟಂ ವ್ಯಂಜನೇ || ೮೨ ||**' ಎಂಬ ಸೂತ್ರದಿಂದ 'ಡು' ಶಬ್ದಕ್ಕೆ ಟಾದೇಶವು ಬಂದಿರುವುದು. ಗಳ್-ಪ್ರತ್ಯಯವು ಪರವಾಗಿರಲು— 'ವಾ ಗಿ || ೮೫ ||' ಎಂಬುದರಿಂದ ವಿಕಲ್ಪವಾಗಿ ಬಂದು 'ನಾಡುಗಳ್' ಎಂದು ಎರಡು ರೂಪಗಳಾಗುವುವು.

**ಅವತಾರಿಕೆ ೨೩೪**

ಹೀಗೆಯೇ ಬಹುತ್ವದಲ್ಲಿ 'ಎಲ್ಲ' ಶಬ್ದಕ್ಕೆ ವು-ಪ್ರತ್ಯಯವು ಬರುವುದೆಂದು ಹೇಳುತ್ತಾನೆ.

**ಸೂತ್ರಂ || ಎಲ್ಲಾದ್ವುಃ || ೨೩೪ ||**

**ಅರ್ಥ ||** ಎಲ್ಲ ಶಬ್ದಕ್ಕೆ ಪರವಾಗಿ ಅನೇಕತ್ವವು ತೋರುವಾಗ ಸುಪ್ಪು ಪರದಲ್ಲಿರಲು ವು-ಪ್ರತ್ಯಯವು ಬರುವುದು.

**ಉದಾಹರಣೆ ||** 'ಎಲ್ಲವು, ಎಲ್ಲವಂ, ಎಲ್ಲವಱಿಂ' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೨೩೪**

ಈ ಸೂತ್ರದಲ್ಲಿ — 'ಎಲ್ಲಾತ್, ವುಃ' ಎಂದು ಎರಡು ಪದಗಳಿರುವುವು. ಪೂರ್ವದಿಂದ 'ಅನೇಕತ್ವೇ, ಸುಪಿ' ಎಂದು ಅನುವರ್ತಿಸಲ್ಪಡುವುವು. ಇವೆರಡೂ '**ಗಳದ್ವಾದೇಃ || ೨೪೪ ||**' ಎಂಬ ಸೂತ್ರದವರೆಗೂ ಅಧಿಕರಿಸಲ್ಪಡುವುವು. ತಥಾಚ – 'ಎಲ್ಲ' ಶಬ್ದಕ್ಕೆ ಪರವಾಗಿ ಅನೇಕತ್ವವು ತೋರುವಾಗ ಸುಪ್ಪು ಪರದಲ್ಲಿರಲು 'ವು' ಎಂಬ ಪ್ರತ್ಯಯವು ಬರುವುದೆಂದು ಸೂತ್ರಾರ್ಥವಾಗುವುದರಿಂದ 'ಎಲ್ಲವು' ಮೊದಲಾದುವು ಸಿದ್ಧಿಸುವುವು.

ಇಲ್ಲಿ ವಿಚಾರ ಮಾಡಲು 'ಎಲ್ಲ' ಶಬ್ದವು ಸ್ವಯಮನೇಕಾರ್ಥವಾಚಿಯಾಗಿಯೇ ಇರುವುದರಿಂದ ಪುನಃ ಅನೇಕಾರ್ಥಕ ಪ್ರತ್ಯಯವನ್ನು ಅಪೇಕ್ಷಿಸುವುದಿಲ್ಲ. ಆದಾಗ್ಯೂ — 'ಸರ್ವ' ಶಬ್ದವು ಸ್ವಭಾವವಾಗಿ ಸರ್ವಾರ್ಥವಾಚಿಯಾಗಿದ್ದರೂ 'ಸರ್ವೇ, ಸರ್ವಸ್ಯ, ಸರ್ವಜ್ಞಃ, ಸರ್ವದರ್ಶನಃ' ಮೊದಲಾದ ಕೆಲವೆಡೆಗಳಲ್ಲಿಯೇ ಅಬಾಧಕವಾಗಿರುವುದು. ಬೇರೆ ಎಲ್ಲಾ ಕಡೆಯಲ್ಲಿಯೂ ವ್ಯವಹಾರದಲ್ಲಿ ಬಾಧಕವಾಗಿರುವುದರಿಂದ 'ಸರ್ವ' ಶಬ್ದವು ವಿವಕ್ಷಿತ ಸರ್ವಪರವೆಂದು ಏಕಾನೇಕತ್ವ ಪ್ರತ್ಯಾಯಕಪ್ರತ್ಯಯವನ್ನು ಹೇಗೆ ಹೊಂದುವುದೋ ಹಾಗೆ ಈ 'ಎಲ್ಲ' ಶಬ್ದವು ವಿವಕ್ಷಿತ ಸರ್ವಪರವೆಂದು ಬಹುವಚನೋಪಪತ್ತಿಯನ್ನು ಕಲ್ಪಿಸುವುದು. ಅಥವಾ 'ದ್ವಿ, ತ್ರಿ' ಎಂಬಿವು ಸ್ವಭಾವವಾಗಿ ದ್ವಿತ್ವ-ತ್ರಿತ್ವ ಸಂಖ್ಯಾಬೋಧಕಗಳಾಗಿದ್ದರೂ ಶಬ್ದಸಾಧುತ್ವಾರ್ಥವಾಗಿ ಯೋಗ್ಯವಾದ

ಆ ಆ ವಿಭಕ್ತಿಗಳನ್ನು ಹೇಗೆ ಹೊಂದುವುವೋ ಹಾಗೆ ಇಲ್ಲಿಯೂ ಯೋಗ್ಯವಾದ ವಿಭಕ್ತಿಗಳನ್ನು ಹೊಂದುವುವೆಂದು ತಿಳಿಯಬೇಕು. ಎಲ್ಲ ಶಬ್ದವು ಅದ್ವಾದಿಗಣದಲ್ಲಿ ಸೇರಿರುವುದರಿಂದ ಪ್ರಾಪ್ತವಾದ ವಕ್ಷ್ಯಮಾಣ ' ದು ' ಲೋಪವಾರಣಾರ್ಥವಾಗಿ ಪ್ರಾರಂಭಿಸಲ್ಪಟ್ಟಿರುವುದು.

**ಅವತಾರಿಕೆ ೨೩೫**

ಪೂರ್ವದಲ್ಲಿ ಅದ್ವಾದಿಗಣಪಠಿತವಾದ ' ಎಲ್ಲ ' ಶಬ್ದವೊಂದಕ್ಕೆ ' ವು ' ಪ್ರತ್ಯಯವು ವಿಧಿಸಲ್ಪಟ್ಟಿತು. ಈಗ ತದಿತರವಾದ ಅದ್ವಾದಿಗಳಿಗೆ ' ವು ' ಪ್ರತ್ಯಯವನ್ನೂ ' ದು ' ಲೋಪವನ್ನೂ ವಿಧಿಸುತ್ತಾನೆ.

**ಸೂತ್ರಂ || ಅದ್ವಾದೇರ್ದೋರ್ಲುಪ್ಚ || ೨೩೫ ||**

**ಅರ್ಥ || ಅದ್ವಾದಿಗಣಪಠಿತವಾದ ಶಬ್ದದ ದೆಸೆಯಿಂದ ಪರವಾಗಿ ಅನೇಕತ್ವವು ತೋರುವಾಗ ಸುಪ್ಪು ಪರದಲ್ಲಿರಲು ' ವು ' ಪ್ರತ್ಯಯವೂ ಅದ್ವಾದಿಗಳ ' ದು ' ಸಂಜ್ಞಕ ಶಬ್ದಕ್ಕೆ ಲೋಪವೂ ಬರುವುದು.**

**ಉದಾಹರಣೆ ||** ' ಅವು, ಇವು, ಉವು, ಆವುವು, ಪಲವು || ' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೨೩೫**

ಈ ಸೂತ್ರದಲ್ಲಿ — ' ಅದ್ವಾದೇಃ, ದೋಃ, ಲುಪ್, ಚ ' ಎಂದು ನಾಲ್ಕು ಪದಗಳಿರುವುವು. ಪೂರ್ವಸೂತ್ರದಿಂದ ' ವುಃ ' ಎಂದು ಅನುವರ್ತಿಸಲ್ಪಡುವುದು. ' ಅನೇಕತ್ವೇ ಸುಪಿ ' ಎಂಬುವು ಪ್ರಕರಣದಿಂದಲೇ ಲಬ್ಧವಾಗುವುವು. ' ಅದ್ವಾದೇಃ ' ಎಂಬುದು ' ದೋಃ ' ಎಂಬುದಕ್ಕೆ ವಿಶೇಷಣವು. ' ದೋಃ ' ಎಂಬುದು ಸ್ಥಾನಷಷ್ಠ್ಯಂತವಾದುದರಿಂದ ' ಲುಪ್ ' ಎಂಬುದರೊಡನೆ ಸಂಬಂಧಿಸುವುದು. ಚ ಕಾರವು ಪೂರ್ವೋಕ್ತ ' ವು ' ಪ್ರತ್ಯಯ ಸಮುಚ್ಚಾಯಕವಾದುದರಿಂದ ಇದಕ್ಕೆ ಪ್ರಕೃತಿಯು ಅದ್ವಾದಿಯೆಂದೇ ತಿಳಿಯಬೇಕು. ತಥಾಚ — ಅದ್ವಾದಿಗಣಪಠಿತವಾದ ಶಬ್ದದ ದೆಸೆಯಿಂದ ಪರವಾಗಿ ಅನೇಕತ್ವವು ತೋರುವಾಗ ' ಸುಪ್ಪು ' ಪರದಲ್ಲಿರುವಾಗ ' ವು ' ಪ್ರತ್ಯಯವೂ ಆ ಅದ್ವಾದಿಗಳ ' ದು ' ವಿಗೆ ಲೋಪವೂ ಬರುವುದೆಂದು ಸೂತ್ರಾರ್ಥವಾಗುವುದರಿಂದ ' ಅವು, ಇವು ' ಮೊದಲಾದುವು ಸಿದ್ಧಿಸುವುವು. ಈ ಅದ್ವಾದಿಯಲ್ಲಿ ' ಎಲ್ಲ ' ಶಬ್ದವು ಸೇರಿದ್ದರೂ ಪೂರ್ವಸೂತ್ರದಲ್ಲಿ ಗ್ರಹಣಮಾಡಿರುವುದರಿಂದ ಇಲ್ಲಿ ಅದನ್ನು ಬಿಟ್ಟು ಉಳಿದುವನ್ನು ಉದಾಹರಿಸಿರುವುದು.

**ಅವತಾರಿಕೆ ೨೩೬**

ಇನ್ನು ಗುಣವಚನಗಳ ದೆಸೆಯಿಂದ ಪರವಾಗಿ ವು-ಪ್ರತ್ಯಯವನ್ನೂ ' ದು ' ವಿಗೆ ' ಯು ' ಆದೇಶವನ್ನೂ ವಿಧಿಸುತ್ತಾನೆ.

**ಸೂತ್ರಂ || ಗುಣೋಕ್ತೇರ್ಯಶ್ಚ || ೨೩೬ ||**

**ಅರ್ಥ || ಗುಣವಾಚಕ ಶಬ್ದಗಳ ದೆಸೆಯಿಂದ ಪರವಾಗಿ ಅನೇಕತ್ವವು ತೋರುವಾಗ ಸುಪ್ಪು ಪರದಲ್ಲಿರಲು ವು-ಪ್ರತ್ಯಯವೂ ' ದು ' ವಿನ ಸ್ಥಾನದಲ್ಲಿ ' ಯು ' ಶಬ್ದಾದೇಶವೂ ಬರುವುದು.**

**ಉದಾಹರಣೆ** || 'ಇನಿಯವು, ಪಿರಿಯವು, ಕಡಿಯವು, ನಿಡಿಯವು, ಕಿಱಿಯವು, ಬಿಳಿಯವು, ಕರಿಯವು ||' ಮೊದಲಾದ ಶಬ್ದಾಂತ ಗುಣವಾಚಕಗಳೆಲ್ಲಾ ಇದಕ್ಕೆ ಲಕ್ಷ್ಯಗಳೆಂದು ತಿಳಿಯುವುದು.

**ವಿಚಾರ ೨೩೬**

ಈ ಸೂತ್ರದಲ್ಲಿ — 'ಗುಣೋಕ್ತೇಃ, ಯಃ, ಚ' ಎಂದು ಮೂರು ಪದಗಳಿರುವುವು. ಪೂರ್ವಸೂತ್ರದಿಂದ 'ದೋಃ, ವುಃ' ಎಂದು ಅನುವರ್ತಿಸಲ್ಪಡುವುವು. 'ಗುಣೋಕ್ತೇಃ' ಎಂಬುದು ಪೂರ್ವೋಕ್ತ ಲಕ್ಷಣಲಕ್ಷಿತ ಗುಣವಾಚಕಶಬ್ದ ಬೋಧಕವಾದ ಪಂಚಮ್ಯಂತಪದವು. 'ಯಃ' ಎಂಬುದು ಅ ಕಾರ ಸಹಿತ ಯ ಕಾರಬೋಧಕವು. ಇದು ಇಲ್ಲಿ ಆದೇಶರೂಪವಿಧೇಯವು. ಇದು ಅರ್ಥಾತ್ ಗುಣವಾಚಕದ 'ದು' ವಿನ ಸ್ಥಾನದಲ್ಲಿ ಬರುವುದೆಂದು ತಿಳಿಯುವುದು. 'ಚ' ಎಂಬುದು 'ವು' ಪ್ರತ್ಯಯ ಸಮುಚ್ಚಾಯಕವು. ಆ ಗುಣವಾಚಕ ಶಬ್ದದ ದೆಸೆಯಿಂದ ಪರವಾಗಿ ವು-ಪ್ರತ್ಯಯವೂ ಆ ಗುಣವಾಚಕ ಶಬ್ದದ 'ದು' ವಿನ ಸ್ಥಾನದಲ್ಲಿ 'ಯ' ಶಬ್ದಾದೇಶವೂ ಅನೇಕತ್ವದಲ್ಲಿ ಸುಪ್ಪು ಪರವಾಗಿರಲು ಬರುವುವು ಎಂದು ಸೂತ್ರಾರ್ಥವಾಗುವುದರಿಂದ 'ಇನಿಯವು' ಮೊದಲಾದುವು ಸಿದ್ಧಿಸುವುವು.

**ಅವತಾರಿಕೆ ೨೩೭**

ಆ ಗುಣವಾಚಕಗಳಲ್ಲಿ ಕೆಲವಕ್ಕೆ ದ ಕಾರಾದೇಶವನ್ನು ವಿಧಿಸುತ್ತಾನೆ.

**ಸೂತ್ರಂ || ತೋ ದಃ || ೨೩೭ ||**

**ಅರ್ಥ || ಗುಣವಾಚಕ ಶಬ್ದಗಳ 'ದು' ವಿನ ತ ಕಾರಸ್ಥಾನದಲ್ಲಿ ದ ಕಾರಾದೇಶವು ಅನೇಕತ್ವದಲ್ಲಿ ಸುಪ್-ಪರವಾಗಿರಲು ಬರುವುದು.**

**ಉದಾಹರಣೆ** || 'ಒಳ್ಳಿದುವು, ಮೆಲ್ಲಿದುವು, ತೆಳ್ಳಿದುವು, ಬೆಟ್ಟಿದುವು ||' ಮೊದಲಾದ 'ತು' ಶಬ್ದಾಂತ ಗುಣವಾಚಕಗಳೆಲ್ಲಾ ಇದಕ್ಕೆ ಲಕ್ಷ್ಯಗಳು.

**ವಿಚಾರ ೨೩೭**

ಈ ಸೂತ್ರದಲ್ಲಿ — 'ತಃ, ದಃ' ಎಂದು ಎರಡು ಪದಗಳಿರುವುವು. ಪೂರ್ವದಿಂದ ಗುಣೋಕ್ತೇಃ, ದೋಃ' ಎಂಬಿವು ಅನುವರ್ತಿಸಲ್ಪಡುವುವು. 'ಗುಣೋಕ್ತೇಃ' ಎಂಬುದು 'ದೋಃ' ಎಂಬುದಕ್ಕೆ ವಿಶೇಷಣವು. 'ದೋಃ' ಎಂಬುದು 'ತಃ' ಎಂಬುದಕ್ಕೆ ವಿಶೇಷಣವು. 'ತಃ' ಎಂಬುದು ಸ್ಥಾನಷಷ್ಠ್ಯಂತಪದವು. 'ದಃ' ಎಂಬುದು ದ ಕಾರ ಮಾತ್ರ ಬೋಧಕವಾದ ವಿಧೇಯವು. ತಥಾಚ — ಗುಣವಾಚಕಗಳ 'ದು' ವಿನ ತ ಕಾರಕ್ಕೆ ದ ಕಾರಾದೇಶವು ಅನೇಕತ್ವದಲ್ಲಿ ಸುಪ್ಪರವಾಗಿರುವಾಗ ಬರುವುದು ಎಂದು ಸೂತ್ರಾರ್ಥವಾಗಲು — 'ಒಳ್ಳಿತು, ಮೆಲ್ಲಿತು, ತೆಳ್ಳಿತು' ಮೊದಲಾದ 'ತು' ಶಬ್ದಾಂತ ಗುಣವಾಚಕಗಳ ತ ಕಾರಕ್ಕೆ ದ ಕಾರವು ಬಂದು 'ಒಳ್ಳಿದುವು' ಮೊದಲಾದ ರೂಪಗಳು ಸಿದ್ಧಿಸುವುವು.

ಇಲ್ಲಿ ಗುಣವಾಚಕಗಳು — 'ದು' ಶಬ್ದಾಂತಗಳೆಂದೂ 'ತು' ಶಬ್ದಾಂತಗಳೆಂದೂ ಎರಡು ತೆರನಾಗಿರುವುವು. ಅವುಗಳಲ್ಲಿ ಪೂರ್ವಸೂತ್ರದಿಂದ ವಿಹಿತವಾದ 'ಯ' ಶಬ್ದಾದೇಶವು ಸಾಮಾನ್ಯವಾಗಿದ್ದರೂ ಈ ಸೂತ್ರಪರ್ಯಾಲೋಚನೆಯಿಂದ 'ದು' ಶಬ್ದಾಂತಗಳಿಗೇ ಬರುವು

ದೆಂದು ಫಲಿತವಾಗುವುದು. 'ತು' ಶಬ್ದಾಂತಗಳಿಗಾದರೋ ಈ ಸೂತ್ರದಿಂದ 'ದು' ವಿನ ತ ಕಾರ ಮಾತ್ರಕ್ಕೆ ದ ಕಾರಾದೇಶವು ವಿಧಿಸಲ್ಪಡುವುದು. 'ವು' ಪ್ರತ್ಯಯವು ಸಾಮಾನ್ಯ ಸೂತ್ರದಿಂದಲೇ ಸಿದ್ಧಿಸುವುದು. ಅಥವಾ ಇದೇ ಸೂತ್ರದಲ್ಲಿ ಅದನ್ನೂ ಅನುವರ್ತಿಸಿ ದ ಕಾರಾದೇಶ ಸನ್ನಿಯೋಗದಿಂದ ವಿಧಿಸುವುದು.

ಇಲ್ಲಿ **ದರ್ಪಣಕಾರ**ನು ಸರ್ವನಾಮ ಗುಣವಾಚಕಗಳೆರಡರಲ್ಲಿಯೂ ಸಾಮಾನ್ಯವಾಗಿ —

**ಸಂಗಡಿಸಿದ ಸರ್ವನಾಮದ**
**ಲಿಂಗಾಂತ್ಯಾಕ್ಷರಕಮುವುವಿನಾದ್ಯಕ್ಷರಕಂ**
**ಪಿಂಗದೆ ಲೋಪಂ ಗುಣವಚ**
**ನಂಗಳೊಳಂತ್ಯಂ ದು ಕಾರಮಾಪೊಡೆ ಲೋಪಂ** (ಸೂತ್ರ ೯೬)

ಎಂಬ ಸೂತ್ರವನ್ನು ಹೇಳಿ — 'ಪೆಱವರ, ಕರಿಯವು' ಮೊದಲಾದ ಶಬ್ದಗಳನ್ನು ಸಾಧಿಸಿ 'ತು' ಶಬ್ದಾಂತ ಗುಣವಚನ ವಿಷಯದಲ್ಲಿ —

**ಅಕ್ಕುಂ ಕೂಡೆ ಈ ಕಾರಾಂ**
**ತಕ್ಕೆ ತೃತೀಯತ್ವಮುವುವಿನಾದಿಗೆ ಲೋಪಂ**
**ಮಿಕ್ಕಾಸ್ತ್ರೀಪುಲ್ಲಿಂಗದೊ**
**ಳಕ್ಕುಮಿರದಿರ್ವಿರೆಂದು ಲೋಕೋಕ್ತಿಗಳೊಳ್** (ಸೂತ್ರ ೯೭)

ಎಂಬ ಸೂತ್ರದಿಂದ ದ ಕಾರಾದೇಶವನ್ನು ವಿಧಿಸಿ ಹಿಂದೆ ಸೂಚಿಸಿರುವ ಸರ್ವನಾಮ ಗುಣವಚನಂಗಳಲ್ಲದ ಸ್ತ್ರೀ-ಪುಲ್ಲಿಂಗ 'ದೊಳ್, ಗಳ್' ಎಂಬುದಕ್ಕೆ ಆದೇಶವಾಗಿ 'ಇರ್, ಅರ್, ದಿರ್, ವಿರ್' ಎಂಬಿವು ಬರುವುವೆಂದೂ ಸೂಚಿಸಿರುವನು. ಇದರಿಂದ **ಶಾಸನಕಾರ**ನು ಹೇಳುವ — '**ಸ್ತ್ರೀಪುಂಸಾದರ್ ದಿರ್ ವಿರ್ ಬಹುಲಂ ॥ ೨೩೯ ॥**' ಮೊದಲಾದ ಸೂತ್ರಗಳಿಂದ ವಿಹಿತಗಳಾದ ಅರಾದಿಗಳಿಗೂ ಸಂಗ್ರಹ ಬರುವುದೆಂದು ತಿಳಿಯುವುದು.

**ಅವತಾರಿಕೆ ೨೩೮**

ಹೀಗೆ ಸರ್ವನಾಮಗುಣವಚನಗಳ ವಿಷಯದಲ್ಲಿ ವ್ಯವಸ್ಥೆಯನ್ನು ಮಾಡಿ — '**ಗಳನೇಕತ್ವೇ ಸುಪಿ**' ಎಂಬ ಸಾಮಾನ್ಯಸೂತ್ರದಿಂದ ಅನಿತ್ವಾದಿ ಕೆಲವು ಶಬ್ದಗಳಲ್ಲಿ ಪ್ರಾಪ್ತವಾದ ಅತಿಪ್ರಸಕ್ತಿಯನ್ನು ವಾರಣಮಾಡಲು ಸೂತ್ರಾಂತರವನ್ನು ಪ್ರಾರಂಭಿಸುತ್ತಾನೆ.

**ಸೂತ್ರಂ ॥ ನಾನಿತ್ವಾದಿಭ್ಯಃ ॥ ೨೩೮ ॥**

**ಅರ್ಥ** ॥ '**ಅನಿತು**' **ಮೊದಲಾದ ಗಣಪಠಿತ ಶಬ್ದಗಳಿಗೆ ಅನೇಕತ್ವದಲ್ಲಿ ಸುಪ್ಪು ಪರವಾಗಿರಲು ಆವುದು ಪ್ರಸಕ್ತವಾಗುವುದೋ ಅದು ಬರುವುದಿಲ್ಲ.**

**ಉದಾಹರಣೆ** ॥ 'ಅನಿತು, ಇನಿತು, ಎನಿತು, ಏಸು, ಐಸು ॥' ಮೊದಲಾದುವು ಇದಕ್ಕೆ ಲಕ್ಷ್ಯಗಳು. ಇದು ಆಕೃತಿಗಣವಾದುದರಿಂದ ಇಲ್ಲಿ 'ಉನಿತು, ಈಸು, ಎಷ್ಟು, ಅಷ್ಟು, ಇಷ್ಟು ॥' ಮೊದಲಾದ ಪರಿಮಾಣವಾಚಕ ಶಬ್ದಗಳನ್ನೂ ಗ್ರಹಿಸಬಹುದು.

**ವಿಚಾರ ೨೩೮**

ಈ ಸೂತ್ರದಲ್ಲಿ — 'ನ, ಅನಿತ್ವಾದಿಭ್ಯಃ' ಎಂದು ಎರಡು ಪದಗಳಿರುವುವು. ಇಲ್ಲಿ ಅನಿತ್ವಾದಿಗಳ ದೆಸೆಯಿಂದ ಪರವಾಗಿ ಬರುವ ಕಾರ್ಯಕ್ಕೆ 'ನ' ಎಂಬುದರಿಂದ ನಿಷೇಧವು

ಹೇಳಲ್ಪಡುವುದು. ಆ ನಿಷೇಧವು ಪ್ರಾಪ್ತವಾದುದಕ್ಕೇ ಹೇಳಬೇಕು. ಇಲ್ಲಿ ಪ್ರಾಪ್ತವಾದುದು ಪ್ರಕರಣ ಬಲದಿಂದ ಅನೇಕತ್ವದಲ್ಲಿ ವಿಹಿತವಾದ ಗಳಾದಿಯೇ ಆಗಿರುವುದು. ಆದುದರಿಂದ — ಅನಿತ್ವಾದಿಗಳಿಗೆ ಅನೇಕತ್ವದಲ್ಲಿ ಯಾವುದು ಪ್ರಾಪ್ತವಾಗುವುದೋ ಅದು ಬರುವುದಿಲ್ಲವೆಂದು ಸೂತ್ರಾರ್ಥವಾಗುವುದರಿಂದ ' ಅನಿತು, ಇನಿತು ' ಮೊದಲಾದುವು ಸಿದ್ಧಿಸುವುವು.

**ಅವತಾರಿಕೆ ೨೩೯**

ಪೂರ್ವದಲ್ಲಿ — ' ಎಲ್ಲಾದ್ಯಃ ' ಮೊದಲಾದ ಸೂತ್ರಗಳಿಂದ — ಅಧ್ವಾದಿಗಳಿಗೂ ಗುಣವಚನಗಳಿಗೂ ಅನೇಕತ್ವದಲ್ಲಿ ಯಾವುದು ವಿಧಿಸಲ್ಪಟ್ಟಿರುವುದೋ, ಯಾವುದು ' ನಾನಿತ್ವಾದಿಭ್ಯಃ ' ಎಂಬ ಸೂತ್ರದಿಂದ ನಿಷೇಧಿಸಲ್ಪಟ್ಟಿರುವುವೋ ಆ ವಿಧಿಯೂ ನಿಷೇಧವೂ ನಪುಂಸಕಲಿಂಗ ವಿಷಯಕವೇ ಎಂದು ಮನಸ್ಸಿನಲ್ಲಿಟ್ಟುಕೊಂಡು ಸ್ತ್ರೀ-ಪುಲ್ಲಿಂಗಗಳ ವಿಷಯದಲ್ಲಿ ಪ್ರತ್ಯಯಾಂತರಗಳನ್ನು ವಿಧಿಸುತ್ತಾನೆ.

**ಸೂತ್ರಂ || ಸ್ತ್ರೀಪುಂಸಾದರ್ ದಿರ್ ವಿರ್ ಬಹುಲಂ || ೨೩೯ ||**

**ಅರ್ಥ ||** **ಸ್ತ್ರೀವಾಚಕ ಶಬ್ದಗಳ ದೆಸೆಯಿಂದಲೂ ಪುರುಷವಾಚಕ ಶಬ್ದಗಳ ದೆಸೆಯಿಂದಲೂ ಪರವಾಗಿ — ' ಅರ್, ದಿರ್, ವಿರ್ ' ಎಂಬ ಮೂರು ಪ್ರತ್ಯಯಗಳೂ ಅನೇಕತ್ವದಲ್ಲಿ ಸುಪ್ಪು ಪರವಾಗಿರಲು ' ಬಹುಲಂ ' ಎಂದರೆ ಯಥಾಲಕ್ಷ್ಯವಾಗಿ ಬರುವುವು.**

**ಉದಾಹರಣೆ ||** ' ಸ್ತ್ರೀಯರ್, ಅತ್ತೆಯರ್, ಸೊಸೆಯರ್, ಸುತೆಯರ್, ಪುರುಷರ್, ಸುತರ್, ಅವರ್, ಇವರ್, ಉವರ್, ಎಲ್ಲರ್, ಇನಿಬರ್, ಬಜುವರ್, ಪೊಸಂಬರ್|| ' ಮೊದಲಾದುವು ಅರ್-ಪ್ರತ್ಯಯಕ್ಕೂ ' ಅತ್ತೆದಿರ್, ಸೊಸೆದಿರ್, ತಾಯ್ದಿರ್, ತಂಗಿದಿರ್, ತಂದೆದಿರ್, ಮಾವಂದಿರ್, ಭಾವಂದಿರ್, ಅಣ್ಣಂದಿರ್, ತಮ್ಮಂದಿರ್|| ' ಮೊದಲಾದುವು ದಿರ್-ಪ್ರತ್ಯಯಕ್ಕೂ ' ಅತ್ತೆವಿರ್, ಸೊಸೆವಿರ್, ತಾಯ್ವಿರ್, ತಂಗಿವಿರ್, ತಂದೆವಿರ್, ಭ್ರಾತೃವಿರ್ || ' ಮೊದಲಾದುವು ವಿರ್-ಪ್ರತ್ಯಯಕ್ಕೂ ಲಕ್ಷ್ಯಗಳೆಂದು ತಿಳಿಯಬೇಕು. ಇಲ್ಲಿ ಬಹುಲಗ್ರಹಣ ಮಾಡಿರುವುದರಿಂದ ಕ್ವಚಿತ್ ಗಳ್-ಪ್ರತ್ಯಯವೂ ಬಂದು — ' ತಾಯ್ಗಳ್, ತಂದೆಗಳ್, ಅತ್ತೆಗಳ್, ಸೊಸೆಗಳ್ || ಮೊದಲಾದುವೂ ಕ್ವಚಿತ್ ಗಳ್-ಪ್ರತ್ಯಯವೊಂದೇ ಬರುವುದರಿಂದ ' ನೀಂಗಳ್, ತಾಂಗಳ್, ಆಂಗಳ್ || ' ಮೊದಲಾದುವೂ ಸಿದ್ಧಿಸುವುವು.

**ವಿಚಾರ ೨೩೯**

ಈ ಸೂತ್ರದಲ್ಲಿ — ' ಸ್ತ್ರೀಪುಂಸಾತ್, ಅರ್, ದಿರ್, ವಿರ್, ಬಹುಲಂ ' ಎಂದು ಐದು ಪದಗಳಿರುವುವು. ' ಸ್ತ್ರೀಪುಂಸಾತ್ ' ಎಂದರೆ ಸ್ತ್ರೀವಾಚಕ-ಪುರುಷವಾಚಕ ಶಬ್ದಗಳ ದೆಸೆಯಿಂದ ಎಂದರ್ಥವು. ' ಅರ್, ದಿರ್, ವಿರ್ ' ಎಂಬಿವು ಪ್ರತ್ಯಯಸ್ವರೂಪಗ್ರಹಣವು. ' ಬಹುಲಂ ' ಎಂಬುದು ' ಕ್ವಚಿತ್ಪ್ರವೃತ್ತಿಃ ಕ್ವಚಿದಪ್ರವೃತ್ತಿಃ ಕ್ವಚಿದ್ವಿಭಾಷಾ ಕ್ವಚಿದನ್ಯದೇವ ' ಎಂಬ ಚತುರ್ವಿಧಾರ್ಥವುಳ್ಳುದು. ಆದುದರಿಂದ ಇವಕ್ಕೆ ಇದೇ ಪ್ರತ್ಯಯವೆಂದೂ ಸಂಸ್ಕೃತಪ್ರಕೃತಿಗೇ ಬರುವುದು. ಕರ್ಣಾಟಕಪ್ರಕೃತಿಗೆ ಬರುವುದಿಲ್ಲವೆಂದೂ ವಿಷಯವಿಭಾಗವಿಲ್ಲದೆ ಸಂಸ್ಕೃತ ಕರ್ಣಾಟಕೋಭಯಪ್ರಕೃತಿಗೂ ಬರುವುವೆಂದು ತಿಳಿಯುವುದು. ತಥಾಚ — ಸ್ತ್ರೀವಾಚಕ-ಪುರುಷವಾಚಕ ಶಬ್ದಗಳ ಮೇಲೆ ಅನೇಕತ್ವದಲ್ಲಿ ಸುಪ್ಪು ಪರದಲ್ಲಿರುವಾಗ ಅರಾದಿ ಪ್ರತ್ಯಯಗಳು

ಯಥಾಲಕ್ಷ್ಯವಾಗಿ ಬರುವುವೆಂದು ಸೂತ್ರಾರ್ಥವಾಗುವುದರಿಂದ 'ಸ್ತ್ರೀಯರ್' ಮೊದಲಾದ ಲಕ್ಷ್ಯಗಳು ಸಿದ್ಧಿಸುವುವು.

**ಅವತಾರಿಕೆ ೨೪೦**

ಹೀಗೆಯೇ ಶಬ್ದಾಂತರಗಳಿಗೆ ಇರ್-ಪ್ರತ್ಯಯವು ಬರುವುದೆಂದು ಹೇಳುತ್ತಾನೆ.

**ಸೂತ್ರಂ || ತೊಟ್ತುಪೆಂಡಾದಿರ್ || ೨೪೦ ||**

**ಅರ್ಥ || 'ತೊಟ್ತು, ಪೆಂಡಂ' ಎಂಬೀ ಎರಡು ಶಬ್ದಗಳ ದೆಸೆಯಿಂದ ಪರವಾಗಿ ಇರ್-ಪ್ರತ್ಯಯವು ಅನೇಕತ್ವದಲ್ಲಿ ಸುಪ್ಪು ಪರದಲ್ಲಿರುವಾಗ ಬರುವುದು.**

**ಉದಾಹರಣೆ** || 'ತೊಟ್ತಿರ್, ಪೆಂಡಿರ್' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೨೪೦**

ಈ ಸೂತ್ರದಲ್ಲಿ — 'ತೊಟ್ತುಪೆಂಡಾತ್, ಇರ್' ಎಂದು ಎರಡು ಪದಗಳಿರುವುವು. 'ಅನೇಕತ್ವೇ, ಸುಪಿ' ಎಂದೂ ಸಂಬಂಧಿಸಲ್ಪಡುವುವು. ತಥಾಚ — 'ತೊಟ್ತುಪೆಂಡ' ಶಬ್ದಗಳಿಂದ ಪರವಾಗಿ ಅನೇಕತ್ವದಲ್ಲಿ ಸುಪ್ಪು ಪರವಾಗಿರಲು ಇರ್-ಪ್ರತ್ಯಯವು ಬರುವುದೆಂದು ಸೂತ್ರಾರ್ಥವಾಗಲು 'ತೊಟ್ತಿರ್, ಪೆಂಡಿರ್' ಎಂದು ಆಗಿರುವುವು. ಇಲ್ಲಿ 'ತೊಟ್ತುಪೆಂಡಾತ್' ಎಂದು ನಿರ್ದೇಶ ಮಾಡಿರುವುದರಿಂದ 'ಗೌಡಿಯರ್, ಪೆಂಡತಿಯರ್' ಮೊದಲಾದುವುಗಳಿಗೆ ಬರುವುದಿಲ್ಲ.

ಇಲ್ಲಿ ವಿಚಾರ ಮಾಡಲು ಪೂರ್ವಸೂತ್ರದಲ್ಲಿ ಬಹುಳಗ್ರಹಣ ಮಾಡಿ ಅದಕ್ಕೆ ಧಾತುರ್ವಿಧ್ಯವನ್ನಂಗೀಕರಿಸುವುದರಿಂದಲೇ ಅರಾದಿಗಳಿಗೆ — 'ಸತಿಯರ್, ಸುತೆಯರ್' ಮೊದಲಾದ ಕೆಲವೆಡೆಯಲ್ಲಿ ಪ್ರವೃತ್ತಿಯೂ 'ನೀಂಗಳ್, ತಾಂಗಳ್' ಮೊದಲಾದ ಕೆಲವೆಡೆಗಳಲ್ಲಿ ಅಪ್ರವೃತ್ತಿಯೂ 'ಅತ್ತೆಯರ್, ಅತ್ತೆಗಳ್' ಮೊದಲಾದ ಕೆಲವೆಡೆಗಳಲ್ಲಿ ವೈಕಲ್ಪಿಕಪ್ರವೃತ್ತಿಯೂ 'ತೊಟ್ತಿರ್, ಪೆಂಡಿರ್' ಮೊದಲಾದ ಕೆಲವೆಡೆಗಳಲ್ಲಿ ಪ್ರತ್ಯಯಾಂತರವೂ ಸಿದ್ಧಿಸುವುದರಿಂದ ಈ ಸೂತ್ರಾರಂಭವು ನಿರರ್ಥಕವೆಂದು ತೋರುವುದು. ಆದಾಗ್ಯೂ ಇರ್-ಪ್ರತ್ಯಯವು 'ತೊಟ್ತು, ಪೆಂಡ' ಈ ಎರಡು ಶಬ್ದಗಳಿಗೇ ಬರುವುದು; ಇನ್ನಾವ ಶಬ್ದಕ್ಕೂ ಬರುವುದಿಲ್ಲವೆಂದು ನಿಯಮಾರ್ಥವಾಗಿ ಈ ಸೂತ್ರವನ್ನು ಮಾಡಿರುವುದೆಂದು ತಿಳಿಯಬೇಕು.

**ಅವತಾರಿಕೆ ೨೪೧**

ಹೀಗೆಯೇ ಸಂಖ್ಯಾವಾಚಕಗಳ ಮೇಲೆ ವರ್-ಪ್ರತ್ಯಯವನ್ನು ವಿಧಿಸುತ್ತಾನೆ.

**ಸೂತ್ರಂ || ಸಂಖ್ಯಾಯಾ ವರ್ || ೨೪೧ ||**

**ಅರ್ಥ** || ಸ್ತ್ರೀಪುರುಷವಾಚಕಗಳಾದ ಸಂಖ್ಯಾವಾಚಕಗಳ ದೆಸೆಯಿಂದ ಪರವಾಗಿ ವರ್-ಪ್ರತ್ಯಯವು ಅನೇಕತ್ವದಲ್ಲಿ ಸುಪ್ಪು ಪರದಲ್ಲಿರಲು ಬರುವುದು.

**ಉದಾಹರಣೆ** || 'ಇರ್ವ್ವರ್, ಮೂವರ್, ನಾಲ್ವರ್, ನೂರ್ವ್ವರ್, ಸಾಸಿರ್ವ್ವರ್, ಒಂಬದಿಂಬರ್, ಪದಿಂಬರ್ ||' ಮೊದಲಾದ ಸಂಖ್ಯಾವಾಚಕಗಳು ಇದಕ್ಕೆ ಲಕ್ಷ್ಯಗಳು.

**ವಿಚಾರ ೨೪೧**

ಈ ಸೂತ್ರದಲ್ಲಿ — 'ಸಂಖ್ಯಾಯಾಃ, ವರ್' ಎಂದು ಎರಡು ಪದಗಳಿರುವುವು. 'ಸ್ತ್ರೀಪುಂಸಾತ್' ಎಂಬುದನ್ನು ಅನುವರ್ತಿಸಿ 'ಸಂಖ್ಯಾಯಾಃ' ಎಂಬುದಕ್ಕೆ ವಿಶೇಷಣ ಮಾಡುವುದು

'ಸಂಖ್ಯಾಯಾಃ' ಎಂಬುದು ಕರ್ಣಾಟಕಸಂಖ್ಯಾವಾಚಕ ಶಬ್ದಬೋಧಕವಾದ ಪಂಚಮ್ಯಂತವು. 'ವರ್' ಎಂಬುದು ಪ್ರತ್ಯಯವು. ತಥಾಚ — ಸ್ತ್ರೀಪುಂವಾಚಕ ಕರ್ಣಾಟಕಸಂಖ್ಯಾವಾಚಕ ಶಬ್ದಕ್ಕೆ ಪರವಾಗಿ ಅನೇಕತ್ವದಲ್ಲಿ ಸುಪ್ಪು ಪರವಲ್ಲಿರಲು ವರ್-ಪ್ರತ್ಯಯವು ಬರುವುದು ಎಂದು ಸೂತ್ರಾರ್ಥವಾಗಲು 'ಇರ್ವ್ವರ್' ಮೊದಲಾದುವು ಸಿದ್ಧಿಸುವುವು. ಪೂರ್ವದಲ್ಲಿ ಹೇಳಿದಂತೆ ಇವೂ ಬಹುಳಗ್ರಹಣದಿಂದಲೇ ಸಿದ್ಧಿಸುತ್ತಿರಲು ಪುನಃ ಈ ಸೂತ್ರವನ್ನು ಆರಂಭಿಸುವುದು ನಿಯಮಾರ್ಥವೆಂದಾಗಲಿ ಪೂರ್ವಸೂತ್ರಕ್ಕೇ ಇದು ವಿವರಣವೆಂದಾಗಲಿ ತಿಳಿಯಬೇಕು.

**ಅವತಾರಿಕೆ ೨೪೨**

ಪೂರ್ವದಲ್ಲಿ ವಿಹಿತನಾದ ಅರಾದಿಪ್ರತ್ಯಯಾಂತ ಶಬ್ದಗಳಿಗೆ ಪರವಾಗಿ ವೈಕಲ್ಪಿಕ ಕಳ್-ಪ್ರತ್ಯಯವನ್ನೂ ವಿಧಿಸುತ್ತಾನೆ.

**ಸೂತ್ರಂ || ತೇಭ್ಯಃ ಕಳ್ ವಾ || ೨೪೨ ||**

**ಅರ್ಥ ||** ಅರಾದಿಪ್ರತ್ಯಯಾಂತಗಳಿಗೆ ಪರವಾಗಿ ಅನೇಕತ್ವದಲ್ಲಿ ಸುಪ್ಪು ಪರವಾಗಿರಲು ಕಳ್-ಪ್ರತ್ಯಯವು ವಿಕಲ್ಪವಾಗಿ ಬರುವುದು.

**ಉದಾಹರಣೆ||** ಅತ್ತೆಯರ್ಕ್ಕಳ್, ಅತ್ತೆಯರ್; ಅತ್ತೆದಿರ್ಕ್ಕಳ್, ಅತ್ತೆದಿರ್; ಅತ್ತೆವಿರ್ಕ್ಕಳ್, ಅತ್ತೆವಿರ್; ತಂದೆಯರ್ಕ್ಕಳ್, ತಂದೆಯರ್; ತಂದೆದಿರ್ಕ್ಕಳ್, ತಂದೆದಿರ್; ತಂದೆವಿರ್ಕ್ಕಳ್, ತಂದೆವಿರ್; ಮೂವರ್ಕ್ಕಳ್, ಮೂವರ್; ನಾಲ್ವರ್ಕ್ಕಳ್, ನಾಲ್ವರ್ || ಮೊದಲಾದುವು ಇವಕ್ಕೆ ಲಕ್ಷ್ಯಗಳು.

**ವಿಚಾರ ೨೪೨**

ಈ ಸೂತ್ರದಲ್ಲ —'ತೇಭ್ಯಃ, ಕಳ್, ವಾ' ಎಂದು ಮೂರು ಪದಗಳಿರುವುವು. 'ತೇಭ್ಯಃ' ಎಂಬುದು ಸರ್ವನಾಮ ಶಬ್ದವಾದುದರಿಂದ ಬುದ್ಧಿಸ್ಥವಾಚಕವೆಂದು ಬುದ್ಧಿಯಲ್ಲ ಪ್ರಕರಣದಿಂದ ಉಪಸ್ಥಿತಗಳಾದ ಅರಾದಿ ಪಂಚಪ್ರತ್ಯಯಗಳನ್ನು ಬೋಧಿಸುವುದು. ಪ್ರತ್ಯಯಗ್ರಹಣಪರಿಭಾಷೆಯಿಂದ ತದಂತಬೋಧಕವಾಗುವುದು. ಆದುದರಿಂದ ಅರಾದಿಪ್ರತ್ಯಯಾಂತ ಶಬ್ದಗಳ ದೆಸೆಯಿಂದ ಪರವಾಗಿ ಕಳ್-ಪ್ರತ್ಯಯವು ವಿಕಲ್ಪವಾಗಿ ಅನೇಕತ್ವದಲ್ಲ ಸುಪ್ಪು ಪರವಾಗಿರಲು ಬರುವುದೆಂದು ಸೂತ್ರಾರ್ಥವಾಗುವುದರಿಂದ 'ಅತ್ತೆಯರ್ಕ್ಕಳ್' ಮೊದಲಾದುವು ಸಿದ್ಧಿಸುವುವು. ಇದು ಬಾರದ ಪಕ್ಷದಲ್ಲ ಪೂರ್ವೋಕ್ತಗಳಾದ ಅರಾದಿಗಳೇ ಇರುವುವೆಂದು ತಿಳಿಯುವುದು.

ಇಲ್ಲಿ ವಿಚಾರ ಮಾಡಲು ಅರಾದಿ ಪ್ರತ್ಯಯಗಳಿಂದಲೇ ಅನೇಕತ್ವವು ಉಕ್ತವಾಗುವುದರಿಂದ ಈ 'ಕಳ್' ನಿರರ್ಥಕವೆಂದು ತೋರುವುದು. ಆದಾಗ್ಯೂ ಪ್ರಾಮಾಣಿಕ ಪ್ರಯೋಗಗಳಿರುವುದರಿಂದ ಇದು ಸ್ವಾರ್ಥಿಕವಾಗಿ ಪ್ರಯೋಗದಲ್ಲ ನಿಯತವಾಗಿರುವುದೆಂದು ಇದಕ್ಕೆ ಸಾರ್ಥಕ್ಯವನ್ನು ಕಲ್ಪಿಸಬೇಕೆಂದು ತಾತ್ಪರ್ಯವು.

**ದರ್ಪಣಕಾರನು** ಈ 'ಕಳ್' ಎಂಬುದನ್ನು—

ವಿಕಲಂ ಷಣ್ಣವಣ್ಣೊಳರುವಿಂ
ಗೆ ಕಳಾಗಮಮುಂತೆ ಸರ್ವನಾಮದೊಳಿಂ ತಾಂ
ಪ್ರಕಟಂ ಗಳಾಗಮಂ ತಿಳಿ
ವಿಕಲ್ಪದಿಂದಪ್ಪುದಲ್ತೆ ಗಳ್ವಿನಿರ್ಗಂ ( ಸೂತ್ರ ೧೨೧ )

ಎಂಬ ಸೂತ್ರದಿಂದ ಗಳಾಗಮದೊಡನೆ ವಿಧಿಸಿ ಪ್ರಯೋಗವ್ಯವಸ್ಥೆಯನ್ನು ತೋರಿಸಿರುವನು.

**ಅವತಾರಿಕೆ ೨೪೩**

ಹೀಗೆಯೇ ಕೆಲವು ಅರಾದಿ ಪ್ರತ್ಯಯಾಂತ ಸಂಸ್ಕೃತಶಬ್ದಗಳಿಗೆ ಕಳ್-ಪ್ರತ್ಯಯದೊಡನೆ ಇರ್-ಪ್ರತ್ಯಯವನ್ನೂ ವಿಧಿಸುತ್ತಾನೆ.

**ಸೂತ್ರಂ ॥ ಸಂಸ್ಕೃತಾದಿರ್ ಚ ॥ ೨೪೩ ॥**

**ಅರ್ಥ ॥ ಅರಾದಿಪ್ರತ್ಯಯಾಂತಗಳಾದ ಸಂಸ್ಕೃತಶಬ್ದಗಳ ದೆಸೆಯಿಂದ ಪರವಾಗಿ ಕಳ್-ಪ್ರತ್ಯಯವೂ ಇರ್-ಪ್ರತ್ಯಯವೂ ಅನೇಕತ್ವದಲ್ಲಿ ಸುಪ್ಪು ಪರದಲ್ಲಿರಲು ಬರುವುದು. ಇವೆರಡೂ ಬಾರದಿದ್ದರೆ ಯಥಾಲಕ್ಷ್ಯವಾಗಿ ಅರಾದಿಗಳೇ ಇರುವುವು.**

**ಉದಾಹರಣೆ** ॥ ' ಸ್ತ್ರೀಯರ್ಕ್ಕಳ್, ಸ್ತ್ರೀಯರಿರ್, ಸ್ತ್ರೀಯರ್; ಪುರುಷರ್ಕ್ಕಳ್, ಪುರುಷರಿರ್, ಪುರುಷರ್; ಪಂಡಿತರ್ಕ್ಕಳ್, ಪಂಡಿತರಿರ್, ಪಂಡಿತರ್; ॥ ' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೨೪೩**

ಈ ಸೂತ್ರದಲ್ಲಿ — ' ಸಂಸ್ಕೃತಾತ್, ಇರ್, ಚ ' ಎಂದು ಮೂರು ಪದಗಳಿರುವುವು. ಪೂರ್ವಸೂತ್ರದಿಂದ ' ತೇಭ್ಯಃ, ಕಳ್ ' ಎಂಬಿವು ಅನುವರ್ತಿಸಲ್ಪಡುವುವು .' ತೇಭ್ಯಃ 'ಎಂಬುದು ಪೂರ್ವದಂತೆ ಅರಾದಿಪ್ರತ್ಯಯಬೋಧಕವಾದುದರಿಂದ ತದಂತಬೋಧಕವು. ಇದಕ್ಕನುಸಾರವಾಗಿ ಬಹುವಚನಾಂತವಾಗಿ ವಿಪರಿಣಮಿಸಲ್ಪಟ್ಟ ' ಸಂಸ್ಕೃತೇಭ್ಯಃ ' ಎಂಬುದಕ್ಕೆ ವಿಶೇಷಣ ಮಾಡಿ ಅರಾದಿಪ್ರತ್ಯಯಾಂತಗಳಾದ ಸಂಸ್ಕೃತಶಬ್ದಗಳ ದೆಸೆಯಿಂದ ಪರವಾಗಿ ಕಳ್-ಇರ್-ಪ್ರತ್ಯಯಗಳು ವಿಕಲ್ಪವಾಗಿ ಅನೇಕತ್ವದಲ್ಲಿ ಸುಪ್ಪು ಪರದಲ್ಲಿರಲು ಬರುವುವೆಂದು ಸೂತ್ರಾರ್ಥವಾಗುವುದರಿಂದ ' ಸ್ತ್ರೀಯರ್ಕ್ಕಳ್, ಸ್ತ್ರೀಯರಿರ್, ಸ್ತ್ರೀಯರ್ ' ಮೊದಲಾದ ಮೂರು ಮೂರು ರೂಪಗಳು ಸಿದ್ಧಿಸುವುವು.

**ಅವತಾರಿಕೆ ೨೪೪**

ಹೀಗೆ ಅರಾದಿಪ್ರತ್ಯಯಾಂತಗಳಾದ ಕೆಲವು ಶಬ್ದಗಳ ದೆಸೆಯಿಂದ ಕಳಾದಿಗಳನ್ನು ವಿಧಿಸಿ ಅರಾದ್ಯಂತಗಳಾದ ಅದ್ವಾದಿಗಳ ದೆಸೆಯಿಂದ ವಿಕಲ್ಪವಾಗಿ ಗಳ್-ಪ್ರತ್ಯಯವನ್ನು ವಿಧಿಸುತ್ತಾನೆ.

**ಸೂತ್ರಂ ॥ ಗಳದ್ವಾದೇಃ ॥ ೨೪೪ ॥**

**ಅರ್ಥ ॥ ಅರಾದಿಪ್ರತ್ಯಯಾಂತಗಳಾದ ಅದ್ವಾದಿ ಗಣಪಠಿತಶಬ್ದಗಳ ದೆಸೆಯಿಂದ ಪರವಾಗಿ ಗಳ್-ಪ್ರತ್ಯಯವು ಅನೇಕತ್ವದಲ್ಲಿ ಸುಪ್ಪು ಪರದಲ್ಲಿರುವಾಗ ವಿಕಲ್ಪವಾಗಿ ಬರುವುದು. ಇದು ಬಾರದ ಪಕ್ಷದಲ್ಲಿ ಅರಾದಿಗಳೇ ಇರುವುದರಿಂದ ರೂಪತ್ರಯವು ಸಿದ್ಧಿಸುವುದು.**

**ಉದಾಹರಣೆ** ॥ ' ಅವರ್ಗ್ಗಳ್, ಅವರ್; ಇವಂದಿರ್ಗ್ಗಳ್, ಇವಂದಿರ್; ಆಕೆವಿರ್ಗ್ಗಳ್, ಆಕೆವಿರ್; ಈಕೆವಿರ್ಗ್ಗಳ್, ಈಕೆವಿರ್ ' ಹೀಗೆಯೇ — ' ಅವರ್ಕ್ಕಳ್, ಇವಂದಿರ್ಕ್ಕಳ್, ಆಕೆವಿರ್ಕ್ಕಳ್, ಈಕೆವಿರ್ಕ್ಕಳ್ ॥ ' ಮೊದಲಾದುವೂ ಆಗುವುವು.

**ವಿಚಾರ ೨೪೪**

ಈ ಸೂತ್ರದಲ್ಲಿ — ' ಗಳ್, ಅದ್ವಾದೇಃ ' ಎಂದು ಎರಡು ಪದಗಳಿರುವುವು. ಪೂರ್ವದಿಂದ ' ತೇಭ್ಯಃ, ವಾ ' ಎಂದು ಅನುವರ್ತಿಸಲ್ಪಡುವುವು. ' ತೇಭ್ಯಃ ' ಎಂಬುದು ಅದ್ವಾದಿಗೆ

ವಿಶೇಷಣವು. ತಥಾಚ — ಅರಾದಿ ಪ್ರತ್ಯಯಾಂತಗಳಾದ ಅದ್ವಾದಿಗಣಪಠಿತಶಬ್ದಗಳ ದೆಸೆಯಿಂದ ಪರವಾಗಿ ಅನೇಕತ್ವದಲ್ಲಿ ಸುಪ್ಪು ಪರವಾಗಿರಲು ಗಳ್-ಪ್ರತ್ಯಯವು ವಿಕಲ್ಪವಾಗಿ ಬರುವುದೆಂದು ಸೂತ್ರಾರ್ಥವಾಗುವುದರಿಂದ ' ಅವರ್ಗಳ್ ' ಮೊದಲಾದ ರೂಪಗಳು ಸಿದ್ಧಿಸುವುವು.

**ಅವತಾರಿಕೆ ೨೪೫**

ಇದುವರೆಗೂ ಅನೇಕತ್ವದಲ್ಲಿ ಪ್ರಕೃತಿವಿಶೇಷಗಳ ದೆಸೆಯಿಂದ ಪರವಾಗಿ ಗಳಾದಿ ಪ್ರತ್ಯಯಗಳು ವಿಧಿಸಲ್ಪಟ್ಟುವು. ಈಗ ಏಕತ್ವಾನೇಕತ್ವಸಾಧಾರಣವಾಗಿ ವಿಹಿತವಾದ ಸುಪ್ಪಿಗೆ ಕಾರ್ಯವಿಶೇಷಗಳನ್ನು ವಿಧಿಸಲು ಮೊದಲು ' ಸಿನ್ ' ಎಂಬುದಕ್ಕೆ ವಿಶೇಷಣವಾವುದೋ ತದ್ವಾಚಕಶಬ್ದಸಂಬಂಧಿಯಾದ ಸುಪ್ಪಿಗೆ ' ಕಯ್, ಕಿರ್ ' ಎಂಬ ಆಗಮುಗಳನ್ನು ವಿಧಿಸುತ್ತಾನೆ.

**ಸೂತ್ರಂ || ಸಿನೋ ವಿಶೇಷಣಸ್ಯ ಕಯ್‌ಕಿರೇಕಾನೇಕತ್ವೇ ಸುಪಃ || ೨೪೫ ||**

**ಅರ್ಥ ||** **' ಸಿನ್ ' ಎಂಬುದಕ್ಕೆ ವಿಶೇಷಣವಾಚಕವಾದ ಶಬ್ದಸ್ವರೂಪವಾವುದೋ ತತ್ಸಂಬಂಧಿಯಾದ ಏಕತ್ವಾನೇಕತ್ವಗಳಲ್ಲಿ ವಿಹಿತಸುಪ್ಪಿಗೆ ಕ್ರಮವಾಗಿ ' ಕಯ್, ಕಿರ್ ' ಎಂದರೆ ಏಕತ್ವದಲ್ಲಿ ವಿಹಿತವಾದುದಕ್ಕೆ ' ಕಯ್ ' ಎಂಬ ಆಗಮವೂ ಅನೇಕತ್ವದಲ್ಲಿ ' ಕಿರ್ ' ಎಂಬ ಆಗಮವೂ ಅಂತಾವಯವಗಳಾಗಿ ಬರುವುವು.**

**ಉದಾಹರಣೆ ||** ' ನೀಂ ಪಂಡಿತನಯ್, ನೀಂ ಪಂಡಿತಂ; ನೀಂ ಜಾಣನಯ್, ನೀಂ ಜಾಣಂ; ನೀಂಗಳ್ ಪಂಡಿತರಿರ್, ನೀಂಗಳ್ ಪಂಡಿತರ್; ನೀಂಗಳ್ ಜಾಣರಿರ್, ನೀಂಗಳ್ ಜಾಣರ್ || ' ಮೊದಲಾದುವು ಇವಕ್ಕೆ ಲಕ್ಷ್ಯಗಳು.

**ವಿಚಾರ ೨೪೫**

ಈ ಸೂತ್ರದಲ್ಲಿ — ' ಸಿನಃ, ವಿಶೇಷಣಸ್ಯ, ಕಯ್, ಕಿರ್, ಏಕಾನೇಕತ್ವೇ, ಸುಪಃ ' ಎಂದು ಐದು ಪದಗಳಿರುವುವು. ' ಸಿನಃ ' ಎಂಬುದು 'ಯುಷ್ಮದರ್ಥವಾಚಕ'ವೆಂದರೆ ಮಧ್ಯಮಪುರುಷದ್ಯೋತಕಶಬ್ದವು. ಇದು ಷಷ್ಠ್ಯಂತವಾದುದರಿಂದ ' ವಿಶೇಷಣಸ್ಯ ' ಎಂಬುದಕ್ಕೆ ವ್ಯಧಿಕರಣವಿಶೇಷಣವು. ಯದ್ಯಪಿ ಇಲ್ಲಿ —' **ಸಂಭವತಿ ಸಾಮಾನಾಧಿಕರಣ್ಯೇ ವೈಯಧಿಕರಣ್ಯಸ್ಯಾನ್ಯಾಯತ್ವಂ** ' ಎಂಬ ನ್ಯಾಯದಿಂದ ವಿಶೇಷಣಭೂತವಾದ ' ಸಿನ್ ಶಬ್ದದ ' ಎಂದಾಗಲಿ 'ಸಿನ್ ರೂಪವಿಶೇಷಣದ' ಎಂದಾಗಲಿ ವ್ಯಾಖ್ಯಾನ ಮಾಡಲು 'ಸಿನ್'ಸಂಬಂಧಿಸುಪ್ಪಿಗೇ 'ಕಯ್-ಕಿರ್'ಗಳು ಬರುವುವೆಂದು ಸೂತ್ರಾರ್ಥವಾಗಲು ' ಪಂಡಿತನಯ್ ' ಮೊದಲಾದುವು ಸಿದ್ಧಿಸುವುದಿಲ್ಲ. ಮತ್ತು ' ಸಿನ್ ' ಆದಿಗಳು ಜಾತಿವಾಚಕಗಳಂತೆ ವಿಶೇಷ್ಯಗಳಾಗಿಯೇ ಪ್ರಸಿದ್ಧಗಳಾಗಿರುವುವು; ಎಂದಿಗೂ ವಿಶೇಷಣಗಳಾಗಿರುವುದಿಲ್ಲ. ಆದುದರಿಂದ ಸಾಮಾನಾಧಿಕರಣ್ಯದಿಂದ ವ್ಯಾಖ್ಯಾನ ಮಾಡುವುದು ಅಸಂಗತವಾಗಿರುವುದೆಂದು ವ್ಯಯಧಿಕರಣ್ಯದಿಂದ ವಿಶೇಷಣ ಮಾಡಿರುವುದು. ಆದುದರಿಂದ 'ಸಿನ್' ಎಂಬುದಕ್ಕೆ ವಿಶೇಷಣವಾವುದೋ ' ತದ್ವಾಚಕ ಶಬ್ದದ ' ಎಂದು ' ಸಿನೋ ವಿಶೇಷಣಸ್ಯ ' ಎಂಬ ಸಮುದಾಯಕ್ಕೆ ಅರ್ಥವಾಗುವುದು. ಈ ' ಸಿನೋ ವಿಶೇಷಣಸ್ಯ ' ಎಂಬುದನ್ನು ವಿಶೇಷ್ಯವಾಗಿ ಅಂಗೀಕರಿಸಿ ಇದಕ್ಕೆ ' ಸುಪಃ ' ಎಂಬುದನ್ನು ವಿಶೇಷಣವಾಗಿ ಅನ್ವಯಿಸಿ ತದಂತಲಾಭ ಮಾಡಿ ಸುಬಂತವಾದ ' ಸಿನ್ನಿಗೆ ' ವಿಶೇಷಣವಾಚಕವಾವುದೋ ಅದಕ್ಕೆ ಏಕತ್ವಾನೇಕತ್ವಗಳಲ್ಲಿ ' ಕಯ್, ಕಿರ್ ' ಎಂಬ ಆಗಮುಗಳು ವಿಕಲ್ಪವಾಗಿ ಬರುವುವು – ಎಂದು ವ್ಯಾಖ್ಯಾನ ಮಾಡಿದರೂ

ಇಷ್ಟಸಿದ್ಧಿಯಾಗುವುದು. ಆದಾಗ್ಯೂ ವಿಶೇಷ್ಯ-ವಿಶೇಷಣಭಾವವು 'ಕಾಮಚಾರ'ವೆಂದು ಪ್ರಸಿದ್ಧಿ ಇರುವುದರಿಂದ '**ಶ್ಲುಬವ್ಯಯಸ್ಯ** ||೨೪೭||' ಎಂಬ ಉತ್ತರಸೂತ್ರದಲ್ಲಿ 'ಸುಪಃ' ಎಂಬುದನ್ನೆ ವಿಶೇಷ್ಯವಾಚಕವಾಗಿ ಅಂಗೀಕರಿಸಬೇಕಾದುದರಿಂದಲೂ ಇಲ್ಲಿಯೂ ಅದಕ್ಕೆ ವಿಶೇಷತ್ವವನ್ನಂಗೀಕರಿಸಿ 'ನಿನೋ ವಿಶೇಷಣಸ್ಯ' ಎಂಬುದನ್ನು 'ಸುಪಃ' ಎಂಬುದಕ್ಕೆ ವ್ಯಧಿಕರಣ ವಿಶೇಷಣವೆಂದು ತಿಳಿಯಬೇಕು. ಇಲ್ಲಿ 'ನಿನ್ನಿಗೆ' ವಿಶೇಷಣವಾಚಕವಾದ ಶಬ್ದಸ್ವರೂಪವು ಕರ್ಣಾಟಕ-ಸಂಸ್ಕೃತ ಸಾಧಾರಣವು. 'ಸುಪಃ' ಎಂಬುದಕ್ಕೆ 'ಏಕತ್ವಾನೇಕತ್ವೇ' ಎಂಬುದೂ ವಿಶೇಷಣವು. '**ಕಯ್**, ಕಿರ್' ಎಂಬಿವೆರಡೂ ಕ ಕಾರೇತ್-ಸಂಜ್ಞಕಗಳಾದ ವಿಧೇಯಗಳಾದುದರಿಂದ ಆಗಮಗಳೆಂದು '**ಕಿದಂತ್ಯಃ**' ಎಂಬ ಪರಿಭಾಷೆಯಿಂದ ಸೂಚಿತವಾಗುವುದು. ತಥಾಚ — 'ನಿನ್ನಿಗೆ' ವಿಶೇಷಣವಾಚಕವಾದ ಶಬ್ದಸ್ವರೂಪವಾವುದೋ ಅದರ ಸಂಬಂಧಿಯಾದ ಏಕತ್ವಾನೇಕತ್ವಗಳಲ್ಲ ವಿಹಿತಸುಪ್ಪಿಗೆ ಯಥಾಕ್ರಮವಾಗಿ 'ಕಯ್, ಕಿರ್' ಆಗಮಗಳು ಅಂತ್ಯಾವಯವಗಳಾಗಿ ವಿಕಲ್ಪವಾಗಿ ಬರುವುವೆಂದು ಸೂತ್ರಾರ್ಥವಾಗಲು 'ನೀಂ ಪಂಡಿತನಯ್' ಮೊದಲಾದ ರೂಪಗಳು ಸಿದ್ಧಿಸುವುವು. 'ನೀಂಗಳ್ ಪಂಡಿತರಿರ್' ಮೊದಲಾಗಿ ಪ್ರಯೋಗಿಸಿರುವುದು ಅನೇಕತ್ವಾಭಿವ್ಯಕ್ತ್ಯರ್ಥವಾಗಿಯೇ ಎಂದು ತಿಳಿಯಬೇಕು. ಆದುದರಿಂದ 'ನೀಂ ಪಂಡಿತರಿರ್' ಮೊದಲಾದುವುಗಳಲ್ಲಿ ಗಳ್-ಪ್ರತ್ಯಯವಿಲ್ಲದಿದ್ದರೂ 'ಕಿರ್' ಆಗಮವು ಬಂದಿರುವುದು. ಇದರಿಂದ 'ಗಳ್' ಸಮಭಿವ್ಯಾಹಾರವೇ ಇರಬೇಕೆಂಬ ನಿರ್ಬಂಧವಿಲ್ಲವೆಂದು ತಿಳಿಯಬೇಕು.

ಇಲ್ಲ ಕೆಲವರು 'ಕಯ್' ಎಂಬುದಕ್ಕೆ ಪ್ರತಿಯಾಗಿ 'ಕೈ' ಎಂದು ಐಕಾರ ಮಾತ್ರವನ್ನೂ ಅಂಗೀಕರಿಸಿ —

ಶ್ರೀಕಾಂತಜಿನಸ್ಮರಣದಿ
ವಾಕರಕಿರಣದಿನಲರ್ವ್ವ ಕತದಿಂ ಸಿರಿಯಿ
ದ್ದಾರ್ವ್ವ ಕತದಿಂ ನೀಂ ಪುಷ್ಕರ
ನ್ಯೈ ಕವಿತತಿವಿನುತಧಾಮ ಸಾರ್ತ್ಥಕನಃಮಾ

ಎಂದು ಮೊದಲಾದ ಪ್ರಯೋಗಗಳನ್ನು ಸಮರ್ಥಿಸುವರು. ಈ ಸೂತ್ರದಲ್ಲಿ 'ನಿನಃ' ಎಂದು ಹೇಳಿರುವುದರಿಂದ 'ತಾಂ ಜಾಣಂ, ತಾಂ ಜಾಣರ್' ಮೊದಲಾದುವಕ್ಕೆ ಬರುವುದಿಲ್ಲ. 'ವಿಶೇಷಣಸ್ಯ' ಎಂದು ಹೇಳಿರುವುದರಿಂದ 'ನಿನ್' ಎಂಬುದಕ್ಕೆ ಬರುವುದಿಲ್ಲವೆಂದು ತಿಳಿಯಬೇಕು.

**ಅವತಾರಿಕೆ ೨೪೬**

ಹೀಗೆಯೇ 'ಎನ್' ಎಂಬುದರ ವಿಶೇಷಣಸಂಬಂಧಿ ಸುಪ್ಪಿಗೆ ಬರುವ ಆಗಮಗಳನ್ನು ವಿಧಿಸುತ್ತಾನೆ.

**ಸೂತ್ರಂ || ಎನಃ ಕೆನ್ ಕೆವು[೧] || ೨೪೬ ||**

**ಅರ್ಥ || 'ಎನ್' ಎಂಬುದರ ವಿಶೇಷಣವಾವುದೋ ಅದರ ಸಂಬಂಧಿಯಾದ ಏಕತ್ವಾನೇಕತ್ವಗಳಲ್ಲಿ ವಿಹಿತವಾದ ಸುಪ್ಪಿಗೆ ಕ್ರಮವಾಗಿ 'ಕೆನ್, ಕೆವು' ಎಂಬಾಗಮಗಳು ವಿಕಲ್ಪವಾಗಿ ಬರುವುವು.**

---

**ಪಾಠಾಂತರ: ೧ ಕೆವ್**

**ಉದಾಹರಣೆ** ||' ಆಂ ಪಂಡಿತನೆಂ, ಆಂ ಪಂಡಿತಂ; ಆಂ ಪಂಡಿತರೆವು, ಆಂ ಪಂಡಿತರ್ ||' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೨೪೬**

ಈ ಸೂತ್ರದಲ್ಲಿ — ' ಎನಃ, ಕೆನ್, ಕೆವು ' ಎಂದು ಮೂರು ಪದಗಳಿರುವುವು. ಪೂರ್ವ ಸೂತ್ರದಿಂದ ' ವಿಶೇಷಣಸ್ಯ, ಏಕತ್ವಾನೇಕತ್ವೇ, ಸುಪಃ ' ಎಂದು ಅನುವರ್ತಿಸಲ್ಪಡುವುವು. ಪೂರ್ವದಂತೆ ವಿಶೇಷ್ಯವಿಶೇಷಣಗಳ ಭಾವವನ್ನಂಗೀಕರಿಸಿ — ' ಎನ್ ' ಎಂಬುದಕ್ಕೆ ವಿಶೇಷಣ ವಾವುದೋ ತದ್ವಾಚಕ ಶಬ್ದಸಂಬಂಧಿಯಾಗಿಯೂ ಏಕತ್ವಾನೇಕತ್ವಗಳಲ್ಲಿ ವಿಹಿತವಾಗಿಯೂ ಇರುವ ಸುಪ್ಪಿಗೆ ಕ್ರಮವಾಗಿ ' ಕೆನ್, ಕೆವು ' ಎಂಬಾಗಮಗಳು ವಿಕಲ್ಪವಾಗಿ ಬರುವುವು ಎಂದು ಸೂತ್ರಾರ್ಥವಾಗುವುದರಿಂದ ' ಆಂ ಪಂಡಿತನೆಂ ' ಮೊದಲಾದುವು ಸಿದ್ಧಿಸುವುವು.

ಈ ವಿಷಯದಲ್ಲಿ **ದರ್ಪಣಕಾರ**ನು ಆಖ್ಯಾತಪ್ರತ್ಯಯಗಳನ್ನೇ ವಿಧಿಸಿ ಇಂತಹ ಪ್ರಯೋಗ ಗಳನ್ನೆಲ್ಲಾ ನಾಮಧಾತುಗಳೆಂದು ಅಭಿಪ್ರಾಯಪಟ್ಟು —

> ವಿನುತಗುಣವಚನದೊಳ್ ಸ
> ರ್ವನಾಮದೊಳ್ ಸಂಖ್ಯೆಯೊಳ್ ಪ್ರವರ್ತಿಪುವಾಖ್ಯಾ
> ತನಿಯುಕ್ತವಿಭಕ್ತಿಗಳವು
> ಘನತರಸಂಸ್ಕೃತಗುಣೋಕ್ತಿಯೊಳಮುಮುದಿರ್ಕ್ಕುಂ  ( ಸೂತ್ರ ೨೧೯ )

ಎಂಬ ಸೂತ್ರವನ್ನು ಹೇಳಿ ಸಮುಚ್ಚಯದಿಂದ ಗುಣವಚನವಲ್ಲದಲ್ಲಿಯೂ ಉಂಟೆಂದು ಹೇಳಿರು ವುದರಿಂದ ' ಪಂಡಿತನಯ್, ಪಂಡಿತನೆಂ ' ಮೊದಲಾದುವು ಸಿದ್ಧಿಸುವುವು. ಅಥವಾ ಈ ಸೂತ್ರದ ಲ್ಲಿರುವ ಗುಣವಚನಪದವು ವಿಶೇಷಣ ಸಾಮಾನ್ಯಬೋಧಕವೆಂದು ತಿಳಿದು ಇಂತಹ ಪ್ರಯೋಗ ಗಳಿಗೆ ಉಪಪತ್ತಿಯನ್ನು ಹೇಳುವುದು. **ಶಾಸನಕಾರ, ದರ್ಪಣಕಾರ**ರಿಬ್ಬರ ಮತದಲ್ಲಿಯೂ ಪರಿನಿಷ್ಠಿತರೂಪಗಳೊಂದಾಗಿದ್ದರೂ ಸುಬಂತ, ತಿಙಂತಗಳೆಂಬ ಭೇದದಿಂದ ಭಿನ್ನವಾಗಿರುವುವು. **ಶಾಸನಕಾರ**ನ ಮತದಲ್ಲಿ ಸುಪ್ಪಿಗೆ ಈ ಆಗಮಗಳನ್ನು ವಿಧಿಸಿ ಇವುಗಳನ್ನು ಸುಬಂತಗಳೆಂದು ವ್ಯವಹರಿಸಿದರೂ ಇವುಗಳ ಮೇಲೆ ಮತ್ತಾವ ವಿಭಕ್ತಿಯೂ ಬರುದಿಲ್ಲವಾದುದರಿಂದ ಏಕರೂಪ ಗಳಾಗಿಯೇ ಇರುವುವು. ಆದುದರಿಂದ **ದರ್ಪಣಕಾರ**ನು ಇವುಗಳನ್ನು ಆಖ್ಯಾತಪ್ರಕರಣದಲ್ಲ ಸೇರಿಸಿ ಆಖ್ಯಾತಪ್ರತ್ಯಯಾಂತಗಳಂತೆ ಪರಿಗಣಿಸಿರುವನು. ಆದುದರಿಂದ ಇವನ್ನು ಸುಬಂತಪ್ರಕೃತಿ ಧಾತುಗಳೆಂದು ವ್ಯವಹರಿಸಿರುವುದು.

**ಅವತಾರಿಕೆ ೨೪೭**

ಪೂರ್ವದಲ್ಲಿ ಲಿಂಗಸಂಜ್ಞಕವಾದ ಶಬ್ದದ ದೆಸೆಯಿಂದ ಸುಪ್-ಪ್ರತ್ಯಯವನ್ನು ವಿಧಿಸಿ ತದಾಶ್ರಯವಾದ ಕಾರ್ಯಗಳನ್ನೂ ತಿಳಿಸಿದನು. ಈಗ ಕೆಲವು ಭಾಷಾಷ್ಠಗಳಾದ ಅವ್ಯಯಗಳಿಗೂ ಲಿಂಗಸಂಜ್ಞೆಯಿರುವುದರಿಂದ ಅವುಗಳಿಗೆ ತನ್ನಿಮಿತ್ತಕವಾದ ಸುಬುತ್ಪತ್ತಿಯುಂಟಾಗಲು ತತ್-ಪ್ರಯುಕ್ತ ವಿಕಾರಗಳೂ ಪ್ರಾಪ್ತವಾಗುವುವು. ಇದರಿಂದ ಲಿಂಗಸಂಖ್ಯಾದಿಗಳಲ್ಲಿ ಅನ್ವರ್ಥಕವಾದ ನಿರ್ವಿಕಾರರೂಪ ಅವ್ಯಯ ಸ್ವರೂಪಕ್ಕೆ ಹಾನಿಯುಂಟಾಗುವುದೆಂದು ಆ ವಿಕಾರಕ್ಕೆ ಹೇತುವಾದ ಸುಪ್ಪಿಗೆ ಲೋಪವನ್ನು ವಿಧಿಸುತ್ತಾನೆ.

**ಸೂತ್ರಂ || ಶ್ಲುಬವ್ಯಯಸ್ಯ || ೨೪೭ ||**

**ಅರ್ಥ ||** ಅವ್ಯಯಸಂಬಂಧಿಯಾದ ಸುಪ್ಪಿಗೆ 'ಶ್ಲುಪ್' ಬರುವುದು ಎಂದರೆ ಲೋಪವು ಬರುವುದು. ಇಲ್ಲಿ ಶ ಕಾರೇತ್-ಸಂಜ್ಞಕವಾಗಿ ಹೇಳಿರುವುದರಿಂದ ಆ ಸುಪ್ಪಿಗೆ ಲೋಪವು ಸರ್ವಾದೇಶವಾಗಿ ಬರುವುದೆಂದು ತಿಳಿಯಬೇಕು.

**ಉದಾಹರಣೆ ||** 'ಅರಮೆ ಕಂಡಂ, ಅರಮೆ ಇರ್ದ್ದಂ, ಅರಮೆ ಅರಸಂ, ನಿರ್ನ್ನೆರಂ ನುಡಿದಂ, ನಿರ್ನ್ನೆರಂ ಕೊಂದಂ[೧] ||' ಮೊದಲಾದ ಅವ್ಯಯಗಳೆಲ್ಲಾ ಇದಕ್ಕೆ ಲಕ್ಷ್ಯಗಳು.

**ವಿಚಾರ ೨೪೭**

ಈ ಸೂತ್ರದಲ್ಲಿ 'ಶ್ಲುಪ್, ಅವ್ಯಯಸ್ಯ' ಎಂದು ಎರಡು ಪದಗಳಿರುವುವು. ಪೂರ್ವದಿಂದ 'ಸುಪಃ' ಎಂಬುದು ಅನುವರ್ತಿಸಲ್ಪಡುವುದು. 'ವಾ' ಎಂಬುದು ಇಲ್ಲಿಗೆ ನಿವೃತ್ತವಾಯ್ತು – ಎಂದು ಇದು ನಿತ್ಯವೆಂದು ತಿಳಿಯುವುದು. 'ಶ್ಲುಪ್' ಎಂಬುದು ಶ ಕಾರೇತ್-ಸಂಜ್ಞಕವಾದ ಲುಪ್-ಶಬ್ದವು. ಆದುದರಿಂದ ಈ ಲೋಪವು ಸರ್ವಾದೇಶವಾಗುವುದು. 'ಅವ್ಯಯಸ್ಯ' ಎಂಬುದು ಸಂಬಂಧಾರ್ಥದಲ್ಲಿ ವಿಹಿತಷಷ್ಠ್ಯಂತವು. ಇದು 'ಸುಪಃ' ಎಂಬುದಕ್ಕೆ ವಿಶೇಷಣವು. ಇದು ಸ್ಥಾನಷಷ್ಠ್ಯಂತವು. ತಥಾಚ — ಅವ್ಯಯಸಂಬಂಧಿಯಾದ ಎಂದರೆ ಅವ್ಯಯಸಂಜ್ಞಕ ಲಿಂಗದ ದೆಸೆಯಿಂದ ವಿಹಿತವಾದ ಸುಪ್ಪಿಗೆ ಸರ್ವಾದೇಶವಾಗಿ ಲೋಪವು ಬರುವುದೆಂದು ಸೂತ್ರಾರ್ಥವಾಗುವುದರಿಂದ 'ಅರಮೆ ಕಂಡಂ' ಮೊದಲಾದ ಪ್ರಯೋಗಗಳಲ್ಲಿರುವ ಅವ್ಯಯಗಳಿಗೆ ವಿಭಕ್ತಿಪ್ರಯುಕ್ತವಿಕಾರಗಳಾವುವೂ ಇಲ್ಲವೆಂದು ತಿಳಿಯಬೇಕು. ಇಲ್ಲಿ 'ಅವ್ಯಯಸ್ಯ' ಎಂದು ಹೇಳಿರುವುದರಿಂದ 'ಸುರರಂ, ಸುರರಿಂ, ಸುರರ್ಗ್ಗೆ' ಮೊದಲಾದ ಪ್ರಯೋಗಗಳಲ್ಲ ವಿಭಕ್ತಿಗೆ ಲೋಪವಿಲ್ಲ. ಇಲ್ಲಿ ಉದಾಹರಿಸಿರುವ 'ಅರಮೆ ಇರ್ದ್ದಂ, ಅರಮೆ ಅರಸಂ' ಎಂಬಲ್ಲ 'ನಿಪಾತಾಃ || ೪೪ ||' ಎಂಬ ಸೂತ್ರದಿಂದ ಪ್ರಕೃತಿಭಾವವು ಬಂದಿರುವುದೆಂದು ತಿಳಿಯಬೇಕು. ಇಲ್ಲಿ ಸುಪ್ಪಿಗೆ ಲೋಪವನ್ನು ಮಾಡಿದರೂ ಸ್ಥಾನಿವದ್ಭಾವದಿಂದ ಅವ್ಯಯಗಳೂ ಸುಬಂತಗಳೆಂದು 'ಸುಪ್ತಿಙಂತಂ ಪದಂ' ಎಂದು ಪದಸಂಜ್ಞೆಯನ್ನು ಮಾಡುವುದರಿಂದ ಇವು — '**ಅಪದಂ ನ ಪ್ರಯುಂಜೀತ**' ಎಂಬ ನಿಷೇಧವಿಧಿಗೆ ವಿಷಯಗಳಾಗುವುದಿಲ್ಲವೆಂದು ತಿಳಯುವುದು.

**ಅವತಾರಿಕೆ ೨೪೮**

ಹೀಗೆಯೇ ಕೃತ್ತದ್ಧಿತಸಮಾಸವೃತ್ತಿ ಸಂಬಂಧಿಯಾದ ಸುಪ್ಪಿಗೂ ಲೋಪವನ್ನು ವಿಧಿಸುತ್ತಾನೆ.

**ಸೂತ್ರಂ || ವೃತ್ತೇಃ || ೨೪೮ ||**

**ಅರ್ಥ || ವೃತ್ತಿಯಲ್ಲಿರುವ ಸುಪ್ಪಿಗೆ ಲೋಪವು ಬರುವುದು.**

**ಉದಾಹರಣೆ ||** ಬಂಡನುಣ್ಬುದು = ಬಂಡುಣಿ; ಮಿಾನಂ ಕೊಲ್ವಂ = ಮಿಾಂಗುಲಿ; ಕಲ್ಲಂ ಕುಟ್ಟುವಂ = ಕಲ್ಕುಟಿಗಂ; ಮಣಿಯಂ ಮಾಡುವಂ = ಮಣಿಗಾಱಂ; ಕಾಲೂರೊಳ್ ಪುಟ್ಟಿದಂ = ಕಾಲುರಿಚಂ; ಸುಂಕದೊಳ್ ನಿಯುಕ್ತಂ = ಸುಂಕಿಗಂ; ಅರಸಿನ ಮಗಳ್ = ಅರಮಗಳ್;

ಪಾಠಾಂತರ : ೧ ಕೊಂಡಂ

ಸೂಳೆಯರ೧ ಕೇರಿ = ಸೂಳೆಗೇರಿ; ಮನದಿಂ ಮುಟ್ಟಿದಂ = ಮನಮುಟ್ಟಿದಂ || ಮೊದಲಾದ ಕೃತ್ತದ್ಧಿತ ಸಮಾಸವೃತ್ತಿಗಳೆಲ್ಲಾ ಇದಕ್ಕೆ ಲಕ್ಷ್ಯಗಳೆಂದು ತಿಳಿಯುವುದು.

**ವಿಚಾರ ೨೪೮**

ಈ ಸೂತ್ರದಲ್ಲಿ 'ವೃತ್ತೇಃ' ಎಂದು ಒಂದೇ ಪದವಿರುವುದು. ಪೂರ್ವದಿಂದ 'ಸುಪಃ, ಶ್ಲುಪ್' ಎಂದು ಅನುವರ್ತಿಸಲ್ಪಡುವುವು. 'ವೃತ್ತೇಃ' ಎಂಬುದು — '**ಪರಾರ್ಥಾಭಿಧಾನಂ ವೃತ್ತಿಃ**' ಎಂದು ಪ್ರಾಚೀನರು ಸಂಕೇತಮಾಡಿರುವ ಶಬ್ದವಿಶೇಷವೆಂದು ತಿಳಿಯಬೇಕು. ಇದು ಸಂಸ್ಕೃತ ದಲ್ಲಿ ಕೃತ್ತದ್ಧಿತ ಸಮಾಸೈಕಶೇಷಸನಾದ್ಯಂತ ಧಾತುರೂಪ ಪಂಚಭೇದಭಿನ್ನವಾಗಿದ್ದರೂ ಭಾಷೆ ಯಲ್ಲಿ ಕೃತ್ತದ್ಧಿತಸಮಾಸಗಳೆಂದು ಮೂರು ವೃತ್ತಿಗಳು ಅಂಗೀಕರಿಸಲ್ಪಡುವುವು. ಇಲ್ಲಿ ಏಕಶೇಷ ವೃತ್ತಿಯನ್ನು ಹೇಳಿದ್ದರೂ ಸುಬ್ಲೋಪವಿಷಯದಲ್ಲಿ ಅದಕ್ಕೆ ಪ್ರಯೋಜನವಿಲ್ಲವೆಂದು ಅದನ್ನು ಬಿಟ್ಟಿದೆ. ಸನಾದ್ಯಂತ ಧಾತುರೂಪವೃತ್ತಿಯೆಂಬುದಾದರೋ ಭಾಷಾವ್ಯಾಕರಣದಲ್ಲಿ ಇಲ್ಲವೇ ಇಲ್ಲ. ಆದುದರಿಂದ ಮೂರೇ ವೃತ್ತಿಗಳೆಂದು ಹೇಳಲ್ಪಟ್ಟಿದೆ. ಇದು ಸಂಬಂಧಷಷ್ಠ್ಯಂತ ಪದದಿಂದ ನಿರ್ದೇಶಿಸಲ್ಪಟ್ಟಿರುವುದರಿಂದ ವೃತ್ತಿಸಂಬಂಧಿಯಾದ ಎಂದರ್ಥವಾಗುವುದು. ಇದೂ 'ಸುಪಃ' ಎಂಬ ಸ್ಥಾನಷಷ್ಠ್ಯಂತಕ್ಕೆ ವಿಶೇಷಣವು. ವೃತ್ತಿಸಂಬಂಧಿಯಾದ ಎಂದರೆ ಆ ಸಂಬಂಧವು ಅನೇಕ ವಿಧವಾಗಿದ್ದರೂ ಪ್ರಕೃತದಲ್ಲಿ ಅವಯವಾವಯವಿಭಾವರೂಪವೆಂದು ತಿಳಿದು ವೃತ್ತ್ಯವಯವವಾದ ಸುಪ್ಪಿಗೆ ಎಂದರ್ಥವಾಗುವುದು. ತಥಾಚ — ವೃತ್ತ್ಯವಯವ ಸುಪ್ಪಿಗೆ ಲೋಪವು ಬರುವುದೆಂದು ಸೂತ್ರಾರ್ಥವಾಗಲು — 'ಮಾನಂ ಕೊಲ್ವಂ' ಎಂದು ಮೊದಲಾಗಿ ವಿಗ್ರಹವನ್ನು ಮಾಡಲು ತದವಯವವಾದ ಅಮಾದಿ ಸುಪ್ಪಿಗೆ ಲೋಪವು ಬಂದು 'ಮಾಂಗುಲಿ' ಮೊದಲಾದ ರೂಪಗಳು ಸಿದ್ಧಿಸುವುವು. ಇಲ್ಲಿ ಕೊಟ್ಟಿರುವ ಉದಾಹರಣೆಗಳಲ್ಲಿ — 'ಬಂಡುಣಿ, ಮಾಂಗುಲಿ, ಕಲ್ಕುಟಿಗಂ' ಎಂಬಿವು ಕೃತ್ – ವೃತ್ತಿಗೆ ಉದಾಹರಣೆಗಳು. ಇಲ್ಲಿ — '**ಇರುಣಃ ಕರ್ಮಣಿ || ೫೪೬ || ಕೊಲ ಉದ್ಧ್ರಸ್ತಶ್ಚ || ೫೪೭ || ಕುಟ್ಟ್ಯೋರಿಗೋ ದುಲುಪ್ಚ || ೫೪೮ ||**' ಎಂಬ ಸೂತ್ರಗಳಿಂದ ಸುಬ್-ನಿಮಿತ್ತಕವಾಗಿಯೇ 'ಇ' ಮೊದಲಾದ ಪ್ರತ್ಯಯಗಳನ್ನು ವಿಧಿಸು ವುದರಿಂದ ನಿಷ್ಪನ್ನಗಳಾಗಿರುವುವು. ಇಲ್ಲಿ ಸುಪ್ಪಿಗೆ ವೃತ್ತ್ಯವಯವತ್ವವು ಸಂಭವಿಸುವುದೆಂದು ಲೋಪವು ಬರುವುದು. ಹೀಗೆ ಹೇಳದೆ 'ವೃತ್ತೇಃ' ಎಂಬುದನ್ನು ಪಂಚಮ್ಯಂತವಾಗಿ ಅಂಗೀಕರಿಸಿ ವೃತ್ತಿಯ ದೆಸೆಯಿಂದ ವಿಹಿತಸುಪ್ಪಿಗೆ ಎಂದಾಗಲಿ ಷಷ್ಠ್ಯಂತವಾಗಿ ಅಂಗೀಕರಿಸಿ ಸಾಮಾನ್ಯವಾಗಿ ವೃತ್ತಿಸಂಬಂಧಿಯಾದ ಸುಪ್ಪಿಗೆ ಎಂದಾಗಲಿ, ವ್ಯಾಖ್ಯಾನವನ್ನು ಮಾಡಿದರೆ — 'ಕಾಣ್ಕೆ, ಪೂಣ್ಕೆ' ಮೊದಲಾದ ಕೃಲ್ಲಿಂಗದ ದೆಸೆಯಿಂದಲೂ 'ತಂಬುಲಿಗ, ಸರವಂದಿಗ' ಮೊದಲಾದ ತದ್ಧಿತಲಿಂಗದ ದೆಸೆಯಿಂದಲೂ 'ಅರಮನೆ, ಸೂಳೆಗೇರಿ' ಮೊದಲಾದ ಸಮಾಸ ಲಿಂಗದ ದೆಸೆಯಿಂದಲೂ ವಿಹಿತವಾದ ಸುಪ್ಪಿಗೂ ತತ್-ಸಂಬಂಧ ಮಾತ್ರವಿರುವುದರಿಂದ ಲೋಪವು ಪ್ರಸಕ್ತವಾಗಲು ಲೋಕದಲ್ಲಿ ವಿಭಕ್ತಿಗಳು ಇಲ್ಲದೆ ಸರ್ವವ್ಯವಹಾರವೂ ವಿರುದ್ಧವಾಗು ವುದು. ಆದುದರಿಂದ ವೃತ್ತ್ಯವಯವಸುಪ್ಪಿಗೆ ಲೋಪವೆಂದು ವ್ಯಾಖ್ಯಾನ ಮಾಡಿರುವುದು. ತಸ್ಮಾದ್ವಿ ಹಿತಕ್ಕೆ ತದವಯವತ್ವವಿಲ್ಲವೆಂದು ತಾತ್ಪರ್ಯವು. ಇಲ್ಲಿ 'ವೃತ್ತೇಃ' ಎಂದು ಹೇಳಿರುವುದರಿಂದ

ಪಾಠಾಂತರ : ೧ ಸೂಳೆಯ

' ಜನಂಗಳಿಂ, ಬನಂಗಳಿಂ ' ಮೊದಲಾದುವು ವೃತ್ತಿಯಲ್ಲವಾದುದರಿಂದ ಲೋಪವಿಲ್ಲವೆಂದು ತಿಳಿಯಬೇಕು.

**ಅವತಾರಿಕೆ ೨೪೯**

ಪೂರ್ವಸೂತ್ರದಿಂದ ವೃತ್ತಿಸಾಮಾನ್ಯದಲ್ಲಿಯೂ ಸುಪ್ಪಿಗೆ ಲೋಪವನ್ನು ವಿಧಿಸಿರುವುದರಿಂದ ಕೆಲವು ತದ್ಧಿತವೃತ್ತ್ಯವಯವಸುಪ್ಪಿಗೂ ಲೋಪವು ಪ್ರಸಕ್ತವಾಗಲು ಅದಕ್ಕೆ ನಿಷೇಧವನ್ನು ವಿಧಿಸುತ್ತಾನೆ.

**ಸೂತ್ರಂ || ನವೋಲ್ವೊಲಿ || ೨೪೯ ||**

**ಅರ್ಥ || ಅ ಕಾರಾಂತ ಶಬ್ದದ ದೆಸೆಯಿಂದ ಪರವಾದ ಸುಪ್ಪಿಗೆ ' ವೋಲ್, ವೊಲ್ ' ಪ್ರತ್ಯಯಗಳು ಪರವಾಗಿರಲು ಲೋಪವು ಬರುವುದಿಲ್ಲ.**

**ಉದಾಹರಣೆ** || ' ಇಂದ್ರನವೋಲ್, ಇಂದ್ರನವೊಲ್; ಚಂದ್ರನವೋಲ್, ಚಂದ್ರನ ವೊಲ್ || ' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೨೪೯**

ಈ ಸೂತ್ರದಲ್ಲಿ — ' ನ, ವೋಲ್ವೊಲಿ ' ಎಂದು ಎರಡು ಪದಗಳಿರುವುವು. ಪೂರ್ವದಿಂದ ' ಸುಪಃ, ಶ್ಲುಪ್ ' ಎಂದು ಅನುವರ್ತಿಸಲ್ಪಡುವುವು. ' ನ ' ಎಂಬುದು ನಿಷೇದಾರ್ಥಕವು. ' ವೋಲ್ವೊಲಿ ' ಎಂಬುದು **' ತಸ್ಯ ತುಲ್ಯೇ ವೊಲ್ವೋಲೌ || ೪೨೮ || '** ಎಂಬ ಸೂತ್ರದಿಂದ ಷಷ್ಠ್ಯಂತ ಶಬ್ದದ ದೆಸೆಯಿಂದ ಪರವಾಗಿ ವಿಧಿಸುವ ' ವೋಲ್, ವೊಲ್ ' ಎಂಬ ತದ್ಧಿತ ಪ್ರತ್ಯಯಬೋಧಕವಾದ ನಿಮಿತ್ತ ಸಪ್ತಮ್ಯಂತಪದವು. ಆದುದರಿಂದ ಈ ನಿಷೇಧವು ತದ್ಧಿತವೃತ್ತಿ ವಿಷಯಕವೆಂದು ತಿಳಿಯಬೇಕು. ಅನ–ಕಾರಾಂತಕ್ಕೆ ವಿಕಲ್ಪವಾಗಿ ಮುಂದಿನ ಸೂತ್ರದಲ್ಲಿ ಹೇಳು ವುದರಿಂದ ಇಲ್ಲಿ ಅ ಕಾರಾಂತಕ್ಕೆ ಎಂದು ಹೇಳಬೇಕು. ತಥಾಚ — ಅ ಕಾರಾಂತ ಶಬ್ದಕ್ಕೆ ಪರವಾಗಿರುವ ಸುಪ್ಪಿಗೆ ' ವೋಲ್, ವೊಲ್ ' ಪ್ರತ್ಯಯಗಳು ಪರವಾಗಿರಲು ಲೋಪವು ಬರುವು ದಿಲ್ಲವೆಂದು ಸೂತ್ರಾರ್ಥವಾಗುವುದರಿಂದ ' ಇಂದ್ರನವೋಲ್ ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು. ಇಲ್ಲಿ — ವೋಲ್ವೊಲಿ ' ಎಂದು ಹೇಳಿರುವುದರಿಂದ ' ಇಂದ್ರಂಬೋಲ್, ಚಂದ್ರಂ ಬೊಲ್ ' ಮೊದಲಾದ ಪ್ರಯೋಗಗಳಲ್ಲಿ ' ಬೊಲ್ ' ಪ್ರತ್ಯಯವು ಪರದಲ್ಲಿರುವಾಗ ನಿಷೇಧ ವಿಲ್ಲವೆಂದು ತಿಳಿಯಬೇಕು.

ಇಲ್ಲಿ ಕೆಲವರು ' ವೋಲ್, ವೊಲ್ ' ಎಂಬಿವನ್ನು ಸಾದೃಶ್ಯಾರ್ಥಕಾವ್ಯಯಗಳೆಂದು ಭಾವಿಸಿ ಷಷ್ಠ್ಯಂತಗಳ ಮುಂದೆ ಪ್ರಯೋಗಿಸುವುದರಿಂದ ಇಂತಹ ಪ್ರಯೋಗಗಳು ವೃತ್ತಿಯೇ ಅಲ್ಲವಾದುದರಿಂದ ಲೋಪಪ್ರಸಕ್ತಿಯಿಲ್ಲದಿರಲು ತದ್ವಾರಣಾರ್ಥಕವಾಗಿ ಈ ಸೂತ್ರಾರಂಭವು ವ್ಯರ್ಥವೆಂದು ಹೇಳುವರು. ಆದಾಗ್ಯೂ ಇವರು ' ವೋಲ್, ವೊಲ್ ' ಎಂಬಿವುಗಳನ್ನು ಕಥಂಚಿತ್ ಅವ್ಯಯಗಣದಲ್ಲಿ ಸೇರಿಸಿ ಅವ್ಯಯತ್ವವನ್ನು ಅಂಗೀಕರಿಸಿ ಉಕ್ತಪ್ರಯೋಗಗಳನ್ನು ಸಾಧಿಸಿದರೂ ' ವೋಲ್, ವೊಲ್ ' ಎಂಬಿವು ಪ್ರತ್ಯಯಗಳೆಂದು ಅಂಗೀಕರಿಸುವರ ಪಕ್ಷದಲ್ಲಿ ಈ ಸೂತ್ರವು ಸಾರ್ಥಕವೆಂದು ತಿಳಿಯಬೇಕು. ಮತ್ತು ಅವ್ಯಯತ್ವವನ್ನು ಅಂಗೀಕರಿಸುವರ ಮತದಲ್ಲಿ ಅನ ಕಾರಾಂತ ವಿಷಯದಲ್ಲ ಲೋಪಾರ್ಥವಾಗಿ ಯತ್ನಾಂತರವನ್ನು ಮಾಡಬೇಕಾಗುವುದರಿಂದ ಅವರ-

ಮತವು ಗೌರವಗ್ರಸ್ತವೆಂದು **ಸೂತ್ರಕಾರರು** ಇವಕ್ಕೆ ಪ್ರತ್ಯಯತ್ವವನ್ನೇ ಅಂಗೀಕರಿಸಿ ಪ್ರಸಕ್ತ ಲೋಪವನ್ನು ನಿಷೇಧಿಸಿರುವರೆಂದು ತಿಳಿಯಬೇಕು.

**ಅವತಾರಿಕೆ ೨೫೦**

ಹೀಗೆಯೇ ಅನ-ಕಾರಾಂತ ಶಬ್ದಕ್ಕೆ ಪರವಾದ ಸುಪ್ಪಿಗೆ ಪ್ರಾಪ್ತವಾದ ನಿಷೇಧಕ್ಕೆ ವೈಕಲ್ಪಿಕತ್ವವನ್ನು ವಿಧಿಸುತ್ತಾನೆ.

**ಸೂತ್ರಂ || ಅನತೋ ವಾ || ೨೫೦ ||**

**ಅರ್ಥ || ಅನ-ಕಾರಾಂತ ಶಬ್ದಕ್ಕೆ ಪರವಾದ ಸುಪ್ಪಿಗೆ ' ವೋಲ್, ವೊಲ್ ' ಪ್ರತ್ಯಯಗಳು ಪರವಾಗಿರಲು ವಿಕಲ್ಪವಾಗಿ ಲೋಪನಿಷೇಧವು ಬರುವುದು.**

**ಉದಾಹರಣೆ ||** ' ಹರಿಯುವೋಲ್, ಹರಿವೋಲ್; ಹರಿಯುವೊಲ್, ಹರಿವೊಲ್; ವಿಧುವವೋಲ್, ವಿಧುವೋಲ್; ವಿಧುವವೊಲ್, ವಿಧುವೊಲ್; ಪಿತೃವವೋಲ್, ಪಿತೃವೋಲ್; ಪಿತೃವವೊಲ್, ಪಿತೃವೊಲ್ || ' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೨೫೦**

ಈ ಸೂತ್ರದಲ್ಲಿ — ' ಅನತಃ, ವಾ ' ಎಂದು ಎರಡು ಪದಗಳಿರುವುವು. ಪೂರ್ವಸೂತ್ರದಿಂದ 'ನಃ, ವೋಲ್‌ವೊಲಿ, ಸುಪಃ' ಎಂದು ಮೂರು ಪದಗಳು ಅನುವರ್ತಿಸಲ್ಪಡುವುವು. 'ಅನತಃ' ಎಂಬುದು — ' ನ ಅತ್ = ಅನತ್, ತಸ್ಮಾತ್ = ಅನತಃ ' ಎಂದು ನಞ್ - ಸಮಾಸವನ್ನು ಅಂಗೀಕರಿಸಿ ಪಂಚಮ್ಯಂತವಾಗಿ ನಿರ್ದೇಶವಾಡಿರುವುದರಿಂದ ' ಅ ಕಾರಭಿನ್ನವಾದ ವರ್ಣದ ದೆಸೆಯಿಂದ ' ಎಂದರ್ಥವಾಗುವುದು. ಇದನ್ನು ' ಸುಪಃ ' ಎಂಬುದರಿಂದ ಆಕ್ಷಿಪ್ತವಾದ ಪ್ರಕೃತಿಗೆ ವಿಶೇಷಣವನ್ನು ಮಾಡಲು ತದಂತಲಾಭದಿಂದ ' ಅನ-ಕಾರಾಂತಾತ್ ' ಎಂದರ್ಥವಾಗುವುದು. ' ವಾ ' ಎಂಬುದು ವಿಕಲ್ಪಾರ್ಥಕವು. ಹಿಂದೆ ಸಾಮಾನ್ಯವಾಗಿ ನಿಷೇಧವನ್ನು ಹೇಳಿದ್ದರಿಂದ ಇಲ್ಲ ನಿಷೇಧಕ್ಕೆ ವೈಕಲ್ಪಿಕತ್ವವನ್ನು ಹೇಳಬೇಕು. ಹೀಗೆ ಹೇಳಿದರೂ ವಿಧಿವಿಕಲ್ಪವೆಂದೇ ಫಲಿತವಾಗುವುದು. ಆದುದರಿಂದಲೇ ಪೂರ್ವಸೂತ್ರದಲ್ಲ ಸಾಮಾನ್ಯವಾಗಿ ನಿರ್ದೇಶವಿದ್ದರೂ ಅ ಕಾರಾಂತದ ದೆಸೆಯಿಂದ ಎಂದು ವಿಶೇಷಪರ್ಯವಸನ್ನವಾಗಿ ವ್ಯಾಖ್ಯಾನಮಾಡಿರುವುದು. ತಥಾಚ — ಅನ-ಕಾರಾಂತ ಶಬ್ದದ ದೆಸೆಯಿಂದ ಪರವಾದ ಸುಪ್ಪಿಗೆ ' ವೋಲ್, ವೊಲ್ ' ಪ್ರತ್ಯಯಗಳು ಪರವಾಗಿರಲು ಲೋಪನಿಷೇಧವು ವಿಕಲ್ಪವಾಗುವುದೆಂದು ಸೂತ್ರಾರ್ಥವು ಫಲಿತವಾಗುವುದರಿಂದ ' ಹರಿಯುವೋಲ್, ಹರಿವೋಲ್ ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು.

**ಅವತಾರಿಕೆ ೨೫೧**

ವೃತ್ತ್ಯವಯವಸುಪ್ಪಿಗೆ ಸಾಮಾನ್ಯವಾಗಿ ವಿಧಿಸಿದ ಲೋಪಕ್ಕೆ ತದ್ಧಿತವೃತ್ತಿಯಲ್ಲ ಕೆಲವೆಡೆ ನಿಷೇಧ ಮಾಡಿ ಪ್ರಕೃತಿವಿಶೇಷದಲ್ಲ ವೈಕಲ್ಪಿಕತ್ವವನ್ನೂ ಬೋಧಿಸಿ ಈಗ ಪ್ರಕೃತಿವಿಶೇಷದ ದೆಸೆಯಿಂದ ವಿಹಿತವಾದ ಮ ಕಾರಾತ್ಮಕ ಸುಪ್ಪಿಗೆ ಲೋಪವನ್ನು ವಿಧಿಸುತ್ತಾನೆ.

**ಸೂತ್ರಂ || ಮಃ || ೨೫೧ ||**

**ಅರ್ಥ || ಅನ-ಕಾರಾಂತ ಶಬ್ದದ ದೆಸೆಯಿಂದ ಪರವಾಗಿರುವ ಮ ಕಾರಾತ್ಮಕ ಸುಪ್ಪೆಂದರೆ-ಪ್ರಥಮಾವಿಭಕ್ತಿಯಾದ ' ಮ್ ' ಎಂಬುದಕ್ಕೆ ಲೋಪವು ಬರುವುದು.**

**ಉದಾಹರಣೆ** || ' ಮಹಾಜ್ಯಾ, ಪುಣ್ಯಸ್ತ್ರೀ, ನದಿ, ವಧು[೧], ಗೌ, ನೌ, ಪೊನ್, ಮಣ್, ಕಲ್, ಮರುಳ್, ಕೊಳಂಗಳ್, ಮಾವಂದಿರ್, ಅತ್ತೆಯರ್ || ' ಮೊದಲಾದ ಅ ಕಾರಾಂತ ಗಳಲ್ಲದುವೆಲ್ಲಾ ಇದಕ್ಕೆ ಲಕ್ಷ್ಯಗಳು.

**ವಿಚಾರ ೨೫೧**

ಈ ಸೂತ್ರದಲ್ಲಿ ' ಮಃ ' ಎಂದೊಂದೇ ಪದವಿರುವುದು. ಪೂರ್ವದಿಂದ ' ಅನತಃ ' ಎಂಬುದಕ್ಕೂ ' ಸುಪಃ, ಶ್ಲುಪ್ ' ಎಂಬಿವಕ್ಕೂ ಅನುವೃತ್ತಿ ಇರುವುದು. ' ಮಃ ' ಎಂಬುದು ' ಮ್ ' ಎಂಬ ಪ್ರಥಮಾವಿಭಕ್ತಿಬೋಧಕವಾದ ಷಷ್ಠ್ಯಂತವು. ಇದಕ್ಕೆ ' ಸುಪಃ ' ಎಂಬ ಷಷ್ಠ್ಯಂತವು ವಿಶೇಷಣವು; ಅಥವಾ ' ಮಃ ' ಎಂಬುದೇ ' ಸುಪಃ ' ಎಂಬುದಕ್ಕೆ ವಿಶೇಷಣವು. ' ಅನತಃ ' ಎಂಬುದು ಪಂಚಮ್ಯಂತವಾದುದರಿಂದ ಸುಪ್-ಪ್ರಕೃತಿಬೋಧಕವಾಗುವುದು. ತಪರಕರಣದಿಂದ ಹ್ರಸ್ವಾಕಾರಕ್ಕೆ ವ್ಯಾವೃತ್ತಿ ಮಾಡುವುದು. ಇಲ್ಲಿ ಕೇವಲ ವರ್ಣಕ್ಕೆ ಪ್ರಯೋಗಸಿಲ್ಲ ಪಾದುದರಿಂದ ' ಅನತಃ ' ಎಂಬುದು ತದಂತಬೋಧಕವಾಗುವುದು. ತಥಾಚ — ಅನ-ಕಾರಾಂತ ಶಬ್ದದ ದೆಸೆಯಿಂದ ಪರವಾಗಿರುವ ' ಮ್ ' ಎಂಬ ಸುಪ್ಪಿಗೆ ಲೋಪವು ಬರುವುದೆಂದು ಸೂತ್ರಾರ್ಥವಾಗಲು ಹ್ರಸ್ವಾಕಾರಾಂತವಲ್ಲದ ಶಬ್ದಗಳೆಲ್ಲಾ ಇದಕ್ಕೆ ಲಕ್ಷ್ಯಗಳಾಗುವುವು. ಇಲ್ಲಿ ' ಮಹಾಜ್ಯಾ, ಪುಣ್ಯಸ್ತ್ರೀ ' ಇವೆರಡೂ ಸಮಾಸಕೃತಾನೇಕಸ್ವರಗಳಾದುದರಿಂದ — ' **ಹ್ರಸ್ವೋಽನೇಕಸ್ವರಸ್ಯಾಸಮಾಸೇಽಪೂರ್ವಪದಸ್ಯ** || ೧೧೫ || ' ಎಂಬ ಸೂತ್ರಕ್ಕೆ ಪ್ರವೃತ್ತಿಯಿಲ್ಲವಾದುದರಿಂದ ದೀರ್ಘಾಂತಗಳಾಗಿ ' ಅನತಃ ' ಎಂಬುದಕ್ಕೆ ವಿಷಯಗಳಾಗಿರುವುವು. ಈ ಸೂತ್ರದಲ್ಲಿ — ಅನ-ಕಾರಾಂತ ಶಬ್ದದ ದೆಸೆಯಿಂದ ವಿಹಿತವಾದ ಸುಪ್ಪಿಗೆ ಲೋಪವೆಂದು ವ್ಯಾಖ್ಯಾನ ಮಾಡದೆ ಅನ-ಕಾರಾಂತ ಶಬ್ದದ ದೆಸೆಯಿಂದ ಪರವಾಗಿರುವ ಎಂದು ವ್ಯಾಖ್ಯಾನ ಮಾಡಿರುವುದರಿಂದ ಅ ಕಾರಾಂತದ ದೆಸೆಯಿಂದ ವಿಹಿತವಾದ ಸುಪ್ಪಿಗೂ ಗಳಾದಿ ಸಮಭಿವ್ಯಾಹಾರದಲ್ಲಿ ಲೋಪವು ಬರುವುದೆಂದು ' ಕೊಳಂಗಳ್ ' ಮೊದಲಾದುವನ್ನು ಇಲ್ಲಿ ಉದಾಹರಿಸಿರುವೆವು. ಈ ಸೂತ್ರದಲ್ಲಿ — ' ಅನತಃ ' ಎಂದು ಹೇಳಿರುವುದರಿಂದ ಅ ಕಾರಾಂತಗಳಾದ — ' ಘಟಂ, ಪಟಂ, ಸ್ತಂಭಂ, ಕುಂಭಂ ' ಮೊದಲಾದ ಶಬ್ದಗಳಲ್ಲಿ ಲೋಪವಿಲ್ಲ. ' ಮಃ ' ಎಂದು ಸ್ಥಾನಿವಿಶೇಷನಿರ್ದೇಶ ಮಾಡಿರುವುದರಿಂದ ' ಗಿರಿಯುಂ, ನದಿಯುಂ, ಅರಲಂ, ಮರುಳಂ ' ಮೊದಲಾದ ಪ್ರಯೋಗಗಳಲ್ಲಿ ಅಮಾದಿಗಳಿಗೆ ಲೋಪವಿಲ್ಲ.

ಇಲ್ಲಿ **ದರ್ಪಣಕಾರನು** —

**ಬಿಂದುವದಂತಕ್ಕುಱದೆಡೆ**
**ಗೆಂದುಂ ಪ್ರಥಮೈಕವಚನದೊಳ್ ಲೋಪಂ (ಸೂತ್ರ ೧೧೫)**

ಎಂದು ಹೇಳಿರುವನು.

**ಅವತಾರಿಕೆ ೨೫೨**

ಪೂರ್ವದಲ್ಲಿ ಅನ-ಕಾರಾಂತ ಶಬ್ದಕ್ಕೆ ಪರವಾಗಿರುವ ಮ ಕಾರರೂಪ ಸುಪ್ಪಿಗೆ ಲೋಪವು ವಿಧಿಸಲ್ಪಟ್ಟಿತು. ಈಗ ಪ್ರಕೃತಿಸಾಮಾನ್ಯಕ್ಕೆ ಪರವಾಗಿ ಆಮಂತ್ರಣಾರ್ಥದಲ್ಲಿ ವಿಹಿತವಾದ ಮ ಕಾರಕ್ಕೆ ಲೋಪವನ್ನೂ ಎ ಕಾರಾದೇಶವನ್ನೂ ಪರ್ಯಾಯವಾಗಿ ವಿಧಿಸುತ್ತಾನೆ.

---

**ಪಾಠಾಂತರ :** ೧ ಮಧು

**ಸೂತ್ರಂ || ಎಚ್ಚಾಮಂತ್ರಣೇ || ೨೫೨ ||**

**ಅರ್ಥ ||** ' ಆಮಂತ್ರಣಾರ್ಥದಲ್ಲಿ ' ಎಂದರೆ ಸಂಬೋಧನದಲ್ಲಿ ವಿಹಿತವಾದ ' ಮ್ ' ಪ್ರತ್ಯಯಕ್ಕೆ ಲೋಪವೂ ಎ ಕಾರಾದೇಶವೂ ಬರುವುದು.

**ಉದಾಹರಣೆ ||** ' ದೇವ ಬಿನ್ನಪಂ, ದೇವನೆ ಬಿನ್ನಪಂ; ಅರಸ ಕೇಳ್, ಅರಸನೆ ಕೇಳ್; ಎಲೆ ವಧು, ಎಲೆ ವಧುವೆ; ಗುರುಗಳ್, ಗುರುಗಳೆ; ಮಾವಂದಿರ್, ಮಾವಂದಿರೆ || ' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೨೫೨**

ಈ ಸೂತ್ರದಲ್ಲಿ — ' ಎತ್, ಚ, ಆಮಂತ್ರಣೇ ' ಎಂದು ಮೂರು ಪದಗಳಿರುವುವು. ಪೂರ್ವದಿಂದ ' ಮಃ, ಲ್ಲುಪ್ ' ಎಂಬಿವು ಅನುವರ್ತಿಸಲ್ಪಡುವುವು. ' ಎತ್ ' ಎಂಬುದು ಎ ಕಾರ ಮಾತ್ರ ಬೋಧಕವಾದ ಪ್ರಥಮಾಂತಪದವು. ಇದು ಇಲ್ಲಿ ವಿಧೇಯವು. ಚ ಕಾರದಿಂದ ಲ್ಲುಪ್ಪು ಸಂಬಂಧಿಸಲ್ಪಡುವುದು. ' ಆಮಂತ್ರಣೇ ' ಎಂಬುದು ಸಂಬೋಧನಾರ್ಥಕ ಸಪ್ತಮ್ಯಂತಪದವು. ಸಂಬೋಧನವೆಂದರೆ ಸ್ವಾಭಿಮುಖೀಕರಣಾನುಕೂಲವ್ಯಾಪಾರವು. ಇದು ' ಮಃ ' ಎಂಬುದಕ್ಕೆ ವಿಶೇಷಣವು. ಇಲ್ಲಿ ಪ್ರಕೃತಿನಿರ್ದೇಶವಿಲ್ಲದಿರುವುದರಿಂದ ' ಪ್ರಕೃತಿಸಾಮಾನ್ಯದ ದೆಸೆಯಿಂದ ' ಎಂದು ಪ್ರಾಪ್ತವಾಗುವುದು. ತಥಾಚ — ಪ್ರಕೃತಿಸಾಮಾನ್ಯದ ದೆಸೆಯಿಂದಲೂ ಆಮಂತ್ರಣಾರ್ಥದಲ್ಲಿ ವಿಹಿತವಾದ ' ಮ್ ' ಪ್ರತ್ಯಯಕ್ಕೆ ಲೋಪವೂ ಎ ಕಾರಾದೇಶವೂ ಪರ್ಯಾಯವಾಗಿ ಬರುವುದು – ಎಂದು ಸೂತ್ರಾರ್ಥವಾಗಲು ' ದೇವ ಬಿನ್ನಪಂ, ದೇವನೆ ಬಿನ್ನಪಂ ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು. ಇಲ್ಲಿ ಎ ಕಾರಾದೇಶವನ್ನು ಮಾಡಿದಾಗ ಅದು ಪರದಲ್ಲಿರಲು ಪ್ರಕೃತಿಗೆ — ' **ನಕ್ ಸ್ವರೇ || ೨೬೦ ||** ' ಎಂಬ ಸೂತ್ರದಿಂದ ನಗಾಗಮವು ಬಂದು ' ಅರಸನೆ, ದೇವನೆ ' ಮೊದಲಾದ ಪ್ರಯೋಗಗಳು ಸಿದ್ಧಿಸುವುವೆಂದು ತಿಳಿಯಬೇಕು.

ಆದರೆ ಈ ಸೂತ್ರದಲ್ಲಿ — ' ಎಚ್ಚ ' ಎಂದು ಚ ಕಾರವನ್ನು ಬಿಟ್ಟು ' ವಾ ' ಶಬ್ದವನ್ನು ಹೇಳಿ — ಆಮಂತ್ರಣಾರ್ಥದಲ್ಲಿ ವಿಹಿತವಾದ ' ಮ್ ' ಪ್ರತ್ಯಯಕ್ಕೆ ಎ ಕಾರಾದೇಶವು ವಿಕಲ್ಪವಾಗಿ ಬರುವುದೆಂದು ಹೇಳಿದರೂ ಎ ಕಾರಾದೇಶವು ಬಾರದ ಪಕ್ಷದಲ್ಲಿ ಪೂರ್ವಸೂತ್ರದಿಂದ ಲೋಪವು ಬಂದು ರೂಪದ್ವಯವೂ ಸಿದ್ಧಿಸುವುದು. ಇದರಿಂದ ಪೂರ್ವೋತ್ತರ ಸೂತ್ರಗಳಿಗೆ ಮಹೋಪಕಾರವನ್ನು ಮಾಡಿದಂತಾಗುವುದು. ಹೇಗೆಂದರೆ — ಪೂರ್ವಸೂತ್ರವು ವಿಕಲ್ಪ ಮಧ್ಯಗತವಾದುದರಿಂದ ನಿತ್ಯವಾಗುವುದು. ಉತ್ತರಸೂತ್ರದಲ್ಲಿ ಈ ಸೂತ್ರದಿಂದಲೆ ' ವಾ ' ಎಂಬುದಕ್ಕೆ ಅನುವೃತ್ತಿ ಬರಲು ಮತ್ತೆ ' ವಾ ' ಗ್ರಹಣ ಮಾಡದೆ ಇರುವುದರಿಂದ ಲಾಘವವೂ ಸಿದ್ಧವಾಗುವುದು ಎಂದು ಕೆಲವರು ಶಂಕಿಸುವರು. ಇದು ಪೂರ್ವಸೂತ್ರವು ಅನ-ಕಾರಾಂತ ವಿಷಯವೆಂಬುದನ್ನು ಪರ್ಯಾಲೋಚಿಸದೆ ಆಪಾತರಮಣೀಯವಾಗಿರುವುದೆಂದು ಸೂತ್ರಕಾರರು ಈ ಲೋಪವೂ ಪ್ರಕೃತಿಸಾಮಾನ್ಯವಿಷಯವೆಂದು ಸೂಚಿಸಲು ಸೂತ್ರದಲ್ಲಿ ' ಚ ' ಶಬ್ದವನ್ನು ಪ್ರಯೋಗಿಸಿ ಇಲ್ಲಿಯೆ ಲೋಪವನ್ನೂ ಸಮುಚ್ಚಯವಾಗಿ ಹೇಳಿರುವರೆಂದು ತಿಳಿಯಬೇಕು. ಆದುದರಿಂದಲೇ **ದರ್ಪಣಕಾರನೂ** ' ಪ್ರಥಮೈಕವಚನದೊಳ್ ಲೋಪಂ ' ಎಂದು ಅ ಕಾರಾಂತ ಅತಿರಿಕ್ತ ಪ್ರಕೃತಿವಿಷಯವಾಗಿ ಹೇಳಿ ಸಂಬೋಧನದಲ್ಲಿ ಪ್ರಕೃತಿಸಾಮಾನ್ಯ ವಿಷಯಕವಾಗಿ —

ಎಲ್ಲಿಯುಮಾಮಂತ್ರಣದೊಳ್
ಬಲ್ಲರ್ ಪ್ರಥಮೈಕವಚನಮಂ ಲೋಪಿಸುವರ್

ಎಂಬ ಸೂತ್ರದಿಂದ ಲೋಪವನ್ನೂ —

ಅವಿಶೇಷದಿಂದದಂತ
ಕ್ಕೆ ವರ್ಣಮೊದವುವುದೆ ವರ್ಣಮೊದವಿದದಂತ
ಕ್ಕವತರಿಕುಂ ಬಿಂದುವಬಿಂ
ದುವಾಗಿ ಬಹುವಚನದರುವನಡರ್ವುದೆವರ್ಣಂ ( ಸೂತ್ರ ೧೨೪ )

ಎಂಬ ಸೂತ್ರದಿಂದ 'ಎ' ವರ್ಣಾದೇಶವನ್ನೂ ಅದಂತಕ್ಕೆ 'ಎ' ವರ್ಣಸನ್ನಿಯೋಗವಿದ್ದಾಗ ಬಿಂದುವನ್ನೂ ವಿಕಲ್ಪವಾಗಿ ವಿಧಿಸಿರುವನು.

**ಅವತಾರಿಕೆ ೨೫೩**

ಪೂರ್ವದಲ್ಲ ಆಮಂತ್ರಣದಲ್ಲಿ ಸಾಮಾನ್ಯವಾಗಿ ಎ ಕಾರಾದೇಶರೂಪ ಕಾರ್ಯವಿಶೇಷ ವನ್ನು ಬೋಧಿಸಿರುವುದರಿಂದ ಅದು ಏಕವಚನದಲ್ಲ ಬರುವಂತೆ ಬಹುವಚನದಲ್ಲಿಯೂ ಪ್ರಸಕ್ತ ವಾಗಲು ಅದಕ್ಕೆ ಬಾಧಕವಾಗಿ ವೈಕಲ್ಪಿಕಾದೇಶವಿಶೇಷವನ್ನು ವಿಧಿಸುತ್ತಾನೆ.

**ಸೂತ್ರಂ ॥ ವೇರೋಽನೇಕತ್ವೇಽವುಕಳುಪಃ ॥ ೨೫೩ ॥**

**ಅರ್ಥ ॥ ಅನೇಕತ್ವದಲ್ಲಿ ವಿಹಿತವಾದ 'ಮ್' ಎಂಬುದಕ್ಕೆ 'ಇರ' ಎಂಬಾದೇಶವು ವಿಕಲ್ಪವಾಗಿ ಆಮಂತ್ರಣ ವಿಷಯದಲ್ಲಿ ಬರುವುದು. ಆ 'ಮ್' ಎಂಬ ಪ್ರತ್ಯಯವು 'ವು, ಕಳುಪ್' ಎಂಬ ಪ್ರತ್ಯಯಗಳಿಗೆ ಪರವಾಗಿದ್ದರೆ ಈ ಇರ್-ಆದೇಶವು ಬರುವುದಿಲ್ಲ.**

**ಉದಾಹರಣೆ॥** 'ಬುಧರಿರ, ಬುಧರ್; ಲತೆಗಳಿರ, ಲತೆಗಳ್; ಮಾವಂದಿರಿರ, ಮಾವಂದಿರ್; ಅತ್ತೆವಿರಿರ, ಅತ್ತೆವಿರ್; ಪಂಡಿತರ್ಕ್ಕಳಿರ, ಪಂಡಿತರ್ಕ್ಕಳ್ ॥' ಮೊದಲಾದುವು ಇದಕ್ಕೆ ಲಕ್ಷ್ಯ ಗಳು. 'ಇನಿಯವು; ಇನಿಯವೆ, ನಾಲ್ಕಳ್, ನಾಲ್ಕಳೆ' ಮೊದಲಾದುವು ಕಳುಪ್-ಪ್ರತ್ಯಯಗಳಿಗ ಪರವಾದುದಕ್ಕೆ ಇರ್-ಆದೇಶವಿಲ್ಲವೆಂಬುದಕ್ಕೆ ಉದಾಹರಣೆಗಳು. ಇಲ್ಲಿ ಪೂರ್ವಸೂತ್ರದಿಂದ ಲೋಪವೂ ಎ ಕಾರಾದೇಶವೂ ಬಂದಿರುವುವೆಂದು ತಿಳಿಯುವುದು.

**ವಿಚಾರ ೨೫೩**

ಈ ಸೂತ್ರದಲ್ಲಿ — 'ವಾ, ಇರಃ, ಅನೇಕತ್ವೇ, ಅವುಕಳುಪಃ' ಎಂದು ನಾಲ್ಕು ಪದಗಳಿರು ವುವು. ಪೂರ್ವದಿಂದ 'ಮಃ, ಆಮಂತ್ರಣೇ' ಎಂದು ಅನುವರ್ತಿಸಲ್ಪಡುವುವು. 'ವಾ' ಎಂಬುದು ಅಪ್ರಾಪ್ತವಿಭಾಷಾವಚನವು. ಆಮಂತ್ರಣವೆಂಬುದು ಏಕಾನೇಕವಿಷಯಕವಾದುದರಿಂದ, ಅಲ್ಲ ಏಕ ವಿಷಯಕ ಆಮಂತ್ರಣವನ್ನು ಬಿಟ್ಟು ಅನೇಕವಿಷಯಕ ಆಮಂತ್ರಣದಲ್ಲಿ ವಿಹಿತವಾದ ಪ್ರಥಮೆಗೆ ಇರ್-ಆದೇಶವು ಇದರಿಂದ ವಿಕಲ್ಪವಾಗಿ ವಿಧಿಸಲ್ಪಡುವುದು. ಇದು ಪೂರ್ವದಿಂದ ಅಪ್ರಾಪ್ತವಾಗಿರು ವುದು. ಆದುದರಿಂದ ಇದು 'ಅಪ್ರಾಪ್ತವಿಭಾಷಾವಚನ'ವೆಂದು ಹೇಳಲ್ಪಟ್ಟಿದೆ. 'ಇರಃ' ಎಂಬುದು ಅ ಕಾರಾಂತವಾದ ವಿಧೇಯಬೋಧಕಪದವು. 'ಅನೇಕತ್ವೇ' ಎಂಬುದು ಅನುವೃತ್ತವಾದ 'ಮಃ' ಎಂಬುದಕ್ಕೆ ವಿಶೇಷಣವು. 'ಅವುಕಳುಪಃ' ಎಂಬುದು ಪ್ರಸಜ್ಯಪ್ರತಿಷೇಧಾರ್ಥಕ 'ನಞ್'ನಿಂದ ಸಮಸ್ತವಾದ ಪಂಚಮ್ಯಂತಪದವು. ಆದುದರಿಂದ ಇಲ್ಲಿ ಎರಡು ವಾಕ್ಯಗಳೆಂದು ತಿಳಿಯಬೇಕು. ಪೂರ್ವವಾಕ್ಯವು ವಿಧಾಯಕವೆಂದೂ ಉತ್ತರವಾಕ್ಯವು ನಿಷೇಧಕವೆಂದೂ ತಿಳಿದು ಉತ್ತರವಾಕ್ಯ ದಲ್ಲಿ ಪೂರ್ವವಾಕ್ಯಗತವಾದ 'ಇರಃ, ಮಃ, ಅನೇಕತ್ವೇ' ಎಂಬಿವುಗಳನ್ನು ಸಂಬಂಧಿಸುವುದು.

ಇಲ್ಲಿ ' ವಾ ' ಎಂಬುದಕ್ಕೆ ಸಂಬಂಧವಿಲ್ಲವಾದುದರಿಂದ ನಿಷೇಧವು ನಿತ್ಯವಾಗಿ ಬರುವುದು. ತಥಾಚ — ಆಮಂತ್ರಣ ವಿಷಯುವಲ್ಲಿ ಪ್ರಕೃತಿಸಾಮಾನ್ಯಕ್ಕೂ ಪರವಾಗಿ ಅನೇಕತ್ವದಲ್ಲಿ ವಿಹಿತವಾದ ' ವ್ ' ಎಂಬ ಪ್ರತ್ಯಯಕ್ಕೆ ಇರ್-ಆದೇಶವು ವಿಕಲ್ಪವಾಗಿ ಬರುವುದು. ಆ ' ವ್ ' ಪ್ರತ್ಯಯವು ' ವು, ಕಳುಪ್ ' ಎಂಬ ಪ್ರತ್ಯಯಗಳಿಗೆ ಪರವಾಗಿದ್ದರೆ ಈ ಇರ್-ಆದೇಶವು ಬರುವುದಿಲ್ಲವೆಂದು ಸೂತ್ರಾರ್ಥವಾಗಲು ' ಬುಧರಿರ ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು. ಇಲ್ಲಿ ' ಇರ್ ' ಆದೇಶವನ್ನು ವಿಕಲ್ಪವಾಗಿ ಹೇಳಿರುವುದರಿಂದ ಇದು ಬಾರದಿದ್ದರೆ ಪೂರ್ವಸೂತ್ರದಿಂದ ಎ ಕಾರಾದೇಶ ಲೋಪಗಳು ಬರಲು ಮೂರು ಮೂರು ರೂಪಗಳಾಗುವುವು. ' ವು ಕಳುಬಂತ'ಗಳಿಗಾದರೂ ' ಇರ್ ' ಆದೇಶವನ್ನು ನಿಷೇಧಿಸಿರುವುದರಿಂದ ಎ ಕಾರ ಲೋಪಗಳು ಬಂದು ಎರಡೇ ರೂಪಗಳಾಗುವುವು. ಇಲ್ಲಿ ' ವು, ಕಳುಪ್ ' ಎಂಬಿವು — ' **ಎಲ್ಲಾದ್ಯುಃ ॥ ೨೩೪ ॥ ನಾಡ್ಯಾದಿಭ್ಯಃ ಕಳುಬ್ವಾ ॥ ೨೩೩ ॥** ' ಎಂಬ ಸೂತ್ರಗಳಿಂದ ವಿಹಿತವಾದ ಪ್ರತ್ಯಯಗಳೆಂದು ತಿಳಿಯಬೇಕು.

ಇಲ್ಲಿ **ದರ್ಪಣಕಾರನು** —

ಪಿರಿದುಂ ದ್ವಿತ್ವಬಹುತ್ವಂ
ಬರೆ ಗಳ್-ಕಳ್ಗುಂಟಿರಾಗಮಂ ಬಹುವಚನ
ಸ್ಫುರಿತಕ್ರಿಯೆಗೇತಕೆ ನಿಜ
ಪರಿಣತಿಯೊಳ್ ಧಾತುಗೇಕವಚನದೊಳಕ್ಷಂ (**ಸೂತ್ರ ೧೫೫**)

ಎಂಬ ಸೂತ್ರದಿಂದ ಆಮಂತ್ರಣದಲ್ಲಿ ದ್ವಿವಚನ ಬಹುವಚನಂಗಳಾದ ' ಗಳ್, ಕಳ್ ' ಎಂಬಿವಕ್ಕೆ ' ಇರ್ ' ಆಗಮವುಂಟು. 'ಪಿರಿದುಂ' ಎಂದು ಹೇಳಿರುವುದರಿಂದ 'ಕ್ವಚಿತ್ ಅಭಾ'ವಗೂ ಉಂಟು ಎಂದು ಮೊದಲಾಗಿ ವ್ಯವಸ್ಥೆ ಮಾಡಿರುವನು.

**ಅವತಾರಿಕೆ ೨೫೪**

ಪೂರ್ವದಲ್ಲಿ ಆಮಂತ್ರಣಾರ್ಥದಲ್ಲಿ ವಿಹಿತವಾದ ' ವ್ ' ಪ್ರತ್ಯಯಕ್ಕೆ ಏಕತ್ವಾನೇಕತ್ವಗಳು ತೋರುವಾಗ ಎ ಕಾರಾದೇಶ, ಲೋಪ, ಇರ್-ಆದೇಶಗಳನ್ನು ವಿಧಿಸಿದನು. ಈಗ ತದ್ವಿಷಯದಲ್ಲಿಯೇ ಸ್ವರಾಂತವಾದುದಕ್ಕೆ ದೀರ್ಘವನ್ನು ವಿಧಿಸುತ್ತಾನೆ.

**ಸೂತ್ರಂ ॥ ದೀರ್ಘಃ ॥ ೨೫೪ ॥**

**ಅರ್ಥ ॥ ಸ್ವರಾಂತವಾಗಿಯೂ ಮ ಕಾರಾತ್ಮಕ ಸುಬಂತವಾಗಿಯೂ ಇರುವ ಶಬ್ದಕ್ಕೆ ಆಮಂತ್ರಣವಿಷಯದಲ್ಲಿ ದೀರ್ಘಾದೇಶವು ವಿಕಲ್ಪವಾಗಿ ಬರುವುದು.**

**ಉದಾಹರಣೆ** ॥ 'ದೇವಾ ಬಿನ್ನಪಂ, ದೇವ ಬಿನ್ನಪಂ; ದೇವನೇ ಬಿನ್ನಪಂ, ದೇವನೆ ಬಿನ್ನಪಂ; ದೇವರೇ ಬಿನ್ನಪಂ, ದೇವರೆ ಬಿನ್ನಪಂ; ದೇವರ್ಕಳೇ ಬಿನ್ನಪಂ, ದೇವರ್ಕಳೆ ಬಿನ್ನಪಂ; ದೇವರಿರಾ ಬಿನ್ನಪಂ, ದೇವರಿರ ಬಿನ್ನಪಂ; ದೇವರ್ಕಳಿರಾ ಬಿನ್ನಪಂ, ದೇವರ್ಕಳಿರ ಬಿನ್ನಪಂ ॥ ' ಮೊದಲಾದ ಸಂಬೋಧನವಿಭಕ್ತ್ಯಂತಗಳೆಲ್ಲಾ ಇವಕ್ಕೆ ಲಕ್ಷ್ಯಗಳು.

**ವಿಚಾರ ೨೫೪**

ಈ ಸೂತ್ರದಲ್ಲಿ — ' ದೀರ್ಘಃ ' ಎಂದೊಂದೇ ಪದವಿರುವುದು. ಇದು ಪ್ರಥಮಾಂತವಾಗಿರುವುದರಿಂದ ವಿಧೇಯವಾಗಿರುವುದು. ಇದರಿಂದ ' **ಸ್ವರಸ್ಯ** ' ॥ ೪ ॥ ಎಂಬ ಪರಿಭಾಷಾಸೂತ್ರವನು

ಸಾರವಾಗಿ ' ಸ್ವರಸ್ಯ ' ಎಂಬ ಷಷ್ಠ್ಯಂತಪದವು ಉಪಸ್ಥಿತವಾಗುವುದು. ಈ ಉಪಸ್ಥಿತವಾದ ' ಸ್ವರಸ್ಯ ' ಎಂಬುದನ್ನೂ ಅನುವರ್ತಮಾನವಾದ ' ಮಃ ' ಎಂಬುದನ್ನೂ ಆಕ್ಷಿಪ್ತವಾದ 'ಸ್ವರಸ್ಯ' ಎಂಬುದಕ್ಕೆ ವಿಶೇಷಣಮಾಡಲು ' **ಯೇನ ವಿಧಿಸ್ತದಂತಸ್ಯ ||೨೮||** ' ಎಂಬುದರಿಂದ ತದಂತ ಲಾಭವು ಬರುವುದು. ಅಥವಾ ' ಮಃ ' ಎಂಬುದು ಪ್ರತ್ಯಯಬೋಧಕವಾದುದರಿಂದ ಪ್ರತ್ಯಯ ಗ್ರಹಣಪರಿಭಾಷೆಯಿಂದ ತದಂತಬೋಧಕವಾಗಲು ಅದಕ್ಕೆ ' ಸ್ವರಸ್ಯ ' ಎಂಬುದನ್ನು ವಿಶೇಷಣ ಮಾಡಲು ತದಂತಲಾಭವು ಬಂದು ' ಸ್ವರಾಂತಸ್ಯ ಮ ಪ್ರತ್ಯಯಾಂತಸ್ಯ ಶಬ್ದಸ್ಯ ' ಎಂದರ್ಥ ವಾಗುವುದು. ' ಆಮಂತ್ರಣೇ ವಾ ' ಎಂಬುದು ಪ್ರಕರಣಬಲದಿಂದ ಲಬ್ಧವಾಗುವುದು. ತಥಾಚ- ಸ್ವರಾಂತ ಮ ಕಾರಾತ್ಮಕ ಸುಬಂತಕ್ಕೆ ಆಮಂತ್ರಣವಿಷಯದಲ್ಲಿ ವಿಕಲ್ಪವಾಗಿ ದೀರ್ಘಾದೇಶವು ಬರುವುದೆಂದು ಸೂತ್ರಾರ್ಥವಾಗಲು—'**ಷಷ್ಠ್ಯಾಃ ಸ್ಥಾನೇಽಂತ್ಯಸ್ಯ ||೨೨||**' ಎಂಬ ಪರಿಭಾಷೆಯಿಂದ ಅಂತ್ಯವಾದ ದೀರ್ಘಸ್ವರಕ್ಕೆ ದೀರ್ಘವನ್ನು ವಿಧಿಸಲು ಪ್ರಯೋಜನವಿಲ್ಲವಾದುದರಿಂದ ಆ ಸ್ವರವು ಹ್ರಸ್ವವಾಗಿದ್ದರೆ ದೀರ್ಘಾದೇಶವು ಬರುವುದೆಂದು ಫಲಿತವಾಗುವುದು. ಇದರಿಂದ ' ದೇವಾ ಬಿನ್ನಪಂ ' ಮೊದಲಾದುವು ಸಿದ್ಧಿಸುವುವೆಂದು ತಿಳಿಯುವುದು. ಇಲ್ಲಿ ' ಸ್ವರಸ್ಯ ' ಎಂದು ಹೇಳಿರು ವುದರಿಂದ ವ್ಯಂಜನಾಂತಗಳಲ್ಲಿ ಬರುವುದಿಲ್ಲ. ಈ ವಿಷಯದಲ್ಲಿ **ದರ್ಪಣಕಾರನು** —

> ಸಿಲ್ಲದೆ ವಿಕಲ್ಪಮುಖದಿಂ
> ಸೊಲ್ಲಿಸುವರ್ ಹ್ರಸ್ವದೀರ್ಘಕಾಕುಗಳೆರಡಂ (ಸೂತ್ರ ೧೨೪)

ಎಂದು ಸಾಮಾನ್ಯವಾಗಿ ವಿಧಿಸಿರುವನು.

**ಅವತಾರಿಕೆ ೨೫೫**

ಹೀಗೆ ಷಷ್ಠೀವಿಭಕ್ತ್ಯಂತಕ್ಕೂ ದೀರ್ಘಾದೇಶವು ಬರುವುದೆಂದು ಹೇಳುತ್ತಾನೆ.

**ಸೂತ್ರಂ || ಅದಃ || ೨೫೫ ||**

**ಅರ್ಥ || ' ಅತ್ ' ಎಂಬ ಸುಬಂತಕ್ಕೆ ಎಂದರೆ ಷಷ್ಠೀವಿಭಕ್ತ್ಯಂತಕ್ಕೆ ದೀರ್ಘಾದೇಶವು ವಿಕಲ್ಪವಾಗಿ ಬರುವುದು ಎಂದರೆ ಆ ಷಷ್ಠ್ಯಂತದ ಅಂತ್ಯಸ್ವರಕ್ಕೆ ದೀರ್ಘಾದೇಶನೆಂದು ತಿಳಿಯಬೇಕು.**

**ಉದಾಹರಣೆ** || ' ಜಿನನಾ, ಜಿನನ; ಗುರುಗಳಾ, ಗುರುಗಳ; ಗಂಗೆಯಾ, ಗಂಗೆಯ; ವಧುವಾ, ವಧುವ || ' ಮೊದಲಾದ ಷಷ್ಠ್ಯಂತಪದಗಳೆಲ್ಲಾ ಇದಕ್ಕೆ ಲಕ್ಷ್ಯಗಳು.

**ವಿಚಾರ ೨೫೫**

ಈ ಸೂತ್ರದಲ್ಲಿ ' ಅದಃ ' ಎಂದೊಂದೇ ಪದವಿರುವುದು. ಪೂರ್ವದಿಂದ ' ದೀರ್ಘಃ, ವಾ ' ಎಂಬಿವು ಅನುವರ್ತಿಸಲ್ಪಡುವುವು. ' ಅದಃ ' ಎಂಬುದು ' ಅತ್ ' ಎಂಬ ಷಷ್ಠೀಪ್ರತ್ಯಯ ಬೋಧಕವಾದ ಷಷ್ಠ್ಯಂತಪದವು. ಪ್ರತ್ಯಯಗ್ರಹಣಪರಿಭಾಷೆಯಿಂದ ತದಂತಬೋಧಕವಾಗು ವುದು. ಇಲ್ಲಿ ದೀರ್ಘವು ವಿಧೇಯವಾದುದರಿಂದ ' ಸ್ವರಸ್ಯ ' ಎಂದು ಉಪಸ್ಥಿತವಾಗಿ ಸ್ವರಾಂತ ವಾದ ಷಷ್ಠೀವಿಭಕ್ತಿಪ್ರತ್ಯಯಾಂತವಾದುದಕ್ಕೆ ವಿಕಲ್ಪವಾಗಿ ದೀರ್ಘವು ಬರುವುದೆಂದು ಸೂತ್ರಾರ್ಥ ವಾಗಲು ' ಜಿನನಾ ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು.

**ಅವತಾರಿಕೆ ೨೫೬**

ಹೀಗೆಯೇ ದ್ವಿತೀಯಾಂತವಿಷಯದಲ್ಲಿ ದೀರ್ಘವನ್ನು ವಿಧಿಸುತ್ತಾನೆ.

**ಸೂತ್ರಂ || ಅನೋಽ ನಃ || ೨೫೬ ||**

**ಅರ್ಥ ||** ನ ಕಾರಾಂತವಾದ ಅಮಂತಕ್ಕೆ ದೀರ್ಘಾದೇಶವು ವಿಕಲ್ಪವಾಗಿ ಬರವುದು.

**ಉದಾಹರಣೆ ||** 'ಕಲ್ಲಾನೇಱಿದಂ, ಕಲ್ಲನೇಱಿದಂ; ಬಿಲ್ಲಾನೇಱಿಸಿದಂ, ಬಿಲ್ಲನೇಱಿಸಿದಂ; ಪಾಲಾನಿೞಿದಂ, ಪಾಲನಿೞಿದಂ ||' ಮೊದಲಾದುವು ಅಮಂತಕ್ಕೆ ಲಕ್ಷ್ಯಗಳು. ಹೀಗೆಯೇ —

ಎಸಿತ್ತಿಸಿತ್ತಂಬುಜಪತ್ರನೇತ್ರೆಯಾ
ಘನಸ್ತನಂಗಳ್ ಬಳೆಯಲ್ ಕಿರಾತೆಯಾ
ಆಸಿತ್ತಸಿತ್ತಂ ವನದೊಳ್ ವನೇಚರಂ
ತನತ್ತು ಬಿಲ್ಲಾನದನೆಂತುಮ್ ಕೀಸುವಂ

ಮೊದಲಾದ ಪ್ರಯೋಗಗಳನ್ನೂ ಊಹಿಸಿಕೊಳ್ಳುವುದು.

**ವಿಚಾರ ೨೫೬**

ಈ ಸೂತ್ರದಲ್ಲಿ — 'ಅಮಃ, ನ' ಎಂದು ಎರಡು ಪದಗಳಿರುವುವು. ಪೂರ್ವದಿಂದ 'ದೀರ್ಘಃ, ವಾ' ಎಂಬಿವು ಅನುವರ್ತಿಸಲ್ಪಡುವುವು. 'ಅಮಃ' ಎಂಬುದು ಪ್ರಕರಣದಿಂದ ದ್ವಿತೀಯಾವಿಭಕ್ತಿಪ್ರತ್ಯಯಬೋಧಕವಾದ ಷಷ್ಠ್ಯಂತಪದವು. 'ನಃ' ಎಂಬುದು ನ ಕಾರ ಮಾತ್ರಬೋಧಕಷಷ್ಠ್ಯಂತವು. 'ಅಮಃ' ಎಂಬುದಕ್ಕೆ ವಿಶೇಷಣದಿಂದ ತದಂತಬೋಧಕ ವಾಗುವುದು. ದೀರ್ಘಪದದಿಂದ 'ಸ್ವರಸ್ಯ' ಎಂದು ಉಪಸ್ಥಿತವಾಗುವುದು. ಈ ಸ್ವರವು ಸನ್ನಿಹಿತವಾದ ಅಮ್-ಅವಯವವಾದುದೇ ಗ್ರಹಿಸತಕ್ಕುದು. ತಥಾಚ — ನ ಕಾರಾಂತವಾದ ಅಮಂತದ ಕೊನೆಯ ಸ್ವರಕ್ಕೆ ವಿಕಲ್ಪವಾಗಿ ದೀರ್ಘಾದೇಶವು ಬರುವುದೆಂದು ಸೂತ್ರಾರ್ಥವಾಗು ವುದರಿಂದ 'ಕಲ್ಲಾನೇಱಿದಂ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು. ಇಲ್ಲಿ ಕೆಲವರು 'ವಾ' ಎಂಬುದನ್ನು ಬಹುಳಾರ್ಥವಾಗಿ ಅಂಗೀಕರಿಸಿ 'ಪೋಲ್' ಪರದಲ್ಲಿರುವಾಗಲೂ ದೀರ್ಘವು ಬರುವುದೆಂದು ಹೇಳಿ 'ಪುಲಿಯಾ ಪೋಲ್' ಮೊದಲಾದ **ಗುಣವರ್ಮ**ನ ಹರಿವಂಶ ಪ್ರಯೋಗವನ್ನು ಉದಾಹರಿಸಿರುವರು. ಇದು ಪೂರ್ವಸೂತ್ರಕ್ಕೇ ವಿಷಯವಾಗಿರುವುದರಿಂದ ತದರ್ಥವಾಗಿ ಈ ಕಲ್ಪನಾಕ್ಲೇಶವನ್ನು ಆದರಿಸುವುದು ಸರಿಯಾದುದಲ್ಲ.

ಇಲ್ಲಿ — 'ಅಮಃ' ಎಂದು ಹೇಳಿರುವುದರಿಂದ 'ದೇವನಿವಂ, ಜನನೀತಂ' ಮೊದಲಾದ ಪ್ರಥಮಾಂತಗಳಲ್ಲಿ ಬರುವುದಿಲ್ಲ. 'ನಃ' ಎಂದು ಹೇಳಿರುವುದರಿಂದ 'ದೇವನಂ ಕಂಡಂ, ಕಂಡಂ ದೇವನಂ' ಮೊದಲಾದುವುಗಳಲ್ಲಿ ಬರುವುದಿಲ್ಲ. ಆದರೆ **ಶಾಸನಕಾರ**ನು ಇಲ್ಲಿ 'ಕಂಡಂ ದೇವನಂ' ಎಂಬಲ್ಲಿ 'ಕಂಡಂ' ಎಂಬ ತಿಙಂತವನ್ನು ಪ್ರತ್ಯುದಾಹರಣೆಯಾಗಿ ಕೊಟ್ಟಿರುವನು. ಇದು ಪ್ರಕರಣಬಲದಿಂದ ಸುಪ್ಪಾದ ಅಮಂತವಿಷಯಕವೆಂದು ಹೇಳಿರುವುದರಿಂದ ತಿಙನಲ್ಲಿ ಅಪ್ರಸಕ್ತ ವಾಗಿರಲು 'ಕಂಡಂ' ಎಂದು ಕೊಟ್ಟಿರುವುದು ಅಸಂಗತವೆಂದು ತಿಳಿದು 'ಕಲ್ಲಂ ದೇವನಂ' ಮೊದಲಾದುವನ್ನು ಉದಾಹರಿಸಬೇಕು. ಒಂದು ವೇಳೆ ತಿಙಾದ ಅಮ್ಮಿಗೂ ದೀರ್ಘವು ಪ್ರಾಚೀನ ರಿಗೆ ಇಷ್ಟವಿರುವ ಪಕ್ಷದಲ್ಲಿ 'ವಾ' ಗ್ರಹಣವು ಬಹುಳಾರ್ಥಕವೆಂದು ಭಾವಿಸಿ ಉಪಪತ್ತಿಯನ್ನು ಕಲ್ಪಿಸುವುದು.

---

ಪಾಠಾಂತರ: ೧ ನೆಂತೆ

ಈ ಸೂತ್ರದ್ವಯವಿಷಯದಲ್ಲಿಯೂ ದರ್ಪಣಕಾರನು —

ಅದರಿಪರ್ ಕೆಲಬರ್ ದೀ
ರ್ಘಾದೇಶಮನಗ್ರದಲ್ಲಿ ಷಷ್ಠಿಯಕಾರ
ಕ್ಕಾ ದೀರ್ಘಮನಿರದರೆಬರ್
ಖೇದದ ಸಂಭ್ರಮದ ಮೆಯ್ಯೊಳುತ್ಪಾದಿಸುವರ್ (ಸೂತ್ರ ೧೧೭)

ಅಪಿತೇಷದಿನಾ ದೀರ್ಘ
ವ್ಯವಹೃತಿಶಬ್ದಾಂತರಾಳದೊಳ್ ಪಕ್ಷದಿನು
ದ್ಭವಿಕುಂ ದ್ವಿತೀಯೆಗಂ ಮುಂ
ದವತರಿಸಲೊಡಂ ಸ್ವರಪ್ರಪೂರ್ವಪದಂಗಳ್ (ಸೂತ್ರ ೧೧೮)

ಎಂಬ ಸೂತ್ರಗಳನ್ನು ಹೇಳಿ ದೀರ್ಘವನ್ನು 'ಕೆಲಬರ್, ಖೇದದೊಳಂ, ಸಂಭ್ರಮದೊಳಂ, ಶಬ್ದಾಂತರಾಳದೊಳಂ' ಪ್ರಯೋಗಿಸುವರೆಂದು ಹೇಳಿರುವನು. ಇಲ್ಲಿ 'ಖೇದದೊಳಂ ಸಂಭ್ರಮದೊಳಂ ದೀರ್ಘ' ವೆಂಬುದು ಸ್ವಾಭಾವಿಕವಾಗಿ ದೀರ್ಘಾಂತಾವ್ಯಯವಿಷಯವೆಂದೂ 'ಶಬ್ದಾಂತರಾಳದೊಳಂ' ಎಂಬುದು ಪ್ರಯೋಗಾನುಸಾರವಾಗಿ 'ವಾ' ಗ್ರಹಣಕ್ಕೆ ವಿಷಯವೆಂದೂ ತಿಳಿಯಬೇಕು.

**ಅವತಾರಿಕೆ ೨೫೭**

ಹೀಗೆ ಕೆಲವು ಸುಬಂತವಿಷಯದಲ್ಲಿ ವೈಕಲ್ಪಿಕ ದೀರ್ಘವನ್ನು ವಿಧಿಸಿ ಅ ಕಾರಾಂತ ಪ್ರಕೃತಿಗೆ 'ಗೆತ್' ಮೊದಲಾದ ಪ್ರತ್ಯಯಗಳು ಪರವಾಗಿರಲು ನಿತ್ಯವಾಗಿ ಮಗಾಗಮವನ್ನು ವಿಧಿಸುತ್ತಾನೆ.

**ಸೂತ್ರಂ || ಅತೋ ಮುಗ್ಗೆದ್ದಿರಿ || ೨೫೭ ||**

**ಅರ್ಥ ||** ಅ ಕಾರಾಂತ ಶಬ್ದಕ್ಕೆ 'ಗೆತ್, ದಿರ್' ಎಂಬ ಪ್ರತ್ಯಯಗಳು ಪರವಾಗಿರಲು ಮಗಾಗಮವು ನಿತ್ಯವಾಗಿ ಬರುವುದು.

**ಉದಾಹರಣೆ ||** 'ಅಕ್ಕಂಗೆ, ಅಣ್ಣಂಗೆ, ತಮ್ಮಂಗೆ, ಮಾವಂಗೆ, ಭಾವಂಗೆ, ಮಗಂಗೆ; ಅಕ್ಕಂದಿರ್, ಅಣ್ಣಂದಿರ್, ತಮ್ಮಂದಿರ್, ಭಾವಂದಿರ್, ಮಾವಂದಿರ್ ||' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೨೫೭**

ಈ ಸೂತ್ರದಲ್ಲಿ — 'ಅತಃ, ಮುಕ್, ಗೆದ್ದಿರಿ' ಎಂದು ಮೂರು ಪದಗಳಿರುವುವು. 'ಅತಃ' ಎಂಬುದು ಅ ಕಾರಮಾತ್ರಬೋಧಕಪಂಚಮ್ಯಂತಪದವು. ಇದನ್ನು 'ಗೆದ್ದಿರಿ' ಎಂಬ ಪ್ರತ್ಯಯದಿಂದ ಆಕ್ಷಿಪ್ತವಾದ ಪ್ರಕೃತಿಗೆ ವಿಶೇಷಣಮಾಡಲು ತದಂತಬೋಧಕವಾಗುವುದು. 'ಮುಕ್' ಎಂಬುದು ಕ ಕಾರೇತ್-ಸಂಜ್ಞಕವಾದ ವಿಧೇಯವಾದುದರಿಂದ ಆಗಮಬೋಧಕವಾಗಿರುವುದು. ಇದು ಅಂತಾವಯವವಾಗಿ ಬರುವುದು. 'ಗೆದ್ದಿರಿ' ಎಂಬುದು ಪ್ರತ್ಯಯಬೋಧಕವಾದ ನಿಮಿತ್ತಸಪ್ತಮ್ಯಂತವು. ಇಲ್ಲಿ 'ವಾ' ಎಂಬುದಕ್ಕೆ ಅನುವೃತ್ತಿಯಿಲ್ಲವಾದುದರಿಂದ ಇದು ನಿತ್ಯವಾಗಿ ಬರುವುದೆಂದು ತಿಳಿಯುವುದು. ತಥಾಚ — ಅ ಕಾರಾಂತ ಪ್ರಕೃತಿಗೆ 'ಗೆತ್, ದಿರ್' ಎಂಬ ಪ್ರತ್ಯಯಗಳು ಪರವಾಗಿರಲು ನಿತ್ಯವಾಗಿ ಮಗಾಗಮವು ಬರುವುದೆಂದು ಸೂತ್ರಾರ್ಥವಾಗು

ವುದರಿಂದ 'ಅಕ್ಕಂಗೆ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು. ಇಲ್ಲಿ ಎಲ್ಲಾ ಕಡೆಯಲ್ಲಿಯೂ 'ನಶ್ಚ ಬಿಂದುರನ್ಯತ್ರ ||೭೯||' ಎಂಬುದರಿಂದ ಮು ಕಾರಕ್ಕೆ ಅನುಸ್ವಾರಾದೇಶವು ಬಂದಿರುವುದೆಂದು ತಿಳಿಯಬೇಕು. ಇಲ್ಲಿ 'ಅತಃ' ಎಂದು ಹೇಳಿರುವುದರಿಂದ 'ಅತ್ತಿಗೆ, ಸೊಸೆಗೆ; ಅತ್ತಿದಿರ್, ಸೊಸೆದಿರ್' ಮೊದಲಾದುವಕ್ಕೂ 'ಗೆದ್ದಿರಿ' ಎಂದು ಹೇಳಿರುವುದರಿಂದ 'ಪಂಡಿತರ್, ಮುಂಡಿತರ್' ಮೊದಲಾದುವಕ್ಕೂ ಮುಗಾಗಮವಿಲ್ಲವೆಂದು ತಿಳಿಯುವುದು.

ಈ ವಿಷಯದಲ್ಲಿ **ದರ್ಪಣಕಾರನು** —

ಒದವುವುದದಂತ ಪುಲ್ಲಿಂ
ಗದೊಳ್ಗೆಯೆಂಬಾದಿಬಿಂದುವಿಂ (ಸೂತ್ರ ೧೧೩)

ಎಂದೂ 'ದಿರ್' ಪ್ರತ್ಯಯಕ್ಕೆ '**ಉದಯಿಸುಗುಂ ಗಳ್ ದಿರ್ಗಳ**' ಎಂಬ ಸೂತ್ರದಿಂದಲೂ ಹೇಳಿರುವನು.

**ಅವತಾರಿಕೆ ೨೫೮**

ಹೀಗೆಯೇ ಗಳ್-ಪ್ರತ್ಯಯವು ಪರವಾಗಿರಲು ಮುಗಾಗಮವನ್ನು ವಿಧಿಸುತ್ತಾನೆ.

**ಸೂತ್ರಂ || ಗಳಿ || ೨೫೮ ||**

**ಅರ್ಥ || ಅ ಕಾರಾಂತ ಶಬ್ದಕ್ಕೆ ಗಳ್-ಪ್ರತ್ಯಯವು ಪರವಾಗಿರಲು ಮುಗಾಗಮವು ಬರುವುದು.**

**ಉದಾಹರಣೆ** || 'ಅಕ್ಕಂಗಳ್, ಅಮ್ಮಂಗಳ್, ಮಾವಂಗಳ್, ಭಾವಂಗಳ್ ||' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೨೫೮**

ಈ ಸೂತ್ರದಲ್ಲಿ 'ಗಳಿ' ಎಂದೊಂದೇ ಪದವಿರುವುದು. ಇದು ಸಪ್ತಮ್ಯಂತವಾದುದರಿಂದ ಪರವಾಗಿರಲು ಎಂದರ್ಥವಾಗುವುದು. ಪೂರ್ವದಿಂದ 'ಅತಃ, ಮುಕ್' ಎಂದು ಅನುವರ್ತಿಸಲ್ಪಡುವುದು. 'ಅತಃ' ಎಂಬುದು ಪೂರ್ವದಂತೆ ತದಂತಬೋಧಕವು. ಆದುದರಿಂದ— ಅ ಕಾರಾಂತ ಶಬ್ದಕ್ಕೆ ಗಳ್-ಪ್ರತ್ಯಯವು ಪರವಾಗಲು ಮುಗಾಗಮವು ಬರುವುದೆಂದು ಸೂತ್ರಾರ್ಥವಾಗಲು 'ಅಕ್ಕಂಗಳ್' ಮೊದಲಾದುವು ಸಿದ್ಧಿಸುವುವು. ಇದನ್ನು ಪೂರ್ವಸೂತ್ರದಲ್ಲಿಯೇ ಸೇರಿಸದೆ ಬೇರೆ ಸೂತ್ರವನ್ನು ಮಾಡಿರುವುದರಿಂದ ಮುಂದಿನ ಸೂತ್ರದಲ್ಲಿ 'ಗಳಿ' ಎಂಬುದೊಂದೇ ಸಂಬಂಧಿಸಲ್ಪಡುವುದು. ಇಲ್ಲದಿದ್ದರೆ ಏಕನಿರ್ದಿಷ್ಟವಾದುದರಿಂದ 'ಗೆದ್ದಿರಿ' ಎಂಬುದಕ್ಕೂ ಅನುವೃತ್ತಿ ಬರುತ್ತದೆಯೆಂದು ತಿಳಿಯುವುದು.

ಇಲ್ಲಿ **ದರ್ಪಣಕಾರನು** —

ಉದಯಿಸುಗುಂಗಳ್ದಿರ್ಗಳ
ಮೊದಲೊಳದಂತಕ್ಕೆ ಬಿಂದು ಪುಂಸ್ತ್ರೀಲಿಂಗ
ಕ್ಕದುನಪ್ಪಿನೊಳ್ವಿಕಲ್ಪಂ
ಪುದಿದಿರೆಗಳ್ಬಿಂದು ನಿಯತಮುದು ಸಂಸ್ಕೃತದೊಳ್ (ಸೂತ್ರ ೧೦೩)

ಎಂದು ಹೇಳಿ — '**ಸಪ್ತಮಿ ಚ ಬಹುಲಂ || ೨೫೯ ||**' ಮೊದಲಾದ ಸೂತ್ರಾರ್ಥಗಳನ್ನೂ ಸಂಗ್ರಹಿಸಿರುವನು.

**ಅವತಾರಿಕೆ ೨೫೯**

ಹೀಗೆಯೇ ನಪುಂಸಕವಿಷಯದಲ್ಲಿ 'ಗಳ್, ಅಮ್' ಪರವಾಗಿರಲು ಬಹುಳವಾಗಿ ಮಗಾಗಮವನ್ನು ವಿಧಿಸುತ್ತಾನೆ.

**ಸೂತ್ರಂ || ನಪ್ಯಮಿ ಚ ಬಹುಲಂ || ೨೫೯ ||**

**ಅರ್ಥ || ಅ ಕಾರಾಂತ ಶಬ್ದಕ್ಕೆ 'ಗಳ್, ಅಮ್' ಎಂಬ ಪ್ರತ್ಯಯಗಳು ಪರವಾಗಿರಲು ನಪುಂಸಕಲಿಂಗದಲ್ಲಿ ಬಾಹುಳಕವಾಗಿ ಮಗಾಗಮವು ಬರುವುದು.**

**ಉದಾಹರಣೆ ||** 'ಬೆಟ್ಟಮಂ, ಗಟ್ಟಮಂ, ಸಾಲಮಂ, ಸೋಲಮಂ || ಕ್ವಚಿದ್ವಿಕಲ್ಪವು || ಕೊಳಂಗಳ್, ಕೊಳಗಳ್; ಮರಂಗಳ್, ಮರಗಳ್ || ಸಂಸ್ಕೃತದಲ್ಲಿ ನಿತ್ಯವು || ಫಲಂಗಳ್, ಜಲಂಗಳ್, ಜನಂಗಳ್; ಫಲಮಂ, ಜಲಮಂ, ಜನಮಂ || ಕ್ವಚಿನ್ನಗಾಗಮವು || ನೆಲನಂ, ಪೊಲನಂ || ಕೆಲವೆಡೆ ಬೇರೆ ಲಕ್ಷ್ಯಗಳಲ್ಲಿಯೂ ಬಂದು ವೃಕ್ಷಮೇ, ಪ್ಲಕ್ಷಮೇ ||' ಎಂದು ಮೊದಲಾದುವು ಸಿದ್ಧಿಸುವುವೆಂದು ತಿಳಿಯುವುದು.

**ಅವತಾರಿಕೆ ೨೬೦**

ಪೂರ್ವದಲ್ಲಿ ವಿಶಿಷ್ಯ ಕೆಲವು ಸುಪ್ಪು ಪರದಲ್ಲಿರುವಾಗ ಮಗಾಗಮವು ಅ ಕಾರಾಂತ ಶಬ್ದಕ್ಕೆ ವಿಧಿಸಲ್ಪಟ್ಟಿತು. ಈಗ ಸ್ವರಾದಿ ಸುಪ್ಪು ಪರದಲ್ಲಿರಲು ನಗಾಗಮವನ್ನು ಹೇಳುತ್ತಾನೆ.

**ಸೂತ್ರಂ || ನಕ್ ಸ್ವರೇ || ೨೬೦ ||**

**ಅರ್ಥ || ಅ ಕಾರಾಂತ ಶಬ್ದಕ್ಕೆ ಸ್ವರಾದಿಯಾದ ಸುಪ್ಪು ಪರವಾಗಿರಲು ನ ಕಾರಾಗಮವು ಬರುವುದು.**

**ಉದಾಹರಣೆ ||** 'ಜಿನನೇ, ಜಿನನಂ, ಜಿನನಿಂ, ಜಿನನತ್ತಣಿಂ, ಜಿನನ, ಜಿನನೊಳ್; ಅಕ್ಕನೇ, ಅಕ್ಕನಂ, ಅಕ್ಕನಿಂ, ಅಕ್ಕನತ್ತಣಿಂ, ಅಕ್ಕನ, ಅಕ್ಕನೊಳ್ ||' ಮೊದಲಾದ ಪುಂ-ಸ್ತ್ರೀಲಿಂಗಗಳೆಲ್ಲಾ ಇದಕ್ಕೆ ಲಕ್ಷ್ಯಗಳು.

**ವಿಚಾರ ೨೬೦**

ಈ ಸೂತ್ರದಲ್ಲಿ — 'ನಕ್, ಸ್ವರೇ' ಎಂದು ಎರಡು ಪದಗಳಿರುವುವು. ಉತ್ತರಸೂತ್ರದಲ್ಲಿ 'ನಪಿ' ಎಂದು ಹೇಳಿರುವುದರಿಂದ 'ನಪಿ' ಎಂಬುದನ್ನು ಬಿಟ್ಟು ಪೂರ್ವದಿಂದ 'ಅತಃ, ಸುಪಿ' ಎಂದು ಅನುವರ್ತಿಸಲ್ಪಡುವುವು. 'ಅತಃ' ಎಂಬುದು ಪೂರ್ವದಂತೆ ತದಂತಬೋಧಕವು. 'ಸುಪಿ' ಎಂಬ ಸಪ್ತಮ್ಯಂತಕ್ಕೆ ಮಧ್ಯದಲ್ಲಿ ಪ್ರಯೋಜನವಿಲ್ಲದೆ ಸಂಬಂಧ ಮಾಡಿದ್ದರೂ ಎಲ್ಲಾ ಕಡೆಯಲ್ಲಿಯೂ ವಿಭಕ್ತಿವಿಪರಿಣಾಮದಿಂದ ಸಂಬಂಧ ಮಾಡಿರುವುದರಿಂದ ಇಲ್ಲಿಯೂ ಅನುವರ್ತಿಸಿ ಅರ್ಥಾನುಸಾರವಾಗಿ ಸಪ್ತಮ್ಯಂತವನ್ನೇ ಇಟ್ಟುಕೊಂಡು ಅದಕ್ಕೆ 'ಸ್ವರೇ' ಎಂಬುದನ್ನು ವಿಶೇಷಣಮಾಡಲು **'ಯಸ್ಮಿನ್ವಿಧಿಸ್ತದಾದೌ ವರ್ಣಗ್ರಹಣೇ'** ಎಂಬ ಪರಿಭಾಷೆಯಿಂದ ತದಾದಿ ಲಾಭವುಂಟಾಗಿ 'ಸ್ವರಾದಿಯಾದ' ಎಂದರ್ಥವಾಗುವುದು. ಆದುದರಿಂದ — ಅ ಕಾರಾಂತ ಶಬ್ದಕ್ಕೆ ಸ್ವರಾದಿಯಾದ ಸುಪ್ಪು ಪರದಲ್ಲಿರಲು ನ ಕಾರಾಗಮವು ಬರುವುದೆಂದು ಸೂತ್ರಾರ್ಥವಾಗುವುದು. ಉತ್ತರಸೂತ್ರವು ನಪುಂಸಕವಿಷಯಕವಾದುದರಿಂದ ಇದು ಪುಂ-ಸ್ತ್ರೀಲಿಂಗ ವಿಷಯಕವೆಂದು ಇಲ್ಲಿ 'ಜಿನನೇ' ಮೊದಲಾದ ಪುಂ-ಸ್ತ್ರೀಲಿಂಗಗಳನ್ನೇ ಉದಾಹರಿಸಿರುವುದು.

ಈ ಸೂತ್ರದಲ್ಲಿ 'ಸ್ವರೇ' ಎಂದು ಹೇಳಿರುವುದರಿಂದ 'ಅಕ್ಕಂ, ಅಣ್ಣಂ' ಮೊದಲಾದ ವ್ಯಂಜನಾದಿ ಸುಪ್ಪು ಪರವಾದ ಪ್ರಯೋಗಗಳಲ್ಲಿ ನಗಾಗಮವಿಲ್ಲವೆಂದು ತಿಳಿಯುವುದು.

**ಅವತಾರಿಕೆ ೨೬೧**

ಹೀಗೆಯೇ ಸ್ವರಾದಿಯಾದ ತೃತೀಯೆ ಮೊದಲಾದ ಸುಪ್ಪು ಪರವಲ್ಲಿರಲು ನಪುಂಸಕದಲ್ಲಿ ದಗಾಗಮವನ್ನು ವಿಧಿಸುತ್ತಾನೆ.

**ಸೂತ್ರಂ || ದಗಿವಾದೌ ನಪಿ || ೨೬೧ ||**

**ಅರ್ಥ || ಅ ಕಾರಾಂತ ಶಬ್ದಕ್ಕೆ ಸ್ವರಾದಿಯಾದ ತೃತೀಯೆ ಮೊದಲಾದ ವಿಭಕ್ತಿಗಳು ಪರವಾಗಿರಲು ನಪುಂಸಕದಲ್ಲಿ ದಗಾಗಮವು ಬರುವುದು.**

**ಉದಾಹರಣೆ** || 'ಫಲದೆ, ಫಲದಿಂ, ಫಲದತ್ತಣಿಂ, ಫಲದ, ಫಲದೊಳ್ ||' **ಮೊದಲಾ** ಮವು ಇವಕ್ಕೆ ಲಕ್ಷ್ಯಗಳು.

**ವಿಚಾರ ೨೬೧**

ಈ ಸೂತ್ರದಲ್ಲಿ — 'ದಕ್, ಇವಾದೌ, ನಪಿ' ಎಂದು ಮೂರು ಪದಗಳಿರುವುವು. ಪೂರ್ವದಿಂದ 'ಸ್ವರೇ, ಅತಃ' ಎಂದು ಅನುವರ್ತಿಸಲ್ಪಡುವುವು. ಇವು ಪೂರ್ವದಂತೆ ವಿಶೇಷಣವಾಗಲು ತದಾದಿ ತದಂತಬೋಧಕಗಳಾಗುವುವು. 'ದಕ್' ಎಂಬುದೇ ಇಲ್ಲಿ ವಿಧೇಯವು. 'ಇವಾದೌ' ಎಂಬುದು ಬಹುವ್ರೀಹಿಸಮಾಸವಾದುದರಿಂದ ಅನ್ಯ ಪದಾರ್ಥವು 'ಸುಪ್' ಎಂದು ತಿಳಿಯಬೇಕು. ತಥಾಚ — ಅ ಕಾರಾಂತ ಶಬ್ದಕ್ಕೆ ಸ್ವರಾದಿಯಾದ ಇವಾದಿ ಸುಪ್ಪು ಪರವಾಗಲು ನಪುಂಸಕದಲ್ಲಿ ದಗಾಗಮವು ಬರುವುದೆಂದರೆ ಪ್ರಕೃತಿಯ ಕೊನೆಗೆ ದ ಕಾರವು ಬರುವುದೆಂದು ಸೂತ್ರಾರ್ಥವಾಗಲು — 'ಫಲದೆ' ಮೊದಲಾದುವು ಸಿದ್ಧಿಸುವುವು. ಇಲ್ಲಿ 'ಇವಾದೌ' ಎಂದು ಹೇಳಿರುವುದರಿಂದ 'ಫಲಮಂ' ಮೊದಲಾದ ಅಮಂತದಲ್ಲಿ ಬರುವುದಿಲ್ಲ. 'ಸ್ವರಾದೌ' ಎಂದು ಹೇಳಿರುವುದರಿಂದ 'ಫಲಕ್ಕೆ' ಮೊದಲಾದ ಚತುರ್ಥಿಯಲ್ಲಿ ಬರುವುದಿಲ್ಲ. 'ಫಲದೆ' ಎಂಬಲ್ಲಿ — '**ಎಶ್ಟಾತೋ ನಪಿ || ೨೬೩ ||**' ಎಂಬ ಸೂತ್ರದಿಂದ ಇವ್ಮಿಗೆ ಎ ಕಾರಾದೇಶವು ಬಂದಿರುವುದೆಂದು ತಿಳಿಯಬೇಕು.

ಈ ವಿಷಯದಲ್ಲಿಯೂ ಪೂರ್ವಸೂತ್ರವಿಷಯದಲ್ಲಿಯೂ **ದರ್ಪಣಕಾರ**ನು ವಿಶೇಷವನ್ನು ಸೂಚಿಸಿ —

> ವಿತತ ನಪುಂಸಕಲಿಂಗ
> ದ್ವಿತೀಯೆಯೊಳ್ನತ್ವಮತ್ವವಿಧಿವುತ್ವಮೆಸಂ
> ಗತಿವಡೆಗುಂ ಸಂಸ್ಕೃತದೊಳ್
> ತೃತೀಯೆ ಮೊದಲಾದುವರ್ಕ್ಕೆದಾಗಮಮಕ್ಕುಂ (ಸೂತ್ರ ೧೦೬)

ಎಂಬ ಸೂತ್ರವನ್ನು ಹೇಳಿರುವನು.

**ಅವತಾರಿಕೆ ೨೬೨**

ಪೂರ್ವದಲ್ಲಿ ಅ ಕಾರಾಂತ ಪ್ರಕೃತಿಗೆ ಮಗಾದಿಗಳು ವಿಧಿಸಲ್ಪಟ್ಟುವು. ಈಗ ಇನ್ನೂ ಕೆಲವು ಸ್ವರಾಂತಗಳಿಗೆ ಕಿನಾಗಮವನ್ನು ವಿಧಿಸುತ್ತಾನೆ.

**ಸೂತ್ರಂ || ವಾರ್ವೋಃ ಕಿನ್ ವಾ || ೨೬೨ ||**

**ಅರ್ಥ ||** ಋವರ್ಣ, ಉವರ್ಣ, ಔಕಾರ, ಓಕಾರಾಂತ ಶಬ್ದಗಳಿಗೆ ಇಮಾದಿ ಸುಪ್ಪು ಪರದಲ್ಲಿರುವಾಗ ಕಿನಾಗಮವು ವಿಕಲ್ಪವಾಗಿ ಬರುವುದು.

**ಉದಾಹರಣೆ ||** ' ಪಿತೃವಿನಿಂ, ಪಿತೃವಿಂ; ಗ್ನಾವಿನಿಂ, ಗ್ನಾವಿಂ; ಮಧುವಿಂಗೆ, ಮಧುಗೆ; ಪೂವಿಂಗೆ, ಪೂಗೆ; ಗ್ಲಾವಿನ, ಗ್ಲಾವ; ಗೋವಿನೊಳ್, ಗೋವೊಳ್ || ' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೨೬೨**

ಈ ಸೂತ್ರದಲ್ಲಿ — ' ವಾರ್ವೋಃ, ಕಿನ್, ವಾ ' ಎಂದು ಮೂರು ಪದಗಳಿರುವುವು. ಪೂರ್ವದಿಂದ ' ಇಮಾದೌ, ಸುಪಿ ' ಎಂದು ಅನುವರ್ತಿಸಲ್ಪಡುವುದು. ' ವಾರ್ವೋಃ ' ಎಂಬುದು ' ಋಶ್ಚ, ಉಶ್ಚ, ಔಶ್ಚ, ಓಶ್ಚ, ' ಎಂದು ವಿಗ್ರಹವನ್ನು ಮಾಡಿ ದ್ವಂದ್ವೈಕವದ್ಭಾವದಿಂದ ಪುಲ್ಲಿಂಗದ ಷಷ್ಠ್ಯಂತನಿರ್ದೇಶವನ್ನು ಮಾಡಿ ಸಂಸ್ಕೃತಸ್ವರಸಂಧಿಯನ್ನು ಮಾಡಲು ನಿಷ್ಪನ್ನ ವಾಗಿರುವುದು. ' ಕಿನ್ ' ಎಂಬುದು ಕ-ಕಾರೇತ್-ಸಂಜ್ಞಕವಾದುದರಿಂದ ಆಗಮರೂಪ ವಿಧೇಯವೆಂದು ತಿಳಿಯುವುದು. ಇಲ್ಲಿ ' ಸ್ವರೇ ' ಎಂಬುದನ್ನು ಅನುವರ್ತಿಸದೆ ' ಇಮಾದೌ ಸುಪಿ ' ಎಂಬುದನ್ನೇ ಅನುವರ್ತಿಸಿರುವುದರಿಂದ ಇದು ಸ್ವರಾದಿ, ವ್ಯಂಜನಾದಿ ಸುಪ್-ಸಾಧಾರಣ ವೆಂದು ತಿಳಿಯಬೇಕು. ತಥಾಚ — ಋವರ್ಣಾದ್ಯಂತ ಶಬ್ದಗಳಿಗೆ ಇಮಾದಿಸುಪ್ಪು ಪರವಾಗಿರಲು ವಿಕಲ್ಪವಾಗಿ ಕಿನಾಗಮವು ಬರುವುದೆಂದು ಸೂತ್ರಾರ್ಥವಾಗಲು ' ಕಿನ್ ' ಎಂಬುದರಲ್ಲಿ ಕ ಕಾರವು ಇತ್-ಸಂಜ್ಞೆಯಿಂದ ನಿಮಿತ್ತವಾಗಿ ಅವಶಿಷ್ಟವಾದ ' ಇನ್ ' ಎಂಬುದು ಪ್ರಕೃತಿಯ ಅಂತಾವಯವವಾಗಿ ಬರುವುದರಿಂದ ' ಪಿತೃವಿನಿಂ, ಮಧುವಿಂಗೆ ' ಮೊದಲಾದುವು ಸಿದ್ಧಿಸುವುವು. ಇಲ್ಲಿ ' ವಾರ್ವೋಃ ' ಎಂದು ಪ್ರಕೃತಿವಿಶೇಷನಿರ್ದೇಶಮಾಡಿರುವುದರಿಂದ ' ತಂದೆಯಿಂ, ತಂದೆಗೆ; ಮುನಿಯಿಂ, ಮುನಿಗೆ ' ಮೊದಲಾದ ಪ್ರಯೋಗಗಳಲ್ಲಿ ಬರುವುದಿಲ್ಲವೆಂದು ತಿಳಿಯಬೇಕು.

ಇಲ್ಲಿ **ದರ್ಪಣಕಾರನು** ಹ್ರಸ್ವವಾದ ಎ ಕಾರಕ್ಕೂ ಉಂಟೆಂದು ಹೇಳಿ ' ಸೂಳಿನ ' ಮೊದಲಾದ ಕೆಲವು ವ್ಯಂಜನಾಂತಗಳಿಗೂ ಲಕ್ಷ್ಯಾನುಸಾರವಾಗಿ ಊಹಿಸಿಕೊಳ್ಳಬೇಕೆಂದು ಉದಾಹರಣೆಯಿಂದ ಸೂಚಿಸಿ —

ವಿದಿತಮುವರ್ಣಋವರ್ಣಾ
ತ್ವದೊಳಂ ಹ್ರಸ್ವೈತ್ವದೊಳಮಿನಾಗಮವಿಧಿತ
ಪ್ಪದುವಕ್ಕ ಸಂಧಿಯೆಡೆಯೊಳ
ಮುದಿತ ತೃತೀಯೆಯೊಳಮರಿ ವಿಕಲ್ಪ ಸ್ಥಿತಿಯಿಂ (ಸೂತ್ರ ೧೦೮)

ಎಂದು ಸೂತ್ರವನ್ನು ಮಾಡಿರುವನು. **ಶಾಸನಕಾರನ** ಮತದಲ್ಲಿ ' ವಾ ' ಎಂಬುದನ್ನು ಬಹುಳಾರ್ಥಕವೆಂದು ತಿಳಿದು ' ಮುತ್ತಿನ, ಸೂಳಿನ ' ಮೊದಲಾದ ಪ್ರಯೋಗಗಳನ್ನು ಸಾಧಿಸು ವುದು. ಆದುದರಿಂದಲೆ ಕೆಲವೆಡೆಯಲ್ಲಿ ನಿತ್ಯವಾಗಿಯೂ ಆಗುವುದೆಂದು ತಿಳಿದು ಪ್ರಯೋಗಾನು ಸಾರವಾಗಿ ವ್ಯವಸ್ಥೆ ಮಾಡಿಕೊಳ್ಳಬೇಕು.

**ಅವತಾರಿಕೆ ೨೬೩**

ಹೀಗೆಯೇ ವ್ಯಂಜನಾಂತಗಳಾದ ಕೆಲವು ಶಬ್ದಗಳಿಗೂ ಕಿನಾಗಮವಿಧಿಯನ್ನು ಹೇಳುತ್ತಾನೆ.

**ಸೂತ್ರಂ || ಪಗಲಿರುಳಃ || ೨೬೩ ||**

**ಅರ್ಥ** || 'ಪಗಲ್, ಇರುಳ್' ಎಂಬಿವೆರಡು ಶಬ್ದಗಳಿಗೂ ಇವಮಾದಿಸುಪ್ಪು ಪರದಲ್ಲಿರಲು ಕಿನಾಗಮವು ವಿಕಲ್ಪವಾಗಿ ಬರುವುದು.

**ಉದಾಹರಣೆ** || 'ಪಗಲಿನಿಂ, ಪಗಲಿಂ; ಇರುಳಿನಿಂ, ಇರುಳಿಂ; ಪಗಲಿಂಗೆ, ಪಗಲ್ಗೆ; ಇರುಳಿಂಗೆ, ಇರುಳ್ಗೆ ||' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೨೬೩**

ಹೀಗೆಯೇ ಇನ್ನೂ ಕೆಲವು ವ್ಯಂಜನಾಂತ ಶಬ್ದಗಳಿಗೆ ನಿತ್ಯವಾಗಿ ಇನಾಗಮವನ್ನು ವಿಧಿಸುತ್ತಾನೆ.

**ಸೂತ್ರಂ || ಆಗಳೀಗ[೧]ಳೋ ನಿತ್ಯಂ || ೨೬೪ ||**

**ಅರ್ಥ** || 'ಆಗಳ್, ಈಗಳ್' ಎಂಬಿವೆರಡಕ್ಕೂ ಇವಮಾದಿಸುಪ್ಪು ಪರದಲ್ಲಿರಲು ನಿತ್ಯವಾಗಿ ಇನಾಗಮವು ಬರುವುದು.

**ಉದಾಹರಣೆ** || 'ಆಗಳಿನಿಂ, ಈಗಳಿನಿಂ; ಆಗಳಿಂಗೆ, ಈಗಳಿಂಗೆ ||' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೨೬೪**

ಈ ಸೂತ್ರದಲ್ಲಿ — 'ಆಗಳೀಗಳೋಃ, ನಿತ್ಯಂ' ಎಂದು ಎರಡು ಪದಗಳಿರುವುವು. ನಿತ್ಯಗ್ರಹಣ ಸಾಮರ್ಥ್ಯದಿಂದ 'ವಾ' ಎಂಬುದನ್ನು ಬಿಟ್ಟು 'ಕಿನ್, ಇವಮಾದೌ, ಸುಪಿ' ಎಂಬಿವನ್ನು ಅನುವರ್ತಿಸುವುದು. 'ಆಗಳೀಗಳೋಃ' ಎಂಬುದು 'ತದಾನೀಂ, ಇದಾನೀಂ' ಎಂಬರ್ಥವುಳ್ಳ 'ಆಗಳ್, ಈಗಳ್' ಎಂಬಿವಕ್ಕೆ ದ್ವಂದ್ವಮಾಡಿ ಷಷ್ಠ್ಯಂತವಾಗಿ ನಿರ್ದಿಷ್ಟವಾಗಿರುವುದು. ಉಳಿದುವಕ್ಕೆ ಪೂರ್ವದಂತೆಯೇ ಅನ್ವಯವನ್ನು ಹೇಳಿ 'ಆಗಳ್, ಈಗಳ್' ಎಂಬಿವೆರಡಕ್ಕೂ ಇವಮಾದಿ ಸುಪ್ಪು ಪರವಾಗಿರಲು ನಿತ್ಯವಾಗಿ ಇನಾಗಮವು ಬರುವುದೆಂದು ಸೂತ್ರಾರ್ಥವನ್ನು ಹೇಳಲು 'ಆಗಳಿನಿಂ' ಮೊದಲಾದುವು ಸಿದ್ಧಿಸುವುವು. ಇಲ್ಲಿ 'ಆಗಳ್' ಎಂಬುದು 'ತದಾನೀಂ' ಎಂಬರ್ಥವುಳ್ಳುದೆಂದು ಹೇಳಿದ್ದರೂ —

> ಆಗಳುಮೆಮಗೆ ಜಿನಾಗಮ
> ರಾಗಂ ಸಮನಿಸುಗೆ ಮಿಕ್ಕ ಸಂಸ್ಕೃತಿಕರಮಿ
> ಥ್ಯಾಗಮದುರ್ಭಾವನೆಯುಂ
> ಮಾಗದೆ ಗುರುಜನರ ಪೇಳ್ದ ಪರಿಪಿಡಿಯಿಂದಂ

ಮೊದಲಾದ ಪ್ರಯೋಗಗಳಿಂದ 'ಸರ್ವದಾ' ಎಂಬರ್ಥವುಳ್ಳುದೂ ಆಗುವುದೆಂದು ತಿಳಿಯಬೇಕು. ಇಲ್ಲಿ ವಿಚಾರ ಮಾಡಲಾಗಿ '**ಪಗಲಿರುಳಾಗಳೀಗಳಾಂ**' ಎಂದೊಂದೇ ಸೂತ್ರವನ್ನು ಮಾಡದೆ ಬೇರೆ ಬೇರೆ ಸೂತ್ರಗಳನ್ನು ಮಾಡಿರುವುದರಿಂದಲೇ ಪೂರ್ವಸೂತ್ರವು ವೈಕಲ್ಪಿಕವು. ಈ ಸೂತ್ರವು ನಿತ್ಯವೆಂದು ಸಿದ್ಧಿಸುತ್ತಿರಲು ಪುನಃ ಸೂತ್ರದಲ್ಲಿ ನಿತ್ಯಗ್ರಹಣವು ಸ್ಪಷ್ಟಾರ್ಥವೆಂದೂ ಉತ್ತರಾರ್ಥವೆಂದೂ ತಿಳಿಯುವುದು.

---

ಪಾಠಾಂತರ : ೧ ಳೋರ್ನಿತ್ಯಂ

ಇಲ್ಲಿ **ದರ್ಪಣಕಾರ**ನು ಈ ಉಭಯ ಸೂತ್ರವನ್ನೂ ಸೇರಿಸಿ —

ಪಗಲಿರುಳೆಂಬಲ್ಲಿ ವಿಕ
ಲ್ಪಗತಿಯಿನಾವ್ಯಂಜನಾಂತದೊಳೆ ಪೇಳ್ವರ್ ಸೂ
ರಿಗಳಾಗಳೀಗಳೆಂಬೆಡೆ
ಗ ಗಲ್ಪುರುಳಿದೆಡೆಗಿನಾಗಮಂ ದೋಷಕರಂ ( ಸೂತ್ರ ೧೧೯ )

ಎಂದು ಹೇಳಿರುವನು. ಇಲ್ಲಿ ' ಉಳಿದೆಡೆಗಿನಾಗಮಂ ದೋಷಕರಂ ' ಎಂದು ಹೇಳಿರುವುದರಿಂದ ಉಕ್ತ ಶಬ್ದಗಳಲ್ಲದೆ ಇತರ ಶಬ್ದಗಳಿಗೆ ಇನಾಗಮವನ್ನು ಮಾಡಲಾಗದೆಂದು ಸೂಚಿತವಾಗುವುದು. ಆದಾಗ್ಯೂ ಕೆಲವೆಡೆ ಪ್ರಾಚೀನರು ಇನಾಗಮವನ್ನು ಅಂಗೀಕರಿಸಿರುವುದರಿಂದ ಪೂರ್ವಸೂತ್ರದಲ್ಲಿ ಹೇಳಿದ ಯುಕ್ತಿಯನ್ನು ಒಡಂಬಟ್ಟು ಅಂತಹ ಪ್ರಯೋಗಗಳನ್ನು ಸಾಧಿಸಬೇಕು.

**ಅವತಾರಿಕೆ ೨೬೫**

ಹೀಗೆಯೇ ದಿಗ್ವಾಚಕ ಶಬ್ದಗಳಿಗೆ ಇವಾದಿ ಸುಪ್ಪಿನಲ್ಲಿ ಕಣಾಗಮ ವಿಧಿಯನ್ನು ಹೇಳುತ್ತಾನೆ.

**ಸೂತ್ರಂ || ಕಣ್ ದಿಕ್ಛಬ್ದಸ್ಯ || ೨೬೫ ||**

**ಅರ್ಥ || ದಿಗ್ವಾಚಕ ಶಬ್ದಗಳಿಗೆ ಇವಾದಿ ಸುಪ್ಪು ಪರದಲ್ಲಿರಲು ಕಣಾಗಮವು ಬರುವುದು.**

**ಉದಾಹರಣೆ ||** 'ಮೂಡಣಿಂ, ಮೂಡಣ್ಗೆ; ತೆಂಕಣಿಂ, ತೆಂಕಣ್ಗೆ; ಪಡುವಣಿಂ, ಪಡುವಣ್ಗೆ; ಬಡಗಣಿಂ, ಬಡಗಣ್ಗೆ; ಅತ್ತಣಿಂ, ಅತ್ತಣ್ಗೆ; ಇತ್ತಣಿಂ, ಇತ್ತಣ್ಗೆ; ನಡುವಣಿಂ, ನಡುವಣ್ಗೆ; ಕಡೆಯಣಿಂ,ಕಡೆಯಣ್ಗೆ || ಮೊದಲಾದ ದಿಗ್ವಾಚಕಗಳೆಂದು ಪ್ರಸಿದ್ಧವಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೨೬೫**

ಈ ಸೂತ್ರದಲ್ಲಿ — ' ಕಣ್, ದಿಕ್ಶಬ್ದಸ್ಯ ' ಎಂದು ಎರಡು ಪದಗಳಿರುವುವು. ಪೂರ್ವದಿಂದ ' ಇವಾದೌ, ಸುಪಿ ' ಎಂದು ಅನುವರ್ತಿಸುವುವು. ' ಕಣ್ ' ಎಂಬುದು ಇತ್-ಸಂಜ್ಞಕ ಕ-ಕಾರವತ್ತಾದುದರಿಂದ ಆಗಮವೆಂದು ತಿಳಿಯಬೇಕು. ಇದು ಉದ್ದೇಶ್ಯವಾಚಕದ ಅಂತ್ಯಾವಯವವಾಗಿ ಬರುವುದು. ' ದಿಕ್ಶಬ್ದಸ್ಯ ' ಎಂಬುದು ಉದ್ದೇಶ್ಯವಾಚಕವಾದುದು. ಇಲ್ಲಿ 'ದಿಶಃ' ಎಂದು ನಿರ್ದೇಶ ಮಾಡಿದರೂ ಅರ್ಥಕ್ಕೆ ಆಗಮೋತ್ಪತ್ತಿಯು ಅಯೋಗ್ಯವೆಂದು, ಶಬ್ದಕ್ಕೇ ಬರುವುದೆಂದರ್ಥವಾಗಲು ' ದಿಕ್ ' ಎಂಬ ಶಬ್ದಕ್ಕೇ ಬರುವುದೆಂದು ತೋರುವುದು. ಅದಕ್ಕಾಗಿ ಅರ್ಥಗ್ರಹಣವನ್ನು ಮಾಡಿದರೂ ' ಮೂಡ, ತೆಂಕ ' ಮೊದಲಾದ ದಿಗ್ವಿಶೇಷವಾಚಕಗಳಿಗೆ ಸಂಗ್ರಹವು ಬಂದರೂ ' ನಡು, ಕಡೆ ' ಮೊದಲಾದ ದೇಶವಿಶೇಷವೃತ್ತಿಗಳಾದುವಕ್ಕೆ ಸಂಗ್ರಹವು ಬರುವುದಿಲ್ಲ. ಆದುದರಿಂದ ಅದಕ್ಕೂ ಸಂಗ್ರಹವು ಬರಲು ಸೂತ್ರದಲ್ಲಿ ' ದಿಕ್ಛಬ್ದಸ್ಯ ' ಎಂದು ಶಬ್ದಗ್ರಹಣವನ್ನು ಮಾಡಿರುವುದು. ಇದಕ್ಕೆ ದಿಗರ್ಥದಲ್ಲಿ ಈಗ ಪ್ರಯೋಗವಿಲ್ಲದಿದ್ದರೂ ಒಮ್ಮೆ ದೃಷ್ಟವಾದುವೆಲ್ಲಾ ದಿಕ್ಶಬ್ದಗಳೆಂದು ಅರ್ಥವಾಗುವುದರಿಂದ ' ಕಡೆ, ನಡು ' ಮೊದಲಾದುವಕ್ಕೆ ಈಗ ದೇಶವಿಶೇಷವೃತ್ತಿತ್ವವಿದ್ದರೂ ಒಮ್ಮೆ ದಿಗರ್ಥದಲ್ಲಿಯೂ ದೃಷ್ಟವಾಗಿರುವುದರಿಂದ ಅವಕ್ಕೂ ಸಂಗ್ರಹವುಂಟಾಗುವುದು. ಆದುದರಿಂದ — ದಿಗ್ವಾಚಕಗಳಾಗಿ ಪ್ರಸಿದ್ಧವಾದ ಶಬ್ದಗಳಿಗೆ ಇವಾದಿ ಸುಪ್ಪು ಪರದಲ್ಲಿರುವಾಗ ಕಣ್-ಆಗಮವು ಬರುವುದೆಂದು ಸೂತ್ರಾರ್ಥವಾಗಲು 'ಮೂಡ, ತೆಂಕ ' ಮೊದಲಾದ ಶಬ್ದಗಳಿಗೆ ಅಂತ್ಯಾವಯವವಾಗಿ ' ಅಣ್ ' ಎಂಬುದು ಬಂದು 'ಮೂಡಣಿಂ,

ತೆಂಕಣಿಂ ' ಮೊದಲಾದುವು ಸಿದ್ಧಿಸುವುವು. ಇಲ್ಲಿ ದಿಗ್ವಿಶೇಷಪ್ರವೃತ್ತಿಯಾಮವಕ್ಕೂ ಗ್ರಹಣವೆಂದು ಹೇಳದಿದ್ದರೆ — ' ನಡುವಿಂ, ಕಡೆಯಿಂ, ನಡುಗೆ, ಕಡೆಗೆ ' ಮೊದಲಾದುವೇ ಸಿದ್ಧಿಸುವುವು. ಈಗ ಹಾಗೆ ಹೇಳಿರುವುದರಿಂದ ' ನಡುವಣಿಂ, ಕಡೆಯಣಿಂ, ನಡುವಣ್ಗೆ, ಕಡೆಯಣ್ಗೆ ' ಮೊದಲಾದ ರೂಪಗಳೂ ಸಿದ್ಧಿಸುವುವೆಂದು ತಿಳಿಯಬೇಕು. **ದರ್ಪಣಕಾರನು ' ದಿಶ್ವಾಚಿಸಿಲ್ ತೃತೀಯಾದಿ ಗಳ್ಪ್ರಯೋಗಿಸ ಪಡೆಗುಂ '** ಎಂದು ನೊದಲಾಗಿ ವ್ಯವಸ್ಥೆಯನ್ನು ಮಾಡಿರುವನು.

**ಅವತಾರಿಕೆ ೨೬೬**

ಇದುವರೆಗೂ ವಿಭಕ್ತಿನಿಮಿತ್ತವಾಗಿ ವಿಶೇಷಣಗಳಿಗೆ ಆಗಮವು ವಿಧಿಸಲ್ಪಟ್ಟಿತು. ಈಗ ಕೆಲವು ಪ್ರಕೃತಿವಿಶೇಷಗಳಿಗೆ ಆದೇಶವನ್ನು ವಿಧಿಸಲು ಮೊದಲು ಉ ಕಾರಾಂತ ಕೃದಂತಗಳಿಗೆ ' ಅಱು ' ಎಂಬಾದೇಶವನ್ನು ವಿಧಿಸುತ್ತಾನೆ.

**ಸೂತ್ರಂ || ಕೃತೋಽಱುರುತಃ || ೨೬೬ ||**

**ಅರ್ಥ || ಕೃತ್-ಪ್ರತ್ಯಯಾಂತವಾದ ಉ ಕಾರಾಂತ ಶಬ್ದಗಳಿಗೆ ಇವಾದಿ ಸುಪ್ಪು ಪರದಲ್ಲಿರಲು ' ಅಱು ' ಎಂಬಾದೇಶವು ಆ ಕೃದಂತದ ಅಂತ್ಯವಾದ ಉ ಕಾರಕ್ಕೆ ಬರುವುದು.**

**ಉದಾಹರಣೆ** '|| ಮಾಱ್ಪುದಱಿಂ, ಮಾಱ್ಪುದರ್ಕ್ಕೆ; ಕೂಡುವುದಱಿಂ, ಕೂಡುವುದರ್ಕ್ಕೆ ||' ಮೊದಲಾದ ಉ ಕಾರಾಂತ ಕೃದಂತಗಳೆಲ್ಲಾ ಇದಕ್ಕೆ ಲಕ್ಷ್ಯಗಳಾಗಿರುವುವು.

**ವಿಚಾರ ೨೬೬**

ಈ ಸೂತ್ರದಲ್ಲಿ — ' ಕೃತಃ, ಅಱುಃ, ಉತಃ ' ಎಂದು ಮೂರು ಪದಗಳಿರುವುವು. ಪೂರ್ವದಿಂದ ' ಇವಾದೌ, ಸುಪಿ ' ಎಂದು ಅನುವರ್ತಿಸುವುದು. ಇದು ಪರಸಪ್ತಮ್ಯಂತವು. ' ಕೃತಃ ' ಎಂಬುದು ಪ್ರತ್ಯಯಬೋಧಕ ಷಷ್ಠ್ಯಂತಪದವಾದುದರಿಂದ ಪ್ರತ್ಯಯಗ್ರಹಣ ಪರಿಭಾಷೆಯಿಂದ ತದಂತವಾದ ಉ ಕಾರಕ್ಕೆ ಆದೇಶವಾಗಿ ' ಮಾಱ್ಪುದಱಿಂ ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು. ಇಲ್ಲಿ ಕೊಟ್ಟಿರುವ ' ಮಾಱ್ಪುದಱಿಂ ' ಎಂಬುದು ಕರಣಾರ್ಥಕ 'ಮಾಡು' ಧಾತುವಿಗೆ ಪರವಾಗಿ— ' **ಅಚ್ ಕರ್ತೃಕರ್ಮಣೋಃ || ೫೪೩ ||** ' ಎಂಬ ಸೂತ್ರದಿಂದ ಅಚ್-ಪ್ರತ್ಯಯವನ್ನೂ ಅದು ಪರದಲ್ಲಿರುವಾಗ — ' **ಅಚಿ || ೪೪೭ ||** ' ಎಂಬ ಸೂತ್ರದಿಂದ ಭಾವಿಕಾಲದಲ್ಲಾಗಲಿ '**ಸತಿ ವೋ ವಾ || ೪೪೮ ||**'ಎಂಬುದರಿಂದ ವರ್ತಮಾನಕಾಲದಲ್ಲಿಯಾಗಲಿ ಮಧ್ಯದಲ್ಲಿ ವ ಪ್ರತ್ಯಯವನ್ನೂ— '**ಱುಡೋರ್ದೋರ್ ರಟಂ ವ್ಯಂಜನೇ ||೮೨||**' ಎಂಬುದರಿಂದ 'ಡು' ಶಬ್ದಕ್ಕೆ ಟ ಕಾರಾದೇಶವನ್ನೂ — ' **ಆದಿಷ್ವಾದ್ರಟಃ || ೫೧೪ ||** ' ಎಂಬುದರಿಂದ ವ-ಪ್ರತ್ಯಯದ ವ ಕಾರಕ್ಕೆ ಪ ಕಾರಾದೇಶವನ್ನೂ ಅಚ್-ಪ್ರತ್ಯಯಕ್ಕೆ — ' **ಅಚಃ || ४೫೫ ||** ' ಎಂಬುದರಿಂದ ' ಉದು ' ಎಂಬ ಆದೇಶವನ್ನೂ ಮಾಡಲು ' ಮಾಱ್ಪುದು ' ಎಂದು ಉ ಕಾರಾಂತ ಕೃದಂತವಾಗುವುದು. ಇದಕ್ಕೆ ' **ಅರ್ಥವಲ್ಲಿಂಗಂ** ' ಎಂಬ ಸೂತ್ರದಿಂದ ಲಿಂಗ-ಸಂಜ್ಞೆಯನ್ನು ಮಾಡಿ — '**ಹೇತುಕರ್ತೃಕರಣೇತ್ಥಂಭೂತಲಕ್ಷಣೇ ||೨೦೯||**' ಎಂಬುದರಿಂದ ಇವು-ಪ್ರತ್ಯಯವನ್ನು ಮಾಡಲು ಈ ಸೂತ್ರದಿಂದ ' ಅಱು ' ಎಂದು ಆದೇಶವಾಗಿ ಉ ಕಾರಕ್ಕೆ ಲೋಪವೂ ಆಗಿ 'ಮಾಱ್ಪುದಱಿಂ' ಎಂದು ಸಿದ್ಧವಾಗುವುದು. ಹೀಗೆಯೇ ಉಳಿದ ಉದಾಹರಣೆಗಳಲ್ಲಿಯೂ ಪ್ರಕ್ರಿಯೆಗಳನ್ನು ಯಥಾ ಸೂತ್ರವಾಗಿ ಊಹಿಸಿಕೊಳ್ಳುವುದು.

ಇಲ್ಲಿ **ದರ್ಪಣಕಾರನು** —

> **ಜನಯಿಪುದು ದಂತಕೃತ್ ಸ**
> **ರ್ವನಾಮಗುಣವಚನಸಂಖ್ಯೆಗಳ್ಗೆಪವಣ್ಗಱೆ**
> **ವಿನಮುಱ್ಕಾರಂ ... ...** ( ಸೂತ್ರ ೧೧೦ )

ಎಂಬ ಸೂತ್ರದಿಂದ ಮುಂದೆ ಹೇಳುವ— '**ಸಂಖ್ಯಾಪರಿಮಾಣಗುಣೋಕ್ತೇಃ ||೨೬೮|| ಅದ್ವಾದೇಃ ಕಿತ್ ||೨೬೯|| ವೋಃ ||೨೭೦||**' ಎಂಬ ಸೂತ್ರತ್ರಯಾರ್ಥವನ್ನೂ ಸಂಗ್ರಹಿಸಿ ಹೇಳಿರುವನು. ಇಲ್ಲಿ 'ಅಱ್' ಎಂಬುದನ್ನು ಆಗಮವೆಂದು ಹೇಳಿರುವುದು ಉಭಯ ಮತಕ್ಕೂ ಸರಿಯಾಗಿದ್ದರೂ 'ಅಱು' ಎಂಬುದನ್ನು **ದರ್ಪಣಕಾರನು** ಆಗಮವನ್ನಾಗಿ ಅಂಗೀಕರಿಸಿರುವನು. **ಶಾಸನಕಾರನು** ಆದೇಶವನ್ನಾಗಿ ಹೇಳಿರುವನು. ಇದರಿಂದ ಮತಭೇದವು ತೋರುವುದು. ಆದಾಗ್ಯೂ ರೂಪನಿಷ್ಪತ್ತಿಯಲ್ಲಿ ಒಂದೇ ಆಗಿರುವುದರಿಂದ ಭೇದವಿಲ್ಲವೆಂದು ತಿಳಿಯಬೇಕು. ಇದಲ್ಲದೆ **ದರ್ಪಣಕಾರನು** ಈ ಪ್ರಕರಣದಲ್ಲ ' ಮೂಡಣಂ, ತೆಂಕಣಂ, ಕೆಲದಂ, ಬಲದಂ ' ಮೊದಲಾದ ಶಬ್ದಸಿದ್ಧಿಗಾಗಿ —

> **ಪುರುಷಪರಮಾದೊಡತ್ವಂ**
> **ದೊರೆಕೊಳ್ಗುಮದಣ್ತಗುಳ್ದದಿಗ್ವಾಚಕದೊಳ್**
> **ಪರದಿಗ್ವಾಚಕದೊಳ್ ಸಂ**
> **ಚರಿಸುವುವಾತೆಱಪೆದತ್ವವಿಧಿಶಾಬ್ದಿಕರಿಂ** ( ಸೂತ್ರ ೧೧೧ )

ಎಂಬ ಸೂತ್ರವನ್ನು ಹೇಳಿರುವನು. **ಶಾಸನಕಾರನು** ತದ್ಧಿತ ಪ್ರಕರಣದಲ್ಲಿ ಈ ಶಬ್ದಗಳನ್ನು ಸಾಧಿಸಿರುವನು. ಪ್ರಕರಣೋಪಾಯಗಳು ಭೇದವಾಗಿದ್ದರೂ ತಾತ್ಪರ್ಯವು ಒಂದೇ ಎಂದು ತಿಳಿಯಬೇಕು.

**ಅವತಾರಿಕೆ ೨೬೭**

ಪೂರ್ವಸೂತ್ರದಿಂದ ಸಾಮಾನ್ಯವಾಗಿ ಉ ಕಾರಾಂತವಾದ ಕೃದಂತಕ್ಕೆ ' ಅಱು ' ಎಂಬ ಆದೇಶವನ್ನು ವಿಧಿಸಿರುವುದರಿಂದ ಇದು ' ಕಾಪು, ಪಸಿವು, ತಿನಿಸು ' ಮೊದಲಾದ ಉ ಕಾರಾಂತ ಭಾವಕೃದಂತಗಳಿಗೂ ಪ್ರಾಪ್ತವಾಗಲು ಅದಕ್ಕೆ ವ್ಯಾವೃತ್ತಿಯನ್ನು ಮಾಡಲು ನಿಯಮಸೂತ್ರವನ್ನು ಹೇಳುತ್ತಾನೆ.

**ಸೂತ್ರಂ || ಭಾವೇ ವುದೋಃ || ೨೬೭ ||**

**ಅರ್ಥ || ಭಾವಾರ್ಥದಲ್ಲಿ ವಿಹಿತವಾದ ವುದು-ಪ್ರತ್ಯಯಾಂತವಾದ ಶಬ್ದಕ್ಕೆ ಇಮಾದಿ ಸುಪ್ಪು ಪರವಾಗಲು ' ಅಱು ' ಎಂಬ ಆದೇಶವು ಬರುವುದು.**

**ಉದಾಹರಣೆ ||** ' ಬಪ್ಪುದಱಿಂ, ಬಪ್ಪುದರ್ಕೆ; ಪೋಪುದಱಿಂ, ಪೋಪುದರ್ಕೆ ' || ಮೊದಲಾದ ಭಾವಾರ್ಥಕ ವುದಂತ-ಶಬ್ದಗಳು ಇದಕ್ಕೆ ಲಕ್ಷ್ಯಗಳು.

**ವಿಚಾರ ೨೬೭**

ಈ ಸೂತ್ರದಲ್ಲಿ — ' ಭಾವೇ, ವುದೋಃ ' ಎಂದು ಎರಡು ಪದಗಳಿರುವುವು. ' ಭಾವೇ ' ಎಂಬುದು ಧಾತ್ವರ್ಥಬೋಧಕವಾದ ಸಪ್ತಮ್ಯಂತ ಪದವು. ಇದು ವಾಚ್ಯವಾಚಕ ಭಾವರೂಪ ಸಂಬಂಧದಿಂದ ' ವುದೋಃ ' ಎಂಬುದಕ್ಕೆ ವಿಶೇಷಣವು. ' ವುದೋಃ ' ಎಂಬುದು ಉ ಕಾರಾಂತ

ಕೃತ್-ಪ್ರತ್ಯಯಬೋಧಕವಾದ ಷಷ್ಠ್ಯಂತ ಪದವು. ಪ್ರತ್ಯಯಗ್ರಹಣ ಪರಿಭಾಷೆಯಿಂದ ಕೃದಂತ ಬೋಧಕವಾಗುವುದು. ಪೂರ್ವಸೂತ್ರದಿಂದ 'ಅಜುಃ, ಇಮಾದೌ, ಸುಪಿ' ಎಂದು ಅನುವರ್ತಿಸಿ ಪೂರ್ವದಂತೆ ಸಂಬಂಧಿಸುವುದು. ತಥಾಚ — ಭಾವಾರ್ಥಕ ವುದು-ಪ್ರತ್ಯಯಾಂತ ಶಬ್ದಕ್ಕೆ ಇಮಾದಿ ಸುಪ್ಪು ಪರದಲ್ಲಿರಲು 'ಅಜು' ಎಂಬ ಆದೇಶವು ಬರುವುದೆಂದು ಸೂತ್ರಾರ್ಥವಾಗಲು 'ಬಪ್ಪುದಜುಂ' ಮೊದಲಾದ ರೂಪಗಳು ಸಿದ್ಧಿಸುವುವು. ಇಲ್ಲಿ ಪೂರ್ವಸೂತ್ರದಿಂದಲೇ ಸಿದ್ಧವಾಗುತ್ತಿರಲು ಪುನಃ ಈ ಸೂತ್ರಾರಂಭವು — '**ಸಿದ್ಧೇಸತ್ಯಾರಭ್ಯಮಾಣೋ ವಿಧಿರ್ನಿಯಮಾಯ ಭವತಿ**' ಎಂಬ ನ್ಯಾಯದಿಂದ ನಿಯಮಾರ್ಥಕವೆಂದು ತಿಳಿದು ಭಾವವಾಚಿಯಾದ ಉ ಕಾರಾಂತಗಳಿಗೆ ಪೂರ್ವೋತ್ತರ ಸೂತ್ರಗಳಿಂದ 'ಅಜು' ಎಂಬ ಆದೇಶವು ಬರುವುದಾದರೆ 'ವುದು' ಪ್ರತ್ಯಯಾಂತಕ್ಕೇ ಬರುವುದು; ಇತರ ಭಾವಪ್ರತ್ಯಯಾಂತಗಳಿಗೆ ಬರುವುದಿಲ್ಲ – ಎಂದು ಇತರಕ್ಕೆ ನಿವೃತ್ತಿ ಮಾಡುವುದರಿಂದ 'ಕಾಪಿನಿಂ, ಕಾಪಿಂಗೆ, ಪಸಿವಿನಿಂ, ಪಸಿವಿಂಗೆ, ತಿನಿಸಿನಿಂ, ತಿನಿಸಿಂಗೆ' ಮೊದಲಾದುವಕ್ಕೆ ಬರುವುದಿಲ್ಲವೆಂದು ತಿಳಿಯಬೇಕು. ಇಲ್ಲಿ – '**ಓಕಾಮೇಭ್ಯಃ ಪುಃ || ೫೭೩ ||' ಪಸ್ಯಾದೇರ್ವುಃ || ೫೬೬ ||, ಇಸುಸ್ ತಿನಃ || ೫೭೮ ||**' ಎಂಬ ಸೂತ್ರಗಳಿಂದ ಕೃತ್-ಪ್ರತ್ಯಯಗಳು ವಿಧಿಸಲ್ಪಡುವುವೆಂದು ತಿಳಿಯುವುದು. ಈ ನಿಯಮವು ವ್ಯಾಖ್ಯಾನಪರಿಭಾಷೆಯಿಂದ ಕೃತ್-ತದ್ಧಿತ ಭಾವಪ್ರತ್ಯಯಾಂತ ಸಾಧಾರಣವೆಂದು ವಕ್ಷ್ಯಮಾಣ ಸೂತ್ರ ಪ್ರಾಪ್ತವಾದುದಕ್ಕೂ ಇದು ನಿಯಾಮಕವಾದುದರಿಂದ 'ಕಪ್ಪು, ಬೆಳ್ಪು' ಮೊದಲಾದ ತದ್ಧಿತಾಂತಗಳೂ ವ್ಯಾವೃತ್ತಗಳಾಗುವುವು.

**ಅವತಾರಿಕೆ ೨೬೮**

ಹೀಗೆಯೇ ಇನ್ನೂ ಕೆಲವು ಕೃದಂತಗಳಲ್ಲದ ಉ ಕಾರಾಂತ ಶಬ್ದಗಳಿಗೆ 'ಅಜು' ಎಂಬ ಆದೇಶವನ್ನು ವಿಧಿಸುತ್ತಾನೆ.

**ಸೂತ್ರಂ || ಸಂಖ್ಯಾಪರಿಮಾಣಗುಣೋಕ್ತೇಃ || ೨೬೮ ||**

**ಅರ್ಥ || ಉ ಕಾರಾಂತಗಳಾದ ಸಂಖ್ಯಾವಾಚಿಗಳಿಗೂ ಪರಿಮಾಣವಾಚಿಗಳಿಗೂ ಗುಣವಾಚಿಗಳಿಗೂ ಇಮಾದಿ ಸುಪ್ಪು ಪರವಾಗಿರಲು 'ಅಜು' ಎಂಬ ಆದೇಶವು ಬರುವುದು.**

**ಉದಾಹರಣೆ ||** 'ಪತ್ತಜುಂ, ಪತ್ತರ್ಕೆ, ನೂಱಜುಂ, ನೂಱರ್ಕೆ ||' ಮೊದಲಾದುವು ಸಂಖ್ಯಾವಾಚಕಕ್ಕೂ 'ಅನಿತಜುಂ, ಅನಿತರ್ಕೆ; ಇನಿತಜುಂ, ಇನಿತರ್ಕೆ ||' ಮೊದಲಾದುವು ಪರಿಮಾಣವಾಚಕಕ್ಕೂ 'ಬಿಳಿದಜುಂ, ಬಿಳಿದರ್ಕೆ; ಕರಿದಜುಂ, ಕರಿದರ್ಕೆ ||' ಮೊದಲಾದುವು ಗುಣವಾಚಕಕ್ಕೂ ಉದಾಹರಣೆಗಳೆಂದು ತಿಳಿಯುವುದು.

**ವಿಚಾರ ೨೬೮**

ಈ ಸೂತ್ರದಲ್ಲಿ — '**ಸಂಖ್ಯಾಪರಿಮಾಣಗುಣೋಕ್ತೇಃ**' ಎಂದು ಒಂದೇ ಪದವಿರುವುದು. ಇದು 'ಸಂಖ್ಯಾಚ, ಪರಿಮಾಣಂಚ, ಗುಣೋಕ್ತಿಶ್ಚ ಏಷಾಂ ಸಮಾಹಾರಃ' ಎಂದು ಸಮಾಹಾರ ದ್ವಂದ್ವಸಮಾಸವನ್ನು ಅಂಗೀಕರಿಸಿ ಪುಲ್ಲಿಂಗ ಷಷ್ಠ್ಯಂತವಾಗಿ ನಿರ್ದೇಶಿಸಲ್ಪಟ್ಟಿರುವುದು. ಇಲ್ಲಿ 'ಸಂಖ್ಯೆ' ಯೆಂದರೆ ಒಂದು ಮೊದಲಾದ ಭಾಷಾಗತ ಸಂಖ್ಯಾವಾಚಕಗಳನ್ನು ಗ್ರಹಿಸಬೇಕು ಹೀಗೆ ಪರಿಮಾಣಾದಿವಾಚಿಗಳೂ ಭಾಷಾಶಬ್ದಗಳೆಂದೇ ತಿಳಿಯಬೇಕು. ಪೂರ್ವದಿಂದ 'ಉತಃ,

ಅಱುಃ ' ಎಂಬುವೆರಡನ್ನೇ ಅನುವರ್ತಿಸುವುದು. ' ಇಮಾದೌ ಸುಪಿ ' ಎಂದು ಪ್ರಕರಣದಿಂದಲೇ ಸಿದ್ಧವಾಗಿರುವುವು. ' ಉತಃ ' ಎಂಬುದನ್ನು ಸಂಖ್ಯಾದಿಗಳಿಗೆ ವಿಶೇಷಣ ಮಾಡಲು ತದಂತ ಲಾಭವುಂಟಾಗಿ ಉ ಕಾರಾಂತಗಳಾದ ಸಂಖ್ಯಾದಿವಾಚಿಗಳಾದ ಶಬ್ದಗಳಿಗೆ ಇಮಾದಿ ಸುಪ್ಪು ಪರ ವಾಗಿರಲು ' ಅಱು ' ಎಂಬಾದೇಶವು ಬರುವುದೆಂದು ಸೂತ್ರಾರ್ಥವನ್ನು ಮಾಡಲು ' ಪತ್ತಱುಂ ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು. ಪೂರ್ವೋಕ್ತ ನಿಯಮದಿಂದ ' ಕಪ್ಪುರ್, ಬಿಳ್ಪು ' ಮೊದಲಾದುವಕ್ಕೆ ವ್ಯಾವೃತ್ತಿಯುಂಟಾಗಲು ಅಲ್ಲಿ ಕಿನಾಗಮವೇ ಬರುವುದೆಂದು ತಿಳಿಯಬೇಕು.

**ಅವತಾರಿಕೆ ೨೬೯**

ಹೀಗೆಯೇ ಕೆಲವು ಸರ್ವನಾಮಗಳಿಗೂ ಈ ಆದೇಶವನ್ನು ವಿಧಿಸಿ ಅದ್ವಾದಿಯನ್ನು ಉದ್ದೇಶಿಸಿ ಹೇಳುವುದರಿಂದ ಪ್ರಾಪ್ತವಾದ ಸರ್ವಾದೇಶವನ್ನು ಬಾಧಿಸಲು ಆಗಮತ್ವಸಂಪಾದ ನಾರ್ಥವಾಗಿ ಕಿತ್ವಾತಿದೇಶವನ್ನೂ ಮಾಡುತ್ತಾನೆ.

**ಸೂತ್ರಂ ॥ ಅದ್ವಾದೇಃ ಕಿತ್ ॥ ೨೬೯ ॥**

**ಅರ್ಥ ॥ ಉ ಕಾರಾಂತಗಳಾದ ಅದ್ವಾದಿಗಳಿಗೆ ಇಮಾದಿ ಸುಪ್ಪು ಪರದಲ್ಲಿರಲು ' ಅಱು ' ಎಂಬಾದೇಶವು ಬರುವುದು. ಅದು ಕಿತ್ತಿನಂತೆ ಆಗುವುದು ಎಂದರೆ ಅಂತಾವಯವವಾಗಿ ಬರುವು ದೆಂದು ಸೂತ್ರಾರ್ಥವಾಗುವುದು.**

**ಉದಾಹರಣೆ** ॥ ' ಅದಱುಂ, ಅದರ್ಕ್ಕೆ; ಇದಱುಂ, ಇದರ್ಕ್ಕೆ; ಆವುದಱುಂ, ಆವುದರ್ಕ್ಕೆ; ಏತಱುಂ, ಏತರ್ಕ್ಕೆ ॥ ' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೨೬೯**

ಈ ಸೂತ್ರದಲ್ಲಿ — ' ಅದ್ವಾದೇಃ, ಕಿತ್ ' ಎಂದು ಎರಡು ಪದಗಳಿರುವುವು. ಪೂರ್ವದಿಂದ ' ಉತಃ, ಅಱುಃ, ಇಮಾದೌ, ಸುಪಿ ' ಎಂದು ಅನುವರ್ತಿಸಲ್ಪಡುವುವು. ' ಉತಃ ' ಎಂಬುದು ಅದ್ವಾದಿಗೆ ವಿಶೇಷಣವು. ವಿಶೇಷಣದಿಂದ ತದಂತ ಲಾಭವುಂಟಾಗುವುದು. ' ಅದ್ವಾದೇಃ ' ಎಂಬುದು — ' ಅದು, ಇದು, ಉದು, ಆವುದು, ಎಲ್ಲ, ಪೆಱತು ' ಎಂಬ ಗಣಪಠಿತಶಬ್ದ ಬೋಧಕ ಷಷ್ಠ್ಯಂತ ಪದವು. ' ಕಿತ್ ' ಎಂಬುದು ಇಲ್ಲಿ ಆದಿಷ್ಟವಾದ ' ಅಱು ' ಎಂಬುದಕ್ಕೆ ವಿಶೇಷಣವು. ಇದು — **' ಅಪರತ್ರಪ್ರಯುಜ್ಯಮಾನೋ ಅಪರಶಬ್ದಃ ವತಿಂ ವಿನಾ ಪೀ(?)ವತ್ಯರ್ಥಂ ಗಮಯತಿ '** ಎಂಬ ನ್ಯಾಯದಿಂದ ಲೋಕದಲ್ಲಿ ಹೇಗೆ ಮೃಗೇಂದ್ರಬೋಧಕವಾದ ' ಸಿಂಹ ' ಶಬ್ದವನ್ನು ಆ ನಾಲ್ಕು ಪಾದವುಳ್ಳ ಜಂತುವಿನಲ್ಲಿ ಪ್ರಯೋಗಿಸದೆ ಒಬ್ಬ ಹುಡುಗನಲ್ಲಿ — ' ಈ ಹುಡುಗನು ಸಿಂಹವು ' ಎಂದು ಪ್ರಯೋಗಿಸಲು ಅಲ್ಲಿ ಸಿಂಹತ್ವವು ಬಾಧಿತವಾದುದರಿಂದ ' ಸಿಂಹ ಸದೃಶನು ' ಎಂದು ಅರ್ಥವಾಗುವುದೋ ಹಾಗೆ ಪ್ರಕೃತದಲ್ಲಿ ಕ ಕಾರೇತ್-ಸಂಜ್ಞಕವಲ್ಲದ ' ಅಱು ' ಎಂಬುದರಲ್ಲಿ ಪ್ರಯುಜ್ಯಮಾನವಾದ ' ಕಿತ್ ಪದವು ಕಿತ್-ಸದೃಶವಾಗಿ ಬರುವುದೆಂದರೆ ಆಗಮದಂತೆ ಅಂತ್ಯಾವಯವವಾಗುವುದೆಂದು ಸೂತ್ರಾರ್ಥವಾಗಲು **' ತಿಜದ್ವಾದೇಃ '** ಎಂಬುದರಿಂದ ಪ್ರಾಪ್ತವಾದ ಸರ್ವಾದೇಶವನ್ನು ಬಾಧಿಸಿ ಆಗ ದೇಶಪ್ರಕರಣವಾದುದರಿಂದ ಉ ಕಾರ ಮಾತ್ರ ಸ್ಥಾನದಲ್ಲಿ ಬಂದು ಆಗಮದಂತೆ ಅಂತ್ಯಾವಯವವಾಗಿ ಶ್ರೂಯಮಾಣವಾಗುವುದೆಂದು ತಾತ್ಪರ್ಯವಾಗುವುದು. ಇದರಿಂದ ' ಅದಱುಂ, ಅದರ್ಕ್ಕೆ ' ಮೊದಲಾದ ಪ್ರಯೋಗಗಳು

ಸಿದ್ಧಿಸುವುವು. ಇಲ್ಲಿ 'ಎಲ್ಲ' ಶಬ್ದಕ್ಕೂ ಪಾಠವಿರುವುದರಿಂದ ಅದಕ್ಕೂ ಈ ಆದೇಶವು ಬಂದು 'ಎಲ್ಲಙುಂ, ಎಲ್ಲರ್ಕ್ಕೆ, ಎಲ್ಲಙ, ಎಲ್ಲಙುೊಳ್' ಎಂದು ಪ್ರಯೋಗಗಳು ಸಿದ್ಧಿಸುವುವು. ಆದುದರಿಂದ ಈ ಸೂತ್ರದಲ್ಲಿ 'ಉತಃ' ಎಂದು ವಿಶೇಷಣ ಮಾಡಿರುವುದು ಸಂಭಾವನಾಮಾತ್ರದಿಂದಲೇ ಅಲ್ಲದೆ ಇತರ ವ್ಯಾವರ್ತ್ಯರ್ಥವೆಂದು ತಿಳಿಯಲಾಗದು.

**ಅವತಾರಿಕೆ ೨೭೦**

ಹೀಗೆಯೇ ವು ಪ್ರತ್ಯಯಾಂತವಾದುದಕ್ಕೂ 'ಅಙು' ಎಂಬಾದೇಶವನ್ನು ವಿಧಿಸುತ್ತಾನೆ.

**ಸೂತ್ರಂ || ವೋಃ || ೨೭೦ ||**

**ಅರ್ಥ || ವು ಪ್ರತ್ಯಯಾಂತ ಶಬ್ದಕ್ಕೆ ಇಮಾದಿ ಸುಪ್ಪು ಪರದಲ್ಲಿರಲು 'ಅಙು' ಎಂಬಾದೇಶವು ಬರುವುದು.**

**ಉದಾಹರಣೆ ||** 'ಎಲ್ಲವಙುಂ, ಎಲ್ಲವರ್ಕ್ಕೆ, ಎಲ್ಲವಙ, ಎಲ್ಲವಙುೊಳ್ ||' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೨೭೦**

ಈ ಸೂತ್ರದಲ್ಲಿ — 'ವೋಃ' ಎಂದು ಒಂದೇ ಪದವಿರುವುದು. ಇದು ಪ್ರತ್ಯಯಬೋಧಕವಾದುದರಿಂದ ತದಂತಬೋಧಕವಾಗುವುದು. ಪೂರ್ವದಿಂದ 'ಅಙುಃ, ಇಮಾದೌ, ಸುಪಿ' ಎಂದು ಅನುವರ್ತಿಸಲ್ಪಡುವುವು. ತಥಾಚ — ವು ಪ್ರತ್ಯಯಾಂತ ಶಬ್ದಕ್ಕೆ ಇಮಾದಿ ಸುಪ್ಪು ಪರದಲ್ಲಿರುವಾಗ 'ಅಙು' ಎಂಬಾದೇಶವು ಬರುವುದು ಎಂದು ಸೂತ್ರಾರ್ಥವಾಗಲು 'ಎಲ್ಲವಙುಂ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು.

ಇಲ್ಲಿ ಕೆಲವರು — 'ವೋಃ' ಎಂದು ಸಾಮಾನ್ಯವಾಗಿ ಹೇಳಿದ್ದರೂ 'ಅಳಿವು, ಪಳಿವು' ಮೊದಲಾದ—'**ಪಸ್ಯಾದೇರ್ವುಃ || ೫೬೬ ||**' ಎಂಬುದರಿಂದ ವಿಹಿತಭಾವಪ್ರತ್ಯಯಾಂತ ಶಬ್ದಗಳಿಗೆ '**ಭಾವೇ ವುದೋಃ || ೨೬೭ ||**' ಎಂಬ ನಿಯಮದಿಂದ ವ್ಯಾವೃತ್ತಿಯುಂಟಾಗುವುದರಿಂದಲೂ 'ಅವು, ಇವು' ಮೊದಲಾದ ಅನೇಕತ್ವದಲ್ಲಿ ವಿಹಿತವು ಪ್ರತ್ಯಯಾಂತಗಳಿಗೆ '**ಅದ್ವಾದೇಃ ಕಿತ್**' ಎಂಬ ಪೂರ್ವಸೂತ್ರದಿಂದಲೇ ಸಿದ್ಧವಾಗುವುದರಿಂದಲೂ ಈ ಸೂತ್ರಕ್ಕೆ ವಿಷಯವಾದುದು — '**ಎಲ್ಲಾದ್ವುಃ**' ಎಂಬ ಸೂತ್ರದಿಂದ ಅನೇಕತ್ವದಲ್ಲಿ ವಿಹಿತವು ಪ್ರತ್ಯಯಾಂತವಾದುದು 'ಎಲ್ಲವು' ಎಂಬ ಶಬ್ದವೊಂದೇ ಇರುವುದೆಂದು ಪರ್ಯವಸನ್ನವಾಗುವುದು. ಆದರೆ '**ಅದ್ವಾದೇಃ ಕಿತ್ || ೨೬೯ ||**' ಎಂಬ ಸೂತ್ರದಲ್ಲಿ 'ಉತಃ' ಎಂಬುದನ್ನು ಅನುವರ್ತಿಸಿ ಉ ಕಾರಾಂತವಾದ ಅದ್ವಾದಿಗಳಿಗೆ 'ಅಙು' ಎಂಬಾದೇಶವು ಬರುವುದೆಂದು ವ್ಯಾಖ್ಯಾನಮಾಡಿರುವುದರಿಂದ 'ಅವು, ಇವು' ಮೊದಲಾದ ಬಹುವಚನಗಳಲ್ಲಿ '**ಅದ್ವಾದೇರ್ದೋರ್ಲುಕ್ಷ್ವ || ೨೩೫ ||**' ಎಂಬುದರಿಂದ 'ದು' ಲೋಪವನ್ನು ಮಾಡಲು ಅಲ್ಲಿ ಅವಶಿಷ್ಟವಾದ ಅದ್ವಾದಿಗೆ ಉ ಕಾರಾಂತತ್ವವಿಲ್ಲದಿರುವುದರಿಂದ ಪೂರ್ವಸೂತ್ರದಿಂದ ಅಪ್ರಾಪ್ತವಾಗಲು 'ಅವು, ಇವು' ಮೊದಲಾದುವೂ ಈ ಸೂತ್ರಕ್ಕೆ ವಿಷಯಗಳಾಗುವುವೆಂದು ತೋರುವುದು. ಆದಾಗ್ಯೂ ಆ ಸೂತ್ರದಲ್ಲಿ 'ಉತಃ' ಎಂಬುದರ ಅನುವೃತ್ತಿಯು 'ಎಲ್ಲಙಂ' ಮೊದಲಾದ ರೂಪಸಿದ್ಧ್ಯರ್ಥವಾಗಿ ನಿಷ್ಪ್ರಯೋಜನವಾಗಿರುವುದರಿಂದ ಅನಾವಶ್ಯಕವೆಂದು ಹೇಳಿರುವುದರಿಂದಲೂ ಆವಶ್ಯಕವೆಂದು ಆಗ್ರಹವಿರುವ

ಪಕ್ಷದಲ್ಲಿ **‘ ಸಾಂಪ್ರತಿಕಾಭಾವೇ ಭೂತಪೂರ್ವಗತಿಃ ’** ಎಂಬ ವೈಯಾಕರಣರ ನ್ಯಾಯವನ್ನವಲಂಬಿಸಿ ಈಗ ಉ ಕಾರಾಂತವಲ್ಲದಿದ್ದರೂ ‘ ದು ’ ಲೋಪ ಮಾಡುವುದಕ್ಕೆ ಪೂರ್ವದಲ್ಲಿದ್ದ ಉ ಕಾರಾಂತತ್ವವನ್ನೇ ಅವಲಂಬಿಸಿ ಆದೇಶವನ್ನು ವಿಧಿಸಲು ಆವ ಬಾಧಕವೂ ಇಲ್ಲದಿರುವುದರಿಂದಲೂ ‘ ಅವು, ಇವು ’ ಮೊದಲಾದುವು ಪೂರ್ವಸೂತ್ರಕ್ಕೆ ವಿಷಯವೆಂದು ಹೇಳಬೇಕು. ಆದುದರಿಂದ ಈ ಸೂತ್ರಕ್ಕೆ — ‘ ಎಲ್ಲವು ’ ಎಂಬುದೊಂದೇ ಅಲ್ಲದೆ ಬೇರೆ ಶಬ್ದವು ದೊರೆಯುವುದಿಲ್ಲ. ಇದೂ ಅದ್ವಾದಿಯಾದುದರಿಂದ ಪೂರ್ವದಲ್ಲಿ ಹೇಳಿರುವ ಯುಕ್ತಿಯಿಂದಲೇ ಪೂರ್ವಸೂತ್ರಕ್ಕೆ ವಿಷಯವಾಗಿ ‘ ಎಲ್ಲವಱಂ ’ ಮೊದಲಾದ ರೂಪಗಳು ಸಿದ್ಧಿಸುತ್ತಿರಲು ಈ ಸೂತ್ರವು ನಿಷ್ಪ್ರಯೋಜನವಾದುದರಿಂದ ಅನಾರಂಭಣೀಯವೆಂದು ಹೇಳುವರು.

ಇನ್ನು ಕೆಲವರು — ಅದ್ವಾದಿಯಲ್ಲೆಲ್ಲಾ ಏಕತ್ವಾನೇಕತ್ವ ಸಾಧಾರಣವಾಗಿ ‘ ಅಱು ’ ಎಂಬಾದೇಶವು ಪ್ರವೃತ್ತವಾದರೂ ‘ ಎಲ್ಲ ’ ಶಬ್ದಕ್ಕೆ ಅನೇಕತ್ವದಲ್ಲಿಯೇ ಬರುವುದು; ಏಕತ್ವದಲ್ಲಿ ಬರುವುದಿಲ್ಲ; ಇದಕ್ಕೆ ನಿಯಮಸೂತ್ರತ್ವವನ್ನಂಗೀಕರಿಸಿ ಏಕತ್ವದಲ್ಲಿ — ‘ ಎಲ್ಲಿಂದಂ, ಎಲ್ಲ, ಎಲ್ಲತ್ತಣಿಂ, ಎಲ್ಲಲ್ಲಿ ’ ಎಂಬ ರೂಪಗಳೇ ಆಗುವುವೆಂದು ಹೇಳುವರು. ಇವರ ಮತದಲ್ಲಿ ಅತಿಪ್ರಸಕ್ತಿವಾರಣಾರ್ಥವಾಗಿ — **‘ ಅದ್ವಾದೇಃ ಕಿತ್ || ೨೬೯ || ’** ಎಂಬ ಸೂತ್ರದಲ್ಲಿ ಉ ಕಾರಾನುವೃತ್ತಿಯಾವಶ್ಯಕವೆಂದು ತಿಳಿಯಬೇಕು. ಆದುದರಿಂದ ಇವರ ಮತದಲ್ಲಿ ‘ ಎಲ್ಲ ’ ಶಬ್ದವು ಉ ಕಾರಾಂತವಲ್ಲವೆಂದು ಅನೇಕತ್ವದಲ್ಲಿಯೂ ‘ ಅಱು ’ ಎಂಬಾದೇಶವು ಅಪ್ರಾಪ್ತವಾಗಲು ವಿಧ್ಯರ್ಥವಾಗಿ ಈ ಸೂತ್ರವು ಆರಂಭಣೀಯವೆಂದು ತಿಳಿಯಬೇಕು.

ಯಾರ ಮತದಲ್ಲಿ ಏಕತ್ವದಲ್ಲಿಯೂ ‘ ಅಱು ’ ಎಂಬಾದೇಶವು ಇಷ್ಟವಾಗಿರುವುದೋ ಅವರ ಮತದಲ್ಲಿ ಪೂರ್ವಸೂತ್ರದಲ್ಲಿ ಉ ಕಾರಾನುವೃತ್ತಿಯಿಲ್ಲದೆ ಸರ್ವವೂ ಸಿದ್ಧಿಸುತ್ತಿರಲು ಈ ಸೂತ್ರವು ಅನಾರಂಭಣೀಯವೆಂದೇ ತಿಳಿಯಬೇಕು.

**ಅವತಾರಿಕೆ ೨೭೧**

ಇದುವರೆಗೂ ಸುಪ್ಪು ಪರದಲ್ಲಿರುವಾಗ ಪ್ರಕೃತಿಗೆ ಆಗಮಾದೇಶಗಳು ವಿಧಿಸಲ್ಪಟ್ಟುವು. ಈಗ ಕೆಲವು ಪ್ರತ್ಯಯಗಳಿಗೆ ಆಗಮಾದಿಗಳನ್ನು ವಿಧಿಸುವನಾಗಿ ಮೊದಲು ‘ ಅತ್ತಣಿಮ್ ’ ಪ್ರತ್ಯಯಕ್ಕೆ ವಿಕಲ್ಪವಾಗಿ ‘ ದೆಕ್, ದಮ್ಕ್ ’ ಎಂಬಾಗಮಗಳನ್ನು ವಿಧಿಸುತ್ತಾನೆ.

**ಸೂತ್ರಂ || ವಾತ್ತಣಿಮೋ ದೆಗ್ದಮ್ಕೌ || ೨೭೧ ||**

**ಅರ್ಥ || ಲಿಂಗಕ್ಕೆ ಪರವಾಗಿರುವ ‘ ಅತ್ತಣಿಮ್ ’ ಪ್ರತ್ಯಯಕ್ಕೆ ‘ ದೆಕ್, ದಮ್ಕ್ ’ ಎಂಬ ಆಗಮಗಳು ಅಂತ್ಯಾವಯವಗಳಾಗಿ ವಿಕಲ್ಪದಿಂದ ಬರುವುವು.**

**ಉದಾಹರಣೆ ||** ‘ ಫಲದತ್ತಣಿಂದೆ, ಫಲದತ್ತಣಿಂದಂ, ಫಲದತ್ತಣಿಂ; ಗಿರಿಯತ್ತಣಿಂದೆ, ಗಿರಿಯತ್ತಣಿಂದಂ, ಗಿರಿಯತ್ತಣಿಂ || ’ ಮೊದಲಾದ ಪಂಚಮ್ಯಂತಗಳೆಲ್ಲಾ ಈ ಸೂತ್ರಕ್ಕೆ ಲಕ್ಷ್ಯಗಳೆಂದು ತಿಳಿಯುವುದು.

**ವಿಚಾರ ೨೭೧**

ಈ ಸೂತ್ರದಲ್ಲಿ — ‘ ವಾ, ಅತ್ತಣಿಮಃ, ದೆಗ್ದಮ್ಕೌ ’ ಎಂಬ ಮೂರು ಪದಗಳಿರುವುವು. ‘ ವಾ ’ ಎಂಬುದು ವಿಕಲ್ಪಾರ್ಥಕವು. ‘ ಅತ್ತಣಿಮಃ ’ ಎಂಬುದು **ಪಂಚಮೀವಿಭಕ್ತಿಬೋಧಕ**

ಪಷ್ಠ್ಯಂತಪದವು. ಇದರಿಂದ ಲಿಂಗಾತ್ ಎಂಬುದು – '**ಯಂ ವಿನಾಯನ್ನೋಪಪದ್ಯತೇ ತತ್ತೇನ್ನೈವ ಆಕ್ಷಿಪ್ಯತೇ**' ಎಂಬ ನ್ಯಾಯಾನುಸಾರವಾಗಿ ಲಿಂಗವಿರದೆ 'ಅತ್ತಣಿಂ' ಎಂಬುದು ಇರುವುದಿಲ್ಲ ವಾದುದರಿಂದ ಆಕ್ಷಿಪ್ತವಾಗುವುದು. 'ಅತ್ತಣಿಂ' ಎಂಬುದು ಪ್ರತ್ಯಯಬೋಧಕವಾಗಿದ್ದರೂ ಪಂಚಮ್ಯಂತಕ್ಕೆ ಪರವಾಗಿರುವುದಕ್ಕೆ ಬೋಧೆಯಾಗುವುದರಿಂದ — '**ಪ್ರತ್ಯಯ ಗ್ರಹಣೇಚಾ ಪಂಚಮ್ಯಾಃ**' ಎಂಬ ಪರಿಭಾಷೆಯಿಂದ ಇಲ್ಲಿ ತದಂತಬೋಧಕವಾಗುವುದಿಲ್ಲ. 'ದೆಗ್ದಮ್ಕ್' ಎಂಬುದು 'ದೆಕ್, ದಮ್ಕ್' ಎಂಬಾಗಮಬೋಧಕವಾದುದು. ತಥಾಚ — ಲಿಂಗದ ಮೇಲೆಯಿಂದ ಪರವಾದ 'ಅತ್ತಣಿಂ' ಪ್ರತ್ಯಯಕ್ಕೆ ವಿಕಲ್ಪವಾಗಿ 'ದೆಕ್, ದಮ್ಕ್' ಎಂಬೆರಡು ಆಗಮಗಳು ಅಂತ್ಯಾವಯವಗಳಾಗಿ ಬರುವುವೆಂದು ಸೂತ್ರಾರ್ಥವಾಗುವುದರಿಂದ ಉಭಯತ್ರ ಕಕಾರಗಳಿಗೆ ಇತ್-ಸಂಜ್ಞೆಯಿಂದ ನಿವೃತ್ತಿಯಾಗಲು 'ದೆ, ದಮ್' ಎಂಬಿವು ಬಂದು 'ಫಲದತ್ತಣಿಂದೆ, ಫಲದತ್ತಣಿಂದಂ' ಎಂಬ ರೂಪಗಳು ಸಿದ್ಧಿಸುವುವು. ಇವು ವಿಕಲ್ಪವಾದುದ ರಿಂದ ಬಾರದ ಪಕ್ಷದಲ್ಲಿ 'ಫಲದತ್ತಣಿಂ' ಎಂದಾಗುವುದು. ಹೀಗೆಯೇ ಇತರ ಉದಾಹರಣೆ ಗಳಲ್ಲಿಯೂ ಊಹಿಸಿಕೊಳ್ಳುವುದು.

ಇಲ್ಲಿ **ದರ್ಪಣಕಾರನು** 'ಅತ್' ಎಂಬುದನ್ನು ಪಂಚಮಿಯೆಂದಂಗೀಕರಿಸಿ ಅದಕ್ಕೆ 'ಅತ್ತಣಿಂ' ಮೊದಲಾದ ಆದೇಶವು ಬರುವುದೆಂದು —

> ಅತ್ತಣಿಮೆಂದು ನಿಮಿಚ್ಚರ್ವ
> ರಿತ್ತಮುದೆಂದುನಿರ್ವ ಪಂಚಮಿಯನಲ್ಲಿ ಕೆಲರ್
> ಪತ್ತಿಸುವರ್ ಮೂದೇಜಸಂ
> ಪೆತ್ತ ತೃತೀಯೆಯನೆಕಾರಮಂ ಪರಿಹರಿಪರ್ (ಸೂತ್ರ ೧೧೬)

ಎಂಬ ಸೂತ್ರದಿಂದ ಸೂಚಿಸಿರುವನು. ಶಾಸನದಲ್ಲಾದರೋ 'ಅತ್ತಣಿಂ' ಎಂಬುದೇ ಪಂಚಮೀ ಸ್ವರೂಪವು ಎಂದು ನಿರ್ದೇಶಿಸಿರುವನು. ಇವುಗಳಲ್ಲಿ ಸುಪ್ರಸಿದ್ಧವಾದ 'ಅತ್ತಣಿಂ' ಎಂಬುದನ್ನು ಬಿಟ್ಟು 'ಅತ್' ಎಂದು ನಿರ್ದೇಶಿಸುವುದರಲ್ಲಿ ಕಾರಣವೇನೂ ತೋರುವುದಿಲ್ಲ. ಈ ವ್ಯಾಕರಣ ಶಾಸ್ತ್ರದಲ್ಲಿ ಪ್ರತ್ಯರ್ಥವಾಗಿಯೂ ಕಾರ್ಯಾರ್ಥವಾಗಿಯೂ ಕೆಲವೆಡೆಯಲ್ಲಿ ಕೆಲವು ರೂಪವು ನಿರ್ದೇಶಿಸಲ್ಪಡುವುದು. ಹೇಗೆ ಇದೇ ಶಾಸ್ತ್ರದಲ್ಲಿ 'ದೆಕ್, ಅಚ್, ಕಳುಪ್' ಮೊದಲಾದುವು ಗಳಲ್ಲಿ ಕಕಾರಾದಿ ಇತ್-ಸಂಜ್ಞಾವರ್ಣಗಳು ಪ್ರಯೋಜನಾರ್ಥವಾಗಿ ನಿರ್ದೇಶಿಸಲ್ಪಡುವುವೋ ಹಾಗೆ **ದರ್ಪಣಕಾರನು** ನಿರ್ದೇಶಮಾಡಿದ ಪಂಚಮಿಯು ಎಲ್ಲಾ ಶ್ರೂಯಮಾಣವಾಗುವುದೂ ಇಲ್ಲ. ಇದಕ್ಕೆ ಕಕಾರಾದಿಗಳಿಗೆ ಇರುವಂತೆ ಪ್ರಯೋಜನವೂ ಇರುವುದಿಲ್ಲ. ಆದುದರಿಂದ ಪ್ರಯೋಗದಲ್ಲಿ ಸಾಕ್ಷಾತ್ತಾಗಿ ಶ್ರೂಯಮಾಣವಾಗುವ 'ಅತ್ತಣಿಂ' ಎಂದು ಪ್ರತ್ಯಯಸ್ವರೂಪ ವನ್ನು ಅಂಗೀಕರಿಸುವುದೇ ಉತ್ತಮವೆಂದು ತಿಳಿಯಬೇಕು.

ಹೀಗೆಯೇ ಸಂಸ್ಕೃತವ್ಯಾಕರಣಗಳಲ್ಲಿ **ಪಾಣಿನಿಯು** '**ಕ್ಷತ್ರಾದ್ಘಃ ||೪-೧-೧೩೮||, ಕುಲಾತ್ಖಃ ||೪-೧-೧೩೯||**' ಎಂಬ ಸೂತ್ರಗಳಿಂದ ಘ, ಖಾದಿಗಳಿಗೆ ಲಕ್ಷ್ಯಗಳಲ್ಲಿ ಶ್ರವಣವಿಲ್ಲದಿದ್ದರೂ ಸ್ವಸಂಕೇ ತಿತವಾದ ಘಿತ್ವಖಿತ್ವಾದಿ ಪ್ರಯುಕ್ತ ಕಾರ್ಯಾಂತರಪ್ರವೃತ್ತ್ಯರ್ಥವಾಗಿ ಹಾಗೆ ನಿರ್ದೇಶಮಾಡಿ

ಪಾಠಾಂತರ : ೧ ರತ್ತೆಂದಾಗಿರ್ದ

' ಇಯ, ಇನ ' ಎಂಬಾದೇಶಗಳನ್ನು ವಿಧಿಸಿದ್ದರೂ ಕಾತಂತ್ರದಲ್ಲಿ ಅಂತಹ ಕಾರ್ಯಾಂತರಗಳಾವುದೂ ಸ್ವಮತದಲ್ಲಿ ಇಲ್ಲವಾದುದರಿಂದ ' **ಕ್ಷತ್ರಾದಿಯಃ, ಕುಲಾದಿನಃ** ' ಎಂದು ಪ್ರಯೋಗಗಳಲ್ಲಿರುವ ' ಇಯ, ಇನ ' ಎಂಬಿವನ್ನೇ ಪ್ರತ್ಯಯಸ್ವರೂಪವಾಗಿ ಸ್ವೀಕರಿಸಿರುವನು. ಆದುದರಿಂದ ಇಲ್ಲಿ ' ಅತ್ ' ಎಂಬುದಕ್ಕೆ ಸ್ವಲ್ಪವೂ ಪ್ರಯೋಜನವಿಲ್ಲವೆಂದು **ಶಾಸನಕಾರನು** ' ಅತ್ತಣಿಂ ' ಎಂಬುದನ್ನೇ ಪ್ರತ್ಯಯಸ್ವರೂಪವಾಗಿ ಸ್ವೀಕರಿಸಿರುವನೆಂದು ತಿಳಿಯುವುದು.

**ಅವತಾರಿಕೆ ೨೭೩**

ಹೀಗೆಯೇ ತೃತೀಯೆಗೂ ಆಗಮಗಳನ್ನು ವಿಧಿಸುತ್ತಾನೆ.

**ಸೂತ್ರಂ ॥ ಇಮಃ ॥ ೨೭೩ ॥**

**ಅರ್ಥ ॥ ಲಿಂಗದ ದೆಸೆಯಿಂದ ಪರವಾಗಿರುವ ' ಇಮ್ ' ಎಂಬುದಕ್ಕೆ ' ದೆಕ್, ದಮ್ಕ್ ' ಎಂಬಾಗಮಗಳು ವಿಕಲ್ಪವಾಗಿ ಬರುವುವು.**

**ಉದಾಹರಣೆ ॥** ' ಫಲದಿಂದೆ, ಫಲದಿಂದಂ, ಫಲದಿಂ; ಪೂವಿಂದೆ, ಪೂವಿಂದಂ, ಪೂವಿಂ; ಮಧುವಿನಿಂದೆ, ಮಧುವಿನಿಂದಂ, ಮಧುವಿನಿಂ । ' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೨೭೩**

**ಈ** ಸೂತ್ರದಲ್ಲಿ — ' ಇಮಃ ' ಎಂದೊಂದೇ ಪದವಿರುವುದು. ಪೂರ್ವದಿಂದ ' ದೆಗ್ದಮ್ಕ್ವಾ, ವಾ ' ಎಂದು ಅನುವರ್ತಿಸಲ್ಪಡುವುವು. ಪೂರ್ವದಂತೆ ' ಲಿಂಗಾತ್ ' ಎಂದು ಉಪಸ್ಥಿತವಾಗುವುದು. ತಥಾಚ — ಲಿಂಗದ ದೆಸೆಯಿಂದ ಪರವಾಗಿರುವ ' ಇಮ್ ' ಎಂಬುದಕ್ಕೆ ವಿಕಲ್ಪವಾಗಿ ' ದೆಕ್, ದಮ್ಕ್ ' ಎಂಬಾಗಮಗಳು ಬರುವುವೆಂದು ಸೂತ್ರಾರ್ಥವಾಗುವುದರಿಂದ ' ಫಲದಿಂದೆ ' ಮೊದಲಾದುವು ಸಿದ್ಧಿಸುವುವು. ಇದನ್ನು ಪೂರ್ವಸೂತ್ರದಲ್ಲಿಯೇ ಸೇರಿಸಲು ಲಾಘವವಿದ್ದರೂ ಉತ್ತರ ಸೂತ್ರದಲ್ಲಿ ' ಇಮ್ ' ಎಂಬುದಕ್ಕೇ ಸಂಬಂಧ ಮಾಡಬೇಕಾಗಿರುವುದರಿಂದ ಯೋಗ ವಿಭಾಗವು ಮಾಡಲ್ಪಟ್ಟಿದೆ ಎಂದು ತಿಳಿಯಬೇಕು.

**ಅವತಾರಿಕೆ ೨೭೪**

ಹೀಗೆಯೇ ನಪುಂಸಕಲಿಂಗದಲ್ಲಿ ಅ ಕಾರಾಂತ ಶಬ್ದಕ್ಕೆ ಪರವಾದ ಇಮ್ಮಿಗೆ ಎಕಾರಾದೇಶವನ್ನೂ ಈ ಆಗಮಗಳನ್ನೂ ಪರ್ಯಾಯವಾಗಿ ವಿಧಿಸುತ್ತಾನೆ.

**ಸೂತ್ರಂ ॥ ಎಶ್ಚಾತೋ ನಪಿ ॥ ೨೭೪ ॥**

**ಅರ್ಥ ॥ ಅ ಕಾರಾಂತಲಿಂಗದ ಮುಂದಿರುವ ಇಮ್ಮಿಗೆ ಎ ಕಾರಾದೇಶವೂ ಚ ಕಾರವನ್ನು ಹೇಳಿರುವುದರಿಂದ ' ದೆಕ್, ದಮ್ಕ್ ' ಎಂಬಾಗಮಗಳೂ ನಪುಂಸಕದಲ್ಲಿ ವಿಕಲ್ಪವಾಗಿ ಬರುವುವು.**

**ಉದಾಹರಣೆ ॥** ' ಫಲದೆ, ಫಲದಿಂದೆ, ಫಲದಿಂದಂ, ಫಲದಿಂ; ಮರದೆ, ಮರದಿಂದೆ, ಮರದಿಂದಂ, ಮರದಿಂ ॥ ' ಮೊದಲಾದ ಅ ಕಾರಾಂತ ನಪುಂಸಕಗಳೆಲ್ಲಾ ಇದಕ್ಕೆ ಲಕ್ಷ್ಯಗಳು.

**ವಿಚಾರ ೨೭೪**

ಈ ಸೂತ್ರದಲ್ಲಿ — ' ಎಶ್, ಚ, ಅತಃ, ನಪಿ ' ಎಂದು ನಾಲು ಪದಗಳಿರುವುವು. ಪೂರ್ವದಿಂದ ' ಇಮಃ ' ಎಂಬುದಕ್ಕೂ ಚ ಕಾರದಿಂದ ' ದೆಕ್, ದಮ್ಕ್, ವಾ ' ಎಂಬಿವಕ್ಕೂ ಅನುವೃತ್ತಿ ಬರುವುದು. ಪೂರ್ವದಂತೆ ' ಲಿಂಗಾತ್ ' ಎಂಬುದು ಉಪಸ್ಥಿತವಾಗುವುದು. ಇದಕ್ಕೆ ' ಅತಃ '

ಎಂಬುದನ್ನು ವಿಶೇಷಣ ಮಾಡಲು ತದಂತಲಾಭವುಂಟಾಗಿ ' ಅ ಕಾರಾಂತಾತ್, ಲಿಂಗಾತ್ ' ಎಂದಾಗುವುದು. ' ಎಶ್ ' ಎಂಬುದು ಶಿತ್ತಾದುದರಿಂದ — ' ಶಿತ್ ಸ್ವರಸ್ಯ ' ಎಂಬುದರಿಂದ ಸರ್ವಾದೇಶವಾಗಿ ಬರುವುದೆಂದು ತಿಳಿಯುವುದು. ತಥಾಚ — ಅ ಕಾರಾಂತ ಶಬ್ದಕ್ಕೆ ಪರದಲ್ಲಿ ರುವ ' ಇಮ್ ' ಎಂಬುದಕ್ಕೆ ಎ ಕಾರಾದೇಶವೂ ' ದೆ, ದಮ್ ' ಎಂಬಾಗಮಗಳೂ ವಿಕಲ್ಪವಾಗಿ ಬರುವುವೆಂದು ಸೂತ್ರಾರ್ಥವಾಗುವುದರಿಂದ ' ಫಲದೆ, ಫಲದಿಂದೆ, ಫಲದಿಂದಂ, ಫಲದಿಂ ' ಮೊದಲಾಗಿ ಅ ಕಾರಾಂತ ನಪುಂಸಕಲಿಂಗದಲ್ಲಿ ನಾಲ್ಕು-ನಾಲ್ಕು ರೂಪಗಳಾಗುವುವು. ಇಲ್ಲಿ ' ಅತಃ ' ಎಂದು ಹೇಳಿರುವುದರಿಂದ ' ನದಿಯಿಂದೆ, ನದಿಯಿಂದಂ, ನದಿಯಿಂ ' ಎಂದು ಇ ಕಾರಾಂತಾದಿಗಳಲ್ಲಿ ಎ ಕಾರಾದೇಶವಿಲ್ಲದೆ ಮೂರೇ ರೂಪಗಳಾಗುವುವು. ' ನಪಿ ' ಎಂದು ಹೇಳಿರುವುದರಿಂದ — ' ಜಿನನಿಂದೆ, ಜಿನನಿಂದಂ, ಜಿನನಿಂ ' ಮೊದಲಾದ ಪುಂ-ಸ್ತ್ರೀಲಿಂಗಗಳ ಲ್ಲಿಯೂ ಎ ಕಾರಾದೇಶವಿಲ್ಲವೆಂದು ತಿಳಿಯಬೇಕು.

ಇಲ್ಲಿ ಕೆಲವರು — ' ಅತಃ, ನಪಿ ' ಎಂಬ ವಿಶೇಷಣಗಳನ್ನು ಪ್ರಾಯಿಕಗಳೆಂದಂಗೀಕರಿಸಿ –

ಮುನಿಪತಿಯೆ ಪೇಟಿಕೆವಟ್ಟುದು
ಜನಪತಿಯ ಭವಪ್ರಪಂಚಮುದುಗೇಳ್ದಾತಂ
ಜಿನಪತಿಯಾಸ್ಥಾಯಿಕೆಯೊಳ್
ಮುನಿವೇಷಂದಳೆದನುದಿತನಿರ್ವೇಗಭರಂ

ಎಂಬ ಪದ್ಯದಲ್ಲಿ ' ಮುನಿಪತಿಯೆ ' ಎಂದು ತೃತೀಯೆಗೆ ಎ ಕಾರಾದೇಶವು ಅ ಕಾರಾಂತ ನಪುಂಸಕವಲ್ಲದ್ದಕ್ಕೂ ಬಂದಿರುವುದೆಂದು ಹೇಳಿರುವರು.

ಇಲ್ಲಿ — **ದರ್ಪಣಕಾರನು** —

ಸಮನಿಸಿ ತೋರ್ಪಿಸುಗುಮಿಮಿಂ
ದಮಿಂದೆ ಎಂಬಿವು ತೃತೀಯೆಯೊಳ್ ಮತ್ತನುಕಾ
ರಮುದೊಂದೆಮೇಣ್ ತೃತೀಯೆಗೆ
ಸಮುಚಿತಮಾದೇಶಮುಂದು ಕೊಳ್ಗೀಕ್ರಮದಿಂ *(ಸೂತ್ರ ೧೦೭)*

ಎಂಬ ಸೂತ್ರದಿಂದ ತೃತೀಯೆ ' ಇಮ್, ಇಂದಂ, ಇಂದೆ ' ಎಂದು ಮೂರೆರಮಾಗಿಪ್ಪುದು. ಇವಕ್ಕೆ ಆದೇಶವಾಗಿ ಬೇರೊಂದು ಎ ಕಾರವು ಸಮುಚಿತನಾಗಿ ಬರುವುದೆಂದು ಹೇಳಿದ್ದರಿಂದ ಪ್ರಯೋಗಾನುಸಾರವಾಗಿ ಲಿಂಗ, ಅಂತ ವ್ಯವಸ್ಥೆಗಳನ್ನೂ ಮಾಡಿಕೊಳ್ಳುವುದು.

**ಅವತಾರಿಕೆ ೨೭೪**

ಹೀಗೆಯೇ ಚತುರ್ಥಿಯ ಗೆ ಎಂಬುದರ ಗ ಕಾರಕ್ಕೆ ಕಾದೇಶವನ್ನು ವಿಧಿಸುತ್ತಾನೆ.

**ಸೂತ್ರಂ || ಗೆತಃ ಕ ಆದೇಃ || ೨೭೪ ||**

**ಅರ್ಥ ||** ಅ ಕಾರಾಂತ ಶಬ್ದದ ಮುಂದಿರುವ ಗೆತ್-ಪ್ರತ್ಯಯದ ಆದಿಯ ವರ್ಣಕ್ಕೆ ನಪುಂಸಕಲಿಂಗದಲ್ಲಿ ನಿತ್ಯವಾಗಿ ಕ ಕಾರಾದೇಶವು ಬರುವುದು.

**ಉದಾಹರಣೆ ||** ' ನೆಲಕೆ, ಪೊಲಕೆ, ಫಲಕೆ, ಪುಷ್ಪಕೆ || ' ಮೊದಲಾದ ಅ ಕಾರಾಂತ ನಪುಂಸಕಗಳು ಇದಕ್ಕೆ ಲಕ್ಷ್ಯಗಳು.

**ವಿಚಾರ ೨೭೪**

ಈ ಸೂತ್ರದಲ್ಲಿ — 'ಗೆತಃ, ಕಃ, ಆದೇಃ ಎಂದು ಮೂರು ಪದಗಳಿರುವುವು. ಪೂರ್ವಸೂತ್ರದಿಂದ 'ಅತಃ, ನಪಿ' ಎಂದು ಅನುವರ್ತಿಸಲ್ಪಡುವುದು. 'ಅತಃ' ಎಂಬುದು 'ಗೆತಃ' ಎಂಬ ಪ್ರತ್ಯಯದಿಂದ ಆಕ್ಷಿಪ್ತವಾದ 'ಲಿಂಗಾತ್' ಎಂಬುದಕ್ಕೆ ವಿಶೇಷಣವನ್ನು ಮಾಡಲು ತದಂತಬೋಧಕವಾಗುವುದು. 'ಗೆತಃ' ಎಂಬ ಷಷ್ಠ್ಯಂತವು ಅವಯವಾವಯವಿಭಾವಸಂಬಂಧದಿಂದ 'ಆದೇಃ' ಎಂಬುದಕ್ಕೆ ವಿಶೇಷಣವು. 'ಆದೇಃ' ಎಂಬುದು ಸ್ಥಾನಷಷ್ಠ್ಯಂತಪದವು. 'ಕಃ' ಎಂಬುದು ಅ ಕಾರರಹಿತ ಕ ಕಾರ ಮಾತ್ರಬೋಧಕ ವಿಧೇಯವಾಚಕವು. 'ವಾ' ಎಂಬುದಕ್ಕೆ ಅನುವೃತ್ತಿ ಇಲ್ಲವಾದುದರಿಂದ ನಿತ್ಯವೆಂದು ತಿಳಿಯುವುದು. ತಥಾಚ — ಅ ಕಾರಾಂತ ಲಿಂಗದ ಮುಂದಿನ ಗೆತ್-ಪ್ರತ್ಯಯದ ಮೊದಲನೆಯ ವರ್ಣಕ್ಕೆ ಎಂದರೆ ಗ ಕಾರಕ್ಕೆ ಕ ಕಾರಾದೇಶವು ನಿತ್ಯವಾಗಿ ಬರುವುದೆಂದು ಸೂತ್ರಾರ್ಥವಾಗಲು 'ಫಲಕೆ' ಮೊದಲಾದುವು ಸಿದ್ಧಿಸುವುವು. ಇಲ್ಲಿ 'ಅತಃ' ಎಂದು ಹೇಳಿರುವುದರಿಂದ 'ಜಿರಿಗೆ, ಗಿಡುಗೆ' ಮೊದಲಾದ ಇ ಕಾರಾದ್ಯಂತಗಳಲ್ಲಿಯೂ 'ನಪಿ' ಎಂದು ಹೇಳಿರುವುದರಿಂದ 'ಜಿನಂಗೆ, ಅಕ್ಕಂಗೆ' ಮೊದಲಾದ ಪುಂ-ಸ್ತ್ರೀಲಿಂಗಗಳಲ್ಲಿಯೂ ಕ ಆದೇಶವಿಲ್ಲವೆಂದು ತಿಳಿಯುವುದು.

ಇಲ್ಲಿ ಕೆಲವರು — 'ನೆಲಕೆ, ಪೊಲಕೆ, ಫಲಕೆ, ಪುಷ್ಪಕೆ, ಆತಂಗೆ, ಈತಂಗೆ' ಮೊದಲಾದ ಪ್ರಯೋಗಗಳಲ್ಲಿ ಕೆಲವೆಡೆ ಕ ಕಾರವೂ ಕೆಲವೆಡೆ ಗ ಕಾರವೂ ಶ್ರೂಯಮಾಣವಾಗುವುದು ನಿರ್ವಿವಾದವಾಗಿರುವುದು. ಹೀಗಿರಲು —**ದರ್ಪಣಕಾರ**ನು ಕ ಕಾರವನ್ನೇ ಪ್ರತ್ಯಯಾವಯವವನ್ನಾಗಿ ಅಂಗೀಕರಿಸಿ ಕ್ವಚಿತ್ ಅದಕ್ಕೆ ಗ ಕಾರಾದೇಶವನ್ನು ವಿಧಿಸುವನು. **ಶಾಸನಕಾರ**ನಾದರೂ ಇದಕ್ಕೆ ವಿಪರೀತವಾಗಿ ಹೇಳಿರುವನು. ಇವರಲ್ಲಿ ಆವುದನ್ನು ಅಂಗೀಕರಿಸುವುದುಚಿತವೆಂದು ಶಂಕಿಸುವರು. ಆದರೆ — ಪ್ರಯೋಗಗಳಲ್ಲಿ ಉಭಯವರ್ಣಗಳೂ ಶ್ರೂಯಮಾಣವಾಗಿರುವುವು. ಅವುಗಳಲ್ಲಿ ಒಂದು ಪ್ರಕೃತವೆಂದೂ ಇನ್ನೊಂದು ವಿಕೃತವೆಂದೂ ಅಂಗೀಕರಿಸತಕ್ಕದ್ದು. ಅದರಲ್ಲಿ ಅ ಕಾರಾಂತ ನಪುಂಸಕಲಿಂಗಮಾತ್ರದಲ್ಲಿಯೂ ವಿಕೃತ 'ಉ' ಶಬ್ದದಲ್ಲಿಯೂ ಕ ಕಾರದ ಶ್ರವಣವಾಗುವುದು. ಉಳಿದ ಸ್ವರಾಂತ ವ್ಯಂಜನಾಂತಗಳಲ್ಲಿ ಲಿಂಗತ್ರಯದಲ್ಲಿಯೂ ಗ ಕಾರದ ಶ್ರವಣವಾಗುವುದು. ಇವರಲ್ಲಿ ಗ ಕಾರವು ವ್ಯಾಪಕವಾಗಿಯೂ ಕ ಕಾರವು ವ್ಯಾಪ್ತವಾಗಿಯೂ ಇರುವುದರಿಂದ ವ್ಯಾಪಕವು ಪ್ರಕೃತವೆಂದೂ ವ್ಯಾಪ್ಯವು ವಿಕೃತವೆಂದೂ ಹೇಳುವುದು ನ್ಯಾಯವಾದುದರಿಂದ ಇಲ್ಲಿ ಗ ಕಾರವನ್ನೇ ಪ್ರಕೃತಿಯಾಗಿಟ್ಟು ಕ ಕಾರವನ್ನು ಅದಕ್ಕೆ ವಿಕೃತವಾಗಿಟ್ಟು ಕೊಂಡಿರುವನೆಂದು ತಿಳಿಯಬೇಕು. ಫಲವಲ್ಲಿ ಐಕ್ಯವಿರುವುದರಿಂದ **ದರ್ಪಣ-ಶಾಸನ**ಗಳಿಗೆ ಇಲ್ಲಿ ವಿರೋಧವೇನೂ ತೋರುವುದಿಲ್ಲ.

**ಅವತಾರಿಕೆ ೨೭೫**

ಹೀಗೆಯೇ ಪ್ರಕೃತಿವಿಶೇಷದಿಂದ ಪರವಾಗಿರುವ ಗೆತ್-ಪ್ರತ್ಯಯದ ಗ ಕಾರಕ್ಕೂ 'ಕ' ಆದೇಶವು ಬರುವುದೆಂದು ಹೇಳುತ್ತಾನೆ.

**ಸೂತ್ರಂ ॥ ಉೋರ್ವಿಕೃತಾತ್ ॥ ೨೭೫ ॥**

**ಅರ್ಥ ॥ ವಿಕೃತವಾದ 'ಉ' ಶಬ್ದಾಂತ ಶಬ್ದದಿಂದ ಪರವಾಗಿರುವ ಗೆತ್-ಪ್ರತ್ಯಯದ ಗ ಕಾರಕ್ಕೆ ಕ ಕಾರಾದೇಶವು ಬರುವುದು.**

**ಉದಾಹರಣೆ** || ' ಮಾಲ್ದುದರ್ಕ್ಕೆ, ಬೇಲ್ದುದರ್ಕ್ಕೆ, ಅವರ್ಕ್ಕೆ, ಇವರ್ಕ್ಕೆ, ಏತರ್ಕ್ಕೆ, ಆವುದರ್ಕ್ಕೆ || ' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೨೭೫**

ಈ ಸೂತ್ರದಲ್ಲಿ — ' ಉಕೋಃ, ವಿಕೃತಾತ್ ' ಎಂದು ಎರಡು ಪದಗಳಿರುವುವು. ಪೂರ್ವ ದಿಂದ ' ಗೇಃ, ಕಃ, ಆದೇಃ ' ಎಂದು ಅನುವರ್ತಿಸಲ್ಪಡುವುವು. ' ಉಕೋಃ ' ಎಂಬುದು ಪಂಚಮ್ಯಂತವಾದುದರಿಂದ ಇದಕ್ಕೆ ' ವಿಕೃತಾತ್ ' ಎಂಬುವನ್ನು ವಿಶೇಷಣ ಮಾಡುವುದು. ' ವಿಕೃತಾತ್ ' ಎಂದರೆ — ಪ್ರಾಕೃತಕ್ಕೆ ಬೇರೆಯಾದುದು — ಎಂದರೆ ' ಆದಿಷ್ಟಾದಿ ' ಎಂದು ತಿಳಿಯಬೇಕು. ವಿಚಾರಮಾಡಲು 'ಉ' ಎಂಬುದು ಈ ಶಾಸ್ತ್ರದಲ್ಲಿ ಆದಿಷ್ಟವಾಗಿಲ್ಲವಾದುದರಿಂದ ವಿಕೃತಾತ್ ' ಉ ಶಬ್ದಾತ್ ' ಎಂದು ಸಾಮಾನಾಧಿಕರಣ್ಯೇನಾನ್ವಯವು ಕೂಡುವುದಿಲ್ಲವೆಂದು ತೋರುವುದು. ಆದಾಗ್ಯೂ ಹೇಗೆ ಲೋಕದಲ್ಲಿ ಶಿಖೆಯು ಧ್ವಂಸವಾಗಲು ' **ಶಿಖೀ ಧ್ವಸ್ತಃ** ' ಎಂಬ ವ್ಯವಹಾರವಿರುವುದೋ ಹಾಗೆ ಪಟದ ಒಂದು ಭಾಗವು ಸುಟ್ಟುಹೋದರೂ ' **ಪಟೋ ದಗ್ಧಃ** ' ಎಂದು ವ್ಯವಹಾರವಿರುವುದೋ ಹಾಗೆ '**ತದೇಕದೇಶಸ್ತದ್ವದ್ ಭವತಿ**' ಎಂಬ ನ್ಯಾಯದಿಂದ '**ಅಉ**' ಎಂಬಾದೇಶದ ಏಕದೇಶವಾದ ' ಉ ' ಎಂಬುದೂ ಆದಿಷ್ಟವಾಗಿರುವುದೆಂದು — ವಿಕೃತವಾದ ' ಉ ' ಶಬ್ದವೆಂದು ಸಾಮಾನಾಧಿಕರಣ್ಯದಿಂದ ಅನ್ವಯವು ಉಪಪನ್ನವಾಗುವುದೆಂದು ತಿಳಿಯಬೇಕು. ಹೀಗೆ ಹೇಳಲು ವಿಕೃತವಾದ ' ಉ ' ಶಬ್ದವು ' ಅಉ ' ಎಂಬುದರ ಅವಯವವಾಗಿರುವುದಲ್ಲದೆ ಬೇರೆ ಇಲ್ಲ. ಆದುದರಿಂದ ' **ಅಉಕೋಃ** ' ಎಂದೇ ಸೂತ್ರವನ್ನು ಮಾಡಲು ಲಘುವಾಗಿರುವುದೆಂದು ಕೆಲವರು ಶಂಕಿಸುವರು. ಆದರೆ ' ಕಉ, ನೇಸಅು ' ಮೊದಲಾದ ಶಬ್ದಗಳಲ್ಲಿಯೂ ' ಅಉ ' ಎಂಬುದು ಇರುವುದರಿಂದ ಅಲ್ಲಿ ಅತಿಪ್ರಸಕ್ತಿಯುಂಟಾಗಲು ತದ್ವಾರಣಾರ್ಥವಾಗಿ — ' **ಅರ್ಥವದ್ಗ್ರಹಣೇನಾನರ್ಥಕಸ್ಯ | ವ್ಯಾಖ್ಯಾನತೋ ವಿಶೇಷ ಪ್ರತಿಪತ್ತಿರ್ನ ಹಿ ಸಂದೇಹಾದಲಕ್ಷಣಂ** ' ಎಂಬ ನ್ಯಾಯಗಳನ್ನು ಅನುಸರಿಸುವುದರಿಂದ ಗೌರವವುಂಟಾಗುವುದೆಂದು ಹಾಗೆ ಮಾಡದೆ ' **ಉಕೋರ್ವಿಕೃತಾತ್** ' ಎಂದೇ ಸೂತ್ರಕಾರರು ಸೂತ್ರವನ್ನು ಮಾಡಿರುವರೆಂದು ತಿಳಿಯಬೇಕು. ಇನ್ನೂ ಕೆಲವರು — ವಿಕೃತವಾದ ' ಉ ' ಶಬ್ದವೆಂದರೆ ವಿಕಾರಕ್ಕೆ ಯೋಗ್ಯವಾದ 'ಉ' ಶಬ್ದವೆಂದು ಹೇಳಿ ಎಲ್ಲಿ — '**ಉದೋದೋರ್ರಲು ವ್ಯಂಜನೇ || ೮೨ ||**' ಎಂಬ ಸೂತ್ರದಿಂದ ' ಉ ' ಸ್ಥಾನದಲ್ಲಿ ಆದಿಷ್ಟವಾದ ರೇಫಕ್ಕೆ ಗ್ರಹಣವೆಂದು ಹೇಳುವರು, ಅವರ ಮತದಲ್ಲಿಯೂ ' ನೇಸಉ ' ಮೊದಲಾದುವುಗಳಲ್ಲಿ ಅತಿಪ್ರಸಕ್ತಿಯುಂಟಾಗುವುದೆಂದು ಯಥೋಕ್ತಾರ್ಥವನ್ನಂಗೀಕರಿಸುವುದೇ ಉಚಿತವೆಂದು ತಿಳಿಯಬೇಕು. ತಥಾಚ — ವಿಕೃತಾವಯವ ' ಉ ' ಶಬ್ದದಿಂದ ಪರವಾಗಿರುವ ಗೇತ್-ಪ್ರತ್ಯಯದ ಗ ಕಾರಕ್ಕೆ ಕ ಕಾರಾದೇಶವು ಬರುವುದೆಂದು ಸೂತ್ರಾರ್ಥವಾಗಲು ' ಮಾಲ್ದುದರ್ಕ್ಕೆ ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು. ಇಲ್ಲಿ ' ಆವುದು ' ಶಬ್ದಕ್ಕೆ ನಪುಂಸಕದಲ್ಲಿ ಚತುರ್ಥಿಯನ್ನು ಮಾಡಿದರೆ ' ಆವುದರ್ಕ್ಕೆ, ಏತರ್ಕ್ಕೆ, ಏಕೆ ' ಎಂದು ಮೂರು ರೂಪಗಳು ಸಂಭವಿಸುವುವು. ಇವುಗಳಲ್ಲಿ ಮೊದಲಿನ ಎರಡಕ್ಕೂ ' ಅಉ ' ಎಂಬಾದೇಶವು ಬರುವುದರಿಂದ ಕಾದೇಶವೂ ಬರುವುದು. ' ಏಕೆ ' ಎಂಬುದರಲ್ಲಿ ನಿಮಿತ್ತವೇ ಇಲ್ಲವಾದುದರಿಂದ ಕಾದೇಶವು ಹೇಗೆ ಬರುವುದೆಂದರೆ ' **ಕೆಕ್ಕೇಚ್ಚ || ೧೭೭ ||** ' ಎಂಬ ಸೂತ್ರದಲ್ಲಿ ಚತುರ್ಥಿಯನ್ನು ನಿಮಿತ್ತನಾಗಿ ಹೇಳಿ ' ಆವುದು ' ಶಬ್ದಕ್ಕೆ ಏ ಕಾರಾ

ದೇಶವನ್ನು ವಿಧಿಸಿರುವ ಸಾಮರ್ಥ್ಯದಿಂದ ನಿಮಿತ್ತವಲ್ಲದಿದ್ದರೂ ಕಾದೇಶವು ಬಂದಿರುವುದೆಂದು ತಿಳಿಯಬೇಕು. ಮತ್ತು ಇಲ್ಲಿ ವಿಚಾರ ಮಾಡಲು 'ಆವುದು' ಶಬ್ದಕ್ಕೆ ಮೊದಲು '**ಅದ್ವಾದೇಃ ಕಿತ್ ॥ ೨೬೯ ॥**' ಎಂಬ ಸೂತ್ರದಿಂದ 'ಅಱು' ಎಂಬಾದೇಶವನ್ನು ಮಾಡಲು ಅನಂತರದಲ್ಲಿ ಗೆತ್-ಪ್ರತ್ಯಯದ ಗ ಕಾರಕ್ಕೆ ಕಾದೇಶವನ್ನು ಮಾಡಿ ಅನಂತರದಲ್ಲಿ ಏ ಕಾರಾದೇಶವನ್ನು ಮಾಡಲು ಅದಕ್ಕೆ ಕಿತ್ತ್ವವಿಲ್ಲವಾದುದರಿಂದ ಸರ್ವಾದೇಶವಾಗಲು ಅಱುವಿಗೂ ಬಂದಂತೆ ಆಗುವುದು. ಆದುದರಿಂದ 'ಏ' ಎಂಬುದು ಅಱುವಿನಂತೆ ಅವಯುವವೆಂದು ಹೇಳಲು ಅಶಕ್ಯವಾಗಿರುವುದು. ಆದಾಗ್ಯೂ '**ಕೆತ್ಯೇಚ್ಚ ॥ ೧೭೭ ॥**' ಎಂಬ ಸೂತ್ರದಲ್ಲಿ ಚ ಕಾರದಿಂದ 'ಆವುದು' ಶಬ್ದಕ್ಕೆ 'ಅಱು' ಎಂಬಾದೇಶವು ಅವಶ್ಯಕವಾಗಿ ಬರುವುದು, ಅದರಂತೆ 'ಏ' ಎಂಬುದಕ್ಕೂ ಪ್ರಸಕ್ತವಾಗುವುದು. ಆದರೆ 'ಏತಃ' ಎಂಬುದಕ್ಕೆ ಉದಂತತ್ವವಿರುವುದರಿಂದ 'ಅಱು' ಎಂಬ ಆದೇಶವು ಪ್ರಸಕ್ತವಾದರೂ 'ಏ' ಎಂಬುದಕ್ಕೆ ಪ್ರಸಕ್ತವಾಗುವುದಿಲ್ಲವೆಂದು ಹೇಳಲು ಆ ಸೂತ್ರದಲ್ಲಿ 'ಉತಃ' ಎಂಬುದು ಅನಾವಶ್ಯಕವೆಂದು ಹೇಳಿರುವುದರಿಂದ ಆಗುವುದಿಲ್ಲ. ಒಂದು ವೇಳೆ ಮತಭೇದದಿಂದ ಅಲ್ಲಿ 'ಉತಃ' ಎಂಬುದಕ್ಕೆ ಸಂಬಂಧಮಾಡಿದರೂ ಈಗ ಉದಂತತ್ವ ವಿಲ್ಲದಿದ್ದರೂ ಪೂರ್ವದಲ್ಲಿದ್ದ ಉದಂತತ್ವಬುದ್ಧಿಯಿಂದ 'ಅಱು' ಎಂಬಾದೇಶವು ಬರಲು ಅನಿಷ್ಟರೂಪವೇ ಪ್ರಸಕ್ತವಾಗುವುದು. ಆದುದರಿಂದ ನಿರ್ದೇಶಸಾಮರ್ಥ್ಯದಿಂದಲೇ ಕಾದೇಶವು ಬಂದು 'ಏಕೆ' ಎಂದಾಗಿರುವುದೆಂದು ಹೇಳಬೇಕು. ಹೀಗೆ ಉಕ್ತಯುಕ್ತಿಯಿಂದ ಕಾದೇಶವನ್ನು ಸಾಧಿಸಿದರೂ ಏ ಕಾರಕ್ಕೆ ಅದ್ವಾದಿತ್ವವಿರುವುದರಿಂದ ಪ್ರಾಪ್ತವಾದ 'ಅಱು' ಎಂಬಾದೇಶವು 'ಏತಕ್ಕೆ' ಬರುವುದಿಲ್ಲ ? ಇದು ಅದ್ವಾದಿಗೆ ಆದಿಷ್ಟವಾದುದರಿಂದ ಬರುವುದಿಲ್ಲವೆನ್ನುವ ಪಕ್ಷದಲ್ಲಿ 'ಏತು' ಎಂಬುದೂ ಆದಿಷ್ಟವಾದುದರಿಂದ ಅದಕ್ಕೂ ಬಾರದೇ 'ಏತರ್ಕೆ' ಎಂಬ ರೂಪವು ಆಗದೆ ಹೋಗುವುದು ಎಂದರೆ, ಇದರಲ್ಲಿ ವಿಶೇಷವಿರುವುದು, ಏನೆಂದರೆ ಏ ಕಾರಕ್ಕೂ 'ಏತು' ಎಂಬುದಕ್ಕೆ ಮಾಡುವಂತೆ 'ಅಱು' ಎಂಬಾದೇಶವನ್ನು ಮಾಡುವ ಪಕ್ಷದಲ್ಲಿ ಇಲ್ಲಿಯೂ '**ಅೋರ್ವಿಕೃತಾತ್ ॥ ೨೭೫ ॥**' ಎಂಬ ಸೂತ್ರದಿಂದಲೇ ಕಾದೇಶವು ಸಿದ್ಧವಾಗುತ್ತಿರಲು 'ಕೆತ್ಯೇಚ್ಚ' ಎಂದು ಕ ಕಾರೋಚ್ಚಾರಣವು ನಿರರ್ಥಕವೇ ಆಗುವುದು. ಆದುದರಿಂದ ಇಲ್ಲ ಅನಿಮಿತ್ತಕವಾಗಿ ನಿರ್ದೇಶದಿಂದಲೇ ಸಿದ್ಧವಾದ ಕಾದೇಶವನ್ನು ನಿಮಿತ್ತ ಮಾಡಿಕೊಂಡು ಏ ಕಾರಾದೇಶವನ್ನು ಮಾಡುವುದರಿಂದ ಇಲ್ಲ 'ಅಱು' ಎಂಬಾದೇಶವಿಲ್ಲವೆಂದು ತಿಳಿಯಲ್ಪಡುವುದು.

ಆದರೆ ಈ ವಿಚಾರವೆಲ್ಲಾ ಬುದ್ಧಿವಿಕಾಸಾರ್ಥವಾಗಿ ಮಾಡಿರುವುದೇ ಅಲ್ಲದೇ ಸಿದ್ಧಾಂತದಲ್ಲಿ ಅನಭಿಧಾನರೂಪಪ್ರಮಾಣದಿಂದ 'ಏಕೆ' ಎಂಬಲ್ಲಿ 'ಅಱು' ಎಂಬಾದೇಶವಿಲ್ಲವೆಂದೂ ಏ ಕಾರದ ಮುಂದಿರುವ ಗೆತ್-ಪ್ರತ್ಯಯದ ಗ ಕಾರಕ್ಕೆ ಕಾದೇಶವು ಪ್ರಾಚೀನಪ್ರಯೋಗಬಲದಿಂದಲೂ ಎಂದು ಊಹಿಸಿಕೊಳ್ಳಬೇಕು. ಈ ಸೂತ್ರದಲ್ಲಿ 'ಜಿಸೋಃ' ಎಂದು ಹೇಳಿರುವುದರಿಂದ 'ಮೂಡಣ್ಗೆ, ಪಡುವಣ್ಗೆ' ಮೊದಲಾದುವುಗಳಲ್ಲಿಯೂ 'ವಿಕೃತಾತ್' ಎಂದು ಹೇಳಿರುವುದರಿಂದ — 'ಕಱುಗೆ, ಕುಱುಗೆ' ಮೊದಲಾದುವುಗಳಲ್ಲಿಯೂ ಬರುವುದಿಲ್ಲವೆಂದು ತಿಳಿಯಬೇಕು.

**ಅವತಾರಿಕೆ ೨೭೬**

ಹೀಗೆಯೇ ನಪುಂಸಕಲಿಂಗದಲ್ಲಿ ಅಕಾರಾಂತ ಶಬ್ದಕ್ಕೆ ಪರವಾದ ಗೆತ್-ಪ್ರತ್ಯಯಕ್ಕೆ ಕುಗಾಗಮವನ್ನು ವಿಕಲ್ಪವಾಗಿ ವಿಧಿಸುತ್ತಾನೆ.

**ಸೂತ್ರಂ || ಕುಗ್ವಾ || ೨೭೬ ||**

**ಅರ್ಥ ||** ನಪುಂಸಕದಲ್ಲಿ ಅ ಕಾರಾಂತ ಶಬ್ದಕ್ಕೆ ಪರದಲ್ಲಿರುವ ಗೆತ್-ಪ್ರತ್ಯಯದ ಮೊದಲನೆಯ ವರ್ಣಕ್ಕೆ ಕುಗಾಗಮವು ವಿಕಲ್ಪವಾಗಿ ಬರುವುದು. ಎಂದರೆ ಪೂರ್ವಸೂತ್ರದಿಂದ ಪ್ರಾಪ್ತವಾದ ಕ ಆದೇಶಕ್ಕೆ ಅಂತ್ಯಾವಯವವಾಗಿ ಕ ಕಾರಾಂತರವು ಬರುವುದೆಂದರ್ಥವು. ಇದರಿಂದ ಕ ಕಾರಕ್ಕೆ ವಿಕಲ್ಪವಾಗಿ ದ್ವಿತ್ವವು ಬರುವುದೆಂದು ತಾತ್ಪರ್ಯವಾಗುವುದು.

**ಉದಾಹರಣೆ ||** ಮರಕ್ಕೆ, ಮರಕೆ; ಫಲಕ್ಕೆ, ಫಲಕೆ; ಪುಷ್ಪಕ್ಕೆ, ಪುಷ್ಪಕೆ || ಮೊದಲಾದ ಅ ಕಾರಾಂತ ನಪುಂಸಕಲಿಂಗಗಳೆಲ್ಲಾ ಇದಕ್ಕೆ ಲಕ್ಷ್ಯಗಳು.

**ವಿಚಾರ ೨೭೬**

ಈ ಸೂತ್ರದಲ್ಲಿ — 'ಕುಕ್, ವಾ' ಎಂದು ಎರಡು ಪದಗಳಿರುವುವು. ಪೂರ್ವದಿಂದ 'ಅತಃ, ಗೆತಃ, ಆದೇಃ, ನಪಿ' ಎಂಬಿವು ಅನುವರ್ತಿಸಲ್ಪಡುವುವು. 'ಕುಕ್' ಕಿತ್ ಆದುದರಿಂದ ಆಗಮವೆಂದು ತಿಳಿಯುವುದು. ಉಳಿದುವನ್ನು ಪೂರ್ವದಂತೆ ಸಂಬಂಧಿಸುವುದು. ಆದುದರಿಂದ — ನಪುಂಸಕದಲ್ಲಿ ಅ ಕಾರಾಂತ ಶಬ್ದಕ್ಕೆ ಪರದಲ್ಲಿರುವ ಗೆತ್-ಪ್ರತ್ಯಯದ ಆದಿವರ್ಣಕ್ಕೆ ವಿಕಲ್ಪವಾಗಿ ಕುಗಾಗಮವು ಬರುವುದು ಎಂದು ಸೂತ್ರಾರ್ಥವಾಗಲು ಆಗಾಮಾದೇಶಗಳಿಗೆ ವಿರೋಧವಿಲ್ಲದಿರುವುದರಿಂದ ಏಕವಿಷಯಕವಾಗಿದ್ದರೂ ಪೂರ್ವಸೂತ್ರದಿಂದ ಕ ಆದೇಶವೂ ಈ ಸೂತ್ರದಿಂದ ಕ ಕಾರಾಗಮವೂ ಬಂದು 'ಮರಕ್ಕೆ, ಫಲಕ್ಕೆ' ಮೊದಲಾದ ರೂಪಗಳು ಸಿದ್ಧಿಸುವುವು. ಇದು ವಿಕಲ್ಪವಾದುದರಿಂದ ಬಾರದ ಪಕ್ಷದಲ್ಲಿ ಕ ಆದೇಶವು ಒಂದೇ ಬಂದು 'ಮರಕೆ' ಮೊದಲಾದ ರೂಪಗಳಾಗುವುವು. ಇಲ್ಲಿ **ದರ್ಪಣಕಾರನು** 'ಕೆ' ಎಂಬುದನ್ನೇ ಪ್ರತ್ಯಯವನ್ನಾಗಿ ಅಂಗೀಕರಿಸಿ, ಅದಕ್ಕೆ ಕೆಲವೆಡೆಯಲ್ಲಿ ಗತ್ವವನ್ನೂ ದ್ವಿತ್ವವನ್ನೂ ಅಂಗೀಕರಿಸಿ —

> ಒದವುವುದದಂತವುಲ್ಲಿಂ
> ಗದೊಳ್ ಗೆಯೆಂದಾದಿದಿಂದುವಿಂ ದ್ವಿತ್ವಂ ಮೇ
> ಳೊದವುವುದು ನಪುಂಸಕಲಿಂ
> ಗದೊಳ್ ಚತುರ್ಥಿಗೆ ಗೆಯಕ್ಕುಮುಳಿದೆಡೆಗೆಲ್ಲಂ (ಸೂತ್ರ ೧೧೪)

ಎಂಬ ಸೂತ್ರವನ್ನು ಹೇಳಿ — 'ಸಮಾಸಮಿಲ್ಲದೆಯುಂ, ಸಮಾಸಲಕ್ಷಣಮಂ ಪೊಕ್ಕ ಚತುರ್ಥಿಗೆ ತೃತೀಯತ್ವವಿಲ್ಲ'ವೆಂದು —

> ಅಮರ್ದಿರದು ತೃತೀಯತ್ವಂ
> ಸಮಾಸವದ್ಭಾವಮಾದಕಾಣದೊಳೆಲ್ಲಂ
> ಸಮಸಂದ ಚತುರ್ಥಿಗೆ ಕಾ
> ವ್ಯಮಾರ್ಗದೊಳ್ ಲಕ್ಷ್ಯಮುಂಟು ಕಾಣಿ ಕೆಱದಿಂ (ಸೂತ್ರ ೧೧೫)

ಎಂಬ ಸೂತ್ರದಿಂದ ಸೂಚಿಸಿರುವನು.

**ಅವತಾರಿಕೆ ೨೭೭**

ಹೀಗೆಯೇ ಪ್ರಕೃತಿಸಾಮಾನ್ಯದಿಂದ ಪರವಾಗಿರುವ ಸಪ್ತಮಿಗೂ ಆದೇಶವನ್ನು ವಿಧಿಸುತ್ತಾನೆ.

**ಸೂತ್ರಂ ||ಒಳಃ ಶಲ್ಲಿಃ || ೨೭೭ ||**

**ಅರ್ಥ || ಲಿಂಗದ ದೆಸೆಯಿಂದ ಪರವಾಗಿರುವ ಒಳ್-ಪ್ರತ್ಯಯಕ್ಕೆ ' ಶಲ್ಲಿ ' ಎಂಬ ಆದೇಶವು ವಿಕಲ್ಪವಾಗಿ ಬರುವುದು.**

**ಉದಾಹರಣೆ** || ' ಮನೆಯಲ್ಲಿ, ಮನೆಯೊಳ್; ಗೃಹದಲ್ಲಿ, ಗೃಹದೊಳ್; ಕಲ್ಲಲ್ಲಿ. ಕಲ್ಲೊಳ್; ಕುರುಳ್ಗಳಲ್ಲಿ, ಕುರುಳ್ಗಳೊಳ್; ಕೇಶಂಗಳಲ್ಲ, ಕೇಶಂಗಳೊಳ್ || ' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೨೭೭**

ಈ ಸೂತ್ರದಲ್ಲಿ ' ಒಳಃ, ಶಲ್ಲಿಃ ' ಎಂದು ಎರಡು ಪದಗಳಿರುವುವು. ' ಒಳಃ ' ಎಂಬುದು ಸಪ್ತಮೀವಿಭಕ್ತಿಪ್ರತ್ಯಯಬೋಧಕವಾದ ಸ್ಥಾನಷಷ್ಠ್ಯಂತ ಪದವು. ' ಶಲ್ಲಿಃ ' ಎಂಬುದು ಶಕಾರೇತ್ಸಂಜ್ಞಕವಾದ ' ಅಲ್ಲಿ ' ಎಂಬ ಆದೇಶಬೋಧಕ ಪದವು. ಇದು ಶಿತ್ತಾದುದರಿಂದ ಸರ್ವಾದೇಶವಾಗಿ ಬರುವುದು. ' ಲಿಂಗಾತ್ ' ಎಂಬುದು ಆಕ್ಷಿಪ್ತವಾಗುವುದು. ' ವಾ ' ಎಂಬುದು ಅನುವರ್ತಿಸಲ್ಪಡುವುದು. ತಥಾಚ — ಲಿಂಗಸಂಜ್ಞಕ ಶಬ್ದಕ್ಕೆ ಪರದಲ್ಲಿರುವ ಒಳ್-ಪ್ರತ್ಯಯಕ್ಕೆ ' ಶಲ್ಲಿ ' ಎಂಬ ಆದೇಶವು ವಿಕಲ್ಪವಾಗಿ ಬರುವುದೆಂದು ಸೂತ್ರಾರ್ಥವಾಗಲು ' ಮನೆಯಲ್ಲಿ ' ಮೊದಲಾದುವು ಸಿದ್ಧವಾಗುವುವು. ಇದು ವಿಕಲ್ಪವಾದುದರಿಂದ ಬಾರದ ಪಕ್ಷದಲ್ಲ—'ಮನೆಯೊಳ್' ಮೊದಲಾದುವಾಗುವುವು.

ಇಲ್ಲಿ ಕೆಲವರು—' ಅಲ್ಲಿ, ಇಲ್ಲ, ಎಲ್ಲಿ, ಆವಲ್ಲಿ ' ಮೊದಲಾದ ಅಧಿಕರಣಾರ್ಥಕಾವ್ಯಯಗಳು ಕೆಲವಿರುವುವು. ಅವುಗಳಲ್ಲಿ ' ಅಲ್ಲಿ ' ಎಂಬುದನ್ನು ಷಷ್ಠೀವಿಭಕ್ತ್ಯಂತದ ಮೇಲೆ ಸೇರಿಸಲು ಉಕ್ತಪ್ರಯೋಗಗಳೆಲ್ಲಾ ಸಿದ್ಧಿಸುವುದರಿಂದ ಈ ಸೂತ್ರವು ಪ್ರಯೋಜನಕಾರಿಯಲ್ಲವೆಂದು ಹೇಳುವರು.

ಇಲ್ಲಿ **ದರ್ಪಣಕಾರನು** —

> ಅಲ್ಲಿಯೊಳೆಂಬಿವು ಮಿಕ್ಕಡೆ
> ಗೆಲ್ಲಂ ದಿಗ್ವಾಚಿಯುಪ್ಪದಂತಕ್ಕಲ್ ಮು
> ತ್ತಲ್ಲಿಯುದಂತಕ್ಕೆತ್ವಂ
> ಬಲ್ಲರ ಮತದಿಂ ವಿಕಲ್ಪವಿಧಿ ಸಪ್ತಮಿಯೊಳ್ (ಸೂತ್ರ ೧೧೯)

ಎಂಬ ಸೂತ್ರದಿಂದ ಈ ಸೂತ್ರಾರ್ಥವನ್ನೂ — ' **ಒಳ್ಕಶ್ಚಾತೋ ದಿಗರ್ಥಾಚ್ಚಲ್ ಚ || ೨೮೦ || ಎಶ್ಚೋತಃ || ೨೮೧ ||** ' ಎಂಬ ಸೂತ್ರಗಳ ಅರ್ಥವನ್ನೂ ಸಂಗ್ರಹಿಸಿ ಹೇಳಿರುವನು.

**ಅವತಾರಿಕೆ ೨೭೮**

ಪ್ರಕೃತಿ ಸಾಮಾನ್ಯಕ್ಕೆ ಪರದಲ್ಲಿರುವ ಸಪ್ತಮಿಗೆ ಆದೇಶ-ವಿಶೇಷವನ್ನು ವಿಧಿಸಿ ಈಗ ಉಕಾರಾಂತ ಕಾಲವಾಚಕದ ಮುಂದಿರುವ ಸಪ್ತಮಿಗೆ ಲೋಪವನ್ನು ಹೇಳುತ್ತಾನೆ.

**ಸೂತ್ರಂ || ಶ್ಲುಬುತಃ ಕಾಲಾರ್ಥಾತ್ || ೨೭೮ ||**

**ಅರ್ಥ || ಉ ಕಾರಾಂತ ಕಾಲವಾಚಕ ಶಬ್ದಕ್ಕೆ ಪರದಲ್ಲಿರುವ ಒಳ್-ಪ್ರತ್ಯಯಕ್ಕೆ ವಿಕಲ್ಪವಾಗಿ ಲೋಪವು ಬರುವುದು.**

**ಉದಾಹರಣೆ ||** 'ಅಂದು, ಅಂದಿನೊಳ್, ಅಂದಿನಲ್ಲಿ; ಇಂದು, ಇಂದಿನೊಳ್, ಇಂದಿನಲ್ಲಿ||' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೨೭೮**

ಈ ಸೂತ್ರದಲ್ಲಿ — 'ಶ್ಲುಪ್, ಉತಃ, ಕಾಲಾರ್ಥಾತ್' ಎಂದು ಮೂರು ಪದಗಳಿರುವುವು. ಪೂರ್ವದಿಂದ 'ಒಳಃ, ವಾ' ಎಂದು ಅನುವರ್ತಿಸಲ್ಪಡುವುವು. 'ಶ್ಲುಪ್' ಎಂಬುದು ಅದರ್ಶನಾರ್ಥಕವಾದ ವಿಧೇಯವು. 'ಉತಃ' ಎಂಬುವನ್ನು 'ಕಾಲಾರ್ಥಾತ್' ಎಂಬುವಕ್ಕೆ ವಿಶೇಷಣ ಮಾಡಲು ತದಂತಬೋಧಕವಾಗುವುದು. 'ಕಾಲಾರ್ಥಾತ್' ಎಂದು ಅರ್ಥಪದವಿರುವುದರಿಂದ ಕಾಲವಾಚಕಶಬ್ದವೆಂದರ್ಥವಾಗುವುದು. ಅವನ್ನು ಭಾಷಾಶಬ್ದಗಳೆಂದೇ ಗ್ರಹಿಸಬೇಕು. ತಥಾಚ — ಉ ಕಾರಾಂತ ಕಾಲವಾಚಿಯ ಮುಂದಿರುವ ಒಳ್-ಪ್ರತ್ಯಯಕ್ಕೆ ವಿಕಲ್ಪವಾಗಿ ಲೋಪವು ಬರುವುದೆಂದು ಸೂತ್ರಾರ್ಥವಾಗಲು 'ಅಂದು, ಇಂದು' ಮೊದಲಾದುವು ಸಿದ್ಧಿಸುವುವು. ವಿಕಲ್ಪವಾದುದರಿಂದ 'ಅಂದಿನೊಳ್' ಮೊದಲಾದ ರೂಪಗಳೂ ಆಗುವುವು. ಇಲ್ಲಿ 'ಉತಃ' ಎಂದು ಹೇಳಿರುವುದರಿಂದ 'ಸಂಜೆಯೊಳ್, ಸಂಜೆಯಲ್ಲಿ; ಬಯ್ಗಿಯೊಳ್, ಬಯ್ಗಿಯಲ್ಲಿ' ಮೊದಲಾದ ಉ ಕಾರಾಂತವಲ್ಲದ ಶಬ್ದಗಳಲ್ಲಿಯೂ 'ಕಾಲಾರ್ಥಾತ್' ಎಂದು ಹೇಳಿರುವುದರಿಂದ 'ಮಡುವಿನೊಳ್, ಮಡುವಿನಲ್ಲಿ' ಮೊದಲಾದ ಕಾಲಾರ್ಥಕವಲ್ಲದ ಶಬ್ದಗಳಲ್ಲಿಯೂ ಲೋಪವಿಲ್ಲವೆಂದು ತಿಳಿಯಬೇಕು.

**ಅವತಾರಿಕೆ ೨೭೯**

ಹೀಗೆಯೇ ಅಮ್-ಪ್ರತ್ಯಯಕ್ಕೂ ಲೋಪವನ್ನು ವಿಧಿಸುತ್ತಾನೆ.

**ಸೂತ್ರಂ || ಅಮಃ || ೨೭೯ ||**

**ಅರ್ಥ || ಉ ಕಾರಾಂತ ಕಾಲವಾಚಕ ಶಬ್ದಕ್ಕೆ ಪರದಲ್ಲಿರುವ ಅಮ್-ಪ್ರತ್ಯಯಕ್ಕೆ ನಿತ್ಯವಾಗಿ ಲೋಪವು ಬರುವುದು.**

**ಉದಾಹರಣೆ ||** 'ಅಂದು ಕಳೆದಂ; ಇಂದು ಕಳೆದಂ ||' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೨೭೯**

ಈ ಸೂತ್ರದಲ್ಲಿ — 'ಅಮಃ' ಎಂದೊಂದೇ ಪದವಿರುವುದು. ಪೂರ್ವಸೂತ್ರವನ್ನೇ ಅನುವರ್ತಿಸಿ ಪೂರ್ವದಂತೆಯೇ ಅನ್ವಯಮಾಡುವುದು. ಇಲ್ಲಿ ವಾಗ್ರಹಣಾನುವೃತ್ತಿಯಿಲ್ಲದುದರಿಂದಲೂ ಯೋಗವಿಭಾಗ ಮಾಡಿರುವುದರಿಂದಲೂ ಈ ಲೋಪವು ನಿತ್ಯವೆಂದು ತಿಳಿಯಬೇಕು. ತಥಾಚ — ಉ ಕಾರಾಂತ ಕಾಲವಾಚಕ ಶಬ್ದಕ್ಕೆ ಪರದಲ್ಲಿರುವ ಅಮ್-ಪ್ರತ್ಯಯಕ್ಕೆ ನಿತ್ಯವಾಗಿ ಲೋಪವು ಬರುವುದೆಂದು ಸೂತ್ರಾರ್ಥವಾಗಲು 'ಅಂದು ಕಳೆದಂ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು.

**ಅವತಾರಿಕೆ ೨೮೦**

ಹಿಂದೆ ಉ ಕಾರಾಂತ ಕಾಲವಾಚಕಕ್ಕೆ ಪರದಲ್ಲಿರುವ 'ಒಳ್, ಅಮ್' ಪ್ರತ್ಯಯಗಳಿಗೆ ಲೋಪವು ವಿಧಿಸಲ್ಪಟ್ಟಿತು. ಈಗ ಅ ಕಾರಾಂತ ದಿಗ್ವಾಚಕಕ್ಕೆ ಪರದಲ್ಲಿರುವ 'ಒಳ್, ಅಮ್, ಮ್' ಎಂಬ ಪ್ರತ್ಯಯಗಳಿಗೆ 'ಅಲ್' ಎಂಬಾದೇಶವನ್ನೂ ಲೋಪವನ್ನೂ ವಿಧಿಸುತ್ತಾನೆ.

**ಸೂತ್ರಂ || ಒಳ್ಮಶ್ಚಾತೋ ದಿಗರ್ಥಾಚ್ಛಲ್ ಚ || ೨೮೦ ||**

**ಅರ್ಥ || ಅ ಕಾರಾಂತ ದಿಗ್ವಾಚಕದಿಂದ ಪರದಲ್ಲಿರುವ ಸಪ್ತಮಿ, ಪ್ರಥಮೆ, ದ್ವಿತೀಯೆ ವಿಭಕ್ತಿಗಳಿಗೆ ಶಲಾದೇಶವೂ ಲೋಪವೂ ಬರುವುದು.**

**ಉದಾಹರಣೆ ||** 'ಮೂಡಲ್ ಸೂರ್ಯ್ಯನುದಯಿಸಿದಂ, ಮೂಡ ಸೂರ್ಯ್ಯನುದಯಿಸಿದಂ; ಮೇರುವಿಂ ತೆಂಕಲ್ ಭರತಕ್ಷೇತ್ರಂ, ಮೇರುವಿಂ ತೆಂಕ ಭರತಕ್ಷೇತ್ರಂ; ಅತ್ತಲಿರ್ದ್ದಂ, ಅತ್ತಿರ್ದ್ದಂ ||' ಮೊದಲಾದುವು ಸಪ್ತಮ್ಯಂತಕ್ಕೂ 'ಬಡಗಲೊಪ್ಪಿದುದು, ಬಡಗೊಪ್ಪಿದುದು; ಅತ್ತಲ್ ನಡೆಯೆಪಟ್ಟಪುದು, ಅತ್ತ ನಡೆಯೆಪಟ್ಟಪುದು ||' ಮೊದಲಾದುವು ಪ್ರಥಮೆಗೂ 'ಮೂಡಲ್ ನೋಡಿದಂ, ಮೂಡ ನೋಡಿದಂ; ಅತ್ತಲ್ ಕಂಡಂ, ಅತ್ತ ಕಂಡಂ||' ಮೊದಲಾದುವು ದ್ವಿತೀಯೆಗೂ ಉದಾಹರಣೆಗಳೆಂದು ತಿಳಿಯಬೇಕು.

**ವಿಚಾರ ೨೮೦**

ಈ ಸೂತ್ರದಲ್ಲಿ — ಒಳ್ಮಃ, ಚ, ಅತಃ, ದಿಗರ್ಥಾತ್, ಶಲ್, ಚ' ಎಂದು ಆರು ಪದಗಳಿರುವುವು. 'ಒಳ್ಮಃ' ಎಂಬುದು ಸಪ್ತಮೀ-ಪ್ರಥಮೆಗಳ ಬೋಧಕವಾದ ಷಷ್ಠ್ಯಂತಪದವು. ಇಲ್ಲಿರುವ ಚ ಕಾರವು 'ಅಮಃ' ಎಂದು ಸಂಬಂಧಿಸಲ್ಪಡುವುದು. 'ಅತಃ' ಎಂಬುದು ಪಂಚಮ್ಯಂತವು. 'ದಿಗರ್ಥಾತ್' ಎಂಬುದಕ್ಕೆ ವಿಶೇಷಣ ಮಾಡಲು ತದಂತಬೋಧಕವಾಗುವುದು. 'ದಿಗರ್ಥಾತ್' ಎಂಬುದು ದಿಗ್ವಾಚಕ ಶಬ್ದಬೋಧಕವು. 'ಶಲ್' ಎಂಬುದು ಶ ಕಾರೇತ್-ಸಂಜ್ಞಕವಾದ ವಿಧೇಯವು. ಇಲ್ಲಿರುವ ಚ ಕಾರವು ಆದೇಶಸಮುಚ್ಚಾಯಕವಾದುದರಿಂದ 'ಶ್ಲುಪ್' ಎಂದು ಸಂಬಂಧಿಸಲ್ಪಡುವುದು. ತಥಾಚ — ಅ ಕಾರಾಂತ ದಿಗ್ವಾಚಕ ಶಬ್ದದಿಂದ ಪರದಲ್ಲಿರುವ 'ಒಳ್, ಮ್, ಅಮ್' ಎಂಬ ಪ್ರತ್ಯಯಗಳಿಗೆ 'ಅಲ್' ಎಂಬ ಆದೇಶವೂ ಲೋಪವೂ ಬರುವುದೆಂದು ಸೂತ್ರಾರ್ಥವಾಗಲು ಶಿತ್ವವಿರುವುದರಿಂದ ಸರ್ವಾದೇಶವಾಗಿ ಬಂದು 'ಮೂಡಲ್' ಮೊದಲಾದ ಪ್ರಯೋಗಗಳು ಸಿದ್ಧಿಸುವುವು.

**ಅವತಾರಿಕೆ ೨೮೧**

ಪೂರ್ವಸೂತ್ರದಿಂದ ಅ ಕಾರಾಂತ ದಿಗ್ವಾಚಕಕ್ಕೆ ಪರದಲ್ಲಿರುವ ಒಳ್-ಆದಿಗಳಿಗೆ ಶಲ್-ಆದಿಗಳನ್ನು ವಿಧಿಸಿ ಈಗ ಉ ಕಾರಾಂತ ದಿಗ್ವಾಚಕಕ್ಕೆ ಪರದಲ್ಲಿರುವ ಪ್ರತ್ಯಯಕ್ಕೆ ಎ ಕಾರಾದೇಶವನ್ನು ವಿಧಿಸುತ್ತಾನೆ.

**ಸೂತ್ರಂ || ಎಶ್ಚೋತಃ || ೨೮೧ ||**

**ಅರ್ಥ || ಉ ಕಾರಾಂತವಾದ ದಿಗ್ವಾಚಕ ಶಬ್ದದಿಂದ ಪರವಾಗಿರುವ ಒಳ್-ಪ್ರತ್ಯಯಕ್ಕೂ ಮ್-ಪ್ರತ್ಯಯಕ್ಕೂ ಅಮ್-ಪ್ರತ್ಯಯಕ್ಕೂ ಎಕಾದೇಶವು ವಿಕಲ್ಪವಾಗಿ ಬರುವುದು.**

**ಉದಾಹರಣೆ ||** 'ಒಳಗೆ, ಒಳಗಿನೊಳ್, ಒಳಗಿನಲ್ಲಿ; ಒಳಗೆ, ಒಳಗಂ; ಒಳಗು, ಒಳಗೆ ||' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೨೮೧**

ಈ ಸೂತ್ರದಲ್ಲಿ — 'ಎಶ್, ಚ, ಉತಃ' ಎಂದು ಮೂರು ಪದಗಳಿರುವುವು. ಪೂರ್ವದಿಂದ — ಒಳ್ಮಃ, ಅಮಃ, ದಿಗರ್ಥಾತ್, ವಾ' ಎಂದು ನಾಲ್ಕು ಪದಗಳು ಅನುವರ್ತಿಸಲ್ಪಡುವುವು. 'ಎಶ್' ಎಂಬುದು ಶ ಕಾರೇತ್-ಸಂಜ್ಞಕಾದೇಶವಾದುದರಿಂದ ಸರ್ವಾದೇಶವಾಗಿ ಬರುವುದು. 'ಉತಃ' ಎಂಬುದು 'ದಿಗರ್ಥಾತ್' ಎಂಬುದಕ್ಕೆ ವಿಶೇಷಣವಾಗಲು ತದಂತ ಬೋಧಕವಾಗುವುದು. 'ಒಳ್ಮಃ, ಅಮಃ' ಇವೆರಡೂ ಸ್ಥಾನಷಷ್ಠ್ಯಂತಗಳು. ತಥಾಚ — ಉ ಕಾರಾಂತ ದಿಗ್ವಾಚಕ ಶಬ್ದದಿಂದ ಪರವಾಗಿರುವ 'ಒಳ್, ಮ, ಅಮ್' ಎಂಬ ಪ್ರತ್ಯಯಗಳಿಗೆ ವೈಕಲ್ಪಿಕವಾದ ಎ ಕಾರಾದೇಶವು ಸರ್ವಾದೇಶವಾಗಿ ಬರುವುದು ಎಂದು ಸೂತ್ರಾರ್ಥವಾಗಲು 'ಒಳಗೆ' ಮೊದಲಾದುವು ಸಿದ್ಧಿಸುವುವು. ಇದು ವೈಕಲ್ಪಿಕವಾದುದರಿಂದ ಬಾರದ ಪಕ್ಷದಲ್ಲಿ ಯಥಾಯೋಗವಾಗಿ ಕಾರ್ಯಗಳು ಬರುವುವು. ಇಲ್ಲ — 'ಒಳಗು, ಪೊಱಗು' ಮೊದಲಾದುವು ದಿಗ್ದೇಶಕಾಲವೃತ್ತಿಗಳಾಗಿರುವುದರಿಂದ 'ಕಾಲಾರ್ಥಾತ್' ಎಂಬುದನ್ನೂ ಅನುವರ್ತಿಸಿ ದಿಗ್ದೇಶಕಾಲವಾಚಕದಿಂದ ಪರವಾದುದಕ್ಕೆ ಈ ಆದೇಶವೆಂದು ಹೇಳುವುದರಿಂದ ಕಾಲಾದ್ಯರ್ಥಗಳಲ್ಲಿಯೂ ಈ ಪ್ರಯೋಗಗಳು ಉಪಪನ್ನಗಳಾಗುವುವು.

**ಅವತಾರಿಕೆ ೨೮೨**

ಹೀಗೆ ತದ್ಭವ, ತತ್ಸಮ, ದೇಶ್ಯಪ್ರಭೇದಗಳಿಂದ ತ್ರಿವಿಧಗಳಾದ ಲಿಂಗಗಳಿಗೆ ಲಿಂಗತ್ರಯದಲ್ಲಿಯೂ ಪ್ರಕ್ರಿಯಾಸ್ವರೂಪವನ್ನು ನಿರೂಪಿಸಿ ಸಾಮಾನ್ಯವಾಗಿ ಕೆಲವು ಪ್ರಕೃತಿಗಳಿಂದ ಪರವಾದ ಕೆಲವು ಸುಪ್ಪಿಗೆ ಆದೇಶಾದಿಗಳನ್ನು ವಿಧಿಸಿ ಈಗ ದೇಶ್ಯವಿಶೇಷ ಸರ್ವನಾಮಗಳಾದ, ಅಲಿಂಗಗಳಾದ ತನಾದಿ ಪ್ರಕೃತಿಗಳಿಗೇ ಆದೇಶಾದಿವಿಶೇಷಗಳನ್ನು ವಿಧಿಸಲು ಮೊದಲು ಮ ಕಾರಾದೇಶವನ್ನು ವಿಧಿಸುತ್ತಾನೆ.

**ಸೂತ್ರಂ ॥ ತನಿನೆನೋ ಮನೇಕತ್ವೇ ॥ ೨೮೨ ॥**

**ಅರ್ಥ ॥ 'ತನ್, ನಿನ್, ಎನ್' ಎಂಬಿವುಗಳಿಗೆ ಅನೇಕತ್ವದಲ್ಲಿ ಸುಪ್ಪು ಪರವಾಗಿರಲು ಮ ಕಾರವು ಅಂತಾದೇಶವಾಗಿ ಬರುವುದು.**

**ಉದಾಹರ ॥** 'ತಾಮ್, ನೀಮ್, ಆಮ್; ತಮಗೆ, ನಿಮಗೆ, ಎಮಗೆ ॥' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೨೮೨**

ಈ ಸೂತ್ರದಲ್ಲಿ — 'ತನ್ನಿನೆನಃ, ಮ್, ಅನೇಕತ್ವೇ' ಎಂದು ಮೂರು ಪದಗಳಿರುವುವು. ಪ್ರಕರಣಬಲದಿಂದ 'ಸುಪಿ' ಎಂದು ಲಬ್ಧವಾಗುವುದು. 'ತನ್ನಿನೆನಃ' ಎಂಬುದು ಸ್ಥಾನಷಷ್ಠ್ಯಂತವು. ತಥಾಚ — ಅನೇಕತ್ವದಲ್ಲಿ ಸುಪ್ಪು ಪರದಲ್ಲಿರುವಾಗ 'ತನ್, ನಿನ್, ಎನ್' ಎಂಬೀ ಮೂರರ ಅಂತ್ಯಕ್ಕೆ ಮ ಕಾರಾದೇಶವು ಬರುವುದೆಂದು ಸೂತ್ರಾರ್ಥವಾಗಲು — 'ತಾಮ್, ನೀಮ್, ಆಮ್' ಮೊದಲಾದ ರೂಪಗಳು ಸಿದ್ಧಿಸುವುವು. ಇಲ್ಲ — 'ತನ್' ಎಂಬುದು ಆತ್ಮವಾಚಕವೆಂದೂ 'ನಿನ್' ಎಂಬುದು ಯುಷ್ಮದರ್ಥಕವೆಂದೂ 'ಎನ್' ಎಂಬುದು ಅಸ್ಮದರ್ಥಕವೆಂದೂ ತಿಳಿಯಬೇಕು. ಇವು ಮೂರೂ ಸ್ವಯಂ ಅವ್ಯಕ್ತಲಿಂಗಗಳಾದು

ಪರಿಂದ ಲಿಂಗಾಧೀನ ಪ್ರಕ್ರಿಯಾಸರ್ಹಗಳಾಗಿದ್ದರೂ ಲಿಂಗತ್ರಯಸಾಧಾರಣವಾಗಿಯೂ ಇತರಾ ಸಾಧಾರಣವಾಗಿಯೂ ಇರುವ ಪ್ರಕ್ರಿಯೆಯನ್ನು ಹೊಂದುವುವೆಂದು ಅದನ್ನು ನಿಲ್ಲಿಸಿ ನಿರೂಪಿಸುವುದು ಸಾರ್ಥಕವೆಂದು ತಿಳಿಯುವುದು. 'ತಾವ್, ನೀವ್' ಎಂಬಲ್ಲಿ 'ಮಿ ದೀರ್ಘಃ || ೨೮೭ ||' ಎಂಬ ಸೂತ್ರದಿಂದ ದೀರ್ಘವೂ 'ಆವ್' ಎಂಬಲ್ಲಿ 'ಆದೇನಃ || ೨೮೮ ||' ಎಂಬುದರಿಂದ ಆ ಕಾರಾದೇಶವೂ ಬಂದಿರುವುವೆಂದು ತಿಳಿಯಬೇಕು. ಇಲ್ಲಿ 'ಅನೇಕತ್ವೇ' ಎಂದು ಹೇಳಿರುವುದರಿಂದ — 'ತಾನ್, ನೀನ್, ಆನ್' ಮೊದಲಾದ ಏಕವಚನ ಪ್ರಯೋಗದಲ್ಲಿ ಬರುವುದಿಲ್ಲ.

**ಅವತಾರಿಕೆ ೨೮೯**

ಪೂರ್ವಸೂತ್ರದಿಂದ ವಿಹಿತ ಮ ಕಾರಾಂತಗಳಿಗೆ ಸ್ವರಾದಿ ಸುಪ್ಪು ಪರವಾಗಿರಲು ಮುಗಾಗಮವನ್ನು ವಿಧಿಸುತ್ತಾನೆ.

**ಸೂತ್ರಂ || ಮೋ ಮುಕ್ ಸ್ವರೇ || ೨೮೯ ||**

ಅರ್ಥ || ಮ ಕಾರಾಂತಗಳಾದ 'ತನ್, ನಿನ್, ಎನ್' **ಎಂಬಿವಕ್ಕೆ ಸ್ವರಾದಿ ಸುಪ್ಪು ಪರದಲ್ಲಿರಲು ಮುಗಾಗಮವು ಅಂತ್ಯಾವಯವವಾಗಿ ಬರುವುದು.**

**ಉದಾಹರಣೆ ||** 'ತಮ್ಮಂ, ನಿಮ್ಮಂ, ಎಮ್ಮಂ; ತಮ್ಮಿಂ, ನಿಮ್ಮಿಂ, ಎಮ್ಮಿಂ; ತಮ್ಮ, ನಿಮ್ಮ, ಎಮ್ಮ; ತಮ್ಮೊಳ್, ನಿಮ್ಮೊಳ್, ಎಮ್ಮೊಳ್ ||' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೨೮೯**

ಈ ಸೂತ್ರದಲ್ಲಿ — 'ಮಃ, ಮುಕ್, ಸ್ವರೇ' ಎಂದು ಮೂರು ಪದಗಳಿರುವುವು. ಪೂರ್ವ ಸೂತ್ರದಿಂದ 'ತನ್ನಿನೆನಃ' ಎಂಬುದಕ್ಕೆ ಅನುವೃತ್ತಿಮಾಡಿ 'ಮಃ' ಎಂಬುದನ್ನು ವಿಶೇಷಣ ಮಾಡಲು ತದಂತ ಲಾಭವುಂಟಾಗಿ ಮ ಕಾರಾಂತ 'ತನ್ನಿನೆನಃ' ಎಂದು ಅರ್ಥವಾಗಲು ಮ ಕಾರವು ಅನೇಕತ್ವದಲ್ಲಿಯೆ ಬರುವುದರಿಂದ 'ಅನೇಕತ್ವೇ' ಎಂದೂ ಸಿದ್ಧಿಸುವುದು. 'ಸ್ವರೇ' ಎಂಬುದು ವರ್ಣಬೋಧಕಸಪ್ತಮ್ಯಂತವಾದುದರಿಂದ 'ಪ್ರಕರಣಬಲಲಭ್ಯಸುಪಿ' ಎಂಬುದಕ್ಕೆ ವಿಶೇಷವನ್ನು ಮಾಡಲು ತದಾದಿಬೋಧಕವಾಗುವುದು. ತಥಾಚ — ಮ ಕಾರಾಂತನಾದಿಗಳಿಗೆ ಸ್ವರಾದಿ ಸುಪ್ಪು ಪರದಲ್ಲಿರಲು ಮುಗಾಗಮವು ಅಂತ್ಯಾವಯವವಾಗಿ ಬರುವುದೆಂದು ಸೂತ್ರಾರ್ಥವಾಗಲು 'ತಮ್ಮಂ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು. ಇಲ್ಲಿ 'ಮಃ' ಎಂದು ವಿಶೇಷಣ ಮಾಡಿರುವುದರಿಂದ — 'ತನ್ನಂ ನಿನ್ನಂ, ಎನ್ನಂ' ಮೊದಲಾದ ನ ಕಾರಾಂತದಲ್ಲಿ ಬರುವುದಿಲ್ಲ. ಇಲ್ಲಿ — '**ಹ್ರಸ್ವಾನ್ನಣಲಯಳತಟೋsನವ್ಯಯಸ್ಯ ಲಿಂಗಾಂತ್ಯಸ್ಯ....|| ೫೩ ||**' ಇತ್ಯಾದಿ ಸೂತ್ರದಿಂದ ದ್ವಿರ್ಭಾವವು ಬಂದಿರುವುದೆಂದು ತಿಳಿಯಬೇಕು. 'ಸ್ವರೇ' ಎಂಬುದನ್ನು ಹೇಳಿರುವುದರಿಂದ — 'ತಮುಗೆ, ನಿಮುಗೆ, ಎಮುಗೆ' ಮೊದಲಾದೆಡೆಗಳಲ್ಲಿ ಬರುವುದಿಲ್ಲ. ಇಲ್ಲಿ **ದರ್ಪಣಕಾರನು** —

ಪೀನಂ ಪ್ರಥಮೆಗೆ ನೀನಾ
ನ್ತಾನೆಂದಱಂ ನಿನಗೆನಗೆತನಗೆಂದು ಚತು
ರ್ಥೀನಿರ್ದೇಶಕ್ಕಿತರ
ಸ್ಥಾನಕ್ಕಸ್ವರದಿನಿರ್ಪ ನಿನ್ ಎನ್ ತನ್‌ಗಳ್ (ಸೂತ್ರ ೧೪೬)

ಎಂಬ ಸೂತ್ರವನ್ನು ಹೇಳಿ ಬಹುವಚನದಲ್ಲಿ ಮ ಕಾರವನ್ನು ಉತ್ತರ ಸೂತ್ರದಿಂದ ಹೇಳಿರುವನು.

**ಅವತಾರಿಕೆ ೨೮೪**

ಹೀಗೆಯೇ ಕೆಲವು ವ್ಯಂಜನಾದಿ ಪ್ರತ್ಯಯಗಳು ಪರವಾಗಿರಲು ಅಗಾಗಮವನ್ನು ವಿಧಿಸುತ್ತಾನೆ.

**ಸೂತ್ರಂ || ಅಕ್ ತುತ್ತುಗೆತಿ || ೨೮೪ ||**

**ಅರ್ಥ** || 'ತನ್, ನಿನ್, ಎನ್' ಎಂಬಿವಕ್ಕೆ — 'ತು, ತ್ತು, ಗೆತ್' ಎಂಬ ಪ್ರತ್ಯಯಗಳು ಪರವಾಗಿರಲು ಅಗಾಗಮವು ಬರುವುದು.

**ಉದಾಹರಣೆ** || 'ತನತು, ತನತ್ತು; ತಮುತು, ತಮುತ್ತು; ನಿನತು, ನಿನತ್ತು; ನಿಮುತು, ನಿಮುತ್ತು; ಎನತು, ಎನತ್ತು; ಎಮುತು, ಎಮುತ್ತು; ತನಗೆ, ತಮಗೆ; ನಿನಗೆ, ನಿಮಗೆ; ಎನಗೆ, ಎಮಗೆ ||' ಮೊದಲಾದುವು ಇದಕ್ಕೆ ಲಕ್ಷ್ಯಗಳು. ಇಲ್ಲಿ ಅಗಾಗಮವು ಲಿಂಗಾಂತ್ಯವಾದುದರಿಂದ ನ ಕಾರಕ್ಕೆ ದ್ವಿತ್ವವಿಲ್ಲವೆಂದು ತಿಳಿಯಬೇಕು.

**ವಿಚಾರ ೨೮೪**

ಈ ಸೂತ್ರದಲ್ಲಿ — 'ಅಕ್, ತುತ್ತುಗೆತಿ' ಎಂದು ಎರಡು ಪದಗಳಿರುವುವು. ಪೂರ್ವದಿಂದ 'ತನ್ನಿನೆನಃ' ಎಂಬುದು ಅನುವರ್ತಿಸಲ್ಪಡುವುದು. ತಥಾಚ — 'ತನ್, ನಿನ್, ಎನ್' ಎಂಬಿವಕ್ಕೆ 'ತು, ತ್ತು, ಗೆತ್' ಎಂಬ ಪ್ರತ್ಯಯಗಳು ಪರವಾಗಿರಲು ಅಗಾಗಮವು ಬರುವುದೆಂದು ಸೂತ್ರಾರ್ಥವಾಗಲು 'ತನತು, ತನತ್ತು' ಮೊದಲಾದ ಪ್ರಯೋಗಗಳು ಸಿದ್ಧಿಸುವುವು.

**ಅವತಾರಿಕೆ ೨೮೫**

ಹೀಗೆ ತನಾದಿಗಳಿಗೆ ವಿಭಕ್ತಿ ಪರದಲ್ಲಿರುವಾಗ ಆಗಮಗಳನ್ನು ವಿಧಿಸಿ ಪೂರ್ವಸೂತ್ರದಲ್ಲಿ ತನಾದಿಗಳಿಗೆ 'ತು, ತ್ತು' ಪರದಲ್ಲಿರುವಾಗ ಮಗಾಗಮವು ವಿಧಿಸಲ್ಪಟ್ಟಿತು. ಈಗ ಅವಕ್ಕೆ ಪರದಲ್ಲಿರುವ ಷಷ್ಠಿಗೆ ಆದೇಶವಿಶೇಷವನ್ನು ವಿಧಿಸುತ್ತಾನೆ.

**ಸೂತ್ರಂ || ವಾದಸ್ತುತ್ತೂ || ೨೮೫ ||**

**ಅರ್ಥ** || 'ತನ್, ನಿನ್, ಎನ್' ಎಂಬಿವುಗಳಿಗೆ ಪರದಲ್ಲಿರುವ — 'ಅತ್' ಎಂಬ ಷಷ್ಠೀವಿಭಕ್ತಿಗೆ 'ತು, ತ್ತು' ಎಂಬಾದೇಶಗಳು ವಿಕಲ್ಪವಾಗಿ ಬರುವುವು.

**ಉದಾಹರಣೆ** || 'ತನತು, ತನತ್ತು, ತನ್ನ[೧]; ನಿನತು, ನಿನತ್ತು, ನಿನ್ನ[೨]; ಎನತು, ಎನತ್ತು, ಎನ್ನ[೩] ||' ಇವು ಏಕವಚನಕ್ಕೂ 'ತಮುತು, ತಮುತ್ತು, ತಮ್ಮ; ನಿಮುತು, ನಿಮುತ್ತು, ನಿಮ್ಮ; ಎಮುತು, ಎಮುತ್ತು ಎಮ್ಮ ||' ಇವು ಬಹುವಚನಕ್ಕೂ ಉದಾಹರಣೆಗಳೆಂದು ತಿಳಿಯುವುದು. ವಾ ಗ್ರಹಣಕ್ಕೆ ಬಾಹುಳಕತ್ವವನ್ನಂಗೀಕರಿಸಿ 'ಅದು' ಎಂಬಾದೇಶವೂ ಬರುವುದೆಂದು ವ್ಯಾಖ್ಯಾನ ಮಾಡಿರುವುದರಿಂದ — 'ತನ್ನದು, ತಮ್ಮದು; ನನ್ನದು, ನಮ್ಮದು; ಎನ್ನದು, ಎಮ್ಮದು ||' ಎಂದೂ ಈ ಸೂತ್ರಕ್ಕೇ ಉದಾಹರಣೆಗಳಾಗುವುವು.

**ವಿಚಾರ ೨೮೫**

ಈ ಸೂತ್ರದಲ್ಲಿ — 'ವಾ, ಅದಃ, ತುತ್ತೂ' ಎಂದು ಮೂರು ಪದಗಳಿರುವುವು. ಪೂರ್ವದಿಂದ 'ತನ್ನಿನೆನಃ' ಎಂದು ಅನುವರ್ತಿಸಲ್ಪಡುವುದು. ತಥಾಚ — 'ತನ್, ನಿನ್,

ಪಾಠಾಂತರ : ೧ ತನದು ೨ ನಿನದು ೩ ಎನದು

ಎನ್' ಎಂಬಿವುಗಳ 'ಅತ್' ಎಂಬ ಷಷ್ಠೀಪ್ರತ್ಯಯಕ್ಕೆ ವಿಕಲ್ಪವಾಗಿ 'ತು, ತ್ತು' ಎಂಬಾದೇಶಗಳು ಬರುವುವು. 'ವಾ' ಎಂಬುದು ಬಹುಳಾರ್ಥಕವೆಂದು 'ಅದು' ಎಂಬಾದೇಶವೂ ಬರುವುದೆಂದು ಸೂತ್ರಾರ್ಥವಾಗಲು 'ತನತು, ತನತ್ತು, ತನ್ನದು' ಮೊದಲಾದುವು ಸಿದ್ಧಿಸುವುವು. 'ತು, ತ್ತು' ಎಂಬಾದೇಶ ಪಕ್ಷದಲ್ಲಿ ಪೂರ್ವಸೂತ್ರದಿಂದ ಅಗಾಗಮವನ್ನು ಮಾಡಲು ನಕಾರಕ್ಕೆ ಲಿಂಗಾಂತ್ಯತ್ವವಿಲ್ಲದಿರುವುದರಿಂದ ದ್ವಿತ್ವವಿಲ್ಲ. 'ಅದು' ಎಂಬಾದೇಶ ಪಕ್ಷದಲ್ಲ ಲಿಂಗಾಂತ್ಯತ್ವವಿರುವುದರಿಂದ ದ್ವಿತ್ವವು ಬರುವುದು. 'ತಮ್ಮದು' ಮೊದಲಾದ ಬಹುವಚನದಲ್ಲಾದರೋ ಮಕಾರಕ್ಕೆ ದ್ವಿತ್ವವಿಧಿಯಲ್ಲಿ ಉದ್ದೇಶ್ಯತ್ವವಿಲ್ಲದಿರುವುದರಿಂದ ಬಾಹುಳಕತ್ವವನ್ನಂಗೀಕರಿಸಿರುವುದರಿಂದ ದ್ವಿತ್ವವೆಂದು ತಿಳಿಯಬೇಕು.

ಆದರೆ **ಶಾಸನಕಾರನ** ಮತದಲ್ಲಿ ಈ ಸೂತ್ರದಿಂದ ತನಾದಿಗಳಿಂದ ಪರವಾದ ಷಷ್ಠೀವಿಭಕ್ತಿಗೆ ಆದೇಶವನ್ನು ಮಾಡಲು — 'ತನತು, ನಿನತು, ಎನತು' ಮೊದಲಾದ ಶಬ್ದಗಳು — 'ತಸ್ಯ, ತವ, ಮಮ' ಮೊದಲಾದ ಸಂಸ್ಕೃತಶಬ್ದಗಳಂತೆ ಸಂಬಂಧ ಪ್ರಧಾನಗಳಾಗಿ 'ತನ್ನ, ನಿನ್ನ, ಎನ್ನ' ಎಂಬಿವಕ್ಕೇ ರೂಪಾಂತರಗಳಾದುದರಿಂದ ತದರ್ಥಗಳೇ ಆಗಿರುವುವು. **ದರ್ಪಣಕಾರನ** ಮತದಲ್ಲಾದರೋ —

ನಿನತೆನತು ತನತೆನಿಪ್ಪುವು
ಜನಿಯಿಸುಗುಂ ನಿನ್ನದೆನ್ನದುಂ ತನ್ನದೆನಿ
ಪ್ಪನಿತಱೊಳಂ ಮೇಣ್ ದ್ವಿತ್ವದಿ
ನನೇಕದೊಳ್ನತ್ವ ವಿದೆಡೆಗೆ ಮತ್ವಂ ಬರೆಯುಂ (ಸೂತ್ರ ೧೪೭)

ಎಂಬ ಸೂತ್ರದಲ್ಲಿ 'ತನ್ನದು, ನಿನ್ನದು, ಎನ್ನದು' ಎಂಬಿವಕ್ಕೆ 'ತನತು, ನಿನತು, ಎನತು' ಎಂಬಾದೇಶಗಳನ್ನು ವಿಧಿಸಿರುವುದರಿಂದ ಇವು ಷಷ್ಠ್ಯಂತಾರ್ಥಸಂಬಂಧಿವಸ್ತುವಾಚಕಗಳಾಗಿಯೇ ವ್ಯುತ್ಪಾದಿತಗಳೆಂದು ಇವು 'ತನ್ನ, ನಿನ್ನ, ಎನ್ನ' ಎಂದು ಸಂಬಂಧಪ್ರಧಾನಾರ್ಥಕಗಳಾಗುವುದಿಲ್ಲ. ಇಲ್ಲ ಸಂಬಂಧಿಗೂ ಸಂಬಂಧರೂಪತ್ವವಿರುವುದರಿಂದ ಆ ಸಂಬಂಧಿಯು ಸಂಬಂಧಾತ್ಮಕವೇ ಆಗಿರುವುದು. ಇದರಿಂದ **ದರ್ಪಣ, ಶಾಸನ**ಗಳಿಗೆ ವಿಶೇಷವೇನೂ ತೋರುವುದಿಲ್ಲ. ಎಂದರೆ — ಧರ್ಮ-ಧರ್ಮಿಗಳಿಗೆ ಅತ್ಯಂತ ಭೇದವಿಲ್ಲದಿದ್ದರೂ ಶಬ್ದವ್ಯುತ್ಪಾದನವು ಭೇದನೆಯ ಪ್ರಧಾನವಾದುದರಿಂದ ಇವುಗಳಿಗೆ ಅರ್ಥಭೇದಗಳಿರುವುವೆಂದು ತಿಳಿಯಬೇಕು. ಹಾಗೆ ಅಂಗೀಕರಿಸದಿದ್ದರೆ — 'ತಸ್ಯ, ತವ, ಮಮ' ಎಂಬಿವಕ್ಕೂ 'ಸ್ವೀಯಂ, ತ್ವದೀಯಂ, ಮದೀಯಂ' ಎಂಬಿವಕ್ಕೂ ವಿಶೇಷವಿಲ್ಲದೆ ಹೋಗುವುದು. ಹೀಗೆ ಭಾಷೆಯಲ್ಲಿಯೂ — 'ತನ್ನ, ನಿನ್ನ, ಎನ್ನ' ಎಂಬಿವಕ್ಕೂ 'ತನ್ನದು, ನಿನ್ನದು, ಎನ್ನದು' ಎಂಬಿವಕ್ಕೂ ವಿಶೇಷವು ಸ್ಪಷ್ಟವಾಗಿ ತೋರುತ್ತಿರುವುದು. ಅದಿಲ್ಲದಿದ್ದರೆ 'ಅದು' ಎಂಬುದಕ್ಕೆ ಉಚ್ಚಾರಣೆಯು ಅನರ್ಥಕವಾಗುವುದು. ಆದುದರಿಂದ ಅರ್ಥಭೇದವನ್ನಂಗೀಕರಿಸಬೇಕು ಎಂದು ಮೊದಲಾದ ಶಂಕೆಗಳುಂಟಾಗುವುವು. ಆದುದರಿಂದ **ದರ್ಪಣ, ಶಾಸನ**ಗಳಿಗೆ ವಿರೋಧವು ಸಂಭವಿಸುವುದು.

ಮತ್ತು **ದರ್ಪಣಕಾರನ** ಮತದಲ್ಲ — 'ತನತು, ನಿನತು, ಎನತು' ಎಂಬಿವನ್ನು ಸಂಬಂಧಿಪರವಾಗಿ ವ್ಯುತ್ಪಾದನೆ ಮಾಡಲು ಅವಕ್ಕೂ 'ಸ್ವೀಯ, ತ್ವದೀಯ, ಮದೀಯ' ಎಂಬಿವರಂತೆ

ಪಾಠಾಂತರ : ೧ ಬಿ೦ ೨ ನಾಂತ

ತದ್ಧಿತಾಂತತ್ವವನ್ನು ಕಲ್ಪಿಸಬೇಕಾಗುವುದು. ಕಲ್ಪಿಸಿದರೆ ದೋಷವೇನೆಂದರೆ — ತದ್ಧಿತಾಂತಗಳಿಗೆ ಪ್ರಾಯಶಃ ವಾಚ್ಯಲಿಂಗತ್ವವಿರುವುದರಿಂದ ಲಿಂಗತ್ರಯದಲ್ಲಿಯೂ ಪ್ರಥಮಾದಿಗಳಲ್ಲಿಯೂ ಏಕಾನೇಕವಚನಗಳಲ್ಲಿಯೂ ರೂಪಾಂತರವು ಪ್ರಸಕ್ತವಾಗುವುದು. ರೂಪಾಂತರವಾದರೋ ಪ್ರಯೋಗಗಳಲ್ಲಿ ದೊರೆಯುವುದಿಲ್ಲ. ಲೋಕದಲ್ಲಿ — ' ತನತ್ತು ಮಗಳ್, ತನತ್ತು ಮಗಂ, ತನತ್ತು ಮನೆ ' ಎಂದು ಲಿಂಗಭೇದದಲ್ಲಿಯೂ ' ತನತ್ತು ಗುಣಂ, ತನತ್ತು ಗುಣಂಗಳ್ ' ಎಂದು ವಚನಭೇದದಲ್ಲಿಯೂ ' ತನತ್ತು ಗುರುಗಳಂ, ತನತ್ತು ಗುರುಗಳಿಂ, ತನತ್ತು ಗುರುಗಳ್ಗೆ ' ಮೊದಲಾದ ವಿಭಕ್ತಿಭೇದದಲ್ಲಿಯೂ ಒಂದೇ ರೂಪವಿರುವುದು. ಆದುದರಿಂದ ತದ್ಧಿತಾಂತತ್ವವನ್ನು ಕಲ್ಪಿಸುವುದು ಉಚಿತವಲ್ಲ. ಒಂದು ವೇಳೆ ತದ್ಧಿತಾಂತತ್ವವನ್ನು ಕಲ್ಪಿಸಿ ಅದಕ್ಕೆ ಅವಿಷ್ಟಲಿಂಗತ್ವವನ್ನೂ ಅವಚನತ್ವವನ್ನೂ ನಿಪಾತವನ್ನೂ ಕಲ್ಪಿಸಲು ದೋಷವಿಲ್ಲವೆಂದರೆ ಅದೃಷ್ಟಗಳಾದ ನಾನಾಧರ್ಮಗಳನ್ನು ಕಲ್ಪಿಸುವುದಕ್ಕಿಂತಲೂ ಷಷ್ಠೀಕಲ್ಪನೆಯೇ[೧] ಶ್ರೇಷ್ಠವಾಗಿರುವುದು. ಆದುದರಿಂದಲೇ — ' ತನತ್ತು ಬಿಲ್ಲಾನವನೆಂತುಂ ಕೇಸುವಂ ' ಮೊದಲಾದ ಪ್ರಯೋಗಗಳಲ್ಲಿ ' ತನ್ನ ಬಿಲ್ಲಂ ' ಎಂದೇ ತೋರುವುದಲ್ಲದೆ ' ತನ್ನದಂ ಬಿಲ್ಲಂ ' ಎಂದು ತೋರುವುದಿಲ್ಲ. ಮತ್ತು ತದ್ಧಿತಾಂತವನ್ನು ಕಲ್ಪಿಸಿದರೂ ತನಾದಿಗಳಿಗೆ ಕಲ್ಪ್ಯಮಾನಗಳಾದ ' ತು, ತ್ತು ' ಎಂಬ ಪ್ರತ್ಯಯಗಳಾಗಲಿ ಅಥವಾ ' ಅತು, ಅತ್ತು ' ಎಂಬ ಪ್ರತ್ಯಯಗಳಾಗಲಿ ಬರಲು ಪ್ರಥಮಪಕ್ಷದಲ್ಲಿ ಅಕಾರವಿಲ್ಲದಿರುವುದರಿಂದ — ' ತನ್ತು, ನಿನ್ತು, ಎನ್ತು ' ಎಂಬ ರೂಪಗಳೂ ದ್ವಿತೀಯ ಪಕ್ಷದಲ್ಲಿ ನಕಾರಕ್ಕೆ ಲಿಂಗಾಂತ್ಯಲಕ್ಷಣ ದ್ವಿಭಾವವು ಬಂದು ' ತನ್ನತು, ತನ್ನತ್ತು ' ಎಂದು ಉಭಯಪಕ್ಷಗಳಲ್ಲಿಯೂ ದೋಷವುಂಟಾಗುವುದು. ಸಿದ್ಧಾಂತದಲ್ಲಾದರೋ ಅಗಾಗಮವಿಧಿಯಿಂದ ನಕಾರಕ್ಕೆ ಲಿಂಗಾಂತ್ಯತ್ವವಿಲ್ಲವಾದುದರಿಂದ ದ್ವಿಭಾವವು ಬರುವುದಿಲ್ಲ. ತದ್ಧಿತ ಪ್ರತ್ಯಯವನ್ನು ಕಲ್ಪಿಸುವ ಪಕ್ಷದಲ್ಲಿಯೂ ಅಕಾರಾಗಮವನ್ನೂ ವಿಧಿಸಲು ಲಿಂಗಾಂತ್ಯತ್ವವು ಇಲ್ಲವಾದುದರಿಂದ ದ್ವಿತ್ವವು ಬಾರದೆ ' ತನತು, ತನತ್ತು ' ಎಂಬ ರೂಪಗಳಾಗುವುವು—ಎಂದರೆ ' ತನ್ನದು, ನಿನ್ನದು ' ಮೊದಲಾದುವಕ್ಕೂ ದ್ವಿತ್ವಬಾರದೇ ಹೋಗುವುದು. ' ತನತು, ತನತ್ತು, ತನ್ನದು ' ಮೊದಲಾದುವು ಬೇರೆ ಬೇರೆ ಶಬ್ದಗಳೆಂದರೆ **ದರ್ಪಣ**ದಲ್ಲಿ ಸ್ಥಾನ್ಯಾದೇಶಭಾವವನ್ನು ಕಲ್ಪಿಸಿರುವುದು ಅಸಂಗತವಾಗುವುದು. ಅಥವಾ ಅಖಂಡನಿಪಾತತ್ವಕಲ್ಪನೆ ಮಾಡಿದರೂ ಕರಂಬಾದಿಗಳಂತೆ ಸ್ವರೂಪಮಾತ್ರ ನಿಪಾತನವನ್ನು ಕಲ್ಪಿಸುವುದಕ್ಕಾಗುವುದಿಲ್ಲ. ಮತ್ತು ಸರ್ವಲಿಂಗಸಂಖ್ಯಾವಿಭಕ್ತಿಗಳಲ್ಲಿ ಏಕರೂಪ್ಯಲಕ್ಷಣವಾದ ಕೌಟಸ್ಥ್ಯಸಿದ್ಧ್ಯರ್ಥವಾಗಿ ಅವ್ಯಯತ್ವವನ್ನೂ ಕಲ್ಪಿಸಬೇಕು. ಅದರಲ್ಲಿಯೂ ಎಮಾದಿಗಳಂತೆ ಕಲ್ಪಿಸಲು ನಿಪಾತತ್ವವು ಬರುವುದರಿಂದ ಪ್ರಕೃತಿಭಾವವು ದುರ್ನಿವಾರವಾಗುವುದು. ಆದುದರಿಂದ ಇದೆಲ್ಲಾ ಯೋಚಿಸಿ ಸುಲಭೋಪಾಯಾರ್ಥವಾಗಿ ಷಷ್ಠಿಗೆ ಆದೇಶಕಲ್ಪನೆಯೇ ಶ್ರೇಷ್ಠವೆಂದು **ಶಾಸನ**ಕಾರನಿಗೆ ತಾತ್ಪರ್ಯವೆಂದು ತಿಳಿಯಬೇಕು.

**ಅವತಾರಿಕೆ ೨೮೬**

ಹೀಗೆಯೇ ತನಾದಿಗಳಿಗೆ ಸಂಖ್ಯಾವಾಚಕವು ಪರವಾಗಲು ಅತ್-ಪ್ರತ್ಯಯಕ್ಕೆ ' ಉತು ' ಎಂಬಾದೇಶವನ್ನು ವಿಕಲ್ಪವಾಗಿ ವಿಧಿಸುತ್ತಾನೆ.

---
ಪಾಠಾಂತರ : ೧ ಷಷ್ಠೀವಿಕಲ್ಪನೆಯೇ ಎ ಸಂಕೆ

**ಸೂತ್ರಂ || ಸಂಖ್ಯಾಯಾಮುತುಶ್ಚ || ೨೮೬ ||**

**ಅರ್ಥ || ' ತನ್, ನಿನ್, ಎನ್ ' ಎಂಬಿವಕ್ಕೆ ಪರದಲ್ಲಿರುವ ' ಅತ್ ' ಎಂಬ ಷಷ್ಠಿಗೆ ವಿಕಲ್ಪವಾಗಿ ' ಉತು ' ಎಂಬಾದೇಶವು ಸಂಖ್ಯಾವಾಚಿಯಾದ ಶಬ್ದವು ಪರವಾಗಿರಲು ಬರುವುದು. ಚ ಕಾರದಿಂದ ' ತು, ತ್ತು ' ಗಳೂ ಬರುವುವು.**

**ಉದಾಹರಣೆ ||** ' ತಮ್ಮುತಯ್ವರ್, ನಿಮ್ಮುತೆಣ್ಬರ್, ಎಮ್ಮುತೊಂಬದಿಂಬರ್, ತಮ್ಮುತಯ್ದುಮನೆಗಳ್, ನಿಮ್ಮುತಾಱುಗಿರಿಗಳ್, ಎಮ್ಮುತೆಂಟುಮಕ್ಕಳ್ ||' ಮೊದಲಾದುವು ಇದಕ್ಕೆ ಲಕ್ಷ್ಯಗಳು. ಚ ಕಾರದಿಂದ ಸಮುಚ್ಚಿತಗಳಾದ 'ತು, ತ್ತು' ಗಳು ಬರಲು — ' ತಮ್ಮತಯ್ವರ್, ತಮ್ಮತ್ತಯ್ವರ್; ನಿಮ್ಮತೆಣ್ಬರ್, ನಿಮ್ಮತ್ತೆಣ್ಬರ್; ಎಮ್ಮತೊಂಬದಿಂಬರ್, ಎಮ್ಮತ್ತೊಂಬದಿಂಬರ್ || ' ಮೊದಲಾದ ರೂಪಗಳಾಗುವುವು. ಇದು ವಿಕಲ್ಪವಾದುದರಿಂದ ಇದು ಬಾರದಿದ್ದರೆ ' ತಮ್ಮ ಅಯ್ವರ್, ನಿಮ್ಮ ಅಯ್ವರ್, ಎಮ್ಮ ಅಯ್ವರ್ || ' ಮೊದಲಾದ ರೂಪಗಳಾಗುವುವು.

**ವಿಚಾರ ೨೮೬**

ಈ ಸೂತ್ರದಲ್ಲಿ — ' ಸಂಖ್ಯಾಯಾಂ, ಉತುಃ, ಚ ' ಎಂದು ಮೂರು ಪದಗಳಿರುವುವು. 'ಸಂಖ್ಯಾಯಾಂ' ಎಂಬುದು ಸಂಖ್ಯಾವಾಚಕ ಶಬ್ದಬೋಧಕಪರಸಪ್ತಮ್ಯಂತಪದವು. ' ಉತುಃ ' ಎಂಬುದು ಆದೇಶವು. ಚ ಕಾರದಿಂದ ಪೂರ್ವಸೂತ್ರದಲ್ಲಿ ವಿಧಿಸಿರುವ ' ತು, ತ್ತು ' ಗಳು ಸಮುಚ್ಚಿತಗಳಾಗುವುವು. ಪೂರ್ವದಿಂದ ' ವಾ, ಅದಃ, ತನ್ನಿನೆನಃ ' ಎಂದು ಅನುವರ್ತಿಸಲ್ಪಡುವುವು. ಇವಕ್ಕೆ ಪೂರ್ವದಂತೆಯೇ ಸಂಬಂಧ ಮಾಡಿಕೊಳ್ಳುವುದು. ತಥಾಚ — ' ತನ್, ನಿನ್, ಎನ್ ' ಎಂಬಿವಕ್ಕೆ ಸಂಖ್ಯಾವಾಚಕ ಶಬ್ದವು ಪರವಾಗಿರಲು ' ಅತ್ ' ಎಂಬ ಷಷ್ಠಿಗೆ ವಿಕಲ್ಪವಾಗಿ ' ಉತು, ತು, ತ್ತು ' ಎಂಬಾದೇಶಗಳು ಬರುವುವೆಂದು ಸೂತ್ರಾರ್ಥವಾಗಲು — ' ತಮ್ಮುತಯ್ವರ್ ' ಮೊದಲಾದುವು ಸಿದ್ಧಿಸುವುವು. ಪ್ರಯೋಗಬಲದಿಂದ ಬಹುತ್ವವಿಷಯಕವೆಂದು ತಿಳಿಯುವುದು. ಇಲ್ಲಿ ' ಆಂ ಅಯ್ವರ್ ಬಂದೆವು, ನೀಂ ಅಯ್ವರ್ ಪೋದಿರ್ ' ಎಂದು ಅಭೇದವಲ್ಲಿಯೂ ' ಎಮ್ಮಯ್ವರ್ ಬಂದೆವು, ನಿಮ್ಮಯ್ವರ್ ಪೋದಿರ್ ' ಎಂದು ಷಷ್ಠೀಪ್ರಯೋಗವುಂಟೆಂದು ತಿಳಿಯಬೇಕು.

ಇಲ್ಲಿ **ದರ್ಪಣಕಾರನು** —

ಇದಿರೊಳ್ ಸ್ವರಾದಿಸಂಖ್ಯೆಗ
ಳೊದವಿರೆ ನಿಮ್ಮೆಮ್ಮತಮ್ಮೆನಿಪ್ಪವು ಪಿಂತ
ಣ್ದೊದವಿರೆ ನಡುವಣ್ಗತುವ
ಪ್ಪುದಿವರ ಬಹುವಚನದಲ್ಲಿ ಪುಗಿಸದಿರೊಂದಂ (ಸೂತ್ರ ೧೪೮

ಎಂಬ ಸೂತ್ರವನ್ನು ಹೇಳಿ ಬಹುವಚನದಲ್ಲಿಯೇ ಬರುವುವೆಂದು ಸೂಚಿಸಿರುವನು.

**ಅವತಾರಿಕೆ ೨೮೭**

ಹೀಗೆಯೇ ತನಾದಿಗಳಿಗೆ ಪ್ರಥಮೆಯಲ್ಲಿ ಏಕತ್ವಾನೇಕತ್ವ ಸಾಧಾರಣವಾಗಿ ದೀರ್ಘವನ್ನು ವಿಧಿಸುತ್ತಾನೆ.

**ಸೂತ್ರಂ || ಮಿ ದೀರ್ಘಃ || ೨೮೭ ||**

**ಅರ್ಥ** || ' ತನ್, ನಿನ್ ' ಎಂಬಿವಕ್ಕೆ ಮಕಾರಾತ್ಮಕ ಸುಪ್ಪು ಪರದಲ್ಲಿರಲು ಸ್ವರ ಸ್ಥಾನದಲ್ಲಿ ದೀರ್ಘಾದೇಶವು ಏಕತ್ವಾನೇಕತ್ವ ಸಾಧಾರಣವಾಗಿ ಬರುವುದು.

**ಉದಾಹರಣೆ** || ' ತಾನ್, ತಾಮ್; ನೀನ್, ನೀಮ್ | ' ಎಂಬಿವು ಇದಕ್ಕೆ ಲಕ್ಷ್ಯಗಳು.

**ವಿಚಾರ ೨೮೭**

ಈ ಸೂತ್ರದಲ್ಲಿ — ' ಮಿ, ದೀರ್ಘಃ ' ಎಂದು ಎರಡು ಪದಗಳಿರುವುವು. ಪೂರ್ವದಿಂದ ' ತನ್ನಿನೇನಃ ' ಎಂದು ಅನುವರ್ತಿಸಲ್ಪಟ್ಟರೂ ' ಏನ್ ' ಎಂಬುದಕ್ಕೆ ವಿಶೇಷವನ್ನು ಮುಂದಿನ ಸೂತ್ರದಿಂದ ವಿಧಿಸುವುದರಿಂದ ಇಲ್ಲಿ ' ತನ್, ನಿನ್ ' ಎಂಬವೆರಡೇ ಸಂಬಂಧಿಸಲ್ಪಡುವುವು. ' ಮಿ ' ಎಂಬುದು ಪ್ರಥಮಾವಿಭಕ್ತಿಬೋಧಕಸಪ್ತಮ್ಯಂತವು. ಇದು ಪ್ರಕರಣಪ್ರಾಪ್ತಸುಪ್ಪಿಗೆ ವಿಶೇಷಣವು. ' ದೀರ್ಘಃ ' ಎಂಬುದರಿಂದ ' ಸ್ವರಸ್ಯ ' ಎಂಬುದು ಉಪಸ್ಥಿತವಾಗುವುದು. ಇಲ್ಲಿ ವಿಶೇಷನಿರ್ದೇಶವಾವುದೂ ಇಲ್ಲವಾದುದರಿಂದ ಏಕತ್ವ-ಬಹುತ್ವ ಸಾಧಾರಣವು. ತಥಾಚ — ' ತನ್, ನಿನ್ ' ಎಂಬಿವಕ್ಕೆ ಮ ಕಾರಾತ್ ಸುಪ್ಪು ಪರದಲ್ಲಿರಲು ' ತನ್, ನಿನ್ ' ಶಬ್ದಗಳ ಸ್ವರದ ಸ್ಥಾನದಲ್ಲಿ ದೀರ್ಘಾದೇಶವು ಬರುವುದೆಂದು ಸೂತ್ರಾರ್ಥವಾಗಲು ' ತಾನ್ ' ಮೊದಲಾದುವು ಸಿದ್ಧಿಸುವುವು.

**ಅವತಾರಿಕೆ ೨೮೮**

' ಏನ್ ' ಶಬ್ದಕ್ಕೆ ಕಾರ್ಯವಿಶೇಷವನ್ನು ವಿಧಿಸುತ್ತಾನೆ.

**ಸೂತ್ರಂ || ಆದೇನಃ || ೨೮೮ ||**

**ಅರ್ಥ** || ' ಏನ್ ' ಶಬ್ದದ ಸ್ವರದ ಸ್ಥಾನದಲ್ಲಿ ಆ ಕಾರಾದೇಶವು ಮ ಕಾರಾತ್ಮಕವಾದ ಸುಪ್ಪು ಪರದಲ್ಲಿರಲು ಬರುವುದು.

**ಉದಾಹರಣೆ** || ' ಆನ್, ಆಮ್|| ' ಇವು ಇದಕ್ಕೆ ಲಕ್ಷ್ಯಗಳು.

**ವಿಚಾರ ೨೮೮**

ಈ ಸೂತ್ರದಲ್ಲಿ — ' ಆತ್, ಏನಃ ' ಎಂದು ಎರಡು ಪದಗಳಿರುವುವು. ಪೂರ್ವ ಸೂತ್ರದಿಂದ ' ಮಿ, ದೀರ್ಘಃ ' ಎಂದು ಅನುವರ್ತಿಸಲ್ಪಡುವುವು. ' ಆತ್ ' ಎಂಬುದು ಇಲ್ಲಿ ವಿಧೇಯವು. ಇದಕ್ಕೆ ' ದೀರ್ಘಃ ' ಎಂಬುದು ವಿಶೇಷಣವು. ' ಆತ್ ' ಎಂಬುದು ಸ್ವತಃ ದೀರ್ಘವಾಗಿದ್ದರೂ ವಿಶೇಷಣವು ಅಂತ್ಯಾದೇಶನಿವೃತ್ತ್ಯರ್ಥವೆಂದು ತಿಳಿಯುವುದು. ತಥಾಚ — ಮ ಕಾರಾತ್ಮಕ ಸುಪ್ಪು ಪರದಲ್ಲಿರಲು ' ಏನ್ ' ಎಂಬುದರ ಸ್ವರಕ್ಕೆ ಆ ಕಾರಾದೇಶವು ಬರುವುದೆಂದು ಸೂತ್ರಾರ್ಥವಾಗಲು ' ಆನ್, ಆಮ್ ' ಎಂದು ಸಿದ್ಧಿಸುವುವು.

ಈ ತನಾದಿ ಪ್ರಕರಣದಲ್ಲಿ ಕೆಲವರು — ಅಸ್ಮದರ್ಥವಾಚಕನಾದ ' ನನ್ ' ಶಬ್ದವೊಂದಿರುವುದು: ಇವಕ್ಕೆ ಪ್ರಕ್ರಿಯೆ ತನಾದಿ ಸಾಧಾರಣವಾದುದೇ ಎಂದು ಹೇಳಿ — ' ನಾನ್, ನಾಮ್; ನನ್ನಂ, ನಮ್ಮಂ; ನನ್ನಿಂ, ನನ್ನಿಂದೆ, ನನ್ನಿಂದಂ; ನಮ್ಮಿಂ, ನಮ್ಮಿಂದೆ, ನಮ್ಮಿಂದಂ; ನನಗೆ, ನಮಗೆ; ನನ್ನತ್ತಣಿಂ, ನನ್ನತ್ತಣಿಂದೆ, ನನ್ನತ್ತಣಿಂದಂ; ನಮ್ಮತ್ತಣಿಂ, ನಮ್ಮತ್ತಣಿಂದೆ, ನಮ್ಮತ್ತಣಿಂದಂ;

ನನ್ನ, ನನತು, ನನತ್ತು, ನನ್ನತು ನನದು. ನನ್ನತು; ನಮ್ಮ, ನಮತು, ನಮತ್ತು, ನಮ್ಮದು. ನಮ್ಮತು: ನನ್ನೊಳ್, ನನ್ನಲ್ಲಿ; ನಮ್ಮೊಳ್, ನಮ್ಮಲ್ಲಿ’ ಎಂದು ರೂಪಸಿದ್ಧಿಯನ್ನು ಅಂಗೀಕರಿಸಿ —

ಶ್ರೀನುತಮನುಪಮಜಿನೇಂದ್ರನ
ದಾನತಕುಜಯುಗಳಮನನತಾನುದಿನಂ ಭಜಿಸೂ
ಡಾನುಣಿವುದೀಶಿಕ್ಷಿತಿಕೋ
ವ್ಯಾಪಮಂ ನಮಗೀಗೆ ವಿಮಲರತ್ನತ್ರಯಮಂ

ಶ್ರೀಕೇಳೀನಿಲಯಂ ನಿಜಾಂಘ್ರಿಕಮಲಂ ವಿದ್ವಾನಟೀನಾಟ್ಯನೇ
ದೀಕಲ್ಪಂ ಮುಖಚಂದ್ರಬಿಂಬಮುಪಿಲೀಲೋದ್ಯೋತ್ತಂಸಮಾಣಿಕ್ಯದೀ
ಪಾಕೀರ್ಣ್ಣಂ ಹರಿಪೀಠಪಾರ್ಶ್ವನೆನಿಪಂ ಪೂಜಾರ್ಹನಾರ್ಹಂತ್ಯಲ
ಕ್ಷ್ಮೀಕಾಂತಂ ಮುನಿಸುವ್ರತಂ ನಮಗೆ ಮಾಳ್ಕಿಸ್ವಾರ್ಥಸಂಸಿದ್ಧಿಯಂ

ಶ್ರೀಮದ್ಭವ್ಯಾಳಿಚಕ್ರಪ್ರಕರಸುಖಕರಂ ಸರ್ವಮಿಥ್ಯಾಂಧಕಾರ
ಸ್ತೋಮಪ್ರಧ್ವಂಸಿ ಬೋಧಾಮಲಕಿರಣಗಣೋದ್ಭಾಸಿ ಮೋಕ್ಷಾಬ್ಜಿನೀಸು
ಪ್ರೇಮಂ ಸ್ಯಾದ್ವಾದಪೂರ್ವಾಚಲಸಮುದಿತನಾಶ್ಚರ್ಯವೃತ್ತಾಭಿರಾಮಂ
ಹೇಮಾಂಗಂ ವರ್ಧಮಾನಾಹಿಮಕರನತಿಸಿದ್ಧೋದಯಮಂ ಮಾಳ್ಕೆ ನಮ್ಮೊಳ್

ಮೊದಲಾದ ಪ್ರಯೋಗಗಳನೇಕಗಳಿರುವುವೆಂದು ಹೇಳುವರು. ಇಲ್ಲಿ ಕೆಲವರು ಕಾವ್ಯಮುಖದಲ್ಲಿ ಆಶೀರೂಪವಾದ ಮಂಗಳವು ಪರಾರ್ಥವೇ ಅಲ್ಲದೆ ಸ್ವಾರ್ಥವಲ್ಲ. ‘ ನನ್ ’ ಎಂಬುದನ್ನಂಗೀಕರಿಸದೆ — ‘ ನಿಮಗೆ, ನಿಮ್ಮೊಳ್ ’ ಮೊದಲಾಗಿ ‘ ನಿನ್ ’ ಶಬ್ದವನ್ನೇ ಪಠಿಸುವರು. ಇದನ್ನು ಕೆಲವರು — ನಿರ್ವಿಘ್ನಪರಿಸಮಾಪ್ತಿಕಾಮರು ಪ್ರಾರೀಪ್ಸಿತಪ್ರತಿಬಂಧಕದುರಿತಾಪನೋದನಾರ್ಥವಾಗಿ ಪರಮಾತ್ಮನ ಗುಣಾನುಕೀರ್ತನರೂಪವಾದ ಮಂಗಳವನ್ನು ಮಾಡುವರಾಗಿ ಸ್ವಾರ್ಥವನ್ನು ಬಿಟ್ಟು ಪರಾರ್ಥದಲ್ಲಿಯೇ ಯತ್ನಿಸುವರು ಎಂದು ಹೇಳುವುದು ಅಯುಕ್ತವಾಗಿ ತೋರುವುದರಿಂದ ಅನುಮೋದಿಸುವುದಿಲ್ಲ. ಇದಲ್ಲದೆ ಇನ್ನೂ ಕೆಲವು ಪ್ರಯೋಗಗಳು ದೃಷ್ಟವಾಗುವುದರಿಂದ ಅಸ್ಮದರ್ಥವಾಚಕವಾದ ‘ ನನ್ ’ ಶಬ್ದವನ್ನು ಆವಶ್ಯಕವಾಗಿ ಅಂಗೀಕರಿಸಬೇಕು. ಆದಾಗ್ಯೂ ‘ ಎನ್ ’ ಪಕ್ಷಪಾತಿಗಳು ದಾಕ್ಷಿಣಾತ್ಯರೆಂದು ಪ್ರಸಿದ್ಧಿಯಿರುವುದರಿಂದ ಉತ್ತರಮಾರ್ಗಾನುಯಾಯಿಗಳಾದ ಕೆಲವು ಕವೀಶ್ವರರಿಂದಲೂ ಅಂಗೀಕರಿಸಲ್ಪಟ್ಟಿರುವುದೆಂದು ತಿಳಿಯಬೇಕು. ಈ ದಕ್ಷಿಣೋತ್ತರಮಾರ್ಗಭೇದಭಿನ್ನಪ್ರಯೋಗಚಾತುರೀಪ್ರಪಂಚವು ನೃಪತುಂಗನ ಗ್ರಂಥದಲ್ಲಿ ಉಪಲಭ್ಯಮಾನವಾಗಿರುವುದು.

**ಅವತಾರಿಕೆ ೨೮೯**

ಇದುವರೆಗೂ ನಾಮವಿಭಕ್ತ್ಯಪ್ರಕ್ರಿಯಯಾದ ಪ್ರಕ್ರಿಯೆಯನ್ನು ಹೇಳಿ ಈಗ ಪರಿಶಿಷ್ಟವಾದ ಸುಬಂತಗಳಿಗೆ ಸಮುಚ್ಚಯದಲ್ಲಿ ಪ್ರಯೋಗವ್ಯವಸ್ಥೆಯನ್ನು ವಿಧಿಸುತ್ತಾನೆ.

**ಸೂತ್ರಂ ॥ ಉಮ್ ಸಮುಚ್ಚಯೇ ಪರೋಽನದಃ ಪದಾತ್ ॥ ೨೮೯ ॥**

**ಅರ್ಥ ॥ ಷಷ್ಠ್ಯಂತವ್ಯತಿರಿಕ್ತ ಪದದಿಂದ ಪರವಾಗಿ ‘ ಉಮ್ ’ ಎಂಬುದು ಸಮುಚ್ಚಯವು ತೋರುವಾಗ ಪ್ರಯೋಗಿಸಲ್ಪಡುವುದು.**

**ಉದಾಹರಣೆ** ॥ ' ಹರಿಯುಂ ಹರನುಂ; ಜಿನೇಂದ್ರರುಂ ಗಣೇಂದ್ರರುಂ; ಕೇವಲಿಗಳುಂ ಶ್ರುತಕೇವಲಿಗಳುಂ; ಫಲದಿಂದಮುಂ ಪುಷ್ಪದಿಂದಮುಂ; ಆತನಿಂದಮುಂ ಆಕೆಯಿಂದಮುಂ; ಅದುಂ ಇದುಂ; ಮಾಡಿಯುಂ ಕೂಡಿಯುಂ ॥ ' ಮೊದಲಾದ ಷಷ್ಠ್ಯಂತವ್ಯತಿರಿಕ್ತಪದಗಳೆಲ್ಲಾ ಇದಕ್ಕೆ ಲಕ್ಷ್ಯಗಳು.

**ವಿಚಾರ ೨೮೯**

ಈ ಸೂತ್ರದಲ್ಲಿ – ' ಉಮ್, ಸಮುಚ್ಚಯೇ, ಪರಃ, ಅನದಃ, ಪದಾತ್ ' ಎಂದು ಐದು ಪದಗಳಿರುವುವು. 'ಉಮ್' ಎಂಬುದು ಸಮುಚ್ಚಯಾರ್ಥಕವಾದ ನಿಪಾತವು. ಇದು ಅಣಮಾಡ ಪಠಿತವಾಗಿರುವುದು. ' ಸಮುಚ್ಚಯ ' ವೆಂದರೆ ಪರಸ್ಪರ ನಿರಪೇಕ್ಷವಾಗಿದ್ದರೂ ಕೂಡಿದವಾಗಿಯೇ ಇನ್ನೊಂದರಲ್ಲಿ ಅನ್ವಯವನ್ನು ತೋರಿಸುವುದು. ಇಲ್ಲಿ ಸಪ್ತಮಿಯು—ವಿಷಯಸಪ್ತಮಿಯೆಂದು ಯುವುದು. ' ಪರಃ ' ಎಂಬುದು ' ಉಮ್ ' ಎಂಬುದಕ್ಕೆ ವಿಶೇಷಣವು. ' ಅನದಃ ' ಎಂಬುದು ' ನ ಅದ್, ಅನದ್, ತಸ್ಮಾದನದಃ ' ಎಂದು ಸಮಾಸ ಮಾಡುವುದರಿಂದ ' ಅಷ್ಟ್ಯತಿರಿಕ್ತಾತ್ ' ಎಂದರ್ಥವಾಗುವುದು. ' ಅದ್ ' ಎಂಬುದು ಷಷ್ಠೀವಿಭಕ್ತಿಪ್ರತ್ಯಯಬೋಧಕವು. ಆದ್ದರಿಂದ ತದಂತಬೋಧಕವಾಗುವುದು. 'ತದ್ವ್ಯತಿರಿಕ್ತ'ವೆಂದರೆ ಷಷ್ಠ್ಯಂತ ವ್ಯತಿರಿಕ್ತವೆಂದರ್ಥವಾಗುವುದು. ಇದು ಪಂಚಮ್ಯಂತವಾದುದರಿಂದ ' ಪದಾತ್ ' ಎಂಬುದಕ್ಕೆ ವಿಶೇಷಣವು. ' ಪದಾತ್ ' ಎಂಬುದು ದಿಗ್ಯೋಗಲಕ್ಷಣಪಂಚಮ್ಯಂತವಾದುದರಿಂದ ' ಪರಃ ' ಎಂಬುದರಲ್ಲಿ ಅನ್ವಯಿಸುವುದು. ತಥಾಚ – ಸಮುಚ್ಚಯ ವಿಷಯದಲ್ಲಿ ಷಷ್ಠ್ಯಂತವ್ಯತಿರಿಕ್ತ ಪದಕ್ಕೆ ಪರವಾಗಿ 'ಉಮ್' ಎಂಬ ಅವ್ಯಯವು ಪ್ರಯೋಗಿಸಲ್ಪಡುವುದು ಎಂದು ಸೂತ್ರಾರ್ಥವಾಗಲು ' ಹರಿಯುಂ ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು. ಇಲ್ಲಿ ' ಅನದಃ ' ಎಂದು ವಿಶೇಷಣವನ್ನು ಕೊಟ್ಟಿರುವುದರಿಂದ ' ಆತನ, ಆಕೆಯ, ಅದರ ' ಮೊದಲಾದ ಷಷ್ಠ್ಯಂತ ಪ್ರಯೋಗಗಳಲ್ಲಿ ಬರುವುದಿಲ್ಲ. ' ಪದಾತ್ ' ಎಂದು ಹೇಳಿರುವುದರಿಂದ ಪ್ರಕೃತಿಗಳಿಗೆ ಪರವಾಗಿ ಬರುವುದಿಲ್ಲ. ' ಪರಃ ' ಎಂದು ಹೇಳಿರುವುದರಿಂದ ಪೂರ್ವಪ್ರಯೋಗವಿಲ್ಲವೆಂದು ತಿಳಿಯಬೇಕು.

ಇಲ್ಲಿ ಸಮುಚ್ಚಯಾರ್ಥಕಗಳಾದ ಅವ್ಯಯಗಳು ' ಉಮ್, ಅಮ್ ' ಎಂಬಿವೆರಡು ಇರುವುವು. ಇವುಗಳ ಪ್ರಯೋಗನಿಯಮಾರ್ಥವಾಗಿ ಈ ಸೂತ್ರವು ಪ್ರಾರಂಭಿಸಲ್ಪಟ್ಟಿರುವುದು. ಅದರೆ ಇಲ್ಲಿ ಯಾವ ಅರ್ಥವು ಅಭಿಪ್ರೇತವಾಗಿರುವುದೋ ಅಲ್ಲ ತದಭಿಧಾಯಕ ಶಬ್ದವು ಪ್ರಯೋಗಿಸಲ್ಪಡುವುದು ಎಂಬುದು ಸರ್ವಜನೀನವಾಗಿರುವುದು. ಹಾಗೆಯೇ ಸಮುಚ್ಚಯಾರ್ಥವು ಅಭಿಪ್ರೇತವಾಗಲು ತದ್ವಾಚಕ ಶಬ್ದವು ಪ್ರಯೋಗಿಸಲ್ಪಡುವುದು. ಹಾಗೆ ಸಮುಚ್ಚಯಾನವಾದುದು ಯೋಗ್ಯತಾನುಸಾರವಾಗಿ ಸ್ವಯೋಗ್ಯವಾದುದರಲ್ಲಿ ಅದರಲ್ಲಿ ಸಂಬಂಧಿಸುವುದು. ಹೀಗಿರಲು ಅಲ್ಲಿ ಪ್ರಯೋಗನಿಯಮವಾವುದು? ಏತಕ್ಕೆ ಈ ಸೂತ್ರಾರಂಭ ಪ್ರಯಾಸವು? ಎಂದು ಶಂಕೆಯುಂಟಾಗಲು ಸಂಸ್ಕೃತದಲ್ಲಿ ಹಾಗೆ ನಿಯಮವಿಲ್ಲದೆ ಪ್ರಯೋಗಪದ್ಧತಿ ಭಾಷೆಯಲ್ಲಿ ಒಂದು ಸಾರ್ವತ್ರಿಕವು. ಒಂದು ನಿಯತ **ವಿಶೇಷವು** ಎಂಬುದನ್ನು ಸೂಚಿಸಲು ಈ ಸೂತ್ರಾರಂಭವೆಂದು ತಿಳಿಯಬೇಕು. ಹೇಗೆಂದರೆ — **ಕೆಲವೆಡೆಗಳಲ್ಲಿ** ಪದಕ್ಕೆ ಪರವಾಗಿಯೂ ಕೆಲವೆಡೆಯಲ್ಲಿ ಮಧ್ಯದಲ್ಲಿಯೂ ಕೆಲವೆಡೆಯಲ್ಲಿ ಪ್ರಯೋಗವೇ ಇಲ್ಲದೆಯೂ ಎಲ್ಲಿಯೂ ಪೂರ್ವವಾಗಿ ಇಲ್ಲದೆಯೂ

ಇರುವುದೆಂದು ಪ್ರಯೋಗಸಿಯಮವನ್ನು ಸೂಚಿಸುವುದರಿಂದ ಈ ಸೂತ್ರಾರಂಭವು ಸಾರ್ಥಕವೆಂದು ತಿಳಿಯಬೇಕು. ಸಂಸ್ಕೃತದಲ್ಲಿ ಸರ್ವತ್ರ ಪ್ರಯೋಗಿಸಿದರೂ ಭಾಷೆಯಲ್ಲಿ ಷಷ್ಠಿಯಲ್ಲಿ ಇಲ್ಲವೇ ಇಲ್ಲ. ಇದು ಪ್ರಾಚೀನಕವಿಪ್ರವಾಹಸಮ್ಮತವೆಂದು 'ಅನದಃ' ಎಂಬ ಪದದಿಂದ ಸೂಚಿತವಾಗುವುದು. ಇಲ್ಲಿ 'ಪದಾತ್, ಪರಃ' ಎಂದು ಪಂಚಮ್ಯಂತಪದವೂ ಪರಶಬ್ದವೂ ಇರುವುದರಿಂದ ಮಂದಬುದ್ಧಿಗೆ ಇದು ಪ್ರತ್ಯಯವೆಂದು ಭ್ರಾಂತಿಯುಂಟಾಗುವುದೆಂದು ತಿಳಿದು ಮೂಲದಲ್ಲಿ ಪ್ರಯೋಗಿಸಲ್ಪಡುವುವೆಂದು ಹೇಳಿರುವುದು. 'ಅಮ್' ವಿಷಯವು ಉತ್ತರ ಸೂತ್ರದಲ್ಲಿ ಹೇಳಲ್ಪಡುವುದು.

**ಅವತಾರಿಕೆ ೨೯೦**

ಈಗ 'ಉಮ್' ವಿಷಯದಲ್ಲಿ ಪ್ರಯೋಗ ವ್ಯವಸ್ಥೆಯನ್ನು ಮಾಡಿ 'ಅಮ್' ವಿಷಯದಲ್ಲಿ ವ್ಯವಸ್ಥಾಪಕನಾದ ಸೂತ್ರವನ್ನು ಹೇಳುತ್ತಾನೆ.

**ಸೂತ್ರಂ || ಒಳ್ಗೆತೋರಮ್ ಚ || ೨೯೦ ||**

**ಅರ್ಥ || ಒಳ್-ಪ್ರತ್ಯಯಾಂತ ಪದಕ್ಕೂ ಗೆತ್-ಪ್ರತ್ಯಯಾಂತ ಪದಕ್ಕೂ ಪರವಾಗಿ ಸಮುಚ್ಚಯವು ತೋರುವಾಗ 'ಉಮ್, ಅಮ್' ಇವೆರಡು ಅವ್ಯಯಗಳೂ ಪ್ರಯೋಗಿಸಲ್ಪಡುವುವು.**

**ಉದಾಹರಣೆ ||** 'ಅವನೊಳುಂ, ಅವನೊಳಂ; ಆಕೆಯೊಳುಂ, ಆಕೆಯೊಳಂ; ಅದಱೊಳುಂ, ಅದಱೊಳಂ; ಆತಂಗೆಯುಂ, ಆತಂಗಂ; ಆಕೆಗೆಯುಂ, ಆಕೆಗಂ; ಅದರ್ಕ್ಕೆಯುಂ, ಅದರ್ಕ್ಕಂ ||' ಮೊದಲಾದುವು ಕ್ರಮವಾಗಿ ಉಭಯ ಪ್ರತ್ಯಯಾಂತಗಳೂ ಇದಕ್ಕೆ ಲಕ್ಷ್ಯಗಳೆಂದು ತಿಳಿಯುವುದು.

**ವಿಚಾರ ೨೯೦**

ಈ ಸೂತ್ರದಲ್ಲಿ — 'ಒಳ್ಗೆತಃ, ಅಮ್, ಚ' ಎಂದು ಮೂರು ಪದಗಳಿರುವುವು. 'ಒಳ್ಗೆತಃ' ಎಂಬುದು ಸಪ್ತಮೀ-ಚತುರ್ಥೀ ವಿಭಕ್ತಿಗಳಿಗೆ ಸಮಹಾರದ್ವಂದ್ವಮಾಡಿ ಪಂಚಮ್ಯಂತವಾಗಿ ನಿರ್ದೇಶಿಸಲ್ಪಟ್ಟಿರುವುದು. ಪ್ರತ್ಯಯಗ್ರಹಣ ಪರಿಭಾಷೆಯಿಂದ ತದಂತ ಲಾಭವು ಬರುವುದು. ಇದು ಪೂರ್ವಸೂತ್ರದಿಂದ ಅನುವೃತ್ತವಾದ 'ಪದಾತ್' ಎಂಬುದಕ್ಕೆ ವಿಶೇಷಣವು. ಚ ಕಾರದಿಂದ 'ಉಮ್, ಪರಃ, ಸಮುಚ್ಚಯೇ' ಎಂಬಿವು ಅನುವರ್ತಿಸಲ್ಪಡುವುವು. ತಥಾಚ — ಒಳ್-ಪ್ರತ್ಯಯಾಂತ ಪದಕ್ಕೂ ಗೆತ್-ಪ್ರತ್ಯಯಾಂತ ಪದಕ್ಕೂ ಪರವಾಗಿ 'ಉಮ್, ಅಮ್' ಎಂಬ ಅವ್ಯಯಗಳು ಸಮುಚ್ಚಯಾರ್ಥವು ತೋರುವಾಗ ಪ್ರಯೋಗಿಸಲ್ಪಡುವುವು ಎಂದು ಸೂತ್ರಾರ್ಥವಾಗಲು 'ಅವನೊಳಂ' ಮೊದಲಾದುವು ಸಿದ್ಧಿಸುವುವು.

**ಅವತಾರಿಕೆ ೨೯೧**

ಪೂರ್ವಸೂತ್ರದಿಂದ ಸಾಮಾನ್ಯವಾಗಿ 'ಉಮ್' ಎಂಬುದಕ್ಕೆ ಪದದ ಪರವಾಗಿ ಪ್ರಯೋಗವು ಬೋಧಿಸಲ್ಪಟ್ಟಿತು. ಅದು ಅಮ್-ಅಂತಪದಕ್ಕೂ ಪರವಾಗಿ ಪ್ರಾಪ್ತವಾಗಲು ಅಲ್ಲಿ ನಿಯಮಾರ್ಥವಾಗಿ ಹೇಳುತ್ತಾನೆ.

**ಸೂತ್ರಂ || ಅಮಃ ಪ್ರಾಗಮಃ || ೨೯೧ ||**

**ಅರ್ಥ || ಅಮಂತವಾದ ಪದಕ್ಕೆ ಸಮುಚ್ಚಯ ವಿಷಯದಲ್ಲಿ 'ಉಮ್' ಪ್ರಯೋಗಿಸಲ್ಪಡುವುದು. ಅದು ಆ ಅಮ್-ಪ್ರತ್ಯಯಕ್ಕೆ ಪೂರ್ವದಲ್ಲಿ ಬರುವುದು.**

**ಉದಾಹರಣೆ ||** ' ಅವನುಮಂ ಅವರುಮಂ; ಆಕೆಯುಮಂ ಆಕೆಗಳುಮಂ; ಫಲಮುಮಂ ಪುಷ್ಪಮುಮಂ; ಅವರುಮನಂತಕನೊರ್ಮ್ಮೆಯೆ ಸವಿನೋಡಿದಂ || ' ಮೊದಲಾದುವು ಇದಕ್ಕೆ ಲಕ್ಷ್ಯಗಳು.

|| ಸುಬಾಶ್ರಯವಿಧಿ ಪ್ರಕರಣಂ ಸಂಪೂರ್ಣಂ ||

**ಇತಿ ಶ್ರೀ ಭಟ್ಟಾಕಳಂಕದೇವ ವಿರಚಿತ ಶಬ್ದಾನುಶಾಸನದಲ್ಲಿ ದ್ವಿತೀಯಪಾದವು ಸಮಾಪ್ತವು.**

**ವಿಚಾರ ೨೯೧**

ಈ ಸೂತ್ರದಲ್ಲಿ — ' ಅಮಃ, ಪ್ರಾಕ್, ಅಮಃ ' ಎಂದು ಮೂರು ಪದಗಳಿರುವುವು. ಪೂರ್ವದಿಂದ ' ಉಮ್, ಸಮುಚ್ಚಯೇ ' ಎಂಬಿವು ಅನುವರ್ತಿಸಲ್ಪಡುವುವು. ' ಅಮಃ ' ಎಂಬುದು ದ್ವಿತಿಯಾವಿಭಕ್ತಿಬೋಧಕ ಷಷ್ಠ್ಯಂತಪದವು. ಇದು ಪ್ರತ್ಯಯಗ್ರಹಣ ಪರಿಭಾಷೆಯಿಂದ ತದಂತಬೋಧಕವಾಗುವುದು. ' ಪ್ರಾಕ್ ' ಎಂಬುದು ಪರಪ್ರಯೋಗವ್ಯಾವರ್ತ್ಯರ್ಥಕವು. ಇದು ದಿಗ್ವಾಚಕವಾದುದರಿಂದ ಅವಧಿಯನ್ನಪೇಕ್ಷಿಸುವುದು. ಆ **ಅವಧಿಬೋಧಕವಾದುದೇ** ' ಅಮಃ ' ಎಂಬುದು; ಆದುದರಿಂದಲೇ ಇದು ಪಂಚಮ್ಯಂತವೆಂದು ತಿಳಿಯಬೇಕು. ಇದು ಪ್ರತ್ಯಯಬೋಧಕವಾದರೂ ಪುನಃ ತದ್ಗ್ರಹಣಸಾಮರ್ಥ್ಯದಿಂದ ತದಂತಬೋಧಕವಾಗುವುದಿಲ್ಲ. ತಥಾಚ — ಸಮುಚ್ಚಯಾರ್ಥದಲ್ಲಿ ಅಮಂತಪದದ ' ಅಮ್ ' ಎಂಬುದಕ್ಕೆ ಪೂರ್ವದಲ್ಲಿ ಎಂದರೆ ಪ್ರಕೃತಿ-ಪ್ರತ್ಯಯಗಳ ನಡುವೆ ' ಉಮ್ ' ಎಂಬುದು ಪ್ರಯೋಗಿಸಲ್ಪಡುವುದು ಎಂದು ಸೂತ್ರಾರ್ಥವಾಗಲು ' ಅವನುಮಂ, ಅವರುಮಂ ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು.

ಈ ವಿಷಯದಲ್ಲಿ **ದರ್ಪಣಕಾರನೂ** —

ಅಮುವೆಂದುಸಿರ್ದ ಸಮುಚ್ಚಯ
ದುಮುವಿಧಿ ಸಿರುತಂ ದ್ವಿತೀಯೆಯೊಳ್ ಪ್ರೋಕ್ತಂ
ಸಮುಸಿಸವೆಂದುಂ ಷಷ್ಠಿಯೊ
ಳಮುವುವು ಮಿಕ್ಕಾವಿಭಕ್ತಿಗಳ್ ಗೋಳಿಕ್ತಂ (ಸೂತ್ರ ೨೨೩)

ಎಂಬ ಸೂತ್ರವನ್ನು ಹೇಳಿರುವನು.

**|| ಇತಿ ಸುಭಾಶ್ರಯವಿಧಿ ಪ್ರಕರಣಂ ಸಮಾಪ್ತಂ ||**

ಶ್ರೀವೆಂಕಟಾರ್ಯಸಂಭೂತಕುಂಡಲಾರ್ಯವಿನಿರ್ಮಿತಾ
ಯಾ ಕರ್ಣಾಟಕಶಬ್ದಾನುಶಾಸನಸ್ಯ ಪ್ರಕಾಶಿಕಾ
ತಸ್ಯಾಂ ದ್ವಿತೀಯಃ ಪಾದಸ್ಸ್ಯಾತ್ಪೂರ್ಣಃ ಪೂರ್ಣಕೃಪಾಬಲಾತ್
ಬುಧಾಸ್ತ್ರೈಗುಣ್ಯಾನ್ನದೋಷಾರ್ಥಂ ಬೋಧಯಂತು ಮಮಾಪರಾನ್

**ಇಂತು ಶ್ರೀಮದ್ ಭಟ್ಟಾಕಳಂಕದೇವ ವಿರಚಿತ ಕರ್ಣಾಟಕ ಶಬ್ದಾನುಶಾಸನ ಸೂತ್ರದ ಬಾಷಾ ವ್ಯಾಖ್ಯಾನರೂಪವಾದ ಪ್ರಕಾಶಿಕೆಯಲ್ಲಿ ಎರಡನೆಯ ಪಾದವು ಸಂಪೂರ್ಣವಾದುದು. ಶ್ರೀ.**

ಶ್ರೀರಸ್ತು

# ಕರ್ಣಾಟಕ ಶಬ್ದಾನುಶಾಸನ ಪ್ರಕಾಶಿಕೆ

## ಅಥ ತೃತೀಯಪಾದ ಪ್ರಾರಂಭಃ

### ಅಥ ಸಮಾಸ ಪ್ರಕರಣಂ

**ಅವತಾರಿಕೆ ೨೯೨**

ಪೂರ್ವಪಾದದಲ್ಲಿ — " **ಅಪದಂ ನಪ್ರಯುಂಜೀತ** " ಎಂಬ ನಿರುಕ್ತಕಾರರಾದ **ಯಾಸ್ಕ** ಮಹರ್ಷಿಗಳ ವಚನದಿಂದ ಪದಸಂಜ್ಞಕವಲ್ಲದ ಶಬ್ದಗಳನ್ನು ಪ್ರಯೋಗಿಸಲಾಗದೆಂದು ತೋರುತ್ತಿದ್ದುದರಿಂದ ಆ ಪ್ರಯೋಗಾರ್ಹತಾಸಂಪಾದಕವಾದ ಪದತ್ವವನ್ನು ನಿರೂಪಿಸುವುದು ಅತ್ಯಾವಶ್ಯಕವೆಂದು ಸಂಜ್ಞಾಪ್ರಕರಣದಲ್ಲಿ ಹೇಳಿರುವ — ' **ಸುಪ್ ತಿಙಂತಂ ಪದಂ** || ೧೮ || ' ಎಂಬ ಸೂತ್ರದಿಂದ ಸಾಮಾನ್ಯವಾಗಿ ಪದಲಕ್ಷಣವನ್ನು ಹೇಳಿದಾಗ್ಯೂ ವಿಶೇಷಾಕಾರವಾಗಿ ತಿಳಿಯುವುದಕ್ಕೋಸ್ಕರ ಆ ಲಕ್ಷಣದಲ್ಲಿ ಪೃಥಗುಪಸ್ಥಿತವಾದ ಸುಬಂತರೂಪಪದನಿಷ್ಪತ್ತ್ಯರ್ಥವಾಗಿ ಪ್ರಕೃತಿವಿಶೇಷಗಳಮೇಲೆ ಅರ್ಥವಿಶೇಷದಲ್ಲಿ ಸುಪ್-ಪ್ರತ್ಯಯಗಳನ್ನೂ ಅವುಗಳ ಪ್ರಕ್ರಿಯೆಗಳನ್ನೂ ನಿರೂಪಿಸಿ ಈ ಪಾದದಲ್ಲಿ ಅಂತಹ ಪದಗಳಿಗೆ ವಿಶೇಷಣವಿಶೇಷ್ಯಭಾವದಿಂದ ಅಖಂಡೋಪಸ್ಥಿತಿಜನಕಗಳಾದ ಪದಾಂತರಗಳ ಸಮಭಿವ್ಯಾಹಾರವಿರಲು ಆಗುವ ಸಮಾಸ ಸಂಜ್ಞೆಯನ್ನು ವಿಧಿಸಲು ಮೊದಲು ಕೃತ್-ಸಾಧಾರಣವಾದ ಪರಿಭಾಷಾಸೂತ್ರವನ್ನು ಹೇಳುತ್ತಾನೆ.

**ಸೂತ್ರಂ || ಸಮರ್ಥಃ ಪದವಿಧಿಃ || ೨೯೨ ||**

**ಅರ್ಥ** || **ಈ ಶಾಸ್ತ್ರದಲ್ಲಿ ಹೇಳುವ ಪದಸಂಬಂಧಿಯಾದ ವಿಧಿಯು ವಿಶೇಷ್ಯವಿಶೇಷಣಭಾವಗಳಿಂದ ಅಖಂಡೋಪಸ್ಥಿತಿಜನಕಗಳಾದ ಪದಗಳನ್ನು ಆಶ್ರಯಿಸಿಕೊಂಡು ಬರುವುದು.**

**ಉದಾಹರಣೆ** || ' **ಅಮುಕ್ತತ್ವಿಙಾ || ೨೯೪ ||, ಇಮ್ ಕರಣೇ || ೩೦೦ ||, ಗೆತ್ತದರ್ಥೇನ || ೩೦೨ ||, ಭೀತ್ಯರ್ಥೇನಾತ್ರಾಣಂ || ೩೦೩ ||, ಅದ್ || ೩೦೪ ||, ಒಳ್ ಸಾಧುನಿಪುಣಾರ್ಥೇನ || ೩೦೫ ||, ಅಂಶಿನಾ ಭಿನ್ನೇನ || ೩೦೬ ||, ಸಂಖ್ಯಾ ಸಮಾಹಾರೇ || ೩೦೭ ||, ವಿಶೇಷಣಮೇಕಾರ್ಥೇನ || ೩೦೯ ||, ಅನ್ಯಾರ್ಥೇ ಬಹುವ್ರೀಹಿರ್ನಿತ್ಯಂ || ೩೧೦ ||, ದ್ವಂದ್ವಃ ಸಾಹಿತ್ಯೇ || ೩೧೪ ||** ' ಮೊದಲಾದ ಸೂತ್ರಗಳಿಂದ ವಿಧಿಸುವ ಸಮಾಸ ಸಂಜ್ಞಾದಿಗಳು ಅಮಾದಿ ಸುಬಂತಗಳಿಗೆ ವಿಧಿಸುವುದರಿಂದ ಅವು ಪದಸಂಬಂಧಿಗಳಾದ ವಿಧಿಗಳೆಂದು ಆ ಸೂತ್ರಗಳಲ್ಲಿ ಸಮರ್ಥಪದವು ಉಪಸ್ಥಿತವಾಗಿ ಆ ವಿಧಿಗಳು ತದಾಶ್ರಿತಗಳಾಗುವುವೆಂದು ತಿಳಿಯಬೇಕು. ಆದುದರಿಂದ ಇಂತಹ ವಿಧಿಸೂತ್ರಗಳೇ ಈ ಸೂತ್ರಕ್ಕೆ ಉದಾಹರಣೆಗಳಾಗಿರುವುವು. ಆದುದರಿಂದ ಆ ಸೂತ್ರಗಳಿಂದ ಸಾಧಿಸಲ್ಪಡುವ — ' **ವಜ್ರಂಗೊಂಡಯ್, ನೀರ್ದೊಳೆದಂ, ತೇರ್ಮರಂ, ಪುಲಿಯಳ್ಕು,** ಮರ

ಗೊಂಬು, ಜಗಳಜಾಣಂ, ಮುಂಗಾಲ್, ಮೂಲೋಕಂ, ಬೆಳ್ದಾವರೆ, ನಿಡುಗಣ್ಣಂ, ಮರಗಿಡುಗಳ್' ಮೊದಲಾದುವೇ ಇದರಿಂದ ಸಾಧ್ಯವಾಗುವ ಲಕ್ಷಣಗಳೆಂದು ತಿಳಿಯುವುದು.

**ವಿಚಾರ ೨೯೨**

ಈ ಸೂತ್ರದಲ್ಲಿ — 'ಸಮರ್ಥಃ, ಪದವಿಧಿಃ' ಎಂದು ಎರಡು ಪದಗಳಿರುವುವು. 'ಸಮರ್ಥಃ' ಎಂಬುದಕ್ಕೆ — '**ಸಮ್, ಏಕೀಭಾವಸಮ್ಯಕ್ತ್ವವ್ಯಪೇಕ್ಷಾತ್ವರಣೇಷು ಚ**' ಎಂಬ ಕೋಶವಚನದಿಂದ 'ಸಮ್' ಎಂದರೆ ಏಕೀಭೂತವಾದುದು; ಅಥವಾ ವ್ಯಪೇಕ್ಷಿತವಾದುದು. ಇದು 'ಅರ್ಥಃ' ಎಂಬುದಕ್ಕೆ ವಿಶೇಷಣವನ್ನು ಮಾಡಿ ಬಹುವ್ರೀಹಿಸಮಾಸವನ್ನು ಅಂಗಿಕರಿಸಲು ಏಕೀಭೂತವಾದ ಅಥವಾ ವ್ಯಪೇಕ್ಷಿತವಾದ ಅರ್ಥವುಳ್ಳ ಶಬ್ದವಾವುದೋ ಅದು ಎಂದರ್ಥವಾಗುವುದು. ಇದೇ ತಾತ್ಪರ್ಯದಿಂದ ಮಹಾಭಾಷ್ಯಕಾರರು — '**ಸಂಶ್ಲಿಷ್ಟಾರ್ಥಃ ಸಮರ್ಥಃ**' ಎಂದು ಹೇಳಿರುವರು. ಆದುದರಿಂದ ಈ ಸಮರ್ಥಪದವು 'ಸಂಶ್ಲಿಷ್ಟಾರ್ಥವುಳ್ಳ' ಎಂದರೆ (ವಿಶೇಷ್ಯವಿಶೇಷಣಭಾವಾಪನ್ನವಾಗಿ ಅಖಂಡೋಪಸ್ಥಿತಿಜನಕ) ಶಬ್ದಸಮುದಾಯಬೋಧಕವಾಗಿರುವುದು. ಇದು 'ಪದವಿಧಿಃ' ಎಂಬುದಕ್ಕೆ ವಿಶೇಷಣವು. 'ಪದವಿಧಿ' ಎಂದರೆ — '**ಪದಸ್ಯ ವಿಧಿಃ, ಪದಯೋರ್ವಿಧಿಃ, ಪದಾನಾಂ ವಿಧಿಃ**' ಎಂದು ವಚನತ್ರಯದಿಂದಲೂ ವಿಗ್ರಹವನ್ನಂಗೀಕರಿಸಿರುವುದರಿಂದ ಏಕಪದಸಂಬಂಧಿ-ದ್ವಿಪದಸಂಬಂಧಿವಿಧಿಗಳೆಂದು ಅರ್ಥವಾಗುವುದು. ಇದಕ್ಕೂ ಸಮರ್ಥವಾದ ಶಬ್ದಕ್ಕೂ ಸಾಮಾನಾಧಿಕರಣ್ಯಸಂಬಂಧದಿಂದ ಅನ್ವಯವು ಕೂಡುವುದಿಲ್ಲವಾದುದರಿಂದ ಸಮರ್ಥಪದಕ್ಕೆ ಸಮರ್ಥಾಶ್ರಿತವೆಂದರ್ಥವನ್ನು ಹೇಳಬೇಕು. ಆದುದರಿಂದ ಸಾಮಾನ್ಯವಾಗಿ ಪದಸಂಬಂಧಿಯಾದ ವಿಧಿಯು ಸಮರ್ಥಪದಾಶ್ರಿತ (ವಿಶೇಷ್ಯವಿಶೇಷಣಭಾವಗಳಿಂದ ಅಖಂಡೋಪಸ್ಥಿತಿಜನಕಪದಾಶ್ರಿತ) ವಾಗುವುದೆಂದು ವೃತ್ತಿಯಲ್ಲಿ ಅರ್ಥವನ್ನು ಕೊಟ್ಟಿರುವುದು. ಆದುದರಿಂದಲೇ ಅಂತಹ ಪದಸಂಬಂಧಿಯಾದ ವಿಧಿಸೂತ್ರಗಳಿಗೆ ಲಕ್ಷ್ಯಗಳಾಗಿರುವ ಶಬ್ದಗಳೆಲ್ಲಾ ಇದಕ್ಕೂ ಲಕ್ಷ್ಯಗಳೆಂದು ಇಲ್ಲಿ ಅವೇ ಉದಾಹರಿಸಲ್ಪಟ್ಟಿವೆ.

ಈ ಸೂತ್ರವನ್ನು ಕೆಲವರು ಪರಿಭಾಷಾಸೂತ್ರವೆಂದೂ ಕೆಲವರು ಅಧಿಕಾರಸೂತ್ರವೆಂದೂ ಹೇಳುತ್ತಾರೆ. ಈ ಎರಡು ಪಕ್ಷಗಳಲ್ಲಿಯೂ ಫಲದಲ್ಲಿ ಏನೂ ವ್ಯತ್ಯಾಸ ತೋರುವುದಿಲ್ಲ. ಆದಾಗ್ಯೂ ಅಧಿಕಾರಪಕ್ಷವನ್ನಂಗೀಕರಿಸಲು ಪ್ರತಿಪದವಿಧಿ ಸೂತ್ರದಲ್ಲಿಯೂ 'ಸಮರ್ಥಃ' ಎಂಬುದನ್ನು ಅವೃತ್ತಿ ಮಾಡಿ ಸಂಬಂಧಿಸಬೇಕಾಗುವುದರಿಂದ ಕ್ಲಿಷ್ಟವಾಗುವುದೆಂದು ಮಹಾಭಾಷ್ಯಕಾರರು ಹೇಳಿರುವಂತೆ ಪರಿಭಾಷಾಸೂತ್ರವನ್ನಂಗೀಕರಿಸಿ ಎಲ್ಲಾ ಪದವಿಧಿಯಲ್ಲಿಯೂ ಅರ್ಥಕ್ಯೋಪಸ್ಥಿತಿಯನ್ನು ಅಂಗೀಕರಿಸುವುದರಲ್ಲಿ ಸೌಲಭ್ಯವಿರುವುದೆಂದು ಇಲ್ಲಿ ಇದನ್ನು ಪರಿಭಾಷೆಯೆಂದು ಹೇಳಬೇಕು.

ಇಲ್ಲಿ — ಸಂಶ್ಲಿಷ್ಟಾರ್ಥಕವಾದ ಸಮರ್ಥಪದದಿಂದ ಪ್ರತೀಯಮಾನವಾದ ಸಾಮರ್ಥ್ಯವೆಂಬುದು — ಏಕಾರ್ಥಭಾವಲಕ್ಷಣವೆಂದೂ ವ್ಯಪೇಕ್ಷಾಲಕ್ಷಣವೆಂದೂ ಎರಡು ಬಗೆಯಾಗಿರುವುದು. ಇವುಗಳಲ್ಲಿ ಏಕಾರ್ಥಭಾವಲಕ್ಷಣವೆಂದರೆ — '**ಏಕಃ ಅರ್ಥಃ ಯೇಷಾಂ ತೇ ಏಕಾರ್ಥಾಃ ಪೂರ್ವಮನೇಕಾರ್ಥಾಃ ಇದಾನೀಮೇಕಾರ್ಥಾಃ ಭವಂತೀತಿ**' ಎಂಬ ವಿಗ್ರಹದಿಂದ ಮೊದಲು ಬೇರೆಬೇರೆ ಅರ್ಥವುಳ್ಳವುಗಳಾಗಿ, ಅನಂತರದಲ್ಲಿ ವಿಶೇಷ್ಯವಿಶೇಷಣಭಾವಗಳಿಂದ ಏಕಾರ್ಥ

ಬೋಧಕವಾಗಿ ನಿಲ್ಲುವುದೆಂದರ್ಥವಾಗುವುದು. ಇದಕ್ಕೆ ಶಾಸ್ತ್ರಕಾರರು 'ಸಾಧಾರಣಾಭಿಧೇಯತೇ' ಎಂದು ವ್ಯವಹಾರ ಮಾಡುವರು. ಇದನ್ನೇ ವ್ಯಾಕರಣದಲ್ಲಿ ' ವಿಶೇಷ್ಯವಿಶೇಷಣಭಾವಾವಗಾಹ್ಯೇಕೋಪಸ್ಥಿತಿಜನಕತ್ವರೂಪಸಾಮರ್ಥ್ಯ ' ವೆಂದು ವ್ಯವಹರಿಸುವರು.

ವ್ಯಪೇಕ್ಷಾಲಕ್ಷಣವೆಂದರೆ — ಬೇರೆ ಬೇರೆ ತಮ್ಮ ತಮ್ಮ ಅರ್ಥಗಳನ್ನು ಬೋಧಿಸಿ ಪರಸ್ಪರಾಕಾಂಕ್ಷೆಯಿಂದ ಅನ್ಯೋನ್ಯವಾಗಿ ಸಂಬಂಧವಾಗುವುದೆಂದು ತಿಳಿಯಬೇಕು. ಇದನ್ನು ಸಂಸ್ಕೃತ ವ್ಯಾಕರಣಕಾರರು — ' **ಸ್ವಾರ್ಥೇ ಪರ್ಯವಸಾಯಿನಾಂ ಪದಾನಾಮಾಕಾಂಕ್ಷಾದಿವಶಾತ್ ಪರಸ್ಪರಂ ಯಃ ಸಂಬಂಧಃ ಸಾ ವ್ಯಪೇಕ್ಷಾ** ' ಎಂದು ಹೇಳಿರುವರು. ಹೀಗೆ ಸಾಮರ್ಥ್ಯವು ಎರಡು ಬಗೆಯೆಂಬುದು ಸರ್ವಸಮ್ಮತವಾಗಿರುವುದು. ಆದರೆ ಈ ಉಭಯ ವಿಧವಾದ ಸಾಮರ್ಥ್ಯವೆರಡೂ ಒಂದೇ ಎಡೆಯಲ್ಲಿರುವುದೆ ? ಅಥವಾ ಕೆಲವೆಡೆಯಲ್ಲಿ ಇವೆರಡರಲ್ಲಿ ಒಂದೊಂದೆ ಇರುವುದೆ? ಎಂದು ಆಶಂಕೆಯುಂಟಾಗಲು ಇಲ್ಲಿ ವ್ಯವಸ್ಥಾಪಕ ಸಾಮಗ್ರಿಗಳೇನೆಂದರೆ ಪ್ರಯೋಗಗಳಲ್ಲಿ ಶಾಸ್ತ್ರಕಾರರ ಸಮ್ಮತಿಗಳೆಂದು ತಿಳಿಯಬೇಕು.

ಹೇಗೆಂದರೆ — ಶಾಸ್ತ್ರಕಾರರು '**ಪದಾರ್ಥಃ ಪದಾರ್ಥೇನ ಯುಜ್ಯತೇ ನ ತು ಪದಾರ್ಥೈಕದೇಶೇನ**' ಎಂಬ **ಯಾಸ್ಕಮುನಿ** ವಚನವನ್ನು ಅಂಗೀಕರಿಸಿ ಸಮಾಸಾದಿ ವೃತ್ತಿಗಳಲ್ಲಿ ಅಖಂಡೋಪಸ್ಥಿತಿಯನ್ನು ಹೇಳುವುದರಿಂದ ' ಸುಂದರನಾದ ದೊರೆಯ ಮಗನು ' ಎಂಬುದೇ ಮೊದಲಾದ ವಾಕ್ಯಗಳಲ್ಲಿ ಹೇಗೆ ' ದೊರೆಯ ' ಎಂಬುದಕ್ಕೆ ' ಸುಂದರ ' ಎಂಬುದನ್ನು ವಿಶೇಷಣ ಮಾಡುತ್ತೇವೋ ಹಾಗೆ ' ದೊರೆಮಗ ' ಎಂಬ ಸಮಾಸದಲ್ಲಿ ಪದಾರ್ಥಕದೇಶವಾದ 'ದೊರೆ'ಯೆಂಬುದಕ್ಕೆ ' ಸುಂದರ ' ಎಂದು ಪೃಥಕ್ಕಾಗಿ ಹೇಳುವ ವಿಶೇಷಣವನ್ನು ಮಾಡಬಾರದೆಂದು ಹೇಳುವರು. ಆದುದರಿಂದ ಸಮಾಸಾದಿ ವೃತ್ತಿಗಳಲ್ಲೆಲ್ಲಾ ಏಕಾರ್ಥೀಭಾವವನ್ನೂ ವಾಕ್ಯಗಳಲ್ಲೆಲ್ಲಾ ವ್ಯಪೇಕ್ಷಾಲಕ್ಷಣವನ್ನೂ ಅಂಗೀಕರಿಸಬೇಕೆಂದು ತೋರುವುದು. ಆದರೆ ಕೆಲವೆಡೆ ಸಮಸ್ತಗಳಾಗಿ ಏಕದೇಶಾನ್ವಯವುಳ್ಳ ಪ್ರಯೋಗಗಳು ಉಪಲಭ್ಯಮಾನವಾಗುವುದರಿಂದ ಕ್ವಚಿತ್ ನಿತ್ಯಸಾಪೇಕ್ಷಸ್ಥಲಗಳಲ್ಲಿ ಏಕದೇಶಾನ್ವಯವು ಬಾಧಿತವಲ್ಲವೆಂದು ತಿಳಿಯಬೇಕು. ಆದುದರಿಂದಲೇ **ವಾಮನಾಚಾರ್ಯರು**– ' **ನ ವಿಶೇಷಣಾನಾಂ ವೃತ್ತಿರ್ನ, ವೃತ್ತಸ್ಯ ವಿಶೇಷಣಯೋಗೋರ್ನ** ' ಎಂಬ ವಿಧಿಗೆ ಅಪವಾದವಾಗಿ ' **ನಿತ್ಯಸಾಪೇಕ್ಷಂ ಸಮಸ್ಯತೇ** ' ಎಂಬ ಸೂತ್ರವನ್ನು ಹೇಳಿರುವರು.

ಇಲ್ಲಿ ಸಮಾಸಾದಿ ವೃತ್ತಿಗಳಲ್ಲಿಯೇ ಏಕಾರ್ಥೀಭಾವಲಕ್ಷಣವಿರುವುದು— ಎಂದು ಮೇಲೆ ಹೇಳಿರುವುದರಿಂದ ಸಮಾಸಾದಿವೃತ್ತಿಗಳ ಸ್ವರೂಪವನ್ನು ತಿಳಿಸಬೇಕಾದುದು ಆವಶ್ಯಕವೆಂದು ಕೆಲವರು —

ಪದಯೋಸ್ತು ಪದಾನಾಂ ವಾ ವಿಭಕ್ತಿರ್ಯತ್ರ ಲುಪ್ಯತೇ
ಸಮಾಸಾಖ್ಯಸ್ಸ ಏವ ಸ್ಯಾತ್ತದ್ಧಿತೋತ್ಪತ್ತಿರೇವ ಚ

ಎಂದು ಹೇಳಿರುವ ಪ್ರಾಚೀನರ ಕಾರಿಕೆಯನ್ನು ಇಲ್ಲಿ ಉದಾಹರಿಸಿ ಈ ಕಾರಿಕೆಯಲ್ಲಿ ಹೇಳಿರುವ ತದ್ಧಿತಪದವು ಕೃತ್ತಿಗೂ ಉಪಲಕ್ಷಕವೆಂದು ' ಸಮಾಸವೃತ್ತಿ, ತದ್ಧಿತವೃತ್ತಿ, ಕೃದ್ವೃತ್ತಿ ' ಎಂದು ಮೂರು ವೃತ್ತಿಗಳೆಂದು ಹೇಳುವರು. ಕೆಲವರು ಕೃತ್ತದ್ಧಿತವೃತ್ತಿಗಳೆರಡೂ ಸಮಾಸ ಸಜಾತೀಯಗಳಾದುದರಿಂದ ಸಮಾಸದಲ್ಲಿಯೇ ಇವೆರಡಕ್ಕೂ ಅಂತರ್ಭಾವವೆಂದು ಹೇಳುವರು.

ಆದುದರಿಂದಲೇ **ಶಾಸನಕಾರನು** ಈ ಸೂತ್ರದ ವೃತ್ತಿಯಲ್ಲಿ – '**ಸಾಮರ್ಥ್ಯಂ ಚ ದ್ವೆಧಾ ವ್ಯಪೇಕ್ಷಾ ಲಕ್ಷಣಮೇಕಾರ್ಥೀಭಾವಲಕ್ಷಣಂ ಚೇತಿ ತತ್ರಾದ್ಯಂ ಸಮಾಸೇ**' ಎಂದು ಹೇಳಿರುವನು. ಇಲ್ಲಿ ಸಮಾಸ ಪದವು ವೃತ್ತಿಮಾತ್ರಪರವೆಂದು ತಿಳಿಯಬೇಕು. ವೃತ್ತಿಯೆಂದರೆ — ಅವಯವಶಕ್ತಿಸಹಕೃತ ಸಮುದಾಯಶಕ್ತಿಯಿಂದ ಅರ್ಥವಿಶೇಷವನ್ನು ಬೋಧಿಸುವ ಶಬ್ದವಿಶೇಷವೆಂದು ಪ್ರಾಚೀನ ವೈಯಾಕರಣರು ವ್ಯವಹರಿಸುವ — '**ಪರಾರ್ಥಾಭಿಧಾನಂ ವೃತ್ತಿಃ**' ಎಂಬ ವಚನದಿಂದ ತಿಳಿಯುವುದು. ಇಲ್ಲಿ 'ಪರಾರ್ಥಾಭಿಧಾನ' ವೆಂದರೆ '**ಪರಸ್ಯ ವೃತ್ತಿತ್ವೇನ ಸಂಪ್ರತಿಪನ್ನಶಬ್ದಸಮುದಾಯಾವಯವಾತಿರಿಕ್ತಸ್ಯ, ಅರ್ಥಸ್ಯ,—ಅಭಿಧೇಯಸ್ಯ, ಬೋಧನಂ — ಜ್ಞಾನಸಾಧಾನಂ, ವೃತ್ತಿಃ**' ಎಂಬ ವಿಗ್ರಹ ವಾಕ್ಯಾರ್ಥವನ್ನು ಪರ್ಯಾಲೋಚಿಸಿದರೆ ಪೂರ್ವೋಕ್ತಾರ್ಥವೇ ವೃತ್ತಿಯೆಂಬುದರ ಅರ್ಥವೆಂದು ತಿಳಿಯುವುದು. ಇಂತಹ ವೃತ್ತಿಯು ಸಾಮಾನ್ಯವಾಗಿ ಜಹತ್ಸ್ವಾರ್ಥ, ಅಜಹತ್ಸ್ವಾರ್ಥಗಳೆಂದು ಎರಡು ಬಗೆಯಾಗಿರುವುದು. ಈ ಎರಡರಲ್ಲಿ 'ಜಹತ್ಸ್ವಾರ್ಥ' ಎಂಬುದು — '**ಜಹತ್ಸ್ವಾರ್ಥಾ ತು ತತ್ರೈವ ರೂಢಿರ್ಯತ್ರ ವಿರೋಧಿನೀ**' ಎಂಬ ವಚನ ಪ್ರಾಮಾಣ್ಯದಿಂದ ಎಲ್ಲಿ ಲೋಕರೂಢಿಯು ವಿರುದ್ಧವಾಗುವುದೋ ಅಲ್ಲಿಯೇ ಅವಯವಾರ್ಥಕ್ಕೆ ತ್ಯಾಗಮಾಡಿ ಸಮುದಾಯಕ್ಕೇ ಅಖಂಡಶಕ್ತಿಯನ್ನಂಗೀಕರಿಸುವುದೆಂದು ತಿಳಿಯುವುದು. ಅಜಹತ್ಸ್ವಾರ್ಥವೆಂಬುದಾದರೊ ಅವಯವಶಕ್ತಿಸಹಕೃತವಾಗಿಯೇ ಸಮುದಾಯಕ್ಕೆ ಅಖಂಡಶಕ್ತಿಯನ್ನು ಅಂಗೀಕರಿಸುವುದು. ಆದುದರಿಂದಲೇ ಸಮುದಾಯಕ್ಕೆ ವೃತ್ತಿಶಬ್ದವಾಚ್ಯತ್ವವು ಶಬ್ದಾರ್ಥಸಂಬಂಧ ರೂಪವೃತ್ತಿಮತ್ವವಿರುವುದರಿಂದ ಸಿದ್ಧಿಸುವುವೆಂದು **ಕೈಯಟಾದಿ**ಗಳು ಹೇಳಿರುವರು. ಇಲ್ಲಿ — 'ರಾಜಪುರುಷ' ಮೊದಲಾದ ವೃತ್ತಿಯಲ್ಲಿ 'ರಾಜಪುರುಷ' ಮೊದಲಾದ ಪದವು ರಾಜಸಂಬಂಧಿ ಪುರುಷನಲ್ಲಿ ಶಕ್ತವಾಗಿರುವುದು ಎಂಬ ಶಕ್ತಿಜ್ಞಾನವು ಉಂಟಾಗುವುದು. ಅಲ್ಲಿ ಅವಯವಶಕ್ತಿಯು ಲೌಕಿಕವು. ಸಮುದಾಯಶಕ್ತಿಯಾದರೋ ಶಾಸ್ತ್ರಸಿದ್ಧವಾದುದೆಂದು ತಿಳಿಯಬೇಕು. ಏವಂಚ ಎಲ್ಲಿ ಬಾಧಕವಿರುವುದಿಲ್ಲವೋ ಅಲ್ಲಿ ಅವಯವಶಕ್ತಿಯು ಆದರಿಸಲ್ಪಡುವುದು. ಎಲ್ಲಿ ಬಾಧಕವಿಲ್ಲವೋ ಅಲ್ಲಿ ಅವಯವಶಕ್ತಿಯನ್ನು ಬಿಟ್ಟು ಸಮುದಾಯಶಕ್ತಿಮಾತ್ರವೇ ಅಂಗೀಕರಿಸಲ್ಪಡುವುದು. ಆದುದರಿಂದ 'ಕೃಷ್ಣಸರ್ಪ' ಮೊದಲಾದ ರೂಢಶಬ್ದಗಳಲ್ಲಿ ಅವಯವಾರ್ಥಬೋಧವಿಲ್ಲದೆಯೆ ವಿಶಿಷ್ಟಜಾತ್ಯಾದಿಬೋಧವುಂಟಾಗುವುದೆಂದು ತಿಳಿಯತಕ್ಕದ್ದು. ಇದೇ ಅರ್ಥವನ್ನು ವಾಕ್ಯಪದೀಯದಲ್ಲ **ಭರ್ತೃಹರಿ**ಯು —

**ಪದವಾಚ್ಯೋ ಯಥಾ ನಾರ್ಥಃ ಕಶ್ಚಿದ್ಗೌರಖರಾದಿಷು**
**ಸತ್ಯಪಿ ಪ್ರತ್ಯಯೇ ಹ್ಯೇವಂ ಸಮುದಾಯೇ ನ ಗಮ್ಯತೇ**

ಎಂಬ ವಚನದಿಂದ ಬೋಧಿಸಿ ವೃತ್ತಿವಿಷಯದಲ್ಲಿ ಶಾಸ್ತ್ರಕಾರರು ಅಪೂರ್ವವಾಗಿ ಬೇರೆ ಒಂದು ಶಕ್ತಿಯನ್ನೇ ಅಂಗೀಕರಿಸುತ್ತಾರೆಂದು —

**ಸಮಾಸೇ ಖಲು ಭಿನ್ನೈವಶಕ್ತಿಃ ಪಂಕಜಶಬ್ದವತ್**
**ಬಹೂನಾಂ ವೃತ್ತಿಧರ್ಮಾಣಾಂ ವಚನೈರೇವ ಸಾಧನೇ**
**ಸ್ಯಾನ್ಮಹದ್ಗೌರವಂ ತಸ್ಮಾದೇಕಾರ್ಥೀಭಾವ ಆಶ್ರಿತಃ**

ಎಂದು ಮೊದಲಾದ ವಚನನಿಚಯಗಳಿಂದ ಬೋಧಿಸಿರುವನು. ಇಲ್ಲಿಯೂ 'ಸಮಾಸೇ' ಎಂಬುದು **ಶಾಸನಕಾರನು** ಹೇಳಿರುವಂತೆ ವೃತ್ತಿಸಾಮಾನ್ಯಕರವೆಂದು ತಿಳಿಯಬೇಕು.

ಇಂತಹ ವೃತ್ತಿಗಳು ಇಲ್ಲಿ — ಕೃತ್ತದ್ಧಿತಸಮಾಸರೂಪಭೇದಗಳಿಂದ ತ್ರಿವಿಧವಾಗಿರುವುದೆಂದು **ಶಾಸನಕಾರನು** ಹೇಳಿರುವನು. ಸಂಸ್ಕೃತವ್ಯಾಕರಣದಲ್ಲಿಯಾದರೋ — '**ಕೃತ್ತದ್ಧಿತ ಸಮಾಸೈಕಶೇಷಸನಾದ್ಯಂತಧಾತುರೂಪಾಃ ಪಂಚವೃತ್ತಯಃ**' ಎಂದು ಐದು ವೃತ್ತಿಗಳು ಹೇಳಲ್ಪಟ್ಟವೆ. ಅಲ್ಲಿ ಹೇಳಿರುವ ಏಕಶೇಷವೃತ್ತಿಯೆಂಬುದು ಕೆಲವರ ಮತದಲ್ಲಿ ದ್ವಂದ್ವಾಪವಾದವೆಂದಂಗೀಕರಿಸಲ್ಪಡುವುದರಿಂದ ಅದು ಸಮಾಸವೃತ್ತಿಯಲ್ಲಿಯೇ ಅಂತರ್ಭೂತವಾಗುವುದು. ಸನಾದ್ಯಂತಧಾತುವೃತ್ತಿಯೆಂಬುದಾದರೋ ಕನ್ನಡ ಭಾಷೆಯಲ್ಲಿಲ್ಲವಾದುದರಿಂದ ಇಲ್ಲಿ ವೃತ್ತಿಗಳು ಮೂರೆಂದು ಹೇಳಲ್ಪಟ್ಟಿರುವುದು. ಇವುಗಳಲ್ಲಿ — ಸಮಾಸ ತದ್ಧಿತವೃತ್ತಿಗಳು ಪದೋದ್ದೇಶ್ಯಕಗಳಾದುದರಿಂದ ಆ ವಿಧಿಗಳಲ್ಲಿ ಈ ಸಮರ್ಥ ಪರಿಭಾಷೆಯು ಉಪಸ್ಥಿತವಾಗುವುದರಲ್ಲಿ ಏನೂ ಬಾಧಕವಿಲ್ಲ. ಕೃತ್ ಪ್ರತ್ಯಯಗಳಾದರೋ ಸಾಮಾನ್ಯವಾಗಿ ಧಾತುಗಳ ಮೇಲೆ ವಿಧಿಸಲ್ಪಡುವುದರಿಂದ ಅವು ಪದ ಸಂಬಂಧಿವಿಧಿಗಳಲ್ಲವೆಂದು ಅಲ್ಲಿ ಈ ಪರಿಭಾಷೆಯು ಉಪಸ್ಥಿತವಾಗುವುದಿಲ್ಲವೆಂದು ಶಂಕೆಯುಂಟಾಗುವುದು. ಆದಾಗ್ಯೂ — '**ಇರುಣಃ ಕರ್ಮಣಿ || ೫೪೬ ||**' ಮೊದಲಾದ ಕೆಲವು ಸೂತ್ರಗಳಿಂದ ಉಪಪದನಿಮಿತ್ತಕವಾಗಿ ವಿಧಿಸಲ್ಪಡುವ ಕೆಲವು ಕೃತ್‌ಪ್ರತ್ಯಯವಿಧಿಗಳು ಪದಸಂಬಂಧಿ ವಿಧಿಗಳಾದುದರಿಂದ ಆ ಸೂತ್ರಗಳಲ್ಲಿ ಉಪಸ್ಥಿತವಾಗುವುದೆಂದು ತಿಳಿಯಬೇಕು. ಆದುದರಿಂದ ಹಿಂದೆ ವೃತ್ತಿತ್ರಯದಲ್ಲಿಯೂ ಬರುವುದೆಂದು ಹೇಳಲ್ಪಟ್ಟಿತು. ತದ್ಧಿತಪ್ರತ್ಯಯಗಳಾದರೋ ಸುಬಂತಗಳ ಮೇಲೆಯೇ ವಿಧಿಸಲ್ಪಡುವುವಾದುದರಿಂದ ಇವು ಪದವಿಧಿಗಳಲ್ಲಿಯೇ ಸೇರಿರುವುವು. ಸಮಾಸವೆಂಬುದಕ್ಕೆ ಸಂಪೂರ್ವಕವಾದ ಸಂಶ್ಲೇಷಾರ್ಥಕ 'ಅಸ' ಧಾತುವಿನ ಮೇಲೆ ಕರ್ಮಾರ್ಥದಲ್ಲಿ ಅ (ಘಞ್) ಎಂಬ ಪ್ರತ್ಯಯವನ್ನು ಮಾಡಿ 'ಸಮಾಸ' ಪದ ನಿಷ್ಪತ್ತಿಯನ್ನು ಪ್ರಾಚೀನರು ಹೇಳಿರುವುದರಿಂದ ಸಂಶ್ಲಿಷ್ಟಾರ್ಥಕ ಪದಸಮುದಾಯವೆಂದರ್ಥವಾಗುವುದು. ಇದನ್ನೇ ಕೆಲವರು — ಶಕ್ತಿಸಂಬಂಧದಿಂದ ಸಮಾಸಪದವ್ಯವಹಾರಕ್ಕೆ ವಿಷಯವಾದುದೆಂದೂ ಏಕಾರ್ಥಭಾವಾಪನ್ನಪದಸಮುದಾಯರೂಪವೆಂದೂ ಹೇಳುವರು. ಈ ಮೂರು ಬಗೆಯಾದ ವೃತ್ತಿಗಳಲ್ಲಿ ಕೃತ್ತದ್ಧಿತ ವೃತ್ತಿಗಳು ಒಂದೊಂದೇ ಪದವನ್ನುದ್ದೇಶಿಸಿ ಬರುವುವು. ಸಮಾಸವೃತ್ತಿಯಾದರೋ ಅನೇಕ ಪದೋದ್ದೇಶ್ಯಕವಾಗಿರುವುದೆಂದು ತಿಳಿಯಬೇಕು.

ಇಲ್ಲಿ — 'ಅರಮಗಳ್' ಎಂಬ ಸಮಾಸದ ಅರ್ಥವನ್ನು ಬೋಧಿಸುವ 'ಅರಸಿನ ಮಗಳ್' ಎಂಬ ವಾಕ್ಯದಲ್ಲಿ 'ಅರಸು' ಶಬ್ದವೂ 'ಮಗಳ್' ಶಬ್ದವೂ ತಮ್ಮತಮ್ಮ ಶಕ್ಯಾರ್ಥಗಳನ್ನು ಪರಸ್ಪರ ಸಹಾಯವಿಲ್ಲದೆ ಸ್ವತಂತ್ರವಾಗಿಯೇ ಬೋಧಿಸುವುವು. ಇವಕ್ಕೆ ಅರ್ಥವಿಶೇಷಗಳಲ್ಲಿ ವಿಭಕ್ತಿಗಳನ್ನು ವಿಧಿಸಲು ಅವುಗಳ ಉಪಪತ್ತ್ಯರ್ಥವಾಗಿ ಯೋಗ್ಯವಾದ ಅರ್ಥಾಂತರವನ್ನಾಕಾಂಕ್ಷಿಸುವುವು. ಆದುದರಿಂದ ಆ ಅರ್ಥಾಂತರಬೋಧಕವಾದ ಪದಾಂತರ ಸಂಬಂಧವು ಆವಶ್ಯಕವಾಗಿರುವುದು. ಆ ಮೇಲೆ ಆ ಪದಗಳ ಸಮುದಾಯಕ್ಕೆ ಅರ್ಥವಾಗುವುದು. ಆದುದರಿಂದ ಇಲ್ಲಿ ಪದಗಳಿಗೆ ಬೇರೆ ಬೇರೆ ವಿಶೇಷಣಗಳನ್ನು ಕೊಟ್ಟು ಅನ್ವಯಿಸುವುದಕ್ಕೆ ಸೌಲಭ್ಯವಿರುವುದು. ಆದುದರಿಂದಲೆ ಇಂತಹ ವಾಕ್ಯಪ್ರಯೋಗಗಳಲ್ಲಿಯೆ ವ್ಯಪೇಕ್ಷಾಲಕ್ಷಣಸಾಮರ್ಥ್ಯವು ಅಂಗೀಕರಿಸಲ್ಪಟ್ಟಿರುವುದು. 'ಅರಮಗಳ್' ಮೊದಲಾದ ಸಮಸ್ತಪದಗಳಲ್ಲಾದರೋ 'ಅರಸು' ಮೊದಲಾದ ಶಬ್ದಗಳ ಮುಖ್ಯಾರ್ಥಬೋಧಕವಾದ ಉತ್ತರಪದಭೂತ 'ಮಗಳ್' ಮೊದಲಾದ

ಶಬ್ದಾರ್ಥಗಳಲ್ಲಿ ಉಪಸರ್ಜನೀಭೂತಸ್ವಾರ್ಥವುಳ್ಳುದಾಗಿರುವುವು. 'ಮಗಳ್' ಮೊದಲಾದ ಉತ್ತರಪದಗಳೂ ವಾಕ್ಯದಲ್ಲಿರುವಂತೆ ಕೇವಲ ತಮ್ಮ ಶಕ್ಯಾರ್ಥಗಳನ್ನು ಬೋಧಿಸುವುದಿಲ್ಲ. ಇನ್ನೇನೆಂದರೆ — ಪೂರ್ವಪದಗಳ ಅರ್ಥಸಂಬದ್ಧ ಪುತ್ರಿ ಮೊದಲಾದ ವ್ಯಕ್ತಿರೂಪಾರ್ಥವನ್ನು ಬೋಧಿಸುವುದು. ಆದುದರಿಂದ ಸಮಾಸದಲ್ಲಿ ಸಾಧಾರಣಾಭಿಧೇಯತಾರೂಪವಾದ ಏಕಾರ್ಥಭಾವ ಲಕ್ಷಣ ಸಾಮರ್ಥ್ಯವನ್ನು ಅಂಗೀಕರಿಸಿರುವುದು. ಆದುದರಿಂದಲೇ ಇಲ್ಲಿ ಪ್ರಾಯಶಃ ವಿಶೇಷಣಾಂತರ ಸಂಬಂಧವನ್ನಂಗೀಕರಿಸುವುದಿಲ್ಲ. ಹೀಗೆಯೇ ಲೋಕದಲ್ಲಿ ನರಸಿಂಹಾದಿ ಪದಗಳನ್ನು ಪ್ರಯೋಗಿಸಲು ಸಿಂಹಾದಿರೂಪಾರ್ಥಗಳಾಗಲಿ, ನರರೂಪಾರ್ಥಗಳಾಗಲಿ, ತದುಭಯರೂಪಾರ್ಥಗಳಾಗಲಿ ತೋರದೆ ವಿಜಾತೀಯಗಳಾದ ಬೇರೆ ವ್ಯಕ್ತಿವಿಶೇಷಗಳೇ ಅಖಂಡಾಕಾರವಾಗಿ ತೋರುವುವು. ಇದನ್ನೇ ಪ್ರಾಚೀನರು ಯುಕ್ತಾರ್ಥ, ಸಂಗತಾರ್ಥ, ಸಾಧಾರಣಾಭಿಧೇಯ ಎಂಬುದು — ಇದೇ ಸಮಾಸವಾಚ್ಯಾರ್ಥವು — ಇದೇ ಏಕಾರ್ಥಭಾವದಲ್ಲಿ ತೋರುವುದು ಎಂದು — ಹೇಳುವರು.

ಕಾತಂತ್ರವ್ಯಾಕರಣದಲ್ಲಿಯೂ — '**ನಾಮ್ನಾಂ ಸಮಾಸೋ ಯುಕ್ತಾರ್ಥಃ**' ಎಂದು ಹೇಳಿ '**ಯುಕ್ತಾರ್ಥಸ್ತು ನರಸಿಂಹವದಖಂಡ ಏವ**' ಎಂದು ವಿವರಿಸಿರುವರು. ಆದುದರಿಂದ ಸಮಾಸದಲ್ಲಿ ಅಖಂಡ ಶಕ್ತಿಯನ್ನೇ ಅಂಗೀಕರಿಸಬೇಕೆಂದು ಸಿದ್ಧವಾಗುವುದು. ಹೀಗೆ ವೃತ್ತಿಗಳಲ್ಲೆಲ್ಲಾ ಅಖಂಡ ಶಕ್ತಿಯನ್ನಂಗೀಕರಿಸಿದ್ದರೂ ಕೆಲವು ಪೂರ್ವಪದಾರ್ಥಪ್ರಧಾನಗಳಾಗಿಯೂ ಕೆಲವು ಉತ್ತರ ಪದಾರ್ಥಪ್ರಧಾನಗಳಾಗಿಯೂ ಕೆಲವು ಅನ್ಯಪದಾರ್ಥಪ್ರಧಾನಗಳಾಗಿಯೂ ಕೆಲವು ಉಭಯ ಪದಾರ್ಥಪ್ರಧಾನಗಳಾಗಿಯೂ ಇರುವುವೆಂದು ವಿಗ್ರಹವಾಕ್ಯಗಳ ಅರ್ಥಸಂಸ್ಕಾರವಶದಿಂದ ವ್ಯವಹರಿಸುವರೇ ಅಲ್ಲದೆ ಬೇರೆ ಬೇರೆ ಶಕ್ತಿಯನ್ನಂಗೀಕರಿಸಿ ಎಂದಲ್ಲ. ಆದರೆ —'**ಉತ್ತರಪದಾರ್ಥ ಪ್ರಧಾನಸ್ತತ್ಪುರುಷಃ, ಪೂರ್ವಪದಾರ್ಥಪ್ರಧಾನೋಽವ್ಯಯೀಭಾವಃ, ಅನ್ಯಪದಾರ್ಥಪ್ರಧಾನೋ ಬಹುವ್ರೀಹಿಃ**' ಎಂಬ ಪ್ರಾಚೀನರ ವ್ಯವಹಾರವು 'ಪ್ರಾಯಶಃ' ಎಂಬ ಅಭಿಪ್ರಾಯದಿಂದ ಪ್ರವೃತ್ತವಾಗಿರುವುದು. ಇಂತಹ ಸಮಾಸಗಳಲ್ಲಿ ಪರಸ್ಪರ ವಿಶೇಷ್ಯ-ವಿಶೇಷಣಭಾವಾಪನ್ನಾಕಾಂಕ್ಷೋಪಸ್ಥಿತಿಜನಕತ್ವರೂಪಸಾಮರ್ಥ್ಯವಿದ್ದರೂ ಉಭಯಪದಾರ್ಥಪ್ರಧಾನವಾದ ದ್ವಂದ್ವಸಮಾಸದಲ್ಲಿ ಉಭಯಕ್ಕೂ ಮುಖ್ಯತ್ವವಿರುವುದರಿಂದ ಪರಸ್ಪರಾಕಾಂಕ್ಷಿತವಾದ ಪದವಿರುವುದಿಲ್ಲ. ಆದುದರಿಂದ ಇಲ್ಲಿ ಸಾಮರ್ಥ್ಯವಿಲ್ಲ. ಸಾಮರ್ಥ್ಯವಿಲ್ಲದುದರಿಂದ ಸಮಾಸವಿಧಿಯು ಪ್ರವೃತ್ತಿಸುವುದಿಲ್ಲವೆಂದು ಶಂಕೆಯುಂಟಾಗುವುದು. ಆದಾಗ್ಯೂ 'ಮರಗಿಡುಗಳ್' ಮೊದಲಾದ ದ್ವಂದ್ವಸ್ಥಲಗಳಲ್ಲಿ ಸಾಹಿತ್ಯಾಂತರ್ಭಾವದಿಂದ ಸಾಮರ್ಥ್ಯವಿರುವುದೆಂದು ಸಮಾಸವಿಧಿಯು ಪ್ರವೃತ್ತಿಸುವುದೆಂದು ತಿಳಿಯಬೇಕು. ಇಲ್ಲಿ 'ಮರ, ಗಿಡು' ಶಬ್ದಗಳು 'ಮರಂ, ಗಿಡು' ಎಂಬ ವಾಕ್ಯದಲ್ಲಿರುವಂತೆ ಕೇವಲ ಸ್ವಾರ್ಥಗಳನ್ನೇ ಬೋಧಿಸುವುದಿಲ್ಲ. 'ಮರವು ಗಿಡ ಸಂಬಂಧವು, ಗಿಡು ಮರ ಸಂಬಂಧವು' ಎಂದು ಪರಸ್ಪರಸಂಬಂಧವಾದ ಅರ್ಥಗಳನ್ನೇ ಹೇಳುವುವು. ಆದುದರಿಂದ ಮುಖ್ಯೋಪಸರ್ಜನಭಾವದಿಂದ ದ್ವಿಸ್ವರೂಪತ್ವವನ್ನು ಹೊಂದಿರುವ ಮರದಲ್ಲಿಯೂ ಗಿಡುವಿನಲ್ಲಿಯೂ 'ಮರ, ಗಿಡು' ಶಬ್ದಗಳು ಇರುವುವೆಂದು ಏಕಾರ್ಥತೆಯು ಉಪಪನ್ನವಾಗಿರುವುದು. ಹೀಗೆಯೇ ಸಂಸ್ಕೃತವ್ಯಾಕರಣಕಾರರು ಇತರೇತರ ಯೋಗದ್ವಂದ್ವಸ್ಥಲಗಳಲ್ಲಿ ಸಾಹಿತ್ಯಾಂತರ್ಭಾವದಿಂದ ಏಕಾರ್ಥಭಾವರೂಪ ಸಾಮರ್ಥ್ಯವನ್ನೂ ಅಂಗೀಕರಿಸಿರುವರು. ಸಮಾಹಾರದ್ವಂದ್ವ

ದಲ್ಲಾದರೋ ವೃತ್ತಪದಾರ್ಥಗಳ ಸಮುದಾಯವೇ ಪ್ರಧಾನವಾಗಿ ತೋರುವುದರಿಂದ ಏಕಾರ್ಥತೆಯು ಸ್ವತಃ ಸಿದ್ಧವಾಗಿಯೇ ಇರುವುದು. ಹೀಗೆಯೇ ಕೃತ್ತದ್ಧಿತವೃತ್ತಿಗಳಲ್ಲಿಯೂ ಏಕಾರ್ಥತೆಯನ್ನು ಊಹಿಸಿಕೊಳ್ಳುವುದು. ಹೀಗೆ ವೃತ್ತಿಸಾಮಾನ್ಯದಲ್ಲಿಯೂ ಏಕಾರ್ಥಭಾವರೂಪ ಸಾಮರ್ಥ್ಯವನ್ನು ಸಮರ್ಥಿಸಿ ಆಯಾ ವಿಧಿಗಳಿಗೆ ಪ್ರವೃತ್ತಿಯನ್ನು ಹೇಳಬೇಕು.

ವ್ಯಪೇಕ್ಷಾಲಕ್ಷಣರೂಪಸಾಮರ್ಥ್ಯವಾದರೋ ವಾಕ್ಯದಲ್ಲಿ ಇಲ್ಲವೆ ವಾಕ್ಯಗಳಲ್ಲಿ ಅಂಗೀಕರಿಸಲ್ಪಡುವುದು. ಅದು ಹೇಗೆಂದರೆ — 'ಅರಸಿನ ಮಗಳ್' ಎಂಬ ವಾಕ್ಯದಲ್ಲಿ 'ಅರಸಿನ' ಎಂಬ ಪದವು ಉದ್ಭೂತಸಂಬಂಧವುಳ್ಳುದಾದುದರಿಂದ 'ಅರಸಿನ ಮನೆಯೆ? ಕುದುರೆಯ? ಆನೆಯೆ? ಆವನ ಸಂಬಂಧವಾದುದಾವುದು' ಎಂದು ಮೊದಲಾಗಿ ಸಂಬಂಧವುಳ್ಳ ಪದಾರ್ಥವನ್ನು ಅಪೇಕ್ಷಿಸುವುದು. 'ಮಗಳ್' ಎಂಬುದು ಜನಕಪರತಂತ್ರವಚನವಾದುದರಿಂದ 'ಅರಸಿನ ಮಗಳೇ? ಬ್ರಾಹ್ಮಣನ ಮಗಳೇ? ವೈಶ್ಯನ ಮಗಳೇ? ಶೂದ್ರನ ಮಗಳೇ? ಇವಳಾರ ಮಗಳ್' ಎಂದು ಮೊದಲಾಗಿ ತಂದೆಯಾಕಾಂಕ್ಷೆಯುಂಟಾಗುವುದು. ಪದಾಂತರಸನ್ನಿಧಾನವಿರಲು ಇತರಾಕಾಂಕ್ಷೆಯು ನಿವೃತ್ತವಾಗುವುದು. ಆದುದರಿಂದ ಇಂತಹ ಪ್ರಯೋಗಗಳಲ್ಲೆಲ್ಲಾ ವ್ಯಯಪೇಕ್ಷಾಲಕ್ಷಣಸಾಮರ್ಥ್ಯವಿರುವುದೆಂದು ತಿಳಿಯಬೇಕು.

ಹೀಗೆ ಸಾಮರ್ಥ್ಯದ್ವಯವನ್ನಂಗೀಕರಿಸಿ ಒಂದು ವೃತ್ತ್ಯಾಶ್ರಯವಾಗಿರುವುದೆಂದೂ ಇನ್ನೊಂದು ವಾಕ್ಯಾಶ್ರಯವಾಗಿರುವುದೆಂದೂ ಸಿದ್ಧವಾಗುವುದು. ಆದಾಗ್ಯೂ 'ಅರಸಿನ ಮಗಳಂ ನೋಡು' ಎಂಬ ವಾಕ್ಯದಿಂದ ಹೇಗೆ ಇತರ ಸಂಬಂಧ ವ್ಯಾವೃತ್ತಿಪೂರ್ವಕವಾಗಿ 'ಅರಸಿನ' ಸಂಬಂಧವೆ ತೋರುವುದೋ ಹಾಗೆ 'ಅರಮಗಳಂ ನೋಡು' ಎಂಬ ಸಮಾಸಪದದಿಂದಲೂ ತೋರುವುದರಿಂದ ವೃತ್ತಿ-ವಾಕ್ಯಗಳಿಗೆ ಏಕದೇಶಾನ್ವಯಾದಿದೋಷಪರಿಹಾರಾರ್ಥವಾಗಿ ಅಂಗೀಕರಿಸಿರುವ ಸಾಮರ್ಥ್ಯಭೇದಗಳನ್ನಂಗೀಕರಿಸಿದ್ದರೂ ಎರಡಕ್ಕೂ ಸಮಾನಾರ್ಥಕತ್ವವೇ ಸಿದ್ಧಿಸುವುದೆಂದು ತಿಳಿಯಬೇಕು. ಆದುದರಿಂದಲೇ ಪ್ರಾಚೀನರು — '**ವೃತ್ತ್ಯರ್ಥಾವಬೋಧಕಂ ವಾಕ್ಯ ವಿಗ್ರಹಃ**' ಎಂದು ವೃತ್ತಿಸಮಾನಾರ್ಥಕತ್ವವನ್ನು ವಿಗ್ರಹವಾಕ್ಯಕ್ಕೆ ಹೇಳುವರು. ಭಾಷೆಯಲ್ಲಿಯೂ ಇದೇ ಮಾರ್ಗವನ್ನವಲಂಬಿಸಿ ವ್ಯಾಕರಣಶಾಸ್ತ್ರದಲ್ಲಿ ವ್ಯವಹರಿಸುವರು.

ಇಲ್ಲಿ ಕೆಲವರು — ಈ ಪರಿಭಾಷೆಯು ಆವುದು ಪದವಿಧಿಯೋ ಅದು ವಿಶೇಷ್ಯ-ವಿಶೇಷಣಭಾವಾವಗಾಹ್ಯೇಕೋಪಸ್ಥಿತಿಜನಕಪದಾಶ್ರಿತವಾಗುವುದೆಂದು ಅರ್ಥಕ್ಕೆ ಉಪಸ್ಥಿತಿಯನ್ನು ಬೋಧಿಸುವುದು ಎಂದು ಹೇಳುವರು. ಕೆಲವರು ಪದವಿಧಿಯಲ್ಲಿ ಸಮರ್ಥಪದಕ್ಕೆ ಉಪಸ್ಥಿತಿಯನ್ನು ಬೋಧಿಸುವುದೆಂದು ಹೇಳುವರು. ಇನ್ನು ಕೆಲವರು ಅಧಿಕಾರಸೂತ್ರವೆಂದು ಹೇಳುವರು. ಈ ಮೂರು ಪಕ್ಷದಲ್ಲಿ ಪರಿಭಾಷಾಪಕ್ಷವನ್ನಂಗೀಕರಿಸುವುದೇ ಉತ್ತಮವಾಗಿರುವುದು. ಏಕೆಂದರೆ ಅಧಿಕಾರಪಕ್ಷದಲ್ಲಿ ಪ್ರತಿಸೂತ್ರದಲ್ಲಿಯೂ ಸಮರ್ಥಪದವನ್ನು ಪುನಃ ಪುನಃ ಆವೃತ್ತಿಮಾಡಿ ಸಂಬಂಧಿಸಬೇಕು. ಮತ್ತು ಕೃತ್-ಪ್ರಕರಣವು ಆಖ್ಯಾತ-ಪ್ರಕರಣದಿಂದ ವ್ಯವಹಿತವಾಗುವುದರಿಂದ ಮಂಡೂಕಪ್ಲುತಿಯನ್ನಾಶ್ರಯಿಸಬೇಕು. ಇವೆರಡೂ ಗೌರವಗ್ರಸ್ತವಾದುವು. ಆದುದರಿಂದ ಪರಿಭಾಷಾಸೂತ್ರವನ್ನಂಗೀಕರಿಸುವುದೇ ಉತ್ತಮವೆಂದು ತಿಳಿಯಬೇಕು. ಇದಕ್ಕೆ ಕೊಟ್ಟಿರುವ ಲಕ್ಷ್ಯನಿಷ್ಪತ್ತಿಪ್ರಕಾರವು ಆಯಾ ವಿಧಿಸೂತ್ರಗಳಲ್ಲಿಯೆ ವಿವರಿಸಲ್ಪಡುವುದು.

**ದರ್ಪಣಕಾರನು** ಹೀಗೆ ವೃತ್ತಿಸಾಮಾನ್ಯಕ್ಕೂ ಉಪಯುಕ್ತವಾದ ಇಂತಹ ಪರಿಭಾಷೆಯನ್ನು ಮಾಡದಿದ್ದರೂ ಅರ್ಥಾತ್ ಸಮಾಸಾದಿವೃತ್ತಿಲಕ್ಷಣಗಳನ್ನು ವಿಚಾರ ಮಾಡಲು ಇದೇ ಅರ್ಥವು ಸಿದ್ಧಿಸುವುದೆಂದು ಸಮಾಸಸಾಮಾನ್ಯಲಕ್ಷಣಮಾತ್ರವನ್ನೂ —

**ಕಱು ತಾಯ ಬಳಿಯನುಳಿಯದ**
**ತೆಱದಿಂದ ನಾಮಪದಮರ್ಥಾನುಗಮಾ**
**ಗೆಱಗೆ ಸಮಾಸಂ ನೆಗೞ್ಗುಂ**
**ನೆಱೆ ಪೋಕುಂ ಮಧ್ಯಗತವಿಭಕ್ತಿಗಳವರೊಳ್** (ಸೂತ್ರ ೧೬೨)

ಎಂಬ ಸೂತ್ರದಿಂದ ಸೂಚಿಸಿರುವನು.

**ಅವತಾರಿಕೆ ೨೯೩**

ಸಕಲವೃತ್ತಿಸಾಧಾರಣವಾದ ಪರಿಭಾಷಾಸೂತ್ರವನ್ನು ಹೇಳಿ ಸಮಾಸವೃತ್ತಿಮಾತ್ರ ವಿಷಯಕವಾದ ಅಧಿಕಾರಸೂತ್ರವನ್ನು ಹೇಳುತ್ತಾನೆ.

**ಸೂತ್ರಂ || ಸುಪ್ ಸುಪಾ ಸಹ* ಸಮಾಸೋ ಬಹುಲಂ || ೨೯೩ ||**

**ಅರ್ಥ || ಸುಬಂತವು ಸುಬಂತಪದದೊಡನೆ ಬಹುಲವಾಗಿ ಸಮಸ್ಯಮಾನವಾಗುವುದು ಎಂದು ಮುಂದೆ ಹೇಳುವ ಸಮಾಸ ವಿಧಿಸೂತ್ರಗಳಲ್ಲಿ ಅಧಿಕರಿಸಲ್ಪಡುವುದು.**

**ಉದಾಹರಣೆ || ' ವಿಶೇಷಣಮೇಕಾರ್ಥೇನ || ೩೦೯ || '** ಮೊದಲಾದುವು.

**ವಿಚಾರ ೨೯೩**

ಈ ಸೂತ್ರದಲ್ಲಿ ವಿಧೇಯವಾವುದೂ ಇಲ್ಲವಾದುದರಿಂದ ಈ ಸೂತ್ರವು ಪರಾರ್ಥವೆಂದು ತಿಳಿಯಬೇಕು. ಆದರೆ ಮುಂದೆ '**ಅಮಕೃತ್ತಿಜಾ ||೨೯೮||**' ಮೊದಲಾದ ಸೂತ್ರಗಳಿಂದಲೇ ಸಮಾಸವನ್ನು ವಿಧಿಸುವುದರಿಂದ ಇಲ್ಲಿ ಸಮಾಸವೇ ವಿಧೇಯವೆಂದು ಹೇಳುವುದಕ್ಕಾಗುವುದಿಲ್ಲ. ಆದುದರಿಂದ ಇದು ಪರಾರ್ಥವೆಂದು ಹೇಳಲ್ಪಟ್ಟಿದೆ. ಪರಾರ್ಥವೆಂದರೆ — ವಿಧಿಶಾಸ್ತ್ರೋಪಕಾರಕವೆಂದು ತಾತ್ಪರ್ಯವು. ಹೀಗೆ ವಿಧ್ಯುಪಕಾರವಾದುದು ಅಧಿಕಾರಸೂತ್ರವೆಂದೂ ಪರಿಭಾಷಾಸೂತ್ರವೆಂದೂ ಎರಡು ಬಗೆಯಾಗಿರುವುದು. ಅವುಗಳಲ್ಲಿ ಇದು ಇಲ್ಲ ಪರಿಭಾಷೆಯಲ್ಲ. ಮತ್ತೇನೆಂದರೆ — ಮುಂದೆ ಹೇಳುವ ಪ್ರತಿವಿಧಿಸೂತ್ರದಲ್ಲಿಯೂ ಸಂಬಂಧಿಸಲ್ಪಡುವುದರಿಂದ ಅಧಿಕಾರಸೂತ್ರವೆಂದು ತಿಳಿಯುವುದು. ಇಲ್ಲಿ — ' ಸುಪ್, ಸುಪಾ, ಸಹ, ಸಮಾಸಃ, ಬಹುಲಂ ' ಎಂದು ಐದು ಪದಗಳಿರುವುವು. ' ಸುಪ್, ಸುಪಾ ' ಎಂಬೀಯೆರಡೂ ಪ್ರತ್ಯಯಬೋಧಕಗಳಾದುದರಿಂದ— '**ಪ್ರತ್ಯಯಗ್ರಹಣೇ ಯಸ್ಮಾತ್ ಸವಿಹಿತಸ್ತದಾದೇಸ್ತದಂತಸ್ಯ ಗ್ರಹಣಂ**' ಎಂಬ ಪರಿಭಾಷೆಯಿಂದ ತದಂತಬೋಧಕಗಳಾಗುವುವು. ಇವುಗಳಲ್ಲಿ 'ಸುಪ್' ಎಂದರೆ ಸುಬಂತವೆಂದರ್ಥವು. ಇದು ವಿಧಿಸೂತ್ರದಲ್ಲಿರುವ ಪ್ರಥಮಾಂತಪದಬೋಧ್ಯವಾದುದಕ್ಕೆ ವಿಶೇಷಣವು. ' ಸುಪಾ ' ಎಂಬುದು ತೃತೀಯಾಂತವಾದುದರಿಂದ ಸುಬಂತದಿಂದ ಎಂದರ್ಥವಾಗುವುದು. ಇದು ವಕ್ಷ್ಯಮಾಣವಿಧಿಸೂತ್ರಸ್ಥ ತೃತೀಯಾಂತ ಪದಬೋಧ್ಯವಾದುದಕ್ಕೆ ವಿಶೇಷಣವು. ' ಸಹ ' ಎಂಬುದು ಸಾಹಿತ್ಯದ್ಯೋತಕವಾದ ಅವ್ಯಯವು. ಆದುದರಿಂದಲೆ ' ಸುಪಾ ' ಎಂಬುದು ತೃತೀಯಾಂತವಾಗಿ ಹೇಳಲ್ಪಟ್ಟಿದೆ. ' ಸಮಾಸಃ '

---

*** ಕೆಲವು ಪ್ರತಿಗಳಲ್ಲಿ ' ಸಹ ' ಎಂಬ ಪದವು ಇಲ್ಲ.**

ಎಂಬುದು 'ಸಮ್' ಎಂಬ ಉಪಸರ್ಗಪೂರ್ವಕವಾದ 'ಅಸ' ಧಾತುವಿನ ಮೇಲೆ ಕರ್ಮಾರ್ಥದಲ್ಲಿ ಅ (ಘಞ್) ಎಂಬ ಪ್ರತ್ಯಯವನ್ನು ಮಾಡಲು ನಿಷ್ಪನ್ನವಾದುದರಿಂದ ಸಂಕ್ಷಿಪ್ತವಾಗಿ ಏಕೀಭಾವವನ್ನು ಹೊಂದಿರುವ ಪದಸಮುದಾಯಬೋಧಕವಾಗಿರುವುದು. ಇದೇ ತಾತ್ಪರ್ಯದಿಂದ **ನ್ಯಾಸಕಾರರು** — '**ಪರಸ್ಪರಾಪೇಕ್ಷಾಣಾಂ ಪೂರ್ವೋತ್ತರಪದಾನಾಂ ಕಥಂಚಿದೈಕಪದ್ಯಂ ಸಮಾಸಃ**' ಎಂದು ಹೇಳಿರುವರು. **ನಾಗೇಶಭಟ್ಟನು** ಮಂಜೂಷಾದಿ ಗ್ರಂಥಗಳಲ್ಲಿ — '**ಸಮಾಸತ್ವಂ ನಾಮಶಕ್ತಿಸಂಬಂಧೇನ ಸಮಾಸಪದವತ್ವಂ, ಏಕಾರ್ಥೀಭಾವಾಪನ್ನ ಪದಸಮುದಾಯತ್ವಂ ವಾ-ಸಮಸ್ಯತೇ ಸಂಶ್ಲಿಷ್ಯತೇ ಏಕಾರ್ಥಿಕ್ರಿಯತೇsಸಾವಿತಿವ್ಯುತ್ಪತ್ತೇಃ**' ಎಂದು ಹೇಳಿರುವನು ಇಲ್ಲಿ ಪದವೆಂಬುದು ವಿಭಕ್ತ್ಯಂತವಾದುದು ಎಂದಲ್ಲ. ಮತ್ತೇನೆಂದರೆ ಪ್ರತ್ಯಯಮಾತ್ರ ಭಿನ್ನವಾದುದು ಎಂದು ಹೇಳತಕ್ಕದ್ದು. ಇದರಿಂದ ಕೃತ್ತದ್ಧಿತಾದಿಗಳಲ್ಲಿ ಅತಿಪ್ರಸಕ್ತಿಯಿಲ್ಲವೆಂದು ತಿಳಿಯಬೇಕು. 'ಬಹುಳಂ' ಎಂಬುದು —

> **ಕ್ವಚಿತ್ ಪ್ರವೃತ್ತಿಃ ಕ್ವಚಿದಪ್ರವೃತ್ತಿಃ ಕ್ವಚಿದ್ವಿಭಾಷಾ ಕ್ವಚಿದನ್ಯದೇವ**
> **ವಿಧೇರ್ವಿಧಾನಂ ಬಹುಧಾ ಸಮೀಕ್ಷ್ಯ ಚಾತುರ್ವಿಧಂ ಬಾಹುಳಕಂ ವದಂತಿ**

ಎಂಬ ಶ್ಲೋಕೋಕ್ತವಾದ ಚಾತುರ್ವಿಧ್ಯಬೋಧಕವಾದುದೆಂದು ತಿಳಿಯಬೇಕು. ತಥಾಚ — ವಕ್ಷ್ಯಮಾಣಸೂತ್ರಗಳಲ್ಲಿ ಸುಬಂತವಾದುದು ಸುಬಂತದೊಡನೆ ಬಹುಳವಾಗಿ ಸಮಸ್ಯಮಾನವಾಗುವುದೆಂದು ಅಧಿಕರಿಸಲ್ಪಡುವುದೆಂದು ಅರ್ಥವಾಗುವುದು. ಆದುದರಿಂದ ಮುಂದೆ ಹೇಳುವ— '**ವಿಶೇಷಣಮೇಕಾರ್ಥೇನ**' ಎಂಬುದೇ ಮೊದಲಾದ ಸೂತ್ರಗಳಿಗೆ ಲಕ್ಷ್ಯಗಳಾದ 'ಬೆಳ್ದಾವರೆ, ಕನ್ನೆಯ್ದಿಲ್' ಮೊದಲಾದುವೇ ಇದಕ್ಕೂ ಲಕ್ಷ್ಯಗಳೆಂದು ತಿಳಿಯಬೇಕು. ಇಲ್ಲ 'ಸುಪ್' ಎಂದು ಹೇಳಿರುವುದರಿಂದ — 'ಅಟ್ಟಂ ಬಾಣಸಿಗಂ' ಮೊದಲಾದ ಪ್ರಯೋಗಗಳಲ್ಲಿ ಪೂರ್ವಪದವು ತಿಙಂತವಾಗಿರುವುದರಿಂದ ಸಮಾಸವು ಬರುವುದಿಲ್ಲ. 'ಸುಪಾ' ಎಂದು ತೃತೀಯಾಂತ ಪದವನ್ನು ಹೇಳಿರುವುದರಿಂದ — 'ಗಾಯಕರ್ ಪಾಡಿದರ್' ಮೊದಲಾದ ಪ್ರಯೋಗಗಳಲ್ಲಿ ಉತ್ತರಪದವು ತಿಙಂತವಾದುದರಿಂದ ಬರುವುದಿಲ್ಲ. ಇದರಿಂದ ಸಮಸ್ಯಮಾನವಾದ ಉಭಯ ಪದಗಳೂ ಸುಬಂತಗಳಾಗಿಯೇ ಇರಬೇಕೆಂದು ತಾತ್ಪರ್ಯವು. 'ಬಹುಳಂ' ಎಂದು ಹೇಳಿರುವುದರಿಂದ ವಾಕ್ಯವೂ ಪ್ರಯೋಗಾರ್ಹವೆಂದು ಬೋಧಿತವಾಗುವುದು.

ಈ ಸೂತ್ರವನ್ನು ಕೆಲವರು ವಿಧಿಸೂತ್ರವೆಂದು ಹೇಳಿ ವಕ್ಷ್ಯಮಾಣವಾದ ವಿಶೇಷಸೂತ್ರಗಳಿಗೆ ಅವಿಷಯಗಳಾದ — 'ಬೇಗಂ ಬಂದಂ=ಬೇಗಬಂದ, ತಿಬ್ಬಂ ನುಡಿದಂ=ತಿಬ್ಬನುಡಿದಂ' ಮೊದಲಾದುವು ಸಿದ್ಧಿಸುವುವು.

ಇಲ್ಲಿ — 'ಅರಸಿನ ಮಗಂ' ಎಂಬುದು ವಿಗ್ರಹ ವಾಕ್ಯವು; 'ಅರಮಗಂ' ಎಂಬುದು ಸಮಾಸವು ಎಂದು ಲೋಕಪ್ರಸಿದ್ಧವಾಗಿರುವುದು. ಇದರಲ್ಲಿ ಸುಬಂತವು ಸುಬಂತದೊಡನೆ ಸಮಸ್ಯಮಾನವಾಗುವುದು ಎಂಬ ಪದದ್ವಯವನ್ನು ಅಭಿವ್ಯಾಪಿಸಿಕೊಂಡು ಬರುವ ಈ ಸಮಾಸ ಸಂಜ್ಞೆಯು ಪೂರ್ವೋತ್ತರಪದಗಳಿಗೆ ಆವ ಅವಸ್ಥೆಯಲ್ಲಿ ಪ್ರವರ್ತಿಸುವುದು ? 'ಅರಸು, ಮಗ' ಎಂಬ ಪ್ರಕೃತಿದ್ವಯವನ್ನು ಇಟ್ಟುಕೊಂಡು ಅವುಗಳಮೇಲೆ ಕ್ರಮವಾಗಿ ಷಷ್ಠಿಯನ್ನೂ ಪ್ರಥಮೆಯನ್ನೂ ಮಾಡಿ 'ಅರಸು+ಅ+ಮಗ+ಮ್' ಎಂಬೀಯವಸ್ಥೆಯಲ್ಲಿಯೇ ಪ್ರವರ್ತಿಸುವುದೇ ?

ಅಥವಾ ಸುಬ್-ನಿಮಿತ್ತಕ ಸುಪ್-ಸ್ಥಾನಿಕಗಳಾದ ಎಲ್ಲ ಕಾರ್ಯಗಳನ್ನೂ ಮಾಡಿ ' ಅರಸಿನ ಮಗಂ ' ಎಂಬ ಸಿದ್ಧರೂಪಗಳಲ್ಲಿ ಬರುವುದೆ ? ಎಂದು ಶಂಕೆಯುಂಟಾಗಲು — ಪ್ರಥಮ ಪಕ್ಷದಲ್ಲಿ ಪ್ರಕೃತಿಪ್ರತ್ಯಯಕಾರ್ಯಗಳು ಅಂತರಂಗಗಳಾದುದರಿಂದಲೂ ಸಮಾಸಸಂಜ್ಞಾದಿಗಳು ಪದದ್ವಯನಿಮಿತ್ತಕಗಳಾದುದರಿಂದ ಬಹಿರಂಗಗಳಾದುದರಿಂದಲೂ ಅಂತರಂಗ ಬಹಿರಂಗಗಳಲ್ಲಿ ಅಂತರಂಗವೇ ಪ್ರಬಲವೆಂದು **ಪಾಣಿನಿ** ಮೊದಲಾದವರು ಅಂಗೀಕರಿಸಿರುವುದರಿಂದ ತದನುಸಾರವಾಗಿ ಸಮಾಸಸಂಜ್ಞೆಯೇ ಪ್ರವರ್ತಿಸುವುದಿಲ್ಲವೆಂದು ತೋರುವುದು. ಎರಡನೆಯ ಪಕ್ಷದಲ್ಲಿ ಸಮಾಸಸಂಜ್ಞೆಯು ಪ್ರವರ್ತಿಸಿದರೂ **' ವೃತ್ತೇಃ || ೨೯೮ || '** ಎಂಬ ಸೂತ್ರದಿಂದ ಸುಪ್ಪಿಗೆ ಲೋಪವು ಬರುವುದು. ಆದಾಗ್ಯೂ ಕಿನಾದಿಗಳೂ ನಿವೃತ್ತವಾಗಲು ನಿವರ್ತಕ ಸಾಮಗ್ರಿಗಳು ಇಲ್ಲವಾದುದರಿಂದ ಅವು ಶ್ರೂಯಮಾಣವಾಗಲು ' ಅರಸಿನ್ಮಗ ' ಎಂದು ಅನಿಷ್ಟರೂಪವಾಗುವುದೇ ಅಲ್ಲದೆ ' ಅರಮಗ ' ಎಂಬ ಇಷ್ಟರೂಪವು ಸಿದ್ಧಿಸುವುದಿಲ್ಲ. ಆದುದರಿಂದ ಉಭಯಪಕ್ಷವೂ ದೋಷದುಷ್ಟವಾಗಿರುವುದು.

ಲೋಕದಲ್ಲಿ ಪುತ್ರನಿಮಿತ್ತನಾದ ತಂದೆಯಿಲ್ಲದಿದ್ದರೂ ನೈಮಿತ್ತಿಕನಾದ ಪುತ್ರನಿರುವುದರಲ್ಲಿ ಬಾಧಕವೇನೂ ಕಂಡುಬರುವುದಿಲ್ಲವಾದುದರಿಂದ ಶಾಸ್ತ್ರದಲ್ಲಿ ಅಂಗೀಕರಿಸಿರುವ —**' ನಿಮಿತ್ತಾಭಾವೇ ನೈಮಿತ್ತಿಕಸ್ಯಾಪ್ಯಭಾವಃ '** ಎಂಬ ನ್ಯಾಯವು ಸಾರ್ವತ್ರಿಕವಲ್ಲವೆಂದು ತಿಳಿದು ಕೆಲವೆಡೆಗಳಲ್ಲಿ ಈ ನ್ಯಾಯವನ್ನು ಅಂಗೀಕರಿಸುವುದಿಲ್ಲ. ಆದುದರಿಂದ ಮೇಲೆ ಹೇಳಿದ ಪ್ರಯೋಗದಲ್ಲಿ ಸುಪ್ಪಿಗೆ ಲೋಪವನ್ನು ಮಾಡಲು ತನ್ನಿಮಿತ್ತಕಗಳಾದ ಕಿನಾದಿಗಳೂ ನಿವೃತ್ತಗಳಾಗುವುವೆಂದು ಹೇಳುವುದಕ್ಕಾಗುವುದಿಲ್ಲ. ಆದುದರಿಂದ ಇಲ್ಲಿ ' ಅರಮಗಂ ' ಮೊದಲಾದ ರೂಪಸಿದ್ಧ್ಯರ್ಥವಾಗಿ ಪೂರ್ವೋತ್ತರಪದಗಳಿಗೆ ವಿಭಕ್ತಿಕಾರ್ಯಗಳನ್ನು ಮಾಡುವುದಕ್ಕೆ ಪೂರ್ವದಲ್ಲಾಗಲಿ, ಮಾಡಿದ ಮೇಲಾಗಲಿ ಸಮಾಸಸಂಜ್ಞೆಯು ಬಂದಾಗ್ಯೂ ವಕ್ತೃಬುದ್ಧಿಯಲ್ಲಿ ಲೋಪಶಾಸ್ತ್ರವು ಸನ್ನಿಹಿತವಾಗಿರುವುದರಿಂದ ಆ ಲುಪ್ತವಾಗುವ ಪ್ರತ್ಯಯನಿಮಿತ್ತಕ ಕಾರ್ಯಗಳೂ — **' ನಿಮಿತ್ತಂ ವಿನಾಶೋನ್ಮುಖಂ ದೃಷ್ಟ್ವಾ ತತ್ ಪ್ರಯುಕ್ತಂ ಕಾರ್ಯಂ ನ ಕುರ್ವಂತಿ ವೈಯಾಕರಣಾಃ '** ಎಂಬ ನಿಯಮವಿರುವುದರಿಂದ ಪ್ರಥಮಪಕ್ಷದಲ್ಲ ಆ ಕಾರ್ಯವನ್ನೇ ಮಾಡುವುದಿಲ್ಲವೆಂದೂ ಎರಡನೆಯ ಪಕ್ಷದಲ್ಲಿ ಕೃತಕಾರ್ಯವೂ ನಿವೃತ್ತವಾಗುವುದೆಂದು ಹೇಳಬೇಕು.

ಈ ಸಮಾಸವು — ಸುಬಂತಪೂರ್ವಪದಕವಾದುದು ನಾಲ್ಕು ಬಗೆಯಾಗಿರುವುದೆಂದೂ ತಿಙಂತಪೂರ್ವಪದಕವಾದುದು ಎರಡು ಬಗೆಯಾಗಿರುವುದೆಂದೂ ಪ್ರಾಚೀನ ವೈಯಾಕರಣರು ಹೇಳಿರುವರು. ಇದೇ ಅರ್ಥವನ್ನು **ಹರಿಯು** —

**ಸುಪಾಂ ಸುಪಾ ತಿಙಾ ನಾಮ್ನಾ ಧಾತುನಾಥ ತಿಙಾಂ ತಿಙಾ**
**ಸುಬಂತೇನೇತಿ ವಿಜ್ಞೇಯಃ ಸಮಾಸಃ ಷಡ್ವಿಧೋ ಬುಧೈಃ**

ಎಂದು ಹೇಳಿರುವನು. ಕೆಲವರು ಸಮಾಸಾಧಿಕಾರದಲ್ಲಿ ಅವ್ಯಯೀಭಾವ ತತ್ಪುರುಷ ಬಹುವ್ರೀಹಿ ದ್ವಂದ್ವಗಳಿಗೆ ನಾಮವಿಶೇಷದಿಂದ ವ್ಯವಹಾರವಿರುವುದರಿಂದ ಸಮಾಸಗಳು ನಾಲ್ಕೇ ಭೇದಗಳುಳ್ಳವೆಂದು ಹೇಳುವರು. ಇಲ್ಲಿ ಅವ್ಯಯೀಭಾವವೆಂಬುದು ಪ್ರಾಧಾನ್ಯದಿಂದ ಪೂರ್ವಪದಾರ್ಥಬೋಧಕವಾದ ಸಮಾಸವು. ಇದು ಪ್ರಾಯಶಃ ನಿತ್ಯಸಮಾಸವಾಗಿರುವುದು. ಹೀಗೆಯೇ ತತ್ಪುರುಷ

ವೆಂಬುದು ಪ್ರಾಧಾನ್ಯದಿಂದ ಉತ್ತರಪದಾರ್ಥಬೋಧಕವಾದುದೆಂದೂ ಬಹುವ್ರೀಹಿ ಎಂಬುದು ಸಮಸ್ಯಮಾನಪದಾತಿರಿಕ್ತಪದಾರ್ಥಬೋಧಕವೆಂದೂ ದ್ವಂದ್ವವೆಂಬುದು ಪ್ರಾಧಾನ್ಯದಿಂದ ಸರ್ವಪದಾರ್ಥಬೋಧಕವೆಂದೂ ತಿಳಿಯತಕ್ಕದ್ದು. ಇಲ್ಲಿ ಪೂರ್ವಪದಾರ್ಥಪ್ರಾಧಾನ್ಯಾದಿಗಳು ಪ್ರಾಯಿಕವೆಂದು ಹೇಳಬೇಕು. ಪ್ರಾಧಾನ್ಯವೆಂದರೆ — ಸ್ವಘಟಕವಾದ ಪದಾರ್ಥಾಂಶದಲ್ಲಿ ವಿಶೇಷಣತಾನಾಪನ್ನತ್ವರೂಪವೆಂದು ತಿಳಿಯಬೇಕು. ಆದುದರಿಂದಲೇ **ವೋಪದೇವನು**—

ಸಮಾಸಸ್ತು ಚತುರ್ಧೇತಿ ಪ್ರಾಯೋವಾದಸ್ತಥಾಪರಃ
ಯೋಽಯಂ ಪೂರ್ವಪದಾರ್ಥಾದಿಪ್ರಾಧಾನ್ಯವಿಷಯಃ ಸ ಚ

ಎಂದು ಹೇಳಿರುವನು.

ಇನ್ನು ಕೆಲವರು ಹೀಗೆ ಸಾಮಾನ್ಯವಾಗಿ ಹೇಳಿರುವ ನಾಲ್ಕು ಬಗೆಯ ಸಮಾಸಗಳಲ್ಲೇ ಅವಾಂತರವಿಶೇಷಗಳನ್ನು ತಿಳಿದು —

ಷೋಢಾ ಸಮಾಸಾಸ್ಸಂಕ್ಷೇಪಾದಷ್ಟಾವಿಂಶತಿಧಾ ಪುನಃ
ನಿತ್ಯಾನಿತ್ಯತ್ವಯೋಗೇನ ಲುಗಲುಕ್ತ್ವೇನ ಚ ದ್ವಿಧಾ
ತತ್ರಾಷ್ಟಧಾ ತತ್ಪುರುಷಃ ಸಪ್ತಧಾ ಕರ್ಮಧಾರಯಃ
ಸಪ್ತಧಾ ಚ ಬಹುವ್ರೀಹಿರ್ದ್ವಿಗುರಾಭಾಷಿತೋ ದ್ವಿಧಾ
ದ್ವಂದ್ವಶ್ಚ ತರ್ವಿಧೋಜ್ಞೇಯೋಽವ್ಯಯೀಭಾವೋ ದ್ವಿಧಾ ಮತಃ

ಮೊದಲಾದ ಅನೇಕ ಭೇದಗಳಿರುವುವೆಂದು ಹೇಳುವರು. ಇವೆಲ್ಲಾ ಸಂಸ್ಕೃತಭಾಷೆಯಲ್ಲಿ ಪ್ರಸಿದ್ಧವಾಗಿರುವುದರಿಂದ ಅವುಗಳ ಲಕ್ಷಣವನ್ನೂ ಉದಾಹರಣೆಗಳನ್ನೂ ಆ ವ್ಯಾಕರಣ ಪರ್ಯಾಲೋಚನೆಯಿಂದಲೇ ತಿಳಿದುಕೊಳ್ಳಬೇಕು. ಭಾಷೆಯಲ್ಲಾದರೋ **ಶಾಸನಕಾರನು** ತತ್ಪುರುಷಾದಿಸಂಜ್ಞೆಗಳನ್ನು ನಿಮಿತ್ತಮಾಡಿಕೊಂಡು ಕಾರ್ಯವಿಧಾನವನ್ನು ಮಾಡಿಲ್ಲವಾದುದರಿಂದ ತತ್‌ಸಂಜ್ಞಾಸೂತ್ರಗಳನ್ನು ಮಾಡಿಲ್ಲ. ಬಹುವ್ರೀಹಿದ್ವಂದ್ವಸಂಜ್ಞೆಗಳಾದರೋ ಸಮಾಸಾಂತ ಪ್ರತ್ಯಯಾದ್ಯುತ್ಪತ್ತಿಗೆ ಅವಶ್ಯಕವಾಗಿರುವುದೆಂದು ಹೇಳಲ್ಪಟ್ಟಿವೆ. ಇದರಿಂದ ಸಮಾಸ ವಿಭಾಗಗಳೇ ಅವನ ಮತದಲ್ಲಿ ಇಲ್ಲವೆಂದು ತಿಳಿಯುವುದಕ್ಕಾಗುವುದಿಲ್ಲ. ಪ್ರಾಚೀನರು ವಿಭಾಗಿಸಿರುವುದನ್ನೇ ಇವನ ಮತದಲ್ಲಿಯೂ ಅಂಗೀಕರಿಸುವುದೆಂದು ತಿಳಿಯಬೇಕು.

**ದರ್ಪಣಕಾರನಾ**ದರೋ ಸಂಸ್ಕೃತವ್ಯಾಕರಣಕಾರರು ವ್ಯವಹರಿಸುವಂತೆ ಸಮಾಸದಲ್ಲಿ ಸಾಮಾನ್ಯವಾಗಿ ಅವ್ಯಯೀಭಾವ, ತತ್ಪುರುಷ, (ದ್ವಿಗು, ಕರ್ಮಧಾರಯಗಳು ತತ್ಪುರುಷ ಭೇಧ) ಬಹುವ್ರೀಹಿ, ದ್ವಂದ್ವ ಎಂದು ಆರು ಭೇದಗಳಿರುವುವೆಂದು —

ಪರಪದದೊಳರ್ಥವರ್ತನ
ಮಿರೆ ತತ್ಪುರುಷಂ ಸಮಂತದೇಕಾಶ್ರಯಮಾ
ಗಿರೆ ಕರ್ಮಧಾರಯಂ ನೆಲ
ಸಿರೆ ಮೊದಲೊಳ್ ಸಂಖ್ಯೆಯದೆ ವಲಂ ದ್ವಿಗುವಕ್ಕುಂ (ಸೂತ್ರ ೧೬೪)
ಪದನೆರಡುಂ ಮೇಣ್ ಪಲವುಂ
ಪದಾರ್ಥಮಂ ಬಯಸುತಿರೆ ಬಹುವ್ರೀಹಿಪದಾ
ರ್ಥದ ಗಡಣಂ ದ್ವಂದ್ವಮೆನಿ
ಪ್ಪುದವ್ಯಯೀಭಾವಮಾದಿಪದಮುಖ್ಯತೆಯಿಂ (ಸೂತ್ರ ೧೬೫)

ಎಂಬ ಸೂತ್ರಗಳಿಂದ ಸೂಚಿಸಿ ಕ್ರಿಯಾಸಮಾಸ, ಗಮಕಸಮಾಸಗಳೆಂಬ ಇನ್ನೂ ಎರಡು ಭೇದಗಳಿರುವುವೆಂದು —

ವಿದಿತಂ ಕ್ರಿಯಾಸಮಾಸಂ
ಮೊದಲೊಳ್ ಕಾರಕಮುಮಗ್ರದೊಳ್ ಕ್ರಿಯೆಯುಂ ಸಂ
ನಿದಮಾಗೆ ಬಿಂದು ಸಕ್ಕದ
ದದಂತದೊಳ್ ಕನ್ನಡಕ್ಕೆ ಮೇಣುತ್ವದೊಳಂ (ಸೂತ್ರ ೧೬೭)

ಜನಿಯಿಸುಗುಂ ಸಂಖ್ಯಾ ಸ
ರ್ವನಾಮ ಗುಣವಚನಕೃತ್‌ಪ್ರಪೂರ್ವಂ ಗಮಕಂ
ತನಗತ್ವಂ ಪೆರಗಿತ್ವಂ
ತನಗರಿಪದನಿಲ್ಲ ಕರ್ಮಧಾರಯಮದುವುಂ (ಸೂತ್ರ ೧೬೮)

ಎಂಬ ಸೂತ್ರಗಳಿಂದ ಅವುಗಳ ಲಕ್ಷಣವನ್ನೂ ಹೇಳಿರುವನು. ಆದುದರಿಂದ **ದರ್ಪಣಕಾರನ** ಮತದಲ್ಲಿ ಸಮಾಸಗಳು ಎಂಟು ಎಂದು ತಿಳಿಯಬೇಕು. ಇವೆಲ್ಲಾ ತತ್ಪುರುಷಾದಿಗಳಲ್ಲಿಯೇ ಅಂತರ್ಭೂತಗಳಾಗಿರುವುವೆಂದು ಪ್ರಾಚೀನರು ಕ್ರಿಯಾಸಮಾಸಕ್ಕೂ ಗಮಕಸಮಾಸಕ್ಕೂ ಲಕ್ಷಣ ಸೂತ್ರಗಳನ್ನು ಮಾಡಿಲ್ಲ.

ಇಲ್ಲಿ **ದರ್ಪಣಕಾರನು** ತತ್ಪುರುಷಾದಿ ಸಮಾಸಗಳಿಗೆ ಉದಾಹರಣೆಗಳನ್ನು ಕೊಡುವಾಗ **ಅವ್ಯಯೀಭಾವಸಮಾಸಕ್ಕೂ** 'ಅಂಗಯ್, ಮೇಂಗಾಲ್' ಮೊದಲಾದುವನ್ನು ಉದಾಹರಿಸಿರುವನು. ಆದರೆ ಸಂಸ್ಕೃತವ್ಯಾಕರಣದಲ್ಲಿ — ಅವ್ಯಯವಲ್ಲದುದು ಅವ್ಯಯವಾಗುವುದಾವುದೋ ಅದೇ ಅವ್ಯಯೀಭಾವವೆಂಬುದು, ಎಂದು —'**ಅನವ್ಯಯಂ ಅವ್ಯಯಂ ಭವತೀ**' ಎಂಬ ವ್ಯುತ್ಪತ್ತಿಯಿಂದ ಸಿದ್ಧಿಸುವುದೆಂದು ಹೇಳಿರುವರು. ಭಾಷೆಯಲ್ಲಿ 'ಅಂಗಯ್' ಮೊದಲಾದ ಸಮಾಸಗಳಲ್ಲಿ ಅವ್ಯಯವು ಸೇರಿದ್ದರೂ ಇವುಗಳ ಮೇಲೆ ವಿಭಕ್ತಿಪ್ರತ್ಯಯಗಳೂ ಬರುವುದರಿಂದ ಇವುಗಳನ್ನು ಅವ್ಯಯವೆಂದು ಹೇಳುವುದಕ್ಕಾಗುವುದಿಲ್ಲ. ಆದುದರಿಂದ ಇವನ್ನು ಷಷ್ಠೀಸಮಾಸಭೇದವಾದ ಏಕದೇಶಸಮಾಸವೆಂದು ಹೇಳಬೇಕು. ಆದುದರಿಂದ **ದರ್ಪಣಕಾರನು** ಹೇಳಿರುವುದು ಅಷ್ಟು ಸಮಂಜಸವಾಗಿ ತೋರುವುದಿಲ್ಲ.

**ಅವತಾರಿಕೆ ೨೯೪**

ಹೀಗೆ ಸರ್ವಸಮಾಸಸಾಧಾರಣವಾದ ಅಧಿಕಾರಸೂತ್ರವನ್ನು ಹೇಳಿ ವಿಶೇಷ ಸೂತ್ರಗಳಲ್ಲಿ ಅಧಿಕರಿಸಲ್ಪಡುವ ಸೂತ್ರವನ್ನು ಹೇಳುತ್ತಾನೆ.

**ಸೂತ್ರಂ ॥ ಕೃತ್‌ಸಂಖ್ಯಾದ್ವಾದಿಗುಣೋಕ್ತಿಃ[೧] ಸಂಸ್ಕೃತೇನ ಚ ॥ ೨೯೪ ॥**

**ಅರ್ಥ ॥ ಕೃದಂತವೂ ಸಂಖ್ಯಾವಾಚಕವೂ ಅದ್ವಾದಿಗಣಪಠಿತವಾದ ಶಬ್ದಗಳೂ ಗುಣವಾಚಕಗಳೂ ಆಗಿರುವ ಸುಬಂತ ಶಬ್ದಗಳು ಸಂಸ್ಕೃತಪ್ರಕೃತಿಕ ಸುಬಂತಗಳಿಂದಲೂ ಅಸಂಸ್ಕೃತಪ್ರಕೃತಿಕ ಸುಬಂತಗಳಿಂದಲೂ ಸಮಸ್ಯಮಾನಗಳಾಗುವುವು ಎಂದು ಅಧಿಕರಿಸಲ್ಪಡುವುವು.**

**ಉದಾಹರಣೆ** ॥ 'ಬೀಸುವ ಚಾಮರಂ, ಪೊಡೆವ ಭೇರಿ, ಏಱುವ ಜವ್ವನಂ; ಮೂವತ್ತೆರಡ್ಬಂತಿಯರಿವರ್, ನಾಲ್ಕುಜನೀತಂ, ನಾಲ್ವಟ್ಟಿ; ಆ ತುರಂಗಂ, ಎಲ್ಲಾಜಗಂ[೨]ಗಳ್, ಈ ಮನೆ; ಪಿರಿಯ ಗುರುಗಳ್, ಕಿಱಿಯಂಗನೆ ॥' ಮೊದಲಾದುವು ಸಿದ್ಧಿಸುವುವು.

---

ಪಾಠಾಂತರ : ೧ ಗುಣೋಕ್ತಿ ೨ ಗಜಂ

**ವಿಚಾರ ೨೯೪**

ಈ ಸೂತ್ರದಲ್ಲಿ — 'ಕೃತ್‌ಸಂಖ್ಯಾದ್ಯಾದ್ವಾದಿಗುಣೋಕ್ತಿಃ, ಸಂಸ್ಕೃತೇನ, ಚ' ಎಂದು ಮೂರು ಪದಗಳಿರುವುವು. 'ಕೃತ್‌ಸಂಖ್ಯಾದ್ಯಾದ್ವಾದಿಗುಣೋಕ್ತಿಃ' ಎಂಬುದು ದ್ವಂದ್ವೈಕವಚನಾಂತಪದವು. 'ಕೃತ್' ಎಂಬುದು ಪೂರ್ವೋಕ್ತಪ್ರತ್ಯಯಗ್ರಹಣಪರಿಭಾಷೆಯಿಂದ ತದಂತಬೋಧಕವಾಗುವುದು. ಇದು ಪ್ರಕರಣಬಲದಿಂದ ಭಾಷೆಯಲ್ಲಿ ವಿಹಿತವಾದ '**ಕೃದಜಾದಿಃ ||೧೫||**' ಎಂಬ ಸೂತ್ರದಿಂದ ಸಂಜ್ಞಿತ ಅಜಾದಿಪ್ರತ್ಯಯಜಾಲವೆಂದು ತಿಳಿಯಬೇಕು. ಸಂಖ್ಯಾಪದವು ಸಂಖ್ಯಾವಾಚಕವಾದ 'ಒಂದು, ಎರಡು, ಮೂರು' ಮೊದಲಾದ ಭಾಷಾಶಬ್ದಪದವು. 'ಅದ್ವಾದಿ' ಎಂಬುದು ಪ್ರಸಿದ್ಧವಾದ 'ಅದು, ಇದು' ಮೊದಲಾದ ಗಣಪಠಿತಶಬ್ದಬೋಧಕವು. ಗುಣೋಕ್ತಿಪದವು ಗುಣದ್ವಾರಾ ಗುಣಿಯಲ್ಲಿರುವ ಗುಣಪ್ರವೃತ್ತಿನಿಮಿತ್ತಕವಾದ 'ಕರಿದು, ಬಿಳಿದು' ಮೊದಲಾದ ಭಾಷಾಶಬ್ದಪರವು. 'ಸಂಸ್ಕೃತೇನ ಚ' ಎಂಬ **ಚ** ಕಾರವು ಅಸಂಸ್ಕೃತಶಬ್ದಸಮುಚ್ಚಾಯಕವು. ಪೂರ್ವಸೂತ್ರದಿಂದ ಅಧಿಕೃತವಾದ 'ಸುಬಂತಂ' ಎಂಬುದಕ್ಕೆ 'ಕೃತ್-ಸಂಖ್ಯಾದ್ಯಾದ್ವಾದಿಗುಣೋಕ್ತಿಃ' ಎಂಬುದೂ 'ಸುಬಂತೇನ' ಎಂಬುದಕ್ಕೆ 'ಸಂಸ್ಕೃತೇನ,' 'ಚ' ಶಬ್ದದಿಂದ ಸಿದ್ಧವಾದ 'ಅಸಂಸ್ಕೃತೇನ' ಎಂಬ ಎರಡೂ ವಿಶೇಷಣಗಳು. ತಥಾಚ — ಕೃದಂತ ಮೊದಲಾದ ಶಬ್ದಪ್ರಕೃತಿಕ ಸುಬಂತವು ಸಂಸ್ಕೃತಾಸಂಸ್ಕೃತಪ್ರಕೃತಿಕ ಸುಬಂತದೊಡನೆ ಸಮಸ್ಯಮಾನವಾಗುವುವೆಂದು ಮುಂದೆ ಅಧಿಕರಿಸಲ್ಪಡುವುದೆಂದು ಸೂತ್ರಾರ್ಥವು ಫಲಿಸುವುದು. ಆದುದರಿಂದ ಕೃದಂತಾದಿಪೂರ್ವಪದಕವಾದ ಸಮಾಸಗಳೆಲ್ಲಾ ಈ ಸೂತ್ರಕ್ಕೆ ಉದಾಹರಣೆಗಳೆಂದು ತಿಳಿಯುವುದು. ಇದರಿಂದ ಕೃದಾದಿಗಳಿಗೆ ಸಂಸ್ಕೃತದೊಡನೆ ಸಮಾಸವು ಬರುವುದೆಂದು ಬೋಧಿತವಾಗುವುದರಿಂದ ಕೃದಾದ್ಯತಿರಿಕ್ತ ಶಬ್ದಗಳಿಗೆ ಸಂಸ್ಕೃತದೊಡನೆ ಸಮಾಸವಿಲ್ಲವೆಂದು ತೋರುವುದು. ಆದಾಗ್ಯೂ ವಿಶೇಷವಿಧಿಗಳಿಂದಲೂ ಬಹುಳಗ್ರಹಣದಿಂದಲೂ ಶಿಷ್ಟಪ್ರಯೋಗಾನುಸಾರವಾಗಿ ಇತರ ಶಬ್ದಗಳಿಗೂ ಕೆಲವೆಡೆಗಳಲ್ಲಿ ಬರುವುದೆಂದು ತಿಳಿಯಬೇಕು. ಆದುದರಿಂದಲೇ ವಕ್ಷ್ಯಮಾಣಸೂತ್ರಗಳು ಸಾರ್ಥಕಗಳಾಗುವುವು.

ಈ ಸೂತ್ರದಲ್ಲಿ 'ಕೃತ್-ಸಂಖ್ಯಾದಿಗಳು ಭಾಷಾಶಬ್ದಗಳೇ ಗ್ರಹಿಸಲ್ಪಡುವುವು' ಎಂಬುದರಲ್ಲಿ ನಿಯಾಮಕವೇನೆಂದರೆ — ವ್ಯಾಕರಣಶಾಸ್ತ್ರದಲ್ಲಿ — '**ಸಹಚರಿತಾಸಹಚರಿತಯೋಃ ಸಹಚರಿತಸ್ಯೈವ ಗ್ರಹಣಂ**' ಎಂಬ ಪರಿಭಾಷೆಯನ್ನಂಗೀಕರಿಸಿರುವುದರಿಂದ ಪ್ರಕೃತದಲ್ಲಿಯೂ ಅದ್ವಾದಿಗಳು ಕೇವಲ ಭಾಷಾಮಯಗಳಾದುದರಿಂದ ಅದರ ಸಾಹಚರ್ಯವು ಕೃದಾದಿಗಳಿಗೆ ಇರುವುದರಿಂದ ಅವೂ ಭಾಷಾಮಯಗಳಾದುವೇ ಗ್ರಹಿಸಲ್ಪಡಬೇಕು. ಅದಕ್ಕಾಗಿಯೇ 'ಅದ್ವಾದಿ' ಎಂಬುದು ಮಧ್ಯದಲ್ಲಿ ಪಠಿಸಲ್ಪಟ್ಟಿದೆ. ಮತ್ತು ಸಂಸ್ಕೃತಾಸಂಸ್ಕೃತಗಳಿಗೆ ಪರಸ್ಪರ ಸಮಾಸವಿಲ್ಲವೆಂಬುದು ಪ್ರಸಿದ್ಧವಾಗಿರುವುದು. ಆದಾಗ್ಯೂ ಈ ನಿಯಮವು ಸಾಮಾನ್ಯವಾಗಿದ್ದರೂ ಕೆಲವೆಡೆಗಳಲ್ಲಿ ಅಪವಾದ ಸೂತ್ರದಿಂದ ಬಾಧಿಸಲ್ಪಡುವುದು. ತಥಾಚ — ಇಲ್ಲಿ 'ಸಂಸ್ಕೃತೇನ' ಎಂಬ ಪದದಿಂದ ಉತ್ತರಪದವು ಸಂಸ್ಕೃತವಾಗಿಯೇ ಇರಬೇಕೆಂಬುದು ನಿರ್ಧಾರಿತವಾಗಲು ಕೃದಾದಿಪೂರ್ವಪದವು ಅಸಂಸ್ಕೃತವೇ ಎಂದು ಸಿದ್ಧವಾಗುವುದು. ಹೀಗೆಯೇ ಇಲ್ಲಿ 'ಸಂಸ್ಕೃತೇನ, ಚ' ಎಂಬ ಸಮುಚ್ಚಯವಾಚಕ ಚ ಕಾರದಿಂದ ಅಸಂಸ್ಕೃತಕ್ಕೂ ಸಮಾಸವುಂಟಾಗಲು 'ನಾಲ್ವಟ್ಟೆ,

ಅಯ್ಮೊಗಂ, ಪಿರಿಯಮೊಗಂ, ಬೆಳ್ದಾವರೆ' ಮೊದಲಾದುವು ಸಿದ್ಧಿಸುವುವು. ಆದರೆ ಯಾವಾಗ ಉತ್ತರಪದವು ಅಸಂಸ್ಕೃತವಾಗುವುದೋ ಆವಾಗ ಪೂರ್ವಪದಭೂತಗುಣವಚನ ಸಂಖ್ಯಾವಚನಗಳು ಸಂಸ್ಕೃತಗಳೂ ಆಗಬಹುದೆಂದು ಶಂಕೆಯುಂಟಾಗುವುದು. ಆದಾಗ್ಯೂ 'ತಚ್ಚ ಬಿರುದಾವಲ್ಯಾಂ ॥ ೨೯೫ ॥' ಎಂಬ ಉತ್ತರಸೂತ್ರದಿಂದ ಸಂಸ್ಕೃತ ಪೂರ್ವಪದಸಮಾಸವು ಬಿರುದಾವಳಿಯಲ್ಲೇ ಅಲ್ಲದೆ ಬೇರೆ ಬರುವುದಿಲ್ಲವೆಂದು ನಿಯಮ ಮಾಡುವುದರಿಂದ ಸಂಸ್ಕೃತಕೃದಾದಿ ಪೂರ್ವಪದಸಮಾಸವು ವ್ಯಾವೃತ್ತವಾಗುವುದೆಂದು ತಿಳಿಯಬೇಕು.

**ದರ್ಪಣಕಾರನು** ಇದಕ್ಕೇ ಗಮಕಸಮಾಸವೆಂದು ಹೇಳುವನು. ಮತ್ತು ಸಂಸ್ಕೃತದೊಡನೆ ಕನ್ನಡ ಶಬ್ದಕ್ಕೆ ಬರುವ ಸಮಾಸಕ್ಕೆ ಅರಿಸಮಾಸವೆಂದು —

> ಪದವಿಧಿ ಕನ್ನಡಕಂ ಸ
> ಕ್ಕದಕ್ಕಮಿಲ್ಲಾದ್ಯರಿಂದೆ ಸಂದುವನಱಿದಿ
> ರ್ಪುದು ಬಿರುದಾವಳಿಯೊಳ್ ಪೇ
> ೞ್ವುದು ಪೆಱವಱೊಳಾಗದಿದು ವಿರುದ್ಧಸಮಾಸಂ (ಸೂತ್ರ ೧೭೪)

ಎಂಬ ಸೂತ್ರದಿಂದ ಸಮರ್ಥಿಸಿರುವನು.

**ಅವತಾರಿಕೆ ೨೯೫**

ಪೂರ್ವಸೂತ್ರದಲ್ಲಿ ಅಸಂಸ್ಕೃತಪೂರ್ವಪದಕ ಸಂಸ್ಕೃತೋತ್ತರಪದಕ ಸಮಾಸವು ವಿಧಿಸಲ್ಪಟ್ಟಿತು. ಇದರಿಂದ ಸಂಸ್ಕೃತ ಪೂರ್ವಪದಕ್ಕೂ ಅರ್ಥವಿಶೇಷದಲ್ಲಿ ಸಮಾಸವುಂಟೆಂದು ಬೋಧಿಸಲ್ಪಡುವುದು.

**ಸೂತ್ರಂ ॥ ತಚ್ಚ ಬಿರುದಾವಲ್ಯಾಂ ॥ ೨೯೫ ॥**

**ಅರ್ಥ ॥ ಸಂಸ್ಕೃತಪದವೂ ಅಸಂಸ್ಕೃತಪದವೂ ಸಂಸ್ಕೃತಪದದೊಡನೆಯೂ ಅಸಂಸ್ಕೃತಪದದೊಡನೆಯೂ ಬಿರುದಾವಳಿ ವಿಷಯದಲ್ಲಿ ಸಮಸ್ಯಮಾನವಾಗುವುದು.**

**ಉದಾಹರಣೆ** ॥ 'ನರಲೋಕದಲ್ಲಣಂ, ಕರಿ[1]ವೇಂಟೆಗಾಱಂ, ರಾಯಕೋಲಾಹಲಂ, ಜವಾದಿಕೋಲಾಹಲಂ, ಗೇಣಂಕಚಕ್ರೇಶ್ವರಂ, ರಾವುತ್ತರಾಯಂ ॥' ಮೊದಲಾದ ಬಿರುದಾವಳೀಬೋಧಕವಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೨೯೫**

ಈ ಸೂತ್ರದಲ್ಲಿ — 'ತತ್, ಚ, ಬಿರುದಾವಲ್ಯಾಂ' ಎಂದು ಮೂರು ಪದಗಳಿರುವುವು. 'ತತ್' ಪದವು ಪೂರ್ವಸೂತ್ರೋಕ್ತವಾದ 'ಸಂಸ್ಕೃತೇನ' ಎಂಬುದನ್ನು ಬೋಧಿಸುವುದು. ಇದು ಪೂರ್ವನಿಪಾತಾರ್ಥವಾಗಿ ಪ್ರಥಮಾಂತವಾಗಿ ನಿರ್ದೇಶಿಸಲ್ಪಟ್ಟಿದೆ. ಚ ಕಾರವು ಇತರ ಸಮುಚ್ಚಯಾರ್ಥಕವು. ಇತರವೆಂದರೆ ಅಸಂಸ್ಕೃತಪದವು. 'ಬಿರುದಾವಲ್ಯಾಂ' ಎಂಬುದು ವಿಷಯಸಪ್ತಮ್ಯಂತಪದವು. ಪೂರ್ವಸೂತ್ರದಿಂದ ಸುಪ್-ಸುಪೇತ್ಯಾದಿಪದಗಳು ಸಂಬಂಧಿಸಲ್ಪಡುವುವು. ಈ ಸೂತ್ರದಲ್ಲಿಯೂ ಪೂರ್ವಸೂತ್ರದಲ್ಲಿಯೂ ಸಂಸ್ಕೃತಪದದಿಂದ ಅವಿಕೃತಗಳಾದ ಸಮಸಮಭಿವ್ಯಾಹಾರಘಟಪಟಾದಿಶಬ್ದಗಳೂ ಅಂತಮಾತ್ರದಲ್ಲಿ ವಿಕೃತಿಯನ್ನುಹೊಂದಿದ

ಪಾಠಾಂತರ : ೧ ಗಜ

'ಮಾಲೆ, ಬಾಲೆ, ಕರಿ, ದಂಡಿ' ಮೊದಲಾದ ಶಬ್ದಗಳೂ ಗ್ರಹಿಸಲ್ಪಡುವುವು. ತಥಾಚ – ಬಿರುದಾವಳಿ ವಿಷಯದಲ್ಲಿ ಸಂಸ್ಕೃತಾಸಂಸ್ಕೃತಪ್ರಕೃತಿಕಗಳಾದ ಸುಬಂತಗಳು ಸಂಸ್ಕೃತಾಸಂಸ್ಕೃತಪ್ರಕೃತಿಕ ಸುಬಂತಗಳೊಡನೆ ಸಮಸ್ಯಮಾನವಾಗುವುದು ಎಂದು ಸೂತ್ರಾರ್ಥವಾಗುವುದು. ಆದುದರಿಂದ — 'ನರಲೋಕದಲ್ಲಣಂ' ಮೊದಲಾದುವು ಸಿದ್ಧಿಸುವುವು. 'ನರಲೋಕದಲ್ಲಣಂ' ವೆಂದರೆ ಭೂಲೋಕ ಭಯಂಕರನೆಂದರ್ಥವು. 'ಕರಿವೇಂಟೆಗಾಱ' ನೆಂದರೆ ಆನೆಯ ಬೇಟೆಯಲ್ಲಿ ಆಸಕ್ತನೆಂದರ್ಥವು. 'ರಾಯಕೋಲಾಹಲ' ವೆಂದರೆ ನೃಪತಿಕೋಲಾಹಲನೆಂದರ್ಥವು. 'ಜವಾದಿಕೋಲಾಹಲ' ವೆಂದರೆ 'ಜವಾದಿ' ಎಂಬುದು ಕಸ್ತೂರಿಯಂತೆ ಮೃಗಮದಗಂಧದ್ರವ್ಯವಿಶೇಷವು. ಇದರ ಕೋಲಾಹಲನೆಂದರ್ಥವು. 'ಗೇಣಂಕಚಕ್ರೇಶ್ವರ' ವೆಂಬಲ್ಲಿ ಗೇಣೆಂಬುದು ಹನ್ನೆರಡಂಗುಲವುಳ್ಳ ಕತ್ತಿಯು. ಇದೇ ಗುರುತಾಗುಳ್ಳ ರಾಜನೆಂದರ್ಥವು. 'ರಾವುತ್ತರಾಯ' ನೆಂದರೆ ತುರುಗಾರೂಢ ರಾಜನೆಂದರ್ಥವು. ಇವೆಲ್ಲಾ ಒಬ್ಬೊಬ್ಬನಿಗೆ ಬಿರುದೆಂದು ತಿಳಿಯಬೇಕು. ಹೀಗೆಯೇ ಇನ್ನೂ ಲೋಕದಲ್ಲಿ ಪ್ರಸಿದ್ಧವಾಗಿ ಬಿರುದುಗಳನ್ನು ಬೋಧಿಸುವ ಸಮಾಸಗಳೆಲ್ಲಾ ಇದಕ್ಕೆ ಲಕ್ಷ್ಯಗಳೆಂದು ತಿಳಿಯುವುದು.

ಇಲ್ಲಿ ಕೊಟ್ಟಿರುವ ಉದಾಹರಣೆಗಳನ್ನು ಪರ್ಯಾಲೋಚಿಸಲು ಸಂಸ್ಕೃತವು ಪೂರ್ವಪದವಾಗಿದ್ದರೆ ಉತ್ತರಪದವು ಅಸಂಸ್ಕೃತವಾಗಿರಬೇಕೆಂದೂ ಅಸಂಸ್ಕೃತವು ಪೂರ್ವಪದವಾಗಿದ್ದರೆ ಉತ್ತರಪದವು ಸಂಸ್ಕೃತವಾಗಿಯೂ ಇರಬೇಕೆಂದು ತೋರುವುದು. ಆದರೆ ಕೆಲವರು ಸೂತ್ರದಲ್ಲಿ ಹೀಗೆ ಸ್ಪಷ್ಟವಾಗಿ ಹೇಳಿಲ್ಲವಾದುದರಿಂದ ಯಥಾಸಂಭವವಾಗಿ ಬರುವುದು ಎಂದು ಹೇಳುವರು. ಇದು ಸಂಸ್ಕೃತಾಸಂಸ್ಕೃತಗಳಿಗೆ ಅಪ್ರಾಪ್ತವಾದ ಸಮಾಸವಿಧಾಯಕವಾದುದರಿಂದ ಪೂರ್ವೋತ್ತರ ಪದಗಳೆರಡೂ ಏಕಜಾತೀಯವಾಗಿರುವುವು ಇದಕ್ಕೆ ವಿಷಯಗಳಲ್ಲವೆಂದು ಪ್ರಯೋಗದರ್ಶಿಗಳು ಊಹಿಸಿಕೊಳ್ಳುವುದು.

**ಅವತಾರಿಕೆ ೨೯೬**

ಪೂರ್ವದಲ್ಲಿ ಹೇಳಿರುವ ಎರಡು ಸೂತ್ರಗಳಿಂದಲೂ ಕೃದಾದ್ಯತಿರಿಕ್ತವಿಷಯದಲ್ಲಿ ಸಂಸ್ಕೃತಾಸಂಸ್ಕೃತಗಳಿಗೆ ಸಮಾಸವಿಲ್ಲವೇ ಇಲ್ಲವೆಂದು ನಿಯಮಿಸಲ್ಪಟ್ಟಿತು. ಆದಾಗ್ಯೂ ಪ್ರಾಚೀನ ಕವಿ ಪ್ರಯೋಗ ಪ್ರಸಿದ್ಧಗಳಾಗಿ ಕೃತಸಮಾಸಗಳಾದ ಕೆಲವು ಶಬ್ದಗಳೂ ಇವೆ ಎಂಬುದನ್ನು ಬೋಧಿಸಲು ಸೂತ್ರಾಂತರವನ್ನು ಪ್ರಾರಂಭಿಸುತ್ತಾನೆ.

**ಸೂತ್ರಂ || ಕಡುರಾಗಾದಯಃ || ೨೯೬ ||**

**ಅರ್ಥ || 'ಕಡುರಾಗ' ಮೊದಲಾದ ಸಂಸ್ಕೃತಾಸಂಸ್ಕೃತಗಳು ಕೂಡಿ ಸಮಸ್ತಗಳಾದ ಶಬ್ದಗಳು ಮಹಾಕವಿಪ್ರಯೋಗದಿಂದ ಸಾಧುಗಳೆಂದು ತಿಳಿಯುವುದು.**

**ಉದಾಹರಣೆ ||** 'ಕಡುರಾಗಂ, ಮೊಗರಾಗಂ, ಗುಣಕರು, ಕೂರಸಿ, ಮಾಬ್ಬಲಂ, ಪೆರ್ಬ್ಬಲಂ, ಅಱಜನಂ, ತುರಗದಱಂ, ಮಂಗಳಾರತಿ, ಮಂಗಳವಸದನಂ, ಪಂಚಸರಂ, ಪಾದರಕ್ಕೆ, ಪರಬೊಮ್ಮಂ, ದಾನಸಾಲೆ, ಬಾಹುಬಳೆ, ಪಾದಸಂಕಲೆ, ಗೋಹುರಂ, ಸಿರಿರಾಮಂ, ತಿಹುರಾಂತಕಂ, ಪಯಗತಿ, ಜವದಂಡಂ, ಸಂದುವಾತಂ, ಗಾವರಸಂ, ಪಸುಪತಿ, ಬೊಮ್ಮಾಂಡಂ, ಅರಸುಗುಣಂ, ಅಕ್ಕರಮಾಲೆ, ಮಾಕಾಳಿ, ಮಾದಾನಿ, ಮಾದೇವಂ, ಮಾಶೌರ್ಯ್ಯಧನಂ ||'

ಮೊದಲಾದುವು ಇದಕ್ಕೆ ಲಕ್ಷ್ಯಗಳು. ಸೂತ್ರದಲ್ಲಿ ಬಹುವಚನವನ್ನು ಹೇಳಿರುವುದರಿಂದ ಇದು ಆಕೃತಿಗಣವೆಂದು ತಿಳಿದು ಇದರಂತೆ ಇರುವ ಪ್ರಯೋಗಸ್ಥವಾದ ಶಬ್ದಗಳನ್ನೂ ಈ ಗಣದಲ್ಲಿ ಪಾಠಮಾಡಿಕೊಂಡು ಸಾಧುತ್ವವನ್ನು ಹೇಳುವುದು.

**ವಿಚಾರ ೨೯೬**

ಈ ಸೂತ್ರವು ಸಾಮಾನ್ಯ ಲಕ್ಷಣಕ್ಕೆ ವಿಷಯವಾಗದೆ ಆರಾತೀಯಕವಿಪ್ರಯೋಗ ಪ್ರಸಿದ್ಧವಾದ ಕೆಲವು ಸಮಾಸಗಳಿಗೆ ಸಾಧುತ್ವವನ್ನು ಹೇಳುವುದಕ್ಕೋಸ್ಕರ ಪ್ರಾರಂಭಿಸಲ್ಪಟ್ಟಿರುವುದು. ಇಲ್ಲಿ ಉದಾಹರಿಸಿರುವ ' ಕಡುರಾಗಂ ' ಎಂಬುದರಲ್ಲಿ ' ಕಡಿದು ' ಎಂಬ ಶಬ್ದವು ತೀವ್ರವಾಚಕವು. ಇದಕ್ಕೆ ಪ್ರಕೃತದಲ್ಲಿ ಅಧಿಕವೆಂದು ತಾತ್ಪರ್ಯವು. ಆದುದರಿಂದ ಅಧಿಕರಾಗವೆಂದರ್ಥವಾಗುವುದು. ಹೀಗೆಯೇ ' ಮೊಗರಾಗ ' ವೆಂದರೆ ' ಮುಖರಾಗ ' ವೆಂದರ್ಥವು. ' ಗುಣಕರು ' ಎಂಬಲ್ಲಿ ' ಕರು ' ಶಬ್ದವು ಸುವರ್ಣ-ರಜತ ಮೊದಲಾದ ಲೋಹಮಯವಾದ ಪ್ರತಿಮಾದಿಗಳನ್ನು ನಿರ್ಮಿಸುವುದಕ್ಕೆ ರಸನಿಷೇಚನಾರ್ಥವಾಗಿ ಮಾಡಿದ ಪ್ರತಿಕೃತಿವಿಶೇಷವಾಚಕವು. ಅಥವಾ ಗೃಹಾದಿಗಳನ್ನು ಕಟ್ಟುವುದಕ್ಕಾಗಿ ಒಳ್ಳೇ ಲಗ್ನದಲ್ಲಿ ಸ್ಥಾಪಿತವಾದ ಪ್ರಥಮಸ್ತಂಭವಾಚಕವು. ಆದುದರಿಂದ ' ಗುಣಕರು ' ಎಂದರೆ ಗುಣಗಳ ಪ್ರಥಮಸೃಷ್ಟಿಯೆಂದರ್ಥವಾಗುವುದು. 'ಕೂರಸಿ' ಎಂದರೆ ನಿಶಿತವಾದ ಕತ್ತಿಯೆಂದರ್ಥವು. ' ಮಾರ್ಬಲ ' ಎಂದರೆ ಪ್ರತಿಬಲವೆಂದರ್ಥವು. ' ಅಳಿಜನ ' ಎಂದರೆ ಕ್ಷುದ್ರಜನವೆಂದರ್ಥವು. ತುರಗದಳಂ-ಅಶ್ವಸೈನ್ಯವು. ಮಂಗಳಾರತಿ-ಮಂಗಳಕರವಾದ ಆರಾತ್ರಿಕವು. ಮಂಗಳಪಸದನಂ-ಮಂಗಳಪ್ರಸಾಧನವು. ಪಂಚಸರಂ-ಮನ್ಮಥನು. ಪಾದರಕ್ಕೆ-ಪಾದರಕ್ಷೆ. ಪರಬೊಮ್ಮಂ-ಸರ್ವಜ್ಞನು, ಅರ್ಹಂತ, ಅಥವಾ ಸಿದ್ಧನು. ದಾನಸಾಲೆ-ದಾನಶಾಲೆ. ಬಾಹುಬಳಿ-ಬಾಹುವಲಯವು. ಪಾದಸಂಕಲೆ-ಪಾದಶೃಂಖಲೆ. ಗೋಹುರಂ-ಗೋಪುರವು. ಸಿರಿರಾಮಂ-ಶ್ರೀರಾಮನು. ತಿಹುರಾಂತಕಂ-ತ್ರಿಪುರಾಂತಕನು. ಪಯಗತಿ-ಪದಗತಿಯು. ಜವದಂಡಂ-ಯಮದಂಡವು. ಸಂದುವಾತಂ-ಸಂಧಿವಾತವು. ಗಾವರಸಂ-ಗ್ರಾಮರಸವು. ಇಲ್ಲಿ ಗ್ರಾಮವೆಂದರೆ ' ಸರಿಗಮಪಧನಿಸ ' ಎಂದು ಸಂಗೀತಶಾಸ್ತ್ರದಲ್ಲಿ ಪ್ರಸಿದ್ಧವಾದ ಸ್ವರಸಮೂಹವು. ಪಸುಪತಿ-ಪಶುಪತಿ. ಬೊಮ್ಮಾಂಡಂ-ಬ್ರಹ್ಮಾಂಡವು. ಅರಸುಗುಣಂ-ಪುರಶ್ಚಗುಣವು. ಅಕ್ಕರಮಾಲೆ-ಅಕ್ಷರಮಾಲೆ ' ಮೊದಲಾದುವನ್ನು ಪ್ರಯೋಗಬಲದಿಂದ ತಿಳಿಯಬೇಕು.

ಇಲ್ಲಿ ವಿಮರ್ಶೆಮಾಡಲು — ' ಪಂಚಸರಂ, ಪಾದರಕ್ಕೆ, ಪರಬೊಮ್ಮಂ, ದಾನಸಾಲೆ, ಪಸುಪತಿ ' ಮೊದಲಾದುವು ಪಂಚಶರ, ಪಾದರಕ್ಷಾ, ಪರಬ್ರಹ್ಮ, ದಾನಶಾಲಾ, ಪಶುಪತಿ ' ಮೊದಲಾದ ಸಂಸ್ಕೃತ ಸಮಸ್ತಪದಗಳನ್ನು ತೆಗೆದುಕೊಂಡು ಉತ್ತರಪದಮಾತ್ರದಲ್ಲಾಗಲಿ ಪೂರ್ವಪದಮಾತ್ರದಲ್ಲಾಗಲಿ ತದ್ಭವ ಸೂತ್ರಗಳಿಂದ ವಿಕಾರವನ್ನು ಮಾಡಲು ಸಿದ್ಧಿಸುವುವು. ಆದಾಗ್ಯೂ ' ಶರ, ರಕ್ಷಾ, ಬ್ರಹ್ಮ, ಶಾಲಾ, ಪಶು ' ಮೊದಲಾದ ಕೇವಲಾಸಮಸ್ತ ಶಬ್ದಗಳಿಗೆ ವಿಕಾರವನ್ನು ಮಾಡಿ ನಿಷ್ಪನ್ನವಾದ ' ಸರ, ರಕ್ಕೆ, ಬೊಮ್ಮ, ಸಾಲೆ, ಪಸು ' ಮೊದಲಾದ ತದ್ಭವ ಶಬ್ದಗಳೊಡನೆ ' ಪಂಚ, ಪಾದ, ಪರ, ದಾನ, ಪಶು ' ಮೊದಲಾದ ಶಬ್ದಗಳಿಗೂ ಯಥಾಯೋಗ್ಯವಾಗಿ ಪೂರ್ವೋತ್ತರಪದಗಳಿಗೆ ಸಮಾಸವು ಅಭಿಪ್ರೇತವೆಂದು ಈ ಗಣದಲ್ಲಿ ಪಠಿತಗಳಾಗಿವೆ

ಎಂದು ತಿಳಿಯಬೇಕು. ಹೀಗೆಯೇ ತದ್ಭವ ತತ್ಸಮಗಳಿಗೂ ದೇಶ್ಯ ತತ್ಸಮಗಳಿಗೂ ಅನಿಯತ ಪೌರ್ವಾಪರ್ಯವುಳ್ಳ ಸಮಾಸವು ಪೂರ್ವಕವಿಪ್ರಸಿದ್ಧವೆಂದು ತಿಳಿಯತಕ್ಕದ್ದು.

**ಅವತಾರಿಕೆ ೨೯೭**

ಸಮಾಸಸ್ಥಲಗಳಲ್ಲಿ ಪೌರ್ವಾಪರ್ಯವು ಅನಿಯತವಾಗಿ ಪ್ರಾಪ್ತವಾಗಲು ನಿಯಮಾರ್ಥವಾಗಿ ಸೂತ್ರವನ್ನು ಹೇಳುತ್ತಾನೆ.

**ಸೂತ್ರಂ || ಸೂಕ್ತಂ ಪೂರ್ವಂ || ೨೯೭ ||**

**ಅರ್ಥ || ಸಮಾಸವಿಧಾಯಕ ಸೂತ್ರಗಳಲ್ಲಿ ಪ್ರಥಮಾಂತವಾಗಿ ಉಚ್ಚರಿಸಲ್ಪಡುವುದಾವುದೋ ಅಂತಹ ಪ್ರಥಮಾಂತಪದಬೋಧ್ಯವಾದ ಲಕ್ಷ್ಯಸ್ಥಪದವು ಆ ಸಮಾಸದಲ್ಲಿ ಪೂರ್ವಪ್ರಯೋಗಾರ್ಹವಾಗುವುದು.**

**ಉದಾಹರಣೆ || ' ಅಮುಕ್ಕೃತ್ತಿಜಾ || ೨೯೮ ||, ಇಮ್ ಕರಣೇ || ೩೦೦ ||, ಗೆತ್ತದರ್ಥೇನ || ೩೦೨ ||** ' ಮೊದಲಾದ ಸಮಾಸ ವಿಧಾಯಕ ಸೂತ್ರಗಳಲ್ಲಿ — ' ಅಮ್, ಇಮ್, ಗೆತ್ ' ಮೊದಲಾದುವು ಪ್ರಥಮಾಂತವಾಗಿ ಉಚ್ಚರಿಸಲ್ಪಟ್ಟಿರುವುದರಿಂದ—ಇವುಗಳಿಂದ ಬೋಧ್ಯಗಳಾದ ' ಅಮಂತ, ಇಮಂತ, ಗೆದಂತ ' ಮೊದಲಾದುವು ಪೂರ್ವದಲ್ಲಿ ಪ್ರಯೋಗಿಸಲ್ಪಡುವುವು ಎಂದು ಹೇಳಿರುವುದರಿಂದ ' ವಜ್ರಂಗೊಂಡಯ್, ಕೊಡಲಿಗಡಿದಂ, ಉಂಗುರಚಿನ್ನಂ ' ಮೊದಲಾದ ಲಕ್ಷ್ಯಗಳಲ್ಲಿ ದ್ವಿತೀಯಾಂತಾದಿಗಳೆ ಮೊದಲು ಪ್ರಯೋಗಿಸಲ್ಪಟ್ಟಿರುವುವು.

**ವಿಚಾರ ೨೯೭**

ಈ ಸೂತ್ರದಲ್ಲಿ — ' ಸೂಕ್ತಂ, ಪೂರ್ವಂ ' ಎಂದು ಎರಡು ಪದವಿರುವುವು. ' ಸೂಕ್ತಂ ' ಎಂದರೆ — ' ಸು ' ಎಂಬ ಪ್ರತ್ಯಯಾಂತವಾಗಿ ಉಚ್ಚರಿಸಲ್ಪಟ್ಟುದು. ಇದು ಪ್ರಥಮಾಂತವೆಂದು ಫಲಿತವಾಗುವುದು. ಯದ್ಯಪಿ ಕರ್ಣಾಟವಿಷಯದಲ್ಲಿ ಪ್ರಥಮೈಕವಚನವು 'ಮ್' ಎಂಬುದಲ್ಲದೆ 'ಸು' ಎಂಬುದಾಗುವುದಿಲ್ಲ; ಆದಾಗ್ಯೂ ಇದು ಸಂಸ್ಕೃತ ಪ್ರಥಮೈಕವಚನವಾಗಿರುವುದು. ಆದುದರಿಂದ ಸಮಾಸವಿಧಾಯಕಸೂತ್ರಗಳಲ್ಲಿ ಪ್ರಥಮೈಕವಚನಾಂತವಾಗಿ ನಿರ್ದಿಷ್ಟವಾಗಿರುವುದು ಎಂದು ಅರ್ಥವನ್ನು ಹೇಳಬೇಕು. ಆದರೆ ಇಂತಹ ಪ್ರಥಮಾಂತಕ್ಕೆ ಪೂರ್ವಪ್ರಯೋಗವನ್ನು ಈ ಸೂತ್ರದಿಂದ ವಿಧಿಸಲು ಲಕ್ಷ್ಯಸ್ಥವಾದುದಕ್ಕೆ ಬರುವುದಿಲ್ಲವೆಂದು ಇಲ್ಲಿ ಲಕ್ಷಣೆಯಿಂದ ಸಮಾಸ ವಿಧಾಯಕ ಸೂತ್ರಸ್ಥ ಪ್ರಥಮಾಂತಪದಬೋಧ್ಯವಾದ ಪದಗಳೆಂದು ಅರ್ಥವಾಗುವುದು. ಆದುದರಿಂದ ಸಮಾಸವಿಧಾಯಕ ಸೂತ್ರಗಳಲ್ಲಿ ಹೇಳಿರುವ ಪ್ರಥಮಾಂತಪದಬೋಧ್ಯಗಳು ಸಮಾಸದಲ್ಲಿ ಪೂರ್ವಪ್ರಯೋಗಾರ್ಹಗಳೆಂದು ಸೂತ್ರಾರ್ಥವು ಫಲಿತವಾಗುವುದು. ಆದುದರಿಂದ ' ಕೊಂಡಯ್ ವಜ್ರಮಂ, ವಜ್ರಮಂ ಕೊಂಡಯ್' ಮೊದಲಾದ ವಾಕ್ಯಗಳಂತೆ ಸಮಾಸದಲ್ಲಿಯೂ ಅನಿಯಮವಾಗಿ ಪ್ರಯೋಗಗಳು ಪ್ರಾಪ್ತವಾಗಲು ಇದರಿಂದ ನಿಯಮಮಾಡಿ ವಜ್ರಂಗೊಂಡಯ್ ಮೊದಲಾದ ಪ್ರಯೋಗಗಳು ಸಾಧಿಸಲ್ಪಡುವುವು. ಹೀಗೆ ಹೇಳಿರುವುದರಿಂದ ' **ಅಮುಕ್ಕೃತ್ತಿಜಾ ||೨೯೮||** ' ಮೊದಲಾದ ಸೂತ್ರಗಳಲ್ಲಿ ತೃತೀಯಾಂತಗಳಾಗಿ ಹೇಳಿರುವ ಪದಗಳಿಂದ ಬೋಧ್ಯಗಳಾದುವುಗಳಿಗೆ ಪೂರ್ವಪ್ರಯೋಗಗಳಿಲ್ಲವೆಂದು ಸಾಮಾನ್ಯವಾಗಿ ತಿಳಿಯುವುದು. ಸಂಸ್ಕೃತದಲ್ಲಾದರೋ ಈ ವಿಷಯದಲ್ಲಿ — ' **ಪ್ರಥಮಾನಿರ್ದಿಷ್ಟಂ ಸಮಾಸ ಉಪಸರ್ಜನಂ ||** ' ಎಂಬ ಸೂತ್ರದಿಂದ ಉಪಸರ್ಜನ ಸಂಜ್ಞೆಯನ್ನು ಹೇಳಿ ' ಉಪಸರ್ಜನಂ ಪೂರ್ವಂ ' ಎಂಬುದರಿಂದ ಸಾಮಾನ್ಯವಾಗಿ

ಪೂರ್ವನಿಪಾತವನ್ನು ಹೇಳಿದ್ದರೂ ಪ್ರಯೋಗಾನುಸಾರವಾಗಿ ಕೆಲವೆಡೆಗಳಲ್ಲಿ ಅನಿಯತಪ್ರಯೋಗಗಳೂ ಉಂಟೆಂದು ಹೇಳಿರುವರು.

**ದರ್ಪಣಕಾರನ** ಮತದಲ್ಲಾದರೋ — ಹೀಗೆ ಪೂರ್ವನಿಪಾತನಿಯಮಕ್ಕಾಗಿ ಬೇರೆ ಸೂತ್ರವನ್ನು ಮಾಡದಿದ್ದರೂ ಆಯಾ ಸಮಾಸವಿಧಾಯಕವಾದ ಕೆಲವು ಸೂತ್ರಗಳಲ್ಲಿ ಪೂರ್ವಪದೋತ್ತರಪದ ನಿಯಮವನ್ನು ಸ್ಪಷ್ಟವಾಗಿ ಹೇಳಿರುವುದರಿಂದಲೂ ಅರ್ಥೋಪಸ್ಥಿತಿಕ್ರಮದಿಂದಲೂ ಪೂರ್ವಪ್ರಯೋಗ ನಿಯಮವನ್ನು ಊಹಿಸಿಕೊಳ್ಳಬೇಕು.

**ಅವತಾರಿಕೆ ೨೯೮**

ಹಿಂದೆ ಸಾಮಾನ್ಯ ಸಮಾಸ ನಿಯಮಗಳನ್ನು ಹೇಳಿ ಈ ಸಮಾಸ ವಿಶೇಷಗಳನ್ನು ಹೇಳಲು ಪ್ರಾರಂಭಿಸುವನಾಗಿ ಮೊದಲು ಪ್ರಾಚೀನರು ವ್ಯವಹರಿಸುವ ಕ್ರಿಯಾಸಮಾಸವನ್ನು ಹೇಳುತ್ತಾನೆ.

**ಸೂತ್ರಂ || ಅಮುಕೃತ್ತಿಜಾ || ೨೯೮ ||**

**ಅರ್ಥ || ಕೃದಂತ ವ್ಯತಿರಿಕ್ತವಾದ ಅಮುಂತಪದವು ತಿಜಂತವಾದ ಉತ್ತರಪದದೊಡನೆ ಬಹುಳವಾಗಿ ಸಮಾಸವನ್ನು ಹೊಂದುವುದು.**

**ಉದಾಹರಣೆ ||** ' ಪಾಲಂ+ಕುಡಿದಂ=ಪಾಲ್ಗುಡಿದಂ, ಬಳಪಮಂ+ಪಿಡಿದಯ್=ಬಳಪಂಬಿಡಿದಯ್, ನೀರಂ+ಕುಡಿಗುಂ=ನೀರ್ಗುಡಿಗುಂ, ಸಂತಸಮಂ+ಕುಡುಗೆ=ಸಂತಸಂಗುಡುಗೆ || ' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೨೯೮**

ಈ ಸೂತ್ರದಲ್ಲಿ — ' ಅಮ್, ಅಕೃತ್, ತಿಜಾ ' ಎಂದು ಮೂರು ಪದಗಳಿರುವುವು. ಇವೆಲ್ಲಾ ಪ್ರತ್ಯಯಬೋಧಕಪದಗಳಾದುದರಿಂದ ಪ್ರತ್ಯಯಗ್ರಹಣಪರಿಭಾಷೆಯು ಉಪಸ್ಥಿತವಾಗಿ ತದಂತಗಳನ್ನು ಬೋಧಿಸುವುದು. ಇವುಗಳಲ್ಲಿ ' ಅಮ್ ' ಎಂಬುದು ಪ್ರಥಮಾಂತವಾದುದರಿಂದ ' ಅಕೃತ್ ' ಎಂಬುದು ಅದಕ್ಕೆ ವಿಶೇಷಣವು. ' ಅಕೃತ್ ' ಎಂದರೆ ಕೃದಂತ ವ್ಯತಿರಿಕ್ತವಾದುದೆಂದರ್ಥವು. 'ಅಮ್' ಎಂದರೆ ಅಮುಂತಪದವು. ಇದು ಅಧಿಕೃತವಾದ ಸುಬಂತಕ್ಕೆ ವಿಶೇಷಣವು. ' ತಿಜಾ ' ಎಂಬುದು ಸಹಾರ್ಥಕ ತೃತೀಯಾಂತಪದವು. ಇಲ್ಲಿ 'ಸುಪಾ' ಎಂಬ ತೃತೀಯಾಂತವು ಅಧಿಕರಿಸಲ್ಪಡುತ್ತಿದ್ದರೂ ತಿಜಂತದೊಡನೆ ಸಮಾನಾಧಿಕರಣ್ಯವು ಸಂಭವಿಸುವುದಿಲ್ಲವಾದುದರಿಂದ ಅದನ್ನು ಇಲ್ಲಿ ಸಂಬಂಧಿಸುವುದಿಲ್ಲ. ' ಬಹುಲಂ, ಸಮಾಸಃ ' ಎಂಬಿವುಗಳಾದರೋ ಎಲ್ಲ ಕಡೆಯಲ್ಲಿಯೂ ಸಂಬಂಧಿಸಲ್ಪಡುವುವು. ತಥಾಚ—ಕೃದಂತ ವ್ಯತಿರಿಕ್ತವಾದ ಅಮುಂತರೂಪ ಸುಬಂತವು ತಿಜಂತದೊಡನೆ ಬಹುಳವಾಗಿ ಸಮಸ್ಯಮಾನವಾಗುವುದೆಂದು ಸೂತ್ರಾರ್ಥವಾಗುವುದು. ಆದುದರಿಂದಲೇ ಇಲ್ಲಿ ಅಂತಹ ತಿಜಂತಗಳಿಂದ ಕೂಡಿರುವ ಸಮಾಸಗಳನ್ನೆ ಉದಾಹರಿಸಿರುವುದು.

ಇಲ್ಲ ' ಸುಪ್‌ಸುಪಾ ಸಮಾಸೋ ಬಹುಲಂ ' ಎಂದು ಪ್ರವೃತ್ತ್ಯಪ್ರವೃತ್ತ್ಯಾದಿಚಾತುರ್ವಿಧ್ಯ ಬೋಧಕ ಬಹುಳಗ್ರಹಣವನ್ನು ಮಾಡಿರುವುದರಿಂದಲೇ ಕೆಲವೆಡೆಗಳಲ್ಲಿ ತಿಜಂತಗಳಿಂದಲೂ ಸಮಾಸವುಂಟೆದು ಸಿದ್ಧಿಸುತ್ತಿರಲು ಈ ಸೂತ್ರವು ವ್ಯರ್ಥವೆಂದು ತೋರುವುದು. ಆದಾಗ್ಯೂ ಪೂರ್ವನಿಪಾತನಿಯಮಾರ್ಥವಾಗಿ ಈ ಸೂತ್ರವು ಪ್ರಾರಂಭಿಸಲ್ಪಟ್ಟಿದೆ ಎಂದು ತಿಳಿಯುವುದು.

ಆದುದರಿಂದ ಈ ಸಮಾಸವು ತಿಜಂತೋತ್ತರವಾಗಿಯೇ ಇರುವುದು. ಇದನ್ನೇ ಪ್ರಾಚೀನರು ಕ್ರಿಯಾಸಮಾಸವೆಂದು ವ್ಯವಹರಿಸುತ್ತಾರೆ. ಈ ವಿಷಯದಲ್ಲಿ —

**ಸವಣಂ ಬಳಸಂಗೊಳೆ ಗಾಂ**
**ಡಿವಿ ಬಿಲ್ಗೊಳೆ ಬಲವಿರೋಧಿ ವಜ್ರಂಗೊಳೆ ದಾ**
**ನವರಿಪು ಚಕ್ರಂಗೊಳೆ ಕೌ**
**ರವಾರಿ ಗದೆಗೊಳೆ[1] ಪೊಣರ್ಕೆಗಾವಂ ನಿಲ್ವಂ**

ಎಂದು ಮೊದಲಾದ ಪದ್ಯಗಳನ್ನೂ ಉದಾಹರಿಸುತ್ತಾರೆ.

ಈ ಸೂತ್ರದಲ್ಲಿ — 'ಅರ್ಮ್' ಎಂಬುದನ್ನು ಹೇಳದಿದ್ದರೆ 'ಮರನಿರ್ದ್ದುದು, ಕಣ್ಣಿಂ ಕಂಡಯ್' ಮೊದಲಾದ ಪ್ರಥಮಾ, ತೃತೀಯಾವಿಭಕ್ತ್ಯಂತಗಳೂ ಕೃದಂತ ವ್ಯತಿರಿಕ್ತ ಸುಬಂತಗಳಾದುದರಿಂದ ಅವಕ್ಕೂ ತಿಜಂತಗಳೊಡನೆ ಸಮಾಸವು ಪ್ರಸಕ್ತವಾಗುವುದು. ಆದುದರಿಂದ 'ಅರ್ಮ್' ಎಂದು ಹೇಳಲ್ಪಟ್ಟಿದೆ. 'ಅಕೃತ್' ಎಂದು ಹೇಳಿರುವುದರಿಂದ 'ಮಾಡಿದನಂ ಕಂಡಯ್, ಪಾಡಿದನಂ ಪೊಗಳ್ದಯ್' ಮೊದಲಾದ ಕೃದಂತಗಳಿಗೆ ಸಮಾಸವು ಬರುವುದಿಲ್ಲ. 'ತಿಜಾ' ಎಂದು ಹೇಳಿರುವುದರಿಂದ 'ಮರನಂ ಕೊಡಲಿಯಿಂ ಕಡಿದಯ್' ಮೊದಲಾದ ಪ್ರಯೋಗಗಳಲ್ಲಿ 'ಮರನಂ' ಎಂಬ ಅಮಂತಕ್ಕೆ 'ಕೊಡಲಿಯಿಂ' ಎಂಬ ಸುಬಂತದೊಡನೆ ಸಮಾಸವು ಬರುವುದಿಲ್ಲ.

ಆದರೆ ಪ್ರಾಚೀನರ ವ್ಯಾಕರಣಶಾಸ್ತ್ರದಲ್ಲಿ — 'ತತ್ಪುರುಷ, ಕರ್ಮಧಾರಯ, ದ್ವಿಗು, ಬಹುವ್ರೀಹಿ, ದ್ವಂದ್ವ, ಅವ್ಯಯೀಭಾವ' ಎಂದು ಆರು ಸಮಾಸಗಳು ಪ್ರಸಿದ್ಧಗಳಾಗಿರುವುವು. ಅವುಗಳಲ್ಲಿ ಈ ಸಮಾಸವು ಆವುದಕ್ಕೆ ಸೇರಿರುವುದು ಎಂದು ಶಂಕೆಯುಂಟಾಗುವುದು. ಆದಾಗ್ಯೂ ವ್ಯಾಕರಣಶಾಸ್ತ್ರದಲ್ಲಿ ತತ್ಪುರುಷಾದಿ ಸಂಜ್ಞಾವಿಶೇಷಗಳನ್ನು ಮಾಡಿರುವುದು ಕಾರ್ಯಾರ್ಥ ವಾದುದರಿಂದ ಇಲ್ಲಿ ಅಂತಹ ಕಾರ್ಯಗಳು ಈ ಸಮಾಸಕ್ಕಾವುದೂ ಇಲ್ಲವಾದುದರಿಂದ ಇದು ಸಾಮಾನ್ಯವಾದ ಸಂಜ್ಞೆಯನ್ನು ಹೊಂದಿರುವುದಲ್ಲದೆ ವಿಶೇಷ ಸಂಜ್ಞೆಯನ್ನು ಹೊಂದಿಲ್ಲ. ಹೀಗೆಯೇ ಪ್ರಾಚೀನರ ಮತದಲ್ಲಿಯೂ ಸಮಾಸಗಳು ಆರೇ ಎಂದು ನಿರ್ಬಂಧವಿಲ್ಲ. ಆದುದರಿಂದಲೇ — '**ಶೀಘ್ರಗಂತಾ, ಶೋಭನಪಕ್ತಾ, ವಿಸ್ಪಷ್ಟಪಟುಃ**' ಮೊದಲಾದುವು ತತ್ಪುರುಷಾದಿ ವಿಶೇಷ ಸಂಜ್ಞಾನಾಕ್ರಾಂತವಾದ ಸುಪ್-ಸುಪೇತಿಸಾಮಾನ್ಯಸಮಾಸಗಳೆಂದು ಹೇಳುವರು. ಎಲ್ಲಿ ಪ್ರಯೋಜನವಿರುವುದೋ ಅಲ್ಲಿ — '**ಅನ್ಯಾರ್ಥೇ ಬಹುವ್ರೀಹಿರ್ನಿತ್ಯಂ || ೩೦೦ ||, ದ್ವಂದ್ವಃ ಸಾಹಿತ್ಯೇ || ೩೦೪ ||**' ಮೊದಲಾದ ವಿಶೇಷ ಸಂಜ್ಞೆಗಳು ಹೇಳಲ್ಪಡುವುವು. ಆದುದರಿಂದ '**ಅಬ್ಬಹುವ್ರೀಹೇಃ || ೩೨೭ ||, ಅಟ್ ಸ್ವರಾತ್ || ೩೨೮ ||, ಪರವದ್ದ್ವಂದ್ವಃ || ೧೧೨ ||**' ಮೊದಲಾದ ಸೂತ್ರವಿಹಿತ ಕಾರ್ಯಗಳು ಸಿದ್ಧಿಸುವುವು.

ಇಲ್ಲಿ **ದರ್ಪಣಕಾರನು ಕಾರಕವು ಪೂರ್ವಪದವಾಗಿಯೂ ಕ್ರಿಯೆಯು ಉತ್ತರಪದ** ವಾಗಿಯೂ ಇದ್ದು ಸಮಾಸವಾದರೆ ಕ್ರಿಯಾಸಮಾಸವೆನಿಸಿಕೊಳ್ಳುವುದೆಂದು ಹೇಳಿ ಆ ಕ್ರಿಯಾ ಸಮಾಸದಲ್ಲಿ ಪೂರ್ವಪದವು ಸಂಸ್ಕೃತದ ಅಕಾರಾಂತವಾಗಿದ್ದರೆ ನಿತ್ಯವಾಗಿ ಬಿಂದುವೂ ಕನ್ನಡದ

---

**ಪಾಠಾಂತರ : ೧ ಗಜೆಗೊಳೆ, ಬಡಿಗೊಳೆ**

ಅದಂತ ಉದಂತಗಳಿಗೆ ವಿಕಲ್ಪಬಿಂದುವೂ ಬರುವುದೆಂದು ಹೇಳಿರುವನು. ಇಲ್ಲಿ ಈ ವಿಷಯವು ಸಮಾಸಾಶ್ರಯವಿಧಿಪ್ರಕರಣದಲ್ಲಿ ಹೇಳಲ್ಪಡುವುದು.

**ಅವತಾರಿಕೆ ೩೯೯**

ಪೂರ್ವಸೂತ್ರದಲ್ಲಿ 'ತಿಙ' ಎಂದು ಹೇಳಿರುವುದರಿಂದ ಕೃದಂತವ್ಯತಿರಿಕ್ತವಾದ ಅಮಂತರೂಪಸುಬಂತವು ತಿಙಂತದೊಡನೆ ಸಮಸ್ಯಮಾನವಾಗುವುದೆಂದು ಹೇಳಿರುವುದರಿಂದ ಕೃದಂತಪ್ರಕೃತಿಕ ಸುಬಂತದೊಡನೆ ಕ್ರಿಯಾಸಮಾಸವು ಬರುವುದಿಲ್ಲವೆಂದು ತೋರಲು ಕೃದಂತೋತ್ತರಪದಕ ಸಮಾಸವೂ ಉಂಟೆಂದು ಬೋಧಿಸಲು ಸೂತ್ರವನ್ನು ಹೇಳುತ್ತಾನೆ.

**ಸೂತ್ರಂ ‖ ಕೃತಾ ‖ ೩೯೯ ‖**

**ಅರ್ಥ ‖ ಕೃದಂತವ್ಯತಿರಿಕ್ತವಾದ ಅಮಂತರೂಪಸುಬಂತವು ಕೃದಂತಪ್ರಕೃತಿಕ ಸುಬಂತ ರೂಪವಾದುತ್ತರಪದದೊಡನೆ ಸಮಸ್ಯಮಾನವಾಗುವುದು.**

**ಉದಾಹರಣೆ** ‖ 'ಮರನಂ+ಕಡಿದನಂ=ಮರಗಡಿದನಂ, ಕಣ್ಣಂ+ಬಿಟ್ಟನಂ= ಕಣ್ಬಿಟ್ಟನಂ, ಬಾಯಂ+ಬಿಟ್ಟಂಗೆ=ಬಾಯ್ವಿಟ್ಟಂಗೆ' ‖ ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೯೯**

ಈ ಸೂತ್ರದಲ್ಲಿ— 'ಕೃತಾ' ಎಂಬ ತೃತೀಯಾಂತಪದವೊಂದೇ ಇರುವುದು. ಇದು ಪ್ರತ್ಯಯಬೋಧಕವಾದುದರಿಂದ ತದಂತಬೋಧಕವಾಗುವುದು. ಪೂರ್ವದಿಂದ 'ಸುಪ್ ಸುಪಾ ಸಮಾಸೋ ಬಹುಲಂ, ಅಮ್, ಅಕೃತ್' ಎಂಬಿವು ಅನುವರ್ತಿಸಿ ಯಥಾಯೋಗ್ಯವಾಗಿ ಅನ್ವಯಿಸಲ್ಪಡುವುವು. ತಥಾಚ—ಕೃದಂತವ್ಯತಿರಿಕ್ತಾಮಂತರೂಪಸುಬಂತವು ಕೃದಂತಪ್ರಕೃತಿಕ ಸುಬಂತದೊಡನೆ ಬಹುಳವಾಗಿ ಸಮಸ್ಯಮಾನವಾಗುವುದೆಂದು ಸೂತ್ರಾರ್ಥವಾಗುವುದು. ಆದುದರಿಂದ 'ಮರಗಡಿದನಂ' ಮೊದಲಾದುವು ಸಿದ್ಧಿಸುವುವು. ಇಲ್ಲಿ ಉತ್ತರಪದವನ್ನು ದ್ವಿತೀಯಾದಿ ವಿಭಕ್ತ್ಯಂತಗಳನ್ನಾಗಿ ಹೇಳಿರುವುದು ತಿಙಂತ ಭ್ರಾಂತಿಯನ್ನು ನಿವಾರಿಸುವುದಕ್ಕೆಂದು ತಿಳಿಯಬೇಕು. ಉಳಿದ ಕಾರ್ಯಗಳೆಲ್ಲಾ ಸಮಾಸಾಶ್ರಯವಿಧಿಪ್ರಕರಣದಲ್ಲಿ ಹೇಳುವುದನ್ನು ಊಹಿಸಿಕೊಂಡು ಸಾಧುತ್ವವನ್ನು ಹೇಳುವುದು.

**ಅವತಾರಿಕೆ ೪೦೦**

ಪೂರ್ವದಲ್ಲಿ ದ್ವಿತೀಯಾಂತ ಪೂರ್ವಪದಕ ಸಮಾಸವು ವಿಧಿಸಲ್ಪಟ್ಟಿತು. ಈಗ ತೃತೀಯಾಂತ ಪೂರ್ವಪದಕ ಸಮಾಸವನ್ನು ವಿಧಿಸುತ್ತಾನೆ.

**ಸೂತ್ರಂ ‖ ಇಮ್ ಕರಣೇ ‖ ೪೦೦ ‖**

**ಅರ್ಥ ‖ ಕರಣಾರ್ಥದಲ್ಲಿ ವಿಧಿಸಲ್ಪಟ್ಟ ತೃತೀಯೆ ಯಾವುದೋ ಅದೇ ಅಂತರದಲ್ಲಿರುವ ಸುಬಂತವು ಉತ್ತರಪದವಾದ ಕೃದಂತಪ್ರಕೃತಿಕ ಸುಬಂತದೊಡನೆ ಬಹುಳವಾಗಿ ಸಮಸ್ಯಮಾನವಾಗುವುದು.**

**ಉದಾಹರಣೆ** ‖ 'ಕೊಡಲಿಯಿಂ ಕಡಿದಂ=ಕೊಡಲಿಗಡಿದಂ, ಕಣ್ಣಿಂ ಕಂಡಂ=ಕಣ್ಗಂಡಂ, ಕುಡುಗೋಲಿಂ ಕೊಯ್ದಂ=ಕುಡುಗೋಲ್ಗೊಯ್ದಂ' ‖ ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೦೦**

ಈ ಸೂತ್ರದಲ್ಲಿ— ' ಇಮ್, ಕರಣೇ ' ಎಂದು ಎರಡು ಪದಗಳಿರುವುವು. ಪೂರ್ವದಿಂದ ' ಸುಪ್ ' ಮೊದಲಾದವು ಅನುವರ್ತಿಸಲ್ಪಡುವುವು. 'ಕರಣೇ' ಎಂಬುದು 'ಇಮ್' ಎಂಬುದಕ್ಕೆ ವಿಶೇಷಣವು. ' ಇಮ್ ' ಎಂಬುದು ಪ್ರತ್ಯಯವಾದುದರಿಂದ ತದಂತಬೋಧಕವಾಗುವುದು. ಸುಬಾದಿಗಳನ್ನು ಪೂರ್ವದಂತೆ ಅನ್ವಯಿಸಿಕೊಳ್ಳುವುದು. ತಥಾಚ — ಕರಣಾರ್ಥದಲ್ಲಿ ವಿಹಿತವಾದ ತೃತೀಯಾವಿಭಕ್ತ್ಯಂತಪದವು ಕೃದಂತಪ್ರಕೃತಿಕ ಸುಬಂತದೊಡನೆ ಬಹುಳವಾಗಿ ಸಮಸ್ಯಮಾನವಾಗುವುದೆಂದು ಸೂತ್ರಾರ್ಥವಾಗಲು ' ಕೊಡಲಿಗಡಿದಂ ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು.

ಇಲ್ಲಿ — ' ಕರಣೇ ' ಎಂದು ಹೇಳಿರುವುದರಿಂದ ' ದೇವದತ್ತನಿಂ ಕಾಣಲ್ಪಟ್ಟನು, ಯಜ್ಞದತ್ತನಿಂ ಪೇಳಲ್ಪಟ್ಟನು ' ಮೊದಲಾದ ಪ್ರಯೋಗಗಳಲ್ಲಿ ಕರ್ತ್ರರ್ಥಕ ತೃತೀಯಾಂತಗಳೊಡನೆ ಸಮಾಸವಿಲ್ಲವೆಂದು ತಿಳಿಯಬೇಕು. 'ಇಮ್' ಎಂದು ಹೇಳಿರುವುದರಿಂದ ವಿಭಕ್ತ್ಯಂತರವು ವ್ಯಾವೃತ್ತವಾಗುವುದು. ಆದರೆ ಇಲ್ಲ ' ಕರಣೇ ' ಎಂದು ಹೇಳಿ ಕರಣಾರ್ಥದಲ್ಲಿ ವಿಹಿತವಾದ ವಿಭಕ್ತ್ಯಂತವು ಎಂದು ಹೇಳಲು ತೃತೀಯಾಂತಕ್ಕಲ್ಲದೆ ಬೇರೆ ವಿಭಕ್ತ್ಯಂತಕ್ಕೆ ಪ್ರಸಕ್ತಿಯೇ ಬರುವುದಿಲ್ಲ. ಆದಾಗ್ಯೂ ಇಮ್-ಗ್ರಹಣವು ಉತ್ತರ ಸೂತ್ರದಲ್ಲಿ ಆವಶ್ಯಕವಾಗಿರುವುದರಿಂದ ಸ್ಪಷ್ಟಾರ್ಥವಾಗಿ ಈ ಸೂತ್ರದಲ್ಲಿ ಹೇಳಿರುವನೆಂದು ತಿಳಿಯಬೇಕು.

**ಅವತಾರಿಕೆ ೩೦೧**

ಪೂರ್ವದಲ್ಲಿ ಕಾರಕ ತೃತೀಯಾಂತಕ್ಕೆ ಸಮಾಸವು ವಿಧಿಸಲ್ಪಟ್ಟಿತು. ಈಗ ಉಪಪದ ತೃತೀಯಾವಿಭಕ್ತ್ಯಂತವಾದುದಕ್ಕೆ ಸಮಾಸವನ್ನು ಹೇಳುತ್ತಾನೆ.

**ಸೂತ್ರಂ ॥ ಸಹಾರ್ಥೇನ ॥ ೩೦೧ ॥**

**ಅರ್ಥ** ॥ ಇಮಂತವಾದ ಸುಬಂತವು ಸಹಾರ್ಥವಾದ ಉತ್ತರಪದದೊಡನೆ ಬಹುಳವಾಗಿ ಸಮಸ್ಯಮಾನವಾಗುವುದು.

**ಉದಾಹರಣೆ** ॥ ' ಸೀರಿಂ ಕೂಡಿ=ಸೀಗ್ಗೂಡಿ, ಮಕ್ಕಳಿಂ ಬೆರಸಿ=ಮಕ್ಕಳ್ವೆರಸಿ ' ॥ ಮೊದಲಾದ ' ಸಹಾರ್ಥಕ ಶಬ್ದಯೋಗ ' ವಿದ್ದಾಗ — ' **ಸಹಾರ್ಥೇನಾಪ್ರಧಾನೇ** ' ॥ ೨೦೧ ॥ ಎಂಬ ಸೂತ್ರದಿಂದ ವಿಹಿತವಾದ ತೃತೀಯಾಂತ ಘಟಿತವಾದುವೆಲ್ಲಾ ಇದಕ್ಕೆ ಲಕ್ಷ್ಯಗಳು.

**ವಿಚಾರ ೩೦೧**

ಈ ಸೂತ್ರದಲ್ಲಿ— ' ಸಹಾರ್ಥೇನ ' ಎಂದು ಒಂದೇ ಪದವಿರುವುದು. ಇದು ' ಸಹ ' ಎಂಬ ಅರ್ಥವುಳ್ಳ ಅವ್ಯಯಬೋಧಕವು. ಇದರ ಯೋಗವಿರಲು ವಿಭಕ್ತಿ ಪ್ರಕರಣದಲ್ಲಿ ತೃತೀಯಾವಿಭಕ್ತಿಯು ವಿಧಿಸಲ್ಪಟ್ಟಿರುವುದು. ಅಂತಹ ತೃತೀಯಾಂತವು ಸಹಾರ್ಥಕೋತ್ತರಪದದೊಡನೆ ಬಹುಳವಾಗಿ ಸಮಸ್ಯಮಾನವಾಗುವುದು.ಎಂದು ಸೂತ್ರಾರ್ಥವಾಗಲು 'ಸೀಗ್ಗೂಡಿ' 'ಮಕ್ಕಳ್ವೆರಸಿ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು. ಇಲ್ಲಿ ' ಇಮ್ ' ಎಂದು ಹೇಳಿರುವುದರಿಂದ ' ದೇವದತ್ತನೊಡನೆ' ಮೊದಲಾದ ಷಷ್ಠ್ಯಂತಗಳಿಗೆ ಸಮಾಸವು ಸಹಾರ್ಥಕ ಶಬ್ದದೊಡನೆ ಇಲ್ಲವೆಂದು ತಿಳಿಯುವುದು.

ಇಲ್ಲಿ ' ಬಹುಳಂ ' ಎಂದು ಸಂಬಂಧಿಸಿರುವುದರಿಂದ ' ಯದ್ಭೇದಾತ್ತದ್ವದಾಖ್ಯಾ ॥ ೨೧೦ ॥ ' ಎಂಬ ಸೂತ್ರದಿಂದ ವಿಹಿತವಾದ ತೃತೀಯಾವಿಭಕ್ತ್ಯಂತ ಪದಗಳಿಗೆ ಪ್ರಕಾರವಾಚ್ಯುತ್ತರ ಪದದಿಂದ ಸಮಾಸವು ಪ್ರಾಮಾಣಿಕ ಪ್ರಯೋಗದಿಂದ ಉಂಟೆಂದು ಊಹಿಸಿಕೊಳ್ಳಬೇಕು. ಆದುದರಿಂದ ' ಕಣ್ಗುರುಡಂ, ಕಾಲ್ಗುಂಟಂ ' ಮೊದಲಾದುವು ಸಿದ್ಧಿಸುವುವು.

**ದರ್ಪಣಕಾರ**ನು ಹೀಗೆ ಬೇರೆ ಬೇರೆ ವಿಶೇಷ ನಿರ್ದೇಶಮಾಡಿ ಹೇಳದಿದ್ದರೂ ಸಾಮಾನ್ಯ ಸೂತ್ರದಿಂದಲೆ ಇವುಗಳಿಗೆಲ್ಲಾ ತತ್ಪುರುಷಾದಿ ಸಂಜ್ಞಕ ಸಮಾಸಗಳುಂಟೆಂದು ತಿಳಿಯುವುದು.

**ಅವತಾರಿಕೆ ೩೦೨**

ಹೀಗೆ ತೃತೀಯಾಂತ ಪೂರ್ವಪದಕ ಸಮಾಸವನ್ನು ವಿಧಿಸಿ ಚತುರ್ಥ್ಯಂತ ಪೂರ್ವಪದಕ ಸಮಾಸವನ್ನು ವಿಧಿಸುತ್ತಾನೆ.

**ಸೂತ್ರಂ ॥ ಗೆತ್ತದರ್ಥೇನ ॥ ೩೦೨ ॥**

**ಅರ್ಥ ॥ ಗೆದಂತವೆಂದರೆ ಚತುರ್ಥ್ಯಂತಪದವು. ಆ ಚತುರ್ಥ್ಯಂತಪದಾರ್ಥಕ್ಕೋಸ್ಕರವಿರುವ ವಸ್ತುವಾಚಕವಾದ ಉತ್ತರಪದದೊಡನೆ ಬಹುಳವಾಗಿ ಸಮಸ್ಯಮಾನವಾಗುವುದು.**

**ಉದಾಹರಣೆ** ॥' ತೇರ್ಗೆ ಮರಂ = ತೇರ್ಮರಂ, ಉಂಗುರಕ್ಕೆ ಚಿನ್ನಂ = ಉಂಗುರಚಿನ್ನಂ '॥ ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೦೨**

ಈ ಸೂತ್ರದಲ್ಲಿ— ' ಗೆತ್, ತದರ್ಥೇನ ' ಎಂದು ಎರಡು ಪದಗಳಿರುವುವು. ' ಗೆತ್ ' ಎಂಬುದು ಸಾಮಾನ್ಯವಾಗಿ ಚತುರ್ಥೀವಿಭಕ್ತಿಬೋಧಕವಾಗಿದ್ದರೂ ಇಲ್ಲಿ ' ತದರ್ಥೇನ ' ಎಂಬ ಪದಸಮಭಿವ್ಯಾಹಾರವಿರುವುದರಿಂದ — ' ತಾದರ್ಥ್ಯೇ ' ಎಂಬ ಸೂತ್ರದಿಂದ ವಿಹಿತವಾದ ಚತುರ್ಥಿಬೋಧಕವೆಂದು ತಿಳಿಯಬೇಕು. ಇದು ಪ್ರತ್ಯಯಗ್ರಹಣಪರಿಭಾಷೆಯಿಂದ ತದಂತಬೋಧಕವಾಗಿರುವುದು. ' ತದರ್ಥೇನ ' ಎಂಬುದು — ' ಸಃ ಅರ್ಥಃ ಅಭಿಧೇಯಃ (ಕಾರ್ಯಂ) ಯಸ್ಯ ತತ್ ' ಎಂದು ಬಹುವ್ರೀಹಿಸಮಾಸವನ್ನಂಗೀಕರಿಸಿರುವುದರಿಂದಲೂ ಪ್ರಕೃತದಲ್ಲಿ ಅರ್ಥ ಶಬ್ದವು ಕಾರ್ಯಬೋಧಕವಾದುದರಿಂದಲೂ ಕಾರಣಬೋಧಕವಾಗಿರುವುದು. ಆದುದರಿಂದ ಇವರ ಯೋಗವಿರುವಾಗ ' ತಾದರ್ಥ್ಯೇ ' ಎಂಬ ಸೂತ್ರದಿಂದ ಕಾರ್ಯವಾಚಕಕ್ಕೆ ಚತುರ್ಥಿ ವಿಧಿಸಲ್ಪಟ್ಟಿರುವುದು. ಇಂತಹ ಚತುರ್ಥ್ಯಂತವಾದ ಪದವು ಕಾರಣವಾಚಕವಾದ ಉತ್ತರಪದದೊಡನೆ ಬಹುಳವಾಗಿ ಸಮಸ್ಯಮಾನವಾಗುವುದು — ಎಂದು ಯಥಾಶ್ರುತವಾದ ಸೂತ್ರಾರ್ಥವಾಗುವುದು. ಇದೇ ತಾತ್ಪರ್ಯದಲ್ಲಿ ಕೆಲವರು ಚತುರ್ಥಿವಿಧಾಯಕವಾದ — ' ತಾದರ್ಥ್ಯೇ ' ಎಂಬ ಸೂತ್ರದಲ್ಲಿ— ' **ತಸ್ಮೈ ಇದಂ ತದರ್ಥಂ, ತದರ್ಥಸ್ಯ ಭಾವಸ್ತಾದರ್ಥ್ಯಂ ತಸ್ಮಿಂತಾದರ್ಥ್ಯೇ** ' ಎಂದು ವಿಗ್ರಹವನ್ನು ತೋರಿಸಿ 'ಅದಕ್ಕೋಸ್ಕರವಿರುವುದು ಇದು' ಎಂದರೆ— ಉಪಕಾರಕ ಅಥವಾ ಕಾರಣವೆಂದು ತದರ್ಥಪದಕ್ಕೆ ಅರ್ಥವು ತಾದ್ಯರ್ಥ್ಯವೆಂದರೆ ' ಉಪಕಾರ್ಯೋಪಕಾರಕ ಭಾವ ಅಥವಾ ಕಾರ್ಯಕಾರಣ ಭಾವ ' ಎಂದರ್ಥವು. ಅಂತಹ ಅರ್ಥವು ತೋರುತ್ತಿರಲು ಉಪಕಾರ್ಯ ಅಥವಾ ಕಾರ್ಯ ವಾಚಕವಾದ ಶಬ್ದದಮೇಲೆ ಚತುರ್ಥಿಯು ಬರುವುದೆಂದು ಅರ್ಥವನ್ನು ಹೇಳುವರು. ಆದರೆ ಅಲ್ಲಿ ಚತುರ್ಥಿಯು ನಿಮಿತ್ತೋಪಾದಾನಸಾಧಾರಣ

ವಾಗಿರುವುದೆಂದು ತೋರುವುದು. ಆದುದರಿಂದಲೇ ಅಲ್ಲಿ 'ಮೋಕ್ಷಕ್ಕೆ ತತ್ತ್ವಜ್ಞಾನಂ, ಅವಘಾತ ಕೆಸ್ಕನಕೆ, ತೆಂಗ್ಗೆ ಮರಂ' ಮೊದಲಾದವು ಉದಾಹರಿಸಲ್ಪಟ್ಟಿರುವುದು. ಆದಾಗ್ಯೂ ಸಮಾಸ ವಿಧಾಯಕ ಸೂತ್ರದಲ್ಲಿ ವ್ಯಾಖ್ಯಾನ ಪರಿಭಾಷೆಯಿಂದ ಪ್ರಕೃತಿವಿಕೃತಿಭಾವವು ಎಲ್ಲಿ ತೋರುವುದೋ ಅಂತಹ ಚತುರ್ಥ್ಯಂತಕ್ಕೆ ಗ್ರಹಣವೆಂದು ಸಂಕೋಚವನ್ನು ಕಲ್ಪಿಸುವುದರಿಂದ 'ಮೋಕ್ಷಕ್ಕೆ ತತ್ತ್ವಜ್ಞಾನಂ' ಮೊದಲಾದುವಕ್ಕೆ ಕಾರ್ಯಕಾರಣ ಭಾವವು ತೋರುತ್ತಿದ್ದರೂ ಪ್ರಕೃತಿ ವಿಕೃತಿಭಾವವು ತೋರುವುದಿಲ್ಲವಾದುದರಿಂದ ಸಮಾಸವಿಲ್ಲವೆಂದು ತಿಳಿಯಬೇಕು.

ಆದರೆ ಇಲ್ಲಿ ಸಮಾಸವಿಲ್ಲವೆಂಬುದಕ್ಕೆ ಸರಿಯಾದ ವ್ಯಾಖ್ಯಾನವಿಲ್ಲದಿದ್ದರೂ ಪೂರ್ವಿಕರ ಪ್ರಯೋಗದಿಂದ ಊಹಿಸಿಕೊಳ್ಳಬೇಕು. **ಪಾಣಿನಿ** ವ್ಯಾಕರಣದಲ್ಲಿಯಾದರೊ — '**ಚತುರ್ಥೀ ತದರ್ಥಾರ್ಥಬಲಿಹಿತಸುಖರಕ್ಷಿತೈಃ**' ಎಂಬ ಚತುರ್ಥೀಸಮಾಸವಿಧಾಯಕ ಸೂತ್ರದಲ್ಲಿ ತದರ್ಥ ಪದಶ್ರವಣದಿಂದಲೇ — 'ಭೂತಬಲಿ' ಮೊದಲಾದ ಪ್ರಯೋಗಗಳು ಸಿದ್ಧಿಸುತ್ತಿರಲು ಪುನಃ ಸೂತ್ರದಲ್ಲಿ ಬಲಿ, ಹಿತ, ಸುಖ ಮೊದಲಾದ ಪದಗಳನ್ನುಚ್ಚರಿಸಿರುವುದು ವ್ಯರ್ಥವೆಂದು ತೋರುವುದು. ತದುಚ್ಚಾರಣಸಾಮರ್ಥ್ಯದಿಂದ ತದರ್ಥಪದವು ಪ್ರಕೃತಿವಿಕೃತಿಭಾವದ್ಯೋತಕ ಚತುರ್ಥ್ಯಂತಮಾತ್ರಕ್ಕೆ ಸಮಾಸಬೋಧಕವು. ಆದುದರಿಂದ 'ಅಶ್ವಘಾಸಾದಿ' ಗಳು ಷಷ್ಠೀಸಮಾಸವೇ ಅಲ್ಲದೆ ಚತುರ್ಥೀ ಸಮಾಸವಲ್ಲ ಮತ್ತು 'ರಂಧನಾಯಸ್ಥಾಲೀ' ಮೊದಲಾದ ಪ್ರಯೋಗಗಳಲ್ಲಿ ತಾದರ್ಥ್ಯವು ತೋರುತ್ತಿದ್ದರೂ ಚತುರ್ಥೀ ಸಮಾಸವು ಬರುವುದಿಲ್ಲವೆಂದು ಹೇಳಿರುವರು. ಹೀಗೆ ಭಾಷಾ ವ್ಯಾಕರಣದಲ್ಲಿ ಹೇಳಲು ದೃಢತರ ಪ್ರಮಾಣವಿಲ್ಲದಿದ್ದರೂ ಕೇವಲ ಪ್ರಯೋಗದಿಂದಲೇ ಊಹಿಸಿಕೊಳ್ಳಬೇಕು.

ಈ ಸೂತ್ರದಲ್ಲಿ 'ತದರ್ಥೇನ' ಎಂಬುದನ್ನು ಬಿಟ್ಟು 'ಗೆತ್' ಎಂಬುದೊಂದನ್ನೇ ಹೇಳಲು 'ಯಾಜ್ಞಿಕಂಗಿಷ್ಟಂ ಸ್ವರ್ಗಂ, ಬ್ರಾಹ್ಮಣಂಗೆ ಗೋವಂ ಕೊಟ್ಟಂ' ಮೊದಲಾದ ಚತುರ್ಥ್ಯಂತ ಸಾಮಾನ್ಯಕ್ಕೂ ಸಮಾಸವು ಪ್ರಸಕ್ತವಾಗುವುದು. ತದ್ವಾರಣಾರ್ಥವಾಗಿ ಇಲ್ಲಿ 'ತದರ್ಥೇನ' ಎಂದು ಹೇಳಲ್ಪಟ್ಟಿದೆ. ಆದಾಗ್ಯೂ ಪ್ರಯೋಗಬಲದಿಂದ ವಿಕೃತಿವಚನವಾದ ಚತುರ್ಥ್ಯಂತವು ಪ್ರಕೃತಿ ವಾಚಕವಾದ ಉತ್ತರಪದದೊಡನೆ ಸಮಸ್ಯಮಾನವಾಗುವುದೆಂದು ಸಂಕೋಚಪರವಾಗಿ ವ್ಯಾಖ್ಯಾನ ಮಾಡಲ್ಪಟ್ಟಿದೆ. ಇದರಿಂದ ಭಾಷೆಯಲ್ಲಿ ಬೇರೆ ಚತುರ್ಥೀಸಮಾಸವೇ ಇಲ್ಲವೆಂದು ತೋರುವುದು.

**ಅವತಾರಿಕೆ ೩೦೩**

ಪೂರ್ವಸೂತ್ರದಿಂದ ಚತುರ್ಥೀ ವಿಭಕ್ತ್ಯಂತಕ್ಕೆ ಸಮಾಸವು ಬೋಧಿಸಲ್ಪಟ್ಟಿತು. ಈಗ ಪಂಚಮ್ಯಂತಕ್ಕೆ ಸಮಾಸವನ್ನು ವಿಧಿಸಲು ಪ್ರಾರಂಭಿಸುತ್ತಾನೆ—

**ಸೂತ್ರಂ || ಭೀತ್ಯರ್ಥೇನಾತ್ತಣಿಂ || ೩೦೩ ||**

**ಅರ್ಥ ||** ಅತ್ತಣಿಮಂತಪದವು (ಪಂಚಮ್ಯಂತವು) ಭೀತ್ಯರ್ಥಕವಾದ ಉತ್ತರಪದದೊಡನೆ ಬಹುಳವಾಗಿ ಸಮಸ್ಯಮಾನವಾಗುವುದು.

**ಉದಾಹರಣೆ ||** 'ಪುಲಿಯತ್ತಣಿಂದಳ್ಕು = ಪುಲಿಯಳ್ಕು, ಕಳ್ಳರತ್ತಣಿಂ ಪೆಳಱು = ಕಳ್ಳಪೆಳಱು, ಮರುಳತ್ತಣಿಂದಳಱು = ಮರುಳಳಱು' || ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೦೩**

ಈ ಸೂತ್ರದಲ್ಲಿ — ' ಭೀತ್ಯರ್ಥೇನ, ಅತ್ತಣಿಂ ' ಎಂದು ಎರಡು ಪದಗಳಿರುವುವು. ' ಭೀತ್ಯರ್ಥೇನ ' ಎಂಬುದು — ಅಳ್ಕು ಮೊದಲಾದ ಭಯಾರ್ಥಕವಾದ ಭಾಷಾಶಬ್ದಬೋಧಕವು. ಇದರ ಯೋಗಪಿರಲು ಬುದ್ಧಿಕೃತವಾದ ಅಪಾದಾನತ್ವವಿವಕ್ಷೆಯನ್ನು ಮಾಡಲು—' **ಅವಧಾವಪಾಯೇ** ' || ೨೨೧ || ಎಂಬ ಸೂತ್ರದಿಂದ ' ಅತ್ತಣಿಂ ' ಪ್ರತ್ಯಯವು ವಿಧಿಸಲ್ಪಟ್ಟಿರುವುದು. ಈ ಅತ್ತಣಿಂ ಪ್ರತ್ಯಯಾಂತವು ಭೀತ್ಯರ್ಥಕ ಶಬ್ದದೊಡನೆ ಸಮಸ್ಯಮಾನವಾಗುವುದೆಂದು ಸೂತ್ರಾರ್ಥವಾಗುವುದು. ಆದುದರಿಂದ ' ಪುಲಿಯುಳ್ಕು ' ಮೊದಲಾದುವು ಸಿದ್ಧಿಸುವುವು.

ಇಲ್ಲಿ— ' ಭೀತ್ಯರ್ಥೇನ ' ಎಂದು ಹೇಳಿರುವುದರಿಂದ — ' ಊರತ್ತಣಿಂ ಬಂದಂ, ಮನೆಯತ್ತಣಿಂ ಪೋದಂ ' ಮೊದಲಾದ ಭೀತ್ಯರ್ಥಕ ಶಬ್ದ ಪ್ರಯೋಗವಿಲ್ಲದೆಡೆಗಳಲ್ಲಿ ಸಮಾಸವಿಲ್ಲವೆಂದು ತಿಳಿಯುವುದು. ' ಅತ್ತಣಿಂ ' ಎಂದು ಹೇಳಿರುವುದರಿಂದ ' ತುಱುಗಳ್ಗಳ್ಕು ಪುಲಿಯತ್ತಣಿಂ' ಮೊದಲಾದ ಪ್ರಯೋಗಗಳಲ್ಲಿ ಚತುರ್ಥ್ಯಂತಾದಿಗಳಿಗೆ ಸಮಾಸವಿಲ್ಲವೆಂದು ತಿಳಿಯಬೇಕು. ಇಲ್ಲಿ ಭೀತ್ಯರ್ಥಕಪದದಿಂದ ಭಾಷಾಶಬ್ದಗಳನ್ನೇ ಗ್ರಹಿಸುವುದರಿಂದ ಸಂಸ್ಕೃತ ಭೀತ್ಯರ್ಥಕ ಶಬ್ದಗಳೀ ಸಂಸ್ಕೃತ ಸಮಾಸವೇ ಬಂದು ಕನ್ನಡಕ್ಕೆ ಪ್ರಯೋಗಾರ್ಹವಾಗುವುದೆಂದು ತಿಳಿಯಬೇಕು.

**ಅವತಾರಿಕೆ ೩೦೪**

ಹೀಗೆ ಪಂಚಮೀಸಮಾಸವನ್ನು ಹೇಳಿ ಷಷ್ಠೀಸಮಾಸವನ್ನು ವಿಧಿಸುತ್ತಾನೆ.

**ಸೂತ್ರಂ || ಅದ್ || ೩೦೪ ||**

**ಅರ್ಥ || ಅದಂತವಾದ (ಷಷ್ಠ್ಯಂತ) ಪದವು ಸುಬಂತವಾದ ಉತ್ತರಪದದೊಡನೆ ಬಹುಳವಾಗಿ ಸಮಸ್ಯಮಾನವಾಗುವುದು.**

**ಉದಾಹರಣೆ** || ಮರದ ಕೊಂಬು — ಮರಗೊಂಬು, ಪಕ್ಕಿಯ ಗೂಡು — ಪಕ್ಕಿಗೂಡು, ಅರಸಿನ ಆಳ್ — ಅರಸಾಳ್, ಆನೆಯ ಮಱಿ — ಆನೆವಱಿ || ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೦೪**

ಈ ಸೂತ್ರದಲ್ಲಿ— ' ಅದ್ ' ಎಂಬುದೊಂದೇ ಪದವಿರುವುದು. ಇದು ಷಷ್ಠೀವಿಭಕ್ತಿ ಪ್ರತ್ಯಯ ಬೋಧಕವಾದುದರಿಂದ ತದಂತಬೋಧಕವಾಗುವುದು. ಪೂರ್ವಸೂತ್ರದಿಂದ ಸುಬಂತ ಮೊದಲಾದುವು ಸಂಬಂಧಿಸಲ್ಪಡುವುವು. ತಥಾಚ — ಅತ್-ಪ್ರತ್ಯಯಾಂತ (ಷಷ್ಠ್ಯಂತ) ವಾದ ಸುಬಂತವು ಸುಬಂತೋತ್ತರಪದದೊಡನೆ ಬಹುಳವಾಗಿ ಸಮಸ್ಯಮಾನವಾಗುವುದೆಂದು ಸೂತ್ರಾರ್ಥವಾಗುವುದು. ಇದರಿಂದ ' ಮರಗೊಂಬು ' ಮೊದಲಾದುವು ಸಿದ್ಧಿಸಲ್ಪಡುವುವು.

ಇಲ್ಲಿ ಪೂರ್ವೋತ್ತರಪದವಿಶೇಷಸ್ವರೂಪವನ್ನು ತಿಳಿಸದೆ ಸಾಮಾನ್ಯವಾಗಿ ' ಅದ್ ' ಎಂದು ಷಷ್ಠೀವಿಭಕ್ತಿಮಾತ್ರವನ್ನು ನಿರ್ದೇಶಿಸಿರುವುದರಿಂದ ವಿಶೇಷಾನಪೇಕ್ಷವಾಗಿ ಸಾಮಾನ್ಯ ವಿಹಿತ ಷಷ್ಠಿ ಯಾವುದೋ ಅದೇ ಉತ್ತರಪದದೊಡನೆ ಸಮಸ್ಯಮಾನವಾಗುವುದು ಎಂದು ಅರ್ಥವಾಗುವುದು. ಸಾಮಾನ್ಯವಾಗಿ ವಿಹಿತವಾದುದು ಎಂದರೆ — ' **ಯೋಗೇऽದ್ ||೭೨೫||** ' ಎಂಬ ಸೂತ್ರದಿಂದ ಸಂಬಂಧಮಾತ್ರದಲ್ಲಿ ವಿಹಿತವಾದುದೆಂದರ್ಥವು. ಆದುದರಿಂದ

‘ **ಕರ್ತೃಕರ್ಮಣೋಃ ಕೃತಿ ಭಾವೇ || ೨೨೬ ||**’ ಎಂಬ ಸೂತ್ರದಿಂದ ವಿಹಿತವಾದ ಷಷ್ಠಿಗೆ ಸಮಾಸವಿಲ್ಲವೆಂದು ತಾತ್ಪರ್ಯವಾಗುವುದು.

ಸಂಸ್ಕೃತದಲ್ಲಾದರೊ ಸಂಬಂಧಸಾಮಾನ್ಯವಿಹಿತವಾದ ಷಷ್ಠ್ಯಂತವಾದ ಸಮಾಸವು ಬರುವುದಲ್ಲದೆ ಕೆಲವೆಡೆಗಳಲ್ಲಿ ವಿಶೇಷವಿಹಿತ ಷಷ್ಠ್ಯಂತಗಳಿಗೂ ಸಮಾಸವು ಬರುವುದುಂಟೆಂದು— ‘ **ಯಾಜಕಾದಿಭಿಶ್ಚ** ’ ಮೊದಲಾದ **ಪಾಣಿನಿ** ಸೂತ್ರದಿಂದ ಸೂಚಿತವಾಗುವುದು.

**ಅವತಾರಿಕೆ ೩೦೫**

ಹೀಗೆಯೇ ಸಪ್ತಮ್ಯಂತಕ್ಕೆ ಬರುವ ಸಮಾಸವನ್ನು ಹೇಳುತ್ತಾನೆ.

**ಸೂತ್ರಂ || ಒಳ್ ಸಾಧುನಿಪುಣಾರ್ಥೇನ || ೩೦೫ ||**

**ಅರ್ಥ || ಒಳಂತವಾದ ( ಸಪ್ತಮ್ಯಂತ ) ಸುಬಂತವು ಸಾಧ್ವರ್ಥಕವಾದ ಶಬ್ದಗಳೊಡನೆಯೂ ನಿಪುಣಾರ್ಥಕವಾದ ಶಬ್ದಗಳೊಡನೆಯೂ ಬಹುಳವಾಗಿ ಸಮಸ್ಯಮಾನವಾಗುವುದು.**

**ಉದಾಹರಣೆ ||** ತಾಯೊಳೊಳ್ಳಿದಂ — ತಾಯೊಳ್ಳಿದಂ, ತಂದೆಯೊಳೊಳ್ಳಿದಂ — ತಂದೆಯೊಳ್ಳಿದಂ, ಜೂದಿನೊಳ್ಜಾಣಂ — ಜೂದುಜಾಣಂ, ಬೇಹಿನೊಳ್ ಚದುರಂ — ಬೇಹುಚದುರಂ|| ಮೊದಲಾದುವು ಇವಕ್ಕೆ ಲಕ್ಷ್ಯಗಳು.

**ವಿಚಾರ ೩೦೫**

ಈ ಸೂತ್ರದಲ್ಲಿ — ‘ ಒಳ್, ಸಾಧುನಿಪುಣಾರ್ಥೇನ ’ ಎಂದು ಎರಡು ಪದಗಳಿರುವುವು. ‘ ಒಳ್ ’ ಎಂಬುದು ಸಪ್ತಮೀವಿಭಕ್ತಿಪ್ರತ್ಯಯಬೋಧಕವು. ಆದುದರಿಂದ ತದಂತಬೋಧಕವಾಗುವುದು. ‘ಸಾಧುನಿಪುಣಾರ್ಥೇನ’ ಎಂಬುದು ‘ಸಾಧು, ನಿಪುಣ’ ಶಬ್ದಗಳಿಗೆ ದ್ವಂದ್ವ ಸಮಾಸವನ್ನು ಮಾಡಿ ಆಮೇಲೆ ‘ ಅರ್ಥ ’ ಶಬ್ದದೊಡನೆ ಬಹುವ್ರೀಹಿಸಮಾಸವನ್ನು ಮಾಡಲು ಅರ್ಥಶಬ್ದಕ್ಕೆ — ‘ **ದ್ವಂದ್ವಾಂತೇ ಶ್ರೂಯಮಾಣಂ ಪದಂ ಪ್ರತ್ಯೇಕಮಭಿಸಂಬಧ್ಯತೇ** ’ ಎಂಬ ನ್ಯಾಯದಿಂದ ದ್ವಂದ್ವಘಟಕ ಯಾವತ್ಪದಾರ್ಥದಲ್ಲಿಯೂ ಅನ್ವಯವು ಬರುವುದು. ಆದುದರಿಂದ ಸಾಧ್ವರ್ಥಕ ನಿಪುಣಾರ್ಥಕ ಶಬ್ದದಿಂದ ಎಂಬುದನ್ನು ಬೋಧಿಸುವುದು. ತಥಾಚ —ಸಪ್ತಮ್ಯಂತಪದವು ಸಾಧ್ವರ್ಥಕ ನಿಪುಣಾರ್ಥಕೋತ್ತರ ಪದಗಳೊಡನೆ ಬಹುಳವಾಗಿ ಸಮಾಸವನ್ನು ಹೊಂದುವುದೆಂದು ಸೂತ್ರಾರ್ಥವಾಗುವುದು. ಆದುದರಿಂದ ‘ ತಾಯೊಳ್ಳಿದಂ ’ ಮೊದಲಾದ ಪ್ರಯೋಗಗಳು ಸಿದ್ಧಿಸುವುವು. ಇಲ್ಲಿ ‘ ಸಾಧುನಿಪುಣಾರ್ಥೇನ ’ ಎಂದು ಹೇಳಿರುವುದರಿಂದ — ‘ **ಎಳ್ಳೊಳೆಣ್ಣೆ**’ ಮೊದಲಾದ ಆಧಾರಾಧೇಯಭಾವಬೋಧಕ ಸಪ್ತಮ್ಯಂತಗಳಿಗೆ ಸಮಾಸವಿಲ್ಲ. ‘ ಒಳ್ ’ ಎಂದು ಹೇಳಿರುವುದರಿಂದ ‘ಕಳಸಿಂ ಜಾಣಂ’ ಮೊದಲಾದ ವಿಭಕ್ತ್ಯಂತರಘಟಿತವಾದ ಪ್ರಯೋಗಗಳಲ್ಲಿಯೂ ಸಮಾಸವಿಲ್ಲವೆಂದು ತಿಳಿಯುವುದು.

ಈ ಸೂತ್ರದಲ್ಲಿ ಪೂರ್ವದಂತೆ ‘ ಒಳ್ ’ ಎಂದು ಸಾಮಾನ್ಯವಾಗಿ ನಿರ್ದೇಶಿಸಲ್ಪಟ್ಟಿದ್ದರೂ **‘ಸಾಧುನಿಪುಣಾರ್ಥೇನ’** ಎಂಬುದರಿಂದ ಉತ್ತರಪದವಿಷಯದಲ್ಲಿ ನಿಯಮವು ತೋರುವುದರಿಂದ— **‘ಸಾಧುನಿಪುಣಾಭ್ಯಾಂ ಪೂಜ್ಯೇ ||೨೨೪||**’ ಎಂಬ ಸೂತ್ರದಿಂದ ವಿಹಿತವಾದ ಉಪಪದ ವಿಭಕ್ತಿಯೇ ಗ್ರಹಿಸಲ್ಪಡುವುದು. ಆದುದರಿಂದ ಅಧಿಕರಣ ಸಪ್ತಮ್ಯಂತಗಳಿಗೆ ಸಮಾಸವು ಬರುವುದಿಲ್ಲವೆಂದು ತೋರುವುದು. ಆದಾಗ್ಯೂ—‘ ಬಾನೊಳ್ ಪೊಱಿ – ಬಾಂಬೊಱಿ, **ಬಾಂದೊಱಿ**, **ಪಣೆಗಣ್**,

ಕೊರಲ್ಗಜ್ಜೆ, ಮೆಯ್ಯುರಿ[೧], ಕಯ್ಗೋಡು, ಕಾಲ್ಗಿರೆ ' ಮೊದಲಾದ ಶಿಷ್ಟಪ್ರಯೋಗಗಳು ಸಿಕ್ಕು ವುದರಿಂದ ಕೆಲವೆಡೆಗಳಲ್ಲಿ ಅಧಿಕರಣ ಸಪ್ತಮ್ಯಂತಗಳಿಗೂ ಸಮಾಸವುಂಟೆಂದು ಬಹುಳಗ್ರಹಣ ದಿಂದ ಬೋಧಿತವಾಗುವುವೆಂದು ತಿಳಿಯಬೇಕು. ಅಥವಾ ಇಂತಹ ಸ್ಥಲಗಳಲ್ಲಿ ಆಧಾರಾಧೇಯ ಭಾವರೂಪಸಂಬಂಧ ವಿಶೇಷಕ್ಕೆ ಸಂಬಂಧ ಸಾಮಾನ್ಯ ವಿವಕ್ಷೆಮಾಡಲು ' **ಯೋಗೇऽದ್ ||೨೨೫||** ' ಎಂಬುದರಿಂದ ಷಷ್ಠೀವಿಭಕ್ತಿಯು ಬರಲು ' **ಅದ್** ' ಎಂಬ ಪೂರ್ವಸೂತ್ರದಿಂದ ಷಷ್ಠೀಸಮಾಸವೇ ಬಂದು ' ಮರಗೊಂಬು ' ಮೊದಲಾದುವಂತೆ ' ಬಾಂಬೊಟೆ ' ಮೊದಲಾದುವೂ ಸಿದ್ಧಿಸುವು ವೆಂದು ತಿಳಿಯಬೇಕು.

**ಅವತಾರಿಕೆ ೩೦೬**

ಪೂರ್ವದಲ್ಲಿ ದ್ವಿತೀಯಾವಿಭಕ್ತ್ಯಂತ ಮೊದಲು ಸಪ್ತಮ್ಯಂತದ ವರೆಗೂ ಇರುವ ಪೂರ್ವಪದಕ ಸಮಾಸವು ಹೇಳಲ್ಪಟ್ಟಿತು. ಇದಕ್ಕೆ ಕ್ರಮವಾಗಿ ದ್ವಿತೀಯಾ ತತ್ಪುರುಷಾದಿ ವ್ಯವಹಾರವನ್ನೂ ಪ್ರಾಚೀನ ವೈಯಾಕರಣರ ಸಂಕೇತದಿಂದ ತಿಳಿಯುವುದು. ಈಗ ಹಿಂದೆ ಹೇಳಿದ ಷಷ್ಠ್ಯಂತ ಪೂರ್ವಪದಕಸಮಾಸಕ್ಕೆ ಅಪವಾದವಾಗಿ ಷಷ್ಠ್ಯಂತೋತ್ತರಪದಕವಾದ ಏಕದೇಶಿ ಸಮಾಸವನ್ನು ಹೇಳುತ್ತಾನೆ.

**ಸೂತ್ರಂ || ಅಂಶಿನಾऽಭಿನ್ನೇನ || ೩೦೬ ||**

**ಅರ್ಥ ||** ಅಂಶವಾಚಕವಾದ ಸುಬಂತವು ಅಂಶವಾಚಿಯಾದ **ಉತ್ತರಪದದೊಡನೆ ಆ ಅಂಶಿಯು** ಬೇರೆಯಾಗಿರದಿದ್ದರೆ ಬಹುಳವಾಗಿ ಸಮಸ್ಯಮಾನವಾಗುವುದು.

**ಉದಾಹರಣೆ ||** ಕಯ್ಯ ಮುಂದು — ಮುಂಗಯ್, ಕಾಲ ಮುಂದು — ಮುಂಗಾಲ್, ಕಾಲ ಅಡಿ — ಅಂಗಾಲ್, ಕಯ್ಯ ಅಡಿ — ಅಂಗಯ್, ಕಾಲ ಮೇಗು — ಮೇಂಗಾಲ್ || ' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೦೬**

ಈ ಸೂತ್ರದಲ್ಲಿ — ' ಅಂಶಿನಾ, ಅಭಿನ್ನೇನ ' ಎಂದು ಎರಡು ಪದಗಳಿರುವುವು. 'ಅಂಶಿನಾ ' ಎಂಬುದು 'ಅಂಶ'ವೆಂದರೆ — 'ಅವಯವವು ಇದುಳ್ಳುದಾವುದೋ ಅದು ಅಂಶಿಯು' ಆದುದರಿಂದ ಅವಯವವಾಚಿಬೋಧಕವಾಗುವುದು. ಇದಕ್ಕೆ ' ಅಭಿನ್ನೇನ ' ಎಂಬುದು ವಿಶೇಷಣವು. ' ಅಭಿನ್ನೇನ ' ಎಂದರೆ ಭೇದವಿಲ್ಲದ್ದು ಎಂದರ್ಥವು. ಇಲ್ಲಿ ಅಂಶಿಯೆಂಬುದು — '**ಯಂ ವಿನಾ ಯನ್ನೋಪಪದ್ಯತೇ ತತ್ತೇನೈವಾಕ್ಷಿಪ್ಯತೇ**' ಎಂಬ ನ್ಯಾಯದಿಂದ ಅಂಶವಿಲ್ಲದೆ ಅನುಪಪನ್ನ ವಾದುದರಿಂದ ಅಂಶಿಪದದಿಂದ ಅಂಶಕ್ಕೆ ಆಕ್ಷೇಪ ಬರುವುದು. ಆಕ್ಷಿಪ್ತವಾದುದು ಅಂಶವಾಚಕ ಶಬ್ದಪರವೆಂದು ತಿಳಿಯಬೇಕು. ಸುಪ್-ಸುಪೇತ್ಯಾದಿಗಳೂ ಪೂರ್ವದಿಂದ ಸಂಬಂಧಿಸಲ್ಪಡುವುವು. ತಥಾಚ — ಅಂಶವಾಚಕ ಸುಬಂತವು ಅಂಶಾಂಶಿಗಳಿಗೆ ಸರ್ವಥಾ ಭೇದ ತೋರದೆ ಇರುವ ಅಂಶಿವಾಚಕ ಸುಬಂತೋತ್ತರಪದದೊಡನೆ ಬಹುಳವಾಗಿ ಸಮಸ್ಯಮಾನವಾಗುವುದೆಂದು ಸೂತ್ರಾರ್ಥವಾಗಲು ' ಮುಂಗಯ್, ಮುಂಗಾಲ್ ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು. ಇಲ್ಲಿ ' ಅಂಶಿನಾ ' ಎಂದು ಹೇಳಿರುವುದರಿಂದ — '**ಕಯ್ಯ ಬೆರಲ ಮುಂದು, ಕಾಲ ಬೆರಲ ಅಡಿ**'

---

**ಪಾಠಾಂತರ : ೧ ಮೆಯ್ಯುಲಿ**

ಮೊದಲಾದ ಪ್ರಯೋಗಗಳಲ್ಲಿ ' ಕಯ್ಯ ' ಎಂಬುದು ಅಂಶಿವಾಚಕವಾಗಿದ್ದರೂ 'ಬೆರಲ ಮುಂದು' ಮೊದಲಾದ ಶಬ್ದಗಳು ಅಂಶವಾಚಕಗಳಲ್ಲವಾದುದೆಂದೂ ' ಅಭಿನ್ನೇನ ' ಎಂದು ಹೇಳಿರುವುದರಿಂದ ' ಮುಂದು ಮನೆಗಳ, ಹಿಂದು ಕಾಲ್ಗಳ ' ಮೊದಲಾದ ಪ್ರಯೋಗಗಳಲ್ಲಿ ಅಂಶಾಂಶಿಗಳಿಗೆ ಭೇದ ತೋರುವುದೆಂದೂ ಈ ಸಮಾಸವನ್ನು ಮಾಡಲಾಗದು.

ಆದರೆ ಈ ಸೂತ್ರದಲ್ಲಿ ಸಾಮಾನ್ಯವಾಗಿ ಅಂಶಾಂಶವಾಚಕ ಶಬ್ದಗಳಿಗೆ ನಿಯತ ಪೂರ್ವೋತ್ತರಪದಕಸಮಾಸವು ಬರುವುದೆಂದು ಹೇಳಿರುವುದರಿಂದ ' ಕಯ್ಯ ಬೆರಲ್, ಕಾಲ ಪರಡು, ಮರದ ಕೊಂಬು, ಶರಲ ಹಿಳಕು ' ಮೊದಲಾದ ಪ್ರಯೋಗಗಳಲ್ಲೆಲ್ಲಾ ಅವಯವಾವಯವಿಭಾವವು ತೋರುವುದರಿಂದ ಅಂಶಿಸಮಾಸವು ಪ್ರಸಕ್ತವಾಗುವುದು. ಆದಾಗ್ಯೂ ಇಲ್ಲಿ ' ಕಯ್ಯಾಲ್ ' ಮೊದಲಾದ ಶಬ್ದಗಳು ವಸ್ತುತಃ ಅಂಶಿವಾಚಕವಾಗಿದ್ದರೂ ' ಬೆರಲ ಮುಂದು ' ಮೊದಲಾದ ಶಬ್ದಗಳು ಅಂಶವಾಚಕಗಳಲ್ಲ. ಭಾಷೆಯಲ್ಲಿ ಸಾಂಕೇತಿಕಗಳಾದ —' ಅಡಿ, ಮೇಗು, ಮುಂದು, ಹಿಂದು, ಒಳಗು, ಪೊಱಗು, ನಡು, ಕಡೆ, ತುದಿ ' ಮೊದಲಾದ ಅಂಶವಾಚಕಗಳೇ ಇಲ್ಲಿ ಗ್ರಹಿಸಲ್ಪಡುವುವು. ಆದುದರಿಂದ ' ಅಡಿ ' ಮೊದಲಾದ ಅಂಶವಾಚಕಗಳಿಗೆ ಈ ಸಮಾಸವಾಗುವುದೇ ಅಲ್ಲದೆ ಸಾಮಾನ್ಯವಾದ ' ಮರದ ಕೊಂಬು ' ಮೊದಲಾದುವುಗಳಿಗೆ ಈ ಸಮಾಸವು ಬರುವುದಿಲ್ಲ. ಅಲ್ಲಿ ವೈಕಲ್ಪಿಕವಾಗಿ ಷಷ್ಠ್ಯಂತಪೂರ್ವಪದಕವಾದ ಸಮಾಸವೇ ಬರುವುದು. ಹೀಗೆಯೇ ಸಂಸ್ಕೃತ ವ್ಯಾಕರಣದಲ್ಲಿಯೂ ಏಕದೇಶಿಸಮಾಸವು ಪೂರ್ವಾದಿ ಶಬ್ದಗಳಿಗೇ ಅಲ್ಲದೆ ಇತರಕ್ಕೆ ಬರುವುದಿಲ್ಲವೆಂಬುದು ಆ ಪ್ರಕರಣವನ್ನು ಪರ್ಯಾಲೋಚಿಸಲು ತಿಳಿಯುವುದು.

ಇಲ್ಲಿ ಅವಯವಾವಯವಿಭಾವ ಸಂಬಂಧವು ತೋರುತ್ತಿರಲು ಷಷ್ಠೀವಿಭಕ್ತಿಯನ್ನೇ ವಿಧಿಸಿರುವುದರಿಂದ ಆ ಷಷ್ಠ್ಯಂತಕ್ಕೆ ಪೂರ್ವಸೂತ್ರದಿಂದಲೇ ಸಮಾಸವು ಸಿದ್ಧಿಸುತ್ತಿರಲು ಈ ಸೂತ್ರಾರಂಭವು ಷಷ್ಠೀಸಮಾಸವನ್ನು ಬಾಧಿಸಿ ಅಂಶವಾಚಕಕ್ಕೆ ಪೂರ್ವನಿಪಾತವನ್ನು ಮಾಡುವುದಕ್ಕೋಸ್ಕರವೆಂದು ತಿಳಿಯಬೇಕು. ಮತ್ತು ' ಅಂಗಾಲ್, ಮುಂಗೈ ' ಮೊದಲಾದುವು ' ಅಡಿ, ಮುಂದು ' ಮೊದಲಾದುವುಗಳಿಗೆ ' ಕಾಲ್ಕಯ್ ' ಮೊದಲಾದುವುಗಳೊಡನೆ ಸಾಮಾನಾಧಿಕರಣ ಸಂಬಂಧದಿಂದ ವಿಶೇಷ್ಯ-ವಿಶೇಷಣಭಾವವನ್ನಂಗೀಕರಿಸಿ — ' **ವಿಶೇಷಣಮೇಕಾರ್ಥೇನ ||೩೦೯||** ' ಎಂಬ ಸೂತ್ರದಿಂದಲೇ ಸಮಾಸವು ಸಿದ್ಧಿಸಿದಾಗ್ಯೂ ಪೂರ್ವಪದಾರ್ಥಕ್ಕೇ ಪ್ರಾಧಾನ್ಯವು ತೋರುವುದಕ್ಕೋಸ್ಕರವೂ ಈ ಸೂತ್ರವು ಪ್ರಾರಂಭಿಸಲ್ಪಟ್ಟಿರುವುದೆಂದು ತಿಳಿಯಬೇಕು. ಕೆಲವರು ಇದನ್ನು ಪ್ರಾಚೀನರು ಹೇಳಿರುವ ' **ಪೂರ್ವಪದಾರ್ಥಪ್ರಧಾನೋऽವ್ಯಯೀಭಾವಃ** ' ಎಂಬ ಲಕ್ಷಣಕ್ಕೆ ವಿಷಯವಾದುದರಿಂದ ' **ಅವ್ಯಯೀಭಾವ** ' ಸಮಾಸವೆಂದು ಹೇಳುವರು. ಆದರೆ ಸಂಸ್ಕೃತದಲ್ಲಿ ಅವ್ಯಯೀಭಾವವೆಂಬ ಹೆಸರು ಅವ್ಯಯವಲ್ಲದ್ದು ಸಮಾಸಮಾಡಿದ ಮೇಲೆ ಅದು ಅವ್ಯಯವಾಗುವುದೋ ಅದಕ್ಕೆ ಅನ್ವರ್ಥಕವಾಗಿ ಬಂದಿದೆ ಎಂದು ಹೇಳಿರುವುದರಿಂದ ಇದು ಅವ್ಯಯಲಕ್ಷಣಕ್ಕೆ ವಿಷಯವಾಗುವುದಿಲ್ಲವಾದುದರಿಂದ ಅವ್ಯಯೀಭಾವಸಮಾಸವಲ್ಲವೆಂದು ಹೇಳಬೇಕು. ಆದಾಗ್ಯೂ ಪೂರ್ವಪದವು ಎಲ್ಲಿ ಅವ್ಯಯವಾಗಿರುವುದೋ ಅದು ಅವ್ಯಯೀಭಾವವೆನಿಸಿಕೊಳ್ಳುವುದು ಎಂಬ ಲಕ್ಷಣವನ್ನಂಗೀಕರಿಸಿ ಹೇಳಿರುವರೆಂದು ತಿಳಿಯಬೇಕು.

---

ಪಾಠಾಂತರ : ೧ ಮಡಂ

ಇಲ್ಲಿ ಹೇಳಿರುವ 'ಅಭಿನ್ನೇನ' ಎಂಬ ಪದಸ್ವಾರಸ್ಯವನ್ನು ಪರ್ಯಾಲೋಚಿಸಲು ಈ ಅಂಶಿಸಮಾಸವು 'ಕಯ್ಯ ಮುಂದು, ಕಾಲ ಅಡಿ' ಮೊದಲಾಗಿ ಎಲ್ಲಿ ಅಂಶಿಯಲ್ಲಿ ಏಕತ್ವವು ತೋರುವುದೋ ಅಲ್ಲಿಯೇ ಇವು; ಎಲ್ಲಿ ತೋರುವುದಿಲ್ಲವೋ ಅಲ್ಲಿ '(ಕಯ್ಗಳ ಮುಂದು, ಕಾಲ್ಗಳ ಅಡಿ)' ಮೊದಲಾದವುಗಳಲ್ಲಿ ಬರುವುದಿಲ್ಲವೆಂದು ತಿಳಿಯುವುದು.

**ದರ್ಪಣಕಾರನು** ಇಂತಹ ಸಮಾಸವಿಷಯದಲ್ಲಿ ಅವ್ಯಯೀಭಾವ ಸಮಾಸ ಸಂಜ್ಞೆಗಳನ್ನು ಹೇಳಿ ಅದರಲ್ಲಿ ಬರುವ ಕಾರ್ಯವಿಶೇಷಗಳನ್ನು —

ಅಡಿಮೇಗುಗಳಂತ್ಯಾಕ್ಷರ
ದೆಡೆಗಕ್ಕುಂ ಬಿಂದು ಮುಂದುಪಿಂದುಗಳಂತ್ಯ
ಕ್ಕೊಡರಿಸುಗುಂ ಲೋಪಂ ನೋ
ಡಿಕ್ಕೊಡವ್ಯಯೀಭಾವದೊಳ್ ಕೆಳಗು ಕಿಟಿಸಿಕ್ಕುಂ (ಸೂತ್ರ ೧೬೬)

ಎಂಬ ಸೂತ್ರದಿಂದ ಸೂಚಿಸಿರುವನು.

**ಅವತಾರಿಕೆ ೩೦೭**

ಇದು ವರೆಗೂ ಪ್ರಾಚೀನರು ವ್ಯವಹರಿಸುವ ವ್ಯಧಿಕರಣತತ್ಪುರುಷಸಮಾಸಲಕ್ಷಣವು ಹೇಳಲ್ಪಟ್ಟಿತು. ಈಗ ಸಮಾನಾಧಿಕರಣ ತತ್ಪುರುಷ ಸಮಾಸಗಳಲ್ಲಿ ದ್ವಿಗುಕರ್ಮಧಾರಯಗಳೆಂದು ಎರಡು ಬಗೆಯಾದ ವ್ಯವಹಾರವಿರುವುದರಿಂದ ಅವುಗಳಲ್ಲಿ ದ್ವಿಗುಸಮಾಸ ಸ್ವರೂಪವನ್ನು ತಿಳಿಸಲು ಹೇಳುತ್ತಾನೆ.

**ಸೂತ್ರಂ || ಸಂಖ್ಯಾ ಸಮಾಹಾರೇ || ೩೦೭ ||**

**ಅರ್ಥ || ಸಂಖ್ಯಾವಾಚಿಯಾದ ಸುಬಂತವು ಸಂಖ್ಯೇಯವಾಚಿಯಾದ ಸುಬಂತೋತ್ತರಪದ ದೊಡನೆ ಸಮಾಹಾರವು ತೋರುತ್ತಿರಲು ಬಹುಳವಾಗಿ ಸಮಸ್ಯಮಾನವಾಗುವುದು.**

**ಉದಾಹರಣೆ ||** 'ಮೂಱುಲೋಕಂಗಳ ಸಮಾಹಾರಂ = ಮೂಲೋಕಂ ||' ಹೀಗೆಯೇ 'ನಾಲ್ಮೊಗಂ, ಅಯ್ಲಾವುದಂ, ಎಣ್ದೆಸೆ ||' ಮೊದಲಾದ ಸಂಖ್ಯಾಪೂರ್ವಕವಾದ ಸಮಾನಾಧಿಕರಣ ಸಮಾಸವೆಲ್ಲಾ ಇದಕ್ಕೆ ಲಕ್ಷ್ಯಗಳು.

**ವಿಚಾರ ೩೦೭**

ಈ ಸೂತ್ರದಲ್ಲಿ — 'ಸಂಖ್ಯಾ, ಸಮಾಹಾರೇ' ಎಂದು ಎರಡು ಪದಗಳಿರುವುವು. ಇಲ್ಲಿ ಸಂಖ್ಯೆಯೆಂದರೆ 'ಒಂದು, ಎರಡು, ಮೂರು' ಮೊದಲಾದುವು. ಅರ್ಥದಲ್ಲಿ ಸಮಾಸವು ಅಸಂಭವ ವಾದುದರಿಂದ ತದ್ವಾಚಕ ಶಬ್ದವೇ ಗ್ರಹಿಸಲ್ಪಡುವುದು. ಅದೂ ಭಾಷಾಗತ ಶಬ್ದವೆಂದೇ ತಿಳಿಯಬೇಕು. ಇಂತಹ ಸಂಖ್ಯೆಯು ಸಂಖ್ಯೇಯವಿಲ್ಲದೆ ಉಪಪನ್ನವಾಗುವುದಿಲ್ಲವಾದುದರಿಂದ – **'ಪೀನೋ ದೇವದತ್ತೋ ದಿವಾ ನ ಭುಂಕ್ತೇ'** ಎಂಬ ಅರ್ಥಾಪತ್ತಿನ್ಯಾಯವನ್ನು ಅನುಸರಿಸಿ ಸಂಖ್ಯೇಯ ವಾಚಕಕ್ಕೆ ಉಪಸ್ಥಿತಿಯನ್ನು ಹೇಳುವುದು. ಇವು ಸುಪ್-ಸುಪೇತ್ಯಾದ್ಯನುವರ್ತಮಾನಗಳಿಗೆ ಯಥಾಸಂಭವವಾಗಿ ವಿಶೇಷಣಗಳಾಗುವುವು. 'ಸಮಾಹಾರೇ' ಎಂದರೆ — ಸಮೂಹ ವೆಂದರ್ಥವು. ಸಪ್ತಮೀವಿಭಕ್ತಿಗೆ ವಿಷಯವೆಂದರ್ಥವು. ತಥಾಚ — ಸಂಖ್ಯಾವಾಚಕಸುಬಂತವು ಸಂಖ್ಯೇಯವಾಚಕೋತ್ತರಪದದೊಡನೆ ಬಹುಳವಾಗಿ ಸಮಾಹಾರ ವಿಷಯದಲ್ಲಿ ಸಮಾಸವನ್ನು

ಕೊಂಡುವುದು — ಎಂದು ಸೂತ್ರಾರ್ಥವಾಗಲು ' ಮೂಲೋಕಂ ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು.

ಇಲ್ಲಿ ಸಮಾಹಾರವೆಂಬುದು ಸಮಾಸದ ಅರ್ಥವು. ಆದುದರಿಂದ ಸಾಮಾಸವು ಸಮಾಹಾರಕ್ಕೆ ವಾಚಕವಾಗಿರುವುದು ಎಂದು ಪ್ರಾಚೀನರು —

ಯೋ ಯತ್ರ ಪ್ರತ್ಯಯೋ ಜಾತಃ ಸಮಾಸೋ ಯತ್ರ ವಾ ಭವೇತ್
ಸ ಏನಂ ವಕ್ತಿ ಯುಂಜಾನಸ್ತಸ್ಯ ಲಿಂಗೇನ ಸಂಖ್ಯಯಾ

ಎಂಬ ಶ್ಲೋಕದಿಂದ ಬೋಧಿಸಿರುವರು.

ಆದುದರಿಂದ ಇಲ್ಲಿ ಸಮಾಹಾರಕ್ಕೆ ಏಕತ್ವವಿರುವುದರಿಂದ ಏಕವಚನಾಂತವಾಗಿಯೇ ಉದಾಹರಿಸಲ್ಪಟ್ಟಿರುವುದು. ಇಲ್ಲಿ ಸಂಖ್ಯಾಪದವನ್ನುಚ್ಚರಿಸಿರುವುದರಿಂದ —' ಒಳ್ಳಿದರ ಪಾರ್ವರ ಸಮಾಹಾರಂ ' ಮೊದಲಾದ ಪ್ರಯೋಗಗಳಲ್ಲಿ ಸಂಖ್ಯಾವಾಚಕವಿಲ್ಲದಿರುವುದರಿಂದಲೂ ' ಸಮಾಹಾರೇ ' ಎಂದು ಹೇಳಿರುವುದರಿಂದ ' ಮೂರುಲೋಕಂಗಳ್ ' ಮೊದಲಾದ ಪ್ರಯೋಗಗಳಲ್ಲಿ ಸಮಾಹಾರವಿವಕ್ಷೆಯಿಲ್ಲದಿರುವುದರಿಂದಲೂ ಈ ಸಮಾಸವು ಬರುವುದಿಲ್ಲವೆಂದು ತಿಳಿಯಬೇಕು. ' ಮೂಲೋಕ ' ಮೊದಲಾದ ಸಮಾಸಗಳಲ್ಲಿ ' ಲೋಕ ' ಮೊದಲಾದುವು ಸಂಸ್ಕೃತ ಪದಗಳಾಗಿದ್ದರೂ ಪೂರ್ವದಲ್ಲಿ ಸಾಮಾನ್ಯವಾಗಿ ' **ಕೃತ್-ಸಂಖ್ಯಾದ್ಯಾದಿಗುಣೋಕ್ತಿಃ ಸಂಸ್ಕೃತೇನ ಚ** ' ||೨೯೪|| ಎಂದು ಸಂಖ್ಯಾವಾಚಕಕ್ಕೆ ಸಂಸ್ಕೃತೋತ್ತರಪದಸಮಾಸವುಂಟೆಂದು ಹೇಳಿರುವುದರಿಂದ ಈ ಸಮಾಸವು ಬರುವುದೆಂದು ಹೇಳಬೇಕು. ಈ ಸಮಾಸಕ್ಕೆ ಪ್ರಾಚೀನರು ' ದ್ವಿಗುಸಮಾಸ ' ವೆಂದು ಹೆಸರಿಟ್ಟಿರುವರು.

**ಅವತಾರಿಕೆ ೩೦೮**

ಪೂರ್ವದಲ್ಲಿ ದ್ವಿಗುಸಮಾಸವು ಹೇಳಲ್ಪಟ್ಟಿತು. ಈಗ ಕ್ರಿಯಾಸಮಾಸದಲ್ಲಿ ಭೇದವಾದ ಉಪಪದಸಮಾಸವನ್ನು ಹೇಳುತ್ತಾನೆ.

**ಸೂತ್ರಂ || ಙ್ಯುಕ್ತಂ ಕೃತಾ ತದ್ವಿಧೌ ನಿತ್ಯಂ || ೩೦೮ ||**

**ಅರ್ಥ || ಕೃತ್-ಪ್ರತ್ಯಯವಿಧಾಯಕ ಸೂತ್ರಗಳಲ್ಲಿ ಸಪ್ತಮ್ಯಂತವಾಗಿ ಉಚ್ಚರಿಸಲ್ಪಟ್ಟ ಪದಬೋಧ್ಯವಾದ ಸುಬಂತವು ಕೃದಂತೋತ್ತರಪದದೊಡನೆ ನಿತ್ಯವಾಗಿ ಸಮಸ್ಯಮಾನವಾಗುವುದು.**

**ಉದಾಹರಣೆ ||** ' ಕಂಪಸುಣ್ಬುದು — ಕಂಪುಣಿ, ಮೀನಂ ಕೊಲ್ವಂ — ಮೀಂಗುಲಿ, ಕಲ್ಲಂ ಕುಟ್ಟುವಂ — ಕಲ್ಕುಟಿಗಂ || ' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೦೮**

ಈ ಸೂತ್ರದಲ್ಲಿ — ' ಙ್ಯುಕ್ತಂ, ಕೃತಾ, ತದ್ವಿಧೌ, ನಿತ್ಯಂ ' ಎಂದು ನಾಲ್ಕು ಪದಗಳಿರುವುವು. ' ಙ್ಯುಕ್ತಂ ' ಎಂಬುದು ಕೃದ್ವಿಧಿಯಲ್ಲಿ ಸಪ್ತಮ್ಯಂತವಾಗಿ ಉಚ್ಚರಿಸಲ್ಪಟ್ಟ ಪದಬೋಧ್ಯವಾದ ಲಕ್ಷ್ಯಸ್ಥಪದಬೋಧಕವಾದುದು. ಇದನ್ನೇ ಕೆಲವರು ಉಪಪದಸಂಜ್ಞಕವಾದುದೆಂದು ಹೇಳುತ್ತಾರೆ. ' ಕೃತಾ ' ಎಂಬುದು ಪ್ರತ್ಯಯಬೋಧಕವಾದ ತೃತೀಯಾಂತವಾದುದರಿಂದ ತದಂತಬೋಧಕವಾಗಿ 'ಕೃದಂತದಿಂದ' ಎಂಬರ್ಥವನ್ನು ಬೋಧಿಸುವುದು. ' ತದ್ವಿಧೌ ' ಎಂಬಲ್ಲಿ ತತ್-ಪದವು ಕೃತ್-ಪದಸಹಚರಿತವಾದುದರಿಂದ ಅದನ್ನೇ ಪರಾಮರ್ಶಿಸುವುದು. ಆದುದರಿಂದ

' ತದ್ವಿಧೌ ' ಎಂದರೆ 'ಕೃದ್ವಿಧೌ' ಎಂದರ್ಥವಾಗುವುದು. ಇದು ' ಜ್ಯುಕ್ತಂ ' ಎಂಬಲ್ಲಿ ಸಂಬಂಧಿಸುವುದು. ' ನಿತ್ಯಂ ' ಎಂಬುದು ಬಹುಳಗ್ರಹಣವ್ಯಾವರ್ತಕವು. ತಥಾಚ — ' ಇರುಣಃ **ಕರ್ಮಣಿ || ೫೪೬ ||** ' ಮೊದಲಾದ ಕೃದ್ವಿಧಿಗಳಲ್ಲಿ ಸಪ್ತಮ್ಯಂತವಾಗಿ ಉಚ್ಚರಿಸಲ್ಪಟ್ಟಿರುವ ' ಕರ್ಮಣಿ ' ಮೊದಲಾದುದು ' ಜ್ಯುಕ್ತ ' ವಾದುದು. ಇದಕ್ಕೇ ಉಪಪದವೆಂದು ಹೆಸರು. ಈ ಉಪಪದಸಂಜ್ಞಕವಾದುದು ಕೃದಂತವಾದ ಉತ್ತರಪದದೊಡನೆ ನಿತ್ಯವಾಗಿ ಸಮಾಸವು ಬರುವುದು – ಎಂದೂ ಸೂತ್ರಾರ್ಥವಾಗುವುದರಿಂದ – ' ಕಂಪುಣಿ ' ಮೊದಲಾದುವು ಸಿದ್ಧಿಸುವುವು. ಇಲ್ಲಿ ' ಜ್ಯುಕ್ತಂ ' ಎಂಬುದು ಸೂಕ್ತವಾದುದರಿಂದ ಉಪಪದಸಂಜ್ಞಕಪದಕ್ಕೆ ಪೂರ್ವನಿಪಾತವು ಬರುವುದು. ' ಕೃತಾ ' ಎಂದು ಉತ್ತರಪದವು ಕೃದಂತವಾಗಿರಬೇಕೆಂದು ಹೇಳಿರುವುದರಿಂದ ' ಮೀನಂ ಬಲೆಯಿಂ ಕೊಲ್ವಂ ' ಮೊದಲಾದ ಪ್ರಯೋಗಗಳಲ್ಲಿ ತಿಙಂತದೊಡನೆ ಸಮಾಸವಿಲ್ಲವೆಂದು ತಿಳಿಯಬೇಕು. ' ತದ್ವಿಧೌ ' ಎಂದು ಹೇಳಿರುವುದರಿಂದ ' ಪೆಂಡತಿಯಂ ಕಂಡಂ ' ಮೊದಲಾದ ಪ್ರಯೋಗಗಳಲ್ಲಿ ಕೃದ್ವಿಧಿಯಲ್ಲಿ ಉಕ್ತವಾದ ಸಪ್ತಮ್ಯಂತಪದಬೋಧ್ಯವಾದ ಉಪಪದವಿಲ್ಲವಾದುದರಿಂದ ಸಮಾಸವಿಲ್ಲವೆಂದು ತಿಳಿಯಬೇಕು.

ಇಂತಹ ಸಮಾಸವನ್ನು **ದರ್ಪಣಕಾರನು** ಸ್ಪಷ್ಟವಾಗಿ ಹೇಳದಿದ್ದರೂ ಕ್ರಿಯಾಸಮಾಸದಲ್ಲಿಯೇ ಇದಕ್ಕೂ ಅಂತರ್ಭಾವವೆಂದು ಅವನ ಮತದಲ್ಲಿ ತಿಳಿಯಬೇಕು.

**ಅವತಾರಿಕೆ ೩೦೯**

ತತ್ಪುರುಷಭೇದವಾದ ಸಮಾನಾಧಿಕರಣಸಮಾಸಗಳಲ್ಲಿ ದ್ವಿಗುಸಮಾಸವನ್ನು ಹೇಳಿ ಪೂರ್ವಸೂತ್ರದಿಂದ ಉಪಪದಸಮಾಸವು ವಿಧಿಸಲ್ಪಟ್ಟಿತು. ಈಗ ಕರ್ಮಧಾರಯಸಮಾಸವನ್ನು ಹೇಳಲು ಪ್ರಾರಂಭಿಸುತ್ತಾನೆ.

**ಸೂತ್ರಂ || ವಿಶೇಷಣಮೇಕಾರ್ಥೇನ || ೩೦೯ ||**

**ಅರ್ಥ || ವಿಶೇಷಣವಾಚಿಯಾದ ಸುಬಂತವು ಸಮಾನಾಧಿಕರಣ ವಿಶೇಷ್ಯವಾಚಿಯಾದ ಸುಬಂತೋತ್ತರಪದದೊಡನೆ ಬಹುಳವಾಗಿ ಸಮಸ್ಯಮಾನವಾಗುವುದು.**

**ಉದಾಹರಣೆ** || ' ಬಿಳಿದು ತಾವರೆ — ಬೆಳ್ದಾವರೆ, ಬಟ್ಟಿತು ಮೊಲೆ — ಬಟ್ಟಮೊಲೆ, ತೋರಿತು ಮುಡಿ — ತೋರಮುಡಿ, ಸಿಡಿದು ಕಣ್ — ಸಿಡುಗಣ್ || ' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೦೯**

ಈ ಸೂತ್ರದಲ್ಲಿ — ' ವಿಶೇಷಣಂ, ಏಕಾರ್ಥೇನ ' ಎಂದು ಎರಡು ಪದಗಳಿರುವುವು. ವಿಶೇಷಣವೆಂದರೆ—ಆವುದು ಅನೇಕ ಪ್ರಕಾರವುಳ್ಳ ವಸ್ತುವು ಪ್ರಕಾರಾಂತರಗಳಿಂದ ವ್ಯವಚ್ಛೇದ ಮಾಡಿ ಅವುಗಳಲ್ಲಾವುದೋ ಒಂದು ಪ್ರಕಾರವು ಉಪಾತ್ತವಾಗಲು ವ್ಯವಸ್ಥಾಪಕವಾಗುವುದೋ ಅದೇ ವಿಶೇಷಣವು. ಇದಕ್ಕೆ ಕೆಲವರು ಭೇದಕವೆಂದು ಹೇಳುವರು. ಈ ವಿಷಯವು — ' **ಭೇದವದ್ಭೇದಕಂ || ೧೧೧ ||** ' ಎಂಬ ಸೂತ್ರ ವಿಚಾರದಲ್ಲಿ ವಿಶದವಾಗಿ ಹೇಳಲ್ಪಟ್ಟಿರುವುದು. ಈ ಅರ್ಥವು — ' ವಿಶೇಷಯತಿ, ಭೇದಯತಿ, ಇತರೇಭ್ಯೋ ವ್ಯಾವರ್ತಯತಿ ' ಎಂಬ ವ್ಯುತ್ಪತ್ತಿಯಿಂದ ಸಿದ್ಧಿಸುವುದು. ತಥಾಚ — ' ವ್ಯಾವರ್ತಕ, ಭೇದಕ, ವಿಶೇಷಣ '

ಇವೆಲ್ಲಾ ಪರ್ಯಾಯ ಪದಗಳೆಂದು ಸಿದ್ಧವಾಗುವುದು. ಆದರೆ 'ವಿಶೇಷ್ಯತೇ ಭಿದ್ಯತೇ-ಇತರೇಭ್ಯೋ ವ್ಯಾವರ್ತ್ಯತೇ' ಎಂಬ ವ್ಯುತ್ಪತ್ತಿಯಿಂದ ನಿಷ್ಪನ್ನವಾದ 'ವಿಶೇಷ್ಯ' ಶಬ್ದಬೋಧ್ಯವಾದುದೂ ಕದಾಚಿತ್, ಇತರ ವ್ಯಾವರ್ತಕವಾಗುವುದುಂಟು. ಆದಾಗ್ಯೂ ಗುಣ ಕ್ರಿಯಾನಿಮಿತ್ತಗಳಿಂದ ಇತರ ವ್ಯಾವರ್ತಕವಾದುದು ವಿಶೇಷಣವೆಂತಲೂ ಸ್ವರೂಪದಿಂದ ಇತರ ವ್ಯಾವರ್ತಕವಾದುದು ವಿಶೇಷ್ಯವೆಂತಲೂ ಶಾಸ್ತ್ರದಲ್ಲಿ ವ್ಯವಹರಿಸಲ್ಪಡುವುದೆಂದು ತಿಳಿಯಬೇಕು. ಇಲ್ಲಿ ವಿಶೇಷಣಪದವನ್ನೊಂದನ್ನೇ ಉಚ್ಚರಿಸಿದ್ದರೂ ವಿಶೇಷ್ಯವಿಲ್ಲದೆ ವಿಶೇಷಣವು ಅನುಪಪನ್ನವಾದುದರಿಂದ ವಿಶೇಷಣ ಪದದಿಂದ ವಿಶೇಷ್ಯವು ಆಕ್ಷಿಪ್ತವಾಗುವುದೆಂದು ತಿಳಿದು ಆಕ್ಷಿಪ್ತವಾದ ವಿಶೇಷ್ಯ ಪದವು ಅನುವೃತ್ತವಾದ 'ಸುಬಂತೇನ' ಎಂಬ ತೃತೀಯಾಂತಕ್ಕೆ ವಿಶೇಷಣವು. ಮತ್ತು ಅದಕ್ಕೆ 'ಏಕಾರ್ಥೇನ' ಎಂಬುದೂ ವಿಶೇಷಣ. 'ಏಕಾರ್ಥೇನ' ಎಂದರೆ —'**ಏಕಃ ಅರ್ಥಃ ಯಸ್ಯ ತತ್**' ಎಂಬ ವಿಗ್ರಹದಿಂದ ಏಕ ಎಂದರೆ ಸಮಾನವಾದ ಅರ್ಥ ಎಂದರೆ ಅಧಿಕರಣವುಳ್ಳ, ಎಂದರ್ಥವಾಗುವುದು. ತಥಾಚ — ವಿಶೇಷಣವಾಚಿಯಾದ ಸುಬಂತವು ಸಮಾನಾಧಿಕರಣ ವಿಶೇಷ್ಯವಾಚಕವಾದ ಉತ್ತರಪದದೊಡನೆ ಬಹುಳವಾಗಿ ಸಮಾಸವಾಗುವುದು — ಎಂದು ಸೂತ್ರಾರ್ಥವಾಗಲು 'ಬೆಳ್ದಾವರೆ' ಮೊದಲಾದುವು ಸಿದ್ಧಿಸುವುವು. ಇದಕ್ಕೆ ಪೂರ್ವ ಸೂತ್ರದಲ್ಲಿಯೂ ಉತ್ತರ ಸೂತ್ರದಲ್ಲಿಯೂ ನಿತ್ಯಗ್ರಹಣವನ್ನು ಮಾಡಿರುವುದರಿಂದ ಇಲ್ಲಿ 'ಬಹುಳಂ' ಎಂಬುದಕ್ಕೆ ಸಂಬಂಧವುಂಟೆಂದು ತಿಳಿಯುವುದು.

ಇಲ್ಲಿ ವಿಶೇಷಣವೆಂಬುದು ಸಮಾನಾಧಿಕರಣ ವ್ಯಧಿಕರಣ ಭೇದಗಳಿಂದ ಎರಡು ಬಗೆಯಾಗಿರುವುದು. ಅವುಗಳಲ್ಲಿ — 'ಬಿಳಿದು ತಾವರೆ, ತೋರಿತು ಮುಡಿ' ಮೊದಲಾದ ಪ್ರಯೋಗ ಗತವಾದ 'ಬಿಳಿದು' ಮೊದಲಾದುವು 'ತಾವರೆ' ಮೊದಲಾದುವುಗಳಿಗೆ ಸಮಾನಾಧಿಕರಣ ವಿಶೇಷಣವು. ಆದುದರಿಂದ ಇವುಗಳಿಗೆ ವಿಶೇಷ್ಯಾಧೀನವಾದ ಲಿಂಗ ಸಂಖ್ಯೆಗಳೇ ಹೇಳಲ್ಪಡುವುವು. 'ಜಡೆಯಿಂದ ತಾಪಸಂ, ಛತ್ರದಿಂದ ಅರಸಂ' ಮೊದಲಾದ ಪ್ರಯೋಗಗಳಲ್ಲಿ 'ತಾಪಸ' ಮೊದಲಾದ ವಿಶೇಷ್ಯಗಳಿಗೆ 'ಜಡೆ' ಮೊದಲಾದುವು ವಿಶೇಷಗಳಾಗಿದ್ದರೂ ವ್ಯಧಿಕರಣ ವಿಶೇಷಣವೆಂದರಿಯುವುದು. ಆದುದರಿಂದ ಇಲ್ಲಿ ವಿಶೇಷ್ಯಾಧೀನ ಲಿಂಗವಚನಾದಿ ನಿಯಮವಿಲ್ಲವೆಂದು ತಿಳಿಯಬೇಕು. ಹೀಗೆ ವಿಶೇಷ್ಯವೂ ಎರಡು ಬಗೆಯಾಗಿರುವುದು. ಅವುಗಳಲ್ಲಿ ಸಮಾನಾಧಿಕರಣವಾದ ವಿಶೇಷ್ಯವೇ ಪ್ರಕೃತ ಸೂತ್ರಕ್ಕೆ ವಿಷಯವೆಂದು ತಿಳಿಯಬೇಕು.

ಈ ಸೂತ್ರದಲ್ಲಿ ವಿಶೇಷಣ ಪದವನ್ನುಚ್ಚರಿಸದಿದ್ದರೂ 'ಏಕಾರ್ಥೇನ' ಎಂಬ ಪದಸ್ವಾರಸ್ಯದಿಂದ ಈ ಸಮಾಸವು ಸಾಮಾನಾಧಿಕರಣ ಶಬ್ದಗಳಿಗೆ ಬರುವುದೆಂದು ಸಿದ್ಧವಾದರೂ ವಿಶೇಷಣ ವಿಶೇಷ್ಯಗಳಿಗೆ ಪೂರ್ವೋತ್ತರಪದನಿಯಮವಿಲ್ಲದೆ ವಿಶೇಷ್ಯಕ್ಕೆ ಪೂರ್ವಪದತ್ವವು ಪ್ರಾಪ್ತವಾಗುವುದೆಂದು ಸೂತ್ರಕಾರನು ವಿಶೇಷಣಪದವನ್ನುಚ್ಚರಿಸಿರುವನು. ಆದುದರಿಂದ ವಿಶೇಷಣಕ್ಕೇ ಪೂರ್ವನಿಪಾತವು ಬರುವುದು. 'ಏಕಾರ್ಥೇನ' ಎಂದು ಹೇಳಿರುವುದರಿಂದ — 'ಪೊಳೆಯೊಳ್ ಮೀನ್ಗಳ್' ಮೊದಲಾದ ಪ್ರಯೋಗಗಳಲ್ಲಿ ವಿಶೇಷ್ಯ-ವಿಶೇಷಣಗಳಿಗೆ ಸಾಮಾನಾಧಿಕರಣ್ಯವಿಲ್ಲವಾದುದರಿಂದ ಸಮಾಸವು ಬರುವುದಿಲ್ಲ.

ಆದರೆ ಇಲ್ಲಿ ಎಲ್ಲರೂ ವಿಶೇಷ್ಯ-ವಿಶೇಷಣಭಾವವನ್ನು ಬೋಧಿಸಲು —'ಬಿಳಿದು ತಾವರೆ' ಮೊದಲಾದುವನ್ನು ಪ್ರಸಿದ್ಧವಾಗಿ ಉದಾಹರಿಸುತ್ತಾರೆ. ಇಲ್ಲಿ 'ಬಿಳಿದು' ಎಂದು ಹೇಳಲು

ಶ್ರೋತೃವಿಗೆ ಬಿಳಿದಾದುದು ತಾವರೆಯೆ ? ಬಟ್ಟೆಯೆ ? ಅಥವಾ ಬೇರೆಯೆ ? ಅವುದು ? ಎಂದೂ 'ತಾವರೆ' ಎಂದು ಹೇಳಲು — ತಾವರೆಯು ಬಿಳಿದೆ ? ಕೆಂಪೆ ? ಕಪ್ಪೆ ? ಅಥವಾ ಬೇರೆಯೆ ? ಎಂದೂ ಉಭಯತ್ರಾನೇಕ ಪ್ರಕಾರವು ಸಂಭವಿಸುವುದರಿಂದ ಇವೆರಡೂ ಭೇದಕವಾಗುವುದು. ಹೀಗೆಯೇ 'ಬಿಳಿದು' ಎಂಬುದು ಬಿಳಿದಲ್ಲದುದರಿಂದ ವ್ಯಾವರ್ತಿಸುವುದೋ ಹಾಗೆ ತಾವರೆಯೂ ತಾವರೆಯಲ್ಲದ ವಸ್ತುವನ್ನೂ ವ್ಯಾವರ್ತಿಮಾಡುವುದು. ಆದುದರಿಂದ ಉಭಯವೂ ವ್ಯಾವರ್ತಕವೂ ಆಗುವುದು. ಇದರಂತೆ ವಿವಕ್ಷಾವಿಶೇಷದಿಂದ ಉಭಯವೂ ವಿಶೇಷ್ಯವೂ ಆಗುವುದು. ಹೀಗಿರಲು ವಿಶೇಷ್ಯ-ವಿಶೇಷಣಭಾವವ್ಯವಸ್ಥೆಯನ್ನು ಮಾಡುವುದು ಹೇಗೆ ? ಎಂದರೆ ಲೋಕದಲ್ಲಿ ಶಬ್ದಗಳ ಪ್ರವೃತ್ತಿಯು 'ಜಾತಿ, ಕ್ರಿಯೆ, ಗುಣ, ದ್ರವ್ಯ' ಎಂಬ ಭೇದಗಳಿಂದ ನಾಲ್ಕು ಬಗೆಯಾಗಿರುವುದು. ಅವುಗಳಲ್ಲಿ 'ತಾವರೆ, ಗಡಿಗೆ, ಬಟ್ಟೆ' ಮೊದಲಾದುವು ಜಾತಿ ಪ್ರವೃತ್ತಿನಿಮಿತ್ತಕ ಶಬ್ದಗಳು. 'ಅಡಿಗೆಯವನು, ಕುಂಬಾರನು, ಓದುವವನು' ಮೊದಲಾದುವು ಕ್ರಿಯಾಪ್ರವೃತ್ತಿನಿಮಿತ್ತಕ ಶಬ್ದಗಳು. 'ಬಿಳಿದು, ಕೆಂಪು, ಕಪ್ಪು' ಮೊದಲಾದುವು ಗುಣಪ್ರವೃತ್ತಿ ನಿಮಿತ್ತಕ ಶಬ್ದಗಳು. 'ದಂಡಿ, ಕುಂಡಲಿ' ಮೊದಲಾದುವು ದ್ರವ್ಯ ಪ್ರವೃತ್ತಿನಿಮಿತ್ತಕಗಳು. ಇದಲ್ಲದೆ ಕೇವಲ ಸಂಕೇತಿತವಾದ 'ಚೈತ್ರ, ಮೈತ್ರ' ಮೊದಲಾದ ಸಂಜ್ಞಾಪ್ರವೃತ್ತಿನಿಮಿತ್ತಕ ಶಬ್ದಗಳೂ ಉಂಟು. ಹೀಗೆ ಅನೇಕ ಭೇದಗಳಿಂದ ಭಿನ್ನಗಳಾದ ಶಬ್ದಗಳಲ್ಲಿ ಅವುವು ಜಾತಿ, ದ್ರವ್ಯ, ಸಂಜ್ಞಾ ಪ್ರವೃತ್ತಿನಿಮಿತ್ತಕಗಳೋ ಅವು ಆವಾಗಲೂ ವಿಶೇಷ್ಯಗಳಾಗಿಯೇ ಇರುವುವು. ಅವುವು ಗುಣಕ್ರಿಯಾಪ್ರವೃತ್ತಿನಿಮಿತ್ತಗಳೋ ಅವು ವಿಶೇಷಣಗಳಾಗಿಯೇ ಆಗುವುವು. ಆದರೆ ಗುಣ ಕ್ರಿಯಾ ಶಬ್ದಗಳಿಗೆ ಜಾತ್ಯಾದಿಗಳ ಸಮಭಿವ್ಯಾಹಾರವಿರಲು ಜಾತ್ಯಾದಿಗಳು ವಿಶೇಷ್ಯಗಳೆಂತಲೂ ಗುಣಕ್ರಿಯೆಗಳು ವಿಶೇಷಣಗಳೆಂತಲೂ ತಿಳಿಯುವುದು. ಗುಣಕ್ರಿಯೆಗಳಿಗೆ ಪರಸ್ಪರ ಸಮಭಿ ವ್ಯಾಹಾರವಿರಲು ವಿಶೇಷ್ಯವಿಶೇಷಣಭಾವವು ವಿವಕ್ಷಾಧೀನವೆಂತಲೂ ತಿಳಿಯಬೇಕು. ಇನ್ನೂ ವಿಶೇಷ ವಿಚಾರವನ್ನು ಸಂಸ್ಕೃತವ್ಯಾಕರಣದಿಂದ ಮಾಡಿ ತಿಳಿದುಕೊಳ್ಳುವುದು.

**ಅವತಾರಿಕೆ ೩೧೧**

ಹೀಗೆ ಸಮಾನಾಧಿಕರಣಗಳಾದ ವಿಶೇಷ್ಯ ವಿಶೇಷಣಗಳಿಗೆ ತತ್ಪುರುಷ ಸಮಾಸವನ್ನು ಹೇಳಿ ಈಗ ಅವಕ್ಕೆ ಅನ್ಯಪದಾರ್ಥವು ತೋರುವಾಗ ಬಹುವ್ರೀಹಿ ಸಮಾಸವನ್ನು ಹೇಳುತ್ತಾನೆ—

**ಸೂತ್ರಂ ॥ ಅನ್ಯಾರ್ಥೇ ಬಹುವ್ರೀಹಿರ್ನಿತ್ಯಂ ॥ ೩೧೧ ॥**

**ಅರ್ಥ ॥ ಅನ್ಯ ಪದಾರ್ಥದಲ್ಲಿರುವ ವಿಶೇಷಣವಾಚಿಯಾದ ಸುಬಂತವು ವಿಶೇಷ್ಯವಾಚಿ ಸಮಾನಾಧಿಕರಣೋತ್ತರ ಪದದೊಡನೆ ನಿತ್ಯವಾಗಿ ಸಮಸ್ಯಮಾನವಾಗುವುದು. ಆ ಸಮಾಸವು ಬಹುವ್ರೀಹಿ ಸಂಜ್ಞಕವಾಗುವುದು.**

**ಉದಾಹರಣೆ**— ॥ ಕೊಂಕಿದುದು ಬಿಲ್ ಆವಂಗೆ ಆತಂ=ಕುಡುವಿಲ್ಲ; ಕಡಿದು ಚಾಗವ್ ಆವಂಗೆ ಆತಂ=ಕಡುಚಾಗಿ; ನಿಡಿದು ಕಣ್ ಆವಂಗೆ ಆತಂ=ನಿಡುಗಣ್ಣಂ, ನಾಲ್ಕು ತೋಳ್ಗಳ್ ಆವಂಗೆ ಆತಂ=ನಾಲ್ದೋಳಂ, ॥ ಮೊದಲಾದುವೇ ಇದಕ್ಕೆ ಲಕ್ಷ್ಯಗಳು.

**ವಿಚಾರ ೩೧೧**

ಈ ಸೂತ್ರದಲ್ಲಿ — 'ಅನ್ಯಾರ್ಥೇ, ಬಹುವ್ರೀಹಿಃ, ನಿತ್ಯಂ' ಎಂದು ಮೂರು ಪದಗಳಿರುವುವು. ಪೂರ್ವದಿಂದ — 'ವಿಶೇಷಣಮೇಕಾರ್ಥೇನ' ಎಂಬುದು ಅನುವರ್ತಿಸಲ್ಪಡುವುದು.

ಇದು ಸಮಸ್ಯಮಾನೋತ್ತರಪದಕ್ಕೆ ವಿಶೇಷಣವು. 'ಅನ್ಯಾರ್ಥೇ' ಎಂದರೆ ಸಮಸ್ಯಮಾನಪದಾತಿರಿಕ್ತ 'ಪದಾರ್ಥೇ' ಎಂದರ್ಥವು. ಇದು ಸಮಸ್ಯಮಾನ ಪೂರ್ವೋತ್ತರಪದಗಳಿಗೆ ವಿಶೇಷಣವು. 'ಬಹುವ್ರೀಹಿ' ಎಂಬುದು ಸಂಜ್ಞಾಬೋಧಕವು. 'ನಿತ್ಯಂ' ಎಂಬುದು ಬಹುಳಪದಾನುವೃತ್ತಿವ್ಯಾವರ್ತಕವು. ತಥಾಚ — ಸಮಸ್ಯಮಾನಪದಾತಿರಿಕ್ತ ಪದಾರ್ಥದಲ್ಲಿರುವ ಸಮಾನಾಧಿಕರಣ ವಿಶೇಷಣವಾಚಕವಾದ ಸುಬಂತವು ಸಮಾನಾಧಿಕರಣ ವಿಶೇಷ್ಯವಾಚಕ ಸುಬಂತೋತ್ತರಪದದೊಡನೆ ನಿತ್ಯವಾಗಿ ಸಮಸ್ಯಮಾನವಾಗುವುದು. ಅದು ಬಹುವ್ರೀಹಿಯೆನಿಸಿಕೊಳ್ಳುವುದು—ಎಂದು ಸೂತ್ರಾರ್ಥವಾಗಲು 'ಕುಡುವಿಲ್ಲಂ' ಮೊದಲಾದುವು ಸಿದ್ಧಿಸುವುವು. ಹೇಗೆಂದರೆ — 'ಕೊಂಕಿದುದು ಬಿಲ್ ಆವಂಗೆ' ಎಂಬ ವಿಗ್ರಹವಾಕ್ಯದಲ್ಲಿ 'ಕೊಂಕಿದುದು,' ಎಂಬುದು ಪೂರ್ವಪದವು 'ಬಿಲ್' ಎಂಬುದರೊಡನೆ ಸಮಾನಾಧಿಕರಣವಿಶೇಷಣವು. 'ಬಿಲ್' ಎಂಬುದು ಉತ್ತರಪದವು; ಅಂತಹ ವಿಶೇಷ್ಯವು. 'ಆವಂಗೆ' ಎಂಬುದು ಅನ್ಯಪದವು. 'ಕುಡುವಿಲ್ಲಂ' ಎಂಬುದು ಸಮಾಸವು. ಹೀಗೆಯೇ ಎಲ್ಲಾ ಉದಾಹರಣೆಗಳಲ್ಲಿಯೂ ಊಹಿಸಿಕೊಳ್ಳುವುದು. 'ಕುಡುವಿಲ್ಲಂ' ಎಂಬಲ್ಲಿ — '**ಕೊಂಕೋಃ ಕುಡುಃ || ೩೭೨ ||**' ಎಂಬ ಸೂತ್ರದಿಂದ 'ಕುಡು' ಎಂಬ ಆದೇಶವು ಬಂದು — '**ಅಬ್ಬಹುವ್ರೀಹೇಃ || ೩೨೭ ||**' ಎಂಬ ಸೂತ್ರದಿಂದ ಅ ಕಾರ ರೂಪವಾದ ಸಮಾಸಾಂತಪ್ರತ್ಯಯವು ಬಂದು ಇರುವುದು. ಇದಕ್ಕೆ 'ಮನ್ಮಥ'ನೆಂದರ್ಥವು. ಹೀಗೆಯೇ ಲೋಕದಲ್ಲಿ ವಕ್ರಧನು ಮನ್ಮಥನೆಂದು ಪ್ರಸಿದ್ಧಿ ಇರುವದು. 'ಕಡುಚಾಗಿ' ಎಂಬಲ್ಲಿ 'ಕಡಿದು' ಎಂಬ ಪೂರ್ವಪದದ ಉಪಾಂತ್ಯಸ್ವರಾದಿಗೆ ಲೋಪವೂ — '**ಕಿಱಕ್ಕ ಕುರ್ವ್ಯಂಜನೇ || ೩೪೦ ||**' ಎಂಬ ಸೂತ್ರದಿಂದ ಕುರಾಗಮವೂ '**ಇಶ್ಚಾಗಾದಿಭ್ಯಃ || ೩೭೯ ||**' ಎಂಬ ಸೂತ್ರದಿಂದ ಸಮಾಸಾಂತವಾದ 'ಇ' ಪ್ರತ್ಯಯವೂ ಬಂದಿರುವುದು. ಹೀಗೆಯೇ ಉಳಿದ ಉದಾಹರಣೆಗಳಲ್ಲಿಯೂ ಆಯಾ ಸೂತ್ರಪರ್ಯಾಲೋಚನೆಯಿಂದ ಕಾರ್ಯಪ್ರವೃತ್ತಿಯನ್ನು ಹೇಳಿ ಸಾಧುತ್ವವನ್ನು ತಿಳಿಯುವುದು. ಇಲ್ಲಿ 'ಅನ್ಯಾರ್ಥೇ' ಎಂದು ಹೇಳಿರುವುದರಿಂದ 'ಕಡುಚಾಗಂ, ಕುಡುವಿಲ್' ಮೊದಲಾದುವು ಸಮಾನಾಧಿಕರಣ ವಿಶೇಷಣ-ವಿಶೇಷ್ಯ ಭಾವವನ್ನು ಹೊಂದಿದ್ದರೂ ಅನ್ಯಪದಾರ್ಥದಲ್ಲಿಲ್ಲವಾದುದರಿಂದಲೂ ವಿಶೇಷಣವೆಂದು ಹೇಳಿರುವುದರಿಂದ 'ಬಿಲ್, ಕೊಂಕಿದುದು, ಆವಂಗೆ' ಮೊದಲಾದ ಪ್ರಯೋಗಗಳಲ್ಲಿ ವಿಶೇಷ್ಯವು ಪೂರ್ವಪದವಾಗಿರುವುದರಿಂದಲೂ 'ಏಕಾರ್ಥೇನ' ಎಂದು ಹೇಳಿರುವುದರಿಂದ 'ಆನೆಯ ಕೊಂಬು ಈತಂಗೆ' ಮೊದಲಾದ ಪ್ರಯೋಗಗಳಲ್ಲಿ ವ್ಯಧಿಕರಣ ವಿಶೇಷಣವಾಗಿರುವುದರಿಂದಲೂ ಬಹುವ್ರೀಹಿ ಸಮಾಸವು ಬರುವುದಿಲ್ಲವೆಂದು ತಿಳಿಯಬೇಕು. ಈ ಬಹುವ್ರೀಹಿಸಂಜ್ಞೆಗೆ '**ಅಬ್ಬಹುವ್ರೀಹೇಃ**' ಮೊದಲಾದ ಬಹುವ್ರೀಹಿಪದಘಟಿತವಾದ ಸೂತ್ರಗಳಲ್ಲಿ ಪ್ರಯೋಜನವಿರುವುದು.

**ಅವತಾರಿಕೆ ೩೧೧**

ಪೂರ್ವಸಮಾನಾಧಿಕರಣ ವಿಶೇಷಣ ವಿಶೇಷ್ಯಭಾವಾಪನ್ನಗಳಾದ ಪೂರ್ವೋತ್ತರಪದಗಳಿಗೆ ಬಹುವ್ರೀಹಿಸಮಾಸವು ವಿಧಿಸಲ್ಪಟ್ಟಿತು. ಈಗ ವ್ಯಧಿಕರಣಪದಗಳಿಗೂ ವಿಧಿಸುತ್ತಾನೆ.

**ಸೂತ್ರಂ || ಒಳಾ || ೩೧೧ ||**

**ಅರ್ಥ || ಸುಬಂತವಾದ ಪೂರ್ವಪದವು ಒಳಂತೋತ್ತರಪದದೊಡನೆ ಅನ್ಯಪದಾರ್ಥವು ಗಮ್ಯಮಾನವಾಗಿರಲು ನಿತ್ಯವಾಗಿ ಸಮಸ್ಯಮಾನವಾಗುವುದು. ಅದು ಬಹುವ್ರೀಹಿಸಂಜ್ಞಕವಾಗುವುದು.**

**ಉದಾಹರಣೆ** || 'ಬಾಂಬೊಚ್ಚಂ ತಲೆಯೊಳಾವಂಗಾತಂ — ಬಾಂಬೊಚ್ಚದಲೆಯಂ || ಬಗ್ಗದೊವಲ್ ಉಡಿಯೊಳಾವಂಗಾತಂ — ಬಗ್ಗದೊವಲುಡೆ[1]ಯಂ || ಕಿಚ್ಚುಕಣ್ಣೊಳಾವಂಗಾತಂ — ಕಿಚ್ಚುಗಣ್ಣಂ ||' ಮೊದಲಾದ ವ್ಯಧಿಕರಣ-ವಿಶೇಷಣ ವಿಶೇಷ್ಯಭಾವವು ತೋರಿ ಅನ್ಯಪದಾರ್ಥವೂ ತೋರುವುವೆಲ್ಲಾ ಇದಕ್ಕೆ ಲಕ್ಷ್ಯಗಳು.

**ವಿಚಾರ ೩೧೧**

**ಈ** ಸೂತ್ರದಲ್ಲಿ — 'ಒಳಾ' ಎಂಬ ಸಪ್ತಮೀವಿಭಕ್ತಿಬೋಧಕ ತೃತೀಯಾಂತಪದವೊಂದೇ ಇರುವುದು. 'ಸುಬಂತ' ಮೊದಲಾದುವು ಪೂರ್ವದಿಂದ ಅನುವರ್ತಿತವಾಗುವುವು. ತಥಾಚ — ಸುಬಂತ ಪೂರ್ವಪದವು ಒಳಂತೋತ್ತರಪದದಿಂದ ಬಹುವ್ರೀಹಿಸಮಾಸವಾಗುವುದೆಂದು ಫಲಿತವಾಗಲು 'ಬಾಂಬೊಚ್ಚದಲೆಯಂ' ಮೊದಲಾದುವು ಸಿದ್ಧಿಸುವುವು.

**ಈ** ಸೂತ್ರವು ಲೋಕದಲ್ಲಿ ಸಮಾನಾಧಿಕರಣ ಬಹುವ್ರೀಹಿಸಮಾಸವೇ ಪ್ರಚುರವಾಗಿ ಪ್ರಯೋಗಿಸಲ್ಪಡುವುದರಿಂದ ವ್ಯಧಿಕರಣ ಬಹುವ್ರೀಹಿಯು ಅಸಾಧುವೆಂದು ತೋರಲು ಅದಕ್ಕೂ ಕೆಲವೆಡೆಯಲ್ಲಿ ಸಾಧುತ್ವವುಂಟೆಂದು ಬೋಧಿಸುವುದಕ್ಕಾಗಿ ಪ್ರಾರಂಭಿಸಲ್ಪಟ್ಟಿರುವುದು. ಆದರೆ ಪೂರ್ವಸೂತ್ರದಲ್ಲಿ 'ಏಕಾರ್ಥೇನ' ಎಂಬುದನ್ನು ಸಂಬಂಧಿಸದೆ ಸಾಮಾನ್ಯವಾಗಿ ವಿಶೇಷಣ ವಿಶೇಷ್ಯವಾಚಕ ಪೂರ್ವೋತ್ತರಪದಗಳು ಅನ್ಯಪದಾರ್ಥದಲ್ಲಿದ್ದರೆ ಬಹುವ್ರೀಹಿಸಮಾಸವಾಗುವುದು ಎಂದು ವ್ಯಾಖ್ಯಾನಮಾಡಲು ವ್ಯಧಿಕರಣಸಮಾನಾಧಿಕರಣೋಭಯಬಹುವ್ರೀಹಿಯೂ ಸಿದ್ಧಿಸುತ್ತಿರಲು ಈ ಸೂತ್ರವೇ ವ್ಯರ್ಥವೆಂದು ತೋರುವುದು. ಆದಾಗ್ಯೂ ಲೋಕದಲ್ಲಿ ಸಮಾನಾಧಿಕರಣಬಹುವ್ರೀಹಿಯೇ ಪ್ರಚುರವಾಗಿರುವುದೆಂದೂ ವ್ಯಧಿಕರಣಬಹುವ್ರೀಹಿಯು ಕ್ವಾಚಿತ್ಕವೆಂದೂ ಅದರಲ್ಲಿಯೂ ಸಪ್ತಮ್ಯಂತೋತ್ತರಪದಕವಾದುದೇ ಪ್ರಾಯಶಃ ಇರುವುದೆಂದೂ ತೋರಿಸಲು ಈ ಸೂತ್ರವು ಪ್ರಾರಂಭಿಸಲ್ಪಟ್ಟಿರುವುದೆಂದು ತಿಳಿಯಬೇಕು.

ಇದೇ ರೀತಿಯಾಗಿ **ಪಾಣಿನಿ** ವ್ಯಾಕರಣದಲ್ಲಿಯೂ — '**ಅನೇಕಮನ್ಯಪದಾರ್ಥೇ**' ಎಂಬ ಸೂತ್ರದಿಂದ ಸಮಾನಾಧಿಕರಣ ಬಹುವ್ರೀಹಿಯನ್ನು ಸಾಮಾನ್ಯವಾಗಿ ಬೋಧಿಸಿ ಪೂರ್ವನಿಪಾತ ಪ್ರಕರಣದಲ್ಲಿ ಹೇಳಿರುವ — ಸಪ್ತಮೀವಿಶೇಷಣವೇ '**ಬಹುವ್ರೀಹೌ**' ಎಂಬ ಸೂತ್ರದಿಂದ ಬಹುವ್ರೀಹಿಸಮಾಸದಲ್ಲಿ ಸಪ್ತಮ್ಯಂತಕ್ಕೆ ಪೂರ್ವನಿಪಾತಬರುವುದೆಂದು ಬೋಧಿಸಿರುವುದರಿಂದ ವ್ಯಧಿಕರಣಬಹುವ್ರೀಹಿಯುಂಟೆಂದು ತೋರುವುದು. ಅಲ್ಲಿ ಸಪ್ತಮ್ಯಂತ ಪೂರ್ವಪದಕವಾಗಿಯೂ ಬರುವುದು. ಇಲ್ಲಿ ಸಪ್ತಮ್ಯಂತವು ಉತ್ತರಪದವಾಗಿರುವುದು. ಮತ್ತು ಅಲ್ಲಿ — '**ಜ್ಞಾಪಕಸಿದ್ಧಂ ನ ಸರ್ವತ್ರ**' ಎಂಬ ನ್ಯಾಯದಿಂದ ವ್ಯಧಿಕರಣ ಬಹುವ್ರೀಹಿಯು ಕ್ವಾಚಿತ್ಕವೆಂದೂ —

**ಅಸತಿ ಬಾಧಕೇ ಜ್ಞಾಪಕಾನಾಂ ಸಾಮಾನ್ಯಾಪೇಕ್ಷತ್ವಂ ಸತಿ ತು ವಿಶೇಷಾಪೇಕ್ಷತ್ವಂ**

ಎಂಬ ನಿಯಮದಿಂದ ಸಾಮಾನ್ಯವಾಗಿ ಕ್ವಚಿತ್ ವಿಭಕ್ತ್ಯಂತರದಿಂದಲೂ ವ್ಯಧಿಕರಣ ಬಹುವ್ರೀಹಿಯನ್ನಂಗೀಕರಿಸಬಹುದೆಂದು ಹೇಳಿರುವರು. ಇಲ್ಲಿ ಅಂತಹ ಜ್ಞಾಪಕಗಳಾವುವೂ ಇಲ್ಲದಿದ್ದರೂ ಪ್ರಯೋಗಾನುಸಾರವಾಗಿ ಬಹುಳಗ್ರಹಣದಿಂದಲೇ ಅಂತಹ ಪ್ರಯೋಗಗಳು ಸಿದ್ಧಿಸುವುವೆಂದು ತಿಳಿಯುವುದು.

---

**ಪಾಠಾಂತರ ೧: ಉಡಿ**

ಇಲ್ಲಿ ಉದಾಹರಿಸಿರುವ — ' ಬಾಂಬೊಳ್ಚವರೆಯಂ ' ಎಂಬುದಕ್ಕೆ—' ಆಕಾಶಗಂಗೆಯು ತಲೆಯಲ್ಲಿರುವ ' ನೆಂದೂ ' ಬಗ್ಗ ದೊವಲುಡೆಯಂ ' ಎಂಬುದಕ್ಕೆ 'ವ್ಯಾಘ್ರಚರ್ಮಧಾರಿ' ಯೆಂದೂ ' ಕಿಚ್ಚುಗಣ್ಣಂ ' ಎಂಬುದಕ್ಕೆ ' ಅಗ್ನಿಲೋಚನ ' ನೆಂದೂ ಅರ್ಥವು. ಇದಕ್ಕೆ ಅನ್ಯಪದಾರ್ಥವು ಈಶ್ವರನೆಂದು ತಿಳಿಯಬೇಕು. ಇಲ್ಲಿ ಬಹುವ್ರೀಹಿಯೆಲ್ಲಾ ವಿಶೇಷಣವೇ ಆಗಿರುವುದು. ಆದಾಗ್ಯೂ- ' ವಿಶೇಷಣಮಾತ್ರಪ್ರಯೋಗೇ ವಿಶೇಷ್ಯಪ್ರತಿಪತ್ತಿಃ ' ಎಂಬ ನ್ಯಾಯದಿಂದ ವಿಶೇಷ್ಯವನ್ನು ಪ್ರಯೋಗಿಸದಿದ್ದರೂ ಇಲ್ಲ ವಿಶೇಷ್ಯದ ಅರ್ಥವು ಪ್ರಸಿದ್ಧವಾಗಿ ತೋರುವುವರಿಂದ ಇವೆಲ್ಲಾ ಈಶ್ವರಬೋಧಕಗಳೆಂದು ಹೇಳುವುದು.

**ಅವತಾರಿಕೆ ೩೧೨**

ಹಿಂದೆ ಸಾಮಾನ್ಯವಾಗಿ ಸಮಾನಾಧಿಕರಣವ್ಯಧಿಕರಣವಿಶೇಷಣ-ವಿಶೇಷ್ಯಭಾವಾಪನ್ನಗಳಾದುವುಗಳಿಗೆ ಬಹುವ್ರೀಹಿಸಮಾಸವು ವಿಧಿಸಲ್ಪಟ್ಟಿತು. ಈಗ ಸಮಾನಸ್ವರೂಪಗಳಾದ ಶಬ್ದಗಳಿಗೆ ಅರ್ಥವಿಶೇಷದಲ್ಲಿ ಬಹುವ್ರೀಹಿಸಮಾಸವನ್ನು ವಿಧಿಸಲು ಪ್ರಾರಂಭಿಸುತ್ತಾನೆ.

**ಸೂತ್ರಂ || ಮಿಥೋ ಗ್ರಹಣೇ ಪ್ರಹರಣೇ ಚ ಯುದ್ಧೇ ಸರೂಪಂ || ೩೧೨ ||**

**ಅರ್ಥ || ಪರಸ್ಪರ ಗ್ರಹಣವಿಷಯಕವಾದ ಅರ್ಥವನ್ನು ಬೋಧಿಸುವ ಸಮಾನಶ್ರುತಿಕವಾದ ಸುಬಂತಶಬ್ದವೂ ಪರಸ್ಪರ ಪ್ರಹರಣಕ್ಕೆ ಸಾಧಕವಾದರ್ಥಬೋಧಕವಾದ ಸಮಾನಶ್ರುತಿಕವಾದ ಸುಬಂತವೂ ಇಂತಹ ಅರ್ಥಗಳಲ್ಲಿಯೇ ಪ್ರವರ್ತಿಸುವ ಸಮಾನಶ್ರುತಿಕ ಸುಬಂತೋತ್ತರಪದದೊಡನೆ ಈ ಸಮಸ್ಯಮಾನಪದಾತಿರಿಕ್ತಪದಾರ್ಥವು ಯುದ್ಧರೂಪವಾಗಿದ್ದರೆ ನಿತ್ಯವಾಗಿ ಸಮಸ್ಯಮಾನವಾಗುವುದು. ಈ ಸಮಾಸವು ಬಹುವ್ರೀಹಿಸಂಜ್ಞಕವಾಗುವುದು.**

**ಉದಾಹರಣೆ ||** ' ಹೆಲ್ಲಮಂ ಹೆಲ್ಲಮನೋರೊಂದಂ ಪಿಡಿವುದಾವ ಯುದ್ಧದೊಳದು — ಹೆಲ್ಲಾಹೆಲ್ಲಿ; ಕೋಲಿಂ ಕೋಲಿಂ ಪೊಯ್ವುದಾವ ಯುದ್ಧದೊಳದು — ಕೋಲಾಕೋಲಿ || ' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೧೨**

ಈ ಸೂತ್ರದಲ್ಲಿ — ' ಮಿಥಃ, ಗ್ರಹಣೇ, ಪ್ರಹರಣೇ, ಚ, ಯುದ್ಧೇ, ಸರೂಪಂ ' ಎಂದು ಆರು ಪದಗಳಿರುವುವು. ಪೂರ್ವದಿಂದ ' ಸುಪ್, ಸುಪಾ, ಅನ್ಯಾರ್ಥೇ, ಬಹುವ್ರೀಹಿರ್ನಿತ್ಯಂ ' ಎಂಬಿವು ಅನುವರ್ತಿಸಲ್ಪಡುವುವು. ' ಮಿಥಃ ' ಎಂದರೆ ಪರಸ್ಪರವೆಂದರ್ಥವು. 'ಗ್ರಹಣೇ' ಎಂದರೆ ' ಗೃಹ್ಣಂತಿ ಯಸ್ಮಿನ್ ' ಎಂಬ ವಿಗ್ರಹವನ್ನು ಮಾಡಿ ಅಧಿಕರಣಾರ್ಥದಲ್ಲಿ ' ಅನ ' ಪ್ರತ್ಯಯುವನ್ನು ಮಾಡಿ ಅದರ ಮೇಲೆ ಸಪ್ತಮೀವಿಭಕ್ತಿಯನ್ನು ಮಾಡಲು ಗ್ರಹಣವಿಷಯದಲ್ಲಿ ಎಂದರ್ಥವಾಗುವುದು. ' ಪ್ರಹರಣೇ ' ಎಂದರೆ ' ಪ್ರಹರಂತಿ ಯೇನ ' ಎಂಬ ವ್ಯುತ್ಪತ್ತಿಯಿಂದ ಪ್ರಹರಣಸಾಧಕವೆಂಬರ್ಥದಲ್ಲಿ ಎಂದರ್ಥವಾಗುವುದು. 'ಚ' ಶಬ್ದವು ಸಮುಚ್ಚಯಾರ್ಥಕವು. ' ಯುದ್ಧೇ ' ಎಂಬುದು ಅನ್ಯಪದಾರ್ಥಬೋಧಕವು. ' ಸರೂಪಂ ' ಎಂಬುದು ಸಮಸ್ಯಮಾನಪದಗಳಿಗೆ ಸಾರೂಪ್ಯವನ್ನು ಬೋಧಿಸುವುದು. ' ಸುಪ್ ' ಎಂಬುದು ವಿಶೇಷ್ಯವು; ' ಸುಪಾ ' ಎಂಬುದು ಪ್ರಕರಣಸಿದ್ಧವಾದ ಉತ್ತರಪದಕ್ಕೆ ವಿಶೇಷಣವು. ಇವೆರಡೂ ಪ್ರತ್ಯಯಬೋಧಕಗಳಾದುದರಿಂದ ತದಂತಬೋಧಕಗಳಾಗುವುವು. ತಥಾಚ — ಪರಸ್ಪರಗ್ರಹಣವಿಷಯಕವಾದ ಪದಾರ್ಥಬೋಧಕ

ವಾಗಿಯೂ ಪರಸ್ಪರಪ್ರಹರಣಸಾಧಕವಾದ ಪದಾರ್ಥಬೋಧಕವಾಗಿಯೂ ಇರುವ ಸುಬಂತ ಶಬ್ದಗಳು ಸರೂಪಗಳಾಗಿದ್ದರೆ ಅವು ಅದೇ ವಿಷಯದಲ್ಲಿ ಪ್ರಯುಜ್ಯಮಾನವಾದ ಸಮಾನರೂಪಗಳಾದ ಸುಬಂತೋತ್ತರಪದಗಳೊಡನೆ ಯುದ್ಧರೂಪಾನ್ಯಪದಾರ್ಥವು ತೋರುತ್ತಿರಲು ನಿತ್ಯವಾಗಿ ಸಮಾಸ ಬರುವುದು. ಅದಕ್ಕೆ ಬಹುವ್ರೀಹಿಯೆಂದು ಹೆಸರೆಂದು ಸೂತ್ರಾರ್ಥವಾಗಲು 'ಹೆಲ್ಲಾಹೆಲ್ಲಿ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು. ಇಲ್ಲಿ 'ಹೆಲ್ಲ' ಶಬ್ದವು ಶರೀರಾರ್ಥಕವು. ಅಥವಾ 'ಮುಂದಲೆ' ಎಂಬರ್ಥವುಳ್ಳುದು. ಇದನ್ನು ಪರಸ್ಪರ ಹಿಡಿದು ಪ್ರವೃತ್ತವಾದ ಯುದ್ಧದಲ್ಲಿ 'ಹೆಲ್ಲಮಂ ಹೆಲ್ಲಮಂ ಒರೊಂದಂ ಪಿಡಿವುದಾವ ಯುದ್ಧದೊಳದು' ಎಂದು ವಿಗ್ರಹವನ್ನು ಮಾಡಲು ಇದರಿಂದ ಸಮಾಸಸಂಜ್ಞೆ ಬಂದು ವಿಭಕ್ತಿಲೋಪವಾಗಿ — '**ಅಶ್ ಚ ಯುದ್ಧೇ ಪೂರ್ವಪದಸ್ಯ ॥ ೩೩೦ ॥**' ಎಂಬ ಸೂತ್ರದಿಂದ ಸಮಾಂತವಾದ 'ಇ' ಪ್ರತ್ಯಯವನ್ನೂ ಪೂರ್ವಪದಕ್ಕೆ ಆ ಕಾರಾಗಮವನ್ನೂ ಮಾಡಲು 'ಹೆಲ್ಲಾಹೆಲ್ಲಿ' ಎಂದು ಸಿದ್ಧಿಸುವುದು. ಹೀಗೆಯೇ 'ಕೋಲಾಕೋಲಿ' ಮೊದಲಾದುವೂ ಸಿದ್ಧಿಸುವುವೆಂದು ತಿಳಿಯುವುದು. ಈ ಸೂತ್ರದಲ್ಲಿ 'ಮಿಥಃ' ಎಂದು ಹೇಳಿರುವುದರಿಂದ 'ಹೆಲ್ಲಮಂ ಹೆಲ್ಲಮಂ ಪಿಡಿವುದು ಯುದ್ಧದೊಳ್' ಮೊದಲಾದ ಪ್ರಯೋಗಗಳಲ್ಲಿ ವೀಪ್ಸೆ ತೋರುವುದೇ ಅಲ್ಲದೆ ಪರಸ್ಪರವೆಂಬರ್ಥವು ತೋರುವುದಿಲ್ಲವಾದುದರಿಂದ ಈ ಸಮಾಸವು ಬರುವುದಿಲ್ಲ. 'ಗ್ರಹಣೇ ಪ್ರಹರಣೇ ಚ' ಎಂದು ಹೇಳಿರುವುದರಿಂದ — 'ಹೆಲ್ಲಮಂಹೆಲ್ಲಮಂಮೆಟ್ಟಿಮಾಳ್ಪಯುದ್ಧಂ' ಮೊದಲಾದ ಪ್ರಯೋಗಗಳಲ್ಲಿಯೂ 'ಯುದ್ಧೇ' ಎಂದು ಹೇಳಿರುವುದರಿಂದ — 'ಕಯ್ಯಂ ಕಯ್ಯನೊರೊಂದಂ ಪಿಡಿದುಮಾಳ್ಪಬಿನದಂ' ಮೊದಲಾದ ಪ್ರಯೋಗಗಲ್ಲಿಯೂ 'ಸರೂಪಂ' ಎಂದು ಹೇಳಿರುವುರಿಂದ — 'ಕಯ್ಯಂ ಕಾಲನೊರೊಂದಂ ಪಿಡಿದು ಮಾಳ್ಪಯುದ್ಧಂ' ಮೊದಲಾದ ಪ್ರಯೋಗಗಳಲ್ಲಿಯೂ ಉಕ್ತಲಕ್ಷಣಗಳಿಲ್ಲವಾದುದರಿಂದ ಈ ಸಮಾಸವಿಧಿಯು ಪ್ರವರ್ತಿಸುವುದಿಲ್ಲವೆಂದು ತಿಳಿಯಬೇಕು.

ಈ ವಿಷಯದಲ್ಲಿ **ದರ್ಪಣಕಾರನು**—

ಇತರೇತರಕ್ರಿಯಾಸಂ
ಹತಮುದು ತಾನಾವುದಲ್ಲಿ ಮತ್ತೆ ಬಹುವ್ರೀ
ಹಿ ತಗುಳ್ಗುಮಾತ್ಯವಿಧಿ ಸಂ
ಗತಮಾದಿಪದಾಂತ್ಯದಲ್ಲಿಚರಮುಕ್ಕಿತ್ವಂ (ಸೂತ್ರ ೧೮೫)

ಎಂಬ ಸೂತ್ರವನ್ನು ಮಾಡಿ — 'ಖಡ್ಗಾಖಡ್ಗಿ, ಮುಷ್ಟಾಮುಷ್ಟಿ, ಹೆಲ್ಲಾಹೆಲ್ಲಿ, ದಾಳಾದಾಳಿ, ದೆಖ್ಖಾದೆಖ್ಖಿ, ಹಾಣಾಹಾಣಿ, (ಹಣಾಹಣಿ)' ಮೊದಲಾದುವುಗಳನ್ನೂ ಉದಾಹರಿಸಿರುವನು.

ಈ ಸೂತ್ರದಲ್ಲಿ ಉದಾಹರಿಸಿರುವ ಪ್ರಯೋಗಗಳಲ್ಲಿ ಸಮಾನಾಧಿಕರಣವಿಶೇಷಣ-ವಿಶೇಷ್ಯಭಾವವಾಗಲಿ ವ್ಯಧಿಕರಣವಿಶೇಷಣ-ವಿಶೇಷ್ಯಭಾವವಾಗಲಿ ಆವುದೂ ತೋರುವುದಿಲ್ಲವಾದುದರಿಂದ ಪೂರ್ವಸೂತ್ರದಿಂದ ಸಮಾಸವು ಅಪ್ರಾಪ್ತವಾಗಲು ಈ ಸೂತ್ರವು ಪ್ರಾರಂಭಿಸಲ್ಪಟ್ಟಿತೆಂದು ತಿಳಿಯಬೇಕು. ಹೀಗೆಯೇ ಉತ್ತರಸೂತ್ರವನ್ನೂ ತಿಳಿಯುವುದು. ಸಾಮರ್ಥ್ಯೋಪಪತ್ತಿಯಾದರೂ ಸಮಾಸವಿಧಿಬಲಾತ್ ಯಥಾಕಥಂಚಿತ್ ಕಲ್ಪಿಸಿ ವೃತ್ತಿಯನ್ನು ಹೇಳಬೇಕು.

**ಅವತಾರಿಕೆ ೩೧೩**

ಹೀಗೆಯೇ ಅರ್ಥವಿಶೇಷದಲ್ಲಿ ಬಹುವ್ರೀಹಿಸಮಾಸವಿಧ್ಯಂತರವನ್ನು ಹೇಳುತ್ತಾನೆ.

**ಸೂತ್ರಂ || ವಾ ವಾರಾರ್ಥೇ ಸಂಖ್ಯೇಯೇ ಸಂಖ್ಯಯಾ ಸಂಖ್ಯಾ || ೩೧೩ ||**

**ಅರ್ಥ || ವಿಕಲ್ಪ, ಸಂಶಯ ಎಂಬರ್ಥದಲ್ಲಿಯೂ ವಾರಾರ್ಥದಲ್ಲಿಯೂ ಸಂಖ್ಯಾವಾಚಿಯಾದ ಸುಬಂತವು ಸಂಖ್ಯೇಯಾರ್ಥದಲ್ಲಿರುವ ಸಂಖ್ಯಾವಾಚಿಯಾದುತ್ತರಪದದೊಡನೆ ನಿತ್ಯವಾಗಿ ಸಮಸ್ಯಮಾನವಾಗುವುದು.**

**ಉದಾಹರಣೆ ||** ' ಎರಡು ಮೇಣ್ ಮೂಱು ಮೇಣ್ — ಎರಲ್ಮೂರು || ನಾಲ್ಕು ಮೇಣ್ ಅಯ್ದು ಮೇಣ್—ನಾಲ್ಕೈದು || ಎರಡೋ ಮೂಱೋ — ಎರಲ್ಮೂಱು|| ನಾಲ್ಕೋ ಅಯ್ದೋ — ನಾಲ್ಕೈದು || ಎರಲ್ಬಾರಿ ಅಯ್ದು — ಈರಯ್ದು || ಎರಳ್ಬಾರಿ ಪತ್ತು — ಇಪ್ಪತ್ತು || ' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೧೩**

ಈ ಸೂತ್ರದಲ್ಲಿ — ' ವಾ ವಾರಾರ್ಥೇ, ಸಂಖ್ಯೇಯೇ, ಸಂಖ್ಯಯಾ, ಸಂಖ್ಯಾ ' ಎಂದು ನಾಲ್ಕು ಪದಗಳಿರುವುವು. ' ವಾ ವಾರಾರ್ಥೇ ' ಎಂದರೆ — ' ವಾ ' ಎಂಬುದಕ್ಕೂ ' ವಾರ ' ಎಂಬುದಕ್ಕೂ ದ್ವಂದ್ವಸಮಾಸವನ್ನು ಮಾಡಿ ' ಅರ್ಥ ' ಶಬ್ದದೊಡನೆ ಬಹುವ್ರೀಹಿಸಮಾಸವನ್ನು ಮಾಡಲು **' ದ್ವಂದ್ವಾಂತೇ ಶ್ರೂಯಮಾಣಂ ಪದಂ ಪ್ರತ್ಯೇಕಮಭಿಸಂಬಧ್ಯತೇ '** ಎಂಬ ನ್ಯಾಯದಿಂದ ' ಅರ್ಥ ' ಶಬ್ದಕ್ಕೆ ದ್ವಂದ್ವಘಟಕಯಾವತ್ಪದಾರ್ಥದಲ್ಲಿಯೂ ಅನ್ವಯವು ಬರುವುದರಿಂದ ' ವಾರ್ಥೇ, ವಾರಾರ್ಥೇ ' ಎಂದು ಅರ್ಥವಾಗುವುದು. ' ವಾರ್ಥ ' ವೆಂದರೆ ವಿಕಲ್ಪ, ಸಂಶಯಗಳೆಂದರ್ಥವು. ' ವಾರಾರ್ಥ ' ವೆಂದರೆ ಆವೃತ್ತಿಯೆಂದರ್ಥವು. ಇದೂ ಸೂತ್ರದ ಕೊನೆಯಲ್ಲಿರುವ 'ಸಂಖ್ಯಾ' ಎಂಬುದೂ ಅನುವೃತ್ತವಾದ 'ಸುಬಂತಂ' ಎಂಬುದಕ್ಕೆ ವಿಶೇಷಣಗಳು. 'ಸಂಖ್ಯೇಯೇ' ಎಂದರೆ — ' ಒಂದು, ಎರಡು, ಮೂರು ' ಮೊದಲಾದ ಎಣಿಕೆಗೆ ವಿಷಯವಾದುದು. ಇದು ಪೂರ್ವಪದಕ್ಕೆ ವಿಶೇಷಣವಲ್ಲ. ' ಸಂಖ್ಯಯಾ ' ಎಂಬುದಕ್ಕೆ ವಿಶೇಷಣವು. ' ಸಂಖ್ಯಯಾ ' ಎಂದರೆ — ಸಂಖ್ಯಾವಾಚಿಕಗಳಾಗಿ ಪ್ರಸಿದ್ಧಗಳಾದ ' ಒಂದೆರಡು ' ಮೊದಲಾದ ಶಬ್ದದಿಂದ ಎಂದರ್ಥವು. ತಥಾಚ — ವಿಕಲ್ಪಸಂಶಯಾರ್ಥವಾರಾರ್ಥಗಳು ತೋರುವಾಗ ಸಂಖ್ಯಾವಾಚಿ ಸುಬಂತವು ಸಂಖ್ಯೇಯಾರ್ಥಕ ಸಂಖ್ಯಾವಾಚಿಸುಬಂತದೊಡನೆ । ನಿತ್ಯವಾಗಿ ಸಮಾಸವು ಬರುವುದು—ಎಂದು ಸೂತ್ರಾರ್ಥವಾಗಲು ' ಎರಲ್ಮೂರು ' ಮೊದಲಾದುವು ಸಿದ್ಧಿಸುವುವು.

ಇಲ್ಲಿ ' ವಾರಾರ್ಥೇ ' ಎಂದು ಹೇಳುವುದರಿಂದ — ' ಎರಡುಂ, ಮೂಱುಂ; ಎರಡೆ, ಮೂಱೆ ' ಮೊದಲಾದ ಸಮುಚ್ಚಯನಿರ್ಧಾರಣಾರ್ಥಗಳು ತೋರುವ ಪ್ರಯೋಗಗಳಲ್ಲಿಯೂ ' ಸಂಖ್ಯೇಯೇ ' ಎಂದು ಹೇಳಿರುವುದರಿಂದ ' ಪಾರ್ವರನೂಱೋ, ಅಯ್ವತ್ತೋ ' ಮೊದಲಾದ ಪ್ರಯೋಗಗಳಲ್ಲಿಯೂ ' ಸಂಖ್ಯಯಾ ' ಎಂದು ಹೇಳಿರುವುದರಿಂದ ' ಆನೆ, ಎರಡೋ, ಕಲ್ಲೋ ' ಮೊದಲಾದ ಪ್ರಯೋಗಗಳಲ್ಲಿಯೂ ' ಸಂಖ್ಯಾ ' ಎಂದು ಹೇಳಿರುವುದರಿಂದ — ' ಕುದುರೆಯೋ, ಪತ್ತಾನೆಯೋ ' ಮೊದಲಾದ ಪ್ರಯೋಗಗಳಲ್ಲಿಯೂ ಈ ಸಮಾಸವಿಧಿಯು ಪ್ರವರ್ತಿಸುವುದಿಲ್ಲವೆಂದು ತಿಳಿಯಬೇಕು.

**ಅವತಾರಿಕೆ ೩೧೪**

ಪೂರ್ವದಲ್ಲಿ ಬಹುವ್ರೀಹಿಸಮಾಸವು ಹೇಳಲ್ಪಟ್ಟಿತು. ಈಗ ದ್ವಂದ್ವಸಮಾಸವನ್ನು ಹೇಳುತ್ತಾನೆ.

**ಸೂತ್ರಂ ‖ ದ್ವಂದ್ವಃ ಸಾಹಿತ್ಯೇ ‖ ೩೧೪ ‖**

**ಅರ್ಥ ‖ ಸುಬಂತವು ಸುಬಂತೋತ್ತರಪದದೊಡನೆ ಸಾಹಿತ್ಯವು ತೋರಲು ಬಹುಳವಾಗಿ ಸಮಾಸವು ಬರುವುದು. ಆ ಸಮಾಸವು ದ್ವಂದ್ವಸಂಜ್ಞಕವಾಗುವುದು.**

**ಉದಾಹರಣೆ** ‖ 'ಮರನುಂ ಗಿಡುವುಂ — ಮರಗಿಡುಗಳ್, ಅಳಿಯುಂ ಗಿಳಿಯುಂ — ಅಳಿಗಿಳಿಗಳ್, ಕರಿಯುಂ ತುರಗಮುಂ — ಕರಿತುರಗಂಗಳ್ ‖' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೧೪**

ಈ ಸೂತ್ರದಲ್ಲಿ — 'ದ್ವಂದ್ವಃ, ಸಾಹಿತ್ಯೇ' ಎಂದು ಎರಡು ಪದಗಳಿರುವುವು. 'ದ್ವಂದ್ವಃ' ಎಂಬುದು ವಿಹಿತವಾದ ಸಮಾಸಕ್ಕೆ ಸಂಜ್ಞೆಯನ್ನು ಬೋಧಿಸುವುದು. 'ಸಾಹಿತ್ಯೇ' ಎಂಬುದು — ವೃತ್ತಿಪದಗಳೊಡನೆ ಅದರ ಅರ್ಥಗಳಿಗೆ ಏಕಕಾಲದಲ್ಲಿ ಬೋಧನೆಯನ್ನುಂಟು ಮಾಡುವದೆಂಬರ್ಥಬೋಧಕವು. ತಥಾಚ — ಸಾಹಿತ್ಯವು ತೋರುತ್ತಿರಲು ಸುಬಂತವು ಸುಬಂತ ದೊಡನೆ ಸಮಾಸವಾಗುವುದು. ಇದು ದ್ವಂದ್ವಸಂಜ್ಞಕವಾಗುವುದೆಂದು ಸೂತ್ರಾರ್ಥವಾಗಲು 'ಮರ ಗಿಡುಗಳ್' ಮೊದಲಾದುವು ಸಿದ್ಧಿಸುವುವು. ಇಲ್ಲಿ 'ಸಾಹಿತ್ಯೇ' ಎಂದು ಹೇಳಿರುವುದರಿಂದ 'ಮರನುಂ, ಗಿಡುವುಂ' ಮೊದಲಾದ ವಾಕ್ಯಗಳಲ್ಲಿ ಸಹೋಕ್ತಿರೂಪಸಾಹಿತ್ಯವಿಲ್ಲವಾದುದರಿಂದ ಈ ಸಮಾಸವು ಬರುವುದಿಲ್ಲ. ಆದುದರಿಂದಲೇ ಇದನ್ನು ನಿತ್ಯಸಮಾಸವೆಂದು ಕೆಲವರು ಹೇಳುವರು. ದ್ವಂದ್ವಸಮಾಸಸ್ಥಲದಲ್ಲಿ ಇತರೇತರ ಸಂಕ್ರಾಂತಿಯಿಂದ ಕಥಂಚಿತ್ ಏಕಾರ್ಥಭಾವರೂಪ ಸಾಮರ್ಥ್ಯವನ್ನಂಗೀಕರಿಸಿ ಸಮಾಸಪ್ರವೃತ್ತಿಯನ್ನು ಹೇಳಬೇಕೆಂದು ಪೂರ್ವದಲ್ಲಿಯೇ ಹೇಳಲ್ಪಟ್ಟದೆ. ಈ ದ್ವಂದ್ವಸಂಜ್ಞೆಗೆ 'ಪರವದ್ದ್ವಂದ್ವಃ' ಮೊದಲಾದ ದ್ವಂದ್ವಪದಘಟಿತವಾದ ಸೂತ್ರಗಳಲ್ಲಿ ಪ್ರಯೋಜನವಿರುವುದೆಂದು ತಿಳಿಯುವುದು.

ಸಂಸ್ಕೃತ ವ್ಯಾಕರಣದಲ್ಲಿ —'**ಚಾರ್ಥೇ ದ್ವಂದ್ವಃ ‖ಪಾ. ೨-೨-೨೯‖**' ಎಂಬ ಸೂತ್ರವನ್ನು ಹೇಳಿ — ಸಮುಚ್ಚಯಾನ್ವಾಚಯೇತರೇತರಯೋಗಸಮಾಹಾರಗಳೆಂದು ಚಾರ್ಥಗಳು ನಾಲ್ಕು ಬಗೆಯಾಗಿರುವುವು. ಅವುಗಳಲ್ಲಿ — ಸಮುಚ್ಚಯಾನ್ವಾಚಯಗಳು ತೋರುವಾಗ ಸಾಮರ್ಥ್ಯ ವಿಲ್ಲವಾದುದರಿಂದ ಆ ಎರಡರ್ಥದಲ್ಲಿಯೂ ಸಮಾಸವಿಲ್ಲವೆಂದೂ ಇತರೇತರಯೋಗ ಸಮಾಹಾರಾರ್ಥಗಳಲ್ಲಿ ಸಮಾಸವು ಬರುವುದೆಂದೂ ಹೇಳಿರುವರು. ಇದರಿಂದ ದ್ವಂದ್ವಸಮಾಸವು ಇತರೇತರಯೋಗಸಮಾಹಾರಭೇದಗಳಿಂದ ಎರಡು ಭೇದವುಳ್ಳುದಾಗಿದೆ ಎಂದು ತೋರುವುದು. ಭಾಷೆಯಲ್ಲಿ ಹೀಗೆ ಸ್ಪಷ್ಟವಾಗಿ ನಿರೂಪಣೆಯನ್ನು ಮಾಡದಿದ್ದರೂ ಸಂಸ್ಕೃತದಂತೆ ಎರಡು ವಿಧವಾದ ದ್ವಂದ್ವಸಮಾಸವೂ ಉಂಟೆಂದು ಪ್ರಯೋಗದಿಂದ ಊಹಿಸಿಕೊಳ್ಳುವುದು.

**‖ ಇತಿ ಸರ್ವ ಸಮಾಸ ಪ್ರಕರಣಂ ಸಮಾಪ್ತಂ ‖**

## ॥ ಅಥ ಏಕಶೇಷಪ್ರಕರಣ ಪ್ರಾರಂಭಃ ॥

**ಅವತಾರಿಕೆ ೩೧೫**

ಇದುವರೆಗೂ ಪರಸ್ಪರ ವಿಶೇಷ್ಯವಿಶೇಷಣಭಾವವು ತೋರುವಾಗ ಬರುವ ಸಮಾಸಪ್ರಕರಣವನ್ನು ತಿಳಿಸಿ ಈಗ ಏಕಶೇಷಪ್ರಕರಣವನ್ನು ಪ್ರಾರಂಭಿಸಲು ಮೊದಲು ಸ್ವರೂಪೈಕಶೇಷವನ್ನು ಹೇಳುತ್ತಾನೆ.

**ಸೂತ್ರಂ ॥ ಸಮಾನಾಮೇಕಃ ॥ ೩೧೫ ॥**

**ಅರ್ಥ ॥ ರೂಪದಿಂದಾಗಲಿ ಅರ್ಥದಿಂದಾಗಲಿ ಸಮಾನಗಳಾದ ಶಬ್ದಗಳ ಮಧ್ಯದಲ್ಲಿ ಒಂದೇ ಶಬ್ದವು ಉಳಿಯುವುದು, ಎಂದರೆ ಇತರಕ್ಕೆ ಲೋಪಬರುವುದೆಂದರ್ಥವು.**

**ಉದಾಹರಣೆ ॥** ' ಅಕ್ಷಮುಂ ಅಕ್ಷಮುಂ — ಅಕ್ಷಂಗಳ್ ॥ ಪಾದಮುಂ ಪಾದಮುಂ — ಪಾದಂಗಳ್ ॥ ಮಾಷಮುಂ ಮಾಷಮುಂ — ಮಾಷಂಗಳ್ ॥ ಮಡಮುಂ ಮಡಮುಂ ಮಡಂಗಳ್ ॥ ಜಾಣನುಂ ಚದುರನುಂ — ಜಾಣರ್ ಮೇಣ್ ಚದುರರ್ ॥ ಬಿಳಿದುಂ ವಿಶದಮುಂ — ಬಿಳಿಯುವು ಮೇಣ್ ವಿಶದಂಗಳ್ ॥ ' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೧೫**

ಈ ಸೂತ್ರದಲ್ಲಿ — ' ಸಮಾನಾಂ, ಏಕಃ ' ಎಂದು ಎರಡು ಪದಗಳಿರುವುವು. ' ಸಮಾನಾಂ ' ಎಂದರೆ — ಸದೃಶಗಳಾದ ' ಶಬ್ದಗಳ ' ಎಂದರ್ಥವು. ಇಲ್ಲಿ ಸಾದೃಶ್ಯವು — ರೂಪಸಾದೃಶ್ಯವೆಂದೂ ಅರ್ಥಸಾದೃಶ್ಯವೆಂದೂ ಎರಡು ಬಗೆಯಾಗಿರುವುದು. ಹೇಗೆಂದರೆ — ಕೆಲವು ಶಬ್ದಗಳು ಭಿನ್ನಭಿನ್ನವಾದ ಅರ್ಥವುಳ್ಳವುಗಳಾದರೂ ಸಮಾನಾನುಪೂರ್ವಿಕಗಳಾಗಿಯೇ ಇರುವುವು. ಇವು ರೂಪದಿಂದ ಸದೃಶ್ಯಗಳಾದ ಶಬ್ದಗಳು. ಕೆಲವು ಶಬ್ದಗಳು ಭಿನ್ನಾನುಪೂರ್ವಿಕಗಳಾಗಿದ್ದರೂ ಸಮಾನಾರ್ಥಕಗಳಾಗಿರುವುವು. ಇವು ಅರ್ಥದಿಂದ ಸದೃಶ್ಯಗಳಾದ ಶಬ್ದಗಳು; ಇವೇ ಪರ್ಯಾಯಶಬ್ದಗಳೆನಿಸಿಕೊಳ್ಳುವುವು. ಇಲ್ಲಿ ವಿಚಾರ ಮಾಡಲು ರೂಪ, ಅರ್ಥ ಇವೆರಡರಿಂದಲೂ ಸದೃಶ್ಯಗಳಾದ ಶಬ್ದಗಳೂ ಲೋಕದಲ್ಲಿ ಎಷ್ಟೋ ಇರುವುವು. ಆದಾಗ್ಯೂ ಇವೆರಡರಲ್ಲಿ ಆವುದಾದರೂ ಒಂದು ಸಾದೃಶ್ಯವನ್ನಂಗೀಕರಿಸಿದರೂ ಇಷ್ಟಸಿದ್ಧಿಯಾಗುವುದು. ಆದುದರಿಂದ ರೂಪಸಾದೃಶ್ಯ ಅರ್ಥಸಾದೃಶ್ಯಗಳೆಂದು ಎರಡು ಬಗೆಯಾಗಿರುವುದೆಂದು ಹೇಳಲ್ಪಟ್ಟಿದೆ. ಇಂತಹ ಉಭಯಸಾದೃಶ್ಯಬೋಧಕವಾದ ' ಸಮಾನಾಂ ' ಎಂಬ ಷಷ್ಠಿಯು ನಿರ್ಧಾರಣಾರ್ಥದಲ್ಲಿ ಬಂದಿರುವುದೆಂದು ತಿಳಿಯುವುದು. ' ಏಕಃ ' ಎಂಬುದು ಸಂಖ್ಯಾಬೋಧಕವು. ' ಅವಶಿಷ್ಯತೇ ' ಎಂಬುದಕ್ಕೆ ಅಧ್ಯಾಹಾರವು. ಪೂರ್ವಸೂತ್ರದಿಂದ 'ಸಾಹಿತ್ಯೇ' ಎಂಬುದು ಅನುವರ್ತಿಸಲ್ಪಡುವುದು. ತಥಾಚ — ರೂಪದಿಂದಾಗಲಿ ಅರ್ಥದಿಂದಾಗಲಿ ಸಮಾನಗಳಾದ ಶಬ್ದಗಳ ಮಧ್ಯದಲ್ಲಿ ಸಾಹಿತ್ಯವು ತೋರಲು ಒಂದೇ ಉಳಿಯುವುದು. ಎಂದರೆ ಅಂತಹ ಶಬ್ದಗಳಷ್ಟಕ್ಕೆ ಸಹೋಕ್ತಿಯನ್ನು ಹೇಳಿದರೂ ಎಲ್ಲವೂ ಲುಪ್ತವಾಗಿ ಅದರ ಮಧ್ಯದಲ್ಲಿ ಒಂದು ಮಾತ್ರ ಉಳಿದುಕೊಳ್ಳುವುದು. ಆ ಉಳಿದುದೇ — ' **ಯಶ್ಶಿಷ್ಯತೇ ಸ ಲುಪ್ತಮಾನಾರ್ಥಾಭಿಧಾಯೀ** ' ಎಂಬ ನ್ಯಾಯದಲ್ಲಿ ಲುಪ್ತವಾದ ಶಬ್ದಗಳ ಅರ್ಥವನ್ನೂ ಬೋಧಿಸುವುದು. ಆದುದರಿಂದ ಈ ಶಿಷ್ಯಮಾಣ ಶಬ್ದಗಳ ಮೇಲೆ ಬಹು

ವಚನಪ್ರತ್ಯಯಗಳೇ ಬರುವುವು. ಆದುದರಿಂದ 'ಅಕ್ಷಂಗಳ್, ಪಾದಂಗಳ್' ಮೊದಲಾದುವು ಸಿದ್ಧಿಸುವುವು. ಇಲ್ಲಿ 'ಸಮಾನಾನಾಂ' ಎಂದು ಹೇಳಿರುವುದರಿಂದ 'ಮರಗಿಡುಗಳ್, ಪುಲ್ಬೊದಱು ಗಳ್' ಮೊದಲಾದ ದ್ವಂದ್ವವಿಷಯಕಗಳಾದ ಪ್ರಯೋಗಗಳಲ್ಲಿ ಈ ಏಕಶೇಷವು ಬರುವುದಿಲ್ಲ.

ಈ ಸೂತ್ರವು — '**ಸಕೃದುಚ್ಚರಿತಃ ಶಬ್ದಃ ಸಕೃದೇವಾರ್ಥಂ ಗಮಯತಿ ನಾಸಕೃತ್ || ಪ್ರತ್ಯರ್ಥಂ ಶಬ್ದನಿವೇಶಃ**' ಎಂಬ ನಿರುಕ್ತಕಾರಕ ವಚನದಿಂದ ಲೋಕದಲ್ಲಿ ಒಂದುಬಾರಿ ಉಚ್ಚರಿಸಿದ ಶಬ್ದವು ಒಂದೇ ಅರ್ಥವನ್ನು ಬೋಧಿಸುವುದೇ ಅಲ್ಲದೆ ಅನೇಕಾರ್ಥವನ್ನು ಬೋಧಿಸಲಾರದು. ಆದುದರಿಂದ ಪ್ರತ್ಯರ್ಥದಲ್ಲಿಯೂ ಬೇರೆ ಬೇರೆ ಶಬ್ದಗಳನ್ನು ಪ್ರಯೋಗಿಸಬೇಕೆಂದು ತಿಳಿಯುವುದರಿಂದ ಅನೇಕ ಪದಾರ್ಥಗಳನ್ನು ಬೋಧಿಸಲು ಅನೇಕ ಶಬ್ದಪ್ರಯೋಗಗಳು ಪ್ರಸಕ್ತವಾಗಿ ಬಹುವಚನಪ್ರತ್ಯಯಗಳು ಪ್ರಯುಕ್ತವಾದ ಶಬ್ದಗಳ ಮೇಲೆ ಪ್ರಸಕ್ತವಾಗುವುದು. ಇದರಿಂದ 'ಅಕ್ಷಅಕ್ಷಂಗಳ್, ಪಾದಪಾದಂಗಳ್' ಇದಕ್ಕೂ ಹೆಚ್ಚಾಗಿ ಅಕ್ಷಪಾದಗಳು ತೋರಬೇಕಾದರೆ ಇನ್ನೂ ಹೆಚ್ಚು ಅಕ್ಷಪಾದ ಶಬ್ದಗಳನ್ನು ಸೇರಿಸಿ ಅವುಗಳ ಮೇಲೆ ಬಹುವಚನ ಪ್ರತ್ಯಯವನ್ನು ಸೇರಿಸಲು ಅನವಸ್ಥೆಯುಂಟಾಗುವುದಲ್ಲದೆ ಒಂದು ಶಬ್ದದ ಮೇಲೆ ಬಹುವಚನಪ್ರತ್ಯಯವೇ ಅಪ್ರಸಕ್ತವಾಗಲು 'ಅಕ್ಷಂಗಳ್, ಪಾದಂಗಳ್, ಜನಂಗಳ್' ಮೊದಲಾದ ಪ್ರಯೋಗಗಳು ಅಸಾಧುಗಳಾಗುವುವು. ಹೀಗೆಯೇ ಸಾಮಾನಾರ್ಥಕಗಳಾದ ಜಾಣಚದುರಾದಿವಿರೂಪಶಬ್ದಗಳಿಗೆ ಸಹೋಕ್ತಿಯನ್ನು ಹೇಳಲು 'ಜಾಣಚದುರರ್' ಮೊದಲಾದ ರೂಪಗಳಾಗುವುದೇ ಅಲ್ಲದೆ — 'ಜಾಣರ್, ಚದುರರ್' ಮೊದಲಾದುವು ಆಗಲಾರವು. ಆದುದರಿಂದ ಇಂತಹ ಅನೇಕಾರ್ಥಕ ಸಮಾನಾನುಪೂರ್ವಿಕ ಶಬ್ದಗಳಿಗೂ ಏಕಾರ್ಥಕ ವಿರೂಪ ಶಬ್ದಗಳಿಗೂ ಸಹೋಕ್ತಿಯನ್ನು ಹೇಳಲು ತನ್ಮಧ್ಯದಲ್ಲಿ ಆವುದಾದರೂ ಒಂದುಳಿಯುವುದೆಂಬರ್ಥವನ್ನು ಸೂಚಿಸಲು ಪ್ರಾರಂಭಿಸಲ್ಪಟ್ಟಿರುವುದು. ಹೀಗೆ ಉಳಿದ ಶಬ್ದವು — '**ಯಶ್ಶಿಷ್ಯತೇ ಸ ಲುಪ್ಯಮಾನಾರ್ಥಾಭಿಧಾಯೀ**' ಎಂಬ ನ್ಯಾಯದಿಂದ ಲುಪ್ಯಮಾನಶಬ್ದಗಳ ಅರ್ಥವನ್ನೂ ಬೋಧಿಸುವುದರಿಂದ ಒಂದೊಂದು ಶಬ್ದದ ಮೇಲು ಬಹುವಚನಪ್ರತ್ಯಯವು ಬಂದು 'ಅಕ್ಷಂಗಳ್, ಪಾದಂಗಳ್, ಜಾಣರ್, ಚದುರರ್' ಮೊದಲಾದುವು ಸಿದ್ಧಿಸುವುವು.

ಇಲ್ಲಿ ಪ್ರಾಚೀನರು ಈ ಏಕಶೇಷವನ್ನಾರಂಭಿಸದಿದ್ದರೆ ಪ್ರತ್ಯರ್ಥದಲ್ಲಿಯೂ ಬೇರೆ ಬೇರೆ ಶಬ್ದಗಳನ್ನು ಪ್ರಯೋಗಿಸಲು '**ಅಪದಂ ನ ಪ್ರಯುಂಜೀತ**' ಎಂಬುದರಿಂದ ಅಪದಕ್ಕೆ ಪ್ರಯೋಗಾರ್ಹತೆಯಿಲ್ಲವೆಂದು ಬೋಧಿಸುವುದರಿಂದ ಪದತ್ವಸಂಪಾದನಾರ್ಥವಾಗಿ ಪ್ರತ್ಯೇಕ ಸುಬುತ್ಪತ್ತಿಯಾಗಲಿ ಪೂರ್ವಸೂತ್ರದಿಂದ ದ್ವಂದ್ವಸಮಾಸವು ಪ್ರಸಕ್ತವಾಗಲಿ ಎಂದು ಶಂಕೆಯುಂಟಾಗುವುದರಿಂದ ದ್ವಂದ್ವಾಪವಾದವು ಏಕಶೇಷವು. ಆದುದರಿಂದ ಈ ಏಕಶೇಷಪ್ರಕರಣವು ದ್ವಂದ್ವಾಂತರದಲ್ಲಿಯೇ ಪ್ರಾರಂಭಿಸಲ್ಪಟ್ಟಿರುವುದೆಂದು ಹೇಳುವರು. ಮತ್ತು ಈ ಏಕಶೇಷದಲ್ಲಿ ರೂಪದಿಂದಾಗಲಿ ಅರ್ಥದಿಂದಾಗಲಿ ಸಮಾನವಾದ ಶಬ್ದಗಳಿಗೆ ಬರುವ ಏಕಶೇಷವು ಕೃತದ್ವಂದ್ವಗಳಿಗೆ ಅಥವಾ ಅಕೃತದ್ವಂದ್ವಗಳಿಗೆ ಎಂದು ಎರಡು ಪಕ್ಷವು. ಅಕೃತದ್ವಂದ್ವಗಳಿಗೆ ಎಂಬಲ್ಲಿ—ವಿಭಕ್ತಿ ನಿರಪೇಕ್ಷಗಳಿಗ, ಅಥವಾ ವಿಭಕ್ತಿ ಸಾಪೇಕ್ಷಗಳಿಗೆ ಎಂದು ಎರಡು ಪಕ್ಷವು. ವಿಭಕ್ತಿಸಾಪೇಕ್ಷಗಳಿಗೆ ಎಂಬಲ್ಲ — ಸಮುದಾಯದ ಮೇಲೆ ವಿಭಕ್ತಿಸಾಪೇಕ್ಷಗಳಿಗೆ ಅಥವಾ ಪ್ರತ್ಯೇಕವಾಗಿ ವಿಭಕ್ತಿ

ಸಾಪೇಕ್ಷಗಳಿಗೆ—ಎಂದು ಎರಡು ಪಕ್ಷವು. ಪ್ರತ್ಯೇಕ ವಿಭಕ್ತಿಸಾಪೇಕ್ಷಗಳಿಗೆ ಎಂಬಲ್ಲಿ ಹೊಂದುವ ವಿಭಕ್ತಿಗಳಿಗೆ ಅಥವಾ ಹೊಂದಿದ ವಿಭಕ್ತಿಗಳಿಗೆ — ಎಂದು ಎರಡು ಪಕ್ಷವು. ಹೊಂದಿದ ವಿಭಕ್ತಿಗಳಿಗೆ ಎಂಬಲ್ಲಿ — ಸಾಹಿತ್ಯದಲ್ಲಿರುವುವುಗಳಿಗೆ ಅಥವಾ ಇಲ್ಲದುವುಗಳಿಗೆ—ಎಂದು ಎರಡು ಪಕ್ಷವು. ಹೀಗೆ ಆರು ಪಕ್ಷಗಳು ಸಂಭವಿಸುವುವು. ಇವುಗಳಲ್ಲಿ ಅನೇಕ ವಿಚಾರ ಯುಕ್ತಿಗಳು ಇದ್ದರೂ ಈ ಭಾಷಾಶಾಸ್ತ್ರದಲ್ಲಿ ಅನುಪಯುಕ್ತವೆಂದು ಅವುಗಳ ಸ್ವರೂಪಮಾತ್ರವನ್ನು ಇಲ್ಲಿ ಸೂಚಿಸಿರುವೆವು. ವಿಸ್ತಾರವಾಗಿ ತಿಳಿಯಲಪೇಕ್ಷೆಯುಳ್ಳವರು ಸಂಸ್ಕೃತದಲ್ಲಿರುವ ನ್ಯಾಸಾದಿಗ್ರಂಥಗಳಿಂದ ತಿಳಿದುಕೊಳ್ಳುವುದು.

ಇನ್ನು ಕೆಲವರು ದ್ವಂದ್ವಸಮಾಸವು ಸುಬಂತಗಳಿಗೇ ಬರುವುದು, ಏಕಶೇಷವು ಸುಬುತ್ಪತ್ತಿಗಿಂತಲೂ ಪೂರ್ವದಲ್ಲಿ ಬರುವುದು ಎಂದು ಹೇಳುವರು. ಆದರೆ ಏಕಶೇಷಕ್ಕೆ ದ್ವಂದ್ವಾಪವಾದತ್ವವನ್ನು ಹೇಳುವವರಿಗೆ — 'ಯದೀದಂ ನ ಸ್ಯಾತ್ತರ್ಹಿ ತತ್ಸ್ಯಾತ್' ಎಂಬ ನ್ಯಾಯದಿಂದ ಇವಲ್ಲದಿದ್ದರೆ ಪ್ರತ್ಯೇಕವಾಗಿ ಸುಬುತ್ಪತ್ತಿಯಾಗಿ ದ್ವಂದ್ವವು ಪ್ರಸಕ್ತವಾಗುವುದೆಂದು ಸಾಂಭಾವಸಿಕಾಪವಾದತ್ವವೆಂದು ತಾತ್ಪರ್ಯವನ್ನು ಹೇಳಬೇಕು.

ಇದೇ ರೀತಿಯಾಗಿ ಸಂಸ್ಕೃತ ವ್ಯಾಕರಣದಲ್ಲಿ — '**ಸರೂಪಾಣಾಮೇಕಶೇಷ ಏಕವಿಭಕ್ತೌ**' ಎಂಬ ಸೂತ್ರವನ್ನು ಹೇಳಿ ಪ್ರತಿವಿಭಕ್ತ್ಯಂತದಲ್ಲಿಯೂ 'ಸರೂಪಾಣಾಂ' ಎಂಬುದಕ್ಕೆ ಸಮಾನಾರ್ಥಕ ಶಬ್ದಗಳಿಗೂ ಸಮಾನಾನುಪೂರ್ವಿಕ ಶಬ್ದಗಳಿಗೂ ಏಕಶೇಷವು ಬರುವುದೆಂದು ಹೇಳಿರುವರು. ಭಾಷೆಯಲ್ಲಿ ಶಬ್ದಗಳಿಗೆ ಸಮಾನಾರ್ಥ ಸಮಾನಾನುಪೂರ್ವಿಕ ವಿಭಕ್ತಿಪ್ರಯುಕ್ತ ಶಬ್ದವಿಕಾರಗಳಿಂದ ಭೇದವಾವುದೂ ಉಂಟಾಗುವುದಿಲ್ಲವಾದುದರಿಂದ ಇಲ್ಲಿ 'ಏಕವಿಭಕ್ತೌ' ಎಂಬ ವಿಶೇಷಣವನ್ನು ಹೇಳದೆ ಸಾಮಾನ್ಯವಾಗಿ 'ಸಮಾನಾಮೇಕಃ' ಎಂದು ಹೇಳಲ್ಪಟ್ಟಿರುವುದೆಂದು ತಿಳಿಯುವುದು.

**ಅವತಾರಿಕೆ ೩೧೬**

ಪೂರ್ವದಲ್ಲಿ ಸಮಾನಾರ್ಥಕ ಸಮಾನಾನುಪೂರ್ವಿಕ ಶಬ್ದಗಳಿಗೆ ಸಹವಚನವಿರಲು ಏಕಶೇಷವು ವಿಧಿಸಲ್ಪಟ್ಟಿತು. ಈಗ ವಿರೂಪಗಳಾಗಿಯೂ ಅನ್ಯಾರ್ಥಕಗಳಾಗಿಯೂ ಇರುವ ಕೆಲವು ಶಬ್ದಗಳಿಗೂ ಏಕಶೇಷವು ವಿಧಿಸಲ್ಪಡುವುದು.

**ಸೂತ್ರಂ ॥ ಅದ್ವಾದಿಃ ॥ ೩೧೬ ॥**

**ಅರ್ಥ ॥ ಅದ್ವಾದಿಗಣಪಠಿತ ಶಬ್ದಗಳಿಗೆ ಅದ್ವಾದಿಗಳೊಡನೆಯೇ ಆಗಲಿ ಇತರ ಶಬ್ದಗಳೊಡನೆಯೇ ಆಗಲಿ ಸಹವಚನವಿರಲು ಅದ್ವಾದಿಯೇ ಉಳಿಯುವುದು.**

**ಉದಾಹರಣೆ** ॥ ಕುದುರೆಯುಂ ಆತನುಂ — ಅವರ್; ಅದುಂ ಕುದುರೆಯುಂ — ಅವು, ಲತೆಯುಂ ಈಕೆಯುಂ—ಇವರ್, ಪೂವುಂ ಉದುಂ — ಉವು ॥' ಮೊದಲಾದುವು ಇದಕ್ಕೆ ಲಕ್ಷ್ಯಗಳು. ಇಲ್ಲಿ ಅದ್ವಾದಿಗಳಲ್ಲಿಯೇ ಪರಸ್ಪರವಾಗಿ ಸಹೋಕ್ತಿಯಿರಲು ಗಣಪಾಠಕ್ರಮದಲ್ಲಿ ಪರವಾಗಿರುವುದಾವುದೋ ಅದಕ್ಕೆ ಶೇಷವಾಗುವುದು. ಆದುದರಿಂದ '**ಆತನುಂ ಈತನುಂ — ಇವರ್, ಈತನುಂ ಊತನುಂ — ಉವರ್, ಆಕೆಯುಂ ಈಕೆಯುಂ — ಇವರ್** ॥' **ಮೊದಲಾದುವೂ ಸಿದ್ಧಿಸುವುವು.**

**ವಿಚಾರ ೩೧೭**

ಈ ಸೂತ್ರದಲ್ಲಿ — 'ಅದ್ವಾದಿಃ' ಎಂದು ಒಂದೇ ಪದವಿರುವುದು. ಪೂರ್ವದಿಂದ 'ಸಾಹಿತ್ಯೇ, ಏಕಃ' ಎಂಬುದು ಅನುವರ್ತಿಸಲ್ಪಡುವುದು. 'ಅದ್ವಾದಿ' ಎಂಬುದು 'ಏಕಃ' ಎಂಬುದಕ್ಕೆ ವಿಶೇಷಣವು. ಸಹವಚನವೆಂಬುದೇ ಸಾಹಿತ್ಯವೆಂಬುದು. ಇದು ಒಂದಕ್ಕೇ ಸಂಭವಿಸುವುದಿಲ್ಲವಾದುದರಿಂದ ಅದ್ವಾದಿಗೆ ಅದ್ವಾದಿಯಿಂದಲೇ ಆಗಲಿ ಇತರ ಶಬ್ದದಿಂದಲೇ ಆಗಲಿ ಎಂದು ಹೇಳಬೇಕು. ತಥಾಚ — ಅದ್ವಾದಿಗಳಿಗೆ ಅದ್ವಾದಿಗಳೊಡನೆಯೇ ಆಗಲಿ, ಇತರಗಳೊಡನೆಯೇ ಆಗಲಿ ಸಹವಚನವಿರಲು ಅದ್ವಾದಿಯೊಂದೇ ಉಳಿಯುವುದು. ಅದ್ವಾದಿಗಳಿಗೇ ಪರಸ್ಪರವಾಗಿ ಹೇಳಲು ಅದರಲ್ಲಿ ಪರವಾವುದೋ ಅದೇ ಬರುವುದು—ಎಂದು ಸೂತ್ರಾರ್ಥವಾಗುವುದು. ಆದುದರಿಂದ 'ಅವರ್' ಮೊದಲಾದುವು ಸಿದ್ಧಿಸುವುವು. ಈ ಸೂತ್ರವೂ ಮುಂದೆ ಹೇಳುವ ಎರಡು ಸೂತ್ರಗಳೂ ಭಿನ್ನಾರ್ಥಕ ಭಿನ್ನಾನುಪೂರ್ವಿಕ ಶಬ್ದವಿಷಯಕಗಳಾದುದರಿಂದ ದ್ವಂದ್ವಾಪವಾದ ಸೂತ್ರಗಳೆಂದು ತಿಳಿಯುವುದು.

**ಅವತಾರಿಕೆ ೩೧೮**

ಹೀಗೆಯೇ ತನಾದಿಗಳಿಗೂ ಏಕಶೇಷವನ್ನು ವಿಧಿಸುತ್ತಾನೆ.

**ಸೂತ್ರಂ ॥ ತನ್ನಿನೆನ್ ॥ ೩೧೮ ॥**

**ಅರ್ಥ ॥ ತನಾದಿಗಳಿಗೆ ತನಾದಿಗಳೊಡನೆಯಾಗಲಿ, ಇತರಗಳೊಡನೆಯಾಗಲಿ ಸಹವಚನವಿರಲು ತನಾದಿಗಳೇ ಉಳಿಯುವುವು.**

**ಉದಾಹರಣೆ ॥** 'ಜಿನದತ್ತನುಂ ಆನುಂ — ಆಂ, ಯಜ್ಞದತ್ತನುಂ ನೀನುಂ — ನೀಂ, ವಿಷ್ಣುಮಿತ್ರನುಂ ತಾನುಂ — ತಾಂ ॥' ಇಲ್ಲಿಯೂ ಪೂರ್ವಸೂತ್ರದಲ್ಲಿ ಹೇಳಿರುವಂತೆ ತನಾದಿಗಳಲ್ಲಿ ಪರವಾವುದೋ ಅದಕ್ಕೇ ಶೇಷವೆಂದು ಹೇಳಬೇಕು. ಆದುದರಿಂದ 'ತಾನುಂ ನೀನುಂ — ನೀಂ, ನೀನುಂ ಆನುಂ — ಆಂ ॥' ಮೊದಲಾದುವು ಸಿದ್ಧಿಸುವುವು.

**ಅವತಾರಿಕೆ ೩೧೯**

ಹೀಗೆ ಅದ್ವಾದಿಗಳಿಗೂ ತನಾದಿಗಳಿಗೂ ಏಕಶೇಷವನ್ನು ಹೇಳಿ ಈಗ ಸಾಮಾನ್ಯವಾಗಿ ಲಿಂಗತ್ರಯಾತ್ಮಕ ಶಬ್ದಗಳ ವಿಷಯದಲ್ಲಿ ಏಕಶೇಷವನ್ನು ಹೇಳುತ್ತಾನೆ.

**ಸೂತ್ರಂ ॥ ಸ್ತ್ರೀಪುನ್ನಪ್ ॥ ೩೧೯ ॥**

**ಅರ್ಥ ॥ ಸ್ತ್ರೀಲಿಂಗ ಪುಲ್ಲಿಂಗ ನಪುಂಸಕಲಿಂಗ ಶಬ್ದಗಳಿಗೆ ಸಹವಚನ ವಿವಕ್ಷೆಯಿರಲು ಆವುದಾದರೂ ಒಂದೇ ಲಿಂಗಕ್ಕೆ ಶೇಷವು ಬರುವುದು. ಅದರಲ್ಲಿಯೂ ಸೂತ್ರನಿರ್ದೇಶಕ್ರಮದಲ್ಲಿ ಆವ ಲಿಂಗವು ಪರವೋ ಅದಕ್ಕೇ ಶೇಷವು ಬರುವುದು.**

**ಉದಾಹರಣೆ ॥** 'ಆಕೆಯುಂ ಆತನುಂ — ಅವರ್, ಆತನುಂ ಅದುವುಂ — ಅವು, ಅದುವುಂ ಆಕೆಯುಂ — ಅವರ್ ॥' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೧೯**

ಈ ಸೂತ್ರದಲ್ಲಿ — 'ಸ್ತ್ರೀಪುನ್ನಪ್' ಎಂದು ಒಂದು ಪದವು. ಇದು 'ಸ್ತ್ರೀ, ಪುಮಾನ್, ನಪ್' ಎಂಬಿವಕ್ಕೆ ದ್ವಂದ್ವಸಮಾಸದಿಂದ ನಿರ್ದೇಶವು. ಇದು ಇಲ್ಲಿ ಪೂರ್ವಸೂತ್ರಗಳಲ್ಲ

ಅಪ್ಸ್ವಾದಿ ಶಬ್ದಗಳು ತನಾದಿ ಶಬ್ದಗಳು ಎಂದು ಹೇಳಿರುವಂತೆ — 'ಸ್ತ್ರೀ ಶಬ್ದ, ಪುಮ್ ಶಬ್ದ, ನಪ್ ಶಬ್ದ' ಎಂದು ಸ್ವರೂಪನಿರ್ದೇಶಪರವಲ್ಲ. ಮತ್ತೇನೆಂದರೆ — '**ಸ್ತ್ರ್ಯರ್ಥಃ ಸ್ತ್ರೀ ||೧೦೨|| ಪುಮರ್ಥಃ ಪುಮರ್, ||೧೦೩|| ನಬನ್ಯತ್ ||೧೦೪||**' ಎಂಬ ಸೂತ್ರಗಳಿಂದ ಬೋಧಿತಗಳಾದ ಸ್ತ್ರೀಲಿಂಗಾದಿ ಶಬ್ದಪರವೆಂದು ತಿಳಿಯಬೇಕು. ತಥಾಚ — ಸ್ತ್ರೀಲಿಂಗಾದಿಶಬ್ದಗಳಿಗೆ ಪರಸ್ಪರ ಸಹವಚನವನ್ನು ವಿವಕ್ಷೆ ಮಾಡಲು ಕ್ರಮವಾಗಿ ಸ್ತ್ರೀಲಿಂಗಾದಿಗಳೇ ಶಿಷ್ಟಗಳಾಗುವುವೆಂದು ಸೂತ್ರಾರ್ಥವಾಗಲು 'ಅವರ್' ಮೊದಲಾದುವು ಸಿದ್ಧಿಸುವುವು.

**ಅವತಾರಿಕೆ ೩೧೯**

ಹೀಗೆಯೇ ಏಕಶೇಷಾಂತರ ಸೂತ್ರವನ್ನು ಹೇಳುತ್ತಾನೆ.

**ಸೂತ್ರಂ || ತಂದೆಸ್ತಾಯಾ ವಾ || ೩೧೯ ||**

**ಅರ್ಥ || 'ತಂದೆ' ಶಬ್ದಕ್ಕೆ 'ತಾಯ್' ಶಬ್ದದೊಡನೆ ಸಹೋಕ್ತಿಯಿರಲು 'ತಂದೆ' ಶಬ್ದವೊಂದಕ್ಕೇ ವಿಕಲ್ಪವಾಗಿ ಶೇಷವಾಗುವುದು.**

**ಉದಾಹರಣೆ** || 'ತಂದೆಯುಂ ತಾಯುಂ — ತಂದೆಗಳ್, ತಾಯ್ತಂದೆಗಳ್[೧]' ||

**ವಿಚಾರ ೩೧೯**

ಈ ಸೂತ್ರದಲ್ಲಿ — 'ತಂದೆಃ, ತಾಯಾ, ವಾ' ಎಂದು ಮೂರು ಪದಗಳಿರುವುವು. 'ತಂದೆಃ' ಎಂಬುದು ಪಿತೃವಾಚಕ 'ತಂದೆ' ಎಂಬ ಶಬ್ದಪರವು. ಹೀಗೆಯೇ 'ತಾಯಾ' ಎಂಬುದು ಮಾತೃವಾಚಕ 'ತಾಯ್' ಎಂಬ ಶಬ್ದಪರವು. 'ವಾ' ಎಂಬುದು ವಿಕಲ್ಪಾರ್ಥಕವು. 'ಏಕಃ' ಎಂಬುದು ಅನುವರ್ತಿಸಲ್ಪಡುವುದು. ತಥಾಚ — 'ತಂದೆ' ಶಬ್ದವು 'ತಾಯ್' ಶಬ್ದದೊಡನೆ ಸಹೋಕ್ತಿಯನ್ನು ಹೊಂದಲು 'ತಂದೆ' ಶಬ್ದವೊಂದೇ ವಿಕಲ್ಪವಾಗಿ ಉಳಿಯುವುದು — ಎಂದು ಸೂತ್ರಾರ್ಥವಾಗುವುದು. ಇದು ವಿಕಲ್ಪವೆಂದು ಹೇಳಿರುವುದರಿಂದ ದ್ವಂದ್ವಸಮಾಸವೂ ಬರುವುದು. ಆದುದರಿಂದ—'ತಂದೆಗಳ್, ತಂದೆತಾಯ್ಗಳ್' ಎಂದು ಎರಡು ರೂಪಗಳು ಸಿದ್ಧಿಸುವುವು.

ಇಲ್ಲಿ ಕೆಲವರು 'ತಂದೆಸ್ತಾಯಾ ವಾ' ಎಂಬುದು ಶಬ್ದಸ್ವರೂಪಪರನಿರ್ದೇಶಕವೇ ಅಲ್ಲದೆ ಪೂರ್ವಸೂತ್ರದಂತೆ ಅರ್ಥಪರನಿರ್ದೇಶವಲ್ಲ. ಆದುದರಿಂದ — 'ಅಪ್ಪಂದಿರ್' ಮೊದಲಾದುವು 'ಅಮ್ಮಂದಿರ್' ಮೊದಲಾದುವುಗಳಂತೆ ಪೂಜಾರ್ಥದಲ್ಲ ಬಹುವಚನಾಂತ ಪ್ರಯೋಗಗಳೇ ಅಲ್ಲದೆ ಏಕಶೇಷದಿಂದ ಬಹುವಚನವು ಬಂದಿಲ್ಲವೆಂದು ಹೇಳುತ್ತಾರೆ. ಹೀಗೆಯೇ — ಸಂಸ್ಕೃತ ವ್ಯಾಕರಣದಲ್ಲೂ — '**ಪಿತಾಮಾತ್ರಾ**' ಎಂಬ ಸೂತ್ರದಿಂದ ಪಿತೃಮಾತೃಶಬ್ದಸ್ವರೂಪವನ್ನೇ ಗ್ರಹಿಸಿ — 'ಪಿತರೌ, ಮಾತಾಪಿತರೌ' ಎಂದು ಉದಾಹರಿಸಿರುವರು. ಆದಾಗ್ಯೂ ಭಾಷೆಯಲ್ಲಿ —

**ನೀತಿಯನಱಿದಮ್ಮಂದಿರ**
**ಮಾತಂ ಮನ್ನಿಸಿ ನಿಜೋಚಿತವೃತಗತಿಯಿಂ**
**ಜಾತಿಕುಲೌನ್ನತ್ಯಮನಥ**
**ಜಾತರ್ ಮಾಳ್ಪಂತೆ ಮೂರ್ಖರೇಂ ಮಾಡುಗುಮೇ**

---

**ಪಾಠಾಂತರ : ೧ ತಂದೆ ತಾಯ್ಗಳ್**

ಮೊದಲಾದ ಪ್ರಯೋಗಗಳಲ್ಲಿರುವ 'ಅಮ್ಮಂದಿರ' ಎಂಬುದಕ್ಕೆ ಮಾತಾಪಿತೃಗಳೆಂದರ್ಥವನ್ನೇ ಹೇಳಬೇಕಾಗಿರುವುದರಿಂದ ತತ್ಸಿದ್ಧ್ಯರ್ಥವಾಗಿ ಅರ್ಥಪರನಿರ್ದೇಶವನ್ನೇ ಅಂಗೀಕರಿಸಬೇಕೆಂದು ಕೆಲವರು ಹೇಳುತ್ತಾರೆಂದು ಮಂಜರೀಮಕರಂದದಲ್ಲಿ ಹೇಳಿರುವನು. ಆದರೆ ಸೂತ್ರದಲ್ಲಿ 'ತಂದೆ' ಶಬ್ದಕ್ಕೆ ಪ್ರಥಮಾಂತ ನಿರ್ದೇಶವಿರುವುದರಿಂದ ಅರ್ಥಪರ ನಿರ್ದೇಶವೆಂದು ಹೇಳಿದರೂ ತಂದೆ ವಾಚಕವಾದ 'ಅಪ್ಪ' ಮೊದಲಾದುವಕ್ಕೆ ಶೇಷಬರುವುದಲ್ಲದೆ ತಾಯ್ವಾಚಕವಾದ 'ಅಮ್ಮ'* ಮೊದಲಾದುವಕ್ಕೆ ಶೇಷವು ಬರಲಾರದು. ಆದಾಗ್ಯೂ ವಾಗ್ರಹಣದಿಂದ ಕ್ವಚಿತ್ 'ಅಮ್ಮ' ಮೊದಲಾದ ಶಬ್ದಗಳಿಗೂ ಏಕಶೇಷವುಂಟೆಂದೂ ಕ್ವಚಿತ್ ದ್ವಂದ್ವಸಮಾಸವು ಬರುವುದೆಂದೂ ಬೋಧಿಸಲ್ಪಡುವುದೆಂದೂ ಮಂಜರೀಮಕರಂದಕಾರನಿಗೆ ತಾತ್ಪರ್ಯವೆಂದು ತಿಳಿಯಬೇಕು.

|| ಇತಿ ಏಕಶೇಷ ಪ್ರಕರಣಂ ಸಮಾಪ್ತಂ ||

*[ 'ಅಮ್ಮ' ಎಂಬುದಕ್ಕೆ 'ತಂದೆ' ಎಂಬ ಅರ್ಥವೇ ಮೊದಲಿನಿಂದಲೂ ಇದ್ದುದು ಇತ್ತೀಚೆಗೆ 'ತಾಯಿ' ಇಲ್ಲವೆ 'ತಾಯಿಯ ಅಥವಾ ತಂದೆಯ ತಾಯಿ' ಎಂಬ ಅರ್ಥವು ರೂಢವಾಗಿದೆ. 'ಅಮ್ಮ' ಎಂಬುದು 'ತಂದೆ' ಎಂಬ ಅರ್ಥದಲ್ಲಿ ಪ್ರಯೋಗವಾಗುವುದು ಉದಾಹರಣೆಗಾಗಿ ಪಂಪಭಾರತ; ೯, ೬೪, ೧೧-೭೩; ರನ್ನನ ಗದಾಯುದ್ಧ ೩, ೧೭ ಮುಂತಾದವುಗಳನ್ನು ನೋಡುವುದು. ]

— ಸಂಪಾದಕ

## ॥ ಅಥ ಏಕವದ್ಭಾವ ಪ್ರಕರಣ ಪ್ರಾರಂಭಃ ॥

**ಅವತಾರಿಕೆ ೩೨೦**

ಪೂರ್ವದಲ್ಲಿ ಅನೇಕ ಪದಗಳಿಗೆ ಸಾಹಿತ್ಯವು ತೋರುವಾಗ ದ್ವಂದ್ವಸಮಾಸವು ವಿಧಿಸಲ್ಪಟ್ಟಿತು. ಆ ದ್ವಂದ್ವದಲ್ಲಿ ಅನೇಕತ್ವವು ತೋರುವುದರಿಂದ ಅದರ ಮೇಲೆ ಬಹುವಚನ ಪ್ರತ್ಯಯವು ಪ್ರಸಕ್ತವಾಗಲು ಅದಕ್ಕೆ ಬಾಧಕವಾಗಿ ಏಕವಚನವನ್ನು ಅತಿದೇಶಮಾಡುತ್ತಾನೆ.

**ಸೂತ್ರಂ ॥ ಏಕವದ್ವಾ ದ್ವಂದ್ವಃ ॥ ೩೨೦ ॥**

**ಅರ್ಥ ॥** ದ್ವಂದ್ವ ಸಮಾಸವು ಅನೇಕತ್ವಬೋಧಕವಾಗಿದ್ದರೂ ಏಕವದ್ಭಾವವನ್ನು ವಿಕಲ್ಪವಾಗಿ ಹೊಂದುವುದು. ಇದರಿಂದ ದ್ವಂದ್ವಸಮಾಸವು ಏಕವಚನಾಂತವಾಗಿಯೂ ಬಹುವಚನಾಂತವಾಗಿಯೂ ಪ್ರಯೋಗಿಸಲ್ಪಡುವುದೆಂದು ತಾತ್ಪರ್ಯವಾಗುವುದು.

**ಉದಾಹರಣೆ ॥** 'ಮರಗಿಡುಗಳ್, ಮರಗಿಡು; ಅಂಗಿಳಿಪುಲ್ಗೊಂದಲುಗಳ್, ಅಂಗಿಳಿಪುಲ್ಗೊಂದಲು; ಕಾಮಚಂದಿರರ್, ಕಾಮಚಂದಿರಂ ॥ ಮೊದಲಾದುವು ಇವಕ್ಕೆ ಲಕ್ಷ್ಯಗಳು.

**ವಿಚಾರ ೩೨೦**

ಈ ಸೂತ್ರದಲ್ಲಿ — 'ಏಕವತ್, ದ್ವಂದ್ವಃ' ಎಂದು ಎರಡು ಪದಗಳಿರುವುವು. ಪೂರ್ವದಿಂದ 'ವಾ' ಎಂಬುದು ಅನುವರ್ತಿಸಲ್ಪಡುವುದು. ತಥಾಚ — ದ್ವಂದ್ವ ಸಮಾಸವು ಅನೇಕತ್ವವಿದ್ದರೂ ಏಕವದ್ಭಾವವನ್ನು ವಿಕಲ್ಪವಾಗಿ ಹೊಂದುವುದು — ಎಂದು ಸೂತ್ರಾರ್ಥವಾಗಲು 'ಮರಗಿಡುಗಳ್, ಮರಗಿಡು' ಮೊದಲಾದುವು ಸಿದ್ಧಿಸುವುವು.

ಇಲ್ಲಿ ಸಂಸ್ಕೃತವ್ಯಾಕರಣಕಾರರು ದ್ವಂದ್ವಸಮಾಸವು ಇತರೇತರಯೋಗಸಮಾಹಾರಭೇದಗಳಿಂದ ಎರಡು ಬಗೆಯಾಗಿರುವುದೆಂದು ಹೇಳಿ ಇತರೇತರಯೋಗದ್ವಂದ್ವಸಮಾಸವನ್ನು ವಿವಕ್ಷಿಸಲು ದ್ವಿತ್ವ ಬಹುತ್ವಗಳು ತೋರುವುದರಿಂದ ದ್ವಿವಚನ ಬಹುವಚನಗಳೂ ಸಮಾಹಾರದ್ವಂದ್ವವನ್ನು ವಿವಕ್ಷಿಸಲು ಸಮುದಾಯಕ್ಕೆ ಏಕತ್ವವೇ ತೋರುವುದರಿಂದ ಏಕವಚನವೂ ಸಿದ್ಧಿಸುತ್ತಿರಲು ಏಕವದ್ಭಾವವಿಧಿಯು ನಿರರ್ಥಕವೆಂದು ಶಂಕಿಸಿ — '**ಸಿದ್ಧೇ ಸತ್ಯಾರಭ್ಯಮಾಣೋ ವಿಧಿರ್ನಿಯಮಾಯ ಭವತಿ**' ನ್ಯಾಯದಿಂದ ಕೆಲವೆಡೆಯಲ್ಲಿ ಸಮಾಹಾರವನ್ನೇ ಮಾಡಿ ಏಕವಚನಾಂತವಾಗಿಯೇ ಪ್ರಯೋಗಿಸಬೇಕೆಂದು ನಿಯಮಾರ್ಥವಾಗಿ ಏಕವದ್ಭಾವ ಪ್ರಕರಣವು ಪ್ರಾರಂಭಿಸಲ್ಪಟ್ಟಿರುವುದೆಂದು ಹೇಳುವರು. ಭಾಷೆಯಲ್ಲಾದರೋ ದ್ವಂದ್ವಸಮಾಸದಲ್ಲಿ ಇಂತಹ ಭೇದಗಳನ್ನು ಸ್ಪಷ್ಟವಾಗಿ ಸೂತ್ರಗಳಿಂದ ಸೂಚಿಸದೆ ಇದ್ದರೂ ಈ ಏಕವದ್ಭಾವ ವಿಧಿಯಿಂದ ಉಭಯ ವಿಧವೂ ಉಂಟೆಂದು ತಿಳಿಯಬೇಕು. ಸಂಸ್ಕೃತದಂತೆ ನಿತ್ಯೈಕವದ್ಭಾವವಿಲ್ಲವೆಂದು ತಿಳಿಯಬೇಕು. ಆದುದರಿಂದ **ಪರಿಭಾಷೇಂದುಶೇಖರ**ದಲ್ಲಿ ಸಾಮಾನ್ಯವಾಗಿ — '**ಸರ್ವೋ ದ್ವಂದ್ವೋ ವಿಭಾಷೈಕವದ್ಭವತಿ**' ಎಂದು ಹೇಳಿರುವುದು.

**ಅವತಾರಿಕೆ ೩೨೧**

ಹೀಗೆ ಏಕವದ್ಭಾವ ಪ್ರಕರಣದಿಂದ ಕೆಲವು ಎಡೆಗಳಲ್ಲಿ ಏಕವತ್ತ್ವ ತೋರುತ್ತಿದ್ದರೂ ಅನೇಕವದ್ಭಾವವನ್ನು ವಿಧಿಸುತ್ತಾನೆ.

**ಸೂತ್ರಂ ॥ ಜಾತ್ಯಾಖ್ಯಾಯಾಮನೇಕವತ್ ॥ ೩೨೧ ॥**

**ಅರ್ಥ** || ಜಾತ್ಯಾಖ್ಯೆ ವಿಷಯದಲ್ಲಿ ಏಕತ್ವವು ತೋರುತ್ತಿದ್ದರೂ ಅನೇಕವದ್ಭಾವವು ವಿಕಲ್ಪವಾಗಿ ಬರುವುದು.

**ಉದಾಹರಣೆ** || 'ಕಲವೆ ಬೆಳೆದುದು; ಕಲವೆಗಳ್ ಬೆಳೆದುವು — ಗೋದಿ ಕೆಟ್ಟುದು; ಗೋದಿಗಳ್ ಕೆಟ್ಟುವು — ಧಾನ್ಯಂ ಪೆರ್ಚಿತ್ತು; ಧಾನ್ಯಂಗಳ್ ಪೆರ್ಚಿದುವು ||' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೨೧**

ಈ ಸೂತ್ರದಲ್ಲಿ — 'ಜಾತ್ಯಾಖ್ಯಾಯಾಂ, ಅನೇಕವತ್' ಎಂದು ಎರಡು ಪದಗಳಿರುವುವು. ಪೂರ್ವದಿಂದ 'ವಾ' ಎಂಬುದು ಅನುವರ್ತಿಸಲ್ಪಡುವುದು. 'ಜಾತ್ಯಾಖ್ಯಾಯಾಂ' ಎಂಬುದು ವಿಷಯಸಪ್ತಮ್ಯಂತವು. ಜಾತಿಯೆಂದರೆ — '**ಜಾತಿರ್ಜಾತಂ ಚ ಸಾಮಾನ್ಯಂ**' ಎಂಬ ಕೋಶದಿಂದಲೂ — '**ಆಕೃತಿಗ್ರಹಣಾ ಜಾತಿಃ**' ಎಂಬ ವೈಯಾಕರಣರ ಜಾತಿಲಕ್ಷಣದಿಂದಲೂ '**ಏಕತ್ವೇ ಸತ್ಯನೇಕಾನುಗತಂ ಸಾಮಾನ್ಯಂ ಜಾತಿಃ**' ಎಂಬ ನೈಯಾಯಿಕರ ವಚನದಿಂದಲೂ ಅನೇಕ ವಸ್ತುಗಳಲ್ಲಿ ಅನುಗತವಾಗಿ ಒಂದೇ ವಿಧವಾಗಿರುವ ಸಾಮಾನ್ಯ ಧರ್ಮವೆಂದರ್ಥವಾಗುವುದು. ಇಂತಹ ಜಾತಿಯು — 'ವ್ಯಾಪ್ಯಜಾತಿ, ವ್ಯಾಪಕಜಾತಿ' ಎಂಬ ಭೇದಗಳಿಂದ ಎರಡು ಬಗೆಯಾಗಿರುವುದು. ಇಂತಹ ಜಾತಿಯಲ್ಲಿ ಏಕತ್ವವು ಸರ್ವಸಮ್ಮತವಾಗಿ ತೋರುವುದರಿಂದ ಏಕವಚನವೇ ಪ್ರಾಪ್ತವಾಗಲು ಬಹುವಚನವು ವಿಕಲ್ಪವಾಗಿ ಬರುವುದು—ಎಂದು ಈ ಸೂತ್ರದಿಂದ ಬೋಧಿಸಲ್ಪಡುವುದು. ಆದುದರಿಂದ 'ಕಲವೆ ಬೆಳೆದುದು; ಕಲವೆಗಳ್ ಬೆಳೆದುವು' ಮೊದಲಾದುವು ಸಿದ್ಧಿಸುವುವು.

ಇಲ್ಲಿ — 'ಜಾತ್ಯಾಖ್ಯಾಯಾಂ' ಎಂದು ಹೇಳಿರುವುದರಿಂದ — 'ದೇವದತ್ತಂ ಪುಟ್ಟಿದಂ, ಯಜ್ಞದತ್ತನುಂಡಂ' ಮೊದಲಾದ ಪ್ರಯೋಗಗಳಲ್ಲಿ 'ದೇವದತ್ತ' ಮೊದಲಾದುವು ಆಯಾ ವ್ಯಕ್ತಿಯಲ್ಲಿಯೇ ಸಂಕೇತವಾದುದರಿಂದ ಅನೇಕಾನುಗತತ್ವರೂಪಜಾತಿಯು ತೋರುವುದಿಲ್ಲವೆಂದು ಈ ಅತಿದೇಶವು ಬರುವುದಿಲ್ಲವೆಂದು ತಿಳಿಯಬೇಕು.

**ಅವತಾರಿಕೆ ೩೨೨**

ಪೂರ್ವಸೂತ್ರದಿಂದ ಉಕ್ತವಾದ ಜಾತಿವಿಷಯದಲ್ಲಿಯೆ ಪ್ರಯೋಗಿಸಲ್ಪಡುವ ತಿಙಂತ ವಿಷಯದಲ್ಲಿಯೂ ಅನೇಕವದ್ಭಾವಾತಿದೇಶವನ್ನು ಮಾಡುತ್ತಾನೆ.

**ಸೂತ್ರಂ || ತಿಙ್ ತದ್ವಾಚಿ || ೩೨೨ ||**

**ಅರ್ಥ || ಜಾತ್ಯಾಖ್ಯೆ ತೋರುವಾಗ ಪ್ರಯೋಗಿಸಲ್ಪಡುವ ಜಾತಿಬೋಧಕವಾದ ತಿಙಂತವು ಅನೇಕವದ್ಭಾವವನ್ನು ವಿಕಲ್ಪವಾಗಿ ಹೊಂದುವುದು.**

**ಉದಾಹರಣೆ** || 'ಆನೆ ನೂಂಕಿದುದು, ಆನೆ ನೂಂಕಿದುವು; ಕುದುರೆ ಬಂದುದು, ಕುದುರೆ ಬಂದುವು; ಎತ್ತು ಪೋದುದು, ಎತ್ತು ಪೋದುವು ||' ಮೊದಲಾದುವು ಇದಕ್ಕೆ ಉದಾಹರಣೆಗಳು.

**ವಿಚಾರ ೩೨೨**

ಇಲ್ಲಿ — 'ತಿಙ್, ತದ್ವಾಚಿ' ಎಂದು ಎರಡು ಪದಗಳಿರುವುವು. ಪೂರ್ವದಿಂದ 'ಅನೇಕವತ್, ವಾ' ಎಂಬ ಪದಗಳು ಅನುವರ್ತಿಸಲ್ಪಡುವುವು. 'ತಿಙ್' ಎಂಬುದು ಪ್ರತ್ಯಯಗ್ರಹಣಪರಿಭಾಷೆಯಿಂದ ತದಂತಬೋಧಕವಾಗುವುದು. ಇದಕ್ಕೆ 'ತದ್ವಾಚಿ' ಯೆಂಬುದು

ಸಮಾನಾಧಿಕರಣ ವಿಶೇಷಣವು. ಇಲ್ಲಿ 'ತತ್' ಎಂದರೆ ಪೂರ್ವೋಕ್ತವಾದ ಜಾತಿಯೆಂದರ್ಥವು. ಅಂತಹ ಜಾತಿಯನ್ನು ಹೇಳುವುದಾವುದೋ ಅದು 'ತದ್ವಾಕ್' ಎಂಬುದು. ಇವರ ಮೇಲೆ ವಿಷಯಸಪ್ತಮೀವಿಭಕ್ತಿಯನ್ನು ಮಾಡಲು 'ತದ್ವಾಚಿ' ಎಂದರ್ಥವಾಗುವುದು. ಇದು 'ತಿಙ್' ಎಂಬುದಕ್ಕೆ ವ್ಯಧಿಕರಣ ವಿಶೇಷಣವು. ತಥಾಚ — ಜಾತಿವಾಚಕವಾದ ಅಥವಾ ಜಾತಿವಚನ ವಿಷಯದಲ್ಲಿ ಇರುವ ತಿಙಂತವಾವುದೋ ಅದೂ ಜಾತ್ಯಾಖ್ಯೆಯಲ್ಲಿ ಏಕತ್ವವಿದ್ದರೂ ಅನೇಕತ್ವವನ್ನು ವಿಕಲ್ಪವಾಗಿ ಹೊಂದುವುದು—ಎಂದು ಸೂತ್ರಾರ್ಥವಾಗಲು — 'ಆನೆ ನೂಂಕಿದುದು, ಆನೆ ನೂಂಕಿದುವು' ಮೊದಲಾದುವು ಸಿದ್ಧಿಸುವುವು.

ಆದರೆ ಇಲ್ಲಿ ಆಖ್ಯಾತಮಾತ್ರಕ್ಕೆ ಧಾತ್ವರ್ಥಾನುಕೂಲ ವ್ಯಾಪಾರವಾಚಿತ್ವನಿಯಮವಿರುವುದರಿಂದ ಎಲ್ಲಾ ಜಾತಿವಾಚಿತ್ವವು ಸಂಭವಿಸುವುದಿಲ್ಲವೆಂದು ಶಂಕೆಯುಂಟಾಗುವುದು. ಆದಾಗ್ಯೂ ನಾವು—ಇಲ್ಲಿ ತಿಙ್ಗೆ ಜಾತಿವಾಚತ್ವವು ಹೇಳಲ್ಪಡುವುದಿಲ್ಲ, ಮತ್ತೇನೆಂದರೆ — ಎಲ್ಲಿ ಸುಬಂತ ಪದದಿಂದ ಜಾತಿಯು ಹೇಳಲ್ಪಡುವುದೋ ಅಲ್ಲಿ ತತ್ಕ್ರಿಯಾವಾಚಕವಾದ ಪದವಾವುದೋ ಅದಕ್ಕೆ ಸಾಮಾನ್ಯವಾಗಿ ಏಕತ್ವವಿದ್ದರೂ ಇದರಿಂದ ಅನೇಕವದ್ಭಾವವು ಅತಿದೇಶಿಸಲ್ಪಡುವುದು — ಎಂದು ತಾತ್ಪರ್ಯವನ್ನು ಕಲ್ಪಿಸುವುದರಿಂದ ಆವ ದೋಷವೂ ಇಲ್ಲವೆಂದು ತಿಳಿಯಬೇಕು.

**ಅವತಾರಿಕೆ ೩೨೩**

ಪೂರ್ವದಲ್ಲಿ — ಜಾತ್ಯಾದಿಗಳಲ್ಲಿ ಅನೇಕತ್ವಾತಿದೇಶವು ಮಾಡಲ್ಪಟ್ಟಿತು. ಈಗ ಪೂಜೋಪಹಾಸಾದಿಗಳಲ್ಲಿ ಪ್ರಯುಜ್ಯಮಾನವಾದ ಶಬ್ದಸಾಮಾನ್ಯಕ್ಕೂ ಏಕತ್ವವಿದ್ದರೂ ಅನೇಕತ್ವವು ಹೇಳಲ್ಪಡುವುದು. ಇಲ್ಲಿ ವಿಷಯನಿಯಮವಿಲ್ಲದೆ 'ಎನ್' ಶಬ್ದಮಾತ್ರಕ್ಕೆ ಅನೇಕತ್ವವನ್ನು ಅತಿದೇಶಿಸುತ್ತಾನೆ.

**ಸೂತ್ರಂ ॥ ಎನ್ ॥ ೩೨೩ ॥**

**ಅರ್ಥ ॥ 'ಎನ್' ಶಬ್ದವು ಏಕಾರ್ಥವಾಗಿದ್ದರೂ ವಿಕಲ್ಪವಾಗಿ ಅನೇಕತ್ವವನ್ನು ಹೊಂದುವುದು.**

**ಉದಾಹರಣೆ ॥** 'ಆಂ ಮಾಡಿದೆಂ, ಆಂ ಮಾಡಿದೆವು; ಎನ್ನ ಮನೆ, ಎಮ್ಮ ಮನೆ; ಎನ್ನ ಕುಲಂ, ಎಮ್ಮ ಕುಲಂ ॥' ಮೊದಲಾದುವು ಇದಕ್ಕೆ ಲಕ್ಷ್ಯಗಳು. ಇಲ್ಲಿ ವಿಕಲ್ಪವೆಂಬುದು ವ್ಯವಸ್ಥಿತವಾಗಿರುವುದೆಂದು ವ್ಯವಸ್ಥಿತವಿಭಾಷಾಶ್ರಯಣವನ್ನು ಮಾಡಲು ಎಲ್ಲಿ ಸಂಜ್ಞಾಶಬ್ದಗಳಿಗೆ 'ಎನ್' ಎಂಬುದು ವಿಶೇಷ್ಯವಾಗುವುದೋ ಅಲ್ಲಿ ಇದು ಬರುವುದಿಲ್ಲವೆಂದು ವ್ಯಾಖ್ಯಾನ ಮಾಡುವುದರಿಂದ 'ಆಂ ದೇವದತ್ತಂ ಬಂದೆಂ' ಮೊದಲಾದ ಪ್ರಯೋಗಗಳಲ್ಲಿ ಬರುವುದಿಲ್ಲವೆಂದು ತಿಳಿಯಬೇಕು.

**ವಿಚಾರ ೩೨೩**

ಈ ಸೂತ್ರದಲ್ಲಿ — 'ಎನ್' ಎಂಬುದೊಂದೇ ಪದವಿರುವುದು. ಇದು ಅಸ್ಮದರ್ಥಕವಾದ ಶಬ್ದವು. ಪೂರ್ವದಿಂದ 'ಅನೇಕವತ್, ವಾ' ಎಂಬುವು ಅನುವರ್ತಿಸಲ್ಪಡುವುವು. ತಥಾಚ — 'ಎನ್ ಶಬ್ದವು ವಿಕಲ್ಪವಾಗಿ ಅನೇಕವತ್ತಾಗುವುದೆಂದು ಸೂತ್ರಾರ್ಥವಾಗಲು 'ಆಂ ಮಾಡಿದೆಂ (ದೆವು)' ಮೊದಲಾದುವು ಸಿದ್ಧಿಸುವುವು.

ಇಲ್ಲಿ ಸಂಸ್ಕೃತವ್ಯಾಕರಣಕಾರರು ಹೇಳಿರುವ '**ಅಸ್ಮದೋದ್ವಯೋಶ್ಚ**' ಎಂಬ ಅತಿದೇಶ ಸೂತ್ರದಲ್ಲಿ ಹೇಳಿರುವ '**ಸವಿಶೇಷಣಾನಾಂ ಪ್ರತಿಷೇಧೋ ವಕ್ತವ್ಯಃ**' ಎಂಬ ವಾರ್ತಿಕದಲ್ಲಿ

ಹೇಳಿರುವಂತೆ ಭಾಷೆಯಲ್ಲಿ ಹಾಗೆ ಸ್ಪಷ್ಟವಾಗಿ ಹೇಳದಿದ್ದರೂ ವಾಗ್ರಹಣಕ್ಕೆ ವ್ಯವಸ್ಥಿತ ವಿಭಾಷಾಪರತ್ವವನ್ನು ಹೇಳಿ ವ್ಯಾಖ್ಯಾನಮಾಡಿರುವುದರಿಂದ ಸವಿಶೇಷಣಗಳಿಗೆ ಬರುವುದಿಲ್ಲವೆಂದು ತಿಳಿಯಬೇಕು.

**ಅವತಾರಿಕೆ ೩೨೪**

ಓಗೆಯೋ ಅರ್ಥವಿಶೇಷದಲ್ಲಿ ವೈಕಲ್ಪಿತಾತಿದೇಶವನ್ನು ಬೋಧಿಸುತ್ತಾನೆ.

**ಸೂತ್ರಂ ॥ ಪೂಜೋಪಹಾಸೇ ॥ ೩೨೪ ॥**

**ಅರ್ಥ ॥ ಪೂಜಾ ವಿಷಯದಲ್ಲಿಯೂ ಉಪಹಾಸ ವಿಷಯದಲ್ಲಿಯೂ ಏಕಾರ್ಥವಾದುದೂ ವಿಕಲ್ಪವಾಗಿ ಅನೇಕವತ್ತಾಗುವುದು.**

**ಉದಾಹರಣೆ ॥** ಪೂಜೆಯಲ್ಲಿ — 'ಎಮ್ಮ ತಂದೆ, ಎಮ್ಮ ತಂದೆಗಳ್; ಎಮ್ಮ ಗುರು, ಎಮ್ಮ ಗುರುಗಳ್' ಮೊದಲಾದುವೂ; ಉಪಹಾಸದಲ್ಲಿ —

ಬಡವಾದಿರರಸ ಕಾಲೊಳ್
ನಡೆದಪಿರೊಡನಾರುಮಿಲ್ಲ ಕಡಲೆಗಳೇ ನಿ
ಮ್ಮುಡಿಯೊಳಗೆ ಪಡುವ ದೇಗುಲ
ದೆಡೆಯಾವುದು ಕುಡದ ನಿಮುಗಮಿಾಯಿಡರಾಯ್ತೇ

ಮೊದಲಾದುವೂ ಲಕ್ಷ್ಯಗಳೆಂದು ಭಾವಿಸಬೇಕು.

**ವಿಚಾರ ೩೨೪**

ಇಲ್ಲಿ — 'ಪೂಜೋಪಹಾಸೇ' ಎಂದು ಒಂದೇ ಪದವಿರುವುದು. ಇದು ವಿಷಯ ಸಪ್ತಮ್ಯಂತವು. ಪೂರ್ವದಿಂದ 'ಅನೇಕವತ್, ವಾ' ಎಂಬಿವು ಅನುವರ್ತಿಸಲ್ಪಡುವುವು. ತಥಾಚ—ಪೂಜಾ ವಿಷಯದಲ್ಲಿಯೂ ಉಪಹಾಸ ವಿಷಯದಲ್ಲಿಯೂ ಪ್ರಯುಜ್ಯಮಾನವಾದುದು ಏಕಾರ್ಥಬೋಧವಾಗಿದ್ದರೂ ವಿಕಲ್ಪವಾಗಿ ಅನೇಕವತ್ತಾಗುವುದು—ಎಂದು ಸೂತ್ರಾರ್ಥವಾಗುವುದರಿಂದ 'ಎಮ್ಮ ತಂದೆ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು.

ಇಲ್ಲಿ ಪೂಜೆಯೆಂದರೆ — ಮಾತಾಪಿತ್ರಾಚಾರ್ಯಾದಿಗಳ ವಿಷಯದಲ್ಲಿ ತೋರಿಸುವ ವಿನಯವಿಶೇಷವೆಂದೂ ಪ್ರಸಿದ್ಧ ದೋಷವುಳ್ಳವರಲ್ಲಿ ವ್ಯಾಜೋಕ್ತಿಯಿಂದ ದೋಷೋದ್ಘಾಟನೆ ಮಾಡುವುದು ಉಪಹಾಸವೆಂದೂ ತಿಳಿಯಬೇಕು.

**ಅವತಾರಿಕೆ ೩೨೫**

ಓಗೆಯೋ ಅರ್ಥವಿಶೇಷವು ತೋರುವಾಗ ಅನೇಕವದ್ಭಾವವನ್ನು ವಿಧಿಸುತ್ತಾನೆ.

**ಸೂತ್ರಂ ॥ ಪ್ರತಿನಿರ್ದೇಶ್ಯಂ ॥ ೩೨೫ ॥**

**ಅರ್ಥ ॥ ವಿಧೇಯವಾಚಕವಾದುದು ಏಕಾರ್ಥವಾಗಿದ್ದರೂ ವಿಕಲ್ಪವಾಗಿ ಅನೇಕವದ್ಭಾವವನ್ನು ಹೊಂದುವುದು.**

**ಉದಾಹರಣೆ ॥** 'ಐಶ್ವರ್ಯಮಸ್ಥಿರಮಧ್ರುವಂ, ಅಧ್ರುವಂಗಳ್; ಬೆರಲ್ ತೋರಿತ್ತು, ತೋರಿದುವು; ನುಡಿ ಸೂರುಳ್, ಸೂರುಳ್ಗಳ್ ॥' ಮೊದಲಾದ ವಿಧೇಯವಾಚಕಗಳೆಲ್ಲಾ ಇದಕ್ಕೆ ಲಕ್ಷ್ಯಗಳಾಗುವುವು.

**ವಿಚಾರ ೩೨೫**

ಈ ಸೂತ್ರದಲ್ಲಿ ' ಪ್ರತಿನಿರ್ದೇಶ್ಯಂ ' ಎಂದೊಂದೇ ಪದವಿರುವುದು. ಪೂರ್ವದಿಂದ ' ಅನೇಕವತ್, ವಾ ' ಎಂಬೆರಡು ಪದಗಳು ಅನುವರ್ತಿಸಲ್ಪಡುವುವು. ' ಪ್ರತಿನಿರ್ದೇಶ್ಯ ' ವೆಂದರೆ ಪ್ರತಿವಚನಕ್ಕೆ ವಿಷಯವಾದುದೆಂದರ್ಥವು. ಪ್ರತಿವಚನವೆಂಬುದು ಆವುದಾದರೂ ಒಂದನ್ನು ಪೇಳಿಸಿಯೇ ಸಂಭವಿಸುವುದರಿಂದ ತದ್ವಿಷಯಭೂತವು ವಿಧೇಯವೆಂದು ಫಲಿತವಾಗುವುದು. ಇದು ಏಕಾರ್ಥಕವಾಗಿದ್ದರೂ ಅನೇಕವತ್ತು ವಿಕಲ್ಪವಾಗಿ ಆಗುವುದು—ಎಂದು ಸೂತ್ರಾರ್ಥವಾಗುವುದರಿಂದ ' ಐಶ್ವರ್ಯಮೆಲ್ಲಮಧ್ರುವಂ, ಅಧ್ರುವಂಗಳ್ ' ಮೊದಲಾದುವು ಸಿದ್ಧಿಸುವುವು. ಇಲ್ಲಿ ಐಶ್ವರ್ಯವನ್ನು ಉದ್ದೇಶಿಸಿ ನಶ್ವರತ್ವವು ವಿಧಿಸಲ್ಪಡುವುದು.

**ಅವತಾರಿಕೆ ೩೨೬**

ಪೂರ್ವದಲ್ಲಿ — ' ಏಕವದ್ದ್ವಂದ್ವಃ ' ಎಂಬ ಸೂತ್ರದಿಂದ ಅನೇಕಾರ್ಥಕವಾದುದಕ್ಕೆ ಏಕವದ್ಭಾವವನ್ನು ವಿಧಿಸಿ ' **ಜಾತ್ಯಾಖ್ಯಾಯಾಮನೇಕವತ್ ॥ ೩೨೧ ॥** ' ಇತ್ಯಾದಿ ಸೂತ್ರಗಳಿಂದ ಏಕಾರ್ಥಕವಾದುದಕ್ಕೆ ವೈಕಲ್ಪಿಕಾನೇಕವದ್ಭಾವವನ್ನು ವಿಧಿಸಿ ಪುನಃ ಅನೇಕಾರ್ಥಕವಾದುದಕ್ಕೆ ಏಕವದ್ಭಾವವನ್ನು ವಿಧಿಸುತ್ತಾನೆ.

**ಸೂತ್ರಂ ॥ ಸಂಖ್ಯೇಯಮನೇಕವತ್ ॥ ೩೨೬ ॥**

**ಅರ್ಥ** ॥ ಸಂಖ್ಯಾಶಬ್ದವಿಶೇಷ್ಯವಾದುದೇ **ಸಂಖ್ಯೇಯವು. ಇದು ಅನೇಕಾರ್ಥಕವಾಗಿದ್ದರೂ** ವಿಕಲ್ಪವಾಗಿ ಏಕವತ್ತಾಗುವುದು.

**ಉದಾಹರಣೆ** ॥ ' ಈರೇಳು ಲೋಕಂಗಳ್, ಅಥವಾ—ಲೋಕಂ ॥ ಎರಡಯ್ದು, ಅಥವಾ—ಅಯ್ದುಗಳ್; ಈರಯ್ದವಸ್ಥೆಗಳ್, ಅಥವಾ—ಅವಸ್ಥೆ ' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೨೬**

ಈ ಸೂತ್ರದಲ್ಲಿ — ' ಸಂಖ್ಯೇಯಂ, ಏಕವತ್ ' ಎಂದು ಎರಡು ಪದಗಳಿರುವುವು. ' ವಾ ' ಎಂಬುದು ಅನುವರ್ತಿಸಲ್ಪಡುವುದು. ಸಂಖ್ಯೇಯವೆಂಬುದು — ' **ಸಂಖ್ಯಾತುಮರ್ಹಃ** ' ಎಂಬ ವ್ಯುತ್ಪತ್ತಿಯಿಂದ ನಿಷ್ಪನ್ನವಾಗಿರುವುದರಿಂದ ಸಂಖ್ಯೇಯವೆಂದರೆ — ' ಒಂದು ' ಮೊದಲಾದ ಸಂಖ್ಯೆಗೆ ವಿಷಯವಾದುದು ಅಥವಾ ಸಂಖ್ಯಾಶ್ರಯವಾದುದು ಎಂದರ್ಥವಾಗುವುದು. ಅದು ವಸ್ತುಮಾತ್ರವೆಂದು ತಿಳಿಯಬೇಕು. ಆದಾಗ್ಯೂ ಆವುದು ಸಂಖ್ಯಾಶಬ್ದಗಳಿಂದ ವಿಶೇಷಿಸಲ್ಪಡುವುದೋ ಅದೇ ಸಂಖ್ಯೇಯವೆಂದು ಇಲ್ಲಿ ವ್ಯವಹರಿಸಲ್ಪಡುವುದು. ತಥಾಚ — ಸಂಖ್ಯಾಶಬ್ದವಿಶೇಷ್ಯವು ಅನೇಕಾರ್ಥಕವಾಗಿದ್ದರೂ ವಿಕಲ್ಪವಾಗಿ ಏಕವತ್ತಾಗುವುದು ಎಂದು ಸೂತ್ರಾರ್ಥವಾಗಲು ' ಈರೇಳು ಲೋಕಂಗಳ್—ಲೋಕಂ ' ಮೊದಲಾದುವು ಸಿದ್ಧಿಸುವುವು.

ಇಲ್ಲಿ ವಸ್ತುಮಾತ್ರಕ್ಕೆ ಸಂಖ್ಯೇಯತ್ವವಿದ್ದರೂ ಸಂಖ್ಯಾಶಬ್ದದಿಂದ ಆವುದು ವಿಶೇಷಿಸಲ್ಪಡುವುದೋ ಅದೇ ಸಂಖ್ಯೇಯವೆಂದು ಪ್ರಾಚೀನರು ಪ್ರಯೋಗಿಸಿರುವ —

**ಕಲ್ಪಂ ಪದಿನಾಱವಱೊಳ ।**
**ನಲ್ಪಕ್ರಿಪಟಲಮಿರ್ಪ್ಪವಯ್ವತ್ತೆರಡಾ ।**
**ಕಲ್ಪಜರಿರ್ಪ್ಪ ವಿಮಾನವಿ ।**
**ಕಲ್ಪಂ ಖಖನಗರಸಾಂಕಗತಿಕರಿಸಂಖ್ಯಂ ॥**

ಕಲ್ಪಂಗಳ್ ಪದಿನಾಱಾ ।
ಕಲ್ಪಂಗಳೊಳಿಂದ್ರರೆಣಿಸೆ ಪನ್ನಿರ್ವರ್ ಸಂ ।
ಕಲ್ಪಿತಸುಖಾನುಭೋಕ್ತೃಗ ।
ಳಲ್ಪೇತರಮಹಿಮರನಪವರ್ತ್ಯಾಯುಷ್ಕರ್ ॥

ಮೊದಲಾದ ಪ್ರಯೋಗಗಳಿಂದ ತಿಳಿಯುವುದು.

ಈ ಸೂತ್ರವು 'ಏಕವದ್ದ್ವಂದ್ವಃ' ಎಂಬ ಸೂತ್ರದಂತೆ ಏಕವದ್ಭಾವವಿಧಾಯಕವು. ಆದುದರಿಂದ ಅರ್ಥಾತ್ ಪ್ರಾಪ್ತವಾದ ಅನೇಕತ್ವಕ್ಕೆ ಏಕತ್ವವು ಅತಿದೇಶಿಸಲ್ಪಡುವುದು. ಅನೇಕವದ್ಭಾವವಿಧಾಯಕ ಸೂತ್ರಗಳಲ್ಲಿ ಅರ್ಥಾತ್ ಪ್ರಾಪ್ತವಾದ ಏಕತ್ವಕ್ಕೆ ಅನೇಕತ್ವವು ವಿಧಿಸಲ್ಪಡುವುದು. ತಥಾಚ — ಇವೆರಡೂ ವೈಕಲ್ಪಿಕವಾದುದರಿಂದ ಸರ್ವತ್ರವು ಏಕವಚನ ಬಹುವಚನಗಳೆರಡೂ ಬರುವುವೆಂದು ಫಲಿತವಾಗುವುದು. ಹೀಗೆ ಇರಲು ಎಲ್ಲಾ ಕಡೆಯಲ್ಲಿಯೂ ವಿಕಲ್ಪವಾಗಿ ಏಕವದ್ಭಾವವೊಂದನ್ನೇ ಆಗಲಿ ಅನೇಕವದ್ಭಾವವೊಂದನ್ನೇ ಆಗಲಿ ವಿಧಿಸುವುದನ್ನು ಬಿಟ್ಟು ಒಂದು ಸೂತ್ರದಲ್ಲಿ ಏಕವದ್ಭಾವವನ್ನೂ ಇತರ ಸೂತ್ರಗಳಲ್ಲಿ ಅನೇಕವದ್ಭಾವವನ್ನೂ ವಿಧಿಸಿರುವುದು ಮೊದಲು ಉಪಸ್ಥಿತವಾದ ಅರ್ಥಾನುರೋಧವಾಗಿ ಎಂದು ತಿಳಿಯುವುದು. ಆದರೆ — ಈ ಸೂತ್ರವನ್ನು — 'ಏಕವದ್ದ್ವಂದ್ವಃ ॥೩೨೦॥' ಎಂಬ ಸೂತ್ರಾನಂತರದಲ್ಲಿಯೇ ಹೇಳಿ ಇಲ್ಲಿರುವ ಏಕವದ್ಗ್ರಹಣವನ್ನು ಬಿಟ್ಟು ಪೂರ್ವಸೂತ್ರದಿಂದಲೇ ಏಕವತ್ಪದವನ್ನು ಅನುವರ್ತಿಸಿ ಸೂತ್ರಾರ್ಥವನ್ನು ಹೇಳಲು ಲಾಘವವಿರುವುದು. ಆದಾಗ್ಯೂ ದ್ವಂದ್ವದಲ್ಲಿ ಏಕವದ್ಭಾವವು ಸಂಸ್ಕೃತ ಭಾಷಾದಿಸಾಧಾರಣವಾದುದರಿಂದ ಸಾರ್ವತ್ರಿಕವು. ಇದಾದರೊ ಭಾಷಾಮಾತ್ರವಿಷಯಕವು. ಅದರಲ್ಲಿಯೂ ಕ್ವಾಚಿತ್ಕವಾಗಿಯೇ ಬರುವುದು ಎಂದು ಸೂಚಿಸಲು ಗುರುನಿರ್ದೇಶವನ್ನಂಗೀಕರಿಸಿ ಪ್ರಕರಣದ ಕೊನೆಯಲ್ಲಿ ಈ ಸೂತ್ರವು ಹೇಳಲ್ಪಟ್ಟಿದೆ ಎಂದು ತಿಳಿಯಬೇಕು. ಆದ್ಯಂತಗಳಲ್ಲ ಏಕವದ್ಭಾವವನ್ನು ಹೇಳಿರುವುದರಿಂದಲೂ ಅನೇಕವದ್ಭಾವವನ್ನು ವಿಧಿಸಿದ್ದರೂ ಪಕ್ಷಾಂತರದಲ್ಲ ಏಕವತ್ತ್ವವೂ ಬರುವುದರಿಂದಲೂ ಇದಕ್ಕೆ ಏಕವದ್ಭಾವಪ್ರಕರಣವೆಂದು ಹೆಸರನ್ನು ಕೊಟ್ಟಿರುವುದು.

॥ ಇತಿ ಏಕವದ್ಭಾವ ಪ್ರಕರಣಂ ಸಮಾಪ್ತಂ ॥

## || ಅಥ ಸಮಾಸಾಂತಪ್ರತ್ಯಯ ಪ್ರಕರಣ ಪ್ರಾರಂಭಃ ||

**ಅವತಾರಿಕೆ ೩೨೭**

ಪೂರ್ವದಲ್ಲಿ ಉಕ್ತವಾದ ಸಮಾಸಗಳಮೇಲೆ ಬರುವ ಸಮಾಸಾಂತಪ್ರತ್ಯಯಗಳನ್ನು ವಿಧಿಸಲು ಮೊದಲು ಬಹುವ್ರೀಹಿಸಮಾಸಸಾಧಾರಣವಾದ ಪ್ರತ್ಯಯವನ್ನು ವಿಧಿಸುತ್ತಾನೆ.

**ಸೂತ್ರಂ || ಅಬ್ಬಹುವ್ರೀಹೇಃ || ೩೨೭ ||**

**ಅರ್ಥ || ಬಹುವ್ರೀಹಿ ಸಮಾಸದ ದೆಸೆಯಿಂದ ಪರವಾಗಿ ಅಪ್ ಪ್ರತ್ಯಯವು ಬರುವುದು.**

**ಉದಾಹರಣೆ ||** ‘ ಅಲರ್ಗಣ್ಣಂ, ಪೆಱೆನೊಸಲಂ, ಕುಡುವಿಲ್ಲಂ, ನಾಲ್ದೋಳಂ, ನಿಡುಗಾಲಂ || ’ ಮೊದಲಾದ ಬಹುವ್ರೀಹಿ ಸಮಾಸಗಳು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೨೭**

ಈ ಸೂತ್ರದಲ್ಲಿ — ‘ ಅಪ್, ಬಹುವ್ರೀಹೇಃ ’ ಎಂದು ಎರಡು ಪದಗಳಿರುವುವು. ‘ ಅಪ್ ’ ಎಂಬುದು ಪ್ರತ್ಯಯಬೋಧಕವು. ಇದೇ ಇಲ್ಲಿ ವಿಧೇಯವು. ‘ ಬಹುವ್ರೀಹೇಃ ’ ಎಂಬುದು ಪ್ರಕೃತಿನಿರ್ದೇಶವು. ತಥಾಚ — ಬಹುವ್ರೀಹಿಸಮಾಸದ ದೆಸೆಯಿಂದ ಪರವಾಗಿ ‘ ಅಪ್ ’ ಪ್ರತ್ಯಯವು ಬರುವುದು; ಇದು ಸಮಾಸದ ಕೊನೆಗೆ ಬರುವುದರಿಂದ ಇದಕ್ಕೆ ಸಮಾಸಾಂತವೆಂದು ಹೆಸರು ಬರುವುದು ಎಂದು ಸೂತ್ರಾರ್ಥವಾಗಲು ‘ಅಲರ್ಗಣ್ಣಂ’ ಮೊದಲಾದುವು ಸಿದ್ಧಿಸುವುವು.

ಇದು ಬಹುವ್ರೀಹಿಸಾಮಾನ್ಯಕ್ಕೂ ಹೇಳಲ್ಪಟ್ಟಿದ್ದರೂ ಮುಂದಿನ ಸೂತ್ರದಿಂದ ಸ್ವರಾಂತ ಬಹುವ್ರೀಹಿಗೆ ‘ಅಟ್’ ಪ್ರತ್ಯಯವನ್ನು ವಿಧಿಸುವುದರಿಂದ ಅದಕ್ಕೆ ಅವಿಷಯವಾದ ವ್ಯಂಜನಾಂತ ಬಹುವ್ರೀಹಿಯು ಇದಕ್ಕೆ ವಿಷಯವೆಂದು ತಿಳಿಯಬೇಕು. ಈ ಪ್ರತ್ಯಯದಲ್ಲಿ ಹೇಳಿರುವ ಪಕಾರವು ಇತ್-ಸಂಜ್ಞಕವಾದುದು. ಇದು — ‘ **ಅಪ್ಕ್ಯಾತ್ ||೧೯೪||** ’ ಎಂಬ ಸೂತ್ರದಲ್ಲಿ ಈ ಸೂತ್ರದಿಂದ ವಿಹಿತವಾದ ಪ್ರತ್ಯಯವನ್ನೇ ಬೋಧಿಸುವುದು.

ಇಲ್ಲಿ ಬಹುಳಾಧಿಕಾರವಿರುವುದರಿಂದ ಈ ಸೂತ್ರವು ಸ್ತ್ರೀ-ಪುಲ್ಲಿಂಗವಿಷಯಕವೆಂದು ತಿಳಿಯುವುದು. ನಪುಂಸಕಲಿಂಗದಲ್ಲಿ ಪ್ರಚುರವಾಗಿ ಪ್ರಯೋಗಗಳು ಇಲ್ಲವಾದುದರಿಂದ ಕ್ವಾಚಿತ್ಕವೆಂದು ತಿಳಿಯಬೇಕು. ಆದುದರಿಂದ —

ನೆಲನಱುಂಡೂಡುವ ಪೊಱಿಸೀ
ರಲಂಪಿಸಿಂ ಪದಕೆ ಪೊಂಸ್ವು ಮಱಿನೀರೊಲವಿಂ
ಪಲಗೆಯ್ಗಳ್ ಪೊಲಗಳಿನಲ್
ಪುಲಿನಾಡಂ ಪೊಲ್ವ ನಾಡುಗಳ್ ಪೆಱವೊಳವೇ

ಮೊದಲಾದ ಪ್ರಯೋಗಗಳಲ್ಲಿ ಸಮಾಸಾಂತಪ್ರತ್ಯಯವು ಬಂದಿರುವುದಿಲ್ಲವೆಂದು ತಿಳಿಯಬೇಕು.

**ಅವತಾರಿಕೆ ೩೨೮**

ಪೂರ್ವದಲ್ಲಿ ಬಹುವ್ರೀಹಿಸಾಮಾನ್ಯಕ್ಕೂ ಅಪ್-ಪ್ರತ್ಯಯವನ್ನು ವಿಧಿಸಲು ‘ ಪಲಗೆರ್ದೆ ’ ಮೊದಲಾದ ಸ್ವರಾಂತ ಬಹುವ್ರೀಹಿಗೂ ಪ್ರಾಪ್ತವಾಗಲು ಅದಕ್ಕೆ ಬಾಧಕವಾಗಿ ಅಟ್-ಪ್ರತ್ಯಯವನ್ನು ವಿಧಿಸುತ್ತಾನೆ.

**ಸೂತ್ರ || ಅಟ್ ಸ್ವರಾತ್ || ೩೨೮ ||**

**ಅರ್ಥ** || ಸ್ವರಾಂತವಾದ ಬಹುವ್ರೀಹಿ ಸಮಾಸದ ಬೆಸೆಯಿಂದ ಪರವಾಗಿ ಸಮಾಸಾಂತವಾದ ಅಟ್-ಪ್ರತ್ಯಯವು ಬರುವುದು.

**ಉದಾಹರಣೆ** || ' ಪಲಗೆರ್ದೆಯಂ, ನಿಡುವಣೆಯಂ, ನುಣ್ದೊಡೆಯಳ್[೧], ಬಟ್ಟಮೊಲೆಯಳ್, ನಿಡುಜಡೆಯಳ್, ಪೆಱಿವಣೆಯಳ್ || ' ಮೊದಲಾದ ಸ್ವರಾಂತ ಬಹುವ್ರೀಹಿಯೆಲ್ಲಾ ಇದಕ್ಕೆ ಲಕ್ಷ್ಯಗಳು.

**ವಿಚಾರ ೩೨೮**

ಈ ಸೂತ್ರದಲ್ಲಿ — ' ಅಟ್, ಸ್ವರಾತ್ ' ಎಂದು ಎರಡು ಪದಗಳಿರುವುವು. ಪೂರ್ವಸೂತ್ರದಿಂದ ' ಬಹುವ್ರೀಹೇಃ ' ಎಂಬುದು ಅನುವರ್ತಿಸಲ್ಪಡುವುದು. ' ಅಟ್ ' ಎಂಬುದು ಟಿತ್ತಾದ ಪ್ರತ್ಯಯವು. ' ಸ್ವರಾತ್ ' ಎಂಬುದು ಅನುವರ್ತಮಾನವಾದ ' ಬಹುವ್ರೀಹೇಃ ' ಎಂಬುದಕ್ಕೆ ವಿಶೇಷಣವು. ಆದುದರಿಂದ—' **ಯೇನ ವಿಧಿಸ್ತದಂತಸ್ಯ** ' ಎಂಬುದರಿಂದ ತದಂತಬೋಧಕವಾಗುವುದು. ತಥಾಚ — ಸ್ವರಾಂತ ಬಹುವ್ರೀಹಿಗೆ ಪರವಾಗಿ ಸಮಾಸಾಂತವಾಗಿ ಅಟ್-ಪ್ರತ್ಯಯವು ಬರುವುದು—ಎಂದು ಸೂತ್ರಾರ್ಥವಾಗಲು ' ಪಲಗೆರ್ದೆಯಂ ' ಮೊದಲಾದುವು ಸಿದ್ಧಿಸುವುವು. ' ಅಟ್ ' ಎಂದು ಟ ಕಾರ ಸಹಿತವಾಗಿ ಉಚ್ಚಾರಣೆ ಮಾಡಿರುವುದು ' **ಅಡ್ಡಾಣಾಚಃ ||೧೮೨||** ' ಎಂಬ ಸೂತ್ರದಲ್ಲಿ ಈ ಸೂತ್ರದಿಂದ ವಿಹಿತವಾದ ಪ್ರತ್ಯಯವನ್ನೇ ಬೋಧಿಸುವುದಕ್ಕಾಗಿ ಎಂದು ತಿಳಿಯಬೇಕು.

ಇಲ್ಲಿ — ' ಸ್ವರಾತ್ ' ಎಂದು ಹೇಳಿರುವುದರಿಂದ ' ಕುಸಿಗೊರಲಂ, ಕುಸಿಗೊರಲಿ ' ಮೊದಲಾದ ಪ್ರಯೋಗಗಳಲ್ಲಿ ಅಪ್-ಪ್ರತ್ಯಯವು ಬರುವುದಿಲ್ಲವೆಂದು ತಿಳಿಯಬೇಕು.

**ಅವತಾರಿಕೆ ೩೨೯**

ಪೂರ್ವಸೂತ್ರದಲ್ಲಿ ಸಾಮಾನ್ಯವಾಗಿ ಸ್ವರಾಂತವಾದ ಬಹುವ್ರೀಹಿ ಸಮಾಸಕ್ಕೆ ಅಟ್-ಪ್ರತ್ಯಯವು ಬರುವುದೆಂದು ಹೇಳಲ್ಪಟ್ಟಿತು. ಈಗ ಕೆಲವು ಸ್ವರಾಂತ ಬಹುವ್ರೀಹಿಗೂ ಅಟ್-ಪ್ರತ್ಯಯವನ್ನು ಮಾಡದೆ ಇ ಕಾರಾಂತವಾಗಿ ಶಿಷ್ಟರು ಪ್ರಯೋಗಿಸುವುದರಿಂದ ಅವುಗಳ ಸಾಧುತ್ವಬೋಧನಾರ್ಥವಾಗಿ ಪೂರ್ವಸೂತ್ರಕ್ಕೆ ಅಪವಾದ ಸೂತ್ರವನ್ನು ಹೇಳುತ್ತಾನೆ.

**ಸೂತ್ರಂ || ಇಶ್ಚಾಗಾದಿಭ್ಯಃ || ೩೨೯ ||**

**ಅರ್ಥ || ಚಾಗಾದಿ ಗಣಪಠಿತವಾದ ಶಬ್ದಾಂತ ಬಹುವ್ರೀಹಿಗೆ ಸಮಾಸಾಂತವಾದ ಇ-ಪ್ರತ್ಯಯವು ಬರುವುದು.**

**ಉದಾಹರಣೆ** || ' ಕಡುಚಾಗಿ, ಕಡುಗೆಲಸಿ, ಪುಸಿಬಾದಿ, ಬಲ್ಲುಜ್ಜುಗಿ || ' ಮೊದಲಾದುವು ಇದಕ್ಕೆ ಲಕ್ಷ್ಯಗಳೆಂದು ತಿಳಿಯುವುದು. ಇದು ಆಕೃತಿಗಣವಾದುದರಿಂದ ಇಲ್ಲಿ ಅಪಠಿತಗಳಾದ — ' ಬಸವ, ನಿಟ್ಟುರ, ಗತಕ ' ಮೊದಲಾದುವೂ ಶಿಷ್ಟಪ್ರಯೋಗಗಳೆಂದು ಗ್ರಹಿಸಲ್ಪಡುವುವು.

**ವಿಚಾರ ೩೨೯**

ಈ ಸೂತ್ರದಲ್ಲಿ — ' ಇಃ, ಚಾಗಾದಿಭ್ಯಃ ' ಎಂದು ಎರಡು ಪದಗಳು ಇರುವುವು. ಪೂರ್ವದಿಂದ ' ಬಹುವ್ರೀಹೇಃ ' ಎಂಬುದು ಅನುವರ್ತಿಸಲ್ಪಡುವುದು. ಇದು ಏಕವಚನಾಂತವಾಗಿದ್ದರೂ ಆಕೃತಿಗಣತ್ವಸೂಚನಾರ್ಥವಾಗಿ ಮಾಡಿರುವ ಬಹುವಚನಾಂತ ' ಚಾಗಾದಿಭ್ಯಃ ' ಎಂಬುದರಿಂದ

ಪಾಠಾಂತರ : ೧ ನುಣ್ದೊಡೆಯಂ

ವಿಶೇಷಿಸಲ್ಪಡುವುದು. ಇದರಿಂದ ತದಂತಲಾಭವು ಬರುವುದು. 'ಇಃ' ಎಂಬುದೇ ಇಲ್ಲಿ ವಿಧೇಯವು. ತಥಾಚ — ಚಾಗಾದಿಗಣಪಠಿತ ಶಬ್ದಾಂತ ಬಹುವ್ರೀಹಿಗೆ 'ಇ' ಪ್ರತ್ಯಯವು ಬರುವುದೆಂದರ್ಥವಾಗುವುದು. ಆದುದರಿಂದ 'ಕಡುಚಾಗಿ' ಮೊದಲಾದುವು ಸಿದ್ಧಿಸುವುವು. ಇಲ್ಲಿ 'ಚಾಗಾದಿಭ್ಯಃ' ಎಂಬ ವಿಶೇಷಣವನ್ನು ಮಾಡಿರುವುದರಿಂದ 'ನಿಡುವೆಣ್ಣಂ, ಚೆಂಬೊನ್ನಂ' ಮೊದಲಾದ ವ್ಯಂಜನಾಂತ ಬಹುವ್ರೀಹಿಗಳಲ್ಲಿ 'ಇ' ಪ್ರತ್ಯಯವು ಬಾರದೆ ಪೂರ್ವಸೂತ್ರಕ್ಕೆ ವಿಷಯಗಳಾಗುವುವು. ಚಾಗಾದಿಗಳಾವುವೆಂದರೆ — 'ಚಾಗ, ಕೆಲಸ, ಬೇಹಾರ, ಉಜ್ಜುಗ, ಬಾದು, (ಬಡ) ಬತ' ಮೊದಲಾದುವು. ಆಕೃತಿಗಣವಾದುದರಿಂದ ಪ್ರಯೋಗಾನುಸಾರವಾಗಿ ಇನ್ನೂ ಅನೇಕ ಶಬ್ದಗಳನ್ನು ಊಹಿಸಿಕೊಳ್ಳುವುದು.

**ಅವತಾರಿಕೆ ೩೩೦**

ಪೂರ್ವಸೂತ್ರದಲ್ಲಿ ವಿಹಿತವಾದ ಇ ಪ್ರತ್ಯಯ ಸನ್ನಿಯೋಗವಾಗಿ ಲೋಪವಿಧಿಯನ್ನು ಹೇಳುತ್ತಾನೆ.

**ಸೂತ್ರಂ ॥ ಇಲ್ಲಾಲ್ಲುಪ್ಚ ॥ ೩೩೦ ॥**

**ಅರ್ಥ ॥ 'ಇಲ್ಲ' ಶಬ್ದಾಂತ ಬಹುವ್ರೀಹಿಗೆ ಸಮಾಸಾಂತವಾದ ಇ ಪ್ರತ್ಯಯವೂ 'ಇಲ್ಲ' ಶಬ್ದದ ಕೊನೆಯ ಅಕ್ಷರಕ್ಕೆ ಲೋಪವೂ ಬರುವುದು.**

**ಉದಾಹರಣೆ ॥** 'ಪಲ್ಲಲಿ ಬಾಯ್, ಕೂಲಿ ಕುಡುಗೋಲ್, ನಾಣಿಲಿ ಕಲಹಡಿ[೧] ॥' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೩೦**

ಈ ಸೂತ್ರದಲ್ಲಿ — 'ಇಲ್ಲಾತ್, ಲುಪ್, ಚ' ಎಂದು ಮೂರು ಪದಗಳಿರುವುವು. ಚ ಕಾರವು ಸಮುಚ್ಚಯಾರ್ಥಕವಾದುದರಿಂದ 'ಇಃ' ಎಂಬುದನ್ನು ಸಮುಚ್ಚಯಮಾಡುವುದು. 'ಲುಪ್' ಎಂಬುದು ಪ್ರಸಕ್ತವಾದ ವರ್ಣಕ್ಕೆ ಉಚ್ಚಾರಣೆ ಮಾಡದಿರುವುದೆಂದು ಬೋಧಿಸುವುದು. ಇದಕ್ಕೆ ಸಂಸ್ಕೃತವ್ಯಾಕರಣದಲ್ಲಿ — 'ಅದರ್ಶನಂ ಲೋಪಃ' ಎಂದು ಹೇಳಿರುವರು. 'ಇಲ್ಲಾತ್' ಎಂಬುದು ಪ್ರಕರಣದಿಂದ ಅನುವರ್ತಮಾನವಾದ 'ಬಹುವ್ರೀಹೇಃ' ಎಂಬುದಕ್ಕೆ ವಿಶೇಷಣವು. ಆದುದರಿಂದ ತದಂತಬೋಧಕವಾಗುವುದು. ತಥಾಚ — 'ಇಲ್ಲ' ಶಬ್ದಾಂತ ಬಹುವ್ರೀಹಿ ಸಮಾಸಕ್ಕೆ ಸಮಾಸಾಂತವಾದ 'ಇ' ಪ್ರತ್ಯಯವೂ 'ಲ' ಶಬ್ದಕ್ಕೆ ಲೋಪವೂ ಬರುವುದೆಂದು ಸೂತ್ರಾರ್ಥವಾಗಲು 'ಪಲ್ಲಲಿ' ಮೊದಲಾದುವು ಸಿದ್ಧಿಸುವುವು.

ಇಲ್ಲಿ 'ಇಲ್ಲ' ಶಬ್ದದ ಮುಂದೆ ಇ ಪ್ರತ್ಯಯವನ್ನು ಮಾಡಲು ಅದು ಪರದಲ್ಲಿರುವಾಗ 'ಇಲ್ಲ' ಶಬ್ದದ ಅ ಕಾರಕ್ಕೆ — 'ಲುಬನಾಮಹಾನೌ ॥೩೬॥' ಎಂಬುದರಿಂದಲೇ ಲೋಪವು ಸಿದ್ಧವಾಗಿರಲು ಈ ಲುಬ್ವಿಧಿಯು ನಿರರ್ಥಕವೆಂದು ತೋರಲು 'ಇಲ್ಲ' ಶಬ್ದದ ಉಪಾಂತ್ಯಸಹಿತವಾದ ಅಂತ್ಯಕ್ಕೆ ಲೋಪ ಬರುವುದೆಂಬ ತಾತ್ಪರ್ಯದಿಂದ **ಸೂತ್ರಕಾರನು** ಸೂತ್ರದಲ್ಲಿ ಲುಬ್‌ಗ್ರಹಣವನ್ನು ಮಾಡಿರುವನೆಂದು ತಾತ್ಪರ್ಯವನ್ನು ಕಲ್ಪಿಸುವುದರಿಂದ ಸಾರ್ಥಕವೆಂದು ತಿಳಿಯಬೇಕು.

ಇಲ್ಲಿ 'ಇಲ್ಲಾತ್' ಎಂದು ಶಬ್ದವಿಶೇಷವನ್ನುಚ್ಚರಿಸಿರುವುದರಿಂದ 'ಪೆಱಿವಣೆಯೊಳ್' ಮೊದಲಾದ ಪ್ರಯೋಗಗಳಲ್ಲಿ ಇ ಪ್ರತ್ಯಯವೂ ಲೋಪವೂ ಬರುವುದಿಲ್ಲವೆಂದು ತಿಳಿಯಬೇಕು.

---

**ಪಾಠಾಂತರ: ೧ ಕಲಹಟ**

**ಅವತಾರಿಕೆ ೩೩೧**

ಹೀಗೆ ಪೂರ್ವೋಕ್ತವಾದ ಇ ಪ್ರತ್ಯಯವನ್ನು ಸನ್ನಿಯೋಗದಿಂಗ ಅರ್ಥವಿಶೇಷದಲ್ಲಿ ಪೂರ್ವಪದಕ್ಕೆ ಅಗಾಗಮವನ್ನು ವಿಧಿಸುತ್ತಾನೆ.

**ಸೂತ್ರಂ || ಆಕ್ ಚ ಯುದ್ಧೇ ಪೂರ್ವಪದಸ್ಯ || ೩೩೧ ||**

**ಅರ್ಥ || ಯುದ್ಧಾರ್ಥದಲ್ಲಿ — ' ಮಿಥೋ ಗ್ರಹಣೇ ಪ್ರಹರಣೇ ಚ ಯುದ್ಧೇ ಸರೂಪಂ || ೩೧೨ || ' ಎಂಬ ಸೂತ್ರದಿಂದ ವಿಹಿತವಾದ ಬಹುವ್ರೀಹಿಸಮಾಸದ ದೆಸೆಯಿಂದ ಪರವಾಗಿ ಇ ಪ್ರತ್ಯಯವೂ ಪೂರ್ವಪದಕ್ಕೆ ಆಗಾಗಮವೂ ಬರುವುದು.**

**ಉದಾಹರಣೆ ||** ' ಹೆಲ್ಲಾಹೆಲ್ಲಿ, ಕಲ್ಲಾಕಲ್ಲಿ, ಕೋಲಾಕೋಲಿ, ಡಾಣಾಡಾಣಿ, ಖಾಡಾಖಾಡಿ || ' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೩೧**

ಈ ಸೂತ್ರದಲ್ಲಿ — ' ಆಕ್, ಚ, ಯುದ್ಧೇ, ಪೂರ್ವಪದಸ್ಯ ' ಎಂದು ನಾಲ್ಕು ಪದಗಳಿರುವುವು. ' ಆಕ್ ' ಎಂಬುದು ಕ ಕಾರೇತ್‌ಸಂಜ್ಞಕವಾದುದರಿಂದ ಆಗಮಬೋಧಕವು. ಆದುದರಿಂದ — ' ಕಿದಂತ್ಯಃ ' ಎಂಬ ಪರಿಭಾಷಾನುಸಾರವಾಗಿ ಅಂತ್ಯಾವಯವವಾಗಿ ಬರುವುದೆಂದು ತಿಳಿಯಬೇಕು. ಚ ಕಾರವು ಸಮುಚ್ಚಯಾರ್ಥಕವಾದುದರಿಂದ ಇ ಪ್ರತ್ಯಯವನ್ನೂ ಸಮುಚ್ಚಯ ಮಾಡುವುದು. ' ಯುದ್ಧೇ ' ಎಂಬುದು ಯುದ್ಧಾರ್ಥದಲ್ಲಿ ವಿಹಿತವಾದ ಬಹುವ್ರೀಹಿಯನ್ನೇ ಇಲ್ಲಿ ಗ್ರಹಿಸಬೇಕೆಂಬರ್ಥವನ್ನು ಬೋಧಿಸುವುದು. ' ಪೂರ್ವಪದಸ್ಯ ' ಎಂಬುದು, ಆಗಾಗಮವು ಪೂರ್ವಪದಾಂತವಾಗಿಯೂ ಇ ಪ್ರತ್ಯಯವು ಸಮಾಸಾಂತವಾಗಿಯೂ ಬರುವುದೆಂಬ ವಿಷಯ ವ್ಯವಸ್ಥೆಯನ್ನು ತೋರಿಸುವುದು. ತಥಾಚ — ಯುದ್ಧಾರ್ಥದಲ್ಲಿ ವಿಹಿತವಾದ ಬಹುವ್ರೀಹಿಗೆ ಸಮಾಸಾಂತ ಇ ಪ್ರತ್ಯಯವು ಬರುವುದು; ಪೂರ್ವಪದಕ್ಕೆ ಆ ಕಾರಾಗಮವು ಬರುವುದು—ಎಂದು ಸೂತ್ರಾರ್ಥವಾಗಲು ' ಹೆಲ್ಲಾಹೆಲ್ಲಿ ' ಮೊದಲಾದುವು ಸಿದ್ಧಿಸುವುವು.

ಈ ಸೂತ್ರದಲ್ಲಿ ' ಯುದ್ಧೇ ' ಎಂದು ಹೇಳಿರುವುದರಿಂದ ' ಬಲ್ಗಯ್ಯಂ, ಮೆಲ್ಗಯ್ಯಂ ' ಮೊದಲಾದ ಪ್ರಯೋಗಗಳಲ್ಲಿ ಬರುವುದಿಲ್ಲ. ಪೂರ್ವಪದಗ್ರಹಣವಾದರೋ ಉತ್ತರಪದವ್ಯಾವೃತ್ತ್ಯರ್ಥವಾಗಿ ಎಂದು ಹೇಳಬೇಕು.

ಇಲ್ಲಿ ಉದಾಹರಿಸಲ್ಪಟ್ಟಿರುವ ' ಕಲ್ಲಾಕಲ್ಲಿ ' — ಎಂಬಲ್ಲಿ ದ್ವಿತ್ವರಹಿತವಾದ ' ಕಲ್ ' ಶಬ್ದಕ್ಕೆ ಆಗಾಗಮವನ್ನು ವಿಧಿಸಲು ಲ ಕಾರಕ್ಕೆ ಲಿಂಗಾಂತ್ಯತ್ವವಿಲ್ಲದಿದ್ದರೂ ಇಲ್ಲಿ ಬಹುಳಾಧಿಕಾರವನ್ನು ಮಾಡಿರುವುದರಿಂದ ದ್ವಿಭಾವವು ಬರುವುದು ಎಂದು ತಿಳಿಯಬೇಕು. ಅಥವಾ —

ಬಲ್ಲರೆ ಬಲ್ಲರ್ ಜೀವನ
ಸಲ್ಲಕ್ಷಣಗತಿಯನಜ್ಞಜನರೆಂತಱಿವರ್
ಕಲ್ಲಿನೊಳಿರ್ದ ಸುವರ್ಣಮು
ನೆಲ್ಲರುಮೆಂತಱಿವರಾಣಿಕಾಱನ ತೆಱದಿಂ

ಮೊದಲಾದ ಪದ್ಯಗಳಲ್ಲಿ ' ಕಲ್ಲಿನೊಳ್ ' ಎಂದು ಪ್ರಾಚೀನರು ಪ್ರಯೋಗಿಸಿರುವುದರಿಂದ 'ಕಲ್ಲು' ಶಬ್ದವು ಉ ಕಾರಾಂತವಾಗಿಯೂ ಉಂಟೆಂದು ತಿಳಿದು ಅದಕ್ಕೆ ಆಗಾಗಮವನ್ನು ಮಾಡಿ

ಉ ಕಾರಕ್ಕೆ ಲೋಪವನ್ನು ಮಾಡಲು ಉಕ್ತಪ್ರಯೋಗವು ಸಿದ್ಧಿಸುವುದೆಂದು ತಿಳಿಯಬೇಕು. ಇಂತಹ ಸಮಾಸಾಂತಪ್ರತ್ಯಯವು ಭಾಷೆಯಲ್ಲಿ ಬಹುವ್ರೀಹಿ ಸಮಾಸಕ್ಕೆ ಬರುವುದಲ್ಲದೆ ಸಂಸ್ಕೃತದಂತೆ ಇತರ ಸಮಾಸಕ್ಕೆ ಬರುವುದಿಲ್ಲವೆಂದು ತಿಳಿಯಬೇಕು.

|| ಇತಿ ಸಮಾಸಾಂತಪ್ರತ್ಯಯ ಪ್ರಕರಣಂ ಸಮಾಪ್ತಂ ||

## ॥ ಅಥ ಸಮಾಶ್ರಯವಿಧಿ ಪ್ರಕರಣ ಪ್ರಾರಂಭಃ

**ಅವತಾರಿಕೆ ೩೩೨**

ಪೂರ್ವದಲ್ಲಿ — ಸಮಾಸಪ್ರಕರಣವನ್ನು ಹೇಳಿ ಆ ಸಮಾಸಗಳಲ್ಲಿ ದ್ವಂದ್ವಕ್ಕೆ ಅಪವಾದ ಭೂತವಾದ ಏಕಶೇಷಪ್ರಕರಣವನ್ನೂ ಏಕವದ್ಭಾವಪ್ರಕರಣವನ್ನೂ ಹೇಳಿ ಆಮೇಲೆ ಬಹುವ್ರೀಹಿ ಸಮಾಸ ಮಾತ್ರಕ್ಕೆ ಬರುವ ಸಮಾಸಾಂತಪ್ರತ್ಯಯಗಳು ವಿಧಿಸಲ್ಪಟ್ಟಿತು. ಈಗ ಸರ್ವಸಮಾಸ ಸಾಧಾರಣವಾಗಿ ಬರುವ ವಿಧಿಗಳನ್ನು ಹೇಳಲು ಈ ಪ್ರಕರಣವನ್ನು ಪ್ರಾರಂಭಿಸುವನಾಗಿ ಮೊದಲು ಸಮಾಸಪೂರ್ವಪದಾವಯವಕ್ಕೆ ಬರುವ ಲೋಪವನ್ನು ವಿಧಿಸುತ್ತಾನೆ.

**ಸೂತ್ರಂ ॥ ಅರಸ್ವಾದೀನಾಂ ದೋಃಲುಬುತ್ತರಪದೇ ॥ ೩೩೨ ॥**

**ಅರ್ಥ ॥ ಪೂರ್ವಪದಭೂತಗಳಾದ 'ಅರಸು' ಮೊದಲಾದ ಗಣಪಠಿತಶಬ್ದಗಳ ದು-ಸಂಜ್ಞಕ ವಾದ ಭಾಗಕ್ಕೆ ಉತ್ತರಪದವು ಪರದಲ್ಲಿರುವಾಗ ಲೋಪವು ಬರುವುದು.**

**ಉದಾಹರಣೆ** ॥ ' ಅರಸಿನ+ಮಗಳ್ — ಅರಮಗಳ್; ಬಡವು+ನಡು — ಬಡನಡು; ತೆಱಪಿನ+ಪೊನ್ — ತೆಱಪೊನ್ ' ॥ ಮೊದಲಾದುವು ಇದಕ್ಕೆ ಲಕ್ಷ್ಯಗಳು.

ಅರಸ್ವಾದಿಗಣವಾವುದೆಂದರೆ — ' ಅರಸು, ನರವು, ನೆರವು, ಬರವು, ತೆಱವು, ಬಡವು, ಸೋವು, ಎಲ್ವುರವು ' ಮೊದಲಾದುವು ಪ್ರಯೋಗಗಳಿಂದ ಊಹಿಸಿ ಈ ಸೂತ್ರಕ್ಕೆ ಲಕ್ಷ್ಯಗಳಾಗಿ ತೆಗೆದುಕೊಳ್ಳುವುದು. ಆದುದರಿಂದಲೇ ಸೂತ್ರದಲ್ಲಿ — ' ಅರಸ್ವಾದೀನಾಂ ' ಎಂದು ಬಹುವಚನ ವನ್ನು ನಿರ್ದೇಶಿಸಿ ಆಕೃತಿಗಣವೆಂದು ಹೇಳಿ ಇಲ್ಲಿ ಅಪಠಿತಗಳಾದ ಇನ್ನೂ ಕೆಲವು ಶಬ್ದಗಳೂ ಈ ಗಣಕ್ಕೆ ಸೇರಿದುವು ಪ್ರಾಚೀನಪ್ರಯೋಗಗಳಲ್ಲಿವೆ. ಅವನ್ನು ಇಲ್ಲಿ ಗ್ರಹಿಸಿ ಇದಕ್ಕೆ ಲಕ್ಷ್ಯಗಳನ್ನಾಗಿ ತೆಗೆದುಕೊಳ್ಳಬಹುದೆಂದು ವ್ಯಾಖ್ಯಾನಕಾರರು ಹೇಳುವರು.

**ವಿಚಾರ ೩೩೨**

ಈ ಸೂತ್ರದಲ್ಲಿ — ' ಅರಸ್ವಾದೀನಾಂ, ದೋಃ, ಲುಪ್, ಉತ್ತರಪದೇ ' ಎಂದು ನಾಲ್ಕು ಪದಗಳಿರುವುವು. ' ಅರಸ್ವಾದೀನಾಂ ' ಎಂಬುದು — ' ಅರಸು ' ಮೊದಲಾದ ಗಣಪಠಿತ ಶಬ್ದಗಳನ್ನು ಬೋಧಿಸುವ ಷಷ್ಠೀವಿಭಕ್ತ್ಯಂತಪದವು. ಇದು — ಅವಯವಾವಯವಿಭಾವ ಸಂಬಂಧದಿಂದ ' ದೋಃ ' ಎಂಬುದಕ್ಕೆ ವಿಶೇಷಣವು. ' ದೋಃ ' ಎಂಬುದು ' **ದುರಂತ್ಯವ್ಯಂಜ ನಾದಿಃ ॥ ೧೩ ॥** ' ಎಂಬ ಸಂಜ್ಞಾಸೂತ್ರದಿಂದ ಸಂಕೇತಿತವಾದ ಶಬ್ದದ ಅಂತ್ಯಭಾಗಬೋಧಕವು. ಇದು ಸ್ಥಾನಷಷ್ಠ್ಯಂತವು. ' ಲುಪ್ ' ಎಂಬುದು ಪ್ರಸಕ್ತವಾದುದಕ್ಕೆ ಅನುಚ್ಚಾರಣೆಯನ್ನು ಬೋಧಿಸುವ ಪದವು. ' ಉತ್ತರಪದೇ ' ಎಂಬುದು — ' **ಉತ್ತರಂ ಚ ತತ್ ಪದಂ ಚ, ಉತ್ತರ ಪದಂ, ತಸ್ಮಿನ್ ಉತ್ತರಪದೇ** ' ಎಂಬ ವಿಗ್ರಹದಿಂದ ಸಾಮಾನ್ಯವಾಗಿ ಸಮಾಸವಾಕ್ಯಗಳ ಕೊನೆಯ ಪದವೆಂದು ಅರ್ಥವಾಗುತ್ತಿದ್ದರೂ ಪ್ರಾಚೀನ ವೈಯಾಕರಣರ ವ್ಯವಹಾರದಿಂದ ಸಮಾಸ ಚರಮಾವಯವ ಮಾತ್ರ ಬೋಧಕವೆಂದು ತಿಳಿಯಬೇಕು. ಆದುದರಿಂದಲೇ ಈ ಪದಸಂಬದ್ಧ ವಾದ ವಿಧಿಗಳೆಲ್ಲಾ ಸಮಾಸದಲ್ಲಿಯೇ ಬರುವುವೆಂದು ಅರ್ಥವಾಗುವುದು. ತಥಾಚ — ಅರಸ್ವಾದಿಗಣಪಠಿತ ಶಬ್ದಗಳ ದು-ಸಂಜ್ಞಕವಾದ ಭಾಗಕ್ಕೆ ಉತ್ತರಪದವು ಪರದಲ್ಲಿರಲು ಲೋಪವು ಬರುವುದೆಂದು ಸೂತ್ರಾರ್ಥವಾಗುವುದು. ಆದುದರಿಂದ ' ಅರಮಗಳ್ ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು.

ಇಲ್ಲಿ 'ಮೋಃ' ಎಂದು ಹೇಳಿರುವುದರಿಂದ — ಈ ಲೋಪವು 'ಷಷ್ಠ್ಯಾಃ ಸ್ಥಾನೇsಂತ್ಯಸ್ಯ || ೨೨ ||' ಎಂಬ ಸೂತ್ರದಿಂದ ಅಂತ್ಯಮಾತ್ರಕ್ಕೆ ಬಾರದೆ ಉಪಾಂತ್ಯವಿಶಿಷ್ಟವಾದುದಕ್ಕೆ ಬರುವುದೆಂದು ಸೂಚಿತವಾಗುವುದು. 'ಉತ್ತರಪದೇ' ಎಂದು ಹೇಳಿರುವುದರಿಂದ — 'ಅರಸು ಬಂದಂ, ಅರಸಿನ ಮಗಳ್' ಮೊದಲಾದ ವಾಕ್ಯಗಳ ಪೂರ್ವಾವಯವಕ್ಕೆ ಬರುವುದಿಲ್ಲವೆಂದು ತಿಳಿಯಬೇಕು.

ಇಲ್ಲಿ — ಅರಸ್ವಾದಿಗಣಪಠಿತ ಶಬ್ದಗಳಿಗೆ ಲೋಪವನ್ನು ವಿಧಿಸಲು ಆ ಲೋಪವು ಸಮಾನಾಧಿಕರಣ, ಅಸಮಾನಾಧಿಕರಣ, ಸ್ವರಾದಿ ವ್ಯಂಜನಾದಿ ಸಾಧಾರಣವಾದ ಉತ್ತರಪದ ಮಾತ್ರವೂ ನಿಮಿತ್ತವೆಂದು ಮುಂದೆ ವಿಶೇಷವನ್ನು ಹೇಳುವುದರಿಂದ ತಿಳಿಯುವುದು. ಅದುವ ಒಂದಲ್ಲೇ ಈ 'ಉತ್ತರಪದೇ' ಎಂಬುದು ಇಲ್ಲಿ ಕೆಲವೆಡೆ ಸಮಾನಾಧಿಕರಣವಾಗಿದ್ದರೂ ಈ ಸೂತ್ರ ಮೊದಲು 'ಸಂಸ್ಕೃತಸ್ಯ ನಿತ್ಯಂ || ೩೮೨ ||' ಎಂಬ ಸೂತ್ರದ ವರೆಗೆ ಪ್ರತಿಸೂತ್ರದಲ್ಲಿಯೂ ಸಾಧಾರಣವಾಗಿ ಅಧಿಕರಿಸಲ್ಪಡುವುದು.

ಅದರೆ — ಈ ಅರಸ್ವಾದಿಗಣದಲ್ಲಿ — 'ಅರಸು, ಪೊಸತು, ಪೊಱಗು, ಒಳಗು, ಪಲಬು, ಎಳದು, ಮಾವು' ಎಂಬೀ ಏಳು ಶಬ್ದಗಳ ವಿಷಯದಲ್ಲಿಯೇ ದು-ಲೋಪವಿಧಿಯು ಸಾರ್ಥಕವಾಗುವುದರಿಂದ ಅವೇ ಇಲ್ಲಿ ಪಾಠ ಮಾಡುವುದಕ್ಕೆ ಅರ್ಹಗಳಾಗಿರುವುವು. ಆದುದರಿಂದ 'ಅರಮೊಗಂ, ಪೊಸಬಡಕೆ, ಪೊಱಅಡಿ, ಒಳಆಳ್, ಪಲಅಲಗು, ಎಳಅಂಚೆ, ಮಾಮರಂ' ಮೊದಲಾದ ಪ್ರಯೋಗಗಳೇ ಈ ಸೂತ್ರಕ್ಕೆ ಲಕ್ಷ್ಯಗಳಾಗಿರುವುವು. 'ನರಗಟ್ಟು, ನೆರವಾಸಿಸಂ, ಬರವಟ್ಟೆ, ತೆಱಪೊನ್, ಬಡನಡು, ನೊಳಗಾಡು, ಎಲ್ತುರದಿಟ್ಟ' ಮೊದಲಾದುವು. 'ನರ, ನೆರ, ಬರ, ತೆರ[೧], ಬಡ, ನೊಳ, ಎಲ್ತುರ' ಎಂದು ಅ ಕಾರಾಂತವಾದ ಶಬ್ದಗಳು—'ನರವು, ನೆರವು, ಬರವು, ತೆಱವು, ಬಡವು, ನೊಳವು, ಎಲ್ತುರವು' ಎಂಬ ಶಬ್ದಸಮಾನಾರ್ಥಕಗಳಾಗಿರುವುದರಿಂದ ಅವುಗಳೊಡನೆ ಸಮಾಸವನ್ನಂಗೀಕರಿಸಲು ಸಿದ್ಧಿಸುವುವು. ಆದುದರಿಂದ ಇಲ್ಲಿ 'ನರವು' ಮೊದಲಾದ ಶಬ್ದಗಳು ಪಾಠಕ್ಕೆ ಅರ್ಹಗಳಲ್ಲವೆಂದು ಶಂಕೆಯುಂಟಾಗುವುದು. ಆದಾಗ್ಯೂ — ಕದಾಚಿತ್ 'ನರವು' ಮೊದಲಾದ ಶಬ್ದಗಳೊಡನೆ ಸಮಾಸಕ್ಕೆ ಪ್ರತಿಷೇಧವಿಲ್ಲದಿರುವುದರಿಂದ ಅವುಗಳೊಡನೆ ಸಮಾಸವನ್ನು ಮಾಡಲು 'ನರವುಗಟ್ಟು, ನೆರವುವಾಸಿಸಂ' ಮೊದಲಾದ ಸಮಸ್ತ ಪ್ರಯೋಗಗಳು ಆಗಬಾರದೆಂಬ ಅನಿಷ್ಟವಾರಣಾರ್ಥವಾಗಿ ಈ ಗಣದಲ್ಲಿ ಆ ಶಬ್ದಗಳನ್ನು ಪಠಿಸಿ ದು-ಲೋಪವು ವಿಧಿಸಲ್ಪಡುವುದೆಂದು ತಿಳಿಯಬೇಕು. ಆದುದರಿಂದ ಅವುಗಳ ಪಾಠವು ಸಾರ್ಥಕವಾಗಿರುವುದು.

ಇಲ್ಲಿ ವ್ಯಾಖ್ಯಾನಪರಿಭಾಷೆಯಿಂದ 'ಮಾವು' ಶಬ್ದಕ್ಕೆ ದು-ಲೋಪವು ಬರಬೇಕಾದರೆ ಮ ಕಾರಾದಿಯಾದ ಉತ್ತರಪದವು ಪರದಲ್ಲಿರುವಾಗಲೇ ಬರುವುದೆಂದು — 'ಮಾಮರಂ, ಮಾಮಿಡಿ, ಮಾಮುಗುಳ್' ಮೊದಲಾದುವನ್ನು ಇಲ್ಲಿ ಲಕ್ಷ್ಯಗಳನ್ನಾಗಿ ತೆಗೆದುಕೊಳ್ಳಬೇಕು. 'ಮಾಂಗಾಯ್, ಮಾಂದಳಿರ್' ಮೊದಲಾದ ಪ್ರಯೋಗಗಳಲ್ಲಾದರೊ — 'ಮೋಮೋಂsಶಿನಿ || ೩೪೮ ||' ಎಂಬ ಸೂತ್ರದಿಂದ ಬಾಹುಳಕವಾಗಿ ಮ ಕಾರಾದೇಶವು ಬರುವುದೆಂದು ತಿಳಿಯಬೇಕು.

---

ಪಾಠಾಂತರ ೧ : ನಱ, ನೆಱ, ಬಱ, ತೆಱ.

ಇಲ್ಲಿ ದರ್ಪಣದಲ್ಲಿ — ಹೀಗೆ ಸಾಮಾನ್ಯವಾಗಿ 'ದು' ಲೋಪವನ್ನು ವಿಧಿಸದಿದ್ದರೂ ಆಯಾ ಸಮಾಸವಿಶೇಷವನ್ನೇ ನಿರ್ದೇಶಿಸಿ —

**ನೆಲೆಗೊಳ್ಗುಂ ಪೂರ್ವಪದಾಂ**
**ತ್ಯಲೋಪಮುದು ಬಹುಳದಿಂದೆ ತತ್ಪುರುಷಕ್ಕೆ**
**ಗ್ಗಲಿಪುದುಚಿತಾಕ್ಷರಾಗಮು**
**ಮೊಲೆಗುಂ ಕೆಳಗಣ್ಗೆ ಕಿಳ್ಕಿನೆಂಬಾದೇಶಂ (ಸೂತ್ರ ೧೭೬)**

**ಅಕ್ಕುಂ ಪದಾಂತ್ಯಲೋಪಂ**
**ತಕ್ಕಂತಿರೆ ಕರ್ಮಧಾರಯಕ್ಕಂ ದ್ವಿಗುಗಂ**
**ಮಿಕ್ಕಾ ದ್ವಂದ್ವಕ್ಕಂ ಮೇ**
**ಲಕ್ಕರಿಗರಿನಾ ಕ್ರಿಯಾಸಮಾಸೋಪೇತಂ (ಸೂತ್ರಂ ೧೭೭)**

ಎಂಬ ಸೂತ್ರಗಳಿಂದ — ತತ್ಪುರುಷ ಸಮಾಸದಲ್ಲಿ ಕೆಲವೆಡೆಯೊಳ್ ಮೊದಲಪದದ ಕಡೆಯ ಅಕ್ಷರಕ್ಕೆ ಲೋಪವೂ ಕೆಲವೆಡೆಯಲ್ಲಿ ಲೋಪಂಬೆಱಸುಚಿತಾಕ್ಷರಾಗಮುವೂ 'ಕೆಳಗೆ' ಎಂಬುವಕ್ಕೆ 'ಕಿಳ್, ಕಿನ್' ಎಂಬಾದೇಶಗಳೂ ಕರ್ಮಧಾರಯ, ದ್ವಿಗು, ದ್ವಂದ್ವ, ಕ್ರಿಯಾಸಮಾಸಗಳಲ್ಲ ಕೆಲವರೊಳ್ ಪೂರ್ವಪದಾಂತ್ಯಲೋಪವೂ ವಿಧಿಸಲ್ಪಟ್ಟಿರುವುದು.

**ಶಾಸನಕಾರನ** ಮತದಲ್ಲಿ ಹೀಗೆ ಸ್ಪಷ್ಟವಾಗಿ ಹೇಳದಿದ್ದರೂ ಬಹುಳಾಧಿಕಾರದಿಂದ ವಿಧಿಗಳಿಗೆ ಕ್ವಚಿತ್ಪ್ರವೃತ್ತ್ಯಾದಿಚಾತುರ್ವಿಧ್ಯವನ್ನಂಗೀಕರಿಸಿ ಪ್ರಾಮಾಣಿಕ ಪ್ರಯೋಗಾನುಸಾರವಾಗಿ ಆಯಾ ಕಾರ್ಯಗಳನ್ನು ಬುದ್ಧಿಶಾಲಿಗಳು ಊಹಿಸಿಕೊಳ್ಳಬೇಕು.

**ಅವತಾರಿಕೆ ೩೩೩**

ಪೂರ್ವಸೂತ್ರದಲ್ಲಿ ಸಾಮಾನ್ಯವಾಗಿ ಕೆಲವು ಶಬ್ದಗಳಿಗೆ ಉತ್ತರಪದವು ಪರದಲ್ಲಿರುವಾಗ 'ದು' ಲೋಪವು ವಿಧಿಸಲ್ಪಟ್ಟಿತು. ಈಗ ಕೆಲವು ವಿಶೇಷ ಸಮಾಸಗಳಲ್ಲಿ ಪೂರ್ವಸ್ವರಸಹಿತವಾಗಿ 'ದು' ಲೋಪವನ್ನು ವಿಧಿಸುತ್ತಾನೆ.

**ಸೂತ್ರಂ || ಕೃದ್ಗುಣೋಕ್ತೇಃ ಪೂರ್ವಸ್ವರೇಣೈಕಾರ್ಥೇ || ೩೩೩ ||**

**ಅರ್ಥ || ಸಮಾನಾಧಿಕರಣೋತ್ತರಪದವು ಪರದಲ್ಲಿರಲು ಪೂರ್ವಪದಭೂತಗಳಾದ ಕೃದಂತಗಳ ಅಥವಾ ಗುಣವಾಚಕಗಳ ಅಂತ್ಯವಾದ 'ದು' ವಿಗೆ ಅದರ ಪೂರ್ವಸ್ವರದೊಡನೆ ಲೋಪವು ಬರುವುದು.**

**ಉದಾಹರಣೆ** || 'ಎತ್ತುವುದು ಕೋಲ್ — ಎತ್ತುಂಗೋಲ್; ಬತ್ತುವುದು ಪರ್ಯ — ಬತ್ತುಂಬರ್ಯ; ತೂಗುವುದು ತೊಟ್ಟಿಲ್ — ತೂಗುಂದೊಟ್ಟಿಲ್; ಉಕ್ಕುವುದು ತೊಱೆ — ಉಕ್ಕುಂದೊಱೆ ||' ಮೊದಲಾದ ಪ್ರಯೋಗಗಳು ಕದಂತಗಳಿಗೂ 'ಬಟ್ಟಿತು ಮೊಲೆ — ಬಟ್ಟಮೊಲೆ; ಒಳ್ಳಿತು ಕನ್ನಡಂ — ಒಳ್ಗನ್ನಡಂ; ತೋರಿತು ಮುಡಿ — ತೋರಮುಡಿ ||' ಮೊದಲಾದುವು ಗುಣವಚನಗಳಿಗೂ ಉದಾಹರಣೆಗಳೆಂದು ತಿಳಿಯುವುದು. ಇಲ್ಲಿ ಕೃದಂತಪೂರ್ವಪದ ಸಮಾಸಗಳಿಗೆ ಲೋಪಾನಂತರದಲ್ಲಿ — '**ಕೃತೋ ಮೋ ಗದಬಜ್ಯನಕಿ || ೩೪೪ ||**' ಎಂಬ ಸೂತ್ರದಿಂದ ಮಕಾರಾದೇಶವೂ ಗುಣವಚನಗಳಿಗೆ — '**ಅಗ್ಬಹುಲಂ || ೩೪೫ ||**' ಎಂಬುದರಿಂದ ಅಗಾಗಮುವೂ ಬಂದು ಉಕ್ತಪ್ರಯೋಗಗಳು ಸಿದ್ಧಿಸಿರುವುವೆಂದು ತಿಳಿಯುವುದು.

**ವಿಚಾರ ೩೩೩**

ಈ ಸೂತ್ರದಲ್ಲಿ — 'ಕೃದ್ಗುಣೋಕ್ತ್ಯೋಃ, ಪೂರ್ವಸ್ವರೇಣ, ಏಕಾರ್ಥೇ' ಎಂದು ಮೂರು ಪದಗಳಿರುವುವು. 'ಕೃದ್ಗುಣೋಕ್ತ್ಯೋಃ' ಎಂಬುದು — ಕೃಚ್ಚ, ಗುಣೋಕ್ತಿಶ್ಚ, ಅನಯೋಃ ಸಮಾಹಾರಃ ಕೃದ್ಗುಣೋಕ್ತಿ, ತಸ್ಯ ಕೃದ್ಗುಣೋಕ್ತ್ಯೋಃ—ಎಂದು ಸಮಾಹಾರದ್ವಂದ್ವಸಮಾಸವನ್ನು ಮಾಡಿ ಷಷ್ಠ್ಯಂತವಾಗಿ ನಿರ್ದೇಶಿಸಲ್ಪಟ್ಟಿರುವುದು. ಇಲ್ಲಿ ಕೃತ್ತೆಂಬುದು ಪ್ರತ್ಯಯಬೋಧಕವಾದುದರಿಂದ ತದಂತಬೋಧಕವಾಗುವುದು. 'ಗುಣೋಕ್ತಿ'ಪದಕ್ಕೆ ಅರ್ಥವು ದೇಶ್ಯಲಿಂಗಸ್ವರೂಪ ನಿರ್ಣಯ ಪ್ರಕರಣದಲ್ಲಿ ಹೇಳಿರುವ '**ಅದ್ಗುಣೋಕ್ತೇಃ ||೧೬೬||**' ಎಂಬ ಸೂತ್ರದ ವಿಚಾರ ಗ್ರಂಥದಲ್ಲಿ ಸ್ಪಷ್ಟವಾಗಿ ಹೇಳಲ್ಪಟ್ಟಿರುವುದು. 'ಪೂರ್ವಸ್ವರೇಣ' ಎಂಬುದು ಸಹಾಯಾರ್ಥಕ ತೃತೀಯಾಂತ ಪದವು. ಇದು ಅನುವರ್ತಮಾನವಾದ 'ದೋಃ' ಎಂಬುದರಲ್ಲಿ ಅನ್ವಯಿಸುವುದು. 'ದೋಃ' ಎಂಬುದು ಸ್ಥಾನಷಷ್ಠ್ಯಂತ ಪದವು. 'ಏಕಾರ್ಥೇ' ಎಂಬುದು ಅಧಿಕೃತವಾದ 'ಉತ್ತರಪದೇ' ಎಂಬುದಕ್ಕೆ ವಿಶೇಷಣವು. 'ಏಕಾರ್ಥೇ' ಎಂದರೆ — 'ಸಮಾನಾಧಿಕರಣೇ' ಎಂದರ್ಥವು. ಇದು '**ವಿಶೇಷಣಮೇಕಾರ್ಥೇನ ||೩೦೯||**' ಎಂಬ ಸೂತ್ರದಲ್ಲಿ ವಿವರಿಸಲ್ಪಟ್ಟಿರುವುದು. 'ಉಪ್' ಎಂಬುದು ಪೂರ್ವಸೂತ್ರದಿಂದ ಅನುವರ್ತಿತವಾಗುವುದು. ತಥಾಚ — ಸಮಾನಾಧಿಕರಣೋತ್ತರಪದವು ಪರವಾಗಿರಲು ಪೂರ್ವಪದಗಳಾದ ಕೃದಂತಗಳಿಗೂ ಗುಣವಚನಗಳಿಗೂ ಪೂರ್ವಸ್ವರಸಹಿತವಾದ 'ದು' ವಿಗೆ ಲೋಪವು ಬರುವುದೆಂದು ಸೂತ್ರಾರ್ಥವಾಗುವುದರಿಂದ 'ಎತ್ತುಂಗೋಲ್, ಬಟ್ಟಮೊಲೆ' ಮೊದಲಾದುವು ಸಿದ್ಧಿಸುವುವು.

ಇಲ್ಲಿ 'ಕೃದ್ಗುಣೋಕ್ತ್ಯೋಃ' ಎಂದು ಹೇಳಿರುವುದರಿಂದ 'ಅರಮುಗಂ' ಮೊದಲಾದ ಪ್ರಯೋಗಗಳಲ್ಲಿಯೂ 'ಏಕಾರ್ಥೇ' ಎಂದು ಹೇಳಿರುವುದರಿಂದ — 'ತೋರಿತಱ ಬಿಣ್ಪು, ತೋರಿತುಬಿಣ್ಪು' ಮೊದಲಾದ ಪ್ರಯೋಗಗಳಲ್ಲಿಯೂ ಈ ಲೋಪವು ಬರುವುದಿಲ್ಲವೆಂದು ತಿಳಿಯಬೇಕು. 'ಒಳ್ಪಿತುಹಾರಂ' ಮೊದಲಾದ ಪ್ರಯೋಗಗಳಾದರೋ ಬಹುಲಾಧಿಕಾರವಿರುವುದರಿಂದ ಸಮಾಸವೇ ಇಲ್ಲವೆಂದು ತಿಳಿಯಬೇಕು. 'ಒಳ್ಪಾರಂ' ಮೊದಲಾದ ಪ್ರಯೋಗಗಳು ಹಾರಾರ್ಥಕ 'ಆರ' ಶಬ್ದದೊಡನೆ ಸಮಾಸವನ್ನು ಮಾಡಲು ಸಿದ್ಧಿಸುವುದು. 'ಆರ' ವೆಂಬುದು ಕರಂಬಾದಿಯಲ್ಲಿ ಪಠಿತವಾದ 'ಹಾರ' ಶಬ್ದನಿಷ್ಪನ್ನವಾದುದೆಂದು ಕೆಲವರೆನ್ನುವರು.

ಇಲ್ಲಿ **ದರ್ಪಣಕಾರನು** — ಕರ್ಮಧಾರಯಸಮಾಸದೊಳ್ ಗ ದ ಬ ಜಕಾರಾದಿಪದಂಗಳ್ ಪರಮೊಳಿರೆ ಪೂರ್ವಪದವು ಕೃತ್ತಾಗಿ ಉಕಾರಾಂತ, ಇಕಾರಾಂತಗಳಾಗಿರಲು ಬಹುಲವಾಗಿ ಬಿಂದು ಬರುವುದೆಂದು—

> ಗ ದ ಬ ಜಕಾರಮುವಿದಿರಿರೆ
> ಮೊದಲ ಪದಂ ತಾಂ ಕೃದಂತಮಾಗಿರೆ ದೊರೆಕೊ
> ಳ್ವುದನುಸ್ವಾರಮುದಂತದೊ
> ಳಿದಂತದೊಳ್ ಕರ್ಮಧಾರಯಂ ಬರೆ ಬಹುಳಂ ( ಸೂತ್ರ ೧೭೦ )

ಎಂಬ ಸೂತ್ರದಿಂದ ಕೃದಂತ ವಿಷಯದಲ್ಲಿ ಸೂಚಿಸಿ, ಗುಣವಚನ ವಿಷಯದಲ್ಲಿ —

ದೊರೆಕೊಳ್ವುದತ್ವವಿಧಿಯಂ
ತರಾಳದೊಳ್ ಬಹುಳಮಾಗಿ ಮಧ್ಯಪದಕ್ಕಂ
ದೊರೆಕೊಳ್ವುದದರ್ಶನವಿಧಿ
ವಿರಳತೆಯಿಂ ಕರ್ಮಧಾರಯಕಱಿವವರಿಂ (ಸೂತ್ರ ೧೭೮)

ಎಂಬ ಸೂತ್ರವನ್ನು ಹೇಳಿ, ಅದರಲ್ಲಿ ಬಹುಳವಾಗಿ ಅಕಾರಾಗಮುವನ್ನು ಪೂರ್ವಪದಕ್ಕೆ ವಿಧಿಸಿರುವುದಲ್ಲದೆ ಮಧ್ಯಮಪದಕ್ಕೆ ಲೋಪವನ್ನೂ ವಿಧಿಸಿರುವನು. ಇದರಿಂದ ಮಧ್ಯಮಪದಲೋಪ ಕರ್ಮಧಾರಯವೂ ಉಂಟೆಂದು ತಿಳಿಯುವುದು. ಆದುದರಿಂದ — 'ಅಲರಂತಪ್ಪಕರ್ಣ್' ಎಂಬಲ್ಲಿ 'ಅಂತಪ್ಪ' ಎಂಬುದಕ್ಕೆ ಲೋಪವಾಗಿ 'ಅಲರ್ಗರ್ಣ್' ಮೊದಲಾದ ಪ್ರಯೋಗಗಳು ಸಿದ್ಧಿಸುವುವು. ಇಂತಹ ಪ್ರಯೋಗಗಳಲ್ಲಿ ಸಂಸ್ಕೃತ ವ್ಯಾಕರಣಕಾರರಲ್ಲಿ ಕೆಲವರು — '**ಶಾಕಪಾರ್ಥಿವಾದೀನಾಂ ಸಿದ್ಧಯೇ ಉತ್ತರಪದಲೋಪಸ್ಯ ಉಪಸಂಖ್ಯಾನಂ**' ಎಂದು ಹೇಳಿರುವ **ವರರುಚಿಯ** ವಚನವನ್ನು ಖಂಡಿಸಲು ಪೂರ್ವಪದವು ವಿವಕ್ಷಿತಾರ್ಥವಲ್ಲ ಲಾಕ್ಷಣಿಕವೆಂದು ಅಂಗೀಕರಿಸುವರು. ಅದರಂತೆ ಭಾಷೆಯಲ್ಲಿಯೂ ಅಂಗೀಕರಿಸಿ ಉಕ್ತಪ್ರಯೋಗಗಳನ್ನು ಸಾಧಿಸಬಹುದಾದರೂ ಬಾಲಕರಿಗೆ ಸ್ಪಷ್ಟವಾಗಿ ತಿಳಿಸಲು **ದರ್ಪಣಕಾರನು** ಸೂತ್ರದಲ್ಲಿ ಈ ವಿಷಯವನ್ನು ಸೇರಿಸಿರುವನೆಂದು ತಿಳಿಯಬೇಕು.

**ಅವತಾರಿಕೆ ೩೩೪**

ಪೂರ್ವಸೂತ್ರೋಕ್ತ 'ದು' ಲೋಪವಿಷಯದಲ್ಲಿ ಕಾರ್ಯಾಂತರವನ್ನು ವಿಧಿಸುತ್ತಾನೆ.

**ಸೂತ್ರಂ || ಎದೇಸ್ತತ್ರಾನಿನಾದೇಃ || ೩೩೪ ||**

**ಅರ್ಥ ||** ಪೂರ್ವಸ್ವರದೊಡನೆ ಬಂದ 'ದು' ಲೋಪ ವಿಷಯದಲ್ಲಿ ಇನಾದಿ ವರ್ಜಿತ**ಪೂರ್ವ**ಪದ ಸಂಬಂಧಿಯಾದ 'ಇ' ವರ್ಣಕ್ಕೆ ಅರ್ಧೈಕಾರಾದೇಶವು ಬರುವುದು.

**ಉದಾಹರಣೆ ||** ಪಿರಿದು ಮೊಲೆ — ಪೆರ್ಮೊಲೆ; ಬಿಳಿದು ತಾವರೆ — ಬೆಳ್ದಾವರೆ ಮೊದಲಾದುವೇ ಇದಕ್ಕೆ ಲಕ್ಷ್ಯಗಳು.

**ವಿಚಾರ ೩೩೪**

ಈ ಸೂತ್ರದಲ್ಲಿ — 'ಎತ್, ಏಃ, ತತ್ರ, ಅನಿನಾದೇಃ' ಎಂದು ನಾಲ್ಕು ಪದಗಳಿರುವುವು. ಅವುಗಳಲ್ಲಿ 'ಎತ್' ಎಂಬುದು ಹ್ರಸ್ವವಾದ ಎ ಕಾರಬೋಧಕವು. ಇದೇ ಇಲ್ಲಿ ವಿಧೇಯವು. ತಪರಕರಣವು ಸ್ಪಷ್ಟಾರ್ಥವು. 'ಏಃ' ಎಂಬುದು ಇ ಕಾರಕ್ಕೆ ಸ್ಥಾನಷಷ್ಠ್ಯಂತನಿರ್ದೇಶವು. 'ತತ್ರ' ಎಂಬುದು ಸರ್ವನಾಮಶಬ್ದದ ಮೇಲೆ ವಿಹಿತವಾದ ಸಪ್ತಮ್ಯರ್ಥಕತ್ರಲ್ ಪ್ರತ್ಯಯಾಂತವಾದುದರಿಂದಲೂ ಇದಕ್ಕೆ ಪ್ರಕೃತಿಭೂತವಾದ ತಚ್ಛಬ್ದವು ಪೂರ್ವೋಕ್ತಪರಾಮರ್ಶಕವಾದುದರಿಂದಲೂ ಪೂರ್ವಸೂತ್ರೋಕ್ತ 'ದು-ಲೋಪಬೋಧಕ'ವೆಂದು ತಿಳಿಯಬೇಕು. ಆದುದರಿಂದ ಪೂರ್ವಸ್ವರೋಕ್ತ 'ದು-ಲೋಪವಿಷಯದಲ್ಲಿ' ಎಂದರ್ಥವಾಗುವುದು. 'ಅನಿನಾದೇಃ' ಎಂಬುದು 'ಇನಿದು' ಮೊದಲಾದ ಶಬ್ದೈಕದೇಶವಾದ ಇನಾದಿಶಬ್ದಾತಿರಿಕ್ತಶಬ್ದಬೋಧಕವು. ಇದು ಉತ್ತರಪದದಿಂದಾಕ್ಷಿಪ್ತವಾದ ಪೂರ್ವಪದಕ್ಕೆ ವಿಶೇಷಣವು. ಈ ಪೂರ್ವಪದವು ಅವಯವಾವಯವಿಭಾವಸಂಬಂಧದಿಂದ ಇ ಕಾರಕ್ಕೆ ವಿಶೇಷಣವು. ತಥಾಚ — ಪೂರ್ವಸೂತ್ರೋಕ್ತ 'ದು' ಲೋಪವಿಷಯದಲ್ಲಿ ಇನಾದ್ಯತಿರಿಕ್ತವಾದ ಪೂರ್ವಪದಸಂಬಂಧಿಯಾದ ಇ ಕಾರಕ್ಕೆ

ಎ ಕಾರಾದೇಶವು ಬರುವುದೆಂದು ಸೂತ್ರಾರ್ಥವಾಗಲು — ' ಪೆರ್ಮೊಲೆ, ಬೆಳ್ದಾವರೆ ' ಮೊದಲಾದುವು ಸಿದ್ಧಿಸುವುವು.

ಈ ಸೂತ್ರದಲ್ಲಿ — ' ಏಃ ' ಎಂದು ಹೇಳಿರುವುದರಿಂದ ' ಕರಿದು ಮಡು — ಕರ್ಮ್ಮಡು ' ಮೊದಲಾದ ಪ್ರಯೋಗಗಳಲ್ಲಿರುವ ಅಕಾರಾದಿ ವರ್ಣಗಳಿಗೂ ' ತತ್ರ ' ಎಂದು ಹೇಳಿರುವುದರಿಂದ ' ದಸಿ ಕೋಲ್ — ದಸಿಗೋಲ್ ' ಮೊದಲಾದ 'ದು' ಲೋಪವಿಲ್ಲದ ಪ್ರಯೋಗಗಳಲ್ಲಿರುವ ಇ ವರ್ಣಕ್ಕೂ 'ಅನಿನಾದೇಃ' ಎಂದು ಹೇಳಿರುವುದರಿಂದ ' ಇನಿದು ಮಾವು—ಇರ್ಮ್ಮಾವು, ಬಿಣ್ಣಿತು ಕೊನೆ—ಬಿಣ್ಗೊನೆ ' ಮೊದಲಾದ ಪ್ರಯೋಗಗಳಲ್ಲಿರುವ ಇನಾದಿ ಪೂರ್ವಪದಗಳ ಇ ವರ್ಣಕ್ಕೂ ಈ ಎ ಕಾರಾದೇಶವು ಬರುವುದಿಲ್ಲವೆಂದು ತಿಳಿಯಬೇಕು. ಇಲ್ಲಿ ಇನಾದಿಗಳಾವುವೆಂದರೆ — ' ಇನ್, ಬಿಣ್, ಕಿಸು, ಬಿಸು, ಕಿಱು, ನಿಡು ' ಎಂಬಿವು. ವ್ಯಾಖ್ಯಾನ ಪರಿಭಾಷೆಯಿಂದ ಇದು ಆಕೃತಿಗಣವೆಂದು ತಿಳಿದು ಇನ್ನೂ ಕೆಲವನ್ನು ಪ್ರಯೋಗಗಳಿಂದ ಊಹಿಸಿಕೊಳ್ಳಬೇಕು.

ಇಲ್ಲಿ ' ತತ್ರ ' ಎಂಬುದಕ್ಕೆ ಪ್ರತ್ಯುದಾಹರಣೆಯಾಗಿ ಕೊಟ್ಟಿರುವ ' ದಸಿಗೋಲ್ ' ಎಂಬಲ್ಲಿ ಉತ್ತರಪದವು ಸಮಾನಾಧಿಕರಣವಾಗಿಯೇ ಇರುವುದು. ಆದಾಗ್ಯೂ ' ದಸಿ ' ಎಂಬುದು ಕೃದಂತವೂ ಅಲ್ಲ; ಗುಣವಾಚಕವೂ ಅಲ್ಲ; ಆದುದರಿಂದ ಪೂರ್ವಸೂತ್ರವಿಹಿತ ದು ಲೋಪವು ಪ್ರವರ್ತಿಸುವುದಿಲ್ಲ. ಅರಸ್ವಾದಿಗಣದಲ್ಲಿ ಪಠಿಸಿಲ್ಲವಾದುದರಿಂದ ದು ಮಾತ್ರ ಲೋಪವೂ ಬರುವುದಿಲ್ಲವೆಂದು ತಿಳಿಯುವುದು.

ಇಲ್ಲಿ ಪಠಿಸಿರುವ ಇನಾದಿ ಗಣದಲ್ಲಿರುವ ಇನಾದಿ ಶಬ್ದಗಳು ಅಖಂಡಗಳಾದ ಶಬ್ದಗಳಲ್ಲ; ಮತ್ತೇನೆಂದರೆ — ' ಇನಿದು, ಬಿಣ್ಣಿತು, ಕೆಚ್ಚನೆ, ಬೆಚ್ಚನೆ, ಕಿಱಿದು, ನಿಡಿದು ' ಮೊದಲಾದ ಶಬ್ದೈಕದೇಶಗಳೆಂದು ತಿಳಿಯಬೇಕು. ಅಲ್ಲಿ ಎಲ್ಲಾ ಕಡೆಯಲ್ಲಿಯೂ ಮಧ್ಯಮಸ್ವರಾದಿಗೆ ಲೋಪವು ಸಮಾಸದಲ್ಲಿ ಬರುವುದು. ಗಣದಲ್ಲಿ ' ಬಿಣ್ ' ಎಂದು ಪಾಠ ಮಾಡಿರುವುದರಿಂದ ಬಿಣ್ಣಿತು ಶಬ್ದದ ' ಇತು ' ಎಂಬುದಕ್ಕೆ ಸಮಾಸದಿಂದ ಲೋಪವು ಬಂದು 'ಬಿಣ್ಣ್' ಎಂದು ದ್ವಿ ಣ ಕಾರಕವಾದುದು ಅವಶಿಷ್ಟವಾಗಿದ್ದರೂ ಗಣಪಾಠದಲ್ಲಿ ' ಬಿಣ್ ' ಎಂದು ಏಕ ಣ ಕಾರಕವಾಗಿ ಸೂತ್ರಕಾರರು ನಿರ್ದೇಶ ಮಾಡಿರುವ ಸಾಮರ್ಥ್ಯದಿಂದ ಒಂದು ಣ ಕಾರಕ್ಕೆ ಲೋಪವು ಬಂದು ಇರುವುದೆಂದು ತಿಳಿಯಬೇಕು. ' ಕಿಸು, ಬಿಸು ' ಎಂಬಲ್ಲಿ — ' **ಎತೇಸುರ್ಬೆಮಶ್ವೋಯರ್ಾದಿಷು ಚ || ೩೪೩ ||** ' ಎಂಬ ಸೂತ್ರದಿಂದ ' ಇಸು ' ಎಂಬಾದೇಶವು ಬಂದಿರುವುದೆಂದು ತಿಳಿಯುವುದು. ಇವೆರಡೂ ವ್ಯಾಖ್ಯಾನಪರಿಭಾಷೆಯಿಂದ ವ್ಯಂಜನಾದ್ಯುತ್ತರಪದ ವಿಷಯಕವೇ ಅಲ್ಲದೆ ಸ್ವರಾದ್ಯುತ್ತರಪದ ವಿಷಯಕವಲ್ಲ. ಆದುದರಿಂದ ' ಕೇಸಕ್ಕಿ, ಬೇಸುರಿ ' ಮೊದಲಾದ ಸ್ವರಾದ್ಯುತ್ತರಪದವು ಪರದಲ್ಲಿರುವಾಗ ಏ ಕಾರಾದೇಶವು ಬಂದೇ ಬರುವುದು.

ಈ ವಿಷಯದಲ್ಲಿ ದರ್ಪಣಕಾರನು—

**ಮುಂದಣ ಪದಂ ವಿಶೇಷ್ಯದೊ**
**ಳೊಂದಿರೆ ಪಿಂದಿರ್ದ ಪದದುಪಾಂತ್ಯಸ್ವರದಿಂ**
**ಸಂದಿಪುದು ಲೋಪಮಾದಿಯೊ**
**ಳೊಂದಿದಿಕಾರಕ್ಕೆಕಾರವಿಧಿ ಬಹುಳತೆಯಿಂ ( ಸೂತ್ರ ೧೮೬ )**

ಎಂಬ ಸೂತ್ರವನ್ನು ಹೇಳಿರುವನು. ಇಲ್ಲಿ 'ಬಹುಳತೆಯಿಂ' ಎಂದು ಹೇಳಿರುವುದರಿಂದ **ಶಾಸನಕಾರನು** ಈ ಸೂತ್ರದಲ್ಲಿ ಹೇಳಿರುವ ವಿಶೇಷಣವಿಶೇಷಾರ್ಥಗಳೆಲ್ಲಾ ಸಿದ್ಧಿಸುವುವೆಂದು ತಿಳಿಯಬೇಕು. ಆದುದರಿಂದ 'ಬಿಣ್ಗೊನೆ' ಮೊದಲಾದುವು ದರ್ಪಣಕಾರನೂ ಬಹುಲಗ್ರಹಣಕ್ಕೆ ಪ್ರಯೋಜನವಾಗಿ ಉದಾಹರಿಸಿರುವನು.

**ಅವತಾರಿಕೆ ೩೩೫**

ಪೂರ್ವೋಕ್ತಲೋಪವಿಷಯದಲ್ಲಿ ಇ ಕಾರಕ್ಕೆ ಎ ಕಾರಾದೇಶವು ಹಿಂದಿನ ಸೂತ್ರದಿಂದ ವಿಧಿಸಲ್ಪಟ್ಟಿತು. ಈಗ ಅದೇ ವಿಷಯದಲ್ಲಿ ನಿಮಿತ್ತವಿಶೇಷವಿರಲು ಪೂರ್ವಪದಸ್ಥಸ್ವರಸಾಮಾನ್ಯಕ್ಕೂ ದೀರ್ಘವನ್ನು ವಿಧಿಸುತ್ತಾನೆ.

**ಸೂತ್ರಂ ॥ ದೀರ್ಘಃ ಸ್ವರೇ ॥ ೩೩೫ ॥**

**ಅರ್ಥ ॥ ಪೂರ್ವೋಕ್ತಲೋಪವಿಷಯದಲ್ಲಿ ಸ್ವರಾದ್ಯುತ್ತರಪದವು ಪರದಲ್ಲಿರುವಾಗ ಪೂರ್ವಪದದಲ್ಲಿರುವ ಸ್ವರಕ್ಕೆ ಆ ಸ್ವರದ ದೀರ್ಘವು ಆದೇಶವಾಗಿ ಬರುವುದು.**

**ಉದಾಹರಣೆ** ॥ 'ಕರಿದು ಇರುಳ್ — ಕಾರಿರುಳ್; ಪಿರಿದು ಒಡಲ್ — ಪೇರೊಡಲ್' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೩೫**

ಈ ಸೂತ್ರದಲ್ಲಿ — 'ದೀರ್ಘಃ, ಸ್ವರೇ' ಎಂದು ಎರಡು ಪದಗಳಿರುವುವು. ಪೂರ್ವದಿಂದ ಉತ್ತರಪದೇ 'ತತ್ರ' ಎಂಬಿವು ಅನುವರ್ತಿಸಲ್ಪಡುವುವು. ಸೂತ್ರಸ್ಥವಾದ 'ದೀರ್ಘಃ' ಎಂಬುದು ವಿಧೇಯವಾದುದರಿಂದ — 'ಸ್ವರಸ್ಯ' ಎಂಬ ಪರಿಭಾಷೆಯಿಂದ 'ಸ್ವರಸ್ಯ' ಎಂಬುದು ಉಪಸ್ಥಿತವಾಗುವುದು. ಇದು ಉತ್ತರಪದದಿಂದ ಆಕ್ಷಿಪ್ತವಾದ ಪೂರ್ವಪದಕ್ಕೆ ವೈಯಧಿಕರಣ್ಯಸಂಬಂಧದಿಂದ ವಿಶೇಷಣವು. 'ಸ್ವರೇ' ಎಂಬುದು ಅನುವೃತ್ತವಾದ 'ಉತ್ತರಪದೇ' ಎಂಬುದಕ್ಕೆ ವಿಶೇಷಣವನ್ನು ಮಾಡಲು — '**ಯಸ್ಮಿನ್ ವಿಧಿಸ್ತದಾದಾವರ್ಣಗ್ರಹಣೇ**' ಎಂಬ ಪರಿಭಾಷೆಯಿಂದ ತದಾದಿಬೋಧಕವಾಗುವುದು. 'ತತ್ರ' ಎಂಬುದು ವಿಷಯಸಪ್ತಮ್ಯರ್ಥಕವಾದ 'ತ್ರ' ಪ್ರತ್ಯಯಾಂತವಾದುದು. ತಥಾಚ— ಪೂರ್ವಸ್ವರದೊಡನೆ ದು ಲೋಪವಿಷಯದಲ್ಲಿ ಪೂರ್ವಪದದಲ್ಲಿರುವ ಸ್ವರಕ್ಕೆ ಸ್ವರಾದ್ಯುತ್ತರ ಪದವು ಪರದಲ್ಲಿರಲು ದೀರ್ಘಾದೇಶವು ಬರುವುದು — ಎಂದು ಸೂತ್ರಾರ್ಥವಾಗಲು 'ಕಾರಿರುಳ್' ಮೊದಲಾದುವು ಸಿದ್ಧಿಸುವುವು. ಇಲ್ಲಿ ದೀರ್ಘವು ವಿಧೇಯವಾದುದರಿಂದ ಸ್ಥಾನಿಯಾದ ಸ್ವರವು ಹ್ರಸ್ವವಾಗಿಯೇ ಇರಬೇಕೆಂದು ತಿಳಿಯುವುದು.

ಇಲ್ಲಿ 'ತತ್ರ' ಎಂದು ಹೇಳಿರುವುದರಿಂದ — ಒಡಲಿನ ಏಟ್ಗೆ — ಒಡಲೇಟ್ಗೆ[೧]' ಮೊದಲಾದ ಪ್ರಯೋಗಗಳಲ್ಲಿಯೂ 'ಸ್ವರಾದ್ಯುತ್ತರಪದೇ' ಎಂದು ಹೇಳಿರುವುದರಿಂದ 'ಬೆಳ್ದಾವರೆ' ಮೊದಲಾದ ಪ್ರಯೋಗಗಳಲ್ಲಿಯೂ ಈ ದೀರ್ಘಾದೇಶವು ಬರುವುದಿಲ್ಲವೆಂದು ತಿಳಿಯಬೇಕು.

ಇಲ್ಲಿ ಉದಾಹೃತವಾದ 'ಪೇರೊಡಲ್' ಎಂಬಲ್ಲಿ ದೀರ್ಘಾದೇಶವಿಧಿಸಾಮರ್ಥ್ಯದಿಂದ ಮೊದಲು — 'ಎದೇಸ್ತತ್ರಾನಿನಾದೇಃ' ಎಂಬುದರಿಂದ ಎ ಕಾರಾದೇಶವನ್ನು ಮಾಡಿ ಆಮೇಲೆ ಇದರಿಂದ ದೀರ್ಘವನ್ನು ಮಾಡುವುದೆಂದು ತಿಳಿಯಬೇಕು.

---

ಪಾಠಾಂತರ ೧: ಒಡವಿನ ಏಟ್ಗೆ— ಒಡವೇಟ್ಗೆ.

ಈ ವಿಷಯದಲ್ಲಿ ದರ್ಪಣಕಾರನು —

ಅಗುರುಪದಾದಿದೀರ್ಘಂ
ನೆಗಳ್ಗುಂ ಮತ್ತಲ್ಲಿ ಬಂದು ಣ ಟ ಳ ನ ತಂಗಳ್
ಪುಗೆ ಪೆಱತೇಂ ದ್ವಿರ್ಭಾವಂ
ನೆಗಳ್ಗುಂ ಸ್ವರಮಿದಿರೊಳೊದವೆ ಬಹುಳತೆಯಿಂದಂ (ಸೂತ್ರ ೧೮೦)

ಎಂಬ ಸೂತ್ರವನ್ನು ಹೇಳಿ—ಸಾಮಾನ್ಯವಾಗಿ ಸ್ವರವು ಪರವಾಗೆ ಪೂರ್ವಪದದ ಆದಿಯ ಹ್ರಸ್ವಕ್ಕೆ ಬಹುಳವಾಗಿ ದೀರ್ಘವಾಗುವುದು; ಮತ್ತು ಪೂರ್ವಪದಾಂತದೊಳ್ — ಣ, ಟ, ಳ, ನ, ತ ಕಾರಗಳಿರೆ ದ್ವಿತ್ವವು ಬರುವುದೆಂದು ಹೇಳಿ — 'ಪೇರಾನೆ, ಪೇರಡವಿ, ಓರೆಂಜಲ್, ಈರ್ಕೈದು, ನುಣ್ಣರಿಸಿನಂ' ಮೊದಲಾದುವನ್ನು ಉದಾಹರಿಸಿ ಬಹುಳಗ್ರಹಣದಿಂದ ಕ್ವಚಿತ್ ವ್ಯಂಜನಪರದಲ್ಲಿದ್ದರೂ ಈ ವಿಧಿಯು ಪ್ರವರ್ತಿಸುವುದೆಂದು 'ಈಂಚರಂ, ಈಂಬುಳಿ' ಮೊದಲಾದುವನ್ನು ಉದಾಹರಿಸಿರುವನು. ಇವನ ಮತದಲ್ಲಿ ದೀರ್ಘವಿಧಿಯು ಸಾಮಾನ್ಯವಾಗಿ ಪೂರ್ವಪದಾದಿ ಸ್ವರವಿಷಯಕವಾದುದರಿಂದ 'ಓರೆಂಜಲ್, ಈರ್ಕೈದು ಈರೇಳು' ಮೊದಲಾದ ಪ್ರಯೋಗಗಳಲ್ಲಿ ಲೋಪವಿಲ್ಲದೆ — ಒಂದು ಶಬ್ದಕ್ಕೆ ಒರಾದೇಶವೂ ಎರಡು ಶಬ್ದಕ್ಕೆ ಇರಾದೇಶವೂ ಬಂದಿದ್ದರೂ ದೀರ್ಘವೂ ಬರುವುದೆಂದು ತೋರುವುದು. ಶಾಸನಕಾರನ ಮತದಲ್ಲಾದರೋ ದೀರ್ಘವು ಪೂರ್ವಸ್ವರದೊಡನೆ ದು ಲೋಪವು ಒಂದೆಡೆಯಲ್ಲಿಯೇ ಪ್ರವರ್ತಿಸುವುದು ಎಂದು ಹೇಳಿರುವುದರಿಂದ ಒರಾದೇಶಾದಿಗಳು ಬಂದೆಡೆಗಳಲ್ಲಿ ದೀರ್ಘವು ಬಾರದೆ 'ಓರೆಂಜಲ್' ಮೊದಲಾದುವು ಅಸಾಧುಗಳೆಂದು ತೋರುವುದು. ಆದಾಗ್ಯೂ ಅನೇಕ ಪ್ರಾಮಾಣಿಕ ಪ್ರಯೋಗಗಳಿರುವುದರಿಂದ ಬಹುಳಾಧಿಕಾರವನ್ನು ಮಾಡಿ ಇಂತಹ ಪ್ರಯೋಗಗಳಿಗೆ ಉಪಪತ್ತಿಯನ್ನು ಕಲ್ಪಿಸಬೇಕು.

**ಅವತಾರಿಕೆ ೩೩೬**

ಪೂರ್ವಸೂತ್ರದಿಂದ ಸಾಮಾನ್ಯವಾಗಿ ಸ್ವರಕ್ಕೆ ವಿಹಿತವಾದ ದೀರ್ಘವು ಕೆಲವೆಡೆ ಬರುವುದಿಲ್ಲವೆಂದು ಬೋಧಿಸಲು ನಿಷೇಧಸೂತ್ರವನ್ನು ಹೇಳುತ್ತಾನೆ.

**ಸೂತ್ರಂ || ನ ಗುರೋಃ || ೩೩೬ ||**

**ಅರ್ಥ ||** ದು ಲೋಪ ವಿಷಯದಲ್ಲಿ ಸ್ವರಾದ್ಯುತ್ತರಪದವು ಪರದಲ್ಲಿರಲು ಪೂರ್ವಪದದಲ್ಲಿರುವ ಗುರುಸ್ವರಕ್ಕೆ ದೀರ್ಘಾದೇಶವು ಬರುವುದಿಲ್ಲ.

**ಉದಾಹರಣೆ ||** 'ಪಚ್ಚೋಲೆ, ಬೆಚ್ಚೋಡು; ಬೆಳ್ಳಾನೆ, ಬೆಳ್ಳಗಸೆ ||' ಮೊದಲಾದುವು ಇವಕ್ಕೆ ಲಕ್ಷ್ಯಗಳು.

**ವಿಚಾರ ೩೩೬**

ಈ ಸೂತ್ರದಲ್ಲಿ — ನ, ಗುರೋಃ' ಎಂದು ಎರಡು ಪದಗಳು ಇರುವುವು. ಪೂರ್ವದಂತೆ ತತ್ರೇತ್ಯಾದಿಪದಗಳೆಲ್ಲಾ ಅನುವರ್ತಿಸಲ್ಪಡುವುವು. ಅನ್ವಯವೂ ಪೂರ್ವದಂತೆ ಎಂದು ತಿಳಿಯಬೇಕು. ತಥಾಚ — 'ದು' ಲೋಪ ವಿಷಯದಲ್ಲಿ ಸ್ವರಾದ್ಯುತ್ತರಪದವು ಪರದಲ್ಲಿರುವಾಗ ಪೂರ್ವಪದಸ್ಥ ಗುರುವರ್ಣಕ್ಕೆ ದೀರ್ಘವಿಲ್ಲವೆಂದರ್ಥವಾಗಲು 'ಪಚ್ಚೋಲೆ' ಮೊದಲಾದುವು ಸಿದ್ಧಿಸುವುವು.

ಇಲ್ಲಿ ಗುರುವೆಂದರೆ ಸಂಯುಕ್ತವರ್ಣಪರಕವಾದ ಹ್ರಸ್ವವೆಂದು ತಿಳಿಯಬೇಕು. ಸ್ವತಃ ದೀರ್ಘವಾಗಿರುವುದಕ್ಕೆ ದೀರ್ಘವನ್ನು ವಿಧಿಸಲು ಪ್ರಯೋಜನವಿಲ್ಲದುದರಿಂದಲೆ ಅದಕ್ಕೆ ನಿವೃತ್ತಿ ಯುಂಟಾಗುತ್ತಿರಲು ಪುನಃ ನಿಷೇಧವು ವ್ಯರ್ಥವಾಗುವುದು. ಆದುದರಿಂದ ಇಲ್ಲಿ ಗುರುಪದವು ಸಂಯುಕ್ತಪರಕಹ್ರಸ್ವಬೋಧಕವೆಂದು ಹೇಳಲ್ಪಟ್ಟಿದೆ.

'ಪಚ್ಚೋಲೆ' ಮೊದಲಾದ ಪ್ರಯೋಗಗಳಲ್ಲಿ ಸಮಾಸಾನಾಂತರದಲ್ಲಿ ದು ಲೋಪವನ್ನು ಮಾಡಿದರೂ ಸ್ವತಃ ಸಂಯುಕ್ತವರ್ಣವಿರುವುದರಿಂದ ತತ್ಪೂರ್ವಕ್ಕೆ ದೀರ್ಘನಿಷೇಧವು ಪ್ರವರ್ತಿಸುವುದು. 'ಬೆಳ್ಳಾನೆ, ಬೆಳ್ಳಗಸೆ' ಮೊದಲಾದುವುಗಳಲ್ಲಾದರೋ — 'ಬಿಳಿದು ಆನೆ, ಬಿಳಿದು ಅಗಸೆ' ಎಂದು ವಿಗ್ರಹವನ್ನು ಮಾಡಲು ಮಧ್ಯಮಸ್ವರಾದಿಗೆ ಲೋಪವನ್ನು ಮಾಡಲು — 'ಬಿಳ್' ಎಂದು ಉಳಿಯುವುದು. ಅದಕ್ಕೆ ಎ ಕಾರಾದೇಶವನ್ನು ಮಾಡಲು — 'ಬೆಳ್+ಆನೆ, ಬೆಳ್+ಅಗಸೆ' ಎಂದು ಮೊದಲಾಗಿ ಆಗುವುದು. ಇಲ್ಲಿ ದ್ವಿತ್ವವಿಧಿಗಿಂತಲೂ ಪರವಾದ ದೀರ್ಘವು ಪ್ರವರ್ತಿಸಲು — 'ಬೇಳಾನೆ, ಬೇಳಗಸೆ' ಮೊದಲಾದ ರೂಪಗಳಾಗುವುವು; ಆದುದರಿಂದ ಇಲ್ಲಿ ನಿಷೇಧಕ್ಕೆ ಪ್ರಸಕ್ತಿಯೇ ಇಲ್ಲವೆಂದು ಶಂಕೆಯುಂಟಾಗುವುದು. ಆದಾಗ್ಯೂ ದೀರ್ಘದ್ವಿತ್ವಗಳ ಮಧ್ಯದಲ್ಲಿ ದೀರ್ಘವು ಸ್ವರಾದ್ಯುತ್ತರಪದವಿಷಯಕವಾದುದರಿಂದ ಬಹ್ವಾಶ್ರಿತವೆಂದು ಬಹಿರಂಗ ವಾಗುವುದು. ದ್ವಿತ್ವವು ಸ್ವರಮಾತ್ರವಿಷಯಕವಾದುದರಿಂದ ಅಲ್ಪಾಶ್ರಿತವೆಂದು ಅಂತರಂಗವಾಗು ವುದು. ಇವುಗಳಲ್ಲಿ '**ಅಸಿದ್ಧಂ ಬಹಿರಂಗಮಂತರಂಗೇ**' ಎಂಬ ಪರಿಭಾಷೆಯಿಂದ ಬಹಿರಂಗವಾದ ದೀರ್ಘಕ್ಕೆ ಅಸಿದ್ಧತ್ವವುಂಟಾಗಿ ಅಂತರಂಗವಾದ ದ್ವಿತ್ವವು ಬರಲು ಹ್ರಸ್ವವಿರುವುದರಿಂದ ದೀರ್ಘವು ಪ್ರಸಕ್ತವಾಗಲು ಇದರಿಂದ ನಿಷೇಧಿಸಲ್ಪಡುವುದೆಂದು ತಿಳಿಯಬೇಕು.

**ಅವತಾರಿಕೆ ೩೩೭**

ಪೂರ್ವೋಕ್ತ ದು ಲೋಪ ವಿಷಯದಲ್ಲಿ ಪ್ರಾಪ್ತವಾದ ದೀರ್ಘವನ್ನು ನಿಷೇಧಿಸಿ ಈಗ ಶಬ್ದವಿಶೇಷಗಳಿಗೆ ಆದೇಶವಿಶೇಷಗಳನ್ನು ವಿಧಿಸಲು ಪ್ರಾರಂಭಿಸುವನಾಗಿ ಮೊದಲು ತ ಕಾರಾದೇಶ ವಿಧಿಯನ್ನು ಹೇಳುತ್ತಾನೆ.

**ಸೂತ್ರಂ || ಕಿಱಸ್ತಃ || ೩೩೭ ||**

**ಅರ್ಥ || ಪೂರ್ವಸ್ವರದೊಡನೆ ಲುಪ್ತವಾದ ದು ವುಳ್ಳ ಕಿಱ್ ಎಂಬುದಕ್ಕೆ ಸ್ವರಾದ್ಯುತ್ತರ ಪದವು ಪರದಲ್ಲಿರಲು ತ ಕಾರಾದೇಶವು ಬರುವುದು.**

**ಉದಾಹರಣೆ** || ಕಿಱಿದು ಈಳೆ — ಕಿತ್ತೀಳೆ 'ಕಿಱಿದು ಅಡಿ — ಕಿತ್ತಡಿ' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೩೭**

ಈ ಸೂತ್ರದಲ್ಲಿ — 'ಕಿಱಃ, ತಃ' ಎಂದು ಎರಡು ಪದಗಳಿರುವುವು. 'ಕಿಱಃ' ಎಂಬುದು ಲುಪ್ತ ದು ವುಳ್ಳ 'ಕಿಱಿದು' ಶಬ್ದಕ್ಕೆ ಬೋಧಕವಾದ ಷಷ್ಠ್ಯಂತಪದವು. 'ತಃ' ಎಂಬುದು ಉಚ್ಚಾರಣಾರ್ಥಕ ಅ ಕಾರವುಳ್ಳ ತ ಕಾರ ಮಾತ್ರಬೋಧಕ ಪ್ರಥಮಾಂತಪದವು. ಇದೇ ಇಲ್ಲಿ ವಿಧೇಯವು. ಪೂರ್ವದಿಂದ 'ಸ್ವರೇ-ಉತ್ತರಪದೇ' ಎಂಬಿವು ಅನುವರ್ತಿಸಲ್ಪಡುವುವು. ತಥಾಚ— ಸ್ವರಾದ್ಯುತ್ತರಪದವು ಪರದಲ್ಲಿರಲು 'ಕಿಱಿದು' ಶಬ್ದದ ಏಕದೇಶವಾದ 'ಕಿಱ್' ಎಂಬುದಕ್ಕೆ

ತ ಕಾರಾದೇಶವು ಬರುವುದೆಂದು ಸೂತ್ರಾರ್ಥವಾಗುವುದರಿಂದ 'ಕಿತ್ತೀಳ್' ಮೊದಲಾದುವು ಸಿದ್ಧಿಸುವುವು.

ಈ 'ಕಿಱು' ಎಂಬುವನ್ನು ಇನಾದಿಗಣದಲ್ಲಿ ಪಾಠಮಾಡಿರುವುದರಿಂದ 'ಕಿತ್ತೀಳ್' ಮೊದಲಾದ ಪ್ರಯೋಗಗಳಲ್ಲಿ ಏಕಾರಾದೇಶವು ಬರುವುದಿಲ್ಲ. ಇದರಿಂದ ತ ಕಾರಾದೇಶವನ್ನು ಮಾಡಲು ಪೂರ್ವದಂತೆ ಅಂತರಂಗವಾದ ದ್ವಿತ್ವವನ್ನು ಮಾಡಿದರೆ ಇ ಕಾರವು ಗುರುವಾದುದರಿಂದ 'ದೀರ್ಘಸ್ವರೇ' ಎಂಬುದರಿಂದ ದೀರ್ಘವು ಬರುವುದಿಲ್ಲ. ವ್ಯಂಜನಾದ್ಯುತ್ತರಪದವಿಷಯದ ಲ್ಲಾದರೋ — 'ಕಿಱಶ್ಚ ಕುವ್ಯಂಜನೇ ॥ ೩೪೦ ॥' ಎಂಬ ಸೂತ್ರದಿಂದ ಕುರಾಗಮವು ಬರುವುದು.

ಇಲ್ಲಿ **ದರ್ಪಣಕಾರನು** —

ಕಡಿದು ಪಿಡಿದೆಂಬ ನಡುವೆಂ
ಬ ತಕಾರಂ ಟತ್ವಮಾಯ್ತು ಕಿಱದಕ್ಕೆ ಕುಱಿಂ
ಬಿಡೆಯಲ್ಲಿ ತಕಾರಂ ಸ್ವರ
ಮುಡಕೆ ಪರಕ್ಕುತ್ವಮಸ್ವರಂ ನಿಲೆ ಪರದೊಳ್ (ಸೂತ್ರ ೧೮೧)

ಎಂಬ ಸೂತ್ರದಿಂದ ಕಿಱಕ್ಕೆ ತ ಕಾರಾದೇಶವನ್ನು ವಿಧಿಸಿ 'ಕಿತ್ತಡಿ' ಮೊದಲಾದುವನ್ನು ಉದಾಹರಿಸಿ, **ಶಾಸನಕಾರನು** ಮುಂದೆ ಹೇಳುವ ಟ ಕಾರಾದ್ಯಾದೇಶಗಳನ್ನೂ ಇದೇ ಸೂತ್ರದಲ್ಲಿ ಸೂಚಿಸಿರುವನು.

**ಅವತಾರಿಕೆ ೩೩೮**

ಒಳಗೆಯೇ ಟ ಕಾರಾದೇಶ ವಿಧಿಯನ್ನು ಹೇಳುತ್ತಾನೆ.

**ಸೂತ್ರಂ ॥ ನಡೋರ್ದೋರ್ಷ್ಟಃ ॥ ೩೩೮ ॥**

**ಅರ್ಥ** ॥ 'ನಡು' ಎಂಬ ಶಬ್ದದ ದುಹಿಗೆ ಸ್ವರಾದ್ಯುತ್ತರಪದವು ಪರದಲ್ಲಿರಲು ಟ ಕಾರಾದೇಶವು ಬರುವುದು.

**ಉದಾಹರಣೆ** ॥ 'ನಡು ಇರುಳ್ — ನಟ್ಟಿರುಳ್; ನಡು ಅಡವಿ — ನಟ್ಟಡವಿ' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೩೮**

ಈ ಸೂತ್ರದಲ್ಲಿ — 'ನಡೋಃ, ದೋಃ, ಟಃ' ಎಂದು ಮೂರು ಪದಗಳಿರುವುವು. ಪೂರ್ವದಿಂದ 'ಸ್ವರಾದ್ಯುತ್ತರಪದೇ' ಎಂಬುದು ಅನುವರ್ತಿತವಾಗುವುದು. 'ನಡೋಃ' ಎಂಬುದು 'ದೋಃ' ಎಂಬುದಕ್ಕೆ ವ್ಯಧಿಕರಣ ವಿಶೇಷಣವು. 'ದೋಃ' ಎಂಬುದು ಸ್ಥಾನ ಷಷ್ಠ್ಯಂತವು. 'ಟಃ' ಎಂಬುದು ಪ್ರಥಮಾಂತವಿಧೇಯಪದವು. ಇಲ್ಲಿಯೂ ಪೂರ್ವದಂತೆ ಅ ಕಾರವು ಉಚ್ಚಾರಣಾರ್ಥವು. ತಥಾಚ — 'ನಡು' ಶಬ್ದದ ದುಹಿಗೆ ಸ್ವರಾದ್ಯುತ್ತರಪದವು ಪರವಾದಾಗ ಟ ಕಾರಾದೇಶವು ಬರುವುದು — ಎಂದು ಸೂತ್ರಾರ್ಥವಾಗುವುದು. ಇದರಿಂದ — 'ನಟ್ಟಿರುಳ್' ಮೊದಲಾದುವು ಸಿದ್ಧಿಸುವುವು. ಇಲ್ಲ ದು ಗ್ರಹಣವು ಅಂತ್ಯಾದೇಶನಿವೃತ್ತ್ಯರ್ಥವಾಗಿ ಎಂದು ತಿಳಿಯಬೇಕು.

'ಯದ್ಯಪಿ' ಪೂರ್ವಸೂತ್ರದಿಂದ ಸರ್ವತ್ರ ಅನುಗತವಾದ 'ತತ್ರ' ಎಂಬುದು ಇಲ್ಲಿಯೂ ಉಪಸ್ಥಿತವಾಗುವುದು. ಆದಾಗ್ಯೂ ಈ ಸೂತ್ರದಲ್ಲಿ ದು ಗ್ರಹಣವನ್ನು ಮಾಡಿರುವ ಸಾಮರ್ಥ್ಯ

ದಿಂದ ಹ್ಯಾಗೆ ನೀರುಕೋಳಿಯು ಒಂದೆಡೆಯಲ್ಲಿ ತಲೆಯನ್ನೆತ್ತಿ ತನ್ನ ಕಾರ್ಯವನ್ನು ಮಾಡಿಕೊಂಡು ಏನಾದರೂ ಬಾಧಕವು ತೋರಿದರೆ ಅಲ್ಲಿ ಮುಳುಗಿ ಅನ್ಯತ್ರ ನಿರಾಬಾಧವಾದ ಸ್ಥಳದಲ್ಲಿ ಹೋಗಿ ತಲೆಯನ್ನು ಎತ್ತುವುದೋ ಹಾಗೆ ಇದೂ ಇಲ್ಲಿ ಬಾಧಕವಿರುವುದರಿಂದ ಸಂಬಂಧಿಸದೆ ಮುಂದೆ ಸಂಬಂಧಿಸಲ್ಪಡುವುದೆಂದು ತಿಳಿಯಬೇಕು.

**ಅವತಾರಿಕೆ ೩೩೯**

ಹೀಗೆಯೇ ಶಬ್ದಾಂತರಗಳಿಗೂ ಟ ಕಾರಾದೇಶವನ್ನು ವಿಧಿಸುತ್ತಾನೆ.

**ಸೂತ್ರಂ || ಕಡ್ನಿಡಃ || ೩೩೯ ||**

**ಅರ್ಥ || 'ಕಡಿದು, ನಿಡಿದು' ಎಂಬ ಶಬ್ದಗಳಿಗೆ ಪೂರ್ವಸ್ವರದೊಡನೆ ದು ಲೋಪವು ಬಂದ ವಿಷಯದಲ್ಲಿ ಸ್ವರಾದ್ಯುತ್ತರಪದವು ಪರದಲ್ಲಿರಲು ಟ ಕಾರಾದೇಶವು ಬರುವುದು.**

**ಉದಾಹರಣೆ ||** 'ಕಡಿದು ಆಯಂ — ಕಟ್ಟಾಯಂ; ಕಡಿದು ಎಲ್ವು — ಕಟ್ಟೆಲ್ವು; ನಿಡಿದು ಉಸಿರ್ — ನಿಟ್ಟುಸಿರ್; ನಿಡಿದು ಆಯಂ — ನಿಟ್ಟಾಯಂ||' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೩೯**

ಈ ಸೂತ್ರದಲ್ಲಿ 'ಕಡ್ನಿಡಃ' ಎಂಬುದೊಂದೇ ಪದವಿರುವುದು. ಪೂರ್ವದಿಂದ 'ತತ್ರ,ಸ್ವರಾದ್ಯುತ್ತರಪದೇ, ಟಃ' ಎಂಬಿವು ಅನುವರ್ತಿಸಲ್ಪಡುವುವು. 'ಕಡ್ನಿಡಃ' ಎಂಬುದು 'ಕಡಿದು, ನಿಡಿದು' ಶಬ್ದಗಳಿಗೆ ದು ಲೋಪವನ್ನು ಮಾಡಲು ಅವಶಿಷ್ಟಭಾಗವನ್ನು ಬೋಧಿಸುವುದು. ತಥಾಚ — ಲುಪ್ತ ದು ವುಳ್ಳ 'ಕಡಿದು, ನಿಡಿದು' ಶಬ್ದಗಳ ಅಂತ್ಯಕ್ಕೆ ಟ ಕಾರಾದೇಶವು ಸ್ವರಾದ್ಯುತ್ತರಪದವು ಪರದಲ್ಲಿರುವಾಗ ಬರುವುದು — ಎಂದು ಸೂತ್ರಾರ್ಥವಾಗಲು ಆ ಟ ಕಾರಕ್ಕೆ ಪೂರ್ವದಂತೆ ದ್ವಿತ್ವವು ಬಂದು 'ಕಟ್ಟಾಯಂ' ಮೊದಲಾದುವು ಸಿದ್ಧಿಸುವುವು.

**ಅವತಾರಿಕೆ ೩೪೦**

ಹೀಗೆಯೇ ಪೂರ್ವಸೂತ್ರೋಪಾತ್ತವಾದ 'ಕಡ್ನಿಡ್'ಗಳಿಗೂ 'ಕಿಱಿದು' ಶಬ್ದಕ್ಕೂ ವ್ಯಂಜನಾದ್ಯುತ್ತರಪದವು ಪರವಾಗಿರುವಾಗ ಕುರಾಗಮವನ್ನು ವಿಧಿಸುತ್ತಾನೆ.

**ಸೂತ್ರಂ || ಕಿಱಶ್ಚ ಕುರ್ವ್ಯಂಜನೇ || ೩೪೦ ||**

**ಅರ್ಥ || ಕೃತ ದು ಲೋಪವಾದ 'ಕಡಿದು, ನಿಡಿದು, ಕಿಱಿದು' ಶಬ್ದಗಳಿಗೆ ಅಂತ್ಯಾವಯವವಾಗಿ ಕುರಾಗಮವು ವ್ಯಂಜನಾದ್ಯುತ್ತರಪದವು ಪರದಲ್ಲಿರುವಾಗ ಪೂರ್ವಸ್ವರದೊಡನೆ ದು ಲೋಪವು ಬಂದಾಗ ಬರುವುದು.**

**ಉದಾಹರಣೆ ||** 'ಕಡಿದು ಗಾಡಿ — ಕಡುಗಾಡಿ; ಕಡಿದು ಚೆಲ್ವು — ಕಡುಚೆಲ್ವು; ನಿಡಿದು ತೋಳ್—ನಿಡುದೋಳ್; ನಿಡಿದು ಸೂಳ್—ನಿಡುಸೂಳ್; ಕಿಱಿದು ನಗೆ — ಕಿಱುನಗೆ; ಕಿಱಿದು ಕೂಸು — ಕಿಱುಗೂಸು ||' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೪೦**

ಈ ಸೂತ್ರವಲ್ಲಿ — 'ಕಿಱಃ, ಚ, ಕುಃ, ವ್ಯಂಜನೇ' ಎಂದು ನಾಲ್ಕು ಪದಗಳಿರುವುವು. 'ಕಿಱಃ' ಎಂಬುದು ಪೂರ್ವಸ್ವರದೊಡನೆ ದು ಲೋಪವನ್ನು ಹೊಂದಿದ 'ಕಿಱಿದು' ಶಬ್ದ

ಬೋಧಕವು. ಚ ಕಾರವು ಪೂರ್ವಸೂತ್ರೋಕ್ತಗಳಾದ 'ಕಡ್ವಿಡಃ' ಎಂಬುದಕ್ಕೆ ಸಮುಚ್ಚಾಯಕವು. 'ಕುಃ' ಎಂಬುದು ಕ ಕಾರೇತ್‌ಸಂಜ್ಞಕವಾದ ವಿಧೇಯವು. ಆದುದರಿಂದ ಇದು ಆಗಮವೆಂದು ತಿಳಿಯಬೇಕು. 'ವ್ಯಂಜನೇ' ಎಂಬುದು ಅನುವೃತ್ತವಾದ ಉತ್ತರಪದಕ್ಕೆ ವಿಶೇಷಣವನ್ನು ಮಾಡಲು ತದಾದಿ ಲಾಭವು ಬಂದು 'ವ್ಯಂಜನಾದ್ಯುತ್ತರಪದೇ' ಎಂದರ್ಥವಾಗುವುದು. 'ತತ್ರ' ಎಂಬುದು ಅನುಗತವಾಗಿಯೇ ಇರುವುದು. ತಥಾಚ - ಪೂರ್ವಸ್ವರದೊಡನೆ ದು ಲೋಪವು ಬಂದ ವಿಷಯದಲ್ಲಿ ವ್ಯಂಜನಾದ್ಯುತ್ತರಪದವು ಪರದಲ್ಲಿರುವಾಗ ಕಿಱಾದಿ ಶಬ್ದಗಳ ಕೊನೆಗೆ ಉ ಎಂಬಾಗಮವು ಬರುವುದು — ಎಂದು ಸೂತ್ರಾರ್ಥವಾಗಲು 'ಕಡುಗಾಡಿ' ಮೊದಲಾದುವು ಸಿದ್ಧಿಸುವುವು.

ಇಲ್ಲಿ ಸ್ವರಾದ್ಯುತ್ತರಪದವು ಪರದಲ್ಲಿರುವಾಗ 'ಕಿಱಸ್ತುಃ, ಕಡ್ವಿಡಃ' ಎಂಬ ಪೂರ್ವಸೂತ್ರಗಳಿಂದ ತ ಕಾರ ಟ ಕಾರಗಳನ್ನು ವಿಧಿಸಿರುವುದರಿಂದ ಈ ಆಗಮವು ವ್ಯಂಜನಾದ್ಯುತ್ತರಪದದಲ್ಲಿಯೇ ಪ್ರಸಕ್ತವಾಗುವುದೆಂದು ವ್ಯಂಜನಗ್ರಹಣವು ನಿರರ್ಥಕವೆಂದು ಶಂಕೆಯುಂಟಾಗಲು ಉತ್ತರಸೂತ್ರಾರ್ಥವಾಗಿ ವ್ಯಂಜನಗ್ರಹಣವು ಮಾಡಲ್ಪಟ್ಟಿರುವುದೆಂದು ತಿಳಿಯಬೇಕು.

**ಅವತಾರಿಕೆ ೩೪೧**

ಹೀಗೆಯೇ ಇನ್ನು ಕೆಲವು ಶಬ್ದಗಳಿಗೆ ಆದೇಶಾಂತರವನ್ನು ವಿಧಿಸುತ್ತಾನೆ.

**ಸೂತ್ರಂ ॥ ಕೆಚ್ ಪಚ್ ಬೆಚ್ಚಶ್ಚಾ ಮಃ ॥ ೩೪೧ ॥**

**ಅರ್ಥ ॥** ಪೂರ್ವಸ್ವರದೊಡನೆ ದು ಲೋಪವು ಬಂದ ವಿಷಯದಲ್ಲಿ ವ್ಯಂಜನಾದ್ಯುತ್ತರಪದವು ಪರದಲ್ಲಿರುವಾಗ 'ಕೆಚ್ಚನೆ, ಪಚ್ಚನೆ, ಬೆಚ್ಚನೆ' ಶಬ್ದಗಳ ಚ ಕಾರಸಹಿತವಾದ ಅಂತ್ಯಕ್ಕೆ ಮಕಾರಾದೇಶವು ಬರುವುದು.

**ಉದಾಹರಣೆ ॥** ಕೆಚ್ಚನೆ ತೆಂಗು — ಕೆಂದೆಂಗು; ಕೆಚ್ಚನೆ ತಳಿರ್ — ಕೆಂದಳಿರ್; ಕೆಚ್ಚನೆ ಪೊನ್ — ಕೆಂಬೊನ್; ಪಚ್ಚನೆ ತಲೆ — ಪಂದಲೆ; ಪಚ್ಚನೆ ತೊವಲ್ — ಪಂದೊವಲ್; ಪಚ್ಚನೆ ಕಾಯ್ — ಪಂಗಾಯ್; ಬೆಚ್ಚನೆ ನೀರ್ — ಬೆನ್ನೀರ್; ಬೆಚ್ಚನೆ ಕದಿರ್ — ಬೆಂಗದಿರ್; ಬೆಚ್ಚನೆ ಬೂದಿ — ಬೆಂಬೂದಿ ॥' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೪೧**

ಈ ಸೂತ್ರದಲ್ಲಿ — 'ಕೆಚ್ ಪಚ್ ಬೆಚ್ಚಃ, ಚಾ, ಮಃ' ಎಂದು ಮೂರು ಪದಗಳಿರುವುವು. ಪೂರ್ವದಿಂದ 'ತತ್ರ, ವ್ಯಂಜನೇ, ಉತ್ತರಪದೇ' ಎಂಬಿವು ಅನುವರ್ತಿಸಲ್ಪಡುವುವು. 'ಕೆಚ್ ಪಚ್ ಬೆಚ್ಚಃ' ಎಂಬುದು ಕೃತಲೋಪ 'ಕೆಚ್ಚನೆ, ಪಚ್ಚನೆ, ಬೆಚ್ಚನೆ' ಎಂಬ ಶಬ್ದತ್ರಯ ಬೋಧಕ ಸ್ಥಾನಷಷ್ಠ್ಯಂತಪದವು. 'ಚಾ' ಎಂಬುದು ಚ ಕಾರ ಮಾತ್ರ ಬೋಧಕಸಹಾರ್ಥಕ ತೃತೀಯಾಂತಪದವು. ಇದು 'ಷಷ್ಠ್ಯಾಃ ಸ್ಥಾನೇಽಂತ್ಯಸ್ಯ ॥೨೨॥' ಎಂಬ ಪರಿಭಾಷಾಬಲಲಭ್ಯವಾದ 'ಅಂತ್ಯಸ್ಯ' ಎಂಬುದಕ್ಕೆ ವಿಶೇಷಣವು. 'ಮಃ' ಎಂಬುದು ಮ ಕಾರ ಮಾತ್ರ ಬೋಧಕವಾದ ಪ್ರಥಮಾಂತಪದವು. ಆದುದರಿಂದ ಇಲ್ಲಿ ಇದೇ ವಿಧೇಯವಾಗುವುದು. ತಥಾಚ — ಪೂರ್ವಸ್ವರಸಹಿತ ದು ಲೋಪ ವಿಷಯದಲ್ಲಿ ವ್ಯಂಜನಾದ್ಯುತ್ತರಪದವು ಪರದಲ್ಲಿರುವಾಗ 'ಕೆಚ್ಚನೆ, ಪಚ್ಚನೆ, ಬೆಚ್ಚನೆ' ಶಬ್ದಗಳ 'ಕೆಚ್ಚ್, ಪಚ್ಚ್, ಬೆಚ್ಚ್' ಶಬ್ದಗಳ ಅಂತ್ಯವಾದ ಚ ಕಾರದ್ವಯಕ್ಕೂ ಮ ಕಾರಾದೇಶವು ಬರುವುದೆಂದು ಸೂತ್ರಾರ್ಥವಾಗಲು 'ಕೆಂದೆಂಗು' ಮೊದಲಾದುವು ಸಿದ್ಧಿಸುವುವು.

ಇಲ್ಲಿ ' ಚಾ ' ಎಂಬುದನ್ನು ಹೇಳಿರುವುದರಿಂದ ' ಷಷ್ಠ್ಯಾಃ ಸ್ಥಾನೇಽಂತ್ಯಸ್ಯ ' ಎಂಬ ಪರಿಭಾಷೆಯನ್ನು ಬಾಧಿಸಿ ಚ ಕಾರದ್ವಯಕ್ಕೂ ನಿವೃತ್ತಿಯಾಗುವುದೆಂದು ಸೂಚಿಸಲ್ಪಡುವುದು. ' ವ್ಯಂಜನೇ ' ಎಂದು ಹೇಳಿರುವುದರಿಂದ — ಕೆಚ್ಚೋಲಿ, ಪಚ್ಚಡಿಕೆ, ಜೆಚ್ಚೋಡು ' ಮೊದಲಾದ ಸ್ವರಾದ್ಯುತ್ತರಪದದಲ್ಲಿ ಬರುವುದಿಲ್ಲ.

ಆದರೆ ಸ್ಥಾನಿಗೆ ವಿಶೇಷನಿರ್ದೇಶವೆಲ್ಲಿರುವುದೋ ಅಲ್ಲಿಯೇ ಸಾಹಿತ್ಯವಚನವು ಸಾರ್ಥಕವು. ಆದುದರಿಂದಲೇ — ಪೂರ್ವದಲ್ಲಿ ' ಪೂರ್ವಸ್ವರೇಣ, ದೋಃ ' ಎಂದು ನಿರ್ದೇಶಿಸಲ್ಪಟ್ಟಿರುವುದು. ಇಲ್ಲಿ ಸ್ಥಾನಿನಿರ್ದೇಶವೇ ಇರುವುದಿಲ್ಲ. ಆದುದರಿಂದ ಚ ಕಾರ ಸಾಹಿತ್ಯವು ಆವುದಕ್ಕೆ? ಎಂದು ಸಂಶಯವುಂಟಾಗುವುದು. ಮತ್ತು ' ಮಃ ' ಎಂಬುದಕ್ಕೆ ಸಾನ್ನಿಧ್ಯವಿರುವುದರಿಂದ ಚ ಕಾರ ಸಹಿತ ಮ ಕಾರಾದೇಶವು ಕೆಚ್ಚಾದಿಗಳಿಗೆ ಬರುವುದೆಂದು ವಿಪರೀತಾರ್ಥವೂ ಪ್ರಾಪ್ತವಾಗುವುದು. ಆದಾಗ್ಯೂ — ಇಲ್ಲಿ ಮ ಕಾರವು ವಿಧೇಯವು. ಇದು ಪಂಚಮೀನಿರ್ದೇಶವಿಲ್ಲದಿರುವುದರಿಂದ ಪ್ರತ್ಯಯವಲ್ಲ. ಆಗಮತ್ವಸೂಚಕ ಕಿತ್ವವಿಲ್ಲದಿರುವುದರಿಂದ ಆಗಮವೂ ಅಲ್ಲ. ಮತ್ತೇನೆಂದರೆ — ಷಷ್ಠ್ಯಂತಾರ್ಥಕ್ಕೆ ವಿಧಿಸಲ್ಪಡುವುದರಿಂದ ಆದೇಶವೆಂದು ನಿರ್ಣಯಿಸಲ್ಪಡುವುದು. ಅದು ಆವುದಕ್ಕೆ ಬರುವುದೆಂದರೆ — ' ಕೆಚ್ ಪಚ್ ಜೆಚ್ಚಃ ' ಎಂಬ ಷಷ್ಠ್ಯಂತವನ್ನು ನಿರ್ದೇಶಿಸಿರುವುದರಿಂದ ' ಷಷ್ಠ್ಯಾಃ ಸ್ಥಾನೇಽಂತ್ಯಸ್ಯ ' ಎಂಬ ಪರಿಭಾಷೆಯಿಂದ ಆ ಷಷ್ಠ್ಯಂತಪದ ' ಜೋಧ್ಯಾಂತ್ಯಸ್ಯ ' ಎಂದು ಸ್ಥಾನಿಯೂ ನಿರ್ಣೀತವಾಗುವುದು. ಹೀಗೆ ನಿರ್ಣಯಿಸಲ್ಪಡಲು ಚ ಕಾರ ಸಾಹಿತ್ಯವು ಇಲ್ಲಿ ಆದೇಶಕ್ಕೆ ಎಂದು ತಿಳಿಯಬೇಕು. ಇದರಿಂದ ಚ ಕಾರದ್ವಯಮಿಳಿತವಾದುದೇ ಪ್ರಕೃತದಲ್ಲಿ ' ಸ್ಥಾನಿ ' ಎಂದು ತಿಳಿಯಬೇಕು. ಹೀಗೆಯೇ ಈ ಸೂತ್ರದಲ್ಲಿಯೂ ಮುಂದೆ ಎಲ್ಲಾಕಡೆಯಲ್ಲಿಯೂ ತಿಳಿಯತಕ್ಕದ್ದು.

ಇದೇ ಅರ್ಥವನ್ನು ಸಂಗ್ರಹಿಸಿ **ದರ್ಪಣಕಾರನು** —

> ಜನಯಿಸುಗುಂ ಪಚ್ಚನೆ ಕೆ
> ಚ್ಚನೆ ಬೆಚ್ಚನೆಗಳ ಚಕಾರದೊಳ್ ಮತ್ವಂ ಕೆ
> ಚ್ಚನೆಯಾದಿಗೆ ಚತ್ವಂ ಮೇ
> ಣಿತರಮತ್ವಂ ಸುಕಾರಮೆತ್ವಕ್ಕಿತ್ವಂ (ಸೂತ್ರ ೧೮೨)

ಎಂಬ ಸೂತ್ರದಿಂದ ಮತ್ವವನ್ನು ವಿಧಿಸಿ ' ಕೆಚ್ಚನೆ ' ಶಬ್ದದಾದಿಯ ಕ ಕಾರಕ್ಕೆ ಕದಾಚಿತ್ ಚ ಕಾರವೂ ಈ ಶಬ್ದಗಳ ಕಡೆಯ ಮ ಕಾರಕ್ಕೆ ಸು ಕಾರವೂ ಆದಿಯ ಎ ಕಾರಕ್ಕೆ ಇತ್ವವೂ ಬರುವುವೆಂದು ಹೇಳಿರುವನು. **ಶಾಸನಕಾರನು** ಚಾಕಾರಾದ್ಯಾದೇಶಗಳನ್ನು ವಕ್ಷ್ಯಮಾಣಸೂತ್ರಗಳಿಂದ ವಿಧಿಸುವನೆಂದು ತಿಳಿಯಬೇಕು.

**ಅವತಾರಿಕೆ ೩೪೩**

ಪೂರ್ವಸೂತ್ರವಿಹಿತ ಮ ಕಾರವಿಶಿಷ್ಟವಾದ ' ಕೆಚ್ಚನೆ ' ಶಬ್ದದ ಆದಿಗೆ ಆದೇಶಾಂತರವನ್ನು ವಿಧಿಸುತ್ತಾನೆ.

**ಸೂತ್ರಂ ॥ ಕೆಮಃ ಕಶ್ಚೋ ವಾ ॥ ೩೪೩ ॥**

**ಅರ್ಥ ॥ ಕೃತ ಮ ಕಾರಕ ' ಕೆಚ್ಚನೆ ' ಶಬ್ದದ ಕ ಕಾರಕ್ಕೆ ವ್ಯಂಜನಾದ್ಯುತ್ತರಪದವು ಪರದಲ್ಲಿರಲು ಚ ಕಾರಾದೇಶವು ವಿಕಲ್ಪವಾಗಿ ಬರುವುದು.**

**ಉದಾಹರಣೆ** ॥ 'ಚೆಂದೆಂಗು, ಕೆಂದೆಂಗು; ಚೆಂದಳಿರ್, ಕೆಂದಳಿರ್; ಚೆಂಗಾಯ್, ಕೆಂಗಾಯ್ ॥' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೪೨**

ಈ ಸೂತ್ರದಲ್ಲಿ 'ಕೆಮಃ, ಕಃ, ಚಃ, ವಾ' ಎಂದು ನಾಲ್ಕು ಪದಗಳಿರುವುವು. ಪೂರ್ವದಿಂದ 'ವ್ಯಂಜನಾದ್ಯುತ್ತರಪದೇ' ಎಂದು ಅನುವೃತ್ತವಾಗುವುದು. 'ಕೆಮಃ' ಎಂಬುದು ಲುಪ್ತ ಮಧ್ಯಮಸ್ವರಾದಿಯಾದ ಕೃತಮಕಾರಕ 'ಕೆಚ್ಚನೆ' ಶಬ್ದಬೋಧಕ ಷಷ್ಠ್ಯಂತನಿರ್ದೇಶವು. ಇದು 'ಕಃ' ಎಂಬುದಕ್ಕೆ ಅವಯವಾವಯವಿಭಾವಸಂಬಂಧದಿಂದ ವಿಶೇಷಣವು. 'ಕಃ' ಎಂಬುದು ಸ್ಥಾನಷಷ್ಠ್ಯಂತವು. 'ಚಃ' ಎಂಬುದು ವಿಧೇಯಬೋಧಕವಾದ ಪ್ರಥಮಾಂತವು. ಇಲ್ಲಿ ಅ ಕಾರ ಉಚ್ಚಾರಣಾರ್ಥಕವು. 'ವಾ' ಎಂಬುದು ವಿಕಲ್ಪಾರ್ಥಕವು. ತಥಾಚ — ವ್ಯಂಜನಾದ್ಯುತ್ತರಪದವು ಪರವಲ್ಲಿರಲು ಪೂರ್ವಸ್ವರಸಹಿತ ದು ಲೋಪ ವಿಷಯದಲ್ಲಿ 'ಕೆಚ್ಚನೆ' ಶಬ್ದಕ್ಕೆ ಮ ಕಾರವು ಬಂದಾಗ ಅದರ ಕ ಕಾರಕ್ಕೆ ವಿಕಲ್ಪವಾಗಿ ಚ ಕಾರಾದೇಶವು ಬರುವುದು — ಎಂದು ಸೂತ್ರಾರ್ಥವಾಗುವುದು. ಆದುದರಿಂದ 'ಚೆಂದೆಂಗು' ಮೊದಲಾದುವು ಸಿದ್ಧಿಸುವುವು.

ಇಲ್ಲಿ 'ಕೆಮಃ' ಎಂದು ಹೇಳಿರುವುದರಿಂದ — 'ಪಂದಲೆ, ಬೆಂಗಲ್' ಮೊದಲಾದುವಕ್ಕೆ ಚ ಕಾರಾದೇಶವು ಬರುವುದಿಲ್ಲ. 'ಕಃ' ಎಂದು ಹೇಳಿರುವುದರಿಂದ ಆದಿಗೆ ಬರುವುದಲ್ಲದೆ ಅಂತ್ಯಕ್ಕೆ ಬರುವುದಿಲ್ಲ— ಎಂದು ತಿಳಿಯಬೇಕು.

**ಅವತಾರಿಕೆ ೩೪೩**

ಬಳಿಕ ಉಯಾರಾದಿಗಳಿಗೆ ನಿಮಿತ್ತಾಂತರವಿರುವಾಗ ಆದೇಶಾಂತರವನ್ನು ವಿಧಿಸುತ್ತಾನೆ.

**ಸೂತ್ರಂ ॥ ಎತೇಸುರ್ಬೆಮುಶ್ಚೋಯಾರ್ಯಾದಿಷು ಚ ॥ ೩೪೩ ॥**

**ಅರ್ಥ** ॥ ಕೃತ ಮ ಕಾರಕವಾದ 'ಕೆಚ್ಚನೆ' ಶಬ್ದಕ್ಕೂ 'ಬೆಚ್ಚನೆ' ಶಬ್ದಕ್ಕೂ ಪೂರ್ವಸ್ವರ ಸಹಿತ ದು ಲೋಪವಿಷಯದಲ್ಲಿ ವ್ಯಂಜನಾದ್ಯುತ್ತರಪದವು ಪರವಾಗಿರುವಾಗಲು ಮತ್ತು ಉಯಾರಾದಿ ಗಣಪಠಿತಗಳಾದ ಶಬ್ದಗಳು ಪರವಾಗಿರುವಾಗಲು ಎ ಕಾರದಿಂದ ಸಹಿತವಾದ ಅಂತ್ಯಭಾಗಕ್ಕೆ 'ಇಸು' ಎಂಬಾದೇಶವು ವಿಕಲ್ಪವಾಗಿ ಬರುವುದು.

**ಉದಾಹರಣೆ** ॥ 'ಕಿಸುಸಂಜೆ, ಕಿಸುದಳಿರ್; ಬಿಸುಸೀರ್, ಬಿಸುಗದಿರ್; ಕೇಸುರಿ, ಕೇಸಕ್ಕಿ; ಬೇಸುರಿ, ಬೇಸೋಡು' ಮೊದಲಾದುವು ಇವಕ್ಕೆ ಲಕ್ಷ್ಯಗಳು. ಇದು ಬಾರದ ಪಕ್ಷದಲ್ಲಿ — 'ಕೆಂಜಂಜೆ, ಚೆಂಜಂಜೆ; ಕೆಂದಳಿರ್, ಚೆಂದಳಿರ್; ಬೆಸ್ಸೀರ್, ಬೆಂಗದಿರ್; ಕೆಸ್ಸುರಿ, ಕೆಚ್ಚುರಿ; ಕೆನ್ನಕ್ಕಿ, ಕೆಚ್ಚಕ್ಕಿ; ಬೆನ್ನುರಿ, ಬೆಚ್ಚುರಿ; ಬೆನ್ನೋಡು, ಬೆಚ್ಚೋಡು ॥' ಮೊದಲಾದುವು ಸಿದ್ಧಿಸುವುವು.

**ವಿಚಾರ ೩೪೩**

ಈ ಸೂತ್ರದಲ್ಲಿ — 'ಎತಾ, ಇಸುಃ, ಬೆಮಃ, ಚ, ಉಯಾರ್ಯಾದಿಷು, ಚ' ಎಂದು ಆರು ಪದಗಳಿರುವುವು. 'ಎತಾ' ಎಂಬುದು ಎ ಕಾರಬೋಧಕವಾದ ಸಹಾರ್ಥಕ ತೃತೀಯಾಂತ ಪದವು. ಇದು ಪೂರ್ವದಂತೆ — '**ಷಷ್ಠ್ಯಾಃ ಸ್ಥಾನೇಽಂತ್ಯಸ್ಯ**' ಎಂಬ ಪರಿಭಾಷೆಯಿಂದ ಉಪಸ್ಥಿತವಾದ ಅಂತ್ಯಕ್ಕೆ ವಿಶೇಷಣವು. ಇದು 'ಎಮ್' ಎಂಬ ಭಾಗಕ್ಕೆ ಬೋಧಕವಾಗುವುದು. 'ಇಸುಃ'

ಎಂಬುದು ವಿಧೇಯವು. 'ಬೆನುಃ' ಎಂಬುದು ಬೆಚ್ಚನೆ, ಶಬ್ದೈಕದೇಶಕೃತ ಮ ಕಾರ ಬೋಧಕವು. ಚ ಕಾರವು ಪೂರ್ವೋಕ್ತವಾದ ' ಕೆಮುಃ ' ಎಂಬುದಕ್ಕೆ ಸಮುಚ್ಚಾಯಕವು. ' ಉರ್ಯಾದಿಷು ' ಎಂಬುದು ಉರ್ಯಾದಿಗಣಪಠಿತ ಶಬ್ದಬೋಧಕವಾದ ನಿಮಿತ್ತಸಪ್ತಮ್ಯಂತಪದವು. ಇಲ್ಲಿರುವ ಚ ಕಾರವು ವ್ಯಂಜನಾದ್ಯುತ್ತರಪದ ಸಮುಚ್ಚಾಯಕವು. ತಥಾಚ — ಪೂರ್ವಸ್ವರಸಹಿತ ದು ಲೋಪವಿಷಯದಲ್ಲ ವ್ಯಂಜನಾದ್ಯುತ್ತರಪದವೂ ಉರ್ಯಾದಿ ಗಣಪಠಿತ ಶಬ್ದಗಳೂ ಪರವಾಗಿರಲು ಕೃತ ಮ ಕಾರವಾದ ' ಕೆಚ್ಚನೆ, ಬೆಚ್ಚನೆ ' ಶಬ್ದಗಳ 'ಎಮ್' ಎಂಬುದಕ್ಕೆ ವಿಕಲ್ಪವಾಗಿ 'ಇಸು' ಎಂಬಾದೇಶವು ಬರುವುದೆಂದು ಸೂತ್ರಾರ್ಥವಾಗಲು 'ಕಿಸುಸಂಜೆ' ಮೊದಲಾದುವು ಸಿದ್ಧಿಸುವುವು.

ಪೂರ್ವದಲ್ಲಿ ವ್ಯಂಜನಾದ್ಯುತ್ತರಪದವು ಪರದಲ್ಲಿರುವಾಗಲೇ ಮಕಾರಾದೇಶವನ್ನು ವಿಧಿಸಿರುವುದರಿಂದ ಇಲ್ಲಿ ಉರ್ಯಾದಿಗಳು ಪರದಲ್ಲಿರುವಾಗ ' ಕೆಮ್, ಬೆಮ್ ' ಎಂಬ ರೂಪಗಳೇ ಆಗುವುದಿಲ್ಲ. ಆದಾಗ್ಯೂ ಇದೇ ಸೂತ್ರ ಜ್ಞಾಪಕದಿಂದ ಕ್ವಚಿತ್ ಉರ್ಯಾದಿಗಣಪಠಿತ ಸ್ವರಾದ್ಯುತ್ತರಪದವು ಪರದಲ್ಲಿದ್ದರೂ ಮ ಆದೇಶವು ಬರುವುದೆಂದು ಸೂಚಿತವಾಗುವುದು.

ಇಲ್ಲಿ ' ಕೆಮುಃ, ಬೆಮುಃ ' ಎಂಬೆರಡನ್ನೇ ಹೇಳಿರುವುದರಿಂದ ' ಪಂದಲೆ, ಪಚ್ಚಡಿಕೆ ' ಮೊದಲಾದುವಕ್ಕೆ ಬರುವುದಿಲ್ಲ. ' ಉರ್ಯಾದಿಷು ' ಎಂದು ಹೇಳಿರುವುದರಿಂದ ' ಕೆಚ್ಚಾನೆ, ಬೆಚ್ಚಗೂಳ್ ' ಮೊದಲಾದ ಪ್ರಯೋಗಗಳಲ್ಲ ಬರುವುದಿಲ್ಲ. ಉರ್ಯಾದಿಗಳಾವುವೆಂದರೆ — ' ಉರಿ, ಅಕ್ಕಿ, ಓಡು, ಎಲ್ತು, ಎಣ್ಣೆ, ಉಗುರ್, ಅಣಿಲ್, ಅವರೆ, ಅಡಕಿಲ್, ಅಡಕೆ ' ಮೊದಲಾದುವು. ಇದು ಬಹುವಚನಾಂತವಾಗಿ ನಿರ್ದೇಶ ಮಾಡಿರುವುದರಿಂದ ಆಕೃತಿಗಣವೆಂದು ತಿಳಿಯಬೇಕು.

**ಅವತಾರಿಕೆ ೩೪೪**

ಇದೇ ವಿಷಯದಲ್ಲಿ ಕೆಲವು ಕೃದಂತಗಳಿಗೆ ಮ ಕಾರಾದೇಶ ವಿಧಾಯಕ ಸೂತ್ರವನ್ನು ಹೇಳುತ್ತಾನೆ.

**ಸೂತ್ರಂ || ಕೃತೋ ಮೋ ಗದಬಜ್ಯನಕಿ || ೩೪೪ ||**

**ಅರ್ಥ ||** ಕೃದಂತ ಶಬ್ದಗಳಿಗೆ ಗ, ದ, ಬ, ಜ ಕಾರಾದ್ಯುತ್ತರಪದವು ಪರದಲ್ಲಿರುವಾಗ ಪೂರ್ವಸ್ವರಸಹಿತ ದು ಲೋಪವಿಷಯದಲ್ಲಿ ಮ ಕಾರಾದೇಶವು ಬರುವುದು. ವಕ್ಷ್ಯಮಾಣವಾದ ಅಗಾಗಮ ವಿಷಯದಲ್ಲಿಯಾದರೋ ಬರುವುದಿಲ್ಲ.

**ಉದಾಹರಣೆ ||** ಎತ್ತುವುದು ಕೋಲ್— ಎತ್ತುಂಗೋಲ್, ಹೀಗೆಯೇ— ಕುತ್ತುಂಗಱು, ತೂಗುಂದೊಟ್ಟಿಲ್, ಅಡುಂದೊಲೆ[1], ಬತ್ತುಂಬಯಲ್, ಮಿಂಚುಂಬುಲು, ತೂಗುಂಜೊಡರ್, ಓಡುಂಜಗಳಂ ||' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೪೪**

ಈ ಸೂತ್ರದಲ್ಲಿ — ' ಕೃತಃ, ಮಃ, ಗದಬಜಿ, ಅನಕಿ ' ಎಂದು ನಾಲ್ಕು ಪದಗಳಿರುವುವು. ' ಕೃತಃ ' ಎಂಬುದು ಕೃದಂತಬೋಧಕವಾದ ಸ್ಥಾನಷಷ್ಠ್ಯಂತಪದವು. ' ಮಃ ' ಎಂಬುದು

ಪಾಠಾಂತರ ೧ : ಅಡುಂದೊರೆ

ವಿಧೇಯವಾಚಕವು. 'ಗದಬಜ' ಎಂಬುದು ಗಕಾರಾದಿವರ್ಣಬೋಧಕವಾದ ಸಪ್ತಮ್ಯಂತ ಪದವು. ಇದು ಅನಾವೃತ್ತವಾದ ಉತ್ತರಪದಕ್ಕೆ ವಿಶೇಷಣವು. 'ಅನಕಿ' ಎಂಬುದು ವಿಷಯ ಸಪ್ತಮ್ಯಂತವು. ಇಲ್ಲಿ ಪ್ರಸಜ್ಯಪ್ರತಿಷೇದಾರ್ಥಕತ್ವವನ್ನಂಗೀಕರಿಸುವುದರಿಂದ ಅಗ್ವಿಷಯದಲ್ಲಿ ಈ ವಿಧಿಯು ಬರುವುದಿಲ್ಲವೆಂದರ್ಥವಾಗುವುದು. ತಥಾಚ — ಪೂರ್ವಸ್ವರಸಹಿತ ದು ಲೋಪ ವಿಷಯದಲ್ಲಿ ಕೃದಂತಗಳಿಗೆ ಗದಬಜಾದ್ಯುತ್ತರಪದವು ಪರದಲ್ಲಿರಲು ಮ ಕಾರಾದೇಶವು ಬರುವುದು. ಈ ಮ ಕಾರಾದೇಶವು ಅಗಾಗಮ ವಿಷಯದಲ್ಲಿ ಬರುವುದಿಲ್ಲ. ಆದುದರಿಂದ ಮ ಕಾರಾದೇಶವು ವಿಕಲ್ಪವೆಂದು ಫಲಿತವಾಗುವುದು. ಏವಂಚ, ಮಕಾರಾದೇಶ, ಅಗಾಗಮ ಇವುಗಳಿಗೆ ವಿಷಯ ವ್ಯವಸ್ಥೆಯನ್ನೂ ಮಾಡಿದಂತಾಗುವುದು. ಆದುದರಿಂದ — 'ಎತ್ತುಂಗೋಲ್, ಎತ್ತುವ ಕೋಲ್' ಮೊದಲಾದ ಉಭಯ ವಿಧದ ಯೋಗಗಳೂ ಸಿದ್ಧಿಸುವುವು.

ಇಲ್ಲಿ 'ಅನಕಿ' ಎಂದು ಹೇಳಿರುವುದರಿಂದ — 'ಎತ್ತುವ ಗಟಿ, ಓಡುವ ದಾರಿ, ಒತ್ತುವ ಬಾವಿ, ಮಾಡುವ ಜಗಳಂ' ಮೊದಲಾದ ಅಗಾಗಮ ಸಹಿತವಾದ ಪ್ರಯೋಗಗಳಲ್ಲಿಯೂ 'ಕೃತಃ' ಎಂದು ಹೇಳಿರುವುದರಿಂದ — 'ಬೆಳ್ದಾವರೆ, ಕರ್ಗ್ಗಂಟೆ' ಮೊದಲಾದ ಗುಣವಾಚಕ ಶಬ್ದಗಳಲ್ಲಿಯೂ 'ಗದಬಜ' ಎಂದು ಹೇಳಿರುವುದರಿಂದ — 'ತೂಗುವ ಡಾಣೆ, ಕೇಗುವ ಸೋಗೆ' ಮೊದಲಾದ ವ್ಯಂಜನಾದ್ಯುತ್ತರಪದಪರಕ ಪ್ರಯೋಗಗಳಲ್ಲಿಯೂ 'ತತ್ರ' ಎಂದು ಹೇಳಿರುವುದರಿಂದ 'ಪಾಡುವುದೇಲಿಕ್ಕಿ' ಮೊದಲಾದ ದು ಲೋಪವಿಲ್ಲದೆಡೆಗಳಲ್ಲಿಯೂ ಈ ಮ ಕಾರಾದೇಶವು ಪ್ರವರ್ತಿಸುವುದಿಲ್ಲವೆಂದು ತಿಳಿಯಬೇಕು.

ಇಲ್ಲಿ 'ಅನಕಿ' ಎಂಬ ವಚನಸಾಮರ್ಥ್ಯದಿಂದಲೂ 'ಅಗ್ಬಹುಳಂ' ಎಂಬ ಬಹುಳ ವಚನದಿಂದಲೂ ಮ ಕಾರಾದೇಶ ವಿಷಯದಲ್ಲಿ ಅಗಾಗಮವು ವಿಕಲ್ಪವೆಂದು ಸಿದ್ಧಿಸುವುದು. ಅದೂ ವ್ಯವಸ್ಥಿತವಾದುದರಿಂದ 'ಪಡು' ಧಾತು ಪ್ರಕೃತಿಕ ಕೃದಂತಕ್ಕೆ ಅಗಾಗಮವು ನಿತ್ಯವಾಗಿಯೇ ಬರುವುದು. ಆದುದರಿಂದ 'ಮಾಡಲ್ಪಡುವ ಜಗಳಂ, ತೂಗಲ್ಪಡುವ ದೀವಿಗೆ' ಮೊದಲಾದ ಪ್ರಯೋಗಗಳಲ್ಲಿ ಮ ಕಾರಾದೇಶವಿಲ್ಲವೆಂದು ತಿಳಿಯಬೇಕು.

ಇದೇ ವಿಷಯದಲ್ಲಿ **ದರ್ಪಣಕಾರನು** —

ಗದಬಜಕಾರಮವಿದಿರಿರೆ
ಮೊದಲಪದಂ ತಾಂ ಕೃದಂತಮಾಗಿರೆ ದೊರೆಕೊ
ಳ್ವುದನುಸ್ವಾರಮುದಂತದೊ
ಳಿದಂತದೊಳ್ ಕರ್ಮಧಾರಯಂ ಬರೆ ಬಹುಳಂ ( ಸೂತ್ರ ೧೭೦ )

ಎಂಬ ಸೂತ್ರವನ್ನು ಹೇಳಿರುವನು.

**ಅವತಾರಿಕೆ ೩೪೫**

ಸಾಮಾನ್ಯವಾಗಿ ಪೂರ್ವಸಹಿತ 'ದು' ಲೋಪ ವಿಷಯದಲ್ಲಿ ಅಗಾಗಮ ವಿಧಿಯನ್ನು ಹೇಳುತ್ತಾನೆ.

**ಸೂತ್ರಂ || ಅಗ್ಬಹುಲಂ || ೩೪೫ ||**

**ಅರ್ಥ || ಸಮಾನಾಧಿಕರಣವಾದ ವ್ಯಂಜನಾದ್ಯುತ್ತರಪದವು ಪರದಲ್ಲಿರುವಾಗ 'ದು' ಲೋಪ ವಿಷಯದಲ್ಲಿ ಪೂರ್ವಪದಾಂತ್ಯವಾಗಿ ಅಗಾಗಮವು ಬಹುಳವಾಗಿ ಬರುವುದು.**

**ಉದಾಹರಣೆ ||** ' ಬಟ್ಟಿತು ಮೊಲೆ—ಬಟ್ಟಮೊಲೆ, ತೋರಿತು ಮುಡಿ — ತೋರಮುಡಿ ' ಮೊದಲಾದುವು ಇದಕ್ಕೆ ಲಕ್ಷ್ಯಗಳು. ಇಲ್ಲಿ ಬಹುಳಗ್ರಹಣವನ್ನು ಮಾಡಿರುವುದರಿಂದ — ' ಬಲ್ಮೊಲೆ, ಪೆಲ್ಲಡಿ, ಕೂರ್ಗ್ಗತ್ತಿ ' ಮೊದಲಾದ ಕೆಲವೆಡೆಗಳಲ್ಲಿ ಬರುವುದಿಲ್ಲ. ಕೆಲವೆಡೆಗಳಲ್ಲಿ ವಿಕಲ್ಪವಾಗಿ ಬರುವುದರಿಂದ — ' ಚುಚ್ಚುವ ಕೊಳ್ಳಿ — ಚುಚ್ಚುಂಗೊಳ್ಳಿ, ತೂಗುವ ತೊಡರ್ — ತೂಗುಂಜೊಡರ್ ' ಮೊದಲಾದ ರೂಪದ್ವಯಗಳು ಸಿದ್ಧಿಸುವುವು. ಕೆಲವೆಡೆಗಳಲ್ಲಿ ಬಹುಳಗ್ರಹಣಕ್ಕೆ ' ಅನ್ಯದೇವ ' ಎಂಬರ್ಥವನ್ನೂ ಸ್ವೀಕರಿಸಿರುವುದರಿಂದ ' ಸಿಡಿಯುಂದಲೆ, ಇಱಿಯುಂಬೊಟ್ಟು ' ಮೊದಲಾದ ಪ್ರಯೋಗಗಳಲ್ಲಿ ಉಮಾದಿಗಳೂ ಬಂದಿರುವುವು.

**ವಿಚಾರ ೩೪೬**

ಈ ಸೂತ್ರದಲ್ಲಿ — ' ಅಕ್, ಬಹುಲಂ ' ಎಂದು ಎರಡು ಪದಗಳು ಇರುವುವು. ' ಅಕ್ ' ಎಂಬುದು ಕಿತ್ತಾದುದರಿಂದ ಆಗಮವನ್ನು ಬೋಧಿಸುವುದು. ' ಬಹುಳಂ ' ಎಂಬುದು ಪೂರ್ವೋಕ್ತ ಕ್ವಚಿತ್ಪ್ರವೃತ್ತ್ಯಾದಿ ಚಾತುರ್ವಿಧ್ಯಬೋಧಕವಾದುದು. ಪೂರ್ವದಿಂದ ' ತತ್ರ, ಏಕಾರ್ಥೇ, ವ್ಯಂಜನಾದ್ಯುತ್ತರಪದೇ ' ಎಂಬಿವು ಅನುವರ್ತಿಸಲ್ಪಡುವುವು. ಇಲ್ಲಿ ಉದ್ದೇಶ್ಯ ವಾಚಕಪದವಿಲ್ಲದಿದ್ದರೂ ' ಉತ್ತರಪದೇ ಪರೇ ' ಎಂದು ನಿಮಿತ್ತವನ್ನು ಹೇಳಿರುವುದರಿಂದ ' ಪೂರ್ವಪದಕ್ಕೆ ' ಎಂದರ್ಥವಾಗುವುದು. ತಥಾಚ — ಪೂರ್ವಸ್ವರಸಹಿತ ' ದು ' ಲೋಪ ವಿಷಯದಲ್ಲಿ ಸಮಾನಾಧಿಕರಣ ವ್ಯಂಜನಾದ್ಯುತ್ತರಪದವು ಪರದಲ್ಲಿರುವಾಗ ಪೂರ್ವಪದಕ್ಕೆ ಬಹುಳವಾಗಿ ಅಗಾಗಮವು ಬರುವುದೆಂದು ಸೂತ್ರಾರ್ಥವಾಗುವುದು ಆದುದರಿಂದ — ' ಬಟ್ಟಮೊಲೆ ' ಮೊದಲಾದುವು ಸಿದ್ಧಿಸುವುವು.

ಯದ್ಯಪಿ — ಇಲ್ಲಿ ' ಸುಪ್‌ಸುಪಾಸಮಾಸೋ ಬಹುಲಂ ' ಎಂಬುದರಿಂದ ' ಬಹುಲಂ ' ಎಂಬುದಕ್ಕೆ ಅಧಿಕಾರವಿರುವುದರಿಂದ ಅದರಿಂದಲೇ ಕ್ವಚಿತ್ಪ್ರವೃತ್ತ್ಯಾದಿ ಚಾತುರ್ವಿಧ್ಯವು ಸಿದ್ಧಿಸುವುದು. ತಥಾಚ — ಪುನರ್ಬಹುಲಗ್ರಹಣವನ್ನು ಹೆಚ್ಚಾಗಿ ಹೇಳಿರುವುದರಿಂದ ಈ ಅಗಾಗಮವು ಮಕಾರಾದೇಶದಂತೆ ಕೃನ್ಮಾತ್ರವಿಷಯಕವಲ್ಲ. ಕ್ವಚಿದ್ಗುಣವಾಚಕಕ್ಕೂ ಬರುವುದು ಎಂದು ಬೋಧಿಸಲು ಮಾಡಲ್ಪಟ್ಟಿದೆ— ಎಂದು ತಿಳಿಯಬೇಕು. ಆದುದರಿಂದ 'ಬಟ್ಟಮೊಲೆ, ತೋರಮುಡಿ ' ಮೊದಲಾದ ಪ್ರಯೋಗಗಳೂ ಸಿದ್ಧಿಸುವುವು. ಹಾಗೆಯೇ — ಈ ಅಗಾಗಮ ವ್ಯಂಜನಾದ್ಯುತ್ತರಪದದಲ್ಲಿಯೇ ಬರುವುದೆಂಬ ನಿಯಮವಿಲ್ಲ. ಕೆಲವೆಡೆ ಸ್ವರಾದ್ಯುತ್ತರಪದದಲ್ಲಿಯೂ ಬರುವುದು ಎಂದು — ಬೋಧಿಸುವುದು. ಆದುದರಿಂದ — ' ಪಾಡುವಂಗನೆಯರ್, ಆಡುವಚ್ಚರಸೆಯರ್' ಮೊದಲಾದುವು ಸಿದ್ಧಿಸುವುವು. ಹೀಗೆಯೇ ಸಮಾಸದಲ್ಲಿಯೇ ಬರುವುದು— ಎಂಬ ನಿಯಮವೂ ಇಲ್ಲ. ಆದುದರಿಂದ —

**ಲಂಕಾಧೀಶನ ಜಯವಧು**
**ಪಂಕಜನಾಭಂಗೆ ಸೋಲ್ತು ರಣಮುಖದೆಡೆಯೊಳ್**
**ಮುಂ ಕೊಟ್ಟಿಟ್ಟದ ರನ್ನದ**
**ಕಂಕಣಮೆಂಬಂತೆ ಕಯ್ಗೆ ಬಂದುದು ಚಕ್ರಂ**

ಮೆಟ್ಟಿದ ಕಾಲೊಳ್ ಪಾವುಗೆ
ಕಟ್ಟಿದ ಕೊರಲಲ್ಲಿ ಮುತ್ತಿನೆಕ್ಕಾವಳಿ ತ
ನ್ನಿಟ್ಟ ನೊಸಲಲ್ಲಿ ಕತ್ತುರಿ
ಬೊಟ್ಟು ಕರಂ ಸೊಬಗುವಡೆದುದಾ ನೃಪಸುತನಾ

ಮಾಡುವ ಸಿನ್ನೊಳಿಗಮುಂ
ಪಾಡುವ ಸಿನ್ನೊಳ್ಗುಣಂಗಳಂ ಸಂತಸದಿಂ
ದಾಡುವ ಸಿನ್ನೊಡನಮರರ
ಗಾಡಿಯೆ ಪೇೞ್ವುದು ಸಿನ್ನ ಪೆಂಪಂ ಜಿನಪಾ

ಶ್ರೀರಾಮಾನಟಿ ಕೌಸ್ತುಭದ್ಯುತಿಕಿರತ್ಪುಷ್ಪಾಂಜಲಿಕ್ಷೇಪದ
ಕ್ಷೋಣೀರಂಗಸ್ಥಿತೆಯಾದ ಪಾದನಖರೋಚಿರ್ಗ್ರಗೆ ಪೃಥ್ವೀಶಕೋ
ಟೀರನ್ಯಾಸ್ತಿಗೆ ಸಂದ ಚಕ್ರರವಿ ದೈತ್ಯಧ್ವಾಂತಮುಂ ಗೆಲ್ದ ಭೂ
ಭಾರಚ್ಛೇದವಿನೋದಿ ಕೃಷ್ಣನೆಮಗೀಗಾನಂದಸಂದೋಹಮುಂ

ಮೊದಲಾದ ವ್ಯಸ್ತಪ್ರಯೋಗಗಳೂ ಸಿದ್ಧಿಸುವುವು. ಆದುದರಿಂದ ಇಲ್ಲಿ 'ವ್ಯಂಜನಾದ್ಯುತ್ತರಪದೇ' ಮೊದಲಾದುವುಗಳ ಅನುವೃತ್ತಿ ಉತ್ತರಾರ್ಥವೆಂದು ತಿಳಿಯುವುದು. ಇದರಿಂದಲೆ ಅಗಾಗಮವು ಪರವಲ್ಲಿರುವಾಗ ಪೂರ್ವಸ್ವರಸಹಿತ ದು ವಿಗೆ ಲೋಪವು ಬರುವುದು. ಇದರಿಂದಲೇ ಅಗಂತವಾದ ಶಬ್ದಸ್ವರೂಪವು ಕಥಂಚಿದವ್ಯಯವಾಗುವುದು— ಎಂದು ಸಿದ್ಧವಾಗುವುದು.

**ಅವತಾರಿಕೆ ೩೪೬**

ಪೂರ್ವಸೂತ್ರದಲ್ಲಿ ಉದ್ದೇಶ್ಯವಿಶೇಷವನ್ನು ನಿರ್ದೇಶವಮಾಡದಿದರೂ ಬಹುಳಗ್ರಹಣದಿಂದ ಕೃದಂತ ಗುಣವಾಚಕಗಳನ್ನುದ್ದೇಶಿಸಿ ಅಗಾಗಮವು ಬರುವುದೆಂದು ಹೇಳಲ್ಪಟ್ಟಿತು. ಈಗ ಶಬ್ದ ವಿಶೇಷವನ್ನುದ್ದೇಶಿಸಿ ಆಗಮವಿಶೇಷವನ್ನು ವಿಧಿಸುತ್ತಾನೆ.

**ಸೂತ್ರಂ || ಕಮ್ ನಣಃ || ೩೪೬ ||**

**ಅರ್ಥ ||** ಸಮಾನಾಧಿಕರಣವ್ಯಂಜನಾದ್ಯುತ್ತರಪದವು ಪರದಲ್ಲಿರುವಾಗ ನ ಕಾರಾಂತ ಣ ಕಾರಾಂತಗಳಿಗೆ ಬಹುಳವಾಗಿ ಕಮಾಗಮವು ಬರುವುದು.

**ಉದಾಹರಣೆ ||** 'ಪಿರಾನಂ ಬುಟು — ಪಿರಾಂಬುಟು, ಬಾನಂ ಗುಟು — ಬಾಂಗುಟು, ಕಣ್ಣಂ ದೋಟಲಿ — ಕಣ್ದೋಟಲಿ, ಗೋಣಂ ನಾಟು — ಗೋಣ್ನಾಟು ||' ಮೊದಲಾದುವು ಇವಕ್ಕೆ ಲಕ್ಷ್ಯಗಳು.

**ವಿಚಾರ ೩೪೬**

ಈ ಸೂತ್ರದಲ್ಲಿ — 'ಕಮ್, ನಣಃ' ಎಂದು ಎರಡು ಪದಗಳಿರುವುವು. ಪೂರ್ವದಿಂದ 'ಏಕಾರ್ಥೇ, ವ್ಯಂಜನೇ, ಉತ್ತರಪದೇ' ಎಂಬಿವು ಅನುವರ್ತಿಸಲ್ಪಡುವುವು. 'ಕಮ್' ಎಂಬುದು ಕಿತ್ತಾದುದರಿಂದ ಆಗಮಬೋಧಕವಾಗುವುದು. ಇದೇ ಇಲ್ಲಿ ವಿಧೇಯವು. 'ನಣಃ' ಎಂಬುದು ನ ಕಾರ ಣ ಕಾರ ರೂಪವ್ಯಂಜನಮಾತ್ರಬೋಧಕಷಷ್ಠ್ಯಂತಪದವು. ಇದು ಉತ್ತರ ಪದದಿಂದಾಕ್ಷಿಪ್ತವಾದ ಪೂರ್ವಪದಕ್ಕೆ ವಿಶೇಷಣವು. ಆದುದರಿಂದ ತದಂತಲಾಭವು ಬರುವುದು. ತಥಾಚ — ನ ಕಾರ ಣ ಕಾರಾಂತ ಪೂರ್ವಪದಕ್ಕೆ ಸಮಾನಾಧಿಕರಣವಾದ ವ್ಯಂಜನಾದ್ಯುತ್ತರ

ಪದವು ಪರದಲ್ಲಿರುವಾಗ ಕಮಾಗಮವು ಬಹುಳವಾಗಿ ಬರುವುದೆಂದರೆ 'ಅಮ್' ಎಂಬುದು ಪೂರ್ವ ಪದದ ಕೊನೆಯ ನ ಕಾರ ಣ ಕಾರಗಳ ಮುಂದೆ ಸೇರುವುದು — ಎಂದು ಸೂತ್ರಾರ್ಥವಾಗಲು 'ಮಾನಂಬುಲು, ಮಾಂಬುಲು' ಮೊದಲಾದ ರೂಪದ್ವಯಗಳು ಸಿದ್ಧಿಸುವುವೆಂದು ತಿಳಿಯಬೇಕು. ಇಲ್ಲಿ ಕೊಟ್ಟಿರುವ 'ಪುಲು' ಶಬ್ದವು ಕ್ರಿಮಿವಾಚಕವು. ಆದುದರಿಂದ 'ಮಾನಂಬುಲು' ಎಂದರೆ 'ಮತ್ಸ್ಯಕ್ರಿಮಿ' ಎಂದರ್ಥವಾಗುವುದು. 'ಬಾನಂಗುಲು' ಎಂಬಲ್ಲಿ 'ಗುಲು' ಎಂಬುದು ಪ್ರತ್ಯಯ ವೆಂದು ಭ್ರಮಿಸಲಾಗದು. ಮತ್ತೇನೆಂದರೆ ಗರ್ತವಾಚಿಯಾದ 'ಕುಲು' ಶಬ್ದವೆಂದು ತಿಳಿಯಬೇಕು. ಸಮಾಸದಲ್ಲಿ ತೃತೀಯ ವರ್ಣಾದೇಶವು ಬಂದಿರುವುದು. ಇದಕ್ಕೆ ಗಗನ ಗರ್ತವೆಂದರ್ಥವು. 'ಕಣ್ಣಂದೊಳಲಿ ಎಂಬಲ್ಲಿಯ 'ತೊಳಲಿ' ಎಂಬುದು ಗೋಳಕವಾಚಕವು. 'ಕಮ್ಮುಮಿ' ಎಂಬುದ ರಿಂದ ಣ ಕಾರಕ್ಕೆ ದ್ವಿತ್ವವು ಬಂದಿರುವುದು 'ಚಕ್ಷುರ್ಗೋಳಕ' ವೆಂಧರ್ಥವು.

ಈ ಸೂತ್ರದಲ್ಲಿ 'ಏಕಾರ್ಥೇ' ಎಂಬುದು ಅನುವರ್ತಿಸಿರುವುದರಿಂದ ಇಲ್ಲಿ ಉದಾಹರಿಸಿರುವ 'ಮಾನಂಬುಲು' ಮೊದಲಾದುವು ಷಷ್ಠೀಸಮಾಸದಂತೆ ತೋರುತ್ತಿದ್ದರೂ ಭಾಷೆಯಲ್ಲಿ ಸಮಾನಾಧಿಕರಣಸಮಾಸವೆಂದೇ ತಿಳಿಯಬೇಕು.

ಈ ವಿಷಯದಲ್ಲಿ **ದರ್ಪಣಕಾರ**ನು ಕೃತ್ತಿಲ್ಲದುದಂತಕ್ಕೂ ಅದಂತಕ್ಕೂ ಬಿಂದು ಬರುವುದು; ನ ಕಾರ ಣ ಕಾರಗಳಿಗೆ ಸೊನ್ನೆಸಹಿತವಾದ ಅ ಕಾರವೂ ಳ ಕಾರಕ್ಕೆ ಸೊನ್ನೆ ಸಹಿತ ಉ ಕಾರವೂ ಬರುವುವೆಂದು —

> ಕೃತ್ತಿರದೆಯುಮುತ್ತಾತ್ತಾ
> ಯತ್ತಮನುಸ್ವಾರ ಮಸ್ವರದ ನಣಕತ್ವಂ
> ಮತ್ತೆಳಕಾರಕ್ಕುತ್ವಂ
> **ಪತ್ತೊಡಂ** ಬಿಂದು ಬಂದು **ನೆಲೆಗೊಂಡಿಕ್ಕುಂ** (ಸೂತ್ರ ೨೨)

ಎಂಬ ಸೂತ್ರದಿಂದ ಸೂಚಿಸಿರುವನು. ಇದರಿಂದ **ಶಾಸನಕಾರ**ನು ಮುಂದೆ ಹೇಳುವ — '**ಳಃ ಕುಂ ॥ ೩೪೭ ॥**' ಎಂಬ ಸೂತ್ರಾರ್ಥವೂ ಸಂಗ್ರಹೀತವಾಗುವುದೆಂದು ತಿಳಿಯಬೇಕು.

**ಅವತಾರಿಕೆ ೩೪೭**

ಹೀಗೆಯೇ ಳ ಕಾರಕ್ಕೆ ಆಗಮಾಂತರವನ್ನು ವಿಧಿಸುತ್ತಾನೆ.

**ಸೂತ್ರಂ ॥ ಳಃ ಕುಮ್ ॥ ೩೪೭ ॥**

**ಅರ್ಥ** ॥ ಸಮಾನಾಧಿಕರಣವಾದ ವ್ಯಂಜನಾದ್ಯುತ್ತರಪದವು ಪರದಲ್ಲಿರುವಾಗ **ಳ ಕಾರಾಂತಕ್ಕೆ** ಬಹುಳವಾಗಿ **ಕುಮಾಗಮವು** ಬರುವುದು.

**ಉದಾಹರಣೆ** ॥ 'ಬೆಳ್ಳುಂ ಬಟ್ಟೆ, ಬೆಳ್ಬಟ್ಟೆ; ತೆಳ್ಳುಂ ಬಸುಱ್,[೧] ತೆಳ್ವಸುಱ್' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೪೭**

ಈ ಸೂತ್ರದಲ್ಲಿ — 'ಳಃ, ಕುಂ' ಎಂದು ಎರಡು ಪದಗಳಿರುವುವು. ಪೂರ್ವದಂತೆ 'ಏಕಾರ್ಥೇ, ವ್ಯಂಜನೇ, ಉತ್ತರಪದೇ, ಬಹುಲಂ' ಎಂಬಿವು ಅನುವರ್ತಿಸಲ್ಪಡುವುವು. 'ಳಃ'

---

ಪಾಠಾಂತರ ೧: ತೆಳ್ಳು ಬಸಿಱ್, ತೆಳ್ವಸಿಱ್.

ಎಂಬುದು ಷಷ್ಠ್ಯಂತವು. ಪೂರ್ವಪದಕ್ಕೆ ವಿಶೇಷಣ ಮಾಡಲು ತದಂತಪರವಾಗುವುದು. 'ಕುಮ್' ಎಂಬುದು ಕಿತ್ತ್ವಾದುದರಿಂದ ಆಗಮಬೋಧಕವು. ಇದೇ ಇಲ್ಲಿ ವಿಧೇಯವು. ಆದುದರಿಂದ ಸಮಾನಾಧಿಕರಣ ವ್ಯಂಜನಾದ್ಯುತ್ತರಪದವು ಪರದಲ್ಲಿರಲು ಳ ಕಾರಾಂತ ಪೂರ್ವಪದದ ಕೊನೆಗೆ 'ಕುಮ್' ಎಂಬುದು ಆಗಮವಾಗುವುದೆಂದು ಸೂತ್ರಾರ್ಥವಾಗಲು 'ಬೆಳ್ಕುಂ ಬಟ್ಟೆ' ಮೊದಲಾದುವು ಸಿದ್ಧಿಸುವುವು.

**ಅವತಾರಿಕೆ ೩೪೮**

ಹೀಗೆಯೇ ಕೆಲವು ಅಂಶಿ ಸಮಾಸದಲ್ಲಿ ಆದೇಶ ವಿಶೇಷವನ್ನು ವಿಧಿಸುತ್ತಾನೆ.

**ಸೂತ್ರಂ || ದೋರ್ಮೋಽಂಶಿನ್ಯಡಿಮೇಗೋಃ || ೩೪೮ ||**

**ಅರ್ಥ || ಅಂಶಿವಾಚಿಯಾದ ವ್ಯಂಜನಾದ್ಯುತ್ತರಪದವು ಪರದಲ್ಲಿರುವಾಗ ಪೂರ್ವಪದ ಭೂತಗಳಾದ 'ಅಡಿ, ಮೇಗು' ಎಂಬ ಅಂಶವಾಚಕ ಶಬ್ದಗಳ ದು ಸಂಜ್ಞಕವಾದ ಭಾಗಕ್ಕೆ ಮ ಕಾರಾದೇಶವು ಬರುವುದು.**

**ಉದಾಹರಣೆ ||** 'ಕಯ್ಯ ಅಡಿ—ಅಂಗಯ್; ಕಾಲ ಅಡಿ, ಅಂಗಾಲ್; ಕಯ್ಯ ಮೇಗು, ಮೇಂಗಯ್; ಕಾಲ ಮೇಗು—ಮೇಂಗಾಲ್ ||' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೪೮**

ಈ ಸೂತ್ರದಲ್ಲ — 'ದೋಃ, ಮಃ, ಅಂಶಿನಿ, ಅಡಿಮೇಗೋಃ' ಎಂದು ನಾಲ್ಕು ಪದಗಳಿರುವುವು. 'ದೋಃ' ಎಂಬುದು ಸ್ಥಾನಷಷ್ಠ್ಯಂತಪದವು. ಇದಕ್ಕೆ 'ಅಡಿಮೇಗೋಃ' ಎಂಬ ಅಂಶವಾಚಕ ಷಷ್ಠ್ಯಂತಪದವು ವ್ಯಧಿಕರಣ ವಿಶೇಷಣವು. 'ಮಃ' ಎಂಬುದು ಮ ಕಾರಮಾತ್ರ ಬೋಧಕವಿಧೇಯವಾಚಕಪದವು. 'ಅಂಶಿನಿ' ಎಂಬುದು ಅನುವೃತ್ತವಾದ ವ್ಯಂಜನಾದ್ಯುತ್ತರ ಪದಕ್ಕೆ ವಿಶೇಷಣವು. ತಥಾಚ — ಅಂಶಿವಾಚಿವ್ಯಂಜನಾದ್ಯುತ್ತರಪದವು ಪರದಲ್ಲಿರಲು ಅಂಶವಾಚಿಯಾದ ಪೂರ್ವಪದಭೂತ 'ಅಡಿ ಮೇಗು' ಶಬ್ದಗಳ 'ದು' ಭಾಗಕ್ಕೆ ಮ ಕಾರಾದೇಶವು ಬರುವುದು—ಎಂದು ಸೂತ್ರಾರ್ಥವಾಗಲು 'ಅಂಗಯ್' ಮೊದಲಾದುವು ಸಿದ್ಧಿಸುವುವು. ಇಲ್ಲ ಪೂರ್ವೋತ್ತರಪದಾರ್ಥಗಳಿಗೆ ಅಂಶಾಂಶಿಭಾವವಿರಬೇಕೆಂಬ ಅರ್ಥವು ತೋರುವುದರಿಂದ 'ಏಕಾರ್ಥೇ' ಎಂಬುದು ಅನುವರ್ತಿಸಲ್ಪಡುವುದಿಲ್ಲ.

ಇಲ್ಲಿ 'ದೋಃ' ಎಂಬುದು ಅಂತ್ಯಾದೇಶನಿವರ್ತಕವು. 'ಅಂಶಿನಿ' ಎಂಬುದು 'ಅಡಿ ಮೇಗುಗಳ್' ಮೊದಲಾದ ಪ್ರಯೋಗನಿವೃತ್ತ್ಯರ್ಥಕವು. 'ಅಡಿಮೇಗೋಃ' ಎಂಬುದು 'ಕಯ್ಯ ಒಳಗು, ಒಳಕಯ್; ಕಾಲ ಪೊಱಗು, ಪೊಱಕಾಲ್' ಮೊದಲಾದ ಪ್ರಯೋಗನಿವರ್ತಕವು. 'ವ್ಯಂಜನಾದೌ' ಎಂಬುದು 'ಇಟ್ಟಿಯ ಅಡಿ—ಅಡಿಯಿಟ್ಟಿ' ಮೊದಲಾದ ಸ್ವರಾದ್ಯುತ್ತರಪದ ವ್ಯಾವರ್ತಕವು.

ಇಲ್ಲಿ ಬಹುಳಾಧಿಕಾರವಿರುವುದರಿಂದ 'ಮಾವು' ಶಬ್ದಕ್ಕೆ ಅಂಶವಾಚ್ಯುತ್ತರಪದವು ಪರದಲ್ಲಿರಲು 'ದು' ವಿಗೆ ಮ್-ಆದೇಶವು ಬಂದು — 'ಮಾಂಗದಿರ್, ಮಾಂಗೊನರ್, ಮಾಂಜೆಳೆ, ಮಾಂಜೊಂಪಂ, ಮಾಂಡೊಣೆ, ಮಾಂದಳಿರ್, ಮಾಂಬೂಗಳ್, ಮಾಂ[illegible]ಣರ್' ಮೊದಲಾದ ಪ್ರಯೋಗಗಳು ಸಿದ್ಧಿಸುವುವು. 'ಮಾಮರಂ, ಮಾಮಿಡಿ' ಮೊದಲಾದ ಪ್ರಯೋಗ

ಗಳಾದರೋ 'ಮಾವು' ಶಬ್ದಕ್ಕೆ ಅರಸ್ವಾದಿಯಲ್ಲಿ ಪಾಠಮಾಡಿ ದು-ಲೋಪಮಾತ್ರವನ್ನು ವಿಧಿಸಲು ಸಿದ್ಧಿಸುವುವು.

ಇಲ್ಲಿ **ದರ್ಪಣಕಾರನು**—

> ಅಧಿಮೇಗುಗಳಂತ್ಯಾಕ್ಷರ
> ದೆಡೆಗಕ್ಕುಂ ಬಿಂದು ಮುಂದು ಪಿಂದುಗಳಂತ್ಯ
> ಕ್ಕೊದರಿಸುಗುಂ ಲೋಪಂ ನೋ
> ಟಕ್ಕೊಡವ್ಯಯಿಾ ಭಾವದೊಳ್ ಕೆಳಗು ಕಿಱಿಸಿಕ್ಕುಂ (ಸೂತ್ರ ೧೬೬)

ಎಂಬ ಸೂತ್ರವನ್ನು ಹೇಳಿ **ಶಾಸನಕಾರನು** ಹೇಳುವ 'ಲುಪ್ಪಿಂದು ಮುಂದೋಃ' ಇತ್ಯಾದಿ ಸೂತ್ರಾರ್ಥವನ್ನೂ ಸಂಗ್ರಹಿಸಿರುವನು.

**ಅವತಾರಿಕೆ ೩೪೯**

ಹಿಂದೆ ಕೆಲವು ಪೂರ್ವಪದಕ್ಕೆ ಭಾವರೂಪಾದೇಶವು ವಿಧಿಸಲ್ಪಟ್ಟಿತು. ಈಗ ಕೆಲವಕ್ಕೆ ಅಭಾವರೂಪಾದೇಶವು ವಿಧಿಸಲ್ಪಡುವುದು.

**ಸೂತ್ರಂ || ಲುಪ್ಪಿಂದುಮುಂದೋಃ || ೩೪೯ ||**

**ಅರ್ಥ** || 'ಪಿಂದು, ಮುಂದು'ಗಳೆಂಬ **ಅಂಶವಾಚಕ ಶಬ್ದಗಳ ದು-ವಿಗೆ ವ್ಯಂಜನಾದ್ಯಂಶಿವಾಚಿಯಾದುತ್ತರಪದವು ಪರದಲ್ಲಿರಲು ಲೋಪವು ಬರುವುದು.**

**ಉದಾಹರಣೆ** || 'ಮಾಗಿಯ ಮುಂದು— ಮುಮ್ಮಾಗಿ; ಕಾಲ ಮುಂದು— ಮುಂಗಾಲ್; ಕಾಲ ಪಿಂದು — ಪಿಂಗಾಲ್; ತಲೆಯ ಪಿಂದು — ಪಿಂದಲೆ ||' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೪೯**

ಈ ಸೂತ್ರದಲ್ಲಿ — 'ಲುಪ್, ಪಿಂದುಮುಂದೋಃ' ಎಂದು ಎರಡು ಪದಗಳಿರುವುವು. 'ಲುಪ್' ಎಂಬುದು ಅದರ್ಶನವಾಚಕವು. ಇದೇ ಇಲ್ಲಿ ವಿಧೇಯವು. 'ಪಿಂದುಮುಂದೋಃ' ಎಂಬುದು ಅಂಶವಾಚಕವಾದ ಷಷ್ಠ್ಯಂತಪದವು. ಇದು ಅನುವರ್ತಮಾನವಾದ 'ದೋಃ' ಎಂಬುದಕ್ಕೆ ವ್ಯಧಿಕರಣವಿಶೇಷಣವು. 'ವ್ಯಂಜನಾದ್ಯುತ್ತರಪದೇ, ಅಂಶಿನಿ' ಎಂಬಿವು ಅನುವರ್ತಿಸಲ್ಪಡುವುವು. ತಥಾಚ — ಅಂಶಿವಾಚಿ ವ್ಯಂಜನಾದ್ಯುತ್ತರಪದವು ಪರದಲ್ಲಿರಲು 'ಪಿಂದು, ಮುಂದು' ಶಬ್ದಗಳ 'ದು' ಎಂಬುದಕ್ಕೆ ಲೋಪವು ಬರುವುದೆಂದು ಸೂತ್ರಾರ್ಥವಾಗುವುದರಿಂದ 'ಮುಮ್ಮಾಗಿ' ಮೊದಲಾದುವು ಸಿದ್ಧಿಸುವುವು.

**ಅವತಾರಿಕೆ ೩೫೦**

ಹೀಗೆ ಉತ್ತರಪದನಿಮಿತ್ತಕವಾದ ಪೂರ್ವಪದೋದ್ದೇಶ್ಯಕ ಕಾರ್ಯವಿಶೇಷಗಳನ್ನು ವಿಧಿಸಿ ಈಗ ಕೆಲವು ಸಮಾಸವೃತ್ತಿಯಲ್ಲಿ ಬಹುಳವಾಗಿಯೂ ವೃತ್ತ್ಯಂತರದಲ್ಲಿ ಪ್ರತ್ಯಯವಿಶೇಷದಲ್ಲಿ ನಿತ್ಯವಾಗಿಯೂ ಆದೇಶಾದಿಕಾರ್ಯವಿಶೇಷವನ್ನು ವಿಧಿಸಲು ಮೊದಲು ಅಧಿಕಾರಸೂತ್ರವನ್ನು ಹೇಳುತ್ತಾನೆ.

**ಸೂತ್ರಂ || ನಿತ್ಯಂ ಮೆವರಿ || ೩೫೦ ||**

**ಅರ್ಥ ||** ಇಲ್ಲಿಂದ ಮುಂದೆ ' ಪಯಿನ್ ಪತ್ರೋಃ || ೩೬೩ || ' ಎಂಬ ಸೂತ್ರದ ವರೆಗೆ ಪ್ರತಿಸೂತ್ರದಲ್ಲಿಯೂ ' ನಿತ್ಯಂ ಮೆವರಿ ' ಎಂಬುದು ಸಂಬಂಧಿಸಲ್ಪಡುವುದು. ಆದುದರಿಂದ ಇದು ಅಧಿಕಾರಸೂತ್ರವೆನಿಸಿಕೊಳ್ಳುವುದು. ಇದಕ್ಕೆ ಉದಾಹರಣೆಗಳು ಆಯಾ ಸೂತ್ರಗಳಲ್ಲಿಯೇ ಕೊಡಲ್ಪಡುವುವು.

**ವಿಚಾರ ೩೫೦**

ಆದರೆ ಇಲ್ಲಿ ಹೇಳಿರುವ ' ನಿತ್ಯಂ ' ಎಂಬುದು ವಕ್ಷ್ಯಮಾಣವಿಧೇಯವಿಶೇಷಣವು. ಆದುದರಿಂದ ಆವುದು ವಿಧಿಸಲ್ಪಡುವುದೋ ಅದು ನಿತ್ಯವಾಗಿ ಬರುವುದು — ಎಂದು ಅರ್ಥವಾಗುವುದು. ಆ ವಿಧೇಯವು ಭೂತಕಾಲಿಕವೆ? ವರ್ತಮಾನಕಾಲಿಕವೆ? ಅಥವಾ ಭವಿಷತ್ಕಾಲಿಕವೆ? ಈ ಮೂರರಲ್ಲಾವುದಾದರೂ ಒಂದೆಂದು ಹೇಳಬೇಕು. ಅವರಲ್ಲ ಭೂತವೇನೋ ಸಂಭವಿಸುವುದು. ಅದು ಯುಕ್ತಾಯುಕ್ತವಾಗಿ ತೋರುವುದಿಲ್ಲ. ಏಕೆಂದರೆ — ಈಗ ಹೇಳಿರುವುದಲ್ಲಾವುದೂ ' ಮೆವರಿ ' ಪ್ರಾಪ್ತವೇ ಆಗುವುದಿಲ್ಲ. ಆದುದರಿಂದ ಭೂತವಲ್ಲ. ಹೀಗೆಯೇ ಅಪ್ರಸಕ್ತವಾದುದರಿಂದ ವರ್ತಮಾನವೂ ಅಲ್ಲ. ಆದುದರಿಂದ ಪರಿಶೇಷವಿಧಿಯಿಂದ ಭಾವಿಯಾದ ವಿಧಿಯೇ ಇದಕ್ಕೆ ವಿಷಯವೆಂದು ತಿಳಿಯಬೇಕು. ಇದರಿಂದ ಮುಂದೆ ಹೇಳುವ ವಿಧಿಯು ' ಮೆವರಿ ನಿತ್ಯಂ ' ಎಂದು ಹೇಳುವುದರಿಂದ ಅನ್ಯತ್ರವಿಕಲ್ಪವೆಂದು ಸಿದ್ಧವಾಗುವುದು.

**ಅವತಾರಿಕೆ ೩೫೧**

ಕೆಲವು ಸಂಖ್ಯಾವಾಚಕ ಶಬ್ದಗಳಿಗೆ ಸಮಾಸವಿಶೇಷದಲ್ಲಿ ಲೋಪವನ್ನು ವಿಧಿಸಲು ಸೂತ್ರವನ್ನು ಹೇಳುತ್ತಾನೆ.

**ಸೂತ್ರಂ || ಎಣ್ಬು ನಾಲ್ಕ್ವಯ್ದೋರದ್ವಂದ್ವೇ || ೩೫೧ ||**

**ಅರ್ಥ ||** ವ್ಯಂಜನಾದ್ಯುತ್ತರಪದವು ಪರದಲ್ಲಿರಲು ' ಎಣ್ಬು, ನಾಲ್ಕು ಅಯ್ದು ' ಎಂಬ ಶಬ್ದಗಳ ' ದು ' ವಿಗೆ ಬಹುಳವಾಗಿ ಲೋಪವು ಬರುವುದು; ' ಮ, ವರ್ ' ಎಂಬ ಪ್ರತ್ಯಯಗಳು ಪರದಲ್ಲಿರಲು ನಿತ್ಯವಾಗಿ ಬರುವುದು.

**ಉದಾಹರಣೆ ||** ' ಎಣ್ಗಾವುದಂ, ಎಣ್ಬುಗಾವುದಂ; ಎಣ್ದೆಸೆ, ಎಣ್ಬುದೆಸೆ; ನಾಲ್ಮೊಗಂ, ನಾಲ್ಕುಮೊಗಂ; ನಾಲ್ಗಾವುದಂ, ನಾಲ್ಕುಗಾವುದಂ, ಅಯ್ಸಾಸಿರಂ, ಅಯ್ದುಸಾಸಿರಂ; ಅಯ್ಮೂಲೆ, ಅಯ್ದುಮೂಲೆ; ಎಣ್ಮ, ಎಣ್ಬರ್; ನಾಲ್ಮೆ, ನಾಲ್ವರ್; ಅಯ್ಮೆ, ಅಯ್ವರ್ ' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೫೧**

ಈ ಸೂತ್ರದಲ್ಲಿ — 'ಎಣ್ಬುನಾಲ್ಕಯ್ದೋಃ, ಅದ್ವಂದ್ವೇ' ಎಂದು ಎರಡು ಪದಗಳಿರುವುವು. ಪೂರ್ವದಿಂದ—' ದೋಃ, ಲುಪ್, ವ್ಯಂಜನೇ, ಉತ್ತರಪದೇ ' ಎಂಬಿವು ಅನುವರ್ತಿಸಲ್ಪಡುವುವು. ' ನಿತ್ಯಂ ಮೆವರಿ' ಎಂಬುದು ಅಧಿಕರಿಸಲ್ಪಡುವುದು. 'ಎಣ್ಬುನಾಲ್ಕಯ್ದೋಃ' ಎಂಬುದು ಷಷ್ಠ್ಯಂತವಾದುದರಿಂದ ಅವಯವಾವಯವಿಭಾವಸಂಬಂಧದಿಂದ ' ದೋಃ ' ಎಂಬುದಕ್ಕೆ ವಿಶೇಷಣವು. ' ಅದ್ವಂದ್ವೇ ' ಎಂಬುದು ವಿಷಯಸಪ್ತಮಿ. ಇದು ಪ್ರಸಜ್ಯಪ್ರತಿಷೇಧಾರ್ಥಕ 'ನಞ' ಸಮಾಸವು.

'ಉತ್ತರಪದೇ' ಎಂಬುದು ನಿಮಿತ್ತಸಪ್ತಮಿ. ಇದಕ್ಕೆ 'ವ್ಯಂಜನೇ' ಎಂಬುದು ವಿಶೇಷಣವು. 'ನಿತ್ಯಂ ಮೆವರಿ' ಎಂಬುದು ಬೇರೆ ವಾಕ್ಯವು. ಇದು ಪ್ರಾಪ್ತೋಕ್ತವಾದ ಲೋಪಕ್ಕೆ ನಿತ್ಯತ್ವವನ್ನು ಬೋಧಿಸುವುದು. ಆದುದರಿಂದ ಅನ್ಯತ್ರ ಲೋಪವು ವಿಕಲ್ಪವೆಂದು ಸಿದ್ಧವಾಗುವುದು. ತಥಾಚ — 'ಎಣ್ಬು, ನಾಲ್ಕು, ಅಯ್ದು' ಎಂಬ ಶಬ್ದಗಳ 'ದು' ವಿಗೆ ವ್ಯಂಜನಾದ್ಯುತ್ತರ ಪದವು ಪರದಲ್ಲಿರುವಾಗ ಲೋಪವು ಬರುವುದು. ಈ ಲೋಪವು ದ್ವಂದ್ವಸಮಾಸದಲ್ಲಿ ಬರುವುದಿಲ್ಲ-ಎಂದು ಪ್ರಸಜ್ಯಪ್ರತಿಷೇಧವನ್ನಂಗೀಕರಿಸಿರುವುದರಿಂದ ಈ ಲುಪ್ ಇತರವೃತ್ತಿಗಳಲ್ಲೆಲ್ಲ ಬರುವುದೆಂದು ತೋರುವುದು. ಆದುದರಿಂದ ಮೆ-ಪ್ರತ್ಯಯವು ಪರದಲ್ಲಿರುವಾಗಲೂ ವರ್-ಪ್ರತ್ಯಯವು ಪರವಾಗಿರುವಾಗಲೂ ನಿತ್ಯವಾಗಿ ಬರುವುದು — ಎಂದು ಹೇಳಿರುವುದು. ಇದರಿಂದ ಉಳಿದೆಡೆಯಲ್ಲೆಲ್ಲಾ ವಿಕಲ್ಪವೆಂದು ತಿಳಿಯಬೇಕು — ಎಂದು ಸೂತ್ರಕ್ಕೆ ಫಲಿತಾರ್ಥವಾಗಲು 'ಎಣ್ಗಾವುದಂ' ಮೊದಲಾದುವು ಸಿದ್ಧಿಸುವುವು.

ಇಲ್ಲಿ — 'ಅದ್ವಂದ್ವೇ' ಎಂದು ಹೇಳಿರುವುದರಿಂದ — 'ಅಯ್ದು ನಾಲ್ಕೆಂಟು' ಮೊದಲಾದ ದ್ವಂದ್ವಸಮಾಸದಲ್ಲಿಯೂ 'ವ್ಯಂಜನಾದೌ' ಎಂದು ಹೇಳಿರುವುದರಿಂದ—'ಎಣ್ಬಾನೆಯಂ, ನಾಲ್ಕಾಕಳ್, ಅಯ್ದಾಡು'[೧] ಮೊದಲಾದ ಸ್ವರಾದ್ಯುತ್ತರಪದಪರಕ ಪ್ರಯೋಗಗಳಲ್ಲಿಯೂ ಲೋಪವಿಲ್ಲವೆಂದು ತಿಳಿಯುವುದು.

ಇಲ್ಲಿ **ದರ್ಪಣಕಾರನು** ಮುಂದೆ ಹೇಳುವ 'ಮೂಱಿನೋಃ' ಮೊದಲಾದ ಸೂತ್ರಗಳಿಂದ ಸಂಖ್ಯಾವಾಚಕವಾದ ಕೆಲವು ಶಬ್ದಗಳಿಗೆ **ಶಾಸನಕಾರನು** ವಿಧಿಸುವ ಕಾರ್ಯಗಳನ್ನು ಸಂಗ್ರಹಿಸಿ —

> ಅಕ್ಕುಂ ಲೋಪಂ ನಾಲ್ಕ
> ಯ್ದುರ್ಕಂತ್ಯಕ್ಕಾಱಱಾದಿಯೊಳ್ ಹ್ರಸ್ವಂ ತಾ
> ನಕ್ಕುಮುದೇಱರ್ಕೆಱಿಂ
> ದಕ್ಕುಂ ಚರಮಕ್ಕೆ ಲೋಪಮೆಣ್ಬರ್ಕಕ್ಕುಂ ( ಸೂತ್ರ ೧೮೮ )

ಎಂಬ ಸೂತ್ರವನ್ನು ಹೇಳಿರುವನು.

**ಅವತಾರಿಕೆ ೩೫೨**

ಹೀಗೆಯೇ 'ಮೂಱು' ಶಬ್ದಕ್ಕೂ ಲೋಪವನ್ನು ವಿಧಿಸುತ್ತಾನೆ.

**ಸೂತ್ರಂ || ಮೂಱಿನೋಃ || ೩೫೨ ||**

**ಅರ್ಥ** || 'ಮೂಱು' ಶಬ್ದದ 'ದು' ವಿಗೆ ವ್ಯಂಜನಾದ್ಯುತ್ತರಪದವು ಪರದಲ್ಲಿರಲು ಲೋಪವು ಬರುವುದು. ಇದು ದ್ವಂದ್ವ ಸಮಾಸದಲ್ಲಿ ಬರುವುದಿಲ್ಲ. ಮೆ, ವರ್-ಪ್ರತ್ಯಯಗಳು ಪರವಾಗಲು ನಿತ್ಯವಾಗಿ ಬರುವುದು.

**ಉದಾಹರಣೆ** || 'ಮೂಗಾವುದಂ, ಮೂಱುಗಾವುದಂ, ಮೂದಲೆಯಂ, ಮೂಱುತಲೆಯಂ, ಮೂಮೆ, ಮೂವರ್ ||' ಮೊದಲಾದುವು ಇದಕ್ಕೆ ಲಕ್ಷ್ಯಗಳು.

---

ಪಾಠಾಂತರ ೧: ಅಯ್ದಾಱಾಡು.

**ವಿಚಾರ ೩೫೨**

ಈ ಸೂತ್ರದಲ್ಲಿ — ' ಮೂಱಿನೋಃ ' ಎಂದು ಒಂದೇ ಪದವಿರುವುದು. ಇದು ಅವಯವಾವಯವಿಭಾವ ಸಂಬಂಧದಲ್ಲಿ ಬಂದ ಷಷ್ಠ್ಯಂತಪದವು. ಇದು ಅನುವೃತ್ತವಾದ ' ದೋಃ ' ಎಂಬುದಕ್ಕೆ ವಿಶೇಷಣವು. ಪೂರ್ವದಿಂದ ಬಾಧಿಪದಗಳನ್ನು ಅನುವರ್ತಿಸಿ ಯಥಾಯೋಗ್ಯವಾಗಿ ಸಂಬಂಧಿಸುವುದು. ತಥಾಚ — ' ಮೂಱು ' ಶಬ್ದದ ' ಮು ' ವಿಗೆ ವ್ಯಂಜನಾದ್ಯುತ್ತರಪದವು ಪರದಲ್ಲಿರುವಾಗ ಲೋಪವು ಬರುವುದು. ದ್ವಂದ್ವ ಸಮಾಸದಲ್ಲಿ ಬರುವುದಿಲ್ಲ. ಮೆ, ವರ್-ಪ್ರತ್ಯಯಗಳು ಪರದಲ್ಲಿರುವಾಗ ನಿತ್ಯವಾಗಿ ಬರುವುದು—ಎಂದು ಸೂತ್ರಾರ್ಥವಾಗಲು ' ಮೂಗಾವುದಂ ' ಮೊದಲಾದುವು ಸಿದ್ಧಿಸುವುವು.

ಇಲ್ಲಿ ' ಅದ್ವಂದ್ವೇ ' ಎಂದು ಹೇಳಿರುವುದರಿಂದ ' ಮೂಱುನಾಲ್ಕು ' ಮೊದಲಾದ ದ್ವಂದ್ವ ಸಮಾಸದಲ್ಲಿಯೂ ' ವ್ಯಂಜನೇ ' ಎಂದು ಹೇಳಿರುವುದರಿಂದ ' ಮೂಱಾವು ' ಮೊದಲಾದ ಸ್ವರಾದ್ಯುತ್ತರ ಪದಗಳಲ್ಲಿಯೂ ಬರುವುದಿಲ್ಲವೆಂದು ತಿಳಿಯಬೇಕು. ಈ ಶಬ್ದವನ್ನೂ ಪೂರ್ವ ಸೂತ್ರದಲ್ಲಿಯೇ ಪಾಠಮಾಡಿ ಅದರಿಂದಲೇ ಲೋಪವನ್ನು ವಿಧಿಸಲು ' ಮೂಗಾವುದಂ ' ಮೊದಲಾದ ರೂಪಗಳು ಸಿದ್ಧಿಸುತ್ತಿರಲು 'ಮೂಱಿನೋಃ' ಎಂದು ಪೃಥಕ್ ಸೂತ್ರವನ್ನು ಮಾಡಿರುವುದು ಮುಂದಿನ ಸೂತ್ರದಲ್ಲಿ—'**ಏಕಯೋಗನಿರ್ದಿಷ್ಟಾನಾಂ ಸಹ ವಾ ಪ್ರವೃತ್ತಿಃ ಸಹ ವಾ ನಿವೃತ್ತಿಃ**' ಎಂಬ ನಿಯಮಾನುಸಾರವಾಗಿ ಪ್ರಾಪ್ತವಾದ 'ಎಣ್ಬು' ಮೊದಲಾದ ಶಬ್ದಗಳ ಸಂಬಂಧವನ್ನು ವ್ಯಾವೃತ್ತಿ ಮಾಡಿ ' ಮೂಱು ' ಶಬ್ದವೊಂದಕ್ಕೆ ಸಂಬಂಧವನ್ನು ಮಾಡಬೇಕೆಂಬುದನ್ನು ಸೂಚಿಸುವುದಕ್ಕೆ — ಎಂದು ತಿಳಿಯಬೇಕು.

ಈ ಸೂತ್ರದಲ್ಲಿಯೂ ಬಹುಳಾಧಿಕಾರವಿರುವುದರಿಂದ ' ಮೂಱು ' ಶಬ್ದಕ್ಕೆ ವ್ಯಂಜನಾದ್ಯುತ್ತರಪದವು ಪರದಲ್ಲಿರುವಾಗಲೂ ಮೆ-ಪ್ರತ್ಯಯವು ಪರದಲ್ಲಿರುವಾಗಲೂ ' ಮು ' ವಿಗೆ ರೇಫಾದೇಶವು ಬರುವುದೆಂದು ಕೆಲವರು ವ್ಯಾಖ್ಯಾನ ಮಾಡಿ—

**ಇರ್ಮಡಿ ಬಲಿಗೆ ದಧೀಚಿಗೆ**
**ಮೂರ್ಮಡಿ ಜೀಮೂತವಾಹನಂಗಂ ಬಗೆಯಲ್**
**ನೂರ್ಮಡಿ ಶಿಬಿಗಂ ದಿಟ ಸಾ**
**ಸಿರ್ಮಡಿ ಮಿಗಿಲೀಗೆ ಚಾಗದೊಳ್ ನೃಪತುಂಗಂ**

ಕಱುರ್ಮೆಯಿನಾ ಮುನಿಯಂ ಕಂ
ಡಾರ್ಮೆಂ ನೀನಲ್ಲದಿಲ್ಲ ಪೆಱತೆಂದರಸಂ
ಮೂರ್ಮೆ ಬಲವಂದು ನುತಿಸಿ ಪ
ಲರ್ಮೆ **ತುಱುಲ್ಗೆಯ್ದು ಭಕ್ತಿಯಿಂ ಬೆಸಗೊಂಡಂ**

ಮೊದಲಾದ ಪ್ರಯೋಗಗಳನ್ನು ಉದಾಹರಿಸಿರುವರು.

ಆದರೆ ಇಲ್ಲಿ ' **ಅಱುಮೂಱಿನೋಃ || ೬೮ ||** ' ಎಂಬ ಸೂತ್ರದಲ್ಲಿ ' ಮೂಱು ' ಎಂಬುದನ್ನು ವಿಶಿಷ್ಟ ಉಚ್ಚಾರಣೆಯನ್ನು ಮಾಡಿ ' ಮು ' ವಿಗೆ ರೇಫಾದೇಶವನ್ನು ನಿಷೇಧಿಸಿರುವುದು. ಆದಾಗ್ಯೂ ಇಲ್ಲಿ ನಿರ್ದೇಶದಲ್ಲಿ ಅಲ್ಪಸಂಖ್ಯಾವಾಚಕಕ್ಕೆ ಪೂರ್ವೋಚ್ಚಾರಣೆಯನ್ನು ಮಾಡಬೇ

ಕೆಂದು ನಿಯಮವಿದ್ದರೂ ' ಮೂಜಾಜ್ಞೋಃ ' ಎಂದು ಉಚ್ಚರಿಸದೆ ' ಅಋಮೂಜ್ಞೋಃ ' ಎಂದು ವ್ಯತ್ಯಾಸವಾಗಿ ಸೂತ್ರಕಾರರು ಮಾಡಿರುವ ಉಚ್ಚಾರಣೆಯಿಂದ ಕ್ವಚಿತ್‌ರೇಫಾದೇಶವುಂಟೆಂದು ಜ್ಞಾಪಿಸಲ್ಪಡುವುದೆಂದು ತಿಳಿಯಬೇಕು. ಇದು ಆ ಸೂತ್ರವಿಚಾರದಲ್ಲಿಯೇ ಸ್ಪಷ್ಟವಾಗಿ ಹೇಳಲ್ಪಟ್ಟಿದೆ.

**ಅವತಾರಿಕೆ ೩೫೩**

ಪೂರ್ವಸೂತ್ರೋಕ್ತ ' ದು ' ಲೋಪವಿಷಯದಲ್ಲಿ ' ಮೂಱು ' ಶಬ್ದಕ್ಕೆ ವೈಕಲ್ಪಿಕ ಹ್ರಸ್ವವನ್ನು ವಿಧಿಸುತ್ತಾನೆ.

**ಸೂತ್ರಂ ॥ ಹ್ರಸ್ವಸ್ತತ್ರ ವಾ ॥ ೩೫೩ ॥**

**ಅರ್ಥ ॥ ಮೂಱು ಶಬ್ದಕ್ಕೆ ದು-ಲೋಪವನ್ನು ಮಾಡಲು ಹ್ರಸ್ವಾದೇಶವು ವಿಕಲ್ಪವಾಗಿ ಬರುವುದು.**

**ಉದಾಹರಣೆ** ॥ ಮುಗ್ಗುಡ್ಡೆ, ಮೂಗುಡ್ಡೆ; ಮುಕ್ಕೊಡೆ, ಮೂಗೊಡೆ;[೧] ಮುಚ್ಚೋಟು, ಮೂಚೋಟು ॥ ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೫೪**

ಈ ಸೂತ್ರದಲ್ಲಿ — ' ಹ್ರಸ್ವಃ, ತತ್ರ, ವಾ ' ಎಂದು ಮೂರು ಪದಗಳಿರುವುವು. ' **ವಿಧಿರ್ವಾ ಪ್ರತಿಷೇಧೋ ವಾ ಅನಂತರಸ್ಯ ಭವತಿ** ' ಎಂಬ ನ್ಯಾಯದಿಂದ ಅನಂತರವಾದ ' ಮೂಱು ' ಶಬ್ದವೇ ಇಲ್ಲಿ ಉದ್ದೇಶ್ಯವು. ಹ್ರಸ್ವಪದವನ್ನುಚ್ಚರಿಸಿ ಸ್ವರಕ್ಕೆ ವಿಧಾನವಿರುವುದರಿಂದ ' ಸ್ವರಸ್ಯ ' ಎಂಬುದು ಉಪಸ್ಥಿತವಾಗುತ್ತಿದ್ದರೂ ಇಲ್ಲಿ ಪ್ರಯೋಜನವಿಲ್ಲವಾದುದರಿಂದ ಬಿಡಲ್ಪಡುವುದು. ' ತತ್ರ ' ಎಂಬುದು ಪೂರ್ವೋಕ್ತ ದು-ಲೋಪ ಪರಾಮರ್ಶಕವು. ತಥಾಚ — ದು-ಲೋಪವನ್ನು ಮಾಡಲು ' ಮೂಱು ' ಶಬ್ದದ ಕೊನೆಯ ಊಕಾರಕ್ಕೆ ಅದರ ಹ್ರಸ್ವವು ವಿಕಲ್ಪವಾಗಿ ಬರುವುದು—ಎಂದು ಸೂತ್ರಾರ್ಥವಾಗುವುದರಿಂದ ' ಮುಗ್ಗುಡ್ಡೆ ' ಮೊದಲಾದುವು ಸಿದ್ಧಿಸುವುವು.

ಇಲ್ಲಿ ' ತತ್ರ ' ಎಂದು ಹೇಳಿರುವುದರಿಂದ ' ಮೂಱುಗಾವುದಂ ' ಮೊದಲಾದ ದು-ಲೋಪವಿಲ್ಲದ ಪ್ರಯೋಗಗಳಲ್ಲಿ ಹ್ರಸ್ವವಿಲ್ಲ.

' ಮುಗ್ಗುಡ್ಡೆ ' ಮೊದಲಾದುವುಗಳಲ್ಲಿ ' ವೋಃ ' ಎಂಬುದರಿಂದ ದ್ವಿರ್ಭಾವವು ಬಂದಿರುವುದು. ' ಮುಕ್ಕೊಡೆ, ಮುಚ್ಚೋಟು ' ಮೊದಲಾದುವುಗಳಲ್ಲಿ ಬೆಸೆಕೋಲಾದಿತ್ವವನ್ನು ಕಲ್ಪಿಸಿ ತೃತೀಯವರ್ಣಾದೇಶವಿಲ್ಲವೆಂದು ತಿಳಿಯಬೇಕು.

**ಅವತಾರಿಕೆ ೩೫೪**

ಪೂರ್ವದಲ್ಲಿ ' ಮೆವರಿ ನಿತ್ಯ 'ವೆಂದು ಹೇಳಿರುವುದರಿಂದ ' ಮೂಱು ' ಶಬ್ದಕ್ಕೆ ಹ್ರಸ್ವವೂ ನಿತ್ಯವಾಗಿ ಪ್ರಾಪ್ತವಾಗಲು ಅದಕ್ಕೆ ವೈಕಲ್ಪಿಕತ್ವವನ್ನು ವಿಧಿಸುತ್ತಾನೆ.

**ಸೂತ್ರಂ ॥ ಮೆವರಿ ॥ ೩೫೪ ॥**

**ಅರ್ಥ ॥ ' ಮೆ, ವರ್ ' ಎಂಬಿವು ಪರವಾಗಲು ದು-ಲೋಪವನ್ನು ಮಾಡಿದಾಗ ಹ್ರಸ್ವಾದೇಶವು ವಿಕಲ್ಪವಾಗಿ ಬರುವುದು.**

---

**ಪಾಠಾಂತರ ೧: ಮೂಕೊಡೆ.**

**ಉದಾಹರಣೆ** || ' ಮುಮ್ಮೆ, ಮೂಮ್ಮೆ; ಮುವ್ವರ್, ಮೂವರ್ ' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೫೪**

ಈ ಸೂತ್ರದಲ್ಲಿ — ' ಮೆವರಿ ' ಎಂದು ಒಂದೇ ಪದವಿರುವುದು. ಪೂರ್ವದಿಂದ ' ಮೂಱೋಃ, ಹ್ರಸ್ವಃ, ವಾ ' ಎಂಬಿವು ಅನುವರ್ತಿಸಲ್ಪಡುವುವು. ತಥಾಚ — ದು-ಲೋಪ ವನ್ನು ಮಾಡಿದಾಗ ' ಮೂಱು ' ಶಬ್ದಕ್ಕೆ ಮೆ, ವರ್-ಪ್ರತ್ಯಯಗಳು ಪರವಾಗಲು ಹ್ರಸ್ವಾದೇಶವು ವಿಕಲ್ಪವಾಗಿ ಬರುವುದು—ಎಂದು ಸೂತ್ರಕ್ಕೆ ಅರ್ಥವಾಗಲು ' ಮುಮ್ಮೆ ' ಮೊದಲಾದುವು ಸಿದ್ಧಿಸುವುವು.

ಇಲ್ಲಿ ಪೂರ್ವಸೂತ್ರದಿಂದಲೇ ' ಮೆವರಿ ' ಎಂಬುದು ಅನುವರ್ತಿಸುತ್ತಿರಲು ಪುನಃ 'ಮೆವರಿ' ಎಂದು ಹೇಳಿರುವುದು ವ್ಯರ್ಥವೆಂದು ತೋರುವುದು. ಆದಾಗ್ಯೂ ಪೂರ್ವೋಕ್ತವಾದುದು ನಿತ್ಯ ಪದಸಂಬದ್ಧವಾದುದರಿಂದ ಇಲ್ಲಿ ವಿಕಲ್ಪವೆಂದು ಬೋಧಿಸಲು ಪುನಃ ತದ್ಗ್ರಹಣವು ಸಾರ್ಥಕ ವೆಂದು ತಿಳಿಯಬೇಕು.

**ಅವತಾರಿಕೆ ೩೫೫**

ಹೀಗೆಯೇ ' ಆಱು ' ಶಬ್ದಕ್ಕೂ ಹ್ರಸ್ವಾದೇಶವನ್ನು ವಿಧಿಸುತ್ತಾನೆ.

**ಸೂತ್ರಂ** || **ಆಱೋಃ** || **೩೫೫** ||

**ಅರ್ಥ** || ವ್ಯಂಜನಾದ್ಯುತ್ತರಪದವು ಪರದಲ್ಲಿರಲು ' **ಆಱು** ' **ಶಬ್ದಕ್ಕೆ ಹ್ರಸ್ವಾದೇಶವು ವಿಕಲ್ಪ ವಾಗಿ ಬರುವುದು. ಇದು ದ್ವಂದ್ವ ಸಮಾಸದಲ್ಲಿ ಬರುವುದಿಲ್ಲ. ಮೆ, ವರ್-ಪ್ರತ್ಯಯಗಳು ಪರದಲ್ಲಿರಲು ನಿತ್ಯವಾಗಿ ಬರುವುದು. ಇಲ್ಲಿ ' ಆಱೋಃ ' ಎಂದು ಷಷ್ಠ್ಯಂತವಾಗಿ ನಿರ್ದೇಶಿಸಿ ಹ್ರಸ್ವವನ್ನು ಹೇಳಿರುವುದರಿಂದ ' ಷಷ್ಠ್ಯಾಃ ಸ್ಥಾನೇಽಂತ್ಯಸ್ಯ ||೭೨||' ಎಂಬುದರಿಂದ ತದಂತ್ಯಕ್ಕೆ ಪ್ರಾಪ್ತವಾಗಲು ಪ್ರಯೋಜನವಿಲ್ಲವಾದುದರಿಂದ ಆದಿ ಸ್ವರಕ್ಕೆ ಬರುವುದೆಂದು ತಿಳಿಯಬೇಕು.**

**ಉದಾಹರಣೆ** || ' ಅಱುಗಾವುದಂ, ಆಱುಗಾವುದಂ; ಅಱುಮೊಱಂ, ಆಱುಮೊಱಂ; ಅಱುಮೆ, ಅಱುವರ್ ' || ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೫೫**

ಇಲ್ಲಿ ' ಆಱೋಃ ' ಎಂದು ಒಂದೇ ಪದವಿರುವುದು. ಇದೇ ಇಲ್ಲಿ ಉದ್ದೇಶ್ಯವು. ಇದರ ಅಂತ್ಯಸ್ವರವು ಸ್ವತಃ ಹ್ರಸ್ವವಾಗಿಯೇ ಇರುವುದರಿಂದ ಇದಕ್ಕೆ ಹ್ರಸ್ವವನ್ನು ವಿಧಿಸಲು ಪ್ರಯೋ ಜನವಿಲ್ಲವಾದುದರಿಂದ ಇದರ ಆದಿಸ್ವರಕ್ಕೆ ಬರುವುದೆಂದು ತಿಳಿಯುವುದು. ಇಲ್ಲಿಯೂ ಪೂರ್ವ ದಂತೆ ವ್ಯಂಜನಾದಿಗಳನ್ನು ಅನುವರ್ತಿಸಿ, 'ಆಱು' ಶಬ್ದಕ್ಕೆ ವ್ಯಂಜನಾದ್ಯುತ್ತರಪದವು ಪರದಲ್ಲಿರು ವಾಗ ವಿಕಲ್ಪವಾಗಿ ಹ್ರಸ್ವಾದೇಶವು ಬರುವುದು; ದ್ವಂದ್ವ ಸಮಾಸದಲ್ಲಿ ಬರುವುದಿಲ್ಲ, ಮೆ, ವರ್-ಪ್ರತ್ಯಯಗಳಲ್ಲಿ ನಿತ್ಯವಾಗಿ ಬರುವುದು—ಎಂದು ಸೂತ್ರಾರ್ಥವಾಗಲು 'ಅಱುಗಾವುದಂ' ಮೊದಲಾದುವು ಸಿದ್ಧಿಸುವುವು. *[ ' ಅಱುಗಾವುದಂ ' ಎಂದರೆ ' ಆರು ಗಾವುದಗಳು ಎಂದು ' ಅರ್ಥವು. ' ಅಱುಮೆ ' ಎಂದರೆ ' ಆರುಬಾರಿ, ಆರುಬಾರಿಗಳನ್ನು ' ಮುಂತಾದ ಅರ್ಥವು. ' ಅಱುವರ್ ' ಎಂದರೆ ' ಆರುಜನ-ಪುರುಷರು ಇಲ್ಲವೆ ಸ್ತ್ರೀಯರು ' ಎಂದು ಅರ್ಥವು.

* ಇಲ್ಲಿಂದ ಮುಂದೆ ಈ ಕಂಸ ಮುಗಿಯುವ ವರೆಗೆ ಮೂಲದಲ್ಲಿ ಗ್ರಂಥಪಾತವಾಗಿದೆ. ಈ ಭಾಗ ವನ್ನು ಹೊಸದಾಗಿ ಪಂಡಿತ ಮ. ಪ್ರ. ಪೂಜಾರರವರು ಬರೆದಿರುವರು.

**ಅವತಾರಿಕೆ ೩೫೬**

'ಏಱು' ಶಬ್ದಕ್ಕೆ ಉಂಟಾಗುವ ಕಾರ್ಯವನ್ನು ಹೇಳಿ ಈಗ 'ಏಱು' ಶಬ್ದಕ್ಕೂ, 'ಏಱು' ಶಬ್ದದ ಕಾರ್ಯವನ್ನೇ ಹೊಂದುವ 'ಸಾಸಿರ' ಶಬ್ದಕ್ಕೂ ಬರುವ ಆದೇಶವನ್ನು ಹೇಳುತ್ತಾನೆ.

**ಸೂತ್ರಂ || ಲುಪ್ ಸಾಸಿರೈಱೋಃ || ೩೫೬ ||**

**ಅರ್ಥ ||** ವ್ಯಂಜನಾದ್ಯುತ್ತರಪದವು ಪರದಲ್ಲಿರಲು 'ಸಾಸಿರ, ಏಱು' ಎಂಬೀ ಶಬ್ದಗಳ ಅಂತ್ಯಕ್ಕೆ ಲೋಪವಾಗುವುದು; ದ್ವಂದ್ವಸಮಾಸದಲ್ಲಿ ಈ ಕಾರ್ಯವಾಗುವುದಿಲ್ಲ; ಮೆ, ವರ್-ಪ್ರತ್ಯಯಗಳು ಪರದಲ್ಲಿರಲು ಈ ಕಾರ್ಯವು ನಿತ್ಯವಾಗಿ ಆಗುವುದು.

**ಉದಾಹರಣೆ||** 'ಸಾಸಿರ್ದಲೆಯಂ, ಸಾಸಿರದಲೆಯಂ; ಸಾಸಿರ್ದೋಳಂ, ಸಾಸಿರದೋಳಂ; ಏೞ್ಗಯ್ಯಂ, ಏಱುಕಯ್ಯಂ; ಏೞ್ಗಾವುದಂ, ಏಱುಗಾವುದಂ; ಸಾಸಿರ್ಮೆ, ಸಾಸಿರ್ವರ್; ಏೞ್ಮೆ, ಏೞ್ವರ್' || ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೫೬**

'ದೋಃ' ಎಂಬುದು ಪೂರ್ವ (೩೫೫) ಸೂತ್ರದಿಂದ ಅನುವೃತ್ತವಾದುದು, ಹಿಂದೆಯೇ (೨೫೩ಕ್ಕೆ) ನಿವೃತ್ತವಾಗಿರುವುದರಿಂದ ಇಲ್ಲಿ 'ಸಾಸಿರ, ಏಱು' ಶಬ್ದಗಳ ದು-ಲೋಪವಿಲ್ಲ; ಅಂತ್ಯಾಕ್ಷರಕ್ಕೆ ಮಾತ್ರ ಲೋಪವಾಗುವುದೆಂದು ತಿಳಿಯಬೇಕು. 'ಸಾಸಿರ್ದಲೆಯಂ' ಎಂಬಲ್ಲಿ 'ಸಾಸಿರಂ, ತಲೆಗಳ್, ಆರ್ಗೆ, ಆತಂ' ಎಂಬ ಅರ್ಥದಲ್ಲಿ ಬಹುವ್ರೀಹಿಸಮಾಸವಾಗಲು ಮಧ್ಯಗತ ವಿಭಕ್ತಿಲೋಪವಾಗಲು 'ಸಾಸಿರ ತಲೆ' ಎಂದಿರುವಾಗ 'ಅಬ್ಬಹುವ್ರೀಹೇಃ || ೩೨೭ ||' ಎಂಬ ಸೂತ್ರದಿಂದ ಕೊನೆಯಲ್ಲಿ ಅ ಕಾರಾಗಮವಾಗಲು 'ಸಾಸಿರ್ದಲೆಯ' ಎಂಬ ಪ್ರಾತಿಪದಿಕವು ಸಿದ್ಧವಾಗುವುದು. ಈ ಪದಕ್ಕೆ 'ಸಾವಿರ ತಲೆಯುಳ್ಳವನು' ಎಂದು ಅರ್ಥವು. ಇದೇ ಮೇರೆಗೆ 'ಸಾಸಿರ್ದೋಳಂ' ಎಂಬ ಪದವೂ ಸಿದ್ಧವಾಗುವುದು. 'ಸಾಸಿರ್ದೋಳಂ' ಎಂದರೆ 'ಸಹಸ್ರಬಾಹುವು'. 'ಏೞ್ಗಯ್ಯಂ' ಎಂಬಲ್ಲಿಯೂ 'ಅಬ್ಬಹುವ್ರೀಹೇಃ || ೩೨೭ ||' ಎಂಬ ಸೂತ್ರದಿಂದ ಅ ಕಾರಾಗಮವು. 'ಏೞ್ಗಯ್ಯಂ' ಎಂದರೆ 'ಏಳು ಕಯ್ಯವನು'. 'ಸಾಸಿರ್ಮೆ—ಸಾವಿರಬಾರಿ' ಎಂದು ಅರ್ಥವು. 'ಸಾಸಿರ್ವರ್' ಎಂದರೆ 'ಸಾವಿರಜನ ಪುರುಷರು ಇಲ್ಲವೆ ಸ್ತ್ರೀಯರು' ಎಂದು ಅರ್ಥವು.

**ಅವತಾರಿಕೆ ೩೫೭**

ಈ ವರೆಗೆ ಅಂತ್ಯ 'ದು' ಭಾಗಕ್ಕಾಗಲಿ, ಅಂತ್ಯಾಕ್ಷರಕ್ಕಾಗಲಿ ಬರುವ ಕಾರ್ಯಗಳನ್ನು ಹೇಳಿದನು. ಇನ್ನು ಮುಂದೆ 'ಒಂದು' ಮೊದಲಾದ ಸಂಖ್ಯಾವಾಚಕಗಳಿಗೂ 'ಕೆಳಗು' ಮೊದಲಾದ ಕೆಲವು ಶಬ್ದಗಳಿಗೂ ಬರುವ ಆದೇಶಕಾರ್ಯಗಳನ್ನು ಹೇಳಬೇಕಾಗಿದೆ. ಆದೇಶಗಳು ಅಂತ್ಯಕ್ಕಾಗಲಿ, 'ದು' ಭಾಗಕ್ಕಾಗಲಿ ಬರುವುವಾಗಿರದೆ ಇಡಿ ಶಬ್ದಗಳಿಗೆ ('ಸರ್ವಾದೇಶ'ಗಳಾಗಿ) ಬರುವಂತಹುವಾಗಿವೆ. ಇಂತಹ ಸರ್ವಾದೇಶಗಳನ್ನು 'ದ್ವೇರ್ದೂಃ || ೩೭೭ ||' ಎಂಬ ಸೂತ್ರದ ವರೆಗೆ ಎಂದರೆ ಇಪ್ಪತ್ತು ಸೂತ್ರಗಳಲ್ಲಿ ಹೇಳುವವನಿದ್ದಾನೆ. ಸರ್ವಾದೇಶಗಳನ್ನು ಹೇಳುವಾಗ ಅವನ್ನು 'ಶಿತ್'ಗಳನ್ನು ಮಾಡಿ—ಎಂದರೆ ಆ ಆದೇಶಗಳಿಗೆ ಶ ಕಾರವನ್ನು

ಸೇರಿಸಿ ಹೇಳಬೇಕಾಗುವುದು. ಏಕೆಂದರೆ '**ಶಿತ್ ಸರ್ವಸ್ಯ ॥ ೨೩ ॥**' ಎಂಬ ಪರಿಭಾಷಾಸೂತ್ರದಲ್ಲಿ ಶ ಕಾರವು ಇತ್-ಸಂಜ್ಞಕವಾಗಿ 'ಉಳ್ಳ' ಆದೇಶವು ಸರ್ವಾದೇಶವೆಂದು ಸಂಕೇತವನ್ನು ಹೇಳಿದ್ದಾನೆ. ಇನ್ನು ಆ ಇನ್ನುಳಿದ ಸೂತ್ರಗಳಲ್ಲಿ ಹೇಳಲಿರುವ ಆದೇಶಗಳಿಗೆಲ್ಲ ಶ ಕಾರವನ್ನು ಸೇರಿಸಿ ಹೇಳುತ್ತ ಹೋಗುವುದರಿಂದ ಗೌರವದೋಷವುಂಟಾಗುವುದು. ಆದುದರಿಂದ ಇಲ್ಲಿ ಒಂದು ಅಧಿಕಾರ ಸೂತ್ರವನ್ನು ಹೇಳಿ ಮುಂದೆ ಹೇಳುವ ಆದೇಶಗಳೆಲ್ಲ ಶಿತ್-ಆದೇಶಗಳು ( ಎಂದರೆ ಸರ್ವಾದೇಶಗಳು ) ಎಂದು ಪ್ರತಿಪಾದಿಸುವವನಾಗಿ ಈ ಮುಂದಿನ ಸೂತ್ರವನ್ನು ರಚಿಸುತ್ತಾನೆ.

**ಸೂತ್ರಂ ॥ ಶಿತ್ ॥ ೩೫೭ ॥**

**ಅರ್ಥ ॥** ಇನ್ನು **ಮುಂದೆ ಹೇಳುವ** ವಿಧೇಯಗಳೆಲ್ಲ '**ಶಿತ್**' **ಎಂದು ತಿಳಿಯಬೇಕು.** ( **ಶಿತ್ — ಶ್ + ಇತ್ — ಶಕಾರವು ಇತ್-ಸಂಜ್ಞಕವಾಗಿ ಉಳ್ಳುವು**).

**ವಿಚಾರ ೩೫೭**

ಇದು ಅಧಿಕಾರ ಸೂತ್ರವು; ಈ ಸೂತ್ರದ ಅರ್ಥಕ್ಕೆ ಸ್ವತಂತ್ರವಾದ ಪ್ರಯೋಜನವಿಲ್ಲ. ಪರಸೂತ್ರಗಳಿಗೆ ಅನ್ವಿತವಾಗಿಯೇ ಇದರ ಅರ್ಥಕ್ಕೆ ಸಾರ್ಥಕತೆಯುಂಟು. ಇಂತಹ ಪರಾರ್ಥಕ ಸೂತ್ರಗಳಿಗೇ ಅಧಿಕಾರಸೂತ್ರಗಳೆಂದು ಹೆಸರು. ಇದು ಅಧಿಕಾರಸೂತ್ರವಾದುದರಿಂದಲೇ ಇದಕ್ಕೆ ಉದಾಹರಣೆಗಳು ಇಲ್ಲ.

**ಅವತಾರಿಕೆ ೩೫೮**

ಹೇಳಬೇಕೆಂದಿರುವ ಸರ್ವಾದೇಶಗಳನ್ನು ಇನ್ನು ಕ್ರಮದಿಂದ ಹೇಳುತ್ತಾನೆ.

**ಸೂತ್ರಂ ॥ ಒರೊಂದೋಃ ॥ ೩೫೮ ॥**

**ಅರ್ಥ ॥** ಉತ್ತರಪದವು ಪರದಲ್ಲಿರುವಾಗ 'ಒಂದು' ಶಬ್ದಕ್ಕೆ '**ಒರ್**' ಎಂಬ **ಆದೇಶ ವಾಗುವುದು; ಅದು** '**ಶಿತ್**' ಎಂದರೆ ] ಸ್ವರಾದೇಶವೆಂದು **ತಿಳಿಯಬೇಕು. ಇದು** ದ್ವಂದ್ವದಲ್ಲಿ **ಬರುವುದಿಲ್ಲ.** ಮ, ವರ್-ಪ್ರತ್ಯಯಗಳಲ್ಲಿ ನಿತ್ಯವಾಗಿ ಬರುವುದು.

**ಉದಾಹರಣೆ ॥** 'ಒತ್ತರಲೆ — ಒಂದು ತಲೆ; ಒಕ್ಕಣ್ಣಂಗೆ — ಒಂದು ಕಣ್ಣಂಗೆ; ಒನುಡಿಯಂ — ಒಂದು ನುಡಿಯಂ; ಒಮ್ಮೆ, ಒರ್ವರ್' ॥ ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೫೮**

ಈ ಸೂತ್ರದಲ್ಲಿ — 'ಒರ್, ಒಂದೋಃ' ಎಂದು ಎರಡು ಪದಗಳಿರುವುವು. 'ಒರ್' ಎಂಬುದೇ ವಿಧೇಯವು. ಇದಕ್ಕೆ ಅಧಿಕೃತವಾದ 'ಶಿತ್' ಎಂಬುದನ್ನು ವಿಶೇಷಣ ಮಾಡುವುದು. ಈ 'ಶಿತ್' ಎಂಬುದು ಪೂರ್ವೋಕ್ತ ನ್ಯಾಯದಿಂದ ಸರ್ವತ್ರಾಗುವುದೆಂದರ್ಥವನ್ನು ಬೋಧಿಸುವುದು. 'ಒಂದೋಃ' ಸ್ಥಾನಷಷ್ಠ್ಯಂತಪದವು. 'ಒರಾನೆ, ಒರೆಲೆ, ಒರಾಳ್' ಮೊದಲಾದ ಸ್ವರಾದ್ಯುತ್ತರಪದಕ ಪ್ರಯೋಗಗಳನೇಕವಿರುವುದರಿಂದ ಇಲ್ಲಿ 'ವ್ಯಂಜನೇ' ಎಂಬುದನ್ನನುವರ್ತಿಸದೆ 'ಉತ್ತರಪದೇ' ಎಂಬುದು ಮಾತ್ರ ಅನುವರ್ತಿಸಲ್ಪಡುವುದು 'ಅದ್ವಂದ್ವೇ, ಮವರಿ' ಎಂಬುದು ಅಧಿಕೃತವಾಗುವುದು. ತಥಾಚ —'ಒಂದು' ಎಂಬುದಕ್ಕೆ ಉತ್ತರಪದವು ಪರವಾದಾಗ ವಿಕಲ್ಪವಾಗಿ 'ಒರ್' ಎಂಬುದು ಸ್ವರಾದೇಶವಾಗುವುದು. ಇದು ದ್ವಂದ್ವದಲ್ಲಿಲ್ಲ. 'ಮ, ವರ್' ಎಂಬಲ್ಲಿ 'ನಿತ್ಯವು' ಎಂದು ಸೂತ್ರಾರ್ಥವಾಗಲು 'ಒರ್ತಲೆ' ಮೊದಲಾದುವು ಸಿದ್ಧಿಸುವುವು.

**ಪಾಠಾಂತರ ೧: ಒರಾನೆ, ಒರೆಲೆ, ಒರಾಳ್.**

ಈ ಸೂತ್ರ ವಿಷಯದಲ್ಲಿಯೂ ಮುಂದಿನ ಸೂತ್ರವಿಷಯದಲ್ಲಿಯೂ **ದರ್ಪಣಕಾರನು—**

ದೊರೆಕೊಳ್ವುದಖಿಳಪ್ಪೆಯಾ
ಕರಣರಿನೊಂದೆಂಬುದಕ್ಕೊರೆಂಬಾದೇಶಂ
ಎರಡಕ್ಕಮಿರಾದೇಶಂ
ದೊರೆಕೊಳ್ಗುಮದಲ್ಲಸಂದುಕಾರಾಭಾವಂ (ಸೂತ್ರ ೧೮೭)

ಎಂಬ ಸೂತ್ರವನ್ನು ಮಾಡಿರುವನು.

**ಅವತಾರಿಕೆ ೩೫೯**

'ಒಂದು' ಶಬ್ದಕ್ಕೆ ಆದೇಶವನ್ನು ವಿಧಿಸಿ 'ಎರಡು' ಶಬ್ದಕ್ಕೆ ವಿಧಿಸುತ್ತಾನೆ.

**ಸೂತ್ರಂ || ಎರಡೋರಿರ್ || ೩೫೯ ||**

**ಅರ್ಥ || 'ಎರಡು' ಎಂಬುದಕ್ಕೆ ಉತ್ತರಪದವು ಪರದಲ್ಲಿರುವಾಗ 'ಇರ್' ಎಂಬ ಆದೇಶವು ವಿಕಲ್ಪವಾಗಿ ಬರುವುದು. ಅದು ಶಿದ್ವತ್ತಾಗುವುದು. ದ್ವಂದ್ವದಲ್ಲಿಲ್ಲ. 'ಮ, ವರ್' ಗಳಲ್ಲಿ ನಿತ್ಯವು.**

**ಉದಾಹರಣೆ ||** 'ಇರ್ಬ್ಬಾಳ್—ಎರಬ್ಬಾಳ್; ಇರ್ತ್ತಲೆ—ಎರಲ್ತಲೆ; ಇರ್ಮ್ಮ, ಇರ್ವ್ವರ್' || ಮೊದಲಾದುವು ಇದಕ್ಕೆ ಉದಾಹರಣೆಗಳು.

**ವಿಚಾರ ೩೫೯**

ಈ ಸೂತ್ರದಲ್ಲಿ — 'ಎರಡೋಃ, ಇರ್' ಎಂದು ಎರಡು ಪದಗಳಿರುವುವು. ಪೂರ್ವದಂತೆಯೇ ಶಿದಾದಿಗಳನುವರ್ತಿಸುವುವು. ತಥಾಚ — ಎರಡಕ್ಕೆ ಉತ್ತರಪದದಲ್ಲಿ 'ಇರ್' ಎಂಬುದು ವಿಕಲ್ಪವಾಗಿ ಬರುವುದು; ದ್ವಂದ್ವದಲ್ಲಿಲ್ಲ: 'ಮ, ವರ್' ಗಳಲ್ಲಿ ನಿತ್ಯವು—ಎಂದು ಸೂತ್ರಾರ್ಥವಾಗಲು 'ಇರ್ಬ್ಬಾಳ್' ಮೊದಲಾದುವು ಸಿದ್ಧಿಸುವುವು. ಇಲ್ಲಿ ಉದಾಹರಿಸಿರುವ 'ಇರ್ತ್ತಲೆ, ಎರಲ್ತಲೆ' ಎಂಬಲ್ಲಿ — 'ನಾದಿಷ್ವಾದ್ರಲಃ || ೯೦ ||' ಎಂಬ ಸೂತ್ರದಿಂದ ತೃತೀಯ ವರ್ಣಾದೇಶವು ಬರುವುದಿಲ್ಲವೆಂದು ತಿಳಿಯಬೇಕು.

**ಅವತಾರಿಕೆ ೩೬೦**

ಹೀಗೆ 'ಎರಡು' ಶಬ್ದಕ್ಕೆ ಹೇಳಿ 'ಮೂಱು' ಶಬ್ದಕ್ಕೆ ಬರುವ ಆದೇಶವನ್ನು ವಿಧಿಸುತ್ತಾನೆ.

**ಸೂತ್ರಂ || ಸ್ವರೇ ಮುಯ್ ಮೂಱೋಃ || ೩೬೦ ||**

**ಅರ್ಥ || ಸ್ವರಾದ್ಯುತ್ತರಪದವು ಪರದಲ್ಲಿರಲು 'ಮೂಱು' ಶಬ್ದಕ್ಕೆ 'ಮುಯ್' ಎಂಬುದು ವಿಕಲ್ಪವಾಗಿ ಬರುವುದು. ಅದು ಶಿದ್ವತ್ತಾಗುವುದು. ದ್ವಂದ್ವದಲ್ಲಿಲ್ಲ. 'ಮ, ವರ್' ಗಳಲ್ಲಿ ನಿತ್ಯವು.**

**ಉದಾಹರಣೆ ||** 'ಮುಯ್ಯಾನೆ — ಮೂಱಾನೆ; ಮುಯ್ಯೇಲು — ಮೂಱೇಲು; ಮುಯ್ಮ್ಮ, ಮುಯ್ವ್ವರ್' || ಮೊದಲಾದುವು ಲಕ್ಷ್ಯಗಳು.

**ವಿಚಾರ ೩೬೦**

ಈ ಸೂತ್ರದಲ್ಲಿ —'ಸ್ವರೇ, ಮುಯ್, ಮೂಱೋಃ' ಎಂದು ಮೂರು ಪದಗಳಿರುವುವು. 'ಸ್ವರೇ' ಎಂಬುದು ಅನುವೃತ್ತವಾದ ಉತ್ತರಪದ ವಿಶೇಷಣವು. ಆದುದರಿಂದ ತದಾದಿಬೋಧಕವಾಗುವುದು. 'ಅದ್ವಂದ್ವೇ' ಮೊದಲಾದುವು ಪೂರ್ವದಂತೆ ಸಂಬಂಧಿಸಲ್ಪಡುವುದು. ತಥಾಚ—

ಸ್ವರಾದ್ಯುತ್ತರಪದದಲ್ಲಿ ಮೂಱೆಂಬುವಕ್ಕೆ ' ಮುಯ್ ' ಎಂಬುದು ವಿಕಲ್ಪವಾಗಿ ಸರ್ವಾದೇಶ ವಾಗುವುದು; ದ್ವಂದ್ವದಲ್ಲಿಲ್ಲ; ' ಮೆ, ವರ್ ' ಗಳಲ್ಲಿ ನಿತ್ಯವು — ಎಂದು ಸೂತ್ರಾರ್ಥವಾಗಲು ' ಮುಯ್ಯಾನೆ ' ಮೊದಲಾದುವು ಸಿದ್ಧಿಸುವುವು.

ಇಲ್ಲಿ ' ಸ್ವರೇ ' ಎಂದು ಹೇಳಿರುವುದರಿಂದ ' ಮುತ್ತಲೆ, ಮೂಱುತಲೆ ' ಮೊದಲಾದ ವ್ಯಂಜನಾದ್ಯುತ್ತರಪದಗಳಲ್ಲಿ ಈ ಆದೇಶವು ಬಾರದೆ ಪೂರ್ವಸೂತ್ರದಿಂದ ವೈಕಲ್ಪಿಕ ದು-ಲೋಪವೂ ಹ್ರಸ್ವವೂ ಬಂದಿರುವುವೆಂದು ತಿಳಿಯಬೇಕು.

ಇಲ್ಲಿ **ದರ್ಪಣಕಾರನು** —

ಚರಮುಕ್ತದರ್ಶನಂ ಮೂ.
ಱೆರೆ ಬರೆ ಕಪವರ್ಗಮುಗ್ರದೊಳ್ ದ್ವಿರ್ಭಾವಂ
ಪಿರಿದುಂ ಹ್ರಸ್ವಂ ಮೊದಲೊಳ್
ಸ್ವರಮಿದಿರಿರೆ ಮೂಱರಲ್ಲಿ ಮುಯ್ಯಾದೇಶಂ ( ಸೂತ್ರ ೧೮೮ )

ಎಂಬ ಸೂತ್ರವನ್ನು ಹೇಳಿರುವನು.

**ಅವತಾರಿಕೆ ೩೬೧**

ಇನ್ನು ' ಒಮ್ಬತ್ತು ' ಶಬ್ದಕ್ಕೆ ಬರುವ ಆದೇಶವನ್ನು ವಿಧಿಸುತ್ತಾನೆ.

**ಸೂತ್ರಂ || ಒಂಬತ್ತೋಸ್ತೊವ್ ಪತ್ತೌ || ೩೬೧ ||**

**ಅರ್ಥ ||** ' ಒಂಬತ್ತು ' ಎಂಬುದಕ್ಕೆ ' ಪತ್ತು ' ಶಬ್ದವು ಪರವಾಗಲು ವಿಕಲ್ಪವಾಗಿ ' **ತೊವ್** ' ಎಂಬ ಆದೇಶವು ಬರುವುದು. ಇದು ಶಿದ್ವತ್ತಾಗುವುದು. ದ್ವಂದ್ವದಲ್ಲಿ ಬರುವುದಿಲ್ಲ. ' ಮೆ, ವರ್ ' ಗಳಲ್ಲಿ ನಿತ್ಯವು.

**ಉದಾಹರಣೆ ||** ' ತೊಂಬತ್ತು — ಒಂಬತ್ತುಪತ್ತು; ತೊಂಮೆ, ತೊಂಬರ್ ' || ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೬೧**

ಈ ಸೂತ್ರದಲ್ಲಿ — ' ಒಂಬತ್ತೋಃ, ತೊವ್, ಪತ್ತೌ ' ಎಂದು ಮೂರು ಪದಗಳಿರುವುವು. ಪೂರ್ವದಂತೆ ಇತರ ಪದಗಳನ್ನು ಅನುವರ್ತಿಸಿ ಯಥಾಯೋಗ್ಯವಾಗಿ ಸಂಬಂಧಿಸಿ ಸೂತ್ರಾರ್ಥವನ್ನು ತಿಳಿಯುವುದು.

ಇಲ್ಲಿ ' ಪತ್ತೌ ' ಎಂದು ನಿಮಿತ್ತವನ್ನು ಸಾಕ್ಷಾತ್ತಾಗಿ ಹೇಳಿರುವುದರಿಂದ ' ಒಂಬತ್ತು, ನಾಲ್ಕು ' ಮೊದಲಾದ ಪ್ರಯೋಗಗಳಲ್ಲ ಬರುವುದಿಲ್ಲವೆಂದು ತಿಳಿಯಬೇಕು.

**ಅವತಾರಿಕೆ ೩೬೨**

ಹೀಗೆಯೇ ಶಬ್ದಾಂತರವು ಪರದಲ್ಲಿರಲು ಆದೇಶಾಂತರವನ್ನು ವಿಧಿಸುತ್ತಾನೆ.

**ಸೂತ್ರಂ || ಒಂಬಯ್ ನೂಱುಸಾಸಿರೇ || ೩೬೨ ||**

**ಅರ್ಥ || ' ಒಂಬತ್ತು ' ಎಂಬುದಕ್ಕೆ ' ನೂಱು, ಸಾಸಿರ ' ಶಬ್ದಗಳು ಪರವಾಗಿರಲು ವಿಕಲ್ಪವಾಗಿ ' ಒಂಬಯ್ ' ಎಂಬ ಆದೇಶವಾಗುವುದು. ಇದು ಶಿದ್ವತ್ತಾಗುವುದು; ದ್ವಂದ್ವದಲ್ಲಿ ಬರುವುದಿಲ್ಲ; ' ಮೆ, ವರ್ ' ಗಳಲ್ಲಿ ನಿತ್ಯವಾಗಿ ಬರುವುದು.**

**ಉದಾಹರಣೆ** || ಒಂಬಯ್ನೂಱು — ಒಂಬತ್ತುನೂಱು; ಒಂಬಯ್ಸಾಸಿರಂ — ಒಂಬತ್ತು ಸಾಸಿರಂ; ಒಂಬಯ್ಮೆ, ಒಂಬಯ್ವರ್ || ಮೊದಲಾದುವು ಇವಕ್ಕೆ ಲಕ್ಷ್ಯಗಳು.

**ವಿಚಾರ ೩೬೨**

ಈ ಸೂತ್ರದಲ್ಲಿ — ' ಒಂಬಯ್, ನೂಱುಸಾಸಿರೇ ' ಎಂದು ಎರಡು ಪದಗಳಿರುವುವು. ಪೂರ್ವದಂತೆಯೇ ಅನುವೃತ್ತ್ಯಾದಿಗಳನ್ನು ಮಾಡಿ ' ನೂಱುಸಾಸಿರ ' ಶಬ್ದಗಳು ಪರದಲ್ಲಿದ್ದರೆ ಒಂಬತ್ತಕ್ಕೆ ' ಒಂಬಯ್ ' ಎಂದು ವಿಕಲ್ಪವಾಗಿ ಸರ್ವಾದೇಶವಾಗುವುದೆಂದೂ ದ್ವಂದ್ವದಲ್ಲಿಲ್ಲವೆಂದೂ 'ಮೆ, ವರ್'ಗಳಲ್ಲಿ ನಿತ್ಯವೆಂದೂ ಸೂತ್ರಾರ್ಥವಾಗಲು 'ಒಂಬಯ್ನೂಱು' ಮೊದಲಾದುವು ಸಿದ್ಧಿಸುವುವು.

ಇಲ್ಲಿ ' ನೂಱುಸಾಸಿರೇ ' ಎಂದು ನಿಮಿತ್ತವಿಶೇಷವನ್ನು ಹೇಳಿರುವುದರಿಂದ ' ಒಂಬತ್ತು ಲಕ್ಕಂ ' ಮೊದಲಾದ ಪ್ರಯೋಗಗಳಲ್ಲಿ ಬರುವುದಿಲ್ಲವೆಂದು ತಿಳಿಯಬೇಕು. ಮತ್ತು ಇಲ್ಲಿ ಕೆಲವರು ' ಒಂಬಯ್ ' ಎಂಬ ಸ್ಥಾನದಲ್ಲಿ ' ಒಂಬೈ ' ಎಂದು ನಿರ್ದೇಶಿಸಿ ಐ ಕಾರಾಂತಾದೇಶವು ಬರುವುದೆಂದು ವ್ಯಾಖ್ಯಾನ ಮಾಡುವರು.

ಇಲ್ಲಿ **ದರ್ಪಣಕಾರನು** ಇದೇ ಅರ್ಥವನ್ನು ಸಂಗ್ರಹಿಸಿ —

ಪತ್ತು ಪರಮಾಗಲೊಡಮೊಂ
ಬತ್ತು ತೊಮಿಂದಕ್ಕುಮುಗ್ರದೊಳ್ ನೂಱಿರೆ ಮೇಣ್
ಮತ್ತಂ ಸಾಸಿರಮಿರೆ ನೆಲ
ಸಿತ್ತೊಂಬಯ್ಯೆಂದು ವಿಬುಧರಿಂದಾದೇಶಂ (ಸೂತ್ರ ೧೯೦)

ಎಂಬ ಸೂತ್ರವನ್ನು ಬರೆದಿರುವನು. **ಶಾಸನಕಾರನು** ಹೇಳಿರುವ ಐ ಕಾರಾಂ**ತತ್ವ**ವನ್ನಾದರೋ ಪ್ರಯೋಗಬಲದಿಂದಲೂ ಊಹಿಸಿಕೊಳ್ಳುವುದು.

**ಅವತಾರಿಕೆ ೩೬೩**

ಹೀಗೆಯೇ ' ಪತ್ತು ' ಶಬ್ದಕ್ಕೂ ಆದೇಶಾಂತರವನ್ನು ವಿಧಿಸುತ್ತಾನೆ.

**ಸೂತ್ರಂ || ಪಯಿನ್ ಪತ್ತೋಃ || ೩೬೩ ||**

**ಅರ್ಥ** || ' **ಪತ್ತು**' **ಶಬ್ದಕ್ಕೆ 'ನೂಱು, ಸಾಸಿರ'ಗಳು ಪರದಲ್ಲಿರಲು 'ಪಯಿನ್' ಎಂಬಾದೇಶವು ವಿಕಲ್ಪವಾಗುವುದು. ಅದು ಶಿದ್ವತ್ತಾಗುವುದು; ದ್ವಂದ್ವದಲ್ಲಿಲ್ಲ; ' ಮೆ, ವರ್ ' ಗಳಲ್ಲಿ ನಿತ್ಯವು.**

**ಉದಾಹರಣೆ** || 'ಪಯಿನ್ನೂಱು — ಪತ್ತುನೂಱು; ಪಯಿನ್ಸಾಸಿರಂ — ಪತ್ತುಸಾಸಿರಂ; ಪಯಿಂಮೆ, ಪಯಿಂಬರ್ ' || ಮೊದಲಾದುವು ಇವಕ್ಕೆ ಲಕ್ಷ್ಯಗಳು.

**ವಿಚಾರ ೩೬೩**

ಈ ಸೂತ್ರದಲ್ಲಿ — ' ಪಯಿನ್, ಪತ್ತೋಃ ' ಎಂದು ಎರಡು ಪದಗಳಿರುವುವು. ಪೂರ್ವದಂತೆ ಅನುವರ್ತಿಸಿ ಸಂಬಂಧಗಳನ್ನು ಮಾಡಿಕೊಳ್ಳುವುದು. ತಥಾಚ — ಪತ್ತೆಂಬುದಕ್ಕೆ ನೂಱು ಸಾಸಿರಗಳು ಪರದಲ್ಲಿರಲು ' ಪಯಿನ್ ' ಎಂಬುದು ವಿಕಲ್ಪವಾಗಿ ಸರ್ವಾದೇಶವಾಗುವುದು; ದ್ವಂದ್ವದಲ್ಲಿಲ್ಲ. 'ಮೆ, ವರ್'ಗಳಲ್ಲಿ ನಿತ್ಯವು—ಎಂದು ಸೂತ್ರಾರ್ಥವಾಗಲು 'ಪಯಿನ್ನೂಱು' ಮೊದಲಾದುವು ಸಿದ್ಧಿಸುವುವು. ಇಲ್ಲಿ 'ನೂಱುಸಾಸಿರೇ' ಎಂದು ಸಂಬಂಧಿಸಿರುವುದರಿಂದ 'ಪತ್ತು, ಲಕ್ಕಂ' ಮೊದಲಾದುವುಗಳಲ್ಲಿ ಈ ಆದೇಶವಿಲ್ಲವೆಂದು ತಿಳಿಯಬೇಕು.

**ದರ್ಪಣಕಾರನು** ಇದೇ ಅರ್ಥವನ್ನು ಕೊಡುವಂತೆ —

ಪತ್ತರ್ಕೆ ಪಯಿಂನೆಂದಾ
ದತ್ತಾದೇಶಂ ಸಮಂತು ಸಾಸಿರಮಿದಿರೊಳ್
ಪತ್ತುಗೆಗೊಳೆ ಸೂಳ್ಕರಂ
ಮತ್ತಂ ಸಾಸಿರಕಮಂತ್ಯಲೋಪಂ ವಿರಳಂ (ಸೂತ್ರ ೧೯೧)

ಎಂಬ ಸೂತ್ರವನ್ನು ಮಾಡಿರುವನು.

**ಅವತಾರಿಕೆ ೩೬೪**

ಹೀಗೆಯೇ ' ಪತ್ತು ' ಶಬ್ದಕ್ಕೆ ನಿಮಿತ್ತವಿಶೇಷದಲ್ಲಿ ಆದೇಶಾಂತರವನ್ನು ವಿಧಿಸುತ್ತಾನೆ.

**ಸೂತ್ರಂ || ಪನ್ನೊಂದೌ || ೩೬೪ ||**

**ಅರ್ಥ ||** ' ಪತ್ತು ' ಶಬ್ದಕ್ಕೆ ಒಂದು ಶಬ್ದವು ಪರವಾಗಲು ' ಪನ್ ' ಎಂಬ ಆದೇಶವು ಬರುವುದು. ಅದು ಶಿದ್ವತ್ತಾಗುವುದು. ಇದು ದ್ವಂದ್ವದಲ್ಲಿ ಬರುವುದಿಲ್ಲ.

**ಉದಾಹರಣೆ ||** ' ಪನ್ನೊಂದು ' ಎಂಬುದು ಇದಕ್ಕೆ ಲಕ್ಷ್ಯವು.

**ವಿಚಾರ ೩೬೪**

ಈ ಸೂತ್ರದಲ್ಲಿ— ' ಪನ್, ಒಂದೌ ' ಎಂಬ ಎರಡು ಪದಗಳಿರುವುವು. ಇಲ್ಲಿ ವ್ಯಾಖ್ಯಾನ ದಿಂದ ' ನಿತ್ಯಂ ಮೆವರಿ ' ಎಂಬುದು ಅನುವರ್ತಿಸಲ್ಪಡುವುದಿಲ್ಲ. ' ಪತ್ತೋಃ, ಶಿತ್, ಅದ್ವಂದ್ವೇ ' ಎಂಬುದು ಮಾತ್ರ ಸಂಬಂಧಿಸಲ್ಪಡುವುದು. ತಥಾಹಿ — 'ಪತ್ತು' ಎಂಬುದಕ್ಕೆ 'ಒಂದು' ಶಬ್ದವು ಪರದಲ್ಲಿರಲು ' ಪನ್ ' ಎಂಬುದು ಸ್ಥಾನಾದೇಶವಾಗುವುದು. ಇದು ದ್ವಂದ್ವದಲ್ಲಿ ಬರುವುದಿಲ್ಲವೆಂದು ಸೂತ್ರಾರ್ಥವಾಗಲು ' ಪನ್ನೊಂದು ' ಎಂಬ ಪ್ರಯೋಗವು ಸಿದ್ಧಿಸುವುದು. ಈ ಸೂತ್ರಕ್ಕೆ ಇದೊಂದೇ ಉದಾಹರಣೆಯು. ಇಲ್ಲಿ ' ಒಂದೌ ' ಎಂದು ನಿಮಿತ್ತವನ್ನು ಹೇಳಿರುವುದರಿಂದ ' ಪತ್ತೊಂಬತ್ತು ' ಮೊದಲಾದುವುಗಳಲ್ಲಿ ಬರುವುದಿಲ್ಲವೆಂದು ತಿಳಿಯುವುದು.

ಪೂರ್ವದಲ್ಲಿ 'ನಿತ್ಯಂ ಮೆವರಿ' ಎಂಬುದನ್ನು ಸಂಬಂಧಿಸಿ 'ಮ, ವರ್'ಗಳಲ್ಲಿ ನಿತ್ಯವೆಂದು ಹೇಳಿದ್ದರಿಂದ ಅನ್ಯತ್ರ ವಿಕಲ್ಪವೆಂದು ಸಿದ್ಧವಾಗುವುದು. ಇಲ್ಲಿ ಅದಕ್ಕೆ ಅನುವೃತ್ತಿಯಿಲ್ಲವೆಂದು ಹೇಳಿರುವುದರಿಂದ ವಿಕಲ್ಪಬೋಧಕಪದವಿಲ್ಲದಿರುವುದರಿಂದ ಅರ್ಥಿಕವಾಗಿ ಇದು ನಿತ್ಯವೆಂದು ತೋರುವುದು. ಆದುದರಿಂದ ' ಪನ್ನೊಂದು ' ಎಂದೊಂದೇ ಉದಾಹರಣೆಯಾಗಿರುವುದು.

**ಅವತಾರಿಕೆ ೩೬೫**

ಹೀಗೆಯೇ ನಿಮಿತ್ತಾಂತರವಿದ್ದರೂ ಪನ್ನಾದೇಶವನ್ನು ವಿಧಿಸುತ್ತಾನೆ.

**ಸೂತ್ರಂ || ಎರಡೌ || ೩೬೫ ||**

**ಅರ್ಥ ||** ' ಪತ್ತು ' ಶಬ್ದಕ್ಕೆ ' ಎರಡು ' ಶಬ್ದವು ಪರದಲ್ಲಿರಲು ' ಪನ್ ' ಎಂಬಾದೇಶವು ಬರುವುದು. ಇದು ಶಿದ್ವತ್ತಾಗುವುದು.

**ಉದಾಹರಣೆ ||** ' ಪನ್ನೆರಡು ' ಎಂಬುದೊಂದೇ ಇದಕ್ಕೆ ಲಕ್ಷ್ಯವು. ಇದನ್ನೂ ಪೂರ್ವ ಸೂತ್ರದಲ್ಲಿಯೆ ಪಾಠ ಮಾಡಲು ಸಿದ್ಧಿಸುತ್ತಿರಲು ಬೇರೆ ಸೂತ್ರವನ್ನು ಮಾಡಿರುವುದು ಉತ್ತರ ಸೂತ್ರದಲ್ಲಿ ' ಎರಡೌ ' ಎಂಬುದೊಂದಕ್ಕೇ ಅನುವೃತ್ತಿ ಬರುವುದಕ್ಕೆಂದು ತಿಳಿಯುವುದು.

ಆದುದರಿಂದ ವಕ್ಷ್ಯಮಾಣಸೂತ್ರ ವಿಹಿತಕಾರ್ಯವು 'ಒಂದು' ಶಬ್ದವು ಪರದಲ್ಲಿರಲು ಬರುವುದಿಲ್ಲ.

**ಅವತಾರಿಕೆ ೩೬೬**

ಹೀಗೆಯೇ ನಿಮಿತ್ತಾಂತರದಲ್ಲಿ ಆದೇಶಾಂತರವನ್ನು ವಿಧಿಸುತ್ತಾನೆ.

**ಸೂತ್ರಂ || ಪದಿಮೂರ್ಱಾದಿಷಟ್ಕೇ || ೩೬೬ ||**

**ಅರ್ಥ || 'ಪತ್ತು' ಶಬ್ದಕ್ಕೆ 'ಮೂಱು' ಮೊದಲಾದ ಆರು ಶಬ್ದಗಳು ಎಂದರೆ ಎಂಟರ ವರೆಗೆ ಇರುವ ಸಂಖ್ಯಾವಾಚಕ ಶಬ್ದಗಳು ಪರದಲ್ಲಿರಲು 'ಪದಿ' ಎಂಬಾದೇಶವು ಬರುವುದು. ಅದು ಶಿದ್ವತ್ತಾಗುವುದು.**

**ಉದಾಹರಣೆ** || 'ಪದಿಮೂಱು, ಪದಿನಾಲ್ಕು, ಪದಿನಯ್ದು ಪದಿನಾಱು, ಪದಿನೇೞು, ಪದಿನೆಂಟು' || ಎಂಬಿವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೬೬**

ಈ ಸೂತ್ರದಲ್ಲಿ — 'ಪದಿಃ, ಮೂಱಾದಿಷಟ್ಕೇ' ಎಂದು ಎರಡು ಪದಗಳಿರುವುವು. 'ಪದಿಃ' ಎಂಬುದೇ ಇಲ್ಲಿ ವಿಧೇಯವು. ಅನುವೃತ್ತವಾದ 'ಪತ್ತು' ಎಂಬುದೇ ಉದ್ದೇಶ್ಯವು. 'ಮೂಱಾದಿಷಟ್ಕೇ' — ಎಂಬುದು ನಿಮಿತ್ತವು. ಇದು — '**ಮೂಱು ಆದಿಃ ಯೆಷಾಂ ತಾನಿ ತೇಷಾಂ ಮೂಱಾದಿನಾಂ ಷಟ್ ಪ್ರಮಾಣಂ ಅಸ್ಯ — ಷಟ್ಕಂ ತಸ್ಮಿನ್**' ಎಂಬ ವಿಗ್ರಹದಿಂದ 'ಮೂಱು' ಮೊದಲಾದ ಆರು ಸಂಖ್ಯಾವಾಚಕ ಶಬ್ದಬೋಧಕವಾಗುವುದು. ಅದು ಭಾಷೆಯಲ್ಲಿ ಪ್ರಸಿದ್ಧವಾದ 'ಮೂಱು, ನಾಲ್ಕು, ಅಯ್ದು, ಆಱು, ಏೞು, ಎಂಟು' ಎಂಬ ಶಬ್ದಗಳೆಂದು ತಿಳಿಯಬೇಕು. 'ಶಿತ್' ಎಂಬುದಕ್ಕೆ ಅಧಿಕಾರವಿರುವುದರಿಂದ ಸರ್ವಾದೇಶವೆಂದು ತಿಳಿಯುವುದು. ತಥಾಚ — 'ಪತ್ತು'ಕ್ಕೆ 'ಮೂರು' ಮೊದಲಾದುವು ಪರದಲ್ಲಿರುವಾಗ 'ಪದಿ' ಎಂಬುದು ಸರ್ವಾದೇಶವಾಗಿ ಬರುವುದೆಂದು ಸೂತ್ರಾರ್ಥವಾಗಲು 'ಪದಿಮೂಱು' ಮೊದಲಾದುವು ಸಿದ್ಧಿಸುವುವು.

ಇಲ್ಲಿ 'ಮೂಱಾದಿಷಟ್ಕೇ' ಎಂದು ನಿಮಿತ್ತವಿಶೇಷವನ್ನು ನಿರ್ದೇಶಿಸಿರುವುದರಿಂದ 'ಪತ್ತೊಂಬತ್ತು' ಮೊದಲಾದ ಪ್ರಯೋಗಗಳಲ್ಲಿ ಬರುವುದಿಲ್ಲವೆಂದು ತಿಳಿಯಬೇಕು.

**ಅವತಾರಿಕೆ ೩೬೭**

ಹೀಗೆ 'ಪತ್ತು' ಶಬ್ದಕ್ಕೆ ಕೆಲವು ನಿಮಿತ್ತಗಳಿರುವಾಗ ಕೆಲವಾದೇಶಗಳನ್ನು ವಿಧಿಸಿ ಅವುಗಳಲ್ಲಿ 'ಪದಿ' ಎಂಬುದಕ್ಕೆ ಸ್ವರಾದ್ಯುತ್ತರಪದ ನಿಮಿತ್ತವಾಗಿ ನಕಾರಾಗಮವನ್ನು ವಿಧಿಸುತ್ತಾನೆ.

**ಸೂತ್ರಂ || ಪದೇರ್ನಕ್ ಸ್ವರೇ || ೩೬೭ ||**

**ಅರ್ಥ || 'ಪದಿ' ಎಂಬುದಕ್ಕೆ ಸ್ವರಾದ್ಯುತ್ತರಪದವು ಪರದಲ್ಲಿರಲು ನಗಾಗಮವು ಬರುವುದು.**

**ಉದಾಹರಣೆ** || 'ಪದಿನಯ್ದು, ಪದಿನಾರು, ಪದಿನೇಳು, ಪದಿನೆಂಟು' || ಇವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೬೭**

ಈ ಸೂತ್ರದಲ್ಲಿ — 'ಪದೇಃ, ನಕ್, ಸ್ವರೇ' ಎಂದು ಮೂಱು ಪದಗಳಿರುವುವು. 'ಪದೇಃ' ಎಂಬುದು ಪೂರ್ವಸೂತ್ರದಲ್ಲಿ ವಿಹಿತವಾದ ಆದೇಶಬೋಧಕವಾದ ಷಷ್ಠ್ಯಂತಪದವು. ಇದೇ ಇಲ್ಲಿ ಉದ್ದೇಶ್ಯವು. 'ನಕ್' ಎಂಬುದು ಕ ಕಾರೇತ್ ಸಂಜ್ಞಕವಾದ ಪ್ರಥಮಾಂತವಾದುದರಿಂದ ಆಗಮರೂಪವಾದ ವಿಧೇಯವು. 'ಸ್ವರೇ' ಎಂಬುದು ನಿಮಿತ್ತಸಪ್ತಮ್ಯಂತವಾದುದರಿಂದ ಅನುವೃತ್ತವಾದ 'ಉತ್ತರಪದೇ' ಎಂಬುದಕ್ಕೆ ವಿಶೇಷಣವಾಗಲು ತದಾದಿಬೋಧಕವಾಗುವುದು. ತಥಾಚ — 'ಪದಿ' ಎಂಬುದಕ್ಕೆ ಪೂರ್ವಸೂತ್ರದಲ್ಲಿ ಉಕ್ತವಾದ ಮೂಱ್ವಾದಿಷಟ್ಕದಲ್ಲಿ ಸ್ವರಾದಿಯಾದ 'ಅಯ್ದು, ಆಱು, ಏೞು, ಎಂಟು' ಎಂಬಿವು ಪರವಾಗಲು ನ ಕಾರಾಗಮವು ಬರುವುದು-ಎಂದು ಸೂತ್ರಾರ್ಥವಾಗಲು 'ಪದಿನಯ್ದು' ಮೊದಲಾದ ಶಬ್ದಗಳು ಸಿದ್ಧಿಸುವುವು.

ಇಲ್ಲಿ 'ಸ್ವರೇ' ಎಂದು ಹೇಳಿರುವುದರಿಂದ 'ಪದಿಮೂಱು, ಪದಿನಾಲ್ಕು' ಎಂಬ ಪ್ರಯೋಗಗಳಲ್ಲಿ ವ್ಯಂಜನಾದ್ಯುತ್ತರಪದವಿರುವುದರಿಂದ ಈ ನ ಕಾರಾಗಮವು ಬರುವುದಿಲ್ಲವೆಂದು ತಿಳಿಯಬೇಕು. ಇದು—'**ವಿಧಿರ್ವಾ ಪ್ರತಿಷೇಧೋ ವಾ ಅನಂತರಸ್ಯ ಭವತಿ**' ಎಂಬ ನ್ಯಾಯದಿಂದ ಪೂರ್ವೋಕ್ತ ವಿಷಯದಲ್ಲಿಯೆ ಪ್ರವರ್ತಿಸುವುದೆಂದು ತಿಳಿಯಬೇಕು.

ಇಲ್ಲಿ **ದರ್ಪಣಕಾರನು** —

ಪತ್ತರ್ಕೆ ಪನ್ನೆನಿಕ್ಕುವು
ದುತ್ತರಕೊಂದೆರಡು ನೆಲಸೆ ಪದಿಯೆಂದಕ್ಕುಂ
ಮತ್ತೊದವಿ ಮೂಱುನಾಲ್ಕಿರೆ
ಸುತ್ತಿಂ ಸ್ವರಮಿರೆ ನ ಕಾರವಿಧಿಮುಂದೆಲ್ಲಂ (ಸೂತ್ರ ೧೯೨)

ಎಂಬ ಸೂತ್ರವನ್ನು ಹೇಳಿರುವನು.

**ಅವತಾರಿಕೆ ೩೬೮**

ಪೂರ್ವದಲ್ಲಿ ಉತ್ತರಪದ ನಿಮಿತ್ತವಾಗಿ ಸಂಖ್ಯಾವಾಚಕಕ್ಕೆ ಬರುವ ಆಗಮಾದೇಶಗಳು ವಿಧಿಸಲ್ಪಟ್ಟುವು. ಈಗ ಕೆಲವು ಇತರ ಶಬ್ದಗಳಿಗೂ ಕಾರ್ಯವಿಶೇಷಗಳನ್ನು ವಿಧಿಸಲು ಪ್ರಾರಂಭಿಸುವನಾಗಿ ಮೊದಲು 'ಕೆಳಗು' ಶಬ್ದಕ್ಕೆ ಬರುವ ಆದೇಶವನ್ನು ಹೇಳುತ್ತಾನೆ.

**ಸೂತ್ರಂ ॥ ಕೆಲಗೋಃ[1] ಕೀೞ್ಕಿನೌ ॥ ೩೬೮ ॥**

**ಅರ್ಥ ॥ 'ಕೆಳಗು' ಶಬ್ದಕ್ಕೆ ಸ್ವರವ್ಯಂಜನಾದಿ ಸಾಧಾರಣವಾಗಿ ಉತ್ತರಪದವು ಪರದಲ್ಲಿರಲು — 'ಕೀೞ್, ಕಿನ್' ಎಂಬೆರಡಾದೇಶಗಳು ಬರುವುವು. ಇವು ಶಿದ್ವತ್ತುಗಳಾಗುವುವು. ಆದುದರಿಂದ ಸರ್ವಾದೇಶಗಳಾಗುವುವು.**

**ಉದಾಹರಣೆ ॥** 'ಕೀೞೆರಿ, ಕೀೞ್ಪೊಟ್ಟೆ; ಕಿನ್ನೆಲಂ, ಕಿನ್ನಿಟ್ಟೆ॥' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೬೮**

ಈ ಸೂತ್ರದಲ್ಲಿ — '**ಕೆಲಗೋಃ,[1] ಕೀೞ್ಕಿನೌ**' ಎಂದು ಎರಡು ಪದಗಳಿರುವುವು. '**ಕೆಳಗೋಃ**' ಎಂಬುದು ಅಂಶವಾಚಕವಾದ **ಷಷ್ಠ್ಯಂತಪದವು. ಇಲ್ಲಿ ಇದೇ ಉದ್ದೇಶ್ಯಪದವು. ಇದು ಅಂಶವಾಚಕವಾದುದರಿಂದ ಅಂಶಿಯೊಡನೆ ಸಮಾಸವನ್ನು ಮಾಡಲು ಇಲ್ಲಿ ವಿಧಿಸುವ**

**ಪಾಠಾಂತರ : ೧ ಕೆಳಗೋಃ**

ಆದೇಶಗಳು ಬರುವುವು. 'ಕೀಲ್ಟಿನೌ' ಎಂಬಿವೇ ಇಲ್ಲಿ ವಿಧೇಯಗಳಾದ ಆದೇಶಗಳು. ಇವು 'ಉತ್ತರಪದೇ' ಎಂಬುದನ್ನು ಮಾತ್ರ ಅನುವರ್ತಿಸಿರುವುದರಿಂದ ಸ್ವರವ್ಯಂಜನಾದಿ ಸಾಧಾರಣ ನಿಮಿತ್ತಕಗಳೆಂದು ತಿಳಿಯುವುದು. ತಥಾಚ — 'ಕೆಱಗು' ಎಂಬುದಕ್ಕೆ ಉತ್ತರಪದವು ಪರದಲ್ಲಿರಲು 'ಕೀಲ್, ಕಿನ್' ಎಂಬಿವು ಸರ್ವಾದೇಶಗಳಾಗುವುವೆಂದು ಸೂತ್ರಾರ್ಥವಾಗಲು 'ಕೀಲ್ಸೇರಿ' ಮೊದಲಾದುವು ಸಿದ್ಧಿಸುವುವು. 'ಕಿನ್ನಿಟ್ಟಿ' ಮೊದಲಾದ ಪ್ರಯೋಗಗಳಲ್ಲಿ ಹ್ರಸ್ವಾದಿತ್ಯಾದಿ ಸೂತ್ರದಿಂದ ದ್ವಿರುಕ್ತಿ ಬಂದಿದೆ — ಎಂದು ತಿಳಿಯಬೇಕು.

**ಅವತಾರಿಕೆ ೩೭೦**

ಹೀಗೆಯೇ ಇನ್ನು ಕೆಲವು ಶಬ್ದಗಳಿಗೆ ಆದೇಶಾಂತರವನ್ನು ವಿಧಿಸುತ್ತಾನೆ.

**ಸೂತ್ರಂ || ಕಿಱಿದು ಬೆಟ್ಟಿತು ಪೆಱಗೋಃ ಕುಱು ಬಿಱು ಪೆಡಂ || ೩೭೦ ||**

**ಅರ್ಥ** || 'ಕಿಱಿದು, ಬೆಟ್ಟಿತು, ಪೆಱಗು' ಎಂಬ ಶಬ್ದಗಳಿಗೆ ಉತ್ತರಪದವು ಪರದಲ್ಲಿರಲು ಕ್ರಮವಾಗಿ 'ಕುಱು, ಬಿಱು, ಪೆಡ' ಎಂಬಾದೇಶಗಳು ಬರುವುವು. ಇವು ಶಿತ್ತುಗಳಾಗುವುವು.

**ಉದಾಹರಣೆ** || 'ಕುಱುಗಡ್ಡಂ, ಕುಱುಗಂಟು, ಕುಱುಮನೆ, ಬಿಱುಗಾಳಿ, ಬಿಱುಸುಗಿ, ಬಿಱುವಜ್ಜೆ, ಪೆಡಗಾಲ್, ಪೆಡಗಯ್, ಪೆಡಪಲೆ ||' ಮೊದಲಾದುವು ಇದಕ್ಕೆ ಲಕ್ಷ್ಯಗಳಾಗುವುವು.

**ವಿಚಾರ ೩೭೦**

ಈ ಸೂತ್ರದಲ್ಲಿ — 'ಕಿಱಿದುಬೆಟ್ಟಿತುಪೆಱಗೋಃ, ಕುಱು, ಬಿಱು, ಪೆಡಂ' ಎಂದು ನಾಲ್ಕು ಪದಗಳಿರುವುವು. ಇಲ್ಲಿ 'ಕಿಱಿದುಬೆಟ್ಟಿತುಪೆಱಗೋಃ' ಎಂಬುದು ಉದ್ದೇಶ್ಯಷಷ್ಠ್ಯಂತ ಪದವು. 'ಕುಱು' ಮೊದಲಾದುವು ವಿಧೇಯಗಳು. ಉದ್ದೇಶ್ಯವಿಧೇಯಗಳೆರಡು ಸಮಸಂಖ್ಯಾಕಗಳಾಗಿರುವುದರಿಂದ ಯಥಾಸಂಖ್ಯಾಪರಿಭಾಷಾನುಸಾರವಾಗಿ ಕ್ರಮಾನ್ವಯವಾಗುವುದು. 'ಉತ್ತರಪದೇ, ಶಿತ್' ಎಂಬುದು ಪೂರ್ವದಂತೆಯೇ ಸಂಬಂಧಿಸಲ್ಪಡುವುದು. ತಥಾಚ — 'ಕಿಱಿದು' ಮೊದಲಾದುವಕ್ಕೆ ಉತ್ತರಪದವು ಪರವಲ್ಲಿರಲು ಕ್ರಮವಾಗಿ 'ಕುಱು' ಮೊದಲಾದುವು ಸರ್ವಾದೇಶಗಳಾಗುವುವು — ಎಂದು ಸೂತ್ರಾರ್ಥವಾಗಲು 'ಕುಱುಗಡ್ಡಂ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು.

ಇಲ್ಲಿ ಸಮಾಸವು ವಕ್ತೃವಿವಕ್ಷಾಧೀನವಾದುದರಿಂದ ಯಥಾಯೋಗ್ಯವಾಗಿ ಸಮಾಸಗಳನ್ನು ಮಾಡಿ ಬಹುವ್ರೀಹಿಸಮಾಸವಿವಕ್ಷೆಯಲ್ಲಿ ಯಥಾಯೋಗ್ಯವಾಗಿ ಸಮಾಸಾಂತಪ್ರತ್ಯಯ ಪ್ರವೃತ್ತಿಯನ್ನೂ ಹೇಳುವುದು. 'ಬಿಱುಗಾಳಿ' ಎಂಬಲ್ಲಿ — 'ಬೆಟ್ಟಿತು ಗಾಳಿ, ಆವುದರೊಳ್, ಅದು' ಎಂದು ಅನ್ಯಪದಾರ್ಥವನ್ನು ದೇಶವನ್ನಾಗಲಿ ಕಾಲವನ್ನಾಗಲಿ ವಿವಕ್ಷಿಸಿ ಬಹುವ್ರೀಹಿಸಮಾಸವನ್ನಂಗೀಕರಿಸಿದಾಗ್ಯೂ ಸಮಾಸಾಂತವಿಧಿಗೆ ಅನಿತ್ಯತ್ವವನ್ನು ಜ್ಞಾಪಿಸಿರುವುದರಿಂದ ಇಲ್ಲಿ ಸಮಾಸಾಂತಪ್ರತ್ಯಯವಿಲ್ಲವೆಂದು ತಿಳಿಯಬೇಕು. 'ಕುಱುಗಡ್ಡಂ' ಎಂಬಲ್ಲಿ —'ಕಿಱಿದು ಗಡ್ಡ ಮಾವಂಗೆ' ಎಂದು ಸಮಾನಾಧಿಕರಣವಾದ ವಿಗ್ರಹವು. 'ಪೆಡಗಾಲಂ' ಮೊದಲಾದುವುಗಳಲ್ಲಿ 'ಕಾಲ ಪೆಱಗು, ಆವಂಗೆ' ಎಂದು ವ್ಯಧಿಕರಣವಾದ ವಿಗ್ರಹವು. ಅಥವಾ 'ಪೆಱಗು ಕಾಲ್, ಆವಂಗೆ' ಎಂದು ಸಮಾನಾಧಿಕರಣವಾಗಿಯೂ ಹೇಳಬಹುದು. ಇದು ಅಂಶಾಂಶಿಗಳಿಗೆ ಔಪಚಾರಿಕವೆಂದು ತಿಳಿಯಬೇಕು.

ಇಲ್ಲಿ **ದರ್ಪಣಕಾರನು** —

ಕಿಱುದರ್ಕಾದೇಶಂ ಕುಱು
ಬಿಱುವೆಂಬುದು ಬೆಟ್ಟತಕ್ಕೆ ಕೊಂಕಿಂಗೆ ಕುಡೆಂ
ವಱಿ ರೇಫೆ ತಳ್ತ ವರ್ಣ
ಕ್ಕೆಱಗಿರ್ಕ್ಕುಂ ದ್ವಿತ್ವವೃತ್ತಿಯುಸಮಾಸದೊಳಂ (ಸೂತ್ರ ೧೮೪)
ಪೆಱವೆಂಬಾದೇಶಂ ಬಂ
ದೆಡೆಗೊಳ್ಗುಂ ಪೆಱಗೆಸಿಪ್ಪ ಶಬ್ದದೊಳದು ತಾಂ
ಪಡೆಗುಂ ಬಿಂದುವನರೆಬರ್
ತಡಗಾಲೆಂಬಂತ ಬಿಂದುವುಮನಾಚರಿಪರ್ (ಸೂತ್ರ ೧೭೩)

ಎಂಬ ಸೂತ್ರಗಳನ್ನು ಹೇಳಿರುವನು.

**ಅವತಾರಿಕೆ ೩೭೦**

ಹೀಗೆಯೇ ಅದ್ವಾದಿಗಳಿಗೆ ಬರುವ ಆದೇಶಗಳನ್ನು ವಿಧಿಸುತ್ತಾನೆ.

**ಸೂತ್ರಂ ॥ ಆದೀದೂದದ್ವಿದೂಮೋಃ ॥ ೩೭೦ ॥**

**ಅರ್ಥ ॥** ' ಅದು, ಇದು, ವುದು ' ಎಂಬ ಶಬ್ದಗಳಿಗೆ **ಉತ್ತರಪದವು ಪರದಲ್ಲಿರಲು ಕ್ರಮವಾಗಿ ' ಆತ್, ಈತ್, ಊತ್ '** ಎಂಬಾದೇಶಗಳು ಬರುವುವು.

**ಉದಾಹರಣೆ ॥** ' ಆನಾಡು, ಆಬೀಡು; ಈಯಾನೆ, ಈಮನೆ; ಊಮಾನಿಸಂ, ಊವಾಳ್ ॥ ' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೭೦**

ಈ ಸೂತ್ರದಲ್ಲಿ — ' ಆತ್, ಈತ್, ಊತ್, ಅದ್ವಿದೂದೋಃ ' ಎಂದು ನಾಲ್ಕು ಪದಗಳಿರುವುವು. ' ಆತ್ ' ಮೊದಲಾದ ಮೂರೂ ವಿಧೇಯಗಳು. ಇವುಗಳಲ್ಲಿ ತ ಕಾರವು ಉಚ್ಚಾರಣಾರ್ಥಕವು. 'ಅದ್ವಿದೂದೋಃ' ಎಂಬುದು 'ಅದು,ಇದು,ಉದು' ಎಂಬಿವಕ್ಕೆ ದ್ವಂದ್ವನಿರ್ದೇಶವು. ಇದು ಷಷ್ಠ್ಯಂತವಾದುದರಿಂದ ಉದ್ದೇಶ್ಯವಾಗಿರುವುದು. ' ಉತ್ತರಪದೇ ' ಎಂಬುದು ಪೂರ್ವದಂತೆ ಸಂಬಂಧಿಸುವುದು. ಇಲ್ಲಿ ಉದ್ದೇಶ್ಯವಿಧೇಯಗಳೆರಡೂ ಸಮಸಂಖ್ಯಾಕವಾದುದರಿಂದ ಯಥಾಸಂಖ್ಯಾನ್ವಯವು ಬರುವುದು. ಈ ಆದೇಶಗಳು ಅದ್ವಾದಿಗಳಿಗೆ ಹೇಳುವುದರಿಂದ ' ಶಿತ್ ' ಎಂಬುದನ್ನು ಹೇಳದಿದ್ದರೂ ಸರ್ವಾದೇಶವಾಗಿ ಬರುವುವು. ತಥಾಚ — ' ಅದು ' ಮೊದಲಾದುವಕ್ಕೆ ಉತ್ತರಪದವು ಪರದಲ್ಲಿರುವಾಗ ಕ್ರಮವಾಗಿ ಆಕಾರಾದ್ಯಾದೇಶಗಳು ಬರುವುವೆಂದು ಸೂತ್ರಾರ್ಥವಾಗಲು ' ಆನಾಡು ' ಮೊದಲಾದುವು ಸಿದ್ಧಿಸುವುವು.

ಇಲ್ಲಿ ಉತ್ತರಪದ ಶಬ್ದವು ಸಮಾಸಚರಮಾವಯವದಲ್ಲಿ ರೂಢವೆಂದು ಪ್ರಾಚೀನರು ಹೇಳಿರುವುದರಿಂದ ಈಯುತ್ತರಪದಸಂಬಂಧವುಳ್ಳ ಸೂತ್ರಗಳಲ್ಲೆಲ್ಲಾ ವಿಧಿಸುವ ಕಾರ್ಯಗಳು ಸಮಾಸವಿಷಯದಲ್ಲಿಯೇ ಪ್ರವರ್ತಿಸುವುವೆಂದು ತೋರುವುದು. ಆದಾಗ್ಯೂ ಕೆಲವರು ಉತ್ತರಪದ ಶಬ್ದವು ಚರಮಾವಯವಮಾತ್ರಪರವು, ಪೂರ್ವಪದಶಬ್ದವು ಪೂರ್ವಾವಯವಮಾತ್ರಪರವೆಂದು ಹೇಳುತ್ತಾರೆಂದು **ಶೇಖರಾದಿಗಳಲ್ಲಿ** ಹೇಳಿರುವುದರಿಂದ ಪ್ರಯೋಗಾನುಸಾರವಾಗಿ ಇಲ್ಲಿ ವಿಧಿಸುವ ಕಾರ್ಯಗಳು ಕ್ವಚಿತ್ ವಾಕ್ಯಗಳಲ್ಲಿಯೂ ಪ್ರವರ್ತಿಸುವುವೆಂದು ತಿಳಿಯಬೇಕು.

ಇಲ್ಲಿ **ದರ್ಪಣಕಾರನು** —

ಅದುವಿದುವುದುಗಾಯೀಯ?
ಮೊದವುಗುವಾದೇಶವಾಗಿ ಗಮಕದೊಳಾಯೆಂ
ಬುದು ಪೂರ್ವಪರಾಮರ್ಶಿಗ
ಮೊದವುಗುಮಾರೂಢಿಗಂ ಕವೀಶ್ವರಮತದಿಂ (ಸೂತ್ರ ೧೬೯)

ಎಂಬ ಸೂತ್ರವನ್ನು ಹೇಳಿರುವನು.

**ಅವತಾರಿಕೆ ೩೭೧**

ಹೀಗೆಯೇ ಎಲ್ಲ ಶಬ್ದ ವೈಕಲ್ಪಿಕವಾದ ಆ ಕಾರಾಗಮವನ್ನು ವಿಧಿಸುತ್ತಾನೆ.

**ಸೂತ್ರಂ ॥ ಆಗೆಲ್ಲಸ್ಯವಾ ॥ ೩೭೧ ॥**

**ಅರ್ಥ ॥ ಎಲ್ಲ ಶಬ್ದಕ್ಕೆ ಉತ್ತರಪದವು ಪರದಲ್ಲಿರಲು ಆಕಾರವು ಅಂತ್ಯಾವಯವವಾಗಿ ಬರುವುದು.**

**ಉದಾಹರಣೆ** ॥ 'ಎಲ್ಲಾ ಧನಂ, ಎಲ್ಲ ಧನಂ; ಎಲ್ಲಾ ಜನಂಗಳ್, ಎಲ್ಲ ಜನಂಗಳ್ ॥' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೭೧**

ಈ ಸೂತ್ರದಲ್ಲಿ — 'ಆಕ್, ಎಲ್ಲಸ್ಯ, ವಾ' ಎಂದು ಮೂರು ಪದಗಳಿರುವುವು. 'ಆಕ್' ಎಂಬುದು ಕಿತ್ತಾದುದರಿಂದ ಆಗಮಬೋಧಕವು. ಪೂರ್ವದಂತೆ ಉತ್ತರಪದಕ್ಕೆ ಸಂಬಂಧವು. ತಥಾಚ — 'ಎಲ್ಲ' ಶಬ್ದಕ್ಕೆ ಉತ್ತರಪದವು ಪರದಲ್ಲಿರಲು ಆ ಕಾರಾಗಮವು ಬರುವುದೆಂಬು ಸೂತ್ರಾರ್ಥವಾಗಲು 'ಎಲ್ಲಾ ಧನಂ' ಮೊದಲಾದುವು ಸಿದ್ಧಿಸುವುವೆಂದು ತಿಳಿಯಬೇಕು.

ಇಲ್ಲಿ 'ಎಲ್ಲ' ಶಬ್ದದ ಅ ಕಾರಕ್ಕೆ ಆ ಕಾರಾಗಮವು ಪರದಲ್ಲಿರುವಾಗ ಲೋಪವು ಬಂದಿರುವು ದೆಂದು ತಿಳಿಯಬೇಕು. **ದರ್ಪಣಕಾರನ** ಮತದಲ್ಲಿ 'ಎಲ್ಲದು' ಎಂಬು 'ದು' ಶಬ್ದಾಂತವಾದುದನ್ನು ಅಂಗೀಕರಿಸಿದ್ದರೂ ಸಮಾಸದಲ್ಲಿ 'ದು' ಎಂಬುದಕ್ಕೆ ಲೋಪವನ್ನು ಮಾಡಿ ಇದರಿಂದ ಆ ಕಾರಾವನ್ನು ಹೇಳುವುದು. ಅವನ ಮತದಲ್ಲಾದರೋ ಇಲ್ಲಿ ಹೇಳಿರುವ ಆಗಮಕ್ಕೆ ಬದಲಾಗಿ ದೀರ್ಘವನ್ನು ವಿಧಿಸಿರುವನು. ಆದರೂ ಫಲದಲ್ಲಿ ಒಂದೇ ಆಗಿರುವುದರಿಂದ ಭೇದವೇನೂ ಇಲ್ಲ.

**ಅವತಾರಿಕೆ ೩೭೨**

ಹೀಗೆಯೇ 'ಕೊಂಕು' ಶಬ್ದಕ್ಕೆ ಬರುವ ಆದೇಶವನ್ನು ವಿಧಿಸುತ್ತಾನೆ.

**ಸೂತ್ರಂ ॥ ಕೊಂಕೋಃ ಕುಡುಃ ॥ ೩೭೨ ॥**

**ಅರ್ಥ** ॥ '**ಕೊಂಕು**' ಎಂಬುದಕ್ಕೆ ಉತ್ತರಪದವು ಪರದಲ್ಲಿರುವಾಗ '**ಕುಡು**' ಎಂಬಾದೇಶವು ವಿಕಲ್ಪವಾಗಿ ಬರುವುದು. ಇದು ಶಿಷ್ಟಪ್ರಯೋಗವು.

**ಉದಾಹರಣೆ** ॥ 'ಕುಡುವಿಲ್ಲಂ, ಕೊಂಕುವಿಲ್ಲಂ; ಕುಡುವುರ್ವು, ಕೊಂಕುವುರ್ವು ॥' ಮೊದಲಾದುವು ಇದಕ್ಕೆ ಲಕ್ಷ್ಯಗಳು.

ಹೇಗೆ ಉಪಪನ್ನವಾಗುವುದು—ಎಂದು ಶಂಕೆಯುಂಟಾಗುವುದು. ಆದಾಗ್ಯೂ ಇಲ್ಲಿ ಮಹತ್-ಶಬ್ದಕ್ಕೆ ಸಮಾಸವನ್ನು ವಿಧಿಸುವುದಿಲ್ಲ. ಮತ್ತೇನೆಂದರೆ ಸಂಸ್ಕೃತದಲ್ಲಿ ಕೃತಸಮಾಸವಾದ 'ಮಹಾದೇವಾದಿ' ಶಬ್ದಗಳನ್ನೇ ಕನ್ನಡಕ್ಕೆ ತೆಗೆದುಕೊಂಡು ಉತ್ತರಪದವು ಪರದಲ್ಲಿರುವಾಗ ಪೂರ್ವಪದಭೂತ ಮಹತ್-ಶಬ್ದವು ಮಾತ್ರಕ್ಕೆ ಆದೇಶವು ಇದರಿಂದ ವಿಧಿಸಲ್ಪಡುವುದು—ಎಂದು ತಿಳಿಯುವುದರಿಂದ ಅಂತಹ ಶಂಕೆಗೆ ಅವಕಾಶವಿಲ್ಲವೆಂದು ಹೇಳಬೇಕು.

ಯದ್ಯಪಿ ಈ ಸೂತ್ರವನ್ನು ತದ್ಭವಪ್ರಕರಣದಲ್ಲಿಯೇ ಹೇಳುವುದು ಉಚಿತವು. ತಥಾಪಿ ಅಲ್ಲಿ ವ್ಯಸ್ತಗಳಿಗೇ ಕಾರ್ಯಗಳನ್ನು ಹೇಳಿರುವುದು. ಇಲ್ಲಿ ಸಮಸ್ತವಾದುದಕ್ಕೆ ಹೇಳುವುದು. ಆದುದರಿಂದ ಇದು ಸಮಾಸಪ್ರಕರಣವೆಂದು ಇಲ್ಲಿ ಹೇಳಲ್ಪಟ್ಟಿದೆಯೆಂದು ತಿಳಿಯಬೇಕು. ಯದ್ಯಪಿ ಪೂರ್ವದಲ್ಲಿ ಕೆಲವು ಸಮಸ್ತಶಬ್ದಗಳೂ ಕರಂಬಾದಿಗಣದಲ್ಲಿ ಹೇಳಲ್ಪಟ್ಟಿವೆ. ಆದಾಗ್ಯೂ ಅವು ಸಮಸ್ತಗಳಾಗಿಯೇ ನಾಮಗಳಾಗಿರುವುವು. ಇವಾದರೋ ಅಂತಹುಗಳಲ್ಲವೆಂದು ತಿಳಿಯಬೇಕು. ಹೀಗೆಯೇ ಮುಂದೆ ಹೇಳುವ ನಾಲ್ಕು ಸೂತ್ರಗಳಲ್ಲಿಯೂ ಇದೇ ಗತಿಯನ್ನು ಕಲ್ಪಿಸಿಕೊಳ್ಳುವುದು.

**ಅವತಾರಿಕೆ ೩೭೪**

ಹೀಗೆಯೇ 'ಸಹ' ಶಬ್ದಕ್ಕೂ ಆದೇಶವನ್ನು ವಿಧಿಸುತ್ತಾನೆ.

**ಸೂತ್ರಂ || ಸಹಸ್ಯ ಸಾ || ೩೭೪ ||**

**ಅರ್ಥ || ವ್ಯಂಜನಾದ್ಯುತ್ತರಪದವು ಪರದಲ್ಲಿರುವಾಗ 'ಸಹ' ಎಂಬುದಕ್ಕೆ 'ಸಾ' ಎಂಬಾದೇಶವು ವಿಕಲ್ಪವಾಗಿ ಬರುವುದು. ಅದು ಶಿತ್ತಾಗಿಯೂ ಆಗುವುದು.**

**ಉದಾಹರಣೆ ||** 'ಸಾದೇವಂ—ಸಹದೇವಂ; ಸಾವಾಸಿ—ಸಹವಾಸಿ ||' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೭೪**

ಈ ಸೂತ್ರದಲ್ಲಿ — 'ಸಹಸ್ಯ, ಸಾ' ಎಂದು ಎರಡು ಪದಗಳಿರುವುವು. ಪೂರ್ವದಂತೆ ಶಿದಾದಿಗಳನ್ನು ಅನುವರ್ತಿಸಿ ಯಥಾಯೋಗ್ಯವಾಗಿ ಸಂಬಂಧಿಸುವುದು. ತಥಾಚ — ವ್ಯಂಜನಾದ್ಯುತ್ತರಪದವು ಪರದಲ್ಲಿರಲು ಸಹಕ್ಕೆ 'ಸಾ' ಎಂಬುದು ಸರ್ವಾದೇಶವಾಗಿಯೂ ವಿಕಲ್ಪವಾಗಿಯೂ ಬರುವುದು-ಎಂದು ಸೂತ್ರಾರ್ಥವಾಗಲು 'ಸಾದೇವಂ' ಮೊದಲಾದುವು ಸಿದ್ಧಿಸುವುವು.

ಇಲ್ಲಿ 'ವ್ಯಂಜನೇ' ಎಂಬುದಕ್ಕೆ ಸಂಬಂಧವನ್ನು ಮಾಡಿರುವುದರಿಂದ 'ಸಹಾರ್ಜುನಂ' ಮೊದಲಾದ ಸ್ವರಾದ್ಯುತ್ತರಪದದಲ್ಲಿ ಬರುವುದಿಲ್ಲವೆಂದು ತಿಳಿಯಬೇಕು. ಇಲ್ಲಿ ಸಹಸ್ಯಸ್ವರೂಪನಿರ್ದೇಶಮಾಡಿರುವುದರಿಂದ 'ಸಪುತ್ರ, ಸಜ್ಜನಕ' ಮೊದಲಾದ ಪ್ರಯೋಗಗಳಲ್ಲಿ ಬರುವುದಿಲ್ಲವೆಂದು ತಿಳಿಯಬೇಕು.

ಇಲ್ಲಿ **ದರ್ಪಣಕಾರನು** ಪೂರ್ವೋಕ್ತ ಸೂತ್ರಾರ್ಥಗಳನ್ನೂ ಸಂಗ್ರಹಿಸಿ —

**ಸಮಸಿಸುವುದೆಲ್ಲ ಶಬ್ದ**
**ಕ್ಕೆ ವಿಕಲ್ಪದೆ ದೀರ್ಘವಿಧಿ ಮಹತ್-ಶಬ್ದಕ್ಕು**
**ದ್ಭವಿಕುಂ ಮಾದೇಶಂ ದೋ**
**ಷವಿಲ್ಲ ಸಂಸ್ಕೃತಪದಂ ಪರಕ್ಕೊದವಲೊಡಂ (ಸೂತ್ರ ೧೭೫)**

ಎಂಬ ಸೂತ್ರವನ್ನು ಹೇಳಿ 'ಸಹ' ಶಬ್ದಕ್ಕೆ ಸಾದೇಶವನ್ನು ತದ್ಭವ ಪ್ರಕರಣದಲ್ಲಿ ಹೇಳಿರುವನು.

**ಅವತಾರಿಕೆ ೩೭೫**

ಇದುವರೆಗೂ ಸಾಮಾನ್ಯವಾಗಿ ಸ್ವರವ್ಯಂಜನಾದ್ಯುತ್ತರಪದಪರಕವಾದ ಪೂರ್ವಪದಕ್ಕೆ ಆದೇಶಾದಿಗಳು ವಿಧಿಸಲ್ಪಟ್ಟಿತು. ಈಗ ಸಂಸ್ಕೃತಾಸಂಸ್ಕೃತ ವ್ಯಂಜನಾದ್ಯುತ್ತರಪದಪರಕ ಪೂರ್ವ ಪದಕ್ಕೆ ಕಾರ್ಯವನ್ನು ವಿಧಿಸಲು ಮೊದಲು 'ಏಕ' ಶಬ್ದಕ್ಕೆ ವಿಧಿಸುತ್ತಾನೆ.

**ಸೂತ್ರಂ || ಎಕ್ಕಂವೇಕಸ್ಯಾಸಂಸ್ಕೃತೇಽಪಿ || ೩೭೫ ||**

**ಅರ್ಥ** || ಸಂಸ್ಕೃತಾಸಂಸ್ಕೃತ ವ್ಯಂಜನಾದ್ಯುತ್ತರಪದವು ಪರದಲ್ಲಿರಲು 'ಏಕ' ಶಬ್ದಕ್ಕೆ 'ಎಕ್ಕ' ಎಂಬಾದೇಶವು ವಿಕಲ್ಪವಾಗಿ ಬರುವುದು. ಅದು ಶಿದ್ವತ್ತಾಗುವುದು.

**ಉದಾಹರಣೆ** || ಎಕ್ಕಸರಂ—ಏಕಸರಂ; ಎಕ್ಕರಾಶಿ—ಏಕರಾಶಿ; ಎಕ್ಕತುಳಂ—ಏಕತುಳಂ ||' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೭೫**

ಈ ಸೂತ್ರದಲ್ಲಿ —'ಎಕ್ಕಂ, ಏಕಸ್ಯ, ಅಸಂಸ್ಕೃತೇ, ಅಪಿ' ಎಂದು ನಾಲ್ಕು ಪದಗಳಿರುವುವು. 'ಎಕ್ಕಂ' ಎಂಬುದು ವಿದೇಶವು. ಇದು ಶಿದ್ವತ್ತಾಗುವುದರಿಂದ ಸರ್ವಾದೇಶವಾಗುವುದು. 'ಏಕಸ್ಯ' ಎಂಬುದು ಸ್ಥಾನಷಷ್ಠ್ಯಂತಪದವು. 'ಅಸಂಸ್ಕೃತೇ' ಎಂಬುದು ನಿಮಿತ್ತಸಪ್ತಮ್ಯಂತವು. ಇದೂ ಸಮುಚ್ಚಯಾರ್ಥಕ 'ಅಪಿ' ಶಬ್ದದಿಂದ ಲಬ್ಧವಾದ 'ಸಂಸ್ಕೃತೇ' ಎಂಬುದೂ ಅನುವೃತ್ತವಾದ ವ್ಯಂಜನಾದ್ಯುತ್ತರಪದಕ್ಕೆ ವಿಶೇಷಣವು. 'ವಾ' ಎಂಬುದೂ ಇಲ್ಲಿ ಸಂಬಂಧಿಸಲ್ಪಡುವುದು. ತಥಾಚ — ಸಂಸ್ಕೃತಾಸಂಸ್ಕೃತ ವ್ಯಂಜನಾದ್ಯುತ್ತರ ಪದವು ಪರದಲ್ಲಿರಲು 'ಏಕ' ಎಂಬುದಕ್ಕೆ 'ಎಕ್ಕ' ಎಂಬುದು ವಿಕಲ್ಪವಾಗಿ ಸರ್ವಾದೇಶ ವಾಗುವುದು-ಎಂದು ಸೂತ್ರಾರ್ಥವಾಗಲು 'ಎಕ್ಕಸರಂ' ಮೊದಲಾದುವು ಸಿದ್ಧಿಸುವುವು.

ಇಲ್ಲಿ 'ವ್ಯಂಜನಾದ್ಯುತ್ತರಪದೇ' ಎಂಬುದನ್ನು ಸಂಬಂಧಿಸಿರುವುದರಿಂದ — 'ಏಕಾಂಗಂ, ಏಕಾವಳಿ' ಮೊದಲಾದ ಸ್ವರಾದ್ಯುತ್ತರಪದವು ಪರದಲ್ಲಿರುವ ಪ್ರಯೋಗಗಳಲ್ಲಿ ಈ ಆದೇಶವು ಬರುವುದಿಲ್ಲವೆಂದು ತಿಳಿಯಬೇಕು.

ಭಾಷೆಯಲ್ಲಿ ಸಂಸ್ಕೃತಾಸಂಸ್ಕೃತಗಳಿಗೆ ಸಮಾಸವು ಬರುದಾವಳ್ಯಾದ್ಯತಿರಿಕ್ತವಿಷಯದಲ್ಲಿ ಇಲ್ಲವೆಂದು ಪೂರ್ವದಲ್ಲಿಯೇ ಹೇಳಿರುವುದರಿಂದ 'ಏಕ' ಎಂಬ ಸಂಸ್ಕೃತ ಶಬ್ದಕ್ಕೆ ಅಸಂಸ್ಕೃತ ಶಬ್ದದೊಡನೆ ಸಮಾಸವೇ ಇಲ್ಲದಿರಲು ಈ ಸೂತ್ರದಲ್ಲಿ 'ಅಸಂಸ್ಕೃತೇ' ಎಂದು ಹೇಳಿರುವುದು ವ್ಯರ್ಥವು ಮತ್ತು ಇದಕ್ಕೆ 'ಎಕ್ಕತುಳಂ' ಎಂದು ಉದಾಹರಣೆಯನ್ನು ಕೊಟ್ಟಿರುವುದೂ ಅಸಂಗತವು — ಎಂದು ಶಂಕೆಯುಂಟಾಗಲು ಸರ್ವಜ್ಞಕಲ್ಪನಾದ **ಸೂತ್ರಕಾರನು** ಸೂತ್ರದಲ್ಲಿ ಹೇಳಿರುವ ಅಸಂಸ್ಕೃತಪದೋಚ್ಚಾರಣಾನ್ಯಥಾನುಪಪತ್ತಿಯಿಂದ ಕ್ವಚಿತ್ 'ಏಕ' ಶಬ್ದಕ್ಕೆ ಅಸಂಸ್ಕೃತದಿಂದಲೂ ಸಮಾಸವುಂಟೆಂದು ಜ್ಞಾಪಿಸಿ ಸಾರ್ಥಕ್ಯವನ್ನು ಕಲ್ಪಿಸಬೇಕು.

**ಅವತಾರಿಕೆ ೩೭೬**

ಹೀಗೆಯೇ 'ತ್ರಿ, ಚತುರ್' ಶಬ್ದಗಳಿಗೂ ಆದೇಶಗಳನ್ನು ವಿಧಿಸುತ್ತಾನೆ.

**ಸೂತ್ರಂ || ತ್ರಿಚತುರೋಸ್ತ್ರಿಚೌವಾ¹ ತದ್ಧಿತೇ ಚ || ೩೭೬ ||**

**ಅರ್ಥ ||** ಸಂಸ್ಕೃತಾಸಂಸ್ಕೃತ ವ್ಯಂಜನಾದ್ಯುತ್ತರಪದವು ಪರದಲ್ಲಿರುವಾಗಲೂ ತದ್ಧಿತ ಪ್ರತ್ಯಯವು ಪರದಲ್ಲಿರುವಾಗಲೂ 'ತ್ರಿ, ಚತುರ್' ಶಬ್ದಗಳಿಗೆ 'ತಿ, ಚೌ' ಎಂಬಾದೇಶಗಳು ಕ್ರಮವಾಗಿ ವಿಕಲ್ಪವಾಗಿ ಬರುವುವು. ಅವು ಶಿದ್ವತ್ತುಗಳಾಗುವುವು.

**ಉದಾಹರಣೆ ||** 'ತಿದಂಡಿ—ತ್ರಿದಂಡಿ; ತಿಗುಂಡಂ—ತ್ರಿಕುಂಡಂ; ತಿಮೊಗಂ—ತ್ರಿಮುಖಂ; ಚೌದಂತಂ—ಚತುರ್ದಂತಂ; ಚೌವಿಧಂ—ಚತುರ್ವಿಧಂ; ಚೌಭಾಗಿ—ಚತುರ್ಭಾಗಿ² || ಮೊದಲಾದುವು ಉತ್ತರಪದವು ಪರದಲ್ಲಿರುವುದಕ್ಕೂ 'ತಿತಯಂ—ತ್ರಿತಯಂ; ಚೌತಯಂ—ಚತುಷ್ಟಯಂ' ಮೊದಲಾದುವು ತದ್ಧಿತಪ್ರತ್ಯಯವು ಪರದಲ್ಲಿರುವುದಕ್ಕೂ ಲಕ್ಷ್ಯಗಳೆಂದು ತಿಳಿಯಬೇಕು.

**ವಿಚಾರ ೩೭೬**

ಈ ಸೂತ್ರದಲ್ಲಿ — 'ತ್ರಿಚತುರೋಃ, ತಿ, ಚೌ, ವಾ, ತದ್ಧಿತೇ, ಚ' ಎಂದು ಆರು ಪದಗಳಿರುವುವು. 'ತ್ರಿಚತುರೋಃ' ಸ್ಥಾನಷಷ್ಠ್ಯಂತಪದವು. 'ತಿ, ಚೌ' ಎಂಬೀ ಎರಡು ವಿಧೇಯಗಳು. ಇಲ್ಲ ಉದ್ದೇಶ್ಯವಿಧೇಯಗಳೆರಡೂ ಸಮಸಂಖ್ಯಾಕಗಳಾದುದರಿಂದ ಯಥಾಸಂಖ್ಯವಾಗಿ ಬರುವುವು. 'ವಾ' ಎಂಬುದು ವಿಕಲ್ಪಾರ್ಥಕವಾಗುವುದು. ಇದು ಇಲ್ಲಿ ಪೂರ್ವದಿಂದಲೇ ಅನುವರ್ತಿಸುತ್ತಿರಲು ವ್ಯರ್ಥವಾಗುವುದು. ಆದಾಗ್ಯೂ ಸ್ಪಷ್ಟಾರ್ಥವಾಗಿ ಮಾಡಲ್ಪಟ್ಟಿದೆ—ಎಂದು ಹೇಳಬೇಕು. ಅಥವಾ ಆದೇಶ ಸಮುಚ್ಚಾಯಕವೆಂದು ಹೇಳಬೇಕು. 'ತದ್ಧಿತೇ' ಎಂಬುದು— 'ತ್ರಿ, ಚತುರ' ಶಬ್ದದ ಮೇಲೆ ಕಾರ್ಣಾಟಕ ತದ್ಧಿತಪ್ರತ್ಯಯವು ಸಂಭವಿಸುವುದಿಲ್ಲವಾದುದರಿಂದ ಸಂಸ್ಕೃತ ತದ್ಧಿತವನ್ನೇ ಬೋಧಿಸುವುದು. ಚ ಕಾರವು ನಿಮಿತ್ತಸಮುಚ್ಚಾಯಕವು. ಅದರಿಂದ 'ಅಸಂಸ್ಕೃತೇಽಪಿ' ಮೊದಲಾದುವು ಸಂಬಂಧಿಸಲ್ಪಡುವುವು. ತಥಾಚ — 'ತ್ರಿ, ಚತುರ್' ಶಬ್ದಗಳಿಗೆ ಸಂಸ್ಕೃತಾಸಂಸ್ಕೃತ ವ್ಯಂಜನಾದ್ಯುತ್ತರಪದವೂ ತದ್ಧಿತವೂ ಪರದಲ್ಲಿರಲು ಕ್ರಮವಾಗಿ ವೈಕಲ್ಪಿಕ 'ತಿ, ಚೌ' ಎಂಬಿವು ಸರ್ವಾದೇಶಗಳಾಗುವುವು—ಎಂದು ಸೂತ್ರಾರ್ಥವಾಗಲು 'ತಿದಂಡಿ' ಮೊದಲಾದುವು ಸಿದ್ಧಿಸುವುವು.

ಇಲ್ಲಿ — 'ತ್ರಿ, ಚತುರೋಃ' ಎಂದು ವಿಶಿಷ್ಯಸ್ಥಾನನಿರ್ದೇಶವನ್ನು ಮಾಡಿರುವುದರಿಂದ 'ಪಂಚಮುಖಂ, ಪಂಚತಯಂ' ಮೊದಲಾದುವು ಪ್ರಯೋಗಗಳಲ್ಲಿ ಬರುವುದಿಲ್ಲವೆಂದು ತಿಳಿಯಬೇಕು. ತದ್ಧಿತಪದದಿಂದ ಸಂಸ್ಕೃತ ತದ್ಧಿತವನ್ನೇ ಗ್ರಹಿಸುವುದರಿಂದ 'ತಿಕಂ—ತ್ರಿಕಂ; ಚೌಕಂ—ಚತುಷ್ಕಂ; ತಿತಿಯಂ—ತೃತೀಯಂ; ಚೌತಂ—ಚತುರ್ಥಂ' ಮೊದಲಾದುವನ್ನು ಇಲ್ಲಿ ಗ್ರಹಿಸುವುದು.

**ಅವತಾರಿಕೆ ೩೭೭**

ಹೀಗೆಯೇ ದ್ವಿಶಬ್ದಕ್ಕೆ ಬರುವ ಆದೇಶವನ್ನು ವಿಧಿಸುತ್ತಾನೆ.

**ಸೂತ್ರಂ || ದ್ವೇರ್ದೂದು || ೩೭೭ ||**

**ಅರ್ಥ ||** ಸಂಸ್ಕೃತಾಸಂಸ್ಕೃತ ವ್ಯಂಜನಾದ್ಯುತ್ತರಪದಗಳೂ ತದ್ಧಿತಗಳೂ ಪರವಾಗಲು ದ್ವಿ ಶಬ್ದದ ಸ್ಥಾನದಲ್ಲಿ 'ದೂ, ದು' ಎಂಬೆರಡಾದೇಶಗಳ ವಿಕಲ್ಪವಾಗಿ ಬರುವುವು. ಇವು ಶಿದ್ವತ್ತುಗಳಾಗುವುವು.

---

ಪಾಠಾಂತರ : ೧ ಚಾವಾ; ೨ ಚೌಭಾವಿ, ಚತುರ್ಭಾವಿ.

**ಉದಾಹರಣೆ** || ' ದೊಮುಕಂ, ದುಮುಕಂ—ದ್ವಿಮುಖಂ; ದೂಜಾವಂ, ದುಜಾವಂ—ದ್ವಿಯಾಮಂ; ದೂತಯಂ, ದುತಯಂ—ದ್ವಿತಯಂ; ದೂತೀಯಂ, ದುತೀಯಂ—ದ್ವಿತೀಯಂ||' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೭೭**

ಈ ಸೂತ್ರದಲ್ಲಿ — ' ದ್ವೇಃ, ದೂದೂ ' ಎಂದು ಎರಡು ಪದಗಳಿರುವುವು. ' ದ್ವೇಃ ' ಎಂಬುದು ಸ್ಥಾನಷಷ್ಠ್ಯಂತವು. ' ದೂದೂ ' ಎಂಬುದು ' ದೂ, ದು ' ಎಂಬ ದೀರ್ಘಾಂತ ಹ್ರಸ್ವಾಂತ ಶಬ್ದಗಳಿಗೆ ಕೃತದ್ವಂದ್ವನಿರ್ದೇಶವು. ಇವೆರಡೂ ವಿಧೇಯಗಳು. ಪೂರ್ವದಂತೆ ಶಿದಾದಿಗಳು ಸಂಬಂಧಿಸಲ್ಪಡುವುವು. ತಥಾಚ — ಸಂಸ್ಕೃತಾಸಂಸ್ಕೃತ ವ್ಯಂಜನಾದ್ಯುತ್ತರಪದಗಳೂ ತದ್ಧಿತಪ್ರತ್ಯಯಗಳೂ ಪರದಲ್ಲಿರಲು ' ದ್ವಿ ' ಶಬ್ದಕ್ಕೆ ಸರ್ವಾದೇಶವಾಗಿ ' ದೂ, ದು ' ಎಂಬಿವು ವಿಕಲ್ಪಗಳಾಗಿ ಬರುವುವೆಂದು ಸೂತ್ರಾರ್ಥವಾಗಲು ' ದೂಮುಕಂ ' ಮೊದಲಾದುವು ಸಿದ್ಧಿಸುವುವು.

ಇಲ್ಲಿಯೂ ಪೂರ್ವಸೂತ್ರದಲ್ಲಿಯೂ ' ದ್ವಿ ' ಮೊದಲಾದುವುಗಳಿಗೆ ಸಂಸ್ಕೃತಾಸಂಸ್ಕೃತೋತ್ತರಪದಗಳಲ್ಲಿ ಆದೇಶಗಳು ವಿಧಿಸಲ್ಪಡುವುವು. ಇವುಗಳಲ್ಲಿ ಸಂಸ್ಕೃತೋತ್ತರಪದಸಮಾಸವು ಸಂಸ್ಕೃತದಲ್ಲಿ ಸಿದ್ಧವಾದುದೇ ಗ್ರಹಿಸಲ್ಪಡುವುದು. ಅಸಂಸ್ಕೃತೋತ್ತರಪದಸಮಾಸವನ್ನಾದರೋ ಭಾಷೆಯಲ್ಲಿ ಸಮಾಸವನ್ನು ಮಾಡಿ ಅನಂತರದಲ್ಲಿ ಈ ಸೂತ್ರಕ್ಕೆ ವಿಷಯವನ್ನಾಗಿ ಹೇಳಬೇಕು. ಆ ಸಮಾಸವು ಭಾಷೆಯಲ್ಲಿ — ' ದ್ವ್ಯಾದ್ಯದಶ್ಚಃ || ೧೧ || ' ಎಂಬ ಸೂತ್ರವು ' ದ್ವಿ ' ಮೊದಲಾದುವಕ್ಕೆ ಲಿಂಗಸಂಜ್ಞೆಯನ್ನೇ ನಿಷೇಧಿಸಿ ಭಾಷೆಯಲ್ಲಿ ಪ್ರಯೋಗವಿಲ್ಲವೆಂದು ಬೋಧಿಸಿರುವುದರಿಂದ ಇವುಗಳಿಗೆ ಕನ್ನಡ ವಿಭಕ್ತಿಗಳೇ ಬಾರದಿರಲು ಸುಬಂತತ್ವವಿಲ್ಲವಾದುದರಿಂದ ಅಸಂಸ್ಕೃತದೊಡನೆ ಸಮಾವೇಶವೇ ಬಾರದಿರಲು ಈ ಸೂತ್ರಕ್ಕೆ ಅಸಂಸ್ಕೃತೋತ್ತರಪದವಾದ ಉದಾಹರಣೆಗಳೇ ದೊರೆಯುವುದಿಲ್ಲ. ಆದುದರಿಂದ ಈ ಸೂತ್ರಗಳಲ್ಲಿ ' ಅಸಂಸ್ಕೃತೇ ' ಎಂದು ಹೇಳಿರುವುದು ವ್ಯರ್ಥವಾಗುವುದು. ಆದುದರಿಂದ ಈ ವಿಷಯದಲ್ಲಿ ಮಾತ್ರ ' ದ್ವಿ, ತ್ರಿ, ಚತುರ್ ' ಶಬ್ದಗಳಿಗೆ ಲಿಂಗಸಂಜ್ಞೆಯುಂಟೆಂದು ಜ್ಞಾಪಿಸಲ್ಪಡುವುದೆಂದು ತಿಳಿಯಬೇಕು.

**ಅವತಾರಿಕೆ ೩೭೮**

ಹೀಗೆ ಬೇರೆ ಬೇರೆ ನಿಮಿತ್ತಗಳಿರುವಾಗ ಬೇರೆ ಬೇರೆ ಶಬ್ದಗಳಿಗೆ ಕಾರ್ಯವಿಶೇಷಗಳು ವಿಧಿಸಲ್ಪಟ್ಟಿತು. ಈಗ ಅಂತಹ ಸಾಮಾನ್ಯ ವಿಧಿಗಳಿಗೆ ವಿಷಯಗಳಾಗದೆ ಭಿನ್ನಭಿನ್ನ ಕಾರ್ಯಭಾಕ್ಕುಗಳಾದ ಕೆಲವು ಶಬ್ದಗಳನ್ನು ಮಹಾಕವಿ ಪ್ರಯೋಗಗಳಿಂದ ಸಂಗ್ರಹಿಸಿ ಗಣಪಾಠಮಾಡಿ ಪ್ರಯೋಗ ಸಾಧುತ್ವವನ್ನು ಬೋಧಿಸುತ್ತಾನೆ.

**ಸೂತ್ರಂ || ಕೀಲಾರಾದೀನಿ ಯಥೋಪದಿಷ್ಟಂ || ೩೭೮ ||**

**ಅರ್ಥ || ' ಕೀಲಾರ ' ಮೊದಲಾದ ಗಣಪಠಿತ ಶಬ್ದಗಳು ಹೇಗೆ ಉಪಯೋಗಿಸಲ್ಪಟ್ಟಿವೆಯೋ ಹಾಗೆಯೇ ಸಾಧುಗಳೆಂದು ತಿಳಿದುಕೊಳ್ಳುವುದು.**

**ಉದಾಹರಣೆ** || 'ಕೀಲಾರಂ, ಕೀರಾರಂ; ದೇವಾರಂ, ಧವಳಾರಂ; ಗೂಡಾರಂ; ದೀವಳಿಗೆ, ದೀವಾಳಿಗೆ; ಸೀಯದರಂ, ಸೀಯದಾರಂ, ಸೀಯಬಾರಂ; ಸಿರಿದರಂ, ಸಿರಿದಾರಂ, ಸಿರಿಬಾರಂ;

ವಂಕದರಂ, ವಂಕದಾರಂ, ವಂಕಬಾರಂ; ಪಾಣೀಯದರಂ, ಪಾಣೀಯದಾರಂ, ಪಾಣೀಯಬಾರಂ; ಕಂಟೆಯದರಂ, ಕಂಟೆಯದಾರಂ, ಕಂಟೆಯಬಾರಂ; ಚೌವಟ್ಟಂ, ಪಾಯವಟ್ಟಂ, ರನ್ನವಟ್ಟಿಗೆ, ಸಂತೆವಟ್ಟಣಂ, ದೆಸೆವಲಿ, ಕನ್ನವುರಂ, ಬಣ್ಣವುರಂ, ಅಂತವುರಂ, ಕಂಡಪಟಂ, ನಿಬುದ್ಧಿ[೧], ಮಾಲೆದೋರಣಂ, ದಂಮಾಣಿ, ಚಂಮಟಿಗೆ, ಚಂಮಟ್ಟಿಗೆ; ಕಂಸಾಳಂ, ದೇಗುಲಂ, ಸೂಯಾಣಂ, ದೇಶಾಕೆ, ದುಗಂ, ದೂಗಂ; ತಿಗಂ, ತೀಗಂ; ಚೌಕಂ ||' ಮೊದಲಾದುವೇ ಕೀಲಾರಾದಿಗಳು. ಇದು ಆಕೃತಿಗಣವೆಂದು ಅಂಗೀಕರಿಸಿರುವುದರಿಂದ ಇವಲ್ಲದೆ ಶಿಷ್ಟಪ್ರಯೋಗಗಳಲ್ಲಿರುವ ಇಂತಹ ಶಬ್ದಗಳನ್ನೂ ಈ ಗಣಕ್ಕೆ ಸೇರಿದುವೆಂದು ತಿಳಿಯಬೇಕು.

**ವಿಚಾರ ೩೭೮**

ಈ ಸೂತ್ರದಲ್ಲಿ — ' ಕೀಲಾರಾದೀನಿ, ಯಥೋಪದಿಷ್ಟಂ ' ಎಂದು ಎರಡು ಪದಗಳಿರುವುವು. ಕೀಲಾರಾದಿ ಗಣಪಠಿತ ಶಬ್ದಗಳು ಶಿಷ್ಟರಿಂದ ಹೇಗೆ ಉಪದೇಶಿಸಲ್ಪಟ್ಟಿವೆಯೋ ಹಾಗೆಯೇ ಸಾಧುಗಳೆಂದು ತಿಳಿಯಬೇಕು. ಇಲ್ಲಿ ' ಕ್ಷೀರಾಗಾರ ' ಮೊದಲಾದ ಸಮಸ್ತಗಳಾದ ಶಬ್ದಗಳಿಗೆ ಪೂರ್ವದಲ್ಲಿಯೂ ಉತ್ತರದಲ್ಲಿಯೂ ಎರಡರಲ್ಲಿಯೂ ಯಥಾಯೋಗ್ಯವಾಗಿ ಆಗಮಾದೇಶಾದಿಗಳನ್ನು ಮಾಡುವುದರಿಂದ ವಿಕೃತಿಯನ್ನುಂಟುಮಾಡಿ ನಿಷ್ಪಾದಿತಗಳಾದ ಕೀಲಾರಾದಿಗಳೇ ಉಪದೇಶಿಸಲ್ಪಟ್ಟಿವೆ. ಇಲ್ಲಿ ಆವುದರ ಸ್ಥಾನದಲ್ಲಿ ಆವುದಾದೇಶವು ಆವುದು ನಿಮಿತ್ತವು ಎಂದು ಹೇಳಲು ಅಸಾಧ್ಯವಾದುದರಿಂದ ಯಥೋಪದೇಶವಾಗಿ ಸಾಧುಗಳೆಂದು ಹೇಳಲ್ಪಟ್ಟಿದೆ.

ಇಲ್ಲಿ — ' ಕೀಲಾರಂ, ಕೀರಾರಂ ' ಇವೆರಡೂ ' ಕ್ಷೀರಾಗಾರ ' ಶಬ್ದದಿಂದ ನಿಷ್ಪನ್ನವಾದುವು. ' ದೇವಾರಂ' ' ದೇವಾಗಾರಂ ' ಶಬ್ದನಿಷ್ಪನ್ನವು. ಹೀಗೆಯೇ—' ಧವಳಾರಂ ' ಎಂಬುದು ' ಧವಳಾಗಾರಂ ' ಶಬ್ದದಿಂದಲೂ ' ಗೂಡಾರಂ ' ಎಂಬುದು ' ಗೂಢಾಗಾರಂ ' ಎಂಬ ಶಬ್ದದಿಂದಲೂ ' ದೀವಳಿಗೆ, ದೀವಾಳಿಗೆ ' ಇವೆರಡೂ ' ದೀಪಾವಳಿಕಾ ' ಎಂಬ ಶಬ್ದದಿಂದಲೂ ' ಸೀಯದರಂ, ಸೀಯದಾರಂ, ಸೀಯಬಾರಂ; ಸಿರಿದರಂ, ಸಿರಿದಾರಂ, ಸಿರಿಬಾರಂ ' ಇವು 'ಶ್ರೀದ್ವಾರ' ಶಬ್ದದಿಂದಲೂ 'ವಂಕದರಂ, ವಂಕದಾರಂ, ವಂಕಬಾರಂ ' ಇವು 'ವಕ್ರದ್ವಾರ' ಶಬ್ದದಿಂದಲೂ ' ಪಾಣೀಯದರ, ಪಾಣೀಯದಾರಂ, ಪಾಣೀಯಬಾರಂ ' ಇವು ' ಪಾನೀಯದ್ವಾರ ' ಎಂಬ ಶಬ್ದದಿಂದಲೂ 'ಕಂಟೆಯದರಂ, ಕಂಟೆಯದಾರಂ, ಕಂಟೆಯಬಾರಂ' ಇವು 'ಕಂಟಕದ್ವಾರ' ಶಬ್ದದಿಂದಲೂ ' ಚೌವಟ್ಟಂ ' ಎಂಬುದು 'ಚತುಷ್ಪಥಂ' ಅಥವಾ 'ಚತುಷ್ಪಟ್ಟಂ' ಎಂಬ ಶಬ್ದಗಳಿಂದಲೂ ' ಪಾಯವಟ್ಟಂ ' ಎಂಬುದು ' ಪಾದವಟ್ಟ ' ಶಬ್ದದಿಂದಲೂ ' ರನ್ನವಟ್ಟಿಗೆ ' ಎಂಬುದು ' ರತ್ನಪಟ್ಟಿಕಾ ' ಎಂಬ ಶಬ್ದದಿಂದಲೂ ' ಸಂತೆವಟ್ಟಣಂ ' ಎಂಬುದು ' ಸಂಸ್ಥಾಪತ್ತನಂ ' ಎಂಬ ಶಬ್ದದಿಂದಲೂ ' ದೆಸೆವಲಿ ' ಎಂಬುದು ' ದಿಶಾಬಲಿ ' ಎಂಬ ಶಬ್ದದಿಂದಲೂ ' ಕನ್ನವುರಂ ' ಎಂಬುದು ' ಕರ್ಣಪೂರ ' ಶಬ್ದದಿಂದಲೂ ' ಬಣ್ಣವುರಂ ' ಎಂಬುದು ' ವರ್ಣಪೂರ ' ಶಬ್ದದಿಂದಲೂ ' ಅಂತವುರಂ ' ಎಂಬುದು ' ಅಂತಃಪುರ ' ಶಬ್ದದಿಂದಲೂ ' ಕಂಡಪಟಂ ' ಎಂಬುದು ' ಕಾಂಡಪಟ ' ಶಬ್ದದಿಂದಲೂ ' ನಿಬುದ್ಧಿ ' ಎಂಬುದು ' ನಿರ್ಬುದ್ಧಿ ' ಶಬ್ದದಿಂದಲೂ ' ಮಾಲೆದೋರಣಂ ' ಎಂಬುದು ' ಮಾಲಾತೋರಣ ' ಶಬ್ದದಿಂದಲೂ ' ದಮ್ಮಾಣಿ ' ಎಂಬುದು ' ದ್ರಮ್ಮಾಣಿ ಶಬ್ದದಿಂದಲೂ (ಇಲ್ಲಿ ' ದ್ರಮ್ಮ ' ಎಂದರೆ ಒಂದು ಬಗೆಯ

ಪಾಠಾಂತರ: ೧ ನಿಬ್ಬುದ್ಧಿ

ನಾಣ್ಯವೆಂದು ತಿಳಿಯಬೇಕು. ಇದು ಟಂಕಸಾಲಿಯೆಂಬರ್ಥವು). 'ಚಮ್ಮಟ್ಟಿಗೆ, ಚಮ್ಮಟಿಗೆ' ಇವು 'ಚರ್ಮಪಟ್ಟಿಕಾ' ಶಬ್ದದಿಂದಲೂ 'ಕಂಸಾಳಂ' ಎಂಬುದು 'ಕಾಂಸ್ಯತಾಳ' ಶಬ್ದದಿಂದಲೂ 'ದೇಗುಲ' ಎಂಬುದು 'ದೇವಕುಲ' ಶಬ್ದದಿಂದಲೂ 'ಸೂಯಾಣಂ' ಎಂಬುದು 'ಸೂಪಸ್ಥಾನ' ಶಬ್ದದಿಂದಲೂ 'ದೇಸಾಕೆ' ಎಂಬುದು 'ದೇಶಶಾಖಾ' ಶಬ್ದದಿಂದಲೂ ನಿಷ್ಪನ್ನವಾಗಿರುವುದೆಂದು ಲಕ್ಷ್ಯಾನುಸಾರವಾಗಿ ಅನುಸರಿಸುವುದು.

**ಅವತಾರಿಕೆ ೩೭೯**

ಹೀಗೆ ಕೆಲವು ಶಬ್ದಗಳಿಗೆ ಸಾಧುತ್ವವನ್ನು ಬೋಧಿಸಿ ಇನ್ನು ಕೆಲವು ಶಬ್ದಗಳಿಗೆ ಆಗಮ ವಿಧಿಯನ್ನು ಹೇಳುತ್ತಾನೆ.

**ಸೂತ್ರಂ || ಮುಕ್ ಪೆಱಗ್ಗಾದೀನಾಂ || ೩೭೯ ||**

**ಅರ್ಥ || ವ್ಯಂಜನಾದ್ಯುತ್ತರಪದವು ಪರದಲ್ಲಿರಲು 'ಪೆಱಗು' ಮೊದಲಾದ ಕೆಲವು ಶಬ್ದಗಳಿಗೆ ಮ ಕಾರಾಗಮವು ವಿಕಲ್ಪವಾಗಿ ಬರುವುದು.**

**ಉದಾಹರಣೆ||** 'ಪೆಱಂಗಯ್, ಪೆಱಗಯ್; ಬೆಟ್ಟುಂಬೊಟ್ಟಿ, ಬೆಟ್ಟುವೊಟ್ಟಿ; ಬೆಟ್ಟುಂಗಾಡು, ಬೆಟ್ಟುಗಾಡು; ಆಗಸಂಬೊಚ್ಚಂ, ಆಗಸವೊಚ್ಚಂ; ಬಗ್ಗಂಬೊವಲ್, ಬಗ್ಗದೊವಲ್; ಕಕ್ಕುಂದಱು, ಕಕ್ಕುದಱು; ಮದ್ದುರ್ಂಗೂಟ್, ಮದ್ದುರ್ಗೂಟ್; ಕೊಂಕುಂಡಾಣೆ, ಕೊಂಕುಡಾಣೆ ||' ಮೊದಲಾದುವು ಇವಕ್ಕೆ ಲಕ್ಷ್ಯಗಳು. ಪೆಱಗ್ಗಾದಿಗಣವು ಪ್ರಯೋಗಗಮ್ಯವೆಂದು ತಿಳಿಯುವುದು.

**ವಿಚಾರ ೩೭೯**

ಈ ಸೂತ್ರದಲ್ಲಿ — 'ಮುಕ್, ಪೆಱಗ್ಗಾದೀನಾಂ' ಎಂದು ಎರಡು ಪದಗಳಿರುವುವು. 'ಮುಕ್' ಎಂಬುದು ವಿಧೇಯವು. ಇದು ಕಿತ್ತಾದುದರಿಂದ ಆಗಮವೆಂದು ತಿಳಿಯಬೇಕು. 'ಪೆಱಗ್ಗಾದೀನಾಂ' ಎಂಬುದು ಉದ್ದೇಶ್ಯಷಷ್ಠ್ಯಂತವು. 'ವ್ಯಂಜನಾದ್ಯುತ್ತರಪದೇ' ಮೊದಲಾದುವು ಅನುವರ್ತಿಸಲ್ಪಡುವುವು. ತಥಾಚ — ವ್ಯಂಜನಾದ್ಯುತ್ತರಪದವು ಪರವಾಗಲು ಪೆಱಗ್ಗಾದಿಗಳಿಗೆ ಮ ಕಾರಾಗಮವು ವಿಕಲ್ಪವಾಗಿ ಬರುವುದೆಂದು ಸೂತ್ರಾರ್ಥವಾಗಲು 'ಪೆಱಂಗಯ್' ಮೊದಲಾದುವು ಸಿದ್ಧಿಸುವುವು.

**ಅವತಾರಿಕೆ ೩೮೦**

ಹೀಗೆಯೇ ಉ ಕಾರಾಂತ ಶಬ್ದಕ್ಕೆ ಧಾತು ಪರದಲ್ಲಿರುವಾಗ ಮ ಕಾರಾಗಮ ವಿಧಿಯನ್ನು ಹೇಳುತ್ತಾನೆ.

**ಸೂತ್ರಂ || ಧಾತಾವುತಃ || ೩೮೦ ||**

**ಅರ್ಥ || ಉಕಾರಾಂತ ಶಬ್ದಕ್ಕೆ ವ್ಯಂಜನಾದಿ ಧಾತುರೂಪವಾದ ಉತ್ತರಪದವು ಪರದಲ್ಲಿರಲು ಮುಗಾಗಮವು ವಿಕಲ್ಪವಾಗಿ ಬರುವುದು.**

**ಉದಾಹರಣೆ ||** 'ಮಡುಂಬಿದ್ದಂ — ಮಡುವಿದ್ದಂ; ಗಿಡುಂಗಡಿದಂ—ಗಿಡುಗಡಿದಂ; ಕಾಡುಂಗಂಡಂ—ಕಾಡುಗಂಡಂ; ಬೀಡುಂಬೊಕ್ಕಂ—ಬೀಡುವೊಕ್ಕಂ ||' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೮೦**

ಈ ಸೂತ್ರದಲ್ಲಿ — ' ಧಾತೌ, ಉತಃ ' ಎಂದು ಎರಡು ಪದಗಳಿರುವುವು. ' ಧಾತೌ ' ಎಂಬುದು ನಿಮಿತ್ತಸಪ್ತಮ್ಯಂತವು. ಇದು ಅನುವೃತ್ತವಾದ ವ್ಯಂಜನಾದ್ಯುತ್ತರಪದಕ್ಕೆ ವಿಶೇಷಣವು. ಇದಕ್ಕೆ ಧಾತುಪ್ರಕೃತಿಕ ತಿಙಂತವಾಗಲಿ ಕೃದಂತವಾಗಲಿ ಎಂದರ್ಥವು. ' ಉತಃ ' ಎಂಬುದು ಉ ಕಾರ ಮಾತ್ರಬೋಧಕಷಷ್ಠ್ಯಂತಪದವು. ಇದು ಉತ್ತರಪದಾಕ್ಷಿಪ್ತವಾದ ಪೂರ್ವಪದಕ್ಕೆ ವಿಶೇಷಣವನ್ನು ಮಾಡಲು ತದಂತಬೋಧಕವಾಗುವುದು. ' ಮುಕ್, ವಾ ' ಎಂಬಿವು ಅನುವರ್ತಿಸಲ್ಪಡುವುವು. ತಥಾಚ — ಉ ಕಾರಾಂತ ಶಬ್ದಕ್ಕೆ ವ್ಯಂಜನಾದಿ ಧಾತು ರೂಪೋತ್ತರಪದವು ಪರದಲ್ಲಿರಲು ವಿಕಲ್ಪವಾಗಿ ಮು ಕಾರಾಗಮವು ಬರುವುದೆಂದು ಸೂತ್ರಾರ್ಥವಾಗಲು ' ಮಡುಂಬಿಲ್ದಂ ' ಮೊದಲಾದುವು ಸಿದ್ಧಿಸುವುವು.

ಇಲ್ಲಿ — ' ಧಾತೌ ' ಎಂದು ಹೇಳಿರುವುದರಿಂದ ' ಮಡುನೀರ್[೧], ಗಿಡುಗಾಯ್ ' ಮೊದಲಾದ ನಾಮಪದಗಳು ಪರದಲ್ಲಿರುವ ಪ್ರಯೋಗಗಳಲ್ಲಿಯೂ ' ವ್ಯಂಜನೇ ' ಎಂದು ಹೇಳಿರುವುದರಿಂದ ' ಗಿಡುವಗುಲ್ವಂ ' ಮೊದಲಾದ ಸ್ವರಾದಿ ಧಾತುಗಳು ಪರವಲ್ಲಿರುವ ಪ್ರಯೋಗಗಳಲ್ಲಿಯೂ ' ಉತಃ ' ಎಂದು ಹೇಳಿರುವುದರಿಂದ ' ಎಲೆಗಂಡಂ, ಬಡಿಗೊಂಡಂ ' ಮೊದಲಾದ ಉ ಕಾರಾಂತ ಪೂರ್ವಪದವಿಲ್ಲದ ಪ್ರಯೋಗಗಳಲ್ಲಿಯೂ ಈ ಮುಗಾಗಮವು ಪ್ರವರ್ತಿಸುವುದಿಲ್ಲವೆಂದು ತಿಳಿಯಬೇಕು.

**ಅವತಾರಿಕೆ ೩೮೧**

ಹೀಗೆಯೇ ಅ ಕಾರಾಂತವಾದುದಕ್ಕೂ ಮು ಕಾರಾಗಮವನ್ನು ವಿಧಿಸುತ್ತಾನೆ.

**ಸೂತ್ರಂ || ಅತಃ || ೩೮೧ ||**

**ಅರ್ಥ || ವ್ಯಂಜನಾದಿ ಧಾತುರೂಪವಾದ ಉತ್ತರಪದವು ಪರದಲ್ಲಿರಲು ಮುಗಾಗಮವು ವಿಕಲ್ಪವಾಗಿ ಬರುವುದು.**

**ಉದಾಹರಣೆ ||** ' ಬಳಪಂಬಿಡಿದಂ—ಬಳಪವಿಡಿದಂ; ನೆಲಂಬಿಡಿದಂ—ನೆಲವಿಡಿದಂ || ' ಮೊದಲಾದುವು ಇವಕ್ಕೆ ಲಕ್ಷ್ಯಗಳು.

**ವಿಚಾರ ೩೮೧**

ಈ ಸೂತ್ರದಲ್ಲಿ — ' ಅತಃ ' ಎಂಬುದೊಂದೇ ಪದವಿರುವುದು. ಇದು ಷಷ್ಠ್ಯಂತವಾದುದರಿಂದ ಉತ್ತರಪದದಿಂದ ಆಕ್ಷಿಪ್ತವಾದ ಪೂರ್ವಪದಕ್ಕೆ ವಿಶೇಷಣವನ್ನು ಮಾಡಲು ತದಂತ ಬೋಧಕವಾಗುವುದು. 'ಮುಕ್' ಮೊದಲಾದುವನ್ನು ಅನುವರ್ತಿಸಿ ಪೂರ್ವದಂತೆ ಸಂಬಂಧಿಸುವುದು. ತಥಾಚ — ಅ ಕಾರಾಂತ ಪೂರ್ವಪದಕ್ಕೆ ವ್ಯಂಜನಾದಿ ಧಾತೂತ್ತರಪದವು ಪರದಲ್ಲಿರುವಾಗ ಮುಗಾಗಮವು ವಿಕಲ್ಪವಾಗಿ ಬರುವುದು—ಎಂದು ಸೂತ್ರಾರ್ಥವಾಗಲೂ ' ಬಳಪಂಬಿಡಿದಂ ' ಮೊದಲಾದುವು ಸಿದ್ಧಿಸುವುವು. ಯದ್ಯಪಿ ಪೂರ್ವಸೂತ್ರದಲ್ಲಿಯೇ ' ಅತಃ ' ಎಂಬುದನ್ನೂ ಸೇರಿಸಿ ಒಂದೇ ಸೂತ್ರವನ್ನು ಮಾಡಿ ಮುಗಾಗಮವನ್ನು ವಿಧಿಸಲು ಈ ಪ್ರಯೋಗವು ಸಿದ್ಧಿಸುವುದು. ಆದಾಗ್ಯೂ ಉತ್ತರಸೂತ್ರದಲ್ಲಿ ಅ ಕಾರಮಾತ್ರಕ್ಕೆ ಸಂಬಂಧವಮಾಡಬೇಕಾಗಿರುವುದರಿಂದ ಪೃಥಕ್ಕಾಗಿ ಈ ಸೂತ್ರವು ಮಾಡಲ್ಪಟ್ಟಿದೆ—ಎಂದು ತಿಳಿಯಬೇಕು.

---

ಪಾಠಾಂತರ : ೧ ಮಡುಗಿಡು

**ಅವತಾರಿಕೆ ೩೮೨**

ಇದುವರೆಗು ಕನ್ನಡ ಪೂರ್ವಪದಗಳಿಗೆ ವಿಕಲ್ಪವಾಗಿ ಮಗಾಗಮವು ವಿಧಿಸಲ್ಪಟ್ಟಿತು. ಈಗ ಸಂಸ್ಕೃತ ಪೂರ್ವಪದಕ್ಕೆ ನಿತ್ಯವಾಗಿ ವಿಧಿಸುತ್ತಾನೆ.

**ಸೂತ್ರಂ || ಸಂಸ್ಕೃತಸ್ಯ ನಿತ್ಯಂ || ೩೮೨ ||**

**ಅರ್ಥ ||** ವ್ಯಂಜನಾದಿ ಧಾತುವು ಉತ್ತರಪದವಾಗಿರಲು ಅ ಕಾರಾಂತವಾದ ಸಂಸ್ಕೃತ ಶಬ್ದಕ್ಕೆ ನಿತ್ಯವಾಗಿ ಮಗಾಗಮವು ಬರುವುದು.

**ಉದಾಹರಣೆ ||** 'ಚಕ್ರಂಗೊಂಡಂ, ವಜ್ರಂಗೊಂಡಂ, ಖಡ್ಗಂಬಿಡಿದಂ, ದಂಡಂಗೊಂಡಂ||' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೮೨**

ಈ ಸೂತ್ರದಲ್ಲಿ — 'ಸಂಸ್ಕೃತಸ್ಯ, ನಿತ್ಯಂ' ಎಂದು ಎರಡು ಪದಗಳಿರುವುವು. ಪೂರ್ವದಿಂದ 'ಅತಃ, ಮುಕ್, ಧಾತೌ, ವ್ಯಂಜನೇ, ಉತ್ತರಪದೇ' ಎಂಬಿವು ಅನುವರ್ತಿಸಲ್ಪಡುವುವು. 'ಅತಃ' ಎಂಬುದನ್ನು 'ಸಂಸ್ಕೃತಸ್ಯ' ಎಂಬುದಕ್ಕೆ ವಿಶೇಷಣ ಮಾಡಲು ತದಂತ ಲಾಭವು ಬರುವುದು. ಉಳಿದುದೆಲ್ಲಾ ಪೂರ್ವದಂತೆಯೇ ಸಂಬಂಧಿಸಲ್ಪಡುವುದು. ತಥಾಚ — ಅ ಕಾರಾಂತ ಸಂಸ್ಕೃತ ಶಬ್ದಕ್ಕೆ ವ್ಯಂಜನಾದಿ ಧಾತೂತ್ತರಪದದಲ್ಲಿ ನಿತ್ಯವಾಗಿ ಮಗಾಗಮವು ಬರುವುದು— ಎಂದು ಸೂತ್ರಾರ್ಥವಾಗಲು 'ಚಕ್ರಂಗೊಂಡಂ' ಮೊದಲಾದುವು ಸಿದ್ಧಿಸುವುವು.

ಇಲ್ಲಿ 'ಅತಃ' ಎಂದು ಹೇಳಿರುವುದರಿಂದ 'ವಿಧುಂಗಂಡಂ, ವಿಧುಗಂಡಂ' ಮೊದಲಾದ ಉ ಕಾರಾಂತಗಳಲ್ಲಿ ಪೂರ್ವಪದ ವಿಕಲ್ಪವಾಗಿಯೇ ಬರುವುದು. ಪೃಥಕ್-ಸೂತ್ರಮಾಡಿರುವುದರಿಂದಲೇ ಈ ವಿಧಿಯು ನಿತ್ಯನೆಂದು ತಿಳಿಯಲು ಪುನಃ ನಿತ್ಯಗ್ರಹಣವು ಉತ್ತರಾರ್ಥವು ಸ್ಪಷ್ಟ ಪ್ರತಿಪತ್ತ್ಯರ್ಥವಾಗಿ ಈ ಸೂತ್ರದಲ್ಲಿಯೇ ಹೇಳಲ್ಪಟ್ಟಿದೆ—ಎಂದು ತಿಳಿಯಬೇಕು.

**ಅವತಾರಿಕೆ ೩೮೩**

ಹೀಗೆಯೇ ಕೆಲವು ಪ್ರತ್ಯಯಗಳು ಪರದಲ್ಲಿರುವಾಗಲೂ ಸಂಸ್ಕೃತಾಸಂಸ್ಕೃತ ಸಾಧಾರಣ ಪೂರ್ವಪದಕ್ಕೆ ಮಗಾಗಮವನ್ನು ವಿಧಿಸುತ್ತಾನೆ.

**ಸೂತ್ರಂ || ಗುಳಿಬೊಲಿ || ೩೮೩ ||**

**ಅರ್ಥ ||** ಅ ಕಾರಾಂತ ಶಬ್ದಕ್ಕೆ 'ಗುಳಿ, ಬೊಲ್' ಎಂಬ ಪ್ರತ್ಯಯಗಳು ಪರವಾಗಲು ನಿತ್ಯವಾಗಿ ಮಗಾಗಮವು ಬರುವುದು.

**ಉದಾಹರಣೆ ||** 'ಆಟಂಗುಳಿ, ಲಂಚಂಗುಳಿ, ಧನಂಗುಳಿ, ಇಂದ್ರಂಬೊಲ್, ಚಂದ್ರಂಬೊಲ್, ಆತಂಬೊಲ್, ಅಣ್ಣಂಬೊಲ್ ||' ಮೊದಲಾದುವು ಇದಕ್ಕೆ ಲಕ್ಷ್ಯಗಳಾಗಿರುವುವು.

**ವಿಚಾರ ೩೮೩**

ಇಲ್ಲಿ 'ಗುಳಿಬೊಲಿ' ಎಂಬುದೊಂದೇ ಪದವಿರುವುದು. ಇದು 'ಗುಳಿ, ಬೊಲ್' ಎಂಬ ತದ್ಧಿತ ಬೋಧಕವಾದ ನಿಮಿತ್ತಸಪ್ತಮ್ಯಂತ ನಿರ್ದೇಶವು. ಪೂರ್ವದಿಂದ 'ಅತಃ, ಮುಕ್, ನಿತ್ಯಂ' ಎಂಬಿವು ಅನುವರ್ತಿಸಲ್ಪಡುವುವು. ಇಲ್ಲಿ ನಿಮಿತ್ತವು ಪ್ರತ್ಯಯಗಳಾದುದರಿಂದ 'ಉತ್ತರಪದೇ' ಎಂಬುದು ಸಂಬಂಧಿಸಲ್ಪಡುವುದಿಲ್ಲ. 'ಅತಃ' ಎಂಬುದು ಅಧ್ಯಾಹೃತ ಪೂರ್ವಪದಕ್ಕೆ ವಿಶೇಷಣವು. ಈ ಪೂರ್ವಪದವು ವ್ಯಾಖ್ಯಾನ ಪರಿಭಾಷೆಯಿಂದ ಸಂಸ್ಕೃತಾ

ಸಂಸ್ಕೃತ ಸಾಧಾರಣವಾಗಿರುವುದು. ತಥಾಚ — ಅ ಕಾರಾಂತವಾದುದಕ್ಕೆ 'ಗುಳಿ, ಬೊಲ್' ಪ್ರತ್ಯಯಗಳು ಪರದಲ್ಲಿರಲು ನಿತ್ಯವಾಗಿ ಮಗಾಗಮವು ಬರುವುದು—ಎಂದು ಸೂತ್ರಾರ್ಥವಾಗಲು 'ಆಟಂಗುಳಿ' ಮೊದಲಾದುವು ಸಿದ್ಧಿಸುವುವು.

ಇಲ್ಲಿ 'ಗುಳಿಬೊಲಿ' ಎಂದು ನಿಮಿತ್ತವನ್ನು ಹೇಳಿರುವುದರಿಂದ 'ಆಟಗಾಱಂ,[೧] ಗೆಲ್ಲಗಾಱಂ, ಇಂದ್ರನವೋಲ್, ಚಂದ್ರನವೊಲ್' ಮೊದಲಾದುವು ಪ್ರಯೋಗಗಳಲ್ಲಿ ಬರುವುದಿಲ್ಲ.

ಈ ಸೂತ್ರದಲ್ಲಿ ನಿರ್ದೇಶಿಸಿರುವ 'ಗುಳಿ' ಪ್ರತ್ಯಯವು — '**ಗುಳಿಗರ್ಹಾತ್ತಿ || ೪೧೪ ||**' ಎಂಬ ಸೂತ್ರದಿಂದಲೂ 'ಬೊಲ್' ಎಂಬುದು — '**ವಾತೋ ಬೊಲ್ || ೪೨೯ ||**' ಎಂಬ ಸೂತ್ರದಿಂದಲೂ ತದ್ಧಿತಪ್ರಕರಣದಲ್ಲ ವಿಧಿಸಲ್ಪಡುವುವು—ಎಂದು ತಿಳಿಯಬೇಕು. ಇವಕ್ಕೆ ಪ್ರಾಚೀನರು —

ಱಂಗಡಲ ಕುವರಿಯರಸಂ
ಗಂ ಗೆಂಟಪುದರ್ಥಸಿದ್ಧಿಯರಮನೆಯೊಳ್ ಲಂ
ಚಂಗುಳಿಗಳೊಳರೆನಲ್ ನೃಪ
ಸಂಗಳಿಸಾ ಸ್ವಾಮಿಕಾರ್ಯಪರರಂ ಚರರಂ

ಎಂಬ ಪದ್ಯವನ್ನೂ —

ಇಂದ್ರಂಬೊಲ್ ವಿಭವಯುತಂ
ಚಂದ್ರಂಬೊಲ್ ಕಾಂತಿವಂತನಾದಿತ್ಯಂಬೊಲ್
ಸಾಂದ್ರಪರಿಪೂರ್ಣತೇಜನು
ಪೇಂದ್ರಂಬೊಲ್ ನೀತಿನಿಪುಣನಾ ನರನಾಥಂ

ಎಂಬ ಪದ್ಯವನ್ನೂ — ಉದಾಹರಣೆಯಾಗಿ ತೆಗೆದುಕೊಂಡಿರುವರು.

**ಅವತಾರಿಕೆ ೩೮೪**

ಹೀಗೆಯೇ ಪ್ರತ್ಯಯಾಂತರದಲ್ಲಿಯೂ ಮಗಾಗಮವನ್ನು ವಿಧಿಸುತ್ತಾನೆ.

**ಸೂತ್ರಂ || ಉತೋ ಗಾಱೇ || ೩೮೪ ||**

**ಅರ್ಥ ||** **ಉ ಕಾರಾಂತಕ್ಕೆ 'ಗಾಱ' ಪ್ರತ್ಯಯವು ಪರದಲ್ಲಿರಲು ನಿತ್ಯವಾಗಿ ಮಗಾಗಮವು ಬರುವುದು.**

**ಉದಾಹರಣೆ ||** 'ಪಾಡುಂಗಾಱಂ, ಜೂದುಂಗಾಱಂ, ಓದುಂಗಾಱಂ ||' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೮೪**

ಈ ಸೂತ್ರದಲ್ಲಿ — 'ಉತಃ, ಗಾಱೇ' ಎಂದು ಎರಡು ಪದಗಳಿರುವುವು. 'ಉತಃ' ಎಂಬುದು ಷಷ್ಠ್ಯಂತಪದವು. ಇದು ಅಧ್ಯಾಹೃತವಾದ ಶಬ್ದಸ್ವರೂಪಕ್ಕೆ ವಿಶೇಷಣವನ್ನು ಮಾಡಲು ತದಂತಬೋಧಕವಾಗುವುದು. 'ಗಾಱೇ' ಎಂಬುದು ನಿಮಿತ್ತಸಪ್ತಮ್ಯಂತವು. ಮಗಾದಿಗಳು ಅನುವರ್ತಿಸಲ್ಪಡುವುವು. ತಥಾಚ — ಉ ಕಾರಾಂತವಾದುದಕ್ಕೆ 'ಗಾಱ'

---

**ಪಾಠಾಂತರ ೧: ಆಟಕಾಱಂ**

ಪ್ರತ್ಯಯವು ಪರದಲ್ಲಿರುವಾಗ ನಿತ್ಯವಾಗಿ ಮಗಾಗಮವು ಬರುವುದೆಂದು ಸೂತ್ರಾರ್ಥವಾಗಲು 'ಪಾಡುಂಗಾಱಂ' ಮೊದಲಾದುವು ಸಿದ್ಧಿಸುವುವು.

ಇಲ್ಲಿ 'ಉತಃ' ಎಂದು ಹೇಳಿರುವುದರಿಂದ 'ಕುಂಭಗಾಱಂ, ಮಣಿಗಾಱಂ' ಮೊದಲಾದ ಅ ಕಾರಾಂತವುಳ್ಳ ಪ್ರಯೋಗಗಳಲ್ಲಿಯೂ 'ಗಾಱೀ' ಎಂದು ಹೇಳಿರುವುದರಿಂದ 'ಪಾಡುಗಂ, ಜೂದುಗಂ' ಮೊದಲಾದ 'ಗ' ಪ್ರತ್ಯಯಪರಕವಾದ ಪ್ರಯೋಗಗಳಲ್ಲಿಯೂ ಮಗಾಗಮವಿಲ್ಲವೆಂದು ತಿಳಿಯಬೇಕು.

ಇಲ್ಲಿ 'ಗಾಱ' ಎಂಬ ಪ್ರತ್ಯಯವು '**ಗಾಱೀ ಜಾತೌ** || ೪೧೧ ||' ಎಂಬ ಸೂತ್ರದಿಂದ ವಿಧಿಸಲ್ಪಡುವುದು. ಅದು ಪರದಲ್ಲಿರಲು ಉ ಕಾರಾಂತವಾದುದಕ್ಕೆ ಮ ಕಾರಾಗಮವು ಸೂತ್ರಕಾರರಿಗೆ ಅಭಿಮತವು—ಎಂಬುದು ಈ ಸೂತ್ರದಿಂದ ತಿಳಿಯುವುದು. ಆದಾಗ್ಯೂ ಪ್ರಾಚೀನರು —

ಅಂಕಂಗಾಱನ ಗಂಡುತ
ನಂ ಕೂರಿತೆ ತುಮುಲಯುದ್ಧದೊಳ್ ಪಟುಭಟರಂ
ನೂಂಕುವ ಸಮರಂಗಾಱನ
ಪಾಂಕರಣೆಯೆ ಗಂಡುತನದ ತಿರುಳೆನಪೇೞ್ಕುಂ

ಎಂದು ಮೊದಲಾಗಿ ಅ ಕಾರಾಂತಗಳಿಗೂ 'ಗಾಱ' ಪ್ರತ್ಯಯವು ಪರದಲ್ಲಿರುವಾಗ ಮ ಕಾರಾಗಮವನ್ನು ಮಾಡಿರುವರು. ಆದುದರಿಂದ ಕ್ವಚಿತ್ ಈ ಮಗಾಗಮವು ಅ ಕಾರಾಂತಗಳಿಗೂ ಬರುವುದೆಂದು ತಿಳಿಯುವುದು. **ದರ್ಪಣಕಾರ**ನು ಇದನ್ನು ಆಯಾ ಪ್ರತ್ಯಯ ವಿಧಿಸೂತ್ರದಲ್ಲಿಯೇ ಸೇರಿಸಿ ಹೇಳಿರುವನು.

**|| ಇತಿ ಸಮಾಸಾಶ್ರಯ ವಿಧಿಪ್ರಕರಣಂ ಸಮಾಪ್ತಂ ||**

## ॥ ಅಥ ದ್ವಿರುಕ್ತಿಪ್ರಕರಣಂ ॥

**ಅವತಾರಿಕೆ ೩೮೫**

ಪೂರ್ವದಲ್ಲಿ ಸಮಾಸೋದ್ದೇಶಗಳನ್ನು ವಿಧಿಸಿ ಈಗ ಕೆಲವು ಪದಗಳಿಗೆ ಬರುವ ದ್ವಿರುಕ್ತಿ ಪ್ರಕರಣವನ್ನು ಪ್ರಾರಂಭಿಸುವನಾಗಿ ಮೊದಲು ಅರ್ಥವಿಶೇಷದಲ್ಲಿ ಅನೇಕೋಕ್ತಿಯನ್ನು ಹೇಳುತ್ತಾನೆ.

**ಸೂತ್ರಂ ॥ ಸಂಭ್ರಮೇಽಸಕೃತ್ ॥ ೩೮೫ ॥**

**ಅರ್ಥ** ॥ ಅಚುಪ್ರತಿಪಾದನ ವಿಷಯದಲ್ಲಿ ಪ್ರಯೋಕ್ತುವಿಗೆ ಉಂಟಾಗುವ ತ್ವರೆಯೇ 'ಸಂಭ್ರಮ' ವೆಂಬುದು. ಅಂತಹ ಸಂಭ್ರಮವು ತೋರುತ್ತಿರಲು ಆವ ಪದವಾಗಲಿ ವಾಕ್ಯವಾಗಲಿ ಪ್ರಯೋಗಿಸಲ್ಪಡುವುದೊ ಅದಕ್ಕೆ ಅನೇಕಾವರ್ತಿ ಪ್ರಯೋಗ ಮಾಡಬೇಕು. 'ಅನೇಕಾವರ್ತಿ' ಎಂದರೆ ಒಂದಕ್ಕೆ ಹೆಚ್ಚಾಗಿ ಪರಸ್ಸಹಸ್ರಬೇಕಾದರೂ ಆಗುವುದು; ಅದರಲ್ಲಿ ದ್ವಿರುಕ್ತಿಯನ್ನು ಮುಂದೆ ಹೇಳುವುದರಿಂದಲೂ ಅನವಸ್ಥಾದೋಷವು ಪ್ರಸಕ್ತವಾಗುವುದರಿಂದಲೂ ಇಲ್ಲಿ ತ್ರಿರುಕ್ತಿಯನ್ನಂಗೀಕರಿಸಬೇಕು.

**ಉದಾಹರಣೆ** ॥ 'ಕುಡು ಕುಡು ಕುಡು, ತುಡು ತುಡು ತುಡು, ಒಪ್ಪಿಸೊಪ್ಪಿಸೊಪ್ಪಿಸು, ನೋಡು ನೋಡು ನೋಡು, ಇತ್ತಬಾ ಇತ್ತಬಾ ಇತ್ತಬಾ, ಆನೆಬಂದುದಾನೆಬಂದುದಾನೆಬಂದುದು, ದಂಡುಬಂದುದೇಳ್ ದಂಡುಬಂದುದೇಳ್ ದಂಡುಬಂದುದೇಳ್ ॥' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೮೫**

ಈ ಸೂತ್ರದಲ್ಲಿ — 'ಸಂಭ್ರಮೇ ಅಸಕೃತ್' ಎಂದು ಎರಡು ಪದಗಳಿರುವುವು. ಇಲ್ಲಿ 'ದ್ವಿಃ' ಎಂಬುದನ್ನು ಹೇಳದೆ 'ಅಸಕೃತ್' ಎಂಬ ಶಬ್ದಪ್ರಯೋಗವನ್ನು ಮಾಡಿರುವುದರಿಂದ 'ತ್ರಿರುಕ್ತಿ' ಯೆಂದು ಸಿದ್ಧವಾಗುವುದು. ಇದು ಪ್ರಥಮಪಾದದಲ್ಲಿ ಹೇಳಿದಂತೆ ವರ್ಣಮಾತ್ರಕ್ಕೆ ಬರುವುದಿಲ್ಲ ಎಂಬುದು 'ಸಂಭ್ರಮೇ' ಎಂಬ ಪದಸ್ವಾರಸ್ಯದಿಂದ ತಿಳಿಯುವುದು. ಅದುದರಿಂದ ಸಂಭ್ರಮಾದಿಗಳಲ್ಲಿ ಪ್ರಯುಜ್ಯಮಾನವಾದ ವಾಕ್ಯಕ್ಕಾಗಲಿ, ಪದಕ್ಕಾಗಲಿ ಅಸಕೃತ್ಪ್ರಯೋಗವೆಂದು ಸೂತ್ರಕ್ಕೆ ತಾತ್ಪರ್ಯವಾಗುವುದರಿಂದ ಅಂತಹ ಪದವಾಕ್ಯಗಳನ್ನೇ ಇಲ್ಲಿ ಉದಾಹರಿಸಿರುವುದು.

ಇಲ್ಲಿ 'ಸಂಭ್ರಮೇ' ಎಂದು ಹೇಳಿರುವುದರಿಂದ 'ಆನೆ ಬಂದುದು' ಮೊದಲಾದ ಸಾಧಾರಣ ಪ್ರಯೋಗದಲ್ಲಿ ಬರುವುದಿಲ್ಲ.

**ಅವತಾರಿಕೆ ೩೮೬**

ಹೀಗೆ ತ್ರಿರುಕ್ತಿಯನ್ನು ಹೇಳಿ ಅರ್ಥವಿಶೇಷದಲ್ಲಿ ದ್ವಿರುಕ್ತಿಯನ್ನು ವಿಧಿಸುತ್ತಾನೆ.

**ಸೂತ್ರಂ ॥ ಸಾತತ್ಯಕ್ರಿಯಾಸಾಕಲ್ಯಾಭೀಕ್ಷ್ಣ್ಯೇ ದ್ವಿಃ ॥ ೩೮೬ ॥**

**ಅರ್ಥ** ॥ 'ಸಾತತ್ಯ' ಮೊದಲಾದ ಅರ್ಥದಲ್ಲಿ ಪ್ರಯುಜ್ಯಮಾನ ಶಬ್ದವು ಎರಡುಬಾರಿ ಪ್ರಯೋಗಿಸಲ್ಪಡಬೇಕು.

**ಉದಾಹರಣೆ** ॥ 'ಬಂದಂ ಬಂದಂ, ಪೋದಂ ಪೋದಂ, ಕಂಡಂ ಕಂಡಂ ॥' ಮೊದಲಾದುವು ಸಾತತ್ಯಕ್ಕೆ; ಕೊಯ್ ಕೊಯ್ಯೆಂದು ಕೊಯ್ದಂ, ಪೊಯ್ ಪೊಯ್ಯೆಂದು ಪೊಯ್ದಂ,[೧] ಬಾಬಾ

---

ಪಾಠಾಂತರ : ೧ ಪೊಯ್ ಪೊಯ್ಯೆನುತ್ತೆ ಪೊಯ್ದಂ

ಯೆನುತ್ತೆ ಬಂದಂ॥ ಮೊದಲಾದುವು ಕ್ರಿಯಾಸಾಕಲ್ಯಕ್ಕೂ, ಅಟ್ಟಟ್ಟಿಟ್ಟಿಪಿದಂ, ಉಂಡುಂಡು ಪೋದಂ, ನೋಡಿನೋಡಿ ನಕ್ಕಂ॥ ಮೊದಲಾದುವು ಆಭೀಕ್ಷ್ಣ್ಯಕ್ಕೂ ಉದಾಹರಣೆಗಳು.

**ವಿಚಾರ ೩೮೬**

ಈ ಸೂತ್ರದಲ್ಲಿ — 'ಸಾತತ್ಯಕ್ರಿಯಾಸಾಕಲ್ಯಾಭೀಕ್ಷ್ಣ್ಯೇ, ದ್ವಿಃ' ಎಂದು ಎರಡು ಪದಗಳಿರುವುವು. ಸಾತತ್ಯವೆಂದರೆ — ಕ್ರಿಯಾಂತರಗಳಿಂದ ವ್ಯವಧಾನವಿಲ್ಲದಿರುವುದು. (ವಿವಕ್ಷಿತವಾದ ಕ್ರಿಯೆ ಸ್ವಯಂ ಎಷ್ಟರವರೆಗಿರುವುದೊ ಅಷ್ಟರವರೆಗೂ ವಿಜಾತೀಯ ಕ್ರಿಯಾಂತರಗಳಿಂದ ವ್ಯವಧಾನವಿಲ್ಲದಿರುವುದೇ ಸಾತತ್ಯವೆಂಬುದು). ಕ್ರಿಯಾಸಾಕಲ್ಯವೆಂದರೆ— ಲೋಕದಲ್ಲಿ 'ಕ್ರಿಯೆ' ಎಂಬುದು ಅಖಂಡಾಕಾರವಾಗಿರದೆ ಅನೇಕಾವಾಂತರಕ್ರಿಯಾಕಲಾಪರೂಪವಾಗಿಯೇ ಇರುವುದು. ಅಂತಹ ಅವಾಂತರ ಕ್ರಿಯೆಗಳ ಅವೈಕಲ್ಯವೇ ಮುಖ್ಯ ಕ್ರಿಯೆಗೆ ಸಾಕಲ್ಯವೆಂಬುದು ಪ್ರಸಿದ್ಧವಾಗಿರುವುದು. ಈ ಅವಯವಕ್ರಿಯಾಕಾರ್ತ್ಸ್ನ್ಯವನ್ನೆ ಇಲ್ಲಿ ಕ್ರಿಯಾಸಾಕಲ್ಯವೆಂದು ಹೇಳಲ್ಪಡುವುದು. ಆಭೀಕ್ಷ್ಣ್ಯವೆಂದರೆ — ಆವೃತ್ತಿ, ಪುನಃಪುನಃ ಅಥವಾ ಅತಿಶಯವೆಂದರ್ಥವು. ಈ ಅರ್ಥಗಳಲ್ಲಿ ಪ್ರಯೋಗಿಸಲ್ಪಡುವ ಪದವಾಕ್ಯಗಳಿಗೆ ದ್ವಿಃಪ್ರಯೋಗವು ಇದರಿಂದ ವಿಧಿಸಲ್ಪಡುವುದು. ಆದುದರಿಂದ 'ಬಂದಂಬಂದಂ' ಮೊದಲಾದುವು ಸಿದ್ಧಿಸುವುವು. 'ಬಂದಂಬಂದಂ' ಎಂಬಲ್ಲಿ ಆಗಮನಕ್ರಿಯೆಯೊಂದೇ ತೋರುವುದಲ್ಲದೆ ಬೇರೆ ಕ್ರಿಯೆ ತೋರುವುದಿಲ್ಲ. 'ಕೊಯ್ಕೊಯ್ದೊಂದು ಕೊಯ್ದಂ' ಎಂಬಲ್ಲಿ ಅನ್ಯವಿಷಯದಲ್ಲಿ ಮನಸ್ಸನ್ನಿಡದೆ ಇತರರಿಂದಲೂ ಕೊಯ್ಯುತ್ತ ತಾನೂ ಕೊಯ್ಯುತ್ತಾನೆಂದರ್ಥವು. 'ಅಟ್ಟಟ್ಟಿಟ್ಟಿಪಿದಂ' ಇಲ್ಲಿ ಆವುದಾದರೂ ಬೇರೆ ಕ್ರಿಯೆಯಿಂದ ವ್ಯವಧಾನವಿದ್ದರೂ 'ಪುನಃಪುನಃ' ಎಂದರ್ಥವು. ಆದುದರಿಂದ ಸಾತತ್ಯಕ್ಕೂ ಇದಕ್ಕೂ ವೈಲಕ್ಷಣ್ಯವಿರುವುದೆಂದು ಪೃಥಕ್ಪಾಠ ಮಾಡಿರುವುದು.

ಇಲ್ಲಿ ಸಾತತ್ಯಾದಿಗಳನ್ನು ಹೇಳಿರುವುದರಿಂದ 'ಬಂದಂ, ಕೊಯ್ದಂ, ಉಂಡಂ, ಪೋದಂ' ಮೊದಲಾದ ಪ್ರಯೋಗಗಳಲ್ಲಿ ದ್ವಿಃಪ್ರಯೋಗವಿಲ್ಲ.

**ಅವತಾರಿಕೆ ೩೮೭**

ಹೀಗೆ ಅರ್ಥಾಂತರದಲ್ಲಿಯೂ ದ್ವಿರ್ಭಾವವನ್ನು ವಿಧಿಸುತ್ತಾನೆ.

**ಸೂತ್ರಂ ॥ ನಾನಾವಧಾರಣೇ ॥ ೩೮೭ ॥**

**ಅರ್ಥ** ॥ ಅನೇಕಪ್ರಕಾರಗಳಾದ ಪದಾರ್ಥಗಳಿಗೆ ಭೇದದಿಂದ ಪರಿಮಾಣವನ್ನು ನಿಶ್ಚಯಿಸುವುದು ನಾನಾವಧಾರಣವೆನಿಸಿಕೊಳ್ಳುವುದು. ಅಲ್ಲಿ ಪ್ರಯುಜ್ಯಮಾನಶಬ್ದವು ದ್ವಿಃ ಪ್ರಯೋಗವನ್ನು ಹೊಂದುವುದು.

**ಉದಾಹರಣೆ** ॥ 'ಈ ಜಾಳಿಗೆಯೊಳವರ್ಗ್ಗೆ ಪೊನ್ನಂ ಪೊನ್ನಂ ಕುಡು, ಈ ಗಂಟಿನೊಳವರ್ಗ್ಗೆ ಪೊನ್ನಂ ಪೊನ್ನಂ ಕುಡು॥' ಎಂದರೆ ಪ್ರತ್ಯೇಕವಾಗಿ ನಿಷ್ಕಮಾತ್ರವನ್ನು ಕೊಡು ಅಧಿಕವಾಗಿ ಕೊಡಬೇಡವೆಂದರ್ಥವು.

**ವಿಚಾರ ೩೮೭**

ಈ ಸೂತ್ರದಲ್ಲಿ 'ನಾನಾವಧಾರಣೇ' ಎಂದೊಂದೇ ಪದವಿರುವುದು. ಪೂರ್ವದಿಂದ 'ದ್ವಿಃ' ಎಂಬುದು ಅನುವರ್ತಿಸಲ್ಪಡುವುದು. ನಾನಾವಧಾರಣವೆಂಬಲ್ಲಿ — ಅವಧಾರಣವೆಂದರೆ ನಿರ್ಣ

**ಸೂತ್ರಂ || ಕಡೆನಡೋಃಷ್ಟ್ವಃ || ೩೯೦ ||**

**ಅರ್ಥ ||** ಅಧಿಕ್ಯದಲ್ಲಿ ದ್ವಿರುಚ್ಯಮಾನಗಳಾದ ' ಕಡೆ, ನಡು ' ಎಂಬ ಶಬ್ದಗಳ ಪೂರ್ವಾವಯವದ ಆದಿಸ್ವರದ ಮುಂದಿನ ಭಾಗಕ್ಕೆ ' ಟ್ಟ ' ಎಂಬಾದೇಶವು ಬರುವುದು.

**ಉದಾಹರಣೆ ||** ' ಕಟ್ಟಕಡೆ, ನಟ್ಟನಡು || ' ಎಂಬಿವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೯೦**

ಈ ಸೂತ್ರದಲ್ಲಿ — ' ಕಡೆನಡೋಃ, ಟ್ಟಃ ' ಎಂದು ಎರಡು ಪದಗಳಿರುವುವು. ಪೂರ್ವದಿಂದ ' ಪೂರ್ವಸ್ಯ, ಆದಿಸ್ವರಾತ್ ' ಎಂಬಿವು ಅನುವರ್ತಿಸಲ್ಪಡುವುವು. ಪೂರ್ವದಂತೆಯೇ ಅನ್ವಯಗಳನ್ನು ಹೇಳಿ ' ಕಡೆ, ನಡು ' ಶಬ್ದಗಳ ಕೊನೆಯ ' ಡೆ, ಡು ' ಎಂಬಿವಕ್ಕೆ ' ಟ್ಟ ' ಎಂಬಾದೇಶವನ್ನು ವಿಧಿಸಲು ' ಕಟ್ಟಕಡೆ, ನಟ್ಟನಡು ' ಎಂಬ ಮೊದಲಾದ ಪ್ರಯೋಗಗಳು ಸಿದ್ಧಿಸುವುವು.

ಇಲ್ಲಿ ' ಕಡೆ ನಡೋಃ ' ಎಂದು ಸ್ವರೂಪನಿರ್ದೇಶವನ್ನು ಮಾಡಿರುವುದರಿಂದ ' ದೆಸೆದೆಸೆ, ಮೂಲೆಮೂಲೆ ' ಮೊದಲಾದ ಪ್ರಯೋಗಗಳಲ್ಲಿ ಬರುವುದಿಲ್ಲವೆಂದು ತಿಳಿಯಬೇಕು.

**ಅವತಾರಿಕೆ ೩೯೧**

ಹೀಗೆ ಆದೇಶವಿಶೇಷಗಳನ್ನು ವಿಧಿಸಿ ಕೆಲವು ಗುಣವಾಚಕ ಶಬ್ದಗಳ ' ದು ' ವಿಗೆ ಅ ಕಾರಮಾತ್ರಾದೇಶವನ್ನು ವಿಧಿಸುತ್ತಾನೆ.

**ಸೂತ್ರಂ || ದೋರದ್ಗುಣೋಕ್ತೇಃ || ೩೯೧ ||**

**ಅರ್ಥ ||** ಅಧಿಕ್ಯದಲ್ಲಿ ದ್ವಿರುಕ್ತವಾದ ಗುಣವಾಚಕಗಳ ಪೂರ್ವಭಾಗದ ' ದು ' ವಿಗೆ ಅ ಕಾರಾದೇಶವು ಬರುವುದು.

**ಉದಾಹರಣೆ ||** ' ತೋರತೋರ ಮುತ್ತುಗಳ್, ಬಟ್ಟಬಟ್ಟ ಮೊಲೆಗಳ್, ಬಿಳಿಯ ಬಿಳಿಯಂಚೆಗಳ್, ದೊಡ್ಡದೊಡ್ಡಾನೆಗಳ್ || ' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೯೧**

ಈ ಸೂತ್ರದಲ್ಲ — ' ದೋಃ, ಅತ್, ಗುಣೋಕ್ತೇಃ ' ಎಂದು ಮೂರು ಪದಗಳಿರುವುವು. ' ಪೂರ್ವಸ್ಯ, ಆಧಿಕ್ಯೇ ' ಮೊದಲಾದುವು ಪೂರ್ವದಂತೆಯೇ ಸಂಬಂಧಿಸಲ್ಪಡುವುವು. ತಥಾಚ— ಆಧಿಕ್ಯದಲ್ಲಿ ದ್ವಿರುಕ್ತಗಳಾದ ಗುಣವಾಚಕಗಳ ಪೂರ್ವಭಾಗದ ' ದು ' ವಿಗೆ ಅ ಕಾರಾದೇಶವಾಗುವುದೆಂದು ಸೂತ್ರಾರ್ಥವಾಗಲು ' ತೋರ ತೋರ ' ಮೊದಲಾದುವು ಸಿದ್ಧಿಸುವುವು.

ಇಲ್ಲಿ ' ಗುಣೋಕ್ತೇಃ ' ಎಂದು ಹೇಳಿರುವುದರಿಂದ ' ಪತ್ತು ಪತ್ತಾನೆಗಳ್ ' ಮೊದಲಾದುವಕ್ಕೆ ಬರುವುದಿಲ್ಲ.

ಆದರೆ ' ತೋರತೋರ ಮುತ್ತುಗಳ್, ಬಟ್ಟಬಟ್ಟ ಮೊಲೆಗಳ್ ' ಮೊದಲಾದ ಪ್ರಯೋಗಗಳ ಸಾಧನಾರ್ಥವಾಗಿ ಈ ಸೂತ್ರವು ಮಾಡಲ್ಪಟ್ಟಿರುವುದು. ಇವು — ' ತೋರಿತು ಮುತ್ತು, ಬಟ್ಟಿತು ಮೊಲೆ ' ಮೊದಲಾದುವುಗಳಲ್ಲಿ — ' **ಅಗ್ಬಹುಲಂ ||೩೪೫||** ' ಎಂಬ ಸೂತ್ರದಿಂದ ಅಗಾಗಮವನ್ನು ಮಾಡಲು ' **ತೋರಮುತ್ತು, ಬಟ್ಟಮೊಲೆ** ' ಮೊದಲಾದ ರೂಪಗಳು ಸಿದ್ಧಿಸಲು ತದೇಕದೇಶಗಳಾದ ' **ತೋರ, ಬಟ್ಟ** ' ಮೊದಲಾದ ಭಾಗಕ್ಕೆ ' **ಅಧಿಕ್ಯೇ || ೩೮೮ ||** ' ಎಂಬ ಪೂರ್ವೋಕ್ತ ಸೂತ್ರದಿಂದಲೇ ದ್ವಿರ್ಭಾವವನ್ನು ಮಾಡಲು ಸಿದ್ಧಿಸುವುವು. ಆದಾಗ್ಯೂ ಈ

ದ್ವಿರ್ವಚನವು ಪದಕ್ಕಾಗಲಿ ವಾಕ್ಯಕ್ಕಾಗಲಿ ಬರುವುದೇ ಅಲ್ಲದೆ ಸಮಾಸೈಕದೇಶಕ್ಕೆ ಬರುವುದಿಲ್ಲ ವಾದುದರಿಂದ 'ತೋರತೋರ ಮುತ್ತುಗಳ್' ಎಂದು ಸಿದ್ಧಿಸಲಾರದು. ಅದಕ್ಕಾಗಿ ಈ ಸೂತ್ರವು ಮಾಡಲ್ಪಟ್ಟಿದೆ—ಎಂದು ತಿಳಿಯುವುದು. ಇದರಿಂದ ಪೂರ್ವಭಾಗಕ್ಕೆ ಅ ಕಾರವು ಬರುವುದು. ಉತ್ತರಭಾಗಕ್ಕೆ 'ಅಗ್ಬಹುಲಂ' ಎಂಬುದರಿಂದ ಅಗಾಗಮವು ಬಂದು ಸಿದ್ಧವಾಗಿರುವುದೆಂದು ತಿಳಿಯಬೇಕು.

**ಅವತಾರಿಕೆ ೩೯೨**

ಹೀಗೆಯೇ ಕೆಲವಕ್ಕೆ ಲೋಪವನ್ನು ವಿಧಿಸುತ್ತಾನೆ.

**ಸೂತ್ರಂ ॥ ಗೋರ್ವ್ಯಂಜನಾದೇರ್ಲುಪ್ ॥ ೩೯೨ ॥**

**ಅರ್ಥ ॥** ಆಧಿಕ್ಯದಲ್ಲಿ ದ್ವಿರುಚ್ಯಮಾನಗಳಾದ 'ಗು' ಶಬ್ದಾಂತವ್ಯಂಜನಾದಿ ಶಬ್ದಗಳ ಪೂರ್ವಭಾಗದ 'ದು' ವಿಗೆ ಲೋಪವು ಬರುವುದು.

**ಉದಾಹರಣೆ ॥** 'ಕೆಱಕೆಱಗೆ ಪೋದಂ, ಸರಸೆರಗು, ಬೆಳಬೆಳಗು, ತಳತಳಗು, ಮೇಮೇಗು, ಮೂಮೂಗು ॥' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೯೨**

ಈ ಸೂತ್ರದಲ್ಲಿ — 'ಗೋಃ, ವ್ಯಂಜನಾದೇಃ, ಲುಪ್' ಎಂದು ಮೂರು ಪದಗಳಿರುವುವು. 'ಗೋಃ' ಎಂಬುದು 'ವ್ಯಂಜನಾದೇಃ' ಎಂಬ ಬಹುವ್ರೀಹಿ ಸಮಾಸದಿಂದ ಆಕ್ಷಿಪ್ತವಾದ ಅನ್ಯ ಪದಾರ್ಥಕ್ಕೆ ವಿಶೇಷಣವು. ಆ ಅನ್ಯಪದಾರ್ಥವು ಶಬ್ದರೂಪವೆಂದೇ ತಿಳಿಯಬೇಕು. ಇದಕ್ಕೆ 'ಗೋಃ' ಎಂಬುದನ್ನೂ ವಿಶೇಷಣ ಮಾಡಲು ತದಂತ ಲಾಭವು ಬರುವುದು. ತಥಾಚ — ದ್ವಿರುಚ್ಯಮಾನ 'ಗು' ಶಬ್ದಾಂತವ್ಯಂಜನಾದಿ ಶಬ್ದಗಳ ಪೂರ್ವಾವಯವದ 'ದು' ವಿಗೆ ಲೋಪವೆಂದು ಸೂತ್ರಾರ್ಥವನ್ನು ಮಾಡಲು 'ಕೆಱಕೆಱಗೆ' ಮೊದಲಾದುವು ಸಿದ್ಧಿಸುವುವು.

ಇಲ್ಲಿ 'ಗೋಃ' ಎಂದು ಹೇಳಿರುವುದರಿಂದ 'ಬೇಗೆಬೇಗೆ' ಮೊದಲಾದ ಪ್ರಯೋಗಗಳಲ್ಲಿಯೂ 'ವ್ಯಂಜನಾದೇಃ' ಎಂದು ಹೇಳಿರುವುದರಿಂದ 'ಒಳಗೊಳಗು' ಮೊದಲಾದ ಪ್ರಯೋಗಗಳಲ್ಲಿಯೂ ಬರುವುದಿಲ್ಲವೆಂದು ತಿಳಿಯಬೇಕು.

**ಅವತಾರಿಕೆ ೩೯೩**

ಹೀಗೆಯೇ ದ್ವಿರುಕ್ತವಾದ ಕೆಲವು ಧಾತುಗಳಲ್ಲಿಯೂ ಲೋಪವನ್ನು ವಿಧಿಸುತ್ತಾನೆ.

**ಸೂತ್ರಂ ॥ ಧಾತೋರ್ಬಹುಸ್ವರಸ್ಯ ॥ ೩೯೩ ॥**

**ಅರ್ಥ ॥** ಆಧಿಕ್ಯದಲ್ಲಿ ದ್ವಿರುಚ್ಯಮಾನವಾದ 'ಗು' ಶಬ್ದಾಂತ ವ್ಯಂಜನಾದಿ ಬಹುಸ್ವರ ಧಾತುಗಳ ಪೂರ್ವಭಾಗದ 'ದು' ವಿಗೆ ಲೋಪವು ಬರುವುದು.

**ಉದಾಹರಣೆ ॥** 'ತೊಳತೊಳಗಿದುದು, ಬೆಳಬೆಳಗಿದುದು, ಮುಱುಮುಱುಗಿದುದು, ಮೊಱಮೊಱಗಿದುದು ॥' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೯೩**

ಈ ಸೂತ್ರದಲ್ಲಿ — 'ಧಾತೋಃ, ಬಹುಸ್ವರಸ್ಯ' ಎಂದು ಎರಡು ಪದಗಳಿರುವುವು. ಪೂರ್ವಸೂತ್ರವೇ ಅನುವರ್ತಿಸಲ್ಪಡುವುದು. 'ಧಾತೋಃ' ಎಂಬುದಕ್ಕೆ 'ಬಹುಸ್ವರಸ್ಯ, ಗೋಃ,

ವ್ಯಂಜನಾದೇಃ ' ಇವೆಲ್ಲಾ ವಿಶೇಷಣವು. ' ಧಾತೋಃ ' ಎಂಬುದು ಅನುವರ್ತಮಾನವಾದ ' ಪೂರ್ವಸ್ಯ ' ಎಂಬುದಕ್ಕೆ ವಿಶೇಷಣವು. ' ಪೂರ್ವಸ್ಯ ' ಎಂಬುದು ' ದೋಃ ' ಎಂಬುದಕ್ಕೆ. ತಥಾಚ — ಆಧಿಕ್ಯದಲ್ಲ ದ್ವಿರುಚ್ಯಮಾನವಾದ 'ಗು' ಶಬ್ದಾಂತವ್ಯಂಜನಾದಿಬಹುಸ್ವರಧಾತುಗಳ ಪೂರ್ವಭಾಗದ ದು-ವಿಗೆ ಲೋಪವೆಂದು ಸೂತ್ರಾರ್ಥವಾಗಲು ' ತೊಳತೊಳಗಿದುದು ' ಮೊದಲಾದುವು ಸಿದ್ಧಿಸುವುವು.

ಇಲ್ಲಿ ಸಾಮಾನ್ಯವಾಗಿ ಹೇಳಿರುವ ಪೂರ್ವಸೂತ್ರದಿಂದಲೇ ಸಿದ್ಧಿಸುತ್ತಿರಲು ಪುನಃ ಈ ಸೂತ್ರವನ್ನು ಪ್ರಾರಂಭಿಸಿರುವುದು ಬಹುಸ್ವರವುಳ್ಳ ಧಾತುಗಳಿಗೇ ಬರುವುದೆಂದು ಬೋಧಿಸುವುದು. ಅದರಲ್ಲಿಯೂ ಬಹುಸ್ವರಪದಗ್ರಹಣಸ್ವಾರಸ್ಯದಿಂದ ದ್ವಿಸ್ವರದಲ್ಲಿ ಬರುವುದಿಲ್ಲವೆಂದೂ ಸಿದ್ಧಿಸುವುದು.

**ಅವತಾರಿಕೆ ೩೯೫**

ಹಿಂದೆ ಪ್ರಾಪ್ತದ್ವಿರ್ಭಾವವುಳ್ಳ ಶಬ್ದಗಳಲ್ಲಿ ಲೋಪಮಾತ್ರವನ್ನು ವಿಧಿಸಿದನು. ಈಗ ಕೆಲವಕ್ಕೆ ದ್ವಿತ್ವವನ್ನೂ ವಿಧಿಸಿ ವೈಕಲ್ಪಿಕ ಲೋಪವನ್ನು ವಿಧಿಸುತ್ತಾನೆ.

**ಸೂತ್ರಂ || ವಾನುಕರಣೇ || ೩೯೫ ||**

**ಅರ್ಥ ||** ಅನುಕರಣ ಶಬ್ದಕ್ಕೆ ದ್ವಿರ್ಭಾವವು ಬರುವುದು. ಅಲ್ಲಿ ಪೂರ್ವಭಾಗದ ' ದು ' ವಿಗೆ ಲೋಪವು ವಿಕಲ್ಪವಾಗಿ ಬರುವುದು.

**ಉದಾಹರಣೆ ||** ' ಕಮ್ಮನೆ ಕಮ್ಮನೆ—ಕಮ್ಮಕಮ್ಮನೆ, ತಣ್ಣನೆ ತಣ್ಣನೆ—ತಣ್ಣತಣ್ಣನೆ, ಮೆಲ್ಲನೆ ಮೆಲ್ಲನೆ—ಮೆಲ್ಲಮೆಲ್ಲನೆ || ' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೯೫**

ಈ ಸೂತ್ರದಲ್ಲಿ — ' ವಾ, ಅನುಕರಣೇ ' ಎಂದು ಎರಡು ಪದಗಳಿರುವುವು. ' ದ್ವಿಃ, ಪೂರ್ವಸ್ಯ, ದೋಃ, ಲುಪ್ ' ಎಂಬಿವು ಅನುವರ್ತಿಸಲ್ಪಡುವುವು. ತಥಾಚ— ಅನುಕರಣದಲ್ಲಿರುವ ಪದಕ್ಕೆ ದ್ವಿರ್ಭಾವವೂ ಅದರ ಪೂರ್ವಭಾಗದ ದು-ವಿಗೆ ವಿಕಲ್ಪವಾಗಿ ಲೋಪವೂ ಬರುವುದೆಂದು ಸೂತ್ರಾರ್ಥವಾಗಲು ' ಕಮ್ಮಕಮ್ಮನೆ ' ಮೊದಲಾದುವು ಸಿದ್ಧಿಸುವುವು.

ಇಲ್ಲಿ ವ್ಯಾಖ್ಯಾನ ಪರಿಭಾಷೆಯಿಂದ ಅನುಕರಣದಲ್ಲಿರುವ ಪದಕ್ಕೆ ದ್ವಿರ್ಭಾವವಲ್ಲದೆ ವಾಕ್ಯಕ್ಕೆ ಬರುವುದಿಲ್ಲ. ಅದರಲ್ಲಿಯೂ ಕ್ರಿಯಾನುಕರಣಕ್ಕೇ ಬರುವುದೆಂದು ತಿಳಿಯಬೇಕು. ಆದುದರಿಂದಲೇ ಪ್ರಾಚೀನರು —

**ವನಜಪರಾಗದೊಳ್ ಪೊರಳ್ದು ಕಮ್ಮನೆ ಕಮ್ಮನೆ ಕೂಡುವಂಚೆವಿಂ**
**ದಿನ ನಿಱುಮುಪ್ಪುೞಿೊಳ್ ನುಸುಳ್ದು ಮೆಲ್ಲನೆ ಮೆಲ್ಲನೆ ಕಯ್ಗೆವಂದ ಮಾ**
**ವಿನ ಸೊನೆವಂದಲೊಳ್ ನೆನೆದುತಣ್ಣನೆತಣ್ಣನೆ ಬಂದುದಂದು ಕಂ**
**ಪಿನ ಸಿರಿಗೆಯ್ದಿವಪ್ಪ ಮದಭೃಂಗವಧೂರುತನೊಂದುಮಾರುತಂ**

ವನಿತಾಕೇಶಕಲಾಪನವ್ಯಕುಸುಮಾಮೋದಂಗಳಿಂ ಕಮ್ಮಕ
ಮ್ಮನೆ ಕಾಂತಾಕುಟಿಲಾಳಕಸ್ತನಘಟಪ್ರೋದ್ಘಟ್ಟದಿಂ ಮೆಲ್ಲಮೆ
ಲ್ಲನೆ ನಾರೀಸುರತಾಂತ್ಯಜಾತಬಹುಲಸ್ವೇದಾಂಬುವಿಂ ತಣ್ಣತ
ಣ್ಣನೆ ತೀಡಿತ್ತು ವಿಳಾಸಿನೀಸದನದಿಂ ಬಂದೊಂದು ಮಂದಾನಿಲಂ

ಮೊದಲಾಗಿ ಪ್ರಯೋಗಿಸಿರುವರು.

**ಅವತಾರಿಕೆ ೩೯೫**

ಹೀಗೆಯೇ ಇನ್ನೂ ಕೆಲವು ಶಬ್ದಗಳಿಗೆ ಅರ್ಥವಿಶೇಷದಲ್ಲಿ ದ್ವಿರ್ಭಾವವನ್ನು ಹೇಳಿ ಲೋಪವನ್ನೂ ವಿಧಿಸುತ್ತಾನೆ.

**ಸೂತ್ರಂ ॥ ಕೆಳಗುಮೇಗೋಃ ಸಾಮೀಪ್ಯೇ ॥ ೩೯೫ ॥**

**ಅರ್ಥ ॥ ದೇಶಕಾಲಕೃತಸಾಮೀಪ್ಯವು ತೋರುವಾಗ 'ಕೆಳಗು, ಮೇಗು' ಶಬ್ದಗಳಿಗೆ ದ್ವಿರ್ಭಾವವೂ ಅವುಗಳ ಪೂರ್ವಭಾಗದ ದು-ವಿಗೆ ಲೋಪವೂ ವಿಕಲ್ಪವಾಗಿ ಬರುವುದು.**

**ಉದಾಹರಣೆ** ॥ 'ಕೆಳಕೆಳಗೆ ನರಕಬಿಲಂಗಳ್, ಮೇಮೇಗೆ ಸ್ವರ್ಗಪಟಲಂಗಳ್, ಕೆಳಗೆ ಕೆಳಗೆ ನರಕಬಿಲಂಗಳ್, ಮೇಗೆ ಮೇಗೆ ಸ್ವರ್ಗಪಟಲಂಗಳ್, ಕೆಳಕೆಳಗೆ ದುರ್ಭಿಕ್ಷಂ, ಕೆಳಗೆ ಕೆಳಗೆ ದುರ್ಭಿಕ್ಷಂ, ಮೇಮೇಗೆ ಸುಭಿಕ್ಷಂ, ಮೇಗೆ ಮೇಗೆ ಸುಭಿಕ್ಷಂ ॥' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೯೫**

ಈ ಸೂತ್ರದಲ್ಲಿ — 'ಕೆಳಗುಮೇಗೋಃ, ಸಾಮೀಪ್ಯೇ' ಎಂದು ಎರಡು ಪದಗಳಿರುವುವು. ಪೂರ್ವದಂತೆ 'ಆಧಿಕ್ಯೇ' ಎನ್ನುವುದನ್ನು ಬಿಟ್ಟು 'ದ್ವಿಃ' ಮೊದಲಾದುವು ಅನುವರ್ತಿಸಲ್ಪಡುವುವು. ತಥಾಚ — ಸಾಮೀಪ್ಯವು ತೋರುವಾಗ 'ಕೆಳಗು, ಮೇಗು' ಎಂಬಿವಕ್ಕೆ ದ್ವಿರ್ಭಾವವು ಅದರ ಪೂರ್ವಖಂಡದ ದು-ವಿಗೆ ವಿಕಲ್ಪವಾಗಿ ಲೋಪವೂ ಬರುವುದೆಂದು ಸೂತ್ರಾರ್ಥವಾಗಲು 'ಕೆಳಕೆಳಗೆ' ಮೊದಲಾದುವು ಸಿದ್ಧಿಸುವುವು.

ಇಲ್ಲಿ 'ಸಾಮೀಪ್ಯೇ' ಎಂದು ಹೇಳಿರುವುದರಿಂದ 'ಮರದಮೇಗೆ ತಿಂಗಳ್, ಮುಗಿಲಮೇಗೆ ತಾರಗೆ' ಮೊದಲಾದುವುಗಳಲ್ಲಿ ಔತ್ತರಾಧರ್ಯಮಾತ್ರವೇ ತೋರುವುದಲ್ಲದೆ ಸಾಮೀಪ್ಯವು ತೋರುವುದಿಲ್ಲವಾದುದರಿಂದ ದ್ವಿರ್ಭಾವಾದಿಗಳು ಬರುವುದಿಲ್ಲವೆಂದು ತಿಳಿಯುವುದು.

**ಅವತಾರಿಕೆ ೩೯೬**

ಹೀಗೆಯೇ ಅರ್ಥವಿಶೇಷದಲ್ಲಿ ಮೊದಲ್ ಶಬ್ದಕ್ಕೆ ದ್ವಿತ್ವವನ್ನೂ ಪೂರ್ವಖಂಡಕ್ಕೆ ವೈಕಲ್ಪಿಕ ಲೋಪವನ್ನೂ ವಿಧಿಸುತ್ತಾನೆ.

**ಸೂತ್ರಂ ॥ ಮೊದಲೋಽನ್ಯತೋಽತಿಶಯೇ ॥ ೩೯೬ ॥**

**ಅರ್ಥ ॥ ಬೇರೆ ವಸ್ತುಗಳಿಗಿಂತಲೂ ಅತಿಶಯಾರ್ಥವು ತೋರುವಾಗ 'ಮೊದಲ್' ಎಂಬುದಕ್ಕೆ ದ್ವಿರ್ಭಾವವೂ ಪೂರ್ವಖಂಡಕ್ಕೆ ವಿಕಲ್ಪವಾಗಿ ಲೋಪವೂ ಬರುವುದು.**

**ಉದಾಹರಣೆ** ॥ 'ಬಸಂತದೊಳಸುಗೆ ಮೊದಮೊದಲೊಳ್ ಪೂತುದು, ಮೊದಲ್ ಮೊದಲ್ ಪೂತುದು' ಎಂದರೆ — ಇತರ ಗಿಡುಗಳಿಗಿಂತಲೂ ಮುಂಚೆ ಹೂಬಿಟ್ಟಿತೆಂದರ್ಥವು. ಧುರದೊಳಿವರ್ ಮೊದಮೊದಲೊಳೆಚ್ಚರ್' ॥ ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೯೬**

ಈ ಸೂತ್ರದಲ್ಲಿ — ' ಮೊದಲಃ, ಅನ್ಯತಃ, ಅತಿಶಯೇ ' ಎಂದು ಮೂರು ಪದಗಳಿರುವುವು. ' ದ್ವಿಃ, ಪೂರ್ವಸ್ಯ, ಲುಪ್, ವಾ ' ಎಂಬೀ ನಾಲ್ಕು ಪದಮಾತ್ರವೇ ಅನುವರ್ತಿಸಲ್ಪಡುವುದು. ತಥಾಚ, ಅನ್ಯಪದಾರ್ಥಕ್ಕಿಂತಲೂ ಒಂದಕ್ಕೆ ಅತಿಶಯವು ತೋರುವಾಗ ' ಮೊದಲ್ ' ಎಂಬುದಕ್ಕೆ ದ್ವಿರ್ಭಾವವೂ ಅದರ ಪೂರ್ವಖಂಡಕ್ಕೆ ವೈಕಲ್ಪಿಕ ಲೋಪವೂ ಬರುವುದೆಂದು ಸೂತ್ರಾರ್ಥವಾಗಲು ' ಮೊದಮೊದಲ್ ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು. ಪೂರ್ವದಲ್ಲಿ ಆಧಿಕ್ಯಾರ್ಥದಲ್ಲಿ ದ್ವಿರ್ಭಾವವೂ ಪೂರ್ವಖಂಡದಲ್ಲಿ ಉತ್ತರಾವಯವಕ್ಕೆ ಆದೇಶವಿಶೇಷವೂ ವಿಧಿಸಲ್ಪಟ್ಟಿತು. ಇಲ್ಲಿ ಅತಿಶಯಾರ್ಥದಲ್ಲಿ ಕಾರ್ಯವಿಶೇಷವೂ ವಿಧಿಸಲ್ಪಡುವುದೆಂದು ಇದು ಸಾರ್ಥಕವಾಗಿರುವುದು.

ಇಲ್ಲಿ ' ಅನ್ಯತಃ ' ಎಂದು ಹೇಳಿರುವುದರಿಂದ ' ಮಾಮರಂ ಮೊದಲ್ನಿರೆ ಪೂತುದು, ಬಳಿಕಂ ಕಾತುದು ' ಮೊದಲಾದ ಸ್ವವ್ಯಾಪಾರಾಪೇಕ್ಷೆಯಿಂದಲೆ ಅತಿಶಯವು ತೋರುವ ಪ್ರಯೋಗಗಳಲ್ಲಿಯೂ ' ಅತಿಶಯೇ ' ಎಂದು ಹೇಳಿರುವುದರಿಂದ ' ಮೊದಲುಂಡಂ ' ಮೊದಲಾದ ಪ್ರಯೋಗಗಳಲ್ಲಿಯೂ ಬರುವುದಿಲ್ಲವೆಂದು ತಿಳಿಯಬೇಕು.

**ಅವತಾರಿಕೆ ೩೯೭**

ಹೀಗೆಯೇ ಇನ್ನೂ ಕೆಲವು ಅರ್ಥವಿಶೇಷವು ತೋರುವಾಗ ದ್ವಿರ್ಭಾವ ಸುಬ್ಲೋಪಗಳನ್ನೂ ವಿಧಿಸುತ್ತಾನೆ.

**ಸೂತ್ರಂ || ವೀಪ್ಸಾನುಪೂರ್ವ್ಯೇ ಸುಪಃ ಶ್ಲುಪ್ || ೩೯೭ ||**

**ಅರ್ಥ || ಸಜಾತೀಯಗಳಾದ ಬಹುಪದಾರ್ಥಗಳಿಗೆ ಸಾಕಲ್ಯದಿಂದ ಪ್ರತ್ಯೇಕವಾಗಿ ಕ್ರಿಯಾದಿಗಳಿಂದ ಹೊಂದಬೇಕೆಂಬ ಪ್ರಯೋಕ್ತೃವಿನ ಇಚ್ಛೆಯೇ ವಿಪ್ಸೆಯೆಂಬುದು. ಕ್ರಮವನ್ನು ಮೀರದಿರುವುದೇ ಆನುಪೂರ್ವ್ಯವೆಂಬುದು. ಈಯುಭಯವಿಧವಾದ ಅರ್ಥದಲ್ಲಿರುವ ಶಬ್ದರೂಪಕ್ಕೆ ದ್ವಿರ್ಭಾವವು ಬರುವುದು. ಅದರಲ್ಲಿ ಪೂರ್ವಖಂಡದ ಸುಪ್ಪಿಗೆ ಲೋಪವು ವಿಕಲ್ಪವಾಗಿ ಬರುವುದು.**

**ಉದಾಹರಣೆ ||** ಕೇರಿಕೇರಿಯೊಳ್ ಮೆಱೆದಂ— ಕೇರಿಯೊಳ್ ಕೇರಿಯೊಳ್ ಮೆಱೆದಂ; ಮನೆಮನೆಗಳೊಪ್ಪಿದುವು — ಮನೆಗಳ್ ಮನೆಗಳೊಪ್ಪಿದುವು; ಪೊಱೆಪೊಱೆಗಳ ಚೆಲ್ವು — ಪೊಱೆಗಳ ಪೊಱೆಗಳ ಚೆಲ್ವು; ತಂತಮ್ಮ ಸಿರಿ — ತಮ್ಮ ತಮ್ಮ ಸಿರಿ || ಮೊದಲಾದುವು ವೀಪ್ಸೆಗೂ, ಮೊದಮೊದಲೊಳ್ ದೊಡ್ಡಿತ್ತು — ಮೊದಲೊಳ್ ಮೊದಲೊಳ್ ದೊಡ್ಡಿತ್ತು, ತುದಿತುದಿಯೊಳ್ ಸಣ್ಣಂ — ತುದಿಯೊಳ್ ತುದಿಯೊಳ್ ಸಣ್ಣಂ, ಅಜ್ಜಜ್ಜರಂ ಬಂದಿಸು — ಅಜ್ಜರನಜ್ಜರಂ ಬಂದಿಸು, ಕಿಱಿಯಕಿಱಿಯರಂ ಬೆಸಗೊಳ್ — ಕಿಱಿಯರಂ ಕಿಱಿಯರಂ ಬೆಸಗೊಳ್ || ' ಮೊದಲಾದುವು ಆನುಪೂರ್ವ್ಯಕ್ಕೂ ಉದಾಹರಣೆಗಳೆಂದು ತಿಳಿಯಬೇಕು.

**ವಿಚಾರ ೩೯೭**

ಈ ಸೂತ್ರದಲ್ಲಿ — ' ವಿಪ್ಸಾನುಪೂರ್ವ್ಯೇ, ಸುಪಃ, ಶ್ಲುಪ್ ' ಎಂದು ಮೂರು ಪದಗಳಿರುವುವು. ' ವಾ, ದ್ವಿಃ, ಪೂರ್ವಸ್ಯ ' ಎಂಬಿವು ಅನುವರ್ತಿಸಲ್ಪಡುವುವು. ತಥಾಚ — ವಿಪ್ಸಾದ್ಯರ್ಥದಲ್ಲಿರುವ ಶಬ್ದಕ್ಕೆ ದ್ವಿರ್ಭಾವವೂ ಆದರ ಪೂರ್ವಖಂಡದ ' ಸುಪ್ಪಿಗೆ ' ವೈಕಲ್ಪಿಕ ಲೋಪವೂ ಬರುವುದೆಂದು ಸೂತ್ರಾರ್ಥವಾಗಲು ' ಕೇರಿಕೇರಿಯೊಳ್ ' ಮೊದಲಾದುವು ಸಿದ್ಧಿಸುವುವು.

ಇಲ್ಲಿ 'ವೀಪ್ಸಾಸುಪ್ಪೂರ್ವೈ' ಎಂದು ಹೇಳಿರುವುದರಿಂದ 'ಮನೆಯೊಪ್ಪಿತು, ತುದಿಯೊಳ್ ಸಣ್ಣಂ' ಮೊದಲಾದ ಪ್ರಯೋಗಗಳಲ್ಲಿ ದ್ವಿತ್ವಾದಿಗಳಿಲ್ಲವೆಂದು ತಿಳಿಯುವುದು.

**ಅವತಾರಿಕೆ ೩೯೮**

ಪೂರ್ವದಲ್ಲಿ ದ್ವಿರುಚ್ಯಮಾನವಾದ ಶಬ್ದಗಳ ಪೂರ್ವಖಂಡದ 'ಸುಪ್ಪಿಗೆ' ಲೋಪವು ವಿಧಿಸಲ್ಪಟ್ಟಿತು. ಈಗ ತಿಙ್ಙಿಗೂ ವಿಧಿಸುತ್ತಾನೆ.

**ಸೂತ್ರಂ || ತಿಙಶ್ಚಾಬಾಧೇ || ೩೯೮ ||**

**ಅರ್ಥ || ಪೀಡಾವಿಷಯದಲ್ಲಿರುವ ಶಬ್ದಕ್ಕೆ ದ್ವಿರ್ಭಾವವು ಬರುವುದು. ಅಲ್ಲಿ ಪೂರ್ವಖಂಡದ ಸುಪ್ಪಿಗೂ ತಿಙ್ಙಿಗೂ ವಿಕಲ್ಪವಾಗಿ ಲೋಪವು ಬರುವುದು.**

**ಉದಾಹರಣೆ ||** 'ಮರಮರಂ — ಮರಂ ಮರಂ, ಪೋದಪೋದಂ — ಪೋದಂ ಪೋದಂ, ಕಲ್‌ಕಲ್ಲಂ — ಕಲ್ಲಂ ಕಲ್ಲಂ, ಪುಲ್‌ಪುಲ್ಲೊಳ್ — ಪುಲ್ಲೊಳ್ ಪುಲ್ಲೊಳ್, ಬಂದ ಬಂದಯ್ — ಬಂದಯ್ ಬಂದಯ್, ಬಾರ್‌ಬಾರೆಂ — ಬಾರೆಂ ಬಾರೆಂ, ಪೋಪಪೋಪೆಂ — ಪೋಪೆಂ ಪೋಪೆಂ ||' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೩೯೮**

ಈ ಸೂತ್ರದಲ್ಲಿ — 'ತಿಙಃ, ಚ, ಆಬಾಧೇ' ಎಂದು ಮೂರು ಪದಗಳಿರುವುವು. ಪೂರ್ವದಿಂದ 'ದ್ವಿಃ, ಪೂರ್ವಸ್ಯ, ಸುಪಃ, ಲ್ಲುಪ್, ವಾ' ಎಂಬಿವು ಅನುವರ್ತಿಸಲ್ಪಡುವುವು. 'ತಿಙಃ' ಎಂಬುದು ಸ್ಥಾನಷಷ್ಠ್ಯಂತವು. 'ಚ' ಎಂಬುದು 'ಸುಪಃ' ಎಂಬುದಕ್ಕೆ ಸಮುಚ್ಚಾಯಕವು. 'ಆಬಾಧೇ' ಎಂದರೆ 'ಪೀಡಾ' ಎಂದರ್ಥವು. ತಥಾಚ — ಪೀಡಾರ್ಥವು ತೋರುವಾಗ ಪ್ರಯುಜ್ಯಮಾನ 'ವಾ' ಶಬ್ದಕ್ಕೆ ದ್ವಿರ್ಭಾವವೂ ಅದರಲ್ಲಿ ಪೂರ್ವಖಂಡದ ಸುಪ್ಪಿಗೂ ತಿಙ್ಙಿಗೂ ವಿಕಲ್ಪವಾಗಿ ಲೋಪವು ಬರುವುದೆಂದು ಸೂತ್ರಾರ್ಥವಾಗಲು 'ಮರಮರಂ' ಮೊದಲಾದುವು ಸಿದ್ಧಿಸುವುವು.

ಇಲ್ಲಿ 'ಆಬಾಧೇ' ಎಂದು ಹೇಳಿರುವುದರಿಂದ — 'ಮರಂ, ಕಲ್, ಬಂದಯ್, ಪೋಪೆಂ' ಮೊದಲಾದ ಪ್ರಯೋಗಗಳಲ್ಲಿ ಪೀಡೆಯು ತೋರದೇ ಇರುವುದರಿಂದ ದ್ವಿರ್ಭಾವಾದಿಗಳು ಬಂದಿಲ್ಲವೆಂದು ತಿಳಿಯಬೇಕು.

**ಅವತಾರಿಕೆ ೩೯೯**

ದ್ವಿರುಕ್ತಿಪ್ರಕರಣವು ಅರ್ಥವಿಶೇಷದಲ್ಲಿ ಪ್ರಯುಜ್ಯಮಾನಪದವಾಕ್ಯವಿಷಯಕವಾದುದರಿಂದ ಅದನ್ನು ಹೇಳಿ ಅದರನಂತರದಲ್ಲಿ ಪ್ಲುತವನ್ನು ಅರ್ಥವಿಶೇಷದಲ್ಲಿ ಪ್ರಯುಜ್ಯಮಾನಪದವಾಕ್ಯ ವಿಷಯಕವೆಂದು ಪ್ಲುತವಿಧಿಪ್ರಕರಣವನ್ನು ಪ್ರಾರಂಭಿಸುವನಾಗಿ ಮೊದಲು ಕೆಲವರ್ಥವಿಶೇಷದಲ್ಲಿ ದ್ವಿರ್ಭಾವವನ್ನೂ ಪ್ಲುತವನ್ನೂ ವಿಧಿಸುತ್ತಾನೆ.

**ಸೂತ್ರಂ || ವಾಕ್ಯಾದೇರಾಮಂತ್ರಿತಸ್ಯಾಸೂಯಾಸಮ್ಮತಿಕೋಪಕುತ್ಸನಭರ್ತ್ಸನೇಷ್ವನ್ಯತರಸ್ಯ ಪ್ಲುತಶ್ಚ || ೩೯೯ ||**

**ಅರ್ಥ ||** ಪರಗುಣಾಸಹನರೂಪವಾದ ಅಸೂಯಾರ್ಥದಲ್ಲಿಯೂ ಸಮ್ಮತ್ಯರ್ಥದಲ್ಲಿಯೂ ಕೋಪದಲ್ಲಿಯೂ ನಿಂದೆಯಲ್ಲಿಯೂ ಭರ್ತ್ಸನದಲ್ಲಿಯೂ ಪ್ರಯೋಗಿಸಲ್ಪಡುವ ವಾಕ್ಯದ ಆದಿಭೂತವಾದ ಸಂಬೋಧನಾಂತಪದಕ್ಕೆ ದ್ವಿರ್ಭಾವವೂ ಅದರ ಪೂರ್ವಭಾಗದ ಸ್ವರಕ್ಕಾಗಲಿ ಉತ್ತರಭಾಗದ ಸ್ವರಕ್ಕಾಗಲಿ ಪ್ಲುತವು ವಿಕಲ್ಪವಾಗಿ ಬರುವುದೆಂದು ಸೂತ್ರಾರ್ಥವಾಗುವುದು.

**ಉದಾಹರಣೆ ||** 'ದೇವದತ್ತಾ ೩, ದೇವದತ್ತ ದೇವದತ್ತ ದೇವದತ್ತಾ ೩, ದೇವದತ್ತ ದೇವದತ್ತ ನಿನಗೇನುಮಿಲ್ಲಂ' ಮೊದಲಾದುವು ಅಸೂಯೆಗೂ, 'ಮಗನೇ ೩, ಮಗನೆ, ಮಗನೆ ಮಗನೇ ೩, ಮಗನೆ ಮಗನೆ ನೀನೊಳ್ಳಿತುಗೆಯ್ದುಯ್' ಮೊದಲಾದುವು ಸಮ್ಮತಿಗೂ, 'ಬಾಣಸಿಗಾ ೩, ಬಾಣಸಿಗ, ಬಾಣಸಿಗ ಬಾಣಸಿಗಾ ೩, ಬಾಣಸಿಗ ಬಾಣಸಿಗ ನೀನಿರ್ದಪಯೋ ಪತ್ತಯೋ' ಮೊದಲಾದುವು ಕೋಪಕ್ಕೂ, 'ಪತಿಯೇ ೩, ಪತಿಯೆ, ಪತಿಯೆ ಪತಿಯೇ ೩, ಪತಿಯೆ ಪತಿಯೆ ನಿನ್ನ ಪೆಣ್ತನಮಂ ಸುಡುಗೆ' ಮೊದಲಾದುವು ಕುತ್ಸನೆಗೂ 'ದುರುಳಾ ೩, ದುರುಳ, ದುರುಳ ದುರುಳಾ ೩, ದುರುಳ ದುರುಳ ನಿನ್ನ ಕೊಂದಪೆಂ ಕಡಿದಪೆಂ ||' ಮೊದಲಾದುವು ಭರ್ತ್ಸನೆಗೂ ಉದಾಹರಣೆಗಳು.

**ವಿಚಾರ ೪೯೯**

ಈ ಸೂತ್ರದಲ್ಲಿ — 'ವಾಕ್ಯಾದೇಃ, ಆಮಂತ್ರಿತಸ್ಯ, ಅಸೂಯಾಸಮ್ಮತಿಕೋಪಕುತ್ಸನ ಭರ್ತ್ಸನೇ, ಅನ್ಯತರಸ್ಯ, ಪ್ಲುತಃ, ಚ' ಎಂದು ಆರು ಪದಗಳಿರುವುವು. 'ವಾಕ್ಯಾದೇಃ' ಎಂಬುದು 'ಆಮಂತ್ರಿತಸ್ಯ' ಎಂಬುದಕ್ಕೆ ವಿಶೇಷಣವು. 'ಆಮಂತ್ರಿತಸ್ಯ' ಎಂದರೆ ಸಂಬೋಧನಾಂತಪದಕ್ಕೆ ಸಂಕೇತವು. 'ಅಸೂಯೆ' ಯೆಂದರೆ ಗುಣವಲ್ಲಿಯೂ ದೋಷವನ್ನಾರೋಪಿಸಿ ಸಹಿಸದಿರುವುದು. 'ಸಮ್ಮತಿ' ಯೆಂದರೆ — ಕಾರ್ಯಗಳಲ್ಲಿ ಅಭಿಮತವನ್ನು ತೋರಿಸುವುದು. 'ಕೋಪ' ವೆಂದರೆ — ಕೋಪವೇ. 'ಕುತ್ಸನ' ವೆಂದರೆ — ನಿಂದೆ. 'ಭರ್ತ್ಸನ' ವೆಂದರೆ — ದಂಡನೆಯನ್ನು ಸೂಚಿಸುವುದು. 'ಇಂತಹ ಅರ್ಥದಲ್ಲಿ' ಎಂದು ಅಸೂಯಾದಿಪದಕ್ಕೆ ಅರ್ಥವು. 'ಅನ್ಯತರಸ್ಯ' ಎಂದರೆ — 'ಎರಡರಲ್ಲಿ ಒಂದಕ್ಕೆ' ಎಂದರ್ಥವು. 'ಪ್ಲುತಃ' ಎಂಬುದು ತ್ರಿಮಾತ್ರಸ್ವರಬೋಧಕವು. ಇದರಿಂದ 'ಸ್ವರಸ್ಯ' ಎಂಬುದು ಉಪಸ್ಥಿತವಾಗುವುದು. ಇದೇ ಇಲ್ಲಿ ಪ್ಲುತವಿಧಿಗೆ ಸ್ಥಾನಿಯು. ಚ ಕಾರವು 'ದ್ವಿಃ' ಎಂಬುದಕ್ಕೆ ಸಮುಚ್ಚಾಯಕವು. 'ವಾ' ಎಂಬುದು ಅನುವರ್ತಿಸಲ್ಪಡುವುದು. ತಥಾಚ — ಅಸೂಯಾದ್ಯರ್ಥದಲ್ಲಿರುವ ವಾಕ್ಯದ ಆದಿಯಾದ ಸಂಬೋಧನಾಂತಪದಕ್ಕೆ ದ್ವಿರ್ಭಾವವೂ ಅದರ ಪೂರ್ವೋತ್ತರಖಂಡಗಳಲ್ಲಿ ಆವುದಾದರೂ ಒಂದರ ಅಂತ್ಯಸ್ವರಕ್ಕೆ ವಿಕಲ್ಪವಾಗಿ ಪ್ಲುತವೂ ಬರುವುದೆಂದು ಸೂತ್ರಾರ್ಥವಾಗಲು 'ದೇವದತ್ತಾ ೩, ದೇವದತ್ತ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು.

ಇಲ್ಲಿ 'ವಾಕ್ಯಾದೇಃ' ಎಂದು ಹೇಳಿರುವುದರಿಂದ 'ಒಳ್ಳಿದಳ್ ನೀಂ ಮಗಳೇ' ಮೊದಲಾದ ವಾಕ್ಯಾಂತದಲ್ಲಿರುವುದಕ್ಕೂ 'ಆಮಂತ್ರಿತಸ್ಯ' ಎಂದು ಹೇಳಿರುವುದರಿಂದ 'ದೇವದತ್ತನೊಳ್ಳಿದಂ' ಮೊದಲಾದ ಪ್ರಥಮಾಂತಪದಕ್ಕೂ ಅಸೂಯಾದಿಗಳನ್ನು ಹೇಳಿರುವುದರಿಂದ 'ಪಾರ್ಶ್ವ ನೀಂ ಜನ್ನಮಂ ಮಾಡು, ಅರಸ ನೀಂ ಕಾಳಗಮಂ ಮಾಡು' ಮೊದಲಾದ ಸ್ವಾಭಾವಿಕಾರ್ಥವು ತೋರು

ವಲ್ಲಿಯೂ ದ್ವಿರ್ವಚನಾದಿಗಳು ಬರುವುದಿಲ್ಲ. ಇಲ್ಲಿ ‘ ಅಸಕೃತ್ ’ ಎಂಬುದಕ್ಕೆ ಅನುವರ್ತಿಯನ್ನು ಕೆಲವರು ಅಂಗೀಕರಿಸಿರುವುದರಿಂದ ತ್ರಿರುಕ್ತಿಯೂ ಬರುವುದು. ಆದುದರಿಂದ — ‘ ಬಂದ ಬಂದ ಬಂದ, ಬಂದಂ ಬಂದಂ ಬಂದಂ; ಉಂಡುಂಡು ಪೋದಂ, ತೊಳ ತೊಳ ತೊಳಗಿತ್ತು, ಬೆಳ ಬೆಳ ಬೆಳಗಿತ್ತು, ಮಗನೆ ಮಗನೆ ಮಗನೆ ’ ಮೊದಲಾದುವೂ ಸಿದ್ಧಿಸುವುವು.

|| ಇತಿ ದ್ವಿರುಕ್ತಿಪ್ರಕರಣಂ ಸಮಾಪ್ತಂ ||

## ॥ ಅಥ ಕೇವಲ ಪ್ಲುತವಿಧಿಪ್ರಕರಣಂ ॥

**ಅವತಾರಿಕೆ ೪೦೦**

ಪೂರ್ವದಲ್ಲಿ ಕೆಲವಕ್ಕೆ ದ್ವಿತ್ವವೂ ಕೆಲವಕ್ಕೆ ತ್ರಿತ್ವವೂ ಕೆಲವಕ್ಕೆ ದ್ವಿತ್ವಪ್ಲುತಗಳೂ ವಿಧಿಸಲ್ಪಟ್ಟವು. ಈಗ ಕೆಲವಕ್ಕೆ ಪ್ಲುತಮಾತ್ರವನ್ನು ವಿಧಿಸುತ್ತಾನೆ.

**ಸೂತ್ರಂ ॥ ದೂರಾದಾಹ್ವಾನೇ ಬಹುಲಂ ॥ ೪೦೦ ॥**

**ಅರ್ಥ ॥ ದೂರದಿಂದ ಕೂಗುವುದರಲ್ಲಿ ಪ್ರಯೋಗಿಸಿರುವ ಆಮಂತ್ರಿತಪದದ ಅಂತ್ಯಸ್ವರಕ್ಕೆ ಪ್ಲುತವು ಬಹುಳವಾಗಿ ಬರುವುದು.**

**ಉದಾಹರಣೆ** ॥ 'ಎಲೆ ಅಣ್ಣಾ ೩, ಇತ್ತ ಬಾ; ಎಲೆ ಅಕ್ಕಾ ೩, ಇತ್ತ ಬಾ; ಎಲೆ ಅಣ್ಣಾ ಇತ್ತ ಬಾ ೩; ಎಲೆ ಅಕ್ಕಾ ಇತ್ತ ಬಾ ೩ ॥' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೪೦೦**

ಈ ಸೂತ್ರದಲ್ಲಿ — 'ದೂರಾದಾಹ್ವಾನೇ, ಬಹುಲಂ' ಎಂದು ಎರಡು ಪದಗಳಿರುವುವು. ಪೂರ್ವದಿಂದ 'ಆಮಂತ್ರಿತಸ್ಯ, ಪ್ಲುತಃ' ಎಂಬಿವು ಅನುವರ್ತಿಸಲ್ಪಡುವುವು. 'ದೂರಾದಾಹ್ವಾನ'ವೆಂದರೆ ದೂರದಿಂದ ಕರೆಯುವುದು. ಇದರಲ್ಲಿ ಪ್ರಯೋಗಿಸುವ 'ಆಮಂತ್ರಿತಕ್ಕೆ' ಎಂದರೆ 'ಸಂಬೋಧನೆಗೆ' ಎಂದರ್ಥವು. ಪೂರ್ವದಂತೆ ಪ್ಲುತಪದಶ್ರವಣದಿಂದ 'ಸ್ವರಕ್ಕೆ' ಎಂದರ್ಥವಾಗುವುದು. ತಥಾಚ — ದೂರದಿಂದ ಕರೆಯುವುದರಲ್ಲಿ ಪ್ರಯೋಗಿಸುವ ವಾಕ್ಯದಲ್ಲಿರುವ ಸಂಬೋಧನಪದದ ಅಂತ್ಯಸ್ವರಕ್ಕೆ ಬಹುಳವಾಗಿ ಪ್ಲುತವು ಬರುವುದೆಂದು ಸೂತ್ರಾರ್ಥವಾಗಲು 'ಎಲೆ ಅಣ್ಣಾ ೩' ಮೊದಲಾದುವು ಸಿದ್ಧಿಸುವುವು. ಬಹುಲಗ್ರಹಣದಿಂದ ಆಹ್ವಾನವಿಷಯದಲ್ಲ ಆಮಂತ್ರಿತವಲ್ಲದಿರುವುದಕ್ಕೂ ಪ್ಲುತವು ಬರುವುದೆಂದು ತೋರುವುದು. ಆದುದರಿಂದ 'ಎಲೆ ೩ ಅಣ್ಣಾ ಇತ್ತ ಬಾ, ಎಲೆ ೩ ಅಕ್ಕ ಇತ್ತ ಬಾ, ಎಲೆ ಅಮ್ಮ ಬೇ೩ಗ ಬಾ, ಎಲೆ ಅಯ್ಯ ಬೇ೩ಗ ಬಾ' ಮೊದಲಾದ ಪ್ರಯೋಗಗಳಲ್ಲಿಯೂ ಬಹುಲಗ್ರಹಣಕ್ಕೆ, 'ಕ್ವಚಿದನ್ಯತ್ರಾಪಿ' ಎಂದು ವ್ಯಾಖ್ಯಾನಮಾಡುವುದರಿಂದ 'ಅಯ್ಯೋ ೩ ಅಕ್ಕ, ಅಯ್ಯೋ ೩ ಅಣ್ಣ, ಓಹೋ ೩ ಮಗನೆ, ಓಹೋ ೩ ತಂದೆ' ಮೊದಲಾದ ಖೇದಾದಿಗಳು ತೋರುವ ಪ್ರಯೋಗಗಳಲ್ಲಯೂ ಪ್ಲುತವು ಬರುವುದೆಂದು ತಿಳಿಯಬೇಕು.

**॥ ಇತಿ ಪ್ಲುತವಿಧಿಪ್ರಕರಣಂ ಸಮಾಪ್ತಂ ॥**

## ॥ ಅಥ ತದ್ಧಿತಪ್ರಕರಣಂ ॥

**ಅವತಾರಿಕೆ ೪೦೧**

ಪೂರ್ವದಲ್ಲಿ ಅನೇಕಪದನಿಮಿತ್ತಕವಾದ ಸಮಾಸವೃತ್ತಿಯನ್ನೂ ತದಾಶ್ರಯಕಾರ್ಯಗಳನ್ನೂ ಹೇಳಿದನು. ಈಗ ಏಕಪದನಿಮಿತ್ತಕವಾದ ತದ್ಧಿತವೃತ್ತಿಯನ್ನು ಹೇಳಲು ಮೊದಲು ಅಲ್ಲಿ ಸಾಧಾರಣವಾದ ಅಧಿಕಾರಸೂತ್ರವನ್ನು ಹೇಳುತ್ತಾನೆ.

**ಸೂತ್ರಂ ॥ ವಾದ್ಯಾತ್ತದ್ಧಿತಃ ॥ ೪೦೧ ॥**

**ಅರ್ಥ ॥ ಇದು ಅಧಿಕಾರಸೂತ್ರವು. ಆದುದರಿಂದ ಇಲ್ಲಿಂದ ಮೊದಲು ಈ ಪಾದ ಮುಗಿಯುವವರೆಗೂ ಹೇಳುವ ಸೂತ್ರಗಳಿಂದ ಆವ ಅರ್ಥದಲ್ಲಿ ಆವ ಪ್ರತ್ಯಯವು ವಿಧಿಸಲ್ಪಡುವುದೋ ಆ ಪ್ರತ್ಯಯವು ಆಯರ್ಥದಲ್ಲಿ ಆ ಸೂತ್ರದಲ್ಲಿ ಪ್ರಥಮೋಪಾತ್ತಶಬ್ದವಾವುದೋ ಅದಕ್ಕೆ ಪರವಾಗಿ ಬರುವುದು. ಆ ಪ್ರತ್ಯಯವು ತದ್ಧಿತ ಸಂಜ್ಞಕವಾಗುವುದು—ಎಂದು ಇದಕ್ಕೆ ಅರ್ಥವು. ಆದುದರಿಂದ ವಕ್ಷ್ಯಮಾಣ ಸೂತ್ರಗಳೇ ಇದಕ್ಕೆ ಉದಾಹರಣೆಗಳು.**

**ವಿಚಾರ ೪೦೧**

ಈ ಸೂತ್ರದಲ್ಲಿ — ' ವಾ, ಆದ್ಯಾತ್, ತದ್ಧಿತಃ ' ಎಂದು ಮೂರು ಪದಗಳಿರುವುವು. ಈ ಸೂತ್ರದಲ್ಲಿ ವಿಧೇಯವಿಲ್ಲವಾದುದರಿಂದ ಈ ಪಾದ ಮುಗಿಯುವವರೆಗೂ ಪ್ರತಿಸೂತ್ರದಲ್ಲಿಯೂ ಸಂಬಂಧಿಸಲ್ಪಡುವುದೆಂದು ಇದು ಅಧಿಕಾರಸೂತ್ರವೆಂದು ತಿಳಿಯಬೇಕು. ಇಲ್ಲಿ ವ್ಯಾಖ್ಯಾನ ಪರಿಭಾಷೆಯಿಂದ ಈ ಸೂತ್ರದಲ್ಲಿರುವ ಮೂರು ಪದಗಳಲ್ಲಿ ' ಆದ್ಯಾತ್ ' ಎಂಬುದು — '**ಭಾವೇ ತನಃ ॥ ೪೩೦ ॥**' ಎಂಬ ಸೂತ್ರದವರೆಗೇ ಸಂಬಂಧಿಸಲ್ಪಡುವುದು. ' ವಾ, **ತದ್ಧಿತಃ** ' ಎಂಬಿವು ಉತ್ತರತ್ರವೂ ಸಂಬಂಧಿಸಲ್ಪಡುವುವೆಂದು ತಿಳಿಯಬೇಕು. ಇದೂ ಪದವಿಧಿಯಲ್ಲಿ ಸೇರಿರುವುದರಿಂದ ' ಸಮರ್ಥಃ, ಪದವಿಧಿಃ ' ಎಂಬುದು ಇಲ್ಲಿಯೂ ಉಪಸ್ಥಿತವಾಗುವುದು. ಆದುದರಿಂದ ಸಾಮರ್ಥ್ಯವಿಲ್ಲದಿದ್ದೆಡೆಯಲ್ಲಿ ತದ್ಧಿತೋತ್ಪತ್ತಿಯಿಲ್ಲವೆಂದು ತಿಳಿಯುವುದು.

ಹೀಗೆ ತದ್ಧಿತವಿಧಿಸಾಧಾರಣವಾದ ಅಧಿಕಾರ ಸೂತ್ರವನ್ನು ಹೇಳಿ ವಿಧಿ ಸೂತ್ರವನ್ನು ಹೇಳುತ್ತಾನೆ.

**ಸೂತ್ರಂ ॥ ತದಸ್ಯಾಸ್ತ್ಯಸ್ಮಿನ್ನಿತಿ ವಂತಃ ॥ ೪೦೨ ॥**

**ಅರ್ಥ ॥ ' ಅದು ಇವನಿಗೆ ಇದೆ ' ಅಥವಾ ' ಇವನಲ್ಲಿದೆ ' ಎಂಬರ್ಥವನ್ನು ವಿವಕ್ಷಿಸಲು ಇಲ್ಲಿ ಆದ್ಯೋಚ್ಚಾರಿತವಾದ ತತ್ಪದಬೋಧ್ಯವಾದ ಪ್ರಥಮಾಂತದ ಮುಂದೆ ' ವಂತ ' ಪ್ರತ್ಯಯವು ವಿಕಲ್ಪವಾಗಿ ಬರುವುದು. ಇದಕ್ಕೆ ತದ್ಧಿತಸಂಜ್ಞೆ ಬರುವುದು. ಇದು ವಿಕಲ್ಪವೆಂದು ಹೇಳಿರುವುದರಿಂದ ಯಥಾಯೋಗವಾಗಿ ವಾಕ್ಯಸಮಾಸಗಳೂ ಉಂಟೆಂದು ತಿಳಿಯುವುದು.**

**ಉದಾಹರಣೆ ॥** ' ಆಯುವುಂಟೀತಂಗೆ ' ಅಥವಾ ' ಈತನೊಳ್ — ಆಯುವಂತಂ ' ಹೀಗೆಯೆ — ' ಜಸವಂತಂ, ಗುಣವಂತಂ, ಬುದ್ಧಿವಂತಂ ॥ ' ಮೊದಲಾದುವು ಇದಕ್ಕೆ ಲಕ್ಷ್ಯಗಳು.

ವಿಚಾರ ೪೦೩

ಈ ಸೂತ್ರದಲ್ಲಿ — 'ತತ್, ಅಸ್ಯ, ಅಸ್ತಿ, ಅಸ್ಮಿನ್, ಇತಿ, ವಂತಃ' ಎಂದು ಆರು ಪದಗಳಿರುವುವು. ಪೂರ್ವದಿಂದ — 'ವಾ, ಆದ್ಯಾತ್, ತದ್ಧಿತಃ' ಎಂಬ ಪದತ್ರಯವು ಅಧಿಕರಿಸಲ್ಪಡುವುದು. 'ತತ್' ಎಂಬುದು ಸಾಮಾನ್ಯವಾಗಿ ಲಕ್ಷ್ಯಸ್ಥವಾದ ಸತ್ತಾರ್ಥಕ ಧಾತ್ವರ್ಥ ಸಮಾನಾಧಿಕರಣವಾದ ಪ್ರಥಮಾಂತಪದಬೋಧಕವು. ಇದಕ್ಕೆ ಅಧಿಕೃತವಾದ 'ಆದ್ಯಾತ್' ಎಂಬುದನ್ನು ಸಂಬಂಧಿಸಲು ಪ್ರಥಮೋಪಾತ್ತವಾದ ಶಬ್ದವೇ ತದ್ಧಿತೋತ್ಪತ್ತಿಗೆ ಪ್ರಕೃತಿಯಾಗುವುದೆಂದು ಸೂಚಿತವಾಗುವುದು. ಹೀಗೆಯೇ ಆಯಾ ಸೂತ್ರದಲ್ಲಿ 'ಆದ್ಯಾತ್' ಎಂಬುದಕ್ಕೆ ಸಂಬಂಧಮಾಡಿ ಪ್ರಕೃತಿಯನ್ನು ನಿಶ್ಚಯಿಸಿಕೊಳ್ಳಬೇಕು. 'ಅಸ್ಯ' ಎಂಬುದು 'ಅಸ್ಮಿನ್' ಇವೆರಡೂ ಪ್ರತ್ಯಯದ ಅರ್ಥವನ್ನು ಬೋಧಿಸುವುದು. ಇದರಿಂದ 'ವಂತಾದಿ' ಪ್ರತ್ಯಯಗಳು ಸಂಬಂಧಾರ್ಥದಲ್ಲಾಗಲಿ ಅಧಿಕರಣಾರ್ಥದಲ್ಲಾಗಲಿ ಬರುವುವು—ಎಂದು ಸೂಚಿತವಾಗುವುದು. 'ಅಸ್ತಿ' ಎಂಬುದು ಪ್ರಕೃತ್ಯರ್ಥಸಾಮಾನಾಧಿಕರಣ್ಯವನ್ನು ಸೂಚಿಸುವುದು. 'ವಾ' ಗ್ರಹಣದಿಂದ ವಾಕ್ಯಾದಿಗಳಿಗೂ ಸಾಧುತ್ವವನ್ನು ಬೋಧಿಸುವುದು. ತದ್ಧಿತಪದವು ವಿಧೇಯವಾದ ಪ್ರತ್ಯಯಕ್ಕೆ ಸಂಜ್ಞಾಬೋಧಕವು. ತಥಾಚ — 'ಅದು ಇವನಿಗುಂಟು' ಅಥವಾ 'ಇವನೊಳುಂಟು' ಎಂಬರ್ಥದಲ್ಲಿ ಸೂತ್ರೋಪಾತ್ತಪ್ರಥಮಾಂತಪದಬೋಧ್ಯವಾದ ಲಕ್ಷ್ಯಸ್ಥ ಶಬ್ದಕ್ಕೆ ಪರವಾಗಿ 'ವಂತ' ಪ್ರತ್ಯಯವು ವಿಕಲ್ಪವಾಗಿ ಬರುವುದು—ಎಂದು ಸೂತ್ರಾರ್ಥವಾಗಲು 'ಆಯುವಂತ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು.

ಇಲ್ಲಿ 'ತತ್' ಎಂದು ಹೇಳಿರುವುದು ಪ್ರಕೃತಿನಿರ್ದೇಶಾರ್ಥವಾಗಿ—ಎಂದು ತಿಳಿಯಬೇಕು. 'ಅಸ್ತಿ' ಎಂದು ಹೇಳಿರುವುದರಿಂದ — 'ಧನವಾದುದೀತಂಗೆ, ಧನಮಪ್ಪುದೀತಂಗೆ, ಧನಂ ಸವಿಾಪವಿಾತಂಗೆ' ಮೊದಲಾದ ಭೂತಭವಿಷ್ಯತ್ಸತ್ತಾರ್ಥವೂ ಸಾವಿಾಪ್ಯಾರ್ಥವೂ ತೋರುವ ಪ್ರಯೋಗಗಳಲ್ಲಿ ಬರುವುದಿಲ್ಲ. ಆದುದರಿಂದ ಅಲ್ಲಿ ವಾಕ್ಯರೂಪವಾಗಿಯೇ ಪ್ರಯೋಗಿಸಲ್ಪಡುವುದು. 'ಇತಿ' ಶಬ್ದೋಚ್ಚಾರಣೆಯು ವಕ್ತೃವಿವಕ್ಷೆಯನ್ನು ಸೂಚಿಸುವುದು. ಇದರಿಂದ ಪ್ರಾಚೀನರು ಅಂಗೀಕರಿಸಿರುವ —

ಭೂಮನಿಂದಾಪ್ರಶಂಸಾಸು ನಿತ್ಯಯೋಗೇऽತಿಶಾಯನೇ
ಸಂಸರ್ಗೇऽಸ್ತಿವಿವಕ್ಷಾಯಾಂ ಪ್ರಾಯೋ ವಂತಾದಯೋ ಮತಾಃ

ಎಂಬ ಕಾರಿಕೋಕ್ತಾರ್ಥಗಳಲ್ಲೆಲ್ಲಾ 'ವಂತಾದಿ' ಪ್ರತ್ಯಯಗಳು ಬರುವುವೆಂದು ತಿಳಿಯುವುದು. ಇದರಿಂದ — 'ಧನವಂತಂ, ದ್ರವ್ಯವಂತಂ' ಮೊದಲಾದುವು ಭೂಮಾರ್ಥಕ್ಕೂ, 'ಜಗಳವಂತಂ, ದೋಷವಂತಂ' ಮೊದಲಾದುವು ನಿಂದಾರ್ಥಕ್ಕೂ 'ರೂಪವಂತಂ, ಗುಣವಂತಂ' ಮೊದಲಾದುವು ಪ್ರಶಂಸಾರ್ಥಕ್ಕೂ, 'ವಿಸವಂತಂ ಸೇಸಂ, ಬಿಕ್ಕೆವಂತಂ ಗರುಡಂ' ಮೊದಲಾದುವು ನಿತ್ಯಯೋಗಕ್ಕೂ, 'ಪೊಟ್ಟೆವಂತಂ ಬೆನಕಂ' ಮೊದಲಾದುವು ಅತಿಶಯಕ್ಕೂ, 'ದಂಡವಂತಂ, ಸತ್ತಿಗೆವಂತಂ' ಮೊದಲಾದುವು ಸಂಸರ್ಗಮಾತ್ರಕ್ಕೂ, ಉದಾಹರಣೆಗಳಾಗಿರುವುವು. ಆದರೆ ಈ ಭೂಮಾದಿ ಪ್ರದರ್ಶನವು ಕ್ವಚಿತ್ ಸತ್ತಾಮಾತ್ರದಲ್ಲಿ — 'ಜನ್ನವಿರವಂತಂ ಪಾರ್ವಂ, ಪೆಂಡತಿವಂತನೀತಂ' ಮೊದಲಾದ ಪ್ರಯೋಗಗಳಿರುವುದರಿಂದ ಪ್ರಾಯಿಕವೆಂದು ತಿಳಿಯಬೇಕು.

ಮತ್ತು ಅನವಸ್ಥಾದೋಷವು ಬರುವುದರಿಂದ 'ವಂತ' ಪ್ರತ್ಯಯಾಂತಗಳಮೇಲೆ ಪುನಃ ವಿವಕ್ಷೆ ಮಾಡಲು 'ವಂತ' ಪ್ರತ್ಯಯವು ಬರುವುದಿಲ್ಲವೆಂದು ತಿಳಿಯಬೇಕು. ಆದುದರಿಂದ — 'ನೀತಿಯುಂಟೇತಂಗೆ, ನೀತಿವಂತಂ, ನೀತಿವಂತನುಂಟು ಇವಂಗೆ' ಮೊದಲಾದೆಡೆಗಳಲ್ಲಿ ವಾಕ್ಯವೇ ನಿಲ್ಲುವುದು. ಹೀಗೆಯೇ ವಾಮನಾಚಾರ್ಯರು —

ನ ಬಹುವ್ರೀಹಿರ್ನಿರ್ವಾಹ್ಯೇ ಭವಂತಿ ಮತುಬಾದಯಃ
ನ ಕರ್ಮಧಾರಯಾನ್ ಮತ್ವರ್ಥೀಯಃ

ಎಂಬ ವಚನಗಳಿಂದ ಬಹುವ್ರೀಹಿ ವಿಷಯದಲ್ಲಿಯೂ ಕರ್ಮಧಾರಯಸಮಾಸದಮೇಲೂ 'ಮತುಬಾದಿ' ಪ್ರತ್ಯಯಗಳು ಬರುವುದಿಲ್ಲವೆಂದು ಬೋಧಿಸಿರುವುದರಿಂದ ಅದನ್ನು ಅನುಸರಿಸಿ ಭಾಷೆಯಲ್ಲಿಯೂ ಕರ್ಮಧಾರಯ ಸಮಾಸದಮೇಲೆ ವಂತಾದಿಗಳು ಬರುವುದಿಲ್ಲ. ಆದುದರಿಂದ 'ಅಲರ್ಗಣ್ಣುಂಟೇತಂಗೆ' ಮೊದಲಾದ ಪ್ರಯೋಗಗಳಲ್ಲಿ ಬಹುವ್ರೀಹಿಸಮಾಸವನ್ನೇ ಅಂಗೀಕರಿಸಬೇಕೆಂದು ಕೆಲವರು ಹೇಳುತ್ತಾರೆ — ಮತ್ತೆ ಕೆಲವರು 'ಸರ್ವಧನೀ, ಸರ್ವಕೇಶಿ' ಮೊದಲಾದ ಪತಂಜಲಿ ಮಹಾಭಾಷ್ಯಪ್ರಯೋಗವಿರುವುದರಿಂದಲೂ 'ಸಂದಿಗ್ಧಸಾಧ್ಯವಾನ್ ಪಕ್ಷಃ' ಎಂದು ನೈಯಾಯಿಕರ ಪ್ರಯೋಗವಿರುವುದರಿಂದಲೂ ಕ್ವಚಿತ್ ಕರ್ಮಧಾರಯದ ಮೇಲೆ ಮತ್ವರ್ಥಕಪ್ರತ್ಯಯಗಳು ಬರುವುವು. ಆದುದರಿಂದಲೇ 'ಉಗ್ರಪುತ್ರಾಪಿ' ಮೊದಲಾದ ಲೌಕಿಕ ಪ್ರಯೋಗಗಳು ಸಿದ್ಧಿಸುವುವು—ಎಂದು ಹೇಳುವರು. ಅವರಂತೆಯೇ ಭಾಷೆಯಲ್ಲಿಯೂ ಅಂಗೀಕರಿಸಿ 'ಅಲಗ್ಗಣ್ಣಂತಂ, ಕೋರಮುಡಿವಂತೆ' ಮೊದಲಾದ ಪ್ರಯೋಗಗಳಿಗೆ ಸಾಧುತ್ವವನ್ನು ಬೋಧಿಸುತ್ತಾರೆ.

ಯದ್ಯಪಿ ಇಲ್ಲಿ — ಧನವತ್, ಗುಣವತ್' ಮೊದಲಾದ ಸಂಸ್ಕೃತ ಮತ್ವಂತ ಶಬ್ದಗಳನ್ನು ತೆಗೆದುಕೊಂಡು ತದ್ಭವಪ್ರಕರಣದಲ್ಲಿ ಹೇಳಿರುವಂತೆ ಜಸಂತವದ್ರೂಪಾತಿದೇಶವನ್ನು ಮಾಡಿ ಕನ್ನಡಕ್ಕೆ ಲಿಂಗವಾಗಿ ತೆಗೆದುಕೊಳ್ಳಲು 'ಧನವಂತ, ಗುಣವಂತ' ಮೊದಲಾದುವು ಆ ಕಾರಾಂತ ಪ್ರಕೃತಿಕಮತ್ವಂತಗಳಿಗೆ ಸಿದ್ಧಿಸುವುವು. ಆದಾಗ್ಯೂ ಈ ಕಾರಾದ್ಯಂತ ಪ್ರಕೃತಿಕಗಳಾದ 'ಧೀಮತ್, ಬುದ್ಧಿಮತ್' ಮೊದಲಾದುವುಗಳಿಗೆ ಜಸಂತವದ್ರೂಪಾತಿದೇಶವನ್ನು ಮಾಡಲು 'ಧೀಮಂತ, ಬುದ್ಧಿಮಂತ' ಮೊದಲಾದ ರೂಪಗಳು ಸಿದ್ಧಿಸುವುವೇ ಅಲ್ಲದೆ 'ಧೀವಂತ, ಬುದ್ಧಿವಂತ' ಮೊದಲಾದ ವ ಕಾರಘಟಿತರೂಪಗಳು ಸಿದ್ಧಿಸುವುದಿಲ್ಲ. ಆದುದರಿಂದ ಈ 'ವಂತ' ಪ್ರತ್ಯಯವಿಧಿಯು ಭಾಷೆಯಲ್ಲಿ ಸಾರ್ಥಕವೆಂದು ತಿಳಿಯಬೇಕು. ಮತ್ತು ಸ್ತ್ರೀಲಿಂಗದಲ್ಲ — ಆ ಕಾರಾಂತ ಪ್ರಕೃತಿಕಮತ್ವಂತವನ್ನು ತೆಗೆದುಕೊಳ್ಳಲು 'ಗುಣವತಿ, ಧನವತಿ' ಮೊದಲಾದ ರೂಪಗಳಾಗುವುವೇ ಅಲ್ಲದೆ 'ಗುಣವಂತೆ, ಧನವಂತೆ' ಮೊದಲಾದ ರೂಪಗಳು ಸಿದ್ಧಿಸುವುದಿಲ್ಲ. ಮತ್ತು ಕೆಲವು ಭಾಷಾಶಬ್ದಗಳಮೇಲೂ ಈ 'ವಂತ' ಪ್ರತ್ಯಯವು ಬರುವುದರಿಂದ 'ಜಗಳವಂತ, ಪೆಂಡತಿವಂತ' ಮೊದಲಾದುವು ಸಿದ್ಧಿಸುವುವು. ಆದುದರಿಂದ ಇದೂ ಪ್ರಯೋಜನವೆಂದು ತಿಳಿಯಬೇಕು.

**ಅವತಾರಿಕೆ ೪೦೩**

ಪೂರ್ವೋಕ್ತಾರ್ಥವಿಷಯದಲ್ಲಿಯೇ ಗುಣವಾಚಕದಮೇಲೆ ಪ್ರತ್ಯಯವಿಶೇಷವನ್ನು ವಿಧಿಸಿ ಪ್ರಕೃತಿಯ 'ದು' ವಿಗೆ ಲೋಪವನ್ನೂ ವಿಧಿಸುತ್ತಾನೆ.

**ಸೂತ್ರಂ ॥ ಗುಣೋಕ್ತೇಃ ಕೋ ದುಲುಪ್ಚ ॥ ೪೦೩ ॥**

**ಅರ್ಥ ॥** ಗುಣವಾಚಕವಾದ ಪ್ರಥಮಾಂತಪದಕ್ಕೆ ಪರವಾಗಿ ಪೂರೋಕ್ತಾರ್ಥದಲ್ಲಿ ಕ-ಪ್ರತ್ಯಯವು ವಿಕಲ್ಪವಾಗಿ ಬರುವುದು. 'ದು' ವಿಗೆ ಲೋಪವೂ ಬರುವುದು.

**ಉದಾಹರಣೆ ॥** 'ಕರಿದುಂಟೀತಂಗೆ' ಅಥವಾ 'ಈತನೊಳ್ — ಕರಿಕಂ' ಹೀಗೆಯೇ 'ಬಿಳಿಕಂ, ಕಡಿಕಂ, ತೋಡಿಕಂ[೧] ॥' ಮೊದಲಾದುವು ಲಕ್ಷ್ಯಗಳು.

**ವಿಚಾರ ೪೦೩**

ಈ ಸೂತ್ರದಲ್ಲಿ — 'ಗುಣೋಕ್ತೇಃ, ಕಃ, ದು, ಲುಪ್, ಚ' ಎಂದು ಐದು ಪದಗಳಿರುವುವು. ಪೂರ್ವದಿಂದ 'ತತ್, ಅಸ್ಯ, ಅಸ್ತಿ, ಅಸ್ಮಿನ್' ಎಂಬುದು ಅನುವರ್ತಿಸಲ್ಪಡುವುದು. 'ವಾದ್ಯಾತ್ ತದ್ಧಿತಃ' ಎಂಬುದಕ್ಕೆ ಅಧಿಕಾರವಿರುವುದು. ತಥಾಚ — ಗುಣವಾಚಕವಾದ ಪ್ರಥಮಾಂತಪದದಮೇಲೆ 'ಇದು ಇವನಿಗೆ' ಅಥವಾ 'ಇವನಲ್ಲಿ ಉಂಟು' ಎಂಬರ್ಥದಲ್ಲಿ ವಿಕಲ್ಪವಾಗಿ 'ಕ' ಪ್ರತ್ಯಯವೂ ಪ್ರಕೃತಿಯ 'ದು' ವಿಗೆ ಲೋಪವೂ ಬರುವುದು—ಎಂದು ಸೂತ್ರಾರ್ಥವಾಗಲು 'ಕರಿಕಂ' ಮೊದಲಾದ ರೂಪಗಳು ಸಿದ್ಧಿಸುವುವು.

ಇಲ್ಲಿ 'ಗುಣೋಕ್ತೇಃ' ಎಂದು ಹೇಳಿರುವುದರಿಂದ 'ಕಾಲ್ವಂತಂ, ಕಣ್ವಂತಂ' ಮೊದಲಾದ ದ್ರವ್ಯವಾಚಕದಮೇಲೆ ಈ ಪ್ರತ್ಯಯವು ಬರುವುದಿಲ್ಲ. ಆದುದರಿಂದ ಪೂರ್ವಸೂತ್ರದಿಂದ 'ವಂತ' ಪ್ರತ್ಯಯವೇ ಬಂದಿರುವುದೆಂದು ತಿಳಿಯಬೇಕು.

ಆದರೆ ಈ ಸೂತ್ರದಲ್ಲಿ 'ಗುಣೋಕ್ತೇಃ' ಎಂದು ಸಾಮಾನ್ಯವಾಗಿ ಹೇಳಿರುವುದರಿಂದ ಎಲ್ಲಾ ಗುಣವಾಚಕಗಳೂ ಈ 'ಕ' ಪ್ರತ್ಯಯಕ್ಕೆ ಪ್ರಕೃತಿಗಳಾಗುವುವು. ಆದಾಗ್ಯೂ ಮಹಾಕವಿ ಪ್ರಯೋಗಾನುಸಾರವಾಗಿ ಇಲ್ಲಿ ಪ್ರಕೃತಿವಿಶೇಷಗಳನ್ನು ನಿಷ್ಕಯಿಸಿ ಪ್ರತ್ಯಯೋತ್ಪತ್ತಿಯನ್ನು ಹೇಳಬೇಕಾಗಿರುವುದರಿಂದ 'ಕೆಚ್ಚನೆ, ಪಚ್ಚನೆ' ಮೊದಲಾದ ಕೆಲವು ಶಬ್ದಗಳಮೇಲೆ 'ಕ' ಪ್ರತ್ಯಯವು ಬಂದು 'ಕೆಚ್ಚಕಂ, ಪಚ್ಚಕಂ' ಮೊದಲಾದ ಪ್ರಯೋಗಗಳಿಗೆ ಅನಭಿಧಾನವಿರುವುದರಿಂದ ಅವು 'ಅಸಾಧು' ಗಳೆಂದು ತಿಳಿಯುವುದು.

**ಅವತಾರಿಕೆ ೪೦೪**

ಹೀಗೆಯೇ ಅರ್ಥಾಂತರದಲ್ಲಿ ಪ್ರತ್ಯಯವಿಶೇಷವನ್ನು ವಿಧಿಸುತ್ತಾನೆ.

**ಸೂತ್ರಂ ॥ ಆಳಿಃ ಶೀಲಂ ॥ ೪೦೪ ॥**

**ಅರ್ಥ ॥** 'ಅದು ಇವನಿಗೆ ಶೀಲವು' ಎಂಬರ್ಥದಲ್ಲಿ ಪ್ರಥಮಾಂತಕ್ಕೆ ಪರವಾಗಿ 'ಆಳಿ' ಪ್ರತ್ಯಯವು ವಿಕಲ್ಪವಾಗಿ ಬರುವುದು.

**ಉದಾಹರಣೆ ॥** 'ಜೂದು ಶೀಲವಿಾತಂಗೆ — ಜೂದಾಳಿ ॥' ಹೀಗೆಯೇ 'ಮಾತಾಳಿ, ಸಿಗ್ಗಾಳಿ, ಓದಾಳಿ, ಹಡಪಾಳಿ' ಮೊದಲಾದುವು ಇದಕ್ಕೆ ಲಕ್ಷ್ಯಗಳು.

---

ಪಾಠಾಂತರ : ೧ ತೋರಿಕಂ, ತೋಕಂ.

**ವಿಚಾರ ೪೦೪**

ಈ ಸೂತ್ರದಲ್ಲಿ — ‘ ಆಳಿಃ, ಶೀಲಂ ’ ಎಂದು ಎರಡು ಪದಗಳಿವೆ. ಇದರಲ್ಲಿ ‘ ಆಳಿಃ ’ ಎಂಬುದು ಪ್ರತ್ಯಯನಿರ್ದೇಶವು. ‘ ಶೀಲಂ ’ ಎಂಬುದು ಅರ್ಥನಿರ್ದೇಶವು. ‘ ತತ್, ಅಸ್ಯ ’ ಎಂಬುದಿರುವುದು. ತಥಾಚ — ‘ ಅದು ಇವನಿಗೆ ಶೀಲವು ’ ಎಂಬರ್ಥದಲ್ಲಿ ಪ್ರಥಮಾಂತಪದಕ್ಕೆ ಪರವಾಗಿ ‘ ಆಳಿ ’ ಪ್ರತ್ಯಯವು ಬರುವುದೆಂದು ಸೂತ್ರಾರ್ಥವಾಗಲು ‘ ಜೂದಾಳಿ ’ ಮೊದಲಾದುವು ಸಿದ್ಧಿಸುವುವು.

**ಅವತಾರಿಕೆ ೪೦೫**

ಹೀಗೆಯೇ ಅರ್ಥಾಂತರದಲ್ಲಿ ಪ್ರತ್ಯಯವಿಶೇಷವನ್ನು ವಿಧಿಸುತ್ತಾನೆ.

**ಸೂತ್ರಂ || ಇಗಃ ಪಣ್ಯಂ || ೪೦೫ ||**

**ಅರ್ಥ || ‘ ಅದು ಇವನಿಗೆ ಪಣ್ಯವು ’ ಎಂಬರ್ಥದಲ್ಲಿ ಪ್ರಥಮಾಂತದಮೇಲೆ ‘ ಇಗ ’ ಪ್ರತ್ಯಯವು ವಿಕಲ್ಪವಾಗಿ ಬರುವುದು.**

**ಉದಾಹರಣೆ ||** ‘ ತಂಬುಲಂ ಪಣ್ಯಮಿಾತಂಗೆ — ತಂಬುಲಿಗಂ || ’ ಹೀಗೆಯೇ ‘ ದವಸಿಗಂ, ದೂಸಿಗಂ, ಕಾಯಿಗಂ, ಪಣ್ಣಿಗಂ || ’ ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೪೦೫**

ಈ ಸೂತ್ರದಲ್ಲಿ — ‘ ಇಗಃ, ಪಣ್ಯಂ ’ ಎಂದು ಎರಡು ಪದಗಳಿವೆ. ‘ ಇಗಃ ’ ಎಂಬುದು ಪ್ರತ್ಯಯವು. ‘ ಪಣ್ಯಂ ’ ಎಂದರೆ ವ್ಯಾಪಾರವು. ಪೂರ್ವದಂತೆ ‘ ತತ್, ಅಸ್ಯ ’ ಎಂದು ಸಂಬಂಧಿಸಲ್ಪಡುವುದು. ತಥಾಚ— ‘ ಅದು ಇವನಿಗೆ ವ್ಯಾಪಾರ ’ ವೆಂಬರ್ಥದಲ್ಲಿ ಪ್ರಥಮಾಂತದ ಮೇಲೆ ‘ ಇಗ ’ ಪ್ರತ್ಯಯವು ಬರುವುದೆಂದು ಸೂತ್ರಾರ್ಥವಾಗಲು ‘ ತಂಬುಲಿಗ ’ ಮೊದಲಾದುವು ಸಿದ್ಧಿಸುವುವು. ಇಲ್ಲಿ ‘ ತಂಬುಲಿಗ ’ ಶಬ್ದವು ‘ ತಾಂಬೂಲಿಕ ’ ಎಂಬ ಸಂಸ್ಕೃತ ಶಬ್ದಕ್ಕೆ ಕರಂಬಾದಿಪಾಠದಿಂದ ತದ್ಭವವನ್ನು ಮಾಡಲು ಸಿದ್ಧಿಸುತ್ತಿದ್ದರೂ ‘ ದವಸಿಗ ’ ಮೊದಲಾದ ದೇಶ್ಯಶಬ್ದಪ್ರಕೃತಿಕರೂಪಸಿದ್ಧ್ಯರ್ಥವಾಗಿ ಈ ಸೂತ್ರಕ್ಕೆ ಸಾರ್ಥಕ್ಯವನ್ನು ಕಲ್ಪಿಸಬೇಕೆಂದು ತಿಳಿಯಬೇಕು.

**ಅವತಾರಿಕೆ ೪೦೬**

ಹೀಗೆಯೇ ಅರ್ಥಾಂತರದಲ್ಲಿಯೂ ‘ ಇಗ ’ ಪ್ರತ್ಯಯವನ್ನು ವಿಧಿಸುತ್ತಾನೆ.

**ಸೂತ್ರಂ || ಶಿಲ್ಪಂ || ೪೦೬ ||**

**ಅರ್ಥ || ‘ ಅದು ಇವನಿಗೆ ಕಸಬು ’ ಎಂಬರ್ಥದಲ್ಲಿ ಪ್ರಥಮಾಂತಕ್ಕೆ ಪರವಾಗಿ ‘ ಇಗ ’ ಪ್ರತ್ಯಯವು ವಿಕಲ್ಪವಾಗಿ ಬರುವುದು.**

**ಉದಾಹರಣೆ ||** ‘ಮದ್ದಳೆ ಶಿಲ್ಪಮಿಾತಂಗೆ—ಮದ್ದಳೆಗಂ ||ಹೀಗೆಯೇ — ‘ ಸರವಂದಿಗಂ ಬೀಣೆಗಂ, ಗಾಣಿಗಂ, ಕೇಣಿಗಂ || ’ ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೪೦೬**

ಈ ಸೂತ್ರದಲ್ಲಿ ‘ ಶಿಲ್ಪಂ ’ ಎಂದೊಂದೇ ಪದವಿರುವುದು. ಪೂರ್ವದಂತೆ ಇತರ ಪದಗಳೆಲ್ಲಾ ಸಂಬಂಧಮಾಡಲು ‘ ಅದು ಶಿಲ್ಪಮಿಾತಂಗೆ ’ ಎಂಬರ್ಥದಲ್ಲಿ ‘ ಇಗ ’ ಪ್ರತ್ಯಯವು ಬರುವುದೆಂದು ಸೂತ್ರಾರ್ಥವಾಗಲು ‘ ಮದ್ದಳೆಗ ’ ಮೊದಲಾದುವು ಸಿದ್ಧಿಸುವುವು.

ಯದ್ಯಪಿ ಪೂರ್ವದಲ್ಲಿ ಹೇಳಿರುವಂತೆ 'ಮಾರ್ದಂಗಿಕ, ಸ್ವರಬಂಧಕ, ವೈಣಿಕ' ಮೊದಲಾದ ಶಬ್ದಗಳಿಗೆ ತದ್ಭವವಿಧಿಗಳನ್ನು ಮಾಡಲು, 'ಮದ್ದಳಿಗ, ಸರವಂದಿಗ, ಬೀಣಿಗ' ಮೊದಲಾದ ಶಬ್ದಗಳು ಸಿದ್ಧಿಸುವುವು; ಆದಾಗ್ಯೂ 'ಮದ್ದಳೆ, ಸರವಂದ, ಬೀಣೆ' ಮೊದಲಾದ ಶಬ್ದಗಳ ಮೇಲು 'ಇಗ' ಪ್ರತ್ಯಯವನ್ನು ಮಾಡಿ ಸಾಧುತ್ವವು ಬೋಧಿಸಲ್ಪಡುವುದರಿಂದ ಸಾರ್ಥಕವೆಂದು ತಿಳಿಯುವುದು.

**ಅವತಾರಿಕೆ ೪೦೭**

ಹೀಗೆಯೇ ಅರ್ಥಾಂತರದಲ್ಲಿಯೂ ಹೇಳುತ್ತಾನೆ.

**ಸೂತ್ರಂ || ತದಾಚರತಿ || ೪೦೭ ||**

**ಅರ್ಥ** || 'ಅದನ್ನು ಆಚರಿಸುತ್ತಾನೆ' ಎಂಬರ್ಥದಲ್ಲಿ ದ್ವಿತೀಯಾಂತದಮೇಲೆ 'ಇಗ' ಪ್ರತ್ಯಯವು ಬರುವುದು.

**ಉದಾಹರಣೆ** || 'ಪಡಿಸಣಮನಾಚರಿಪಂ — ಪಡಿಸಣಿಗಂ' ಹೀಗೆಯೇ — ಅಟಮಟಿಗಂ, ಪುಸಿಗಂ, ಉಪವಾಸಿಗಂ, ನಿಯಮಿಗಂ, ವ್ರತಿಗಂ ||' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೪೦೭**

ಇಲ್ಲಿ — 'ತತ್ ಆಚರತಿ' ಎಂದು ಎರಡು ಪದಗಳಿವೆ. 'ತತ್' ಎಂಬುದು 'ಆಚರತಿ' ಎಂಬುದರಲ್ಲಿ ಕರ್ಮವನ್ನು ಬೋಧಿಸಿರುವುದರಿಂದ ದ್ವಿತೀಯಾಂತಪದವು. 'ಇಗ' ಎಂಬುದೂ 'ವಾ' ಎಂಬುದೂ ಸಂಬಂಧಿಸಲ್ಪಡುವುವು. ತಥಾಚ — 'ಅದನ್ನು ಆಚರಿಸುತ್ತಾನೆ' ಎಂಬರ್ಥದಲ್ಲಿ ದ್ವಿತೀಯಾಂತದಮೇಲೆ 'ಇಗ' ಪ್ರತ್ಯಯವು ವಿಕಲ್ಪವಾಗಿ ಬರುವುದೆಂದು ಸೂತ್ರಾರ್ಥವಾಗಲು 'ಪಡಿಸಣಿಗ' ಮೊದಲಾದುವು ಸಿದ್ಧಿಸುವುವು.

ಇಲ್ಲಿ 'ಪಡಿಸಣ' ವೆಂದರೆ — 'ಎಲ್ಲಿ ಯಜಮಾನನು ಉಂಡುಹೋಗುತ್ತಾನೊ ಅದೇ ಸ್ಥಾನದಲ್ಲಿ ಕೂತು ಅವನ ಉಚ್ಛಿಷ್ಟವನ್ನುಣ್ಣುವುದು' ಪ್ರತಿಸ್ಥಾನವೆನಿಸಿಕೊಳ್ಳುವುದು. ಇದೇ 'ಪಡಿಸಣ' ವೆಂಬುದು. ಅದನ್ನಾಚರಿಸುವವನು 'ಪಡಿಸಣಿಗ' ನೆಂಬುವನು. ಅವನಿಗೆ 'ಪರಿಚಾರಕ' ನೆಂದರ್ಥವು. ಹೀಗೆಯೇ — 'ಅಟಮಟ' ವೆಂದರೆ ಅನ್ಯರಿಗೆ ಭೇದವನ್ನುಂಟುಮಾಡುವ ಮಾತು. ಅವನ್ನಾಚರಿಸುವವನು ಅಟಮಟಿಗನು. 'ಪುಸಿ' ಎಂದರೆ ಸುಳ್ಳು. ಅದನ್ನಾಚರಿಸುವವನು 'ಪುಸಿಗನು' ಹೀಗೆಯೇ ಮೊದಲಾದುವುಗಳನ್ನು ಊಹಿಸಿಕೊಳ್ಳುವುದು.

**ಅವತಾರಿಕೆ ೪೦೮**

ಹೀಗೆಯೇ ಅರ್ಥಾಂತರದಲ್ಲಿಯೂ 'ಇಗ' ಪ್ರತ್ಯಯವನ್ನು ವಿಧಿಸುತ್ತಾನೆ.

**ಸೂತ್ರಂ || ವೇತ್ತ್ಯಧ್ಯೇತ್ರೋಃ || ೪೦೮ ||**

**ಅರ್ಥ** || 'ಅದನ್ನು ತಿಳಿದವನು, ಅದನ್ನು ಓದುವವನು' ಎಂಬರ್ಥದಲ್ಲಿ ದ್ವಿತೀಯಾಂತದ ಮೇಲೆ 'ಇಗ' ಪ್ರತ್ಯಯವು ಬರುವುದು.

**ಉದಾಹರಣೆ** || 'ಜೋಯಿಸಮನಱಿವನೋದುವಂ' ಅಥವಾ 'ಓದುವಂ — ಜೋಯಿಸಿಗಂ' ಹೀಗೆಯೇ — 'ಗಣಿದಿಗಂ, ಸಿದ್ಧಾಂತಿಗಂ, ಲೆಕ್ಕಿಗಂ, ಶಾಸ್ತ್ರಿಗಂ, ಬಾಗರಣಿಗಂ ||' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೪೦೮**

ಈ ಸೂತ್ರದಲ್ಲಿ — 'ವೇತ್ತ್ರಧ್ಯೇತ್ರೋಃ' ಎಂದೊಂದೇ ಪದವಿರುವುದು. ಇದು ಸಪ್ತಮಿದ್ವಿವಚನಾಂತವು. 'ತತ್' ಮೊದಲಾದುವು ಸಂಬಧಿಸಲ್ಪಡುವುವು. ತಥಾಚ—'ಅದನ್ನು ತಿಳಿಯುವವನು' ಅಥವಾ 'ಓದುವವನು' ಎಂಬರ್ಥದಲ್ಲಿ ದ್ವಿತೀಯಾಂತದಮೇಲೆ 'ಇಗ' ಪ್ರತ್ಯಯವು ಬರುವುದೆಂದು ಸೂತ್ರಾರ್ಥವಾಗಲು 'ಜೋಯಿಸಿಗ' ಮೊದಲಾದುವು ಸಿದ್ಧಿಸುವುವು.

**ಅವತಾರಿಕೆ ೪೦೯**

ಹೀಗೆಯೇ ಅರ್ಥಾಂತರದಲ್ಲಿಯೂ 'ಇಗ' ಪ್ರತ್ಯಯವನ್ನು ವಿಧಿಸುತ್ತಾನೆ.

**ಸೂತ್ರಂ ॥ ಕ್ರೇಣದ್ವಿಕ್ರೇಣತೋಃ ॥ ೪೦೯ ॥**

**ಅರ್ಥ ॥ 'ಅದನ್ನು ಮಾರುವನು' ಅಥವಾ 'ಕೊಳ್ಳುವನು' ಎಂಬರ್ಥದಲ್ಲಿ ದ್ವಿತೀಯಾಂತದಮೇಲೆ ವಿಕಲ್ಪವಾಗಿ 'ಇಗ' ಪ್ರತ್ಯಯವು ಬರುವುದು.**

**ಉದಾಹರಣೆ ॥** 'ತಂಬುಲವಂ ಮಾಱುವಂ' ಅಥವಾ 'ಕೊಳ್ವಂ'— 'ತಂಬುಲಿಗಂ' ಹೀಗೆಯೇ — 'ದವಸಿಗಂ, ಗಂದಿಗಂ, ಮೆಣಸಿಗಂ, ಪಿಪ್ಪಲಿಗಂ ||' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ಅವತಾರಿಕೆ ೪೧೦**

ಹೀಗೆಯೇ ಅರ್ಥಾಂತರದಲ್ಲಿ ಪ್ರತ್ಯಯಾಂತರವನ್ನೂ ವಿಧಿಸುತ್ತಾನೆ.

**ಸೂತ್ರಂ ॥ ಕುರ್ವತ್ಯುಳಿಗಶ್ಚ ॥ ೪೧೦ ॥**

**ಅರ್ಥ ॥** 'ಅದನ್ನು ಮಾಡುವನು' ಎಂಬ ಅರ್ಥದಲ್ಲಿ ದ್ವಿತೀಯಾಂತದ ಮೇಲೆ ಉಳಿಗ-ಪ್ರತ್ಯಯವೂ ಇಗ-ಪ್ರತ್ಯಯವೂ ವಿಕಲ್ಪವಾಗಿ ಬರುವುವು.

**ಉದಾಹರಣೆ ॥** ದೇವರಂ ಮಾಡುವಂ — ದೇವುಳಿಗಂ — ದೇವಿಗಂ' ಹೀಗೆಯೇ 'ಪಾಕುಳಿಗಂ — ಪಾಕಿಗಂ, ಅಡುಗುಳಿಗಂ — ಅಡುಗಿಗಂ, ಕಬ್ಬುಳಿಗಂ — ಕಬ್ಬಿಗಂ, ಚೌಪದುಳಿಗಂ — ಚೌಪದಿಗಂ ||' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೪೧೦**

ಈ ಸೂತ್ರದಲ್ಲಿ — 'ಕುರ್ವತಿ, ಉಳಿಗಃ, ಚ' ಎಂದು ಮೂರು ಪದಗಳಿರುವುವು. ಚ ಕಾರವು ಇಗ-ಪ್ರತ್ಯಯ ಸಮುಚ್ಚಾಯಕವು. ಆದುದರಿಂದ ಇಲ್ಲಿ ವಿಧೇಯದ್ವಯವು. 'ತತ್' ಮೊದಲಾದುವು ಅನುವರ್ತಿಸಲ್ಪಡುವುವು. ತಥಾಚ — 'ಅದನ್ನು ಮಾಡುವನು' ಎಂಬರ್ಥದಲ್ಲಿ ದ್ವಿತೀಯಾಂತದಮೇಲೆ 'ಉಳಿಗ, ಇಗ' ಎಂಬ ಪ್ರತ್ಯಯಗಳು ವಿಕಲ್ಪವಾಗಿ ಬರುವುವು— ಎಂದು ಸೂತ್ರಾರ್ಥವಾಗುವುದು. ಆದುದರಿಂದ 'ದೇವುಳಿಗಂ' ಮೊದಲಾದುವು ಸಿದ್ಧಿಸುವುವು.

**ಅವತಾರಿಕೆ ೪೧೧**

ಹೀಗೆಯೇ ಅರ್ಥಾಂತರದಲ್ಲಿ ಪ್ರತ್ಯಯಾಂತರವನ್ನು ವಿಧಿಸುತ್ತಾನೆ.

**ಸೂತ್ರಂ ॥ ಗಾಱೋ ಜಾತೌ ॥ ೪೧೧ ॥**

**ಅರ್ಥ ॥** 'ಅದನ್ನು ಮಾಡುವನು' ಎಂಬರ್ಥದಲ್ಲಿ ಜಾತಿಯು ತೋರುತ್ತಿದ್ದರೆ ದ್ವಿತೀಯಾಂತದಮೇಲೇ ವಿಕಲ್ಪವಾಗಿ 'ಗಾಱ' ಪ್ರತ್ಯಯವು ಬರುವುದು.

**ಉದಾಹರಣೆ** || 'ಮಾಲೆಯಂ ಮಾಡುವಂ — ಮಾಲೆಗಾಱಂ' ಹೀಗೆಯೇ 'ಬಳೆಗಾಱಂ, ಮಣಿಗಾಱಂ, ಒಱಿಗಾಱಂ, ಗೆಜ್ಜೆಗಾಱಂ ||' ಮೊದಲಾದುವು ಇವಕ್ಕೆ ಲಕ್ಷ್ಯಗಳು.

**ವಿಚಾರ ೪೧೧**

ಇಲ್ಲಿ — 'ಗಾಱಃ, ಜಾತೌ' ಎಂದು ಎರಡು ಪದಗಳಿವೆ. 'ಗಾಱಃ' ಎಂಬುದು ಪ್ರತ್ಯಯವು. 'ಜಾತೌ' ಎಂಬುದು ವಿಷಯಸಪ್ತಮ್ಯಂತಪದವು. 'ತತ್' ಮೊದಲಾದುವು ಪೂರ್ವದಂತೆ ಸಂಬಂಧಿಸಲ್ಪಡುವುವು. ತಥಾಚ — 'ಅದನ್ನು ಮಾಡುವನು' ಎಂಬರ್ಥದಲ್ಲಿ ದ್ವಿತೀಯಾಂತದಮೇಲೆ ಜಾತಿ ತೋರುವಾಗ ವಿಕಲ್ಪವಾಗಿ 'ಗಾಱ' ಪ್ರತ್ಯಯವು ಬರುವುದೆಂದು ಸೂತ್ರಾರ್ಥವಾಗಲು 'ಮಾಲೆಗಾಱ' ಮೊದಲಾದುವು ಸಿದ್ಧಿಸುವುವು. ಜಾತಿ ತೋರದೆ ಆ ಕೆಲಸವನ್ನೇ ಮಾಡುವವನಾದರೆ 'ಮಾಲಿಗಂ' ಎಂದು ಪೂರ್ವಸೂತ್ರದಿಂದ 'ಇಗ' ಪ್ರತ್ಯಯವೇ ಬರುವುದೆಂದು ತಿಳಿಯಬೇಕು.

**ಅವತಾರಿಕೆ ೪೧೨**

ಹೀಗೆಯೇ ಪ್ರಕೃತಿವಿಶೇಷದಮೇಲೆ ಪ್ರತ್ಯಯಾಂತರವನ್ನು ಹೇಳುತ್ತಾನೆ.

**ಸೂತ್ರಂ || ಱಃ ಕಮ್ಮಕುಂಬಾತ್ || ೪೧೨ ||**

**ಅರ್ಥ ||** 'ಅದನ್ನು ಮಾಡುವನು' ಎಂಬರ್ಥದಲ್ಲಿ 'ಕಮ್ಮ, ಕುಂಬ' ಎಂಬ ದ್ವಿತೀಯಾಂತ ಶಬ್ದಗಳಮೇಲೆ ಜಾತಿ ವಿಷಯದಲ್ಲಿ ವಿಕಲ್ಪವಾಗಿ 'ಱ' ಪ್ರತ್ಯಯವು ಬರುವುದು.

**ಉದಾಹರಣೆ ||** 'ಕಮ್ಮಮಂ ಮಾಡುವಂ — ಕಮ್ಮಱಂ, ಕುಂಬಮಂ ಮಾಡುವಂ — ಕುಂಬಱಂ ||' ಇವು ಇದಕ್ಕೆ ಲಕ್ಷ್ಯಗಳು.

**ವಿಚಾರ ೪೧೨**

ಇಲ್ಲಿ — 'ಜಾತೌ' ಎಂಬುದಕ್ಕೆ ಸಂಬಂಧಮಾಡಿರುವುದರಿಂದ 'ಕಮ್ಮಿಗಂ, ಕುಂಬಿಗಂ' ಮೊದಲಾದ ಶಬ್ದಗಳಲ್ಲಿ ಜಾತಿ ತೋರದೆ 'ಕಮ್ಮ, ಕುಂಬ' ಕರಣಾರ್ಥಮಾತ್ರವೇ ತೋರುವುದರಿಂದ ಈ ಪ್ರತ್ಯಯವು ಬಾರದೆ 'ಇಗ' ಪ್ರತ್ಯಯವೇ ಬರುವುದು. 'ಕಮ್ಮಕುಂಬಾತ್' ಎಂದು ಪ್ರಕೃತಿನಿರ್ದೇಶಮಾಡಿರುವುದರಿಂದ 'ಅಕ್ಕರಿಗಂ, ಮದನವತಿಗಂ' ಮೊದಲಾದ ಪ್ರಯೋಗಗಳಲ್ಲಿ ಬರುವುದಿಲ್ಲವೆಂದು ತಿಳಿಯಬೇಕು.

**ಅವತಾರಿಕೆ ೪೧೩**

ಹೀಗೆಯೇ ಪ್ರಕೃತಿವಿಶೇಷದಮೇಲೆ ಅರ್ಥವಿಶೇಷದಲ್ಲಿ ಪ್ರತ್ಯಯವಿಶೇಷವನ್ನು ವಿಧಿಸುತ್ತಾನೆ.

**ಸೂತ್ರಂ || ದೇವಾದಡಿಗೋಽರ್ಹತಿ || ೪೧೩ ||**

**ಅರ್ಥ ||** 'ಅದನ್ನು ಪೂಜಿಸುವನು' ಎಂಬರ್ಥದಲ್ಲಿ ದ್ವಿತೀಯಾಂತವಾದ 'ದೇವ' ಶಬ್ದದಮೇಲೆ ಜಾತಿಯಲ್ಲಿ 'ಅಡಿಗ' ಪ್ರತ್ಯಯವು ವಿಕಲ್ಪವಾಗಿ ಬರುವುದು.

**ಉದಾಹರಣೆ ||** 'ದೇವರಂ ಪೂಜಿಸುವಂ — ದೇವಡಿಗಂ ||' ಇದೇ ಇದಕ್ಕೆ ಲಕ್ಷ್ಯವು.

**ವಿಚಾರ ೪೧೩**

ಇಲ್ಲಿ 'ಜಾತೌ' ಎಂಬುದನ್ನು ಅನುವೃತ್ತಿಮಾಡುವುದರಿಂದ 'ದೇವಡಿಗ' ಎಂಬುದು ದೇವಪೂಜೋಪಜೀವಿ' ಎಂದರ್ಥವಾಗುವುದು. 'ದೇವಾತ್' ಎಂದು ಪ್ರಕೃತಿನಿರ್ದೇಶವನ್ನು ಮಾಡಿರುವುದರಿಂದ 'ಮಾರಿಯಂ ಪೂಜಿಸುವಂ—ಮಾರಿಗಂ' ಮೊದಲಾದ ಪ್ರಯೋಗಗಳಲ್ಲಿ ಬರುವುದಿಲ್ಲ. ಇಲ್ಲಿ 'ಮಾರಿ' ಎಂದರೆ— ಲೋಕೋಪದ್ರವಕಾರಿಯಾದ ಕ್ಷುದ್ರಪಿಶಾಚಿಯು. 'ಮಾರಿಗ' ಎಂಬುದು ಗಾವಿಲಾದಿಗಣಪಠಿತವಾದುದರಿಂದ ಸಿದ್ಧವಾಗುವುದೆಂದು ತಿಳಿಯುವುದು.

**ಅವತಾರಿಕೆ ೪೧೪**

ಹೀಗೆಯೇ ಪ್ರಕೃತಿಸಾಮಾನ್ಯದಮೇಲೆ 'ಗ್ರಹಿಸುವನು' ಎಂಬರ್ಥದಲ್ಲಿ ಪ್ರತ್ಯಯ ವಿಶೇಷವನ್ನು ವಿಧಿಸುತ್ತಾನೆ.

**ಸೂತ್ರಂ ‖ ಗುಳಿರ್ಗ್ರಹ್ಣಾತಿ ‖ ೪೧೪ ‖**

**ಅರ್ಥ ‖ 'ಅದನ್ನು ಗ್ರಹಿಸುವನು' ಎಂಬರ್ಥದಲ್ಲಿ ದ್ವಿತೀಯಾಂತದಮೇಲೆ 'ಗುಳಿ' ಪ್ರತ್ಯಯವು ವಿಕಲ್ಪವಾಗಿ ಬರುವುದು.**

**ಉದಾಹರಣೆ** ‖ 'ಲಂಚಮಂ ಕೊಳ್ವಂ— ಲಂಚಂಗುಳಿ' ಹೀಗೆಯೆ — 'ಸಾಲಂಗುಳಿ, ಆಟಂಗುಳಿ, ಪಣಂಗುಳಿ, ಪಣ್ಗುಳಿ, ಕಾಯ್ಗುಳಿ ‖' ಮೊದಲಾದುವು ಇದಕ್ಕೆ ಲಕ್ಷ್ಯಗಳು. ಇಲ್ಲಿ 'ಲಂಚಂಗುಳಿ' ಮೊದಲಾದ ಪ್ರಯೋಗಗಳಲ್ಲಿ ವೃತ್ತ್ಯಂತರದಿಂದ ಜೀವಿಸುತ್ತಿದ್ದರೂ ಲಂಚಗ್ರಹಣಾದಿಸ್ವಭಾವದವನೆಂದು ಅರ್ಥವು ತೋರುವುದು.

**ಅವತಾರಿಕೆ ೪೧೫**

ಹೀಗೆಯೇ ಅರ್ಥಾಂತರದಲ್ಲಿ ಪ್ರತ್ಯಯವಿಶೇಷವನ್ನು ವಿಧಿಸುತ್ತಾನೆ.

**ಸೂತ್ರಂ ‖ ತೇನ ಜೀವತಿ ಗವಣಿಗೌ ‖ ೪೧೫ ‖**

**ಅರ್ಥ ‖ 'ಅದರಿಂದ ಜೀವಿಸುತ್ತಾನೆ' ಎಂಬರ್ಥದಲ್ಲಿ ತೃತೀಯಾಂತದಮೇಲೆ 'ಗ' ಪ್ರತ್ಯಯವೂ 'ವಣಿಗ' ಪ್ರತ್ಯಯವೂ ವಿಕಲ್ಪವಾಗಿ ಬರುವುವು.**

**ಉದಾಹರಣೆ** ‖ 'ಲಂಚದಿಂಜೀವಿಸುವಂ— ಲಂಚಗಂ, ಲಂಚವಣಿಗಂ ‖' ಹೀಗೆಯೇ— 'ಮಾತುಗಂ, ಮಾತುವಣಿಗಂ; ಬೂತುಗಂ, ಬೂತುವಣಿಗಂ; ಊಟಗಂ, ಊಟವಣಿಗಂ ‖' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೪೧೫**

ಇಲ್ಲಿ — 'ಲಂಚಗಂ' ಎಂದರೆ — 'ತದುಪಜೀವಿ' ಎಂದರ್ಥವು. ಆದುದರಿಂದ ಪೂರ್ವಕ್ಕಿಂತಲೂ ಇದಕ್ಕೆ ಭೇದವಿರುವುದು. 'ಮಾತುಗಂ' ಎಂದರೆ — 'ಸಂಗತವಾದುದಾಗಲಿ ಅಸಂಗತವಾದುದಾಗಲಿ ಮಾತನಾಡಿ ಜೀವಿಸುವ' ನೆಂದರ್ಥವು. 'ಬೂತುಗ' ನೆಂದರೆ — 'ಬೂತುಭಂಡಿಮಾತದುಪಜೀವಿ' ಯೆಂದರ್ಥವು. 'ಊಟಗ' ನೆಂದರೆ — 'ಕಾರ್ಯಾಂತರದಲ್ಲಿ ಅಸಮರ್ಥನಾಗಿದ್ದರೂ ಭೋಜನಮಾತ್ರದಿಂದ ಜೀವಿಸುವನು' ಎಂದು ತಿಳಿಯುವುದು.

**ಅವತಾರಿಕೆ ೪೧೬**

ಹೀಗೆಯೇ ಜಾತಿ ತೋರುವಾಗ ಪ್ರತ್ಯಯಾಂತರವನ್ನು ವಿಧಿಸುತ್ತಾನೆ.

**ಸೂತ್ರಂ || ವಡಿಗೋ ಜಾತೌ || ೪೧೬ ||**

**ಅರ್ಥ** || ' ಅದರಿಂದ ಜೀವಿಸುತ್ತಾನೆ ' ಎಂಬರ್ಥದಲ್ಲಿ ಜಾತಿ ತೋರುವಾಗ ತೃತೀಯಾಂತದ ಮೇಲೆ ' ವಡಿಗ ' ಪ್ರತ್ಯಯವು ವಿಕಲ್ಪವಾಗಿ ಬರುವುದು.

**ಉದಾಹರಣೆ** || ' ಮಾಲೆಯಿಂ ಜೀವಿಸುವಂ — ಮಾಲೆವಡಿಗಂ || ' ಹೀಗೆಯೇ ಕಂಚುವಡಿಗಂ, ಪೞಿವಡಿಗಂ, ಪೂವಡಿಗಂ || ' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೪೧೬**

ಪೂರ್ವದಲ್ಲಿ ಹೇಳಿರುವುದು ಜೀವನಕ್ರಿಯಾಮಾತ್ರವು. ಇಲ್ಲಿ ಜಾತಿಯೂ ಪ್ರತ್ಯಯಾರ್ಥವೆಂದು ತಿಳಿಯಬೇಕು. ಇಲ್ಲಿ ' ಜಾತೌ ' ಎಂದು ಹೇಳಿರುವುದರಿಂದ ' ಪೂವಣಿಗಂ, ಪೞಿಗಂ ' ಮೊದಲಾದ ಜಾತಿ ತೋರದ ಪ್ರಯೋಗಗಳಲ್ಲಿ ಬರುವುದಿಲ್ಲ.

**ಅವತಾರಿಕೆ ೪೧೭**

ಹೀಗೆಯೇ ಶಬ್ದವಿಶೇಷದಮೇಲೆ ' ಅಡಿಗ ' ಪ್ರತ್ಯಯವನ್ನು ವಿಧಿಸಿ ತನ್ನಿಯೋಗಶಿಷ್ಟವಾಗಿ ' ದು ' ಲೋಪವನ್ನು ವಿಧಿಸುತ್ತಾನೆ.

**ಸೂತ್ರಂ || ಪಾವೋದುರ್ಲುಪ್ತ || ೪೧೭ ||**

**ಅರ್ಥ** || ' ಅದರಿಂದ ಜೀವಿಸುತ್ತಾನೆ ' ಎಂಬರ್ಥದಲ್ಲಿ ಜಾತಿಯು ತೋರುತ್ತಿರಲು ತೃತೀಯಾಂತದಮೇಲೆ ವಿಕಲ್ಪವಾಗಿ ' ವಡಿಗ ' ಪ್ರತ್ಯಯವು ಬರುವುದು. ಪ್ರಕೃತಿಯ ' ದು ' ವಿಗೆ ಲೋಪವು ಬರುವುದು.

**ಉದಾಹರಣೆ** || ' ಪಾವಿಂ ಜೀವಿಸುವಂ — ಪಾವಡಿಗಂ || ' ಎಂಬುದೊಂದೇ ಇವಕ್ಕೆ ಲಕ್ಷ್ಯವು.

**ಅವತಾರಿಕೆ ೪೧೮**

ಅರ್ಥವಿಶೇಷದಲ್ಲಿ ಪ್ರಕೃತಿವಿಶೇಷದಮೇಲೆ ' ಇಗ ' ಪ್ರತ್ಯಯವಿಧಿಯನ್ನು ಹೇಳುತ್ತಾನೆ.

**ಸೂತ್ರಂ || ತತ್ರೇಗೋ ನಿಯುಕ್ತೇ || ೪೧೮ ||**

**ಅರ್ಥ** || ' ಅದರಲ್ಲಿ ನಿಯುಕ್ತ ' ಎಂಬರ್ಥದಲ್ಲಿ ಸಪ್ತಮ್ಯಂತದಮೇಲೆ ' ಇಗ ' ಪ್ರತ್ಯಯವು ವಿಕಲ್ಪವಾಗಿ ಬರುವುದು.

**ಉದಾಹರಣೆ** || ' ಸುಂಕದೊಳ್ ನಿಯುಕ್ತಂ — ಸುಂಕಿಗಂ || ಹೀಗೆಯೇ — ' ಬಾಗಿಲಿಗಂ, ದ್ವಾರಿಗಂ, ಭಂಡಾರಿಗಂ || ' ಮೊದಲಾದುವು ಇದಕ್ಕೆ ಲಕ್ಷ್ಯಗಳು

**ವಿಚಾರ ೪೧೮**

ಇಲ್ಲಿ ' ನಿಯುಕ್ತ ' ಎಂದರೆ ' ನಿಯಮಿಸಲ್ಪಟ್ಟವನು ' ಎಂದರ್ಥವು. ಆದುದರಿಂದ ' ಸುಂಕಿಗಂ ' ಎಂದರೆ ' ಸುಂಕಾಧಿಕಾರಿ ' ' ಬಾಗಿಲಿಗಂ ' ಎಂದರೆ ' ದ್ವಾರಪಾಲಕ ' ' ಭಾಂಡಾರಿಗಂ ' ಎಂದರೆ ' ಕೋಶರಕ್ಷಕ ' ಎಂದರ್ಥವನ್ನು ತಿಳಿಯುವುದು.

**ಅವತಾರಿಕೆ ೪೧೯**

ಹೀಗೆಯೇ ಅರ್ಥಾಂತರದಲ್ಲಿ ಪ್ರತ್ಯಯವನ್ನು ವಿಧಿಸುತ್ತಾನೆ.

**ಸೂತ್ರಂ || ಭವಜಾತಯೋಃ || ೪೧೯ ||**

**ಅರ್ಥ** || 'ಅಲ್ಲಿರುವವನು, ಅಲ್ಲಿ ಹುಟ್ಟಿದವನು' ಎಂಬರ್ಥಗಳಲ್ಲಿ ಸಪ್ತಮ್ಯಂತದಮೇಲೆ 'ಇಗ' ಪ್ರತ್ಯಯವು ವಿಕಲ್ಪವಾಗಿ ಬರುವುದು.

**ಉದಾಹರಣೆ** || 'ಕಾಲೂರೊಳಾದಂ, ಪುಟ್ಟಿದಂ ಮೇಣ್—ಕಾಲೂರಿಗಂ || ಹೀಗೆಯೇ 'ಕರಹಡಿಗಂ, ಒಳ್ಳೂರಿಗಂ, ಬಾನಿಗಂ, ಪಟ್ಟಣಿಗಂ ||' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೪೧೯**

ಈ ಸೂತ್ರದಲ್ಲಿ — 'ಭವಜಾತಯೋಃ' ಎಂದೊಂದೇ ಪದವಿರುವುದು. ಇಲ್ಲಿ 'ಭವ' ಎಂದರೆ — 'ಸತ್ತಾರೂಪಕ್ರಿಯೆ' ಎಂದರೆ ಚಿರಸ್ಥಿತಿಯು. ಅದು ದೇಶಾಂತರದಲ್ಲಿ ಹುಟ್ಟಿದವನಿಗೂ ಉಪಪನ್ನವಾಗುವುದು 'ಜಾತ' ಎಂದರೆ — ಹುಟ್ಟಿದವನು. ಅಲ್ಲಿಯೇ ಉತ್ಪತ್ತಿಯನ್ನು ಪಡೆದವನೆಂದು ಭವಜಾತಗಳಿಗೆ ಅರ್ಥಭೇದವನ್ನು ಕಲ್ಪಿಸಬೇಕು. ತಥಾಚ — 'ಅಲ್ಲಿ ಇರುವವನು, ಅಲ್ಲಿ ಹುಟ್ಟಿದವನು' ಎಂಬರ್ಥದಲ್ಲಿ ಸಪ್ತಮ್ಯಂತದಮೇಲೆ ವಿಕಲ್ಪವಾಗಿ 'ಇಗ' ಪ್ರತ್ಯಯವು ಬರುವುದೆಂದು ಸೂತ್ರಾರ್ಥವಾಗಲು 'ಕಾಲೂರಿಗಂ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು.

**ಅವತಾರಿಕೆ ೪೨೦**

ಪೂರ್ವಸೂತ್ರದಲ್ಲಿ ವಿಹಿತವಾದ 'ಇಚ' ಪ್ರತ್ಯಯ ಸನ್ನಿಯೋಗದಿಂದ ಪ್ರಕೃತಿಯ ಉಪಾಂತ್ಯಸ್ವರಕ್ಕೆ ಹ್ರಸ್ವವನ್ನು ವಿಧಿಸುತ್ತಾನೆ.

**ಸೂತ್ರಂ || ಇಚೋ ಹ್ರಸ್ವಶ್ಚೋಪಾಂತ್ಯಸ್ಯ || ೪೨೦ ||**

**ಅರ್ಥ** || 'ಅಲ್ಲಿರುವವನು' ಅಥವಾ 'ಹುಟ್ಟಿದವನು' ಎಂಬರ್ಥದಲ್ಲಿ ಸಪ್ತಮ್ಯಂತದಮೇಲೆ ವಿಕಲ್ಪವಾಗಿ 'ಇಚ' ಪ್ರತ್ಯಯವೂ ಪ್ರಕೃತಿಯ ಉಪಾಂತ್ಯಸ್ವರಕ್ಕೆ ಹ್ರಸ್ವವೂ ಬರುವುದು.

**ಉದಾಹರಣೆ** || 'ಕಾಲೂರೊಳಾದಂ ಪುಟ್ಟಿದಂ ಮೇಣ್ — ಕಾಲುರಿಚಂ || ಹೀಗೆಯೇ ಒಳ್ಳುರಿಚಂ, ಬನಿಚಂ, ಕಲಿಚಂ, ಕರಹಡಿಚಂ ||' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೪೨೦**

ಈ ಸೂತ್ರದಲ್ಲಿ — 'ಇಚಃ, ಹ್ರಸ್ವಃ, ಚ, ಉಪಾಂತ್ಯಸ್ಯ' ಎಂದು ನಾಲ್ಕು ಪದಗಳಿರುವುವು. 'ತತ್ರ' ಮೊದಲಾದುವು ಪೂರ್ವದಂತೆ ಸಂಬಂಧಿಸಲ್ಪಡುವುವು. ಇಲ್ಲಿ ಹ್ರಸ್ವಪದದಿಂದ 'ಸ್ವರಸ್ಯ' ಎಂಬುದು ಉಪಸ್ಥಿತವಾಗುವುದು. 'ಇಚಃ' ಎಂಬುದು ಪೂರ್ವಸೂತ್ರದಲ್ಲಿ ವಿಹಿತವಾದುದಕ್ಕೆ ಅನುವಾದವು. 'ಹ್ರಸ್ವಃ' ಎಂಬುದೇ ತತ್ಸನ್ನಿಯೋಗದಿಂದ ವಿಧೇಯವು. ಚ ಕಾರವು ಸಮುಚ್ಚಯಾರ್ಥಕವು. 'ಉಪಾಂತ್ಯಸ್ಯ' ಎಂಬುದು ಹ್ರಸ್ವವಿಧಿಗೆ ಸ್ಥಾನಿನಿರ್ದೇಶವು. ತಥಾಚ — ಭವಜಾತಾರ್ಥಗಳಲ್ಲ ಸಪ್ತಮ್ಯಂತದಮೇಲೆ ವಿಕಲ್ಪವಾಗಿ 'ಇಚ' ಪ್ರತ್ಯಯವೂ ಪ್ರಕೃತಿಯ ಉಪಾಂತ್ಯಸ್ವರಕ್ಕೆ ಹ್ರಸ್ವವೂ ಬರುವುದೆಂದು. ಸೂತ್ರಾರ್ಥವಾಗಲು 'ಕಾಲುರಿಚಂ' ಮೊದಲಾದುವು ಸಿದ್ಧಿಸುವುವು.

ಇಲ್ಲಿ 'ಕಲಿಚಂ, ಬನಿಚಂ' ಎಂಬಿವು 'ಕಾಲ್, ಬಾನ್' ಎಂಬ ಶಬ್ದಗಳಮೇಲೆ 'ಇಚ' ಪ್ರತ್ಯಯವನ್ನು ಮಾಡಿ ಉಪಾಂತ್ಯಸ್ವರಕ್ಕೆ ಹ್ರಸ್ವವನ್ನು ಮಾಡಲು ನಿಷ್ಪನ್ನವಾಗುವುವು. ಇವುಗಳ

' ಕಲ್, ಬನ್ ' ಭಾಗಗಳಿಗೆ — ' ಹ್ರಸ್ವಾನ್ನಣಲಯಶಟಃ || ೫೩ || ' ಮೊದಲಾದ ಸೂತ್ರದಿಂದ ದ್ವಿತ್ವವು ಪ್ರಸಕ್ತವಾಗುವುದು. ಇದಾದರೋ ಅಭಿಮತವಲ್ಲ. ಇಲ್ಲಿ ನಿಷೇಧವಾವುದೂ ಹೇಳಿಲ್ಲ. ಆದುದರಿಂದ ಈ ಸೂತ್ರದಲ್ಲಿ ಹ್ರಸ್ವಪದಶ್ರವಣದಿಂದುಪಸ್ಥಿತವಾದ ' ಸ್ವರಸ್ಯ ' ಎಂಬುದರಿಂದಲೇ ವ್ಯಂಜನಾಂತಗಳಲ್ಲಿ ಉಪಾಂತ್ಯಕ್ಕೇ ಬರುವುದೆಂದೂ ಸ್ವರಾಂತದಲ್ಲಿ ದೀರ್ಘಾಂತವಿರುವುದರಿಂದ ಅಂತ್ಯಕ್ಕೂ ಉಪಾಂತ್ಯವು ವ್ಯಂಜನವಾದುದರಿಂದ ಅದಕ್ಕೂ ವ್ಯಾವೃತ್ತಿಯುಂಟಾಗುವುದರಿಂದ ಇಲ್ಲ ಉಪಾಂತ್ಯಗ್ರಹಣವು ವ್ಯರ್ಥವಾಗಿ ದ್ವಿತ್ವಾಭಾವವನ್ನು ಜ್ಞಾಪಿಸುವುದೆಂದು ತಿಳಿಯಬೇಕು. ಆದುದರಿಂದಲೇ ' ಕಲಿಚಂ, ಬನಿಚಂ ' ಎಂದು ಉದಾಹರಿಸಲ್ಪಟ್ಟಿದೆ. ಇಲ್ಲದಿದ್ದರೆ — 'ಕಲ್ಲಿಚಂ, ಬನ್ನಿಚಂ ' ಎಂದಾಗಬೇಕು. ಅಥವಾ ದ್ವಿರ್ಭಾವವು ಅಲ್ಪಾಶ್ರಯವಾದುದರಿಂದ ಅಂತರಂಗವು. ಹ್ರಸ್ವವು ಬಹ್ವಾಶ್ರಯವಾದುದರಿಂದ ಬಹಿರಂಗವು. ಆದುದರಿಂದ 'ಅಸಿದ್ಧಂ ಬಹಿರಂಗಮಂತರಂಗೇ' ಎಂಬ ಪರಿಭಾಷೆಯು ಪ್ರವರ್ತಿಸಿ ಹ್ರಸ್ವಕ್ಕೆ ಅಸಿದ್ಧತ್ವವನ್ನು ಕಲ್ಪಿಸುವುದರಿಂದ ದ್ವಿತ್ವವು ಪ್ರಾಪ್ತವಾಗುವುದಿಲ್ಲವೆಂದು ತಿಳಿಯಬೇಕು.

**ಅವತಾರಿಕೆ ೪೨೧**

ಹೀಗೆಯೇ ಪ್ರಕೃತಿ ವಿಶೇಷದಮೇಲೆ ಪ್ರತ್ಯಯಾಂತರವನ್ನು ವಿಧಿಸುತ್ತಾನೆ.

**ಸೂತ್ರ || ದಿಕ್ ಶಬ್ದಾದಣಃ || ೪೨೧ ||**

**ಅರ್ಥ ||** ಭವಜಾತಾರ್ಥಗಳಲ್ಲಿ ಸಪ್ತಮ್ಯಂತವಾದ ದಿಕ್ ಶಬ್ದದಮೇಲೆ ' ಅಣ ' ಪ್ರತ್ಯಯವು ವಿಕಲ್ಪವಾಗಿ ಬರುವುದು.

**ಉದಾಹರಣೆ ||** ' ಮೂಡಲಾದಂ ಪುಟ್ಟಿದಂ ಮೇಣ್ ಮೂಡಣಂ || ಹೀಗೆಯೇ — ತೆಂಕಣಂ, ಪಡುವಣಂ, ಬಡಗಣಂ, ನಡುವಣಂ, ಕಡೆಯಣಂ, ಅತ್ತಣಂ, ಇತ್ತಣಂ || ' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೪೨೧**

ಈ ಸೂತ್ರದಲ್ಲಿ — ' ದಿಕ್ಶಬ್ದ ' ವೆಂದರೆ — ದಿಕ್ಕಿನಲ್ಲಿಯ ಕದಾಚಿತ್ ದೃಷ್ಟವಾದ ಶಬ್ದವು ಎಂದರ್ಥವಾಗುವುದು. ಅದರಿಂದ ದಿಗ್ದೇಶಕಾಲವಾಚಕವಾದುದೆಲ್ಲಾ ದಿಕ್ಶಬ್ದದಿಂದ ಗ್ರಹಿಸಲ್ಪಡುವುದು. ಆದುದರಿಂದಲೇ ' ಕಡೆಯಣಂ, ನಡುವಣಂ ' ಮೊದಲಾದ ಪ್ರಯೋಗಗಳೂ ಸಿದ್ಧಿಸುವುವು. ಇಲ್ಲಿ ' ದಿಕ್ ಶಬ್ದಾತ್ ' ಎಂದು ಹೇಳಿರುವುದರಿಂದ ' ಕನ್ನಡಿಗಂ, ಕನ್ನಡಿಚಂ ' ಮೊದಲಾದ ಪ್ರಯೋಗಗಳಲ್ಲಿ ಪ್ರವರ್ತಿಸುವುದಿಲ್ಲ.

**ಅವತಾರಿಕೆ ೪೨೨**

ಹೀಗೆಯೇ ದಿಕ್ ಶಬ್ದದಮೇಲೆ ಪ್ರತ್ಯಯಾಂತರವನ್ನು ವಿಧಿಸುತ್ತಾನೆ.

**ಸೂತ್ರಂ || ದಶ್ಚೇತಃ || ೪೨೨ ||**

**ಅರ್ಥ ||** ಭವಜಾತಾರ್ಥಗಳಲ್ಲಿ ಇ ಕಾರಾಂತ ದಿಗ್ವಾಚಕಶಬ್ದದಮೇಲೆ ವಿಕಲ್ಪವಾಗಿ ' ದ ' ಪ್ರತ್ಯಯವು ಬರುವುದು.

**ಉದಾಹರಣೆ ||** ' ಅಲ್ಲಿ ಆದಂ ಪುಟ್ಟಿದಂ ಮೇಣ್ — ಅಲ್ಲಿಯಣಂ — ಅಲ್ಲಿದಂ, ಹೀಗೆಯೇ — ಇಲ್ಲಿಯಣಂ — ಇಲ್ಲಿದಂ, ಉಲ್ಲಿಯಣಂ — ಉಲ್ಲಿದಂ, ಎಲ್ಲಿಯಣಂ — ಎಲ್ಲಿದಂ||'

ಮೊದಲಾದುವು ಇದಕ್ಕೆ ಲಕ್ಷ್ಯಗಳು. ಇಲ್ಲಿ ಚ ಕಾರವನ್ನು ಹೇಳಿರುವುದರಿಂದ 'ಅಣ' ಪ್ರತ್ಯಯವೂ ಬರುವುದೆಂದು ತಿಳಿಯಬೇಕು.

**ಅವತಾರಿಕೆ ೪೨೩**

ಹೀಗೆಯೇ ಅರ್ಥಾಂತರದಲ್ಲಿ ಪ್ರಕೃತಿಸಾಮಾನ್ಯದ ಮೇಲೂ 'ಕಾಱ' ಪ್ರತ್ಯಯವನ್ನು ವಿಧಿಸುತ್ತಾನೆ.

**ಸೂತ್ರಂ || ಕಾಱಃ ಪ್ರವಣವ್ಯಾಪೃತಯೋಃ || ೪೨೩ ||**

**ಅರ್ಥ ||** 'ಅವನು ಅಲ್ಲಿ ಸಮರ್ಥ, ಉದ್ಯುಕ್ತ' ಎಂಬರ್ಥಗಳಲ್ಲಿ ಸಪ್ತಮ್ಯಂತದಮೇಲೆ 'ಕಾಱ' ಪ್ರತ್ಯಯವು ವಿಕಲ್ಪವಾಗಿ ಬರುವುದು.

**ಉದಾಹರಣೆ ||** 'ನಗೆಯೊಳ್ ಪ್ರವಣಂ ವ್ಯಾಪೃತಂ ಮೇಣ್ — ನಗೆಕಾಱಂ || ಹೀಗೆಯೇ — ನುಡಿಕಾಱಂ, ಆಟಕಾಱಂ, ಮೋಸಕಾಱಂ, ಮುಂಡುಕಾಱಂ ||' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೪೨೩**

ಇಲ್ಲಿ 'ಪ್ರವಣ' ಎಂದರೆ — 'ಪ್ರೌಢ' ಅಥವಾ 'ಸಮರ್ಥ' ಎಂದರ್ಥವು. 'ವ್ಯಾಪೃತ' ವೆಂದರೆ — 'ಉದ್ಯುಕ್ತ' ನೆಂದರ್ಥವು. 'ನಗೆಕಾಱಂ' ಎಂದರೆ — 'ಹಾಸ್ಯದಲ್ಲಿ ಪ್ರೌಢ' ಅಥವಾ 'ಉದ್ಯುಕ್ತ' ಎಂದು ಅರ್ಥವು. ಹೀಗೆಯೇ 'ನುಡಿ' ಎಂದರೆ — 'ವಚನಂ' 'ಆಟ' ವೆಂದರೆ— 'ವಿನೋದಕ್ರೀಡೆ' 'ಮೋಸ' ಎಂದರೆ— 'ಪ್ರಮಾದವು' 'ಮುಂಡು' ಎಂದರೆ — 'ಧಾರ್ಷ್ಟ್ಯವು.'

**ಅವತಾರಿಕೆ ೪೨೪**

ಹೀಗೆಯೇ ಇನ್ನು ಕೆಲವು ಪ್ರಕೃತಿಯಮೇಲೆ 'ಉಗ' ಪ್ರತ್ಯಯವನ್ನು ವಿಧಿಸುತ್ತಾನೆ.

**ಸೂತ್ರಂ || ವ್ಯಂಜನಾದುಗಃ || ೪೨೪ ||**

**ಅರ್ಥ ||** ಪ್ರವಣವ್ಯಾಪೃತಾರ್ಥಗಳಲ್ಲಿ ವ್ಯಂಜನಾಂತ ಸಪ್ತಮ್ಯಂತ ಶಬ್ದಗಳಮೇಲೆ ವಿಕಲ್ಪ ವಾಗಿ 'ಉಗ' ಪ್ರತ್ಯಯವು ಬರುವುದು.

**ಉದಾಹರಣೆ ||** 'ಪೆಣ್ಣೊಳ್ ಪ್ರವಣಂ ವ್ಯಾಪೃತಂ ಮೇಣ್ — ಪೆಣ್ಣುಗಂ || ಹೀಗೆಯೇ — ಮಣ್ಣುಗಂ, ಪೊನ್ನುಗಂ, ನಾರುಗಂ, ಪಾಲುಗಂ, ಪರಲುಗಂ ||' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೪೨೪**

ಇಲ್ಲಿ 'ಪೆಣ್' ಎಂಬುದು ಸ್ತ್ರೀವಾಚಕವು. ತದುಪಭೋಗದಲ್ಲಿ 'ಪ್ರೌಢ, ಸಮರ್ಥ' ಎಂದು 'ಪೆಣ್ಣುಗ' ಎಂಬುದಕ್ಕೆ ಅರ್ಥವು. ಹಾಗೇ, 'ಮಣ್' ಎಂದರೆ— 'ಭೂಮಿ' 'ಮಣ್ಣುಗಂ' ಎಂದರೆ–ತದ್ವ್ಯಾಪಾರಾದಿಯಲ್ಲಿ 'ಪ್ರೌಢ' ನೆಂದರ್ಥವು. 'ಪೊನ್' ಎಂದರೆ– 'ಧನವು' 'ಪೊನ್ನುಗಂ' ಎಂದರೆ—ತದಾರ್ಜನಾದಿಯಲ್ಲಿ 'ಪ್ರೌಢ' ನೆಂದರ್ಥವು. 'ನಾರ್' ಓಷಧಿ,-'ನಾರುಗಂ' ಎಂದರೆ— ಅದರ ಪ್ರಯೋಗದಲ್ಲಿ ಪ್ರೌಢ ನೆಂದರ್ಥವು. 'ಪರಲ್'–ರತ್ನವು, 'ಪರಲುಗಂ' ಎಂದರೆ—ತದ್ವ್ಯವಹಾರಾದಿಯಲ್ಲಿ ಪ್ರೌಢ ನೆಂದರ್ಥವು. ಇಲ್ಲಿ ವ್ಯಂಜನಾತ್' ಎಂದು ಹೇಳಿರುವುದರಿಂದ

‘ ಕಯ್ದುಕಾಱಂ ’ ಮೊದಲಾದ ಸ್ವರಾಂತಗಳಮೇಲೆ ಪೂರ್ವಸೂತ್ರದಿಂದ ‘ಕಾಱ’ ಪ್ರತ್ಯಯವೇ ಬರುವುದು. ಇದರಿಂದ ಪೂರ್ವಸೂತ್ರವು ಸ್ವರಾಂತವಿಷಯಕವೆಂದು ತಿಳಿಯಬೇಕು.

**ಅವತಾರಿಕೆ ೪೨೫**

ಹೀಗೆಯೇ ಅಧಿಕೃತಾರ್ಥದಲ್ಲಿ ಪ್ರತ್ಯಯವನ್ನು ವಿಧಿಸುತ್ತಾನೆ.

**ಸೂತ್ರಂ || ಆಯ್ತೋऽಧಿಕೃತೇ ಬಹುಲಂ || ೪೨೫ ||**

**ಅರ್ಥ** || ‘ ಅಧಿಕೃತ ’ ಎಂಬರ್ಥದಲ್ಲಿ ಸಪ್ತಮ್ಯಂತದಮೇಲೆ ‘ ಆಯ್ತ ’ ಪ್ರತ್ಯಯವು ವಿಕಲ್ಪವಾಗಿ ಬರುವುದು.

**ಉದಾಹರಣೆ** || ‘ ಸೂೞೊಳಧಿಕೃತಂ — ಸೂೞಾಯ್ತಂ|| ಹೀಗೆಯೇ ಬಾಗಿಲಾಯ್ತಂ, ಅಚ್ಚುಳಾಯ್ತಂ, ಕಲ್ಲಾಯ್ತಂ || ’ ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೪೨೫**

ಈ ಸೂತ್ರವು ಸ್ವರಾಂತ ವ್ಯಂಜನಾಂತ ಸಾಧಾರಣವೆಂದು ವ್ಯಾಖ್ಯಾನ ಪರಿಭಾಷೆಯಿಂದ ತಿಳಿಯಬೇಕು. ‘ ಅಧಿಕೃತಃ ’ ಅಧಿಕಾರವನ್ನು ಹೊಂದಿದವನು. ‘ ಸೂೞಾಯ್ತಂ — ಸೂೞ್, ವಾರಂ ’ ಅಥವಾ ‘ ನಿವೇದನಂ ’ ಇದರಲ್ಲಿ ‘ ಅಧಿಕೃತ ’ ನೆಂದರ್ಥವು. ಇವನಿಗೆ ‘ ಅವಸರದವ ’ ನೆಂದು ಹೇಳುತ್ತಾರೆ. ‘ ಅಚ್ಚುಳಂ, ಚರ್ಮಕ್ರಿಯೆ ’ ಅಥವಾ ‘ ಕುದುರೆ ’ ಮೊದಲಾದುವನ್ನು ಸಿದ್ಧಪಡಿಸುವುದು; ಇದರಲ್ಲಿ ಅಧಿಕೃತನು ‘ ಅಚ್ಚುಳಾಯ್ತಂ’ ‘ ಕಲ್, ರತ್ನ’ ಅಥವಾ ‘ ಪಾಷಾಣ’ ಮಾತ್ರವೆಂದು ತಿಳಿಯಬೇಕು. ಇಲ್ಲಿ ಬಹುಳಗ್ರಹಣವನ್ನು ಮಾಡಿ ಕ್ವಚಿತ್ ‘ಉಗ’ ಪ್ರತ್ಯಯವೂ ಬರುವುದೆಂದು ವ್ಯಾಖ್ಯಾನವನ್ನು ಮಾಡಲು ‘ ಸೂೞುಗಂ, ಅಚ್ಚುಳುಗಂ, ಕಲ್ಲುಗಂ ’ ಮೊದಲಾದುವೂ ಸಿದ್ಧಿಸುವುವೆಂದು ತಿಳಿಯಬೇಕು.

**ಅವತಾರಿಕೆ ೪೨೬**

ಹೀಗೆಯೇ ಪ್ರತ್ಯಯಾಂತರವನ್ನೂ ವಿಧಿಸುತ್ತಾನೆ.

**ಸೂತ್ರಂ || ವಳವಳ್ಳೌ || ೪೨೬ ||**

**ಅರ್ಥ** || ಅಧಿಕೃತಾರ್ಥದಲ್ಲಿ ಸಪ್ತಮ್ಯಂತದಮೇಲೆ ‘ ವಳ, ವಳ್ಳ ’ ಎಂಬ ಪ್ರತ್ಯಯಗಳು ವಿಕಲ್ಪವಾಗಿ ಬರುವುವು.

**ಉದಾಹರಣೆ** || ‘ಪಡೆಯೊಳಧಿಕೃತಂ— ಪಡೆವಳಂ, ಪಡೆವಳ್ಳಂ || ಹೀಗೆಯೇ ಸೆಜ್ಜೆವಳಂ, ಸೆಜ್ಜೆವಳ್ಳಂ; ಅಡಪವಳಂ, ಅಡಪವಳ್ಳಂ; ಸೇನೆವಳಂ, ಸೇನೆವಳ್ಳಂ || ’ ಮೊದಲಾದುವು.

**ಅವತಾರಿಕೆ ೪೨೭**

ಹೀಗೆಯೇ ಪ್ರಕೃತಿವಿಶೇಷದಮೇಲೆ ‘ ವಳವಳ್ಳ ’ ಗಳನ್ನು ವಿಧಿಸುತ್ತಾನೆ.

**ಸೂತ್ರಂ || ಮಡೇರ್ಜಾತೌ || ೪೨೭ ||**

**ಅರ್ಥ** || ಅಧಿಕೃತಾರ್ಥದಲ್ಲಿ ಸಪ್ತಮ್ಯಂತ ‘ ಮಡಿ ’ ಶಬ್ದದಮೇಲೆ ವಿಕಲ್ಪವಾಗಿ ಜಾತಿ ವಿಷಯದಲ್ಲಿ ‘ ವಳ, ವಳ್ಳ ’ ಪ್ರತ್ಯಯಗಳು ಬರುವುವು.

**ಉದಾಹರಣೆ** || ‘ ಮಡಿಯೊಳಧಿಕೃತಂ — ಮಡಿವಳಂ, ಮಡಿವಳ್ಳಂ || ’ ಇದಕ್ಕೆ ‘ ರಜಕ ’ ನೆಂದರ್ಥವು.

**ಅವತಾರಿಕೆ ೪೨೮**

ಹೀಗೆಯೇ ಸಾದೃಶ್ಯಾರ್ಥಕ ಪ್ರತ್ಯಯಗಳನ್ನು ವಿಧಿಸಲು ಪ್ರಾರಂಭಿಸುವನಾಗಿ ಮೊದಲು 'ವೊಲ್, ವೋಲ್' ಪ್ರತ್ಯಯಗಳನ್ನು ವಿಧಿಸುತ್ತಾನೆ.

**ಸೂತ್ರಂ || ತಸ್ಯ ತುಲ್ಯೇ ವೊಲ್ವೋಲೌ || ೪೨೮ ||**

**ಅರ್ಥ || 'ಅದಕ್ಕೆ ಇದು ಸದೃಶ್ಯವು' ಎಂಬರ್ಥದಲ್ಲಿ ಷಷ್ಠ್ಯಂತದಮೇಲೆ 'ವೊಲ್, ವೋಲ್' ಪ್ರತ್ಯಯಗಳು ಬರುವುವು.**

**ಉದಾಹರಣೆ ||** 'ಹರಿಯ ಸಮಾನಂ— ಹರಿವೊಲ್, ಹರಿವೋಲ್ || ಹೀಗೆಯೇ ಗಿರಿವೊಲ್, ಗಿರಿವೋಲ್; ವಿಧುವೊಲ್, ವಿಧುವೋಲ್ ||' ಮೊದಲಾದುವು.

**ವಿಚಾರ ೪೨೮**

ಈ ಸೂತ್ರದಲ್ಲಿ ಷಷ್ಠ್ಯಂತನಿರ್ದೇಶವನ್ನು ಮಾಡಿ ಷಷ್ಠ್ಯಂತದ ಮೇಲೆ ಪ್ರತ್ಯಯಗಳನ್ನು ವಿಧಿಸಿರುವುದರಿಂದ — '**ನವೋಲ್ವೊಲಿ || ೨೪೯ ||**' '**ಅನತೋ ವಾ || ೨೫೦ ||**' ಎಂಬ ಸೂತ್ರಗಳಿಂದ ಅ ಕಾರಾಂತಗಳ 'ಸುಪ್ಪಿಗೆ' ನಿತ್ಯವಾಗಿಯೂ ಇತರ 'ಸುಪ್ಪಿಗೆ' ವಿಕಲ್ಪ ವಾಗಿಯೂ ಲೋಪವನ್ನು ಹೇಳಿರುವುದರಿಂದ ಪಕ್ಷೇ ಷಷ್ಠೀಶ್ರವಣವಾಗುವುದೆಂದು ಸೂಚಿತ ವಾಗುವುದು. ಆದುದರಿಂದ —

ಮದಮಾತಂಗದವೊಲ್ ವಶಾವಿಲಸಿತಂ ಸತ್ ಕ್ಷತ್ರಿಯಪ್ರಾಜ್ಯರಾ
ಜ್ಯದವೊಲ್ ಸಂಗತಸಂಧಿನೀತಿನಿರತಂ ನೀಹಾರರುಕ್ಛತ್ರವ್ಯ
ತ್ತದವೋಲ್ ರಾಜಿತರೋಹಿಣೀಪರಿಗತಂ ಶ್ರೀಮದ್ದಯಾಮೂಲಧ
ರ್ಮ್ಮದವೋಲ್ ವಿಶ್ರುತಸುವ್ರತಾಚರಿತಮೇಂ ಚೆಲ್ವಾಯ್ತೊ ಗವ್ಯಾಶ್ರಯಂ

ಮೊದಲಾದ ಪ್ರಯೋಗಗಳು ಸಿದ್ಧಿಸುವುವು.

**ಅವತಾರಿಕೆ ೪೨೯**

ಹೀಗೆಯೇ ಪ್ರತ್ಯಯಾಂತರವಿಧಿಯನ್ನು ಹೇಳುತ್ತಾನೆ.

**ಸೂತ್ರಂ || ವಾತೋ ಬೊಲ್ || ೪೨೯ ||**

**ಅರ್ಥ || 'ಅದಕ್ಕೆ ಇದು ಸಮಾನ' ವೆಂಬರ್ಥದಲ್ಲಿ ಅ ಕಾರಾಂತವಾದ ಷಷ್ಠ್ಯಂತದಮೇಲೆ 'ಬೊಲ್' ಪ್ರತ್ಯಯವು ವಿಕಲ್ಪವಾಗಿ ಬರುವುದು.**

**ಉದಾಹರಣೆ ||** 'ಇಂದ್ರನ ಸದೃಶಂ — ಇಂದ್ರಂಬೊಲ್, ಇಂದ್ರನವೊಲ್, ಇಂದ್ರನ ವೋಲ್ || ಹೀಗೆಯೇ — ಚಂದ್ರಂಬೊಲ್ — ಚಂದ್ರನವೊಲ್, ಚಂದ್ರನವೋಲ್; ಅಣ್ಣಂ ಬೊಲ್ — ಅಣ್ಣನವೊಲ್, ಅಣ್ಣನವೋಲ್ ||' ಮೊದಲಾದುವಾಗುವುವು.

**ವಿಚಾರ ೪೨೯**

ಇಲ್ಲಿ ಅ ಕಾರಾಂತ ಪ್ರಕೃತಿಗೆ ಸಾದೃಶ್ಯಾರ್ಥದಲ್ಲಿ 'ಬೊಲ್' ಪ್ರತ್ಯಯವು ವಿಧಿಸಲ್ಪಡು ವುದು. ಇದು ವಿಕಲ್ಪವಾದುದರಿಂದ ಪೂರ್ವಸೂತ್ರವಿಹಿತಗಳಾದ 'ವೊಲ್, ವೋಲ್' ಪ್ರತ್ಯಯ ಗಳೂ ಬಂದು ಮೂರು ರೂಪಗಳಾಗುವುವು. ಆದುದರಿಂದಲೆ —

ಸೋಮಂಬೊಲ್ ಕಾಂತಿಯುತಂ
ಕಾಮನವೋಲಧಿಕರೂಪಸಂಪನ್ನಂ ಸು
ತ್ರಾಮನವೊಲಧಿಕವಿಭವೋ
ದ್ದಾಮಂ ನಯವಿಕ್ರಮಾಭಿರಾಮಂ ರಾಮಂ

ಮೊದಲಾದ ಕವಿಪ್ರಯೋಗಗಳು ಸಿದ್ಧಿಸುವುವು. ಇಲ್ಲಿ ಕೆಲವರು ಬಹುಳಗ್ರಹಣವನ್ನು ಸಂಬಂಧಿಸಿ ಕ್ವಚಿತ್ 'ಬೋಲ್' ಎಂದು ದೀರ್ಘೋಪಾಂತ್ಯವಾದುದನ್ನೂ ಅಂಗೀಕರಿಸಿರುವರು. ಆದುದರಿಂದ 'ಇಂದ್ರಂಬೋಲ್' ಮೊದಲಾದುವೂ ಸಿದ್ಧಿಸುವುವೆಂದು ತಿಳಿಯಬೇಕು.

**ಅವತಾರಿಕೆ ೪೩೧**

ಹೀಗೆಯೇ — ಪ್ರಕೃತಿಜನ್ಯಬೋಧದಲ್ಲಿ 'ಪ್ರಕಾರೀಭೂತಧರ್ಮವು' ಎಂದರೆ — ಶಬ್ದಪ್ರವೃತ್ತಿನಿಮಿತ್ತವು. ಇದನ್ನು ಬೋಧಿಸಲು ಬರುವ ಪ್ರತ್ಯಯವನ್ನು ವಿಧಿಸುತ್ತಾನೆ.

**ಸೂತ್ರಂ || ಭಾವೇ ತನಃ || ೪೩೧ ||**

**ಅರ್ಥ || ಶಬ್ದಪ್ರವೃತ್ತಿನಿಮಿತ್ತರೂಪಭಾವಾರ್ಥದಲ್ಲಿ ಷಷ್ಠ್ಯಂತದಮೇಲೆ 'ತನ' ಪ್ರತ್ಯಯವು ಬರುವುದು.**

**ಉದಾಹರಣೆ ||** 'ಪುರುಷನ ಭಾವಂ — ಪುರುಷತನಂ || ಹೀಗೆಯೇ — ವೀರತನಂ, ಶೂರತನಂ, ಬಲ್ಲತನಂ, ಚೆಲ್ವತನಂ, ಸೂಳೆತನಂ, ಗರತಿತನಂ ||' ಮೊದಲಾದುವು ಲಕ್ಷ್ಯಗಳು

**ವಿಚಾರ ೪೩೧**

ಲೋಕದಲ್ಲಿ 'ಭಾವ' ಶಬ್ದವು —

**ಸತ್ತಾಯಾಂ ಮಂಗಲೇ ವೃದ್ಧೌ ನಿವಾಸೇ ವ್ಯಾಪ್ತಿಕರ್ಮಣಿ**
**ಗತೌ ಚಾಪಿ ಸಮಾಖ್ಯಾತಂ ಷಡರ್ಥಂ ಭವತಿಂ ವಿದುಃ**

ಎಂಬುದರಿಂದ ಆರು ಅರ್ಥವುಳ್ಳುದೆಂದೂ '**ಧಾತ್ವರ್ಥಃ ಕೇವಲಃ ಶುದ್ಧೋ ಭಾವ ಇತ್ಯಭಿಧೀಯತೇ**' ಎಂಬುದರಿಂದ ಧಾತ್ವರ್ಥಮಾತ್ರಬೋಧಕವೆಂದೂ ಅನೇಕಾರ್ಥವುಳ್ಳುದೆಂದಂಗೀಕರಿಸಿರುವರು. ಅದರಲ್ಲಿ ಪ್ರಕೃತಸೂತ್ರದಲ್ಲಿ ಶಬ್ದಪ್ರವೃತ್ತಿನಿಮಿತ್ತರೂಪವಾದುದು ಭಾವಶಬ್ದಾರ್ಥವೆಂದು ವಿವಕ್ಷಿತವಾಗಿದೆ. ಇದು ಶಬ್ದಕ್ಕೆ ದ್ರವ್ಯದಲ್ಲಿ ಪ್ರವೃತ್ತಿಯುಂಟಾಗಲು 'ಹೇತು' ವೆಂದು ತಿಳಿಯಬೇಕು. ಕೆಲವು ಶಬ್ದವು ಕೆಲವರ್ಥದಲ್ಲಿ ಪ್ರವರ್ತಿಸಿ ಪ್ರತೀತಿಯನ್ನುಂಟುಮಾಡುವುದೆಂದು ಲೋಕವಲ್ಲಿ ಪ್ರಸಿದ್ಧವಾಗಿರುವುದು. ಅಲ್ಲಿ ಅವಶ್ಯವಾಗಿ ಆವುದಾದರೂ ಒಂದು ನಿಮಿತ್ತವಿದ್ದೇ ಇರಬೇಕು. ತಥಾಚ — ಇಲ್ಲ ಆವುದು ನಿಮಿತ್ತವೋ ಸಂಸ್ಕೃತದಲ್ಲಿ 'ತ್ವ, ತಲ್' ಮೊದಲಾದ ಪ್ರತ್ಯಯವಾಚ್ಯವಾದುದು. ಅದೇ ಇಲ್ಲಿಯೂ 'ಸ್ವಾರ್ಥ' ಎಂದು ನಾಮಾಂತರವುಳ್ಳ ಭಾವವು ವಿವಕ್ಷಿತವಲ್ಲದೆ ಅಭಿಪ್ರಾಯಾದಿರೂಪವಲ್ಲ. ಅದೇ ಭಾವವು ಎಲ್ಲಾಕಡೆಯಲ್ಲಿಯೂ ಸ್ವಯಂದ್ರವ್ಯ ಧರ್ಮವಾಗಿದ್ದರೂ ಕ್ವಚಿತ್ ಜಾತಿರೂಪವಾಗಿಯೂ ಕ್ವಚಿತ್ ಕ್ರಿಯಾರೂಪವಾಗಿಯೂ ಕ್ವಚಿತ್ ಗುಣರೂಪವಾಗಿಯೂ ಕ್ವಚಿತ್ ದ್ರವ್ಯರೂಪವಾಗಿಯೂ ಕ್ವಚಿತ್ ಸಂಜ್ಞಾರೂಪವಾಗಿಯೂ ಇರುವುದೆಂದು ಪ್ರಾಚೀನರು —

**ಜಾತಿಕ್ರಿಯಾಗುಣದ್ರವ್ಯಸಂಜ್ಞಾಃ ಪಂಚೈವ ಕಲ್ಪನಾಃ**
**ಅತ್ವೋ ಯಾತಿ ಸಿತೋ ಘಂಟೀ ಕತ್ತಲಾಖ್ಯೋ ಯಥಾಕ್ರಮಂ**

ಎಂಬ ಕಾರಿಕೆಯಿಂದ ಬೋಧಿಸಿರುವರು. ಹೀಗೆಯೇ — **ನ್ಯಾಸಕಾರರೂ** — '**ಗೌರ್ಗಚ್ಛತಿ**

**ಶುಕ್ಲೋ ಘಂಟಾವಾನ್ ಕಮಲಕಸಂಜ್ಞ ಇತಿ** ' ಎಂದು ಹೇಳಿರುವರು. ಹೀಗೆ ಆಯ್ದು ಪ್ರಕಾರವುಳ್ಳುದಾದರೂ ಪ್ರವೃತ್ತಿನಿಮಿತ್ತವು ದ್ರವ್ಯಧರ್ಮವೇ ಗುಣಕ್ರಿಯಾದಿಗಳೂ ದ್ರವ್ಯಗಳಂತೆಯೇ ಎಂದು ' **ಯತ್ಸತ್ ತದ್ದ್ರವ್ಯಂ** ' ಎಂದು **ಶಾಬ್ದಿಕರು** ಅರ್ಥಮಾತ್ರಕ್ಕೂ ದ್ರವ್ಯತ್ವವನ್ನಂಗೀಕರಿಸಿರುವರು. ಇದರಲ್ಲಿ **ನ್ಯಾಸಕಾರರು** ' ಸದ್ದ್ರವ್ಯಂ, ಅಸದ್ದ್ರವ್ಯಂ ' ಎಂದು ವ್ಯವಹರಿಸುವರು. ಹೀಗೆಯೇ **ಪರಮಾಗಮಸೂತ್ರಕಾರನೂ** — ' **ಸದ್ದ್ರವ್ಯಲಕ್ಷಣಂ** ' ಎಂದು ಸೂತ್ರವನ್ನು ಮಾಡಿರುವನು. ತತ್ತ್ವಾರ್ಥಶ್ಲೋಕವಾರ್ತಿಕದಲ್ಲಿ —

**ಗುಣವತ್ ದ್ರವ್ಯಮಿತ್ಯುಕ್ತಂ ಸಹಾನೇಕಾಂತಸಿದ್ಧಯೇ**
**ತಥಾ ಪರ್ಯಯವತ್ ದ್ರವ್ಯಂ ಕ್ರಮಾನೇಕಾಂತವಿತ್ತಯೇ**

ಎಂದು ಹೇಳಿ ' **ಪ್ರವೃತ್ತಿನಿಮಿತ್ತಂ ಭಾವಃ, ಸ್ವಾರ್ಥ ಇತಿ ಚೋಚ್ಯತೇ** ' ಎಂದು ಹೇಳಿರುವನು. ಮತ್ತು ಇದು —

**ಸ್ವಾರ್ಥಮಭಿಧಾಯ ಶಬ್ದೋ ನಿರಪೇಕ್ಷೋ ದ್ರವ್ಯಮಾಹ ಸಮವೇತಂ**
**ಸಮವೇತಸ್ಯ ತು ವಚನೇ ಲಿಂಗಂ ಸಂಖ್ಯಾ ವಿಭಕ್ತಯಶ್ಚೇತಿ**

ಎಂದು ಸ್ವಾರ್ಥಾಭಿಧಾಯಿಯಾಗಿಯೇ ದ್ರವ್ಯವನ್ನು ಹೇಳುವುದೆಂದು ಹೇಳಿರುವರು. ಆದುದರಿಂದ ' ಭಾವ ' ವೆಂಬುದು ಪ್ರವೃತ್ತಿನಿಮಿತ್ತವೆಂದು ತಿಳಿಯಬೇಕು. ಈ ಭಾವವು ಜಾತ್ಯಾದಿ ಪಂಚಪ್ರಕಾರಕವೆಂದು ಹೇಳಲ್ಪಟ್ಟಿತು. ಇಲ್ಲಿ ಸಾಮಾನ್ಯವೇ ' ಜಾತಿ ' ಯೆಂಬುದು. ಈ ಜಾತಿಯು ತಿರ್ಯಗೂರ್ಧ್ವತಾಭೇದಗಳಿಂದ ಎರಡು ಬಗೆಯಾಗಿರುವುದು. ಅವುಗಳಲ್ಲಿ ಊರ್ಧ್ವತಾ ' ಜಾತಿ ' ಯೆಂಬುದು ' ದ್ರವ್ಯ 'ವೇ ಎಂದು — ' **ಪರಾಪರವಿವರ್ತವ್ಯಾಪಿದ್ರವ್ಯಮೂರ್ಧ್ವತಾ ಮೃದಿವಸ್ಥಾನಾದಿಷ್ವಿತಿ** ' ಎಂಬ ವಚನದಿಂದ ತಿಳಿಯುವುದು. ತಿರ್ಯಕ್‌ಸಾಮಾನ್ಯವಾದರೋ — ' **ಸದೃಶಪರಿಣಾಮಸ್ತಿರ್ಯಕ್ ಖಂಡಮುಂಡಾದಿಷು ಗೋತ್ವವದಿತಿ** ' ಎಂಬುದರಿಂದ ' ಸಾದೃಶ್ಯವೇ ' ಎಂದು ತಿಳಿಯುವುದು. ಇಂತಹ ಜಾತಿಯು ಗುಣಕ್ರಿಯಾದಿಗಳಲ್ಲಿಯೂ ತೋರುವುದರಿಂದಲೂ ಇದಿಲ್ಲದೆ ಲೋಕದಲ್ಲಿ ದ್ರವ್ಯಪ್ರತೀತಿಯೇ ಇಲ್ಲವಾದುದರಿಂದಲೂ ಈ ಭಾವವು ದ್ರವ್ಯಧರ್ಮವೆಂದು ಹೇಳಿರುವುದು. ಆದುದರಿಂದ ಪ್ರವೃತ್ತಿನಿಮಿತ್ತಲಕ್ಷಣವಾದ ಭಾವವು ಆವಾಗ ವಿವಕ್ಷಿತವಾಗುವುದೋ ಆಗ ಷಷ್ಠ್ಯಂತದಮೇಲೆ ' ತನ ' ಪ್ರತ್ಯಯವು ಬರುವುದು. ಈ ಭಾವವೇ ತದ್ಧಿತವಾಚ್ಯವೆಂದು ವ್ಯವಹರಿಸಲ್ಪಡುವುದು. ಧಾತ್ವರ್ಥಲಕ್ಷಣಭಾವವಾದರೋ ಕೃದ್ವಾಚ್ಯವೆಂದು ತಿಳಿಯುವುದು.

ಇಲ್ಲಿ ವಿಹಿತವಾದ ' ತನ ' ಪ್ರತ್ಯಯವು ತತ್ಸಮ, ತದ್ಭವ, ದೇಶ್ಯರೂಪವಾದ ತ್ರಿವಿಧಲಿಂಗದಮೇಲೂ ಬರುವುದೆಂದು ತ್ರಿವಿಧಶಬ್ದಗಳೂ ಉದಾಹರಿಸಲ್ಪಟ್ಟಿವೆ.

**ಅವತಾರಿಕೆ ೪೩೧**

ಹೀಗೆಯೇ ಭಾವಾರ್ಥದಲ್ಲಿ ಪ್ರತ್ಯಯಾಂತರವನ್ನು ವಿಧಿಸುತ್ತಾನೆ.

**ಸೂತ್ರಂ ॥ ಉನ್ನತಾದಿಭ್ಯ ಇಕೆತ್ ॥ ೪೩೧ ॥**

**ಅರ್ಥ ॥ ಭಾವಾರ್ಥದಲ್ಲಿ ಷಷ್ಠ್ಯಂತಗಳಾದ ಉನ್ನತಾದಿಗಣಪಠಿತಶಬ್ದಗಳಮೇಲೆ ' ಇಕೆ ' ಎಂಬ ಪ್ರತ್ಯಯವು ವಿಕಲ್ಪವಾಗಿ ಬರುವುದು.**

**ಉದಾಹರಣೆ** || 'ಉನ್ನತಿಕೆ, ಪನ್ನತಿಕೆ, ಮಾನಸಿಕೆ, ಗರುವಿಕೆ, ಆಯತಿಕೆ ||' ಮೊದಲಾದುವು. ಉನ್ನತಾದಿಗಳು ಪ್ರಯೋಗಗಮ್ಯಗಳೆಂದು ತಿಳಿಯಬೇಕು.

**ವಿಚಾರ ೪೩೧**

'ಉನ್ನತ, ಪನ್ನತ, ಮಾನಸ, ಆಯತ, ಅಲಸ, ಗರುವ, ಜಾಣ, ಚದುರ, ಚೆಲ್ವ' ಮೊದಲಾದುವು ಉನ್ನತಾದಿಗಳು. ಇವುಗಳಿಗೂ ಭಾವಾರ್ಥದಲ್ಲಿಯೇ 'ಇಕೆ' ಎಂಬ ಪ್ರತ್ಯಯವು ಬರುವುದೆಂದು ಸೂತ್ರಾರ್ಥವಾಗುವುದು. ಇಲ್ಲಿ 'ಇಕೆತ್' ಎಂಬ ತ ಕಾರವು ನಿರ್ದೇಶಾರ್ಥವು. ಇದು 'ತನ' ಪ್ರತ್ಯಯಕ್ಕೆ ಬಾಧಕವಲ್ಲವೆಂಬುದು 'ವಾ' ಗ್ರಹಣಾನುವೃತ್ತಿಯಿಂದ ಸೂಚಿತವಾಗುವುದು. ಆದುದರಿಂದ — 'ಉನ್ನತತನಂ, ಪನ್ನತತನಂ' ಮೊದಲಾದ ಪ್ರಯೋಗಗಳೂ ಆಗುವುವು. ಈ ಉನ್ನತಾದಿಗಳು ಪ್ರಯೋಗಗಮ್ಯಗಳೆಂದು ಹೇಳಿರುವುದರಿಂದ — 'ಕಾಱ, ಗಾಱ' ಮೊದಲಾದ ಕೆಲವು ಪ್ರತ್ಯಯಾಂತಗಳೂ ಗ್ರಹಿಸಲ್ಪಡುವುವು. ಆದುದರಿಂದ — 'ಆಟಕಾಱಿಕೆ, ಓಲೆಕಾಱಿಕೆ, ಕಂಚುಗಾಱಿಕೆ[೧], ಬಳೆಗಾಱಿಕೆ' ಮೊದಲಾದುವು ಸಿದ್ಧಿಸುವುವು.

**ಅವತಾರಿಕೆ ೪೩೨**

ಇನ್ನೂ ಕೆಲವು ಪ್ರಕೃತಿವಿಶೇಷದಮೇಲೂ ಭಾವಾರ್ಥದಲ್ಲಿ ಪ್ರತ್ಯಯವಿಶೇಷವನ್ನೂ ತತ್ಸನ್ನಿಯೋಗದಿಂದ ಪೂರ್ವಸ್ವರದೊಡನೆ 'ದು' ಲೋಪವನ್ನೂ ವಿಧಿಸುತ್ತಾನೆ.

**ಸೂತ್ರಂ || ಗುಣೋಕ್ತೇಃ ಪುಃ ಪೂರ್ವಸ್ವರೇಣ ದುಲುಪ್ಚ || ೪೩೨ ||**

**ಅರ್ಥ** || ಭಾವಾರ್ಥದಲ್ಲಿ ಗುಣವಾಚಕವಾದ ಷಷ್ಠ್ಯಂತದಮೇಲೆ 'ಪು' ಪ್ರತ್ಯಯವೂ ಪ್ರಕೃತಿಯ ಪೂರ್ವಸ್ವರಸಹಿತವಾದ ದು-ವಿಗೆ ಲೋಪವೂ ಬರುವುದು.

**ಉದಾಹರಣೆ** || 'ಒಳ್ಳಿತಱ ಭಾವಂ — ಒಳ್ಪು, ಬಿಳ್ಳಿದಱ ಭಾವಂ — ಬೆಳ್ಪು || ಹೀಗೆಯೇ — ಕರ್ಪು, ತೆಳ್ಪು, ಮೆಲ್ಪು, ನೇರ್ಪು, ಕೂರ್ಪು ||' ಮೊದಲಾದುವೂ ಆಗುವುವು.

**ವಿಚಾರ ೪೩೨**

ಇಲ್ಲಿ ಗುಣವಾಚಕಗಳಿಗೆ ಲಿಂಗತ್ರಯದಲ್ಲಿಯೂ ಪ್ರಯೋಗವಿರುವುದರಿಂದ ಲಿಂಗತ್ರಯಗಳಲ್ಲಿಯೂ ಬರುವುದೆಂದು ತಿಳಿಯುವುದು. ಪಿರಿದಱಭಾವಂ— 'ಪೆಂಪು'. ಎಂಬಲ್ಲಿ ಮಾದೇಶವು ಗಾವಿಲಾದಿ ಪಾಠದಿಂದ ಸಿದ್ಧಿಸುವುದೆಂದು ತಿಳಿಯುವುದು ಇಲ್ಲಿ 'ಗುಣೋಕ್ತೇಃ' ಎಂದು ಹೇಳಿರುವುದರಿಂದ 'ಕೆಳೆಯತನಂ, ಸುಖಿತನಂ' ಮೊದಲಾದುವುಗಳಲ್ಲಿ 'ಪು' ಪ್ರತ್ಯಯವು ಬರುವುದಿಲ್ಲವೆಂದು ತಿಳಿಯಬೇಕು.

**ಅವತಾರಿಕೆ ೪೩೩**

ಹೀಗೆಯೇ ಸಂಖ್ಯಾವಾಚಕದಮೇಲೆ ಅರ್ಥಾಂತರದಲ್ಲಿ ಬರುವ ಪ್ರತ್ಯಯವನ್ನು ವಿಧಿಸುತ್ತಾನೆ.

**ಸೂತ್ರಂ || ಸಂಖ್ಯಾಯಾ ಮೆದ್ವಾರೇ || ೪೩೩ ||**

**ಅರ್ಥ** || ವಾರಾರ್ಥವು ತೋರಲು ಸಂಖ್ಯಾವಾಚಕ ಶಬ್ದದಮೇಲೆ 'ಮೆ' ಪ್ರತ್ಯಯವು ಬರುವುದು.

---

ಪಾಠಾಂತರ: ೧ ಕುಚುಗಾಱಿಕೆ

**ಉದಾಹರಣೆ** || ' ಒಂದುಬಾರಿ — ಒರ್ಮೆ || ಹೀಗೆಯೇ ಇರ್ಮೆ, ಮೂರ್ಮೆ, ನೂರ್ಮೆ, ಸಾಸಿರ್ಮೆ || ' ಮೊದಲಾದುವು ಆಗುವುವು.

**ಅವತಾರಿಕೆ ೪೩೪**

ಹೀಗೆಯೇ ಪರಿಮಾಣವಾಚಕದಮೇಲೆ ಪೂರಣಾರ್ಥದಲ್ಲಿ ಬರುವ ಪ್ರತ್ಯಯವನ್ನು ವಿಧಿಸುತ್ತಾನೆ.

**ಸೂತ್ರ || ಪರಿಮಾಣಾಚ್ಚಾನೆಯಃ ಪೂರಣೇ || ೪೩೪ ||**

**ಅರ್ಥ || ಪೂರಣಾರ್ಥದಲ್ಲಿ ಸಂಖ್ಯಾವಾಚಕದಮೇಲೂ ಪರಿಮಾಣವಾಚಕದಮೇಲೂ ' ಅನೆಯ ' ಪ್ರತ್ಯಯವು ಬರುವುದು.**

**ಉದಾಹರಣೆ** || ' ಒಂದಱ ಪೂರಣಂ — ಒಂದನೆಯಂ || ಹೀಗೆಯೇ — ಎರಡನೆಯಂ, ಮೂಱನೆಯಂ, ನಾಲ್ಕನೆಯಂ || ಮೊದಲಾದುವು ಸಂಖ್ಯೆಗೂ || ಅನಿತನಯಂ, ಇನಿತನೆಯಂ, ಎನಿತನೆಯಂ || ' ಮೊದಲಾದುವು ಪರಿಮಾಣಕ್ಕೂ ಉದಾಹರಣೆಗಳು.

**ವಿಚಾರ ೪೩೪**

ಈ ಸೂತ್ರದಲ್ಲಿ — ' ಪರಿಮಾಣಾಚ್ಚ ' ಎಂದು ಚ ಕಾರವನ್ನು ಹೇಳಿರುವುದರಿಂದ ' ಸಂಖ್ಯಾಯಾಃ ' ಎಂಬುದಕ್ಕೂ ಸಮುಚ್ಚಾಯಕವಾಗುವುದು. ' ಅನೆಯ ' ಎಂಬುದು ವಿಧೇಯ ನಿರ್ದೇಶವು. ಪೂರಣ ಇತ್ಯರ್ಥನಿರ್ದೇಶವು. ಪೂರ್ವದಂತೆ ಇಲ್ಲಿಯೂ ಲಿಂಗತ್ರಯಸಾಧಾರಣ ವೆಂದು ತಿಳಿಯುವುದು.

**ಅವತಾರಿಕೆ ೪೩೫**

ಹೀಗೆಯೆ ಅದ್ವಾದಿಗೆ ಬರುವ ಪ್ರತ್ಯಯವನ್ನು ಹೇಳುತ್ತಾನೆ.

**ಸೂತ್ರಂ || ಅದ್ವಿದೂದೋರ್ನಿತುಃ ಪರಿಮಾಣೇ ದೋರ್ಲುಪ್ಚ || ೪೩೫ ||**

**ಅರ್ಥ || ಪರಿಮಾಣಾರ್ಥವು ತೋರುತ್ತಿರಲು ' ಅದು, ಇದು, ಉದು ' ಎಂಬ ಶಬ್ದಗಳ ಮೇಲೆ ' ನಿತು ' ಪ್ರತ್ಯಯವು ಬರುವುದು. ಪ್ರಕೃತಿಯ ದು-ವಿಗೆ ಲೋಪವು ಬರುವುದು.**

**ಉದಾಹರಣೆ** || ' ಅನಿತು, ಇನಿತು, ಎನಿತು ||' ಎಂಬಿವು ಲಕ್ಷ್ಯಗಳು.

**ವಿಚಾರ ೪೩೫**

ಇಲ್ಲಿ ' ಪರಿಮಾಣೇ ' ಎಂಬುದು ಅರ್ಥನಿರ್ದೇಶವು. ಇದು ' ದ್ರವ್ಯಪರಿಮಾಣ, ಕ್ಷೇತ್ರ ಪರಿಮಾಣ, ಕಾಲಪರಿಮಾಣ ' ಎಂದು ಮೊದಲಾಗಿ ಅನೇಕವಿರುವುದು. ಇದರಲ್ಲಿ ಕಾಲಪರಿಮಾಣ ವಿವಕ್ಷೆಮಾಡಲು ಬೇರೆ ಪ್ರತ್ಯಯವನ್ನು ಮುಂದೆ ಹೇಳುವುದರಿಂದ ಇಲ್ಲಿ ತದತಿರಿಕ್ತ ಪರಿಮಾಣಾ ರ್ಥದಲ್ಲ ಬರುವುದು—ಎಂದು ತಿಳಿಯಬೇಕು. ಕೆಲವರು ಕಾಲಪರಿಮಾಣದಲ್ಲಿಯೂ ' ನಿತು ' ಪ್ರತ್ಯಯವು ಬರುವುದೆಂದು ಹೇಳುವರು. ಆದುದರಿಂದ ಇಲ್ಲಿ ಕೊಟ್ಟಿರುವ ಉದಾಹರಣೆಗಳು ಪ್ರಯೋಗಾನುಸಾರವಾಗಿ ಸರ್ವಪರಿಮಾಣವಿಷಯಕವೆಂದು ತಿಳಿಯುವುದು.

**ಅವತಾರಿಕೆ ೪೩೬**

ಹೀಗೆಯೇ ಅದ್ವಾದಿಗಳಿಗೆ ಕಾಲಪರಿಮಾಣದಲ್ಲಿ ಪ್ರತ್ಯಯಾಂತರವನ್ನೂ ದು-ವಿಗೆ ನ ಕಾರಾ ದೇಶವನ್ನೂ ವಿಧಿಸುತ್ತಾನೆ.

**ಸೂತ್ರಂ || ಎವರಮೆವರೆಗಂ ಕಾಲಸ್ಯ ನಶ್ಚ || ೪೩೬ ||**

**ಅರ್ಥ || ' ಅದು, ಇದು, ಉದು ' ಎಂಬಿವುಗಳಿಗೆ ಕಾಲಪರಿಮಾಣವು ತೋರುವಾಗ ' ಎವರಂ, ಎವರೆಗಂ ' ಎಂಬ ಪ್ರತ್ಯಯಗಳೂ ದು-ವಿಗೆ ನ ಕಾರಾದೇಶವೂ ಬರುವುದು.**

**ಉದಾಹರಣೆ** || ‘ ಅನ್ನೆವರಂ, ಅನ್ನೆವರೆಗಂ; ಇನ್ನೆವರಂ, ಇನ್ನೆವರೆಗಂ; ಉನ್ನೆವರಂ, ಉನ್ನೆವರೆಗಂ || ’ ಎಂಬಿವು ಇದಕ್ಕೆ ಲಕ್ಷ್ಯಗಳು.

**ವಿಚಾರ ೪೩೭**

ಇಲ್ಲಿ — ‘ ಅದ್ವಿದೂದೋಃ ’ ಎಂಬುದೂ ‘ ಪರಿಮಾಣೇ ’ ಎಂಬುದೂ ಅನುವರ್ತಿಸಲ್ಪಡುವುವು. ಆದರಲ್ಲಿ ‘ ಅದು, ಇದು, ಉದು ’ ಎಂಬ ಪ್ರಕೃತಿತ್ರಯಕ್ಕೆ ‘ ಎವರಂ, ಎವರೆಗಂ ’ ಎಂಬ ವಿಧೇಯದ್ವಯವನ್ನೂ ಪ್ರತ್ಯೇಕವಾಗಿ ಸಂಬಂಧಿಸುವುದು. ‘ ಪರಿಮಾಣೇ ’ ಎಂಬುದು ಕಾಲಕ್ಕೆ ವಿಶೇಷಣವು. ‘ ದೋಃ ’ ಎಂಬುದು ನ ಕಾರಾದೇಶಕ್ಕೆ ಸ್ಥಾನಿಯು. ತಥಾಚ — ‘ ಎವರಂ, ಎವರೆಗಂ ’ ಪ್ರತ್ಯಯಗಳ ಸನ್ನಿಯೋಗಶಿಷ್ಟವಾಗಿ ನ ಕಾರಾದೇಶವು ಬರುವುದೆಂದು ಸೂತ್ರಾರ್ಥವಾಗುವುದು. ಇಲ್ಲಿ ‘ ಕಾಲಸ್ಯ ’ ಎಂದು ಹೇಳಿರುವುದರಿಂದ ದ್ರವ್ಯಪರಿಮಾಣದಲ್ಲಿ ಬರುವುದಿಲ್ಲವೆಂದು ತಿಳಿಯಬೇಕು.

**ಅವತಾರಿಕೆ ೪೩೮**

ಹೀಗೆಯೆ ಅರ್ಥಾಂತರದಲ್ಲಿ ಬರುವ ಪ್ರತ್ಯಯವನ್ನು ಹೇಳುತ್ತಾನೆ.

**ಸೂತ್ರಂ || ಪ್ರಕಾರೇ ತುಟುತೆತವಃ || ೪೩೮ ||**

**ಅರ್ಥ** || ಪ್ರಕಾರಾರ್ಥದಲ್ಲಿ — ‘ ಅದು, ಇದು, ಉದು ’ **ಗಳಿಗೆ** ‘ **ತುಟು, ತೆ, ತು** ’ **ಎಂಬ ಪ್ರತ್ಯಯಗಳು ಯಥಾಯೋಗ್ಯವಾಗಿ ಬರುವುವು. ಮತ್ತು ಪ್ರಕೃತಿಯ ದು-ವಿಗೆ ನ ಕಾರಾದೇಶವೂ ಬರುವುದು.**

**ಉದಾಹರಣೆ** || ‘ ಅಂತುಟು, ಅಂತೆ, ಅಂತು; ಇಂತುಟು, ಇಂತೆ, ಇಂತು; ಉಂತುಟು, ಉಂತೆ, ಉಂತು || ’ ಎಂಬಿವು ಲಕ್ಷ್ಯಗಳು.

**ವಿಚಾರ ೪೩೮**

ಈ ಸೂತ್ರದಲ್ಲಿ — ಪ್ರಕೃತಿಪ್ರತ್ಯಯಗಳಿಗೆ ಸಮಸಂಖ್ಯಾಕತ್ವವಿದ್ದರೂ ವಿಧೇಯದಲ್ಲಿ ದ್ವಂದ್ವೈಕತ್ವನಿರ್ದೇಶವನ್ನು ಮಾಡದೆ ಬಹುವಚನನಿರ್ದೇಶವನ್ನು ಮಾಡಿರುವುದರಿಂದ ಯಥಾಸಂಖ್ಯಾನ್ವಯವಿಲ್ಲವೆಂದು ತಿಳಿಯುವುದು. ತಥಾಚ — ‘ ಅಂತುಟು ’ ಮೊದಲಾದ ಪ್ರಯೋಗಗಳು ಯಥಾಸಂಭವವಾಗಿ ಸಿದ್ಧಿಸುವುವು.

ಇಲ್ಲಿ ‘ ಉಂತೆ ’ ಎಂಬುದು ತೂಷ್ಣೀಮರ್ಥದಲ್ಲಿ ಅಖಂಡವಾದೊಂದು ಅವ್ಯಯವೂ ಉಂಟೆಂದು —

ಮುಂ ಬಿಸಜೋದ್ಭವಂ ಪಡೆ[1]ದನಂಬುದಮುಂ ಪವಮಾನಧೂಮತೇ
ಜೋಂಬುಗಳಿಂದಮೆಂಬ ನುಡಿ ಸತ್ಯಮದಲ್ಲದೊಡುಂತೆ ಕಾರ ಕಾ
ದಂಬಿನಿ ಮಾಟ್ಕುಮೇ ಬಿರಯಿಗಂಗಜವಹ್ನಿವಿಜೃಂಭಮಂ ವಿಲೋ
ಲಾಂಬಕವಾರಿಯಂ ಹೃದಯತಾಪವಮುತ್ಕಳಿಕಾಪ್ರಪಂಚಮಂ

ಮೊದಲಾದ ಪ್ರಯೋಗಗಳಿಂದ ತೋರುವುದು.

**ಅವತಾರಿಕೆ ೪೩೯**

ಹೀಗೆಯೇ ಕಾಲಾರ್ಥದಲ್ಲಿ ‘ ದು ’ ಪ್ರತ್ಯಯವನ್ನು ವಿಧಿಸುತ್ತಾನೆ.

---

ಪಾಠಾಂತರ: ೧ ಸಮೆ

**ಸೂತ್ರಂ || ಕಾಲೇ ದುಃ || ೪೩೮ ||**

**ಅರ್ಥ** || ' ಅದು, ಇದು, ಉದು ' ಎಂಬ ಶಬ್ದಗಳ ಮೇಲೆ ಕಾಲಾರ್ಥವು ತೋರುವಾಗ ದು-ಪ್ರತ್ಯಯವೂ ಪ್ರಕೃತಿಯ ದು-ಗೆ ನ ಕಾರಾದೇಶವೂ ಬರುವುದು.

**ಉದಾಹರಣೆ** || ' ಅಂದು, ಇಂದು, ಉಂದು || ' ಇವು ಇದಕ್ಕೆ ಲಕ್ಷ್ಯಗಳು.

**ಅವತಾರಿಕೆ ೪೩೯**

ಹೀಗೆ ಅದ್ವಾದಿಗಳಲ್ಲಿ — ' ಅದು, ಇದು, ಉದು ' ಎಂಬ ಶಬ್ದಗಳಿಗೆ ಬರುವ ವಿಧಿಗಳನ್ನು ಹೇಳಿ ' ಆವುದು ' ಶಬ್ದಕ್ಕೆ ಬರುವ ಕಾರ್ಯವಿಶೇಷವನ್ನು ವಿಧಿಸುತ್ತಾನೆ.

**ಸೂತ್ರಂ || ಎನಾವುದೋರೇತೇಷು || ೪೩೯ ||**

**ಅರ್ಥ** || ಪೂರ್ವೋಕ್ತಗಳಾದ ' ಎವರಂ, ಎವರೆಗಂ, ತುಟು, ತೆ, ತು, ದು ' ಎಂಬ ಪ್ರತ್ಯಯಗಳು ಪರವಾಗಿರಲು ' ಆವುದು ' ಶಬ್ದಕ್ಕೆ ' ಎನ್ ' ಎಂಬಾದೇಶವು ಬರುವುದು.

**ಉದಾಹರಣೆ** || ' ಎನ್ನೆವರಂ, ಎನ್ನೆವರೆಗಂ, ಎಂತುಟು, ಎಂತೆ, ಎಂತು, ಎಂದು || ' ಎಂಬಿವು ಲಕ್ಷ್ಯಗಳು.

**ವಿಚಾರ ೪೩೯**

ಇಲ್ಲ ' ಏತೇಷು ' ಎಂಬುದರಿಂದ ' ಎವರಂ ' ಮೊದಲಾದ ಪ್ರತ್ಯಯಗಳೇ ವಿವಕ್ಷಿಸಲ್ಪಡುವುವು. ಆದುದರಿಂದ ನಿತು-ಪ್ರತ್ಯಯಾಂತವು ಮುಂದಿನ ಸೂತ್ರಕ್ಕೆ ವಿಷಯವೆಂದು ತಿಳಿಯಬೇಕು. ಇದು ಅದ್ವಾದಿಯಾದುದರಿಂದ ಸರ್ವಾದೇಶವೆಂದು ತಿಳಿಯುವುದು.

**ಅವತಾರಿಕೆ ೪೪೦**

ಹೀಗೆಯೇ ನಿತು-ಪ್ರತ್ಯಯದಲ್ಲಿ ಎ ಕಾರಾದೇಶವನ್ನು ವಿಧಿಸುತ್ತಾನೆ.

**ಸೂತ್ರಂ || ಎದ್ನಿತೌ || ೪೪೦ ||**

**ಅರ್ಥ** || ' ಆವುದು ' ಶಬ್ದಕ್ಕೆ ನಿತು-ಪ್ರತ್ಯಯವು ಪರದಲ್ಲಿರುವಾಗ ಎ ಕಾರ ಸರ್ವಾದೇಶವಾಗಿ ಬರುವುದು.

**ಉದಾಹರಣೆ** || ' ಎನಿತು || '.

**ಅವತಾರಿಕೆ ೪೪೧**

ಹೀಗೆಯೇ ಸಾಮಾನ್ಯವಾಗಿ ಲಕ್ಷಣಕ್ಕೆ ವಿಷಯಗಳಾದ ತದ್ಧಿತ ವಿಧಿಯನ್ನು ಹೇಳಿ ಸಂಕೀರ್ಣವಾದ ವಿಷಯದಲ್ಲಿ ಕಾರ್ಯಗಳು ಭಿನ್ನಭಿನ್ನವಾಗಿರುವುದರಿಂದ ಅದನ್ನು ಪ್ರತಿಪದೋಕ್ತವಾಗಿ ಹೇಳುವುದು ಅಸಾಧ್ಯವೆಂದು ಅಂತಹ ಶಬ್ದಗಳನ್ನು ಗಣಪಾಠಮಾಡಿ ಶಿಷ್ಟಪ್ರಯೋಗಾನುಸಾರವಾಗಿ ತಿಳಿಸುತ್ತಾನೆ.

**ಸೂತ್ರಂ || ಗಾವಿಲಾದೀನಿ ಯಥೋಪದಿಷ್ಟಂ || ೪೪೧ ||**

**ಅರ್ಥ** || ' ಗಾವಿಲಾದಿ ' ಶಬ್ದಗಳು ಶಿಷ್ಟಪ್ರಯೋಗದಿಂದಲೇ ಸಾಧುಗಳೆಂದು ತಿಳಿಯಬೇಕೆಂದರೆ — ಇಂತಹ ಶಬ್ದಕ್ಕೆ ಇಂಥ ಕಾರ್ಯಗಳೇ ಬರುವುವೆಂದು ವಿಶಿಷ್ಯ ಹೇಳುವುದು ಅಸಾಧ್ಯವೆಂದು ಪ್ರಯೋಗಬಲದಿಂದಲೇ ತಿಳಿದುಕೊಳ್ಳಬೇಕೆಂದು ತಾತ್ಪರ್ಯವು.

**ಉದಾಹರಣೆ** || ಗಾವಿಲಂ, ನಾವಿಲಂ; ಘೋಟಯಿಲಂ, ಘೋಟಾಯಿಲಂ; ಪದಯಿಲಂ, ಪಚ್ಚಯಿಲಂ; ತಟ್ಟುಕಂ, ಚಟ್ಟುಕಂ, ಪಟ್ಟುಕಂ, ಕಟ್ಟುಕಂ, ಅಂಟುಕಂ; ಸಣುಕಂ, ಸಣ್ಣುಕಂ; ಜೊಂದುಕಂ, ದಿಂಡುಕಂ, ಪೆಂಕುಳಿ, ಬಾರಿಕಂ, ನಸಿಕಂ, ಕುಸಿಕಂ, ಗರವಟಿಗಂ, ಕೊಲ್ಲಟಿಗಂ, ಗಟಿವಟಗಂ, ದೀವಟಿಗಂ, ಸೀರ್ವಟಿಗಂ, ಆಯ್ಕುಳಿ ಮೊದಲಾದುವೇ ಗಾವಿಲಾದಿಗಳು. ಇದು ಆಕೃತಿ ಗಣವಾದುದರಿಂದ — ಅಷ್ಟು, ಇಷ್ಟು, ಉಷ್ಟು, ಎಷ್ಟು, ಐಸು, ಈಸು, ಊಸು, ಏಸು, ಪೆಂಪು, ಕೆಂಪು, ಕಡುಪು, ಕುಟುಪು, ಪೆರ್ಮೆ, ಪಲರ್ಮೆ, ಕೆಲರ್ಮೆ || ಮೊದಲಾದುವೂ ಇಲ್ಲಿ ಸಂಗ್ರಾಹ್ಯಗಳೆಂದು ತಿಳಿಯಬೇಕು.

**ವಿಚಾರ ೪೪೧**

ಇಲ್ಲಿ ಉದಾಹರಿಸಿರುವ ಲಕ್ಷ್ಯಗಳಲ್ಲಿ ಕರಂಬಾದಿಗಣದಲ್ಲಿ ಹೇಳುವಂತೆ ಕಾರ್ಯಗಳನ್ನು ಕಲ್ಪಿಸಿ ಹೇಳಿಕೊಳ್ಳುವುದು. ಇಲ್ಲಿ ಕೊಟ್ಟಿರುವುದಕ್ಕೆ ಅರ್ಥಗಳನ್ನು ಕೋಶಾದಿಗಳಿಂದ ನಿರ್ಣಯಿಸಿ ಕೊಳ್ಳುವುದು.

**|| ಇತಿ ತದ್ಧಿತಪ್ರಕರಣಂ ಸಮಾಪ್ತಂ ||**

ಬ್ರಹ್ಮಾರ್ಯಗೋತ್ರಸಂಭೂತ ವೆಂಕಟಾರ್ಯತನೂಭುವಾ
ಕುಂಡಲಾಖ್ಯೇನ ಗಿರಿಣಾ ಭಾಷಾದ್ವಯವಿಪಶ್ಚಿತಾ
ಯಾ ಕರ್ಣಾಟಕಶಬ್ದಾನುಶಾಸನಸ್ಯಪ್ರಕಾಶಿಕಾ
ರಚಿತಾ ತತ್ರ ಪಾದಸ್ತು ತೃತೀಯೋಽಗಾತ್ ಸಮಾಪ್ತತಾಂ

ಇತಿ ಶ್ರೀಮದ್ಭಟ್ಟಾಕಲಂಕದೇವ ವಿರಚಿತ ಕರ್ಣಾಟಕ ಶಬ್ದಾನುಶಾಸನ ಸೂತ್ರಾರ್ಥ ಪ್ರಕಾಶಿಕಾಯಾಂ ಶ್ರೀ ಬ್ರಹ್ಮಾನ್ವಯ ಸಂಜಾತ ಕುಂಡಲಿಗಿರ್ಯಾಚಾರ್ಯವಿರಚಿತಾಯಾಂ ತೃತೀಯಃ ಪಾದಃ ಸಮಾಪ್ತಃ ||

**|| ಶ್ರೀ ಹಯವದನಾರ್ಪಣಮಸ್ತು ||**

# ಅಥ ಚತುರ್ಥಪಾದ ಪ್ರಾರಂಭಂ

## ॥ ಅಥ ಧಾತುಪ್ರಕರಣದೊಳಾಖ್ಯಾತಪ್ರಕರಣಂ ॥

**ಅವತಾರಿಕೆ ೪೪೨**

ಈ ಲೋಕದಲ್ಲಿ ಪ್ರಯೋಗಾರ್ಹವಾದ ಶಬ್ದಜಾಲವು ನಾಮಪ್ರಕೃತಿಕ ಧಾತುಪ್ರಕೃತಿಕ ಭೇದದಿಂದ ಎರಡು ಬಗೆಯಾಗಿರುವುದು. ಅವುಗಳಲ್ಲಿ ನಾಮಪ್ರಕೃತಿಕವಾದುದು ಸುಬಂತ ಸ್ತ್ರೀಪ್ರತ್ಯಯಕಾರಕ ಸಮಾಸ ತದ್ಧಿತಾದಿ ಭೇದಪ್ರಭೇಧಗಳಿಂದ ವಿಸ್ತಾರವಾಗಿ ಪೂರ್ವಪಾದಗಳಲ್ಲಿ ನಿರೂಪಿಸಲ್ಪಟ್ಟಿತು. ಈಗ ಈ ಪಾದದಲ್ಲಿ ಧಾತುಪ್ರಕೃತಿಕವಾದುದನ್ನು ಸವಿಸ್ತರವಾಗಿ ನಿರೂಪಿಸಲು ಪ್ರಾರಂಭಿಸುವನಾಗಿ ಮೊದಲು ಆಖ್ಯಾತಪ್ರತ್ಯಯಾಂತರವನ್ನು ನಿರೂಪಿಸಲು ಸೂತ್ರವನ್ನು ಹೇಳುತ್ತಾನೆ.

**ಸೂತ್ರಂ ॥ ಧಾತೋರೇಕಾನೇಕತ್ವೇಽಮರಯಿರೆನೆವವೋಽನ್ಯಯುಷ್ಮದಸ್ಮಾಸು ಕರ್ತರಿ ॥ ೪೪೨ ॥**

**ಅರ್ಥ ॥ ಅನ್ಯಾರ್ಥದಲ್ಲಿಯೂ ಯುಷ್ಮದರ್ಥದಲ್ಲಿಯೂ ಅಸ್ಮದರ್ಥದಲ್ಲಿಯೂ ಏಕತ್ವಾನೇಕತ್ವಗಳ ವಿವಕ್ಷೆಯಿರಲು ಕ್ರಮವಾಗಿ ಧಾತುವಿಗೆ 'ಅಮ್, ಅರ್, ಅಯ್, ಇರ್, ಎನ್, ಎವು' ಎಂಬ ಆರು ಪ್ರತ್ಯಯಗಳು ಕರ್ತೃರೂಪಾರ್ಥದಲ್ಲಿ ಬರುವುವು. ಇಲ್ಲಿ 'ಅನ್ಯಾರ್ಥದಲ್ಲಿ' ಎಂದರೆ — ಸನ್ನಿಹಿತವಾಗಿರುವ ಯುಷ್ಮದಸ್ಮದರ್ಥಗಳಿಗಿಂತಲೂ ಬೇರೆ ಅರ್ಥದಲ್ಲಿ ಎಂದರ್ಥವು. 'ಕ್ರಮವಾಗಿ' ಎಂದರೆ — ಅನ್ಯಾರ್ಥದಲ್ಲಿ ಏಕತ್ವವು ತೋರುವಾಗ 'ಅಮ್' ಪ್ರತ್ಯಯವೂ ಅನೇಕತ್ವವು ತೋರುವಾಗ 'ಅರ್' ಪ್ರತ್ಯಯವೂ ಯುಷ್ಮದರ್ಥದ ಏಕತ್ವದಲ್ಲಿ 'ಅಯ್' ಎಂಬುದೂ ಅನೇಕತ್ವದಲ್ಲಿ 'ಇರ್' ಎಂಬುದೂ ಹೀಗೆಯೇ ಅಸ್ಮದರ್ಥೈಕತ್ವದಲ್ಲಿ 'ಎನ್' ಎಂಬುದೂ ಅನೇಕತ್ವದಲ್ಲಿ 'ಎವು' ಎಂಬುದೂ ಬರುವುವೆಂದು ತಿಳಿಯುವುದು.**

**ಉದಾಹರಣೆ ॥** 'ತಾನಿರ್ದಪಂ, ತಾಮಿರ್ದಪರ್; ನೀನಿರ್ದಪಯ್, ನೀಮಿರ್ದಪಿರ್; ಆನಿರ್ದೆಪಂ, ಆಮಿರ್ದೆಪೆವು ॥' ಮೊದಲಾದುವು ಇದಕ್ಕೆ ಕ್ರಮವಾಗಿ ಉದಾಹರಣೆಗಳಾಗುವುವು.

ಇಲ್ಲಿ — ಅನ್ಯಯುಷ್ಮದಸ್ಮದರ್ಥಕ ಶಬ್ದಗಳಿಗೆ ಸಾಕ್ಷಾತ್ತಾಗಿ ಪ್ರಯೋಗವಿಲ್ಲದಿದ್ದರೂ ಅದರರ್ಥವು ತೋರುತ್ತಿದ್ದರೆ ಅಲ್ಲಿಯೂ ಅಮಾದಿಗಳು ಬರುವುವು—ಎಂದು ವ್ಯಾಖ್ಯಾನ ಮಾಡಲು — 'ನೋಡಿದೆಂ, ನೋಡಿದರ್, ನೋಡಿದಯ್, ನೋಡಿದಿರ್, ನೋಡಿದೆಂ, ನೋಡಿದೆವು' ಮೊದಲಾದ ಕರ್ತೃಪದಾಸಮಭಿವ್ಯಾಹೃತಪ್ರಯೋಗಗಳು ಸಿದ್ಧಿಸುವುವು. 'ದೇವದತ್ತನಂ ಕಂಡೆಂ, ದೇವದತ್ತನಂ ಕಂಡಯ್; ನಿನ್ನಂ ಕಂಡಂ, ನಿನ್ನಂ ಕಂಡೆಂ; ಎನ್ನಂ ಕಂಡಂ, ಎನ್ನಂ ಕಂಡಯ್' ಮೊದಲಾದ ಪ್ರಯೋಗಗಳಲ್ಲಿ — ಅನ್ಯಯುಷ್ಮದಸ್ಮಚ್ಛಬ್ದಗಳಿಗೆ ಪ್ರಯೋಗವಿದ್ದರೂ ಆಖ್ಯಾತಾರ್ಥದೊಡನೆ ವ್ಯಧಿಕರಣಾನ್ವಯವು ಬರುವುದರಿಂದ ಅಮಾದಿಗಳು ಕ್ರಮವಾಗಿ ಬಾರದೆ ವ್ಯತ್ಯಸ್ತಗಳಾಗಿ ಬಂದಿರುವುವು. ಮತ್ತೆ ಕೆಲವರು ಇಲ್ಲಿ 'ಎನ್' ಎಂಬುದನ್ನು 'ಏನ್' ಎಂದು ಅಂಗೀಕರಿಸಿ —

ತಸಿವಣ್ಣಂ ಲಂಚಮಿಾವೆಂ ಪುರುಳ ನಿನಗೆ ಪೂಗೊಂಚಲಂ ಬೇಗದಿಂದಂ
ನಿನಗೀವೆಂ ತುಂಬಿ ಕೆಂದಾವರೆಯ ಮಿಸುಪ ಪೊಲ್ಮೊಗ್ಗೆಯಂ ಮಾಣವೆಂದುಂ
ನಿನಗೀವೆನಂಚೆ ಕಂಪಂ ನಿನಗೊಸೆಯಿಸುವೆಂ ಕೂಡೆ ತಿಂಗಾಳಿಯೆಸ್ಸೋ
ವನಸಿಂದಾರಯ್ದು ತಂದೆನ್ನೊಡನಿರಿಸಿದೊಡೆಂದಾಕೆ ಮಾತಾಡುತಿರ್ಪಳ್

ಮೊದಲಾದುವನ್ನು ಉದಾಹರಿಸುವರು.

**ವಿಚಾರ ೪೪೨**

ಈ ಸೂತ್ರದಲ್ಲಿ — 'ಧಾತೋಃ, ಏಕಾನೇಕತ್ವೇ, ಅಮರಯಿರೆನೆವವಃ, ಅನ್ಯಯುಷ್ಮದಸ್ಮಾಸು, ಕರ್ತರಿ' ಎಂದು ಅಯ್ದು ಪದಗಳಿರುವುವು. ಇಲ್ಲಿ 'ಧಾತೋಃ' ಎಂಬುದು ಪ್ರಕೃತಿನಿರ್ದೇಶವು. ಇದು ಈ ಪಾದದ ಕೊನೆಯವರೆಗೂ ಸಂಬಂಧಿಸಲ್ಪಡುವುದು. ಈ ಧಾತುವು ಸಕರ್ಮಕಾಕರ್ಮಕಭೇದಗಳಿಂದ ಎರಡು ಬಗೆಯಾಗಿರುವುದು. ಅದರಲ್ಲಿ — ಯಾವುದು ಫಲಸಮಾನಾಧಿಕರಣವ್ಯಾಪಾರವಾಚಕವೋ ಅದು ಅಕರ್ಮಕವು. ಆವುದು ಫಲವ್ಯಧಿಕರಣವ್ಯಾಪಾರವಾಚಕವೋ ಅದು ಸಕರ್ಮಕವು. ಇದೇ ಅರ್ಥವನ್ನು ಇಟ್ಟುಕೊಂಡು ಕೆಲವರು ಬಾಲಕರಿಗೆ ತಿಳಿಯುವಂತೆ —

ಲಜ್ಜಾಸತ್ತಾಸ್ಥಿತಿಜಾಗರಣ ವೃದ್ಧಿಕ್ಷಯಭಯಜೀವಿತಮರಣ
ಸ್ವಪ್ನಕ್ರೀಡಾರುಚಿದೀಪ್ತ್ಯರ್ಥಾ ಧಾತವ ಏತೇ ಕರ್ಮವಿಹೀನಾಃ

ಎಂಬುದರಿಂದ ಅಕರ್ಮಕ ಧಾತುಸ್ವರೂಪಗಳನ್ನು ಪರಿಗಣಿಸಿ,

ಯದ್ವಾಚ್ಯೇಹಾ ಸವಿಷಯಾ ಧಾತವಸ್ತೇ ಸಕರ್ಮಕಾಃ
ಯೇ ತು ನಿರ್ವಿಷಯಾಮಾಹುರೀಹಾಂ ತೇ ಸ್ಯುರಕರ್ಮಕಾಃ

ಪಚ್ಯಾದಿಕಾ ಸವಿಷಯಾ ಕ್ರಿಯಾ ಸಾ ಯಾ ಕಿಮಿಚ್ಛಿಕಾ
ಸ್ಥಿತ್ಯಾದಿರನ್ಯಾವಿಷಯಾ ಕಿಮಿಚ್ಛಾಂ ಜನಯೇನ್ನ ಯಾ

ಕರ್ತೃಕ್ರಿಯಾಪದದ್ವಂದ್ವಾತ್ ಕರ್ಮಾಕಾಂಕ್ಷಾ ಯದಾ ಭವೇತ್
ತದಾ ಸಕರ್ಮಕೋಜ್ಞೇಯೋ ವಿಪರೀತಸ್ತ್ವಕರ್ಮಕಃ

ಮೊದಲಾದ ವಚನನಿಚಯಗಳಿಂದ ಸಾಮಾನ್ಯ ಲಕ್ಷಣಗಳನ್ನೂ ತಿಳಿಸಿರುವರು.

ಇಂತಹ ಉಭಯವಿಧಿ ಧಾತುಗಳಲ್ಲಿ ಕರ್ಮಣಿ ಸಕರ್ಮಕ ಧಾತುಗಳ ಮೇಲೇ ಬರುವುದು; ಅಕರ್ಮಕ ಧಾತುಗಳ ಮೇಲೆ ಅಸಂಭವವಾದುದರಿಂದ ಬರುವುದಿಲ್ಲ. ಕರ್ತರಿಪ್ರತ್ಯಯಗಳಾದರೋ ಉಭಯವಿಧ ಧಾತುಗಳ ಮೇಲೂ ಬರುವುವು. ಆದುದರಿಂದ ಈ ಸೂತ್ರದಲ್ಲಿ 'ಧಾತೋಃ' ಎಂದು ಸಾಮಾನ್ಯವಾಗಿ ನಿರ್ದೇಶ ಮಾಡಿರುವುದು. ಇಲ್ಲಿ ಧಾತುಗಳ ಮೇಲೆ ಕೃತ್-ಪ್ರತ್ಯಯಗಳು ಕರ್ತ್ರಾದಿಕಾರಕದಲ್ಲಿಯೂ ಭಾವಾರ್ಥದಲ್ಲಿಯೂ ವಿಧಿಸಲ್ಪಡುವುವು. ತಿಙ್-ಸಂಜ್ಞಕ ಪ್ರತ್ಯಯಗಳಾದರೋ ಸಂಸ್ಕೃತದಲ್ಲಿ ಕರ್ತೃಕರ್ಮಭಾವಾರ್ಥಗಳಲ್ಲಿ ಬರುವುವು. ಭಾಷೆಯಲ್ಲಿಯಾದರೋ ಕರ್ತೃಕರ್ಮಾರ್ಥಗಳೆರಡರಲ್ಲೇ ಬರುವುವು; ಭಾವಾರ್ಥದಲ್ಲಿ ಬರುವುದಿಲ್ಲ. ಆದುದರಿಂದಲೇ ಭಾಷೆಯಲ್ಲಿ ಧಾತ್ವರ್ಥಲಕ್ಷಣಭಾವವು ಕೃದ್ವಾಚ್ಯವೆಂದು ಸಿದ್ಧಾಂತ ಮಾಡಲ್ಪಟ್ಟಿದೆ. 'ಏಕತ್ವಾನೇಕತ್ವೇ' ಎಂಬುದು ಪ್ರತ್ಯಯಾರ್ಥಗತ ಸಂಖ್ಯೆಯನ್ನು ಬೋಧಿಸು

ವುದು. 'ಅಮರಯಿಿರೆನೆವಃ' ಎಂಬುದು ಆರು ಪ್ರತ್ಯಯಗಳಿಗೂ ಸ್ವರೂಪನಿರ್ದೇಶವು. ಇವುಗಳಲ್ಲಿ ಎರಡೆರಡಕ್ಕೆ ಕ್ರಮವಾಗಿ ಪ್ರಥಮಪುರುಷ, ಮಧ್ಯಮಪುರುಷ, ಉತ್ತಮಪುರುಷಗಳೆಂದು ಪ್ರಾಚೀನರು ವ್ಯವಹರಿಸುವ ಸಂಜ್ಞೆಗಳು ಬರುವುವು. 'ಅನ್ಯಯುಷ್ಮದಸ್ಮಾಸು' ಎಂಬುದು ಭಾಷೆಯಲ್ಲಿ ಯುಷ್ಮದಾದಿಗಳಿಗೆ ಸ್ವತಂತ್ರವಾಗಿ ಪ್ರಯೋಗವಿಲ್ಲವಾಮದರಿಂದ ತದರ್ಥಗಳಾದ ತನಾದಿ ಶಬ್ದಬೋಧಕವೆಂದು ತಿಳಿಯಬೇಕು. 'ಕರ್ತರಿ' ಎಂಬುದು ಪ್ರತ್ಯಯದ ಅರ್ಥವನ್ನು ಬೋಧಿಸುವುದು. ತಥಾಚ — ಏತಾದೃಶ ನಿಮಿತ್ತಗಳು ಇರಲು ಕರ್ತ್ರರ್ಥದಲ್ಲಿ ಅಮಾದಿ-ಪ್ರತ್ಯಯಗಳು ಬರುವುವು— ಎಂದು ಸೂತ್ರಾರ್ಥವಾಗಲು 'ತಾನಿರ್ದ್ದಂ' ಮೊದಲಾದ ಪ್ರಯೋಗಗಳು ಸಿದ್ಧಿಸುವುವು.

ಇಲ್ಲಿ ವಿಧೇಯಗಳಾದ ಅಮಾದಿಗಳಾದ ಆರು ಪ್ರತ್ಯಯಗಳಲ್ಲಿ ಎರಡೆರಡಕ್ಕೆ ಕ್ರಮವಾಗಿ ಪ್ರಥಮ ಮಧ್ಯಮೋತ್ತಮ ಸಂಜ್ಞೆಗಳು ಪ್ರಸಿದ್ಧಗಳಾಗಿರುವುವು. ಇದೇ ಅರ್ಥವನ್ನು **ದರ್ಪಣಕಾರನು**—

ಅಮರಯಿರೆನೆವುಗಳಕ್ಕುಂ
ಕ್ರಮದೇಕಾನೇಕವಚನದೊಳ್ ಪ್ರತ್ಯೇಕಂ
ಸಮನಿಸೆ ಯುಗಳತೆಯಾಖ್ಯಾ
ತಮಾರ್ಗದೊಳ್ ನೆಲಸಿ ಸಂದ ಪುರುಷತ್ರಯಕಂ ( ಸೂತ್ರ ೨೧೭ )

ಎಂದು ಹೇಳಿರುವನು. **ನಾಗವರ್ಮನು— 'ತಾಸ್ತು ದ್ವೇದ್ವೇಪ್ರಥಮಮಧ್ಯಮೋತ್ತಮಪುರುಷಾಃ'** ಎಂದು ಹೇಳಿರುವನು. ಇಲ್ಲಿ ಇಂತಹ ಸಂಜ್ಞೆಗಳಿಗೆ ಪ್ರಯೋಜನವಿಲ್ಲವಾದುದರಿಂದ ತತ್ಸಂಜ್ಞಾ ಸೂತ್ರವನ್ನು ಮಾಡಿಲ್ಲವೆಂದು ತಿಳಿಯಬೇಕು.

ಇಲ್ಲಿ — ಅನ್ಯಯುಷ್ಮದಸ್ಮದರ್ಥಕ ಶಬ್ದಗಳಿಗೆ ಪ್ರಯೋಗವಿದ್ದರೂ ಅಥವಾ ಪ್ರಯೋಗ ವಿಲ್ಲದೆ ತದರ್ಥಮಾತ್ರ ತೋರುತ್ತಿದ್ದರೂ ಏಕತ್ವಾನೇಕತ್ವಗಳಲ್ಲಿ ಯಥಾಕ್ರಮವಾಗಿ ಅಮಾದಿ-ಪ್ರತ್ಯಯಗಳು ವಿಧಿಸಲ್ಪಟ್ಟಿವೆ. ಇವು ಎಲ್ಲಾ ಎಡೆಗಳಲ್ಲಿಯೂ ಹೀಗೆ ನಿಯಮವಾಗಿ ಪ್ರಯೋಗಿಸಲ್ಪಡುವುದಿಲ್ಲ. ಇದರಲ್ಲಿ ಕಾರಣವೇನೆಂದರೆ — ಅನ್ಯಾದ್ಯರ್ಥಗಳಿಗೂ ಪ್ರತ್ಯಯಾರ್ಥಕ್ಕೂ ಎಲ್ಲಿ ಸಾಮಾನಾಧಿಕರಣ್ಯವಿರುವುದೋ ಅಲ್ಲಿ ಈ ನಿಯಮವು ಪ್ರವರ್ತಿಸುವುದು; ಎಲ್ಲಿ ಇಲ್ಲವೋ ಅಲ್ಲಿ ಪ್ರವರ್ತಿಸುವುದಿಲ್ಲ. ಇದನ್ನು ಪ್ರಯೋಗಗಳನ್ನು ನೋಡಿ ಪ್ರತ್ಯಯಸಾಮಾನಾಧಿಕರಣ್ಯಾ ಸಾಮಾನಾಧಿಕರಣ್ಯಗಳನ್ನು ತಿಳಿದು ಯಥಾಯೋಗ್ಯವಾಗಿ ಪ್ರತ್ಯಯಗಳನ್ನೂ ಸಂಬಂಧಿಸಬೇಕು.

ಇಲ್ಲಿ 'ಎನ್' ಎಂಬುದು ದೀರ್ಘಾದಿಯೆಂದು ಕೆಲವರು ಹೇಗೆ ಅಂಗೀಕರಿಸಿರುವರೋ ಹಾಗೆಯೇ 'ಅಯ್' ಎಂಬುದನ್ನು ಐ ಕಾರ ರೂಪವನ್ನಾಗಿ ಅಂಗೀಕರಿಸಿ —

ಶ್ರೀಕಾಂತ ನೀನೆ ಸಲೆ ಗೆ
ಲ್ದೈ ಕಂತುವನಮಲಮುಕ್ತಿಸತಿಯೊಳ್ ನೆರೆದಾಂ
ತೈ ಕಿಡದ ಸುಖಮನುಱದ
ಗ್ಗೇಕೃತ್ಯಮಸಾಧ್ಯಮುಱವೆ ನಾನವರೊಳವಂ

ಕಂತುವನೆಂತಳಱಿಸಿದೆ
ಕೃತಾಂತನನುಱದೆಂತು ಗೆಲ್ದೆ ಮುಕ್ತ್ಯಂಗನೆಯಂ
ಎಂತೊಲಿಸಿದೆ ನಿರವಧಿಸುಖ
ಸಂತತಿಯನದೆಂತು ಪಡೆದೆ ಪೇೞೆನಗರ್ಹಾ

ಎಂದು ಮೊದಲಾದ ಪ್ರಯೋಗಗಳನ್ನು ಉದಾಹರಿಸಿರುವರು.

ಆದರೆ ಲೋಕದಲ್ಲಿ ವಾಕ್ಯಪ್ರಯೋಗಗಳಲ್ಲೆಲ್ಲ ಕ್ರಿಯಾಕಾರಕ ಸಮನ್ವಯವು — ಸಹಾನ್ವಯ-ಪ್ರತ್ಯೇಕಾನ್ವಯಗಳೆಂಬ ಭೇದಗಳಿಂದ ಎರಡು ಬಗೆಯಾಗಿರುವುದು. ಆವ ವಾಕ್ಯದಲ್ಲಿ ಅನೇಕ ಕಾರಕಗಳಲ್ಲಿ ಕ್ರಿಯಾಪದವೊಂದೇ ಅನ್ವಯಿಸಲ್ಪಡುವುದೋ ಅಲ್ಲಿ ಸಹಾನ್ವಯವು, ಎಲ್ಲಿ ಪ್ರತ್ಯೇಕವಾಗಿಯೇ ಅನ್ವಯಿಸಲ್ಪಡುವುದೋ ಅಲ್ಲಿ 'ಪ್ರತ್ಯೇಕಾನ್ವಯವು' ಎಂದು ಪ್ರಸಿದ್ಧವಾಗಿರುವುದು. ಇದರಲ್ಲಿ —

ಅವತೋಕಾವಳಿ ನೈಚಿಕೀಪ್ರತತಿ ಗೃಷ್ಟಿಶ್ರೇಣಿ ಪೀನೋಧ್ನಿಕಾ
ನಿವಹಂ ಬಷ್ಕಯಣೀಕದಂಬಕಮುಚಂಡೀಮಂಡಲಂ ಧೇನುಕೋ
ಟಿ ವಶಾಸಂತತಿ ವತ್ಸಕಾಸಮುದಯಂ ಪ್ರಷ್ಠೌಹಿಕಾನೀಕಮಿ
ರ್ದ್ದುವು ಗೋವರ್ಧನಗೋತ್ರಗೋತ್ರತಟದೊಳ್ ಗೋವಿಂದಗೋವೃಂದದೊಳ್

ಎಂಬುದು ಸಹಾನ್ವಯಕ್ಕೂ—

ತ್ರಿದಶಾನಕವಾಸನವಸು
ಗೆ ದಿವ್ಯರವಮಾತಪತ್ರಮೆಸಳ್ವೞಿ ಚಮರಂ
ಸದಮಲಭಾಮಂಡಲಮೆಸೆ
ವುದು ನಿನ್ನೊಳ್ ಜಿನಪ ನೀನೆ ಜಗದಾರಾಧ್ಯಂ

ಎಂಬುದು ಪ್ರತ್ಯೇಕಾನ್ವಯಕ್ಕೂ ಉದಾಹರಣೆಗಳಾಗಿರುವುವು. ಇವುಗಳ ಮಧ್ಯದಲ್ಲಿ ಪ್ರತ್ಯೇಕಾನ್ವಯವು ಎಲ್ಲಿಯೋ ಅಲ್ಲಿ ಎಷ್ಟು ಕಾರಕ ಪದಗಳಿರುವುವೋ ಅಷ್ಟರಲ್ಲಿಯೂ ಕ್ರಿಯಾಪದಕ್ಕೆ ಆವೃತ್ತಿ ಮಾಡಿ ಸಮನ್ವಯಿಸಲು ಆವ ಅನುಪಪತ್ತಿಯೂ ಇರುವುದಿಲ್ಲ. ಸಹಾನ್ವಯದಲ್ಲಿ ಯಾದರೋ ಎಲ್ಲಿ ಅನ್ಯೈಕವಚನಗಳೇ ಬಹಳವಾಗಿರುವುವೋ ಅಲ್ಲಿ ಅದರನೇಕತ್ವದಲ್ಲಿ ನಿಯುಕ್ತವಾದ 'ಅರ್' ಪ್ರತ್ಯಯವನ್ನೇ ತೆಗೆದುಕೊಂಡು ಪ್ರಯೋಗಮಾಡುವುದಕ್ಕೆ ಸಾಧ್ಯವಾಗಿದ್ದರೂ ಎಲ್ಲಿ ಅನ್ಯಯುಷ್ಮದಗಳಾಗಲಿ, ಅನ್ಯಾಸ್ಮದಗಳಾಗಲಿ, ಯುಷ್ಮದಸ್ಮದಗಳಾಗಲಿ ಎರಡೆರಡಕ್ಕೆ ಅಥವಾ ಮೂರುಮೂರಕ್ಕೆ ಪ್ರಯೋಗವಿರುವುದೋ ಅಲ್ಲಿ ಅನೇಕತ್ವವಾಚಿಗಳಾದ ಅರಾದಿಗಳ ಮಧ್ಯದಲ್ಲಿ ಆವುದನ್ನು ಪ್ರಯೋಗಿಸಬೇಕು? ಎಲ್ಲಕ್ಕೂ ನಿಮಿತ್ತವಿರುವುದರಿಂದ ವಿನಿಗಮನಾವಿರಹಾತ್ ಎಲ್ಲವನ್ನೂ ಪ್ರಯೋಗಿಸಬೇಕಾಗುವುದು—ಎಂದು ಶಂಕೆಯುಂಟಾಗಲು ಇಂತಹ ಸಂದರ್ಭದಲ್ಲಿ ಸೂತ್ರಪಾಠಾಪೇಕ್ಷಯಾಪರವಾವುದೋ ಅದನ್ನೇ ಪ್ರಯೋಗಿಸಬೇಕೆಂದು ನಿಶ್ಚಯಿಸಿ ಪ್ರಯೋಗಗಳಿಗೆ ಉಪಪತ್ತಿಯನ್ನು ಕಲ್ಪಿಸಬೇಕು. ಆದುದರಿಂದ — 'ಆತನುಂ ನೀನುಮಿರ್ದ್ದಿರ್, ಆತನುಮಾನುಮಿರ್ದ್ದೆವು, ಆನುಮಾತನುಮಿರ್ದ್ದೆವು' ಮೊದಲಾದುವು ಸಿದ್ಧಿಸುವುವು.

**ಅವತಾರಿಕೆ ೪೪೩**

ಪೂರ್ವಸೂತ್ರದಲ್ಲಿ ಆಖ್ಯಾತಪ್ರತ್ಯಯಗಳು ಕರ್ತ್ರರ್ಥದಲ್ಲಿ ವಿಧಿಸಲ್ಪಟ್ಟಿತು. ಈಗ ಕರ್ಮಾರ್ಥದಲ್ಲಿಯೂ ವಿಧಿಸುತ್ತಾನೆ.

**ಸೂತ್ರಂ || ಕರ್ಮಣಿ || ೪೪೩ ||**

**ಅರ್ಥ ||** ಅನ್ಯಾದ್ಯರ್ಥವಿವಕ್ಷೆಯಿರಲು ಪ್ರತ್ಯೇಕವಾಗಿ ಏಕತ್ವಾನೇಕತ್ವ ತೋರುವಾಗ ಕರ್ಮಾರ್ಥದಲ್ಲಿ ಸಕರ್ಮಕ ಧಾತುವಿನಮೇಲೆ ಕ್ರಮವಾಗಿ ಅಮಾದಿಗಳು ಬರುತ್ತವೆ.

**ಉದಾಹರಣೆ ||** 'ತಾನಿರಲ್ಪಟ್ಟಂ, ತಾಮಿರಲ್ಪಟ್ಟರ್; ನೀನಿರಲ್ಪಟ್ಟೆಯ್, ನೀವಿರಲ್ಪಟ್ಟಿರ್; ಆನಿರಲ್ಪಟ್ಟೆಂ, ಆಮಿರಲ್ಪಟ್ಟೆವು ||' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೪೪೩**

ಈ ಸೂತ್ರದಲ್ಲಿ — 'ಕರ್ಮಣಿ' ಎಂದು ಒಂದೇ ಪದವಿದ್ದರೂ ಪೂರ್ವಸೂತ್ರವನ್ನೆಲ್ಲಾ 'ಕರ್ತರಿ' ಎಂಬುದನ್ನು ಬಿಟ್ಟು ಪೂರ್ವದಂತೆ ಸಂಬಂಧಿಸಿ ಸೂತ್ರಾರ್ಥವನ್ನು ಮಾಡಬೇಕು. ಆದರೆ ಪೂರ್ವಸೂತ್ರದಲ್ಲಿ 'ಧಾತೋಃ' ಎಂದು ಸಕರ್ಮಕಾಕರ್ಮಕಸಾಧಾರಣವಾಗಿ ಹೇಳಲ್ಪಟ್ಟಿದೆ. ಇಲ್ಲಿ 'ಕರ್ಮಣಿ' ಎಂಬ ಪದಸ್ವಾರಸ್ಯದಿಂದ ಸಕರ್ಮಕ ಧಾತುಗಳನ್ನೇ ಪ್ರಕೃತಿಗಳನ್ನಾಗಿ ತೆಗೆದುಕೊಳ್ಳಬೇಕೆಂದು ತಿಳಿಯಬೇಕು. ಮತ್ತು ಪೂರ್ವದಂತೆ ಅನ್ಯಾರ್ಥಸಾಮಾನಾಧಿಕರಣ್ಯವು ತೋರುವಾಗಲೇ ಈ ಸೂತ್ರವು ಬರುವುದು. ಆದುದರಿಂದ 'ತನ್ನಿಂದಿರಲ್ಪಟ್ಟೆಯ್, ನಿನ್ನಿಂದಿರಲ್ಪಟ್ಟೆಂ, ಎನ್ನಿಂದಿರಲ್ಪಟ್ಟಂ' ಮೊದಲಾದ ಪ್ರಯೋಗಗಳಲ್ಲಿ ವ್ಯಧಿಕರಣವಾದುದರಿಂದ ಕ್ರಮವಾಗಿ ಅಮಾದಿಗಳು ಬಂದಿಲ್ಲವೆಂದು ತಿಳಿಯಬೇಕು.

ಆದರೆ ಇಲ್ಲಿ 'ಇರ್' ಧಾತುವು ಅಕರ್ಮಕವಾದುದರಿಂದ ಹೇಗೆ 'ಇರಲ್ಪಟ್ಟಂ' ಎಂದು ಕರ್ಮಣಿ ಆಖ್ಯಾತಪ್ರತ್ಯಯವು ಬಂದಿರುವುದು—ಎಂದು ಶಂಕೆಯುಂಟಾಗುವುದು. ಆದಾಗ್ಯೂ ಅಕರ್ಮಕ ಧಾತುಗಳಿಗೆ 'ಇಸು' ಪ್ರತ್ಯಯವು ಸೇರಿ ಸಕರ್ಮಕವಾಗುವುದರಿಂಲೂ ಅಥವಾ ಅಂತರ್ಭಾವಿತಾರ್ಥವನ್ನು ವಿವಕ್ಷೆಮಾಡುವುದರಿಂದಲೂ ಸಕರ್ಮಕತ್ವವು ಬಂದು ಕರ್ಮಾಖ್ಯಾತ ಪ್ರತ್ಯಯಗಳನ್ನು ಹೊಂದುವುವು. ಆದುದರಿಂದಲೇ ಮಹಾಕವಿಗಳು —

[೧]ಸುಟ್ಟಿದುದಿದೊಙು ತಾಣದ
ಕಟ್ಟಳೆಯುಂ ಮಾಡಲಿಂದ್ರನಾಣತಿಯಿಸಿರಲ್
ಪಟ್ಟಿರ್ ದಿಕ್‌ಪತಿಗಳ್ ಸಮ
ಕಟ್ಟುಗಳಿಂ ಕೂಡಿ ಜಿನನ ಸವನೋತ್ಸವದೊಳ್
ಇರಲಾಗದು ಮಾತೃಸ್ತ
ನ್ಯರಾಗಮೆಂದೊಲ್ದು ತತ್‌ಕರಾಂಗುಷ್ಠದೊಳಾ
ಸುರರಾಜನಿನಾಗಳ್ ತಂ
ದಿರಿಪಟ್ಟುದು ಬಾಲಪೋಷಕರಪೀಯೂಷಂ

ಮೊದಲಾಗಿ ಪ್ರಯೋಗಿಸುವರು. ಇಲ್ಲಿ ಪ್ರಥಮ ಪದ್ಯದಲ್ಲಿ — 'ಇರಿಸಲ್ಪಟ್ಟಿರ್' ದ್ವಿತೀಯ ಪದ್ಯದಲ್ಲಿ 'ಇರಿಸಲ್ಪಟ್ಟುದು' ಎಂದು ಇಸುಬಂತದ ಅರ್ಥವನ್ನೇ ಹೇಳಬೇಕೆಂದು ತಿಳಿಯಬೇಕು.

**ಅವತಾರಿಕೆ ೪೪೪**

ಹೀಗೆ ಸಾಮಾನ್ಯವಾಗಿ ಧಾತುಗಳಮೇಲೆ ಕರ್ತೃ-ಕರ್ಮಾರ್ಥಗಳಲ್ಲಿ ಆಖ್ಯಾತಪ್ರತ್ಯಯಗಳನ್ನು ವಿಧಿಸಿ ಈಗ ಕೆಲವು ಧಾತುವಿಶೇಷಗಳಮೇಲೆ ಕರ್ಮಾರ್ಥದಲ್ಲಿ ಆಖ್ಯಾತಪ್ರತ್ಯಯವನ್ನು ವಿಧಿಸುತ್ತಾನೆ.

---

ಪಾಠಾಂತರ : ೧ ಸುಟ್ಟಿದುದೆ ತೋಱು

**ಸೂತ್ರಂ || ಬೇಡ್ವಾದೇರಪ್ರಧಾನೇ || ೪೪೪ ||**

**ಅರ್ಥ ||** ಅನ್ಯಾದ್ಯರ್ಥವಿವಕ್ಷೆಯಿರಲು ' ಬೇಡು ' ಮೊದಲಾದ ಧಾತುಗಳ ಮೇಲೆ ಅಪ್ರಧಾನ ಕರ್ಮದಲ್ಲಿ ಅಮಾದಿಗಳು ಬರುತ್ತವೆ. ಇದರಿಂದ ಬೇಡ್ವಾದಿಗಳಿಗೆ ದ್ವಿಕರ್ಮಕತ್ವವು ಸಿದ್ಧಿಸುವುವು.

**ಉದಾಹರಣೆ ||** ' ಪಾರ್ವನಿನರಸಂ ಗ್ರಾಮಮಂ ಬೇಡಲ್ಪಟ್ಟಂ || ಹೀಗೆಯೇ ಗೋವಳನಿಂದೆಮ್ಮೆ ಪಾಲಂ ಕಱೆಯಲ್ಪಟ್ಟುದು, ಉಪಾಧ್ಯಾಯಂ ಶಿಷ್ಯರಿಂ ತತ್ತ್ವಮಂ ಬೆಸಗೊಳಲ್ಪಟ್ಟಂ, ಬೇಹುಕಾಱನರಸನಿಂ ಸುದ್ದಿಯಂ ಕೇಳಲ್ಪಟ್ಟಂ || ' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೪೪೪**

ಈ ಸೂತ್ರದಲ್ಲಿ — ' ಬೇಡ್ವಾದೇಃ, ಅಪ್ರಧಾನೇ ' ಎಂದು ಎರಡು ಪದಗಳಿರುವುವು. ' ಬೇಡ್ವಾದೇಃ ' ಎಂಬುದು ಪ್ರಕೃತಿನಿರ್ದೇಶವು. ' ಅಪ್ರಧಾನೇ ' ಎಂಬುದು ' ಕರ್ಮಣಿ ' ಎಂಬುದಕ್ಕೆ ವಿಶೇಷಣವು. ಧಾತೋರಿತ್ಯಾದಿಪದಗಳು ಪೂರ್ವದಂತೆಯೇ ಸಂಬಂಧಿಸಲ್ಪಡುವುವು. ತಥಾಚ — ಅನ್ಯಾದ್ಯರ್ಥವಿವಕ್ಷೆಯಿರಲು ಬೇಡ್ವಾದಿ ಕೆಲವು ಧಾತುಗಳಮೇಲೆ ಅಪ್ರಧಾನ ಕರ್ಮದಲ್ಲಿ ಅಮಾದಿಗಳು ಬರುವುವು—ಎಂದು ಸೂತ್ರಾರ್ಥವಾಗಲು ' ಪಾರ್ವನಿನರಸಂ ಗ್ರಾಮಮಂ ಬೇಡಲ್ಪಟ್ಟಂ ' ಮೊದಲಾದುವು ಸಿದ್ಧಿಸುವುವು.

ಆದರೆ ಈ ಭಾಷಾವಿಷಯದಲ್ಲಿ ತಿಙ್-ಸಂಜ್ಞಕ ಪ್ರತ್ಯಯಗಳು ' ಕರ್ತೃ, ಕರ್ಮ ' ಎಂಬೆರಡೇ ಅರ್ಥದಲ್ಲಿ ಬರುವುವು—ಎಂದು ಪೂರ್ವೋಕ್ತ ಸೂತ್ರದ್ವಯದಿಂದ ಸೂಚಿತವಾಗುವುದು. ಇನ್ನು ಮುಂದೆ ಧಾತುಪ್ರತ್ಯಯಸಾಧನಪ್ರಕಾರವೇ ಹೇಳತಕ್ಕದ್ದು. ಅದನ್ನು ಬಿಟ್ಟು ಈ ಸೂತ್ರವು ಏತಕ್ಕೆ ಪ್ರಾರಂಭಿಸಲ್ಪಡುವುದು—ಎಂದು ಶಂಕೆಯುಂಟಾಗುವುದು. ಆದಾಗ್ಯೂ — ಪೂರ್ವದಲ್ಲಿ ಸಕರ್ಮಕಾಕರ್ಮಕಗಳೆಂದು ಧಾತುಗಳು ಎರಡು ಬಗೆಯಾಗಿರುವುವೆಂದು ಹೇಳಲ್ಪಟ್ಟಿತು. ಈಗ ಆ ಸಕರ್ಮಕ ಧಾತುಗಳು ಏಕಕರ್ಮಕ ದ್ವಿಕರ್ಮಕಗಳೆಂಬ ಭೇದಗಳಿಂದ ಎರಡು ಬಗೆಯಾಗಿರುವುವು. ಅವುಗಳಲ್ಲಿ ಬೇಡ್ವಾದಿಗಳೇ ದ್ವಿಕರ್ಮಕಗಳು. ಇವುಗಳಲ್ಲಿ ದ್ವಿಕರ್ಮಕ ಕರ್ತರಿಪ್ರಯೋಗವು ಪೂರ್ವಸೂತ್ರಗಳಿಂದಲೆ ಸಿದ್ಧಿಸುವುದು. ದ್ವಿಕರ್ಮಕ ಕರ್ಮಣಿ ಪ್ರಯೋಗಗಲ್ಲಿ ಎರಡು ಕರ್ಮಗಳು ಇರುವುದರಿಂದ ಉಭಯತ್ರ ಅಮಾದಿ ಪ್ರತ್ಯಯವು ಅನುಪಪನ್ನವಾಗುವುದು. ಅದರಲ್ಲಿಯೂ ' **ಪ್ರಧಾನಾಪ್ರಧಾನಯೋಃ ಪ್ರಧಾನೇ ಕಾರ್ಯಸಂಪ್ರತ್ಯಯಃ** ' ಎಂಬ ನ್ಯಾಯದಿಂದ ಪ್ರಧಾನಕರ್ಮದಲ್ಲಿಯೇ ಅಮಾದಿಗಳು ಪ್ರಾಪ್ತವಾಗಲು ಅದನ್ನು ಬಾಧಿಸಿ ಅಪ್ರಧಾನ ಕರ್ಮದಲ್ಲಿಯೇ ಅಮಾದಿಗಳನ್ನು ವಿಧಿಸಲು ಪ್ರಾರಂಭಿಸಲ್ಪಟ್ಟದೆ—ಎಂದು ತಿಳಿಯಬೇಕು.

**ಅವತಾರಿಕೆ ೪೪೫**

ಹೀಗೆಯೇ ಕೆಲವು ಪ್ರೇರಣಾರ್ಥಕ 'ಇಸು' ಪ್ರತ್ಯಯಾಂತ ಧಾತುಗಳಮೇಲೆ ಪ್ರಯೋಜ್ಯ ಕರ್ತ್ರಾತ್ಮಕವಾದ ಕರ್ಮದಲ್ಲಿ ಅಮಾದಿಗಳನ್ನು ವಿಧಿಸಲು ಹೇಳುತ್ತಾನೆ.

**ಸೂತ್ರಂ || ಇಸುಪಃ ಪ್ರಯೋಜ್ಯಕರ್ತರಿ || ೪೪೫ ||**

**ಅರ್ಥ ||** ಅನ್ಯಾದ್ಯರ್ಥವಿವಕ್ಷೆಯಿರಲು ಇಸುಬಂತ ಧಾತುಗಳಮೇಲೆ ಪ್ರಯೋಜ್ಯಕರ್ತ್ರಾತ್ಮ ಕರ್ಮದಲ್ಲಿ ಅಮಾದಿಗಳು ಬರುವುವು.

**ಉದಾಹರಣೆ ||** ‘ ತುಱುಗಳೂರನೆಯ್ದಿಸಲ್ಪಟ್ಟುವು ಗೋವಳನಿಂ, ಗುರುಗಳೆನೆರಸಂ ಧರ್ಮಮನಱಯಿಸಲ್ಪಟ್ಟಂ, ಅರಸನಿನಾಂ ಪೆಟ್ಟಿಸಲ್ಪಟ್ಟೆಂ ||’ ಮೊದಲಾದುವು ಇವಕ್ಕೆ ಲಕ್ಷ್ಯಗಳು.

**ವಿಚಾರ ೪೪೫**

ಈ ಸೂತ್ರವಲ್ಲಿ — ‘ ಇಸುಪಃ, ಪ್ರಯೋಜ್ಯ, ಕರ್ತರಿ ’ ಎಂದು ಮೂರು ಪದಗಳಿರು ವುವು. ‘ ಇಸುಪಃ ’ ಎಂಬುದು ಧಾತುವಿಗೆ ವಿಶೇಷಣವನ್ನು ಮಾಡಲು ತದಂತಬೋಧಕವಾಗು ವುದು. ‘ ಪ್ರಯೋಜ್ಯಕರ್ತರಿ ’ ಎಂಬುದು ಅನುವೃತ್ತವಾದ ‘ ಕರ್ಮಣಿ ’ ಎಂಬುವಕ್ಕೆ ವಿಶೇ ಷಣವು. ಪೂರ್ವದಂತೆ ಅನ್ಯಾದಿಗಳು ಸಂಬಂಧಿಸಲ್ಪಡುವುವು. ತಥಾಚ, ಅನ್ಯಾದ್ಯರ್ಥವಿವಕ್ಷೆ ಯನ್ನು ಮಾಡಲು ಇಸುಬಂತ ಧಾತುಗಳಿಗೆ ಪ್ರಯೋಜ್ಯಕರ್ತೃರೂಪ ಕರ್ಮದಲ್ಲಿ ಅಮಾದಿಗಳು ಬರುವುವೆಂದು ಸೂತ್ರಾರ್ಥವಾಗುವುದು.

ಇಲ್ಲಿ ‘ ಧಾತೋರ್ಹೇತುಮತಿ || **೫೩೬** || ’ ಎಂಬ ಸೂತ್ರದಿಂದ ಎಲ್ಲಾ ಧಾತುಗಳ ಮೇಲೆಯೂ ಹೇತುಕರ್ತೃ ವಿಷಯದಲ್ಲಿ ಇಸು-ಪ್ರತ್ಯಯವು ವಿಧಿಸಲ್ಪಡುವುದು. ಆಗ ‘ ಸ್ವತಂತ್ರ ಕರ್ತೃ, ಹೇತುಕರ್ತೃ ’ ಎಂದು ಕರ್ತೃದ್ವಯವು ಸಿದ್ಧವಾಗುವುದು. ಅಲ್ಲಿ ಕ್ರಿಯಾಸಿದ್ಧಿಗೆ ಕಾರಕಾಂತರಗಳನ್ನು ಆವನು ನಿಯೋಜಿಸುತ್ತಾನೋ ಅವನು ಸ್ವತಂತ್ರನು. ಅವನನ್ನೇ ಪ್ರೇರಿಸು ವವನು ಇನ್ನೊಬ್ಬನಾರೋ ಅವನು ಹೇತುಕರ್ತೃವೆಂಬವನು. ಇವುಗಳ ಸಮಭಿವ್ಯಾಹಾರದಲ್ಲಿ ಸ್ವತಂತ್ರನಾದವನೇ ಪ್ರಯೋಜ್ಯನಾಗುವನು. ಇಂತಹ ಪ್ರಯೋಜ್ಯಕರ್ತೃವಿಗೆ ಪ್ರೇಷಣಾದಿ ಕ್ರಿಯಾನಿಮಿತ್ತವಾಗಿ ಕರ್ಮತ್ವವೂ ಇರುವುದರಿಂದ ಪ್ರಯೋಜ್ಯಕರ್ತ್ರಾತ್ಮಕ ಕರ್ಮದಲ್ಲಿ ಆಖ್ಯಾತ ಪ್ರತ್ಯಯವು ವಿಧಿಸಲ್ಪಟ್ಟಿರುವುದು. ಆದುದರಿಂದ ಇಸುಬಂತಗಳಾದ ಎಲ್ಲಾ ಧಾತು ಗಳೂ ಪ್ರಯೋಜ್ಯ-ಪ್ರಯೋಜಕ ಕರ್ತೃಭೇದಗಳಿಂದ ದ್ವಿಕರ್ತೃಕಗಳಾಗಿದ್ದರೂ ಕೆಲವು ಕರ್ತೃ ಕರ್ಮಕಗಳಾಗಿಯೂ ಆಗುವುವು. ಇವುಗಳಲ್ಲಿ ಕರ್ಮಣಿಪ್ರಯೋಗವನ್ನು ವಿವಕ್ಷಿಸಲು ಅಕರ್ಮಕ ಧಾತುಗಳಿಗೆ ಇಸುಪ್ಪಿನಲ್ಲಿ ಏಕಕರ್ಮತ್ವವಿರುವುದರಿಂದ ಅಲ್ಲಿ ವಿಶೇಷವೇನೂ ಇಲ್ಲ. ಗತ್ಯಾದ್ಯರ್ಥಕ ಸಕರ್ಮಕ ಧಾತುಗಳಿಗಾದರೋ ಇಸುಪ್-ಪ್ರತ್ಯಯದಲ್ಲಿ ದ್ವಿಕರ್ಮಕತ್ವವು ಬರುವುದರಿಂದ ಅವುಗಳ ಮೇಲೆ ವಿಹಿತವಾದ ಪ್ರತ್ಯಯವು ಆವ ಕರ್ಮವನ್ನು ಹೇಳುವುದು ? — ಎಂದು ಶಂಕೆ ಯುಂಟಾಗಲು ತಾದೃಶ ಶಂಕಾಪರಿಹಾರಾರ್ಥವಾಗಿ ಈ ಸೂತ್ರವು ಪ್ರಾರಂಭಿಸಲ್ಪಟ್ಟಿರುವುದು. ಆದುದರಿಂದ ಆವುದು ಪೂರ್ವದಲ್ಲಿ ಕರ್ತೃವಾಗಿದ್ದು ಅನಂತರದಲ್ಲಿ ಕರ್ಮತ್ವವನ್ನು ಹೊಂದಿರು ವುದೋ ಅಲ್ಲಿಯೇ ಅಮಾದಿಗಳು ಬರುವುವೆಂದು ನಿಷ್ಕೃಷ್ಟವಾಗುವುದು.

ಇಲ್ಲಿ ‘ ಪ್ರಯೋಜ್ಯಕರ್ತರಿ ’ ಎಂದು ಹೇಳಿರುವುದರಿಂದ ‘ ತುಱುಗಳೂರನೆಯ್ದಿಸಲ್ಪಟ್ಟುವು ಗೋವಳನಿಂ ’ ಎಂಬಲ್ಲಿ ‘ ಊರ್ ’ ಮೊದಲಾದುವಕ್ಕೆ ಬರುವುದಿಲ್ಲವೆಂದೂ ‘ ಕರ್ಮಣಿ ’ ಎಂದು ಹೇಳಿರುವುದರಿಂದ ‘ ಕೃಷ್ಣನಿನರ್ಜುನನಿಂ ಕರ್ಣಂ **ಕೊಲಿಸಲ್ಪಟ್ಟಂ** ’ ಮೊದಲಾದ ಪ್ರಯೋಗಗಳಲ್ಲಿ ಕರ್ತೃವಿನಲ್ಲಿ ಬರುವುದಿಲ್ಲವೆಂದೂ ತಿಳಿಯಬೇಕು.

**ಅವತಾರಿಕೆ ೪೪೬**

ಹೀಗೆ ಸಾಮಾನ್ಯವಾಗಿ ಆಖ್ಯಾತ ಪ್ರತ್ಯಯಗಳನ್ನೂ ಧಾತುಗಳ ಮೇಲೆ ವಿಧಿಸಿ, ತದಾಶ್ರಯ ಕಾರ್ಯವಿಶೇಷಗಳಿಂದ ರೂಪನಿಷ್ಪತ್ತಿ ಪ್ರಕಾರವನ್ನು ಬೋಧಿಸಲು ಪ್ರಾರಂಭಿಸುವನಾಗಿ ಮೊದಲು ಕಾಲವಿಶೇಷದ್ಯೋತಕವಿಕರಣ ಪ್ರತ್ಯಯಗಳನ್ನು ವಿಧಿಸುತ್ತಾನೆ.

**ಸೂತ್ರಂ || ದಪದವಂ ತಿಙಃ ಸದ್ಭೂತಭಾವಿನಿ || ೪೪೬ ||**

**ಅರ್ಥ || ವರ್ತಮಾನ, ಭೂತ, ಭವಿಷತ್‌ಕಾಲವು ತೋರುವಾಗ ಧಾತುವಿಗೆ ತಿಙ್-ಪ್ರತ್ಯಯವು ಪರದಲ್ಲಿರಲು ಮಧ್ಯದಲ್ಲಿ 'ದಪ, ದ, ವ' ಎಂಬ ಪ್ರತ್ಯಯಗಳು ಕ್ರಮವಾಗಿ ಬರುತ್ತವೆ.**

**ಉದಾಹರಣೆ ||** 'ಇರ್ದಪಂ, ಇರ್ದಂ, ಇರ್ಪಂ; ನೋಡಿದಪಂ, ನೋಡಿದಂ, ನೋಡುವಂ; ಕೂಡಿದಪಂ, ಕೂಡಿದಂ, ಕೂಡುವಂ ||' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೪೪೬**

ಈ ಸೂತ್ರದಲ್ಲಿ — 'ದಪದವಂ, ತಿಙಃ, ಸದ್ಭೂತಭಾವಿನಿ' ಎಂದು ಮೂರು ಪದಗಳಿರುವುವು. 'ದಪ, ದ, ವಂ' ಎಂಬುದು ವಿಧೇಯತ್ರಯನಿರ್ದೇಶವು. 'ತಿಙಃ' ಎಂಬುದು ನಿಮಿತ್ತಸಪ್ತಮ್ಯಂತವು. 'ಸದ್ಭೂತಭಾವಿನಿ' ಎಂಬುದು ಕಾಲತ್ರಯನಿರ್ದೇಶವು. 'ಧಾತೋಃ' ಎಂದು ಅಧಿಕರಿಸಲ್ಪಡುವುದು. ತಥಾಚ — ಸದಾದ್ಯರ್ಥದಲ್ಲಿ ಧಾತುವಿಗೆ 'ತಿಙ್' ಪರದಲ್ಲಿರಲು ದಪಾದಿಗಳು ಬರುವುವೆಂದು ಸೂತ್ರಾರ್ಥವಾಗುವುದು.

ಇಲ್ಲಿ 'ಸತ್' ಎಂಬುದು ವರ್ತಮಾನಕಾಲಬೋಧಕವು. 'ವರ್ತಮಾನ'ವೆಂದರೆ — ಪ್ರಾರಬ್ಧಾಪರಿಸಮಾಪ್ತಕ್ರಿಯಾಧಿಕರಣ 'ಕಾಲ' ಎಂದರ್ಥವು. 'ಭೂತ'ವೆಂದರೆ — ವರ್ತಮಾನಕಾಲಧ್ವಂಸಪ್ರತಿಯೋಗಿ ಸಮಯವು. 'ಭಾವಿ' ಎಂದರೆ — 'ಭವಿಷ್ಯತ್'. 'ಭವಿಷ್ಯತ್' ಎಂದರೆ — 'ವರ್ತಮಾನಕಾಲಪ್ರಾಗಭಾವಪ್ರತಿಯೋಗಿ ಸಮಯ'ವೆಂದರ್ಥವು. ಆದರೆ ಸಂಸ್ಕೃತದಲ್ಲ ಅದ್ಯತನಾನದ್ಯತನ ಸಾಮಾನ್ಯ ಭೇದಗಳಿಂದ ಭೂತ ಭವಿಷ್ಯತ್ತುಗಳಲ್ಲಿ ಭೇದಗಳನ್ನು ಅಂಗೀಕರಿಸಿ ಪ್ರತ್ಯಯಗಳನ್ನೂ ಪ್ರತ್ಯೇಕವಾಗಿ ವಿಧಿಸಿರುವರು. ಭಾಷೆಯಲ್ಲ ಇಂತಹ ವಿಶೇಷಗಳನ್ನು ಬೋಧಿಸುವ ಪ್ರತ್ಯಯಗಳೇ ಇಲ್ಲವಾದುದರಿಂದ ಎಲ್ಲಾ ಈ ಕಾಲತ್ರಯದಲ್ಲಿಯೇ ಅಂತರ್ಭೂತವಾಗುವುವೆಂದು ಇಲ್ಲಿ ಮೂರೇ ಕಾಲಗಳನ್ನು ಹೇಳಿರುವುದು.

**ಅವತಾರಿಕೆ ೪೪೭**

ಪೂರ್ವದಲ್ಲಿ ಆಖ್ಯಾತಪ್ರತ್ಯಯ ಮಾತ್ರದಲ್ಲಿ ದಪಾದಿಗಳು ವಿಧಿಸಲ್ಪಟ್ಟುವು. ಈಗ ಕೃತ್ತಿನಲ್ಲಿಯೂ ವಿಧಿಸುತ್ತಾನೆ.

**ಸೂತ್ರಂ || ಅಚಿ || ೪೪೭ ||**

**ಅರ್ಥ || ವರ್ತಮಾನ ಮೊದಲಾದ ಕಾಲತ್ರಯದಲ್ಲಿ ಧಾತುವಿಗೆ ಅಚ್-ಪ್ರತ್ಯಯವು ಪರವಲ್ಲಿದ್ದರೂ 'ದಪ, ದ, ವ' ಎಂಬ ಪ್ರತ್ಯಯಗಳು ಬರುವುವು.**

**ಉದಾಹರಣೆ ||** 'ನೋಡಿದಪನಂ, ನೋಡಿದನಂ, ನೋಡುವನಂ; ಮಾಡಿದಪಂಗೆ, ಮಾಡಿದಂಗೆ, ಮಾಡುವಂಗೆ ||' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ಅವತಾರಿಕೆ ೪೪೮**

ಹೀಗೆ ದಪಾದಿಗಳನ್ನು ವಿಧಿಸಿ ವರ್ತಮಾನ ಕಾಲದಲ್ಲಿ ' ವ ' ಪ್ರತ್ಯಯವನ್ನು ವಿಕಲ್ಪವಾಗಿ ವಿಧಿಸುತ್ತಾನೆ.

**ಸೂತ್ರಂ || ಸತಿ ವ್ಪೋ ವಾ || ೪೪೮ ||**

**ಅರ್ಥ || ವರ್ತಮಾನಕಾಲದಲ್ಲಿ ಧಾತುವಿಗೆ ' ಅಚ್ ' ಪ್ರತ್ಯಯವು ಪರದಲ್ಲಿರುವಾಗ ' ವ ' ಪ್ರತ್ಯಯವು ವಿಕಲ್ಪವಾಗಿ ಬರುವುದು.**

**ಉದಾಹರಣೆ ||** ' ನೋಡುವನಂ, ನೋಡಿದಪನಂ; ಕೂಡುವಂಗೆ, ಕೂಡಿದಪಂಗೆ; ಇರ್ಪ್ಪನ, ಇರ್ದ್ದಪನ || ' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ಅವತಾರಿಕೆ ೪೪೯**

ಹೀಗೆಯೇ ಪ್ರತ್ಯಯಾಂತರಗಳು ಪರದಲ್ಲಿರುವಾಗಲೂ ದಪಾದಿಗಳನ್ನು ವಿಧಿಸುತ್ತಾನೆ.

**ಸೂತ್ರಂ || ಎನೋದುವ್ಪೂದ್ವಳತ್ತು || ೪೪೯ ||**

**ಅರ್ಥ || ಸದಾದಿಕಾಲ ವಿವಕ್ಷೆಯನ್ನು ಮಾಡಲು ' ಎನ್, ಒತ್, ಉವು, ಉದು, ಉಳ್, ಅತ್ತು ' ಎಂಬ ಪ್ರತ್ಯಯಗಳು ಪರವಾಗಿರಲು ಧಾತುವಿಗೆ ದಪಾದಿಗಳು ಬರುವುವು.**

**ಉದಾಹರಣೆ ||** ' ಆವಿುದಂ ಮಾಡಿದಪೆಂ, ಮಾಡಿದೆಂ, ಮಾಡುವೆಂ; ನೀನಿದನೆಂತು ನಂಬಿದಪ್ಪೋ, ನಂಬಿದೋ, ನಂಬುವ್ಪೋ; ತಾನಿದಂ ಮಾಡಿದಪುವು, ಮಾಡಿದುವು, ಮಾಡುವುವು; ತಾನಿದಂ ನೋಡಿದಪುದು, ನೋಡಿದುದು, ನೋಡುವುದು; ಕಾಂತೆ ನೋಡಿದಪಳ್, ನೋಡಿದಳ್, ನೋಡುವಳ್; ತಾನಿದಂ ಮಾಡಿದತ್ತು || ' ಮೊದಲಾದುವು ಇದಕ್ಕೆ ಲಕ್ಷ್ಯಗಳು.

ಇಲ್ಲಿ ನಿಮಿತ್ತಗಳೆಲ್ಲಾ ತಿಙ್ಕೃತ್ ಸಾಧಾರಣಾದೇಶಗಳಾದುದರಿಂದ ಅವು ಪರದಲ್ಲಿರಲು — ' **ಅದೇಶೇ || ೪೫೨ ||** ' ಎಂಬ ಸೂತ್ರದಿಂದ ಪ್ರಾಪ್ತವಾಗುವ ನಿಷೇಧಕ್ಕೆ ಪುರಸ್ತಾದಪವಾದವಾಗಿ ಈ ಸೂತ್ರವು ಹೇಳಲ್ಪಟ್ಟಿರುವುದು. ಆದುದರಿಂದಲೇ ಇಲ್ಲಿ ' ಎನ್ ' ಎಂಬುದು ಆದಿಷ್ಟವಾದುದೇ ಗ್ರಹಿಸಲ್ಪಡುವುದು.

**ಅವತಾರಿಕೆ ೪೫೦**

ಪೂರ್ವದಲ್ಲಿ — ತಿಙಿನಲ್ಲಿಯೂ ಅಚ್-ಪ್ರತ್ಯಯದಲ್ಲಿಯೂ ವಿಧಿಸಿದ ವಿಕರಣ ಪ್ರತ್ಯಯಗಳಿಗೆ ನಿಷೇಧವನ್ನು ಹೇಳುತ್ತಾನೆ.

**ಸೂತ್ರಂ || ನೋಳಃ ಸತ್ತಾಯಾಂ || ೪೫೦ ||**

**ಅರ್ಥ || ಸತ್ತಾರ್ಥಕವುಳ್ಳ ಧಾತುವಿಗೆ ತಿಙ್-ಪ್ರತ್ಯಯವಾಗಲಿ ಅಚ್-ಪ್ರತ್ಯಯವಾಗಲಿ ಪರದಲ್ಲಿರಲು ಸದಾದಿಕಾಲ ವಿವಕ್ಷೆಯಲ್ಲಿ ಪ್ರಾಪ್ತವಾದ ದಪಾದಿಗಳು ಬರುವುದಿಲ್ಲ.**

**ಉದಾಹರಣೆ ||** ' ಒಳಂ, ಒಳರ್, ಒಳಯ್, ಒಳಿರ್, ಒಳೆಂ, ಒಳೆವು || ಇವು ತಿಙಿಗೂ ಒಳನಂ, ಒಳನಿಂ, ಒಳಂಗೆ || ' ಮೊದಲಾದುವು ಅಜ್ಗಿಗೂ ಉದಾಹರಣೆಗಳು.

**ವಿಚಾರ ೪೫೦**

ಇಲ್ಲಿ ಧಾತುಗಳು ಅನೇಕಾರ್ಥಕಗಳು ಎಂಬುದು —

**ನಿಪಾತಾಶ್ಚೋಪಸರ್ಗಾಶ್ಚ ಧಾತವಶ್ಚೇತಿ ತೇ ತ್ರಯಃ**
**ಅನೇಕಾರ್ಥಾಃ ಸ್ಮೃತಾಃ ಸದ್ಭಿಃ ಪಾಠಸ್ತೇಷಾಂ ನಿದರ್ಶನಂ**

ಎಂಬುದರಿಂದ ಸೂಚಿತವಾಗುವುದು. ಆದುದರಿಂದ ' ಉಳ್ ' ಧಾತುವಿಗೆ ಅನೇಕಾರ್ಥವು ಪ್ರಸಕ್ತವಾಗಲು ಅವರಲ್ಲಿ ಸತ್ತಾರ್ಥಕ್ಕೇ ಪ್ರಕೃತದಲ್ಲಿ ಗ್ರಹಣವೆಂದು ಬೋಧಿಸಲು ಸೂತ್ರದಲ್ಲಿ ಸತ್ತಾಗ್ರಹಣವು ಮಾಡಲ್ಪಟ್ಟಿರುವುದು. ಆದುದರಿಂದ — ' ಉಳ್ಳಪಂ, ಉಳ್ಳಿಂ, ಉಳ್ವಂ ' ಎಂಬ ಸಂಭವಿಶೇಷನಾರ್ಥಕ ' ಉಳ್ ' ಧಾತುವಿನಲ್ಲಿ ಈ ನಿಷೇಧವು ಬರುವುದಿಲ್ಲ. ' ಉಳಃ ' ಎಂದು ಹೇಳಿರುವುದರಿಂದ — ' ಸಂಭವಿಸಿದಪಂ, ಸಂಭವಿಸಿದಂ, ಸಂಭವಿಸುವಂ ' ಮೊದಲಾದುವುಗಳಲ್ಲಿಯೂ ಬರುವುದಿಲ್ಲವೆಂದು ತಿಳಿಯಬೇಕು.

**ಅವತಾರಿಕೆ ೪೫೧**

ಹೀಗೆಯೇ ಧಾತ್ವಂತರಕ್ಕೂ ನಿಷೇಧವನ್ನು ಹೇಳುತ್ತಾನೆ.

**ಸೂತ್ರಂ || ಬಲೋಽವಬೋಧನೇ || ೪೫೧ ||**

**ಅರ್ಥ ||** **ಅವಬೋಧನಾರ್ಥಕ ' ಬಲ್ ' ಧಾತುವಿಗೆ ದಪಾದಿಕಾಲ ವಿವಕ್ಷೆಯಿರಲು ಪೂರ್ವದಿಂದ ಪ್ರಾಪ್ತವಾದ ದಪಾದಿಗಳು ಬರುವುದಿಲ್ಲ.**

**ಉದಾಹರಣೆ ||** ' ಬಲ್ಲಂ, ಬಲ್ಲರ್; ಬಲ್ಲಯ್, ಬಲ್ಲಿರ್; ಬಲ್ಲೆಂ, ಬಲ್ಲೆವು; ಬಲ್ಲನಂ, ಬಲ್ಲನಿಂ, ಬಲ್ಲಂಗೆ || ' ಮೊದಲಾದುವು ಇವಕ್ಕೆ ಲಕ್ಷ್ಯಗಳು.

ಇಲ್ಲಿ ' ಬಲಃ ' ಎಂದು ಹೇಳಿರುವುದರಿಂದ — ' ಅಱಿದಪಂ, ಅಱಿದಂ, ಅಱಿವಂ ' ಮೊದಲಾದ ಪ್ರಯೋಗಗಳಲ್ಲಿಯೂ ' ಅವಬೋಧನೆ ' ಎಂದು ಹೇಳಿರುವುದರಿಂದ ' ಬಲ್ಲಿದು ಮೊಸರ್, ಬಲ್ಲಿದು ತುಪ್ಪಂ ' ಮೊದಲಾದುವುಗಳಲ್ಲಿಯೂ ಈ ನಿಷೇಧವಿಲ್ಲ.

**ಅವತಾರಿಕೆ ೪೫೨**

ಹೀಗೆಯೇ ತಿಙಾದಿಗಳಿಗೆ ಆದೇಶವಾಗಿ ಬಂದ ಪ್ರತ್ಯಯಗಳು ಪರದಲ್ಲಿರುವಾಗಲೂ ಧಾತುಸಾಮಾನ್ಯಕ್ಕೂ ದಪಾದಿಗಳು ಬರುವುದಿಲ್ಲವೆಂದು ಹೇಳುತ್ತಾನೆ.

**ಸೂತ್ರಂ || ಆದೇಶೇ || ೪೫೨ ||**

**ಅರ್ಥ ||** **ಧಾತುವಿಗೆ ಆದಿಷ್ಟವಾಗಿ ತಿಙಾದಿಗಳು ಪರವಾಗಿರಲು ದಪಾದಿಗಳು ಬರುವುದಿಲ್ಲ.**

**ಉದಾಹರಣೆ ||** ' ಮಾಡಿತು, ಮಾಡಿತ್ತು; ಮಾಳ್ಕುಂ, ಮಾಡುಗುಂ; ಮಾಳ್ಕುಗುಂ, ಮಾಡುಗುಗುಂ; ಮಾಳ್ಕೆ, ಮಾಡುಗೆ; ಮಾಳ್ದುದು, ಮಾಡುವುದು; ಮಾಡ, ಮಾಡು; ಮಾಳ್ಪುದು, ಮಾಡುವುದು; ಮಾಡಿಂ, ಮಾಡುವಂ, ಮಾಡುವೆಂ; ಮಾಡುತೆ, ಮಾಡುತ್ತೆ; ಮಾಡುತುಂ, ಮಾಡುತ್ತುಂ || ' ಮೊದಲಾದುವು ಇವಕ್ಕೆ ಲಕ್ಷ್ಯಗಳು. ಇಲ್ಲಿ ' ಆದೇಶೇ ' ಎಂದು ನಿಮಿತ್ತವನ್ನು ಹೇಳಿರುವುದರಿಂದ ' ಮಾಡಿದಪಿರ್, ಮಾಡಿದಿರ್, ಮಾಡುವಿರ್ ' ಮೊದಲಾದ ಅನಾದಿಷ್ಟಸ್ಥಲಗಳಲ್ಲಿ ಈ ನಿಷೇಧವಿಲ್ಲವೆಂದು ತಿಳಿಯಬೇಕು.

**ಅವತಾರಿಕೆ ೪೫೩**

ಪೂರ್ವದಲ್ಲಿ ದಪಾದಿಕಾಲ ವಿವಕ್ಷೆಮಾಡಲು ತಿಙಾದಿಗಳು ಪರದಲ್ಲಿರುವಾಗ ಧಾತುಗಳಿಗೆ ದಪಾದಿಗಳನ್ನು ವಿಧಿಸಿ ಅವಕ್ಕೆ ಕ್ವಚಿತ್ ಪ್ರತಿಷೇಧವನ್ನೂ ವಿಧಿಸಿದನು. ಈಗ ಲಿಂಗವಿಶೇಷಗಳಲ್ಲಿ ತಿಙ್ಙಿಗೆ ಬರುವ ಆದೇಶವಿಶೇಷಗಳನ್ನು ಹೇಳಲು ಮೊದಲು ಸ್ತ್ರೀಲಿಂಗ ವಿಷಯದಲ್ಲಿ ಹೇಳುತ್ತಾನೆ.

ಸೂತ್ರಂ || ಅಳಮಃ ಸ್ತ್ರಿಯಾಂ || ೪೫೩ ||

ಅರ್ಥ || ಧಾತುವಿನ ಮೇಲೆ ವಿಹಿತವಾದ **ಅಮ್-ಪ್ರತ್ಯಯಕ್ಕೆ ಸ್ತ್ರೀಲಿಂಗದಲ್ಲಿ ' ಅಳ್ '** ಎಂಬಾದೇಶವಾಗುವುದು.

ಉದಾಹರಣೆ || ' ಸತಿ ನೋಡಿದಪಳ್, ನೋಡಿದಳ್, ನೋಡುವಳ್; **ಕೂಡಿದಪಳ್,** ಕೂಡಿದಳ್, ಕೂಡುವಳ್ || ' ಮೊದಲಾದುವು ಇವಕ್ಕೆ ಲಕ್ಷ್ಯಗಳು.

ಇಲ್ಲಿ ' ಸ್ತ್ರಿಯಾಂ ' ಎಂದು ಹೇಳಿರುವುದರಿಂದ — ' ಆತಂ ನೋಡಿದಂ, **ಕೂಡಿದಂ '** ಮೊದಲಾದ ಪುಲ್ಲಿಂಗ ಪ್ರಯೋಗಗಳಲ್ಲಿ ಬರುವುದಿಲ್ಲ. ' ಅಮ್ ' ಎಂದು ಹೇಳಿರುವುದರಿಂದ ' ಸತಿ ಯರ್ ನೋಡಿದರ್, ಕೂಡಿದರ್ ' ಮೊದಲಾದ ಬಹುವಚನ ಪ್ರಯೋಗಗಳಲ್ಲಿ ಬರುವುದಿಲ್ಲ.

**ಅವತಾರಿಕೆ ೪೫೪**

ನಪುಂಸಕಲಿಂಗದಲ್ಲಿ ಬರುವ ಆದೇಶವನ್ನು ವಿಧಿಸುತ್ತಾನೆ.

**ಸೂತ್ರಂ || ನಪ್ಯುದುಃ || ೪೫೪ ||**

**ಅರ್ಥ ||** ಧಾತುವಿನಮೇಲೆ ವಿಹಿತವಾದ **' ಅಮ್ ' ಪ್ರತ್ಯಯಕ್ಕೆ ನಪುಂಸಕವಿಷಯದಲ್ಲಿ** ' ಉದು ' ಎಂಬಾದೇಶವು ಬರುವುದು.

**ಉದಾಹರಣೆ ||** ' ಗಿಳಿಯೋದಿದಪುದು, ಓದಿದುದು, ಓದುವುದು; ಅಳಿ ಪಾಡಿದಪುದು, ಪಾಡಿದುದು, ಪಾಡುವುದು || ' ಮೊದಲಾದುವು ಇದಕ್ಕೆ ಲಕ್ಷ್ಯಗಳು.

ಇಲ್ಲಿ ' ಅಮಃ ' ಎಂದು ಹೇಳಿರುವುದರಿಂದ — ' ಎಲೆ ಗಿಳಿಯೋದುವಯ್, ಎಲೆ ತುಂಬಿ ಪಾಡುವಯ್ ' ಮೊದಲಾದ ಮಧ್ಯಮಪುರುಷ ಪ್ರತ್ಯಯಕ್ಕೂ ' ನಪಿ ' ಎಂದು ಹೇಳಿರುವುದರಿಂದ ' ಪಾರ್ವನೋದುವಂ, ಗಾಯಕಂ ಪಾಡುವಂ ' ಮೊದಲಾದ ಪುಲ್ಲಿಂಗಗಳಲ್ಲಿಯೂ ಬರುವುದಿಲ್ಲವೆಂದು ತಿಳಿಯಬೇಕು.

**ಅವತಾರಿಕೆ ೪೫೫**

ಹೀಗೆಯೇ ಅಚ್-ಪ್ರತ್ಯಯಕ್ಕೂ ' ಉದು ' ಎಂಬಾದೇಶವನ್ನು ವಿಧಿಸುತ್ತಾನೆ.

**ಸೂತ್ರಂ ಅಚಃ || ೪೫೫ ||**

**ಅರ್ಥ ||** ಧಾತುವಿನಮೇಲೆ ವಿಹಿತವಾದ **ಅಚ್-ಪ್ರತ್ಯಯಕ್ಕೆ ನಪುಂಸಕವಿಷಯದಲ್ಲಿ** ' ಉದು ' **ಎಂಬಾದೇಶವು ಬರುವುದು.**

**ಉದಾಹರಣೆ ||** ' ಓದಿದುದಂ, ಓದಿದುದಱಿಂ, ಓದಿದುದರ್ಕೆ; ಪಾಡಿದುದಂ, ಪಾಡಿದುದಱಿಂ, ಪಾಡಿದುದರ್ಕೆ || ' ಮೊದಲಾದುವು ಇದಕ್ಕೆ ಲಕ್ಷ್ಯಗಳು.

ಇಲ್ಲಿ ' ನಪಿ ' ಎಂದು ಅನುವೃತ್ತಿ ಮಾಡಿರುವುದರಿಂದ ' ಓದುವನಂ, ಓದುವಂಗೆ; ಪಾಡುವಳಂ, ಪಾಡುವಳ್ಗೆ ' ಮೊದಲಾದ ಪುಲ್ಲಿಂಗ-ಸ್ತ್ರೀಲಿಂಗಗಳಲ್ಲಿ ಬರುವುದಿಲ್ಲ.

**ಅವತಾರಿಕೆ ೪೫೬**

ಹೀಗೆಯೇ ಅನೇಕತ್ವವು ತೋರುವಾಗ ಆದೇಶಾಂತರವನ್ನು ವಿಧಿಸುತ್ತಾನೆ.

**ಸೂತ್ರಂ || ಉವುರನೇಕತ್ವೇ || ೪೫೬ ||**

**ಅರ್ಥ ||** ಧಾತುವಿನಮೇಲೆ ವಿಹಿತವಾದ **ಅಚ್-ಪ್ರತ್ಯಯಕ್ಕೆ ನಪುಂಸಕ ವಿಷಯದಲ್ಲಿ ಅನೇಕತ್ವವು** ತೋರುವಾಗ ' **ಉವು** ' **ಎಂಬಾದೇಶವು ಬರುವುದು.**

**ಉದಾಹರಣೆ** || 'ಓದುವುವಂ, ಓದುವುವಱಂ, ಓದುವುವರ್ಕೆ' ಹೀಗೆಯೇ 'ಪಾಡುವುವಂ, ಪಾಡುವುವಱಂ, ಪಾಡುವುವರ್ಕೆ' ಮೊದಲಾದುವು ಇದಕ್ಕೆ ಲಕ್ಷ್ಯಗಳು.

ಇಲ್ಲಿ 'ಅನೇಕತ್ವೇ' ಎಂದು ಹೇಳಿರುವುದರಿಂದ 'ಪಾಡಿದುದಂ, ಓದುವುದಂ' ಮೊದಲಾದ ಏಕತ್ವದಲ್ಲಿ ಬರುವುದಿಲ್ಲ.

**ಅವತಾರಿಕೆ ೪೫೭**

ಹೀಗೆಯೇ ಪ್ರತ್ಯಯಾಂತರಕ್ಕೂ ಆದೇಶವನ್ನು ಹೇಳುತ್ತಾನೆ.

**ಸೂತ್ರಂ || ಅರಃ || ೪೫೭ ||**

**ಅರ್ಥ || ಧಾತುವಿನ ಮೇಲೆ ವಿಹಿತವಾದ ಅರ್-ಪ್ರತ್ಯಯಕ್ಕೆ ನಪುಂಸಕ ಲಿಂಗದಲ್ಲಿ 'ಉವು' ಎಂಬಾದೇಶವು ಬರುವುದು.**

**ಉದಾಹರಣೆ** || 'ಗಿಳಿಗಳೋದಿದುವು, ಓದಿದಪುವು, ಓದುವುವು; ತುಂಬಿಗಳ್ ಪಾಡಿದುವು, ಪಾಡಿದಪುವು, ಪಾಡುವುವು' ಮೊದಲಾದುವು ಇದಕ್ಕೆ ಲಕ್ಷ್ಯಗಳು.

ಇಲ್ಲಿ 'ನಪಿ' ಎಂಬುದನ್ನು ಸಂಬಂಧಿಸಿರುವುದರಿಂದ 'ಓದಿದರ್, ಪಾಡಿದರ್' ಮೊದಲಾದುವುಗಳಲ್ಲಿ ಬರುವುದಿಲ್ಲ.

**ಅವತಾರಿಕೆ ೪೫೮**

ಹೀಗೆಯೇ ಧಾತುವಿನ ಮೇಲೆ ವಿಹಿತವಾದ ಅಮ್-ಪ್ರತ್ಯಯಕ್ಕೆ ಆದೇಶಾಂತರಗಳನ್ನೂ ವಿಧಿಸುತ್ತಾನೆ.

**ಸೂತ್ರಂ || ವೇತ್ವಿತ್ತ್ವತ್ತ್ವೋಽಮೋ ಭೂತೇ || ೪೫೮ ||**

**ಅರ್ಥ || ಧಾತುವಿನ ಮೇಲೆ ಭೂತಕಾಲದಲ್ಲಿ ವಿಹಿತವಾದ ಅಮ್-ಪ್ರತ್ಯಯಕ್ಕೆ ನಪುಂಸಕ ವಿಷಯದಲ್ಲಿ 'ಇತು, ಇತ್ತು, ಅತ್ತು' ಎಂಬಾದೇಶಗಳು ವಿಕಲ್ಪವಾಗಿ ಬರುವುವು.**

**ಉದಾಹರಣೆ** || 'ಗಿಳಿಯೋದಿತು, ಓದಿತ್ತು, ಓದಿದತ್ತು, ಓದಿದುದು; ಅಳಿ ಪಾಡಿತು, ಪಾಡಿತ್ತು, ಪಾಡಿದತ್ತು, ಪಾಡಿದುದು ||' ಮೊದಲಾದುವು ಇದಕ್ಕೆ ಲಕ್ಷ್ಯಗಳು.

ಇಲ್ಲಿ 'ಅಮಃ' ಎಂದು ಸ್ಥಾನಿ ನಿರ್ದೇಶವನ್ನು ಮಾಡಿರುವುದರಿಂದ 'ಓದಿದಯ್, ಪಾಡಿದಯ್' ಮೊದಲಾದ ಮಧ್ಯಮಪುರುಷ ಪ್ರಯೋಗಗಳಲ್ಲಿಯೂ 'ಭೂತೇ' ಎಂದು ಹೇಳಿರುವುದರಿಂದ 'ಗಿಳಿಯೋದಿದಪುದು, ಓದುವುದು' ಮೊದಲಾದ ವರ್ತಮಾನ ಭವಿಷ್ಯತ್ ಪ್ರಯೋಗಗಳಲ್ಲಿಯೂ 'ನಪಿ' ಎಂದು ಹೇಳಿರುವುದರಿಂದ 'ಪಾಡಿದಂ, ಪಾಡಿದಳ್' ಮೊದಲಾದ ಪುಲ್ಲಿಂಗ ಸ್ತ್ರೀಲಿಂಗಗಳಲ್ಲಿಯೂ ಬರುವುದಿಲ್ಲವೆಂದು ತಿಳಿಯಬೇಕು.

**ಅವತಾರಿಕೆ ೪೫೯**

ಹೀಗೆಯೇ ಧಾತುವಿಶೇಷದ ಮೇಲೆ ವಿಹಿತವಾದ ಕೆಲವು ಪ್ರತ್ಯಯಗಳಿಗೂ ಆದೇಶವಿಶೇಷಗಳನ್ನು ವಿಧಿಸುತ್ತಾನೆ.

**ಸೂತ್ರಂ || ಉದೂವೋಷ್ಟ್ವವೂಳೇಃ ಸತ್ತ್ವಾಯಾಂ || ೪೫೯ ||**

**ಅರ್ಥ || ಸತ್ತ್ವಾರ್ಥಕವುಳ್ಳ ಧಾತುವಿಗೆ ಪರದಲ್ಲಿರುವ 'ಉದು, ಉವು' ಎಂಬ ಪ್ರತ್ಯಯಗಳಿಗೆ ಕ್ರಮವಾಗಿ 'ಟು, ಅವು' ಎಂಬಾದೇಶಗಳು ಬರುವುವು.**

**ಉದಾಹರಣೆ** || ' ಪಣಮುಂಟು, ಕುಮರೆಗಳೊಳವು||' ಇವೇ ಇದಕ್ಕೆ ಲಕ್ಷ್ಯಗಳು.

ಇಲ್ಲಿ — ' ಉದೂವೋಃ ' ಎಂದು ಹೇಳಿರುವುದರಿಂದ ' ಒಳಯ್, ಒಳಿರ್ ' ಮೊದಲಾದ ಪ್ರತ್ಯಯಾಂತರಗಳಲ್ಲಿ ಬರುವುದಿಲ್ಲ. ' ಉಳಃ ' ಎಂದಿರುವುದರಿಂದ ' ಸಂಭವಿಸಿದುದು, ಸಂಭವಿಸುವುವು ' ಮೊದಲಾದುವುಗಳಲ್ಲಿಯೂ ' ಸತ್ತಾಯಾಂ ' ಎಂದು ಹೇಳಿರುವುದರಿಂದ 'ಉಬ್ಬಿತ್ತುದೆಬ್ಬಿತ್ತು, ಉಬ್ಬುವೆಬ್ಬುಗಳ್ ' ಮೊದಲಾದುವುಗಳಲ್ಲಿ ಬರುವುದಿಲ್ಲ.

**ಅವತಾರಿಕೆ ೪೬೦**

ಹೀಗೆಯೇ ಪ್ರತಿಷೇಧದಲ್ಲಿ ಪೂರ್ವೋಕ್ತವಾದ ' ಉದು, ಉವು ' ಎಂಬಿವುಗಳ ಉ ಕಾರಕ್ಕೆ ಆದೇಶವನ್ನು ವಿಧಿಸುತ್ತಾನೆ.

**ಸೂತ್ರಂ || ಓರತ್ ಪ್ರತಿಷೇಧೇ || ೪೬೦ ||**

**ಅರ್ಥ || ಧಾತುವಿಗೆ ಪರದಲ್ಲಿರುವ ' ಉದು, ಉವು ' ಎಂಬ ಪ್ರತ್ಯಯಗಳ ಉ ಕಾರಕ್ಕೆ ಅ ಕಾರಾದೇಶವು ಪ್ರತಿಷೇಧದಲ್ಲಿ ಬರುವುದು.**

**ಉದಾಹರಣೆ** || ' ಪಾಡದು ಗಿಳಿ, ಪಾಡವು ಗಿಳಿಗಳ್; ಓದದು ಗಿಳಿ, ಓದವು ಗಿಳಿಗಳ್ ||' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೪೬೦**

ಈ ಸೂತ್ರದಲ್ಲಿ — ' ಓಃ, ಅತ್, ಪ್ರತಿಷೇಧೇ ' ಎಂದು ಮೂರು ಪದಗಳಿರುವುವು. 'ಓಃ' ಎಂಬುದು ಸ್ಥಾನಿನಿರ್ದೇಶವು. ಇದಕ್ಕೆ ಅನುವೃತ್ತಮಾನವಾದ ' ಉದೂವೋಃ ' ಎಂಬುದು ಅವಯುವಾವಯವಿಭಾವಸಂಬಂಧದಿಂದ ವ್ಯಧಿಕರಣವಿಶೇಷಣವು. ' ಅತ್ ' ಎಂಬುದು ಆದೇಶ ನಿರ್ದೇಶವು. ಇಲ್ಲಿ ತ ಕಾರವು ಉಚ್ಚಾರಣಾರ್ಥಕವು. ' ಪ್ರತಿಷೇಧೇ ' ಎಂಬುದು ವಿಷಯಸಪ್ತಮಿ. ' ಧಾತೋಃ ' ಎಂಬುದು ಅಧಿಕರಿಸಲ್ಪಡುವುದು. ತಥಾಚ — ಪ್ರತಿಷೇಧವಿಷಯದಲ್ಲ ಧಾತುವಿಗೆ ಪರದಲ್ಲಿರುವ ' ಉದು, ಉವು ' ಎಂಬ ಪ್ರತ್ಯಯಗಳ ಉಕಾರಕ್ಕೆ ಅ ಕಾರಾದೇಶವು ಬರುವುದೆಂದು ಸೂತ್ರಾರ್ಥವಾಗುವುದು.

ಇಲ್ಲಿ ಉ ಕಾರಕ್ಕೆ ಅ ಕಾರವು ಬರುವುದೆಂದು ಹೇಳಿರಲು ' ಉದು, ಉವು ' ಗಳಲ್ಲಿ ಎರಡು ಉ ಕಾರಗಳು ಇರುವುವು. ಅದರಲ್ಲಿ ಈ ಆದೇಶವು ಅಂತ್ಯಕ್ಕೆ ಬರುವುದೇ? ಅಥವಾ ಆದಿಗೆ ಬರುವುದೇ ?— ಎಂದು ಶಂಕೆಯುಂಟಾಗಲು ಅಂತ್ಯಕ್ಕೆ ' ಷಷ್ಠ್ಯಾಃ ಸ್ಥಾನೇऽಂತ್ಯಸ್ಯ ' ಎಂಬ ಪರಿಭಾಷೆಯಿಂದಲೇ ಸಿದ್ಧವಾಗುತ್ತಿರಲು ಸೂತ್ರದಲ್ಲಿ ' ಓಃ ' ಎಂದು ಹೇಳಿರುವುದು ವ್ಯರ್ಥವಾಗುವುದರಿಂದ ತದ್ಗ್ರಹಣ ಸಾಮರ್ಥ್ಯದಿಂದ ಆದಿಯ ಉ ಕಾರಕ್ಕೆ ಬರುವುದೆಂದು ತಿಳಿಯಬೇಕು. ' ಪ್ರತಿಷೇಧೇ ' ಎಂದು ಹೇಳಿರುವುದರಿಂದ — ' ಮಾಡಿದುದು, ಮಾಡಿದುವು ' ಮೊದಲಾದ ಪ್ರಯೋಗಗಳಲ್ಲಿ ಪ್ರತಿಷೇಧವು ತೋರುವುದಿಲ್ಲವಾದುದರಿಂದ ಅ ಕಾರವು ಬರುವುದಿಲ್ಲ.

**ಅವತಾರಿಕೆ ೪೬೧**

ಹೀಗೆಯೇ ಪ್ರತಿಷೇಧದಲ್ಲಿ ' ಅಯ್ ' ಪ್ರತ್ಯಯಕ್ಕೆ ಬರುವ ಆದೇಶವನ್ನು ವಿಧಿಸುತ್ತಾನೆ.

**ಸೂತ್ರಂ || ಓದಯೋೀ ವಾ || ೪೬೧ ||**

**ಅರ್ಥ || ಪ್ರತಿಷೇಧದಲ್ಲಿ ಧಾತುವಿನಮೇಲೆ ವಿಹಿತವಾದ ' ಅಯ್ ' ಪ್ರತ್ಯಯಕ್ಕೆ ವಿಕಲ್ಪವಾಗಿ ಓ ಕಾರಾದೇಶವು ಬರುವುದು.**

**ಉದಾಹರಣೆ** || ' ದೇಹಮನಿದನೆಂತು ನಿಚ್ಚಟಿಂ ನಂಬಿರ್ಪ್ರೋ — ನಂಬಿದಪಯ್, ಹೀಗೆಯೇ ''ಎಂತು ನಂಬಿದೋ — ಎಂತು ನಂಬಿದಯ್, ಎಂತು ನಂಬುವೋ — ಎಂತು ನಂಬುವಯ್ || ' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೪೬೧**

ಇಲ್ಲಿ ಕೆಲವರು ಪೂರ್ವಸೂತ್ರದಿಂದ ' ಪ್ರತಿಷೇಧೇ ' ಎಂಬುವಕ್ಕೆ ಅನುವೃತ್ತಿಮಾಡಿ ಈಯೋಕಾರವನ್ನು ಪ್ರತಿಷೇಧದಲ್ಲಿಯೇ ಅಂಗೀಕರಿಸುವರು. ಇನ್ನು ಕೆಲವರು ಪ್ರತಿಷೇಧಾರ್ಥವನ್ನು ತೋರದ ಪ್ರಯೋಗಗಳಲ್ಲಿಯೂ ಓ ಕಾರಾದೇಶವು ಬಂದಿರುವುದರಿಂದ ಇಲ್ಲಿ ಅದನ್ನು ಅನುವರ್ತಿಸುವುದಿಲ್ಲವೆಂದು ಹೇಳುತ್ತಾರೆ. ಆದುದರಿಂದ —

ಪೋದ ಭವದೊಂದುಕುಲಬಲ
ವೈದುಷ್ಯವಿನೀತತಾದಿಗುಣಗಣದಿಂದೇ
ನಾದುದೊ ನೀನದಱಿಂದವು
ನಾದರಿಪೋ ಮನದೆ ಮುಱಿದಪೋ ಪೇೞ್ ಮಗನೇ

ಎಂದು ಮೊದಲಾದ ಪ್ರಯೋಗಗಳು ಸಿದ್ಧಿಸುವುವು.

**ಅವತಾರಿಕೆ ೪೬೨**

ಇಲ್ಲಿಂದ ಮುಂದೆ ' ಪ್ರತಿಷೇಧೇ ' ಎಂಬುದಕ್ಕೆ ಸಂಬಂಧವಿಲ್ಲದೆ ಕೆಲವು ಪ್ರತ್ಯಯಗಳಿಗೆ ಆದೇಶವನ್ನು ವಿಧಿಸುತ್ತಾನೆ.

**ಸೂತ್ರಂ || ಎವೋರೆನ್ || ೪೬೨ ||**

**ಅರ್ಥ || ಧಾತುವಿನಮೇಲೆ ವಿಹಿತವಾದ ' ಎವು ' ಪ್ರತ್ಯಯಕ್ಕೆ ' ಎನ್ ' ಎಂಬಾದೇಶವು ವಿಕಲ್ಪವಾಗಿ ಬರುವುದು.**

**ಉದಾಹರಣೆ** || ' ಆಮಿದಂ ಕಂಡೆವು — ಕಂಡೆಂ, ನೋಡಿದಪೆವು — ನೋಡಿದಪೆಂ, ಮಾಱಪ್ಪೆವು — ಮಾಱಪ್ಪೆಂ || ' ಮೊದಲಾದುವು ಇದಕ್ಕೆ ಲಕ್ಷ್ಯಗಳು. ಇಲ್ಲಿ ' ಎವೋಃ ' ಎಂದು ಹೇಳಿ ಆದೇಶನ್ನು ವಿಧಿಸಿರುವುದರಿಂದ ' ತಾನಿದಂ ಮಾಡಿದಂ — ತಾಮಿದಂ ಮಾಡಿದರ್ ' ಮೊದಲಾದ ಪ್ರಯೋಗಗಳಲ್ಲಿ ಬರುವುದಿಲ್ಲ.

**ಅವತಾರಿಕೆ ೪೬೩**

ಹೀಗೆಯೇ ' ಅಮ್ ' ಪ್ರತ್ಯಯಕ್ಕೆ ಬರುವ ಆದೇಶವನ್ನು ವಿಧಿಸುತ್ತಾನೆ.

**ಸೂತ್ರಂ || ಅಮುರೋರ್ಗುಮ್ || ೪೬೩ ||**

**ಅರ್ಥ || ಸದಾದಿಕಾಲಗಳಲ್ಲಿ ಧಾತುವಿನಮೇಲೆ ವಿಹಿತಗಳಾದ ' ಅಮ್, ಅರ್ ' ಎಂಬ ಪ್ರತ್ಯಯಗಳಿಗೆ ' ಗುಂ ' ಎಂಬಾದೇಶವು ವಿಕಲ್ಪವಾಗಿ ಲಿಂಗತ್ರಯದಲ್ಲಿಯೂ ಬರುವುದು.**

**ಉದಾಹರಣೆ** || ವರ್ತಮಾನಕಾಲ ಪುಲ್ಲಿಂಗದಲ್ಲಿ — ' ಮೂಡುಗುಮಿಾಗಳ್ ಸುರೇಂದ್ರಗಿರಿಯೊಳ್ ದಿನಪಂ— ಮೂಡಿದಪಂ ದಿನಪನುದಯಗಿರಿಮಸ್ತಕದೊಳ್; ಸ್ತುತಮಂ ನೋಡುಗುಮುದಾರಚರಿತರ್ ಮುನಿಪರ್ — ಸ್ತುತಮಂ ನೋಡಿದಪರಮಲಚರಿತರ್ ಮುನಿಪರ್ ' || ಮೊದಲಾದುವೂ; ಸ್ತ್ರೀಲಿಂಗದಲ್ಲಿ— 'ಒಲ್ಗುಂ ಜನಕಾತ್ಮಜಾತೆಯಿಾಗಳ್ ನೋಡಾ—ಒಲ್ದಪಳಾ

ಜನಕಾತ್ಮಜೆಯೀಗಳ್ ನೋಡಾ, ಪಾಡುಗುವಿಾಜಿನಪನಿದಿರೊಳಮರಾಂಗನೆಯರ್ — ಪಾಡಿದರ್ ಜಿನಪನಿದಿರೊಳಮರಾಂಗನೆಯರ್ ||' ಮೊದಲಾದುವೂ; ನಪುಂಸಕದಲ್ಲಿ—' ಕಾದುಗುವಿಾ ಮತ್ತಹಸ್ತಿಸಮರಾಂಗಣದೊಳ್ — ಕಾದಿದಪುದು ಮತ್ತಹಸ್ತಿಸಮರಾಂಗಣದೊಳ್, ಕಾದುಗುವಿಾಭರದೆ ಕುದುರೆಗಳ್ ಭಂಡಣದೊಳ್—ಕಾದಿದಪುವು ಭರದೆ ಕುದುರೆಗಳ್ ಭಂಡಣದೊಳ್ ||' ಮೊದಲಾದುವೂ—

ಭೂತದಲ್ಲಿ ಪುಲ್ಲಿಂಗಕ್ಕೆ — ' ನಿನ್ನೆ ಪುಟ್ಟುಗುಂ ಕಲಿರಾಮಂ — ನಿನ್ನೆ ಪುಟ್ಟಿದಂ ಕಲಿರಾಮಂ; ಬಲರಾಮರ್ ಮೊನ್ನೆಮಾಡುಗುಂ ಬಲಿವಧಮಂ — ಬಲರಾಮರ್ ಮೊನ್ನೆ ಮಾಡಿದರ್ ಬಲಿವಧಮಂ ||' ಮೊದಲಾದುವೂ; ಸ್ತ್ರೀಲಿಂಗಕ್ಕೆ—'ಪಿಂತೆ ಕಾಣ್ಗುಮವಳರ್ಜುನನಂ— ಪಿಂತೆ ಕಂಡಳವಳರ್ಜುನನಂ; ನಿನ್ನ ನಿನ್ನೆ ಕಾಣ್ಗುಂ ಸತಿಯರ್ — ನಿನ್ನ ನಿನ್ನೆ ಕಂಡರ್ ಸತಿಯರ್ ||' ಮೊದಲಾದುವೂ; ನಪುಂಸಕಕ್ಕೆ — ' ಅಂದು ಪುಟ್ಟುಗುಂ ನೆಲನಜನಿಂ — ಅಂದು ಪುಟ್ಟಿತೀನೆಲನಜನಿಂ; ಪೋಲ್ಗುಂ ಬಲ್ಗಿರಿಗಳಂದುವಜ್ರಾಹತಿಯಿಂ — ಪೋಳ್ದುವು ಬಲ್ಗಿರಿಗಳಂದು ವಜ್ರಾಹತಿಯಿಂ ||' ಮೊದಲಾದುವೂ—

ಭವಿಷ್ಯತ್ತಿನಲ್ಲಿ ಪುಲ್ಲಿಂಗಕ್ಕೆ — ' ನಾಳೆ ಪುಟ್ಟುಗುಂ ಶ್ರೀಕೃಷ್ಣಂ — ನಾಳೆ ಪುಟ್ಟುವಂ ಶ್ರೀಕೃಷ್ಣಂ; ನಾಳೆ* ಪುಟ್ಟುಗುಂ ಬಲರಾಮರ್ — ನಾಳೆ ಪುಟ್ಟುವರ್ ಬಲರಾಮರ್ ||' ಮೊದಲಾದುವೂ; ಸ್ತ್ರೀಲಿಂಗಕ್ಕೆ — ' ನಾಳೆ ಪುಟ್ಟುಗುಂ ಸುತೆ ಕೆಳದೀ — ನಾಳೆ ಪುಟ್ಟುವಳ್ ಸುತೆ ಕೆಳದೀ; ನಾಳೆ ಪುಟ್ಟುಗುಂ ಬಹುಸುತೆಯರ್ — ನಾಳೆ ಪುಟ್ಟುವರ್ ಬಹುಸುತೆಯರ್ ||' ಮೊದಲಾದುವೂ; ನಪುಂಸಕಲಿಂಗಕ್ಕೆ—' ನಾಳೆ ಪುಟ್ಟುಗುಂ ಕುಚಯುಗಳಂ— ನಾಳೆ ಪುಟ್ಟುವುದು ಕುಚಯುಗಳಂ; ನಾಳೆ ಪುಟ್ಟುಗುಂ ಬಲ್ಮೊಲೆಗಳ್ — ನಾಳೆ ಪುಟ್ಟುವುವು ಬಲ್ಮೊಲೆಗಳ್ ||' ಮೊದಲಾದುವೂ ಲಕ್ಷ್ಯಗಳು.

**ಅವತಾರಿಕೆ ೪೬೪**

ಹೀಗೆಯೇ ಆದೇಶಾಂತರವನ್ನು ವಿಧಿಸುತ್ತಾನೆ.

**ಸೂತ್ರಂ || ಗುಗುಮೇಕೇಷಾಂ || ೪೬೪ ||**

**ಅರ್ಥ || ಸದಾದಿಕಾಲದಲ್ಲಿ ಧಾತುವಿನಮೇಲೆ ವಿಹಿತಗಳಾದ ' ಅಮ್, ಅರ್ ' ಪ್ರತ್ಯಯಗಳ ಸ್ಥಾನದಲ್ಲಿ ' ಗುಗುಮ್ ' ಎಂಬಾದೇಶವು ಬರುವುದೆಂದು ಕೆಲವರು ಹೇಳುತ್ತಾರೆ.**

**ಉದಾಹರಣೆ** || ' ಗಾಯಕಂ ಪಾಡುಗುಗುಂ — ಗಾಯಕರ್ ಪಾಡುಗುಗುಂ; ನಚ್ಚಣಿ ಕುಣಿಗುಗುಂ— ನಚ್ಚಣಿಯರ್ ಕುಣಿಗುಗುಂ; ಗಿಳಿಯೋದುಗುಗುಂ — ಗಿಳಿಗಳೋದುಗುಗುಂ || ' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೪೬೪**

ಇಲ್ಲಿ ಹೇಳಿರುವ 'ಏಕೇಷಾಂ' ಗ್ರಹಣವು ವಿಕಲ್ಪಾರ್ಥವು. ಆದುದರಿಂದ ಇದು ಬಾರದ ಪಕ್ಷದಲ್ಲಿ ಯಥಾಯೋಗವಾಗಿ ಕಾರ್ಯಾಂತರವೂ ಬರುವುದು. ಆದುದರಿಂದ — ' ಪಾಡುಗುಂ, ಪಾಡಿದಪಂ, ಪಾಡುಗುಂ, ಪಾಡಿದಂ, ಪಾಡುಗುಂ, ಪಾಡುವಂ ' ಮೊದಲಾದ ಪ್ರಯೋಗಗಳೂ ಸಿದ್ಧಿಸುವುವು. ಪ್ರಾಚೀನರು ಇಲ್ಲಿ —

* ಪಾಠಾಂತರ — ನಾಳ್ಗೆ

ನಾಳೆಯೊ ನಾಡಿದೊ ಕಾಲನ
ಧಾಟಿಯವಂ ನುಂಗಿ ನೊಣೆಗುಗೆಂ ಶರಣಾರೆಂ
ದಾಳೋಚಂಗೆಯ್ಯದೆ ದಿಟ
ಬಾಟಿಂದುಱಿ ಬೆಱೆತು ಬೀಗುವರ್ಗೇಗೆಯ್ವೆಂ

ಮೊದಲಾದ ಪ್ರಯೋಗಗಳನ್ನೂ ಉದಾಹರಿಸುವರು.

**ಅವತಾರಿಕೆ ೪೬೫**

ಹೀಗೆ ಧಾತುವಿನ ಮೇಲೆ ವಿಹಿತಗಳಾದ ಕೆಲವು ಪ್ರತ್ಯಯಗಳಿಗೆ ಆದೇಶಗಳನ್ನು ಸಾಮಾನ್ಯವಾಗಿ ಈಗ ಆಶೀರಾದ್ಯರ್ಥದಲ್ಲಿ ' ಗೆತ್ ' ಎಂಬುದನ್ನು ವಿಧಿಸುತ್ತಾನೆ.

**ಸೂತ್ರಂ || ಆಶೀರ್ವಿಧಿನಿಮಂತ್ರಣಾಮಂತ್ರಣಾಧ್ಯೇಷಣಸಂಪ್ರಶ್ನಪ್ರೇಷಣವಿಜ್ಞಾಪನಾಜ್ಞಾಪನಪ್ರಾರ್ಥನೇ ಗೆತ್ || ೪೬೫ ||**

**ಅರ್ಥ || ಆಶೀರಾದ್ಯರ್ಥದಲ್ಲಿ ಧಾತುವಿಗೆ ಪರದಲ್ಲಿರುವ ' ಅವ್, ಅರ್ '** ಎಂಬ **ಪ್ರತ್ಯಯಗಳಿಗೆ ' ಗೆತ್ '** ಎಂ**ಬಾದೇಶವಾಗುವುದು.**

**ಉದಾಹರಣೆ ||** ' ತಲಿಕ್ಕೈಸುಗಸ್ಮನ್ಮತಿಕುಮುದಿನಿಯಂ ನೇಮಿಚಂದ್ರಂ ಜಿನೇಂದ್ರಂ, ಚತುರ್ವಿಂಶತಿ ದೇವರ್ ದಯೆಗೆಯ್ಗೆ ವಿಮಲರತ್ನತ್ರಯಮಂ||' ಮೊದಲಾದುವು ಆಶೀರಾರ್ಥಕ್ಕೂ 'ದೇವನಂ ಪೂಜಿಸುಗೆ ಬುಧಂ, ತತ್ತ್ವಮಂ ನಂಬುಗ ವಿಬುಧರ್ ||' ಮೊದಲಾದುವು ವಿಧ್ಯರ್ಥಕ್ಕೂ 'ಸಂಧ್ಯೆಯೊಳ್ ನಿಯಮಮಂ ಮಾಡುಗೆ, ಸೂತ್ರಮಂ ಯಥಾಕ್ರಮಮೋದುಗೆ ||' ಮೊದಲಾದುವು ನಿಮಂತ್ರಣಕ್ಕೂ — ' ಬುಭುಕ್ಷು ಭೋಜನಂಗೆಯ್ಗೆ, ಪಂಡಿತರ್ ಪ್ರಸಂಗಂಗೆಯ್ಗೆ || ' ಮೊದಲಾದುವು ಆಮಂತ್ರಣಕ್ಕೂ — ' ಉಪಾಧ್ಯಾಯಂ ಮಾಣವಕನನೋದಿಸುಗೆ, ಪುರೋಹಿತರ್ ಮಾಣವಕನಂ ಶ್ರೌತಮನೋದಿಸುಗೆ || ' ಮೊದಲಾದುವು ಅಧ್ಯೇಷಣಕ್ಕೂ— ' ಪುತ್ರಂ ವ್ಯಾಕರಣಮನೋದುಗೆ ಪೇಱ್ ವೇದಮನೋದುಗೆ, ಇವರ್ ನಾಟಕಮನೋದುಗ ಮೇಣ್ ಅಲಂಕಾರಮನೋದುಗೆ || ' ಮೊದಲಾದುವು ಸಂಪ್ರಶ್ನೆಗೂ — ' ಮಲ್ಲಂ ಮೆಯ್ಯನೊತ್ತುಗೆ, ಬಂಟರೂಲಿಗಂಗೆಯ್ಗೆ || ' ಮೊದಲಾದುವು ಪ್ರೇಷಣೆಗೂ—'ಅರಸನಿದಂ ಮಾಡುಗೆ, ಗುರುಗಳಿದಂ ಪಾಲಿಸುಗೆ || ' ಮೊದಲಾದುವು ವಿಜ್ಞಾಪನೆಗೂ — ' ಪ್ರಜೆಗಳಿಂತು ನಡೆಗೆ, ಯತಿಗಳಿಂತಾಚರಿಸುಗೆ ' || ಮೊದಲಾದುವು ಆಜ್ಞಾಪನೆಗೂ — ' ಎಮಗೀತಂ ಬಿಕ್ಷಮಂ ಕುಡುಗೆ, ಎಮ್ಮ ಮಗಂಗಿವರ್ ಪೆಣ್ಣಂ ಕುಡುಗೆ || ' ಮೊದಲಾದುವು ಪ್ರಾರ್ಥನೆಗೂ ಉದಾಹರಣೆಗಳಾಗುವುವು.

**ವಿಚಾರ ೪೬೫**

ಇಲ್ಲಿ — ' ಆಶೀಃ ' ಎಂದರೆ — ' **ಆಶೀರುರಗದಂಷ್ಟ್ರಾಯಾಂ ಹಿತವಾಕ್ಯಾಭಿಲಾಷಯೋಃ** ' ಎಂಬ ಕೋಶದಿಂದ ' ಹಿತವಾಕ್ಯ ' ವೆಂದರ್ಥವಾಗುವುದು. ಇದನ್ನೇ ಇಷ್ಟಾರ್ಥಶಂಸನವೆಂದು ಹೇಳುತ್ತಾರೆ. ' ವಿಧಿಃ ' ಎಂದರೆ—ನಿಯೋಗವು ಅಥವಾ ಕರ್ತವ್ಯೋಪದೇಶವು. ' ನಿಮಂತ್ರಣ ' ವೆಂದರೆ — ವಿಧಿಪೂರ್ವಕವಾಗಿ ಮಾಡತಕ್ಕ ಕಾರ್ಯದಲ್ಲಿ ನಿಯೋಜಿಸುವುದು; ಅಥವಾ ಕ್ರಿಯೆಯಲ್ಲಿ ಅಭಿಮುಖವಾಗಿ ಮಾಡುವುದು. ' ಆಮಂತ್ರಣ 'ವೆಂದರೆ — ಕಾಮಚಾರದಿಂದ ಮಾಡುವುದು; ಅಥವಾ ಮಾಡತಕ್ಕ ಕೆಲಸದಲ್ಲಿ ಅನುಮೋದಿಸುವುದು. ಸತ್ಕಾರಪೂರ್ವಕ

ವ್ಯಾಪಾರವು ಅಧ್ಯೇಷಣವು. ಕರ್ತವ್ಯಾಲೋಚನವು ಸಂಪ್ರಶ್ನವು. ಚಿಕ್ಕವರನ್ನು ಕುರಿತು ಕೆಲಸವನ್ನು ಹೇಳುವುದು ಪ್ರೇಷಣವು. ದೊಡ್ಡವರನ್ನು ಕುರಿತು ಕಾರ್ಯವನ್ನು ಪ್ರತಿಪಾದಿಸುವುದು ವಿಜ್ಞಾಪನೆಯು. ವಿಹಿತಕರ್ಮಪ್ರತಿಪಾದನೆಯೇ ಆಜ್ಞಾಪನೆಯು. 'ಪ್ರಾರ್ಥನೆ' ಯೆಂದರೆ — ಬೇಡುವುದು. ಈ ಅರ್ಥಗಳಲ್ಲಿ ಗೆತ್-ಪ್ರತ್ಯಯವು ಬರುವುದೆಂದು ಅಂತಹ ಪ್ರಯೋಗಗಳೇ ಉದಾಹರಿಸಲ್ಪಟ್ಟಿವೆ. ಇಲ್ಲಿ ಆಶೀರಾದ್ಯರ್ಥನಿರ್ದೇಶವನ್ನು ಮಾಡಿರುವುದರಿಂದ — 'ಆತಂ ಬಂದಂ, ಈತಂ ಪೋದಂ' ಮೊದಲಾದ ಪ್ರಯೋಗಗಳಲ್ಲಿ ಬರುವುದಿಲ್ಲ.

**ಅವತಾರಿಕೆ ೪೬೬**

ಪೂರ್ವೋಕ್ತಾರ್ಥದಲ್ಲಿಯೇ ಆದೇಶಾಂತರವಿಧಿಯನ್ನೂ ಹೇಳುತ್ತಾನೆ.

**ಸೂತ್ರಂ || ಇರಶ್ಚ ವುದುಃ || ೪೬೬ ||**

**ಅರ್ಥ || ಆಶೀರಾದಿಗಳಲ್ಲಿ ಧಾತುವಿನ ಮುಂದಿರುವ 'ಅಮ್, ಅರ್, ಇರ್' ಎಂಬಿವುಗಳಿಗೆ 'ವುದು' ಎಂಬಾದೇಶವೂ ಬರುವುದು.**

**ಉದಾಹರಣೆ ||** 'ಜಿನನೆಮಗೆ ಸುಖಮಂ ಮಾಡುವುದು, ಗುರುಗಳೆಮಗೆ ತತ್ತ್ವಮಂ ಬೆಸಸುವುದು, ನೀಮೆಮಗಭೀಷ್ಟಮನೀವುದು, ತಾನಿದಂ ಮಾಳ್ಪುದು, ತಾಮಿದಂ ಮಾಳ್ಪುದು, ನೀಮಿದಂ ಮಾಳ್ಪುದು ||' ಮೊದಲಾದುವು ಇವಕ್ಕೆ ಲಕ್ಷ್ಯಗಳು.

**ವಿಚಾರ ೪೬೬**

ಇಲ್ಲಿ — ಆಶೀರಾದಿಗಳೂ ಅನುವರ್ತಿಸಲ್ಪಡುವುವು. 'ಚ' ಶಬ್ದವು 'ಅಮ್, ಅರ್' ಎಂಬಿವುಗಳಿಗೆ ಸಮುಚ್ಚಾಯಕವು. 'ಮಾಡುವುದು' ಮೊದಲಾದ ಉದಾಹರಣೆಗಳಲ್ಲಿ ವ ಕಾರವು ವಿಧೇಯಾವಯವವೇ ಅಲ್ಲದೆ ಭಾವಿಕಾಲದ್ಯೋತಕ 'ವ' ಪ್ರತ್ಯಯವಲ್ಲ. 'ಮಾಳ್ಪುದು' ಮೊದಲಾದುವುಗಳಲ್ಲಿ — '**ಪ್ರತ್ಯಯೇ || ೮೪ ||**' ಎಂಬ ಸೂತ್ರದಿಂದ ಳ ಕಾರಾದೇಶವೂ — '**ಆದಿಷ್ಟಾದ್ರಬಃ || ೫೧೪ ||**' ಎಂಬ ವ ಕಾರಕ್ಕೆ ಪ ಕಾರಾದೇಶವೂ ಬಂದಿರುವುವೆಂದು ತಿಳಿಯಬೇಕು. 'ಮಾಡುವುದು' ಮೊದಲಾದುವುಗಳಲ್ಲಿ 'ನ ವಿಮುಖ್ಯೇ' ಎಂಬುದರಿಂದ ನಿಷೇಧ ಬರುವುದರಿಂದ ಳ ಆದೇಶವಿಲ್ಲವೆಂದು ತಿಳಿಯುವುದು.

**ಅವತಾರಿಕೆ ೪೬೭**

ಹೀಗೆಯೇ 'ಇರ್' ಎಂಬುದಕ್ಕೆ ಇಮಾದೇಶವನ್ನು ವಿಧಿಸುತ್ತಾನೆ.

**ಸೂತ್ರಂ || ಇಮ್ || ೪೬೭ ||**

**ಅರ್ಥ || ಆಶೀರಾದ್ಯರ್ಥದಲ್ಲಿ ಧಾತುವಿನಮೇಲೆ ವಿಹಿತವಾದ 'ಇರ್' ಎಂಬುದಕ್ಕೆ 'ಇಮ್' ಎಂಬಾದೇಶವು ಬರುವುದು.**

**ಉದಾಹರಣೆ ||** 'ಗುರುಗಳಿರಾ ಮುದದಿನೆಮಗೆ ಬೆಸಸಿಂ ಕಥೆಯಂ, ಶಿವಸುಖಮಂ ಮಾಡಿಮೆಮಗೆ ಪರಮಜಿನೇಂದ್ರರ್ ||' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ಅವತಾರಿಕೆ ೪೬೮**

ಹೀಗೆಯೇ 'ಅಯ್' ಪ್ರತ್ಯಯಕ್ಕೆ ಅ ಕಾರಾದೇಶ ಲೋಪಗಳನ್ನು ವಿಧಿಸುತ್ತಾನೆ.

**ಸೂತ್ರಂ || ಅಯೋರ್ಲ್ಲುಪೌ || ೪೬೮ ||**

**ಅರ್ಥ ||** ಆಶೀರಾದ್ಯರ್ಥದಲ್ಲಿ ಧಾತುವಿಗೆ ಪರದಲ್ಲಿರುವ 'ಅಯ್' ಪ್ರತ್ಯಯಕ್ಕೆ ಅ ಕಾರಾದೇಶವೂ ಲೋಪವೂ ಪರ್ಯಾಯವಾಗಿ ಬರುವುದು.

**ಉದಾಹರಣೆ ||** 'ಜಿನೇಶ ದಯೆಗೆಯ್ಯ ವಿಮಲರತ್ನತ್ರಯಮಂ, ದಯೆಗೆಯ್ ನಿನೆಮಗೆ ಸೌಖ್ಯಮಂ ಜಿನರಾಜಾ, ಮನದೊಲವಿಂ ಮಾಡ ಸಂಪದಂಗಳನರುಹಾ ಮನದೊಲವಿಂ ಮಾಡು ಸಂಪದಂಗಳನರುಹಾ ||' ಹೀಗೆಯೆ —

> ಬಾರ ಮರಾಳಿಕಾಗಮನೆ ನೋಡ ಚಕೋರವಿಲೋಲನೇತ್ರೆ ಬಂ
> ದಾರಯ ಪೀವರಸ್ತನಸಿತಾಂಬಭರಾಲಸೆ ಕೇಳ ಕಾಮುಕಾ
> ಕೋರಗಕೇಶಪಾಶೆಯೆನಗುತ್ತರಮಂ ಕುಡ ಚಾರುವೇಣಿ ವೀ
> ಣಾರವೆ ಸೇನವಾರ ಮುಗಳಿಲ್ಲಿಗೆ ಪೋದಪಯಾವುದಾಶ್ರಯಂ

ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೪೬೮**

ಕೆಲವರು ಇಲ್ಲಿ ಪೂರ್ವಸೂತ್ರದಿಂದ 'ಇಮ್' ಎಂಬುದನ್ನೂ ಅನುವರ್ತಿಸಿ —

> ಎಮಗೆ ತಪಸ್ವಿಗಳ್ಗೆ ನೃಪವಾರ್ತೆಯ ದಂದುಗಮೇವುದೆಂದು ನಿ
> ರ್ಮ್ಮಮತೆಯನಿರ್ಪ್ಪೊಡೇನರಿದೆ ನಿಮ್ಮ ಡಿಯೆಮ್ಮ ಯಮೇಲೆ ಮಾಣ್ಪನೋ
> ಹಮೆ ತರೆ ಬಂದಿದಂ ನುಡಿದಿರೀ ದಯೆಯೆಂಬುದು ಕಾರ್ಯಸಿದ್ಧಿ ಮುಂ
> ದೆಮಗಭಿವೃದ್ಧಿಯೆಂದಱಿದೆನಿಂ ಬಿಜಯಂಗೆಯಿಮಿಂದ್ರವಂದಿತಾ

ಮೊದಲಾದುವನ್ನು ಉದಾಹರಿಸುತ್ತಾರೆ.

**ಅವತಾರಿಕೆ ೪೬೯**

ಹೀಗೆಯೇ 'ಇರ್' ಧಾತುವಿನ 'ಅಯ್' ಪ್ರತ್ಯಯಕ್ಕೆ ಆದೇಶ ವಿಧಿಯನ್ನು ಹೇಳುತ್ತಾನೆ.

**ಸೂತ್ರಂ || ಉಚ್ಚೇರಃ || ೪೬೯ ||**

**ಅರ್ಥ ||** ಆಶೀರಾದ್ಯರ್ಥದಲ್ಲಿ 'ಇರ್' ಧಾತುವಿಗೆ ಪರದಲ್ಲಿರುವ 'ಅಯ್' ಪ್ರತ್ಯಯ ಸ್ಥಾನದಲ್ಲಿ ಅ ಕಾರಾದೇಶವೂ ಲೋಪವೂ ಉ ಕಾರಾದೇಶವೂ ಪರ್ಯಾಯವಾಗಿ ಬರುವುವು.

**ಉದಾಹರಣೆ ||** 'ನೀನಿರ, ನೀನಿರ್, ನೀನಿರು ||' ಹೀಗೆಯೇ —

> ಇರು ಮರುಳೆ ಶುಷ್ಕವೈಯಾ
> ಕರಣಂಗಂ ಶುಷ್ಕತಾರ್ಕ್ಕಿಕಂಗಂ ಬೆಳ್ಳ
> ಕ್ಕರಿಗಂಗಂ ವಿಷಯಮೆ ಕಾ
> ವ್ಯರತ್ನಮತಿಚತುರಕವಿಕದಂಬಕವಿಷಯಂ

ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೪೬೯**

ಇಲ್ಲಿ ಆದೇಶತ್ರಯವನ್ನು ವಿಧಿಸಿರುವುದರಿಂದ 'ಅಯ್' ಪ್ರತ್ಯಯಾಂತರೂಪವು ಮೂರಾಗುವುದು.

ನೀನಿರ ನೀನಿರ್ ನೀನಿರು
ತಾನೊರ್ವನೆ ಪಿಡಿವೆನೆಂದು ನರಸುಱಿಸದನಾ
ಕಾನನದೊಳಿರಿಸಿ ನೆಗೆದಂ
ಬಾನತ್ತಂ ಪೋಗಿ ತಾಗಿದಂ ರಕ್ಕಸನಂ

ಮೊದಲಾದ ಪ್ರಯೋಗಗಳೂ ಸಿದ್ಧಿಸುವುವು.

ಇಲ್ಲಿ ' ಇರ್ ' ಎಂಬೊಂದೇ ಧಾತುವಿಗೆ ನಿರ್ದೇಶವಿರುವುದರಿಂದ ' ಮಾಡ, ಮಾಡು ' ಎಂಬಲ್ಲಿ ಬರುವುದಿಲ್ಲ.

**ಅವತಾರಿಕೆ ೪೭೦**

ಹೀಗೆ ಧಾತುಸಾಮಾನ್ಯದ ಮೇಲೂ ಇರುವ ' ಎವು ' ಎಂಬುದಕ್ಕೆ ಆದೇಶವನ್ನು ವಿಧಿಸುತ್ತಾನೆ.

**ಸೂತ್ರಂ || ಎವೋರ್ವರ್ಮ್ || ೪೭೦ ||**

**ಅರ್ಥ ||** **ಆಶೀರಾದ್ಯರ್ಥದಲ್ಲಿ ಧಾತುವಿಗೆ ಪರದಲ್ಲಿರುವ ' ಎವು ' ಎಂಬುದಕ್ಕೆ ' ವರ್ಮ್ ' ಎಂಬ ಆದೇಶವು ಬರುವುದು.**

**ಉದಾಹರಣೆ ||** ' ಆವೆಲ್ಲರುಮಿನಗಳಪ್ಪಮೋಘಂಗೆಯ್ವಂ, ಆನುಂ ನೀನುಮಿನಾ ನೋಂಪಿಯಂ ಮಾಳ್ಪಂ || ' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೪೭೦**

ಈ ಸೂತ್ರದಲ್ಲಿ ಧಾತುವಿಶೇಷನಿರ್ದೇಶವಿಲ್ಲದಿರುವುದರಿಂದ ಧಾತುಸಾಮಾನ್ಯಕ್ಕೂ ಬರುವು ದೆಂದರ್ಥವಾಗಲು —

ಎನಗೊರ್ವಂಗುಪಭೋಗ್ಯಮಲ್ತು ವಸುಧಾಸಾಮ್ರಾಜ್ಯಮೋರಂತೆ ನಿ
ಮ್ಮನಿಬರ್ಗ್ಗಂ ಪಿರಿಯಣ್ಣನೇಂ ಜನಕನೇನೆಂಬೊಂದು ಕೊಂಡಾಟದಿಂ
ವಿನಯಂ ಸಾಲ್ವುದು ತಾಮುಮಾಮುಮೊಡನಿರ್ಪ್ಪಂ ಬಪ್ಪುದಿಂತೆಂಬ ಶಾ
ಸನಮುಂ ನೆತ್ತಿಯೊಳಾಂತು ಬನ್ನಿಮೆಱಗಿಂ ಚಕ್ರೇಶಪಾದಾಬ್ಜದೊಳ್

ಮೊದಲಾದ ಪ್ರಯೋಗಗಳೂ ಸಿದ್ಧಿಸುವುವು.

**ಅವತಾರಿಕೆ ೪೭೧**

ಹೀಗೆಯೇ ' ಎನ್ ' ಎಂಬುದಕ್ಕೂ ಆದೇಶವನ್ನು ವಿಧಿಸುತ್ತಾನೆ.

**ಸೂತ್ರಂ || ಎನೋ ವೆನ್ || ೪೭೧ ||**

**ಅರ್ಥ ||** **ಆಶೀರಾದ್ಯರ್ಥದಲ್ಲಿ ಧಾತುವಿಗೆ ಪರದಲ್ಲಿರುವ ' ಎನ್ ' ಪ್ರತ್ಯಯಕ್ಕೆ ' ವೆನ್ ' ಎಂಬಾದೇಶವು ಬರುವುದು.**

**ಉದಾಹರಣೆ ||** ' ಆನಿದಂ ಮಾಳ್ಪೆಂ, ಆಂ ಜಿನನಂ ಪೂಜಿಸುವೆಂ || ' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ವಿಚಾರ ೪೭೧**

ಇಲ್ಲಿ ಕೆಲವರು ' ಎವು ' ಎಂಬ ಪ್ರತ್ಯಯಕ್ಕೂ ಈ ಆದೇಶವನ್ನಂಗೀಕರಿಸಿ —

ಅನವಧಿಕಕರ್ಮನಿರ್ಜರ
ಣಾನಿದಾನಂ ಬಗೆಯೆ ತಪಮೆ ಪೇಱತೊಂದಿಲ್ಲಿಂ
ದನಿಬರುಮೊಕ್ಕೊರಲಿಂದಾಂ
ಪೆಸಾಮಟಿ ತಪಮನೆಂದು ಬಗೆ ಮಿಗೆ ಪೂಣ್ದರ್

ಮೊದಲಾದುವನ್ನೂ ಪ್ರಯೋಗಿಸುವರು.

**ಅವತಾರಿಕೆ ೪೭೨**

ಹೀಗೆ ಪ್ರತ್ಯಯಗಳಿಗೆ ಬರುವ ಆದೇಶಗಳನ್ನು ವಿಧಿಸಿ ಈಗ ಕೆಲವು ಧಾತುಗಳ ಮುಂದಿರುವ ಗ ಕಾರ ಮಾತ್ರಕ್ಕೆ ಕ ಕಾರಾದೇಶವನ್ನು ವಿಧಿಸುತ್ತಾನೆ.

**ಸೂತ್ರಂ ॥ ವಾಗುಪೋಗ್ವಿಸುಬ್ರಲಟನಣೋ ಗಃ ಕಃ ॥ ೪೭೨ ॥**

**ಅರ್ಥ** ॥ ' ಆಗು, **ಪೋಗು** ' ಎಂಬ ಧಾತುಗಳಿಗೂ ಇಸುಬಂತ ಧಾತುಗಳಿಗೂ ರೇಫ, ಲ ಕಾರ, ಟ ಕಾರ, ನ ಕಾರ ಣ ಕಾರಾಂತ ಧಾತುಗಳಿಗೂ ಪರದಲ್ಲಿರುವ ಗ ಕಾರಕ್ಕೆ ಕ ಕಾರಾದೇಶವು ವಿಕಲ್ಪವಾಗಿ ಬರುವುದು.

**ಉದಾಹರಣೆ** ॥ ' ಅಕ್ಕುಂ, ಆಗುಗುಂ; ಅಕ್ಕುಗುಂ, ಆಗುಗುಗುಂ; ಅಕ್ಕೆ, ಆಗುಗೆ; ಪೋಕುಂ, ಪೋಗುಗುಂ; ಪೋಕುಗುಂ, ಪೋಗುಗುಗುಂ; ಪೋಕೆ, ಪೋಗುಗೆ; ಮಾಡಿಕುಂ, ಮಾಡಿಸುಗುಂ; ಮಾಡಿಕುಗುಂ, ಮಾಡಿಸುಗುಗುಂ; ಮಾಡಿಕೆ, ಮಾಡಿಸುಗೆ; ರಾಗಿಕುಂ, ರಾಗಿಸುಗುಂ; ರಾಗಿಕುಗುಂ, ರಾಗಿಸುಗುಗುಂ; ರಾಗಿಕೆ, ರಾಗಿಸುಗೆ; ಸೋಕ್ಕುರ್ಂ, ಸೋಗ್ಗುರ್ಂ; ಸೋಕ್ಕುರ್ಗುಂ, ಸೋಗ್ಗುರ್ಗುಂ; ಸೋಕ್ಕೆರ್, ಸೋಗ್ಗೆರ್; ಬೆದಕ್ಕುರ್ಂ, ಬೆದಗ್ಗುರ್ಂ; ಬೆದಕ್ಕುರ್ಗುಂ, ಬೆದಗ್ಗುರ್ಗುಂ; ಬೆದಕ್ಕೆರ್, ಬೆದಗ್ಗೆರ್; ನಿಲ್ಕುಂ, ನಿಲ್ಗುಂ; ನಿಲ್ಕುಗುಂ, ನಿಲ್ಗುಗುಂ; ನಿಲ್ಕೆ, ನಿಲ್ಗೆ; ಬಾಟ್ಕುಂ, ಬಾಟ್ಗುಂ; ಬಾಟ್ಕುಗುಂ, ಬಾಟ್ಗುಗುಂ; ಬಾಟ್ಕೆ, ಬಾಟ್ಗೆ; ಮಾಟ್ಕುಂ, ಮಾಟ್ಗುಂ; ಮಾಟ್ಕೆ, ಮಾಟ್ಗೆ; ಮಾಟ್ಕುಗುಂ, ಮಾಟ್ಗುಗುಂ; ನೋಂಕುಂ, ನೋಂಗುಂ; ನೋಂಕುಗುಂ, ನೋಂಗುಗುಂ; ನೋಂಕೆ, ನೋಂಗೆ; ಮಾಣ್ಕುಂ, ಮಾಣ್ಗುಂ; ಮಾಣ್ಕುಗುಂ, ಮಾಣ್ಗುಗುಂ; ಮಾಣ್ಕೆ, ಮಾಣ್ಗೆ ॥ ' ಮೊದಲಾದುವು ಇದಕ್ಕೆ ಕ್ರಮವಾಗಿ ಉದಾಹರಣೆಗಳು.

ಇಲ್ಲಿ ಪ್ರಕೃತಿವಿಶೇಷನಿರ್ದೇಶ ಮಾಡಿರುವುದರಿಂದ ' ಮಾಡುಗುಂ, ಮಾಡುಗುಗುಂ, ಮಾಡುಗೆ ' ಮೊದಲಾದುವುಗಳಲ್ಲಿ ಬರುವುದಿಲ್ಲ. ' ಗಃ ' ಎಂದು ಹೇಳಿರುವುದರಿಂದ ' ಅಗುವುದು, ಪೋಗುವುದು, ಆಗಿಂ, ಪೋಗಿಂ ' ಮೊದಲಾದುವುಗಳಲ್ಲಿ ವ ಕಾರಾದಿ ಪ್ರತ್ಯಯಗಳಿಗೆ ಬರುವುದಿಲ್ಲವೆಂದು ತಿಳಿಯುವುದು.

**ಅವತಾರಿಕೆ ೪೭೩**

ಹೀಗೆಯೇ ಕೆಲವು ಧಾತುಗಳಿಗೆ ಪ್ರತ್ಯಯನಿಮಿತ್ತವಾಗಿ ಆದೇಶವನ್ನು ವಿಧಿಸುತ್ತಾನೆ.

**ಸೂತ್ರಂ ॥ ಅವುತವೋರಿದ್ವಿ ॥ ೪೭೩ ॥**

**ಅರ್ಥ** ॥ ' ಅವು, ತವು ' ಎಂಬ ಧಾತುಗಳಿಗೆ ವ ಕಾರಾದಿ ಪ್ರತ್ಯಯವು ಪರವಾಗಿರಲು ಇ ಕಾರವು ಅಂತಾದೇಶವಾಗಿ ಬರುವುದು.

**ಉದಾಹರಣೆ** ॥ ' ಅವಿಪಂ, ತವಿಪಂ; ಅವಿಪುದು, ತವಿಪುದು; ಅವಿಪಿನಂ, ತವಿಪಿನಂ ॥ ಮೊದಲಾದುವು ಇದಕ್ಕೆ ಲಕ್ಷ್ಯಗಳು. ಇಲ್ಲಿ ಪ್ರಕೃತಿವಿಶೇಷವನ್ನು ನಿರ್ದೇಶಿಸಿರುವುದರಿಂದ —

'ಮಾಡುವಂ, ಕೂಡುವಂ' ಮೊದಲಾದ ಪ್ರಯೋಗಗಳಲ್ಲಿಯೂ ವ ಕಾರಾದಿ ಎಂದು ಹೇಳಿರುವುದರಿಂದ 'ಅವುಕುಳ್, ತಪ್ಪಂ' ಮೊದಲಾದುವುಗಳಲ್ಲಿಯೂ ಇ ಕಾರಾದೇಶವಿಲ್ಲವೆಂದು ತಿಳಿಯಬೇಕು.

**ವಿಚಾರ ೪೭೩**

ಇಲ್ಲಿ ಕೊಟ್ಟಿರುವ ಉದಾಹರಣೆಗಳಲ್ಲಿ ವ ಕಾರಕ್ಕೆ ಪ ಕಾರಾದೇಶವು ಬಂದಿದ್ದಾಗ್ಯೂ ಅದಕ್ಕೆ ಸ್ಥಾನಿವದ್ಭಾವವನ್ನಾಶ್ರಯಿಸಿ ಅನಂತರದಲ್ಲಿ ಇ ಕಾರಾದೇಶವೆಂದು ತಿಳಿಯುವುದು. ಅಥವಾ ಇ ಕಾರಾದೇಶಾನಂತರದಲ್ಲಿ — 'ಏಕದೇಶವಿಕೃತಮನನ್ಯವದ್ಭವತಿ' ಎಂಬ ನ್ಯಾಯದಿಂದ 'ಅವಿ, ತವಿ' ಎಂಬ ಇ ಕಾರಾಂತಕ್ಕೆ ಪರವಾದ ವ ಕಾರಕ್ಕೂ ಪಾದೇಶವು ಬರುವುದೆಂದು ತಿಳಿಯಬೇಕು.

**ಅವತಾರಿಕೆ ೪೭೪**

ಹೀಗೆಯೆ 'ಪಣ್' ಧಾತುವಿಗೆ ಅರ್ಥವಿಶೇಷದಲ್ಲಿ ಆಗಮವನ್ನು ವಿಧಿಸುತ್ತಾನೆ.

**ಸೂತ್ರಂ || ಪಣ ಉಃ ನಿಯೋಗೇ || ೪೭೪ ||**

( ೧ ಪಣ. ೨ ಉಃ. ೩ ನಿಯೋಗೇ )

**ಅನುವೃತ್ತಿ** || ೧ ವಿ.

**ಅರ್ಥ** || ನಿಯೋಗಾರ್ಥಕ 'ಪಣ್' ಧಾತುವಿಗೆ ವ ಕಾರಾದಿ ಪ್ರತ್ಯಯವು ಪರದಲ್ಲಿರಲು ಉ ಕಾರಾಗಮವು ಬರುವುದು.

**ಉದಾಹರಣೆ** || 'ಪಣ್ಣುವಂ, ಪಣ್ಣುವಿನಂ, ಪಣ್ಣುವನ್ನಂ ||' ಮೊದಲಾದುವು ಇದಕ್ಕೆ ಲಕ್ಷ್ಯಗಳು.

**ಪದಕೃತ್ಯ** || 'ಪಣ್' ಧಾತುವಿಗೆ ಎಂದು ಹೇಳಿರುವುದರಿಂದ ಈ ಅರ್ಥದ 'ಸೂಚಿಸು' ಧಾತುವಿಗೆ ಈ ಕಾರ್ಯವಿಲ್ಲ. ಉದಾ. : ಸೂಚಿಸುವಂ, ಸೂಚಿಸುವಿನಂ. 'ನಿಯೋಗಾರ್ಥದಲ್ಲಿರುವ' ಎಂದು ಹೇಳಿರುವುದರಿಂದ ಫಲಪರಿಪಾಕಾರ್ಥದ 'ಪಣ್' ಧಾತುವಿಗೆ ಈ ಕಾರ್ಯವಿಲ್ಲ; ಉದಾ. : ಪಣ್ವುದು, ಪಣ್ವಿನಂ. 'ವ ಕಾರಾದಿ ಪ್ರತ್ಯಯಗಳು ಪರದಲ್ಲಿರಲು' ಎಂದು ಹೇಳಿರುವುದರಿಂದ ಬೇರೆ ಪ್ರತ್ಯಯಗಳು ಪರದಲ್ಲಿರುವಾಗ ಈ ಕಾರ್ಯವಿಲ್ಲ; ಉದಾ. : ಪಣ್ದಿದಂ, ಪಣ್ದುದು.

**ವಿಚಾರ ೪೭೪**

'ಪಣ್' ಧಾತುವಿಗೆ ಫಲಪರಿಪಾಕ, ನಿಯೋಗ ಎಂಬ ಎರಡು ಅರ್ಥಗಳು. ನಿಯೋಗವೆಂದರೆ ಸೂಚನೆ, (ಸೂಚಿಸುವುದು). 'ಪಣ್' ಧಾತುವಿಗೆ ನಿಯೋಗಾರ್ಥದಲ್ಲಿರುವಾಗಲೇ ಉಗಾಗಮವನ್ನು ಹೇಳುತ್ತಾನೆ. 'ಪಣ್ ವಂ' ಎಂದಿರುವಾಗ ಈ ಸೂತ್ರದಿಂದ 'ಉ' ಆಗಮವಾಗಲು 'ಪಣ್ ಉ ವಂ' ಎಂದಾಗುವುದು. ಈಗ 'ಉಕಿ || ೮೯ ||' ಎಂಬ ಸೂತ್ರದಿಂದ ಣ ಕಾರಕ್ಕೆ ದ್ವಿತ್ವವಾಗುವುದು. ಈ ಮೇರೆಗೆ 'ಪಣ್ಣುವಂ' ಎಂಬ ರೂಪವಾಗುವುದು. ಫಲಪರಿಪಾಕಾರ್ಥದಲ್ಲಿ 'ಪಣ್ವಿನಂ, ಪಣ್ವನ್ನಂ' ಎಂಬ ರೂಪಗಳಾಗುವುವು; ಎಂದರೆ ಅಲ್ಲಿ ಉಗಾಗಮವಿಲ್ಲ. ಫಲಪರಿಪಾಕಾರ್ಥಕ 'ಪಣ್' ಧಾತುವಿಗೂ ಉಗಾಗಮವಾದ ಪ್ರಯೋಗಗಳು ಕ್ವಚಿತ್ತಾಗಿ ಕಾಣಬರುವುವು. ಉದಾ. :

* ಇಲ್ಲಿಗೆ ಮೂಲವು ಮುಗಿದಿದೆ. ಮುಂದಿನ ಭಾಗವನ್ನು ಹೊಸದಾಗಿ ಬರೆದು ಸೇರಿಸಲಾಗಿದೆ.

ಕಣ್ಣಿಂ ರಸನೆಯುನೆರ್ದೆಯುಂ
ತಿಣ್ಣಂ ತಣಿಯಿಸುವ ಪಲವು ಪೂವಿಂ ಕಾಯಿಂ
ಪಣ್ಣಿಂದೆಸೆವಿವಸ್ಕಾ ವಿರೆ
ಪಣ್ಣುವಿಸಂ ಬಾರ್ತೆಯಿಲ್ಲದೀನೇಱಲೊಳೇಂ

‘ ಉಕ್ ’ ಎಂದು ಉಕಾರವನ್ನು ‘ ಕಿತ್ ’ ಆಗಿ ಹೇಳಿರುವದರಿಂದ ‘ **ಕಿದಂತ್ಯಃ || ೨೫ ||** ’ ಎಂಬ ಸೂತ್ರದಿಂದ ಉ ಕಾರವು ಅಂತ್ಯಾವಯವವೆಂದು ತಿಳಿಯಬೇಕು.

**ಅವತಾರಿಕೆ ೪೭೫**

ದ ಕಾರಾದಿ ಪ್ರತ್ಯಯಗಳು ಪರವಲ್ಲಿರುವಾಗ ‘ ಪಣ್ ’ ಧಾತುವಿನ ಕಾರ್ಯವಿಶೇಷವನ್ನು ಹೇಳುತ್ತಾನೆ.

**ಸೂತ್ರಂ || ಣೆಗ್ದಿ || ೪೭೫ ||**

( ೧. ನೆಕ್. ೨. ದಿ. )

**ಅನುವೃತ್ತಿ ||** ೧. ಪಣಃ ೨. ನಿಯೋಗೇ.

**ವೃತ್ತಿ || ನಿಯೋಗಾರ್ಥದಲ್ಲಿರುವ ‘ ಪಣ್ ’ ಧಾತುವಿಗೆ[೧] ದ ಕಾರಾದಿ ಪ್ರತ್ಯಯಗಳು ಪರದಲ್ಲಿರಲು ‘ ಣೆ ’ ಶಬ್ದವು ( ಣೆಕ್ ) ಆಗಮವಾಗುವುದು.**

**ಪ್ರಯೋಗ ||** ಪಣ್ಣೆದಂ, ಪಣ್ಣೆದಪಂ, ಪಣ್ಣೆದುದು, ಪಣ್ಣೆದಳ್.[೨]

**ಪದಕೃತ್ಯ ||** ‘ ದ ಕಾರಾದಿ ಪ್ರತ್ಯಯಗಳು ’ ಎಂದು ಹೇಳಿದುದರಿಂದ ‘ ಪಣ್ಣುತೆ, ಪಣ್ಣುತ್ತೆ ’ ಮುಂತಾದ ರೂಪಗಳಲ್ಲಿಯೂ ‘ ನಿಯೋಗಾರ್ಥದಲ್ಲಿರುವ ’ ಎಂದು ಹೇಳಿದುದರಿಂದ ಫಲಪರಿಪಾಕಾರ್ಥಕ ‘ ಪಣ್ ’ ಧಾತುವಿನ ‘ ಪಣ್ತುದು, ಪಣ್ತಪುದು ’ ಎಂಬ ರೂಪಗಳಲ್ಲಿಯೂ ‘ ಣೆ ’ ಆಗಮವು ಬರುವುದಿಲ್ಲ.

**ವಿಚಾರ ೪೭೫**

ಸೂತ್ರದಲ್ಲಿ ‘ ಣೆಕ್ ’ ಎಂದು ಆಗಮವು ಹೇಳಿದೆಯಷ್ಟೇ; ಅದರಲ್ಲಿ ಣ ಕಾರವು ಏಕೆ ? ‘ **ಇಕ್** ’ ಎಂದು ಹೇಳಿದ್ದರೂ ಆಗಬಹುದಲ್ಲವೇ ? ಆಗಲೂ ‘ ಪಣ್ಣಿದಂ ’ ಮೊದಲಾದ ರೂಪಗಳಾಗುವುದಕ್ಕೆ ಅಡ್ಡಿಯಿರಲಿಲ್ಲ; ಹೇಗಂದರೆ — ‘ ಪಣ್ ’ ಧಾತುವಿನ ಮುಂದೆ ಇ ಕಾರಾಗಮವು ಬರಲು ‘ **ಹ್ರಸ್ವಾತ್.... || ೫೩ ||** ’ ಎಂಬ ಸೂತ್ರದಿಂದ ದ್ವಿತ್ವವನ್ನು ತಂದು ( ಪಣ್+ಣ್+ಇ ) ಇಲ್ಲವೆ ಪೂರ್ವಸೂತ್ರ (೪೭೪) ದಿಂದ ಉಗಾಗಮವು ಬರಲು ‘ **ಉಕಿ || ೬೯ ||** ’ ಎಂಬ ಸೂತ್ರದಿಂದ ದ್ವಿತ್ವವು ಬಂದಬಳಿಕ ‘ **ಇದುತಃ || ೪೭೬ ||** ’ ಎಂಬ ಸೂತ್ರದಿಂದ ಇ ಕಾರಾದೇಶವನ್ನು **ಮಾಡಿ ( ಪಣ್+ಣ್+ಉ — ಪಣ್+ಣ್+ಇ )** ‘ ಪಣ್ಣಿದಂ ’ ಮೊದಲಾದ ರೂಪಗಳನ್ನು ಸಿದ್ಧಿಸಬಹುದು—ಎಂದು ಆಕ್ಷೇಪಿಸಬಹುದು. ಇದಕ್ಕೆ ಸಮಾಧಾನ ವೇನಂದರೆ — ‘ **ಇಕ್** ’ ಎಂದು ಆಗಮವನ್ನು ಹೇಳಿದರೆ **ಕಿದಂತ್ಯಃ || ೨೫ ||** ಎಂಬ ಸೂತ್ರ ದಿಂದ ಇಗಾಗಮದ ಇ **ಕಾರವು ಲಿಂಗಾಂತ್ಯವಾದುದರಿಂದ ಧಾತುವಿನ ಣ ಕಾರವು ಲಿಂಗಾಂತ್ಯ**

ಪಾಠಾಂತರ : ೧. ಶ. ದ. **ಧಾತುಪ್ರಕರಣದಲ್ಲಿ ಪಣ್ ( ಪಣ್ಣು ) — ಸಜ್ಜೀಕರಣೇ ಫಲೇ ಚ ಎಂದು ಹೇಳಿದೆ. ಸೂಚನಾರ್ಥವು ಹೇಳಿಲ್ಲ. ೨. ಪಣ್ಣೆದರ್**

ವಾಗದೆ ದ್ವಿತ್ವವನ್ನು ಹೊಂದದಿರುವುದರಿಂದ 'ಪಣೆದಂ' ಮೊದಲಾದ ಅನಿಷ್ಟ ರೂಪಗಳು ಉಂಟಾಗುವುವು. ಇನ್ನು ಉಗಾಗಮವನ್ನು ಮಾಡಿ ದ್ವಿತ್ವವನ್ನು ತರುವೆನೆಂದು ಹೇಳಿದರೆ ಉಗಾಗಮವು ವ ಕಾರಾದಿ ಪ್ರತ್ಯಯವು ಪರವಾದಾಗಲೆ ಬರುವುದಲ್ಲದೆ ದ ಕಾರಾದಿ ಪ್ರತ್ಯಯವು ಪರವಾದಾಗ ಬಾರದಿರುವುದರಿಂದ ದ್ವಿತ್ವಕ್ಕೆ ಆಸ್ಪದವಿಲ್ಲ. ಆದುದರಿಂದ 'ಪಣ್ಣಿದಂ' ಮೊದಲಾದ ರೂಪಗಳಲ್ಲಿ ಣ ಕಾರ ದ್ವಿತ್ವಕ್ಕೋಸ್ಕರ 'ಣಿಕ್' ಎಂದು ಣ ಕಾರವನ್ನು ಸೇರಿಸಿ ಹೇಳಬೇಕಾಯಿತೆಂದು ತಿಳಿಯಬೇಕು.

**ಅವತಾರಿಕೆ ೪೭೬**

ಉಕಾರಾಂತ ಧಾತುಗಳ ಕಾರ್ಯವಿಶೇಷವು:—

**ಸೂತ್ರಂ || ಇದುತಃ || ೪೭೬ ||**

(೧. ಇತ್, ೨. ಉತಃ)

**ಅನುವೃತ್ತಿ** || ೧. ದಿ.

**ವೃತ್ತಿ** || ದ ಕಾರಾದಿ ಪ್ರತ್ಯಯಗಳು ಪರದಲ್ಲಿರಲು ಉಕಾರಾಂತ ಧಾತುಗಳ ಅಂತ್ಯ ಉ ಕಾರಕ್ಕೆ ಇ ಕಾರಾದೇಶವಾಗುವುದು.

**ಪ್ರಯೋಗ** || ಮಾಡಿದಂ, ನೋಡಿದಂ, ಬೆಸಸಿದಂ; ಮಾಡಿದಪಂ, ನೋಡಿದಪಂ, ಬೆಸಸಿದಪಂ.

**ಪದಕೃತ್ಯ** || 'ಉಕಾರಾಂತ ಧಾತುಗಳ' ಎಂದು ಹೇಳಿದುದರಿಂದ 'ತೆಗೆದಂ, ಬಗೆದಂ' ಮೊದಲಾದೆಡೆಯಲ್ಲಿಯೂ 'ದ ಕಾರಾದಿ ಪ್ರತ್ಯಯಗಳು' ಎಂದು ಹೇಳಿದುದರಿಂದ 'ಮಾಡುವಂ, ಕೂಡುವಂ' ಮೊದಲಾದೆಡೆಗಳಲ್ಲಿಯೂ ಇ ಕಾರಾದೇಶವಿಲ್ಲ.

**ಅವತಾರಿಕೆ ೪೭೭**

'ಈ, ಸಾ' ಧಾತುಗಳ ಕಾರ್ಯವಿಶೇಷವು :—

**ಸೂತ್ರಂ || ಈಸಸ್ತುಗ್ಘ್ರಸ್ವಶ್ಚ || ೪೭೭ ||**

(೧. ಈಸಃ, ೨. ತುಕ್, ೩. ಹ್ರಸ್ವಃ, ೪. ಚ.)

**ಅನುವೃತ್ತಿ** || ೧. ದಿ.

**ವೃತ್ತಿ** || ಈ, ಸಾ, ಧಾತುಗಳಿಗೆ ದ ಕಾರಾದಿ ಪ್ರತ್ಯಯಗಳು ಪರದಲ್ಲಿರಲು ತ ಕಾರವು ಅಂತ್ಯಾವಯವವಾಗಿ ಆಗಮವಾಗುವುದು; (ಅಂತ್ಯಸ್ವರಕ್ಕೆ) ಹ್ರಸ್ವಾದೇಶವೂ ಆಗುವುದು

**ಪ್ರಯೋಗ** || ಇತ್ತಂ, ಇತ್ತಪಂ, ಇತ್ತು; ಸತ್ತಂ, ಸತ್ತಪಂ, ಸತ್ತು.

**ಪದಕೃತ್ಯ** || 'ಈ, ಸಾ ಧಾತುಗಳಿಗೆ' ಎಂದು ಹೇಳಿದುದರಿಂದ 'ಕೊೞ' ಮೊದಲಾದ ಧಾತುಗಳಿಗೆ ಈ ಕಾರ್ಯವಿಲ್ಲ; ಉದಾ. : ಕೊೞದಂ, ಕೊೞದಪಂ.

**ವಿಚಾರ ೪೭೭**

ಸೂತ್ರದಲ್ಲಿ 'ಈಸಃ' ಎಂಬ ರೂಪವಿದೆ. ಅದು ಹೇಗೆ ಆಯಿತು? ಈ, ಸಾ ಇವುಗಳ ಇತರೇತರ ಯೋಗದ್ವಂದ್ವವನ್ನು ಮಾಡಿದರೆ 'ಈಸಯೋಃ' ಎಂದೂ ಸಮಾಹಾರ ದ್ವಂದ್ವವನ್ನು ಮಾಡಿದರೆ 'ಈಸಸ್ಯ' ಎಂದೂ ಆಗಬೇಕಲ್ಲವೇ? ಈ ಆಕ್ಷೇಪಣೆಗೆ ಸಮಾಧಾನವೇನೆಂದರೆ— ಇಲ್ಲಿ ಸಮಾಹಾರ ದ್ವಂದ್ವವನ್ನೇ ಮಾಡಬೇಕು; ಸಮಾಹಾರದಲ್ಲಿ ಹ್ರಸ್ವವು ಅವಶ್ಯವಾಗಿ ಆಗ

ಬೇಕಾದುದಾದರೂ 'ಭೂತಪೂರ್ವಗತಿ'ಯ ಆಶ್ರಯಣದಿಂದ ಕೊನೆಯಲ್ಲಿ ಆ ಕಾರವಿದೆಯೆಂದು ( ಈ, ಸಾ ) ಗ್ರಹಿಸಲು ಕೊನೆಯ ಆ ಕಾರಕ್ಕೆ ಲೋಪವು ಸಂಭವಿಸುವುದರಿಂದ ' ಈಸಃ ' ಎಂಬ ರೂಪವಾಗುವುದೆಂದು ತಿಳಿಯಬೇಕು. ಇಲ್ಲವೆ ಇಲ್ಲಿ ಸಮಾಹಾರವಿವಕ್ಷೆಯಿಂದ ಏಕವಚನವಲ್ಲ. ಸಾಮಾನ್ಯವಿವಕ್ಷೆಯಿಂದ ಏಕವಚನವೆಂದು ತಿಳಿದರೆ ಹ್ರಸ್ವಾದೇಶವು ಆಗಲೇಬೇಕೆಂಬ ನಿರ್ಬಂಧ ವಿಲ್ಲ. ಆಗಲೂ ' ಈಸಃ ' ಎಂಬ ರೂಪವಾಗುವುದು. ಇಲ್ಲವೆ ' ಇಯಾ, ಸಹಿತಃ, ಸಾಃ, ಈಸಾಃ, ತಸ್ಯ, ಈಸಃ ' ಎಂಬ ಮಧ್ಯಮಪದಲೋಪಿ ಸಮಾಸದಿಂದಲೂ ' ಈಸಃ ' ಎಂಬ ರೂಪವನ್ನು ಸಾಧಿಸಿಕೊಳ್ಳಬಹುದು.

**ಅವತಾರಿಕೆ ೪೭೮**

' ಕೀಲ್ ' ಮೊದಲಾದ ಧಾತುಗಳ ಕಾರ್ಯವಿಶೇಷವು :—

**ಸೂತ್ರಂ || ಕೀಲ್ಏಲ್ಬೀಲ್ಆಲ್ಕಾಣಃ || ೪೭೮ ||**

( ಒಂದೇ ಪದ )

**ಅನುವೃತ್ತಿ** || ೧. ದಿ, ೨. ಹ್ರಸ್ವ.

**ವೃತ್ತಿ || ದ ಕಾರಾದಿ ಪ್ರತ್ಯಯಗಳು ಪರವಾಗಲು ' ಕೀಲ್, ಏಲ್, ಬೀಲ್, ಆಲ್, ಕಾಣ್ ' ಎಂಬೀ ಧಾತುಗಳಿಗೆ ( ಧಾತುಗಳ ಸ್ವರಕ್ಕೆ ) ಹ್ರಸ್ವಾದೇಶವಾಗುವುದು.**

**ಪ್ರಯೋಗ** || ಕಿಲ್ದಂ, ಕಿಲ್ದಪಂ, ಕಿಲ್ದು; ಎಲ್ದಂ, ಎಲ್ದಪಂ, ಎಲ್ದು; ಬಿಲ್ದಂ, ಬಿಲ್ದಪಂ, ಬಿಲ್ದು; ಅಲ್ದಂ, ಅಲ್ದಪಂ, ಅಲ್ದು; ಕಣ್ದಂ, ಕಣ್ದಪಂ, ಕಣ್ದು.

**ಪದಕೃತ್ಯ** || ' ಕೀಲ್.... ' ಎಂಬೀ ಧಾತುಗಳಿಗೆ ಎಂದು ಹೇಳಿದುದರಿಂದ ' ಬಾಲ್ದಂ, ಪೂಲ್ದಂ ' ಮೊದಲಾದೆಡೆಗಳಲ್ಲಿಯೂ ದ ಕಾರಾದಿ ಪ್ರತ್ಯಯಗಳು ಪರವಾಗಲು ಎಂದು ಹೇಳಿ ದುದರಿಂದ ' ಕೀಲ್ವಂ, ಏಲ್ವಂ, ಬೀಲ್ವಂ, ಆಲ್ವಂ, ಕಾಣ್ಬಂ ' ಎಂಬೆಡೆಗಳಲ್ಲಿಯೂ ಈ ಕಾರ್ಯವಿಲ್ಲ.

**ವಿಚಾರ ೪೭೮**

ಈ ಸೂತ್ರಕ್ಕೆ ಪೂರ್ವಸೂತ್ರ ( ೪೭೭ ) ದಿಂದ — ವಿಧೇಯಗಳಾದ ' ಹ್ರಸ್ವಃ ಮತ್ತು ತಕ್ ' ಎಂಬ ಎರಡನ್ನೂ ತೆಗೆದುಕೊಳ್ಳದೆ ' ತಕ್ ' ಎಂಬ ಒಂದನ್ನು ಬಿಟ್ಟು ' ಹ್ರಸ್ವಃ ' ಎಂಬುದೊಂದನ್ನೇ ಅನುವೃತ್ತಿ ಮಾಡಿಕೊಳ್ಳುವುದೇಕೆ ? **' ಸನ್ನಿಯೋಗಶಿಷ್ಟಾನಾಂ ಸಹ ವಾ ಪ್ರವೃತ್ತಿಃ ಸಹ ವಾ ನಿವೃತ್ತಿಃ '** ಎಂಬ ಸನ್ನಿಯೋಗಪರಿಭಾಷೆಯಿಂದ ಎರಡಕ್ಕೂ ಅನುವೃತ್ತಿ ಇರಬೇಕಲ್ಲವೇ ? ಎಂದು ಆಕ್ಷೇಪಣೆಯುಂಟಾದರೆ ಸಮಾಧಾನವೇನೆಂದರೆ — ಪ್ರವೃತ್ತಿ, ನಿವೃತ್ತಿ ಗಳು ವಿವಕ್ಷಾಧೀನಗಳಾದುದರಿಂದ ಇಲ್ಲಿ ' ಸನ್ನಿಯೋಗಪರಿಭಾಷೆ ' ಯನ್ನು ಸ್ವೀಕರಿಸಿಲ್ಲವೆಂದು ತಿಳಿಯಬೇಕು.

ಈ ಸೂತ್ರದಲ್ಲಿ ' ದಿ ' ( ದ ಕಾರಾದಿ ಪ್ರತ್ಯಯಗಳು ಪರವಾಗಲು ) ಎಂಬ ಪದದ ಅನು ವೃತ್ತಿಯಿರುವುದರಿಂದ ದ ಕಾರಾದಿ ಪ್ರತ್ಯಯಗಳು ಪರವಾದಾಗಲೇ ಹ್ರಸ್ವಾದೇಶವಾಗುವುದು ರೂಢವಾಗಿದ್ದರೂ ಕೆಲವೆಡೆ ಅಲ್-ಪ್ರತ್ಯಯವು ಪರವಾದಾಗಲೂ ಹ್ರಸ್ವಾದೇಶವು ಕಾಣ ಬರುವುದು.

**ಪ್ರಯೋಗ ||**

ತುಂಗಘನಸ್ತನಂ ಬೆಮರೆ ನೋಲುದನಾಂ ತೆಱೆದಿರ್ದೊಡತ್ತಲಿ
ರ್ದಂಗಜಸನ್ನಿಭಂ ತಲೆಯನೇಕೆಗೆ ತೂಗಿದನೆಂದೊಡಕ್ಕ ಕೇಳ್
ಅಂಗನೆ ನಿನ್ನ ಬೀಗಿ ಬಳೆದಿರ್ದ ಕುಚಂಗಳ ಮಧ್ಯದಲ್ಲಿ ತಾಂ
ಪಿಂಗದೆ ನಟ್ಟ ದಿಟ್ಟಿಯನದಂ ಕಿಱಲೆಂದನುಗೆಯ್ದು ತೂಗಿದಂ

ಮತ್ತು

ಅಱಲಿಸಿ ಕುಮುದಿನಿಯನಿಳಾ
ವಳಯಕ್ಕತಿತಾಪಮಿತ್ತೆ ನಿಮು ತಕ್ಕರ ಸಂ
ಗಳಿಗಣಕನೊಂದು ಕಡಲೊಳ್
ಬಿಱಲೆಂದನುಗೆಯ್ದನರ್ಕನಸ್ತಾಚಲದಿಂ

ಈ ಸೂತ್ರದಲ್ಲಿ 'ಕೀಲ್' ಮೊದಲಾದುವುಗಳೊಡನೆ 'ಬಾಲ್' ಧಾತುವು ಸೇರದಿದ್ದರೂ ಅದಕ್ಕೂ ಈ ಹ್ರಸ್ವಾದೇಶ ಕಾರ್ಯವನ್ನು ವೈಕಲ್ಪಿಕವಾಗಿ ಕೆಲವರು ಹೇಳುವರು. ಉದಾ. : ಬಾಲ್ದಂ, ಬಲ್ದಂ; ಬಾಲ್ದಳ್, ಬಲ್ದಳ್; ಬಾಲ್ದುದು, ಬಲ್ದುದು; ಬಾಲ್ದು, ಬಲ್ದು; ಬಾಲ್ದೊಡೆ, ಬಲ್ದೊಡೆ.

'ಕಿಲ್ತಂ, ಕಿಲ್ತಪಂ' ಮೊದಲಾದೆಡೆಗಳಲ್ಲಿ 'ಕೀಲ್' ಧಾತುವು ಕವಲಾದಿಗಣಕ್ಕೆ ಸೇರಿರುವುದರಿಂದ '**ಕವಲಾದಿಭ್ಯಸ್ತಃ || ೫೦೭ ||**' ಎಂಬ ಸೂತ್ರದಿಂದ ದ ಕಾರಕ್ಕೆ ತ ಕಾರಾದೇಶವಾಗಿದೆ.

'ಕಣ್ಡಂ, ಕಣ್ಡಪಂ' ಮೊದಲಾದೆಡೆಗಳಲ್ಲಿ '**ಉಣ್ಕೊಳ್ಕಣೋ ದೋ ಡಃ || ೫೦೫ ||**' ಎಂಬ ಸೂತ್ರದಿಂದ ದ ಕಾರಕ್ಕೆ ಡ ಕಾರಾದೇಶವಾಗಿದೆ.

ಪ್ರತ್ಯುದಾಹರಣವಾದ '**ಕಾಣ್ಬಂ**' ಎಂಬಲ್ಲಿ '**ಣಃ || ೫೧೮ ||**' ಎಂಬ ಸೂತ್ರದಿಂದ ವ ಕಾರಕ್ಕೆ ಬ ಕಾರಾದೇಶವಾಗಿದೆ.

**ಅವತಾರಿಕೆ ೪೭೯**

'ಬೇ, ಮಿಾ, ನೋ' ಧಾತುಗಳ ಕಾರ್ಯವಿಶೇಷವು :—

**ಸೂತ್ರಂ || ಬೇಮಿಾನೋರ್ನಕ್ಚ || ೪೭೯ ||**

( ೧. ಬೇಮಿಾನೋ, ೨. ನಕ್, ೩. ಚ. )

**ಅನುವೃತ್ತಿ ||** ೧. ಹ್ರಸ್ವಃ, ೨. ದಿ.

**ವೃತ್ತಿ ||** **ದ ಕಾರಾದಿ ಪ್ರತ್ಯಯಗಳು ಪರವಾಗಲು 'ಬೇ, ಮಿಾ, ನೋ' ಎಂಬೀ ಧಾತುಗಳಿಗೆ ( ಅಂತ್ಯಸ್ವರಕ್ಕೆ ) ಹ್ರಸ್ವಾದೇಶವೂ ( ಅಂತ್ಯಾವಯವವಾಗಿ ) ನ ಕಾರಾಗಮವೂ ಆಗುವುವು.**

**ಪ್ರಯೋಗ ||** ಬೆಂದಂ, ಬೆಂದಪಂ, ಬೆಂದು; ಮಿಂದಂ, ಮಿಂದಪಂ, ಮಿಂದು; ನೊಂದಂ, ನೊಂದಪಂ, ನೊಂದು.

**ಪದಕೃತ್ಯ ||** 'ಬೇಮಿಾನೋಃ' ಎಂದು ಹೇಳಿದುದರಿಂದ 'ತೇದಂ, ಕೋದಂ' ಮೊದಲಾದೆಡೆಗಳಲ್ಲಿಯೂ 'ದಿ' ( ದ ಕಾರಾದಿ ಪ್ರತ್ಯಯಗಳು ಪರವಾಗಲು ) ಎಂದು ಹೇಳಿದುದರಿಂದ 'ಬೇವಂ, ಮಿಾವಂ, ನೋವಂ' ಮೊದಲಾದೆಡೆಗಳಲ್ಲಿಯೂ ಈ ಕಾರ್ಯಗಳಾಗುವುದಿಲ್ಲ.

**ವಿಚಾರ ೪೭೯**

'ಶದನ್ತ್ಯೋವಾವರ್ಗೇ ॥ ೫೦ ॥' ಎಂಬ ಸೂತ್ರದಿಂದ ಅನುಸ್ವಾರಾದೇಶವು ವೈಕಲ್ಪಿಕವಾಗಿರುವುದರಿಂದ 'ಬೆಸ್ದಂ, ಬೆಂದಂ; ಬೆಸ್ದಪಂ, ಬೆಂದಪಂ' ಮೊದಲಾದ ವರ್ಗಪಂಚಮ ಘಟಿತರೂಪ, ಅನುಸ್ವಾರಘಟಿತರೂಪಗಳೆರಡೂ ಆಗುವುವು.

**ಅವತಾರಿಕೆ ೪೮೦**

'ತವು' ಧಾತುವಿನ ಕಾರ್ಯವಿಶೇಷವು :—

**ಸೂತ್ರಂ ॥ ತವೋರ್ಮೋಃ ಪಃ ॥ ೪೮೦ ॥**

( ೧. ತವೋಃ, ೨. ಮೋಃ, ೩. ಪಃ. )

**ಅನುವೃತ್ತಿ** ॥ ೧. ದಿ.

**ವೃತ್ತಿ ॥ ದ ಕಾರಾದಿ ಪ್ರತ್ಯಯಗಳು ಪರವಾಗಲು 'ತವು' ಧಾತುವಿನ 'ಮು' ವಿಗೆ ('ವು' ಎಂಬ ಭಾಗಕ್ಕೆ) ಪ ಕಾರಾದೇಶವಾಗುವುದು.**

**ಪ್ರಯೋಗ** ॥ ತಪ್ಪಂ ( ತವು+ದ+ಅಮ್ = ತಪ್+ಪ+ಅಮ್), ತಪ್ಪಪಂ.

**ಪದಕೃತ್ಯ** ॥ 'ತವೋಃ' ('ತವು' ಧಾತುವಿನ) ಎಂದು ಹೇಳಿದುದರಿಂದ 'ಅವಿದಂ' (ಅವುಧಾ) ಎಂಬಲ್ಲಿಯೂ 'ದಿ' (ದ ಕಾರಾದಿ ಪ್ರತ್ಯಯಗಳು ಪರವಾಗಲು) ಎಂದು ಹೇಳಿದುದರಿಂದ 'ತವಿಪಂ' ಎಂಬಲ್ಲಿಯೂ ಈ ಪ ಕಾರಾದೇಶ ಕಾರ್ಯವಿಲ್ಲ.

**ವಿಚಾರ ೪೮೦**

ಶಬ್ದದಲ್ಲಿ ಅಂತ್ಯವ್ಯಂಜನವನ್ನು ಹಿಡಿದು ಮುಂದಿನ ಎಲ್ಲ ಭಾಗಕ್ಕೆ '**ಮುರಂತ್ಯ ವ್ಯಂಜನಾದಿ** ॥ ೧೩ ॥' ಎಂಬ ಸೂತ್ರದಿಂದ 'ಮು' ಸಂಜ್ಞೆ ಹೇಳಿದೆ. 'ತವು' ಧಾತುವಿನಲ್ಲಿ ಅಂತ್ಯ ವ್ಯಂಜನವು ವ ಕಾರವು. ಅದನ್ನು ಹಿಡಿದು ಮುಂದಿನ ಭಾಗವೆಂದರೆ 'ವು' ಎಂಬುದು. 'ತವು' ಧಾತುವಿನಲ್ಲ 'ವು' ಎಂಬುದಕ್ಕೆ 'ಮು' ಸಂಜ್ಞೆ ಬರುವುದು. ಈ 'ವು' ಎಂಬ ಭಾಗಕ್ಕೇ ಪ ಕಾರಾದೇಶವು ಇಲ್ಲ ಬೇಕಾಗಿರುವುದರಿಂದ ಸೂತ್ರದಲ್ಲ 'ಮೋಃ' ಎಂದು ಹೇಳಿದೆ.

'ತವು, ದ, ಅಮ್' ಎಂದಿರಲು ಈ ಸೂತ್ರದಿಂದ ಧಾತುವಿನ ಕೊನೆಯ 'ವು' ಎಂಬ ಭಾಗಕ್ಕೆ ಪ ಕಾರಾದೇಶವಾಗಲು 'ತಪ್, ದ, ಅಮ್' ಎಂದಾಗುವುದು. ಬಳಿಕ '**ವರ್ಗಪ್ರಥಮಾತ್ಪೂರ್ವಃ ॥ ೫೦೬ ॥**' ಎಂಬ ಸೂತ್ರದಿಂದ ದ ಕಾರಕ್ಕೆ ಪ ಕಾರಾದೇಶವಾಗಲು 'ತಪ್, ಪ, ಅಮ್' ಎಂದಾಗುವುದು. ಬಳಿಕ ಸಂಧಿಯಿಂದ 'ತಪ್ಪಂ' ಎಂಬ ರೂಪವಾಗುವುದು. 'ತಪ್ಪಪಂ' ಎಂಬುದೂ ಹೀಗೆಯೇ.

**ಅವತಾರಿಕೆ ೪೮೧**

'ಮುದು' ಧಾತುವಿನ ಕಾರ್ಯವಿಶೇಷವು :—

**ಸೂತ್ರಂ ॥ ಮುದೋಸ್ತಃ ॥ ೪೮೧ ॥**

( ೧. ಮುದೋಃ, ೨. ತಃ )

**ಅನುವೃತ್ತಿ** ॥ ೧. ದಿ, ೨. ಮೋಃ.

**ವೃತ್ತಿ ॥ ದ ಕಾರಾದಿ ಪ್ರತ್ಯಯಗಳು ಪರವಾಗಲು 'ಮುದು' ಧಾತುವಿನ 'ದು' ಭಾಗಕ್ಕೆ ತ ಕಾರಾದೇಶವಾಗುವುದು.**

**ಪ್ರಯೋಗ** || ಮುತ್ತಂ, ಮುತ್ತಪಂ, ಮುತ್ತು.

**ವಿಚಾರ ४೮೧**

' ಮುದು, ದ, ಅಮ್ ' ಈ ಸೂತ್ರದಿಂದ ' ಮುತ್, ದ, ಅಮ್ ' ' **ವರ್ಗಪ್ರಥಮಾತ್** || ೫೦೬ || ' ಎಂಬುದರಿಂದ ' ಮುತ್, ತ, ಅಮ್ ' ಸಂಧಿಯಿಂದ ' ಮುತ್ತಮ್ '.

**ಅವತಾರಿಕೆ ४೮೨**

' ಮಿದಿ ' ಧಾತುವಿನ ಕಾರ್ಯವಿಶೇಷವು :—

**ಸೂತ್ರಂ || ಮಿದೇರವಘಾತೇ || ४೮೨ ||**

( ೧. ಮಿದೇಃ, ೨. ಅವಘಾತೇ )

**ಅನುವೃತ್ತಿ** || ೧. ದಿ, ೨. ದೋಃ, ೩. ತಃ.

**ವೃತ್ತಿ** || **ದ ಕಾರಾದಿ ಪ್ರತ್ಯಯಗಳು ಪರವಾಗಲು ಅವಘಾತಾರ್ಥದಲ್ಲಿದ್ದ ' ಮಿದಿ ' ಧಾತುವಿನ ' ದಿ ' ಎಂಬ ಭಾಗಕ್ಕೆ ತ ಕಾರಾದೇಶವಾಗುವುದು.**

**ಪ್ರಯೋಗ** || ಮಿತ್ತಂ ( ಮಿದಿ, ದ, ಅಮ್— ಮಿತ್, ದ, ಅಮ್— ಮಿತ್, ತ, ಅಮ್— ಮಿತ್ತಂ ), ಮಿತ್ತಪಂ, ಮಿತ್ತು.

**ಪದಕೃತ್ಯ** || ಮಿದೇಃ (ಮಿದಿ ಧಾತುವಿನ) ಎಂದು ಹೇಳಿದುದರಿಂದ ' ಕುಮ್ಮು ' ಧಾತುವು ಅವಘಾತಾರ್ಥವಲ್ಲದ್ದರೂ ಅದಕ್ಕೆ ಈ ಕಾರ್ಯವಿಲ್ಲ. ಅವಘಾತೇ ( ಅವಘಾತಾರ್ಥದಲ್ಲಿದ್ದ ) ಎಂದು ಹೇಳಿದುದರಿಂದ ' ಕಾಲಿನಿಂದ ಇಲ್ಲವೆ ಕೈಯಿಂದ ಮರ್ದಿಸು ' ಎಂಬರ್ಥದಲ್ಲಿ ' ಮಿದಿದಂ, ಮಿದಿದಳ್ ' ಎಂಬ ರೂಪಗಳೇ ಆಗುವುವು. ' ದಿ ' ( ದ ಕಾರಾದಿ ಪ್ರತ್ಯಯವು ಪರವಾಗಲು ) ಎಂದು ಅನುವೃತ್ತಿ ಇರುವುದರಿಂದ ' ಮಿದಿಪಂ, ಮಿದಿವಳ್ ' ಎಂಬ ರೂಪಗಳಾಗಲು ಬಾಧೆ ಇಲ್ಲ.

**ವಿಚಾರ ४೮೨**

ಅವಘಾತ — ಅವಹನನ — ಎಂದರೆ ಮುಸಲಕ್ರಿಯೆ, ಒನಕೆಯಿಂದ ಕುಟ್ಟುವುದು; ಈ ಅರ್ಥದಲ್ಲಿಯೂ ಮರ್ದನಾರ್ಥದಲ್ಲಿಯೂ ' ಮಿದಿ ' ಧಾತುವುಂಟು. ಅವಘಾತಾರ್ಥಕ ಮಿದಿ ಧಾತುವಿನ ' ದಿ ' ಭಾಗಕ್ಕೆ ತ ಕಾರಾದೇಶವೆಂದು ತಿಳಿಯಬೇಕು. ಆದುದರಿಂದ ' ಮಿತ್ತಂ ' ಎಂದರೆ ಕುಟ್ಟಿದನು, ' ಮಿದಿದಂ ' ಎಂದರೆ ಮರ್ದಿಸಿದನು, ಎಂದು ಅರ್ಥವು.

**ಅವತಾರಿಕೆ ४೮೩**

' ಎಟ್ಟುಉ, ಆಸಉ, ಬೇಸಉ ' ಧಾತುಗಳ ಕಾರ್ಯವಿಶೇಷವು :—

**ಸೂತ್ರಂ || ಎಟ್ಟುಉಚ್ಚಾಸಉಬೇಸಉಶೋಃ || ४೮೩ ||**

**ಅನುವೃತ್ತಿ** || ೧. ದಿ, ೨. ದೋಃ, ೩. ತಃ.

**ವೃತ್ತಿ** || **ದ ಕಾರಾದಿ ಪ್ರತ್ಯಯಗಳು ಪರದಲ್ಲಿರಲು ಎಟ್ಟುಉ, ಆಸಉ, ಬೇಸಉ ಧಾತುಗಳ ' ಉ ' ಎಂಬ ಭಾಗಕ್ಕೆ ತ ಕಾರಾದೇಶವಾಗುವುದು.**

**ಪ್ರಯೋಗ** || ಎಟ್ಟುತ್ತಂ, ( ಎಟ್ಟುಉ, ದ, ಅಮ್— ಎಟ್ಟುತ್, ದ, ಅಮ್— ಎಟ್ಟುತ್, ತ, ಅಮ್— ಎಟ್ಟುತ್ತಂ ) ಎಟ್ಟುತ್ತಪಂ, ಎಟ್ಟುತ್ತು; ಆಸತ್ತಂ, ಆಸತ್ತಪಂ, ಆಸತ್ತು; ಬೇಸತ್ತಂ, ಬೇಸತ್ತಪಂ, ಬೇಸತ್ತು.

**ಪದಕೃತ್ಯ ||** ‘ ಎಚ್ಚಱು.... ಧಾತುಗಳ ’ ಎಂದು ಹೇಳಿದುದರಿಂದ ‘ ಕೆದಱು, ಬೆದಱು ’ ಮೊದಲಾದ ಬೇರೆ ಱ್ವಂತ ಧಾತುಗಳಿಗೆ ಈ ಕಾರ್ಯವಿಲ್ಲ. ಉದಾ. : ಕೆದಱಿದಂ, ಬೆದಱಿದಂ.

**ಅವತಾರಿಕೆ ೪೮೪**

ಕೆಲವು ‘ ಱು ’ ಶಬ್ದಾಂತ್ಯ ಧಾತುಗಳ ಕಾರ್ಯವಿಶೇಷವು :—

**ಸೂತ್ರಂ || ಱೋರ್ಲಘ್ವಾದೇರ್ದ್ವಿಸ್ವರಸ್ಯ || ೪೮೪ ||**

( ೧. ಱೋಃ, ೨. ಲಘ್ವಾದೇಃ, ೩. ದ್ವಿಸ್ವರಸ್ಯ )

**ಅನುವೃತ್ತಿ ||** ೧. ದಿ, ೨. ದೋಃ, ೩. ತಃ.

**ವೃತ್ತಿ || ದ ಕಾರಾದಿ ಪ್ರತ್ಯಯಗಳು ಪರದಲ್ಲಿರಲು ಲಘ್ವಾದಿಗಳೂ ದ್ವಿಸ್ವರಗಳೂ ಆದ ‘ ಱು ’ ಶಬ್ದಾಂತ್ಯ ಧಾತುಗಳ ಕೊನೆಯ ‘ ಱು ’ ಎಂಬ ಭಾಗಕ್ಕೆ ತ ಕಾರಾದೇಶವಾಗುವುದು.**

**ಪ್ರಯೋಗ ||** ತೆತ್ತಂ, ತೆತ್ತಪಂ. ತೆತ್ತು; ಕೆತ್ತಂ, ಕೆತ್ತಪಂ, ಕೆತ್ತು; ಪೊತ್ತಂ, ಪೊತ್ತಪಂ. ಪೊತ್ತು.

**ಪದಕೃತ್ಯ ||** ‘ ಱೋಃ ’ ( ಱು ಎಂಬ ಭಾಗಕ್ಕೆ ) ಎಂದು ಹೇಳಿದುದರಿಂದ ‘ ಇಱಿದಂ. ತಿಱಿದಂ ’ ಮೊದಲಾದೆಡೆಗಳಲ್ಲಿಯೂ ‘ ಲಘ್ವಾದೇಃ ’ ( ಲಘ್ವಾದಿ ಧಾತುಗಳ ) ಎಂದು ಹೇಳಿದುದರಿಂದ ‘ ಮಾಱಿದಂ, ಪೇಱಿದಂ ’ ಮೊದಲಾದೆಡೆಗಳಲ್ಲಿಯೂ ‘ ದ್ವಿಸ್ವರಸ್ಯ’ (ದ್ವಿಸ್ವರಗಳಾದ ಧಾತುಗಳ ) ಎಂದು ಹೇಳಿದುದರಿಂದ ‘ ಅಳಱಿದಂ, ಪೆಳಱಿದಂ ’ ಮೊದಲಾದೆಡೆಗಳಲ್ಲಿಯೂ ಈ ಕಾರ್ಯವಿಲ್ಲ. ‘ ದಿ ’ ( ದ ಕಾರಾದಿ ಪ್ರತ್ಯಯಗಳು ಪರವಾಗಲು ) ಎಂದು ಅನುವೃತ್ತಿ ಮಾಡಿಕೊಂಡಿರುವುದರಿಂದ ವ ಕಾರವು ಪರದಲ್ಲಿರಲು ‘ ತಿಱು ’ ಮೊದಲಾದ ಇಲ್ಲಿ ಹೇಳಿದ ತರದ ಧಾತುಗಳಿಗೆ ಈ ಕಾರ್ಯವಿಲ್ಲ. ಉದಾ. : **ತಿಱುವಂ, ಕಿಱುವಂ, ಪೊಱುವಂ.**

**ವಿಚಾರ ೪೮೪**

ಇಲ್ಲಿ ‘ ಱು ಶಬ್ದಾಂತ್ಯ ಧಾತುಗಳಿಗೂ **ಲಘ್ವಾದಿ** ಧಾತುಗಳಿಗೂ ದ್ವಿಸ್ವರಕ ಧಾತುಗಳಿಗೂ ’ ಎಂದು ಪ್ರತ್ಯೇಕಾನ್ವಯ ವಿವಕ್ಷೆಯಿಲ್ಲ. ‘ ಱು ಶಬ್ದಾಂತ್ಯಗಳೂ ಲಘ್ವಾದಿಗಳೂ ದ್ವಿಸ್ವರಕಗಳೂ ಆದ ಧಾತುಗಳಿಗೆ ’ ಎಂದು ಸಮುದಾಯಾನ್ವಯವು ವಿವಕ್ಷಿತವಾಗಿದೆ. ಪ್ರತ್ಯೇಕಾನ್ವಯವನ್ನು ಮಾಡಿದಲ್ಲಿ ಅನಿಷ್ಟರೂಪಗಳುಂಟಾಗುವುವು.

‘ ಕೆತ್ತಂ, ಕೆತ್ತಪಂ ’ ಮೊದಲಾದ ರೂಪಗಳಲ್ಲಿ ‘ **ಇಸು ಬಿಸು ಗಿಱು ಕಿಱು ಕಿಡೋರೇದ್ಧ್ರಸ್ವಃ|| ೪೯೦ ||** ’ ಎಂಬ ಸೂತ್ರದಿಂದ **ಇ** ಕಾರಕ್ಕೆ ಎ ಕಾರಾದೇಶವಾಗಿದೆ.

**ಅವತಾರಿಕೆ ೪೮೫**

‘ ಗು ’ ಶಬ್ದಾಂತ್ಯ ಧಾತುಗಳ ಕಾರ್ಯವಿಶೇಷವು :—

**ಸೂತ್ರಂ || ಗೋಃ ಕಃ || ೪೮೫ ||**

( ೧. ಗೋಃ, ೨. ಕಃ. )

**ಅನುವೃತ್ತಿ ||** ೧. ಲಘ್ವಾದೇಃ, ೨. ದ್ವಿಸ್ವರಸ್ಯ, ೩. ದೋಃ, ೪. ದಿ.

**ವೃತ್ತಿ || ದ ಕಾರಾದಿ ಪ್ರತ್ಯಯಗಳು ಪರದಲ್ಲಿರಲು ಲಘ್ವಾದಿಗಳೂ ದ್ವಿಸ್ವರಗಳೂ ಆಗಿದ್ದು ‘ ಗು ’ ಶಬ್ದಾಂತ್ಯಗಳಾದ ಧಾತುಗಳ ‘ ಗು ’ ಎಂಬ ಭಾಗಕ್ಕೆ ಕ ಕಾರಾದೇಶವಾಗುವುದು.**

**ಪ್ರಯೋಗ ||** ಪೊಕ್ಕಂ, ಪೊಕ್ಕಪಂ, ಪೊಕ್ಕು; ಮಿಕ್ಕಂ, ಮಿಕ್ಕಪಂ, ಮಿಕ್ಕು; ನಕ್ಕಂ, ನಕ್ಕಪಂ, ನಕ್ಕು.

**ಪದಕೃತ್ಯ ||** 'ಗು ಶಬ್ದಾಂತ್ಯ ಧಾತುಗಳ' ಎಂದು ಹೇಳಿದುದರಿಂದ 'ಉಗಿ, ಸುಗಿ' ಮುಂತಾದ ಧಾತುಗಳಿಗೂ 'ಲಘ್ವಾದಿಗಳಾದ' ಎಂದು ಹೇಳಿದುದರಿಂದ 'ತೂಗು, ಬಾಗು' ಮುಂತಾದ ಧಾತುಗಳಿಗೂ 'ದ್ವಿಸ್ವರಗಳಾದ' ಎಂದು ಹೇಳಿದುದರಿಂದ 'ಹರಗು, ಮಸಗು' ಮುಂತಾದ ಧಾತುಗಳಿಗೂ ಈ ಕಾರ್ಯವಿಲ್ಲ. ಉದಾ.: 'ಉಗಿದಂ, ಸುಗಿದಂ; ತೂಗಿದಂ, ಬಾಗಿದಂ; ಹರಗಿದಂ, ಮಸಗಿದಂ'. ದ ಕಾರಾದಿ ಪ್ರತ್ಯಯಗಳು ಪರದಲ್ಲಿರಲು ಎಂದು ಹೇಳಿದುದ ರಿಂದ 'ಪುಗುವಂ, ಮಿಗುವಂ, ನಗುವಂ' ಮುಂತಾದ ರೂಪಗಳಲ್ಲಿ ಈ ಕಾರ್ಯವಿಲ್ಲ.

**ವಿಚಾರ ೪೮೫**

ಇಲ್ಲಿಯೂ 'ಲಘ್ವಾದಿ-ದ್ವಿಸ್ವರಗಳೂ ಗು ಶಬ್ದಾಂತ್ಯಗಳೂ' ಎಂಬಿವಕ್ಕೆ ಪ್ರತ್ಯೇಕಾನ್ವಯವು ವಿವಕ್ಷಿತವಲ್ಲ. ಇದರಿಂದ 'ಲಘ್ವಾದಿ-ದ್ವಿಸ್ವರಕಗಳಾಗಿದ್ದು ಗು ಶಬ್ದಾಂತ್ಯಗಳಾದ' ಎಂಬ ಅರ್ಥವು ಬರುವುದು.

'ಪೊಕ್ಕಂ' ಮೊದಲಾದ ರೂಪಗಳಲ್ಲಿ '**ಉಗು ಪುಗು ಕುಡು ತುಡೋರೋದ್ಧ್ರಸ್ವಃ** || ೪೮೦ ||' ಎಂಬ ಸೂತ್ರದಿಂದ ಪುಗು ಧಾತುವಿನ ಪ್ರಥಮ ಉ ಕಾರಕ್ಕೆ ಒ ಕಾರಾದೇಶವಾಗಿದೆ.

**ಅವತಾರಿಕೆ ೪೮೬**

'ಸು' ಶಬ್ದಾಂತ್ಯ ಧಾತುಗಳ ಕಾರ್ಯವಿಶೇಷವು :—

**ಸೂತ್ರಂ || ಸೋಶ್ಚಃ || ೪೮೬ ||**

( ೧. ಸೋಃ, ೨. ಚಃ. )

**ಅನುವೃತ್ತಿ ||** ೧. ಲಘ್ವಾದೇಃ, ೨. ದ್ವಿಸ್ವರಸ್ಯ, ೩. ದೋಃ, ೪. ದಿ.

**ವೃತ್ತಿ || ದ ಕಾರಾದಿ ಪ್ರತ್ಯಯಗಳು ಪರವಾಗಲು ಲಘ್ವಾದಿಗಳೂ ದ್ವಿಸ್ವರಗಳೂ ಆಗಿದ್ದು ಸು ಶಬ್ದಾಂತ್ಯಗಳಾದ ಧಾತುಗಳ ಕೊನೆಯ 'ಸು' ಎಂಬ ಭಾಗಕ್ಕೆ ಚ ಕಾರಾದೇಶವಾಗುವುದು.**

**ಪ್ರಯೋಗ ||** ಎಚ್ಚಂ, ಎಚ್ಚಪಂ, ಎಚ್ಚು; ಬೆಚ್ಚಂ, ಬೆಚ್ಚಪಂ, ಬೆಚ್ಚು.

**ಪದಕೃತ್ಯ ||** 'ಸುಶಬ್ದಾಂತ್ಯ ಧಾತುಗಳ' ಎಂದು ಹೇಳಿದುದರಿಂದ 'ಬಸಿ, ಹಸಿ' ಮುಂತಾದ ಧಾತುಗಳಿಗೂ 'ಲಘ್ವಾದಿಗಳಾದ' ಎಂದು ಹೇಳಿದುದರಿಂದ 'ಹಾಸು, ಬೀಸು' ಮುಂತಾದ ಧಾತುಗಳಿಗೂ 'ದ್ವಿಸ್ವರಗಳಾದ' ಎಂದು ಹೇಳಿದುದರಿಂದ 'ಅಡಸು, ಅಲಸು' ಮುಂತಾದ ಧಾತುಗಳಿಗೂ ಈ ಕಾರ್ಯವಿಲ್ಲ. 'ದ ಕಾರಾದಿ ಪ್ರತ್ಯಯಗಳು ಪರದಲ್ಲಿರಲು' ಎಂದು ಹೇಳಿದುದರಿಂದ 'ಇಸುವಂ, ಬಿಸುವಂ' ಮುಂತಾದ ರೂಪಗಳಲ್ಲಿ ಈ ಕಾರ್ಯವಿಲ್ಲ.

**ವಿಚಾರ ೪೮೬**

'ಎಚ್ಚಂ, ಎಚ್ಚಪಂ; ಬೆಚ್ಚಂ, ಬೆಚ್ಚಪಂ' ಮುಂತಾದ ಉದಾಹರಣೆಗಳಲ್ಲಿ '**ಇಸು ಬಿಸು ಗಿಱು ಕಿಱು ಕಿಡೋರೇದ್ಧ್ರಸ್ವಃ** || ೪೯೦ ||' ಎಂಬ ಸೂತ್ರದಿಂದ ಇ ಕಾರಕ್ಕೆ ಎ ಕಾರಾದೇಶ ವಾಗಿದೆ.

**ಅವತಾರಿಕೆ ೪೮೭**

'ಡು' ಶಬ್ದಾಂತ ಧಾತುಗಳ ಕಾರ್ಯವಿಶೇಷವು :—

**ಪದಕೃತ್ಯ ||** ' ಎಲ್ಚಱು.... ಧಾತುಗಳ ' ಎಂದು ಹೇಳಿದುದರಿಂದ ' ಕೆದಱು, ಬೆದಱು ' ಮೊದಲಾದ ಬೇರೆ ಱ್ವಂತ ಧಾತುಗಳಿಗೆ ಈ ಕಾರ್ಯವಿಲ್ಲ. ಉದಾ. : ಕೆದಱಿದಂ, ಬೆದಱಿದಂ.

**ಅವತಾರಿಕೆ ೪೮೪**

ಕೆಲವು ' ಱು ' ಶಬ್ದಾಂತ್ಯ ಧಾತುಗಳ ಕಾರ್ಯವಿಶೇಷವು :—

**ಸೂತ್ರಂ || ಱೋರ್ಲಘ್ವಾದೇರ್ದ್ವಿಸ್ವರಸ್ಯ || ೪೮೪ ||**

**( ೧. ಱೋಃ, ೨. ಲಘ್ವಾದೇಃ, ೩. ದ್ವಿಸ್ವರಸ್ಯ )**

**ಅನುವೃತ್ತಿ ||** ೧. ದಿ, ೨. ದೋಃ, ೩. ತಃ.

**ವೃತ್ತಿ || ದ ಕಾರಾದಿ ಪ್ರತ್ಯಯಗಳು ಪರದಲ್ಲಿರಲು ಲಘ್ವಾದಿಗಳೂ ದ್ವಿಸ್ವರಗಳೂ ಆದ ' ಱು ' ಶಬ್ದಾಂತ್ಯ ಧಾತುಗಳ ಕೊನೆಯ ' ಱು ' ಎಂಬ ಭಾಗಕ್ಕೆ ತ ಕಾರಾದೇಶವಾಗುವುದು.**

**ಪ್ರಯೋಗ ||** ತೆತ್ತಂ, ತೆತ್ತಪಂ, ತೆತ್ತು; ಕೆತ್ತಂ, ಕೆತ್ತಪಂ, ಕೆತ್ತು; ಪೊತ್ತಂ, ಪೊತ್ತಪಂ, ಪೊತ್ತು.

**ಪದಕೃತ್ಯ ||** ' ಱೋಃ ' ( ಱು ಎಂಬ ಭಾಗಕ್ಕೆ ) ಎಂದು ಹೇಳಿದುದರಿಂದ ' ಇಱಿದಂ, ತಿಱಿದಂ ' ಮೊದಲಾದೆಡೆಗಳಲ್ಲಿಯೂ ' ಲಘ್ವಾದೇಃ ' ( ಲಘ್ವಾದಿ ಧಾತುಗಳ ) ಎಂದು ಹೇಳಿದುದರಿಂದ ' ಮಾಱಿದಂ, ಪೇಱಿದಂ ' ಮೊದಲಾದೆಡೆಗಳಲ್ಲಿಯೂ ' ದ್ವಿಸ್ವರಸ್ಯ' (ದ್ವಿಸ್ವರಗಳಾದ ಧಾತುಗಳ ) ಎಂದು ಹೇಳಿದುದರಿಂದ ' ಅಳಱಿದಂ, ಪೆಳಱಿದಂ ' ಮೊದಲಾದೆಡೆಗಳಲ್ಲಿಯೂ ಈ ಕಾರ್ಯವಿಲ್ಲ. ' ದಿ ' ( ದ ಕಾರಾದಿ ಪ್ರತ್ಯಯಗಳು ಪರವಾಗಲು ) ಎಂದು ಅನುವೃತ್ತಿ ಮಾಡಿಕೊಂಡಿರುವುದರಿಂದ ವ ಕಾರವು ಪರದಲ್ಲಿರಲು ' ತಿಱು ' ಮೊದಲಾದ ಇಲ್ಲಿ ಹೇಳಿದ ತರದ ಧಾತುಗಳಿಗೆ ಈ ಕಾರ್ಯವಿಲ್ಲ. ಉದಾ. : **ತಿಱುವಂ**, ಕಿಱುವಂ, **ಪೊಱುವಂ**.

**ವಿಚಾರ ೪೮೪**

ಇಲ್ಲಿ ' ಱು ಶಬ್ದಾಂತ್ಯ ಧಾತುಗಳಿಗೂ **ಲಘ್ವಾದಿ** ಧಾತುಗಳಿಗೂ ದ್ವಿಸ್ವರಕ ಧಾತುಗಳಿಗೂ ' ಎಂದು ಪ್ರತ್ಯೇಕಾನ್ವಯ ವಿವಕ್ಷೆಯಿಲ್ಲ. ' ಱು ಶಬ್ದಾಂತ್ಯಗಳೂ ಲಘ್ವಾದಿಗಳೂ ದ್ವಿಸ್ವರಕಗಳೂ ಆದ ಧಾತುಗಳಿಗೆ ' ಎಂದು ಸಮುದಾಯಾನ್ವಯವು ವಿವಕ್ಷಿತವಾಗಿದೆ. ಪ್ರತ್ಯೇಕಾನ್ವಯವನ್ನು ಮಾಡಿದಲ್ಲ ಅನಿಷ್ಟರೂಪಗಳುಂಟಾಗುವುವು.

' ಕೆತ್ತಂ, ಕೆತ್ತಪಂ ' ಮೊದಲಾದ ರೂಪಗಳಲ್ಲಿ ' **ಇಸು ಬಿಸು ಗಿಱು ಕಿಱು ಕಿಡೋರೇದ್ಧ್ರಸ್ವಃ|| ೪೯೦ ||** ' ಎಂಬ ಸೂತ್ರದಿಂದ **ಇ ಕಾರಕ್ಕೆ** ಎ ಕಾರಾದೇಶವಾಗಿದೆ.

**ಅವತಾರಿಕೆ ೪೮೫**

' ಗು ' ಶಬ್ದಾಂತ್ಯ ಧಾತುಗಳ ಕಾರ್ಯವಿಶೇಷವು :—

**ಸೂತ್ರಂ || ಗೋಃ ಕಃ || ೪೮೫ ||**

**( ೧. ಗೋಃ, ೨. ಕಃ. )**

**ಅನುವೃತ್ತಿ ||** ೧. ಲಘ್ವಾದೇಃ, ೨. ದ್ವಿಸ್ವರಸ್ಯ, ೩. ದೋಃ, ೪. ದಿ.

**ವೃತ್ತಿ || ದ ಕಾರಾದಿ ಪ್ರತ್ಯಯಗಳು ಪರದಲ್ಲಿರಲು ಲಘ್ವಾದಿಗಳೂ ದ್ವಿಸ್ವರಗಳೂ ಆಗಿದ್ದು ' ಗು ' ಶಬ್ದಾಂತ್ಯಗಳಾದ ಧಾತುಗಳ ' ಗು ' ಎಂಬ ಭಾಗಕ್ಕೆ ಕ ಕಾರಾದೇಶವಾಗುವುದು.**

**ಪ್ರಯೋಗ ||** ಪೊಕ್ಕಂ, ಪೊಕ್ಕಪಂ, ಪೊಕ್ಕು; ಮಿಕ್ಕಂ, ಮಿಕ್ಕಪಂ, ಮಿಕ್ಕು; ನಕ್ಕಂ, ನಕ್ಕಪಂ, ನಕ್ಕು.

**ಪದಕೃತ್ಯ ||** ' ಗು ಶಬ್ದಾಂತ್ಯ ಧಾತುಗಳ ' ಎಂದು ಹೇಳಿದುದರಿಂದ ' ಉಗಿ, ಸುಗಿ ' ಮುಂತಾದ ಧಾತುಗಳಿಗೂ ' ಲಘ್ವಾದಿಗಳಾದ ' ಎಂದು ಹೇಳಿದುದರಿಂದ ' ತೂಗು, ಬಾಗು ' ಮುಂತಾದ ಧಾತುಗಳಿಗೂ ' ದ್ವಿಸ್ವರಗಳಾದ ' ಎಂದು ಹೇಳಿದುದರಿಂದ ' ಹರಗು, ಮಸಗು ' ಮುಂತಾದ ಧಾತುಗಳಿಗೂ ಈ ಕಾರ್ಯವಿಲ್ಲ. ಉದಾ. : ' ಉಗಿದಂ, ಸುಗಿದಂ; ತೂಗಿದಂ, ಬಾಗಿದಂ; ಹರಗಿದಂ, ಮಸಗಿದಂ '. ದ ಕಾರಾದಿ ಪ್ರತ್ಯಯಗಳು ಪರದಲ್ಲಿರಲು ಎಂದು ಹೇಳಿದುದರಿಂದ ' ಪುಗುವಂ, ಮಿಗುವಂ, ನಗುವಂ ' ಮುಂತಾದ ರೂಪಗಳಲ್ಲಿ ಈ ಕಾರ್ಯವಿಲ್ಲ.

**ವಿಚಾರ ೪೮೫**

ಇಲ್ಲಿಯೂ ' ಲಘ್ವಾದಿ-ದ್ವಿಸ್ವರಗಳೂ ಗು ಶಬ್ದಾಂತ್ಯಗಳೂ ' ಎಂಬಿವಕ್ಕೆ ಪ್ರತ್ಯೇಕಾನ್ವಯವು ವಿವಕ್ಷಿತವಲ್ಲ. ಇದರಿಂದ ' ಲಘ್ವಾದಿ-ದ್ವಿಸ್ವರಕಗಳಾಗಿದ್ದು ಗು ಶಬ್ದಾಂತ್ಯಗಳಾದ ' ಎಂಬ ಅರ್ಥವು ಬರುವುದು.

' ಪೊಕ್ಕಂ ' ಮೊದಲಾದ ರೂಪಗಳಲ್ಲಿ ' **ಉಗು ಪುಗು ಕುಡು ತುಡೋರೋದ್ಧ್ರಸ್ವಃ** || ೪೮೦ || ' ಎಂಬ ಸೂತ್ರದಿಂದ ಪುಗು ಧಾತುವಿನ ಪ್ರಥಮ ಉ ಕಾರಕ್ಕೆ ಒ ಕಾರಾದೇಶವಾಗಿದೆ.

**ಅವತಾರಿಕೆ ೪೮೬**

' ಸು ' ಶಬ್ದಾಂತ್ಯ ಧಾತುಗಳ ಕಾರ್ಯವಿಶೇಷವು :—

**ಸೂತ್ರಂ || ಸೋಶ್ಚಃ || ೪೮೬ ||**

( ೧. **ಸೋಃ**, ೨. **ಚಃ**. )

**ಅನುವೃತ್ತಿ ||** ೧. ಲಘ್ವಾದೇಃ, ೨. ದ್ವಿಸ್ವರಸ್ಯ, ೩. ದೋಃ, ೪. ದಿ.

**ವೃತ್ತಿ || ದ ಕಾರಾದಿ ಪ್ರತ್ಯಯಗಳು ಪರವಾಗಲು ಲಘ್ವಾದಿಗಳೂ ದ್ವಿಸ್ವರಗಳೂ ಆಗಿದ್ದು ಸು ಶಬ್ದಾಂತ್ಯಗಳಾದ ಧಾತುಗಳ ಕೊನೆಯ ' ಸು ' ಎಂಬ ಭಾಗಕ್ಕೆ ಚ ಕಾರಾದೇಶವಾಗುವುದು.**

**ಪ್ರಯೋಗ ||** ಎಚ್ಚಂ, ಎಚ್ಚಪಂ, ಎಚ್ಚು; ಬೆಚ್ಚಂ, ಬೆಚ್ಚಪಂ, ಬೆಚ್ಚು.

**ಪದಕೃತ್ಯ ||** ' ಸುಶಬ್ದಾಂತ್ಯ ಧಾತುಗಳ ' ಎಂದು ಹೇಳಿದುದರಿಂದ ' ಬಸಿ, ಹಸಿ ' ಮುಂತಾದ ಧಾತುಗಳಿಗೂ ' ಲಘ್ವಾದಿಗಳಾದ ' ಎಂದು ಹೇಳಿದುದರಿಂದ ' ಹಾಸು, ಬೀಸು ' ಮುಂತಾದ ಧಾತುಗಳಿಗೂ ' ದ್ವಿಸ್ವರಗಳಾದ ' ಎಂದು ಹೇಳಿದುದರಿಂದ ' ಅಡಸು, ಅಲಸು ' ಮುಂತಾದ ಧಾತುಗಳಿಗೂ ಈ ಕಾರ್ಯವಿಲ್ಲ. ' ದ ಕಾರಾದಿ ಪ್ರತ್ಯಯಗಳು ಪರದಲ್ಲಿರಲು ' ಎಂದು ಹೇಳಿದುದರಿಂದ ' ಇಸುವಂ, ಬಿಸುವಂ ' ಮುಂತಾದ ರೂಪಗಳಲ್ಲಿ ಈ ಕಾರ್ಯವಿಲ್ಲ.

**ವಿಚಾರ ೪೮೬**

' ಎಚ್ಚಂ, ಎಚ್ಚಪಂ; ಬೆಚ್ಚಂ, ಬೆಚ್ಚಪಂ ' ಮುಂತಾದ ಉದಾಹರಣೆಗಳಲ್ಲಿ ' **ಇಸು ಬಿಸು ಗಿಱು ಕಿಱು ಕಿಡೋರೇದ್ಧ್ರಸ್ವಃ** || ೪೯೦ || ' ಎಂಬ ಸೂತ್ರದಿಂದ ಇ ಕಾರಕ್ಕೆ ಎ ಕಾರಾದೇಶವಾಗಿದೆ.

**ಅವತಾರಿಕೆ ೪೮೭**

' ಡು ' ಶಬ್ದಾಂತ ಧಾತುಗಳ ಕಾರ್ಯವಿಶೇಷವು :—

**ಸೂತ್ರಂ || ಡೋಷ್ಟಃ || ೪೮೭ ||**

( ೧. ಡೋಃ, ೨. ಟಃ )

**ಅನುವೃತ್ತಿ ||** ೧. ಲಘ್ವಾದೇಃ, ೨. ದ್ವಿಸ್ವರಸ್ಯ, ೩. ದೋಃ, ೪. ದಿ.

**ವೃತ್ತಿ || ದ ಕಾರಾದಿ ಪ್ರತ್ಯಯಗಳು ಪರವಾಗಲು ಲಘ್ವಾದಿಗಳೂ ದ್ವಿಸ್ವರಗಳೂ ಆದ 'ದು' ಶಬ್ದಾಂತ ಧಾತುಗಳ ಅಂತ್ಯದ ' ಡು ' ಎಂಬ ಭಾಗಕ್ಕೆ ಟ ಕಾರಾದೇಶವಾಗುವುದು.**

**ಪ್ರಯೋಗ ||** ಇಟ್ಟಂ, ಇಟ್ಟಪಂ, ಇಟ್ಟು; ಪಟ್ಟಂ, ಪಟ್ಟಪಂ, ಪಟ್ಟು; ಬಿಟ್ಟಂ, ಬಿಟ್ಟಪಂ. ಬಿಟ್ಟು.

**ಪದಕೃತ್ಯ ||** 'ಡು ಎಂಬ ಭಾಗಕ್ಕೆ' ಎಂದು ಹೇಳಿದುದರಿಂದ 'ಡು' ಅಂತ್ಯದಲ್ಲಿಲ್ಲದ 'ಮಡಿ' ಕಡಿ ' ಮುಂತಾದ ಧಾತುಗಳಿಗೂ ' ಲಘ್ವಾದಿಗಳೂ ' ಎಂದು ಹೇಳಿದುದರಿಂದ ' ಮಾಡು. ಕೂಡು ' ಮುಂತಾದ ದೀರ್ಘಾದಿ ಧಾತುಗಳಿಗೂ ' ದ್ವಿಸ್ವರಗಳೂ ' ಎಂದು ಹೇಳಿದುದರಿಂದ ' ಪರಡು, ಕದಡು ' ಮುಂತಾದ ಬಹುಸ್ವರ ಧಾತುಗಳಿಗೂ ಈ ಕಾರ್ಯವಿಲ್ಲ. ದ ಕಾರಾದಿ ಪ್ರತ್ಯಯಗಳು ' ಎಂದು ಹೇಳಿದುದರಿಂದ ' ಇಡುವಂ, ಪಡುವಂ ' ಮುಂತಾದೆಡೆಗಳಲ್ಲಿಯೂ ಈ ಕಾರ್ಯವಿಲ್ಲ.

**ವಿಚಾರ ೪೮೭**

' **ಅಂತ್ಯೋರ್ಲಘ್ವಾದೇರ್ದ್ವಿಸ್ವರಸ್ಯ || ೪೮೪ ||** ' ಎಂಬ ಸೂತ್ರದ ತರುವಾಯ ' **ಗುಸುಡೋಃ ಕಚಟಂ** ' ( ಧಾತುಗಳ ಅಂತ್ಯದ ' ಗು, ಸು, ಡು ' ಎಂಬ ಭಾಗಗಳಿಗೆ ' ಕ್, ಚ್, ಟ್ ' ಎಂಬ ಆದೇಶಗಳಾಗುವುವು.) ಎಂಬ ಸಂಯುಕ್ತ ಸೂತ್ರವನ್ನು ರಚಿಸಿದ್ದರೆ ' **ಗೋಃ ಕಃ || ೪೮೫ ||, ಸೋಶ್ಚಃ || ೪೮೬ ||, ಡೋಷ್ಟಃ || ೪೮೭ ||** ' ಎಂಬೀ ಮೂರು ವಿಭಕ್ತಸೂತ್ರಗಳನ್ನು ರಚಿಸುವುದಕ್ಕಿಂತ ಲಾಘವವಾಗುತ್ತಿರಲಿಲ್ಲವೇ ಎಂದು ಆಕ್ಷೇಪಿಸಿದರೆ ಸಮಾಧಾನವು ಪದಲಾಘವಕ್ಕಿಂತ ಪ್ರತಿಪತ್ತಿ ( ಜ್ಞಾನ ) ಲಾಘವವು ಒಳ್ಳೆಯದೆಂದು ಬಿಡಿಬಿಡಿಯಾಗಿ ಮೂರು ಸೂತ್ರಗಳನ್ನು ಸೂತ್ರಕಾರನು ರಚಿಸಿದನು. ಪ್ರಾಚೀನ ವ್ಯಾಕರಣಕಾರರು ಈ ರೀತಿಯಾಗಿ ಮಾಡಿದ್ದುಂಟು. 'ಏ ಅಯ್' (ಕಾತಂತ್ರ ೧, ೨, ೧೨), 'ಐ ಆಯ್' ( ಕಾತಂತ್ರ ೧, ೨, ೧೩ ), ' ಓ ಅವ್ ' ( ಕಾತಂತ್ರ ೧, ೨, ೧೪ ), ಔ ಆವ್ ( ಕಾತಂತ್ರ ೧, ೨, ೧೫). ಆದರೆ ಈ ಸಂದರ್ಭದಲ್ಲಿ ಮಹರ್ಷಿ **ಪಾಣಿನಿಯು** ಪದಲಾಘವವನ್ನು ಲಕ್ಷಿಸಿ '**ಏಚೋಽಯವಾಯಾವಃ**...............' ಎಂಬುದಾಗಿ ಒಂದೇ ಸೂತ್ರವನ್ನು ರಚಿಸಿದನು.

**ಅವತಾರಿಕೆ ೪೮೮**

' ಪಡಲಿಡು ' ಮುಂತಾದ ಧಾತುಗಳ ಕಾರ್ಯವಿಶೇಷವು :—

**ಸೂತ್ರಂ || ಪಡಲಿಡ್ವಾದೇಃ || ೪೮೮ ||**

( ಒಂದೇ ಪದ )

**ಅನುವೃತ್ತಿ ||** ೧. ದೋಃ, ೨. ಟಃ, ೩. ದಿ.

**ವೃತ್ತಿ || ದ ಕಾರಾದಿ ಪ್ರತ್ಯಯಗಳು ಪರದಲ್ಲಿರಲು ' ಪಡಲಿಡು ' ಮುಂತಾದ ಧಾತುಗಳ ಕೊನೆಯ ' ಡು ' ಎಂಬ ಭಾಗಕ್ಕೆ ಟ ಕಾರಾದೇಶವಾಗುವದು.**

**ಪ್ರಯೋಗ** || ಪಡಲಿಟ್ಟಂ, ಪಡಲಿಟ್ಟಪಂ, ಪಡಲಿಟ್ಟು; ಪೊಡಮಟ್ಟಂ, ಪೊಡಮಟ್ಟಪಂ, ಪೊಡಮಟ್ಟು.

'ಪಡಲಿಡು' ಮೊದಲಾದ ಧಾತುಗಳು ಸೇರಿ ಒಂದು ಗಣ. ಅವು — ಪಡಲಿಡು, ಪೊಡಮಡು, ಮುಂಬಿಡು, ಒಡಂಬಡು, ಮೂಗುವಡು, ಕರುವಿಡು, ತಿಟ್ಟವಿಡು, ಪಾಟಿಡು, ಗೋಟಿಡು, ಊಳಿಡು, ದೂಳಿಡು, ಮಾಳಿಡು, ಬೇರ್ಪಡು, ನೇರ್ಪಡು.

**ವಿಚಾರ ೪೮೮**

"ಈ ಸೂತ್ರವು ಅನಾವಶ್ಯಕವಲ್ಲವೇ ? ಏಕೆಂದರೆ 'ಪೊಡಮಡು, ಮುಂಬಿಡು' ಮುಂತಾದ ಈ ಗಣದ ಧಾತುಗಳ ಉತ್ತರಾವಯವಗಳು 'ಇಡು, ಪಡು, ಬಿಡು' ಮುಂತಾದುವೇ ಆಗಿವೆ. ಈಗ '**ಡೋಷ್ಟಃ ||೪೮೭||**' ಎಂಬ ಪೂರ್ವಸೂತ್ರದಿಂದಲೇ ಅಂತ್ಯ 'ಡು' ಭಾಗಕ್ಕೆ ಟ ಕಾರಾದೇಶವು ಸಿದ್ಧವಾಗುವುದು;" ಎಂದು ಆಕ್ಷೇಪಿಸಬಹುದು. ಆದರೆ ಸಮಾಧಾನವೇನಂದರೆ 'ಪಡಲಿಡು' ಮೊದಲಾದ ಧಾತುಗಳ ಉತ್ತರಾವಯವಗಳಾದ 'ಇಡು' ಮೊದಲಾದುವು ಧಾತುಪ್ರತಿರೂಪಕಗಳೇ ಹೊರತು ನಿಜವಾಗಿ ಧಾತುಗಳಲ್ಲವೆಂದೂ ಈ ಕಾರಣದಿಂದಲೇ 'ಪಡಲಿಡು' ಮುಂತಾದುವು ಅಖಂಡ ಧಾತುಗಳೇ ಹೊರತು 'ಇಡು' ಮೊದಲಾದ ಧಾತುಗಳು ಉತ್ತರಾವಯವಗಳಾದ ಸಖಂಡ ಧಾತುಗಳಲ್ಲವೆಂದೂ ತಿಳಿಯಬೇಕು. ಉತ್ತರಾವಯವಗಳು 'ಇಡು' ಮೊದಲಾದ ಧಾತುಗಳಂತೆ ಇರುವವೆಂಬಷ್ಟಕ್ಕೆ ಅವೇ ಎಂದು ತಿಳಿಯಕೂಡದು. ಸಾರೂಪ್ಯಸಿದ್ಧಷ್ಟಕ್ಕೇ ಪ್ರಯೋಜನವಿಲ್ಲ. ಹಾಗಲ್ಲದಿದ್ದರೆ ಸುಬಂತ ಪ್ರತಿರೂಪಕಗಳನ್ನೂ ತಿಙಂತ ಪ್ರತಿರೂಪಕಗಳನ್ನೂ ಅವ್ಯಯವಿಶೇಷಗಳೆಂದು ಹೇಳುತ್ತಿರಲಿಲ್ಲ.

ಇನ್ನು 'ಈ ಧಾತುಗಳು ಸಖಂಡಗಳೆಂದು ಹೇಳಿದರೆ ತಪ್ಪೇನು' ಎಂದು ಆಕ್ಷೇಪಿಸಬಹುದು. ಆದರೆ ಹೀಗೆ ಹೇಳಿದ ಪಕ್ಷದಲ್ಲಿ ಪೂರ್ವಾವಯವಗಳು ಧಾತುಗಳೇ ಪ್ರಾತಿಪದಿಕಗಳೇ ಪದಗಳೇ ? ಅವು ಏನೇ ಆದರೂ ಉತ್ತರಾವಯವಗಳೊಡನೆ ಸಂಯೋಗ ಹೊಂದುವುದಿಲ್ಲವೆಂಬ ಅನುಪಪತ್ತಿಯು ಬರುವುದು. 'ಪಾಲ್ಗುಡಿದಂ, ಸೀಗುರ್ಗಡಿದಂ' ಮುಂತಾದ ಸಮಾಸಗಳಲ್ಲಿಯೂ 'ಕಂಪುಣಿ, ಬಂಡುಣಿ' ಮುಂತಾದ ಕೃದಂತಗಳಲ್ಲಿಯೂ ಹೇಗೋ ಹಾಗೆ ಪೂರ್ವಾವಯವಗಳು ಪದಗಳೆಂದಾಗಲಿ ಉಪಪದಗಳೆಂದಾಗಲಿ ಆಗಬಹುದಲ್ಲವೇ ಎಂದರೆ — ಹಾಗೆ ಹೇಳಿದ ಪಕ್ಷದಲ್ಲಿ ಅಲ್ಲಿಯಂತೆ ಇಲ್ಲಿಯೂ ಅವು ಸ್ವಾರ್ಥವನ್ನು ಹೇಳಬಲ್ಲುವೇ ಹೊರತು ಅರ್ಥಾಂತರವನ್ನು ಹೇಳಲಾರವು. ಇಲ್ಲಿಯಾದರೋ ಎರಡು ಅವಯವಗಳೂ ಕೂಡಿ ಹೊಸದಾದ ಅರ್ಥಾಂತರವನ್ನು ಹೇಳುವುವೆಂಬುದು ಸ್ಪಷ್ಟವಿದೆ. ರೂಢಿಯಿಂದಾಗಲಿ ಯೋಗರೂಢಿಯಿಂದಾಗಲಿ ಅವಯವಾರ್ಥ ಪ್ರಕಾಶನದೊಡನೆ ಅರ್ಥಾಂತರವನ್ನು ಯಾವವು ತೋರಿಸುವುವೋ ಅವು ಸಖಂಡಗಳೆಂದೂ ಉಳಿದುವು ಅಖಂಡಗಳೆಂದೂ ವ್ಯವಸ್ಥೆಯನ್ನು ಹೇಳಬೇಕಲ್ಲವೇ ?

**ಅವತಾರಿಕೆ ೪೮೯**

'ಉಗು' ಮೊದಲಾದ ಧಾತುಗಳ ಕಾರ್ಯವಿಶೇಷವು.

## ಸೂತ್ರಂ || ಉಗು ಪುಗು ಕುಡು ತುಡೋ ರೋದ್ಧ್ರಸ್ವಃ || ೪೮೯ ||

( ೧. ಉಗು....ತುಡೋಃ ೨. ಓತ್ ೩. ಹ್ರಸ್ವಃ )

**ಅನುವೃತ್ತಿ** || ೧. ದಿ.

**ವೃತ್ತಿ** || **ದ ಕಾರಾದಿ ಪ್ರತ್ಯಯಗಳು ಪರದಲ್ಲಿರಲು ' ಉಗು ' ಮೊದಲಾದ ನಾಲ್ಕು ಧಾತುಗಳಿಗೆ ಒ ಕಾರಾದೇಶವಾಗುವುದು.**

**ಪ್ರಯೋಗ** || ಒಕ್ಕಂ, ಒಕ್ಕಪಂ, ಒಕ್ಕು; ಪೊಕ್ಕಂ, ಪೊಕ್ಕಪಂ, ಪೊಕ್ಕು; ಕೊಟ್ಟಂ, ಕೊಟ್ಟಪಂ, ಕೊಟ್ಟು; ತೊಟ್ಟಂ, ತೊಟ್ಟಪಂ, ತೊಟ್ಟು.

**ಪದಕೃತ್ಯ** || ' ಉಗು ' ಮೊದಲಾದ ನಾಲ್ಕು ಧಾತುಗಳಿಗೆ ಎಂದು ಹೇಳಿದುದರಿಂದ ' ಉಡು, ಸುಡು ' ಮೊದಲಾದ ಧಾತುಗಳಿಗೆ ಈ ಕಾರ್ಯವಿಲ್ಲ. ಉದಾ.: ಉಟ್ಟಂ, ಸುಟ್ಟಂ. ' ಹ್ರಸ್ವಃ ' ಎಂದು ಹ್ರಸ್ವ ಸಂಜ್ಞೆಯಿಂದ ವಿಧಿಸಿರುವುದರಿಂದ ಒ ಕಾರಾದೇಶವು ಮೊದಲಿನ ಉ ಕಾರಕ್ಕೇ ಎಂದು ಸಿಕ್ಷಿತವಾಗುವುದು.

**ವಿಚಾರ ೪೮೯**

ದ ಕಾರಾದಿ ಪ್ರತ್ಯಯಗಳು ಪರವಾಗಲು ' ಉಗು ' ಮೊದಲಾದ ನಾಲ್ಕು ಧಾತುಗಳಿಗೆ ಒ ಕಾರಾದೇಶವನ್ನು ಈ ಸೂತ್ರವು ವಿಧಿಸುವುದಷ್ಟೇ; ದ ಕಾರಾದಿ ಪ್ರತ್ಯಯಗಳು ಪರವಾಗಲು ಮೊದಲಿನ ಎರಡು ' ಉಗು, ಪುಗು ' ಧಾತುಗಳ ಅಂತ್ಯದ ' ಗು ' ಎಂಬ ಭಾಗಕ್ಕೆ ' **ಗೋಃ ಕಃ** || **೪೮೫** || ' ಎಂಬ ಸೂತ್ರದಿಂದ ಕ ಕಾರಾದೇಶವೂ ಕೊನೆಯ ಎರಡು ' ಕುಡು, ತುಡು ' ಧಾತುಗಳ ಅಂತ್ಯದ ' ಡು ' ಎಂಬ ಭಾಗಕ್ಕೆ ' **ಡೋಷ್ಟಃ** || **೪೮೭** || ' ಎಂಬ ಸೂತ್ರದಿಂದ ಟ ಕಾರಾದೇಶವೂ ವಿಧಿಸಲ್ಪಟ್ಟಿವೆ. ಈ ಎರಡು ಕಾರ್ಯಗಳಲ್ಲಿ ಇಲ್ಲಿ ಮೊದಲು ಯಾವ ಕಾರ್ಯವನ್ನು ಮಾಡಬೇಕೆಂದು ಸಂಶಯಪಡಬೇಕಾದುದಿಲ್ಲ. ಕಾದೇಶ-ಟಾದೇಶಗಳನ್ನೇ ಮೊದಲು ಮಾಡಬೇಕು. ಇನ್ನು ಪರವೂ ಅನವಕಾಶವೂ ಆದ ಒ ಕಾರಾದೇಶವೇ ಮೊದಲು ಏಕೆ ಬರಬಾರದೆಂದು ಶಂಕಿಸಕೂಡದು. ಏಕೆಂದರೆ, ಒ ಕಾರಾದೇಶವು ಮೊದಲು ಬಂದರೆ ಅದು ' **ಷಷ್ಠ್ಯಾಃ ಸ್ಥಾನೇऽಂತ್ಯಸ್ಯ** || **೨೨** || ' ಎಂಬ ಸೂತ್ರದ ಪರಿಭಾಷೆಯ ಮೇರೆಗೆ ( ಸ್ಥಾನಾರ್ಥಕ ಷಷ್ಠಿಗೆ ಹೇಳಿದ ಕಾರ್ಯವು ಷಷ್ಠ್ಯಂತದ ಕೊನೆಯ ಅಕ್ಷರಕ್ಕೆ ಆಗುವುದು ) ' ಉಗು ' ಮೊದಲಾದುವುಗಳ ಅಂತ್ಯಾಕ್ಷರಕ್ಕೆ ಆಗಬೇಕಾಗುವುದು. ಹಾಗೆ ಅಂತ್ಯಾಕ್ಷರಕ್ಕೆ ಒ ಕಾರಾದೇಶವನ್ನು ತಂದ ಪಕ್ಷದಲ್ಲಿ ಆ ಒ ಕಾರವು ಕಾದೇಶ ಟಾದೇಶಗಳು ಬರಲು ಇಲ್ಲದಂತಾಗುವುದು. ಆಗ ಆದಿಷ್ಟವಾಗಿ ತಂದ ಒ ಕಾರದ ಪ್ರಯೋಜನವೇ ಇಲ್ಲದಂತಾಗುವುದು. ಇನ್ನು ಒ ಕಾರಾದೇಶದಿಂದ ವಿಕಾರಗೊಂಡ ಆ ಧಾತುಗಳು (ಉಗ್ ಒ, ತುಡ್ ಒ) ಗು ಕೊನೆಯುಳ್ಳುಳ್ಳುವೂ ಡು ಕೊನೆಯುಳ್ಳುಳ್ಳುವೂ ಆಗದಿರುವುದರಿಂದ ಕ ಟಾದೇಶಗಳೇ ಬರುವುದಿಲ್ಲವೆಂದು ಎನ್ನಕೂಡದು. ಸ್ವಲ್ಪ ವಿಕಾರವಾದರೂ ಧಾತುಸ್ವರೂಪವೇ ಇಲ್ಲದಂತಾಗುವುದಿಲ್ಲ. ಆ ಅವಸ್ಥೆಯಲ್ಲಿ ಅವು ಧಾತುಗಳಲ್ಲವೆಂದು ಹೇಳಲಾಗುವುದಿಲ್ಲ. ಆದುದರಿಂದ ಪೂರ್ವಾವಸ್ಥೆಯ ದೃಷ್ಟಿಯಿಂದ ಅವು ಗು ಶಬ್ದಾಂತಗಳೂ ಡು ಶಬ್ದಾಂತಗಳೂ ಆಗುವುದರಿಂದ ಕ ಟಾದೇಶಗಳು ಬರುವುವು; ಕ ಟಾದೇಶಗಳಾದ ತರುವಾಯ ಒ ಕಾರಾದೇಶವು ಬರುವುದು.

ಇನ್ನು ಮೇಲೆ ಹೇಳಿದ ರೀತಿಯಲ್ಲಿ ಇದರಿಂದ ಅವುಗಳ ( ಕ, ಟ ಗಳ ) ನಾಶವೂ ಆಗಬಹುದಾದುದರಿಂದ ಒಂದನ್ನೊಂದು ನಾಶಮಾಡುವುವೆಂಬ ಭಯದಿಂದ ಯಾವ ಆದೇಶವೂ ಬಾರದಿರಲಿ ಎಂದು ಹೇಳಕೂಡದು. ಕಾಲಭೇದವೂ ಸ್ಥಾನಿಭೇದವೂ ಇರುವುದರಿಂದ ಎರಡೂ ಆದೇಶಗಳು ಇಲ್ಲಿ ಸಂಭವಿಸುವುವು. ಹೇಗೆಂದರೆ ಕ ಟಾದೇಶಗಳು ಉಗ್ವಾದಿ ಧಾತುಗಳ ಕೊನೆಯ ' ಗು, ಡು ' ಎಂಬ ಭಾಗಗಳಿಗೆ ಮೊದಲು ಆಗುವುವು. ಒ ಕಾರಾದೇಶವನ್ನು ಹ್ರಸ್ವಸಂಜ್ಞೆಯೊಡನೆ ಹೇಳಿರುವುದರಿಂದ ಅದು ಸ್ವರಸ್ಥಾನದಲ್ಲಿಯೇ ಆಗಬೇಕಾದುದರಿಂದಲೂ ಅಂತ್ಯದಲ್ಲಿ ವ್ಯಂಜನವಿರುವುದರಿಂದಲೂ ಆದಿ-ಉಕಾರದ ಸ್ಥಾನದಲ್ಲಿಯೇ ಆಗಬೇಕಾಗುವುದು. ಇಲ್ಲಿ ' ಹ್ರಸ್ವಃ ' ಎಂಬ ವಿಶೇಷಣವನ್ನಿಟ್ಟುದು ಇದಕ್ಕಾಗಿಯೇ. ಇಲ್ಲವಾದರೆ ' ಒತ್ ' ಎಂದು ಇಷ್ಟೇ ಹೇಳಿದ್ದರೂ ನಡೆಯುವಂತಿರುವಾಗ ' ಹ್ರಸ್ವಃ ' ಎಂದು ಸೂತ್ರದಲ್ಲಿ ಹೆಚ್ಚಿನ ಶಬ್ದದ ಪ್ರಯೋಜನವೇನು?

ಇಲ್ಲಿ ಸತ್ತಾರ್ಥಕವಾದ 'ಉಳ್' ಧಾತುವಿಗೂ ಈ ಕಾರ್ಯವಾಗುವುದೆಂದು ಹೇಳಬೇಕು. ಇಲ್ಲವಾದರೆ ' ಒಳಂ, ಒಳರ್ ' ಎಂಬ ರೂಪಗಳು ಸಿದ್ಧಿಸಲಾರವು.

**ಅವತಾರಿಕೆ ೪೯೦**

' ಇಸು ' ಮೊದಲಾದ ಧಾತುಗಳ ಕಾರ್ಯವಿಶೇಷವು.

**ಸೂತ್ರಂ || ಇಸು ಬಿಸು ಗಿಱು ಕಿಱುಕಿಡೋರೆತ್ || ೪೯೦ ||**

( ೧. ಇಸು ಬಿಸು....ಕಿಡೋಃ ೨. ಎತ್ )

**ಅನುವೃತ್ತಿ** || ೧. ದಿ, ೨. ಹ್ರಸ್ವಃ .

**ವೃತ್ತಿ** || ದ ಕಾರಾದಿ ಪ್ರತ್ಯಯಗಳು ಪರವಾಗಲು **' ಇಸು ' ಮೊದಲಾದ ಧಾತುಗಳಿಗೆ ಹ್ರಸ್ವೈಕಾರಾದೇಶ ( ಎ ಕಾರಾದೇಶ ) ವಾಗುವುದು.**

**ಪ್ರಯೋಗ** || ಎಚ್ಚಂ, ಎಚ್ಚಪಂ, ಎಚ್ಚು; ಬೆಚ್ಚಂ, ಬೆಚ್ಚಪಂ, ಬೆಚ್ಚು; ಗೆತ್ತಂ, ಗೆತ್ತಪಂ, ಗೆತ್ತು; ಕೆತ್ತಂ, ಕೆತ್ತಪಂ, ಕೆತ್ತು; ಕೆಟ್ಟಂ, ಕೆಟ್ಟಪಂ, ಕೆಟ್ಟು.

**ಪದಕೃತ್ಯ** || ' ಹ್ರಸ್ವಃ ' ಎಂದು ಹೇಳಿದುದರ ಪ್ರಯೋಜನವು ಪೂರ್ವಸೂತ್ರದಂತೆ.

**ವಿಚಾರ ೪೯೦**

ಪೂರ್ವಸೂತ್ರದಂತೆ ಇಲ್ಲಿಯೂ ಸ್ವರಸ್ಥಾನದಲ್ಲಿಯೇ ಕಾರ್ಯವಾಗುವುದೆಂಬುದನ್ನು ಸಾಧಿಸುವುದಕ್ಕಾಗಿ ' ಹ್ರಸ್ವಃ ' ಎಂಬ ವಿಶೇಷಣವು ಬಂದಿದೆ. ಇಲ್ಲಿ ಹೇಳಿದ ಧಾತುಗಳಲ್ಲಿ ಮೊದಲಿನ ಎರಡಕ್ಕೆ ' **ಸೋಶ್ಚಃ || ೪೮೬ ||** ' ಎಂಬ ಸೂತ್ರದಿಂದ ಚ ಕಾರಾದೇಶವೂ ಮುಂದಿನ ಎರಡಕ್ಕೆ ' **ಱೋರ್ಲಘ್ವಾದೇರ್ದ್ವಿಃಸ್ವರಸ್ಯ || ೪೮೪ ||** ' ಎಂಬ ಸೂತ್ರದಿಂದ ತ ಕಾರಾದೇಶವೂ ಕೊನೆಯದಕ್ಕೆ ' **ಡೋಷ್ಟಃ || ೪೮೭ ||** ' ಎಂಬ ಸೂತ್ರದಿಂದ ಟ ಕಾರಾದೇಶವೂ ಬಂದ ತರುವಾಯವೇ ಎ ಕಾರಾದೇಶವು ಬರುವುದೆಂದು ತಿಳಿಯಬೇಕು.

**ಅವತಾರಿಕೆ ೪೯೧**

' ಕೊಲ್, ಸಲ್ ' ಧಾತುಗಳ ಕಾರ್ಯವಿಶೇಷವು.

**ಸೂತ್ರಂ || ಕೊಲ್ಸಲೋ ನಃ || ೪೯೧ ||**

( ೧. ಕೊಲ್ಸಲಃ ೨. ನಃ )

**ಅನುವೃತ್ತಿ** || ೧. ದಿ.

**ವೃತ್ತಿ ||** **ದ ಕಾರಾದಿ ಪ್ರತ್ಯಯಗಳು ಪರವಾಗಲು 'ಕೊಲ್, ಸಲ್' ಧಾತುಗಳಿಗೆ (ಅಂತ್ಯಾಕ್ಷರಕ್ಕೆ) ನ ಕಾರಾದೇಶವಾಗುವುದು.**

**ಪ್ರಯೋಗ ||** ಕೊಂದಂ, ಕೊಂದಪಂ, ಕೊಂದು; ಸಂದಂ, ಸಂದಪಂ, ಸಂದು.

**ಪದಕೃತ್ಯ ||** 'ಕೊಲ್, ಸಲ್' ಧಾತುಗಳಿಗೆ ಎಂದು ಹೇಳಿದುದರಿಂದ 'ಒಲ್, ಬಲಿಲ್' ಮುಂತಾದ ಧಾತುಗಳಿಗೆ ಈ ಕಾರ್ಯವಿಲ್ಲ. ಉದಾ.: ಒಲ್ದಂ, ಬಲಿಲ್ದಂ. ದ ಕಾರಾದಿ ಪ್ರತ್ಯಯ ಗಳು ಪರವಾಗಲು ಎಂದು ಹೇಳಿದುದರಿಂದ ವ ಕಾರಾದಿ ಪ್ರತ್ಯಯಗಳು ಪರದಲ್ಲಿರಲು ಈ ಕಾರ್ಯವಿಲ್ಲ. ಉದಾ.: ಕೊಲ್ವಂ, ಸಲ್ವಂ.

**ಅವತಾರಿಕೆ ೪೯೨**

'ತರ್, ಬರ್' ಧಾತುಗಳ ಕಾರ್ಯವಿಶೇಷವು.

**ಸೂತ್ರಂ || ತರ್ಬರೋರಿಮಿ ಚ || ೪೯೨ ||**

(೧. ತರ್ಬರೋಃ ೨. ಇಮಿ ೩. ಚ)

**ಅನುವೃತ್ತಿ ||** ೧. ದಿ ೨. ನಃ.

**ವೃತ್ತಿ ||** **ದ ಕಾರಾದಿ ಪ್ರತ್ಯಯಗಳೂ ಇಮ್-ಪ್ರತ್ಯಯವೂ ಪರದಲ್ಲಿರಲು 'ತರ್, ಬರ್' ಧಾತುಗಳಿಗೆ (ಅಂತ್ಯಕ್ಕೆ) ನ ಕಾರಾದೇಶವಾಗುವುದು.**

**ಪ್ರಯೋಗ ||** ತಂದಂ, ತಂದಪಂ, ತಂದು, ತನ್ನಿಂ; ಬಂದಂ, ಬಂದಪಂ, ಬಂದು, ಬನ್ನಿಂ.

**ಪದಕೃತ್ಯ ||** 'ತರ್, ಬರ್' ಧಾತುಗಳಿಗೆ ಎಂದು ಹೇಳಿದುದರಿಂದ 'ಪೊಣರ್' ಮೊದಲಾದ ಧಾತುಗಳಿಗೆ ಈ ಕಾರ್ಯವಿಲ್ಲ. ಉದಾ.: 'ಪೊಣರ್ದಂ, ಪೊಣರಿಂ' ಇಮ್ ಪರದಲ್ಲಿರಲು ಎಂದು ಹೇಳಿದುದರಿಂದ ಬೇರೆ ಪ್ರತ್ಯಯಗಳು ಪರವಾದಾಗ ಈ ಕಾರ್ಯವಿಲ್ಲ. ಉದಾ.: ತರ್ಕುಂ, ಬರ್ಕುಂ, ಮುಂತಾದುವು.

**ವಿಚಾರ ೪೯೨**

'ಇಮ್' ಎಂಬುದು ಆಶೀರಾದ್ಯರ್ಥದಲ್ಲಿ ಮಧ್ಯಮಪುರುಷದ ಅನೇಕ ವಚನದ ಇರ್-ಪ್ರತ್ಯಯಕ್ಕೆ ಆದೇಶವಾಗಿ ಬಂದುದು. ಸಮುಚ್ಚಯದ ಚ ಶಬ್ದದಿಂದ ದ ಕಾರಾದಿ ಪ್ರತ್ಯಯಗಳ ಸಮುಚ್ಚಯವಾಗುವುದು.

'ತರ್' ಧಾತುವಿಗೆ ಈ ಸೂತ್ರದಿಂದ 'ತನ್' ಎಂಬ ರೂಪವು ಬರಲು 'ತನ್, ಇಮ್' ಎಂದು ಇರಲು 'ಹ್ರಸ್ವಾತ್ .... || ೫೩ ||' ಎಂಬ ಸೂತ್ರದಿಂದ ದ್ವಿತ್ವವು ಬರಲು 'ತನ್ನಿಂ' ಎಂಬ ರೂಪವಾಗುವುದು. ಇದೇ ಮೇರೆಗೆ 'ಬನ್ನಿಂ'.

**ಅವತಾರಿಕೆ ೪೯೩**

'ನಿಲ್' ಧಾತುವಿನ ಕಾರ್ಯವಿಶೇಷವು.

**ಸೂತ್ರಂ || ನಿಲೋ ವಾ || ೪೯೩ ||**

(೧. ನಿಲಃ ೨. ವಾ)

**ಅನುವೃತ್ತಿ ||** ೧. ದಿ ೨. ನಃ

**ವೃತ್ತಿ ||** **ದ ಕಾರಾದಿ ಪ್ರತ್ಯಯಗಳು ಪರವಾಗಲು 'ನಿಲ್' ಧಾತುವಿಗೆ (ಅಂತ್ಯಾಕ್ಷರಕ್ಕೆ) ನ ಕಾರಾದೇಶವು ವಿಕಲ್ಪವಾಗಿ ಆಗುವುದು.**

**ಪ್ರಯೋಗ** || ನಿಂದಂ, ನಿಲ್ದಂ, ನಿಂದಪಂ, ನಿಲ್ದಪಂ, ನಿಂದು, ನಿಲ್ದು.

**ಪದಕೃತ್ಯ** || 'ನಿಲ್' ಧಾತುವಿಗೆ ಎಂದು ಹೇಳಿದುದರಿಂದ 'ಒಲ್' ಮೊದಲಾದ ಧಾತುಗಳಿಗೆ ಈ ಕಾರ್ಯವಿಲ್ಲ. ಉದಾ. : ಒಲ್ದಂ, ಒಲ್ದಪಂ.

**ಅವತಾರಿಕೆ ೪೯೪**

'ಕೊಳ್' ಧಾತುವಿನ ಕಾರ್ಯವಿಶೇಷವು.

**ಸೂತ್ರಂ || ಕೊಳೋ ಣಃ || ೪೯೪ ||**

( ೧. ಕೊಳಃ ೨. ಣಃ )

**ಅನುವೃತ್ತಿ** || ೧. ದಿ.

**ವೃತ್ತಿ** || ದ ಕಾರಾದಿ ಪ್ರತ್ಯಯಗಳು ಪರದಲ್ಲಿರಲು **'ಕೊಳ್' ಧಾತುವಿಗೆ ( ಅಂತ್ಯಾಕ್ಷರಕ್ಕೆ)** ಣ ಕಾರಾದೇಶವಾಗುವುದು.

**ಪ್ರಯೋಗ** || ಕೊಂಡಂ, ಕೊಂಡಪಂ, ಕೊಂಡು.

**ವಿಚಾರ ೪೯೪**

ಈ ಸೂತ್ರಕ್ಕೆ 'ದಿ' ಎಂಬುದೊಂದರ ಅನುವೃತ್ತಿಯಿದೆ. ಪೂರ್ವಸೂತ್ರದಿಂದ 'ವಾ' ಎಂಬುದರ ಅನುವೃತ್ತಿಯಿಲ್ಲ.

**ಅವತಾರಿಕೆ ೪೯೫**

'ಉಳ್' ಧಾತುವಿನ ಕಾರ್ಯವಿಶೇಷವು.

**ಸೂತ್ರಂ || ಟೌ || ೪೯೫ ||**

**ಅನುವೃತ್ತಿ** || ೧. ಧಾತೋಃ (ಅಧಿಕಾರ ಸೂತ್ರದಿಂದ) ೨. ಣಃ.

**ವೃತ್ತಿ || 'ಟು' ಎಂಬುದು ಪರವಾಗಲು ಧಾತುವಿಗೆ ( ಅಂತ್ಯಾಕ್ಷರಕ್ಕೆ ) ಣ ಕಾರಾದೇಶವಾಗುವುದು.**

**ಪ್ರಯೋಗ** || ಉಂಟು.

**ಪದಕೃತ್ಯ** || 'ಟು' ಪರವಾಗಲು ಎಂದು ಹೇಳಿದುದರಿಂದ 'ಅವು' ಪ್ರತ್ಯಯವು ಪರವಾಗಲು ಈ ಕಾರ್ಯವಿಲ್ಲ. ಉದಾ. : ಒಳವು.

**ವಿಚಾರ ೪೯೫**

'ದಿ' ಎಂಬುದರ ಅನುವೃತ್ತಿಯು ಈ ಸೂತ್ರಕ್ಕೆ ಮುಗಿಯಿತು. ಎಂದರೆ ದ ಕಾರಾದಿ ಪ್ರತ್ಯಯಗಳು ಪರವಾಗಲು ಬರುವ ಕಾರ್ಯಗಳನ್ನು ಹೇಳುವುದು ಮುಗಿಯಿತು.

'ಉಳ್' ಧಾತುವಿಗಷ್ಟೇ ಣ ಕಾರಾದೇಶವನ್ನು ಹೇಳುವುದಿದ್ದರೂ ಸಾಮಾನ್ಯವಾಗಿ 'ಧಾತುವಿಗೆ' ಎಂದು ಹೇಳಿದ ಕಾರಣವೇನೆಂದರೆ 'ಉದೂನ್ನೋಷ್ಟ್ವಪ್ರೂಳಃ **ಸತ್ತಾಯಾಂ ||೬೫೭||'** ಎಂಬ ಸೂತ್ರದಿಂದ ಸತ್ತಾರ್ಥದ 'ಉಳ್' ಧಾತುವಿಗೆ ಪರವಾದ ಉದು-ಪ್ರತ್ಯಯಕ್ಕೆ ಆದೇಶವಾಗಿ ಹೇಳಿದ 'ಟು' ಎಂಬುದು 'ಉಳ್' ಧಾತುವಿಗೆ ಪರವಾಗಿ ಬರುವುದೇ ಹೊರತು ಬೇರೆ ಧಾತುಗಳಿಗೆ ಪರವಾಗಿ ಬಾರದು. ಆದುದರಿಂದ 'ಟು' ಪರವಾಗುವುದು 'ಉಳ್' ಧಾತುವಿಗೇ ಎಂದು ಆರ್ಥಿಕವಾಗಿ ಸಿದ್ಧವಾಗುವುದರಿಂದ 'ಧಾತುವಿಗೆ' ಎಂದು ವೃತ್ತಿಯಲ್ಲಿ ಸಾಮಾನ್ಯವಾಗಿ

ಹೇಳಿದನು. ಆದುದರಿಂದ ಇಲ್ಲಿ 'ಧಾತುವಿಗ' ಎಂದರೆ 'ಉಳ್' ಧಾತುವಿಗೇ ಎಂದು ತಿಳಿವುದು.

**ಅವತಾರಿಕೆ ೪೯೬**

'ಆಗು' ಧಾತುವಿನ ಕಾರ್ಯವಿಶೇಷವು.

**ಸೂತ್ರಂ || ವಾಗೋಃ ಶಪ್ಪಿ || ೪೯೬ ||**

( ೧. ವಾ, ೨. ಆಗೋಃ, ೩. ಶಪ್, ೪. ಪಿ )

**ಅನುವೃತ್ತಿ ||** 'ಧಾತೋಃ' ಎಂಬುದರ ಅಧಿಕಾರವಿದೆ.

**ವೃತ್ತಿ ||** ಪ ಕಾರಾದಿ ಪ್ರತ್ಯಯಗಳು ಪರವಾಗಲು 'ಆಗು' ಧಾತುವಿಗೆ ವಿಕಲ್ಪವಾಗಿ 'ಅಪ್' ಎಂಬ ಆದೇಶವಾಗುವುದು.

**ಪ್ರಯೋಗ ||** ಅಪ್ಪಂ, ಅಪ್ಪಿನಂ; ಆಪಂ, ಆಪಿನಂ.

**ಪದಕೃತ್ಯ ||** 'ಆಗು ಧಾತುವಿಗೆ' ಎಂದು ಹೇಳಿದುದರಿಂದ 'ತೂಗು, ಬಾಗು' ಮೊದಲಾದುವುಗಳಿಗೆ ಈ ಕಾರ್ಯವಿಲ್ಲ. ಉದಾ. : ತೂಗಿಪಂ, ಬಾಗಿಪಂ. 'ಪ ಕಾರಾದಿ ಪ್ರತ್ಯಯಗಳು ಪರವಾಗಲು' ಎಂದು ಹೇಳಿದುದರಿಂದ ವ ಕಾರಾದಿ ಪ್ರತ್ಯಯಗಳು ಪರವಾದಾಗ ಈ ಕಾರ್ಯವಿಲ್ಲ. ಉದಾ. : ಆಗುವಂ, ಆಗುವಿನಂ, ಆಗುವನ್ನಂ.

**ವಿಚಾರ ೪೯೬**

'**ತಾಗೋಶ್ಚ ವಿ ವಾ || ೫೦೨ ||**' ಎಂಬ ಸೂತ್ರದಿಂದ 'ಆಗು, ಪೋಗು, ತಾಗು' ಧಾತುಗಳ ಅಂತ್ಯದ 'ಗು' ಎಂಬ ಭಾಗಕ್ಕೆ ಲೋಪವೂ ಲೋಪವಾದ ಬಳಿಕ '**ಲುಪ್ತದೋಃ ||೫೧೫||**' ಎಂಬ ಸೂತ್ರದಿಂದ ಪ್ರತ್ಯಯದ ವ ಕಾರಕ್ಕೆ ಪ ಕಾರಾದೇಶವೂ ಹೇಳಲ್ಪಡುವುವು. ಈ ಮೇರೆಗೆ ಪ್ರತ್ಯಯವು ಪ ಕಾರಾದಿಯಾಗಲು ಅದು ಪರವಾದಾಗ 'ಆಗು' ಧಾತುವಿಗೆ ಈ ಸೂತ್ರದಿಂದ 'ಅಪ್' ಆದೇಶವು ಹೇಳಲ್ಪಡುತ್ತಿದೆ. ಶಪ್ ( ಶ+ಅಪ್ ) ಎಂದು ಶ ಕಾರವನ್ನು ಸೇರಿಸಿ ಹೇಳಿದುದರಿಂದ '**ಶಿತ್ಸರ್ವಸ್ಯ || ೨೩ ||**' ಎಂಬ ಸೂತ್ರದಿಂದ ಇದು ಸರ್ವಕ್ಕೂ (ಇಡಿಯದಕ್ಕೆ) ಆದೇಶವೆಂದು ತಿಳಿಯಬೇಕು.

'ಅಪ್ಪಂ' ಎಂಬಲ್ಲಿ ಭವಿಷ್ಯತ್ಕಾಲದಲ್ಲಿ ವ-ಪ್ರತ್ಯಯವು ಬಂದಿದೆ. 'ಅಪ್ಪಿನಂ' ಎಂಬಲ್ಲಿ '**ವುದುಮೆ .... ವನ್ನಂ || ೫೮೮ ||**' ಎಂಬ ಸೂತ್ರದಿಂದ 'ವಿನಂ' ಪ್ರತ್ಯಯವು ಬಂದಿದೆ. 'ಅಪ್' ಆದೇಶವು ವೈಕಲ್ಪಿಕವಾದುದರಿಂದ ಅದು ಬಾರದಿದ್ದಾಗ ಉಂಟಾಗುವ 'ಆಪಂ, ಆಪಿನಂ' ಎಂಬ ರೂಪಗಳನ್ನು ಉದಾಹರಿಸಿರುವನು.

**ಅವತಾರಿಕೆ ೪೯೭**

'ಆಗು' ಧಾತುವಿನ ಕಾರ್ಯವಿಶೇಷವು.

**ಸೂತ್ರಂ || ಅಶ್ಪೋಃ ಹಶ್ಚ || ೪೯೭ ||**

( ೧. ಅಶ್, ೨. ಪಃ, ೩. ಹಃ, ೪. ಚ )

**ಅನುವೃತ್ತಿ ||** ೧. ಆಗೋಃ, ೨. ವಾ, ೩. ಪಿ.

**ವೃತ್ತಿ** || **ಪ ಕಾರಾದಿ ಪ್ರತ್ಯಯವು ಪರವಾಗಲು ' ಆಗು ' ಧಾತುವಿಗೆ ' ಅ ' ಎಂಬ ಆದೇಶವು ವಿಕಲ್ಪವಾಗಿ ಆಗುವುದು. ಪ ಕಾರಕ್ಕೆ ಹ ಕಾರಾದೇಶವೂ ಆಗುವುದು.**

**ಪ್ರಯೋಗ** || ಅಹಂ, ಅಪ್ಪಂ; ಅಹಳ್, ಅಪ್ಪಳ್; ಅಹುದು, ಅಪ್ಪುದು.

**ವಿಚಾರ ೪೯೭**

ಈ ಸೂತ್ರದಲ್ಲಿ ' ಚ ' ಶಬ್ದವಿರುವುದರಿಂದ ' ಆಗು ' ಧಾತುವಿಗೆ ಅ ಕಾರಾದೇಶವಲ್ಲದೆ ತನ್ನಿಮಿತ್ತಕವಾಗಿ ಬಂದ ಪ ಕಾರಕ್ಕೆ ಹ ಕಾರಾದೇಶವೂ ಸಮುಚ್ಚಯದಿಂದ ಬರುವುದೆಂದು ತಿಳಿಯಬೇಕು.

**ಅವತಾರಿಕೆ ೪೯೮**

' ಆಗು ' ಧಾತುವಿನ ಕಾರ್ಯವಿಶೇಷವು.

**ಸೂತ್ರಂ** || **ಕಕ್ಕಿ** || **೪೯೮** ||

( ೧ ಕಕ್, ೨. ಕಿ )

**ಅನುವೃತ್ತಿ** || ೧. ಆಗೋಃ.

**ವೃತ್ತಿ** || **ಕ ಕಾರಾದಿ ಪ್ರತ್ಯಯಗಳು ಪರವಾಗಲು ' ಆಗು ' ಧಾತುವಿಗೆ ' ಅಕ್ ' ಆದೇಶವಾಗುವುದು.**

**ಪ್ರಯೋಗ** || ಅಕ್ಕುಂ, ಅಕ್ಕುಗುಂ, ಅಕ್ಕೆ.

**ಪದಕೃತ್ಯ** || ಕ ಕಾರಾದಿ ಪ್ರತ್ಯಯಗಳು ಪರವಾಗಲು ಎಂದು ಹೇಳಿದುದರಿಂದ ' ಗುಂ ' ಮೊದಲಾದ ಗ ಕಾರಾದಿ ಪ್ರತ್ಯಯವು ಪರವಾದಾಗ ಈ ಕಾರ್ಯವಿಲ್ಲ. ಉದಾ. : ಆಗುಗುಂ, ಆಗುಗೆ.

**ವಿಚಾರ ೪೯೮**

ಕ ಕಾರ ಪೂರ್ವಕವಾಗಿ ' ಅಕ್ ' ಆದೇಶವನ್ನು ಹೇಳಿದುದರಿಂದ ಇದು ಸರ್ವಾದೇಶವು. ರೂಪಸಿದ್ಧಿ: — ಆಗು, ಗುಂ; — ' ವಾಗುಪೋಗ್ವಿಸುಬ್ .... ಗಃ ಕಃ || ೪೭೨ || ' ಎಂಬ ಸೂತ್ರದಿಂದ—ಆಗು, ಕುಂ; ಈ ಸೂತ್ರದಿಂದ—ಅಕ್, ಕುಂ. ಸಂಧಿಯಿಂದ—ಅಕ್ಕುಂ.

**ಅವತಾರಿಕೆ ೪೯೯**

' ಪೋಗು ' ಧಾತುವಿನ ಕಾರ್ಯವಿಶೇಷವು.

**ಸೂತ್ರಂ** || **ದೋರ್ಲುಪ್ಪೋಗೋಃ** || **೪೯೯** ||

( ೧. ದೋಃ, ೨. ಲುಪ್, ೩. ಪೋಗೋಃ )

**ಅನುವೃತ್ತಿ** || ೧. ಕಿ.

**ವೃತ್ತಿ** || **ಕ ಕಾರಾದಿ ಪ್ರತ್ಯಯವು ಪರವಾಗಲು ' ಪೋಗು ' ಧಾತುವಿನ ' ಗು ' ಎಂಬ ಭಾಗಕ್ಕೆ ಲೋಪವಾಗುವುದು.**

**ಪ್ರಯೋಗ** || ಪೋಕುಂ, ಪೋಕುಗೆ, ಪೋಕೆ.

**ಪದಕೃತ್ಯ** || ಕ ಕಾರಾದಿ ಪ್ರತ್ಯಯಗಳು ಎಂದು ಹೇಳಿದುದರಿಂದ ' ಗುಂ ' ಮೊದಲಾದ ಗ ಕಾರಾದಿ ಪ್ರತ್ಯಯಗಳು ಪರವಾದಾಗ ಈ ಕಾರ್ಯವಿಲ್ಲ. ಉದಾ. : ಪೋಗುಗುಂ, ಪೋಗುಗೆ.

**ಅವತಾರಿಕೆ ೫೦೦**

‘ಪೋಗು, ಆಗು’ ಧಾತುಗಳ ಕಾರ್ಯವಿಶೇಷವು.

**ಸೂತ್ರಂ ॥ ಆಗೋಶ್ಚ ದಿತ್ತೌ ॥ ೫೦೦ ॥**

(೧. ಆಗೋಃ, ೨. ಚ, ೩. ದಿತ್ತೌ.)

**ಅನುವೃತ್ತಿ** ॥ ೧. ಪೋಃ, ೨. ಲುಪ್.

**ವೃತ್ತಿ** ॥ ದ ಕಾರಾದಿ ಪ್ರತ್ಯಯಗಳೂ ಇತ್ತು ಪ್ರತ್ಯಯವೂ ಪರವಾಗಲು ‘ಪೋಗು, ಆಗು’ ಧಾತುಗಳ ‘ಗು’ ಎಂಬ ಭಾಗಕ್ಕೆ ಲೋಪವಾಗುವುದು.

**ಪ್ರಯೋಗ** ॥ ಪೋದಂ, ಪೋದಪಂ, ಪೋಯಿತ್ತು; ಆದಂ, ಆದಪಂ, ಆಯಿತ್ತು.

**ಪದಕೃತ್ಯ** ॥ ‘ದ ಕಾರಾದಿ ಪ್ರತ್ಯಯಗಳೂ ಇತ್ತು ಪ್ರತ್ಯಯವೂ ಪರವಾಗಲು’ ಎಂದು ಹೇಳಿದುದರಿಂದ ಬೇರೆ ಪ್ರತ್ಯಯವು ಪರವಾದಾಗ ಈ ಕಾರ್ಯವಿಲ್ಲ. ಉದಾ: ಆಗುವಂ, ಪೋಗುವಂ.

**ವಿಚಾರ ೫೦೦**

ಸೂತ್ರದಲ್ಲಿ ‘ಚ’ ಶಬ್ದವಿರುವುದರಿಂದ ‘ಪೋಗು’ ಧಾತುವಿಗೂ ಎಂಬ ಅರ್ಥವು ಸಮುಚ್ಚಯದಿಂದ ಬರುವುದು. ‘ದಿತ್ತೌ’ ಎಂಬಲ್ಲಿ ‘ದಿ’ ಇತ್ತೌ ಎಂದು ಎರಡು ಪದಗಳು ‘ಚ’ ಶಬ್ದವು ಮಧ್ಯದೀಪಕವಾಗಿ ಆಗೋಃ, ಪೋಗೋಃ ಇವುಗಳ ಮುಂದೆಯೂ, ‘ದಿ’ ಇತ್ತೌ ಇವುಗಳ ಮುಂದೆಯೂ ಅನ್ವಯಿಸಲ್ಪಡುವುದು.

ಪೋಯಿತ್ತು:— ಪೋಗು ಇತ್ತು; ಈ ಸೂತ್ರದಿಂದ ‘ಪೋ’ ಇತ್ತು; ‘**ಬದೋ ಬಹುಲಂ ॥೩೯॥**’ ಎಂಬ ಸೂತ್ರದಿಂದ ಯಕಾರಾಗಮವು; ಪೋಯ್ ಇತ್ತು—ಪೋಯಿತ್ತು.

ಆಯಿತ್ತು:—ಆಗು ಇತ್ತು; ಆ ಇತ್ತು; ‘**ಯಕ್ಸ್ವರೇ ಸ್ವರಸ್ಯ ॥೩೫॥**’ ಎಂಬ ಸೂತ್ರದಿಂದ ಯ ಕಾರಾಗಮವು; ಆಯ್ ಇತ್ತು—ಆಯಿತ್ತು.

**ಅವತಾರಿಕೆ ೫೦೧**

‘ಆಗು, ಪೋಗು’ ಧಾತುಗಳ ಕಾರ್ಯವಿಶೇಷವು—

**ಸೂತ್ರಂ ॥ ಇತಾವೇರ್ಯಶ್ಚ ॥೫೦೧॥**

(೧. ಇತೌ. ೨. ಏಃ. ೩. ಯಃ, ೪. ಚ.)

**ಅನುವೃತ್ತಿ** ॥ ೧. ಆಗೋಃ, ೨. ಚ, ೩. ಪೋಃ, ೪. ಲುಪ್.

**ವೃತ್ತಿ** ॥ ‘ಇತು’ ಪ್ರತ್ಯಯವು ಪರದಲ್ಲಿರಲು ‘ಆಗು, ಪೋಗು’ ಧಾತುಗಳ ‘ಗು’ ಎಂಬ ಭಾಗಕ್ಕೆ ಲೋಪವಾಗುವುದು. ಇ ಕಾರಕ್ಕೆ ಯ ಕಾರಾದೇಶವೂ ಆಗುವುದು.

**ಪ್ರಯೋಗ** ॥ ಆಯ್ತು, ಪೋಯ್ತು.

ರೂಪಸಿದ್ಧಿ ॥ ಆಯ್ತು:—ಆಗು, ಇತು; ಈ ಸೂತ್ರದಿಂದ ‘ಗು’ ಲೋಪವಾಗಲು ‘ಆ, ಇತು’ ಎಂದಿರಲು ಇದೇ ಸೂತ್ರದಿಂದ ಪ್ರತ್ಯಯದ ಯ ಕಾರಾದೇಶವು ಆಗಲು ‘ಆಯ್‌ತು’ ಎಂಬಿವು ಸೇರುವುದರಿಂದ ‘ಆಯ್ತು’ ಎಂದಾಗುವುದು.

**ವಿಚಾರ ೫೦೧**

ಇಲ್ಲಿ ಯ ಕಾರಾದೇಶವಾಗುವ ಇ ಕಾರವು ಯಾವುದೆಂದರೆ 'ಆಗು, ಪೋಗು 'ಗಳ ಗು ಲೋಪ ನಿಮಿತ್ತವಾದ ಇ ತುವಿನ ಇ ಕಾರನೆಂದು ತಿಳಿಯಬೇಕು.

**ಅವತಾರಿಕೆ ೫೦೨**

'ಆಗು, ಪೋಗು, ತಾಗು ' ಧಾತುಗಳ ಕಾರ್ಯವಿಶೇಷವು.

**ಸೂತ್ರಂ || ತಾಗೋಶ್ಚ ವಿ ವಾ || ೫೦೨ ||**

(೧. ತಾಗೋಃ, ೨ ಚ, ೩. ವಿ, ೪. ವಾ)

**ಅನುವೃತ್ತಿ** || ೧. ಆಗೋಃ, ೨. ಚ, ೩. ಪೋಃ, ೪. ಲುಪ್.

**ವೃತ್ತಿ** || **ವ ಕಾರಾದಿ ಪ್ರತ್ಯಯವು ಪರವಾಗಲು 'ಆಗು, ಪೋಗು' ಧಾತುಗಳ ಮತ್ತು 'ತಾಗು' ಧಾತುವಿನ 'ಗು' ಎಂಬ ಭಾಗಕ್ಕೆ ವಿಕಲ್ಪವಾಗಿ ಲೋಪವಾಗುವುದು.**

**ಪ್ರಯೋಗ** || ಆಗುವಂ, ಆಪಂ; ಆಗುವಿನಂ, ಆಪಿನಂ; ಪೋಗುವಂ, ಪೋಪಂ; ಪೋಗುಪಿನಂ, ಪೋಪಿನಂ; ತಾಗುವಂ, ತಾಪಂ; ತಾಗುಪಿನಂ, ತಾಪಿನಂ.

**ಪದಕೃತ್ಯ** || 'ವ ಕಾರಾದಿ ಪ್ರತ್ಯಯವು ಪರವಾಗಲು' ಎಂದು ಹೇಳಿದುದರಿಂದ ಬೇರೆ ಪ್ರತ್ಯಯವು ಪರವಾಗಲು ಈ ಕಾರ್ಯವಿಲ್ಲ. ಉದಾ: ಆದಂ, ಪೋದಂ, ತಾಗಿದಂ.

**ವಿಚಾರ ೫೦೨**

'ಆಗೋಃ' ಮತ್ತು 'ಚ' ಎಂಬ ಪದಗಳ ಅನುವೃತ್ತಿಯಿರುವುದರಿಂದ 'ಆಗು, ಪೋಗು' ಧಾತುಗಳ ಎಂಬ ಅರ್ಥವು ಬರುವುದು. ಈ ಸೂತ್ರದಲ್ಲಿ 'ತಾಗೋಃ' ಎಂದು 'ತಾಗು' ಧಾತುವಿಗೂ ಗ್ರಹಣವು.

'ಗು' ಲೋಪವಾದಾಗ '**ಲುಪ್ತದೋಃ** || **೫೧೫** ||' ಎಂಬ ಸೂತ್ರದಿಂದ ವ ಕಾರಕ್ಕೆ ಪ ಕಾರಾದೇಶವು. ಲೋಪವಿದ್ದಾಗ ಪ ಕಾರಾದೇಶವಿಲ್ಲ. ಪ್ರತ್ಯುದಾಹರಣವಾದ 'ಆದಂ' ಎಂಬಲ್ಲಿ '**ಆಗೋಶ್ಚ ದಿತೌ** || **೫೦೦** ||' ಎಂಬ ಸೂತ್ರದಿಂದ ಧಾತುವಿನ 'ಗು' ಲೋಪವು.

**ಅವತಾರಿಕೆ ೫೦೩**

'ಸು' ಶಬ್ದಾಂತ ಧಾತುಗಳ ಕಾರ್ಯವಿಶೇಷವು.

**ಸೂತ್ರಂ || ಸೋರ್ಬಹುಸ್ವರಸ್ಯ || ೫೦೩ ||**

(೧. ಸೋಃ, ೨. ಬಹುಸ್ವರಸ್ಯ)

**ಅನುವೃತ್ತಿ** || ೧. ದೋಃ, ೨. ಲುಪ್, ೩. ವಾ, ೪. ವಿ.

**ವೃತ್ತಿ** || **ವ ಕಾರಾದಿ ಪ್ರತ್ಯಯಗಳು ಪರದಲ್ಲಿರಲು ಬಹುಸ್ವರಗಳಾದ 'ಸು' ಶಬ್ದಾಂತ ಧಾತುಗಳ ಕೊನೆಯ 'ಸು' ಭಾಗಕ್ಕೆ ವಿಕಲ್ಪವಾಗಿ ಲೋಪವಾಗುವುದು.**

**ಪ್ರಯೋಗ** || ಅಲಸುವಂ, ಅಲಪಂ; ಕಿನಿಸುವಂ, ಕಿನಿಪಂ; ಬೆಸಸುವಂ, ಬೆಸಪಂ, ವರಿಸುವಂ, ವರಿಪಂ.

**ಪದಕೃತ್ಯ** || 'ಸು ಶಬ್ದಾಂತವಾದ' ಎಂದು ಹೇಳಿದುದರಿಂದ 'ಹರಗು, ಕಲಕು' ಮೊದಲಾದ ಧಾತುಗಳಿಗೆ ಈ ಕಾರ್ಯವಿಲ್ಲ. ಉದಾ: ಹರಗುವಂ, ಕಲಕುವಂ. 'ಬಹುಸ್ವರಗಳಾದ'

ಎಂದು ಹೇಳಿದುದರಿಂದ 'ಹಾಸು, ಬೀಸು' ಮುಂತಾದ ಧಾತುಗಳಿಗೆ ಈ ಕಾರ್ಯವಿಲ್ಲ. ಉದಾ: ಹಾಸುವಂ, ಬೀಸುವಂ. 'ವಕಾರಾದಿ ಪ್ರತ್ಯಯಗಳು ಪರವಾಗಲು' ಎಂದು ಹೇಳಿದುದರಿಂದ 'ಹರಸಿದಂ, ಬರಸಿದಂ' ಎಂಬಲ್ಲಿ ಈ ಕಾರ್ಯವಾಗಿಲ್ಲ.

**ವಿಚಾರ ೫೦೩**

ಇಲ್ಲಿ ಉದ್ದಿಷ್ಟವಾದ 'ಸು' ಶಬ್ದಾಂತ ಧಾತುಗಳಲ್ಲಿ 'ಸು' ಎಂಬುದು ಅನಾಹಿತವಾದುದು (= ವಿಧಿಸಲ್ಪಡದೆ ಇದ್ದುದು, ಮೂಲತಃ ಇದ್ದುದು) ಆಗಿರಬಹುದು; ಇಲ್ಲವೆ ಆಹಿತವಾದುದು (= ವಿಧಿಸಲ್ಪಟ್ಟುದು, ಹೊಸದಾಗಿ ಬಂದುದು) ಆಗಿರಬಹುದು. ಮೊದಲು ಅನಾಹಿತ 'ಸು' ಶಬ್ದಾಂತಗಳನ್ನು ಉದಾಹರಿಸಿದ್ದಾನೆ: 'ಅಲಸು, ಕಿನಿಸು, ಮುನಿಸು, ಮುಳಿಸು' ಮುಂತಾದುವು.

ಇನ್ನು 'ಆಲಸ್ಯ' ಶಬ್ದದ ತದ್ಭವವಾದ 'ಅಲಸು' ಎಂಬುದರಲ್ಲಿಯೂ 'ಕಿನಿ, ಮುನಿ ಮುಳಿ' ಧಾತುಗಳ ಮುಂದೆ '**ಸುರ್ವಾನಿಕಿನಿಮುಳಿಭ್ಯಃ** || ೫೭೫ ||' ಎಂಬ ಸೂತ್ರದಿಂದ 'ಸು' ಬರಲು ಉಂಟಾಗುವ 'ಮುನಿಸು, ಕಿನಿಸು, ಮುಳಿಸು' ಎಂಬಿವುಗಳಲ್ಲಿಯೂ 'ಸು' ಎಂಬುದು ಹೊಸದಾಗಿ ಬಂದುದರಿಂದ ಅವನ್ನು ಅನಾಹಿತ 'ಸು' ಶಬ್ದಾಂತಗಳೆಂದು ಹೇಗೆ ಹೇಳುವುದು? ಎಂದು ಶಂಕಿಸಿದರೆ ಸಮಾಧಾನವೇನೆಂದರೆ — ಆಖ್ಯಾತಪ್ರಕರಣದಲ್ಲಿ ಧಾತು ವಿಚಾರವೇ ಪ್ರಸ್ತುತವಾದುದು. ಅವುಗಳಲ್ಲಿಯೇ ಆಹಿತಾನಾಹಿತ ವಿಚಾರವೇ ಹೊರತು ಉಳಿದುವುಗಳಲ್ಲಿ ಅಲ್ಲ. ಶಂಕೆಗಾಗಿ ತೆಗೆದುಕೊಂಡ 'ಮುನಿಸು, ಮುಳಿಸು' ಮುಂತಾದುವು (ಕೃದಂತ) ಭಾವ ನಾಮಗಳೇ ಹೊರತು ಧಾತುಗಳಲ್ಲ. ಆದುದರಿಂದ ಈ ಶಂಕೆಯು ನಿರರ್ಥಕವಾದುದು. ಇಲ್ಲಿ ಉದಾಹರಿಸಿದುವು ಅಖಂಡ ಧಾತುಗಳೇ ಆದುದರಿಂದ ಅವು ಅನಾಹಿತ 'ಸು' ಶಬ್ದಾಂತಗಳು. ಆಹಿತ 'ಸು' ಶಬ್ದಾಂತಗಳು 'ವರಿಸು' ಮುಂತಾದುವು 'ವರಣ' ಶಬ್ದದ ಮುಂದೆ '**ಇಸುಪ್ ತತ್ ಕರೋತಿ**........ || ೫೯೩ ||' ಎಂಬ ಮುಂದಿನ ಸೂತ್ರದಿಂದ 'ಇಸು' ಪ್ರತ್ಯಯವು ಬರಲು ಉಂಟಾದುದರಿಂದ ಇಲ್ಲಿ ಕಾಣುವ 'ಸು' ಎಂಬುದು ಆಹಿತವೆಂದು ತಿಳಿಯಬೇಕು. 'ರಾಗಿಸು, ಭೋಗಿಸು' ಮೊದಲಾದುವೂ ಇದರಂತೆಯೇ ಆಹಿತ 'ಸು' ಶಬ್ದಾಂತಗಳು. ಈ ಮೇರೆಗೆ ದ್ವಿವಿಧ 'ಸು' ಶಬ್ದಾಂತ ಧಾತುಗಳಲ್ಲಿ ಈ ಸೂತ್ರದಿಂದ ಬಹುಸ್ವರಕ ಧಾತುಗಳ 'ಸು' ಶಬ್ದಕ್ಕೇ ಲೋಪವಾಗುವುದೆಂದು ತಿಳಿಯಬೇಕು. 'ಅಲಸಂ, ಕಿನಿಸಂ' ಮೊದಲಾದೆಡೆಗಳಲ್ಲಿ '**ಉಷ್ಣದೋಃ** || ೫೧೫ ||' ಎಂಬ ಸೂತ್ರದಿಂದ ಪ್ರತ್ಯಯದ ವ ಕಾರಕ್ಕೆ ಪ ಕಾರಾದೇಶವಾಗಿರುವುದು.

**ಅವತಾರಿಕೆ ೫೦೪**

'ಸು' ಶಬ್ದಾಂತ ಧಾತುಗಳ ಕಾರ್ಯವಿಶೇಷವು.

**ಸೂತ್ರಂ || ಕಿ || ೫೦೪ ||**

**ಅನುವೃತ್ತಿ** || ೧. ಲೋಃ, ೨. ಲುಪ್. (ವಾ ಎಂಬುದರ ಅನುವೃತ್ತಿ ಈ ಸೂತ್ರಕ್ಕಿಲ್ಲ.)

**ವೃತ್ತಿಃ**|| **ಕ ಕಾರಾದಿ ಪ್ರತ್ಯಯಗಳು ಪರವಾಗಲು 'ಸು' ಶಬ್ದಾಂತ ಧಾತುಗಳ ಅಂತ್ಯ 'ಸು' ಶಬ್ದಕ್ಕೆ ಲೋಪವಾಗುವುದು.**

**ಪ್ರಯೋಗ** || ಮಾಡಿಕುಂ, ಮಾಡಿಕುಗುಂ, ಮಾಡಿಕ್ಕೆ; ಭಂಜಿಕುಂ, ಭಂಜಿಕುಗುಂ, ಭಂಜಿಕ್ಕೆ.

**ಪದಕೃತ್ಯ** || 'ಕ ಕಾರಾದಿ ಪ್ರತ್ಯಯವು ಪರವಾಗಲು' ಎಂದು ಹೇಳಿದುದರಿಂದ ವ ಕಾರಾದಿ ಪ್ರತ್ಯಯವು ಪರವಾಗಲು ಈ ಕಾರ್ಯವಿಲ್ಲ. ಉದಾ: ಪೂಜಿಸುವಂ, ಪೂಜಿಪಂ.

**ವಿಚಾರ ೫೦೪**

'ಕಿ' ಎಂದು ಬೇರೆ ಸೂತ್ರವನ್ನು ಮಾಡಿದುದರಿಂದಲೇ ಪೂರ್ವಸೂತ್ರದಿಂದ ವಾ ಎಂಬುವರ ಅನುವೃತ್ತಿಯು ಇಲ್ಲಿ ಇಲ್ಲವೆಂದು ತಿಳಿವುದು. ಪೂರ್ವಸೂತ್ರದಲ್ಲಿ ಆಹಿತ, ಅನಾಹಿತ ಎಂಬೀ ಎರಡು ತರದ 'ಸು' ವನ್ನು ಇಟ್ಟುಕೊಂಡಿದ್ದರೂ ಈ ಸೂತ್ರದಲ್ಲಿ 'ಸು' ಎಂಬುದು ಆಹಿತವೆಂದು ತಿಳಿಯಬೇಕು. ಏಕೆಂದರೆ ಇಲ್ಲಿ ಕ ಕಾರಾದಿ ಪ್ರತ್ಯಯವು ಪರವಾಗಲು ಎಂಬುದಾಗಿ ನಿಮಿತ್ತನಿರ್ದೇಶವಿದೆ. ಈ ಕ ಕಾರವು (ಕ ಕಾರಾದಿ ಪ್ರತ್ಯಯವು) ಆಹಿತ 'ಸು' ಶಬ್ದದ ಮುಂದೆ ಸಂಭವಿಸುವುದೇ ಹೊರತು ಅನಾಹಿತ 'ಸು' ಶಬ್ದದ ಮುಂದೆ ಸಂಭವಿಸುವುದಿಲ್ಲ. '**ವಾಗು ಪೋಗ್ವಿಸುಬ್ರ ಲ ಟ ನ ಣೋ ಗಃ ಕಃ || ೪೭೨ ||**' ಎಂಬ ಸೂತ್ರದಿಂದ 'ಇಸು' ಪ್ರತ್ಯಯಾಂತ ಧಾತುಗಳ ಮುಂದಿನ ಗ ಕಾರಾದಿ ಪ್ರತ್ಯಯದ ಗ ಕಾರಕ್ಕೆ ಕ ಕಾರಾದೇಶವು ಹೇಳಲ್ಪಟ್ಟಿದೆ. ಆದುದರಿಂದ 'ಇಸು' ಪ್ರತ್ಯಯದ 'ಸು' ಶಬ್ದವು ಆಹಿತವಾದುದೆಂದು ತಿಳಿವುದು. ಈ ಕಾರಣ ದಿಂದಲೇ ಇಲ್ಲಿ ಧಾತುವು ಬಹುಸ್ವರಕವೆಂಬುದು ಆರ್ಥಿಕವಾಗಿ (ಅರ್ಥಾತ್) ಪ್ರಾಪ್ತವಾಗುವುದು. ಏಕಸ್ವರಕ, ದ್ವಿಸ್ವರಕಗಳಲ್ಲಿ ಈ 'ಇಸು' ಪ್ರತ್ಯಯಾಂತತೆಯೂ ಸಂಭವಿಸುವುದಿಲ್ಲ.

**ಅವತಾರಿಕೆ ೫೦೫**

'ಉಣ್' ಮೊದಲಾದ ಧಾತುಗಳ ಕಾರ್ಯವಿಶೇಷವು.

**ಸೂತ್ರಂ || ಉಣ್ಕೊಳ್ಕಾಣೋ ದೋ ಡಃ || ೫೦೫ ||**

( ೧. ಉಣ್‌ಕೊಳ್‌ಕಾಣಃ, ೨. ದಃ, ೩. ಡಃ )

**ವೃತ್ತಿ || ಉಣ್, ಕೊಳ್, ಕಾಣ್ ಧಾತುಗಳಿಗೆ ಪರವಾದ ದ ಕಾರಕ್ಕೆ ಡ ಕಾರಾದೇಶ ವಾಗುವುದು.**

**ಪ್ರಯೋಗ** || ಉಣ್ಡಂ, ಉಣ್ಡಪಂ, ಉಣ್ಡು; ಕೊಣ್ಡಂ, ಕೊಣ್ಡಪಂ, ಕೊಣ್ಡು; ಕಣ್ಡಂ, ಕಣ್ಡಪಂ, ಕಣ್ಡು.

**ಪದಕೃತ್ಯ** || ಮೂರು ಧಾತುಗಳನ್ನೇ ನಿರ್ದೇಶಮಾಡಿದುದರಿಂದ ಬೇರೆ ಧಾತುಗಳ ಮುಂದಿನ ದ ಕಾರಕ್ಕೆ ಈ ಕಾರ್ಯವಿಲ್ಲ. ಉದಾ : ಕೊನ್ದಂ, ಸನ್ದಂ.

**ವಿಚಾರ ೫೦೫**

ಇಲ್ಲಿ ಕೊಟ್ಟ ಉದಾಹರಣೆಗಳಲ್ಲಿ 'ಕೊಣ್ಡಂ' ಮೊದಲಾದೆಡೆಗಳಲ್ಲಿ '**ಕೋಳೋ ಣಃ || ೪೯೪ ||**' ಎಂಬ ಸೂತ್ರದಿಂದ 'ಕೊಳ್' ಧಾತುವಿನ ಳ ಕಾರಕ್ಕೆ ಣ ಕಾರಾದೇಶವಾಗಿದೆ ಎಂದೂ 'ಕಣ್ಡಂ' ಮೊದಲಾದೆಡೆಗಳಲ್ಲಿ '**ಕೀಟಿಶ್ಚೀಬ್ಬೀಟಾಟ್ಕಾಣಃ || ೪೭೮ ||**' ಈ ಸೂತ್ರದಿಂದ '**ಕಾಣ್**' ಧಾತುವಿನ ಆ ಕಾರಕ್ಕೆ ಹ್ರಸ್ವಾದೇಶವಾಗಿದೆಯೆಂದೂ ಪ್ರತ್ಯುದಾಹರಣ ಗಳಾದ 'ಕೊನ್ದಂ, ಸನ್ದಂ' ಮೊದಲಾದೆಡೆಗಳಲ್ಲಿ '**ಕೊಲ್ಸಲೋ ನಃ || ೪೯೦ ||**' ಎಂಬ ಸೂತ್ರದಿಂದ '**ಕೊಲ್, ಸಲ್**' ಧಾತುಗಳ ಲ ಕಾರಕ್ಕೆ ನ ಕಾರಾದೇಶವಾಗಿದೆಯೆಂದೂ ತಿಳಿಯಬೇಕು.

**ಅವತಾರಿಕೆ ೫೦೬**

'ದ' ಪ್ರತ್ಯಯದ ದ ಕಾರಕ್ಕೆ ಆಗುವ ಕಾರ್ಯವಿಶೇಷವು.

**ಸೂತ್ರಂ || ವರ್ಗಪ್ರಥಮಾತ್ಪೂರ್ವಃ || ೫೦೬ ||**

(೧. ವರ್ಗಪ್ರಥಮಾತ್, ೨. ಪೂರ್ವಃ)

**ಅನುವೃತ್ತಿ** || ೧. ದಃ

**ವೃತ್ತಿ** || ವರ್ಗಪ್ರಥಮಾಕ್ಷರಗಳಿಗೆ ಪರವಾದ ದ ಕಾರಕ್ಕೆ ಪೂರ್ವವರ್ಣಾದೇಶವಾಗುವುದು.

**ಪ್ರಯೋಗ** || ಒಕ್ಕಂ, ಒಕ್ಕಪಂ, ಒಕ್ಕು; ಮಿಕ್ಕಂ, ಮಿಕ್ಕಪಂ, ಮಿಕ್ಕು; ಎಚ್ಚಂ, ಎಚ್ಚಪಂ, ಎಚ್ಚು; ಬೆಚ್ಚಂ, ಬೆಚ್ಚಪಂ, ಬೆಚ್ಚು; ಅಟ್ಟಂ, ಅಟ್ಟಪಂ, ಅಟ್ಟು; ಸುಟ್ಟಂ, ಸುಟ್ಟಪಂ, ಸುಟ್ಟು; ಮಿತ್ತಂ, ಮಿತ್ತಪಂ, ಮಿತ್ತು; ಮುತ್ತಂ, ಮುತ್ತಪಂ, ಮುತ್ತು; ಇತ್ತಂ, ಇತ್ತಪಂ, ಇತ್ತು; ತಪ್ಪಂ, ತಪ್ಪಪಂ, ತಪ್ಪು.

**ಪದಕೃತ್ಯ** || 'ವರ್ಗಪ್ರಥಮಾಕ್ಷರಗಳಿಗೆ ಪರವಾದ' ಎಂದು ಹೇಳಿದುದರಿಂದ 'ಕೊಯ್ದಂ, ಸಾರ್ದ್ದಂ, ಗೆಲ್ದಂ' ಮೊದಲಾದೆಡೆಗಳಲ್ಲಿ ಈ ಕಾರ್ಯವಿಲ್ಲ.

**ವಿಚಾರ ೫೦೬**

ಇಲ್ಲಿ ಪೂರ್ವವರ್ಣಾದೇಶವೆಂದರೆ ದ ಕಾರವು ಯಾವುದರ ಮುಂದೆ ಬಂದಿರುವುದೋ ಆ ವರ್ಣದ ಆದೇಶವೆಂದು ತಿಳಿಯಬೇಕು. ದ ಕಾರದ ಪೂರ್ವವರ್ಣವಾದ ತ ಕಾರದ ಆದೇಶವೆಂದು ತಿಳಿಯಬಾರದು.

'ಒಕ್ಕಂ' ಮೊದಲಾದೆಡೆಯಲ್ಲಿ '**ಗೋಃ ಕಃ || ೪೮೫ ||**' ಎಂಬ ಸೂತ್ರದಿಂದ ಧಾತುವಿನ ಅಂತ್ಯಕ್ಕೆ ಕಾದೇಶವು ಬಂದ ಬಳಿಕ '**ಒಕ್, ದ, ಅಮ್;**' ಈ ಸೂತ್ರದಿಂದ 'ಒಕ್, ಕ್, ಅಮ್' ಎಂದಾಗಲು 'ಒಕ್ಕಂ' ಮೊದಲಾದ ರೂಪಗಳಾಗುವುವು. ಎಚ್ಚಂ — '**ಸೋಶ್ಚಃ || ೪೮೬ ||**' ಎಂಬ ಸೂತ್ರದಿಂದ 'ಸು' ಎಂಬುದಕ್ಕೆ ಚ ಕಾರಾದೇಶವು. 'ಅಟ್ಟಂ' ಮೊದಲಾದೆಡೆಯಲ್ಲಿ '**ಡೋಷ್ಟಃ || ೪೮೭ ||**' ಎಂಬ ಸೂತ್ರದಿಂದ 'ಡು' ವಿಗೆ ಟ ಕಾರಾದೇಶವು. 'ಮುತ್ತಂ, 'ಮಿತ್ತಂ, ಇತ್ತಂ' ಈ ಸ್ಥಾನಗಳಲ್ಲಿ '**ಮುದೋಸ್ತಃ || ೪೮೦ ||**', '**ಮಿದೇರವಘಾತೇ ||೪೮೨||**', '**ಈಸಸ್ತಸ್ಗ್ರಸ್ವಶ್ಚ || ೪೭೭ ||**' ಎಂಬೀ ಸೂತ್ರಗಳಿಂದ ತ ಕಾರಾದೇಶವು. 'ತಪ್ಪಂ' ಮೊದಲಾದೆಡೆಯಲ್ಲಿ '**ತವೋರ್ದೋಃ ಪಃ || ೪೮೦ ||**' ಈ ಸೂತ್ರದಿಂದ ಪ ಕಾರಾದೇಶವು. ಈ ಸ್ಥಳಗಳಲ್ಲೆಲ್ಲ ದ ಕಾರವು ಚ ಟ ತ ಪ ಕಾರಗಳಿಗೆ ಪರವಾಗುವುದರಿಂದ ದ ಕಾರಕ್ಕೆ ಇವೇ ವರ್ಣಗಳ ಆದೇಶವಾಗುವುದು.

**ಅವತಾರಿಕೆ ೫೦೭**

ಕವಲಾದಿ ಧಾತುಗಳ ಕಾರ್ಯವಿಶೇಷವು.

**ಸೂತ್ರಂ || ಕವಲಾದಿಭ್ಯಸ್ತಃ || ೫೦೭ ||**

(೧. ಕವಲಾದಿಭ್ಯಃ, ೨. ತಃ)

**ಅನುವೃತ್ತಿ** || ೧. ದಃ

**ವೃತ್ತಿ || 'ಕವಲ್' ಮೊದಲಾದ ಧಾತುಗಳಿಗೆ ಪರವಾದ ದ ಕಾರಕ್ಕೆ ತ ಕಾರಾದೇಶವಾಗುವುದು.**

**ಪ್ರಯೋಗ ||** ಕವಲ್ತುದು, ಕವಲ್ತಪುದು, ಕವಲ್ತು; ಮಡಲ್ತುದು, ಮಡಲ್ತಪುದು, ಮಡಲ್ತು; ಕೊನರ್ತುದು, ಕೊನರ್ತಪುದು, ಕೊನರ್ತ್ತು.

'ಕವಲ್, ಮಡಲ್, ಜಲ್, ಕಲ್, ಪೋಲ್, ಸಾಲ್, ಸೋಲ್, ಪೇಲ್, ನೇಲ್, ಸೂಲ್, ಕೂರ್, ಕಸರ್, ಕನರ್, ಕೊನರ್, ತಳಿರ್, ಬಿಳಿರ್, ಚಿಗುರ್, ಬೆಮರ್, ಅೞ್, ಉೞ್, ಕೇೞ್, ಚಳಿ, ಪೊಳೆ, ಅಱ, ಕುಱ, ಬಾ, ಕೀ, ಪೂ, ಬೀ, ಓ, ಕೂನ್, ಪೇನ್, ಸೀನ್, ಆನ್, ನೋನ್, ಈನ್' ಇದು ಕವಲಾದಿ ಧಾತುಗಣವು, ಆಕೃತಿಗಣವು, ಎಂದರೆ ಬೇರೆ ಇಂತಹ ಧಾತುಗಳ ಸಮಾವೇಶವು ಈ ಗಣದಲ್ಲಿ ಆಗುವುದು.

**ಅವತಾರಿಕೆ ೫೦೮**

'ಒಱೆ, ಅಱೆ' ಧಾತುಗಳ ಕಾರ್ಯವಿಶೇಷವು.

**ಸೂತ್ರಂ || ಒಱೆ ಅಱೆ ಸ್ರಾವಶೋಷಣಯೋಃ || ೫೦೮ ||**

(೧. ಒಱೆ ಅಱೆ, ೨. ಸ್ರಾವಶೋಷಣಯೋಃ)

**ಅನುವೃತ್ತಿ ||** ೧. ದಃ, ೨. ತಃ

(ಒಱೆ, ಅಱೆ — ಪಂಚಮೀ ವಿಭಕ್ತಿಯ ಅರ್ಥದಲ್ಲಿ ವಿಭಕ್ತಿಪ್ರತ್ಯಯಲೋಪ)

**ವೃತ್ತಿ ||** ಸ್ರಾವಾರ್ಥದ 'ಒಱೆ' ಧಾತುವಿಗೂ ಶೋಷಣಾರ್ಥದ 'ಅಱೆ' ಧಾತುವಿಗೂ ಪರವಾದ ದ ಕಾರಕ್ಕೆ ತ ಕಾರಾದೇಶವಾಗುವುದು.

**ಪ್ರಯೋಗ ||** ಒಱೆತಂ, ಒಱೆತಪಂ, ಒಱೆತು; ಅಱೆತಂ, ಅಱೆತಪಂ, ಅಱೆತು.

**ಪದಕೃತ್ಯ ||** 'ಒಱೆ ಅಱೆಗಳಿಗೆ ಪರವಾದ' ಎಂದು ಹೇಳಿದುದರಿಂದ ಈ ಅರ್ಥಗಳಲ್ಲಿರುವ 'ಒಸರ್, ಸೋರ್' ಎಂಬಿವುಗಳಿಗೂ 'ಬತ್ತು, ಒಣಗು' ಎಂಬಿವುಗಳಿಗೂ ಈ ಕಾರ್ಯವಿಲ್ಲ. ಉದಾ: ಒಸರ್ದುದು, ಸೋರ್ದುದು; ಬತ್ತಿದುದು, ಒಣಗಿದುದು. 'ಸ್ರಾವಾರ್ಥದ, ಶೋಷಣಾರ್ಥದ' ಎಂದು ಹೇಳಿದುದರಿಂದ 'ಒಱೆದಳ್, ಒಱೆದಪಳ್ — ಹೇನನ್ನು ಕೊಲ್ಲುವಳು' ಎಂಬ ಅರ್ಥ. 'ಅಱೆದಂ, ಅಱೆದಪಂ — ಚಪೇಟೆಯಿಂದ ಹೊಡೆಯುವವನು' ಎಂಬರ್ಥ.

**ವಿಚಾರ ೫೦೮**

'ಒಱೆ' ಧಾತುವು 'ಸೋರು, ಹೇನನ್ನು ಕೊಲ್ಲು' ಈ ಅರ್ಥಗಳಲ್ಲಿಯೂ 'ಅಱೆ' ಧಾತುವು 'ಶೋಷಣ ಚಪೇಟಾದಾನ' ಈ ಅರ್ಥಗಳಲ್ಲಿಯೂ ಇರುವುವು. ಸ್ರವಣ, ಶೋಷಣ ಈ ಅರ್ಥಗಳಲ್ಲಿ ಪ್ರಯೋಗಿಸಿದಾಗಲೇ ಇಲ್ಲಿ ಹೇಳುವ ಕಾರ್ಯವಾಗುವುದೆಂದು ತಿಳಿಯಬೇಕು. 'ಒಱೆ ಅಱೆಭ್ಯಾಂ' ಎಂದು ಪಂಚಮಿಯಲ್ಲಿ ಪ್ರಯೋಗಿಸಬೇಕಾಗಿದ್ದರೂ ಸ್ವತಂತ್ರನಾದ **ಸೂತ್ರಕಾರನು** ವಿಭಕ್ತಿಪ್ರತ್ಯಯವನ್ನು ಸೇರಿಸದೆ 'ಒಱೆ, ಅಱೆ' ಎಂದು ಪ್ರಕೃತಿಯಂತೆ ಪ್ರಯೋಗಿಸಿರುವನು. ಪಂಚಮೀ ದ್ವಿವಚನವೆಂದು ಇಟ್ಟುಕೊಂಡು ಅರ್ಥದ್ವಯಕ್ಕೆ ಯಥಾಕ್ರಮಾನ್ವಯವನ್ನು ಮಾಡಿಕೊಳ್ಳಬೇಕು.

**ಅವತಾರಿಕೆ ೫೦೯**

'ನಿಲ್' ಧಾತುವಿನ ಕಾರ್ಯವಿಶೇಷವು.

**ಸೂತ್ರಂ || ನಿಲೋ ಲಃ || ೫೦೯ ||**

( ೧. ನಿಲಃ, ೨. ಲಃ )

**ಅನುವೃತ್ತಿ ||** ೧. ದಃ, ೨. ತಃ

**ವೃತ್ತಿ || 'ನಿಲ್' ಧಾತುವಿನ ಲ ಕಾರಕ್ಕೆ ಪರವಾದ ದ ಕಾರಕ್ಕೆ ತ ಕಾರಾದೇಶವಾಗುವುದು.**

**ಪ್ರಯೋಗ ||** ನಿಲ್ತಂ, ನಿಲ್ತಪಂ, ನಿಲ್ತು.

**ಪದಕೃತ್ಯ ||** ' ನಿಲ್ ಧಾತುವಿನ ' ಎಂದು ಹೇಳಿದುದರಿಂದ ' ಒಲ್, ಗೆಲ್ ' ಮುಂತಾದ ಧಾತುಗಳಿಗೆ ಈ ಕಾರ್ಯವಿಲ್ಲ. ಉದಾ : ಒಲ್ದಂ, ಗೆಲ್ದಂ. ' ಲ ಕಾರಕ್ಕೆ ಪರವಾದ ' ಎಂದು ಹೇಳಿದುದರಿಂದ ' ನಿಲ್ ' ಧಾತುವಿನ ಲ ಕಾರಕ್ಕೆ ನ ಕಾರಾದೇಶವಾದಾಗ ಈ ಕಾರ್ಯವಿಲ್ಲ. ಉದಾ : ನಿಂದಂ, ನಿಂದಪಂ, ನಿಂದು.

**ವಿಚಾರ ೫೦೯**

' ನಿಲ್ ಧಾತುವಿಗೆ ಪರವಾದ ದ ಕಾರಕ್ಕೆ ' ಎಂದು ಇಷ್ಟೇ ಹೇಳಿದ್ದರೂ ಸಾಗುವಂತಿದ್ದರೂ ಇಲ್ಲಿ ' ನಿಲ್ ಧಾತುವಿನ ಲ ಕಾರಕ್ಕೆ ' ಎಂದು ಹೇಳುವ ಆವಶ್ಯಕತೆ ಏನು ಎಂದು ಆಕ್ಷೇಪಿಸಲಾಗದು. ' **ನಿಲೋ ವಾ || ೪೯೩ ||** ' ಎಂಬ ಸೂತ್ರದಿಂದ ' ನಿಲ್ ' ಧಾತುವಿನ ಲ ಕಾರಕ್ಕೆ ವಿಕಲ್ಪವಾಗಿ ನ ಕಾರಾದೇಶವನ್ನು ಹೇಳಿದುದರಿಂದ ನ ಕಾರಾದೇಶವಾದಾಗ ಈ ಕಾರ್ಯವಾಗುವುದಿಲ್ಲವೆಂಬುದನ್ನು ಸ್ಪಷ್ಟಪಡಿಸುವುದಕ್ಕಾಗಿ ' ಲ ಕಾರಕ್ಕೆ ' ಎಂದು ಹೇಳಬೇಕಾಯಿತು.

**ಅವತಾರಿಕೆ ೫೧೦**

' ನೇಲ್ ' ಧಾತುವಿನ ಕಾರ್ಯವಿಶೇಷವು.

**ಸೂತ್ರಂ || ನೇಲೋ ವಾ || ೫೧೦ ||**

( ೧. ನೇಲಃ, ೨. ವಾ )

**ಅನುವೃತ್ತಿ ||** ೧. ದಃ, ೨. ತಃ

**ವೃತ್ತಿ || ' ನೇಲ್ ' ಧಾತುವಿಗೆ ಪರವಾದ ದ ಕಾರಕ್ಕೆ ವಿಕಲ್ಪವಾಗಿ ತ ಕಾರಾದೇಶವಾಗುವುದು.**

**ಪ್ರಯೋಗ ||** ನೇಲ್ತಂ, ನೇಲ್ದಂ; ನೇಲ್ತಪಂ, ನೇಲ್ದಪಂ; ನೇಲ್ತು, ನೇಲ್ದು.

**ಪದಕೃತ್ಯ ||** ' ನೇಲ್ ' ಧಾತುವಿಗೆ ಪರವಾದ ' ಎಂದು ಹೇಳಿದುದರಿಂದ ' ಜೋಲ್ ' ಮುಂತಾದ ಧಾತುಗಳಿಗೆ ಈ ಕಾರ್ಯವಿಲ್ಲ. ಉದಾ : ಜೋಲ್ದಂ, ಜೋಲ್ದಪಂ, ಜೋಲ್ದು.

**ಅವತಾರಿಕೆ ೫೧೧**

' ಪೊಡರ್ ' ಮೊದಲಾದ ಧಾತುಗಳ ಕಾರ್ಯವಿಶೇಷವು.

**ಸೂತ್ರಂ || ಪೊಡತೊಡಮಿಳಿಬೆಳಪಸಕಸೋಸ್ಯುದ್ಯದಿಬಿದ್ಯಡರೋ ವಃ ಪಃ || ೫೧೧ ||**

( ೧. ಪೊಡತೊಡ..........ಬಿದ್ಯಡರಃ, ೨. ವಃ, ೩. ಪಃ )

**ಅನುವೃತ್ತಿ ||** ೧. ವಾ

[ ಸೂತ್ರದಲ್ಲಿ ಒಂದನೆಯ ಪದವು — 'ಪೊಡ............ಬಿದ್ಯಡರಃ' ಎಂಬುದು ಈ ದ್ವಂದ್ವಸಮಾಸಾಂತದ ರೇಫವನ್ನು 'ಪೊಡ' ಮೊದಲಾದ ಎಲ್ಲವುಗಳ ಮೇಲೆಯೂ ಇಟ್ಟು ಕೊಳ್ಳಬೇಕು. ಇದರಿಂದ 'ಪೊಡರ್' ಮೊದಲಾದ ಧಾತುಸ್ವರೂಪಗಳು ಕಾಣಬರುವುವು. ]

**ವೃತ್ತಿ** || '**ಪೊಡರ್**' **ಮೊದಲಾದ ಧಾತುಗಳಿಗೆ ಪರವಾದ ವ ಕಾರಕ್ಕೆ ವಿಕಲ್ಪವಾಗಿ ಪ ಕಾರಾದೇಶವಾಗುವುದು.**

**ಪ್ರಯೋಗ** || ಪೊಡಪ್ಪರಂ, ಪೊಡವ್ವರಂ; ಪೊಡಪ್ಪಿರನಂ, ಪೊಡವ್ವಿರನಂ; ತೊಡಪ್ಪರಂ, ತೊಡವ್ವರಂ; ತೊಡಪ್ಪಿರನಂ, ತೊಡವ್ವಿರನಂ; ಮಿಳಿಪ್ಪರಂ, ಮಿಳಿವ್ವರಂ; ಮಿಳಿಪ್ಪಿರನಂ, ಮಿಳಿವ್ವಿರನಂ; ಬೆಳಪ್ಪರಂ, ಬೆಳವ್ವರಂ; ಬೆಳಪ್ಪಿರನಂ, ಬೆಳವ್ವಿರನಂ; ಪಸಪ್ಪರಂ, ಪಸವ್ವರಂ; ಪಸಪ್ಪಿರನಂ, ಪಸವ್ವಿರನಂ; ಕಸಪ್ಪರಂ, ಕಸವ್ವರಂ; ಕಸಪ್ಪಿರನಂ, ಕಸವ್ವಿರನಂ; ಉಸಿಪ್ಪರಂ, ಉಸಿವ್ವರಂ; ಉಸಿಪ್ಪಿರನಂ, ಉಸಿವ್ವಿರನಂ; ಉದಿಪ್ಪರಂ, ಉದಿವ್ವರಂ; ಉದಿಪ್ಪಿರನಂ, ಉದಿವ್ವಿರನಂ; ಅದಿಪ್ಪರಂ, ಅದಿವ್ವರಂ; ಅದಿಪ್ಪಿರನಂ, ಅದಿವ್ವಿರನಂ; ಬಿದಿಪ್ಪರಂ, ಬಿದಿವ್ವರಂ; ಬಿದಿಪ್ಪಿರನಂ, ಬಿದಿವ್ವಿರನಂ; ಅಡಪ್ಪರಂ, ಅಡವ್ವರಂ; ಅಡಪ್ಪಿರನಂ, ಅಡವ್ವಿರನಂ.

**ಪದಕೃತ್ಯ** || 'ಪೊಡರ್ ಮೊದಲಾದುವುಗಳಿಗೆ' ಎಂದು ಹೇಳಿದುದರಿಂದ '**ಪೊಣರ್**' ಮುಂತಾದುವಕ್ಕೆ ಈ ಕಾರ್ಯವಿಲ್ಲ. ಉದಾ : **ಪೊಣವ್ವರಂ, ಪೊಣವ್ವಿರನಂ**; ( ಪ ಕಾರಾದೇಶ ವಿಲ್ಲ ). 'ವ ಕಾರಕ್ಕೆ' ಎಂದು ಹೇಳಿದುದರಿಂದ **ದ ಕಾರಕ್ಕೆ ಈ ಕಾರ್ಯವಿಲ್ಲ**. ಉದಾ : ಪೊಡದ್ದರಂ, ತೊಡದ್ದರಂ.

**ವಿಚಾರ ೫೧೧**

ಸೂತ್ರದಲ್ಲಿ 'ಪೊಡ, ತೊಡ' ಮುಂತಾದ ಎರಡೆರಡು ಅಕ್ಷರಗಳ ಹನ್ನೊಂದು ಭಾಗಗಳ ತರುವಾಯ ರೇಫವು ಬಂದಿದೆ. ಈ ರೇಫವು ದ್ವಂದ್ವಸಮಾಸದಿಂದ ಸೇರಿದ ಆ ಹನ್ನೊಂದೂ ಭಾಗಗಳಿಗೆ ಅನ್ವಯಿಸುವುದು. '**ದ್ವಂದ್ವಾಂತೇ ಶ್ರೂಯಮಾಣಃ ಪ್ರತ್ಯೇಕಮಭಿಸಂಬಧ್ಯತೇ**' ಎಂಬ ವಚನವಿದೆ. ಶ್ರುತಿ ಸೌಕರ್ಯ ಲಾಘವಗಳಿಗಾಗಿ ಹೀಗೆ ಹೇಳಿದೆ.

**ಅವತಾರಿಕೆ ೫೧೨**

'ಕಾರ್' ಮೊದಲಾದ ಧಾತುಗಳ ಕಾರ್ಯವಿಶೇಷವು.

**ಸೂತ್ರಂ || ಕಾಕೂಗೋನೇತಬರಃ || ೫೧೨ ||**

( ಒಂದೇ ಪದವು )

**ಅನುವೃತ್ತಿ** || ೧. ವಃ, ೨. ಪಃ, ( 'ವಾ' ಎಂಬುದರ ಅನುವೃತ್ತಿ ಈ ಸೂತ್ರದಿಂದ ಇಲ್ಲ. )

( ಇಲ್ಲಿಯೂ ದ್ವಂದ್ವಾಂತ್ಯ ರೇಫವು ಪ್ರತ್ಯೇಕವಾಗಿ ಅನ್ವಯಿಸುವುದು. ಇದರಿಂದ '**ಕಾರ್, ಕೂರ್, ಗೋರ್, ನೇರ್, ತರ್, ಬರ್**' ಎಂಬ ಧಾತುರೂಪಗಳು ಕಾಣಬರುವುವು. )

**ವೃತ್ತಿ** || '**ಕಾರ್**' **ಮೊದಲಾದ ಧಾತುಗಳಿಗೆ ಪರವಾದ ವ ಕಾರಕ್ಕೆ ಪ ಕಾರಾದೇಶ ವಾಗುವುದು.**

**ಪ್ರಯೋಗ** || **ಕಾಪ್ಪರಂ, ಕಾಪ್ಪರನ್ನಂ; ಕೂಪ್ಪರಂ, ಕೂಪ್ಪರನ್ನಂ; ಗೋಪ್ಪರಂ, ಗೋಪ್ಪರನ್ನಂ; ನೇಪ್ಪರಂ, ನೇಪ್ಪರನ್ನಂ; ತಪ್ಪರಂ, ತಪ್ಪರನ್ನಂ; ಬಪ್ಪರಂ, ಬಪ್ಪರನ್ನಂ.**

**ಅವತಾರಿಕೆ ೫೧೩**

‘ ಓ ’ ಮೊದಲಾದ ಧಾತುಗಳ ಕಾರ್ಯವಿಶೇಷವು.

**ಸೂತ್ರಂ ॥ ಓಪೂತವ್ಯವೋಃ ॥ ೫೧೩ ॥**

( ಒಂದೇ ಪದ )

**ಅನುವೃತ್ತಿ** ॥ ೧. ವಃ, ೨. ಪಃ

**ವೃತ್ತಿ ॥ ‘ ಓ, ಪೂ, ತವು, ಅವು ’ ಧಾತುಗಳಿಗೆ ಪರವಾದ ವ ಕಾರಕ್ಕೆ ಪ ಕಾರಾದೇಶವಾಗುವುದು.**

**ಪ್ರಯೋಗ ॥** ಓಪಂ, ಓಪಿಸಂ, ಓಪಿಸೆಗಂ; ಪೂಪುದು, ಪೂಪಿಸಂ, ಪೂಪಿಸೆಗಂ ತವಿಪುದು, ತವಿಪಿಸಂ, ತವಿಪಿಸೆಗಂ; ಅವಿಪಂ, ಅವಿಪಿಸಂ, ಅವಿಪಿಸೆಗಂ.

**ವಿಚಾರ ೫೧೩**

ಇಲ್ಲಿ ಧಾತುಸ್ವರೂಪಗಳನ್ನು **ಸೂತ್ರಕಾರನು** ಪೂರ್ಣವಾಗಿ ಉಚ್ಚರಿಸಿವನು.

**ಅವತಾರಿಕೆ ೫೧೪**

ವ ಕಾರಕ್ಕೆ ಪ ಕಾರಾದೇಶವಾಗುವ ಸ್ಥಾನಗಳನ್ನು ಹೇಳುವನು.

**ಸೂತ್ರಂ ॥ ಆದಿಷ್ಟಾದ್ರಟಃ ॥ ೫೧೪ ॥**

( ೧. ಆದಿಷ್ಟಾತ್; ೨. ರಟಃ )

**ಅನುವೃತ್ತಿ** ॥ ೧. ವಃ, ೨. ಪಃ

**ವೃತ್ತಿ ॥ ಆದೇಶವಾಗಿ ಬಂದ ರೇಫ ಟ ಕಾರಗಳಿಗೆ ಪರವಾದ ವ ಕಾರಕ್ಕೆ ಪ ಕಾರಾದೇಶವಾಗುವುದು.**

**ಪ್ರಯೋಗ** ॥ ತೋರ್ಪ್ಪಂ, ತೋರ್ಪ್ಪಿಸಂ; ಸಾರ್ಪ್ಪಂ, ಸಾರ್ಪ್ಪಿಸಂ; ಮಾಟ್ಪಂ, ಮಾಟ್ಪಿಸಂ; ಸೂಟ್ಪಂ, ಸೂಟ್ಪಿಸಂ.

**ಪದಕೃತ್ಯ** ॥ ‘ ಆದೇಶವಾಗಿ ಬಂದ ’ ಎಂದು ಹೇಳಿದುದರಿಂದ ಸಹಜ ರೇಫ ಟ ಕಾರಗಳ ಮುಂದಿನ ವ ಕಾರಕ್ಕೆ ಪಾದೇಶವಿಲ್ಲ. ಉದಾ : ಅಲರ್ವ್ವುದು, ಒಸರ್ವ್ವುದು, ಬಾಟ್ವಂ, ಕೇಟ್ವಂ.

**ವಿಚಾರ ೫೧೪**

ಯಾವ ಧಾತುಗಳಲ್ಲಿ ರೇಫವು ಇಲ್ಲವೆ ಟ ಕಾರವು ಆದೇಶವಾಗಿ ಬಂದಿದೆಯೋ ಅಂತಹ ಧಾತುಸ್ಥಾನಗಳಲ್ಲಿಯೋ ವ ಕಾರಕ್ಕೆ ಪ ಕಾರಾದೇಶವೆಂದು ತಿಳಿಯಬೇಕು.

**ಅವತಾರಿಕೆ ೫೧೫**

ವ ಕಾರಕ್ಕೆ ಪ ಕಾರಾದೇಶವಾಗುವ ಸ್ಥಾನಗಳು.

**ಸೂತ್ರಂ ॥ ಲುಪ್ತದೋಃ ॥ ೫೧೫ ॥**

( ಒಂದೇ ಪದ )

**ಅನುವೃತ್ತಿ** ॥ ೧. ವಃ, ೨. ಪಃ

[ ‘ ದು ’ ಎಂದರೆ ಶಬ್ದಸ್ವರೂಪದಲ್ಲಿ ಅಂತ್ಯವ್ಯಂಜನವನ್ನು ಹಿಡಿದು ಮುಂದಿನ ಎಲ್ಲ ಭಾಗವು ಎಂಬುದಾಗಿ ಹಿಂದೆ ‘ **ದುರಂತ್ಯವ್ಯಂಜನಾದಿಃ ॥ ೧೩ ॥** ’ ಎಂಬ ಸಂಜ್ಞಾಸೂತ್ರದಲ್ಲ ಹೇಳಿದೆ. ‘ ಮಾಡಿಸು ’ ಎಂಬಲ್ಲಿ ‘ ಸು ’ ಎಂಬುದು ‘ ದು ’ ಆಗಿದೆ. ]

**ವೃತ್ತಿ** || **'ದು' ಲೋಪವನ್ನು ಹೊಂದಿದ ಧಾತುಗಳಿಗೆ ಪರವಾದ ವ ಕಾರಕ್ಕೆ ಪ ಕಾರಾದೇಶವಾಗುವುದು.**

**ಪ್ರಯೋಗ** || ಮಾಡಿಪಂ, ಕೂಡಿಪಂ, ಅಲಪಂ, ಬೆಸಪಂ, ರಾಗಿಪಂ, ಭೋಗಿಪಂ.

**ಪದಕೃತ್ಯ** || 'ದು ಲೋಪವನ್ನು ಹೊಂದಿದ' ಎಂದು ಹೇಳಿದುದರಿಂದ 'ದು' ಲೋಪವನ್ನು ಹೊಂದದಾಗ ಈ ಕಾರ್ಯವಿಲ್ಲ. ಉದಾ : ಮಾಡಿಸುವಂ, ಕೂಡಿಸುವಂ, ಅಲಸುವಂ, ಬೆಸಸುವಂ.

**ವಿಚಾರ ೫೧೫**

'ಲುಪ್ತದು' ಎಂಬುದು ಅಧಿಕಾರ ಸೂತ್ರದಿಂದ ಅನುವೃತ್ತವಾಗುವ 'ಧಾತೋಃ' ಎಂಬುದಕ್ಕೆ ವಿಶೇಷಣವು. ಇದರಿಂದ 'ದು ಲೋಪವನ್ನು ಹೊಂದಿದ ಧಾತುಗಳಿಗೆ' ಎಂಬ ಅರ್ಥವು ಬರುವುದು. 'ಮಾಡಿಪಂ' ಮೊದಲಾದ ಉದಾಹರಣೆಗಳಲ್ಲಿ '**ಸೋರ್ಬಹುಸ್ವರಸ್ಯ** || ೫೦೩ ||' ಎಂಬ ಸೂತ್ರದಿಂದ ಧಾತುವಿನ 'ಸು' ಲೋಪವಾಗಿದೆ.

**ಅವತಾರಿಕೆ ೫೧೬**

ನ ಕಾರಾಂತ ಧಾತುಗಳ ಕಾರ್ಯವಿಶೇಷವು.

**ಸೂತ್ರಂ** || **ನಃ** || **೫೧೬** ||

(ಒಂದೇ ಪದ)

**ಅನುವೃತ್ತಿ** || ೧. ವಃ, ೨. ಪಃ.

**ವೃತ್ತಿ** || ನ ಕಾರಾಂತ ಧಾತುವಿಗೆ ಪರವಾದ **ವ ಕಾರಕ್ಕೆ ಪ ಕಾರಾದೇಶವಾಗುವುದು.**

**ಪ್ರಯೋಗ** || ಆಂಪಂ, ಆಂಪಿನಂ; ಸೀಂಪಂ, ಸೀಂಪಿನಂ; ನೋಂಪಂ, ನೋಂಪಿನಂ.

**ಪದಕೃತ್ಯ** || 'ನ ಕಾರಾಂತ ಧಾತುವಿಗೆ' ಎಂದು ಹೇಳಿದುದರಿಂದ ಉಳಿದೆಡೆಯಲ್ಲಿ ಈ ಕಾರ್ಯವಿಲ್ಲ. ಉದಾ : ಕೊಲ್ವಂ, ಗೆಲ್ವಂ.

**ಅವತಾರಿಕೆ ೫೧೭**

'ನಾನ್' ಮೊದಲಾದ ಧಾತುಗಳ ಕಾರ್ಯವಿಶೇಷವು.

**ಸೂತ್ರ** || **ನಾನೆನ್ತಿನೋ ಬಃ** || **೫೧೭** ||

( ೧. ನಾನೆನ್ತಿನಃ, ೨. ಬಃ )

**ಅನುವೃತ್ತಿ** || ೧. ವಃ

**ವೃತ್ತಿ** || '**ನಾನ್, ಎನ್, ತಿನ್**' ಧಾತುಗಳಿಗೆ **ಪರವಾದ ವ ಕಾರಕ್ಕೆ ಬ ಕಾರಾದೇಶವಾಗುವುದು.**

**ಪ್ರಯೋಗ** || ನಾನ್ಬಂ, ನಾನ್ಬಿನಂ, ನಾನ್ಬನ್ನಂ; ಎನ್ಬಂ, ಎನ್ಬಿನಂ, ಎನ್ಬನ್ನಂ; ತಿನ್ಬಂ, ತಿನ್ಬಿನಂ, ತಿನ್ಬನ್ನಂ.

**ಪದಕೃತ್ಯ** || 'ನಾನ್, ಎನ್, ತಿನ್ ಧಾತುಗಳಿಗೆ' ಎಂದು ಹೇಳಿದುದರಿಂದ 'ಆಗು, ಪೋಗು' ಮುಂತಾದ ಧಾತುಗಳಿಗೆ ಈ ಕಾರ್ಯವಿಲ್ಲ. ಉದಾ : ಆಪಂ, ಪೋಪಂ.

**ವಿಚಾರ ೫೧೭**

ಪೂರ್ವಸೂತ್ರದಲ್ಲಿ ನ ಕಾರಾಂತ ಧಾತು ಸಾಮಾನ್ಯಕ್ಕೆ ಪ ಕಾರಾದೇಶವು ಹೇಳಿದೆ. ಆದಕ್ಕೆ ಅಪವಾದವನ್ನು ಹೇಳುವ ಸೂತ್ರವಿದು. ಪ್ರತ್ಯುದಾಹರಣೆಗಳಾದ 'ಆಪಂ, ಪೋಪಂ'

ಎಂಬೆಡೆಗಳಲ್ಲಿ ' ತಾಗೋಶ್ಚ ವಿ ವಾ || ೫೦೨ || ' ಎಂಬ ಸೂತ್ರದಿಂದ ಧಾತುವಿನ ' ದು ' ಲೋಪ ವಾಗಲು ' ಲುಪ್ತದೋಃ || ೫೧೫ || ' ಎಂಬ ಸೂತ್ರದಿಂದ ವ ಕಾರಕ್ಕೆ ಪ ಕಾರಾದೇಶವಾಗಿದೆ.

**ಅವತಾರಿಕೆ ೫೧೮**

ಣ ಕಾರಾಂತ ಧಾತುಗಳ ಕಾರ್ಯವಿಶೇಷವು.

**ಸೂತ್ರಂ || ಣಃ || ೫೧೮ ||**

( ಒಂದೇ ಪದವು. )

**ಅನುವೃತ್ತಿ** || ೧. ವಃ, ೨. ಒಃ.

**ವೃತ್ತಿ** || **ಣ ಕಾರಾಂತ ಧಾತುಗಳಿಗೆ ಪರವಾದ ವ ಕಾರಕ್ಕೆ ಬ ಕಾರಾದೇಶವಾಗುವುದು.**

**ಪ್ರಯೋಗ** || ಮಾಣ್ಬಂ, ಮಾಣ್ಬೆನಂ, ಮಾಣ್ಬನ್ನಂ; ಉಣ್ಬಂ, ಉಣ್ಬೆನಂ, ಉಣ್ಬನ್ನಂ; ಕಾಣ್ಬಂ, ಕಾಣ್ಬೆನಂ, ಕಾಣ್ಬನ್ನಂ.

**ಪದಕೃತ್ಯ** || ' ಣ ಕಾರಾಂತ.... ' ಎಂದು ಹೇಳಿದುದರಿಂದ ತದಿತರ ಧಾತುಗಳಿಗೆ ಈ ಕಾರ್ಯವಿಲ್ಲ. ಉದಾ : ಕಾಯ್ವಂ[1], ಪೊಯ್ವಂ.

**ಅವತಾರಿಕೆ ೫೧೯**

' ತರ್, ಬರ್ ' ಧಾತುಗಳ ಕಾರ್ಯವಿಶೇಷವು.

**ಸೂತ್ರಂ || ತರ್ಬರೋರ್ಲುಬ್ಲುಪ್ತೇऽಯಿ || ೫೧೯ ||**

( ೧. ತರ್ಬರೋಃ, ೨. ಲುಬ್, ೩. ಲುಪ್ತೇ, ೪. ಅಯಿ. )

**ವೃತ್ತಿ** || **' ಅಯ್ ' ಪ್ರತ್ಯಯವು ಲುಪ್ತವಾದಾಗ ' ತರ್, ಬರ್ ' ಧಾತುಗಳ ಅಂತ್ಯಾಕ್ಷರಕ್ಕೆ ಲೋಪವಾಗುವುದು.**

**ಪ್ರಯೋಗ** || ಪೊತ್ತಗೆಯಂ ತಾ ಮಗನೇ; ಇತ್ತಲ್ ಬಾ ಮಗಳೇ.

**ಪದಕೃತ್ಯ** || ' ತರ್, ಬರ್ ಧಾತುಗಳ ' ಎಂದು ಹೇಳಿದುದರಿಂದ ಬೇರೆ ಧಾತುಗಳಿಗೆ ಈ ಕಾರ್ಯವಾಗುವುದಿಲ್ಲ. ಉದಾ : ನೀನಾಗು, ನೀಂ ಪೋಗು. ' ಅಯ್ ಲುಪ್ತವಾದಾಗ ' ಎಂದು ಹೇಳಿದುದರಿಂದ ಈ ಕಾರ್ಯವಾಗುವುದಿಲ್ಲ. ಉದಾ : ತಾರಯ್, ಬಾರಯ್.

**ವಿಚಾರ ೫೧೯**

' ಅಯೋರ್ಲ್ಲುಪೌ || ೪೬೮ || ' ಎಂಬ ಸೂತ್ರದಿಂದ ಅಯ್-ಪ್ರತ್ಯಯಕ್ಕೆ ಲೋಪವೂ ಅ ಕಾರಾದೇಶವೂ ವೈಕಲ್ಪಿಕವೆಂದು ಹೇಳಿವೆ. ಅಯ್-ಪ್ರತ್ಯಯಕ್ಕೆ ಲೋಪವಾದಾಗ ' ತರ್, ಬರ್ ' ಧಾತುಗಳ ಅಂತ್ಯಾಕ್ಷರಕ್ಕೂ ಲೋಪವನ್ನು ಈ ಸೂತ್ರದಲ್ಲಿ ಹೇಳಿರುವನು.

'ಅಯ್-ಪ್ರತ್ಯಯದ ಲೋಪವಾಗಲು' ಎಂಬ ಅರ್ಥಕ್ಕಾಗಿ 'ತರ್ಬರೋರ್ಲುಬ್ಲುಪ್ತೇऽಯಃ' ಎಂದು ವ್ಯಧಿಕರಣ ನಿರ್ದೇಶಮಾಡದೆ ಅಯ್-ಪ್ರತ್ಯಯವು ಲುಪ್ತವಾದಾಗ ( 'ಲುಪ್ತೇऽಯಿ' ) ಎಂದು ಸಮಾನಾಧಿಕರಣ ನಿರ್ದೇಶಮಾಡುವ ಕಾರಣವೇನು ಎಂದು ಆಕ್ಷೇಪಿಸಬಹುದು. ಆದರೆ ಮುಂದಿನ ಸೂತ್ರಕ್ಕೆ ' ಅಯಿ ' ಎಂಬ ಪದದ ಅನುವೃತ್ತಿ ಬೇಕಾಗಿರುವುದರಿಂದ ಹೀಗೆ ಹೇಳಿ ದ್ದಾನೆಂದು ತಿಳಿಯಬೇಕು.

ಈ ಸೂತ್ರದಲ್ಲಿ ' ಲುಪ್ತೇ ' ( ಲುಪ್ತವಾದಾಗ ) ಎಂಬ ಪದವು ಬೇರೆ ಆದೇಶವಾದಾಗ ಈ ಕಾರ್ಯವಾಗುವುದಿಲ್ಲವೆಂಬುದನ್ನು ತೋರಿಸುವುದಕ್ಕೇ ಎಂದು ತಿಳಿಯಬೇಕು. ಇದರಿಂದ

ಪಾಠಾಂತರ : ೧ ಕೊಯ್ವಂ.

'ಅಯ್' ಲುಪ್ತವಾದಾಗಲೇ ಈ ಕಾರ್ಯವಲ್ಲದೆ ಅಯ್-ಪ್ರತ್ಯಯಕ್ಕೆ ಅ ಕಾರಾದೇಶವಾದಾಗ ಈ ಕಾರ್ಯವಾಗುವುದಿಲ್ಲವೆಂಬ ಅರ್ಥವು ಬರುವುದು.

ಲೋಪವನ್ನು ಅಯ್-ಪ್ರತ್ಯಯಕ್ಕಷ್ಟೇ ಹೇಳಿರುವುದರಿಂದ 'ಲುಪ್ತೇ' (ಲೋಪವಾಗಲು) ಎಂದು ಇಷ್ಟೇ ಹೇಳಿದ್ದರೂ ಸಾಗುವಂತಿದ್ದರೂ 'ಲುಪ್ತೇಽಯಿ' ಎಂದು ಅಯ್-ಪ್ರತ್ಯಯವನ್ನು ಮತ್ತೆ ಹೇಳಿದುದು ಲೋಪಪ್ರತಿಯೋಗಿ ಯಾವುದು ಎಂಬುದನ್ನು ತೋರಿಸುವುದಕ್ಕಾಗಿ ಅಲ್ಲದೆ ಬೇರೆ ಪ್ರತ್ಯಯಗಳಿಂದ ಪ್ರತ್ಯೇಕಿಸುವುದಕ್ಕಾಗಿ ಅಲ್ಲ ಎಂದು ತಿಳಿಯಬೇಕು.

'ಪೊತ್ತಗೆಯಂ ತಾ ಮಗನೇ, ಇತ್ತಲ್ ಬಾ ಮಗಳೇ' ಈ ಪ್ರಯೋಗಗಳಲ್ಲಿ 'ದೀರ್ಘಃ ‖ ೫೨೦ ‖' ಎಂಬ ಮುಂದಿನ ಸೂತ್ರದಿಂದ ದೀರ್ಘಾದೇಶವು ಬಂದಿದೆ.

**ಅವತಾರಿಕೆ ೫೨೦**

'ತರ್, ಬರ್' ಧಾತುಗಳ ಕಾರ್ಯವಿಶೇಷವು.

**ಸೂತ್ರಂ ‖ ದೀರ್ಘಃ ‖ ೫೨೦ ‖**

( ಒಂದೇ ಪದವು. )

**ಅನುವೃತ್ತಿ** ‖ ೧. ತರ್ಬರೋಃ, ೨. ಅಯಿ.

**ವೃತ್ತಿ** ‖ **ಅಯ್-ಪ್ರತ್ಯಯವು ಪರವಾಗಲು 'ತರ್, ಬರ್' ಧಾತುಗಳಿಗೆ ದೀರ್ಘಾದೇಶವಾಗುವುದು.**

**ಪ್ರಯೋಗ** ‖ ತಾ, ಬಾ; ತಾರಯ್, ಬಾರಯ್.

**ವಿಚಾರ ೫೨೦**

ಪೂರ್ವಸೂತ್ರದಿಂದ 'ಅಯಿ' (ಅಯ್ ಪರವಾಗಲು) ಎಂಬುದು ಈ ಸೂತ್ರಕ್ಕೆ ಅನುವೃತ್ತವಾಗಿದೆ. ಪೂರ್ವಸೂತ್ರದಲ್ಲಿ 'ಅಯಿ' ಎಂಬುದಕ್ಕೆ 'ಲುಪ್ತೇ' (ಲೋಪವಾಗಲು) ಎಂಬ ವಿಶೇಷಣವಿದೆ. ಇಲ್ಲಿ ಸೂತ್ರಕಾರನು ಆ ವಿಶೇಷಣವನ್ನು ಬಿಟ್ಟು ಕೇವಲ 'ಅಯಿ' ಎಂಬುದರ ಅನುವೃತ್ತಿಯನ್ನೇ ಇಟ್ಟುಕೊಂಡಿದ್ದಾನೆ.

**ಅವತಾರಿಕೆ ೫೨೧**

'ತರ್, ಬರ್' ಧಾತುಗಳ ಕಾರ್ಯವಿಶೇಷವು.

**ಸೂತ್ರಂ ‖ ಪ್ರತಿಷೇಧೇ ‖ ೫೨೧ ‖**

( ಒಂದೇ ಪದ )

**ಅನುವೃತ್ತಿ** ‖ ೧. ತರ್ಬರೋಃ, ೨. ದೀರ್ಘಃ.

**ವೃತ್ತಿ ‖ ನಿಷೇಧಾರ್ಥದಲ್ಲಿ 'ತರ್, ಬರ್' ಧಾತುಗಳಿಗೆ ದೀರ್ಘಾದೇಶವಾಗುವುದು.**

**ಪ್ರಯೋಗ** ‖ ತಾರಂ, ತಾರರ್, ತಾರಯ್, ತಾರಿರ್, ತಾರೆಂ, ತಾರೆವು; ಬಾರಂ, ಬಾರರ್, ಬಾರಯ್, ಬಾರಿರ್, ಬಾರೆಂ, ಬಾರೆವು.

**ಪದಕೃತ್ಯ** ‖ 'ನಿಷೇಧಾರ್ಥದಲ್ಲಿ' ಎಂದು ಹೇಳಿದುದರಿಂದ ಉಳಿದೆಡೆಯಲ್ಲಿ **ಈ ಕಾರ್ಯ**ವಿಲ್ಲ. ಉದಾ : ತಂದಂ, ಬಂದಂ.

**ವಿಚಾರ ೫೨೧**

ಈ ಸೂತ್ರಕ್ಕೆ ' ಅಯಿ ' (ಅಯ್ ಪರವಾಗಲು ) ಎಂಬುದರ ಅನುವೃತ್ತಿ ಇಲ್ಲ. ನಿಷೇಧಾರ್ಥದಲ್ಲಿ ' ಅವ್ ' ಮುಂತಾದ ಎಲ್ಲ ಪ್ರತ್ಯಯಗಳು ಪರವಾದಾಗಲೂ ಈ ಕಾರ್ಯವಾಗುವುದೆಂದು ಎಲ್ಲ ಉದಾಹರಣೆಗಳನ್ನು ಕೊಟ್ಟಿರುವನು.

**ಅವತಾರಿಕೆ ೫೨೨**

ನಿಷೇಧಾರ್ಥದಲ್ಲಾಗುವ ಕಾರ್ಯವಿಶೇಷವನ್ನು ಹೇಳುವನು.

**ಸೂತ್ರಂ || ನ ತಿಙಃ || ೫೨೨ ||**

( ೧. ನ, ೨. ತಿಙಃ. )

**ಅನುವೃತ್ತಿ ||** ಪ್ರತಿಷೇಧೇ.

**ವೃತ್ತಿ || ಈ ವರೆಗೆ ತಿಙ್** ( ಆಖ್ಯಾತ ) ಪ್ರತ್ಯಯಗಳಿಗೆ **ಸಂಬಂಧಿಸಿ ಹೇಳಿದ ಎಲ್ಲ ಕಾರ್ಯಗಳು ಎಂದರೆ ಆಖ್ಯಾತ ಪ್ರತ್ಯಯದ** ಸ್ಥಾನದಲ್ಲಿ ಇಲ್ಲವೆ ಆಖ್ಯಾತ ಪ್ರತ್ಯಯವನ್ನು ನಿಮಿತ್ತಮಾಡಿ **ಹೇಳಿದ ಕಾರ್ಯಗಳು ನಿಷೇಧಾರ್ಥದ ರೂಪಗಳಲ್ಲಿ ಆಗುವುದಿಲ್ಲ.**

**ಪ್ರಯೋಗ ||** ನೋಡಂ, ನೋಡರ್, ನೋಡಯ್, ನೋಡಿರ್, ನೋಡೆಂ, ನೋಡೆವು.

**ವಿಚಾರ ೫೨೨**

ಹಿಂದೆ ಹೇಳಿದ ' ಗುಮ್ ' ಮೊದಲಾದುವೂ ' ದ ಪ ' ಮೊದಲಾದುವೂ ನಿಷೇಧಾರ್ಥದಲ್ಲಿ ಆಗುವುದಿಲ್ಲ. ಆದರೆ ' ಮಾಡನು, ಕೂಡನು ' ಮೊದಲಾದೆಡೆಗಳಲ್ಲಿ ' **ಓರತ್ ಪ್ರತಿಷೇಧೇ || ೪೬೦ ||** ' ಎಂದು ನಿಷೇಧಾರ್ಥದ ಕಾರ್ಯವಿಶೇಷವನ್ನು ಹೇಳುವುದಕ್ಕಾಗಿಯೇ ಆ ಸೂತ್ರವು ಹೊರಟಿರುವುದರಿಂದ ಅದರ ಬಲದಿಂದ ಅ ಕಾರಾದೇಶವೇ ಮೊದಲಾದ ಕಾರ್ಯಗಳಾಗಿವೆಯೆಂದು ತಿಳಿಯಬೇಕು.

ಈ ಸೂತ್ರದಲ್ಲಿ ' ನ ' ಎಂಬ ನಿಷೇಧಾರ್ಥಕ ಶಬ್ದವಿದೆ. ಆದರೆ ನಿಷೇಧ್ಯವು ಆವುದೆಂಬುವನ್ನು ಹೇಳುವ ಶಬ್ದವು ಸೂತ್ರದಲ್ಲಿ ಇಲ್ಲ. ಆದುದರಿಂದ ಇಲ್ಲಿ ನ ಕಾರದಿಂದ ನಿಷೇಧಿಸಲ್ಪಟ್ಟುದು ಆವುದು ? ಎಂದು ಶಂಕಿಸಕೂಡದು. ' ತಿಙಃ ' ಎಂಬುದೇ ನಿಷೇಧ್ಯವನ್ನು ತೋರಿಸುವುದಾಗಿದೆ. ಸೂತ್ರದಲ್ಲಿ ' ತಿಙಃ ' ಎಂಬುದನ್ನುಳಿದು ನಿಷೇಧ್ಯವನ್ನು ತೋರಿಸುವ ಬೇರೆ ಶಬ್ದವಾವುದೂ ಇಲ್ಲ. ಇದು ಷಷ್ಠ್ಯಂತವಾಗಿರುವುದರಿಂದ ಭೇದಕವಾಗಿದೆ. ' ಷಷ್ಠ್ಯುತ್ಪತ್ತಿಸ್ತು ಭೇದಕಾತ್ ' ಎಂಬ ವಚನವಿದೆ. ಭೇದಕವು ಭೇದ್ಯವನ್ನು ಸೂಚಿಸುವುದು ಸಹಜವಾಗಿದೆ. ಏಕೆಂದರೆ ಭೇದಕವೂ ಭೇದ್ಯವೂ ಕೂಡಿಯೇ ಇರುವಂತಹುವು. ಭೇದ್ಯವು ಇಲ್ಲಿ ಸಾಮಾನ್ಯರೂಪವಾದುದೇ ಹೊರತು ವಿಶೇಷರೂಪವಾದುದಲ್ಲ. ಏಕೆಂದರೆ ಇಲ್ಲಿ ಭೇದಕವೂ ಸಾಮಾನ್ಯವಾದುದೇ ಇದೆ. ' ಸುರಭಿಧೂಮ ' ರೂಪ ಹೇತುವಿನಿಂದಲೇ ' ಚಂದನ ಕಾಷ್ಠಪ್ರಭವ–ಅಗ್ನಿ 'ಯನ್ನು ತರ್ಕಿಸುವುದು ತಕ್ಕುದು. [ ' ಪರ್ವತಃ ಚಂದನಕಾಷ್ಠಪ್ರಭವಾಗ್ನಿಮಾನ್ ಸುರಭಿಧೂಮಾತ್ ' ] ಇನ್ನು ವಿಶಿಷ್ಟವಲ್ಲದ ಹೇತುವಿನಿಂದ ವಿಶಿಷ್ಟವಲ್ಲದ ಸಾಧ್ಯವನ್ನೇ ತರ್ಕಿಸುವುದು ಸಾಧ್ಯವು. ( ಉದಾ : ' ಪರ್ವತೋ ವಹ್ನಿಮಾನ್ ಧೂಮಾತ್ ' ) ಇಲ್ಲಿ ಹೇತುವಾದ ಧೂಮವು ವಿಶೇಷಣ ರಹಿತ

ವಾದುದು; ಸಾಧ್ಯವಾದ ವಹ್ನಿಯೂ ವಿಶೇಷಣರಹಿತವಾದುದು. ಇನ್ನು 'ಪರ್ವತೋ ವಹ್ನಿಮಾನ್ ಧೂಮಾತ್' ಎಂಬ ಸ್ಥಳದಲ್ಲಿ ವಹ್ನಿಯಲ್ಲಿ ಪರ್ವತೀಯತ್ವ (ಪರ್ವತಸಂಬಂಧಿತ್ವ) ರೂಪವಾದ ವೈಶಿಷ್ಟ್ಯವು ತೋರುವುದಷ್ಟೇ; ಎಂದ ಬಳಿಕ 'ಧೂಮಾತ್' ಎಂಬ ಅವಿಶಿಷ್ಟ ಹೇತುವಿನಿಂದಲೇ ಪರ್ವತೀಯ ವಹ್ನಿಯನ್ನು (ವಹ್ನಿಯಲ್ಲಿ ಪರ್ವತೀಯತ್ವವನ್ನು) ಸಾಧಿಸಿದಂತಾಗುವುದರಿಂದ ವಿಶಿಷ್ಟಸಾಧ್ಯವನ್ನೇ ಸಾಧಿಸಿದಂತಾಯಿತಲ್ಲವೇ ಎಂದು ಆಕ್ಷೇಪಿಸಬಹುದು; ಆದರೆ ಇಲ್ಲಿ ವಹ್ನಿಯಲ್ಲಿ ತೋರುವ ಪರ್ವತೀಯತ್ವವು ಹೇತುವಿನಲ್ಲಿರುವ ಪಕ್ಷಧರ್ಮತೆಯ ಬಲದಿಂದಲೇ; '**ಹೇತೋಃ ಪಕ್ಷವೃತ್ತಿತ್ವಂ ಪಕ್ಷಧರ್ಮತಾ**' ಎಂದು ಹೇಳಿರುವುದರಿಂದ ಹೇತುವು ಪಕ್ಷದಲ್ಲಿರುವುದು ಆವಶ್ಯಕವು. ಎಂದ ಬಳಿಕ ಪಕ್ಷ (ಪರ್ವತಮುಂ) ದಲ್ಲಿರುವ ಹೇತುವು ಪಕ್ಷದಲ್ಲಿಯೇ ಸಾಧ್ಯವನ್ನು ಸಾಧಿಸುವುದರಿಂದ ಸಾಧ್ಯವು ಪಕ್ಷದಲ್ಲಿರುವಂತಹುದು ಎಂದು ಗೊತ್ತಾಗುವುದು. ಎಂದರೆ ಸಾಧ್ಯವಾದ ವಹ್ನಿಯಲ್ಲಿ ಪರ್ವತೀಯತ್ವವು ತೋರುವುದು. ಆದುದರಿಂದ ಇಲ್ಲಿಯೂ 'ತಿಜಃ' ಎಂಬ ಪದವು ಸಂಬಂಧ ಸಾಮಾನ್ಯವನ್ನು ಹೇಳುವ ಷಷ್ಠ್ಯಂತವು, ಸಂಬಂಧ ಸಾಮಾನ್ಯದಲ್ಲಿ ಷಷ್ಠಿ ಬಂದಿದೆ. ಆದುದರಿಂದ ಸಂಬಂಧಿ ಸಾಮಾನ್ಯವನ್ನೇ ಸೂಚಿಸುವುದು. ಈ ಕಾರಣದಿಂದಲೇ **ಸೂತ್ರಕಾರ**ನು ತಿಜ್-ಪ್ರತ್ಯಯಕ್ಕೆ ಸಂಬಂಧಿಸಿದ ಕಾರ್ಯವೆಂದು ಸಾಮಾನ್ಯವಾಗಿಯೇ ಹೇಳಿರುವನು. 'ತಿಜ್-ಪ್ರತ್ಯಯಕ್ಕೆ ಸಂಬಂಧಿಸಿದ್ದು' ಎಂದರೆ ತಿಜ್-ಸ್ಥಾನಿಕವೂ ತಿಜ್-ನಿಮಿತ್ತಕವೂ ಅಲ್ಲದೆ ಬೇರೆ ಇಲ್ಲದಿರುವುದರಿಂದ ತಿಜ್-ಸ್ಥಾನದಲ್ಲಿ, ತಿಜ್-ಪರದಲ್ಲಿರುವಾಗ, ತಿಜ್‌ನ ಪರದಲ್ಲಿರುವುದಕ್ಕೆ ಈ ವರೆಗೆ ಹೇಳಿದ ಕಾರ್ಯವೆಲ್ಲವೂ ನಿಷೇಧಾರ್ಥದಲ್ಲಿ ಆಗುವುದಿಲ್ಲವೆಂದು ಈ ಸೂತ್ರವನ್ನು ಹೇಳಿದಂತಾಯಿತೆಂದು ತಿಳಿಯಬೇಕು.

'ನೋಡಂ, ನೋಡರ್' ಮೊದಲಾದುವು ಉದಾಹರಣಗಳು. ನಿಷೇಧ್ಯವು ಯಾವುದೆಂಬುದನ್ನು ಮುಟ್ಟಿತೋರಿಸುವನು — ನಿಷೇಧಾರ್ಥದಲ್ಲಿ 'ಗುಮ್' ಮೊದಲಾದ ಪ್ರತ್ಯಯಗಳು 'ದ, ಪ' ಮೊದಲಾದ ಪ್ರತ್ಯಯಗಳೂ ಆಗುವುದಿಲ್ಲ. ಧಾತು, ಆಖ್ಯಾತಪ್ರತ್ಯಯ ಇವಿಷ್ಟೇ ಸೇರಲು ನಿಷೇಧಾರ್ಥಕ ರೂಪಗಳಾಗುವುವು. 'ಅಮ್, ಅರ್' ಮೊದಲಾದುವು ಸ್ವಯಂ ತಿಜ್ ರೂಪಗಳೇ ಹೊರತು ತಿಜ್-ಸ್ಥಾನಿಕಗಳಾಗಲಿ, ತಿಜ್-ನಿಮಿತ್ತಕಗಳಾಗಲಿ ಅಲ್ಲವಾದುದರಿಂದ ಅವು ಸೇರಲು ಅಡ್ಡಿಯಿಲ್ಲ.

ಇನ್ನು ತಿಜ್-ಸ್ಥಾನಿಕಗಳನ್ನೂ ತಿಜ್-ನಿಮಿತ್ತಕಗಳನ್ನೂ ಇಲ್ಲಿ ನಿಷೇಧಿಸಿರುವುದರಿಂದ 'ಮಾಡದು, ಕೂಡದು, ನೋಡವು, ನುಡಿಯವು, ಮಾಡಬೇಡ, ಮಾಡಲ್ವೇಡ' ಮೊದಲಾದೆಡೆಗಳಲ್ಲಿ ತಿಜ್-ಸ್ಥಾನಿಕಗಳಾದ 'ಅದು' ಮೊದಲಾದ ಆದೇಶಗಳೂ 'ತಾರವು, ಬಾರವು, ನೋಡಲಿಂ ಬೇಡ, ನೋಡಲಿಂ' ಮೊದಲಾದೆಡೆಗಳಲ್ಲಿ ತಿಜ್-ನಿಮಿತ್ತಕಗಳಾದ ದೀರ್ಘಾದ್ಯಾದೇಶಗಳೂ ಆಗಲಾರವೆಂದು ಶಂಕಿಸಕೂಡದು. ಏಕೆಂದರೆ ಹಿಂದೆ '**ಓರತ್ ಪ್ರತಿಷೇಧೇ || ೪೬೦ ||**' ಎಂಬ ಸೂತ್ರದಿಂದ (ನಿಷೇಧಾರ್ಥದಲ್ಲಿಯೇ) 'ಉದು, ಉವು' ಪ್ರತ್ಯಯಗಳ ಉ ಕಾರಕ್ಕೆ ಅ ಕಾರಾದೇಶವನ್ನು ಹೇಳಿದುದರಿಂದಲೂ '**ಶಕ್ನಿನ್ನದಲೌ || ೫೨೬ ||**' ಎಂಬ ಸೂತ್ರದಿಂದ '**ಅತ್**, **ಅಲ್**' ಎಂಬಿವನ್ನು ಆದೇಶವಾಗಿ ಹೇಳಿದುದರಿಂದಲೂ '**ಪ್ರತಿಷೇಧೇ || ೫೨೧ ||**' ಎಂಬ ಸೂತ್ರದಿಂದ ದೀರ್ಘವನ್ನು ಹೇಳಿದುದರಿಂದಲೂ 'ಉದು' ಮೊದಲಾದುವೂ ದೀರ್ಘಮೊದಲಾದುವೂ ಆಗುವುವೆಂದು ತಿಳಿಯಬೇಕು.

**ಅವತಾರಿಕೆ ೫೨೩**

ಸಂಸ್ಕೃತದಲ್ಲಿ ನಿಷೇಧಾರ್ಥದಲ್ಲಿ ನಿಷೇಧಾರ್ಥಕ ನ ಕಾರವನ್ನು ಉಪಯೋಗಿಸುವರು. ಕರೋತಿ=ಮಾಡುತ್ತಾನೆ. ನಿಷೇಧದಲ್ಲಿ — ನ ಕರೋತಿ=ಮಾಡನು. ಆದರೆ ಕನ್ನಡದಲ್ಲಿ ನಿಷೇಧಾರ್ಥದಲ್ಲ ' ಇಲ್ಲ ' ಮೊದಲಾದ ನಿಷೇಧಾರ್ಥಕ ಶಬ್ದಗಳ ಪ್ರಯೋಗವಾಗುವುದಿಲ್ಲವೆಂದು ಹೇಳುವನು.

**ಸೂತ್ರಂ ॥ ತದರ್ಥಸ್ಯಾಪ್ರಯೋಗಃ ॥ ೫೨೩ ॥**

( ೧. ತದರ್ಥಸ್ಯ, ೨. ಅಪ್ರಯೋಗಃ. )

**ವೃತ್ತಿ ॥ ತಿಙ್-ವಿಷಯದಲ್ಲಿ ನಿಷೇಧವಾಚಕ ಶಬ್ದವನ್ನು ಪ್ರಯೋಗಿಸಲಾಗದು.**

**ಪ್ರಯೋಗ ॥** ಮಾಡಂ, ಮಾಡರ್; ನೋಡಂ, ನೋಡರ್; ಕೂಡಂ, ಕೂಡರ್; ತಿಙ್-ಭಿನ್ನ ವಿಷಯದಲ್ಲಿ ಪ್ರಯೋಗಿಸುವುದುಂಟು. ಉದಾ: ಮಾಳ್ಪುದಿಲ್ಲಂ, ಮಾಳ್ಪುದಲ್ಲಂ; ಮಾಳ್ಪುದಿಲ್ಲ, ಮಾಳ್ಪುದಲ್ಲ; ಘಟಮಿಲ್ಲಂ, ಘಟಮಲ್ಲಂ; ಘಟಮಿಲ್ಲ, ಘಟಮಲ್ಲ; ಪಟಮಿಲ್ಲಂ, ಪಟಮಲ್ಲಂ; ಪಟಮಿಲ್ಲ, ಪಟಮಲ್ಲ.

**ವಿಚಾರ ೫೨೩**

'ತದರ್ಥಸ್ಯ' ಎಂಬಲ್ಲಿ ಪೂರ್ವಪರಾಮರ್ಶಿಯಾದ ತಚ್ಛಬ್ದವಿರುವುದರಿಂದ 'ನಿಷೇಧಾರ್ಥದ' ಎಂಬ ಅರ್ಥವು. ನಿಷೇಧಾರ್ಥಕ ಶಬ್ದಗಳು ಕನ್ನಡದಲ್ಲಿ ' ಇಲ್ಲಂ, ಇಲ್ಲ, ಅಲ್ಲಂ, ಅಲ್ಲ ' ಮುಂತಾದುವು. ಆಖ್ಯಾತಪ್ರತ್ಯಯಗಳನ್ನು ಪ್ರಯೋಗಿಸಿದಾಗ ಎಂದರೆ ಕ್ರಿಯಾಪದಗಳ ಸಂಗಡ ಈ ನಿಷೇಧಾರ್ಥಕ ಶಬ್ದಗಳ ಪ್ರಯೋಗವಾಗುವುದಿಲ್ಲ.* ಸಂಸ್ಕೃತದಲ್ಲಿ ' ನ ಕರೋತಿ, ನ ಅಕರೋತ್, ನ ಕರಿಷ್ಯತಿ ' ಮುಂತಾದೆಡೆಗಳಲ್ಲ ಕ್ರಿಯಾಪದಗಳೊಡನೆ ನಿಷೇಧಾರ್ಥಕ 'ನ' ಶಬ್ದವು ಪ್ರಯೋಗಿಸಲ್ಪಡುವುದು. ಕನ್ನಡದಲ್ಲಿ ಹಾಗೆ ಇಲ್ಲ. ಅರ್ಥಕ್ಕೋಸ್ಕರ ಶಬ್ದಪ್ರಯೋಗವಷ್ಟೇ? ಶಬ್ದಪ್ರಯೋಗವಿಲ್ಲದೆ ಅರ್ಥಪ್ರತಿಪತ್ತಿಯಾಗುತ್ತಿದ್ದರೆ ಶಬ್ದಪ್ರಯೋಗವೇಕೆ? ' ಮಾಡಂ ' ಮೊದಲಾದೆಡೆಗಳಲ್ಲ ನಿಷೇಧವಾಚಕವಿಲ್ಲದೆ ನಿಷೇಧವು ತೋರುವುದು.

ಇನ್ನು ಕನ್ನಡದಲ್ಲಿ ' ಇಲ್ಲ, ಅಲ್ಲ ' ಮೊದಲಾದ ನಿಷೇಧಾರ್ಥಕ ಶಬ್ದಗಳು ಇವೆಯೆಂದು ಒಪ್ಪಬೇಕಷ್ಟೆ? ಇದ್ದ ಪಕ್ಷದಲ್ಲ ಅವನ್ನು ಪ್ರಯೋಗಿಸಬಾರದೆಂದು ಹೇಳುವುದೇಕೆ? ಪ್ರಯೋಗಾನರ್ಹವಾಗಿ ಇದ್ದು ಪ್ರಯೋಜನವೇನು ಎಂದು ಶಂಕಿಸಲಾಗದು. ಏಕೆಂದರೆ ನಿಷೇಧಾರ್ಥಕ ಶಬ್ದಗಳಿರುವುದು ನಿಜವೇ; ಆದರೆ ಅವನ್ನು ಎಲ್ಲಿಯೂ ಪ್ರಯೋಗಿಸಬಾರದೆಂದು ಇಲ್ಲಿ ಹೇಳಿಲ್ಲ. ಆಖ್ಯಾತಪ್ರತ್ಯಯಗಳ ವಿಷಯದಲ್ಲಿಯೇ ಇವುಗಳ ಪ್ರಯೋಗವು ನಿಷೇಧಿಸಲ್ಪಟ್ಟಿದೆ. ಉಳಿದೆಡೆಗಳಲ್ಲಿ ಪ್ರಯೋಗವುಂಟೆಂದು ' ಮಾಳ್ಪುದಿಲ್ಲಂ ' ಮುಂತಾದುವನ್ನು ಉದಾಹರಿಸಿರುವನು. ಇನ್ನು ' ತಿಙಃ ' ( ಆಖ್ಯಾತಪ್ರತ್ಯಯ ವಿಷಯದಲ್ಲಿ ) ಎಂಬ ಪದವು ಸೂತ್ರದಲ್ಲಿ ಇಲ್ಲದಿರಲು ' ಆಖ್ಯಾತಪ್ರತ್ಯಯ ವಿಷಯದಲ್ಲಿ ' ಎಂದು ವಿಷಯ ಸಂಕೋಚವನ್ನು ಮಾಡಿದುದೇಕೆ ಎಂದು ಆಕ್ಷೇಪಿಸಲಾಗದು. ' ನ ತಿಙಃ ॥ ೫೨೨ ॥ ' ಎಂಬ ಪೂರ್ವಸೂತ್ರದಲ್ಲಿ ತಿಙ್-ಪ್ರತ್ಯಯದ ವಿಚಾರವು

* ' ಪೋದೆನಿಲ್ಲ, ಕೇಳ್ದೆನಿಲ್ಲಂ ' ಮುಂತಾದ ಪ್ರಯೋಗಗಳಿರುವುದರಿಂದ ಈ ವಿಧಾನದಲ್ಲಿ ವಿಭಾಷೆಯನ್ನು ಇಟ್ಟುಕೊಳ್ಳಬೇಕೇ ?

ಬಂದಿದೆ. ತಿಙ್ ವಿಷಯದಲ್ಲಿಯೇ ಕಾರ್ಯನಿಷೇಧವು ಅಲ್ಲಿ ಹೇಳಿದೆ. ಆದುದರಿಂದ ಇಲ್ಲಿ ತಿಙ್ ವಿಷಯದಲ್ಲಿಯೇ ನಿಷೇಧಾರ್ಥಕ ಶಬ್ದದ ಪ್ರಯೋಗವಿಲ್ಲವೆಂಬುದು ಸಂದರ್ಭದಿಂದಲೇ ತಿಳಿಯುವುದು.

**ಅವತಾರಿಕೆ ೫೨೪**

'ಬೇಡಂ, ಬೇಡ' ಇವುಗಳ ಪ್ರಯೋಗ ವಿಚಾರವು.

**ಸೂತ್ರಂ || ಆಶೀರಾದೌ ಬೇಡಂಬೇಡೌ ಪರತಃ || ೫೨೪ ||**

( ೧. ಆಶೀರಾದೌ, ೨. ಬೇಡಂ ಬೇಡ, ೩. ಪರತಃ. )

**ಅನುವೃತ್ತಿ** || ೧. ತಿಙಃ, ೨. ಪ್ರತಿಷೇಧೇ.

**ವೃತ್ತಿ** || ಆಶೀರಾದ್ಯರ್ಥದಲ್ಲಿ ನಿಷೇಧ ವಿಷಯದಲ್ಲಿ ತಿಙ್-ಪ್ರತ್ಯಯಗಳ ಮುಂದೆ 'ಬೇಡಂ, ಬೇಡ' ಎಂಬ ಶಬ್ದಗಳು ಪ್ರಯೋಗಿಸಲ್ಪಡುವುವು.

**ಪ್ರಯೋಗ** || ಮಾಡಲ್ ಬೇಡಂ, ಮಾಡಲ್ ಬೇಡ; ನೋಡಲ್ ಬೇಡಂ, ನೋಡಲ್ ಬೇಡ.

**ಪದಕೃತ್ಯ** || 'ಆಶೀರಾದ್ಯರ್ಥದಲ್ಲಿ' ಎಂದು ಹೇಳಿದುದರಿಂದ ಬೇರೆ ಅರ್ಥದಲ್ಲಿ 'ಬೇಡಂ, ಬೇಡ'ಗಳು ಬರುವುದಿಲ್ಲ. ಉದಾ : ಮಾಡಂ, ಮಾಡರ್. 'ಪ್ರತಿಷೇಧೇ' (ನಿಷೇಧ ವಿಷಯದಲ್ಲಿ) ಎಂದು ಹೇಳಿದುದರಿಂದ ನಿಷೇಧವಿಲ್ಲದ ಆಶೀರಾದ್ಯರ್ಥದಲ್ಲಿ ಇವು ಬರುವುದಿಲ್ಲ. ಉದಾ: ಮಾಟ್ಕೆ, ಮಾಡುಗೆ. 'ಪರತಃ' ( ಮುಂದೆ ) ಎಂದು ಹೇಳಿದುದರಿಂದ ( ಕ್ರಿಯಾಪದದ ) ಹಿಂದೆ ಇವು ಬರುವುದಿಲ್ಲ.

**ವಿಚಾರ ೫೨೪**

'ಬೇಡಂ, ಬೇಡ' ಇವು ಅವ್ಯಯಗಳು. ಇವು ಆಖ್ಯಾತಪ್ರತ್ಯಯಗಳ ಕೊನೆಯಲ್ಲಿಯೇ ಪ್ರಯೋಗಿಸತಕ್ಕುವು; ಮೊದಲಲ್ಲಿ ಅಲ್ಲ. ಪೂರ್ವಸೂತ್ರದಲ್ಲಿ ನಿಷೇಧಾರ್ಥಶಬ್ದಗಳೆಲ್ಲವನ್ನು ತಿಙ್-ವಿಷಯದಲ್ಲಿ ಪ್ರಯೋಗಿಸಕೂಡದೆಂದು ನಿಷೇಧಿಸಿದ್ದರೂ ಎಲ್ಲ ಕಡೆಯಲ್ಲಿ ಎಲ್ಲ ನಿಷೇಧಾರ್ಥಕ ಶಬ್ದಗಳ ಪ್ರಯೋಗದ ನಿಷೇಧವು ಅಲ್ಲಿ ವಿವಕ್ಷಿತವಲ್ಲ. ಕೆಲವೆಡೆ ಕೆಲವನ್ನು ಪ್ರಯೋಗಿಸಬಹುದು. 'ಮಾಡಲ್ ಬೇಡ, ಮಾಡಬೇಡ' ಎಂಬಲ್ಲಿ '**ತಸ್ಮಿನ್ನದಲೌ || ೫೨೬ ||**' ಎಂಬ ಸೂತ್ರದಿಂದ 'ಬೇಡಂ, ಬೇಡ'ಗಳು ಪರದಲ್ಲಿರುವಾಗ ಆಖ್ಯಾತಪ್ರತ್ಯಯಕ್ಕೆ 'ಅ, ಅಲ್' ಆದೇಶಗಳು ಬರುವುವು.

**ಅವತಾರಿಕೆ ೫೨೫**

'ಬೇಡಂ, ಬೇಡ' ಇವುಗಳ ಪ್ರಯೋಗ ವಿಚಾರವು.

**ಸೂತ್ರಂ || ವೇಮುಃ || ೫೨೫ ||**

( ೧. ವಾ, ೨. ಇಮುಃ. )

**ಅನುವೃತ್ತಿ** || ೧. ಪರತಃ, ೨. ಬೇಡಂ ಬೇಡೌ, ೩. ಪ್ರತಿಷೇಧೇ.

**ವೃತ್ತಿ || ನಿಷೇಧಾರ್ಥದಲ್ಲಿ ಇಮ್-ಪ್ರತ್ಯಯದ ಮುಂದೆ 'ಬೇಡಂ, ಬೇಡ' ಎಂಬಿವು ವಿಕಲ್ಪವಾಗಿ ಪ್ರಯೋಗಿಸಲ್ಪಡುವುವು.**

**ಪ್ರಯೋಗ** || ಮಾಡಲಿಂ ಬೇಡಂ, ಮಾಡಲಿಂ; ಕೂಡಲಿಂ ಬೇಡಂ, ಕೂಡಲಿಂ;

**ಪದಕೃತ್ಯ** || ' ಇಮ್ ಪ್ರತ್ಯಯದ ಮುಂದೆ ' ಎಂದು ಹೇಳಿದುದರಿಂದ ಬೇರೆ ಪ್ರತ್ಯಯದ ಮುಂದೆ ವಿಕಲ್ಪವಿಲ್ಲ; ಅಲ್ಲಿ ನಿತ್ಯವಾಗಿ ಬರುವುವು. ಉದಾ: ನೀವಿದಂ ಮಾಡಲ್ ಬೇಡಂ, ಮಾಡಲ್ ಬೇಡ.

**ಅವತಾರಿಕೆ ೫೨೭**

' ಬೇಡಂ, ಬೇಡ ' ಇವುಗಳ ಪ್ರಯೋಗ ವಿಚಾರವು.

**ಸೂತ್ರಂ || ತಸ್ಮಿನ್ನದಲೌ|| ೫೨೭ ||**

( ೧. ತಸ್ಮಿನ್, ೨. ಅದಲೌ. )

**ಅನುವೃತ್ತಿ** || ೧. ವಾ.

**ವೃತ್ತಿ || ' ಬೇಡಂ, ಬೇಡ ' ಗಳು ಪರದಲ್ಲಿರಲು ಆಖ್ಯಾತಪ್ರತ್ಯಯಕ್ಕೆ ' ಅತ್, ಅಲ್ ' ಎಂಬ ಆದೇಶಗಳು ಆಗುವುವು.**

**ಪ್ರಯೋಗ** || ಮಾಡಬೇಡಂ, ಮಾಡಲ್ ಬೇಡಂ; ನೊಡಬೇಡಂ, ನೋಡಲ್ ಬೇಡ.

**ಪದಕೃತ್ಯ** || ' ಬೇಡಂ, ಬೇಡಗಳು ಪರದಲ್ಲಿರಲು ' ಎಂದು ಹೇಳಿದುದರಿಂದ ' ನೋಡಂ, ನೋಡರ್ ' ಎಂಬಲ್ಲಿ ಈ ಕಾರ್ಯವಿಲ್ಲ.

**ವಿಚಾರ ೫೨೭**

ಇಲ್ಲ ಹೇಳಿದ ' ಅತ್, ಅಲ್ ' ಎಂಬಾದೇಶಗಳು ಆಖ್ಯಾತಪ್ರತ್ಯಯಕ್ಕೆ ಏಕ ಕಾಲದಲ್ಲ ಅಲ್ಲ. ' ಒಮ್ಮೆ ಒಂದು, ಇನ್ನೊಮ್ಮೆ ಮತ್ತೊಂದು ' ಎಂದು ತಿಳಿಯಬೇಕು.

ಇಲ್ಲ ' ಅತ್, ಅಲ್ ' ಆದೇಶಗಳಿಗೆ ಸ್ಥಾನಿಯನ್ನು ಹೇಳದಿರುವುದರಿಂದ ಇವು ಏತಕ್ಕೆ ಆದೇಶವಾಗುವುವೆಂದು ಶಂಕೆಯು ಉಪಸ್ಥಿತವಾಗುವುದು. ಆದರೆ ' ಬೇಡಂ, ಬೇಡ 'ಗಳು ಆಖ್ಯಾತಪ್ರತ್ಯಯದ ಮುಂದೆ ಪ್ರಯೋಗಿಸಲ್ಪಡುವುವಷ್ಟೇ, ಆದುದರಿಂದ ' ಬೇಡಂ, ಬೇಡ 'ಗಳು ಪರದಲ್ಲರಲು ವಿಧಿಸಲ್ಪಡುವ ಆದೇಶಗಳು ಅವುಗಳ ಹಿಂದಿರುವ ' ಆಖ್ಯಾತಪ್ರತ್ಯಯಕ್ಕೇ ' ಎಂದು ಸಿದ್ಧವಾಗುವುದು. ' **ತಸ್ಮಿನ್ನಿತಿ ನಿರ್ದಿಷ್ಟೇ ಪೂರ್ವಸ್ಯ || ೨೬ ||** ' ಎಂಬ ಸೂತ್ರದಿಂದ ಸಪ್ತಮೀ ನಿರ್ದೇಶದಿಂದ ವಿಧಿಸಿದ ಕಾರ್ಯವು ' ಪೂರ್ವದಲ್ಲಿರುವುದಕ್ಕೆ ' ಎಂದು ಸಂಕೇತಿಸಿದೆ. ಇನ್ನು ಧಾತುವೂ ಪೂರ್ವದಲ್ಲಿರುವುದೇ ಆದುದರಿಂದ ಧಾತುವಿಗೂ ಈ ಆದೇಶಗಳು ಏಕೆ ಆಗಬಾರದೆಂದು ಶಂಕಿಸಿದರೆ ಆ ಸೂತ್ರ ( ೨೬ ) ದಲ್ಲಿ ' ನಿರ್ದಿಷ್ಟೇ ' ಎಂಬ ಪದದಿಂದ ಅವ್ಯವಹಿತವಾದ 'ಹಿಂದಿನದಕ್ಕೆ ' ಎಂಬ ಅರ್ಥವೇ ಸೂಚಿತವಾಗುವುದೆಂದು ಹೇಳಿದೆ.

ಇನ್ನು ' **ತತ್ರಾದಲೌ** ' ಎಂದು ಸೂತ್ರವನ್ನು ರಚಿಸಿದ್ದರೆ ' ತಸ್ಮಿನ್ನದಲೌ ' ಎಂಬುದಕ್ಕಿಂತ ಲಾಘವವುಂಟಾಗುತ್ತಿದ್ದಿಲ್ಲವೇ ? ಆದರೆ ' **ಆಶೀರಾದೌ ಬೇಡಂಬೇಡೌ ಪರತಃ || ೫೩೪ ||** ' ಎಂಬ ಸೂತ್ರದಲ್ಲಿ ' ಬೇಡಂ, ಬೇಡೌ ' ಎಂದು ದ್ವಿವಚನಾಂತ ರೂಪವಿದೆ. ' ಬೇಡಂ, ಬೇಡ ' ಗಳೆರಡನ್ನೂ ಏಕಕಾಲಕ್ಕೆ ಪ್ರಯೋಗಿಸಬಹುದೇ ಎಂಬ ಆಶಂಕೆಯು ನಿರಸನಾರ್ಥವಾಗಿ ಎಂದರೆ ಒಂದು ಕಾಲಕ್ಕೆ ಅವುಗಳಲ್ಲೊಂದನ್ನೇ ಪ್ರಯೋಗಿಸಬೇಕೆಂಬುದನ್ನು ತೋರಿಸುವುದಕ್ಕಾಗಿ ' ತಸ್ಮಿನ್ ' ಎಂದು ಸೂತ್ರದಲ್ಲ ಪ್ರಯೋಗಿಸಬೇಕಾಯಿತು. ' ತತ್ರ ' ಎಂದು ಪ್ರಯೋಗಿಸಿದ್ದರೆ

ಏಕತ್ವವನ್ನೇ ತೋರುವುದಿಲ್ಲ; 'ತತ್ರ' ಎಂಬಲ್ಲಿ 'ತಸ್ಮಿನ್, ತಯೋಃ, ತೇಷು' ಎಂಬ ಮೂರು ವಚನಗಳ ಅರ್ಥವೂ ಗರ್ಭಿತವಾಗಿರುವುದು.

**ಅವತಾರಿಕೆ ೫೨೭**

'ಬೇಡಂ, ಬೇಡ'ಗಳ ಪ್ರಯೋಗ ವಿಚಾರವು.

**ಸೂತ್ರಂ || ವೇಮುಃ || ೫೨೭ ||**

( ೧. ವಾ, ೨. ಇಮುಃ. )

**ಅನುವೃತ್ತಿ ||** ೧. ಅದಲೌ, ೨. ತಸ್ಮಿನ್.

**ವೃತ್ತಿ ||** **'ಬೇಡಂ, ಬೇಡ'ಗಳು ಪರದಲ್ಲಿರುವಾಗ ಇಮು-ಪ್ರತ್ಯಯಕ್ಕೆ 'ಅತ್, ಅಲ್' ಆದೇಶಗಳು ವಿಕಲ್ಪದಿಂದ ಆಗುವುವು.**

**ಪ್ರಯೋಗ ||** ನೋಡ ಬೇಡಂ, ನೋಡಲ್ ಬೇಡಂ, ನೋಡಲಿಂ ಬೇಡಂ; ಮಾಡ ಬೇಡ, ಮಾಡಲ್ ಬೇಡ, ಮಾಡಲಿಂ ಬೇಡಂ.

**ವಿಚಾರ ೫೨೭**

'ಬೇಡಂ, ಬೇಡ'ಗಳು ಪರದಲ್ಲಿರುವಾಗ ಇಮು-ಪ್ರತ್ಯಯಕ್ಕೆ 'ಅತ್, ಅಲ್' ಆದೇಶಗಳು ವಿಕಲ್ಪವಾಗಿ ಆಗುವುವೆಂದು ಹೇಳಿದುದರಿಂದ ಉಳಿದೆಡೆಗಳಲ್ಲಿ ನಿತ್ಯವಾಗಿ ಆಗುವುವೆಂದು ತಿಳಿಯುವುದು.

'ವೇಮುಃ || ೫೨೫ ||' ಎಂಬುದು ಪೂರ್ವಸೂತ್ರದ ಹಿಂದಿನ ಸೂತ್ರವು. ಅದನ್ನೇ ಇಲ್ಲಿ ಅನುವೃತ್ತಿಸಿಕೊಳ್ಳಲು ಬರುತ್ತಿರುವಾಗ ಮತ್ತೆ 'ವೇಮುಃ || ೫೨೭ ||' ಎಂಬ ಹೊಸ ಸೂತ್ರವೇಕೆ ಎಂದು ಇಲ್ಲಿ ಶಂಕೆಯುಂಟಾಗುತ್ತದಷ್ಟೇ? ಆದರೆ ನಡುವೆ ಒಂದು ಸೂತ್ರದಿಂದ (೫೨೬) ವ್ಯವಧಾನವಾಗಿದೆ. ಆ ಸೂತ್ರ (೫೨೬) ದಲ್ಲಿ 'ವೇಮುಃ' ಎಂಬ ಪದಗಳ ಅನುವೃತ್ತಿ ಬೇಕಾಗಿಲ್ಲ. ಆದುದರಿಂದ ಪೂರ್ವಸೂತ್ರದಲ್ಲಿ ನಿವೃತ್ತವಾದ 'ವೇಮುಃ' ಎಂಬುದು ಇಲ್ಲಿ ಅನುವೃತ್ತವಾಗಲಾರದು. ಇನ್ನು 'ಮಂಡೂಕಪ್ಲುತಿ'ಯಿಂದ ಇಲ್ಲಿ ಅನುವೃತ್ತಿಯನ್ನು ಇಟ್ಟುಕೊಳ್ಳಬಹುದಲ್ಲವೇ? ಅಹುದು, ಆದರೆ 'ವೇಮುಃ || ೫೨೫ ||' ಎಂಬ ಸೂತ್ರದಲ್ಲಿ 'ಇಮುಃ' ಎಂಬುದು ಪಂಚಮ್ಯಂತವು; ಇಲ್ಲಿ ಷಷ್ಠ್ಯಂತವಾಗಿ ಪಲ್ಲಟಿಸಿಕೊಳ್ಳಬೇಕಾಗುವುದು. ಈ ತೊಂದರೆಗಿಂತ ಬೇರೆ ಸೂತ್ರವನ್ನೇ ರಚಿಸುವುದು ಒಳ್ಳೆಯದೆಂದು ಹಾಗೆ ಮಾಡಿದನೆಂದು ತಿಳಿಯಬೇಕು. ನಿಜವಾಗಿ ನೋಡಿದರೆ ಹಿಂದಿನ ಸೂತ್ರದಲ್ಲಿ 'ವೇಮುಃ' ಎಂಬುದರ ಅನುವೃತ್ತಿಯನ್ನು ಇಟ್ಟುಕೊಳ್ಳಬೇಕು. 'ತಸ್ಮಿನ್ನದಲೌ || ೫೨೬ || — ವೇಮುಃ' (ಅನುವೃತ್ತ) ಹೀಗೆ ಇಟ್ಟುಕೊಂಡರೆ ಮುಂದಿನ ಅನುವೃತ್ತಿಗೂ ತೊಂದರೆ ಇಲ್ಲ. ಮಂಡೂಕಪ್ಲುತಿಯೂ ಬೇಕಾಗಿಲ್ಲ; ಹೊಸ ಸೂತ್ರಕರಣದ ಗೌರವವೂ ಇಲ್ಲ; ಇಷ್ಟೇ ಅಲ್ಲ, ಲಾಘವವೂ ಆಗುವುದು. ಇದ್ದುದರಲ್ಲಿ ವಿಭಕ್ತಿ ಪಲ್ಲಟವನ್ನು ಮಾಡುವುದಕ್ಕಿಂತ ಭಿನ್ನ ಸೂತ್ರವನ್ನೇ ರಚಿಸುವುದರಲ್ಲಿ ಗೌರವದೋಷವು ಬರುವುದು. ಹೀಗಿರುವುದರಿಂದ ಇಲ್ಲಿ ಹೇಳಿದ 'ವೇಮುಃ || ೫೨೭ ||' ಎಂಬುದು ಪೂರ್ವ ಸೂತ್ರಕ್ಕೆ ಅನುವೃತ್ತವಾದ 'ವೇಮುಃ' ಎಂಬುದರ ವಿವರಣವೇ ಹೊರತು ಬೇರೆ ಸೂತ್ರವೇ ಅಲ್ಲವೆಂದು ಹೇಳಬಹುದಾಗಿದೆ. ಇದರಿಂದ ಒಂದು ಸೂತ್ರವೇ ಕಡಿಮೆಯಾಗಲು ಸೂತ್ರ

ಸಂಖ್ಯೆಯಲ್ಲಿ ( ೫೯೨ ) ನ್ಯೂನತೆ ಬಂದಿತೆಂದು ಶಂಕಿಸಿದರೆ — ' ಉಗು ಪುಗು ಕುಡು ತುಡೋಽ ರೋದ್ಧ್ಯಸ್ತಃ || ೪೮೯ || ' ಎಂಬ ಸೂತ್ರದ ತರುವಾಯ ' ಉಳಃ ಸತ್ತಾಯಾಂ ' ಎಂದು ಹೇಳ ಬೇಕಾದ ಸೂತ್ರವೊಂದು ಉಳಿದಿರುವುದರಿಂದ ಆಯವ್ಯಯಗಳು ಸಮವಾಗಿ ಸೂತ್ರ ಸಂಖ್ಯೆ ಇದ್ದಷ್ಟೇ ಉಳಿಯುವುದೆಂದು ಸಮಾಧಾನವನ್ನು ಹೇಳಬಹುದಾಗಿದೆ.

**ಅವತಾರಿಕೆ ೫೨೮**

' ಬೇಡಂ, ಬೇಡ 'ಗಳ ಅಪ್ರಯೋಗ ವಿಚಾರವು.

**ಸೂತ್ರಂ || ಅಲ್ ತದಪ್ರಯೋಗೇ || ೫೨೮ ||**

( ೧. ಅಲ್, ೨. ತದಪ್ರಯೋಗೇ. )

**ಅನುವೃತ್ತಿ** || ೧. ವಾ, ೨. ಇಮಃ.

**ವೃತ್ತಿ || ' ಬೇಡಂ, ಬೇಡ 'ಗಳನ್ನು ಪ್ರಯೋಗಿಸದಿರುವಾಗ ಇಮ್-ಪ್ರತ್ಯಯಕ್ಕೆ ' ಅಲ್ ' ಆದೇಶವು ವಿಕಲ್ಪವಾಗಿ ಆಗುವುದು.**

**ಪ್ರಯೋಗ** || ನೀಮಿಾ ಬನಮಂ ಪುಗಲ್, ನೀಮಿಾ ಮನೆಯಂ ನೋಡಲ್, ಯತಿಗಳ್ ನೀಮಂಗಜನಾಟಕ್ಕೆ ಸಲ್ಲಲ್.

**ವಿಚಾರ ೫೨೮**

' **ವೇಮಃ** || **೫೨೫** || ' ಎಂಬ ಸೂತ್ರದಲ್ಲಿ ಇಮ್-ಪ್ರತ್ಯಯದ ಮುಂದೆ 'ಬೇಡಂ, ಬೇಡ ಗಳ ಪ್ರಯೋಗವು ವೈಕಲ್ಪಿಕವೆಂದು ಹೇಳಿದೆ. ಪ್ರಯೋಗ ಪಕ್ಷದಲ್ಲಿ ' **ತಸ್ಮಿನ್ನೆದಲೌ** || **೫೨೬** || ' ಎಂಬ ಸೂತ್ರದಿಂದ ಎಲ್ಲ ಪ್ರತ್ಯಯಗಳಿಗೂ ' **ವೇಮಃ** || **೫೨೫** || ' ಎಂಬ ಸೂತ್ರದಿಂದ ಇಮ್-ಪ್ರತ್ಯಯಕ್ಕೆ ವಿಕಲ್ಪವಾಗಿಯೂ ' ಅತ್, ಅಲ್ ' ಆದೇಶಗಳು ವಿಧಿಸಲ್ಪಟ್ಟಿವೆ. ಅಪ್ರಯೋಗ ಪಕ್ಷದಲ್ಲಿ ಅದಲಾದೇಶಗಳ ವಿಚಾರವೇನು ಎಂಬ ಜಿಜ್ಞಾಸೆಯುಂಟಾದಲ್ಲಿ ಆಗ ಅಲಾದೇಶ ವೊಂದನ್ನೇ ಮಾಡಬೇಕಲ್ಲದೆ ಅದಾದೇಶವನ್ನು ಮಾಡಕೂಡದೆಂದು ಹೇಳುವುದಕ್ಕಾಗಿ ಈ ಸೂತ್ರವನ್ನು ರಚಿಸಬೇಕಾಯಿತು. ' ಅಲ್ ' ಎಂಬುದನ್ನು ಈ ಸೂತ್ರಕ್ಕೆ ಅನುವೃತ್ತಿಯಿಂದ ತೆಗೆದುಕೊಳ್ಳಬಹುದಾಗಿದ್ದರೂ ಸೂತ್ರದಲ್ಲಿ ' ಅಲ್ ' ಎಂದು ಹೇಳಿದುದು ಅದಾದೇಶವನ್ನು ಪರಿಹರಿಸುವುದಕ್ಕಾಗಿ ಎಂದು ತಿಳಿಯಬೇಕು.

' ನೀಮಿಾ ಬನಮಂ ಪುಗಲ್ — ನೀವು ಈ ವನವನ್ನು ಪ್ರವೇಶಿಸಬೇಡಿರಿ, ನೀಮಿಾ ಮನೆಯಂ ನೋಡಲ್ — ನೀವು ಈ ಮನೆಯನ್ನು ನೋಡಬೇಡಿರಿ, ಯತಿಗಳ್ ನೀಮಂಗಜ ನಾಟಕ್ಕೆ ಸಲ್ಲಲ್ — ಯತಿಗಳೇ ನೀವು ಕಾಮಕ್ರೀಡೆಯಲ್ಲಿ ಪ್ರವರ್ತಿಸಬೇಡಿರಿ ' ಎಂದು ಅರ್ಥ.

**ಅವತಾರಿಕೆ ೫೨೯**

' ಬೇಡಂ, ಬೇಡ 'ಗಳ ಪ್ರಯೋಗ ವಿಚಾರವು.

**ಸೂತ್ರಂ || ಪ್ರಾಕ್ಪ್ರಯೋಗೇ ಚಾವಿಕೃತಾತ್ || ೫೨೯ ||**

( ೧. ಪ್ರಾಕ್, ೨. ಪ್ರಯೋಗೇ, ೩. ಚ, ೪. ಅವಿಕೃತಾತ್. )

**ಅನುವೃತ್ತಿ** || ೧. ಇಮಃ, ೨. ಅಲ್.

**ವೃತ್ತಿ || ' ಬೇಡಂ, ಬೇಡ 'ಗಳ ಪ್ರಯೋಗವಾದಾಗಲೂ ಆಗದಿರುವಾಗಲೂ ಅವಿಕೃತವಾದ ಇಮ್-ಪ್ರತ್ಯಯದ ಪೂರ್ವದಲ್ಲಿ ' ಅಲ್ ' ಬರುವುದು.**

**ಪ್ರಯೋಗ** || ಪೆಂಡಿರಂ ನಂಬಲಿಂ ಬೇಡಂ, ನಂಬಲಿಂ ಬೇಡ, ನಂಬಲಿಂ; ಅಕಾರ್ಯಮಂ ಮಾಡಲಿಂ ಬೇಡಂ, ಮಾಡಲಿಂ ಬೇಡ, ಮಾಡಲಿಂ.

**ಪದಕೃತ್ಯ** || 'ಅವಿಕೃತವಾದ ಇಮ್-ಪ್ರತ್ಯಯದ' ಎಂದು ಹೇಳಿದುದರಿಂದ ಇಮ್-ಪ್ರತ್ಯಯಕ್ಕೆ ಆದೇಶವಾದಾಗ ಈ ಕಾರ್ಯವಿಲ್ಲ. ಉದಾ: ನೋಡಲ್ ಬೇಡ, ನಂಬಲ್ ಬೇಡಂ. 'ಅವಿಕೃತವಾದ' ಎಂದು ಹೇಳದಿದ್ದರೆ ಇಲ್ಲಿ 'ಅಲ್' ಎಂಬುದರ ಹಿಂದೆ ಮತ್ತೆ 'ಅಲ್' ಬರುತ್ತಿದ್ದಿತು. 'ಪೂರ್ವದಲ್ಲಿ' ಎಂದು ಹೇಳಿದುದರಿಂದ (ಇಮ್-ಪ್ರತ್ಯಯದ) ಪರದಲ್ಲಿ ಬರುವುದಿಲ್ಲ.

**ವಿಚಾರ ೫೨೯**

ಸೂತ್ರದಲ್ಲಿರುವ 'ಚ' ಶಬ್ದವು 'ಅಪ್ರಯೋಗೇ' (ಪ್ರಯೋಗವಾಗದಿರುವಾಗಲೂ) ಎಂಬುವನ್ನು ಸಮುಚ್ಚಯಮಾಡುವುದು. ಅದರಿಂದ ಪ್ರಯೋಗವಾದಾಗಲೂ ಆಗದಿರುವಾಗಲೂ ಎಂಬ ಅರ್ಥವು ಬರುವುದು. '**ಇಮ್ || ೪೬೭ ||**' ಎಂಬ ಸೂತ್ರದಿಂ ಆದಿಷ್ಟವಾದ 'ಇಮ್' ಎಂಬುದು ವಿಕೃತವೇ ಆಗಿರಲು ಅದಕ್ಕೆ 'ಅವಿಕೃತವಾದ' ಎಂಬ ವಿಶೇಷಣವು ಹೇಗೆ ಹೊಂದುವುದೆಂದು ಶಂಕಿಸಿದರೆ ಸಮಾಧಾನವು — 'ಇಮ್' ಎಂಬುದು ಇರ್-ಪ್ರತ್ಯಯದ ವಿಕೃತಿ ಎನಿಸಿದರೂ 'ಇಮ್' ಎಂಬುದು 'ಬೇರೆ ವಿಕಾರವನ್ನು ಹೊಂದದಿದ್ದಾಗ' ಎಂದು ಇಲ್ಲಿ ಅರ್ಥವು. ಎಂದರೆ 'ಇಮ್' ಎಂಬುದು ವಿಕೃತವಾಗದೆ ಇಮ್-ಎಂಬ ರೂಪದಲ್ಲಿಯೇ ಇರುವಾಗ ಅದರ ಹಿಂದೆ 'ಅಲ್' ಬರುವುದೆಂದು ತಿಳಿಯಬೇಕು.

ಇಲ್ಲಿ ಮತ್ತೊಂದು ಆಶಂಕೆಯೇನಂದರೆ — ಇಲ್ಲಿ ವಿಧಿಸಿದ 'ಅಲ್' ಎಂಬುದು ಆಗಮವೇ ಪ್ರತ್ಯಯವೇ ಆದೇಶವೇ ? ಈ ಮೂರರ ಹೊರತು ವಿಧೇಯಗಳು ಇರುವುದಿಲ್ಲ. ಇದು ಆಗಮವಲ್ಲ; ಏಕೆಂದರೆ ಇದು 'ಕಿತ್' (ಕ ಕಾರವು ಇತ್ ಸಂಜ್ಞಕವಾಗಿ ಉಳ್ಳದು) ಅಲ್ಲ; '**ಕಿದಂತ್ಯಃ || ೨೫ ||**' — ಷಷ್ಠ್ಯಂತದ ಮುಂದೆ ಮತ್ತೊಂದನ್ನು ಬಾಧಿಸದೆ (ಲೋಪಿಸದೆ) ಬರುವಂತಹುದು ಆಗಮವು. ಇದು ಪ್ರತ್ಯಯವೂ ಅಲ್ಲ; ಏಕೆಂದರೆ ಇದು ಪರವಾಗಿ ಬಂದಿಲ್ಲ. ಪ್ರತ್ಯಯವು ಪರವಾಗಿಯೇ ಬರುವುದು. '**ಪಞ್ಚಮ್ಯಾಃ ಪ್ರತ್ಯಯಃ ಪರಃ || ೧೪ ||**' ಎಂದು ಹೇಳಿದೆ. ಇದು ಆದೇಶವೂ ಅಲ್ಲ; ಏಕೆಂದರೆ ಇದು ಯಾವುದನ್ನೂ ಬಾಧಿಸಿ ಬರುವುದಿಲ್ಲ; ಆದೇಶವು ಷಷ್ಠ್ಯಂತದ ಸ್ಥಾನದಲ್ಲಿ ಅದರ ಅಂತ್ಯಭಾಗವನ್ನು ಇಲ್ಲವೆ ಪೂರ್ಣ ಷಷ್ಠ್ಯಂತವನ್ನು ಲೋಪಿಸಿ ಬಂದದ್ದು ಆದೇಶವು. ಇದಕ್ಕೆ ಸಮಾಧಾನವು: 'ಅಲ್' ಎಂಬುದು ಇಲ್ಲಿ ಪ್ರತ್ಯಯವೆ. ಇನ್ನು ಈ ಸೂತ್ರದಲ್ಲಿ 'ಅಲ್' ಎಂಬುದು ಇಲ್ಲ, ಪೂರ್ವಸೂತ್ರದಿಂದ ಅನುವೃತ್ತವಾಗಿದೆ; ಪೂರ್ವಸೂತ್ರದಲ್ಲಿ ಆದೇಶರೂಪವಾಗಿದೆ; ಇಲ್ಲಿ ಅನುವೃತ್ತವಾಗಲು ಪ್ರತ್ಯಯರೂಪವಾಗುವುದು ಹೇಗೆ ಎಂದು ಶಂಕಿಸಿದರೆ ಪೂರ್ವಸೂತ್ರದಲ್ಲಿ 'ಇಮಃ' ಎಂಬುದಾಗಿ ಷಷ್ಠ್ಯಂತದ ಸ್ಥಾನದಲ್ಲಿ ವಿಧಿಸಲ್ಪಟ್ಟುದರಿಂದ ಆದೇಶವೆಂದೂ ಈ ಸೂತ್ರದಲ್ಲಿ 'ಪಞ್ಚಮೀ' ನಿರ್ದೇಶವಿರುವುದರಿಂದ '**ಪಞ್ಚಮ್ಯಾಃ ಪ್ರತ್ಯಯಃ ಪರಃ || ೧೪ ||**' ಎಂಬ ಸೂತ್ರದ ಮೇರೆಗೆ ಪ್ರತ್ಯಯವೆಂದೂ ಸಮಾಧಾನವನ್ನು ಹೇಳಬಹುದು. ಆದರೆ ಪ್ರತ್ಯಯವೆಂದುದು ಪರವಾಗಿಯೇ ಬರಬೇಕಾದುದರಿಂದ ಇಲ್ಲಿ ಪೂರ್ವವಾಗಿ ಬಂದ 'ಅಲ್' ಎಂಬುದನ್ನು ಪ್ರತ್ಯಯವೆಂದು ಹೇಗೆ ಹೇಳುವಿರಿ

ಎಂಬ ಮೊದಲಿನ ಶಂಕೆಯು ಹಾಗೇ ಉಳಿಯುತ್ತಲ್ಲವೇ ? ಅಹುದು; ಪ್ರತ್ಯಯವು ಎಲ್ಲ ಕಡೆಗೆ ಪರವಾಗಿ ಬರುವ ನಿಯಮವಿದ್ದರೂ ಕೆಲವೆಡೆ ಪೂರ್ವವಾಗಿಯೂ ಬರುವುದುಂಟು. ಸಂಸ್ಕೃತ ದಲ್ಲಿಯೂ ಇದು ಕಾಣಬರುವುದು. ' **ಸುಪಃ ಪ್ರಾಗ್ ಬಹುರ್ವಾ || ಶಾ. ೩. ೪. ೭೮ ||** ' ಎಂಬ ಸೂತ್ರದಲ್ಲಿ ನಾಮಪದದ ಹಿಂದೆ ' ಬಹು ' ಎಂಬ ಪ್ರತ್ಯಯದ ವಿಧಾನವಿದೆ. [ ' ಈಷತ್ ಅಪರಿ ಸಮಾಪ್ತೋ-ರಾಜಾ ಬಹುರಾಜಾ ' ಮುಂತಾದುವು. ] ಇಲ್ಲಿಯೂ ' ಅಲ್ ' ಪ್ರತ್ಯಯವು ಪೂರ್ವವಾಗಿ ಬಂದಿದೆಯೆಂದು ತಿಳಿಯಬೇಕು.

' ಬೇಡಂ, ಬೇಡ 'ಗಳ ಪ್ರಯೋಗ ಪಕ್ಷದ ಉದಾಹರಣಗಳನ್ನು ಮೊದಲು ಹೇಳಿ ಬಳಿಕ ಅಪ್ರಯೋಗ ಪಕ್ಷದ ಉದಾಹರಣೆಗಳನ್ನು ಹೇಳಿರುವನು. ' ಸ್ತ್ರೀಯರನ್ನು ನಂಬಬೇಡಿರಿ, ಅಕಾರ್ಯಗಳನ್ನು ಮಾಡಬೇಡಿರಿ ' ಎಂದು ಉದಾಹರಣ ವಾಕ್ಯಗಳ ಅರ್ಥವು.

**ಅವತಾರಿಕೆ ೫೩೦**

ಕರ್ಮಣಿ ಪ್ರಯೋಗದ ಕ್ರಿಯಾಪದಗಳುಂಟಾಗುವ ಬಗೆಯನ್ನು ಹೇಳುವನು.

**ಸೂತ್ರಂ || ಕರ್ಮಣ್ಯನುಪಡುಃ || ೫೩೦ ||**

( ೧. ಕರ್ಮಣಿ, ೨. ಅನು, ೩. ಪಡುಃ. )

**ವೃತ್ತಿ || ಕರ್ಮಾರ್ಥದಲ್ಲಿ ವಿಧಿಸಿದ ಆಖ್ಯಾತಪ್ರತ್ಯಯವು ಪರವಾಗಲು ಧಾತುವಿಗೆ ಹೊಂದಿ ' ಪಡು ' ಧಾತುವು ಪ್ರಯೋಗಿಸಲ್ಪಡುವುದು.**

**ಪ್ರಯೋಗ ||** ಮಾಡಲ್ಪಟ್ಟುದು ಘಟಂ ಕುಂಬಱನಿಂ, ನೋಡಲ್ಪಟ್ಟನರಸನಂಗನೆಯಿಂ, ಬಯಸಲ್ಪಟ್ಟಳ್ ತರುಣಿ ರಮಣನಿಂ, ಮಾಡಲ್ಪಡುಗೆಮಗೆ ಸಂಪದಂ ಜನಪತಿಯಿಂ, ಕಿಡಿಸಲ್ಪಡು ಗೆಮ್ಮ ದುಃಖ ಸಂತತಿ ಜಿನನಿಂ.

**ಪದಕೃತ್ಯ ||** ' ಕರ್ಮಾರ್ಥದಲ್ಲಿ ವಿಧಿಸಿದ ಆಖ್ಯಾತಪ್ರತ್ಯಯವು ಪರವಾಗಲು ' ಎಂದು ಹೇಳಿದುದರಿಂದ ಕರ್ತ್ರರ್ಥದಲ್ಲ ಈ ಕಾರ್ಯವಿಲ್ಲ. ಉದಾ : ನೋಡಿದನರಸನಂಗನೆಯಂ, ಮಾಡಿದಂ ಪದಕಮನಕ್ಕಸಾಲಿ. ' ಅನು ' (ಹೊಂದಿ) ಎಂದು ಹೇಳಿದುದರಿಂದ 'ವ್ಯವಧಾನವಿಲ್ಲದೆ' ಎಂಬ ಅರ್ಥವು ಬರುವುದು.

**ವಿಚಾರ ೫೩೦**

ಧಾತುಗಳ ಮುಂದೆ ಕರ್ತ್ರರ್ಥದಲ್ಲಿಯೂ ಕರ್ಮಾರ್ಥದಲ್ಲಿಯೂ ಆಖ್ಯಾತಪ್ರತ್ಯಯಗಳು ಸೇರುವುವೆಂದು ಈ ಮೊದಲು ಹೇಳಿದೆ. ಕರ್ತೃಕರ್ಮಾರ್ಥಗಳೆರಡಕ್ಕೂ ಸಂಬಂಧಿಸಿದ ಪ್ರಕ್ರಿಯೆ ಯನ್ನು ಈವರೆಗೆ ಹೇಳಿ ಈಗ ಕರ್ಮಾರ್ಥದ ಮಟ್ಟಿಗೆ ಸಂಬಂಧಿಸಿದ ಪ್ರಕ್ರಿಯೆಯನ್ನು ಈ ಸೂತ್ರದಿಂದಾರಂಭಿಸಿ ಹೇಳುತ್ತಾನೆ.

' ಪಡು ' ಎಂಬುದು ಧಾತುವು. ಶಯನಾರ್ಥದಲ್ಲಿ ರೂಢವಾದುದು. ಅದು ಇಲ್ಲಿ ಕರ್ಮಾರ್ಥಕ ಆಖ್ಯಾತಪ್ರತ್ಯಯವು ಪರದಲ್ಲಿರುವಾಗ ತನ್ನ ಅರ್ಥವನ್ನು ಹೇಳದೆ ಕೇವಲ ಶಬ್ದ ಸಂಸ್ಕಾರವೆಂದು ಎಲ್ಲ ಧಾತುಗಳ ಮುಂದೆ ಅಂಗವಾಗಿ ಪ್ರಯೋಗಿಸಲ್ಪಡುವುದು. ಸಂಸ್ಕೃತ ದಲ್ಲಿಯೂ ' ಲಿಟ್ ' ಲ ಕಾರದಲ್ಲಿ (ಪೂರ್ಣ ಭೂತಕಾಲದಲ್ಲಿ) ಒಮ್ಮೊಮ್ಮೆ ' ಕೃ, ಭೂ, ಅಸ್ ' ಇವುಗಳ ಪ್ರಯೋಗವು ಕಾಣಬರುವುದು.

ಈ ಸೂತ್ರದಲ್ಲಿ ಕರ್ಮಣಿ ( ಕರ್ಮಾರ್ಥದಲ್ಲಿ ) ಎಂದಿಷ್ಟೇ ಹೇಳಿದೆ. ಆಖ್ಯಾತಪ್ರತ್ಯಯವು ಪರವಾಗಿರುವಾಗ ಎಂಬ ಅರ್ಥವು ಹೇಗೆ ಬಂದಿತು ? ಧಾತುವಿನ ಮುಂದೆ ಕಾರಕಾರ್ಥದಲ್ಲಿ ಆಖ್ಯಾತಪ್ರತ್ಯಯವಾಗಲಿ ಕೃತ್-ಪ್ರತ್ಯಯವಾಗಲಿ ಬರುವುದೇ ಹೊರತು ಬೇರೆ ಪ್ರತ್ಯಯವು ಬಾರದು. '**ಕೃತಿ ವಾ || ೫೩೮ ||** ಎಂಬ ಸೂತ್ರದಿಂದ ಕೃತ್‌ಪ್ರತ್ಯಯ ವಿಷಯದಲ್ಲಿ ಬೇರೆ ವಿಧಾನವು ಹೇಳಿರುವುದರಿಂದ ಇಲ್ಲಿ 'ಆಖ್ಯಾತಪ್ರತ್ಯಯವು ಪರವಾಗಲು' ಎಂಬ ಅರ್ಥವು ತಾನಾಗಿ ಸಿದ್ಧವಾಗುವುದು. ಉದಾ : ಮಾಡಲ್ಪಟ್ಟುದು ಘಟಂ ಕುಂಬಱನಿಂ, ಕರ್ತರಿ–ಮಾಡಿದಂ ಘಟಮಂ ಕುಂಬಱಂ.

ರೂಪಸಿದ್ಧಿ — ಮಾಡಿದಂ ಕುಂಬಱಂ ಘಟಮಂ — ' ಮಾಡು ' ಧಾತುವಿನ ಮುಂದೆ '**ಧಾತೋರೇಕಾನೇಕತ್ವೇ.... || ೪೪೨ ||**' ಎಂಬ ಸೂತ್ರದಿಂದ ಕರ್ತ್ರರ್ಥದಲ್ಲ ಪ್ರಥಮಪುರುಷೈಕವಚನದ ' ಅಮ್ ' ಪ್ರತ್ಯಯವು ಬರಲು '**ದಪದವಂ.... || ೪೪೬ ||**' ಎಂಬ ಸೂತ್ರದಿಂದ ಭೂತಕಾಲದ ' ದ ' ಪ್ರತ್ಯಯವು ನಡುವೆ ಬರಲು '**ಇದುತಃ || ೪೭೬ ||**' ಎಂಬ ಸೂತ್ರದಿಂದ ಧಾತುವಿನ ಉ ಕಾರಕ್ಕೆ ಇ ಕಾರಾದೇಶವಾಗಲು ' ಮಾಡಿದಂ ' ಎಂಬ ರೂಪವಾಗುವುದು. ಆಖ್ಯಾತಪ್ರತ್ಯಯವು ಇಲ್ಲಿ ಕರ್ತೃವನ್ನು ಹೇಳುವುದರಿಂದ ' ಕುಂಬಱ ' ಶಬ್ದದ ಮುಂದೆ '**ಮುಕ್ತೇ || ೨೨೭ ||**' ಎಂಬ ಸೂತ್ರದಿಂದ ಪ್ರಥಮೆ ಬಂದಿದೆ. ಕರ್ಮವು ಯಾವುದರಿಂದಲೂ ಉಕ್ತವಾಗಿಲ್ಲವಾದುದರಿಂದ '**ಕರ್ಮಣ್ಯಮ್ || ೨೦೪ ||**' ಎಂಬ ಸೂತ್ರದಿಂದ ' ಘಟ ' ಶಬ್ದದ ಮುಂದೆ ದ್ವಿತೀಯೆ ಬಂದಿದೆ. ಕರ್ಮಾರ್ಥಕ ಕ್ರಿಯಾಪದದ ವಾಕ್ಯರಚನೆಯನ್ನು ಮಾಡಬೇಕೆಂದಿದ್ದಾಗ ' ಮಾಡಲ್ಪಟ್ಟುದು ಘಟಂ ಕುಂಬಱನಿಂ ' ಎಂದು ಹೇಳುವರು. ಆಗ ' ಮಾಡು ' ಧಾತುವಿನ ಮುಂದೆ '**ಕರ್ಮಣಿ || ೪೪೩ ||**' ಎಂಬ ಸೂತ್ರದಿಂದ ಪ್ರಥಮಪುರುಷೈಕವಚನದಲ್ಲಿ ' ಅಮ್ ' ಪ್ರತ್ಯಯವು ಬರುವುದು. '**ಕರ್ಮಣ್ಯನುಪಡುಃ || ೫೩೦ ||**' ಈ ಸೂತ್ರದಿಂದ ' ಮಾಡು 'ವಿನ ಮುಂದೆ ' ಪಡು 'ವಿನ ಅನುಪ್ರಯೋಗವು. '**ತಸ್ಮಿನ್ನೆದಲಾ || ೫೩೨ ||**' ಎಂಬ ಸೂತ್ರದಿಂದ ಧಾತುವಿನ ಅಂತ್ಯಕ್ಕೆ ' ಅಲ್ ' ಆದೇಶವೂ '**ನಪ್ಪುದುಃ || ೪೫೪ ||**' ಎಂಬುದರಿಂದ ' ಅಮ್ ' ಪ್ರತ್ಯಯಕ್ಕೆ ' ಉದು ' ಆದೇಶವೂ '**ದಪದವಂ || ೪೪೬ ||**' ಎಂಬುದರಿಂದ ಭೂತಕಾಲದ ' ದ ' ಪ್ರತ್ಯಯವೂ '**ಡೋಷ್ಟಃ || ೪೮೭ ||**' ಎಂಬುದರಿಂದ ಪಡುವಿನ ' ಡು ' ವಿಗೆ ಟಾದೇಶವೂ ಆಗಲು ' ಮಾಡಲ್ಪಟ್ಟುದು ' ಎಂಬ ರೂಪವಾಗುವುದು. ಕರ್ಮಾರ್ಥ ಆಖ್ಯಾತ ಪ್ರತ್ಯಯದಿಂದ ಕರ್ಮವು ಉಕ್ತವಾಗುವುದರಿಂದ '**ಮುಕ್ತೇ || ೨೨೭ ||**' ಎಂಬುದರಿಂದ ' ಘಟ ' ಶಬ್ದದ ಮುಂದೆ ಪ್ರಥಮೆ ಕರ್ತೃವು ಆಖ್ಯಾತಪ್ರತ್ಯಯದಿಂದ ಅನುಕ್ತವಾಗಿರುವುದರಿಂದ ' **ಕುಂಬಱ** ' ಶಬ್ದದ ಮುಂದೆ '**ಹೇತುಕರ್ತೃಕರಣ.... || ೨೦೯ ||**' ಎಂಬ ಸೂತ್ರದಿಂದ ಅನುಕ್ತಕರ್ತೃರ್ಥದಲ್ಲಿ ತೃತೀಯೆ ಬಂದಿದೆ. ಈ ಮೇರೆಗೆ ' ಮಾಡಲ್ಪಟ್ಟುದು ಘಟಂ ಕುಂಬಱನಿಂ ' ಎಂದಾಗುವುದು. ಉಳಿದ ರೂಪಗಳನ್ನೂ ಹೀಗೆಯೇ ತಿಳಿದುಕೊಳ್ಳಬೇಕು.

ಸೂತ್ರದಲ್ಲಿ ' ಅನು ' ಎಂಬುದು ಅವ್ಯವಹಿತವಾಗಿ ' ಪಡು ' ಬರುವುದು ಎಂಬುದನ್ನು ಸೂಚಿಸುವುದಕ್ಕಾಗಿ ಎಂದು ತಿಳಿಯಬೇಕು. ಸಂಸ್ಕೃತದಲ್ಲಿ ' ಕೃ, ಭೂ, ಅಸ್ ' ಎಂಬಿವು ಅನುಪ್ರಯೋಗಗಳಾಗಿ ಬರುವುವಾದರೂ ಅವು ವ್ಯವಹಿತವಾಗಿಯೂ ಪ್ರಯುಕ್ತವಾಗುವುದುಂಟು.

ಉದಾ :

'ತಂ ಪಾತಯಾಂ ಪ್ರಥಮಮಾಸ ಪಪಾತ ಪಶ್ಚಾತ್'

'ಪಾತಯಾಂ' ಇದರಿಂದ ವ್ಯವಹಿತವಾಗಿ 'ಆಸ' ಬಂದಿದೆ. ಮತ್ತು —

'ಪ್ರಚಲನ್ಮೀನಮಕರಃ ಪ್ರಭೂತತರವಾರಿಕಃ
ಚಕಾರ ಕಲಯಾಮಬ್ಧಿರ್ಮಹಾನೇಷ ನಭಸ್ತುಲಾಮ್'

'ಕಲಯಾಂ' ಇದರ ಹಿಂದೆ 'ಚಕಾರ' ಬಂದಿದೆ. ಮತ್ತು —

'ಯಂ ಚಕ್ರುರಿಂದ್ರಾಸ್ತ್ರಿದಶೇಂದ್ರಶೈಲೇ ಸಂಸ್ಥಾಪಯಾಮುಜ್ಜ್ವಲರತ್ನಪೀಠೇ'

ಇಲ್ಲಿ 'ಸಂಸ್ಥಾಪಯಾಂ' ಎಂಬುದರ ಹಿಂದೆ ವ್ಯವಧಾನದಿಂದ 'ಚಕ್ರುಃ' ಎಂಬುದಿದೆ.

ಕನ್ನಡದಲ್ಲಿ ಈ ರೀತಿ ಇಲ್ಲ. ಅನುಪ್ರಯೋಗವು ಅವ್ಯವಹಿತವಾಗಿಯೇ ಇರಬೇಕೆಂದು ನಿಯತವು.

**ಅವತಾರಿಕೆ ೫೩೧**

'ಪಡು' ಧಾತುವಿನ ಅನುಪ್ರಯೋಗ ವಿಚಾರವು :

**ಸೂತ್ರಂ || ಕೃತಿ ವಾ || ೫೩೧ ||**

(೧. ಕೃತಿ, ೨. ವಾ.)

**ಅನುವೃತ್ತಿ** || ೧. ಕರ್ಮಣಿ, ೨. ಅನು, ೩. ಪಡುಃ.

**ವೃತ್ತಿ** || **ಕರ್ಮಾರ್ಥದಲ್ಲಿ ವಿಧಿಸಲ್ಪಟ್ಟ ಕೃತ್-ಪ್ರತ್ಯಯವು ಪರದಲ್ಲಿರಲು ಧಾತುವಿನ ಮುಂದೆ; 'ಪಡು' ಎಂಬುದು ವಿಕಲ್ಪವಾಗಿ ಪ್ರಯೋಗಿಸಲ್ಪಡುವುದು.**

**ಪ್ರಯೋಗ** || ಮಾಡಲ್ಪಟ್ಟುದಂ, ಮಾಡಿದುದಂ; ಮಾಡಲ್ಪಟ್ಟುದಱಿಂ, ಮಾಡಿದುದಱಿಂ ತೋಱಲ್ಪಟ್ಟುದರ್ಕೆ, ತೋಱಿದುದರ್ಕೆ; ಆಡಲ್ಪಡುವ ಪೊಲಂ, ಆಡುವ ಪೊಲಂ; ತೂಗಲ್ಪಡುವ ಡಾಣೆ, ತೂಗುವ ಡಾಣೆ.

**ವಿಚಾರ ೫೩೧**

ರೂಪಸಿದ್ಧಿ — 'ಮಾಡಲ್ಪಟ್ಟುದಂ' — 'ಮಾಡು' ಧಾತುವಿನ ಮುಂದೆ '**ಅಚ್ ಕರ್ತೃಕರ್ಮಣೋಃ || ೫೪೩ ||**' ಎಂಬುದರಿಂದ ಕರ್ಮಾರ್ಥದಲ್ಲಿ '**ಅಚ್**' ಪ್ರತ್ಯಯವು ಬರಲು '**ಕೃತಿ ವಾ || ೫೩೧ ||**' ಎಂಬುದರಿಂದ ವಿಕಲ್ಪವಾಗಿ ಪಡುವಿನ ಅನುಪ್ರಯೋಗವಾಗಲು '**ತಸ್ಮಿನ್ನೆದಲೌ || ೫೩೨ ||**' ಎಂಬುದರಿಂದ ಧಾತುವಿನ ಅಂತ್ಯಕ್ಕೆ '**ಅಲ್**' ಆದೇಶವಾಗಲು '**ಅಚಃ || ೪೫೫ ||**' ಎಂಬುದರಿಂದ '**ಅಚ್**' ಪ್ರತ್ಯಯಕ್ಕೆ 'ಉದು' ಆದೇಶವಾಗಲು '**ಅಚಿ||೪೪೬||**' ಎಂಬುದರಿಂದ ಭೂತಕಾಲದ 'ದ' ಪ್ರತ್ಯಯವು ಬರಲು '**ಡೋಷ್ಟುಃ ||೪೮೭||**' ಎಂಬುದರಿಂದ ಪಡುವಿನ 'ಡು' ವಿಗೆ ಟಾದೇಶವಾಗಲು '**ವರ್ಗಪ್ರಥಮಾತ್ಪೂರ್ವಃ || ೫೦೬ ||**' ಎಂಬುದರಿಂದ ದ ಕಾರಕ್ಕೆ ಟ ಕಾರಾದೇಶವಾಗಲು 'ಮಾಡಲ್ಪಟ್ಟುದು' ಎಂಬ ರೂಪವಾಗುವುದು. ಬಳಿಕ ಈ ಕೃದಂತ ಶಬ್ದರೂಪವು '**ಅರ್ಥವಲ್ಲಿಂಗಂ || ೮ ||**' ಎಂಬುದರಿಂದ ಲಿಂಗಸಂಜ್ಞೆಯನ್ನು ಹೊಂದಿದ ಬಳಿಕ '**ಲಿಂಗಾತ್ ಸುಪ್ || ೨೦೩ ||**' ಎಂಬ ಅಧಿಕಾರದಲ್ಲಿ '**ಕರ್ಮಣ್ಯಮ್ || ೨೮೪ ||**' ಎಂಬುದರಿಂದ ಕರ್ಮಾರ್ಥದಲ್ಲಿ 'ಅಮ್' ಪ್ರತ್ಯಯವು ಬರಲು '**ಲುಬನಾಮ**

**ಹಾನೌ || ೩೬ ||** ' ಎಂಬುವರಿಂದ ಅಂತ್ಯ ಉಕಾರವು ಲೋಪವೊಂದಲು ' ಮಾಡಲ್ಪಟ್ಟುದಂ ' ಎಂದು ಸಿದ್ಧವಾಗುವುದು. ' ಮಾಡಿಮುಸಂ ' ಎಂಬಲ್ಲಿ ಪಡುವಿನ ಅನುಪ್ರಯೋಗವು ವೈಕಲ್ಪಿಕವಾಮುದರಿಂದ ' ಪಡು ' ಬಂದಿಲ್ಲ.

ಇಲ್ಲಿ ಉದಾಹರಿಸಿದ ರೂಪಗಳು ಕೃದಂತಗಳೆಂದು ತೋರಬೇಕೆಂದು ಅವನ್ನು ಪ್ರಥಮೆಯನ್ನುಳಿದು ದ್ವಿತೀಯಾದಿ ವಿಭಕ್ತಿಗಳಲ್ಲಿ ಹೇಳಿದ್ದಾನೆ. ' ಆಡಲ್ಪಡುವ ಪೊಲಂ ' ಎಂಬಲ್ಲಿ ' ಆಡಲ್ಪಡುವುದು ಪೊಲಂ ' ಎಂಬುದು ವಿಗ್ರಹವು. ' **ವಿಶೇಷಣಮೇಕಾರ್ಥೇನ || ೩೦೯ ||** ' ಎಂಬುದರಿಂದ ಸಮಾಸವು. ' **ಪೂರ್ವಸ್ವರೇಣೈಕಾರ್ಥೇ || ೩೩೩ ||** ' ಎಂಬುದರಿಂದ ಉಪಾಂತ್ಯಸ್ವರಾದಿಯಾದ ಭಾಗಕ್ಕೆ ಲೋಪವೂ ' **ಅಗ್ಬಹುಲಂ || ೩೪೫ ||** ' ಎಂಬುದರಿಂದ ಅಗಾಗಮವೂ ' **ಅಕಃ ಪ್ರಕೃತ್ಯಾ || ೯೬ ||** ' ಎಂಬುದರಿಂದ ಪ್ರಕೃತಿಭಾವವೂ ಆಗಲು ತರುವಾಯ ಲಿಂಗಸಂಜ್ಞೆ ಮೊದಲಾದುದು ಬರುವುದು. ಆಗ ' ಮಾಡಲ್ಪಡುವ ಪೊಲಂ' ಎಂಬ ರೂಪವು ಆಗುವುದು.

**ಅವತಾರಿಕೆ ೫೩೨**

' ಪಡು ' ಅನುಪ್ರಯೋಗವಾದಾಗ ಬರುವ ಕಾರ್ಯವು.

**ಸೂತ್ರಂ || ತಸ್ಮಿನ್ನೆದಲೌ || ೫೩೨ ||**

( ೧. ತಸ್ಮಿನ್, ೨. ಎದಲೌ. )

**ವೃತ್ತಿ** || ' **ಪಡು** ' **ಧಾತುವು ಪರದಲ್ಲಿರಲು ಧಾತುವಿಗೆ ' ಎ, ಅಲ್ ' ಎಂಬಾದೇಶಗಳು ಬರುವುವು.**

**ಪ್ರಯೋಗ ||** ಮಾಡೆಪಟ್ಟಂ, ಮಾಡಲ್ಪಟ್ಟಂ; ನೋಡೆಪಟ್ಟಂ, ನೋಡಲ್ಪಟ್ಟಂ; ಕಿಡಿಸೆಪಟ್ಟುದು, ಕಿಡಿಸಲ್ಪಟ್ಟುದು.

**ಪದಕೃತ್ಯ ||** ' ಪಡು ಪರದಲ್ಲಿರಲು ' ಎಂದು ಹೇಳಿದುದರಿಂದ ಅದು ಪರದಲ್ಲಿಲ್ಲದಾಗ ಈ ಕಾರ್ಯವಿಲ್ಲ. ಉದಾ : ಮಾಡಿದಂ, ಕೂಡಿದಂ.

**ವಿಚಾರ ೫೩೩**

ಈ ಸೂತ್ರದಲ್ಲಿ ' ತಸ್ಮಿನ್ ' ಎಂದರೆ ' ಪಡು ಪರವಾಗಲು ' ಎಂದು ಅರ್ಥವು.

**ಅವತಾರಿಕೆ ೫೩೩**

ಕೃದಂತ ಪ್ರಕರಣವನ್ನು ಆರಂಭಿಸುವ ಸೂತ್ರಕಾರನು ಮೊದಲು ಧಾತುವಿಶೇಷಗಳಾದ ಪ್ರತ್ಯಯಾಂತ ಧಾತುಗಳುಂಟಾಗುವ ಬಗೆಗಳನ್ನು ಹೇಳುವವನಾಗಿ ಈ ಸೂತ್ರದಲ್ಲಿ ಧಾತುಗಳನ್ನುಂಟುಮಾಡಲು ಬರುವ ' ಇಸು ' ಪ್ರತ್ಯಯ ವಿಚಾರವನ್ನು ಹೇಳುತ್ತಾನೆ.

**ಸೂತ್ರಂ || ಇಸುಸ್ತತ್ಕರೋತಿ ಭಾವೇ ಲ್ಯುಟೋsಶಯನಾದೇರ್ಲುಪ್ಚ ದೋಃ || ೫೩೩ ||**

( ೧. **ಇಸುಪ್, ೨. ತತ್ಕರೋತಿ, ೩. ಭಾವೇ, ೪. ಲ್ಯುಟಃ, ೫. ಅಶಯನಾದೇಃ, ೬. ಲುಪ್, ೭. ಚ, ೮. ದೋಃ.** )

**ವೃತ್ತಿ ||** ' **ಭಾವ** ' ಎಂದರೆ ಕ್ರಿಯೆ; **ಭಾವಾರ್ಥದಲ್ಲಿ ' ಲ್ಯುಟ್ ' ಪ್ರತ್ಯಯವನ್ನು ಹೊಂದಿದ ' ಶಯನ ' ಮೊದಲಾದುವನ್ನು ಬಿಟ್ಟುಳಿದ ಶಬ್ದಗಳ ಮುಂದೆ ' ಅದನ್ನು ಮಾಡು ' ಎಂಬ ಅರ್ಥದಲ್ಲಿ**

' ಇಸು ' ಪ್ರತ್ಯಯುವು ಬರುವುದು. ಆಗ ಶಬ್ದದ ' ದು ' ಭಾಗಕ್ಕೆ (ಕೊನೆಯ ಸ್ವರವನ್ನು ಹಿಡಿದು ಮುಂದಿನ ಭಾಗಕ್ಕೆ) ಲೋಪವಾಗುವುದು.

**ಪ್ರಯೋಗ ||** ಪಚನಮಂ ಮಾಡುವಂ ಪಚಿಸುವಂ; ಇದೇ ಮೇರೆಗೆ : ವರ್ಧಿಸುವಂ, ರಕ್ಷಿಸುವಂ, ಸೇವಿಸುವಂ; ಪಾಲಿಸುವಂ, ಭೋಜಿಸುವಂ, ಲಾಲಿಸುವಂ.

**ಪದಕೃತ್ಯ ||** ' ಭಾವಾರ್ಥದಲ್ಲಿ ಲ್ಯುಟ್-ಪ್ರತ್ಯಯುವನ್ನು ಹೊಂದಿದ ' ಎಂದು ಹೇಳಿದುದರಿಂದ ಬೇರೆ ಅರ್ಥದಲ್ಲಿ ಪ್ರತ್ಯಯುವನ್ನು ಹೊಂದಿದ ಶಬ್ದದ ಮುಂದೆ 'ಇಸು'ವನ್ನು ಸೇರಿಸಬಾರದು. ಉದಾ : ' ಭುಜ್ಯತೇ ( ತಿನ್ನಲ್ಪಡುವುದು ) ಇತಿ ಭೋಜನಮಂ ' ಎಂಬ ವ್ಯುತ್ಪತ್ತಿಯಿಂದ ' ಭೋಜನ ' ಶಬ್ದವು ' ಅನ್ನ ' ಎಂಬ ಅರ್ಥವನ್ನು ಹೇಳುವುದು. ಆಗ ಅದರ ಮುಂದೆ ಈ ಅರ್ಥದಲ್ಲಿ ' ಇಸು ' ಸೇರುವುದಿಲ್ಲ. ' ಲ್ಯುಟ್-ಪ್ರತ್ಯಯುವನ್ನು ಹೊಂದಿದ ' ಎಂದು ಹೇಳಿದುದರಿಂದ ಬೇರೆ ಪ್ರತ್ಯಯುವನ್ನು ಹೊಂದಿದ ಶಬ್ದದ ಮುಂದೆ ' ಇಸು ' ಇಲ್ಲ. ಉದಾ : ಯಜ್ಞ' ಮುಂತಾದುವು. 'ಶಯನ ಮೊದಲಾದ ಶಬ್ದಗಳನ್ನು ಬಿಟ್ಟು ' ಎಂದು ಹೇಳಿದುದರಿಂದ (ಶಯನ+ಇಸು) ' ಶಯಿಸು ' ಮೊದಲಾದ ರೂಪಗಳಾಗುವುದಿಲ್ಲ.

' ಶಯನ ' ಮೊದಲಾದುವು —' ಶಯನ, ಚಯನ, ತಕ್ಷಣ, ಶ್ರವಣ, ರವಣ, ನಯನ, ಸ್ನವನ, ಕವನ ' ಮುಂತಾದುವು. ಇವನ್ನು ಪ್ರಯೋಗದಿಂದ ತಿಳಿಯಬೇಕು. 'ಶಯನಾದಿ'ಗಳು ಆಕೃತಿ ಗಣವು.

**ವಿಚಾರ ೫೩೩**

ಧಾತುವಿನ ಮುಂದೆ ಕರ್ತೃಕರ್ಮಾರ್ಥಗಳಲ್ಲಿ ಆಖ್ಯಾತಪ್ರತ್ಯಯಗಳನ್ನೂ ಸಾಮಾನ್ಯವಾಗಿಯೂ ವಿಶೇಷವಾಗಿಯೂ ಪ್ರಕ್ರಿಯೆಯನ್ನೂ ಹೇಳಿ ಈಗ ಧಾತುಗಳಲ್ಲಿ ಕೆಲವು ಪ್ರಕಾರಗಳನ್ನೂ ತೋರಿಸುವುದಕ್ಕಾಗಿ ಈ ಸೂತ್ರವನ್ನು ಮೊದಲುಗೊಂಡು ಕೆಲವು ಸೂತ್ರಗಳನ್ನು ಹೇಳುತ್ತಾನೆ.

ಭಾಷೆಯಲ್ಲಿ ಪ್ರಯೋಗಾರ್ಹವಾದ ಪದವು ನಾಮಪದವೆಂದೂ ಧಾತುಪದವೆಂದೂ ಎರಡು ಬಗೆಯಾಗಿದೆಯೆಂದು ಹಿಂದೆ ಹೇಳಿದೆ. ಈ ಎರಡು ಬಗೆಯ ಪದಗಳಲ್ಲಿ ಪ್ರತಿಯೊಂದೂ ಸಂಸ್ಕೃತಪ್ರಕೃತಿಕವೂ ಅಸಂಸ್ಕೃತಪ್ರಕೃತಿಕವೂ ಎಂದು ದ್ವಿವಿಧವಾಗಿದೆ. ಅಸಂಸ್ಕೃತಪ್ರಕೃತಿಕಗಳಾದ ಎರಡು ಬಗೆಯ ಪದಗಳಲ್ಲಿಯೂ ವಿಶೇಷವೇನೂ ಇಲ್ಲ. ಅವು ಸ್ವತಃ ಸಿದ್ಧವಾಗಿವೆ. ಸಂಸ್ಕೃತಪ್ರಕೃತಿಕಗಳಲ್ಲಿ ನಾಮಗಳನ್ನೂ ಧಾತುಗಳನ್ನೂ ಸಿದ್ಧಮಾಡಿಕೊಳ್ಳಬೇಕಾಗಿದೆ. ಸಂಸ್ಕೃತಪ್ರಕೃತಿಕ ನಾಮಪದಗಳಲ್ಲಿ ಸ್ವರಾಂತ ವ್ಯಂಜನಾಂತಗಳಾದ ದ್ವಿವಿಧಸಂಸ್ಕೃತ ಶಬ್ದಗಳಿಗೂ **' ಲಿಂಗಾತ್ಸುಪ್ || ೨೦೩ || '** ಎಂಬುದರಿಂದ ನಾಮವಿಭಕ್ತಿ ಪ್ರತ್ಯಯುವು ಸೇರಲು ಕಾರಣವೆನಿಸಿದ ಲಿಂಗ-ಸಂಜ್ಞೆಯು ಹಲವು ಸೂತ್ರಗಳಿಂದ ಹೇಳಲ್ಪಟ್ಟಿದೆ. ಈಗ ಸಂಸ್ಕೃತಪ್ರಕೃತಿಕಗಳಾದ ಧಾತುಪದಗಳಲ್ಲಿಯೂ ' ಭೋಜನ, ರಕ್ಷಣ ' ಮುಂತಾದ ಭಾವ ಪ್ರತ್ಯಯಾಂತಗಳಾದ ಶಬ್ದಗಳಿಗೆ **' ಧಾತೋಃ || ೪೪೨ || '** ಎಂಬುದರಿಂದ ಆಖ್ಯಾತಪ್ರತ್ಯಯಗಳು ಸೇರಲು ಕಾರಣವೆನಿಸಿದ ಧಾತುಸಂಜ್ಞೆ ಬರುವುದಕ್ಕಾಗಿ ಸೂತ್ರಕಾರನು **' ಇಸುಪ್ ತತ್ ಕರೋತಿ....|| ೫೩೩ || '** ಮುಂತಾದ ಸೂತ್ರಗಳನ್ನು ಆರಂಭಿಸುತ್ತಾನೆ.

ಈ ಸೂತ್ರದಲ್ಲಿ ' ಇಸುಪ್ ' ಎಂಬುದರಿಂದ ಕಾರ್ಯಸ್ವರೂಪವೂ ' ತತ್ಕರೋತಿ ' ಎಂಬುದರಿಂದ ಅದರ ಅರ್ಥವೂ ' ಭಾವೇ ಲ್ಯುಟಃ ' ಎಂಬುದರಿಂದ ಕಾರ್ಯಸ್ಥಾನವೂ ' ಅಶಯುನಾದೇಃ ' ಎಂಬುದರಿಂದ ವಿಷಯಸಂಕೋಚವೂ ' ಲುಪ್ತವೋಃ ' ಎಂಬುದರಿಂದ ಮತ್ತೊಂದು ಕಾರ್ಯವೂ ಹೇಳಲ್ಪಟ್ಟಿವೆ.

ಇಲ್ಲಿ ಹೇಳಿದಂತಹ ಸಂಸ್ಕೃತ ಶಬ್ದಗಳ ಮುಂದೆ ' ಇಸು ' ಪ್ರತ್ಯಯವನ್ನು ಸೇರಿಸಿ ಧಾತುಗಳನ್ನಾಗಿ ಮಾಡಿಕೊಂಡು ಅವುಗಳ ಮುಂದೆ ಆಖ್ಯಾತಪ್ರತ್ಯಯಗಳನ್ನಾಗಲಿ ಕೃತ್-ಪ್ರತ್ಯಯಗಳನ್ನಾಗಲಿ ಸೇರಿಸಿ ಸಂಸ್ಕೃತ ಪ್ರಕೃತಿಕಗಳಾದ ಧಾತುಪದಗಳನ್ನು ಸಾಧಿಸಿಕೊಳ್ಳಬೇಕು.

ಎಲ್ಲ ಸಂಸ್ಕೃತ ಶಬ್ದಗಳಿಂದಲೂ ಧಾತುಗಳನ್ನು ಮಾಡಿಕೊಳ್ಳುವುದೆಂದು ಇಲ್ಲಿ ಹೇಳಿಲ್ಲ; ಕೆಲವು ಶಬ್ದಗಳಿಂದ ಮಾತ್ರ ಮಾಡಿಕೊಳ್ಳಬಹುದೆಂದು ಇಲ್ಲಿ ಹೇಳಿದೆ. ಅಂತಹ ಶಬ್ದಗಳನ್ನು ಅವುಗಳ ಸಮುದಾಯದಿಂದ ಬೇರ್ಪಡಿಸುವುದನ್ನು ಒಂದು ಲಕ್ಷಣವನ್ನು ಹೇಳುವುದರಿಂದ ಇಲ್ಲವೆ ಅವೆಲ್ಲವನ್ನು ಒಂದೊಂದನ್ನಾಗಿ ( ಸ್ವರೂಪತಃ ) ಹೇಳುವುದರಿಂದ ಈ ಎರಡು ಮಾರ್ಗಗಳಿಂದ ಮಾತ್ರ ಸಾಧಿಸಬಹುದು. ಅದು ಕೂಡ ಕೆಲವೆಡೆ ಲಕ್ಷಣದಿಂದ ಕೆಲವೆಡೆ ಒಂದೊಂದನ್ನಾಗಿ ಹೇಳುವುದರಿಂದ ಎಂದರೆ ಸ್ವರೂಪನಿರ್ದೇಶದಿಂದ — ಎಂದು ಎರಡು ವರ್ಗಗಳನ್ನು ಮಾಡಿಕೊಳ್ಳಬೇಕು. ಎಲ್ಲೆಡೆಗಳಲ್ಲಿ ' ಲಕ್ಷಣದಿಂದಾಗಲಿ ಸ್ವರೂಪನಿರ್ದೇಶದಿಂದಾಗಲಿ ' ಎಂಬ ವಿಕಲ್ಪವನ್ನಾಗಲಿ ಲಕ್ಷಣದಿಂದಲೂ ಸ್ವರೂಪನಿರ್ದೇಶದಿಂದಲೂ ಎಂಬ ಸಮುಚ್ಚಯವನ್ನಾಗಲಿ ಇಟ್ಟುಕೊಳ್ಳಲಾಗುವುದಿಲ್ಲ. ಹೇಗೆಂದರೆ — ಎಲ್ಲೆಡೆಗೆ ಲಕ್ಷಣದಿಂದ ಪೃಥಕ್ಕರಿಸುವುದು ಸಾಧ್ಯವಲ್ಲ; ಏಕೆಂದರೆ ಎಲ್ಲವನ್ನೂ ಒಳಕೊಳ್ಳುವ ಒಂದು ಸಾಮಾನ್ಯ ಲಕ್ಷಣವು ಸಿಕ್ಕುವುದಿಲ್ಲ. ಎಲ್ಲೆಡೆಗೆ ಸ್ವರೂಪನಿರ್ದೇಶವೂ ಸಾಧ್ಯವಲ್ಲ; ಶಬ್ದಗಳು ಅನಂತವಾಗಿರುವುದರಿಂದ ಅವನ್ನು ಒಂದೊಂದನ್ನಾಗಿ ಹೇಳುವುದು (ಸ್ವರೂಪನಿರ್ದೇಶಮಾಡಿ ಹೇಳುವುದು) ಅಶಕ್ಯವಾಗಿದೆ. '**ಶಬ್ದರಾಶಿಃ ಅಪರ್ಯಂತಃ**' ಎಂಬ ವಚನವುಂಟು. ಈ ಕಾರಣಗಳಿಂದಲೇ ಮೇಲೆ ಹೇಳಿದ ವಿಕಲ್ಪಪಕ್ಷವನ್ನೂ ಸಮುಚ್ಚಯಪಕ್ಷವನ್ನೂ ಸ್ವೀಕರಿಸಲಾಗುವುದಿಲ್ಲ. ಎರಡರಲ್ಲಿಯೂ ದೋಷಗಳನ್ನು ತೋರಿಸಿದ್ದೇವೆ. ಒಂದನ್ನು ಸ್ವೀಕರಿಸಿದರೆ ಇನ್ನೊಂದು ವ್ಯರ್ಥವಾಗುವುದು. ಆದುದರಿಂದ ಎಲ್ಲವಕ್ಕೂ ಒಂದೇ ಮಾರ್ಗವನ್ನು ಹಿಡಿಯದೆ ' ಕೆಲವೆಡೆ ಒಂದು ಕೆಲವೆಡೆ ಇನ್ನೊಂದು ' ಎಂದು ಎರಡು ವರ್ಗಗಳನ್ನು ಮಾಡುವುದೇ ಯೋಗ್ಯವು. ಎಷ್ಟು ಶಬ್ದಗಳಿಗೆ ಅನುಸ್ಯೂತವಾದ ಒಂದು ಲಕ್ಷಣವು ಇರುವುದೋ ಅವನ್ನು ಒಂದು ಗುಂಪು ಮಾಡಿ ಉಳಿದವನ್ನು ಒಂದೊಂದನ್ನಾಗಿ ( ಸ್ವರೂಪತಃ ) ಹೇಳಬೇಕು. ಲಕ್ಷಣಗಳನ್ನು ಹೇಳುವಲ್ಲಿ ವ್ಯಾಕರಣಕಾರರ ಮತಭೇದದಿಂದ ಭಿನ್ನಭಿನ್ನತೆ ಇದ್ದರೂ ಈ ಸೂತ್ರಕಾರನು ಈ ಸೂತ್ರವನ್ನು ರಚಿಸುವಾಗ ತನ್ನ ವಿವಕ್ಷೆಯಿಂದ ಪಾಣಿನೀಯಲಕ್ಷಣವನ್ನು ಅನುಸರಿಸಿರುವುದರಿಂದ ತಾನು ಈ ಸೂತ್ರದಲ್ಲಿ ಉದ್ದೇಶಿಸಿದ ಶಬ್ದಗಳು 'ಭಾವೇ ಲ್ಯುಡಂತ'ಗಳೆಂದು ಹೇಳಿರುವನು.

' ಭಾವೇ ಲ್ಯುಡಂತ 'ವೆಂದು ಹೇಳಿದುದರಿಂದಲೆ ಈ ಸೂತ್ರಕಾರನು ಇಲ್ಲಿ ಪಾಣಿನೀಯಲಕ್ಷಣವನ್ನು ಅನುಸರಿಸಿದನೆಂಬುದು ಸ್ಪಷ್ಟವಾಗುತ್ತದೆ. **ಪಾಣಿನಿಯು** ತಾನು ಕಂಡು ಹಿಡಿದ ವ್ಯಾಕರಣಶಾಸ್ತ್ರದಲ್ಲಿ ಕರ್ತೃ, ಕರ್ಮ, ಭಾವಾರ್ಥಗಳಲ್ಲಿ ' ಲ್ಯುಟ್ ' ಪ್ರತ್ಯಯವನ್ನು ಹೇಳಿದನು. ಉಳಿದವರು ' ಯುಟ್, ಅನಟ್ ' ಇಲ್ಲವೆ ಬೇರೆ ಪ್ರತ್ಯಯವನ್ನು ಹೇಳಿರುವರು. ಇಲ್ಲಿ ' ಲ್ಯುಟ್ '

ಪ್ರತ್ಯಯವನ್ನು ಭಾವಾರ್ಥಕದ್ದನ್ನೇ ತೆಗೆದುಕೊಳ್ಳಬೇಕೆಂದು 'ಭಾವೇ ಲ್ಯುಟಃ' ಎಂದು ಹೇಳಿದನು. ಭಾವಾರ್ಥಕ ಲ್ಯುಟ್-ಪ್ರತ್ಯಯಾಂತಗಳಾದ ಎಲ್ಲ ಶಬ್ದಗಳನ್ನೂ ಇಲ್ಲಿ ತೆಗೆದುಕೊಳ್ಳ ಬಾರದೆಂದು ತೋರಿಸುವುದಕ್ಕಾಗಿ ಶಯನಾದಿಗಣಕ್ಕೆ ಸೇರುವುವನ್ನು ಬಿಡಲೋಸುಗ 'ಅಶಯ ನಾದೇಃ' ಎಂದು ಹೇಳಿದನು.

'ಇಸು' ಪ್ರತ್ಯಯದ ಅರ್ಥವನ್ನು 'ತತ್ ಕರೋತಿ' ಎಂಬ ಶಬ್ದಗಳಿಂದ ಹೇಳಿರುತ್ತಾನೆ. 'ತತ್ ಕರೋತಿ' ಎಂದರೆ 'ಅದನ್ನು ಮಾಡುತ್ತಾನೆ' ಎಂದು ಅರ್ಥ. ಲ್ಯುಟ್-ಪ್ರತ್ಯಯಾಂತ ಶಬ್ದದ ಅರ್ಥವೇ 'ಮಾಡುತ್ತಾನೆ' ಎಂಬ ಕ್ರಿಯೆಯಲ್ಲಿ ಕರ್ಮವೆಂದು ತಿಳಿಯಬೇಕು. ಉದಾ: ರಕ್ಷಣವನ್ನು ಮಾಡುತ್ತಾನೆ — ರಕ್ಷಿಸುತ್ತಾನೆ. ಇಲ್ಲಿ 'ಮಾಡುತ್ತಾನೆ' ಎಂಬ ಕ್ರಿಯೆಯ ಕರ್ಮವು ರಕ್ಷಣವು.

ಈ ಮೇರೆಗೆ ಶಯನಾದಿ ಶಬ್ದಗಳನ್ನು ಬಿಟ್ಟು ಉಳಿದ ಭಾವಾರ್ಥಕ ಲ್ಯುಟ್-ಪ್ರತ್ಯಯಾಂತ ಶಬ್ದಗಳ ಮುಂದೆ 'ಇಸು' ಪ್ರತ್ಯಯವನ್ನು ಸೇರಿಸಿ ಕನ್ನಡಕ್ಕೆ ಧಾತುಗಳನ್ನು ಮಾಡಿಕೊಳ್ಳ ಬೇಕು. ಹೀಗೆ 'ಇಸು'ವನ್ನು ಸೇರಿಸುವಾಗ ಆ ಶಬ್ದದ 'ದು' ಲೋಪವಾಗುವುದು. ಈ ಮೇರೆಗೆ ಧಾತುಗಳುಂಟಾದ ಬಳಿಕ ಅವುಗಳ ಮುಂದೆ ಆಖ್ಯಾತಪ್ರತ್ಯಯಗಳು ಬರಲು 'ಪಚಿಸಿದಂ, ಪಠಿಸಿದಂ' ಮುಂತಾದ ರೂಪಗಳಾಗುವುವೆಂದು ಅವನ್ನೆ ಉದಾಹರಿಸಿರುವನು. ಸಂಸ್ಕೃತ ದಲ್ಲಿಯೂ ಹೀಗೆ ನಾಮಗಳಿಂದ ಧಾತುಗಳುಂಟಾಗುವುವು. ಕಾಮ್ಯಾದಿ ಪ್ರತ್ಯಯಗಳು ನಾಮಗಳ ಮುಂದೆ ಸೇರಲು 'ಪುತ್ರ, ರಾಜ' ಮೊದಲಾದ ನಾಮಗಳು ಧಾತುಗಳಾಗಲು 'ಪುತ್ರಕಾಮ್ಯತಿ, ರಾಜ್ಯಕಾಮ್ಯತಿ' ಮುಂತಾದ ಕ್ರಿಯಾಪದದ ರೂಪಗಳಾಗುವುವು.

ಸಂಸ್ಕೃತದಲ್ಲಿ ಕಾಮ್ಯಾದಿ ಪ್ರತ್ಯಯಾಂತಗಳಿಗೆ 'ಸನಾದ್ಯಂತಾ ಧಾತವಃ (ಪಾಣಿನಿ ೩. ೧. ೩೨)' ಎಂಬ ಸೂತ್ರದಿಂದ ಪಾಣಿನಿಯು ಧಾತುಸಂಜ್ಞೆಯನ್ನು ಹೇಳಿದ್ದಾನೆ. ಇಲ್ಲಿ ಇಸುಬಂತಗಳಿಗೆ ಧಾತುಸಂಜ್ಞೆ ಹೇಳಿಲ್ಲವಾದುದರಿಂದ ಇವುಗಳಿಗೆ ಧಾತುಸಂಜ್ಞೆ ಬಾರದೆ 'ಪಚಿಸಿದಂ, ಪಠಿಸಿದಂ' ಮೊದಲಾದ ಕ್ರಿಯಾಪದಗಳು ಹೇಗೆ ಸಿದ್ಧಿಸುವುವು ಎಂದು ಶಂಕಿಸ ಕೂಡದು. 'ಕ್ರಿಯಾರ್ಥೋ ಧಾತುಃ || ೧೨ ||' ಎಂಬ ಸೂತ್ರದಿಂದ ಕ್ರಿಯಾರ್ಥಕವಾದ ಸಮಸ್ತ ಪ್ರಕೃತಿಗಳಿಗೂ ಧಾತುಸಂಜ್ಞೆ ಈ ವ್ಯಾಕರಣದಲ್ಲಿ ಹೇಳಿದೆ ಸಂಸ್ಕೃತದಲ್ಲಿ 'ಭೂವಾದಯೋ ಧಾತವಃ (ಪಾ. ೧-೩-೧.)' ಎಂಬ ಸೂತ್ರದಿಂದ 'ಭೂ' ಮೊದಲಾದ ಗಣಪಠಿತ ಪ್ರಕೃತಿ ಗಳಿಗೇ ಧಾತುಸಂಜ್ಞೆ ಹೇಳಿರುವುದರಿಂದ ಮತ್ತೆ 'ಸನಾದ್ಯಂತಾ ಧಾತವಃ' ಎಂದು ಧಾತುಸಂಜ್ಞೆ ಹೇಳಬೇಕಾಯಿತು. ಹೀಗೆ ಮತ್ತೆ ಧಾತು ಸಂಜ್ಞೆಯನ್ನು ಹೇಳುವ ಪ್ರಯಾಸವನ್ನು ತಂದು ಕೊಳ್ಳಬಾರದೆಂದೇ ಶಾಕಟಾಯನನು 'ಕ್ರಿಯಾರ್ಥೋ ಧಾತುಃ' ಎಂದು ಎಲ್ಲ ಕ್ರಿಯಾರ್ಥಕ ಪ್ರಕೃತಿಗಳಿಗೂ ಧಾತುಸಂಜ್ಞೆ ಬರುವಂತೆ ಲಕ್ಷಣವನ್ನು ಹೇಳಿದನು.

ಇನ್ನು 'ಪಚನಮಂ ಮಾಡಿದಂ, ಪಚಿಸಿದಂ; ಪಠಿಸಿದಂ' ಮೊದಲಾದ ಪ್ರಯೋಗಗಳಲ್ಲಿ 'ಪಚನ' ಮೊದಲಾದ ಶಬ್ದಗಳ ಮುಂದೆ 'ಇಸು' ಸೇರಿದೆಯಷ್ಟೆ. 'ಇಸು' ಪ್ರತ್ಯಯವು ಈ ಸೂತ್ರದಲ್ಲಿ 'ತತ್ ಕರೋತಿ' 'ಅದನ್ನು ಮಾಡುತ್ತಾನೆ' ಎಂಬ ಅರ್ಥದಲ್ಲಿ ಬರುವುದೆಂದು ಹೇಳಿದೆ. 'ಕರೋತಿ' (– ಮಾಡುತ್ತಾನೆ) ಎಂದರೆ ಕರ್ತೃಬೋಧವಾಗುವುದು; ಕೇವಲ

ಕ್ರಿಯೆಯಲ್ಲ: ಕೃಇಞ್-ಧಾತುವಿಗೆ ಕರ್ತ್ರರ್ಥಕ ಆಖ್ಯಾತಪ್ರತ್ಯಯವು ಸೇರಲು 'ಕರೋತಿ' ಎಂದಾಗಿದೆ. ಆದುದರಿಂದ ಆ ಅರ್ಥದಲ್ಲಿ ಹೇಳಿದ 'ಇಸು' ಪ್ರತ್ಯಯವಾದರೂ ಇಲ್ಲಿ ಕರ್ತ್ರರ್ಥಕವೆಂದೂ ಕೇವಲ ಕ್ರಿಯಾರ್ಥಕವೆಂದೂ ಹೇಳಬೇಕಾಗುವುದು. 'ಯೋ ಯತ್ರ ಪ್ರತ್ಯಯೋ ಜಾತಃ ಸ ಏನಂ ವಕ್ತಿ' (ಯಾವ ಪ್ರತ್ಯಯವು ಯಾವ ಅರ್ಥದಲ್ಲಿ ಬಂದಿರುವುದೋ ಅದು ಆ ಅರ್ಥವನ್ನು ಹೇಳುವುದು.) ಎಂಬ ವಚನದಂತೆ 'ಪಚಿಸು, ಪಠಿಸು' ಮೊದಲಾದೆಡೆಗಳಲ್ಲಿ ಕರ್ತ್ರರ್ಥಕವಾದ 'ಇಸು' ಸೇರಿದ್ದಾದರೆ 'ಪಚಿಸು' ಎಂದರೆ ಪಚನ ಕರ್ತೃ 'ಪಠಿಸು' ಎಂದರೆ ಪಠಣ ಕರ್ತೃ ಎಂಬ ಅರ್ಥವನ್ನು ಮಾಡಬೇಕಾದೀತು. ಆಗ ಇವು ಕ್ರಿಯಾರ್ಥಕಗಳಾಗದಿರುವುದರಿಂದ ಇವಕ್ಕೆ ಧಾತುಸಂಜ್ಞೆ ಹೇಗೆ ಎಂದು ಶಂಕೆ ಉಂಟಾಗುವುದು. ಸಮಾಧಾನವೇನಂದರೆ — 'ಕರೋತಿ' ಎಂಬುದು ಕರ್ತ್ರರ್ಥಕವಾದರೂ ಇಲ್ಲಿ ಕರ್ತೃವನ್ನು ಹೇಳುವುದಿಲ್ಲ; ಔಪಚಾರಿಕವಾಗಿ ಕರ್ತೃನಿಷ್ಠ ಕ್ರಿಯೆಯನ್ನು ಹೇಳುವುದು — 'ಕ್ರಿಯಾ ಕ್ರಿಯಾವತೋರೇಕತ್ವೋಪಚಾರಾತ್' ಇಲ್ಲವೆ ಮುಖ್ಯವೃತ್ತಿಯಿಂದಲೇ 'ಕರೋತಿ'ಯು ಕ್ರಿಯಾರ್ಥವನ್ನು ಹೇಳುವುದು. ಕ್ರಿಯೆ, ಕ್ರಿಯಾವತ್ ಇವುಗಳ ಒಟ್ಟಿನ ದೃಷ್ಟಿಯಿಂದ ಏಕತ್ವಾಧ್ಯವಸಾನ ಮಾಡಿದರೆ 'ಕರೋತಿ'ಯು ಕ್ರಿಯಾರ್ಥವನ್ನೂ ಹೇಳುವುದು. ಇಲ್ಲವೆ 'ಕರೋತಿ'ಯು ಇಲ್ಲಿ ಕ್ರಿಯಾಪದವೆಂದು ತಿಳಿಯಬಾರದು. ಧಾತುನಿರ್ದೇಶನಕ್ಕಾಗಿ ಕ್ರಿಯಾಪದದಂತೆ ಹೇಳುವುದು ವಾಡಿಕೆ. 'ಇಕ್ತಿಪೌ ಧಾತುನಿರ್ದೇಶೇ' ಎಂಬ ವಚನವಿದೆ. ಆ ಮೇರೆಗೆ ಇಲ್ಲಿ ಕೃಇಞ್-ಧಾತುವಿನ ಮುಂದೆ ತಿಪ್-ಪ್ರತ್ಯಯವನ್ನು ಸೇರಿಸಿ ಧಾತುನಿರ್ದೇಶವನ್ನು ಮಾಡಿದೆಯೆಂದು ತಿಳಿಯಬೇಕು. ಈಗ 'ಕರೋತಿ' ಎಂದರೆ ಕೃಇಞ್. ಆದುದರಿಂದ 'ಪಚನಮುಂ, ಮಾಡುವಂ' ಎಂಬಲ್ಲಿಯೂ ಪಚನಕ್ರಿಯಾ ಕರ್ತೃವೆಂಬ ಅರ್ಥವಲ್ಲ; ಪಚನಕ್ರಿಯೆ ಎಂಬ ಇಷ್ಟೆ ಅರ್ಥವು. ಈ ಮೇರೆಗೆ ಇಸು-ಪ್ರತ್ಯಯಾಂತಗಳೆಲ್ಲವೂ ಕ್ರಿಯಾರ್ಥಕಗಳಾಗುವುದರಿಂದ ಧಾತುಗಳಾಗಿ ಆಖ್ಯಾತಪ್ರತ್ಯಯಗಳನ್ನು ಹೊಂದಲು ತಕ್ಕುವಾಗುವುವು.

ಪ್ರತ್ಯುದಾಹರಣೆಗಳಲ್ಲಿ 'ಭುಜ್ಯತ ಇತಿ ಭೋಜನಂ' ಎಂಬಲ್ಲಿ ಕರ್ಮಾರ್ಥದಲ್ಲಿ 'ಲ್ಯುಟ್' ಬಂದಿದೆ. 'ಭೋಜನ — ಅನ್ನ; ಯಜ್ಞ — ಯಜನ' ಎಂಬಲ್ಲಿ ಭಾವಾರ್ಥದಲ್ಲಿ 'ಕ್ತ' ಪ್ರತ್ಯಯವು. ಶಯನಾದಿ ಶಬ್ದಗಳ ಮುಂದೆ 'ಇಸು' ಸೇರುವುದಿಲ್ಲವೆಂದು ಹೇಳಿದೆಯಷ್ಟೇ. ಆದರೆ ಕೆಲವುಗಳ ಹಿಂದೆ ಉಪಸರ್ಗಗಳಿರುವಾಗ 'ಇಸು' ಸೇರುವುದು. ಉದಾ : ಸಂಚಯಿಸಿದಂ, ನಿಶ್ಚಯಿಸಿದಂ, ಉನ್ನಯಿಸಿದಂ, ಅಭಿನಯಿಸಿದಂ ಮುಂತಾದೆಡೆಗಳಲ್ಲ 'ಚಯನ, ನಯನ' ಮೊದಲಾದುವು ಉಪಸರ್ಗಯುಕ್ತಗಳಾಗಿ 'ಇಸು'ವನ್ನು ಹೊಂದಿವೆ.

**ಅವತಾರಿಕೆ ೫೩೪**

'ಇಸು' ಪರವಾದಾಗ ನಮುನಾದಿ ಶಬ್ದಗಳಿಗೆ ಕಾರ್ಯವಿಶೇಷವನ್ನು ಹೇಳುತ್ತಾನೆ.

**ಸೂತ್ರಂ ॥ ಇಯ್ಚ ನಮುನಾದಿಭ್ಯಃ ॥ ೫೩೪ ॥**

( ೧. ಇಯ್, ೨. ಚ, ೩. ನಮುನಾದಿಭ್ಯಃ. )

**ಅನುವೃತ್ತಿ ॥** ೧. ಇಸುಪ್, ೨. ತತ್ ಕರೋತಿ, ೩. ಲುಪ್, ೪. ದೋಃ.

**ವೃತ್ತಿ** || 'ನಮನ' ಮೊದಲಾದ ಶಬ್ದಗಳಿಗೆ 'ತತ್‌ಕರೋತಿ' — (ಅದನ್ನು ಮಾಡುತ್ತಾನೆ) ಎಂಬ ಅರ್ಥದಲ್ಲಿ 'ಇಸು' ಪ್ರತ್ಯಯವು ಸೇರುವುದು. ಆಗ ಅವುಗಳ 'ದು' ಲೋಪವೂ ಇಯ್-ಆದೇಶವೂ ಆಗುವುವು.

**ಪ್ರಯೋಗ** || ನಮನಮಂ ಮಾಡುವಂ — ನಮಿಸುವಂ, ನಮಿಯಿಸುವಂ; ಈ ಮೇರೆಗೆ ಭ್ರಮಿಸುವಂ, ಭ್ರಮಿಯಿಸುವಂ; ರಮಿಸುವಂ, ರಮಿಯಿಸುವಂ; ಗಮಿಸುವಂ, ಗಮಿಯಿಸುವಂ.

ನಮನಾದಿಗಣ — ನಮನ, ಭ್ರಮಣ, ರಮಣ, ಗಮನ, ಕ್ರಮಣ, ಸಙ್ಕ್ರಮಣ, ಉತ್ಕ್ರಮಣ, ಉಪಕ್ರಮಣ, ವರಣ, ಘರಣ, ಹರಣ, ಭರಣ, ಸ್ಮರಣ, ತ್ವರಣ, ಜ್ವರಣ, ಚರಣ, ಜನನ, ವಮನ, ಕಥನ, ಮಥನ, ಶ್ರಥನ, ಗ್ರಥನ, ತಾರಣ, ಪೂರಣ, ಜೀರಣ— ಮುಂತಾದುವು. ನಮನಾದಿಗಳು ಆಕೃತಿಗಣವು.

**ವಿಚಾರ ೫೪೫**

ಈ ಸೂತ್ರದಲ್ಲಿ ನಮನಾದಿ ಶಬ್ದಗಳಿಗೆ 'ಇಸು' ಪ್ರತ್ಯಯವನ್ನು ಹೇಳಿ ಅವುಗಳಿಗೆ 'ದು' ಲೋಪವನ್ನೂ 'ಇಯ್' ಆದೇಶವನ್ನೂ ಹೇಳಿದ್ದಾನೆ. ದು-ಲೋಪ, ಇಯಾದೇಶಗಳು ಕ್ರಮದಿಂದ ಆಗುವುವೆಂದು ತಿಳಿಯಬೇಕು. 'ನಮನ, ಇಸು' ಎಂದು ಇರುವಾಗ ದು-ಲೋಪವನ್ನು ಮಾಡಿ 'ಇಸು'ವನ್ನು ಸೇರಿಸಲು 'ನಮಿಸು' ಎಂಬ ರೂಪವೂ ದು-ಲೋಪಾನಂತರದಲ್ಲ 'ಇಯ್' ಆದೇಶವನ್ನು ಮಾಡಲು (ನಮ್, ಇಯ್, ಇಸು) 'ನಮಿಯಿಸು' ಎಂಬ ರೂಪವೂ ಸಿದ್ಧವಾಗುವುವು. ನಮನಾದಿ ಶಬ್ದಗಳಿಂದ 'ನಮಿಸು, ನಮಿಯಿಸು' ಮೊದಲಾದ ಎರಡೆರಡು ರೂಪಗಳನ್ನು ಸಾಧಿಸುವುದಕ್ಕಾಗಿ ಈ ಸೂತ್ರವನ್ನು ರಚಿಸಬೇಕಾಯಿತು. ಪೂರ್ವಸೂತ್ರದಿಂದ 'ನಮಿಸು' ಮೊದಲಾದ ದು-ಲೋಪವುಳ್ಳ ರೂಪಗಳು ಮಾತ್ರ ಸಿದ್ಧಿಸುತ್ತಿದ್ದುವು.

**ಅವತಾರಿಕೆ ೫೪೬**

'ಇಸು' ಪ್ರತ್ಯಯವು ಸೇರುವ ಫಲವಿಶೇಷವನ್ನು ಹೇಳುತ್ತಾನೆ.

**ಸೂತ್ರಂ || ಭೋಗಾದಿಭ್ಯಃ || ೫೪೬ ||**

(ಒಂದೇ ಪದವು.)

**ಅನುವೃತ್ತಿ** || ೧. ಇಸುಪ್, ೨. ತತ್ ಕರೋತಿ.

**ವೃತ್ತಿ** || ಭೋಗಾದಿ ಶಬ್ದಗಳಿಗೆ 'ತತ್‌ಕರೋತಿ (ಅದನ್ನು ಮಾಡುತ್ತಾನೆ)' ಎಂಬ ಅರ್ಥದಲ್ಲಿ 'ಇಸು' ಪ್ರತ್ಯಯವು ಸೇರುವುದು.

**ಪ್ರಯೋಗ** || ಭೋಗಮಂ ಮಾಡುವಂ ಭೋಗಿಸುವಂ, ಈ ಮೇರೆಗೆ ರಾಗಿಸುವಂ, ಭಾವಿಸುವಂ, ಕಾಮಿಸುವಂ.

ಭೋಗಾದಿಗಣ — ಭೋಗ, ರಾಗ, ಭಾವ, ಕಾಮ, ಪ್ರಾಸ, ರಂಗ, ಚಾಮರ, ಲಾವ, ಸ್ವಾದ, ಗಾಧ, ನಾದ, ವೇಗ, ಯೋಗ, ನಿಯೋಗ, ವಿಯೋಗ, ಸಂಯೋಗ, ಉದ್ವೇಗ, ನಿರ್ವೇಗ, ಸಂವೇಗ, ವಿಶ್ವಾಸ, ನಿನಾದ, ನಿಯಾಮ, ಆಹ್ವಾನ, ಆರಾವ, ಸಂರಾವ, ವಿರಾವ,

ಆಲಾಪ, ಸಲ್ಲಾಪ, ಪ್ರಲಾಪ, ಅಪಲಾಪ, ಅಭಿಲಾಪ[೧], ಉಚ್ಛ್ರಾಯ, ಉಚ್ಛ್ರಾಯ, ಪ್ರಸ್ತಾರ, ವಿವೇಕ, ವಿತಾಲ, ಉದ್ಗಾರ, ಗೋಚರ, ಸಞ್ಚರ, ಸಮ್ಪಾರ, ಉದ್ವಾಹ, ವಿವಾಹ, ಸನ್ನಾಹ, ಸ್ತುತಿ, ನುತಿ, ಸತಿ, ಯತಿ, ಸಿದ್ಧಿ, ವೃದ್ಧಿ, ತುಷ್ಟಿ, ಪುಷ್ಟಿ, ಕೃಷ್ಟಿ, ಸೃಷ್ಟಿ, ಸ್ಥಿತಿ, ಲಬ್ಧಿ, ರೂಢಿ, ಜೀರ್ಣ, ವ್ಯಾಖ್ಯಾನ, ಟಿಪ್ಪಣಿ, ಟೀಕಾ, ವಿಶದ, ಮನನ, ಸೇವನ, ಗುಮ್ಫನ ಮುಂತಾದುವು. ಭೋಗಾದಿಗಳು ಆಕೃತಿಗಣವು. ಇಲ್ಲಿ ಲ್ಯುಡಂತಗಳಾದ ವ್ಯಾಖ್ಯಾನಾದಿ ಶಬ್ದಗಳನ್ನು ಹೇಳಿದುದು ಅವುಗಳಿಗೆ ಮು-ಲೋಪವು ಬರಬಾರದೆಂದು.

**ವಿಚಾರ ೫೩೫**

'ಭೋಗಾದಿ' ಶಬ್ದಗಳು ಲ್ಯುಡಂತಗಳಲ್ಲವಾದುದರಿಂದ ಅವುಗಳಿಗೆ ಪೂರ್ವಸೂತ್ರದಿಂದ '॥ ೫೩೩ ॥ ಇಸು' ಬಾರದಿರಲು ಈ ಸೂತ್ರದಿಂದ 'ಇಸು'ವನ್ನು ವಿಧಿಸುತ್ತಾನೆ. 'ವ್ಯಾಖ್ಯಾನ' ಮೊದಲಾದ ಶಬ್ದಗಳು ಲ್ಯುಟ್-ಪ್ರತ್ಯಯಾಂತಗಳಾದುದರಿಂದ ಅವುಗಳಿಗೆ ಪೂರ್ವಸೂತ್ರದಿಂದ ॥ ೫೩೩ ॥ 'ಇಸು' ಪ್ರತ್ಯಯವು ಪ್ರಾಪ್ತವಾಗುತ್ತಿರಲು ಭೋಗಾದಿಗಣದಲ್ಲಿ ಸೇರಿದುದಕ್ಕೆ ನಿಮಿತ್ತವೇನೆಂದರೆ ಅವುಗಳಿಗೆ ಮು-ಲೋಪವು ಬರಬಾರದು. ಪೂರ್ವಸೂತ್ರದಲ್ಲಿ ಇಸುವಿನೊಡನೆ ಮು-ಲೋಪವನ್ನು ಹೇಳಿದ್ದಾನೆ. ಈ ಗಣದಲ್ಲಿ ಸೇರಿಸುದರಿಂದ 'ವ್ಯಾಖ್ಯಾನಿಸು' ಮುಂತಾದ ರೂಪಗಳು ಸಿದ್ಧಿಸುವುವು.

**ಅವತಾರಿಕೆ ೫೩೬**

ಇಸು-ಪ್ರತ್ಯಯವು ನಾಮಗಳ ಮುಂದೆ ಸೇರುವುದನ್ನು ಈ ಮೊದಲು ಹೇಳಿ ಈಗ ಧಾತುಗಳ ಮುಂದೆ ಸೇರುವುದನ್ನು ಹೇಳುತ್ತಾನೆ.

**ಸೂತ್ರಂ ॥ ಧಾತೋರ್ಹೇತುಮತಿ ॥ ೫೩೬ ॥**

(೧. ಧಾತೋಃ, ೨. ಹೇತುಮತಿ.)

**ಅನುವೃತ್ತಿ** ॥ ೧. ಇಸುಸ್.

**ವೃತ್ತಿ ॥ ಧಾತುವಿನ ಮುಂದೆ ಪ್ರೇರಣಾರ್ಥದಲ್ಲಿ 'ಇಸು' ಪ್ರತ್ಯಯವು ಸೇರುವುದು.**

**ಪ್ರಯೋಗ** ॥ ಅಟ್ಟಂ ಬಾಣಸಿಗಂ, ಅಡಿಸಿದಂ ಬಾಣಸಿಗನಿನರಸಂ, ಉಂಡುದು ಕೂಸು, ಉಣಿಸಿದಳ್ ಕೂಸನಬ್ಬೆ: ನುಡಿದಳರಸಿ, ನುಡಿಸಿದನರಸಿಯನರಸಂ; ಉೞ್ದಂ ಪೊಲನನೊಕ್ಕಲಿಗಂ, ಉೞಿಸಿದಂ ಪೊಲನನೊಕ್ಕಲಿಗನಿಂ ಗೌಡಂ.

**ವಿಚಾರ ೫೩೬**

'ಹಿನೋತಿ (— ಪ್ರೇರಿಸುತ್ತಾನೆ) ಇತಿ ಹೇತುಃ' ಎಂದರೆ ಪ್ರಯೋಜಕ ಇಲ್ಲವೆ ಪ್ರೇರಕ ಎಂದು ಅರ್ಥ. 'ಪಚನ, ಪಠನ' ಮೊದಲಾದ ಕ್ರಿಯೆಯಲ್ಲಿ ಪ್ರವರ್ತಿಸುವ ಕರ್ತೃವನ್ನು 'ತೊಡಗಿಸುವವನು, ಪ್ರೇಷಣ' ಮೊದಲಾದುದರಿಂದ 'ನಿಯೋಗಿಸುವವನು' ಎಂದರೆ 'ನೀನು ಅಡು, ನೀನು ಓದು' ಎಂದು ಯೋಜಿಸುವವನು 'ಹೇತು' ಎನಿಸುವನು. ಯಾವನ ಸನ್ನಿಧಾನದಿಂದ ಪ್ರಕೃತ್ಯರ್ಥವಾದ ಕರ್ತೃವಿಗೆ 'ಪ್ರಯೋಜ್ಯತ್ವವು' ಎಂದರೆ 'ಪ್ರಯುಕ್ತಿಕ್ರಿಯೆ'ಯ ಕರ್ಮತ್ವವು ಬರುವುದೋ 'ಆ ಪ್ರಯೋಜನ ಕ್ರಿಯೆ' ಇಲ್ಲವೆ 'ಪ್ರಯೋಜಕತೆ' ಎಂಬುದನ್ನೂ 'ಹೇತು' ಎಂದು ಹೇಳಬಹುದು. ಈ 'ಪ್ರಯೋಜಕತೆ' ಎಂಬ ಕ್ರಿಯೆಯಿಂದಲೇ

ಪಾಠಾಂತರ: ೧. ಅಭಿಲಾಷ.

' ಆತನು ಪ್ರಯೋಜಕನು ' ಇಲ್ಲವೆ ' ಹೇತು ' ಎಂದು ಹೇಳಲ್ಪಡುವನು. ' ಹೇತು ' ಎಂದರೆ ' ಪ್ರಯೋಜಕ ' ಮತ್ತು ' ಆತನ ಪ್ರಯುಕ್ತಿಕ್ರಿಯೆ ' ಎಂಬ ಎರಡು ಅರ್ಥಗಳು ಎಂದು ಹೇಳಿದಂತಾಯಿತು. ಇಲ್ಲಿ ' ಹೇತುಮತ್ ' ಎಂದರೆ ಎರಡನೆಯ ಅರ್ಥವಾಗುವುದು. ' ಪ್ರಯೋಜಕನಿಂದ ಕೂಡಿದ ಕ್ರಿಯೆ — ಪ್ರಯೋಜಕನ ಕ್ರಿಯೆ ' ಎಂದರೆ ಪಾಚನ, ಪಾಠನ ರೂಪವಾದ ಕ್ರಿಯೆ. ಈ ಅರ್ಥದಲ್ಲಿ ಧಾತುವಿನ ಮುಂದೆ ' ಇಸು ' ಸೇರುವುದು.

' ಧಾತೋಃ ' ( ಧಾತುವಿಗೆ ) ಎಂಬುದು ಅಧಿಕಾರ ಸೂತ್ರದಿಂದ ಅನುವೃತ್ತವಾಗಿ ಇಲ್ಲವೆ ಪ್ರಕರಣವಿರುವುದರಿಂದ ಅರ್ಥಲಬ್ಧವಾಗಿ ಬರುತ್ತಿದ್ದರೂ ಈ ಸೂತ್ರದಲ್ಲಿ ' ಧಾತೋಃ ' ಎಂದು ಮತ್ತೆ ಹೇಳಿದುದು ಸಮಸ್ತಧಾತುಗಳ ಮುಂದೆಯೂ ' ಇಸು ' ಸೇರುವುದೆಂಬುದನ್ನು ತೋರಿಸುವುದಕ್ಕಾಗಿ ಎಂದು ತಿಳಿಯಬೇಕು. ' ಇಸು ' ಸೇರಿದ ' ಆಡಿಸು ' ಮುಂತಾದುವಕ್ಕೆಲ್ಲ ' ಕ್ರಿಯಾರ್ಥೋ ಧಾತುಃ || ೧೨ || ' ಎಂಬುದರಿಂದ ಧಾತುಸಂಜ್ಞೆ ಬರುವುದು.

ಇನ್ನು ' ಬಿಸಿಲ್ ಬಟ್ಟೆಗನಂ ಬಬಲಿಸಿತ್ತು, ಬೆಳ್ದಿಂಗಳ್ ಬಿರಯಿಯಂ ಬೆದರಿಸಿತ್ತು ' ಮುಂತಾದ ಉದಾಹರಣೆಗಳಲ್ಲಿ ' ಬಿಸಿಲು, ಬೆಳ್ದಿಂಗಳು ' ಮುಂತಾದುವು ಅಚೇತನಗಳಾದುದರಿಂದ ಹೇಗೆ ಪ್ರಯೋಜಕ ( ಪ್ರೇರಕ )ಗಳಾಗುವುವು, ಮತ್ತು ' ಬಟ್ಟೆಗಂ ಗಟ್ಟದೊಳ್ ಪೊಲ್ತಂ ಮುಲುಂಗಿಸಿದಂ, ಊರಿಂ ಪೊಱಮಟ್ಟು ಗಾವುದದೊಳ್ ಮುಂಬಿಸಿಲಂ ಮೂಡಿಸಿದಂ ' ಮುಂತಾದೆಡೆಗಳಲ್ಲಿ ' ಪೊಲ್ತು, ಮುಂಬಿಸಿಲು ' ಮುಂತಾದುವು ಅಚೇತನಗಳಾದುದರಿಂದ ಹೇಗೆ ಪ್ರಯೋಜ್ಯ ( ಪ್ರೇರ್ಯ )ಗಳಾಗುವುವು, ಮತ್ತು ' ಕೊಲಿಸಿದಂ ಅರ್ಜುನನಿಂ ಕರ್ಣನಂ ಕೃಷ್ಣಂ, ಅಡಿಸಿದಂ ಬಾಣಸಿಗನಿಂ ಅನ್ನಮಂ ಅರಸಂ ' ಮುಂತಾದೆಡೆಗಳಲ್ಲಿ ಕರ್ತೃಗಳಾದ ' ಅರ್ಜುನ ' ಮುಂತಾದವರು ' ಕೃಷ್ಣಾದಿ ' ಪ್ರಯೋಜಕವ್ಯಾಪಾರವಿಷಯಭೂತರಾಗಿ ಕರ್ಮಗಳಾಗುವುದರಿಂದ ' ಅರ್ಜುನ ' ನೊದಲಾದ ಶಬ್ದಗಳಿಗೆ ತೃತೀಯೆ ಹೇಗೆ ಬಂದಿತು ಮೊದಲಾದ ವಿಚಾರವು ಬಹುವಾಗಿರುವುದು. ಈ ಗ್ರಂಥವು ಸಂಕ್ಷೇಪರುಚಿಗಳಿಗಾಗಿ ಇರುವುದರಿಂದ ವಿಸ್ತಾರಾಪೇಕ್ಷಿಗಳು ಪ್ರಾಚೀನ ಶಾಸ್ತ್ರಗಳಲ್ಲಿ ಈ ವಿಷಯಗಳನ್ನು ತಿಳಿದುಕೊಳ್ಳಬೇಕು........ ' ಕಾರೀಷೋಽಗ್ನಿರಧ್ಯಾಪಯತಿ [ ಕಾಕುಳ್ಳಿನ ( ಬೆರಣಿಯ ) ಬೆಂಕಿಯು ಓದಿಸುತ್ತದೆ. ] ' ಉಜ್ಜಯಿನ್ಯಾಃ ಪ್ರಸ್ಥಿತೋ ಮಾಹಿಷ್ಮತ್ಯಾಂ ಸೂರ್ಯಮುದ್ಗಮಯತಿ ( ಉಜ್ಜಯಿನಿಯಿಂದ ಹೊರಟವನು ಮಾಹಿಷ್ಮತಿಯಲ್ಲಿ ಸೂರ್ಯನನ್ನು ಮೂಡಿಸುತ್ತಾನೆ ) ' ಮುಂತಾದ ವಾಕ್ಯಗಳನ್ನು ಉದಾಹರಿಸಿ ಪೂರ್ವ ವ್ಯಾಕರಣಗಳಲ್ಲಿ ಈ ವಿಷಯವು ವಿಸ್ತಾರವಾಗಿ ವಿವೇಚಿಸಲ್ಪಟ್ಟಿದೆ.

**ಅವತಾರಿಕೆ ೫೩೦**

ಪ್ರೇರಣಾರ್ಥದಲ್ಲಿ ' ಇಸು 'ವಿನ ಹೊರತು ಬರುವ ಬೇರೆ ಪ್ರತ್ಯಯಗಳು.

**ಸೂತ್ರಂ || ಟ್ರಿಶ್ಚುರ್ವಾ || ೫೩೦ ||**

( ೧. ಟ್ರಿಃ, ೨. ಚುಃ, ೩. ವಾ. )

**ಅನುವೃತ್ತಿ** || ೧. ಹೇತುಮತಿ.

**ವೃತ್ತಿ || ಟ ಕಾರಾಂತಗಳೂ ರೇಫಾಂತಗಳೂ ಆದ ಧಾತುಗಳಿಗೆ ಪ್ರೇರಣಾರ್ಥದಲ್ಲಿ ' ಚು ' ಪ್ರತ್ಯಯವು ವಿಕಲ್ಪವಾಗಿ ಸೇರುವುದು.**

**ಪ್ರಯೋಗ** || ಅಲರ್ದುದು ತಾವರೆ, ಅಲರ್ಚಿದಂ ತಾವರೆಯುಂ ಪಗಲಾಣ್ಮಂ, ಇಲ್ಲವೆ ಅಲರಿಸಿದಂ; ಪೊಣರ್ದುದಾನೆ, ಪೊಣರ್ಚಿದನಾನೆಯುಂ ಜೋದಂ, ಇಲ್ಲವೆ ಪೊಣರಿಸಿದಂ; ಮಗುಳ್ದಂ ದಾರಿಗಂ, ಮಗುಳ್ಚಿತು ದಾರಿಗನಂ ಕಾಗೆ ಇಲ್ಲವೆ ಮಗುಳಿಸಿತು.

**ಪದಕೃತ್ಯ** || 'ಳ್ರಿಃ' (ಳ ಕಾರಾಂತಗಳಿಗೂ ರೇಫಾಂತಗಳಿಗೂ) ಎಂದು ಹೇಳಿದುದರಿಂದ ಉಳಿದೆಡೆಗಳಲ್ಲಿ ಈ ಕಾರ್ಯವಿಲ್ಲ. ಉದಾ: ಕೊಂಪಂ ಕರ್ಣನನರ್ಜುನಂ, ಕೊಲಿಸಿದಂ ಕರ್ಣನನರ್ಜುನನಿಂ ಕೃಷ್ಣಂ, ಒಲಿಸಿದಂ, ನಿಲಿಸಿದಂ ಮುಂತಾದುವು.

**ವಿಚಾರ ೫೩೭**

'ವಿಕಲ್ಪವಾಗಿ' ಎಂದು ಹೇಳಿದುದರಿಂದ 'ಚು' ಪ್ರತ್ಯಯವು ಬಾರದಿದ್ದಾಗ 'ಇಸು' ಬರುವುದೆಂದು ತಿಳಿಯಬೇಕು.

**ಅವತಾರಿಕೆ ೫೩೮**

'ಚು' ಪ್ರತ್ಯಯವು ಬರುವ ಬೇರೆ ಸಂದರ್ಭವು.

**ಸೂತ್ರಂ || ಸ್ವಾರ್ಥೇ || ೫೩೮ ||**

(೧. ಸ್ವಾರ್ಥೇ.)

**ಅನುವೃತ್ತಿ** || ೧. ಳ್ರಿಃ, ೨. ಚುಃ, ೩. ವಾ.

**ವೃತ್ತಿ || ಳ ಕಾರಾಂತವಾದ ಮತ್ತು ರೇಫಾಂತವಾದ ಧಾತುಗಳ ಮುಂದೆ ಸ್ವಾರ್ಥದಲ್ಲಿ 'ಚು' ಪ್ರತ್ಯಯವು ವಿಕಲ್ಪವಾಗಿ ಬರುವುದು.**

**ಪ್ರಯೋಗ** || ಅಲರ್ದುದು, ಅಲರ್ಚಿತು; ಪೊಣರ್ದುದು, ಪೊಣರ್ಚಿತು; ಮಗುಳ್ದುದು, ಮಗುಳ್ಚಿತು; ಪೊಗಳ್ದುದು, ಪೊಗಳ್ಚಿತು.

**ವಿಚಾರ ೫೩೮**

'ಸ್ವ' ಎಂದರೆ ಪ್ರಕೃತಿ, 'ಸ್ವಾರ್ಥ' ಎಂದರೆ ಪ್ರಕೃತಿಯ ಅರ್ಥ. ಅರ್ಥವಿಶೇಷವೇನೂ ಇಲ್ಲದೆ ಪ್ರಕೃತ್ಯರ್ಥದಲ್ಲಿಯೂ ವಿಕಲ್ಪವಾಗಿ 'ಚು' ಬರುವುದೆಂದು ಈ ಸೂತ್ರದಲ್ಲಿ ಹೇಳಿದೆ.

ಅರ್ಥನಿರ್ದೇಶಮಾಡದೆ ಹೇಳಿದ ಪ್ರತ್ಯಯಗಳು ಸ್ವಾರ್ಥದಲ್ಲಿ ಬರುವುವೆಂದು ಸಂಕೇತವಷ್ಟೇ? (ಅನಿರ್ದಿಷ್ಟಾರ್ಥಾಃ ಪ್ರತ್ಯಯಾಃ ಸ್ವಾರ್ಥಿಕಾರ್ಥಾಃ) ಎಂಬ ವಚನದ ಮೇರೆಗೆ ಅರ್ಥನಿರ್ದೇಶ ಮಾಡದೆ 'ಚು' ವನ್ನು ವಿಧಿಸದಿದ್ದರೆ ಅದು ಸ್ವಾರ್ಥದಲ್ಲಿ ಬರುವುದೆಂದು ಅರ್ಥವಾಗುತ್ತಿದ್ದರೂ 'ಸ್ವಾರ್ಥೇ' ಎಂದು ಏಕೆ ಹೇಳಬೇಕು? ಅಹುದು; ಆದರೆ ಸ್ಪಷ್ಟತೆಗಾಗಿ ಮತ್ತು 'ಸ್ವಾರ್ಥೇ' ಎಂಬುದು ಉತ್ತರ ಸೂತ್ರಕ್ಕೆ ಅನುವೃತ್ತವಾಗಿ ಬರಬೇಕೆಂದು ಹೇಳಿದನೆಂದು ತಿಳಿಯಬೇಕು.

'ಅಲರ್ಚಿತು' ಎಂದರೆ ಇಲ್ಲಿ 'ಅರಳಿತು' ಎಂದೇ ಅರ್ಥವು; ಮುಂದಿನ ಉದಾಹರಣೆಗಳಲ್ಲಿಯೂ ಹೀಗೆಯೇ ಅರ್ಥವು.

**ಅವತಾರಿಕೆ ೫೩೯**

'ಇಸು' ಪ್ರತ್ಯಯವು ಬರುವ ಸ್ಥಳವು.

**ಸೂತ್ರಂ || ಭುಂಜಾದೇರಿಸುಪ್ || ೫೩೯ ||**

**(೧. ಭುಂಜಾದೇಃ, ೨. ಇಸುಪ್.)**

**ಅನುವೃತ್ತಿ** || ೧. ಸ್ವಾರ್ಥೇ.

**ವೃತ್ತಿ** || 'ಭುಂಜಾದಿ' ಧಾತುಗಳಿಗೆ ಸ್ವಾರ್ಥದಲ್ಲಿ 'ಇಸು' ಪ್ರತ್ಯಯವು ಬರುವುದು.

**ಪ್ರಯೋಗ** || ಭುಂಜಿಸುವಂ, ರಾಜಿಸುವಂ, ಆಶಿಸುವಂ, ಆಲಿಸುವಂ ಮುಂತಾದುವು.

ಭುಂಜಾದಿಗಣ — 'ಭುಂಜ, ರಾಜ, ಆಸ, ಸಿಗುಂಭ, ಗುಡ, ಬಡ, ನಿಟ್ಟ, ಮಾಲ, ತುಟ್ಟ, ಓಸರ, ಬೋಸರ, ಮುಕ್ಕುಳ, ಬಿಕ್ಕುಳ, ನೆಕ್ಕುಲ, (ನೆಕ್ಕುಳ) ಜಕ್ಕುಲ, ಕುಪ್ಪಳ, ಅಪ್ಪಳ, ಕೊಕ್ಕರ, ಬೆಕ್ಕರ, ಡೊಕ್ಕರ, ಚೆಕ್ಕರ, ತಳ್ಕ, ತಳ್ಕಯ, ಉಮ್ಮಳ, ದೊಮ್ಮಳ, ಬಿತ್ತರ, ಒತ್ತರ, ಆಲ, ಸೋಲ, ಸಂದಣ, ಗೊಂದಣ, ಬಿಚ್ಚಟ, ಪುಚ್ಚಟ, ಬೆಚ್ಚಳ[೧], ಟಿಬ್ಬರ, ಗಬ್ಬರ, ಅಬ್ಬರ, ಉಬ್ಬರ, ಕೂನ, ಜಾನ, ಜೀನ, ಕಳವಳ, ಕನವರ, ಸ್ಮರ, ಸೊಗಯ, ಸಂದ, ಮಂದಯ, ತಾರಯ, ಪೂರಯ, ಲಲ್ಲಯ, ತುಟ್ಟಯ, ಒಟ್ಟಯ, ಬೊಲ್ಲಯ, ಬೋಳಯ, ಲಾಲಯ, ಹಾರಯ, ಬಾಳಯ, ಮೇಳಯ, ತೀರಯ, ಕೋರಯ, ಬಾವಳ, ಕಡೆಗಣ, ಸಮನ, ತವ, ಕಿನ, ಹಸ, ಬಿನ್ನವ, ಒಪ್ಪ, ಸೊಪ್ಪ, ಚಪ್ಪರ, ಅವಗಡ, ಸಂಗಡ, ವಂಗಡ — ಭುಂಜಾದಿಯು ಆಕೃತಿ ಗಣವು. ( ಇಂತಹ ಬೇರೆ ಧಾತುಗಳನ್ನೂ ಇದರಲ್ಲಿ ಸೇರಿಸಿಕೊಳ್ಳುವುದು. )

**ವಿಚಾರ ೫೩೯**

'ವಾ' ಎಂಬುದರ ಅನುವೃತ್ತಿಯು ಈ ಸೂತ್ರಕ್ಕಿಲ್ಲ. ಆದುದರಿಂದ ಭುಂಜಾದಿಗಳಿಗೆ ನಿತ್ಯವಾಗಿ 'ಇಸು' ಸೇರುವುದು. ಭುಂಜಾದಿಗಳನ್ನು 'ಇಸು' ಪ್ರತ್ಯಯಾಂತವಾಗಿಯೇ ಪ್ರಯೋಗಿಸುವುದು; 'ಇಸು' ಪ್ರತ್ಯಯರಹಿತವಾದ ಇವುಗಳ ಪ್ರಯೋಗವಿಲ್ಲ*.

**ಅವತಾರಿಕೆ ೫೪೦**

'ಇಸು' ಪ್ರತ್ಯಯದಂತೆ 'ಐಸು' ಪ್ರತ್ಯಯವೂ ಕೆಲವೆಡೆ ಬರುವುದು.

**ಸೂತ್ರಂ** || **ಐಸುಸ್ತಾರಾದಿಭ್ಯಃ** || **೫೪೦** ||

( ೧. ಐಸುಃ, ೨. ತಾರಾದಿಭ್ಯಃ. )

**ಅನುವೃತ್ತಿ** || ೧. ಸ್ವಾರ್ಥೇ.

**ವೃತ್ತಿ** || 'ತಾರ' ಮೊದಲಾದ ಧಾತುಗಳಿಗೆ ಸ್ವಾರ್ಥದಲ್ಲಿ 'ಐಸು' ಪ್ರತ್ಯಯವು ಸೇರುವುದು.

**ಪ್ರಯೋಗ** || ತಾರೈಸು, ಪೂರೈಸು, ತಟಕ್ಕೈಸು, ಲಲ್ಲೈಸು.

ತಾರಾದಿಗಣ — ತಾರ, ಪೂರ, ತಳ್ಕ, ಮಂದ, ಲಲ್ಲ, ಬೊಲ್ಲ, ಬೋಳ, ಲಾಲ, ಮೇಳ, ಬಾಳ, ಒಟ್ಟ, ತುಟ್ಟ, ಹಾರ, ಕೋರ, ತೀರ. ( ತಾರಾದಿಯು ಆಕೃತಿಗಣವು. )

---

ಪಾಠಾಂತರ : ೧. ಬಚ್ಚಳ.

* 'ಭುಜ' ಮೊದಲಾದುವು ಧಾತುಗಳೆಂದು ಹೇಳುವುದು, ಭುಂಜಾದಿಗಳಿಗೆ ಸ್ವಾರ್ಥದಲ್ಲಿ 'ಇಸು' ವನ್ನು ಹೇಳುವುದು, ಎಂದರೆ 'ಇಸು'ವಿನ ಅರ್ಥವಿಲ್ಲವೆನ್ನುವುದು, 'ಇಸು'ವಿಲ್ಲದೆ ಭುಂಜಾದಿಗಳಿಗೆ ಪ್ರತ್ಯೇಕ ಪ್ರಯೋಗವಿಲ್ಲವೆನ್ನುವುದು ಈ ಕಾರಣಗಳಿಂದ ಭುಂಜಾದಿಗಣವನ್ನು ಬೇರೆಯಾಗಿ ಹೇಳುವುದಕ್ಕಿಂತ ಇವುಗಳಲ್ಲಿ ಕೆಲವು ಸು-ಶಬ್ದಾಂತಗಳಾದ ಅಖಂಡ ಧಾತುಗಳೆಂದೂ ಕೆಲವು ಭೋಗಾದಿಗಣದಲ್ಲಿ ಸೇರುವುವೆಂದೂ ಹೇಳುವುದು ಲೇಸಾಗಿದ್ದಿತು. ಇವುಗಳಲ್ಲಿ ಹಲವನ್ನು ಧಾತುಗಳೆಂದು ಹೇಳುವುದು ವಿಲಕ್ಷಣವಾಗಿದೆ.

**ವಿಚಾರ ೫೪೦**

ಭುಂಜಾದಿಗಣಕ್ಕೆ ಸೇರಿದ 'ತಳ್ಕು, ತೀರ' ಮುಂತಾದುವನ್ನು ತಾರಾದಿಗಣದಲ್ಲಿ ಸೇರಿಸಿದುದು 'ತಳ್ಕಿಸು, ತಳ್ಕೈಸು; ತೀರಿಸು, ತೀರ್ಯಿಸು' ಮುಂತಾದ ದ್ವಿವಿಧರೂಪಗಳ ಸಿದ್ಧಿಗಾಗಿ ಎಂದು ತಿಳಿಯಬೇಕು. ಭುಂಜಾದಿಗಣದಲ್ಲಿ 'ತಳ್ಕಯ' ಎಂಬುದನ್ನು ಹೇಳಿದುದರಿಂದ 'ತಳ್ಕಿಸು, ತಳ್ಕೈಸು, ತಳ್ಕಯಿಸು' ಎಂದು ತ್ರಿವಿಧ ರೂಪಗಳಾಗುವುವು.

**ಅವತಾರಿಕೆ ೫೪೧**

ಪ್ರೇರಣಾರ್ಥದಲ್ಲಿ 'ಇಸು'ವನ್ನು ಹೇಳಿದನಷ್ಟೇ. ಪ್ರೇರಣೆಗಳು ಶೃಂಖಲಾರೂಪವಾಗಿ ಹಲವು ಇರುವುದುಂಟು. ಪ್ರತಿ ಪ್ರೇರಣೆಗೂ 'ಇಸು' ಸೇರುತ್ತ ಹೋಗುವುದೇ ಎಂದರೆ ಸಮಾಧಾನವನ್ನು ಹೇಳುತ್ತಾನೆ.

**ಸೂತ್ರಂ ॥ ಇಸುಪೀಸುಪಃ ಶ್ಲುಬಸ್ವಾರ್ಥೇ ॥ ೫೪೧ ॥**

( ೧. ಇಸುಪಿ. ೨. ಇಸುಪಃ. ೩. ಶ್ಲುಪ್. ೪. ಅಸ್ವಾರ್ಥೇ. )

**ವೃತ್ತಿ** ॥ 'ಇಸು' ಪ್ರತ್ಯಯವು ಪರವಾಗಲು ಅಸ್ವಾರ್ಥಕವಾದ 'ಇಸು' ಪ್ರತ್ಯಯಕ್ಕೆ ಲೋಪವಾಗುವುದು.

**ಪ್ರಯೋಗ** ॥ ನಮಿಸಿದಂ ದೇವದತ್ತಂ, ಆತನನ್ನು ಇನ್ನೊಬ್ಬನು ಪ್ರೇರಿಸಿದನು — ನಮಿಸಿದಂ ದೇವದತ್ತನಂ ಜಿನದತ್ತಂ; ಪಠಿಸಿದಂ ಪುತ್ರಂ, ಆತನನ್ನು ತಂದೆ ಪ್ರೇರಿಸಿದನು — ಪಠಿಸಿದಂ ಮಗನಂ ತಂದೆ; ಪಚಿಸಿದಂ ಪಾಚಕಂ, ಆತನನ್ನು ಪ್ರಭು ಪ್ರೇರಿಸಿದನು — ಪಚಿಸಿದಂ ಪಾಚಕನಂ ಪ್ರಭು.

**ಪದಕೃತ್ಯ** ॥ 'ಇಸು ಪರವಾಗಲು' ಎಂದು ಹೇಳಿದುದರಿಂದ 'ನೀಮಿದಂ ಪಠಿಸಿಂ, ಆಮಿದಂ ಮಾಡಿಸುವೆವು, ತಾಮಿದಂ ಮಾಡಿಸಿದರ್' ಮುಂತಾದ 'ಇಸು' ಪರವಾದೆಡೆಗಳಲ್ಲಿ 'ಇಮ್' ಮುಂತಾದ ಪ್ರತ್ಯಯಗಳು ಪರವಾದಾಗ 'ಇಸು' ಲೋಪವಾಗುವುದಿಲ್ಲ. 'ಇಸು ಪ್ರತ್ಯಯಕ್ಕೆ' ಎಂದು ಹೇಳಿದುದರಿಂದ 'ಪೊಣರ್ಚುದು ಆನೆ, ಅದನ್ನು ಚೋದಕ (ಮಾವಟಿಗ)ನು ಪ್ರೇರಿಸುತ್ತಾನೆ — ಪೊಣರ್ಚಿಪನಾನೆಯಂ ಮಾವಟಿಗಂ, ಮಾವಟಿಗನನ್ನು ರಾಜನು ಪ್ರೇರಿಸುತ್ತಾನೆ — ಪೊಣರ್ಚಿಸಿದಪನಾನೆಯಂ ಮಾವಟಿಗನಿಂ ಅರಸಂ' ಈ ಮೇರೆಗೆ 'ಪೊಗೞ್ಚಿದಂ ದೇವದತ್ತನಂ ಯಜ್ಞದತ್ತನಿಂ ಜಿನದತ್ತಂ; ಜಿನದತ್ತನನ್ನು ವಿಷ್ಣುಮಿತ್ರನು ಪ್ರೇರಿಸುತ್ತಾನೆ — ಪೊಗೞ್ಚಿಸಿದಂ ದೇವದತ್ತನಂ ಯಜ್ಞದತ್ತನಿಂ ಜಿನದತ್ತನಿಂ ವಿಷ್ಣುಮಿತ್ರಂ' ಈ ಪ್ರಯೋಗಗಳಲ್ಲಿ 'ಚು' ಲೋಪವಾಗುವುದಿಲ್ಲ. 'ಅಸ್ವಾರ್ಥಕವಾದ ಇಸುವಿಗೆ' ಎಂದು ಹೇಳಿದುದರಿಂದ '(ಬಡಿಸಿದಳ್ ಸೊಸೆ) — ಬಡಿಸಿದಳ್ ಸೊಸೆಯಿಂದತ್ತೆ' ಮುಂತಾದೆಡೆಗಳಲ್ಲಿ ಸ್ವಾರ್ಥದಲ್ಲಿದ್ದ 'ಇಸು'ವಿಗೆ ಲೋಪವಿಲ್ಲ.

**ವಿಚಾರ ೫೪೧**

ಇಲ್ಲಿ 'ಅಸ್ವಾರ್ಥೇ' ಎಂಬುದು ಸ್ಥಾನಿಯಾದ 'ಇಸು'ವಿನ ವಿಶೇಷಣವೋ ನಿಮಿತ್ತವಾದ 'ಇಸು'ವಿನ ವಿಶೇಷಣವೋ ಎಂಬ ಸಂಶಯವುಂಟಾಗುವುದರಿಂದ ಇದು ನಿಮಿತ್ತವಾದ 'ಇಸು' ವಿನ ವಿಶೇಷಣವಲ್ಲವೆಂದೂ 'ಬಡಿಸಿಸಿದಳ್ ಸೊಸೆಯಿಂದತ್ತೆ, ಎಣಿಸಿಸಿದಂ ಮಗನಿಂ

ತಂದೆ, ಮುಕ್ಕುಳಿಸಿಸಿದಂ ರೋಗಿಯಿಂ ಬೆಜ್ಜಂ' ಮುಂತಾದೆಡೆಗಳಲ್ಲಿ ನಿಮಿತ್ತವಾದ 'ಇಸು' ಕಾಣಬರುವುದರಿಂದಲೂ ಸ್ಥಾನಿಯಾದ 'ಇಸು'ವಿಗೇ ವಿಶೇಷಣವೆಂದು ಸ್ಪಷ್ಟಗೊಳಿಸಿ 'ಆಸ್ವಾರ್ಥಕವಾದ ಇಸು ಪ್ರತ್ಯಯಕ್ಕೆ' ಎಂದು ವೃತ್ತಿಯಲ್ಲಿ ಅರ್ಥಮಾಡಿ ಹೇಳಿರುವನು.

'ನಮನ' ಶಬ್ದದ ಮುಂದೆ '**ಇಸುಪ್ ತತ್ ಕರೋತಿ.... || ೫೩೩ ||**' ಎಂಬುದರಿಂದ 'ಇಸು' ಬರಲು '**ಧಾತೋರ್ಹೇತುಮತಿ || ೫೩೬ ||**' ಎಂಬುದರಿಂದ ಮತ್ತೆ ಪ್ರೇರಣಾರ್ಥದಲ್ಲಿ 'ಇಸು' ಬರಲು ಈ ಸೂತ್ರದಿಂದ ಮೊದಲಿನ 'ಇಸು'ವಿಗೆ ಲೋಪವಾಗಲು (ನಮನ+ಇಸು+ಇಸು+ಅಮ್ (ಆಖ್ಯಾತ ಪ್ರತ್ಯಯ) — ನಮಿಸಿದಂ ಎಂಬ ರೂಪವು ಸಿದ್ಧವಾಗುವುದು. 'ಪಠಿಸಿದಂ' ಮೊದಲಾದುವೂ ಹೀಗೆಯೇ ಸಿದ್ಧಿಸುವುವು.

ಪ್ರತ್ಯುದಾಹರಣಗಳಾದ 'ಪಠಿಸಿಂ' ಮುಂತಾದೆಡೆಗಳಲ್ಲಿ ಅಸ್ವಾರ್ಥಕವಾದ 'ಇಸು' ಇದ್ದರೂ ಮುಂದೆ 'ಇಮ್' ಮುಂತಾದ ಪ್ರತ್ಯಯಗಳು ಬಂದಿವೆಯೇ ಹೊರತು 'ಇಸು' ಬಂದಿಲ್ಲವಾದುದರಿಂದ ನಿಮಿತ್ತವಿಲ್ಲವೆಂದು 'ಇಸು' ಲೋಪವಾಗಿಲ್ಲ.

'ಪೊಣರ್ಚಿಸಿದಪನಾನೆಯುಂ ಮಾವಟಿಗನಿನರಸಂ' ಎಂಬೀ ಉದಾಹರಣದಲ್ಲಿ ಧಾತುವು ಅಕರ್ಮಕವಾದುದರಿಂದ ಪ್ರಕೃತ್ಯರ್ಥಕರ್ತೃವಾದ 'ಆನೆ' ಎಂಬುದು ಧಾತುವು 'ಇಸು' ಪ್ರತ್ಯಯಾಂತವಾದಾಗ ಕರ್ಮವಾಗುವುದರಿಂದ 'ಆನೆಯುಂ' ಎಂದು ದ್ವಿತೀಯಾಂತವಾಗಿದೆ. ಮಾವಟಿಗನು ಪ್ರೇರಕನಾದುದರಿಂದ ಕರ್ತೃವೆನಿಸಿದ್ದರೂ ಅರಸನಿಂದ ಪ್ರೇರಿತನಾದುದರಿಂದ ಪ್ರಯೋಜ್ಯನಾಗುವನು. ಮುಖ್ಯ ಪ್ರೇರಕನು ಅರಸನೇ. ಲೋಕವ್ಯವಹಾರವು ಪ್ರಧಾನಾನುಸಾರಿಯು. ಆದುದರಿಂದ ಕರ್ತೃವು ಆಖ್ಯಾತಪ್ರತ್ಯಯದಿಂದ ಅನುಕ್ತವಾದುದರಿಂದ 'ಮಾವಟಿಗನಿಂ' ಎಂಬಲ್ಲಿ ತೃತೀಯೆ ಬಂದಿದೆ. 'ಅರಸನು' ಪ್ರಯೋಜಕನಾದುದರಿಂದ ಆಖ್ಯಾತಪ್ರತ್ಯಯದಿಂದ ಕರ್ತೃವು ಉಕ್ತವಾದುದರಿಂದ 'ಅರಸಂ' ಎಂಬಲ್ಲಿ ಪ್ರಥಮೆ ಬಂದಿದೆ.

'ಪೊಗಳ್ಚಿಸಿದಪಂ ದೇವದತ್ತನಂ ಯಜ್ಞದತ್ತನಿಂ ಜಿನದತ್ತನಿಂ ವಿಷ್ಣುಮಿತ್ರಂ' ಎಂಬ ಉದಾಹರಣದಲ್ಲಿ ಧಾತುವು ಸಕರ್ಮಕವಾದುದರಿಂದ 'ದೇವದತ್ತ' ರೂಪಕರ್ಮವು ಆಖ್ಯಾತ ಪ್ರತ್ಯಯದಿಂದ ಅನುಕ್ತವಾದುದರಿಂದ 'ದೇವದತ್ತ' ಶಬ್ದಕ್ಕೆ ದ್ವಿತೀಯೆ, 'ಯಜ್ಞದತ್ತ'ನು ಕರ್ತೃವಾಗಿದ್ದರೂ ಜಿನದತ್ತನಿಂದ ಪ್ರೇರಿತನಾಗಿರುವನು; ಜಿನದತ್ತನು ಆತನ ಪ್ರೇರಕನಾಗಿದ್ದರೂ ತಾನು ವಿಷ್ಣುಮಿತ್ರನಿಂದ ಪ್ರೇರಿತನು; ಈ ಮೇರೆಗೆ ಇಬ್ಬರೂ ಪ್ರಯೋಜ್ಯರು – (ಪ್ರೇರ್ಯರು); ಮತ್ತು ಆಖ್ಯಾತಪ್ರತ್ಯಯದಿಂದ ಅನುಕ್ತರು; ಆದುದರಿಂದ ಯಜ್ಞದತ್ತ ಜಿನದತ್ತ ಎಂಬೀ ನಾಮಗಳೆರಡಕ್ಕೂ ತೃತೀಯೆ. ವಿಷ್ಣುಮಿತ್ರನು ಪ್ರೇರಕನು, ಉಕ್ತಕರ್ತೃವಾಗಿರುವುದರಿಂದ 'ವಿಷ್ಣುಮಿತ್ರ' ಶಬ್ದಕ್ಕೆ ಪ್ರಥಮೆ. ಈ ಎರಡು ಉದಾಹರಣೆಗಳಲ್ಲಿಯೂ ನಿಮಿತ್ತವಾದ 'ಇಸು' ಪ್ರತ್ಯಯವಿದ್ದರೂ ಅದರ ಪೂರ್ವದಲ್ಲಿ 'ಚು' ಇರುವುದೇ ಹೊರತು 'ಇಸು' ಇಲ್ಲ. ಆದುದರಿಂದ ಸ್ಥಾನಿಯೇ ಇಲ್ಲವಾದುದರಿಂದ (ಚು) ಲೋಪವಿಲ್ಲವೆಂದು ಹೇಳಿರುವನು.

**ಅವತಾರಿಕೆ ೫೪೨**

'ಇಸು' ಪರವಾದಾಗ 'ಮಾ' ಧಾತುವಿನ ಕಾರ್ಯವಿಶೇಷವು.

**ಸೂತ್ರಂ || ವೇಸ್ಮಿಯಃ || ೫೪೨ ||**

(೧. ವಾ, ೨. ಇಸ್, ೩. ಮಿಯಃ.)

**ಅನುವೃತ್ತಿ** || ಇಸುಪಿ.

**ವೃತ್ತಿ** || 'ಇಸು' **ಪ್ರತ್ಯಯವು ಪರದಲ್ಲಿರಲು 'ಮಿಾ' ಧಾತುವಿಗೆ 'ಇಸ್' ಆದೇಶವು ವಿಕಲ್ಪವಾಗಿ ಆಗುವುದು.**

**ಪ್ರಯೋಗ** || ಮಿಸಿಸಿದಂ, ಮಿಾಯಿಸಿದಂ; ಮಿಸಿಸಲ್ಪಟ್ಟಂ, ಮಿಾಯಿಸಲ್ಪಟ್ಟಂ.

**ಪದಕೃತ್ಯ** || 'ಮಿಾ ಧಾತುವಿಗೆ' ಎಂದು ಹೇಳಿದುದರಿಂದ 'ನೋ' ಮೊದಲಾದ ಬೇರೆ ಧಾತುಗಳಿಗೆ ಈ ಕಾರ್ಯವಿಲ್ಲ. ಉದಾ: ನೋಯಿಸಿದಂ. 'ಇಸು ಪರದಲ್ಲಿರಲು' ಎಂದು ಹೇಳಿದುದರಿಂದ 'ಮಿಂದಂ' ಮೊದಲಾದೆಡೆಗಳಲ್ಲಿ ಈ ಕಾರ್ಯವಿಲ್ಲ.

**ವಿಚಾರ ೫೪೨**

'ಧಾತೋರ್ಹೇತುಮತಿ || ೫೩೬ ||' ಎಂಬುದರಿಂದ 'ಇಸು' ಪರದಲ್ಲಿರಲು 'ಮಿಾ' ಧಾತುವಿಗೆ 'ಇಸ್' ಆದೇಶವು ವೈಕಲ್ಪಿಕವೆಂದು ಹೇಳಿದೆ. 'ಮಿಂದಂ ಜಿನಂ, ಮಿಸಿಸಿದಂ ಜನನಂ ಇಂದ್ರಂ' ಇಲ್ಲವೆ 'ಮಿಾಯಿಸಿದಂ'. 'ಮಿಾಯಿಸಿದಂ' ಎಂಬಲ್ಲಿ '**ಯಕ್ ಸ್ವರೇ ಸ್ವರಸ್ಯ || ೩೫ ||**' ಎಂಬ ಸೂತ್ರದಿಂದ ಯಕಾರಾಗಮವು. 'ಮಿಾ' ಧಾತುವು ಅಕರ್ಮಕವು; ಪ್ರೇರಣಾರ್ಥದಲ್ಲಿ ಪ್ರಕೃತ್ಯರ್ಥವಾದ ಕರ್ತೃವು ಕರ್ಮವಾಗುವುದು. ಕರ್ಮಾರ್ಥಕ ಪ್ರಯೋಗ ದಲ್ಲಿಯೂ 'ಮಿಸಿಸಲ್ಪಟ್ಟಂ, ಮಿಾಯಿಸಲ್ಪಟ್ಟಂ' ಎಂದು ದ್ವಿರೂಪಗಳನ್ನು ಉದಾಹರಿಸಿವನು. ಪ್ರಯೋಗ —

ಇನಿಗಡಲೊಳ್ ಮುಳುಗಿದುದೀ
ಕನಕಾಚಲಮೆನಿಸಲಾತ್ಮದಾ ನವನದ ಪಾ
ಲ್ವೊನಲೆತ್ತಲುಮಾವರಿಸಿರೆ
ಜಿನಬಾಲನನಿಂದ್ರನಲ್ಲಿ ಮಿಸಿಸುವ ಪದದೊಳ್

**ಅವತಾರಿಕೆ ೫೪೩**

ಹಿಂದಿನ ಸೂತ್ರಗಳಿಂದ ಧಾತುಗಳುಂಟಾಗುವ ಬಗೆಯನ್ನು ವಿವರಿಸಿ ಈಗ ಕೃದಂತ ಪ್ರಕರಣವನ್ನು ಆರಂಭಿಸುವನು.

**ಸೂತ್ರಂ || ಅಚ್ ಕರ್ತೃಕರ್ಮಣೋಃ || ೫೪೩ ||**

( ೧. ಅಚ್, ೨. ಕರ್ತೃಕರ್ಮಣೋಃ. )

**ವೃತ್ತಿ** || **ಕರ್ತ್ರರ್ಥದಲ್ಲಿಯೂ ಕರ್ಮಾರ್ಥದಲ್ಲಿಯೂ ಧಾತುವಿನ ಮುಂದೆ ಅಚ್ ( = ಅ ) ಪ್ರತ್ಯಯವು ಸೇರುವುದು.**

**ಪ್ರಯೋಗ** || ಮಾಡಿದನಂ, ಕೂಡಿದನಂ; ಮಾಡಿದಂಗೆ, ಕೂಡಿದಂಗೆ; ತರ್ಪನಂ, ಬರ್ಪನಂ; ತರ್ಪನೊಳ್, ಬರ್ಪನೊಳ್; ಮಾಡಲ್ಪಟ್ಟನಂ, ಕೂಡಲ್ಪಟ್ಟನಂ; ತರಲ್ಪಟ್ಟನಂ, ಬರಲ್ಪಟ್ಟನಂ.

**ವಿಚಾರ ೫೪೩**

ಧಾತುಗಳಿಂದ ಉಂಟಾಗುವ ಪದಗಳು ಕ್ರಿಯಾಪದಗಳೆಂದೂ ಕೃದಂತಪದಗಳೆಂದೂ ದ್ವಿವಿಧವಾಗಿವೆ. ಕ್ರಿಯಾಪದ ವಿಚಾರವನ್ನು ಈವರೆಗೆ ಹೇಳಿ ಈಗ ಕೃದಂತ ವಿಚಾರವನ್ನು ಆರಂಭಿಸುತ್ತಾನೆ.

ಕ್ರಿಯಾಪದದ ಪ್ರಕರಣದ ಆರಂಭದಲ್ಲಿ ‘ಕರ್ತರಿ’ ‘ಕರ್ಮಣಿ’ ಎಂದು ಹೇಳಿರುವುದರಿಂದ ಅವನ್ನೇ (ಕರ್ತರಿ, ಕರ್ಮಣಿ ಎಂಬಿವನ್ನು) ಈ ಸೂತ್ರಕ್ಕೆ ಅನುವೃತ್ತಿಯಿಂದ ತೆಗೆದುಕೊಳ್ಳಬಹುದಾಗಿದ್ದರೂ ಹಲವು ಸೂತ್ರಗಳಿಂದ ಬಹುವ್ಯವಧಾನವಾಗಿರುವುದರಿಂದಲೂ ಪ್ರಕರಣಭೇದವಾದುದರಿಂದಲೂ ಈ ಸೂತ್ರದಲ್ಲಿ ಮತ್ತೆ ‘‘ಕರ್ತೃಕರ್ಮಣೋಃ’ ಎಂದು ಹೇಳಿದನು.

ಈ ‘ಅಚ್’ ಪ್ರತ್ಯಯವು ಕರ್ತೃಕರ್ಮಾರ್ಥಗಳಲ್ಲಿಯೇ ಅಲ್ಲದೆ ಎಲ್ಲ ಕಾರಕಾರ್ಥಗಳಲ್ಲಿಯೂ ಬರುವುದುಂಟು. ಉದಾ :

ಕರ್ತ್ರರ್ಥದಲ್ಲಿ — ಓದುವ ಮೃಗಂ, ಪಾಡುವಂಗನೆ.
ಕರ್ಮಾರ್ಥದಲ್ಲಿ — ಇಡುವ ತಿಲಕಂ, ಮುಡಿವ ಕುಸುಮಂ.
ಕರಣಾರ್ಥದಲ್ಲಿ — ಉಡುವ ಸೀರೆ, ಪೊದೆವ ಪಚ್ಚಡಂ.
ಸಂಪ್ರದಾನಾರ್ಥದಲ್ಲಿ — ಈವ ಗುರು, ಕುಡುವ ಪಾರ್ವಂ.
ಅಪಾದಾನಾರ್ಥದಲ್ಲಿ — ಅಳ್ಕುವ ಮಾರಿ, ಬೆದಱುವ ಬಳಹರಿ.
ಅಧಿಕರಣಾರ್ಥದಲ್ಲಿ — ಕಾದುವ ಕಳಂ, ಆಡುವ ಪೊಲಂ ಮುಂತಾದುವು.

ಈ ವಿಷಯದಲ್ಲಿ ಹಿಂದಣ ಕವಿಗಳ ಪ್ರಯೋಗಗಳೂ ಉಂಟು —

ಪಾಡುವುವಂ[1] ತುಂಬಿಗಳಂ
ಕೂಡುವುವಂ[2] ಜಕ್ಕವಕ್ಕಿಗಳನತಿಜನದಂ
ಮಾಡುವುವಂ[3] ಪುಲ್ಲಿಗಳಂ
ನೋಡಿದನರಸಂ ವಿವೇಕಸಿಧಿ ಸಂತಸದಿಂ

ಇಲ್ಲಿ ‘ಪಾಡುವುವಂ, ಕೂಡುವುವಂ’ ಮುಂತಾದೆಡೆಗಳಲ್ಲಿ ಕರ್ತ್ರರ್ಥದಲ್ಲಿ ‘ಅಚ್’ ಪ್ರತ್ಯಯವು ಬಂದಿದೆ.

ಏವಣ್ಣಿಪೆನುಣ್ಬುದು ಕ
ಲ್ಪಾವನಿಜಪ್ರತ್ತಬದರಮಿತಮುಷ್ಟಮಾಂಸಂ
ಭಾವಿತಮವರ್ಗಂತದು ತಣಿ
ವೀವುದು ಬಾಸುದ್ದಮಪ್ಪ ಪೇರೊಡಲವರ್ಗಂ

ಇಲ್ಲಿ ‘ಉಣ್ಬುದು’ ಎಂಬುದು ಕರ್ಮಾರ್ಥದ ‘ಅಚ್’ ಪ್ರತ್ಯಯವನ್ನು ಹೊಂದಿದೆ.

ಅವರಿರ್ಪುದುಮವರುಡುವುದು
ಮವರ ಮಲಂಗುವುದುಮವರ ಕುಳ್ಳಿರ್ಪುದುಮಾ
ದ್ಯುವಿಟಪಿಯಿತ್ತನುಪಮಮಾ
ಸವಸ್ತ್ರಶಯ್ಯಾಸನಂಗಳೆನೆಯವರ್ಗೆಣೆಯಾರ್

ಇಲ್ಲಿ ‘ಉಡುವುದು’ ಎಂಬಲ್ಲಿ ಕರಣಾರ್ಥದಲ್ಲಿ, ‘ಇರ್ಪುದು, ಮಲಂಗುವುದು’ ಮುಂತಾದೆಡೆಗಳಲ್ಲಿ ಅಧಿಕರಣಾರ್ಥದಲ್ಲಿ ‘ಅಚ್’ ಬಂದಿದೆ.

---

ಪಾಠಾಂತರ : ೧. ಪಾಡುವವಂ, ೨. ಕೂಡುವವಂ, ೩. ಮಾಡುವವಂ.

ಮುದದಿಂ ದಾನಮನೀವ ದಿವ್ಯಯತಿಯಂ ಕಂಡಬ್ಜಜಂ ಬೇಗಮೆ
ಒಲ್ದೊಡಗೊಂಡುನ್ನತಪೀಠಮಿಕ್ಕಿ ಕರದಿಂ ಕಾಲ್ಗರ್ಚಿ ತಾಂ ಪೂಜೆಗೆ
ಯ್ದು ದಿಟಂ ವಂದಿಸಿ ಶುದ್ಧವಾಕ್ತನುಮನೋವ್ಯಾಪಾರದಿಂ ಸಾರಮು
ಪ್ಪದನಾಹಾರಮನೀವ ದಾತೃತಿಲಕಂ ಭದ್ರಂ ಶುಭಂ ಮಜ್ಗಳವರ್

ಇಲ್ಲಿ ‘ ಈವ ’ (ದಿವ್ಯಯತಿಯಂ) ಎಂಬಲ್ಲಿ ಸಂಪ್ರದಾನಾರ್ಥದಲ್ಲಿ ‘ ಅಚ್ ’ ಬಂದಿದೆ.

ತವಿಸುವುದಾಯಿಶಮದಱು
ಳ್ಕುವ ಪಾಡೆಯಡುಂಕುವೆಣನನೀಕ್ಷಿಸಿದರ ಕ
ಣ್ಣವೆಯುಕ್ಕದಮುನ್ನಿನಲ
ಳ್ಕುವ ಬಳಹರಿ ಬಟ್ಟಬಾಯಿನಟ್ಟದುದಿದಿರಂ

ಇಲ್ಲಿ ‘ ಅಳ್ಕುವ ಬಳಹರಿ ’ ಎಂಬಲ್ಲಿ ಅಪಾದಾನಾರ್ಥದಲ್ಲಿ ‘ ಅಚ್ ’ ಬಂದಿದೆ.

ಈ ತರದ ಇನ್ನು ಕೆಲವು ಮಹಾಕವಿ ಪ್ರಯೋಗಗಳು ಇರುವುದರಿಂದ ‘ ಅಚ್ ’ ಪ್ರತ್ಯಯವನ್ನು ಎಲ್ಲ ಕಾರಕಾರ್ಥಗಳಲ್ಲಿಯೂ ಹೇಳದೆ ‘ ಕರ್ತೃಕರ್ಮಾರ್ಥಗಳಲ್ಲಿ ’ ಎಂದು ಸಂಕೋಚವನ್ನು ಮಾಡಿದುದರ ಕಾರಣವೇನು ? ಅಹುದು; ಎಲ್ಲ ಕಾರಕಾರ್ಥಗಳಲ್ಲ ‘ ಅಚ್ ’ ಪ್ರತ್ಯಯವು ಸಂಭವಿಸುವುದಾದರೂ ಅದು ಕರ್ತೃಕರ್ಮಾರ್ಥಗಳಲ್ಲಿ ಹೆಚ್ಚಾಗಿ ಪ್ರಯೋಗಿಸಲ್ಪಡುವುದೆಂದು ಪ್ರಯೋಗಬಾಹುಲ್ಯವನ್ನು ತೋರಿಸುವುದಕ್ಕಾಗಿ ಹಾಗೆ ಹೇಳಿದೆಯೆಂದು ತಿಳಿಯಬೇಕು. ಧಾತುಗಳ ಮುಂದೆ ಸೇರುವ ಪ್ರತ್ಯಯಗಳು ಪ್ರಾಯಃ ಕರ್ತೃಕರ್ಮ ಭಾವಾರ್ಥಗಳಲ್ಲಿಯೇ ಬರುವುವು. ಇಲ್ಲವೆ, ‘ಕರ್ತೃ’ ಶಬ್ದವು ಇಲ್ಲಿ ಎಲ್ಲ ಕಾರಕಗಳಿಗೆ ಉಪಲಕ್ಷಕವೆಂದು ತಿಳಿಯಬೇಕು. ‘ ಕರ್ತೃ ’ ಎಂದರೆ ಎಲ್ಲ ಕಾರಕಗಳು. ಎಲ್ಲ ಕಾರಕಗಳು ಕರ್ತೃಶಕ್ತಿಯಿಂದ ಕೂಡಿದುವೇ ಎಂದು ಹೇಳಬಹುದು. ತಮ್ಮ ತಮ್ಮ ವ್ಯಾಪಾರವಿವಕ್ಷೆಯಿಂದ ಎಲ್ಲ ಕಾರಕಗಳೂ ಕರ್ತೃಗಳೇ. ಹೀಗಿಲ್ಲದಿದ್ದರೆ ಕಾರಕ (= ಕ್ರಿಯೆಯನ್ನು ಹುಟ್ಟಿಸುವ, ಕ್ರಿಯೆಯನ್ನು ಮಾಡುವ) ಎಂಬ ಹೆಸರೇ ಅವಕ್ಕೆ ಸಲ್ಲದೆ ಹೋಗಬೇಕಾದೀತು. ‘ಕರ್ಮ, ಕರಣ’ ಮೊದಲಾದ ಕಾರಕಗಳನ್ನೂ ನಾವು ಕರ್ತೃಕಾರಕಗಳಾಗಿ ಪ್ರಯೋಗಿಸುವುದಿಲ್ಲವೇ ? ಹಾಗಾದರೆ ಎಲ್ಲ ಕಾರಕಗಳಲ್ಲಿಯೂ ‘ ಅಚ್ ’ ಪ್ರತ್ಯಯವು ಬರುವುದಾದರೆ ಸರ್ವಕಾರಕಸೂಚಕವಾದ ಕರ್ತೃಶಬ್ದವೊಂದೇ ಸಾಕಾಗಿರಲು ‘ ಕರ್ತೃಕರ್ಮಣೋಃ ’ ಎಂದು ಮತ್ತೆ ಕರ್ಮಗ್ರಹಣವೇಕೆ ? ಎಂದರೆ ‘ **ಕೃತಿ ವಾ || ೫೩೧ ||** ’ ಎಂಬ ಸೂತ್ರದಿಂದ ವಿಧಿಸಿದ ‘ ಪಡು ’ ಧಾತುವಿನ ಅನುಪ್ರಯೋಗವು ಕರ್ಮಾರ್ಥದಲ್ಲಿಯೇ ಪ್ರಚುರವಾಗಿ ಆಗುವುದೆಂಬುದನ್ನು ತೋರಿಸುವುದಕ್ಕಾಗಿ ಎಂದು ತಿಳಿಯಬೇಕು. ಪ್ರಾಚೀನ ವ್ಯಾಕರಣಗಳಲ್ಲಿ ಕೂಡ ‘ **ಕೃದ್ ಬಹುಲಂ ( ಶಾ. ೪. ೩. ೫೮. )** ’ ಎಂಬ ಸೂತ್ರದಿಂದ ಕೃತ್-ಪ್ರತ್ಯಯವಿಧಾನವು ಬಾಹುಲಕವಾಗಿಯೇ ಹೇಳಲ್ಪಟ್ಟಿದೆ.

ಉದಾಹರಣಗಳಲ್ಲಿ ‘ಮಾಡಿದನಂ’ ಮುಂತಾದೆಡೆಗಳಲ್ಲಿ ಕರ್ತ್ರರ್ಥದಲ್ಲಿ ‘ ಅಚ್ ’ ಸೇರಿದೆ. ‘ **ಅಚಿ || ೪೪೬ ||** ’ ಎಂಬುದರಿಂದ ಭೂತಕಾಲದ ‘ ದ ’ ಪ್ರತ್ಯಯವು ಸೇರಿದೆ. ‘ **ಇದುತಃ || ೪೬೬ ||** ’ ಎಂಬುದರಿಂದ ಧಾತುವಿನ ಅಂತ್ಯಕ್ಕೆ ಇ ಕಾರಾದೇಶವಾಗಿದೆ. ಈ ಮೇರೆಗೆ ‘ ಮಾಡು ದ ಅ ’ ಎಂಬಿವು ಸೇರಲು ‘ ಮಾಡಿದ ’ ಎಂಬ ರೂಪವಾಗುವುದು. ‘ ಅಚ್ ’ ಎಂಬಲ್ಲಿ ಚ ಕಾರವು ನಿರ್ದೇಶಕ್ಕಾಗಿ ಸೇರಿದುದು. ಅ ಕಾರವಷ್ಟೇ ಪ್ರತ್ಯಯವು.

' ತರ್ಪನಂ ' ಎಂಬಲ್ಲ ' ಶಾಕಽಗೋನೇತಬರಃ || ೫೧೨ || ' ಎಂಬುದರಿಂದ ಧಾತುವಿನ ಮುಂದಿನ ' ವ ' ಪ್ರತ್ಯಯದ ವ ಕಾರಕ್ಕೆ ಪ ಕಾರಾದೇಶವೆ ವಿಶೇಷವು. ' ಮಾಡಲ್ಪಟ್ಟನಂ ' ಮೊದಲಾದೆಡೆಗಳಲ್ಲ ಕರ್ಮಾರ್ಥದಲ್ಲಿ ' ಅಚ್ ' ಬಂದಿದೆ. ' ಕೃತಿ ವಾ ||೫೩೧|| ' ಎಂಬುದರಿಂದ 'ಪಡು' ಧಾತುವಿನ ಅನುಪ್ರಯೋಗವೂ ' ತಸ್ಮಿನ್ನೆಡಲಾ ||೫೩೬||' ಎಂಬುದರಿಂದ ' ಅಲ್ ' ಪ್ರತ್ಯಯವೂ ' ಅಚಿ || ೪೪೬ || ' ಎಂಬುದರಿಂದ ' ಪಡು ' ಧಾತುವಿಗೆ ( ಡು ವಿಗೆ) ಟ ಕಾರಾದೇಶವೂ ' ವರ್ಗಪ್ರಥಮಾತ್ಪೂರ್ವಃ || ೫೦೬ || ' ಎಂಬುದರಿಂದ ' ದ ' ಪ್ರತ್ಯಯದ ದ ಕಾರಕ್ಕೆ ಟ ಕಾರಾದೇಶವೂ ಆಗಲು ( ಮಾಡು, ಅಲ್, ಪಡು, ದ, ಅ ) ' ಮಾಡಲ್ಪಟ್ಟ ' ಎಂಬ ರೂಪವಾಗುವುದು.

' ಮಾಡಿದ, ತರ್ಪ, ಮಾಡಲ್ಪಟ್ಟ ' ಮುಂತಾದುವಕ್ಕೆ ' ಅರ್ಥವಲ್ಲಿಂಗಂ || ೮ || ' ಎಂಬುದರಿಂದ ಲಿಂಗಸಂಜ್ಞೆ ಬಂದ ಬಳಿಕ ' ಲಿಂಙ್ಞಾತ್ ಸುಪ್ || ೨೦೩ || ' ಎಂಬುದರಿಂದ ಬೇಕಾದ ನಾಮವಿಭಕ್ತಿ ಪ್ರತ್ಯಯವು ಸೇರುವುದೆಂದು ತಿಳಿಯಬೇಕು.

**ಅವತಾರಿಕೆ ೫೪೪**

' ಅಚ್ ' ಪ್ರತ್ಯಯಕ್ಕೆ ಬರುವ ಆದೇಶಗಳು.

**ಸೂತ್ರ || ಉತೆದುತ್ತೆದುತುಮುತ್ತುಂ ಸತ್ಯಚೋ ವಾ || ೫೪೪ ||**

( ೧. ಉತೆದುತ್ತೆದುತುಮುತ್ತುಂ, ೨. ಸತಿ, ೩. ಅಚಃ, ೪. ವಾ. )

**ವೃತ್ತಿ ||** ಧಾತುವಿಗೆ ಪರವಾದ, ವರ್ತಮಾನಕಾಲಾರ್ಥದಲ್ಲಿ ವಿಧಿಸಲ್ಪಟ್ಟ ಅಚ್-ಪ್ರತ್ಯಯಕ್ಕೆ ' ಉತೆ, ಉತ್ತೆ, ಉತುಂ, ಉತ್ತುಂ ' ಎಂಬೀ ಆದೇಶಗಳು ವಿಕಲ್ಪವಾಗಿ ಆಗುವುವು.

**ಪ್ರಯೋಗ ||** ಮಾಡುತೆ, ನೋಡುತೆ, ಕೂಡುತೆ; ಮಾಡುತ್ತೆ, ನೋಡುತ್ತೆ, ಕೊಡುತ್ತೆ; ಮಾಡುತುಂ, ನೋಡುತುಂ, ಕೂಡುತುಂ; ಮಾಡುತ್ತುಂ, ನೋಡುತ್ತುಂ, ಕೂಡುತ್ತುಂ.

ಈ ಆದೇಶಗಳು ಬಾರದಿದ್ದಾಗ — ಮಾಡಿದಪಂ, ಮಾಡುವಂ; ಕೂಡಿದಪಂ, ಕೂಡುವಂ; ನೋಡಿದಪಂ, ನೋಡುವಂ; ಮಾಡಿದಪನಂ, ಮಾಡುವನಂ; ಕೂಡಿದಪನಂ, ಕೂಡುವನಂ; ನೋಡಿದಪನಂ, ನೋಡುವನಂ.

**ಪದಕೃತ್ಯ ||** ' ವರ್ತಮಾನಕಾಲಾರ್ಥದಲ್ಲಿ ವಿಧಿಸಲ್ಪಟ್ಟ ' ಎಂದು ಹೇಳಿದುದರಿಂದ ಭೂತಕಾಲದಲ್ಲ ' ಅಚ್ ' ಪ್ರತ್ಯಯವಷ್ಟೇ ಸೇರುವುದು. ಉದಾ : ಮಾಡಿದನಂ, ಕೂಡಿದನಂ. ' ಅಚ್ ಪ್ರತ್ಯಯಕ್ಕೆ ' ಎಂದು ಹೇಳಿದುದರಿಂದ ಆಖ್ಯಾತಪ್ರತ್ಯಯಕ್ಕೆ ಈ ಆದೇಶವಿಲ್ಲ. ಉದಾ : ಮಾಡಿದಪಯ್, ಕೂಡಿದಪಯ್.

**ವಿಚಾರ ೫೪೪**

ಪೂರ್ವಸೂತ್ರ ( ೫೪೩ )ದಿಂದ ವಿಧಿಸಿದ ' ಅಚ್ ' ಪ್ರತ್ಯಯವು ಕಾಲವಿಶೇಷವನ್ನು ಹೇಳದಿರುವುದರಿಂದ ಎಲ್ಲ ಕಾಲಗಳಲ್ಲಿ ಬರುವುದೆಂದು ತಿಳಿಯಬೇಕು. ವಿವಕ್ಷೆಯಿಂದ ಅದನ್ನು ವರ್ತಮಾನಕಾಲದಲ್ಲಿ ವಿಧಿಸಿದಾಗ ಅದಕ್ಕೆ ' ಉತೆ ' ಮೊದಲಾದ ನಾಲ್ಕು ಆದೇಶಗಳು ವಿಕಲ್ಪವಾಗಿ ಆಗುವುವು. ಇವು ಬಾರದಿದ್ದಾಗ ' ಅಚ್ ' ಪ್ರತ್ಯಯವು ಪರದಲ್ಲಿರಲು ಧಾತುವಿಗೆ ' ದಪ ' ಪ್ರತ್ಯಯವಾಗಲಿ, 'ವ' ಪ್ರತ್ಯಯವಾಗಲಿ ಸೇರುವುದು. ' ಉತೆ ' ಮೊದಲಾದುವು ಪರದಲ್ಲಿದ್ದಾಗ ದಪ, ವ ಗಳು ಬರುವುದಿಲ್ಲ. ' ಆದೇಶೇ || ೪೫೨ || ' ಎಂಬುದರಿಂದ ಅವು ನಿಷೇಧಿಸಲ್ಪಟ್ಟಿವೆ.

ಸೂತ್ರದಲ್ಲಿ ' ಉತೆತ್, ಉತ್ತೆತ್ ' ಎಂಬಿವುಗಳ ತ ಕಾರವು ಉಚ್ಚಾರಣ ಸೌಕರ್ಯಕ್ಕಾಗಿ ಸೇರಿದೆ; ಅದು ಪ್ರತ್ಯಯಾವಯವವಲ್ಲ. ಈ ಆದೇಶಗಳು ಸಂಸ್ಕೃತದ ಶತೃ ಶಾನಚ್ ಇವುಗಳಿಗೆ ಸಮಾನವಾದಂತಹುವು. [ ಮಾಡುತೆ = ( ಸಂಸ್ಕೃತ ) ಕುರ್ವನ್; ಕೂಡೂತೆ = ಯುಞ್ಜಾನಃ. ]

**ಅವತಾರಿಕೆ ೫೪೫**

ಕರ್ತ್ರರ್ಥದಲ್ಲಿ ಕಾಲಭೇದವಿಲ್ಲದೆ ಸೇರುವ ಬೇರೆ ಪ್ರತ್ಯಯಗಳು.

**ಸೂತ್ರಂ || ಕುಳಿಸ್ತಾಚ್ಛೀಲ್ಯೇ || ೫೪೫ ||**

( ೧. ಕುಳಿಃ, ೨. ತಾಚ್ಛೀಲ್ಯೇ. )

**ವೃತ್ತಿ || ತಾಚ್ಛೀಲ್ಯವು ತೋರುವಾಗ ಧಾತುವಿನ ಮುಂದೆ ' ಕುಳಿ ' ಪ್ರತ್ಯಯವು ಸೇರುವುದು.**

**ಪ್ರಯೋಗ ||** ಮಾಳ್ಪುದು ಶೀಲವಾಗುಳ್ಳಂಗೆ ಮಾಳ್ಕುಳಿ; ಈ ಮೇರೆಗೆ — ಆಳ್ಕುಳಿ, ಪೋರ್ಕುಳಿ, ಸಾಲ್ಕುಳಿ, ಅಡುಕುಳಿ.

**ವಿಚಾರ ೫೪೫**

ಶೀಲವೆಂದರೆ ' ಸ್ವಭಾವ, ಪ್ರಕೃತಿ ' ಎಂದು ಅರ್ಥ. ' ತತ್ ಶೀಲಂ ಅಸ್ಯ — ಅದು ಸ್ವಭಾವವು ಈತನಿಗೆ ತಚ್ಛೀಲ. ( ಕನ್ನಡ ತಚ್ಛೀಲಂ ) ತಚ್ಛೀಲಸ್ಯ ಭಾವಃ ( ತಚ್ಛೀಲತನ ) ತಾಚ್ಛೀಲ್ಯಂ-ಫಲನಿರಪೇಕ್ಷಪ್ರವೃತ್ತಿ ಎಂದರ್ಥ. ಈ ಅರ್ಥವು ತೋರುವಾಗ ' ಕುಳಿ ' ಪ್ರತ್ಯಯವು ಬರುವುದು. ಇಲ್ಲಿ ಕಾಲವಿಶೇಷವಾವುದೂ ತೋರುವುದಿಲ್ಲ. ' ಪೋರ್ಕುಳಿ ' ಎಂದರೆ ಹಿಂದೆ, ಈಗ, ಮುಂದೆ ಬೇಕಾದ ಕಾಲದಲ್ಲಿ ' ಪೋರುವ ಸ್ವಭಾವವುಳ್ಳವ ' ಎಂಬ ಅರ್ಥವು. ಆಳ್ಕುಳಿ-ಕ್ರೀಡನಸ್ವಭಾವದವ; ' ಪ್ರತ್ಯಯೇ || ೬೪ || ' ಎಂಬುದರಿಂದ ಧಾತುವಿನ ಅಂತ್ಯ ಡ ಕಾರಕ್ಕೆ ಟ ಕಾರಾದೇಶವಾಗಿದೆ. ಸಾಲ್ಕುಳಿ-ಋಣಶೀಲ, ಅಡುಕುಳಿ-ಅಡುವ ಸ್ವಭಾವದವ; ಇಲ್ಲಿ '**ಹ್ರಸ್ವಾದೇರ ಸಮಾಸೇ** || ೮೭ || ' ಎಂಬುದರಿಂದ ಟ ಕಾರಾದೇಶವಿಲ್ಲ.

**ಅವತಾರಿಕೆ ೫೪೬**

ಕಾಲಭೇದವಿಲ್ಲದೆ ಕರ್ತ್ರರ್ಥದಲ್ಲಿ ಸೇರುವ ಬೇರೆ ಪ್ರತ್ಯಯಗಳು.

**ಸೂತ್ರಂ || ಇರುಣಃ ಕರ್ಮಣಿ || ೫೪೬ ||**

( ೧. ಇಃ, ೨. ಉಣಃ, ೩. ಕರ್ಮಣಿ. )

**ಅನುವೃತ್ತಿ ||** ೧. ತಾಚ್ಛೀಲ್ಯೇ.

**ವೃತ್ತಿ || ತಾಚ್ಛೀಲ್ಯವು ತೋರುತ್ತಿರಲು ಕರ್ಮವು ಉಪಪದವಾಗಿರಲು ' ಉಣ್ ' ಧಾತುವಿಗೆ ' ಇ ' ಪ್ರತ್ಯಯವು ಸೇರುವುದು.**

**ಪ್ರಯೋಗ ||** ಕಂಪಂ ಉಣ್ಬುದು ಶೀಲಂ ಇದರ್ಕೆ ಕಂಪುಣಿ; ಈ ಮೇರೆಗೆ— ಬಂಡುಣಿ, ಎಲರುಣಿ, ಆಲರುಣಿ, ಅರಲುಣಿ, ಎರಲುಣಿ, ಪಾವುಣಿ.

**ಪದಕೃತ್ಯ ||** ' ಕರ್ಮವು ಉಪಪದವಾಗಿರಲು ' ಎಂದು ಹೇಳಿದುದರಿಂದ ಅಧಿಕರಣ ಪದವು ಉಪಪದವಾಗಿರಲು ಈ ಕಾರ್ಯವಾಗುವುದಿಲ್ಲ. ಉದಾ : ಪರಿಯಣದೊಳುಣ್ಬಂ. ' ಉಣ್ ಧಾತುವಿಗೆ ' ಎಂದು ಹೇಳಿದುದರಿಂದ ' ಆಲರಂ ಕೊಯ್ವಂ ' ಎಂಬಲ್ಲಿ ಈ ಕಾರ್ಯವಾಗುವುದಿಲ್ಲ.

**ವಿಚಾರ ೫೪೬**

ಸೂತ್ರದಲ್ಲಿರುವ ' ಕರ್ಮಣಿ ' ಎಂಬುದಕ್ಕೆ ಕರ್ಮಾರ್ಥದಲ್ಲಿ (ಪ್ರತ್ಯಯ ಬರುವುದು ) ಎಂಬ ಅರ್ಥವಲ್ಲ; ಕರ್ಮವು ಉಪಪದವಾಗಿರಲು ಎಂದು ಅರ್ಥ. ' ಕಂಪುಣಿ ' ಮೊದಲಾದೆಡೆಗಳಲ್ಲಿ ' ಉಣ್ಬುದು ಶೀಲಂ ಈತಂಗೆ ' ಎಂಬ ಅರ್ಥವನ್ನು ಹೇಳಿದುದರಿಂದಲೇ ಪ್ರತ್ಯಯಕ್ಕೆ ಕರ್ತ್ರರ್ಥವೆಂಬುದು ಸ್ಪಷ್ಟವಾಗುತ್ತಿದೆ.

ಇನ್ನು ಕರ್ಮವು ಉಪಪದವಾಗುವುದು ಹೇಗೆ? ಕರ್ಮವು ಅರ್ಥರೂಪವಾಗಿರುವುದಲ್ಲದೆ ಶಬ್ದರೂಪವಾಗಿರುವುದಿಲ್ಲ; ಎಂದಬಳಿಕ ಅದು ಪದವೆನಿಸದಿರುವುದರಿಂದ ಉಪಪದವಾಗುವುದು ಹೇಗೆ ಎಂದು ಶಂಕಿಸಿದರೆ ಸಮಾಧಾನವು— ಇಲ್ಲಿ ಕರ್ಮವೆಂದರೆ ಕರ್ಮಪದವೆಂದು ತಿಳಿಯಬೇಕು. ' ಕರ್ಮಣಿ ' ಎಂದರೆ ಕರ್ಮತ್ವವನ್ನು ಹೇಳುವ ವಿಭಕ್ತಿಪ್ರತ್ಯಯವು ಸೇರಿದ ಶಬ್ದವು ಉಪಪದವಾಗಿರಲು ಎಂದು ಅರ್ಥ. ಉಪಪದವೆಂದರೆ ವ್ಯವಧಾನವಿಲ್ಲದೆ ಧಾತುವಿನ ಪೂರ್ವದಲ್ಲಿ ಪ್ರಯೋಗಿಸಿದ ಪದವು. ಕರ್ಮಪದಕ್ಕೆ ಪರವಾದ ' ಉಣ್ ' ಧಾತುವಿಗೆ ತಾಚ್ಛೀಲ್ಯವು ತೋರುವಾಗ ' ಇ ' ಪ್ರತ್ಯಯವು ಬರುವುದೆಂದು ಅರ್ಥವು.

ಈ ಸೂತ್ರವನ್ನು ' ಇರುಣಃ ಕರ್ಮಣಃ ' ಎಂದು ರಚಿಸಬಹುದಾಗಿತ್ತಲ್ಲವೇ ? ಸೂತ್ರಾರ್ಥವು-ಕರ್ಮಪದಕ್ಕೆ ಪರವಾದ ' ಉಣ್ ' ಧಾತುವಿಗೆ ' ಇ ' ಪ್ರತ್ಯಯವು - ಎಂದಾಗುತ್ತಿತ್ತು. ಅಹುದು, ಹಾಗೆ ರಚಿಸಬಹುದಾಗಿತ್ತು. ಈಗಿನಂತೆ ' ಇರುಣಃ ಕರ್ಮಣಿ ' ಎಂದು ರಚಿಸಿದರೂ ದೋಷವಿಲ್ಲ; ಹಾಗೆಯೇ ಹೇಳಬೇಕೆಂದು ಎಲ್ಲಿದೆ ? ಇದಲ್ಲದೆ ' ಕರ್ಮಣಿ ' ಎಂದು ಹೇಳಿದುದರಲ್ಲಿ ಮಾತ್ರಾಲಾಘವವೂ ಉಂಟು. ಪ್ರಾಚೀನ ವ್ಯಾಕರಣಕಾರರು ಕೆಲವೆಡೆ ದ್ವಿವಿಧವಾಗಿ ಹೇಳಿರುವುದುಂಟು: ' ಕುಂಭಕಾರ ' ಎಂಬ ರೂಪವನ್ನು ಸಿದ್ಧಿಸುವಲ್ಲಿ **' ಕರ್ಮಣೋಽಣ್** (ಶಾ. ೪. ೩. ೧೦೯.) ' ಎಂದು ಒಬ್ಬರು, **' ಕರ್ಮಣ್ಯಣ್** (ಪಾ. ೩. ೨. ೧.) ಎಂದು ಒಬ್ಬರು ಹೇಳಿರುವರು.

ಉದಾಹರಣದಲ್ಲಿ ' ಕಂಪಸುಣ್ಬುದು ಶೀಲಮಿದರ್ಕೆ ' ಎಂಬುದು ವೃತ್ತ್ಯರ್ಥವನ್ನು ತೋರಿಸುವುದಕ್ಕಾಗಿ ಹೇಳಿದುದು. ಕಂಪು-ಸುವಾಸನೆ. 'ಕಂಪಂ' ಎಂಬುದು ಅದರ ದ್ವಿತೀಯಾಂತ ರೂಪವು. ಅದರ ಮುಂದೆ ' ಉಣ್ ' ಎಂಬುದು ಧಾತುವು; ಬಳಿಕ ' ಇ ' ಪ್ರತ್ಯಯವು. ' ಕಂಪಂ, ಉಣ್, ಇ ' ಎಂದು ಇರಲು ' **ವೃತ್ತೇಃ || ೨೪೮ ||** ' ಎಂಬ ಸೂತ್ರದಿಂದ ' ಕಂಪಂ ' ಎಂಬುದರ ವಿಭಕ್ತಿಪ್ರತ್ಯಯ ಲೋಪವು. ' **ಉಬನಾಮಹಾನಾ || ೩೬ ||** ' ಎಂಬುದರಿಂದ ' ಕಂಪಂ ' ಎಂಬುದರ ಉ ಕಾರದ ಲೋಪವು. ಸಂಧಿಯಿಂದ ' ಕಂಪುಣಿ ' ಎಂಬ ರೂಪವಾಗುವುದು. ಇಲ್ಲಿ ' ಉಣ್ ' ಎಂಬುದರ ಣ ಕಾರಕ್ಕೆ ದ್ವಿತ್ವವು ಬರುವುದಿಲ್ಲವೆಂದು ತಿಳಿಯಬೇಕು. ಏಕೆಂದರೆ ' **ಕೃತಿ || ೬೨ ||** ' ಎಂಬುದರಿಂದ ದ್ವಿತ್ವವು ಇಲ್ಲಿ ನಿಷೇಧಿಸಲ್ಪಟ್ಟಿದೆ. [ ( ಕಂಪುಣಿ-ಗಂಧಲಿಟ್ ) ಎಲರುಣಿ, ಎರಲುಣಿ—ವಾಯುಭುಕ್-ಸರ್ಪಃ, ಅಲರುಣಿ, ಅರಲುಣಿ—ಪುಷ್ಪಲಿಟ್ ಪಾವುಣಿ— ಸರ್ಪಭುಕ್, ನವಿಲು. ]

ಇನ್ನು ಇಲ್ಲಿ ತಾಚ್ಛೀಲ್ಯಾರ್ಥದಲ್ಲಿ ' ಇ ' ಪ್ರತ್ಯಯವಷ್ಟೇ ? ತಾಚ್ಛೀಲ್ಯವೆಂದರೆ ಫಲನಿರಪೇಕ್ಷವೃತ್ತಿಯು. ಉದಾಹರಣಗಳಲ್ಲಿ ' ಕಂಪುಣಿ (ಭ್ರಮರ) ' ಮೊದಲಾದುವುಗಳ ವೃತ್ತಿಯು

ಫಲನಿರಪೇಕ್ಷವಾದುದಲ್ಲ; ಅಪೇಕ್ಷೆಯಿಂದಲೇ ಅವು 'ಗಂಧ' ಮೊದಲಾದುವನ್ನು 'ಉಣ್ಣುವು ದಿಲ್ಲವೇ' ಎಂದು ಆಶಂಕಿಸಬಹುದು. ಆದರೆ ಅವು ತಮ್ಮ ತಮ್ಮ ಜಾತಿಸ್ವಭಾವಾನುಸಾರವಾಗಿ ಆ ಆ ವಸ್ತುಗಳಲ್ಲಿರುವ ರಾಗದಿಂದಾಗಲಿ, ದ್ವೇಷದಿಂದಾಗಲಿ ಅವನ್ನು ಉಣ್ಣುವುವಲ್ಲದೆ ಅಲ್ಲಿ ಫಲವನ್ನೇನೂ ಅಪೇಕ್ಷಿಸುವುದಿಲ್ಲವಾದುದರಿಂದ ಉದಾಹರಣಗಳಲ್ಲಿ ತಾಚ್ಛೀಲ್ಯವು ಕೂಡುವು ದೆಂದು ತಿಳಿಯಬೇಕು.

**ಅವತಾರಿಕೆ ೫೪೭**

'ಇ' ಪ್ರತ್ಯಯವು ಸೇರುವ ಬೇರೆ ಸ್ಥಾನವನ್ನು ಹೇಳುವನು.

**ಸೂತ್ರಂ || ಕೊಲ ಉದ್ಧ್ರಸ್ವಶ್ಚ || ೫೪೭ ||**

(೧. ಕೊಲಃ, ೨. ಉತ್, ೩. ಹ್ರಸ್ವಃ, ೪. ಚ.)

**ಅನುವೃತ್ತಿ** || ೧. ಕರ್ಮಣಿ, ೨. ಇಃ.

**ವೃತ್ತಿ** || **ಕರ್ಮವು ಉಪಪದವಾಗಿರಲು 'ಕೊಲ್' ಧಾತುವಿಗೆ 'ಇ' ಪ್ರತ್ಯಯವು ಸೇರುವುದು. ಆಗ 'ಕೊಲ್' ಧಾತುವಿಗೆ (ಕೊಲ್ ಧಾತುವಿನ ಸ್ವರಕ್ಕೆ) ಉಕಾರಾದೇಶವಾಗುವುದು.**

**ಪ್ರಯೋಗ** || ಮೀನಂ ಕೊಲ್ವಂ ಮೀಂಗುಲಿ; ಈ ಮೇರೆಗೆ ಪಾವುಗುಲಿ, ಇಲಿಗುಲಿ, ಆನೆಗುಲಿ.

**ಪದಕೃತ್ಯ** || 'ಹ್ರಸ್ವಃ' ಎಂದು ಸೂತ್ರದಲ್ಲಿ ಹೇಳಿದುದು, ಉ ಕಾರವು 'ಕೊಲ್' ಧಾತುವಿನ ಒ ಕಾರಕ್ಕೆ ಆದೇಶವಾಗುವುದೇ ಹೊರತು ಅಂತ್ಯಕ್ಕೆ ಆದೇಶವಲ್ಲ ಎಂಬುದನ್ನು ತೋರ್ಪಡಿಸುವುದಕ್ಕಾಗಿ [ ಮೀಂಗುಲಿ — ಬಲೆಗಾರ, ಇಲ್ಲವೆ ಮೀನುಗಳನ್ನು ಹಿಡಿವ ಹಕ್ಕಿ. ಪಾವುಗುಲಿ — ನವಿಲು ಇಲ್ಲವೆ ಮುಂಗುಲಿ; ಇಲಿಗುಲಿ — ಬೆಕ್ಕು; ಆನೆಗುಲಿ — ಸಿಂಹ. ]

**ಅವತಾರಿಕೆ ೫೪೮**

ಕರ್ತ್ರರ್ಥದಲ್ಲಿ ಕಾಲಭೇದವಿಲ್ಲದೆ ಸೇರುವ ಬೇರೆ ಪ್ರತ್ಯಯಗಳು.

**ಸೂತ್ರಂ || ಕುಟ್ಟೋರಿಗೋದುಲುಪ್ ಚ || ೫೪೮ ||**

(೧. ಕುಟ್ಟೋಃ, ೨. ಇಗಃ, ೩. ದುಲುಪ್, ೪. ಚ.)

**ಅನುವೃತ್ತಿ** || ೧. ಕರ್ಮಣಿ.

**ವೃತ್ತಿ** || **ಕರ್ಮವು ಉಪಪದವಾಗಿರಲು 'ಕುಟ್ಟು' ಧಾತುವಿಗೆ 'ಇಗ' ಪ್ರತ್ಯಯವು ಸೇರುವುದು; ಮತ್ತು 'ಕುಟ್ಟು' ಧಾತುವಿನ 'ದು' ಲೋಪವಾಗುವುದು.**

**ಪ್ರಯೋಗ** || ಕಲ್ಲಂ ಕುಟ್ಟುವಂ ಕಲ್ಕುಟಿಗಂ; ಈ ಮೇರೆಗೆ ಮರಕುಟಿಗಂ, ದಾರಿಗುಟಿಗಂ, ಕಯ್ಗುಟಿಗಂ.

**ವಿಚಾರ ೫೪೮**

(ರೂಪಸಿದ್ಧಿ) 'ಕಲ್ಲಂ, ಕುಟ್ಟು, ಇಗ' ಎಂದು ಇರಲು '**ವೃತ್ತೇಃ || ೨೪೬ ||**' ಎಂಬುದ ರಿಂದ ಉಪಪದದ ದ್ವಿತೀಯೆಯ ಲೋಪ. ಈ ಸೂತ್ರದಿಂದ ಧಾತುವಿನ 'ದು' ಲೋಪವಾಗಲು 'ಕುಟ್' ಎಂಬ ರೂಪವಾಗುವುದು. 'ಕಲ್ ಕುಟ್ ಇಗ' ಇವು ಸೇರಲು 'ಕಲ್ಕುಟಿಗ' ಎಂಬ ರೂಪವಾಗುವುದು. ಮರಕುಟಿಗ — ಒಂದು ತರದ ಹಕ್ಕಿ ಇಲ್ಲವೆ ಬಡಗಿ. ದಾರಿಗುಟಿಗ — ಪಾರಿಪಂಥಿಕ (ದಾರಿ ಬಡಿಯುವ ಕಳ್ಳ); ಕಯ್ಗುಟಿಗ — ಕೈಯಿಂದ ಹೊಡೆಯುವವ.

**ಅವತಾರಿಕೆ ೫೪೯**

ಭಾವಾರ್ಥಕ ಕೃತ್-ಪ್ರತ್ಯಯಗಳನ್ನು ಹೇಳಲಾರಂಭಿಸುವನು; ಬಂದು ಲುಪ್ತವಾಗುವ 'ಅತ್' ಪ್ರತ್ಯಯವನ್ನು ಮೊದಲು ಹೇಳುವನು.

**ಸೂತ್ರಂ || ಅದ್ಭಾವೇ || ೫೪೯ ||**

( ೧. ಅತ್, ೨. ಭಾವೇ. )

**ವೃತ್ತಿ ||** **'ಭಾವ'ವೆಂದರೆ ಶುದ್ಧವಾದ ಧಾತ್ವರ್ಥವು. ಆ ಅರ್ಥದಲ್ಲಿ ಧಾತುವಿನ ಮುಂದೆ 'ಅತ್' ( ಅ ) ಪ್ರತ್ಯಯವು ಸೇರುವುದು.**

**ಪ್ರಯೋಗ ||** ಪೂಗಳ್, ಓದುಗಳ್, ಮೋದುಗಳ್, ತಿರ್ದುಗಳ್, ನೋಡುಗಳ್, ತೇಗುಗಳ್, ಕೇಗುಗಳ್, ಸಾಗುಗಳ್.

**ವಿಚಾರ ೫೪೯**

'ಭಾವ' ಶಬ್ದವು ಅನೇಕಾರ್ಥಕವಾಗಿದ್ದರೂ ಇಲ್ಲಿ ವಿವಕ್ಷಿತವಾದ ಅರ್ಥವನ್ನು ಹೇಳುವನು — 'ಭಾವಃ ಶುದ್ಧೋ ಧಾತ್ವರ್ಥಃ' ಎಂಬುದಾಗಿ. ವ್ಯಾಕರಣಶಾಸ್ತ್ರದಲ್ಲಿ ಭಾವವು ದ್ವಿವಿಧವಾಗಿದೆ. ಒಂದು — ಅಭಿಧಾನಪ್ರತ್ಯಯ ಹೇತುರೂಪವಾದುದು— ( ನಾಮಗಳ ಮೇಲೆ ಸೇರುವ ಪ್ರತ್ಯಯಕ್ಕೆ ಕಾರಣವಾದ ಗುಣಧರ್ಮಸ್ವಭಾವರೂಪವಾದುದು. ) ಇನ್ನೊಂದು ಧಾತ್ವರ್ಥರೂಪವಾದುದು. ಒಂದನೆಯದು ತದ್ಧಿತವಾಚ್ಯವಾದುದು; ಎರಡನೆಯದು ಸಂಸ್ಕೃತದಲ್ಲಿ ಆಖ್ಯಾತಪ್ರತ್ಯಯವಾಚ್ಯವಾಗಿಯೂ ಕೃದ್ವಾಚ್ಯವಾಗಿಯೂ ಇರುವುದು. ಆದರೆ ಕನ್ನಡದಲ್ಲಿ ಭಾವವು ಕೃದ್ವಾಚ್ಯವೇ ಹೊರತು ಆಖ್ಯಾತಪ್ರತ್ಯಯವಾಚ್ಯವಲ್ಲವೆಂಬುದು ಹಿಂದೆ ನಿರೂಪಿಸಲ್ಪಟ್ಟಿದೆ. ಈಗ ಇಲ್ಲಿ ಭಾವವು ಕೃದ್ವಾಚ್ಯವಾಗುವುದನ್ನು ತೋರಿಸುವುದಕ್ಕಾಗಿ ಭಾವವಾಚಕ ಪ್ರತ್ಯಯಗಳನ್ನು ಹೇಳುವನು. ಮೊದಲು ಧಾತುಸಾಮಾನ್ಯದ ಮುಂದೆ 'ಅತ್' ಪ್ರತ್ಯಯವನ್ನು ವಿಧಿಸುತ್ತಾನೆ. 'ಭಾವಃ ಶುದ್ಧೋ ಧಾತ್ವರ್ಥಃ' ಎಂಬುದು 'ಭಾವ'ದ ವ್ಯಾಖ್ಯೆಯು. ಇಲ್ಲ ವಿಚಾರವೇನಂದರೆ ಧಾತ್ವರ್ಥವು 'ಶುದ್ಧ, ಶಬಲ' ಎಂದು ದ್ವಿವಿಧವಾಗಿದೆ; ಪ್ರತ್ಯಯದಿಂದ ಹೇಳಲ್ಪಡದಿದ್ದುದು ( ಅಭಿಹಿತರೂಪ-ಉಪಾಧಿ ಇಲ್ಲದುದರಿಂದ ) ಶುದ್ಧವು; ಪ್ರತ್ಯಯದಿಂದ ಹೇಳಲ್ಪಟ್ಟುದು (ಅಭಿಹಿತತ್ವರೂಪ-ಉಪಾಧಿಯುಕ್ತವಾದುದರಿಂದ ) ಶಬಲವು. ಪ್ರತ್ಯಯವಾಚ್ಯವಾದ ಶಬಲ ಧಾತ್ವರ್ಥದಲ್ಲಿ ಮತ್ತೆ ಪ್ರತ್ಯಯವು ಸೇರುವುದಿಲ್ಲ. ಈ ಸೂತ್ರದಲ್ಲಿ ಪ್ರತ್ಯಯದಿಂದ ಹೇಳಲ್ಪಡದಿರುವ ಶುದ್ಧ ಧಾತ್ವರ್ಥವನ್ನು ಹೇಳುವುದಕ್ಕಾಗಿಯೇ ಭಾವಶಬ್ದ ಪ್ರಯೋಗವಿದೆ. ಆ ಅರ್ಥದಲ್ಲಿಯೇ ಈ ಸೂತ್ರದಲ್ಲಿ ಹೇಳಿದ ಪ್ರತ್ಯಯವು ಬರುವುದು.

ಉದಾಹರಣಗಳಲ್ಲಿ — 'ಪೂಗಳ್' ಎಂಬಲ್ಲಿ 'ಪೂ' ಎಂಬುದು 'ಹೂವಾಗು' ಎಂಬರ್ಥದ ಧಾತುವು; 'ಮಲ್ಲಿಗೆ ಪೂತುದು, ಮಾವು ಪೂತುದು' ಮುಂತಾದ ಪ್ರಯೋಗಗಳುಂಟು. ಇಲ್ಲಿ 'ಹೂವು' ಎಂಬ ಅರ್ಥವನ್ನು ಹೇಳುವ 'ಪೂ' ಎಂಬುದಲ್ಲ. ಅದು ದ್ರವ್ಯವಾಚಿಯಾದುದರಿಂದ ಧಾತುವಲ್ಲ. ಧಾತುವಿನ ಮುಂದೆ ಸೇರಿದ ಭಾವಪ್ರತ್ಯಯವು ಶುದ್ಧಧಾತ್ವರ್ಥವನ್ನು ಶಬಲವನ್ನಾಗಿ ಮಾಡಿ ತೋರಿಸುವುದು. 'ಸ್ವೋಪಹಿತತ್ವ' ಎಂಬ ಧರ್ಮವು ಆ ಶುದ್ಧ ಧಾತ್ವರ್ಥವನ್ನು ಆಕ್ರಮಿಸುವುದು. ಹೇಗೆಂದರೆ ಸ್ಫಟಿಕವು ಶುದ್ಧವಾಗಿ ( ಧವಲವಾಗಿ )ಇರುವು

ದಷ್ಟೇ ? ಅವಕ್ಕೆ ತಾಗಿಸಿ ಇಟ್ಟಿದ್ದ ದಾಸಾಳದ ಹೂ ಮುಂತಾದ ಉಪಾಧಿಯು ಆ ಸ್ಫಟಿಕವನ್ನು ರಕ್ತವರ್ಣವುಳ್ಳದನ್ನಾಗಿ ತೋರ್ಪಡಿಸುವುದು. ಆಗ ಸ್ಫಟಿಕವು ರಕ್ತವರ್ಣದ್ದೇ ಹೊರತು ಶುದ್ಧವಲ್ಲ. ಧಾತ್ವರ್ಥದಶೆಯಲ್ಲಿ ಶುದ್ಧವಾದ ಭಾವವು ಕೃದ್ಭಾವದಶೆಯಲ್ಲಿ ಶಬಲವಾಗುವುದು. ಆದುದರಿಂದ ಕೃದ್ಭಾವಕ್ಕೆ ದ್ರವ್ಯದಂತೆ ಸಂಖ್ಯೆಯ ಸಂಬಂಧವುಂಟಾಗುವುದು. ಉದಾ : ತೇಗು, ತೇಗುಗಳ್; ಕೇಗು, ಕೇಗುಗಳ್ ಮುಂತಾದುವು. ಸಂಸ್ಕೃತದಲ್ಲಿಯೂ ' ಪಾಕಃ ಪಾಕೌ ಪಾಕಾಃ ' ಎಂಬುದಾಗಿ ಏಕತ್ವದ್ವಿತ್ವಬಹುತ್ವಗಳು ಬರುವುವು. ಈ ಅರ್ಥದಲ್ಲಿ 'ಕೃದಭಿಹಿತೋ ಭಾವೋ ದ್ರವ್ಯವದ್ಭವತಿ' ಎಂಬ ವಚನವಿದೆ. ' ತಿಙ್ಭಾವಂ ತತ್ತ್ವಯ್ಯಾಹ ದ್ರವ್ಯವದ್ಭಾವಮಾಹ ಕೃತ್ ' ಎಂಬ ವಚನವೂ ಉಂಟು.

ಸಂಸ್ಕೃತದಲ್ಲಿ ಭಾವಾರ್ಥಕ ಕೃತ್-ಪ್ರತ್ಯಯಾಂತಗಳಾದ ಪಾಕ, ಪಚನ, ಪಕ್ತಿ ಮುಂತಾದುವು ಹೇಗೋ ಹಾಗೆ ಕನ್ನಡದಲ್ಲಿ ' ಓಪು, ಕಾಪು, ಮೇಪು ' ಮೊದಲಾದುವೂ ಧಾತುಗಳಲ್ಲ. ಏಕೆಂದರೆ ಇವು ಕ್ರಿಯೆಯನ್ನು ಹೇಳಿದರೂ ಸಿದ್ಧಾವಸ್ಥೆಯ ಕ್ರಿಯೆಯನ್ನು ಹೇಳುವುವು. ಧಾತುಗಳು ಸಾಧ್ಯಾವಸ್ಥೆಯ ಕ್ರಿಯೆಯನ್ನು ಹೇಳುವುವು. ಸಂಸ್ಕೃತದಲ್ಲಿ ' ಪಾಕಃ ಪಾಕಂ ಪಾಕೇನ ' ಮೊದಲಾದ ನಾಮಪದಗಳುಂಟಾಗುವಂತೆ ಕನ್ನಡದಲ್ಲಿಯೂ ' ಪೂಗಳ್ ( ಹೂವಾಗುವಿಕೆಗಳು ), ಪೂಗಳಂ ' ಮುಂತಾದ ನಾಮಪದಗಳಾಗುವುವು. ಉಳಿದ ಉದಾಹರಣೆಗಳಲ್ಲಿಯೂ ಹೀಗೆಯೇ ತಿಳಿದುಕೊಳ್ಳಬೇಕು.

**ಅವತಾರಿಕೆ ೫೫೦**

ಭಾವಾರ್ಥಕ ' ಅತ್ ' ಪ್ರತ್ಯಯವು ಬಂದಾಗ ಧಾತುವಿಶೇಷಕ್ಕೆ ಕಾರ್ಯವಿಶೇಷವನ್ನು ಹೇಳುತ್ತಾನೆ.

**ಸೂತ್ರಂ || ಕಿಡೋರೇದ್ದೀರ್ಘಶ್ಚ || ೫೫೦ ||**

( ೧. ಕಿಡೋಃ, ೨. ಏತ್, ೩. ದೀರ್ಘಃ, ೪. ಚ. )

**ಅನುವೃತ್ತಿ** || ೧. ಅತ್, ೨. ಭಾವೇ.

**ವೃತ್ತಿ** || ' ಕಿಡು ' ಧಾತುವಿಗೆ ಭಾವಾರ್ಥದಲ್ಲಿ ' ಅತ್ ' ಪ್ರತ್ಯಯವು ಬರುವುದು. ಮತ್ತು ' ಕಿಡು ' ಧಾತುವಿಗೆ ( ಧಾತುವಿನ ಇ ಕಾರಕ್ಕೆ ) ಏಕಾರಾದೇಶವಾಗುವುದು.

**ಪ್ರಯೋಗ** || ಕೇಡು, ಕೇಡುಗಳ್.

**ಪದಕೃತ್ಯ** || ' ಕಿಡು ಧಾತುವಿಗೆ ' ಎಂದು ಹೇಳಿದುದರಿಂದ ' ನುಡಿ, ಜಡಿ ' ಮೊದಲಾದುವಕ್ಕೆ ಏ ಕಾರಾದೇಶವಿಲ್ಲ. ಉದಾ : ನುಡಿಗಳ್, ಜಡಿಗಳ್. ಸೂತ್ರದಲ್ಲಿ ' ದೀರ್ಘಃ ' ಎಂದು ಹೇಳಿದುದು ಧಾತುವಿನ ಇ ಕಾರಕ್ಕೇ ಆದೇಶವೆಂದು ತೋರಿಸುವುದಕ್ಕಾಗಿ.

**ವಿಚಾರ ೫೫೦**

ಈ ಸೂತ್ರದಲ್ಲಿ ಹೇಳಿದ ಏ ಕಾರಾದೇಶವು ಧಾತುವಿನ ಅಂತ್ಯಕ್ಕೆ ಏಕೆ ಆಗಬಾರದು ? ' ದೀರ್ಘಃ ' ಎಂಬ ಶಬ್ದವನ್ನು ಹೇಳಿದುದರಿಂದ ಅಂತ್ಯಕ್ಕೆ ಆಗುವುದಿಲ್ಲವೆನ್ನಬೇಕಷ್ಟೇ ? ಆದರೆ ಹ್ರಸ್ವಾದಿ ಶಬ್ದಗಳನ್ನುಚ್ಚರಿಸಿ ಮಾಡಿದ ಹ್ರಸ್ವಾದಿ ವಿಧಾನಗಳು ಸ್ವರಕ್ಕೇ ಆಗುವುವೆಂಬುದನ್ನೂ ವ್ಯಂಜನಕ್ಕೆ ಸಂಬಂಧಿಸುವುದಿಲ್ಲವೆಂಬುದನ್ನೂ ಮಾತ್ರ ತೋರಿಸುವುವು. ಆದುದರಿಂದ ಇಲ್ಲಿ

ಧಾತುವಿನ ಅಂತ್ಯದಲ್ಲಿ ಸ್ವರವು ಇರುವುದರಿಂದ ಇಲ್ಲಿ ಹೇಳಿದ ಏ ಕಾರಾದೇಶವು ಅಂತ್ಯಸ್ವರಕ್ಕೆ ಏಕೆ ಆಗಬಾರದೆಂದು ಶಂಕಿಸಬಹುದು. ಹಾಗಾದರೆ ದೀರ್ಘಶಬ್ದವನ್ನು ಸೂತ್ರದಲ್ಲಿ ಸೇರಿಸಿದುದು ವ್ಯರ್ಥವಾಗುವುದು. ಅಂತ್ಯಕ್ಕೇ ಆದೇಶವಾಗುವುದಿದ್ದರೆ ದೀರ್ಘಶಬ್ದವು ಏತಕ್ಕೆ ? ' ಏತ್ ' ಎಂಬುದಿಷ್ಟೇ ಸಾಲದೇ ? ಆದುದರಿಂದ ' ಕಿಡು ' ಧಾತುವಿನ ಇ ಕಾರಕ್ಕೇ ಈ ಆದೇಶವೆಂಬುದನ್ನು ತೋರಿಸುವುದಕ್ಕಾಗಿ ಇಲ್ಲಿ ' ದೀರ್ಘಃ ' ಎಂದು ಹೇಳಿದೆಯೆಂದು ವೃತ್ತಿಯಲ್ಲಿ ಸ್ಪಷ್ಟಪಡಿಸಿದನು.

**ಅವತಾರಿಕೆ ೫೫೧**

' ಅತ್ ' ಪ್ರತ್ಯಯವು ಸೇರಿದಾಗ ' ಕುಡು, ತುಡು ' ಧಾತುಗಳ ಕಾರ್ಯವಿಶೇಷವು.

**ಸೂತ್ರ ॥ ಓತ್ ಕುಡುತುಡೋಃ ॥ ೫೫೧ ॥**

( ೧. ಓತ್, ೨. ಕುಡುತುಡೋಃ. )

**ಅನುವೃತ್ತಿ** ॥ ೧. ಅತ್, ೨. ಭಾವೇ, ೩. ದೀರ್ಘಃ.

**ವೃತ್ತಿ ॥ ' ಕುಡು ತುಡು ' ಧಾತುಗಳಿಗೆ ಪರವಾಗಿ ಭಾವಾರ್ಥದಲ್ಲಿ ' ಅತ್ ' ಪ್ರತ್ಯಯವು ಬರುವುದು. ಮತ್ತು ಅವುಗಳಿಗೆ ( ಅವುಗಳ ಪ್ರಥಮ-ಉಕಾರಕ್ಕೆ ) ದೀರ್ಘ ಓ ಕಾರವು ಆದೇಶವಾಗುವುದು.**

**ಪ್ರಯೋಗ** ॥ ಕೋಡು, ಕೋಡುಗಳ್; ತೋಡು, ತೋಡುಗಳ್.

**ಪದಕೃತ್ಯ** ॥ ' ದೀರ್ಘಃ ' ಎಂಬುದರ ಪ್ರಯೋಜನವು ಪೂರ್ವಸೂತ್ರದಲ್ಲಿ ಹೇಳಿದಂತೆಯೇ ಇಲ್ಲಿಯೂ.

**ವಿಚಾರ ೫೫೧**

ಈ ವ್ಯಾಕರಣಶಾಸ್ತ್ರದಲ್ಲಿ ಕೆಲವೆಡೆಯಲ್ಲಿ ಇ ಕಾರಕ್ಕೆ ದೀರ್ಘೈಕಾರವೂ ಹ್ರಸ್ವೈಕಾರವೂ ಉ ಕಾರಕ್ಕೆ ಅಂತಹ ಓ ಕಾರವೂ ವಿಧಿಸಲ್ಪಡುವುವು. ಇ ಉ ಕಾರಗಳಿಗೆ ಬರುವ ಹ್ರಸ್ವ-ದೀರ್ಘ, ಏ ಓ ಕಾರಗಳಿಗೆ ಗುಣ-ವೃದ್ಧಿಗಳೆಂದು ಸಂಜ್ಞೆಯನ್ನೂ ಸ್ಥಾನಿನಿಯಮವನ್ನೂ ಮಾಡಿ ಎಲ್ಲಿ ಗುಣವೃದ್ಧಿಗಳನ್ನು ಮಾಡುವದಿದೆಯೋ ಅಲ್ಲಿ ವಿಧೇಯದಲ್ಲಿ ಅಸಾಧಾರಣವಾದ ಯಾವುದೊಂದು ಅಕ್ಷರವನ್ನು ' ಇತ್ ' ಸೇರಿಸಿ ಅಂತಹ ವಿಧೇಯವು ಪರದಲ್ಲಿರುವಾಗ ಗುಣವೃದ್ಧಿಗಳಾಗುವುವೆಂದು ಸಂಸ್ಕೃತ ವ್ಯಾಕರಣಗಳಂತೆ ಹೇಳಬಹುದಾಗಿದ್ದಿತಲ್ಲವೇ ? ಸಂಸ್ಕೃತ ವ್ಯಾಕರಣದಲ್ಲಿ ಈ ಮಾರ್ಗವು ಕಾಣಬರುವುದು. ಉದಾ : ' **ವೃದ್ಧಿರಾದೈಚ್ ( ಪಾ. ೧. ೧. ೧. ), ಅದೇಙ್ ಗುಣಃ (ಪಾ. ೧. ೧. ೨.), ಇಕೋ ಗುಣವೃದ್ಧೀ ( ಪಾ. ೧. ೧. ೩. )**' ಮುಂತಾದುವು. ಈ ರೀತಿಯಾಗಿ ಇಲ್ಲಿಯೂ ಹೇಳದೆ ಹ್ರಸ್ವಾದಿ ಶಬ್ದಗಳಿಂದ ವಿಧಾನವೇಕೆ ? ಎಂದು ಶಂಕಿಸಬಹುದು. ಅಹುದು, ಅದೊಂದು ಮಾರ್ಗವೇ ಸರಿ. ಆದರೆ ಅದೇ ಮಾರ್ಗವನ್ನು ಎಲ್ಲರೂ ಹಿಡಿಯಬೇಕೆಂಬ ನಿಯಮವೆಲ್ಲಿದೆ ? ಬೇರೆ ಮಾರ್ಗಗಳೂ ಉಂಟು. ಪ್ರಾಪ್ಯವು ಒಂದೇ ಇದ್ದರೂ ಮಾರ್ಗಗಳು ಹಲವು ಇರುವುದು ಲೋಕದಲ್ಲಿ ಕಾಣಬರುವದಲ್ಲವೇ ?

ಹಾಗಾದರೆ ಪೂರ್ವಮಾರ್ಗವನ್ನು ಬಿಟ್ಟು ಹೊಸಮಾರ್ಗವನ್ನನುಸರಿಸುವುದರಲ್ಲಿ ಒಂದು ಪ್ರಯೋಜನವಿರಬೇಕಲ್ಲವೇ ? ಅನೇಕ ಸಾಧನಗಳಿಂದ ಒಂದು ಪ್ರಯೋಜನವನ್ನು ಸಾಧಿಸುವು

ದಿರುವಾಗ ಒಂದು ವಿಶಿಷ್ಟ ಸಾಧನವನ್ನೇ ಉಪಯೋಗಿಸಿಕೊಳ್ಳುವಲ್ಲಿ ಉಪಯೋಗಿಸಿಕೊಳ್ಳುವವನ ಇಚ್ಛೆಯೇ (ವಿವಕ್ಷೆಯೇ) ಕಾರಣವೆಂದು ಹೇಳಬೇಕಲ್ಲದೆ ಅಲ್ಲ ಅದಕ್ಕೆ ಬೇರೆ ಕಾರಣಗಳನ್ನು ಹುಡುಕುವುದು ಉಚಿತವಾಗಲಾರದು. ಇದಲ್ಲದೆ ಹಿಂದೆ ಹೇಳಿದ ಮೇರೆಗೆ ಗುಣವೃದ್ಧಿಸಂಜ್ಞೆಗಳನ್ನು ಕಲ್ಪಿಸುವುದು ಮುಂತಾದುವರಲ್ಲಿ ಗೌರವವು ಬರುವುದೆಂದೂ ಇಲ್ಲಿ ಹಾಗೆ ಹೇಳಲಿಲ್ಲವೆಂದು ತಿಳಿಯಬೇಕು. ಇಲ್ಲಿ ಗೌರವವು ಹೇಗೆ ಬರುವುದೆಂದರೆ ಎ, ಒ ಕಾರಗಳಿಗೆ ಗುಣಸಂಜ್ಞೆಯನ್ನೂ ಐ, ಔ ಕಾರಗಳಿಗೆ ವೃದ್ಧಿಸಂಜ್ಞೆಯನ್ನೂ ಹೇಳಬೇಕು; ಆ ಗುಣವೃದ್ಧಿಗಳು ಇ, ಉ ಕಾರಗಳಿಗೇ ಅಲ್ಲದೆ ಉಳಿದುವಕ್ಕೆ ಅಲ್ಲವೆಂದೂ ಅವು ಕೂಡ ಸ್ವರಗಳಲ್ಲಿ ಪ್ರಥಮಸ್ವರಗಳಿಗೇ ಹೊರತು ಮುಂದಿನ ಸ್ವರಗಳಿಗೆ ಅಲ್ಲವೆಂದೂ ನಿಯಮವನ್ನು ಮಾಡಬೇಕು; ವಿಧೇಯ (ಕಾರ್ಯ)ಗಳಲ್ಲಿ ಗುಣವು ಬರುವುದನ್ನೂ ವೃದ್ಧಿ ಬರುವುದನ್ನೂ ಸೂಚಿಸುವ ಅನುಬಂಧ (ಇತ್-ಸಂಜ್ಞಕವರ್ಣ) ಗಳನ್ನು ಸೇರಿಸಬೇಕು; ಅಂತಹ ಅನುಬಂಧಸಹಿತವಾದ ವಿಧೇಯವು ಪರದಲ್ಲಿರುವಾಗ ಗುಣವೃದ್ಧಿಗಳಾಗುವುವೆಂದು ಹೇಳಬೇಕು. ಇದೆಲ್ಲ ರಗಳೆಯನ್ನು ಮಾಡಬೇಕು, ಪ್ರಯೋಜನವೇನೋ ಅಲ್ಪವೇ. ಗುಣವೃದ್ಧಿಸ್ಥಾನಗಳು ಈ ವ್ಯಾಕರಣದಲ್ಲಿ ಐದಾರು ಇರಬಹುದು; ಸಂಸ್ಕೃತ ವ್ಯಾಕರಣಗಳಲ್ಲಿ ಪ್ರಯೋಜನವು ಹೆಚ್ಚಿಗೆ ಇರುವುದರಿಂದ ಹಾಗೆ ಮಾಡಿದುದು ಉಚಿತವೇ ಆಯಿತು, ಇಲ್ಲಿ ಪ್ರಯೋಜನವು ಅಲ್ಪವಾಗಿರುವುದರಿಂದ ಮಾಡಲಿಲ್ಲವೆಂದು ತಿಳಿಯಬೇಕು.

**ಅವತಾರಿಕೆ ೫೫೨**

'ಅತ್' ಪ್ರತ್ಯಯವು ಎಲ್ಲಿಯೂ ಕಾಣಬರುವುದಿಲ್ಲ; ಆದುದರಿಂದ ಅದಕ್ಕೆ ಲೋಪವನ್ನು ಹೇಳುತ್ತಾನೆ.

**ಸೂತ್ರಂ || ಲುಪ್ತಸ್ಯ || ೫೫೨ ||**

(೧. ಲುಪ್, ೨. ತಸ್ಯ.)

**ಅನುವೃತ್ತಿ ||** ೧. ಭಾವೇ.

**ವೃತ್ತಿ || ಭಾವಾರ್ಥದಲ್ಲಿ ವಿಧಿಸಿದ 'ಅತ್' ಪ್ರತ್ಯಯಕ್ಕೆ ಲೋಪವಾಗುವುದು.**

**ಪ್ರಯೋಗ ||** ಪೂ, ಪೂಗಳ್; ಕೇಡು, ಕೇಡುಗಳ್; ಕೋಡು, ಕೋಡುಗಳ್; ಗುದ್ದುರ್, ಗುದ್ದುರ್ಗಳ್; ತಿದ್ದುರ್, ತಿದ್ದುರ್ಗಳ್.

**ವಿಚಾರ ೫೫೨**

ಸೂತ್ರದಲ್ಲಿ 'ತಸ್ಯ' (ಅದಕ್ಕೆ) ಎಂದರೆ 'ಅತ್ ಪ್ರತ್ಯಯಕ್ಕೆ' ಎಂಬ ಅರ್ಥವು. 'ತಸ್ಯ' ಎಂಬುದು ಸರ್ವನಾಮವಾದುದರಿಂದ ಬುದ್ಧಿಸ್ಥವಾದ ಅರ್ಥವನ್ನು ಹೇಳುವುದು. '**ತಚ್ಛಬ್ದಃ ಸರ್ವನಾಮತ್ವಾದ್ಬುದ್ಧಿಸ್ಥಾರ್ಥಸ್ಯ ವಾಚಕಃ**' ಎಂಬ ವಚನವಿದೆ.

'ಲೋಪ'ವೆಂಬುದು ಎಲ್ಲೆಡೆಗಳಲ್ಲಿಯೂ ನಿಮಿತ್ತವು ಬಂದಾಗಲೇ ಆಗಬೇಕಾದುದು. ನಿಮಿತ್ತವಿಲ್ಲದೆ ಆಗುವುದಿಲ್ಲ. ಇಲ್ಲಿ 'ಅತ್' ಪ್ರತ್ಯಯದ ಲೋಪಕ್ಕೆ ಯಾವ ನಿಮಿತ್ತವೂ ಬಂದಿಲ್ಲ. ಬಂದುದು ನಿಮಿತ್ತವಿಲ್ಲದೆ ಹೋಗುವುದಾದರೆ ಬರುವುದಾದರೂ ಏತಕ್ಕೆ ? ಬಂದು ಸುಮ್ಮನೆ ಹೋಗುವುದಕ್ಕಿಂತ ಬಾರದಿರುವುದೇ ಮೇಲು ಎಂಬ ಶಂಕೆಯು ಇಲ್ಲಿ ಉಂಟಾಗುವುದು. ಆದರೆ ಶ್ರವಣಾರ್ಥವಾಗಿ (ಎಂದರೆ ಕೇಳಬರುವುದಕ್ಕಾಗಿ — ನಿಲ್ಲುವುದಕ್ಕಾಗಿ) ಬರುವ

ಸಾಮಾನ್ಯವಿಷಯಕವಾದ ಇಲ್ಲವೆ ವಿಶೇಷವಿಷಯಕವಾದ ವಿಧೇಯಗಳ ಲೋಪಕ್ಕೆ ನಿಮಿತ್ತವು ಬೇಕು. ಯಾವುದೊಂದು ಕಾರ್ಯಕ್ಕಾಗಿ ಬಂದುವುಗಳಿಗೆ ಕಾರ್ಯವನ್ನು ಮಾಡಿ ಬಿಡುವುದೇ ನಿವೃತ್ತಿಗೆ ( ಹೊರಟು ಹೋಗುವುದಕ್ಕೆ ) ಕಾರಣವು; ಎಲ್ಲಿಯಾದರೂ ಇದೇ ಸ್ಥಿತಿಯು. ಇಲ್ಲಿ ನಿಮಿತ್ತವು ಇಲ್ಲವೆಂದೂ ಹೇಳಲಾಗದು. ಲೋಪ್ಯದ ( ಲೋಪಿಸಲ್ಪಡುವುದರ ) ಸ್ವರೂಪವೇ ನಿಮಿತ್ತವೆಂದು ಹೇಳಬಹುದು. ಇಲ್ಲಿ ಲೋಪ್ಯವು ' ಅತ್ ' ಪ್ರತ್ಯಯವು. ' ಅತ್ ' ಪ್ರತ್ಯಯದ ಲೋಪಕ್ಕೆ ' ಅತ್ ' ಪ್ರತ್ಯಯವೇ ನಿಮಿತ್ತವೆಂದು ಹೇಳಿದಂತಾಯಿತಲ್ಲವೇ ? ಎಂದರೆ ಅಹುದು; ಲೋಪ್ಯವೇ ಇಲ್ಲದಿದ್ದರೆ ನೂರಾರು ನಿಮಿತ್ತಗಳು ಬಂದರೂ ಯಾವುದರ ಲೋಪವಾಗಬೇಕು ? ಇದ್ದುದರ ಲೋಪವಾದೀತಲ್ಲದೆ ಇಲ್ಲದುದರ ಲೋಪವು ಹೇಗೆ ಆದೀತು ? ಹೊರನಿಮಿತ್ತಗಳು ಅನಿಯತವಾದುವು. ಲೋಕದಲ್ಲಿ ' ತರಂಗ, ಮೇಘಮಾಲೆ ' ಮೊದಲಾದುವು ಹೊರನಿಮಿತ್ತವನ್ನು ಹೆಚ್ಚಾಗಿ ಅಪೇಕ್ಷಿಸದಿರುವುದು ಕಾಣಬರುವುದಿಲ್ಲವೇ ? ಇಲ್ಲಿ ' ಅತ್ ' ಪ್ರತ್ಯಯವು ಹೀಗೆಯೇ ಕಾರ್ಯಕ್ಕೋಸ್ಕರ ಬಂದು ಆಖ್ಯಾತ ಪ್ರತ್ಯಯಗಳನ್ನು ಹೊಂದಬಹುದಾದ ಕ್ರಿಯಾವಾಚಿಗಳಾದ ಧಾತುಗಳಿಗೆ ನಾಮವಿಭಕ್ತಿಪ್ರತ್ಯಯಗಳನ್ನು ಹೊಂದುವುದಕ್ಕೆ ಅರ್ಹತೆಯನ್ನು ತಂದು ಕೊಡುವ ತನ್ನ ಕಾರ್ಯವನ್ನು ಮಾಡಿ ಸಂಸ್ಕೃತ ವ್ಯಾಕರಣದಲ್ಲಿ ಬರುವ ' ಕ್ವಿಪ್ ' ಮೊದಲಾದ ಪ್ರತ್ಯಯದಂತೆ ತಾನು ಹೊರಟು ಹೋಗುವುದು.

ಇಲ್ಲಿ ವಿಶೇಷ ವಿಚಾರವೇನಂದರೆ — ' ಅತ್ ' ಪ್ರತ್ಯಯದ ಲೋಪವೇ ಇಷ್ಟವಾಗಿದ್ದರೆ **' ಅದ್ಭಾವೇ ಲುಪ್ತ ತಸ್ಯ '** ಎಂದು ಸೂತ್ರವನ್ನು ರಚಿಸಬಹುದಾಗಿತ್ತಲ್ಲವೆ ? ಇಲ್ಲವೆ ಭಾವ ಕೃದಂತ ಪ್ರಕರಣವು ಮುಗಿಯುವಲ್ಲಿಯಾದರೂ ಲೋಪವನ್ನು ಹೇಳಬೇಕಾಗಿತ್ತು. ನಡುವೆ ಅಸಮಯದಲ್ಲಿ ಏಕೆ ಎಂದು ಕೇಳಬಹುದು. ಅಹುದು, ಹೀಗೆ ಹೇಳುವುದಕ್ಕೆ ಒಂದು ನಿಮಿತ್ತವಿರಬೇಕೆಂದು ತೋರುವುದು. ಮೊದಲು **' ಅದ್ಭಾವೇ ||೫೪೯|| '** ಎಂಬುದರಿಂದ ಅತ್-ಪ್ರತ್ಯಯವನ್ನು ವಿಧಿಸಿ ಧಾತುಗಳಿಗೆ ಬರುವ ಕಾರ್ಯವಿಶೇಷಗಳನ್ನು ಹೇಳುವ ಎರಡು ಸೂತ್ರಗಳ ತರುವಾಯ ಅದರ ಲೋಪವನ್ನು ಹೇಳಿದುದರಿಂದ ಇದು ಹೊಸದೊಂದು ವಿಷಯವನ್ನು ಸೂಚಿಸಿ ಹೋಗುವುದೆಂದು ತಿಳಿಯಬೇಕು. ಆ ಹೊಸ ವಿಷಯವಾವುದೆಂದರೆ ದೀರ್ಘಾದಿಗಳಾದ 'ಡ್ವಂತ' ಧಾತುಗಳ 'ದು' ವಿಗೆ ಟಾದೇಶವೆಂದು ನಾವು ಹೇಳುತ್ತೇವೆ. ಅದರಿಂದ ಆಡು, ಪಾಡು, ಕೊಡು, ತೀಡು ಮುಂತಾದ ಧಾತುಗಳ ಮುಂದೆ ಭಾವಾರ್ಥಕ ಅತ್-ಪ್ರತ್ಯಯವು ಸೇರಲು ಆಟ, ಪಾಟ, ಕೂಟ, ತೀಟ ಮುಂತಾದ ರೂಪಗಳು ಸಿದ್ಧಿಸುವುವೆಂದು ತಿಳಿಯಬೇಕು.

**ಅವತಾರಿಕೆ ೫೫೩**

ಬೇರೆ ಭಾವಾರ್ಥಕ ಪ್ರತ್ಯಯಗಳು.

**ಸೂತ್ರಂ || ಈನೀಯಸ್ತಃ || ೫೫೩ ||**

( ೧. ಈನೀಯಃ, ೨. ತಃ )

**ಅನುವೃತ್ತಿ ||** ೧ ಭಾವೇ.

**ವೃತ್ತಿ || ' ಈನ್, ಈ ' ಧಾತುಗಳಿಗೂ ಯ ಕಾರಾಂತ ಧಾತುಗಳಿಗೂ ಪರವಾಗಿ ಭಾವಾರ್ಥದಲ್ಲಿ ತ-ಪ್ರತ್ಯಯವು ಬರುವುದು.**

**ಪ್ರಯೋಗ ||** ಈನ್ತಂ, ಈನ್ತಂಗಳ್; ಈತಂ, ಈತಂಗಳ್; ಕೆಯ್ತಂ, ಕೆಯ್ತಂಗಳ್; ಸುಯ್ತಂ, ಸುಯ್ತಂಗಳ್; ಪಾಯ್ತಂ, ಪಾಯ್ತಂಗಳ್; ತೊಯ್ತಂ, ತೊಯ್ತಂಗಳ್; ಕಾಯ್ತಂ, ಕಾಯ್ತಂಗಳ್.

**ವಿಚಾರ ೫೫೩**

'ಈನ್, ಈ' ಎಂಬಿವು ವಿಶೇಷಣಗಳಲ್ಲವಾದುದರಿಂದ 'ಈನ್, ಈ' ಎಂಬೀ ರೂಪದ ಧಾತುಗಳಿಂದೂ 'ಯಃ' ಎಂಬುದು ವಿಶೇಷಣವಾದುದರಿಂದ ಯ ಕಾರಾಂತ ಧಾತುಗಳಿಂದೂ ಗ್ರಹಿಸಬೇಕು.

**ಅವತಾರಿಕೆ ೫೫೪**

ಭಾವಾರ್ಥಕ 'ತ' ಪ್ರತ್ಯಯವು ಬರುವ ಸ್ಥಾನಗಳು.

**ಸೂತ್ರಂ || ಮಣ್ಯಾದಿಭ್ಯಃ || ೫೫೪ ||**

( ೧. ಮಣ್ಯಾದಿಭ್ಯಃ )

**ಅನುವೃತ್ತಿ ||** ೧. ಭಾವೇ, ೨. ತಃ.

**ವೃತ್ತಿ || ಮಣಿ ಮೊದಲಾದ ಧಾತುಗಳಿಗೆ ಭಾವಾರ್ಥದಲ್ಲಿ ತ ಪ್ರತ್ಯಯವು ಸೇರುವುದು.**

**ಪ್ರಯೋಗ ||** ಮಣಿತಂ, ಮಣಿತಂಗಳ್; ಕುಣಿತಂ, ಕುಣಿತಂಗಳ್; ಸುಗಿತಂ, ಸುಗಿತಂಗಳ್, ಬಿಗಿತಂ, ಬಿಗಿತಂಗಳ್.

ಮಣಿ, ಕುಣಿ, ಸುಗಿ, ಬಿಗಿ, ಅಗಿ, ಮುಗಿ, ಓ, ಅಱ, ಇಱ, ಮುಱ, ತಿರಿ ಮುಂತಾದುವುಗಳು. ( ಮಣಿ ಮೊದಲಾದುವುಗಳ ಗಣವು ಆಕೃತಿಗಣವೆಂದು ತಿಳಿಯಬೇಕು )

**ಅವತಾರಿಕೆ ೫೫೫**

ಭಾವಾರ್ಥಕ ಪ್ರತ್ಯಯ ವಿಶೇಷಗಳೂ ಅವುಗಳ ಸ್ಥಾನವಿಶೇಷಗಳೂ.

**ಸೂತ್ರಂ || ಗುಳ್ ಪೊಯ್ಬ್ಯಯಃ || ೫೫೫ ||**

( ೧. ಗುಳ್, ೨. ಪೊಯ್ಬ್ಯಯಃ )

**ಅನುವೃತ್ತಿ ||** ೧. ಭಾವೇ.

**ವೃತ್ತಿ || 'ಪೊಯ್, ಬಯ್' ಎಂಬೀ ಧಾತುಗಳಿಗೆ ಭಾವಾರ್ಥದಲ್ಲಿ ಗುಳ್-ಪ್ರತ್ಯಯವು ಸೇರುವುದು.**

**ಪ್ರಯೋಗ ||** ಪೊಯ್ಗುಳ್, ಪೊಯ್ಗುಳ್ಗಳ್; ಬಯ್ಗುಳ್, ಬಯ್ಗುಳ್ಗಳ್.

**ಅವತಾರಿಕೆ ೫೫೬**

ಭಾವಾರ್ಥಕ ಪ್ರತ್ಯಯವಿಶೇಷಗಳೂ ಸ್ಥಾನವಿಶೇಷಗಳೂ.

**ಸೂತ್ರಂ || ಆಯಾರಯಃ ಕೆತ್ || ೫೫೬ ||**

( ೧. ಆಯಾರಯಃ, ೨. ಕೆತ್ )

**ಅನುವೃತ್ತಿ ||** ೧. ಭಾವೇ.

**ವೃತ್ತಿ || 'ಅಯ್, ಅರಯ್' ಎಂಬ ಧಾತುಗಳಿಗೆ ಭಾವಾರ್ಥದಲ್ಲಿ ಕೆ-ಪ್ರತ್ಯಯವು ಸೇರುವುದು.**

**ಪ್ರಯೋಗ ||** ಅಯ್ಕೆ, ಅಯ್ಕೆಗಳ್; ಅರಯ್ಕೆ, ಅರಯ್ಕೆಗಳ್.

**ಅವತಾರಿಕೆ ೫೫೭**

ಭಾವಾರ್ಥಕ 'ಕೆ' ಪ್ರತ್ಯಯವೂ ಅದರ ಸ್ಥಾನಗಳೂ.

**ಸೂತ್ರಂ || ನಲರಣಱುಭ್ಯಃ || ೫೫೭ ||**

( ೧. ನಲರಣಱುಭ್ಯಃ )

**ಅನುವೃತ್ತಿ ||** ೧. ಭಾವೇ, ೨. ಕೆತ್.

**ವೃತ್ತಿ || ನ ಕಾರ ಲ ಕಾರ ರೇಫ ಣ ಕಾರಾಂತ ಧಾತುಗಳಿಗೂ ಱು ಶಬ್ದಾಂತ ಧಾತುಗಳಿಗೂ ಭಾವಾರ್ಥದಲ್ಲಿ ಕೆ ಪ್ರತ್ಯಯವು ಸೇರುವುದು.**

**ಪ್ರಯೋಗ ||** ಬಾನ್ಕೆ, ಆನ್ಕೆ, ಸೀನ್ಕೆ, ಕೂನ್ಕೆ, ಪೇನ್ಕೆ, ಸೇಲ್ಕೆ, ಪೋಲ್ಕೆ, ಸೋಲ್ಕೆ, ಕವಲ್ಕೆ, ಮಡಲ್ಕೆ, ಅದಿರ್ಕೆ, ಬಿದಿರ್ಕೆ, ಪೊಣರ್ಕೆ, ತೋರ್ಕೆ, ಸಾರ್ಕೆ, ಕಾಣ್ಕೆ, ಪೂಣ್ಕೆ, ಮಾಣ್ಕೆ, ಉಣ್ಕೆ[೧], ಪಣ್ಕೆ, ಕಿಱುಕೆ[೨], ತಿಱುಕೆ, ಪೊಱುಕೆ.

**ಅವತಾರಿಕೆ ೫೫೮**

ಭಾವಾರ್ಥಕ ಕೆತ್-ಪ್ರತ್ಯಯದ ಸ್ಥಾನಗಳು.

**ಸೂತ್ರಂ || ಟಃ || ೫೫೮ ||**

( ೧. ಟಃ )

**ಅನುವೃತ್ತಿ ||** ೧. ಭಾವೇ, ೨. ಕೆತ್.

**ವೃತ್ತಿ || ಟ ಕಾರಾಂತ ಧಾತುಗಳಿಗೆ ಭಾವಾರ್ಥದಲ್ಲಿ ಕೆ-ಪ್ರತ್ಯಯವು ಸೇರುವುದು.**

**ಪ್ರಯೋಗ ||** ಬಾಟ್ಕೆ, ಅಟ್ಕೆ[೩], ಉಟ್ಕೆ[೪].

**ವಿಚಾರ ೫೫೮**

ಟ ಕಾರವನ್ನು ಪೂರ್ವಸೂತ್ರದಲ್ಲ ಸೇರಿಸಬಹುದಾಗಿದ್ದಿತು. ಹಾಗೆ ಸೇರಿಸದೆ ಬೇರೆ ಸೂತ್ರವನ್ನು ರಚಿಸಿದುದು ಮುಂದಿನ ಸೂತ್ರಕ್ಕೆ 'ಟಃ' ಎಂಬುದರ ಅನುವೃತ್ತಿ ದೊರೆಯು ಬೇಕೆಂದು.

**ಅವತಾರಿಕೆ ೫೫೯**

ಬೇರೆ ಭಾವಾರ್ಥಕ ಪ್ರತ್ಯಯಗಳೂ ಅವುಗಳ ಸ್ಥಾನಗಳೂ.

**ಸೂತ್ರಂ || ತೆದನೇಕಸ್ವರಾತ್ || ೫೫೯ ||**

( ೧. ತೆತ್, ೨. ಅನೇಕಸ್ವರಾತ್. )

**ಅನುವೃತ್ತಿ ||** ೧. ಭಾವೇ, ೨. ಟಃ.

**ವೃತ್ತಿ || ಅನೇಕಸ್ವರಗಳುಳ್ಳ ಟ ಕಾರಾಂತ ಧಾತುಗಳಿಗೆ ಭಾವಾರ್ಥದಲ್ಲಿ 'ತೆ' ಪ್ರತ್ಯಯವು ಸೇರುವುದು.**

**ಪ್ರಯೋಗ ||** ಅಗಟ್ತೆ, ಪೊಗಟ್ತೆ, ಮುಗುಟ್ತೆ, ನೆಗಟ್ತೆ.

---

ಪಾಠಾಂತರ: ೧. ಅಣ್ಕೆ, ೨. ಗಿಱುಕೆ, ೩. ಅಱ್ಕೆ, ೪. ಊಱ್ಕೆ.

**ಪದಕೃತ್ಯ** || 'ಅನೇಕಸ್ವರಗಳುಳ್ಳ' ಎಂದು ಹೇಳಿದುದರಿಂದ 'ಅಟು್, ಉಟು್' ಮೊದಲಾದ ಏಕಸ್ವರಕ ಧಾತುಗಳಿಗೆ ಈ ಪ್ರತ್ಯಯವು ಸೇರುವುದಿಲ್ಲ. ಉದಾ: ಅಟ್ಕೆ, ಉಟ್ಕೆ.

**ಅವತಾರಿಕೆ ೫೬೦**

ಭಾವಾರ್ಥಕ 'ತೆ' ಪ್ರತ್ಯಯದ ಸ್ಥಾನವು.

**ಸೂತ್ರಂ || ಉಗು ಪುಗು ಮಿಗೋಃ || ೫೬೦ ||**

( ೧. ಉಗು ಪುಗು ಮಿಗೋಃ )

**ಅನುವೃತ್ತಿ** || ೧. ಭಾವೇ, ೨. ತೆತ್.

**ವೃತ್ತಿ** || **'ಉಗು, ಪುಗು, ಮಿಗು' ಎಂಬೀ ಧಾತುಗಳಿಗೆ ಭಾವಾರ್ಥದಲ್ಲಿ 'ತೆ' ಪ್ರತ್ಯಯವು ಸೇರುವುದು.**

**ಪ್ರಯೋಗ** || ಉಗುತೆ, ಉಗುತೆಗಳ್; ಪುಗುತೆ, ಪುಗುತೆಗಳ್; ಮಿಗುತೆ, ಮಿಗುತೆಗಳ್.

**ಅವತಾರಿಕೆ ೫೬೧**

ಭಾವಾರ್ಥಕ ಪ-ಪ್ರತ್ಯಯವೂ ಅದರ ಸ್ಥಾನವೂ.

**ಸೂತ್ರಂ || ಎತಃ ಪಃ || ೫೬೧ ||**

( ೧. ಎತಃ, ೨. ಪಃ )

**ಅನುವೃತ್ತಿ** || ೧. ಭಾವೇ.

**ವೃತ್ತಿ** || **ಎಕಾರಾಂತ ಧಾತುಗಳಿಗೆ ಭಾವಾರ್ಥದಲ್ಲಿ 'ಪ' ಪ್ರತ್ಯಯವು ಸೇರುವುದು.**

**ಪ್ರಯೋಗ** || ತೆಗೆಪಂ, ತಗೆಪಂ, ತೊಡೆಪಂ, ನಡೆಪಂ, ಮೊಗೆಪಂ, ತಡೆಪಂ, ಅಣೆಪಂ, ನೊಣೆಪಂ, ಪೊರೆಪಂ[೧], ನೆನೆಪಂ, ನನೆಪಂ, ತೊನೆಪಂ, ಅರೆಪಂ, ಬರೆಪಂ, ಒರೆಪಂ.

**ಅವತಾರಿಕೆ ೫೬೨**

ಭಾವಾರ್ಥಕ 'ಪ' ಪ್ರತ್ಯಯವೂ ಅದರ ಸ್ಥಾನಗಳೂ.

**ಸೂತ್ರಂ || ಕುದಿ ಮಿದಿ[೨] ತಳಿ ತೊಳ ತಿಳಿಭ್ಯಃ || ೫೬೨ ||**

( ೧. ಕುದಿ........ಭ್ಯಃ)

**ಅನುವೃತ್ತಿ** || ೧. ಭಾವೇ, ೨. ಪಃ.

**ವೃತ್ತಿ** || **'ಕುದಿ' ಮೊದಲಾದ (ಇಲ್ಲಿ ಹೇಳಿದ) ಧಾತುಗಳಿಗೆ ಭಾವಾರ್ಥದಲ್ಲಿ 'ಪ' ಪ್ರತ್ಯಯವು ಸೇರುವುದು.**

**ಪ್ರಯೋಗ** || ಕುದಿಪಂ, ಕುದಿಪಂಗಳ್; ಮಿದಿಪಂ, ಮಿದಿಪಂಗಳ್; ತಳಿಪಂ, ತಳಿಪಂಗಳ್; ತೊಳಪಂ, ತೊಳಪಂಗಳ್; ತಿಳಿಪಂ, ತಿಳಿಪಂಗಳ್.

**ಅವತಾರಿಕೆ ೫೬೩**

ಬೇರೆ ಭಾವಾರ್ಥಕ ಪ್ರತ್ಯಯಗಳೂ ಅವುಗಳ ಸ್ಥಾನಗಳೂ.

**ಸೂತ್ರಂ || ಬಳಿ ಬೆಳೆತೋರವ್ಯಸೂ || ೫೬೩ ||**

( ೧. ಬಳಿಬೆಳೆತೋಃ, ೨. ಅವ್ಯಸೂ )

**ಅನುವೃತ್ತಿ** || ೧. ಭಾವೇ.

ಪಾಠಾಂತರ : ೧. **ಪೊಣೆಪಂ** ೨. '**ಕುಡಿ ಮಿಡಿ —**'

**ವೃತ್ತಿ** || ‘ ಬಳೆ, ಬೆಳೆ ’ ಎಂಬೀ ಧಾತುಗಳಿಗೆ ಭಾವಾರ್ಥದಲ್ಲಿ ಅನುಕ್ರಮವಾಗಿ ‘ ಅವಿ, ಅಸು ’ ಎಂಬ ಪ್ರತ್ಯಯಗಳು ಸೇರುವುವು.

**ಪ್ರಯೋಗ** || ಬಳವಿ, ಬಳವಿಗಳ್; ಬೆಳಸು, ಬೆಳಸುಗಳ್.

**ಅವತಾರಿಕೆ ೫೬೪**

ಭಾವಾರ್ಥಕ ಗೆ-ಪ್ರತ್ಯಯವೂ ಆದರ ಸ್ಥಾನಗಳೂ.

**ಸೂತ್ರಂ || ಉಡ್ವಾದಿಭ್ಯೋ ಗೆಶ್ || ೫೬೪ ||**

( ೧. ಉಡ್ವಾದಿಭ್ಯಃ, ೨. ಗೆಶ್ )

**ಅನುವೃತ್ತಿ** || ೧. ಭಾವೇ.

**ವೃತ್ತಿ** || ‘ ಉಡು ’ ಮೊದಲಾದ ಧಾತುಗಳಿಗೆ ಭಾವಾರ್ಥದಲ್ಲಿ ‘ ಗೆ ’ ಪ್ರತ್ಯಯವು ಸೇರುವುದು.

**ಪ್ರಯೋಗ** || ಉಡುಗೆ, ಉಡುಗೆಗಳ್; ನಂಬುಗೆ, ನಂಬುಗೆಗಳ್; ತುಡುಗೆ, ತುಡುಗೆಗಳ್; ಪಸುಗೆ, ಪಸುಗೆಗಳ್.

**ಉಡ್ವಾದಿಗಣ** || ‘ ಉಡು, ತುಡು, ಅಡು, ಪೊರ್ದ್ದು, ಅಬ್ಬು, ತಾಳ್ದು, ತೆಮಳ್ದು, ನಂಬು, ತುಂಬು, ಏಱ್, ಬೇಳ್, ಸಲ್[೧], ಬೇ, ಪಸು ’ ಮುಂತಾದುವು. ( ಉಡ್ವಾದಿಯು ಆಕೃತಿಗಣವು )

**ಅವತಾರಿಕೆ ೫೬೫**

ಭಾವಾರ್ಥಕ ‘ ಗೆ ’ ಪ್ರತ್ಯಯವೂ ಆದರ ಸ್ಥಾನಗಳೂ.

**ಸೂತ್ರಂ || ಬೇಡ್ವಾದೇರಿಚ್ಚ || ೫೬೫ ||**

( ೧. ಬೇಡ್ವಾದೇಃ, ೨. ಇಕ್, ೩. ಚ. )

**ಅನುವೃತ್ತಿ** || ೧. ಭಾವೇ, ೨. ಗೆಶ್.

**ವೃತ್ತಿ** || ‘ ಬೇಡು ’ ಮೊದಲಾದ ಧಾತುಗಳಿಗೆ ಭಾವಾರ್ಥದಲ್ಲಿ ‘ ಗೆ ’ ಪ್ರತ್ಯಯವು ಸೇರುವುದು; ಆಗ ಇಕಾರಾಗಮವೂ ಆಗುವುದು.

**ಪ್ರಯೋಗ** || ಬೇಡಿಗೆ, ಮೂಡಿಗೆ, ತಾಱಿಗೆ, ಮಾಱಿಗೆ, ಪೊಲಿಗೆ.

**ಬೇಡ್ವಾದಿಗಣ** || ಬೇಡು, ಮೂಡು, ಪಾಡು, ತಾಱು, ಮಾಱು, ಪೊಲ್.

**ವಿಚಾರ ೫೬೫**

ಇಲ್ಲಿ ಇ ಕಾರವನ್ನು ಆಗಮವೆಂದು ಹೇಳುವುದಕ್ಕಿಂತ ಆದೇಶವೆಂದು ಹೇಳುವುದು ಮೇಲಾಗಿತ್ತಲ್ಲವೇ ? ( ಬೇಡು, ಇಗೆ ಉ ಕಾರಕ್ಕೆ ಇ ಕಾರಾದೇಶ ) ಅಹುದು; ಆದರೆ ‘ಪೊಲಿಗೆ’ ಎಂಬ ರೂಪದ ಸಿದ್ಧಿಗಾಗಿ ಇ ಕಾರಾಗಮವು ಅವಶ್ಯವೆಂದು ಹಾಗೆ ಹೇಳಿದೆ.

**ಅವತಾರಿಕೆ ೫೬೬**

ಭಾವಾರ್ಥಕ ‘ ವು ’ ಪ್ರತ್ಯಯವೂ ಆದರ ಸ್ಥಾನವೂ

**ಸೂತ್ರಂ || ಪಸ್ವಾದೇರ್ವುಃ || ೫೬೬ ||**

( ೧. ಪಸ್ವಾದೇಃ, ೨. ವುಃ. )

---

ಪಾಠಾಂತರ: ೧. ಸೋಲ್.

**ಅನುವೃತ್ತಿ ||** ೧. ಭಾವೇ.

**ವೃತ್ತಿ ||** ' ಪಸಿ ' ಮೊದಲಾದ ಧಾತುಗಳಿಗೆ ಭಾವಾರ್ಥದಲ್ಲಿ ' ವು ' ಪ್ರತ್ಯಯವು ಸೇರುವುದು.

**ಪ್ರಯೋಗ ||** ಪಸಿವು, ಪಸಿವುಗಳ್; ಅಱಿವು, ಅಱಿವುಗಳ್.

**ಪಸ್ಯಾದಿಗಣ ||** ' ಪಸಿ, ಅಱಿ, ಸುಱಿ, ಬಱಿ, ಎಱಿ, ಮಿಳಿ, ಪಱಿ, ಅಱಿ, ಪಱಿ, ಸಾ, ನೋ, ಕೀ ' ಮುಂತಾದುವು. (ಪಸ್ಯಾದಿಯು ಆಕೃತಿಗಣವು)

**ಅವತಾರಿಕೆ ೫೬೭**

ಭಾವಾರ್ಥಕ ' ವು ' ಪ್ರತ್ಯಯದ ಸ್ಥಾನವೂ ಅದು ಬಂದಾಗಳಿನ ಕಾರ್ಯವಿಶೇಷವೂ.

**ಸೂತ್ರಂ || ಕಳಾದೇರಶ್ಚ || ೫೬೭ ||**

(೧. ಕಳಾದೇಃ, ೨. ಅಕ್, ೩. ಚ.)

**ಅನುವೃತ್ತಿ ||** ೧. ಭಾವೇ.

**ವೃತ್ತಿ ||** ' ಕಳ್ ' ಮೊದಲಾದ ಧಾತುಗಳಿಗೆ ಭಾವಾರ್ಥದಲ್ಲಿ ' ವು ' ಪ್ರತ್ಯಯವು ಸೇರುವುದು; ಆಗ ಅ ಕಾರಾಗಮವೂ ಆಗುವುದು.

**ಪ್ರಯೋಗ ||** ಕಳವು, ಕಳವುಗಳ್; ನೊಳವು, ನೊಳವುಗಳ್.

ಕಳಾದಿ (ಧಾತು) ಗಳು — ' ಕಳ್, ಒಳ್, ನೊಳ್, ಸೆಳೆ, ಸೆರೆ, ಕಱಿ, ತೆಱಿ, ನೆಱಿ, ಮೆಱಿ ' ಮುಂತಾದುವು. ( ಕಳಾದಿಯು ಆಕೃತಿಗಣವು. )

**ಅವತಾರಿಕೆ ೫೬೮**

ಭಾವಾರ್ಥಕ ' ಇಕೆ ' ಪ್ರತ್ಯಯವೂ ಅದರ ಸ್ಥಾನಗಳೂ.

**ಸೂತ್ರಂ || ಒಂದುನಂದ್ವಂಜುಕಲ್ಕಂದುಪೊಂದೋರಿಕೆತ್[೧] || ೫೬೮ ||**

(೧. ಒಂದು.......ಪೊಂದೋಃ, ೨. ಇಕೆತ್.)

**ಅನುವೃತ್ತಿ ||** ಭಾವೇ.

**ವೃತ್ತಿ ||** ' ಒಂದು ' ಮೊದಲಾದ ಧಾತುಗಳಿಗೆ ಭಾವಾರ್ಥದಲ್ಲಿ ' ಇಕೆ ' ಪ್ರತ್ಯಯವು ಸೇರುವುದು.

**ಪ್ರಯೋಗ ||** ಒಂದಿಕೆ, ಒಂದಿಕೆಗಳ್; ನಂದಿಕೆ, ನಂದಿಕೆಗಳ್; ಅಂಜಿಕೆ, ಅಂಜಿಕೆಗಳ್; ಕಲಿಕೆ, ಕಲಿಕೆಗಳ್; ಕಂದಿಕೆ, ಕಂದಿಕೆಗಳ್; ಪೊಂದಿಕೆ, ಪೊಂದಿಕೆಗಳ್.

**ಅವತಾರಿಕೆ ೫೬೯**

ಭಾವಾರ್ಥಕ ' ಇಕೆ ' ಪ್ರತ್ಯಯವೂ ಅದರ ಸ್ಥಾನಗಳೂ.

**ಸೂತ್ರಂ || ಮೋದ್ವಾದಿಭ್ಯೋವಾ || ೫೬೯ ||**

( ೧. ಮೋದ್ವಾದಿಭ್ಯಃ, ೨. ವಾ. )

**ಅನುವೃತ್ತಿ ||** ೧. ಭಾವೇ, ೨. ಇಕೆತ್.

**ವೃತ್ತಿ ||** ' ಮೋದು ' ಮೊದಲಾದ ಧಾತುಗಳಿಗೆ ಭಾವಾರ್ಥದಲ್ಲಿ ' ಇಕೆ ' ಪ್ರತ್ಯಯವು ವಿಕಲ್ಪವಾಗಿ ಸೇರುವುದು. ' ಇಕೆ ' ಸೇರದಿರುವಾಗ ' ಅ ' ಪ್ರತ್ಯಯವು ಸೇರುವುದು.

---

ಪಾಠಾಂತರ: ೧. ಪೊಂದುಭ್ಯ ಇಕೆತ್.

**ಪ್ರಯೋಗ** ॥ ಮೋದಿಕೆಗಳ್, ಮೋದುಗಳ್; ಓದಿಕೆಗಳ್, ಓದುಗಳ್.

ಮೋದ್ವಾದಿಗಣ — 'ಮೋದು. ಓದು, ಹರಡು, ಕೊಱಡು, ಕದಡು, ಮುದುಡು, ಅವಡು, ಕವಡು, ಸೀಂದು, ಸುಂದು' ಮುಂತಾದುವು. ( ಮೋದ್ವಾದಿಯು ಆಕೃತಿಗಣವು. )

**ವಿಚಾರ ೫೬೯**

ಇಲ್ಲಿ 'ಇಕೆ' ಪ್ರತ್ಯಯವನ್ನು ವಿಕಲ್ಪವಾಗಿ ವಿಧಿಸಿರುವುದರಿಂದ ಇದು ಬಾರದಿರುವಾಗ ಉತ್ಸರ್ಗದಿಂದ (ಸಾಮಾನ್ಯವಾದ) 'ಅತ್' ಪ್ರತ್ಯಯವು ಬರುವುದು. 'ಅತ್' ಪ್ರತ್ಯಯಕ್ಕೆ ಲೋಪವೂ ಹಿಂದೆ ಹೇಳಿದೆ.

**ಅವತಾರಿಕೆ ೫೭೦**

ಭಾವಾರ್ಥಕ 'ಇಕೆ' ಪ್ರತ್ಯಯವೂ ಅದರ ಸ್ಥಾನಗಳೂ.

**ಸೂತ್ರಂ ॥ ಡೋಃರಕಿಡುಕುಡುತುಡೋಃ ॥ ೫೭೦ ॥**

( ೧. ಡೋಃ, ೨. ಅಕಿಡು ಕುಡು ತುಡೋಃ )

**ಅನುವೃತ್ತಿ** ॥ ೧. ಭಾವೇ, ೨. ಇಕೆತ್.

**ವೃತ್ತಿ** ॥ **'ಕಿಡು, ಕುಡು, ತುಡು' ಇವುಗಳನ್ನುಳಿದು 'ಡು' ಶಬ್ದಾಂತ ಧಾತುಗಳಿಗೆ ಭಾವಾರ್ಥದಲ್ಲಿ 'ಇಕೆ' ಪ್ರತ್ಯಯವು ಸೇರುವುದು.**

**ಪ್ರಯೋಗ** ॥ ಪೊಡಮಡಿಕೆ, ತಲೆವಡಿಕೆ, ಚಿವುಡಿಕೆ, ಆಡಿಕೆ, ಬೀಡಿಕೆ.

**ಪದಕೃತ್ಯ** ॥ 'ಕಿಡು, ಕುಡು, ತುಡು ಇವುಗಳನ್ನುಳಿದು' ಎಂದು ಹೇಳಿದುದರಿಂದ ಈ ಧಾತುಗಳಿಗೆ 'ಇಕೆ' ಪ್ರತ್ಯಯವು ಸೇರುವುದಿಲ್ಲ. ಉದಾ : ಕೇಡು, ಕೇಡುಗಳ್; ಕೋಡು, ಕೋಡುಗಳ್; ತೋಡು, ತೋಡುಗಳ್.

**ವಿಚಾರ ೫೭೦**

ಪೂರ್ವಸೂತ್ರದ 'ವಾ' ಎಂಬುದು ಈ ಸೂತ್ರಕ್ಕೆ ಅನುವೃತ್ತವಾಗುವುದಿಲ್ಲ. ಇಲ್ಲಿ ಆಕ್ಷೇಪಣೆ ಏನಂದರೆ ಇಲ್ಲಿ 'ಕಿಡು ಮೊದಲಾದುವನ್ನುಳಿದು' ಎಂದು ಹೇಳುವುದು ಅವಶ್ಯವಿಲ್ಲ; ಏಕೆಂದರೆ ಅವುಗಳಿಗೆ '**ಕಿಡೋರೇದ್ದೀರ್ಘಶ್ಚ** ॥ ೫೫೦ ॥, **ಒತ್ಕುಡು ತುಡೋಃ** ॥ ೫೫೧ ॥' ಎಂಬಿವುಗಳಿಂದ 'ಅತ್' ಪ್ರತ್ಯಯವನ್ನು ವಿಧಿಸಿದುದರಿಂದ 'ಇಕೆ' ಪ್ರತ್ಯಯವು ಬರುವುದೇ ಇಲ್ಲ. ಸಮಾಧಾನವೇನಂದರೆ — 'ಡು' ಶಬ್ದಾಂತ ಧಾತುಗಳಿಗೆ ಬೇರೆ ಕಾರ್ಯವೂ ಆಗುವುದೆಂಬುದಕ್ಕೆ ಇದು ನಿಯಾಮಕವೆಂದು ತಿಳಿಯಬೇಕು. ಇದರಿಂದ 'ಆಟ, ಪಾಟ' ಮುಂತಾದುವು ಸಿದ್ಧಿಸುವುವೆಂದೂ ತಿಳಿಯಬೇಕು.

**ಅವತಾರಿಕೆ ೫೭೧**

ಭಾವಾರ್ಥಕ 'ಮೆ' ಪ್ರತ್ಯಯವೂ ಅದರ ಸ್ಥಾನಗಳೂ.

**ಸೂತ್ರಂ ॥ ಬಲ್‌ನಲ್‌ಕೂರ್ಭ್ಯೋರ್ ಮೆತ್ ॥ ೫೭೧ ॥**

( ೧. ಬಲ್ನಲ್ಕೂರ್ಭ್ಯಃ, ೨. ಮೆತ್. )

**ಅನುವೃತ್ತಿ** ॥ ಭಾವೇ.

**ವೃತ್ತಿ** ॥ **'ಬಲ್, ನಲ್, ಕೂರ್' ಎಂಬೀ ಧಾತುಗಳಿಗೆ ಭಾವಾರ್ಥದಲ್ಲಿ 'ಮೆ' ಪ್ರತ್ಯಯವು ಸೇರುವುದು.**

**ಪ್ರಯೋಗ** || ಬಲ್ಮೆ, ಬಲ್ಮೆಗಳ್; ನಲ್ಮೆ, ನಲ್ಮೆಗಳ್; ಕೂರ್ಮೆ, ಕೂರ್ಮೆಗಳ್.

**ಅವತಾರಿಕೆ ೫೭೨**

ಭಾವಾರ್ಥಕ 'ಮೆ' ಪ್ರತ್ಯಯವೂ ಅದರ ಸ್ಥಾನಗಳೂ ಕಾರ್ಯವಿಶೇಷವೂ.

**ಸೂತ್ರಂ || ತರ್ಬರಃ ಕುಕ್ಚ || ೫೭೨ ||**

( ೧. ತರ್ಬರಃ, ೨. ಕುಕ್, ೩. ಚ. )

**ವೃತ್ತಿ** || 'ತರ್, ಬರ್' ಧಾತುಗಳಿಗೆ ಭಾವಾರ್ಥದಲ್ಲಿ 'ಮೆ' ಪ್ರತ್ಯಯವು ಸೇರುವುದು; ಆಗ 'ಕು' ಶಬ್ದಾಗಮವೂ ಆಗುವುದು.

**ಪ್ರಯೋಗ** || ತರ್ಕ್ಕಮೆ, ತರ್ಕ್ಕಮೆಗಳ್; ಬರ್ಕ್ಕಮೆ, ಬರ್ಕ್ಕಮೆಗಳ್.

**ಅವತಾರಿಕೆ ೫೭೩**

ಭಾವಾರ್ಥಕ 'ಪು' ಪ್ರತ್ಯಯವೂ ಅದರ ಸ್ಥಾನಗಳೂ.

**ಸೂತ್ರಂ || ಓಕಾಮೇಭ್ಯಃ ಪುಃ || ೫೭೩ ||**

( ೧. ಓಕಾಮೇಭ್ಯಃ, ೨. ಪುಃ. )

**ಅನುವೃತ್ತಿ** || ೧. ಭಾವೇ.

**ವೃತ್ತಿ** || 'ಓ, ಕಾ, ಮೇ' ಎಂಬೀ ಧಾತುಗಳಿಗೆ ಭಾವಾರ್ಥದಲ್ಲಿ 'ಪು' ಪ್ರತ್ಯಯವು ಸೇರುವುದು.

**ಪ್ರಯೋಗ** || 'ಓಪು, ಓಪುಗಳ್; ಕಾಪು, ಕಾಪುಗಳ್; ಮೇಪು, ಮೇಪುಗಳ್.

**ಅವತಾರಿಕೆ ೫೭೪**

ಭಾವಾರ್ಥಕ 'ಪು' ಪ್ರತ್ಯಯವೂ ಅದರ ಸ್ಥಾನವೂ.

**ಸೂತ್ರಂ || ಪೊಳಗೋರ್ದುಲುಪ್ಚ || ೫೭೪ ||**

( ೧. ಪೊಳಗೋಃ, ೨. ದುಲುಪ್, ೩. ಚ. )

**ಅನುವೃತ್ತಿ** || ೧. ಭಾವೇ.

**ವೃತ್ತಿ** || 'ಪೊಳಗು' ಧಾತುವಿಗೆ ಭಾವಾರ್ಥದಲ್ಲಿ 'ಪು' ಪ್ರತ್ಯಯವು ಸೇರುವುದು. ಮತ್ತು ಆಗ ಧಾತುವಿನ 'ದು' ಲೋಪ ಹೊಂದುವುದು.

**ಪ್ರಯೋಗ** || ಪೊಳಪು, ಪೊಳಪುಗಳ್.

**ವಿಚಾರ ೫೭೪**

ಸೂತ್ರಸ್ಥ 'ಚ' ಶಬ್ದವು 'ಪುಃ' ಎಂಬುದನ್ನು ಪೂರ್ವಸೂತ್ರದಿಂದ ಸಮುಚ್ಚಯಿಸುವುದು. 'ಪೊಳಗು ಪು' ಎಂದಿರುವಾಗ 'ದು' ಲೋಪವಾಗುವುದರಿಂದ 'ಪೊಳ ಪು' ಇವು ಸೇರಲು 'ಪೊಳಪು' ಎಂಬ ರೂಪವಾಗುವುದು.

**ಅವತಾರಿಕೆ ೫೭೫**

ಭಾವಾರ್ಥಕ 'ಸು' ಪ್ರತ್ಯಯವೂ ಅದರ ಸ್ಥಾನಗಳೂ.

**ಸೂತ್ರಂ || ಸುರ್ಮುನಿ ಕಿನಿ ಮುಳಿಭ್ಯಃ || ೫೭೫ ||**

( ೧. ಸುಃ, ೨. ಮುನಿಕಿನಿಮುಳಿಭ್ಯಃ. )

**ಅನುವೃತ್ತಿ** ‖ ೧. ಭಾವೇ.

**ವೃತ್ತಿ** ‖ **'ಮುನಿ' ಮೊದಲಾದ ಧಾತುಗಳಿಗೆ ಭಾವಾರ್ಥದಲ್ಲಿ 'ಸು' ಪ್ರತ್ಯಯವು ಸೇರುವುದು.**

**ಪ್ರಯೋಗ** ‖ ಮುನಿಸು, ಮುನಿಸುಗಳ್; ಕಿನಿಸು, ಕಿನಿಸುಗಳ್; ಮುಳಿಸು, ಮುಳಿಸುಗಳ್.

**ಅವತಾರಿಕೆ ೫೭೬**

ಭಾವಾರ್ಥಕ ಅ, ಹು, ಪಿ, ಹ ಪ್ರತ್ಯಯಗಳೂ ಅವುಗಳ ಸ್ಥಾನಗಳೂ.

**ಸೂತ್ರಂ ‖ ಸಾಲ್‌ಬಾನೋನ್‌ಮಿಾಭ್ಯೋSಹುಪಿಹಾಃ ‖ ೫೭೬ ‖**

(೧. ಸಾಲ್ಬಾನೋನ್ಮೀಭ್ಯಃ, ೨. ಅಹುಪಿ ಹಾಃ.)

**ವೃತ್ತಿ** ‖ 'ಸಾಲ್, ಬಾ, ನೋನ್, ಮಿಾ' ಎಂಬೀ ಧಾತುಗಳಿಗೆ ಭಾವಾರ್ಥದಲ್ಲಿ ಅನುಕ್ರಮವಾಗಿ 'ಅ, ಹು, ಪಿ, ಹ' ಎಂಬ ಪ್ರತ್ಯಯಗಳು ಸೇರುವುವು.

**ಪ್ರಯೋಗ** ‖ ಸಾಲಂ, ಸಾಲಂಗಳ್; ಬಾಹು, ಬಾಹುಗಳ್; ನೋಂಪಿ, ನೋಂಪಿಗಳ್; ಮಿಾಹಂ, ಮಿಾಹಂಗಳ್.

**ಅವತಾರಿಕೆ ೫೭೭**

ಭಾವಾರ್ಥಕ 'ಎ' ಪ್ರತ್ಯಯವೂ ಅದರ ಸ್ಥಾನಗಳೂ.

**ಸೂತ್ರಂ ‖ ಕೊಲ್ನಗೋರೆತ್ ‖ ೫೭೭ ‖**

(೧. ಕೊಲ್ನಗೋಃ, ೨. ಎತ್.)

**ಅನುವೃತ್ತಿ** ‖ ೧. ಭಾವೇ.

**ವೃತ್ತಿ** ‖ **'ಕೊಲ್, ನಗು'** ಎಂಬೀ **ಧಾತುಗಳಿಗೆ ಭಾವಾರ್ಥದಲ್ಲಿ 'ಎ' ಪ್ರತ್ಯಯವು ಸೇರುವುದು.**

**ಪ್ರಯೋಗ** ‖ ಕೊಲೆ, ಕೊಲೆಗಳ್; ನಗೆ, ನಗೆಗಳ್.

**ಅವತಾರಿಕೆ ೫೭೮**

ಭಾವಾರ್ಥಕ 'ಇಸು' ಪ್ರತ್ಯಯವೂ ಅದರ ಸ್ಥಾನವೂ.

**ಸೂತ್ರಂ ‖ ಇಸುಪ್ತಿನಃ[೧] ‖ ೫೭೮ ‖**

(೧. ಇಸುಪ್ (ಇಸುಃ), ೨. ತಿನಃ.)

**ಅನುವೃತ್ತಿ** ‖ ೧. ಭಾವೇ.

**ವೃತ್ತಿ ‖ 'ತಿನ್' ಧಾತುವಿಗೆ ಭಾವಾರ್ಥದಲ್ಲಿ 'ಇಸು' ಪ್ರತ್ಯಯವು ಸೇರುವುದು.**

**ಪ್ರಯೋಗ** ‖ ತಿನಿಸು, ತಿನಿಸುಗಳ್.

**ಅವತಾರಿಕೆ ೫೭೯**

ಎಲ್ಲ ಧಾತುಗಳಿಗೆ ಸೇರುವ ಭಾವಾರ್ಥಕ 'ಉದು' ಪ್ರತ್ಯಯವು.

**ಸೂತ್ರಂ ‖ ಧಾತೋರ್ವುದುಃ ‖ ೫೭೯ ‖**

**(೧. ಧಾತೋಃ, ೨. ವುದುಃ.)**

**ಅನುವೃತ್ತಿ** ‖ ಭಾವೇ.

---

ಪಾಠಾಂತರ: ೧. 'ಇಸುಸ್ತಿನಃ'

**ವೃತ್ತಿ** || ' ಎಲ್ಲ ಧಾತುಗಳಿಗೆ ಭಾವಾರ್ಥದಲ್ಲಿ ' ವುದು ' ಪ್ರತ್ಯಯವು ಸೇರುವುದು.

**ಪ್ರಯೋಗ** || ಮಾಲ್ಪುದು, ನೋಲ್ಪುದು, ಕಡಿವುದು, ಉಡಿವುದು, ಬಡಿವುದು, ತಪ್ಪುದು, ಬಪ್ಪುದು ಮುಂತಾದುವು.

**ಪದಕೃತ್ಯ** || ಸೂತ್ರದಲ್ಲಿ ' ಧಾತೋಃ ' ಎಂದು ಮತ್ತೆ ಹೇಳಿದುದು ಎಲ್ಲ ಧಾತುಗಳಿಗೆ ' ವುದು ' ಸೇರುವುದೆಂದು ತೋರಿಸುವುದಕ್ಕಾಗಿ. ಹಾಗೆ ಹೇಳದಿದ್ದರೆ ಪೂರ್ವಸೂತ್ರದಲ್ಲಿರುವ ' ತಿನ್ ' ಧಾತುವಿಗಷ್ಟೇ ' ವುದು ' ಸೇರುವುದೆಂದು ಅರ್ಥವಾಗುತ್ತಿದ್ದಿತು.

**ವಿಚಾರ ೫೭೯**

ಈ ಸೂತ್ರದಲ್ಲಿ 'ಧಾತೋಃ' (ಧಾತುವಿಗೆ) ಎಂದು ಏಕೆ ಹೇಳಬೇಕು? ಧಾತುಪ್ರಕರಣವೇ ಇರುವುದರಿಂದ ಇಲ್ಲಿ ಹೇಳಿದ ಪ್ರತ್ಯಯಗಳೆಲ್ಲ ಧಾತುಗಳಿಗೇ ಸೇರುವವಷ್ಟೇ? ಎಂದು ಶಂಕಿಸಬಹುದು. ಆದರೆ ' ವುದುಃ ' ಎಂದಿಷ್ಟೇ ಸೂತ್ರವಿದ್ದರೆ ಇದರ ಹಿಂದಿನ ಸೂತ್ರದಲ್ಲಿ ಗೃಹೀತವಾದ ' ತಿನ್ ' ಧಾತುವಿಗಷ್ಟೇ ' ವುದು ' ಸೇರುವುದೆಂದು ಅರ್ಥವಾಗುತ್ತಿದ್ದಿತು. ಧಾತುಪ್ರಕರಣವಿರುವುದರಿಂದ ' ವುದು ' ಸೇರುವುದು ಧಾತುವಿನ ಮುಂದೆಯೇ ಎಂದು ಅರ್ಥವಾಗುತ್ತಿದ್ದರೂ ಮತ್ತೆ ' ಧಾತೋಃ ' ಎಂದು ಹೇಳಿದುದು ಎಲ್ಲ ಧಾತುಗಳ ಮುಂದೆಯೂ ' ವುದು ' ಸೇರುವುದೆಂಬುದನ್ನು ತೋರಿಸುವುದಕ್ಕಾಗಿ ಎಂದು ತಿಳಿಯಬೇಕು. ' **ಅದ್ಭಾವೇ** ||**೫೪೯**|| ' ಎಂಬ ಸೂತ್ರವನ್ನಾರಂಭಿಸಿ ಆ ಆ ಧಾತುಗಳಿಗೆ ಈ ವರೆಗೆ ಹೇಳಿದ ಎಲ್ಲ ಪ್ರತ್ಯಯಗಳೂ ' **ವುದು** ' ಪ್ರತ್ಯಯವೂ ಸೇರುವುದರಿಂದ ಭಾವಾರ್ಥಕ ರೂಪಗಳು ಎರಡೆರಡು ಸಿದ್ಧವಾಗುವುವು. **ಹೇಗೆಂದರೆ** — ' **ಅದ್ಭಾವೇ** || **೫೪೯** || ' ಎಂಬುದರಿಂದ ' ಕೇಗು ' ಧಾತುವಿನಿಂದ ' ಕೇಗು ' ಎಂಬ ರೂಪವೂ ಈ ಸೂತ್ರದಿಂದ || **೫೭೯** || ' ಕೇಗುವುದು ' ಎಂಬ ರೂಪವೂ ಉಂಟಾಗುವುವು. ಹೀಗೆಯೇ ' **ಕಿಡೋರೇದ್ದೀರ್ಘಶ್ಚ** || **೫೫೦** || ' ಎಂಬುದರಿಂದ ' ಕೇಡು ' ಈ ಸೂತ್ರದಿಂದ ' ಕಿಡುವುದು ' ' **ಓತ್ಕುಡುತುಡೋಃ** || **೫೫೧** || ' ಎಂಬುದರಿಂದ ' ಕೋಡು, ತೋಡು ' ಇದರಿಂದ ' ಕುಡುವುದು, ತುಡುವುದು '; ' **ಈಣೀಯಸ್ತಃ** || **೫೫೩** || ' ಎಂಬುದರಿಂದ ' **ಈನ್ತಂ**, **ಈತಂ**, ಗೆಯ್ತಂ ' ಇದರಿಂದ ' ಈಂಪುದು, ಈಪುದು, ಗೆಯ್ಪುದು '; '**ಮಣ್ಯಾದಿಭ್ಯಃ** || **೫೫೪** ||' ಎಂಬುದರಿಂದ ' ಮಣಿತಂ ' ಮುಂತಾದುವು, ಇದರಿಂದ ' ಮಣವುದು ' ಮುಂತಾದುವು. ' ಮೋದು ' ಮುಂತಾದುವಕ್ಕೆ ಮೊದಲು ಎರಡೆರಡು ರೂಪಗಳನ್ನು ಹೇಳಿರುವುದರಿಂದ ' ವುದು ' ಸೇರಿದ ರೂಪವೊಂದು ಕೂಡಿ ಮೂರು ಮೂರು ಹೀಗೆ ರೂಪಗಳಾಗುವುವು. ಉದಾ : ' ಮೋದು, ಮೋದಿಕೆ, ಮೋದುವುದು; ಓದು, ಓದಿಕೆ, ಓದುವುದು ' ಮುಂತಾದುವು.

**ಅವತಾರಿಕೆ ೫೮೦**

ಈವರೆಗೆ ನಾಮಗಳನ್ನುಂಟುಮಾಡುವ ಕೃತ್-ಪ್ರತ್ಯಯಗಳನ್ನೂ ಭಾವನಾಮಗಳನ್ನುಂಟುಮಾಡುವ ಕೃತ್-ಪ್ರತ್ಯಯಗಳನ್ನೂ ವಿಸ್ತಾರವಾಗಿ ಹೇಳಿದನು. ಈಗ ಧಾತುಗಳಿಂದ ಉಂಟಾಗುವ ಅವ್ಯಯಗಳನ್ನು ಹೇಳುವುದಿದೆ. ಅಂತಹ ಕೃದಂತಾವ್ಯಯಗಳನ್ನುಂಟುಮಾಡುವ ಪ್ರತ್ಯಯಗಳನ್ನೂ ಪ್ರತ್ಯಯಾರ್ಥಗಳನ್ನೂ ಇನ್ನು ವಿಸ್ತಾರವಾಗಿ ಹೇಳುವನು.

**ಸೂತ್ರಂ || ಪ್ರಾಕ್ಕಾಲೇ ದುಸ್ತುಲ್ಯಕರ್ತೃಕಾತ್ || ೫೮೦ ||**

( ೧. ಪ್ರಾಕ್ಕಾಲೇ, ೨. ದುಃ, ೩. ತುಲ್ಯಕರ್ತೃಕಾತ್. )

**ವೃತ್ತಿ ||** ಉತ್ತರಕಾಲಕ್ರಿಯೆಯೊಡನೆ ಏಕಕರ್ತೃಕವಾದ ಪೂರ್ವಕಾಲ ಕ್ರಿಯಾವಾಚಕವಾದ ಧಾತುವಿಗೆ ' ದು ' ಪ್ರತ್ಯಯವು ಸೇರುವುದು.

**ಪ್ರಯೋಗ ||** ಪೂಣ್ದು ಎಚ್ಚಂ, ಕಣು ಪೋದಂ, ಉಣ್ದೊಱಗಿದಂ, ಮಿಂದುಣ್ದಂ, ಕುಡಿದುಗುಳ್ದಂ.

**ಪದಕೃತ್ಯ ||** ' ಪೂರ್ವಕಾಲಕ್ರಿಯೆಯೊಡನೆ ' ಎಂದು ಹೇಳಿದುದರಿಂದ ' ಉಣುತು ಮಿರ್ದ್ದಂ, ಕಾಣುತೆ ಪೋದಂ ' ಮುಂತಾದ ಉದಾಹರಣೆಗಳಲ್ಲಿ ಈ ಕಾರ್ಯವಾಗಿಲ್ಲ. ' ತುಲ್ಯ-ಕರ್ತೃಕಾತ್ ' (ಏಕಕರ್ತೃಕವಾದ) ಎಂದು ಹೇಳಿದುದರಿಂದ ' ಗಾಯಕಂ ಪಾಡಿದಂ, ಅರಸಂ ಕೇಳ್ದಂ, ಆತಂ ಮಿಂದಂ, ಈತನುಣ್ದಂ ' ಮುಂತಾದ ಭಿನ್ನಕರ್ತೃಕ ಕ್ರಿಯೆಗಳ ಉದಾಹರಣೆ ಗಳಲ್ಲಿ ಈ ಕಾರ್ಯವಾಗುವುದಿಲ್ಲ.

**ವಿಚಾರ ೫೮೦**

ಸೂತ್ರದಲ್ಲಿರುವ ' ಪ್ರಾಕ್ಕಾಲೇ ' ( ಪೂರ್ವಕಾಲಾರ್ಥದಲ್ಲಿ ಇರುವ ) ಎಂಬ ಪದವು ಉತ್ತರಕಾಲವನ್ನಪೇಕ್ಷಿಸುವುದು. ಉತ್ತರಕಾಲವಿಲ್ಲದೆ ಒಂದನ್ನು ಪೂರ್ವಕಾಲವೆಂದು ಹೇಳಲಾ ಗುವುದಿಲ್ಲ. ಇದರಿಂದ ಉತ್ತರಕಾಲಕ್ರಿಯೆಯೊಡನೆ ' ಏಕಕರ್ತೃಕವಾದ ' ಎಂಬ ಅರ್ಥವುಂಟಾ ಗುವುದು. ' ತುಲ್ಯಕರ್ತೃಕ ' ಎಂದರೆ ' ಏಕಕರ್ತೃಕ 'ವಾದ ಎಂಬ ಅರ್ಥವು.

ಇಲ್ಲಿ ಒಂದು ಆಕ್ಷೇಪಣೆ — ಎರಡು ಕ್ರಿಯೆಗಳಲ್ಲಿ ಒಂದು ಪೂರ್ವಕಾಲಕ್ರಿಯೆ, ಇನ್ನೊಂದು ಉತ್ತರಕಾಲಕ್ರಿಯೆ, ಈ ಎರಡು ಕ್ರಿಯೆಗಳಿಗೂ ಒಬ್ಬನೇ ಕರ್ತೃವು—ಹೀಗಿರುವಾಗ ಪೂರ್ವಕಾಲಕ್ರಿಯಾವಾಚಕ ಧಾತುವಿಗೆ 'ದು' ಸೇರುವುದೆಂದು ಈ ಸೂತ್ರದಲ್ಲಿ ಹೇಳಿದೆಯಷ್ಟೇ? ಆದರೆ ಪೂರ್ವಕಾಲಕ್ರಿಯಾವಾಚಕದ ಮೇಲೆ ' ದು ' ಸೇರುವುದೆಂಬ ಎರಡು ಕ್ರಿಯೆಗಳಿಗೂ ಒಬ್ಬನೇ ಕರ್ತೃವಿರಬೇಕೆಂಬ ಈ ಎರಡು ನಿಯಮಗಳೂ ಕೂಡುವುದಿಲ್ಲ. ವಿರುದ್ಧ ಪ್ರಯೋಗ ಗಳು ಕಾಣಬರುವವು. ಉತ್ತರಕಾಲಕ್ರಿಯಾವಾಚಕಕ್ಕೂ ಭಿನ್ನಕರ್ತೃಕ್ರಿಯಾವಾಚಕಕ್ಕೂ 'ದು' ಸೇರುವುದುಂಟು. ' ಕಣ್ಮುಚ್ಚಿ ನಕ್ಕಂ, ಬಾಯ್ದೆಱೆದೊಱಗಿದಂ ' ಮುಂತಾದ ಪ್ರಯೋಗಗಳು ರೂಢವಾಗಿವೆ. ಇಲ್ಲಿ ' ಮುಚ್ಚುವಿಕೆ, ತೆಱೆಯುವಿಕೆ ' ಈ ಕ್ರಿಯೆಗಳು ಪೂರ್ವಕಾಲಕಗಳಲ್ಲ. ನಗುವಿಕೆಯಿಂದಲೇ ಮುಚ್ಚುವಿಕೆಯುಂಟಾಗುವುದು; ಮಲಗುವಿಕೆಯಿಂದಲೇ ತೆರೆಯುವಿಕೆ ಯುಂಟಾಗುವುದು; ಎಂದ ಬಳಿಕ ' ಮುಚ್ಚುವಿಕೆ, ತೆರೆಯುವಿಕೆ ' ಎಂಬೀ ಕ್ರಿಯೆಗಳು ' ನಗುವಿಕೆ, ಮಲಗುವಿಕೆ ' ಈ ಕ್ರಿಯೆಗಳ ಕಾರ್ಯಗಳಾದುದರಿಂದ ಉತ್ತರಕಾಲಿಕಗಳೆಂದೇ ಹೇಳಬೇಕು. ಹೀಗಿರುವುದರಿಂದ ಉತ್ತರಕಾಲಕ ಕ್ರಿಯಾವಾಚಿಗಳಿಗೆ ' ದು ' ಸೇರಿದಂತಾಯಿತು.

ಇನ್ನು ' ಪೆಣನಂ ಕಂಡು ದುಃಖವಾದುದು, ಪ್ರಿಯಳಂ ಕಂಡು ಸುಖವಾದುದು ' ಮುಂತಾದ ಉದಾಹರಣೆಗಳಲ್ಲಿ — ಕಾಣುವ ಕ್ರಿಯೆಯ ಕರ್ತೃವು ಬೇರೆ, ಆಗುವ ಕ್ರಿಯೆಯ ಕರ್ತೃವು ಬೇರೆ; ಕಾಣುವ ಕ್ರಿಯೆಯ ಕರ್ತೃವು ದೇವದತ್ತನಾಗಿರಬಹುದು; ಆಗುವ ಕ್ರಿಯೆಯ ಕರ್ತೃವು ಒಂದನೆಯ ವಾಕ್ಯದಲ್ಲಿ ದುಃಖವೂ ಎರಡನೆಯ ವಾಕ್ಯದಲ್ಲಿ ಸುಖವೂ ಆಗಿದೆ. ಈ ಉದಾಹರಣೆಗಳಲ್ಲಿ ' ಕಂಡು ' ಎಂಬಲ್ಲಿ ' ದು ' ಸೇರಿದೆ. ಎಂದರೆ ಭಿನ್ನಕರ್ತೃಕ ಕ್ರಿಯಾವಾಚಕದ ಮುಂದೆ ' ದು ' ಸೇರಿದಂತಾಯಿತು. ಹೀಗೆ ಎರಡು ವಿಷಯಗಳಲ್ಲಿಯೂ ವ್ಯಭಿಚಾರವು ಕಾಣಬರುವುದು.

ಸಮಾಧಾನ — 'ಕಣ್ಮುಚ್ಚಿ ನಕ್ಕಂ, ಬಾಯ್ದೆರೆದೊಱಗಿದಂ' ಎಂಬೀ ಉದಾಹರಣಗಳಲ್ಲಿ 'ಮುಚ್ಚುವುದು, ತೆರೆಯುವುದು' ಈ ಕ್ರಿಯೆಗಳು 'ನಗುವಿಕೆ, ಒರಗುವಿಕೆ' ಈ ಕ್ರಿಯೆಗಳ ಕಾರ್ಯಗಳಾದುದರಿಂದ ಉತ್ತರಕಾಲಿಕಗಳೆಂಬುದು ನಿಜ; ಆದರೆ ಇಲ್ಲಿ ನಾವು ಅವು ಪೂರ್ವಕಾಲಿಕ ಕ್ರಿಯೆಗಳೆಂದು ಇಟ್ಟುಕೊಂಡು ಉಪಪತ್ತಿಯನ್ನು ಹೇಳಹೊರಟಿಲ್ಲ. ಉತ್ತರೋತ್ತರಕಾಲಿಕ ಕ್ರಿಯೆಗಳನ್ನಿಟ್ಟುಕೊಂಡು ನಾವು ಉಪಪತ್ತಿಯನ್ನು ಹೇಳುತ್ತಿದ್ದೇವೆ. ಎಂದರೆ ಮೊದಲು ಒಮ್ಮೆ ನಕ್ಕ ಬಳಿಕ ಕಣ್ಣನ್ನು ಮುಚ್ಚುವ ಕ್ರಿಯೆ ನಡೆದರೂ ಮುಂದೆ ಕಣ್ಣನ್ನು ಮುಚ್ಚಿದ ತರುವಾಯವೂ ನಗುವ ಕ್ರಿಯೆ ನಡೆದಿರುತ್ತದೆ; ಆ ನಗುವ ಕ್ರಿಯೆಯ ದೃಷ್ಟಿಯಿಂದ ಮುಚ್ಚುವ ಕ್ರಿಯೆ ಪೂರ್ವಕಾಲಿಕವಾಗುವುದರಲ್ಲಿ ಅಡ್ಡಿಯಿಲ್ಲ. 'ಮುಚ್ಚುವುದು, ತೆರೆಯುವುದು' ಈ ಉತ್ತರಕಾಲಿಕ ಕ್ರಿಯೆಗಳ ತರುವಾಯವೂ 'ನಗುವಿಕೆ, ಒರಗುವಿಕೆ' ಎಂಬೀ ಕ್ರಿಯೆಗಳು ನಡೆದಿರುತ್ತವೆ — ಎಂಬುದರಲ್ಲಿ ವಿವಾದವಿಲ್ಲ. ಈ ಉತ್ತರೋತ್ತರ ಕಾಲೀನವಾದ 'ನಗುವಿಕೆ, ಒರಗುವಿಕೆ' ಎಂಬೀ ಕ್ರಿಯೆಗಳಿಗೆ 'ಮುಚ್ಚುವಿಕೆ, ತೆರೆಯುವಿಕೆ' ಈ ಕ್ರಿಯೆಗಳು ಪೂರ್ವಕಾಲಿಕಗಳಾಗುವುದರಿಂದ ಅವುಗಳಲ್ಲಿ ಪೂರ್ವಕಾಲಿಕತ್ವವು ಬಂದೇ ಬರುವುದು. ಇನ್ನು * 'ಹೆಣನಂ ಕಂಡು ದುಃಖವಾದುದು' ಮುಂತಾದೆಡೆಗಳಲ್ಲಿ ಭಿನ್ನ ಕರ್ತೃಕತ್ವವೂ ಇಲ್ಲ, ಏಕೆಂದರೆ — 'ದುಃಖವಾದುದು' ಎಂದರೆ 'ದುಃಖಿತನಾದನು' ಎಂಬ ಅರ್ಥವನ್ನು ಇಟ್ಟುಕೊಳ್ಳಬಹುದು. ಸಂಸ್ಕೃತದಲ್ಲಿ ಈ ತರದ —

"ದುಃಖಾಯತೇ ಶವಂ ದೃಷ್ಟ್ವಾ ಪ್ರಿಯಾಂ ದೃಷ್ಟ್ವಾ ಸುಖಾಯತೇ"

( — "ಹೆಣವನ್ನು ನೋಡಿ ದುಃಖಿತನಾಗುತ್ತಾನೆ; ಪ್ರಿಯೆಯನ್ನು ಕಂಡು ಆನಂದಿತನಾಗುತ್ತಾನೆ" ) ಎಂಬೀ ಪ್ರಯೋಗವು ಕಾಣಬರುವುದು. ಅಲ್ಲಿ ದರ್ಶನಕರ್ತೃತ್ವವೂ ದುಃಖಕ್ರಿಯಾ ಕರ್ತೃತ್ವವೂ 'ದೇವದತ್ತ' ಮೊದಲಾದ ಯಾವನೊಬ್ಬ ಕರ್ತೃವಿನಲ್ಲಿಯೇ ಬರುವುದರಿಂದ ಏಕಕರ್ತೃಕತ್ವವು ಸ್ಪಷ್ಟವಾಗಿರುವುದು. ಇದಲ್ಲದೆ 'ದುಃಖವಾದುದು' ಎಂಬಲ್ಲಿ ಆಗುವ ಕ್ರಿಯೆಯ ಕರ್ತೃತ್ವವು ದುಃಖಕ್ಕಿದ್ದರೂ ಭಿನ್ನಕರ್ತೃತ್ವ ಇಲ್ಲವೆಂದು ಹೇಳಬಹುದು. ಏಕೆಂದರೆ ದುಃಖಕ್ಕೂ ದೇವದತ್ತಾದಿ ಕರ್ತೃವಿಗೂ ಆತ್ಯಂತಿಕ ಭೇದವಿಲ್ಲ. ( ಧರ್ಮಧರ್ಮಿಣೋರಭೇದೋಪಚಾರಾತ್) ಧರ್ಮ, ಧರ್ಮಿ ಇವುಗಳಲ್ಲಿ ಔಪಚಾರಿಕವಾಗಿ ಅಭೇದವನ್ನು ಹೇಳುವುದುಂಟು.

**ಅವತಾರಿಕೆ ೫೮೧**

ಪೂರ್ವಸೂತ್ರದಲ್ಲಿ ಹೇಳಿದ 'ದು' ಪ್ರತ್ಯಯದ ಸ್ಥಾನದಲ್ಲಿ ಕೆಲವು ಧಾತುಗಳಿಗೆ 'ಇ' ಪ್ರತ್ಯಯವು ಸೇರುವುದು. 'ಎಂತಹ ಧಾತುಗಳಿಗೆ' ಎಂಬುದನ್ನು ಇಲ್ಲಿ ಹೇಳುತ್ತಾನೆ —

---

***'ಹೆಣವನ್ನು ಕಂಡು ದುಃಖವಾಯಿತು' ಮೊದಲಾದ ಉದಾಹರಣಗಳಲ್ಲಿ 'ಕಂಡು' ಮೊದಲಾದ ಭೂತಕೃದಂತಾವ್ಯಯಗಳನ್ನು ಭಿನ್ನಕರ್ತೃಕಗಳನ್ನಾಗಿ ಪ್ರಯೋಗಿಸಿರುವುದು ಉಚಿತವಲ್ಲ; ಭಾಷೆಯು ಹೊಸ ಮಾರ್ಗವನ್ನು ಹಿಡಿಯುತ್ತಿರುವಾಗ — ಎಂದರೆ ಹೊಸಗನ್ನಡದ ಮಾರ್ಗದಲ್ಲಿ 'ಮಳೆಯಾಗಿ ಬೆಳೆ ಬಂದಿತು, ಬೆಳೆ ಬಂದು ಸುಕಾಲವಾಯಿತು' ಮುಂತಾದ ಪ್ರಯೋಗಗಳು ಹೆಚ್ಚಾಗಿ ಕಾಣಬರುತ್ತಿವೆ. ಇಂತಹವು ಅಪಪ್ರಯೋಗಗಳಾಗಿದ್ದರೂ ಶಾಸನಕಾರನು ಒಂದೇ ತಾತ್ಪರ್ಯದ ಎರಡು ಉಪಪತ್ತಿಗಳನ್ನು ಹೇಳಹೊರಟಿರುವನು. ಮೊದಲನೆಯ ಉಪಪತ್ತಿಗಿಂತ ಎರಡನೆಯ ಉಪಪತ್ತಿಯು ಸ್ವಲ್ಪ ಮೇಲು.**

**ಸೂತ್ರಂ || ಇದುತೋಽಲಘ್ವಾದಿ ದ್ವಿಸ್ವರಾತ್ || ೫೮೧ ||**

( ೧. ಇತ್, ೨. ಉತಃ, ೩. ಅಲಘ್ವಾದಿ ದ್ವಿಸ್ವರಾತ್. )

**ಅನುವೃತ್ತಿ ||** ೧. ಪ್ರಾಕ್ಕಾಲೇ, ೨. ತುಲ್ಯಕರ್ತೃಕಾತ್.

**ವೃತ್ತಿ || ಉಕಾರಾಂತ ಧಾತುಗಳಲ್ಲಿ ಯಾವ ಧಾತುಗಳು ಲಘ್ವಾದಿಗಳಾಗಿದ್ದು ದ್ವಿಸ್ವರಕಗಳಾಗಿರುವುವೋ ಅಂತಹ ಧಾತುಗಳನ್ನು ಬಿಟ್ಟು ಉಳಿದ ಉತ್ತರಕಾಲಕ್ರಿಯೆಯೊಡನೆ ಏಕಕರ್ತೃಕಗಳಾದ ಪೂರ್ವಕಾಲಕ್ರಿಯಾವಾಚಕ ಧಾತುಗಳಿಗೆ ' ಇ ' ಪ್ರತ್ಯಯವು ಸೇರುವುದು.**

**ಪ್ರಯೋಗ ||** ನೋಡಿ ಪೋದಂ, ಪಾಡಿ ಕುಣಿದಂ, ಬೇಡಿ ಕೊಂಡಂ, ಅಱಿಸಿ ಕಂಡಂ ಸಂಗ್ರಹಿಸಿ ಬರೆದಂ, ಟಿಪ್ಪಣಿಸಿ ಬರೆದಂ.

**ಪದಕೃತ್ಯ ||** ' ಉಕಾರಾಂತ ಧಾತುಗಳಲ್ಲಿ....' ಎಂದು ಹೇಳಿದುದರಿಂದ ಇತರ ವರ್ಣಾಂತ ಧಾತುಗಳಿಗೆ ಈ ಕಾರ್ಯವಿಲ್ಲ. ಉದಾ : ಬಿಗಿದು ಕಟ್ಟಿದಂ, ತೆಗೆದು ಪೋದಂ; ( ಬಿಗಿದು, ತೆಗೆದು ಮುಂತಾದೆಡೆಗಳಲ್ಲ ' ದು ' ಸೇರಿದೆ. ) ಲಘ್ವಾದಿ ದ್ವಿಸ್ವರಕಗಳನ್ನು ಬಿಟ್ಟು ಎಂದು ಹೇಳಿದುದರಿಂದ ಲಘ್ವಾದಿ ದ್ವಿಸ್ವರಕ ಧಾತುಗಳಿಗೆ ಈ ಕಾರ್ಯವಿಲ್ಲ. ಉದಾ : ಮುತ್ತು, ತೆತ್ತು, ಪೊತ್ತು, ತಪ್ಪು, ಅಟ್ಟು, ಸುಟ್ಟು, ಒಕ್ಕು, ಮಿಕ್ಕು, ಎಚ್ಚು, ಪಚ್ಚು.

**ವಿಚಾರ ೫೮೧**

ಸೂತ್ರದಲ್ಲಿರುವ ' ಅಲಘ್ವಾದಿ ದ್ವಿಸ್ವರಾತ್ ' ಎಂಬ ಪದಕ್ಕೆ ಲಘ್ವಾದಿ ದ್ವಿಸ್ವರಕಗಳನ್ನು ಬಿಟ್ಟು ಎಂಬ ಅರ್ಥವು. ' ಲಘ್ವಾದಿ ದ್ವಿಸ್ವರಕಗಳನ್ನು ' ಎಂಬ ಪದವು ಲಘ್ವಾದಿಗಳೂ ದ್ವಿಸ್ವರಕಗಳೂ ( ಲಘ್ವಾದಯಶ್ಚ ದ್ವಿಸ್ವರಾಶ್ಚ ) ಎಂದು ದ್ವಂದ್ವಸಮಾಸವೇ ? ಲಘ್ವಾದಿಗಳಾದ ದ್ವಿಸ್ವರಕಗಳು ( ಲಘ್ವಾದಯಶ್ಚ ತೇ ದ್ವಿಸ್ವರಾಶ್ಚ ) ಎಂದು ವಿಶೇಷಣೋಭಯಪದಕರ್ಮಧಾರಯವೇ ಎಂಬ ಶಂಕೆಯು ಇಲ್ಲಿ ಪ್ರಸಕ್ತವಾಗುವುದು. ದ್ವಂದ್ವಸಮಾಸವನ್ನು ಮಾಡಿದರೆ ಲಘ್ವಾದಿ ಧಾತುಗಳನ್ನೂ ದ್ವಿಸ್ವರಕ ಧಾತುಗಳನ್ನೂ ಬಿಟ್ಟು ಉಳಿದ ಧಾತುಗಳಿಗೆ ' ಇ ' ಪ್ರತ್ಯಯವು ಸೇರುವುದು ಎಂಬ ಅರ್ಥವಾಗುವುದು. ಆಗ ' ಅಱಿಸು, ಮಱಿಸು ' ಮೊದಲಾದ ಲಘ್ವಾದಿ ಧಾತುಗಳಿಗೂ ' ನೋಡು, ಕೂಡು ' ಮೊದಲಾದ ದ್ವಿಸ್ವರಕ ಧಾತುಗಳಿಗೂ ' ಇ ' ಪ್ರತ್ಯಯವು ಸೇರುವುದಿಲ್ಲವೆಂದು ಹೇಳಿದಂತಾಗುವುದು. ಆದರೆ ' ಅಱಿಸಿ, ಮಱಿಸಿ, ನೋಡಿ, ಕೂಡಿ ' ಮೊದಲಾದ ರೂಪಗಳು ' ಇ ' ಪ್ರತ್ಯಯವು ಸೇರಿ ಆದಂಥವೆಂಬುದು ಸ್ಪಷ್ಟವಿದೆ. ಆದುದರಿಂದ ಅಲ್ಲಿ ದ್ವಂದ್ವ ಸಮಾಸವು ಇಷ್ಟವಲ್ಲ. ವಿಶೇಷಣೋಭಯಪದ ಕರ್ಮಧಾರಯವೇ ಸಮ್ಮತವಾದುದೆಂದು ವೃತ್ತಿಯಲ್ಲಿ ' ಲಘ್ವಾದಯೋ ಯೇ ದ್ವಿಸ್ವರಾ ಧಾತವಃ '( ಲಘ್ವಾದಿಗಳಾಗಿದ್ದು ಯಾವವು ದ್ವಿಸ್ವರಕಗಳೋ ಅಂಥವು ) ಎಂದು ಸ್ಪಷ್ಟಪಡಿಸಿರುವನು. ಆದುದರಿಂದ ' ಅಱಿಸು, ಮಱಿಸು ' ಮೊದಲಾದುವು ಲಘ್ವಾದಿಗಳಾಗಿದ್ದರೂ ದ್ವಿಸ್ವರಕಗಳಲ್ಲದುದರಿಂದಲೂ ' ನೋಡು, ಕೂಡು ' ಮೊದಲಾದುವು ದ್ವಿಸ್ವರಕಗಳಾಗಿದ್ದರೂ ಲಘ್ವಾದಿಗಳಲ್ಲದುದರಿಂದಲೂ ಅಲಘ್ವಾದಿ ದ್ವಿಸ್ವರಕಗಳಾಗುವುವು. ಆದುದರಿಂದ ಅಂತಹ ಧಾತುಗಳಿಗೆ ' ಇ ' ಪ್ರತ್ಯಯವು ಸೇರುವುದೆಂದು ಹೇಳಿದಂತಾಗುವುದು.

' ಅಡು, ಸುಡು, ತೆಱು, ಪೊಱು, ಇಸು, ಬಿಸು ' ಮೊದಲಾದುವು ಲಘ್ವಾದಿ ದ್ವಿಸ್ವರಕ ಧಾತುಗಳು. ಇವುಗಳಿಗೆ ' ಇ ' ಪ್ರತ್ಯಯವು ಸೇರುವುದಿಲ್ಲ. ಇವುಗಳಿಗೆ ಪೂರ್ವಸೂತ್ರದಿಂದ ' ದು ' ಪ್ರತ್ಯಯವೇ ಸೇರುವುದು. ಆದುದರಿಂದ ಅಂತಹ ಧಾತುಗಳ ' ಮುತ್ತು, ತೆತ್ತು, ಅಟ್ಟು ' ಮುಂತಾದ ರೂಪಗಳನ್ನೇ ಪ್ರತ್ಯುದಾಹರಣೆಗಳನ್ನಾಗಿ ತೋರಿಸಿರುವನು.

**ಅವತಾರಿಕೆ ೫೮೨**

ಪೂರ್ವಕಾಲ ಕ್ರಿಯಾವಾಚಕದ ನಿಷೇಧಾರ್ಥಕ ರೂಪವು.

**ಸೂತ್ರಂ || ಅದೆತ್ ಪ್ರತಿಷೇಧೇ || ೫೮೨ ||**

( ೧. ಅದೆತ್, ೨. ಪ್ರತಿಷೇಧೇ. )

**ಅನುವೃತ್ತಿ** || ೧. ಪ್ರಾಕ್ಕಾಲೇ, ೨. ತುಲ್ಯಕರ್ತೃಕಾತ್.

**ವೃತ್ತಿ** || ಉತ್ತರಕಾಲಕ್ರಿಯೆಯೊಡನೆ ಏಕಕರ್ತೃಕವಾದ **ಪೂರ್ವಕಾಲಕ್ರಿಯಾವಾಚಕ ಧಾತುವಿಗೆ ನಿಷೇಧವು ತೋರುತ್ತಿದ್ದಾಗ ' ಅದೆ '** ಪ್ರತ್ಯಯವು ಸೇರುವುದು.

**ಪ್ರಯೋಗ** || ಮಾಡದೆ ಪೋದಂ, ನೋಡದೆ ನುಡಿದಂ, ಕೇಳದೆ ಪೋದಂ, ಅಱಯದೆ ಕೆಟ್ಟ.

**ಪದಕೃತ್ಯ** || ' ನಿಷೇಧವು ತೋರುತ್ತಿದ್ದಾಗ ' ಎಂದು ಹೇಳಿದುದರಿಂದ ನಿಷೇಧವಿಲ್ಲದಾಗ ಈ ಕಾರ್ಯವಿಲ್ಲ. ಉದಾ : ಮಾಡಿ ಪೋದಂ, ನೋಡಿ ನಡೆದಂ.

**ಅವತಾರಿಕೆ ೫೮೩**

' ಇರ್ ' ಧಾತುವಿನ ರೂಪವಿಶೇಷವು.

**ಸೂತ್ರಂ || ವಾಕ್ಚೇರಃ || ೫೮೩ ||**

( ೧. ವಾ, ೨. ಅಕ್, ೩. ಚ, ೪. ಇರಃ. )

**ಅನುವೃತ್ತಿ** || ೧. ಪ್ರಾಕ್ಕಾಲೇ, ೨. ತುಲ್ಯಕರ್ತೃಕಾತ್, ೩. ಅದೆತ್, ೪. ಪ್ರತಿಷೇಧೇ.

**ವೃತ್ತಿ** || ಉತ್ತರಕಾಲಕ್ರಿಯೆಯೊಡನೆ ಏಕಕರ್ತೃಕವಾದ **ಪೂರ್ವಕಾಲ** ಕ್ರಿಯಾವಾಚಕವಾದ **' ಇರ್ '** ಧಾತುವಿಗೆ **ನಿಷೇಧವು ತೋರುವಾಗ ' ಅದೆ ' ಪ್ರತ್ಯಯವು ಸೇರುವುದು. ಆಗ ಅ ಕಾರಾಗಮವು ವಿಕಲ್ಪವಾಗಿ ಆಗುವುದು.**

**ಪ್ರಯೋಗ** || ಇರ ಅದೆ ಪೋದಂ, ಇರದೆ ಪೋದಂ.

**ವಿಚಾರ ೫೮೩**

ಈ ಸೂತ್ರದಲ್ಲಿ ವಿಕಲ್ಪಾರ್ಥಕವಾದ ' ವಾ ' ಶಬ್ದವು ಏಕೆ ಬೇಕು ? ಅದು ಇಲ್ಲದಿದ್ದರೆ ಅ ಕಾರಾಗಮವು ನಿತ್ಯವಾಗಿ ಆಗುವುದಷ್ಟೇ ? ಹಾಗಾದರೆ ' ಇರ ಅದೆ ' ಎಂಬ ರೂಪವೊಂದೇ ಸಿದ್ಧಿಸುವುದು. ' ಇರದೆ ' ಎಂಬ ರೂಪಸಿದ್ಧಿಗೆ ಆಸ್ಪದವಿಲ್ಲವಲ್ಲಾ ಎಂದು ಕೇಳಬಹುದು. ಆದರೆ ' ವೇರದೆ ' ( ೪೭ ) ಎಂಬುದರಿಂದ ಪ್ರಕೃತಿಭಾವವು ವಿಕಲ್ಪವಾಗಿ ಆಗುವುದೆಂಬ ವಿಧಾನವಿರುವುದರಿಂದ ' ಇರ ಅದೆ, ಇರದೆ ' ಎಂಬ ಎರಡು ರೂಪಗಳೂ ಸಿದ್ಧಿಸುವುವು. ಹೀಗೆ ಇಷ್ಟಸಿದ್ಧಿಯಾದರೂ ' ಇರ ಅದೆ ' ಎಂಬಲ್ಲಿ ಅ ಕಾರಾಗಮವಿರುವುದೆಂಬುದನ್ನೂ ' ಇರದೆ ' ಎಂಬಲ್ಲಿ ಅ ಕಾರಾಗಮವು ಇರಲಿ ಇಲ್ಲದಿರಲಿ ಉಭಯಪಕ್ಷಗಳಲ್ಲಿಯೂ ದೋಷವಿಲ್ಲವೆಂಬುದನ್ನೂ ತಿಳುಹುವುದಕ್ಕಾಗಿಯೇ ' ವಾ ' ಎಂಬುದನ್ನು ಈ ಸೂತ್ರದಲ್ಲಿ ಸೇರಿಸಿದನು. ಇಲ್ಲದಿದ್ದರೆ ' ಇರದೆ ' ಎಂಬಲ್ಲಿ ಅ ಕಾರಾಗಮವು ತಪ್ಪದೇ ಇರುವುದೆಂದೇ ತಿಳಿವಳಿಕೆಯುಂಟಾಗಬಹುದು. ಈಗ 'ಇರದೆ' ಎಂಬಲ್ಲಿ ಅ ಕಾರಾಗಮವು ಒಮ್ಮೆ ಉಂಟು, ಒಮ್ಮೆ ಇಲ್ಲ ಎಂದು ತಿಳಿದುಕೊಂಡಷ್ಟಕ್ಕೆ ಫಲವೇನು ಎಂದು ಕೇಳಬಹುದು. ಆದರೆ ' ಏಕಃ ಶಬ್ದಃ ಸಮ್ಯಗ್ವಿದಿತಃ ಸ್ವರ್ಗೇ ಲೋಕೇ ಕಾಮಧುಗ್

ಭವತಿ ' ಎಂಬ ವಚನವಿರುವುದು. ಇದಲ್ಲದೆ ' ಶಬ್ದಾರ್ಥಜ್ಞಾನಪೂರ್ವಕಂ ಹಿ ಸನ್ಮಾರ್ಗಾನುಷ್ಠಾನಂ ' ಎಂಬ ವಚನದಲ್ಲಿ ಶಬ್ದಾರ್ಥಜ್ಞಾನವೆಂದರೆ — ಅರ್ಥ, ವ್ಯಂಜನ ಅರ್ಥವ್ಯಂಜನೋಭಯ ಇವುಗಳ ಸಾಕಲ್ಯದಿಂದ ಶಬ್ದಾರ್ಥಜ್ಞಾನವೇ ಸನ್ಮಾರ್ಗಸಾಧಕವೆಂಬ ಅರ್ಥವಿರುವುದು. ಅಥವಾ ' ವಾ ' ಶಬ್ದದ ಅನುವೃತ್ತಿಯು ಉತ್ತರಸೂತ್ರಕ್ಕೆ ದೊರೆಯಬೇಕೆಂದು ಈ ಸೂತ್ರದಲ್ಲಿ ' ವಾ ' ಹೇಳಿದೆಯೆಂದು ತಿಳಿಯಬೇಕು. ' ವಾ ' ಎಂಬುದು ಮುಂದಿನ ಸೂತ್ರಕ್ಕೆ ಬೇಕಾಗಿರುವುದು.

**ಅವತಾರಿಕೆ ೫೮೫**

' ಆಗು ' ಧಾತುವಿನ ವಿಶಿಷ್ಟ ರೂಪಗಳು.

**ಸೂತ್ರಂ || ಅದ್ವದಾದಾಗೋೇರ[1]ನರ್ಹತ್ವೇ || ೫೮೫ ||**

( ೧. ಅದ್ವದಾತ್, ೨. ಆಗೋಃ, ೩. ಅನರ್ಹತ್ವೇ. )

**ವೃತ್ತಿ || ಅನರ್ಹತ್ವಾರ್ಥದಲ್ಲಿ ' ಆಗು ' ಧಾತುವಿಗೆ ' ಅದು, ಅ, ಅ ' ಎಂಬೀ ಪ್ರತ್ಯಯಗಳು ಸೇರುವುವು.**

**ಪ್ರಯೋಗ ||** ಆಗದು, ಆಗ, ಆಗಾ.

**ಪದಕೃತ್ಯ ||** ' ಅನರ್ಹತ್ವಾರ್ಥದಲ್ಲಿ ' ಎಂದು ಹೇಳಿದುದರಿಂದ ಆ ಅರ್ಥವಿಲ್ಲದಲ್ಲಿ ಈ ಕಾರ್ಯವಿಲ್ಲ. ಉದಾ : ಅಪ್ಪುದು.

**ವಿಚಾರ ೫೮೫**

ಈ ಸೂತ್ರಕ್ಕೆ ಪೂರ್ವಸೂತ್ರದಿಂದ ' ಪ್ರಾಕ್ಕಾಲೇ, ತುಲ್ಯಕರ್ತೃಕಾತ್ ' ಎಂಬಿವುಗಳ ಅನುವೃತ್ತಿ ಇಲ್ಲ.

ಈ ಸೂತ್ರದಲ್ಲಿ ಅನರ್ಹತ್ವೇ ( ಅನರ್ಹತ್ವಾರ್ಥದಲ್ಲಿ — ಅಯೋಗ್ಯತ್ವಾರ್ಥದಲ್ಲಿ ) ಎಂಬ ಪದವಿಲ್ಲದಿದ್ದರೂ ನಡೆಯುವುದು. ಏಕೆಂದರೆ ' ಆಗು ' ಧಾತುವಿಗೆ ಅರ್ಹತ್ವವು — ಅರ್ಹನಾಗು ಎಂಬುದು — ಅರ್ಥವು. ಅದರ ನಿಷೇಧವು ಅನರ್ಹತ್ವವು. ' ಪ್ರತಿಷೇಧೇ ' ಎಂಬುದನ್ನು ಪೂರ್ವಸೂತ್ರ ( ೫೮ ) ದಿಂದ ಅನುವೃತ್ತಿಯಾಗಿ ತೆಗೆದುಕೊಳ್ಳಬಹುದು. ಆದುದರಿಂದ ' ಅನರ್ಹತ್ವೇ ' ಎಂಬುದರ ಪ್ರಯೋಜನವೇನು ಎಂದು ಶಂಕಿಸಬಹುದು. ಆದರೆ ಅಪ್ರಾದುರ್ಭಾವ ( ಉಂಟಾಗದಿರುವಿಕೆ ) ಎಂಬ ಅರ್ಥದಲ್ಲಿ ಈ ಪ್ರತ್ಯಯಗಳು ಬರಬಾರದೆಂದಿರುವುದರಿಂದ ' ಅನರ್ಹತ್ವೇ ' ಎಂಬ ಪದವು ಸೂತ್ರದಲ್ಲಿ ಬೇಕಾಗಿದೆ ಎಂದು ಹೇಳಬಹುದು. ' ಆಗು ' ಧಾತುವು ಪ್ರಾದುರ್ಭಾವ, ಅರ್ಹತ್ವ ಈ ಎರಡು ಅರ್ಥಗಳಲ್ಲಿಯೂ ಇದೆ. ' ಪ್ರತಿಷೇಧೇ ' ಎಂಬುದನ್ನು ಪೂರ್ವಸೂತ್ರದಿಂದ ಅನುವೃತ್ತಿಯಾಗಿ ತೆಗೆದುಕೊಂಡರೆ ಈ ಎರಡು ಅರ್ಥಗಳ ಪ್ರತಿಷೇಧದಲ್ಲಿಯೂ ಈ ಪ್ರತ್ಯಯಗಳು ಬರುವುವೆಂದು ಹೇಳಿದಂತಾಗುವುದು. ಆದರೆ ' ಅದು ' ಮೊದಲಾದ ಇಲ್ಲಿ ಹೇಳಿದ ಪ್ರತ್ಯಯಗಳು ಅನರ್ಹತ್ವಾರ್ಥದಲ್ಲಿ ಮಾತ್ರ ಸೇರುವುವೆಂದೂ ಅಪ್ರಾದುರ್ಭಾವಾರ್ಥದಲ್ಲಿ ಇಲ್ಲವೆಂದೂ ಹೇಳುವುದಕ್ಕಾಗಿ ' ಅನರ್ಹತ್ವೇ ' ಎಂಬ ಪದವನ್ನು ಇಟ್ಟುಕೊಂಡಿದ್ದಾನೆಂದು ತಿಳಿಯಬೇಕು.

---

**ಪಾಠಾಂತರ : ೧ ಅನರ್ಹಾರ್ಥೇ**

ಇನ್ನು ಈ ಸೂತ್ರದಲ್ಲಿ ಹೇಳಿದ ಪ್ರತ್ಯಗಳಲ್ಲಿ ' ಅದು ' ಎಂಬುದು ಏಕೆ ? ಅದನ್ನು ಹೇಳದಿದ್ದರೂ ' ಆಗದು ' ಎಂಬ ರೂಪದ ಸಿದ್ಧಿಯಾಗುವುದು. ಹೇಗೆಂದರೆ — **' ಅಚ್ ಕರ್ತೃಕರ್ಮಣೋಃ || ೫೪೩ || '** ಎಂಬುದರಿಂದ ' ಅಚ್ ' ಪ್ರತ್ಯಯವು ಬರಲು **' ಅಚಃ || ೪೫೫ || '** ಎಂಬುದರಿಂದ ' ಉದು ' ಆದೇಶವಾಗಲು **' ಓರತ್ ಪ್ರತಿಷೇಧೇ || ೪೬೦ || '** ಎಂಬುದರಿಂದ ಉದುವಿನ ಉ ಕಾರಕ್ಕೆ ಅ ಕಾರಾದೇಶವನ್ನು ಮಾಡಲು ' ಆಗದು ' ಎಂಬ ರೂಪವಾಗುವುದು. ಹಾಗಾದರೆ ಈ ರೀತಿ ಸಿದ್ಧವಾದ ರೂಪವು ಅನರ್ಹತ್ವಾರ್ಥದಲ್ಲಿಷ್ಟೇ ಅಲ್ಲದೆ ಅಪ್ರಾದುರ್ಭಾವಾರ್ಥದಲ್ಲಿಯೂ ಇರುವುದಲ್ಲವೇ ? ಎಂದ ಬಳಿಕ ಇಲ್ಲಿ 'ಅದು' ಪ್ರತ್ಯಯವನ್ನು ಹೇಳಬೇಕಾದುದು ಅವಶ್ಯವೆಂದು ಎನಬೇಕಾಗುವುದು. ಆದರೆ ನಿಜವಾಗಿ ಬಹುವಚನಾರ್ಥದಲ್ಲಿಯೂ ಈ ('ಆಗದು') ರೂಪವು ಬೇಕೆಂಬುದಕ್ಕಾಗಿ ಇಲ್ಲಿ ' ಅದು ' ಪ್ರತ್ಯಯವನ್ನು ಹೇಳಿದ್ದಾನೆಂದು ತಿಳಿಯಬೇಕು. ' ಅಚ್ ' ಪ್ರತ್ಯಯಕ್ಕೆ ಆದೇಶವಾಗಿ ಬರುವ 'ಉದು' ಎಂಬುದು ಏಕವಚನದಲ್ಲಲ್ಲದೆ ಬಹುವಚನದಲ್ಲಿ ಇಲ್ಲ. ಅನರ್ಹತ್ವಾರ್ಥದಲ್ಲಿ ' ಆಗದು ' ಎಂಬುದು ಏಕವಚನದಲ್ಲಿಯೂ ಬಹುವಚನದಲ್ಲಿಯೂ ಕಾಣಬರುವುದು. ಉದಾ : ' ಸೀಸಿದಂ ನಂಬಲಾಗದು, ಸೀಮಿದಂ ನಂಬಲಾಗದು; ದೇಹಮುಂ ನಂಬಲಾಗದು, ಪೆಂಡಿರಂ ನಂಬಲಾಗದು ' ಎಂಬುದಾಗಿ ಕರ್ತ್ರರ್ಥದಲ್ಲಿಯೂ ಕರ್ಮಾರ್ಥದಲ್ಲಿಯೂ ಏಕವಚನ ಬಹುವಚನಗಳಲ್ಲಿಯೂ ಪ್ರಯೋಗಗಳು ಕಾಣಬರುವುವು.

ಇಲ್ಲಿ ' ಆಗು ' ಎಂಬ ಪ್ರಕೃತಿಯ ಮುಂದೆ ' ಅದು, ಅ, ಆ ' ಎಂಬೀ ಮೂರು ಪ್ರತ್ಯಯಗಳನ್ನು ವಿಧಿಸಿದ್ದರೂ ಅವು ಏಕಕಾಲದಲ್ಲಿ ಆಗುವುದಿಲ್ಲವೆಂದೂ ಹೀಗೆ ಹೇಳಿದಲ್ಲಿ ಅವು ಪರ್ಯಾಯದಿಂದ ಆಗುವುವೆಂದೂ ಸಿದ್ಧವಾಗಿದ್ದರೂ ಮತ್ತೆ ಇಲ್ಲಿ ' ವಾ ' ಎಂಬುದರ ಅನುವೃತ್ತಿ ಏಕೆ ? ಅಹುದು. ' ವಾ ' ಎಂಬುದರ ಅನುವೃತ್ತಿಯನ್ನು ಬಿಟ್ಟಿದ್ದರೆ ನಡೆಯಬಹುದಾಗಿದ್ದರೂ ಸ್ಪಷ್ಟತೆಗಾಗಿ ' ವಾ ' ಅನುವೃತ್ತಿ ಎಂದು ತಿಳಿಯಬೇಕು. ಇಲ್ಲವೆ ' ವಾ ' ಎಂಬುದು ಬಹುಲಾರ್ಥಕವೆಂದು ತಿಳಿಯಬೇಕು. ಬಹುಲತೆ ಎಂಬುದರಿಂದ ' ಆಗು ' ಧಾತುವಿಗೆ ಪುಂಸ್ತ್ರೀಲಿಂಗಗಳಲ್ಲಿ ನಿಷೇಧಾರ್ಥದಲ್ಲಿ ' ಅದ ' ಪ್ರತ್ಯಯವು ಸೇರುವುದೆಂದು ತಿಳಿಯಬೇಕು. ಪ್ರಯೋಗ —

**ಆಗದರ ಮನಮನಜಂದೊಡೆ**
**ಬೇಗದೆ ತೊಲಗುವುದು ತೊಲಗದಿರ್ದೊಡೆ ಕಡೆಯೊಳ್**
**ನಾಗರಪೆಡೆನೆಱಲಾಸೆಗೆ**
**ಪೋಗಿ ಸುಖಂ ಬಾೞ್ವೆನೆಂಬ ಕಷ್ಟಪೊಲಕ್ಕುಂ ||**

ಅಥವಾ ' ಅದ್ವದಾತ್ ' ಎಂಬಲ್ಲಿ ' ಅದು, ಅತ್, ಆತ್ ' ಎಂದು ವಿಭಾಗಿಸಿದಂತೆ ' ಅದು, ಅದ ಆತ್ ' ಎಂದೂ ವಿಭಾಗಿಸಬಹುದು. ಈಗ ಮಧ್ಯದ ' ಅದ ' ಎಂಬುದು ಉಳಿದೆರಡರಂತೆ ಎಲ್ಲ ಲಿಂಗಗಳಲ್ಲಿಯೂ ಅನ್ವಯವಾಗಿಯೂ ಇರದೆ ಕೇವಲ ಪುಂಸ್ತ್ರೀಲಿಂಗಗಳಲ್ಲಿ ಅನ್ವಯವಾಗಿ ಇರುವುದೆಂದು ತಿಳಿಯಬೇಕು; ಪ್ರಯೋಗವು ಮೇಲೆ ತೋರಿಸಿದೆ. ಈ ವಿಶೇಷಾರ್ಥವು ' ವಾ ' ಎಂಬುದರ ಅನುವೃತ್ತಿಯಿಲ್ಲದೆ ಉಂಟಾಗದು. ಆದುದರಿಂದ ' ವಾ ' ಎಂಬುದರ ಅನುವೃತ್ತಿಯು ಇಲ್ಲಿ ಬೇಕು.

**ಅವತಾರಿಕೆ ೫೮೫**

'ಅಲ್' ಪ್ರತ್ಯಯವೂ ಅದರ ಅರ್ಥವೂ.

**ಸೂತ್ರ || ಅಲರ್ಹಾರ್ಥೇ || ೫೮೫ ||**

( ೧. ಅಲ್, ೨. ಅರ್ಹಾರ್ಥೇ. )

**ವೃತ್ತಿ || ಅರ್ಹಾರ್ಥವು ತೋರುತ್ತಿದ್ದಾಗ ಧಾತುವಿಗೆ 'ಅಲ್' ಪ್ರತ್ಯಯವು ಸೇರುವುದು.**

**ಪ್ರಯೋಗ ||** ಮಾಡಲ್ ದಕ್ಷಂ, ನೋಡಲ್ ಸಮರ್ಥಂ, ಮುಟ್ಟಲರ್ಹಂ, ಉಣಲೊಳ್ಳಿತ್ತು.

**ವಿಚಾರ ೫೮೫**

'ಅರ್ಹ' ಎಂದರೆ ಶಕ್ತ; ಇಲ್ಲಿ 'ಅರ್ಹಾರ್ಥೇ' ಎಂಬುದು ಉಪಪದ ನಿರ್ದೇಶವನ್ನು ಮಾಡುವುದು. ಎಂದರೆ 'ಅರ್ಹಾರ್ಥಕ ಪದಗಳು ಉಪಪದವಾಗಿರುವಾಗ' ಎಂಬ ಅರ್ಥವು.

ಇಲ್ಲಿಯೂ 'ವಾ' ಎಂಬುದರ ಅನುವೃತ್ತಿಯನ್ನು ಮಾಡಿಕೊಂಡು ಅದಕ್ಕೆ ಬಹುಲಾರ್ಥವನ್ನು ಇಟ್ಟುಕೊಳ್ಳಬೇಕು. ಬಹುಲಾರ್ಥದಿಂದ ಕಾಲಾರ್ಥಕೋಪಪದವಿದ್ದಾಗಲೂ 'ಅಲ್' ಪ್ರತ್ಯಯವು ಬರುವುದೆಂಬ, ಒಮ್ಮೊಮ್ಮೆ ಯಾವ ಉಪಪದವೂ ಇಲ್ಲದಾಗಲೂ ಬರುವುದೆಂಬ ಅಭಿಪ್ರಾಯದಿಂದ ವೃತ್ತಿಯಲ್ಲಿ ಅರ್ಹಾರ್ಥವು ಗಮ್ಯಮಾನವಾಗಲು ( ತೋರುತ್ತಿದ್ದಾಗ ) ಎಂದು ಹೇಳಿದ್ದಾನೆ.

ಶಕ್ತ್ಯಾರ್ಥೋಪಪದದ ಉದಾಹರಣಗಳು — 'ನೋಡಲ್ ಸಮರ್ಥಂ' ಮುಂತಾದುವು. ಬೇರೆ ಅರ್ಥಗಳಲ್ಲಿ ಉದಾಹರಣಗಳನ್ನು ಸಂಗ್ರಹಿಸಬೇಕು.

ಕಾಲಾರ್ಥೋಪಪದದ ಮತ್ತು ಬೇರೆ ಉದಾಹರಣಗಳು — 'ನೋಡಲ್ ಸಮಯಂ, ಪೋಗಲ್ ಪೊೞ್ತು, ಕೂಡಲ್ ಪದಿರ್, ನೋಡಲ್ ಪ್ರೌಢಿ, ತೆಗೆಯಲುಪಾಯಂ.' ಉಪಪದವಿಲ್ಲದಾಗಿನ ಉದಾ : 'ನೋಡಲ್, ನುಡಿಯಲ್.'

**ಅವತಾರಿಕೆ ೫೮೬**

'ಅಲ್' ಪ್ರತ್ಯಯವೂ ಅದರ ಅರ್ಥವೂ.

**ಸೂತ್ರಂ || ಕ್ರಿಯಾಯಾಂ ಕ್ರಿಯಾರ್ಥಾಯಾಮ್ || ೫೮೬ ||**

( ೧. ಕ್ರಿಯಾಯಾಂ, ೨. ಕ್ರಿಯಾರ್ಥಾಯಾಮ್. )

**ಅನುವೃತ್ತಿ ||** ೧. ಅಲ್.

**ವೃತ್ತಿ || ಕ್ರಿಯಾಂತರವು ( ಬೇರೆ ಕ್ರಿಯೆಯು ) ಪ್ರಯೋಜನವಾಗಿ 'ಉಳ್ಳ' ಕ್ರಿಯೆಯನ್ನು ಹೇಳುವಲ್ಲಿ ಧಾತುವಿಗೆ 'ಅಲ್' ಪ್ರತ್ಯಯವು ಸೇರುವುದು.**

**ಪ್ರಯೋಗ ||** ಉಣಲ್ ಬಂದಂ, ತರಲ್ ಪೋದಂ, ಪಾಡಲ್ ಬಂದಂ, ಕಯ್ಯಿಂ ಬಿತ್ತಲ್ ಪೊಲಮನುೞ್ತಂ.

**ಪದಕೃತ್ಯ ||** ಕ್ರಿಯಾಂತರವು ಪ್ರಯೋಜನವಾಗಿ 'ಉಳ್ಳ' ಎಂದು ಹೇಳಿದುದರಿಂದ 'ಬಂದಂ, ಪೋದಂ' ಮೊದಲಾದೆಡೆಗಳಲ್ಲಿ 'ಅಲ್' ಪ್ರತ್ಯಯವಿಲ್ಲ.

**ವಿಚಾರ ೫೮೬**

ಸೂತ್ರದಲ್ಲಿದ್ದ 'ಕ್ರಿಯಾರ್ಥಾಯಾಂ' ಎಂಬ ಪದದಲ್ಲಿ 'ಕ್ರಿಯೆ' ಎಂದರೆ 'ಕ್ರಿಯಾಂತರ' ( ಬೇರೆ ಕ್ರಿಯೆ ) ಎಂದು ಅರ್ಥವು. 'ಕ್ರಿಯಾರ್ಥಾಯಾಂ' ಎಂಬುದು 'ಕ್ರಿಯಾಯಾಂ'

ಎಂಬುದಕ್ಕೆ ವಿಶೇಷಣವು. ಆದರಿಂದ ಕ್ರಿಯಾಂತರವು ( ಬೇರೆ ಕ್ರಿಯೆಯು ) ಪ್ರಯೋಜನವಾಗಿ ಉಳ್ಳ ಕ್ರಿಯೆ ಎಂಬ ಅರ್ಥವು ಉಂಟಾಯಿತು. ಎಂದರೆ ಯಾವ ಕ್ರಿಯೆ ಕ್ರಿಯಾಂತರವೇ ಪ್ರಯೋಜನವಾಗಿ ಉಳ್ಳದೋ — ಕ್ರಿಯಾಂತರಕ್ಕೆ ಕಾರಣವೋ — ಆ ಕ್ರಿಯೆಯನ್ನು ಹೇಳುವ ಧಾತುವಿಗೆ ಎಂದರೆ ಆದರ ಕಾರ್ಯವಾದ ಕ್ರಿಯೆಯನ್ನು ಹೇಳುವ ಧಾತುವಿಗೆ ‘ ಅಲ್ ’ ಪ್ರತ್ಯಯವು ಸೇರುವುದೆಂದು ಫಲಿತವಾಗುವುದು. ‘ ಉಣಲ್ ಬಂದಂ ’ ಎಂಬಲ್ಲಿ ಬರುವಿಕೆಯು ಉಣ್ಣುವುದಕ್ಕಾಗಿ. ‘ ಉಣ್ಣುವಿಕೆ ’ ಎಂಬ ಕ್ರಿಯೆಯು ‘ ಬರುವಿಕೆ ’ ಎಂಬ ಕ್ರಿಯಾಂತರದ ಕಾರಣವು. ಆದುದರಿಂದ ಕಾರ್ಯಭೂತಕ್ರಿಯಾವಾಚಕವಾದ ‘ ಉಣ್ಣು ’ ಧಾತುವಿಗೆ ‘ ಅಲ್ ’ ಪ್ರತ್ಯಯವು ಸೇರಿದೆ.

ಇಲ್ಲಿಯೂ ಪೂರ್ವಸೂತ್ರದಂತೆ ಬಹುಲಾರ್ಥಕವಾದ ‘ ವಾ ’ ಎಂಬುದರ ಅನುವೃತ್ತಿಯನ್ನು ಇಟ್ಟುಕೊಳ್ಳಬೇಕು. ಆದರಿಂದ ಎಲ್ಲಿ ಎರಡು ಕ್ರಿಯೆಗಳು ಏಕಕರ್ತೃಕಗಳೋ ಅಲ್ಲಿ ಮಾತ್ರ ‘ ಅಲ್ ’ ಬರುವುದೆಂದು ಫಲಿತವಾಗುವುದು. ಸಂಸ್ಕೃತದಲ್ಲ ಈ ಅರ್ಥದಲ್ಲಿ ‘ ತುಮ್ ’ ಎಂಬ ಪ್ರತ್ಯಯವು ಬರುವುದು. ( ಉ: ಕರ್ತುಂ ) ‘ **ಶಕಧೃಷಜ್ಞಾಗ್ಲಾಘಟರಭಲಭಕ್ರಮಸಹಾರ್ಹಾಸ್ತ್ಯರ್ಥೇಷು ತುಮುನ್** ( **ಪಾ. ೩. ೪.** ೧೮೬ ) ’ ಎಂಬ ಸೂತ್ರದಲ್ಲಿ ‘ ತುಮ್ ’ ಪ್ರತ್ಯಯವನ್ನು ಇದೇ ಅರ್ಥದಲ್ಲಿ ಹೇಳಿದ್ದಾರೆ.

**ಅವತಾರಿಕೆ ೫೮೭**

‘ ಅಲ್ ’ ಪ್ರತ್ಯಯವೂ ಆದರ ಅರ್ಥವೂ.

**ಸೂತ್ರ || ಯೋ ಭಾವೋ ಭಾವಲಕ್ಷಕಃ || ೫೮೭ ||**

( ೧. ಯಃ, ೨. ಭಾವಃ, ೩. ಭಾವಲಕ್ಷಕಃ. )

**ಅನುವೃತ್ತಿ** || ೧. ಅಲ್.

**ವೃತ್ತಿ** || ಭಾವವೆಂದರೆ ಕ್ರಿಯೆ; ಯಾವ ಕ್ರಿಯೆಯು ಕ್ರಿಯಾಂತರಕ್ಕೆ ( ಬೇರೆ ಕ್ರಿಯೆಗೆ ) ಜ್ಞಾಪಕವಾಗುವುದೋ ಆ ಕ್ರಿಯೆಯನ್ನು ಹೇಳುವ ಧಾತುವಿಗೆ ‘ ಅಲ್ ’ ಪ್ರತ್ಯಯವು ಸೇರುವುದು.

**ಪ್ರಯೋಗ** || ಗಾಯಕಂ ಪಾಡಲರಸಂ ಕೇಳ್ದಂ, ಅರ್ಥಿ ಬೇಡಲ್ ದಾನಿಯಿತ್ತಂ, ನೇಸರ್ ಮೂಡಲ್ ಕತ್ತಲೆ ಪೋದುದು.

**ಪದಕೃತ್ಯ** || ಸೂತ್ರದಲ್ಲಿ ‘ ಯಃ ( - ಯಾವದು ) ’ ಎಂಬುದು ‘ ಅಲ್ ’ ಪ್ರತ್ಯಯವು ಸೇರುವ ಪ್ರಕೃತಿಯನ್ನು ತೋರಿಸುವುದು. ‘ ಕ್ರಿಯೆಯು ’ ಎಂದು ಹೇಳಿದುದರಿಂದ ‘ ಸತ್ತಿಗೆಯಿಂ ಗಮನಮನರಿದಂ ’ ಎಂಬಲ್ಲಿ ಕ್ರಿಯಾಂತರಜ್ಞಾಪಕವಾದ ಸತ್ತಿಗೆಯು ದ್ರವ್ಯವಾದುದರಿಂದ ( ಭಾವವಲ್ಲದುದರಿಂದ ) ‘ ಸತ್ತಿಗೆ ’ ಎಂಬ ಪ್ರಕೃತಿಗೆ ‘ ಅಲ್ ’ ಸೇರುವುದಿಲ್ಲ.

**ವಿಚಾರ ೫೮೭**

ಸೂತ್ರದಲ್ಲಿದ್ದ ‘ ಭಾವಲಕ್ಷಕಃ ’ ಎಂಬ ಪದದಲ್ಲಿರುವ ‘ ಭಾವ ’ ಶಬ್ದವು ಕ್ರಿಯಾಂತರ ವಾಚಕವು. ( ಭಾವ = ಬೇರೆ ಕ್ರಿಯೆ ). ಒಂದು ಭಾವವು ( ಕ್ರಿಯೆ ) ಇನ್ನೊಂದು ಕ್ರಿಯೆಗೆ ಜ್ಞಾಪಕ ( ಸೂಚಕ ) ವಾಗಿರುವಾಗ ಮೊದಲಿನ ಕ್ರಿಯೆಯನ್ನು ಹೇಳುವ ಧಾತುವಿಗೆ ‘ ಅಲ್ ’ ಸೇರುವುದೆಂದು ಸೂತ್ರಾರ್ಥವು.

ಪೂರ್ವಸೂತ್ರದಲ್ಲಿಯೂ ‘ ಅಲ್ ’ ವಿಧಿಸಿದೆ, ಇಲ್ಲಿಯೂ ‘ ಅಲ್ ’ ವಿಧಿಸಿದೆ. ಇವೆರಡ ರಲ್ಲಿಯೂ ವಿಶೇಷವಿಲ್ಲವೆಂದು ತಿಳಿಯಕೂಡದು. ಪೂರ್ವಸೂತ್ರದ ‘ ಅಲ್ ’ ಅಭಿನ್ನಕರ್ತೃಕವು,

ಎಂದರೆ ಪೂರ್ವಕ್ರಿಯೆಗೂ ಉತ್ತರಕ್ರಿಯೆಗೂ ಒಬ್ಬನೇ ಕರ್ತೃವಿರಬೇಕು. ಈ ಸೂತ್ರದಲ್ಲಿ ಪೂರ್ವಕ್ರಿಯೆಯ ಕರ್ತೃ ಬೇರೆ, ಉತ್ತರಕ್ರಿಯೆಯ ಕರ್ತೃ ಬೇರೆ. ಇದಲ್ಲದೆ ಪೂರ್ವಸೂತ್ರದಲ್ಲಿ ಕಾರ್ಯಕಾರಣ ಭಾವವು, ಇಲ್ಲಿ ಜ್ಞಾಪ್ಯಜ್ಞಾಪಕ ಭಾವವು ವಿವಕ್ಷಿತವಾಗಿದೆ. 'ಗಾಯಕಂ ಪಾಡಲರಸಂ ಕೇಳ್ದಂ' ಎಂಬಲ್ಲಿ ಪಾಡುವವನು ಗಾಯಕನು, ಕೇಳುವವನು ಅರಸನು. ಪಾಡುವಿಕೆಯು ಕೇಳುವಿಕೆಯನ್ನು ಜ್ಞಾಪಿಸುತ್ತದೆ. (ಪಾಡಲು ಎಂದಾಗ ಮುಂದೆ ಇನ್ನಾವುದೋ ಕ್ರಿಯೆ ನಡೆಯಿತೆಂಬುದನ್ನು ಸೂಚಿಸುತ್ತಿದೆ ಎಂಬ ಅರ್ಥ.)

ಪೂರ್ವಸೂತ್ರದ 'ಅಲ್' ಪ್ರತ್ಯಯಕ್ಕೂ ಈ ಸೂತ್ರದ 'ಅಲ್' ಪ್ರತ್ಯಯಕ್ಕೂ ಭಿನ್ನಕರ್ತೃಕತ್ವವೆಂಬುದು ಒಂದು ವಿಶೇಷವೆಂಬುದು ಸ್ಪಷ್ಟವಿದೆ. ಜ್ಞಾಪ್ಯಜ್ಞಾಪಕ ಭಾವವೂ ಒಂದು ವಿಶೇಷವೆಂದು ಹೇಳುವುದು ಕೂಡುವುದಿಲ್ಲ. ಪಾಡುವಿಕೆಯು ಕೇಳುವಿಕೆಯ ಕಾರಣವು; ಆದುದರಿಂದ ಜ್ಞಾಪಕತ್ವವು ಪಾಡುವಿಕೆಗೆ ಇಲ್ಲ; ಲೋಕದಲ್ಲಿ ಕಾರಣ ದಿಂದ ಕಾರ್ಯವೂ ಕಾರ್ಯದಿಂದ ಕಾರಣವೂ ಜ್ಞಾಪಿಸಲ್ಪಡುತ್ತವೆ. (ತಿಳಿಸಲ್ಪಡುತ್ತವೆ.) ಧೂಮ, ಅಗ್ನಿ ಇವುಗಳಲ್ಲಿ ಈ ರೀತಿಗೆ ಕಾಣಬರುವುದು. ಆದರೆ ಧೂಮವು ಅಗ್ನಿಯನ್ನು ಜ್ಞಾಪಿಸುವಂತೆ ಅಗ್ನಿಯು ಧೂಮವನ್ನು ಜ್ಞಾಪಿಸುವುದಿಲ್ಲ. (ಪರ್ವತೋ ವಹ್ನಿಮಾನ್ ಧೂಮಾತ್ ಎಂಬಲ್ಲಿ ಧೂಮವು ಅಗ್ನಿಯನ್ನು ಜ್ಞಾಪಿಸುವುದು; ಆದರೆ ಅಗ್ನಿಯಿಂದ ಧೂಮವನ್ನು ಸಾಧಿಸಲು ಬರುವುದಿಲ್ಲ. ಅಯೋಗೋಲಕಾದಿಯಲ್ಲಿ ವ್ಯಭಿಚಾರವು ಕಾಣಬರುವುದು; ಅಯೋಗೋಲಕದಲ್ಲಿ ಅಗ್ನಿ ಇದ್ದರೂ ಧೂಮವಿರುವುದಿಲ್ಲ.) ಆದುದರಿಂದ ಕಾರ್ಯವನ್ನು ಕುರಿತು ಕಾರಣವು ಜನಕವೇ ಹೊರತು ಗಮಕ (ಜ್ಞಾಪಕ)ವಲ್ಲ. ಆದುದರಿಂದ ಇಲ್ಲಿ ಪಾಡುವಿಕೆಯು ಕೇಳುವಿಕೆಯ ಕಾರಣವಿರುವುದರಿಂದ ಅದು ಹೇಗೆ ಜ್ಞಾಪಕವೆಂದು ಹೇಳುವಿರಿ? ಎಂಬ ಶಂಕೆಯು ಪ್ರಸಕ್ತವಾಗುವುದು. ಸಮಾಧಾನವೇನೆಂದರೆ — ಕಾರಣವೂ ಹಲವೆಡೆಯಲ್ಲಿ ಜ್ಞಾಪಕವು ಇಲ್ಲವೆ ಗಮಕವು ಆಗಿರುವುದುಂಟು. ಕಾರಣವೆಲ್ಲವೂ ಅಗಮಕವೆಂದೂ ಕಾರ್ಯವೇ ಗಮಕವೆಂದೂ ನಿಯತವಾಗಿಲ್ಲ. 'ಅಸ್ತ್ಯತ್ರ ಛಾಯಾ ಛತ್ರಾತ್' (ಇಲ್ಲಿ ನೆಳಲು ಇದೆ, ಕೊಡೆಯಿಂದ;) 'ಕ್ಷೀರಮಿದಂ ಕಟು, ಅಲಾಬೂಸ್ಥತ್ವಾತ್' (ಈ ಹಾಲು ಕಹಿ, ಕಹಿಕುಂಬಳ ಸೋಟ್ಟೆಯಲ್ಲಿದ್ದು ದಾದುದರಿಂದ) ಮುಂತಾದೆಡೆಗಳಲ್ಲಿ ಕಾರಣವಾದ 'ಛತ್ರ' ಮೊದಲಾದುವಕ್ಕೆ 'ಅಸ್ತ್ಯತ್ರ ರೂಪಂ ರಸಾತ್' (ಇಲ್ಲಿ ರೂಪವಿದೆ, ರಸವಿರುವುದರಿಂದ) 'ಭವಿತಾ ಅಸ್ಯ ಮರಣಂ ಅರಿಷ್ಟಾತ್' (ಈತನಿಗೆ ಮರಣವೊದಗುವದು, ಕೇಡಿನಿಂದ) ಮುಂತಾದೆಡೆಯಲ್ಲಿ ಕಾರ್ಯವಲ್ಲದ ರಸಾದಿಗೂ ಗಮಕತ್ವವು ಕಾಣಬರುವುದು. ಹಾಗಾದರೆ ಅಗ್ನಿಯೂ ಧೂಮಕ್ಕೆ ಗಮಕವಾಗು ವುದೇ ಎಂದು ಕೇಳಿದರೆ ನಾವು ಸಮಸ್ತಕಾರಣಗಳೂ ಗಮಕಗಳೆಂದು ಹೇಳಲಿಲ್ಲ. ಹಾಗೆ ಹೇಳಿದ್ದರೆ ನಿಮ್ಮ ಆಕ್ಷೇಪಣೆ ಸಲ್ಲುತ್ತಿದ್ದಿತು. ಆದರೆ ಒಮ್ಮೊಮ್ಮೆ ಕಾರಣವಾಗಲಿ, ಅಕಾರಣವಾಗಲಿ ಅದಕ್ಕೆ ವ್ಯಾಪ್ತಿಯು ಕಂಡುಬರುವುದೆಂದು ನಿಶ್ಚಿತವಾಗಿದ್ದರೆ ಅಂತಹ ವ್ಯಾಪಕವನ್ನು ಕುರಿತು ಗಮಕವೆಂದು ಹೇಳಿದ್ದೇವೆ. ವಸ್ತುಧರ್ಮಗಳು ವಿಚಿತ್ರಶಕ್ತಿಯುಳ್ಳುವು.

ಇನ್ನು ಇಲ್ಲಿ ಹೇಳಿದ ಪ್ರತ್ಯಯವು ಗಮ್ಯದ ಮುಂದೆ ಸೇರುವುದೋ ಗಮಕದ ಮುಂದೆ ಸೇರುವುದೋ ಎಂದು ಶಂಕಿಸಿ ಗಮ್ಯದ ಮುಂದಲ್ಲ, ಗಮಕದ ಮುಂದೆಯೇ ಎಂಬುದನ್ನು ಯಾವುದು ಭಾವಲಕ್ಷಕವೋ ಅದರ ಮುಂದೆ ಎಂದು ಹೇಳಿ ಸ್ಪಷ್ಟಪಡಿಸಿರುವನು.

ಸೂತ್ರದಲ್ಲಿ ' ಯೋ ಭಾವಲಕ್ಷಕಃ ' ಇಷ್ಟೇ ಸಾಕಲ್ಲವೇ ? ' ಯೋ ಭಾವಃ ' ಎಂದು ' ಭಾವ ' ಶಬ್ದವು ಏತಕ್ಕೆ ಎಂದು ಶಂಕಿಸಿ 'ಭಾವ' ಶಬ್ದದ ಸಾರ್ಥಕತೆಯನ್ನು ತೋರಿಸುತ್ತಾನೆ— ' ಸತ್ತಿಗೆಯಿಂ ಗಮನನುನಱಿದಂ ' ಎಂಬಲ್ಲಿ ಗಮನಕ್ಕೆ ಗಮಕವಾದುದು ಸತ್ತಿಗೆ; ಅದೊಂದು ದ್ರವ್ಯವಲ್ಲದೆ ಭಾವವಲ್ಲ. ' ಭಾವಃ ' ಎಂಬ ಪದವು ಸೂತ್ರದಲ್ಲಿ ಇಲ್ಲದಿದ್ದರೆ ' ಸತ್ತಿಗೆ ' ಎಂಬು ದರ ಮುಂದೆಯೂ ' ಅಲ್ ಸೇರಲಿ ' ಎಂಬ ಪ್ರಸಕ್ತಿ ಬರುವುದು. ಅದಕ್ಕಾಗಿ ಸೂತ್ರದಲ್ಲಿ ' ಭಾವಃ ' ಎಂಬ ಪದವು ಆವಶ್ಯಕವೆಂದು ತೋರಿಸುವುದಕ್ಕಾಗಿ ಭಾವ ಪದದ ಪದಕೃತ್ಯವನ್ನು ( ಪ್ರಯೋಜನವನ್ನು ) ಸೂತ್ರಕಾರನು ತೋರಿಸಿರುವನು.

**ಅವತಾರಿಕೆ ೫೮೮**

ಭಾವಾಂತರ ಜ್ಞಾಪನದಲ್ಲಿ ' ಅಲ್ ' ಪ್ರತ್ಯಯವಲ್ಲದೆ ಬೇರೆ ಪ್ರತ್ಯಯಗಳೂ ಉಂಟು; ಅವು —

**ಸೂತ್ರಂ || ವುದುಮೆ ವನ್ನಂ ವನ್ನೆಗಂ ವಿನಂ ವಿನೆಗಂ || ೫೮೮ ||**

( ೧. ವುದುಮೆ....ವಿನೆಗಂ. )

**ಅನುವೃತ್ತಿ** || ೧. ಯಃ, ೨. ಭಾವಃ, ೩. ಭಾವಲಕ್ಷಕಃ.

**ವೃತ್ತಿ** || ಯಾವ ಕ್ರಿಯೆ ಇನ್ನೊಂದು ಕ್ರಿಯೆಗೆ ಜ್ಞಾಪಕವಾಗಿರುವುದೋ ಆ ಕ್ರಿಯೆಯನ್ನು ಹೇಳುವ ಧಾತುವಿಗೆ ' ವುದುಂ, ಎ, ವನ್ನಂ, ವನ್ನೆಗಂ, ವಿನಂ, ವಿನೆಗಂ ' ಎಂಬೀ ಪ್ರತ್ಯಯಗಳು ಸೇರುವುವು.

**ಪ್ರಯೋಗ** || ಪಾಡುವುದುಂ ಕೇಳ್ದಂ, ಬರ್ಪುದುಂ ಕಣ್ಡಂ; ಪಾಡೆ ಕೇಳ್ದಂ, ಬರೆ ಕಣ್ಡಂ; ಪಾಡುವನ್ನಂ ಕೇಳ್ದಂ, ಬರ್ಪನ್ನಂ ಕಣ್ಡಂ; ಪಾಡುವನ್ನೆಗಂ ಕೇಳ್ದಂ, ಬರ್ಪನ್ನೆಗಂ ಕಣ್ಡಂ; ಪಾಡುವಿನಂ ಕೇಳ್ದಂ, ಬರ್ಪಿನಂ ಕಣ್ಡಂ; ಪಾಡುವಿನೆಗಂ ಕೇಳ್ದಂ, ಬರ್ಪಿನೆಗಂ ಕಣ್ಡಂ.

**ವಿಚಾರ ೫೮೮**

ಇಲ್ಲಿ ' ವುದುಂ ' ಮೊದಲಾದ ಆರು ವಿಧೇಯಗಳಿಷ್ಟೇ ಹೇಳಿವೆ. ಇವು ಪ್ರತ್ಯಯಗಳೇ ಆದೇಶಗಳೇ ಎಂಬುದಾಗಲಿ, ಇವುಗಳ ಸ್ಥಾನಿಯಾಗಲಿ ಹೇಳಲ್ಪಡಲಿಲ್ಲ—ಎಂಬ ಶಂಕೆಯುಂಟಾಗ ಬಹುದೆಂದು ಸೂತ್ರಕಾರನು ತಾನೇ ಪೂರ್ವಸೂತ್ರದಿಂದ ( ಯೋ ಭಾವೋ ಭಾವಲಕ್ಷಕಃ) ಪದ ಗಳನ್ನು ಅನುವೃತ್ತಿ ಮಾಡಿಕೊಂಡು ಸ್ಥಾನಿಯನ್ನು ತೋರಿಸಿದುದಲ್ಲದೆ ಇವು ಪ್ರತ್ಯಯಗಳೆಂದೂ ಹೇಳಿದನು. ಪೂರ್ವಸೂತ್ರದಲ್ಲಿ ಹೇಳಿದ ' ಅಲ್ ' ಪ್ರತ್ಯಯವೂ ಇಲ್ಲಿ ಹೇಳಿದ ' ವುದುಂ ' ಮೊದಲಾದ ಪ್ರತ್ಯಯಗಳೂ ಪರ್ಯಾಯ (ಕ್ರಮ)ದಿಂದ ಬರುವುವೆಂದು ತಿಳಿಯಬೇಕು. ಏಕೆಂದರೆ ಮೊದಲು ' ಅಲ್ ' ಪ್ರತ್ಯಯವು ಯಾವುದಕ್ಕೆ ವಿಧಿಸಿದೆಯೋ ಅದಕ್ಕೇ ' ವುದುಂ ' ಮೊದಲಾದುವನ್ನು ಹೇಳಿದುದರಿಂದಲೇ ಇವು ಪರ್ಯಾಯದಿಂದ ಬರುವುವೆಂದು ಸಿದ್ಧವಾಗುವುದು. ಪರ್ಯಾಯವಿಲ್ಲದಿದ್ದರೆ ಒಂದರ ಸ್ಥಾನದಲ್ಲಿಯೇ ಇನ್ನೊಂದು ಬರುವುದಾದರೂ ಹೇಗೆ ? ಇನ್ನು ಈ ಸೂತ್ರದಲ್ಲಿ ' ವಾ ' ಎಂಬುದನ್ನು ಹೇಳಬಹುದಾಗಿದ್ದಿತು. ಆದರಿಂದ ' ಅಲ್ ' ಮತ್ತು ' ವುದುಂ ' ಮೊದಲಾದುವು ಪರ್ಯಾಯದಿಂದ ಬರುವುವೆಂಬ ಅರ್ಥವುಂಟಾಗುತ್ತಿದ್ದಿತು. ಹಾಗೆ ' ವಾ ' ಎಂಬುದು ಅವಶ್ಯವೆಂದು ತಿಳಿದರೆ ಮುಂದಿನ (೫೮೯) ಸೂತ್ರದಲ್ಲಿರುವ ' ವಾ '

ಎಂಬುದು ಸಿಂಹಾವಲೋಕನರೀತಿಯಿಂದ ಈ ಸೂತ್ರಕ್ಕೂ ದೃಷ್ಟಿಯನ್ನು ಹಾಕಿದೆ ಎಂದು ತಿಳಿಯಬಹುದು.

ಹಾಗಾದರೆ ಈ ಸೂತ್ರದಲ್ಲಿ 'ವಾ' ಎಂಬುದು ಬೇಕೆಂಬುದನ್ನು ಒಪ್ಪಿಕೊಂಡ ಪಕ್ಷದಲ್ಲಿ ಈ ಸೂತ್ರದಲ್ಲಿಯೇ 'ವಾ' ಎಂಬುದನ್ನು ಸೇರಿಸಿ ಮುಂದಿನ ಸೂತ್ರಕ್ಕೆ (೫೮೯) ಅದರ ಅನುವೃತ್ತಿಯನ್ನು ಇಟ್ಟುಕೊಳ್ಳಬಹುದಾಗಿದ್ದಿತಲ್ಲವೇ ಎಂದು ಕೇಳಬಹುದು. ಉತ್ತರವೇನೆಂದರೆ—ಅರ್ಥವಿಶೇಷವನ್ನು ತೋರ್ಪಡಿಸುವುದಕ್ಕಾಗಿ ಅದನ್ನು ಇಲ್ಲಿ ಸೇರಿಸಿಲ್ಲ. ಇಲ್ಲಿ ಕಾಲೋಪಾಧಿಕವಾದ ಒಂದು ಅರ್ಥವಿಶೇಷವು ತೋರ್ಪಡುತ್ತಿದೆ. ಅದಾವುದೆಂದರೆ — ಮೊದಲಿನ ಎರಡು ಪ್ರತ್ಯಯಗಳು ಆದ್ಯವಧಿಕಾಲವನ್ನೂ ಕೊನೆಯ ನಾಲ್ಕು ಪ್ರತ್ಯಯಗಳು ಅಂತ್ಯಾವಧಿಕಾಲವನ್ನೂ ಸೂಚಿಸುವುವು. 'ವುದುಂ, ಎ' ಪ್ರತ್ಯಯಗಳ ಉದಾಹರಣಗಳಾದ 'ಪಾಡುವುದುಂ ಕೇಳ್ದಂ, ಪಾಡೆ ಕೇಳ್ದಂ' ಎಂಬಲ್ಲಿ ಯಾವಾಗ ಹಾಡುವಿಕೆಯೋ ಆವಾಗಲೇ ಕೇಳುವಿಕೆ ನಡುವೆ ಬಿಡಲಿಲ್ಲ ಎಂಬ ಅರ್ಥವು. 'ವನ್ನಂ, ವನ್ನೆಗಂ; ವಿನಂ, ವಿನೆಗಂ' ಈ ಪ್ರತ್ಯಯಗಳ ಉದಾಹರಣೆಗಳಾದ 'ಪಾಡುವನ್ನಂ. ಪಾಡುವನ್ನೆಗಂ, ಪಾಡುವಿನಂ, ಪಾಡುವಿನೆಗಂ' ಎಂಬಲ್ಲಿ ಪಾಡುವಿಕೆ ಎಲ್ಲಿಯವರೆಗೋ ಅಲ್ಲಿಯವರೆಗೂ ಕೇಳುವಿಕೆ ಎಂಬ ಅರ್ಥವು. ಇದಲ್ಲದೆ ಪಾಡುವಿಕೆಯಲ್ಲಿ ಕೇಳುವವನ ಆದರವು ತೋರ್ಪಡುವುದೆಂಬ ಅರ್ಥವಿಶೇಷವೂ ಗರ್ಭಿತವಾಗಿದೆಯೆಂದು ಹೇಳಬಹುದು.

**ಅವತಾರಿಕೆ ೫೮೯**

ಭಾವಾಂತರ ಜ್ಞಾಪಕ ಪ್ರತ್ಯಯಗಳು —

**ಸೂತ್ರಂ || ಭೂತೇ ದೊಡೆದ್ವಾ || ೫೮೯ ||**

( ೧. ಭೂತೇ, ೨. ದೊಡೆತ್, ೩. ವಾ. )

**ಅನುವೃತ್ತಿ** || ೧. ಯಃ, ೨. ಭಾವಃ, ೩. ಭಾವಲಕ್ಷಕಃ.

**ವೃತ್ತಿ** || ಯಾವ ಕ್ರಿಯೆ ಕ್ರಿಯಾಂತರಕ್ಕೆ ಜ್ಞಾಪಕವಾಗಿರುವುದೋ ಆ ಕ್ರಿಯೆಯನ್ನು ಹೇಳುವ ಧಾತುವಿಗೆ ಭೂತಕಾಲಾರ್ಥದಲ್ಲಿ 'ದೊಡೆ' ಪ್ರತ್ಯಯವು ವಿಕಲ್ಪವಾಗಿ ಸೇರುವುದು.

**ಪ್ರಯೋಗ** || ಪಾಡಿದೊಡೆ ಕೇಳ್ದಂ, ಅಟ್ಟೊಡೊಣ್ಡಂ, ಪಾಡಲ್ ಕೇಳ್ದಂ, ಅಡಲುಣ್ಡಂ.

**ಪದಕೃತ್ಯ** || 'ಭೂತಕಾಲಾರ್ಥದಲ್ಲಿ' ಎಂದು ಹೇಳಿದುದರಿಂದ ಭೂತಕಾಲಾರ್ಥವಿಲ್ಲದಲ್ಲಿ ಈ ಪ್ರತ್ಯಯವು ಬರುವುದಿಲ್ಲ. ಉದಾ : ಪಾಡಲ್ ಕೇಳ್ದಂ.

**ವಿಚಾರ ೫೮೯**

ಜ್ಞಾಪಕವಾದ ಕ್ರಿಯೆಯು ಅತೀತಕಾಲದಲ್ಲಿ ನಡೆದುದಾಗಿರಬೇಕೆಂಬುದು ಈ ಸೂತ್ರದ ವಿಧೇಯದ (ಕಾರ್ಯದ) ವಿಶೇಷಣವು. ಈ ಕಾರ್ಯವು ವೈಕಲ್ಪಿಕವಾದುದರಿಂದ ಇದು ಬಾರದಿರುವಾಗ ಸಾಮಾನ್ಯವಾದ 'ಅಲ್' ಪ್ರತ್ಯಯವು ಬರುವುದೆಂದು ತಿಳಿಯಬೇಕು.

**ಅವತಾರಿಕೆ ೫೯೦**

ಭಾವಾಂತರ ಜ್ಞಾಪಕ ಪ್ರತ್ಯಯಗಳು —

**ಸೂತ್ರಂ || ವೊಡೆತ್ಸದ್ಭಾವಿನಿ || ೫೯೦ ||**

( ೧. ವೊಡೆತ್, ೨. ಸದ್ಭಾವಿನಿ. )

**ಅನುವೃತ್ತಿ** || ೧. ಯಃ, ೨. ಭಾವಃ ೩. ಭಾವಲಕ್ಷಕಃ, ೪. ವಾ.

**ವೃತ್ತಿ || ಯಾವ ಕ್ರಿಯೆ ಇನ್ನೊಂದು ಕ್ರಿಯೆಗೆ ಜ್ಞಾಪಕವಾಗಿರುವುದೋ ಆ ಕ್ರಿಯೆಯನ್ನು ಹೇಳುವ ಧಾತುವಿಗೆ ವರ್ತಮಾನಕಾಲವೂ ಭವಿಷತ್ಕಾಲವೂ ತೋರುವಾಗ ' ವೊಡೆತ್ ' ಪ್ರತ್ಯಯವು ವಿಕಲ್ಪವಾಗಿ ಸೇರುವುದು.**

**ಪ್ರಯೋಗ** || ಪಾಡುವೊಡೆ ಬಂದಂ, ಪಾಡಲ್ ಬಂದಂ; ಮೂಡುವೊಡೆ ಕಣ್ಡಂ, ಮೂಡಲ್ ಕಣ್ಡಂ; ನೋಟ್ಪೊಡೆಸೆದಂ, ನೋಡಲೆಸೆದಂ.

**ವಿಚಾರ ೫೯೦**

ಈ ಸೂತ್ರದಲ್ಲಿ ಹೇಳಿದ ' ವೊಡೆತ್ ' ಪ್ರತ್ಯಯವು ವರ್ತಮಾನ ಭವಿಷತ್ಕಾಲಗಳು ತೋರುವಾಗ ಬರುವುವೆಂದು ಹೇಳಿದೆ. ಈ ಮಾತು ಕೂಡುವುದಿಲ್ಲ. ಹೇಗೆಂದರೆ—ಯಾವ ಕ್ರಿಯೆ ಇನ್ನೊಂದು ಕ್ರಿಯೆಗೆ ಲಕ್ಷಕ (ಜ್ಞಾಪಕ)ವೋ ಅದು ಇನ್ನೊಂದು ಕ್ರಿಯೆಗಿಂತ ಮೊದಲು ಇದ್ದುದಾಗಿರಬೇಕು. ಎಲ್ಲ ಕಾರಕವಾಗಲಿ, ಜ್ಞಾಪಕವಾಗಲಿ ಮೊದಲು ಇದ್ದುದೇ ಆಗಿರುವುದು. ತಾನು ವರ್ತಮಾನಕಾಲದಲ್ಲಿ ಆಗುತ್ತಿರುವಂಥದಾಗಲಿ ಭವಿಷತ್ಕಾಲದಲ್ಲ ಆಗುವುದಾಗಲಿ ಮತ್ತೊಂದನ್ನು ಉಂಟುಮಾಡಲಾರದು. ಇನ್ನು ಜ್ಞಾನ, ದೀಪ ಮೊದಲಾದುವು ಅಜ್ಞಾನ, ಅಂಧಕಾರ ಇವನ್ನು ಹೋಗಲಾಡಿಸುತ್ತಲೇ ತಾವೂ ಉಂಟಾಗುವಂತೆ ಕಾಣಬರುವುದರಿಂದ ಸಮಕಾಲಿಕಗಳಿಗೂ ಕಾರ್ಯಕಾರಣಭಾವವಿರುವುದೆಂಬುದು ಆಲೋಚನೀಯವಾಗಿದೆ. ಆದರೆ ಅಲ್ಲಿಯೂ ಕಥಂಚಿತ್ ಕಾರಣಕ್ಕೆ ಕಾರ್ಯಕ್ಕಿಂತ ಪೂರ್ವವೃತ್ತಿತ್ವವನ್ನು ಹೇಳಲೇಬೇಕು. ಏಕೆಂದರೆ ಮೊದಲು ಸಿದ್ಧವಾಗಿರುವುದನ್ನೇ ಕಾರಕವೆಂದು ಹೇಳಬೇಕೆಂಬ ನಿಯಮವುಂಟು. ಇದನ್ನು ಒಪ್ಪದಿದ್ದರೆ ಸಮಕಾಲೋತ್ಪನ್ನಗಳಾದ ಎಡಬಲಕೋಡುಗಳಲ್ಲ ಒಂದು ಇನ್ನೊಂದರ ಕಾರಣವೆಂದು ಹೇಳಬೇಕಾದ ಪ್ರಸಂಗವು ಒದಗಬಹುದು. ಆದುದರಿಂದ ಇಲ್ಲ ಕ್ರಿಯಾಂತರಕ್ಕೆ ಜ್ಞಾಪಕವಾದ ಕ್ರಿಯೆಯಲ್ಲಿ ವರ್ತಮಾನಕಾಲವಾಗಲಿ, ಭವಿಷತ್ಕಾಲವಾಗಲಿ ತೋರಬೇಕೆಂದು ಹೇಳಿದುದು ಕೂಡುವುದಿಲ್ಲ. ಈ ಮೇರೆಗೆ ಇಲ್ಲ ಶಂಕೆಯು ಪ್ರಸಕ್ತವಾಗಲು ಸಮಾಧಾನ :— ವಿವಕ್ಷಿತಕಾಲಾಪೇಕ್ಷೆಯಿಂದ ಇಲ್ಲಿ ವರ್ತಮಾನ ಭವಿಷತ್ಕಾಲಗಳು ಕೂಡುವುವು. ಎಲ್ಲೆಡೆಗಳಲ್ಲಿಯೂ ಸಾಧ್ಯಕ್ಕಿಂತ ಸಾಧನವು ಪೂರ್ವವರ್ತಿ ಎಂಬುದು ನಿರ್ವಿವಾದವು. ಆದರೂ ವಿವಕ್ಷಿತ ಕಾಲಾಪೇಕ್ಷೆಯಿಂದ ಅದೇ ಸಾಧನವನ್ನು ' ಇದ್ದಿತು, ಇರುತ್ತದೆ, ಇರುವುದು ' ಎಂದು ಆತಂಕವಿಲ್ಲದೆ ವ್ಯವಹರಿಸಬಹುದಾದುದರಿಂದ ಅದಕ್ಕೆ ಮೂರೂ ಕಾಲಗಳೂ ಕೂಡುವುವೆಂಬ ವಿಷಯದಲ್ಲಿ ವಿರೋಧವೇನೂ ಇಲ್ಲ. ತನ್ನ ಸಾಧ್ಯದ ದೃಷ್ಟಿಯಿಂದ ಮಾತ್ರ ವರ್ತಮಾನ ಕಾಲಿಕತ್ವವೂ ಭವಿಷತ್ಕಾಲಿಕತ್ವವೂ ವಿರುದ್ಧವಾಗುವುವು. ಆದುದರಿಂದ ' ಸದ್ಭಾವಿನಿ ' ಎಂದು ಇಲ್ಲಿ ಹೇಳಿದುದುದು ಕೂಡುವುದೆಂದು ತಿಳಿಯಬೇಕು.

' ಪಾಡುವೊಡೆ ಬಂದಂ ' ಎಂದರೆ ಈಗ, ಇಲ್ಲವೆ ನಾಳೆ, ನಾಡಿದು ಪಕ್ಷಮಾಸಗಳ ತರುವಾಯ ಹಾಡಲು ಬಂದನು ' ಎಂಬ ಅರ್ಥವು.

ಇನ್ನು ' ದೊಡೆತ್ ವೊಡೆತ್ ' ಎಂದು ಪ್ರತ್ಯಯಗಳಲ್ಲಿ ದ, ವ ಕಾರಗಳನ್ನು ಏಕೆ ಸೇರಿಸಬೇಕು ? ' ಒಡೆತ್ ' ಎಂಬ ಒಂದು ಪ್ರತ್ಯಯವನ್ನು ಹೇಳಬೇಕಾಗಿದ್ದಿತು. ಭೂತಕಾಲದಲ್ಲಿ

'ದ' ಪ್ರತ್ಯಯವೂ ವರ್ತಮಾನ ಭವಿಷತ್ಕಾಲಗಳಲ್ಲಿ 'ವ' ಪ್ರತ್ಯಯವೂ ಹಿಂದಿನ ಸೂತ್ರಗಳಿಂದ ಬರುತ್ತಿದ್ದುವು. ಆದುದರಿಂದ 'ಒಡೆತ್' ಪ್ರತ್ಯಯವನ್ನು ಹೇಳುವುದೇ ಯೋಗ್ಯವಾಗಿದ್ದಿತು, ಎಂದು ಶಂಕಿಸಬಹುದು. ಆದರೆ ದ, ವ ಗಳನ್ನು ವಿಧಿಸುವ ಸೂತ್ರಗಳಿಲ್ಲ. '**ದ ದಪವಂ ತಿಙಃ ಸದ್ಭೂತಭಾವಿನಿ** || ೪೪೬ ||, '**ಅಚಿ** || ೪೪೭ ||, '**ಸತಿವೋ ವಾ** || ೪೪೮ ||' ಎಂಬ ಸೂತ್ರಗಳು ದ, ವ ಗಳನ್ನು ವಿಧಿಸುವ ಸೂತ್ರಗಳಷ್ಟೇ; ಇವು 'ತಿಙ್' ಪ್ರತ್ಯಯಗಳೂ 'ಅಚ್' ಪ್ರತ್ಯಯಗಳೂ ಪರದಲ್ಲಿರುವಾಗ ಮಾತ್ರ ದ, ವ ಪ್ರತ್ಯಯಗಳನ್ನು ವಿಧಿಸುವುವು. 'ಒಡೆತ್' ಪ್ರತ್ಯಯವು 'ತಿಙ್, ಅಚ್' ಪ್ರತ್ಯಯಗಳಲ್ಲಿ ಸೇರಿದುದಲ್ಲ. ಆದುದರಿಂದ 'ದೊಡೆತ್, ವೊಡೆತ್' ಎಂದು ದ, ವ ಕಾರಾದಿಯಾಗಿ ಪ್ರತ್ಯಯಗಳು ಹೇಳಲ್ಪಟ್ಟಿವೆಯೆಂದು ಸಮಾಧಾನವನ್ನು ಹೇಳಬಹುದು. ಇನ್ನು ಈ 'ಒಡೆತ್' ಪ್ರತ್ಯಯವನ್ನು 'ತಿಙ್, ಅಚ್' ಇವುಗಳಲ್ಲಿ ಸೇರಿಸಿ ಅಲ್ಲಿಯೇ ಹೇಳಬಹುದಾಗಿದ್ದಿತಲ್ಲವೇ ಎಂದು ಮತ್ತೆ ಶಂಕಿಸಬಹುದು. ಆದರೆ ಹಾಗೆ ಹೇಳಿದ್ದರೆ ವರ್ತಮಾನಕಾಲದಲ್ಲಿ 'ದ, ಪ' ಪ್ರತ್ಯಯವೂ ಬರುತ್ತಿದ್ದಿತು. ಅದನ್ನು ನಿಷೇಧಿಸಿದ್ದರೆ ಆಗುತ್ತಿರಲಿಲ್ಲವೇ ಎಂದರೆ ಗೌರವದೋಷವು ಬರುತ್ತಿದ್ದಿತು; 'ಒಡೆತ್' ಪ್ರತ್ಯಯವನ್ನು ಹೇಳುವುದು, ಇದು ಪರದಲ್ಲಿರುವಾಗಲೂ ದ, ವ ಪ್ರತ್ಯಯಗಳು ಬರುವುವೆಂದು ಹೇಳುವುದು, ಆಗ 'ದ, ಪ' ವನ್ನು ನಿಷೇಧಿಸುವುದು, ಇದೆಲ್ಲ ಈಗ 'ದೊಡೆತ್, ವೊಡೆತ್' ಪ್ರತ್ಯಯಗಳನ್ನು ಹೇಳಿದಾಗಳಿಗಿಂತ ಹೆಚ್ಚಿಗೆ ಆಗುವುದರಿಂದ ಈಗ ಹೇಳಿದುದೇ ಯೋಗ್ಯವಾಗಿದೆಯೆಂದು ತಿಳಿಯಬೇಕು.

**ಅವತಾರಿಕೆ ೫೯೧**

'ಅಲ್' ಪ್ರತ್ಯಯದಂತೆ 'ಅಲ್ಕೆ' ಪ್ರತ್ಯಯವೂ ಕಾಣಬರುವುದರಿಂದ ಅದನ್ನು ಹೇಳುವನು.

**ಸೂತ್ರಂ || ಕೆಗಲಃ || ೫೯೧ ||**

( ೧. ಕೆಶ್, ೨. ಅಲಃ. )

**ಅನುವೃತ್ತಿ** || ೧. ವಾ ೨. ಸದ್ಭಾವಿನಿ.

**ವೃತ್ತಿ || ಧಾತುವಿಗೆ ಪರವಾದ 'ಅಲ್' ಪ್ರತ್ಯಯದ ಮುಂದೆ ವರ್ತಮಾನ ಭವಿಷತ್ಕಾಲಗಳು ತೋರುವಾಗ 'ಕೆ' ಆಗಮವು ವಿಕಲ್ಪವಾಗಿ ಸೇರುವುದು.**

**ಪ್ರಯೋಗ** || ಮಾಡಲ್ಕೆ ಬಂದಂ, ಮಾಡಲ್ ಬಂದಂ; ನೋಡಲ್ಕೆಸೆದಂ, ನೋಡಲೆಸೆದಂ; ಗಾಯಕಂ ಪಾಡಲ್ಕರಸಂ ಮೆಚ್ಚಿದಂ, ಗಾಯಕಂ ಪಾಡಲರಸಂ ಮೆಚ್ಚಿದಂ.

**ವಿಚಾರ ೫೯೧**

ಕ್ರಿಯೆಯು ಭಿನ್ನಕರ್ತೃಕವಾಗಿರಲಿ, ಅಭಿನ್ನಕರ್ತೃಕವಾಗಿರಲಿ, ಕಾರಕವಾಗಿರಲಿ, ಜ್ಞಾಪಕವಾಗಿರಲಿ ಎಲ್ಲ ಕಡೆಗೂ 'ಅಲ್' ಪ್ರತ್ಯಯದ ಮುಂದೆ 'ಕೆ' ಆಗಮವಾಗುವುದು. ಇಲ್ಲಿ '**ಅಲರ್ಹಾರ್ಥೇ** || **೫೮೫** ||' ಎಂಬುದರಿಂದ ವಿಧಿಸಿದ 'ಅಲ್' ಪ್ರತ್ಯಯವನ್ನೇ ಗ್ರಹಿಸಬೇಕು. '**ತಸ್ಮಿನ್ನದಲೌ** || **೫೨೬** ||', '**ಅಲ್ತದಪ್ರಯೋಗೇ** || **೫೨೮** ||', '**ತಸ್ಮಿನ್ನೆದಲೌ** || **೫೩೨** ||' ಎಂಬೀ ಸೂತ್ರಗಳಿಂದ ವಿಧಿಸಿದ 'ಅಲ್' ಪ್ರತ್ಯಯವಲ್ಲ. ಅವು ಬಹಳ ಹಿಂದೆ ಹೇಳಿದುವು. '**ಅಲರ್ಹಾರ್ಥೇ** || **೫೮೫** ||' ಎಂಬುದರಿಂದ ವಿಧಿಸಿದ 'ಅಲ್' ಇದೇ ಈಗ

ಹೇಳಿದುದು. ಪ್ರತ್ಯಯಾಸನ್ನ ( ಸಮೀಪಸ್ಥ )ವಾದುದನ್ನು ಗ್ರಹಿಸುವುದೇ ಯುಕ್ತವು. ' ವ್ಯಾಪ್ತಿ ಪ್ರತ್ಯಾಸತ್ಯೋಃ ಪ್ರತ್ಯಾಸತ್ತಿರ್ಗರೀಯಸೀ ' ಎಂಬ ವಚನವುಂಟು. ( – ವ್ಯಾಪ್ತಿ, ಸಾಮೀಪ್ಯ ಇವುಗಳಲ್ಲಿ ಸಾಮೀಪ್ಯವು ಬಲಿಷ್ಠವು. )

**ಅವತಾರಿಕ ೫೯೨**

' ಅಲ್ ' ಪ್ರತ್ಯಯದ ಮುಂದೆ ಸೇರುವ ಆಗಮುಗಳು —

**ಸೂತ್ರಂ || ಒಡನೆದೊಡವಲೋಽನು || ೫೯೨ ||**

( ೧. ಒಡನೆತ್, ೨. ಒಡಂ, ೩. ಅಲಃ, ೪. ಅನು. )

**ಅನುವೃತ್ತಿ** || ವಾ.

**ವೃತ್ತಿ** || ' ಒಡನೆ, ಒಡಂ ' ಎಂಬಿವು ' ಅಲ್ ' ಪ್ರತ್ಯಯದ ಮುಂದೆ ವಿಕಲ್ಪವಾಗಿ ಪ್ರಯೋಗಿಸಲ್ಪಡುವುವು.

**ಪ್ರಯೋಗ** || ಪಾಡಲೊಡನೆ ಮೆಚ್ಚಿದಂ, ಪಾಡಲೊಡಂ ಮೆಚ್ಚಿದಂ; ಪಾಡಲ್ಕೆ ಮೆಚ್ಚಿದಂ, ಪಾಡಲ್ ಮೆಚ್ಚಿದಂ.

*  *  *  *  *

ಇತಿ ಶ್ರೀ ಭಟ್ಟಾಕಲಙ್ಕದೇವ ವಿರಚಿತಮಪ್ಪ ಭಾಷಾಮಞ್ಜರೀದಾಮಕ ಶಬ್ದಾನುಶಾಸನ ವೃತ್ತಿಯೋಳ್ ಚತುರ್ಥಪಾದಂ ಸಮಾಪ್ತಮಾದುದು. ಸರ್ವಂ ಸಮ್ಪೂರ್ಣಂ.

ಶಬ್ದಾನುಶಾಸನೇ ಸಂಖ್ಯಾಯೋಗತೋಽಷ್ಟೋನಷಟ್‌ಛತೀ
ಅನುಷ್ಟುಭಾಂ ತು ಶ್ಲೋಕಾನಾಂ ಚತುರ್ಭಿರಧಿಕಂ ಶತಮ್

*  *  *  *  *

**ವಿಚಾರ ೫೯೨**

' ಒಡನೆ ' ಶಬ್ದಕ್ಕೆ ' ಕೂಡಿ ' ಎಂಬ ಅರ್ಥವು. ' ಒಡಂ ' ಶಬ್ದವು ಅಂಗೀಕಾರಾರ್ಥಕವು. ಇವೆರಡೂ ಅವ್ಯಯಗಳು. 'ಆತನೊಡನೆ ಬಂದಂ, ಒಡಮೆಂದಂ' ಮುಂತಾದ ಉದಾಹರಣಗಳಲ್ಲಿ ಈ ಅವ್ಯಯಗಳು ತಂತಮ್ಮ ಅರ್ಥದಲ್ಲಿ ಪ್ರಯೋಗಿಸಲ್ಪಟ್ಟರೂ ಇಲ್ಲಿ ಅವು ಸ್ವಾರ್ಥವನ್ನು ಬಿಟ್ಟು ಶಬ್ದಸಾಧುತ್ವಾರ್ಥವಾಗಿ ' ಅಲ್ ' ಪ್ರತ್ಯಯದ ಮುಂದೆ ಪ್ರಯೋಗಿಸಲ್ಪಡುವುವು. ' ಅಲ್ ' ಪ್ರತ್ಯಯವನ್ನು ಸಮೀಪದಲ್ಲಿ ಹೇಳಲ್ಪಟ್ಟುದನ್ನೇ ಇಲ್ಲಿ ತೆಗೆದುಕೊಳ್ಳಬೇಕೆಂಬ ಅಭಿಪ್ರಾಯದಿಂದ ಆ ' ಅಲ್ ' ಪ್ರತ್ಯಯದ ' ಪಾಡಲೊಡನೆ, ಪಾಡಲೊಡಂ ' ಎಂಬ ಉದಾಹರಣೆಗಳನ್ನೇ ಕೊಟ್ಟಿರುವನು.

' ಅನು ' ಎಂಬ ಅವ್ಯಯವು ಮಂಗಲದ್ಯೋತಕವಾದುದರಿಂದ **ಸೂತ್ರಕಾರನು** ತನ್ನ ಶಬ್ದಾನುಶಾಸನಶಾಸ್ತ್ರದ ( ಕೊನೆಯ ಸೂತ್ರದ ) ಕೊನೆಯಲ್ಲಿ ಅದನ್ನು ಪ್ರಯೋಗಿಸಿರುವನು. ಈ ಉದ್ದೇಶವಿಲ್ಲದಿದ್ದರೆ ಈ ಸೂತ್ರದಲ್ಲಿಯೇ ನಡುವೆ ಎಲ್ಲಿಯಾದರೂ ಪ್ರಯೋಗಿಸಬಹುದಾಗಿದ್ದಿತು. ಕೆಳಗಿನ ಶ್ಲೋಕದಲ್ಲಿ ' ಅನು ' ಶಬ್ದವು ಮಂಗಲಾರ್ಥಕವೆಂದು ಸ್ವೀಕೃತವಾಗಿದೆ.

ಓಮಥಾನ್ವಲಮುತ್ಸೂಪಸಂಪ್ರಾದ್ಯಸ್ಯನುವಾಚಕಾಃ
ದೇವತಾವಾಚಕಾಃ ಸ್ವಸ್ತಿ ಜಯಾದ್ಯಾ ಮಂಗಲಾತ್ಮಕಾಃ

ಈ ಮೇರೆಗೆ ' ಅನು ' ಶಬ್ದಪ್ರಯೋಗದಿಂದ **ಸೂತ್ರಕಾರನು** ಮಂಗಲಾಚರಣ ಮಾಡಿದ ದಾರಿಯನ್ನೇ ಹಿಡಿದು **ವೃತ್ತಿಕಾರನೂ** ತನ್ನ ವೃತ್ತಿಗ್ರಂಥದ ಕೊನೆಯಲ್ಲಿ ಮಂಗಲಾಚರಣ ಮಾಡಿದುದನ್ನು ಸೂಚಿಸುತ್ತಾನೆ — ಮೆಚ್ಚಿದಂ ಮುಂತಾದುವು.

'ಮೆಚ್ಚು' ಧಾತುವು ಮೆಚ್ಚಿಗೆ (ಮನಃಪ್ರಸಾದ) ಎಂಬ ಅರ್ಥದಲ್ಲಿಯೂ ಮಾಂಗಲ್ಯಾರ್ಥದಲ್ಲಿಯೂ ಇರುವುದರಿಂದ 'ಮೆಚ್ಚಿದಂ' ಎಂಬ ಶಬ್ದವು ಮಂಗಲವಾಚಕವು. ಇಲ್ಲಿ ಇನ್ನೊಂದು ವಿಶೇಷವೆಂದರೆ — 'ಒಡನೆ, ಒಡಂ' ಎಂಬಿವನ್ನು ವಿಕಲ್ಪವಾಗಿ ಹೇಳಿರುವುದರಿಂದ ಇವು ಬಾರದ ಪಕ್ಷದಲ್ಲಿ 'ಕೆ' ಆಗಮವೂ ಅದೂ ವಿಕಲ್ಪವಾಗಿ ಬರುವುದರಿಂದ ಅದು ಬಾರದ ಪಕ್ಷದಲ್ಲಿ ಕೇವಲ 'ಅಲ್' ಪ್ರತ್ಯಯವೂ ಎಂದು ನಾಲ್ಕು ಪಕ್ಷಗಳಾಗುವುವು. ಉದಾಹರಣೆಗಳಲ್ಲಿ 'ಮೆಚ್ಚಿದಂ' ಎಂಬುದಕ್ಕೆ ಪ್ರತಿಯಾಗಿ 'ಬಂದಂ, ಪೋದಂ' ಮುಂತಾದುವನ್ನು ಪ್ರಯೋಗಿಸಬಹುದಾಗಿದ್ದರೂ 'ಪಾಡಲೊಡನೆ ಮೆಚ್ಚಿದಂ, ಪಾಡಲೊಡಂ ಮೆಚ್ಚಿದಂ, ಪಾಡಲ್ಕೆ ಮೆಚ್ಚಿದಂ, ಪಾಡಲ್ ಮೆಚ್ಚಿದಂ' ಎಂದು ನಾಲ್ಕು ಬಾರಿಯೂ 'ಮೆಚ್ಚಿದಂ' ಎಂಬುದನ್ನೇ ಪ್ರಯೋಗಿಸಿದ ವೃತ್ತಿಕಾರನ ಅಂತಃಕರಣವು ಚತುರ್ಮಂಗಲಾನುಸ್ಮರಣ ಪರಿಣತವಾದುದೆಂದು ತರ್ಕಿಸಬಹುದು. ಜೈನಸಂಪ್ರದಾಯದಲ್ಲಿ 'ಅರ್ಹತ್, ಸಿದ್ಧ, ಸಾಧು, ಕೇವಲಿಪ್ರಜ್ಞಪ್ತಧರ್ಮ' ಎಂಬ ನಾಲ್ಕು ಮಂಗಲಗಳು ರೂಢವಾಗಿವೆ. 'ಅರಹಂತಾ ಮಂಗಳಂ, ಸಿದ್ಧಾ ಮಂಗಳಂ, ಸಾಹೂ ಮಂಗಳಂ, ಕೇವಳಿಪಣ್ಣತ್ತೋ ದಮ್ಮೋ ಮಂಗಳಂ' ಎಂದು ಅನಾದಿ ಪ್ರವಚನ ಪ್ರಸಿದ್ಧಿಯುಂಟು ಪ್ರಾಚೀನ ಪ್ರವಚನದಲ್ಲಿ —

ಮಙ್ಗಲಂ ಭಗವಾನರ್ಹನ್ಮಙ್ಗಲಂ ಭಗವಾನ್ ಜಿನಃ
ಮಙ್ಗಲಂ ಪ್ರಥಮಾಚಾರ್ಯೋ ಮಙ್ಗಲಂ ವೃಷಭೇಶ್ವರಃ

ಎಂದು ವಚನವಿದೆ. ಇದೆಲ್ಲವೂ ಮಙ್ಗಲವು.

ನಿರುಪಮಸುಖದಾಯಂ ನಿಶ್ಚಲಾಪ್ತೇರುಪಾಯಂ
ನಿಜಗುಣಸಮವಾಯಂ ನಿರ್ಜಿತೈನೋಽಪಾಯಂ
ನಿರವಧಿಮತಿಕಾಯಂ ನಿರ್ವೃತಿಶ್ರೀಸಹಾಯಂ
ನಿಖಿಲಜಿನನಿಕಾಯಂ ನಿತ್ಯಮಾನೌಮ್ಯಮಾಯಮ್ ॥

ಯೋ ನಾನಾಮತತರ್ಕಕರ್ಕಶಮತಿರ್ವ್ಯಾಖ್ಯಾನಮುದ್ರಾಪಟು
ರ್ಯಃ ಪ್ರಾಭಾವಯದಾರ್ಹತಂ ನಿಜಮತಂ ಭೂಭೃತ್ಸಭೇಽನೇಕಧಾ
ಯಃ ಕರ್ಣಾಟಕಸಂಸ್ಕೃತೋಭಯವಿಧಂ ಶಬ್ದಾಬ್ಧಿಮುತ್ತೀರ್ಣವಾನ್
ಸೋಽಯಂ ಸಾಧುಜನಪ್ರಿಯೋ ವಿಜಯತೇ ಭಟ್ಟಾಕಲಙ್ಕೋ ಭುವಿ ॥
ಯಃ ಕರ್ಣಾಟಕ ಶಬ್ದಶಾಸನಮಿದಂ ನಿರ್ಮಾಯ ಶರ್ಮಾವಹಂ
ವೃತ್ತಿಂ ಚಾರಚಯಚ್ಚ ತಸ್ಯ ವಿದುಷಾಂ ಪ್ರಾಗ್ರ್ಯಂ ಪ್ರರೂಢಶ್ರಿಯಂ
ತೇನೇದಂ ವ್ಯರಚಿ ಪ್ರಗಲ್ಭವಚಸಾ ಭಟ್ಟಾಕಲಙ್ಕೇನ ತ
ದ್ವೃತ್ತೇಃ ಸಾಧು ನಿಬನ್ಧನಂ ಚ ಮಕರನ್ದಾಖ್ಯಂ ಸಮಾಖ್ಯಾಸ್ಪದಂ ॥
ಅಕಲಙ್ಕೋತ್ತಮ ಸೂಕ್ತಿ ಸಾರಸುಮನೋ ಬೃನ್ದಾವಲಮ್ಬಂ ಸಮು
ತ್ಪರ್ಕ ಸದ್ವೃತ್ತಿ ಸುಯುಕ್ತಿ ಸೌರಭಭರಂ ಸರ್ವಜ್ಞಪಾದಾರ್ಪಿತಂ
ಸುಕವೀನ್ದ್ರಭ್ರಮರ ಪ್ರಮೋದಜನಕಂ ತನ್ತ್ರಂ ಶುಭಂ ಮಞ್ಜರೀ
ಮಕರನ್ದಾಖ್ಯಮಿದಂ ತರಾಂ ವಿಜಯತಾಮಾಚನ್ದ್ರತಾರಾರ್ಣವಮ್ ॥
ಶಕವರ್ಷೇ ರಸನೇತ್ರಬಾಣಶಶಿಸಂಖ್ಯೇಽಬ್ದೇ ತಪೋಮಾಸಿ ಶೋ
ಭಕೃತಿ ಶ್ರೀ ಸಿತಪಞ್ಚಮೀಗುರುದಿನೇ ಲಗ್ನೇ ಘಟೇ ಪೌಷಭೇ
ಅಕಲಙ್ಕಾಹ್ವಯಯೋಗಿ ಶಿಷ್ಯತಿಲಕೋ ಗ್ರನ್ಥಂ ಸತಾಂ ಮಞ್ಜರೀ
ಮಕರನ್ದಾಖ್ಯಮಿದಂ ಮತಂ ವ್ಯರಚಯಂ ಭಟ್ಟಾಕಲಙ್ಕೋ ಮುನಿಃ ॥

ಇತಿ ಶ್ರೀ ಭಟ್ಟಾಕಲಙ್ಕದೇವವಿರಚಿತಾಯಾಂ ಸ್ವೋಪಜ್ಞ
ಶಬ್ದಾನುಶಾಸನವೃತ್ತೇಃ ಭಾಷಾಮಞ್ಜರ್ಯಾಖ್ಯ ಟೀಕಾಯಾಂ
ಮಞ್ಜರೀಮಕರನ್ದ ಸಮಾಖ್ಯಾಯಾಂ

## ಚತುರ್ಥಃ ಪಾದಃ

## ಪರಿಸಮಾಪ್ತಶ್ಚೈಷ ಗ್ರಂಥ ಇತಿ

ಸ್ವಸ್ತಿ ಶ್ರೀ ಜಯಾಭ್ಯುದಯ ಶಾಲಿವಾಹನಶಕವರ್ಷ ( ೧೫೨೬ ) ಸಾವಿರದಯ್ನೂರಿಪ್ಪತ್ತಾರನೆಯ ಶೋಭಕೃತ್ಸಂವತ್ಸರದ ಮಾಘ ಶುದ್ಧ ಪಂಚಮಿ ಗುರುವಾರ ರೇವತೀ ನಕ್ಷತ್ರ ಕುಂಭಲಗ್ನ ಶುಕ್ರೋದಯ ಸುಮುಹೂರ್ತದೊಳ್ ಅಖಿಳ ಭವ್ಯ ಬುಧ ಸಂಘಶ್ಲಾಘನೀಯ ಗುಣಸಂಘ ಶ್ರೀಮೂಲ ಮೂಲಸಂಘದೇಶಿಗಣಪುಸ್ತಕಗಚ್ಛ ಶ್ರೀಕುಂಡಕುಂದಾನ್ವಯ ವಿರಾಜಮಾನಶ್ರೀಮದ್ರಾಯರಾಜಗುರುಮಂಡಲಾಚಾರ್ಯ ಮಹಾವಾದವಾದೀಶ್ವರ ರಾಯವಾದಿಪಿತಾಮಹಸಕಲವಿದ್ವಜ್ಜನಚಕ್ರವರ್ತಿ ಬಲ್ಲಾಳರಾಯಜೀವರಕ್ಷಪಾಲಕೇತ್ಯಾದ್ಯನೇಕಾನ್ವರ್ಥ ಬಿರುದಾವಲೀವಿರಾಜಮಾನ ಶ್ರೀಮಚ್ಚಾರುಕೀರ್ತಿಪಂಡಿತದೇವಾಚಾರ್ಯಶಿಷ್ಯಪ್ರಶಿಷ್ಯ ಪ್ರಪ್ರಶಿಷ್ಯ ಪಾರಂಪರಾಯಾತ ಶ್ರೀಸಂಗೀತಪುರಸಿಂಹಾಸನಪಟ್ಟಾಚಾರ್ಯಶ್ರೀಮದಕಲಂದೇವಶಿಷ್ಯಂ ಶ್ರೀಮದ್ಭಟ್ಟಾಕಲಙ್ಕದೇವಂ ವಿವಿಧವಿನೇಯಜನಾನುಗ್ರಹಬುದ್ಧಿಯಿಂ ಸಕಲಶಾಬ್ದಿಕಜನಚೇತಶ್ಚಮತ್ಕಾರಕಾರಿಯಪ್ಪ ಕರ್ಣಾಟಕಶಬ್ದಾನುಶಾಸನಮಂ ಸೂತ್ರಿಸಿಯದರ್ಕೆ ಸೂತ್ರಸಾಮಾನ್ಯಾರ್ಥೋದಾಹರಣ ಪ್ರತ್ಯುದಾಹರಣಗಣಪಾಠವಾಕ್ಯಸಂಗ್ರಹಾತ್ಮಕ[೧]ಮಪ್ಪ ಭಾಷಾಮಞ್ಜರಿಯೆಂಬ ವೃತ್ತಿಯಂ ನಿರ್ವರ್ತಿಸಿ ತತ್ಸೂತ್ರವೃತ್ತಿದ್ವಯನ್ಯಸ್ತಭಾಷಿತಾರ್ಥವಿಶೇಷಸಮರ್ಥನೋಕ್ತಾನುಕ್ತವಿಚಾರಪ್ರಚಾರಕ್ರಮಪರಿಪ್ರಾಪ್ತನ್ಯಾಸಭಾಷ್ಯಾಭಿಧಾನಗೋಚರಮುಂಪ್ರೇಕ್ಷಾವದಪೇಕ್ಷಣೀಯುಮುಮಾಗಿ ರಚಿಸಿದ[೨] ಮಞ್ಜರೀಮಕರನ್ದವೆಂಬ ನಿಬಂಧಗ್ರಂಥಮರ್ಹದಾದಿಪರಾಪರಗುರುಚರಣಸ್ಮರಣಪ್ರಭಾವದಿಂ ಪರಿಸಮಾಪ್ತಮಾದುದು.

ಮಂಗಳಮಹಾ ಶ್ರೀ ॥ ಶ್ರೀ ॥ ಶ್ರೀ ॥

---

ಪಾಠಾಂತರ: ೧. ಸಂಗ್ರಹಾರ್ಥಕ. ೨. ರಂಜಿಸಿದ.

ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದ ಸಂಮಾನ್ಯ ಸದಸ್ಯರ ಅಪ್ಪಣೆಯಿಂದ ಶ್ರೀ ಭಟ್ಟಾಕಲಂಕದೇವನ ಶಬ್ದಾನುಶಾಸನದ ಕೊನೆಯ ನೂರಿಪ್ಪತ್ತು ಸೂತ್ರಗಳಿಗೆ ಕನ್ನಡದಲ್ಲಿ ಟೀಕೆ ಟಿಪ್ಪಣಿಗಳನ್ನು, ಅನೇಕ ಮಹಾರಾಜರ ರಾಜಧಾನಿಯಾಗಿಯೂ ಅನೇಕ ಜೈನಾಚಾರ್ಯರ ಆವಾಸದಿಂದ ಪಾವನವಾಗಿಯೂ ಮೆರೆವ ಬಂಕಾಪುರದಲ್ಲಿ ವೇದಾಭ್ಯಾಸ ಪುನೀತರೂ ಧರ್ಮಶಾಸ್ತ್ರಪುರಾಣಕಾವ್ಯಾದಿಪಠನಪಾಠನಪ್ರವೀಣರೂ ಸತ್ಯಸೌಶೀಲ್ಯಾದಿಗುಣಭೂಷಿತರೂ ಆದ ಬ್ರ|| ಶ್ರೀ|| ಪ್ರಭಾಕರಶಾಸ್ತ್ರಿಗಳಿಗೆ ಮತ್ತು ಪಾತಿವ್ರತ್ಯಭೂಷಣೆ ಸುಗೃಹಿಣಿ ಶ್ರೀ ಶಾಕಂಬರೀದೇವಿಗೆ ಪುತ್ರನಾಗಿ ಜನಿಸಿ ಧನ್ಯನೆಂದು ಬಗೆದವನೂ ಧಾರವಾಡದ ಶಿಕ್ಷಕಶಿಕ್ಷಣಾಲಯದಲ್ಲಿ ಇಪ್ಪತ್ತೆಂಟು ವರ್ಷ ಕನ್ನಡದ ಅಧ್ಯಾಪಕನಾಗಿ ಕನ್ನಡ ನಾಡಿನ ಸೇವೆ ಮಾಡಿದವನೂ ಆದ ಬಂಕಾಪುರದ ಶ್ರೀ ಪಂಪಾವಿರೂಪಾಕ್ಷೇಶ್ವರನ ಪೂಜಾರಿ ಮಹದೇವಶರ್ಮನೆಂಬವನು ೧೮೬೧ ಪ್ರಮಾಥಿಸಂವತ್ಸರದ ಕಾರ್ತಿಕ ಮಾರ್ಗಶೀರ್ಷ ಮಾಸಗಳಲ್ಲಿ ಯಥಾಲ್ಪಮತಿ ಬರೆದು ಶ್ರೀ ಮಾತಾಪಿತೃಚರಣಾರವಿಂದಗಳಿಗೆ ಅರ್ಪಿಸಿದನು.

ನಮಸ್ತುಙ್ಗ ಶಿರಶ್ಚುಮ್ಬಿ ಚನ್ದ್ರಚಾಮರ ಚಾರವೇ
ತ್ರೈಲೋಕ್ಯ ನಗರಾರಮ್ಭ ಮೂಲಸ್ತಮ್ಭಾಯ ಶಮ್ಭವೇ
ಸರ್ವಂ ಶಿವಂ ಪ್ರೀಯತಾಂ ಪರಮೇಶ್ವರಃ—

೧೮೬೧, ಪ್ರಮಾಥಿ ಮಾರ್ಗಶೀರ್ಷಕೃಷ್ಣ ದ್ವಾದಶಿ ಶನಿವಾರ.
ಧಾರವಾಡ ತಾ. ೬-೧-೧೯೪೦.

# ಹಿನ್ನುಡಿ

ಚೋಳಿನ ಮಂತ್ರವರಿಯದವ ಹಾವಿನ ಹುತ್ತಕ್ಕೆ ಕೈ ಹಾಕಿದನಂತೆ. ಹಾಗೆ ವಿದ್ವಾಂಸರು ಕೈಕೊಳ್ಳಬೇಕಾದ ಕೆಲಸಕ್ಕೆ ಅಲ್ಪಜ್ಞನು ಕೈಹಾಕಿದೆನು.

ಈ ಸಾಹಸವು ಕೇವಲ ಕ. ವಿ. ವ ಸಂಘದ ಸಂಮಾನ್ಯ ಸದಸ್ಯರ ಅಪ್ಪಣೆಯ ದಾಕ್ಷಿಣ್ಯಕ್ಕೊಳಗಾಗಿ ಎಂಬುದನ್ನು ಅಭಿಜನರಲ್ಲಿ ಬಿನ್ನವಿಸಿಕೊಳ್ಳುವೆನು.

೧೮೬೨, ವಿಕ್ರಮ ಅಗೆಯಹುಣ್ಣಿವೆ ಮಂಗಳವಾರ.
ಧಾರವಾಡ ತಾ. ೨೧-೫-೧೯೪೦. ಮ. ಪ್ರ. ಪೂಜಾರ.

# ಕರ್ಣಾಟಕ ಶಬ್ದಾನುಶಾಸನ ಪ್ರಕಾಶಿಕೆ

## ಸೂತ್ರಗಳ ಅಕಾರಾದಿ

# ಕರ್ಣಾಟಕ ಶಬ್ದಾನುಶಾಸನ ಪ್ರಕಾಶಿಕೆ

## ಶುದ್ಧಾಶುದ್ಧಿ ಪತ್ರಿಕೆ

| ಪುಟ | ಸಾಲು | ಅಶುದ್ಧ | ಶುದ್ಧ |
|---|---|---|---|
| ೩ | ೨ | ಸರಹಸ್ಯಾ | ಸರಹಸ್ಯಾಃ |
| ೫ | ೨೦ | ಗಾಂಭಿರ್ಯ | ಗಾಂಭೀರ್ಯ |
| ೭ | ೨೩ | ಅನ್ವಯಿಸತಕ್ಕದ್ದು | ಅನ್ವಯಿಸತಕ್ಕದ್ದು |
| ೮ | ೩೦ | ಸಂಧಿಗ್ಧಂ | ಸಂದಿಗ್ಧಂ |
| ೧೫ | ೪ | ಅಃ | ಅಃ |
| ೧೫ | ೨೦ | ದಧಿಖು | ದಧಿ ಖು |
| ೧೮ | ೯ | ತೈತ್ತರೀಯ | ತೈತ್ತಿರೀಯ |
| ೨೬ | ೨ | ಕಕಾರದಿನಾ | ಕಕಾರಾದಿನಾ |
| ೨೭<br>೨೭<br>೨೭<br>೨೮ | ೧೬<br>೧೭<br>೧೮<br>೭ | ಅಭ್ಯಂತರ | ಆಭ್ಯಂತರ |
| ೩೧ | ೩೧ | ಪ್ರತ್ಯಹಾರ | ಪ್ರತ್ಯಾಹಾರ |
| ೩೬ | ೩೦ | ದವರ್ | ಇದವರ್ |
| ೩೭ | ೧೧ | ಪ್ರತ್ವಯ | ಪ್ರತ್ಯಯ |
| ೩೭ | ೧೬ | ಅಂತಗ್ರಹಣವು. | ಅಂತಗ್ರಹಣವು |
| ೩೭ | ೨೦ | ಅನುಸ | ಅನುಪಸ |
| ೩೮ | ೧೫ | ಷಟ್ಸ್ | ಷಷ್ |
| ೪೧ | ೩೩ | ರಯೋರಾಶ್ರಯೋ | ರಯೋರ್ಧಾತುರಾಶ್ರಯೋ |
| ೪೮ | ೩೧ | ಧಾತ್ರ | ಧಾತು |
| ೫೬ | ೧ | ಆದಿಭಿಃ | ಆಭಿಃ |
| ೬೧ | ೧ | ವ್ಯೈತಿ | ವ್ಯೇತಿ |
| ೬೯ | ೨೮ | ಅವ್ಯಯಾ | ಅವ್ಯಯಾ |
| ೬೯ | ೨೯ | ಆದಾಗ್ಯೂ | ಆದಾಗ್ಯೂ |
| ೭೬ | ೨ | ಉಭಯತ್ರರಿಗೂ | ಉಭಯತರಿಗೂ |
| ೮೧ | ೨೨ | ವರ್ಣಾಂತರ್ಯಾವ | ವರ್ಣಾಂತರಾವ್ಯ |
| ೮೫ | ೩೦ | ವಿಶೇಷವು | ವಿಶೇಷ್ಯವು |
| ೮೬ | ೭ | ಫಲಸಂಪಾಕಾರ್ಥ | ಫಲಸಂಪಾದಕಾರ್ಥ |
| ೮೬ | ೨೪ | ಸ್ಥಾನಿಯಂಬುದು | ಸ್ಥಾನಿಯೆಂಬುದು, |
| ೮೬ | ೨೯ | ತನ್ನಿಪಾಸ್ತ | ತನ್ನಿಮಿತ್ತ |
| ೮೭ | ೧೮ | ವಿಧಿಯ | ವಿಧೇಯ |
| ೮೭ | ೨೨ | ದೇಶೋಽನ್ನ | ದೇಶೋಽನ |

| ಪುಟ | ಸಾಲು | ಅಶುದ್ಧ | ಶುದ್ಧ |
|---|---|---|---|
| ೯೦ | ೧೯ | ಪರಸ್ಪರ | ಪರಸ್ಪರಾ |
| ೯೧ | ೮ | ವಿಶ್ಲಿಷ್ಠಾ | ವಿಶ್ಲಿಷ್ಟಾ |
| ೯೫ | ೧೨ | ಕೆಲವಿಡೆ | ಕೆಲವೆಡೆ |
| ೯೬ | ೯ | ಅವುಗಳಿಲ್ಲಿ | ಅವುಗಳಲ್ಲಿ |
| ೯೬ | ೧೧ | ಪ್ರಾಥಮ್ಯವವಿರು | ಪ್ರಾಥಮ್ಯವಿರು |
| ೯೬ | ೨೧ | ವಿಧೀಯು | ವಿಧೇಯು |
| ೯೬ | ೨೬ | ನಿರ್ದಿಷ್ಟೇರ್ | ನಿರ್ದಿಷ್ಟೇ |
| ೯೮ | ೧೭ | ಪ್ರತಿ | ಪ್ರಕೃತಿ |
| ೧೦೩ | ೨೭ | ಸೃಕ್ವ | ಸೃಕ್ಕ |
| ೧೦೫ | ೩೦ | ‘ ರ ’ | ‘ ರು ’ |
| ೧೦೮ | ೨೨ | ಹೇರುವಂತೆ | ಹೇಳಿರುವಂತೆ |
| ೧೦೯ | ೨೧ | ಇರಬೆಕು | ಇರಬೇಕು |
| ೧೧೨ | ೨೪ | ದೀಘರ್ಂತ | ದೀರ್ಘಾಂತ |
| ೧೧೨ | ೨೯ | ಭ್ರೂ | ಭೂ |
| ೧೧೪ | ೧೯ | ವಿಶಿಷ್ಟಾ | ವಿಶ್ಲಿಷ್ಟಾ |
| ೧೧೭ | ೧೧ | ಸಾದನಾರ್ಥ | ಸಾಧನಾರ್ಥ |
| ೧೧೯ | ೨೯ | ‘ ಕರತ್ ’ | ‘ ಕರೆತ್ ’ |
| ೧೨೨ | ೨೯ | ವೆತ್ಯಾವಮಾಡದೆ | ವೆತ್ಯಾಸಮಾಡದೆ |
| ೧೩೬ | ೨೬ | ದ್ವಿತ್ವ | ದ್ವಿತ |
| ೧೩೬ | ೩೧ | ಮಾನಸ್ಯದೇಶಾಃ | ಮಾನಸ್ಯಾದೇಶಾ |
| ೧೩೭ | ೪ | ಜಾತಿಯಸ್ಯ | ಜಾತೀಯಸ್ಯ |
| ೧೩೭ | ೬ | ಕೃತೃ | ಕತೃ |
| ೧೩೭ | ೭ | ಸೂತ್ರಸಷಷ್ಠ್ಯಂತ | ಸೂತ್ರಷಷ್ಠ್ಯಂತ |
| ೧೩೮ | ೨೮ | ಅಙ್ | ಅಟ್ |
| ೧೪೧ | ೨ | ನಟ್ಟಿಸಿದಂ | ನಟಿಸಿದಂ |
| ೧೪೧ | ೧೧ | ‘ ಕಿನ ’ | ‘ ತಿನ ’ |
| ೧೪೩ | ೩೦ | ತಯಾನಾಶ್ರಿಯತೇ | ತಯಾಶ್ರೀಯತೇ |
| ೧೪೪ | ೨೩ | ಭಾಷ್ಯಾಧಿಕಾ | ಭಾಷ್ಯಕಾ |
| ೧೪೬ | ೨೫ | ಅಂತ್ಯಸ್ಥಾವರ್ಜಿತ | ಅಂತಸ್ಥಾವರ್ಜಿತ |
| ೧೪೭ | ೧೦ | ಅನಂತಸ್ಯಾಯಾಃ | ಅನಂತಸ್ಥಾಯಾಃ |
| ೧೫೧ | ೨ | ಸ್ವರವುಸ್ವರವು | ಸ್ವರವು |
| ೧೫೧ | ೨೨ | ‘ ದು ’ | ‘ ರು ’ |
| ೧೫೨ | ೧೬ | ಭಾಷೋಕ್ತ | ಭಾಷ್ಯೋಕ್ತ |
| ೧೫೫ | ೧೦ | ವಿಭಾಷೆ | ವಿಭಾಷಾ |
| ೧೫೮ | ೨೫ | ಆಶಿರಾ | ಆಶೀರಾ |
| ೧೬೨ | ೨೭ | ವ್ಯಂಜನವುಪರಕ | ವ್ಯಂಜನ ಪರಕ |

# ಶುದ್ಧಾಶುದ್ಧಿ ಪತ್ರಿಕೆ

| ಪುಟ | ಸಾಲು | ಅಶುದ್ಧ | ಶುದ್ಧ |
|---|---|---|---|
| ೧೬೩ | ೫ | ಮಾಡಲ | ಮಾಡಲು |
| ೧೬೩ | ೧೩ | ಯುಕ್ತಾ | ಯುಕ್ತಿ |
| ೧೬೩ | ೨೫ | ದೃಢಕರ | ದೃಢತರ |
| ೧೬೮ | ೩೦ | ಒಂದು | ಬಿಂದು |
| ೧೬೯ | ೪ | ವರ್ಗಾಕ್ಷರ | ಅವರ್ಗಾಕ್ಷರ |
| ೧೬೯ | ೧೮ | ಕಸುಬಮಿತ್ತಕ | ಕಸುಬ್ ನಿಮಿತ್ತಕ |
| ೧೭೧ | ೧೧ | ಽಂತಸ್ಯ | ಽಂತ್ಯಸ್ಯ |
| ೧೭೨ | ೨೫ | ಪ್ರತಿಗಂಧಿ | ಪ್ರತಿಗ್ರಂಥಿ |
| ೧೭೩ | ೪ | ಬಹುಳಾದಿ | ಬಹುಳಾಧಿ |
| ೧೭೬ | ೩೦ | ಪ್ರವೃತ್ಯ | ಪ್ರವೃತ್ತ |
| ೧೭೬ | ೩೧ | ಭುಜ್ಯಾಃ | ಭುಙ್ತ್ತಿ |
| ೧೭೮ | ೩೨ | ಆಲ್ಪಿಯಾಸ್ಯಾಃ | ಆಲ್ಪಿಯಸ್ಯಾಃ |
| ೧೭೮ | ೩೨ | ಸೂತ್ರ | ವಾರ್ತಿಕ |
| ೧೮೫ | ೧೦ | ಪೌರ್ವಾಪರ | ಪೌರ್ವಾಪರ್ಯ |
| ೧೮೮ | ೧೭ | ನಿವೇದಿಸಿ | ನಿಷೇಧಿಸಿ |
| ೧೯೦ | ೨೧ | ಪ್ರಕೃತ್ಯಾಃ | ಪ್ರಕೃತ್ಯಾ |
| ೧೯೧ | ೨೧ | ಸೂತ್ರೆ | ಸೂತ್ರ |
| ೧೯೩ | ೩೧ | ಭಾಷ್ಯಾ | ಭಾಷಾ |
| ೧೯೫ | ೧೫ | ಇಡು | ಇದು |
| ೨೦೦ | ೨೫ | ಪ್ರಥಕ್ | ಪೃಥಕ್ |
| ೨೦೧ | ೧೬ | ಮಿತ್ಯಾದುದೇಶ | ಮಿತ್ಯಾದ್ಯುದ್ದೇಶ |
| ೨೦೪ | ೩ | ಶಿಪ್ತ | ಶಿಷ್ಟ |
| ೨೦೭ | ೨೩ | ಗ್ರಹ್ಣಂತೀತಿ | ಗೃಹ್ಣಂತೀತಿ |
| ೨೦೯ | ೨೩ | ಕೆಙ್ಗಣ್ಣಿಯುವಳ್ | ಕೆಙ್ಗಣ್ಣಿಯಿವಳ್ |
| ೨೧೧ | ೨೬ | ತನಾದಿ | ಸ್ತನಾದಿ |
| ೨೧೨ | ೧೨ | ಅನವ್ಯೇತಿ | ನವ್ಯೇತಿ |
| ೨೧೪ | ೧೭ | ಬಾಧತ | ಬಾಧಕ |
| ೨೧೮ | ೨ | ಯಥಾಯೋಗ | ಯಥಾಯೋಗ್ಯ |
| ೨೨೩ | ೧೪ | ಅಪ್ತ್ವ | ಅತ್ತ್ವ |
| ೨೨೩ | ೧೫ | ' ಅಪ್ತೃತೃಚ್ ' | ' ಅಪ್ತೃನ್ತೃಚ್ ' |
| ೨೨೮ | ೨೫ | ಗುರುತ್ಮಂತಂ | ಗರುತ್ಮಂತಂ |
| ೨೨೮ | ೨೫ | ತಕಾರಾದ್ಯಂತಗಳಲ್ಲಿ | ತಕಾರಾಂತಗಳಲ್ಲಿ |
| ೨೨೮ | ೩೦ | ಪರ್ಯುರ್ನಸ್ಯದಾಸ | ಪರ್ಯುದಾಸ |
| ೨೨೯ | ೨ | ಮುಸ್ಥಿಂಯು | ಮುಷ್ಟಿಯು |
| ೨೩೨ | ೭ | ಸಿದ್ಧಿಯಾಗಿಯೇ | ಸಿದ್ಧಿಗಾಗಿಯೇ |
| ೨೩೪ | ೫ | ಅಂತರದಲ್ಲಿ | ಅಂತದಲ್ಲಿ |

| ಪುಟ | ಸಾಲು | ಅಶುದ್ಧ | ಶುದ್ಧ |
|---|---|---|---|
| ೨೩೫ | ೨೬ | ಮಾಡಲು | ' ಮು ' ಮಾಡಲು |
| ೨೪೭ | ೨೫ | ದುರ್ಯೊದನ | ದುರ್ಯೋಧನ |
| ೨೪೯ | ೨೫ | ಚತುರ್ಥಿ | ಚತುರ್ಥ |
| ೨೪೯ | ೨೯ | 'ಶಂಮ್ಪು' | 'ಶಮ್ಪು' |
| ೨೫೩ | ೨೩ | ಆದರ್ಶನಂ | ಆದರ್ಶನಂ |
| ೨೫೬ | ೯ | ಆಹಿತಾನಾಹಿತ | ಆಹಿತಾನಾಹಿತ |
| ೨೬೪ | ೩೧ | ಮಾದ್ಧಂಸಹಾ | ಮಾಂದ್ಧಸಹಾ |
| ೨೭೧ | ೪ | ವಸ್ತ್ವಾತ್ರ | ವಸ್ತ್ವಾಶ್ರ |
| ೨೭೩ | ೨೦ | 'ದು' | 'ತು' |
| ೨೭೮ | ೨೯ | ಏತಱಿಕೋಳ್ | ಏತಱಿಕೊಳ್ |
| ೨೮೧ | ೧೮ | ಅಧ | ಅರ್ಥ |
| ೨೮೨ | ೧೭ | 'ಓರ್ವ' | 'ಓರ್ವಶ್' |
| ೨೮೬ | ೯ | ಅವಶ್ಯ | ಅಪತ್ಯ |
| ೨೮೭ | ೫ | ' ಕಳ್ ' | ' ಕ್ಯಳ್ ' |
| ೨೮೮ | ೧ | ನಿಷೇಧ | ನಿಷೇಧ್ಯ |
| ೨೯೧ | ೨ | ಪುಂಯೋಗಾಖ್ಯಾಯಾಂ | ಪುಂಯೋಗಾದಾಖ್ಯಾಯಾಂ |
| ೨೯೫ | ೨೮ | ಸಿಗತಾದಿ | ಸಿತಗಾದಿ |
| ೩೦೧ | ೮ | ಭ್ಯಾಮ್ಭ್ಯಸ್ | ಭ್ಯಾಮ್ಭಿಸ್ |
| ೩೦೩ | ೫ | ಅಧಿಕ್ರಿಯತೇ | ಅಧಿಶ್ರಿಯತೇ |
| ೩೦೩ | ೧೯ | ಸಿಷ್ಟಕ್ರಿಯೋ. | ನಿಷ್ಠಕ್ರಿಯೋ |
| ೩೦೩ | ೨೩ | ಜ್ವಲನಾಥ | ಜ್ವಲನಾದಿ |
| ೩೦೪ | ೧೦ | ಕರ್ಮ, ಸಂಪ್ರದಾನ | ಕರ್ಮ, ಕರಣ, ಸಂಪ್ರದಾನ |
| ೩೦೪ | ೧೭ | ಕಾರುಕಾದಿ | ಕಾರಕಾದಿ |
| ೩೦೫ | ೩೧ | ದ್ವೈಷಿಸಾಧನವಾಗಿ | ದ್ವೇಷಸಾಧನವಾಗಿ |
| ೩೦೮ | ೫ | ಸಂಬಂಧ್ಯತೇ | ಸಂಬಧ್ಯತೇ |
| ೩೦೮ | ೧೬ | ಕರ್ಮಣೊ | ಕರ್ಮಣೋಽ |
| ೩೧೪ | ೩ | ಪರಾಲೋಚನೇ | ಪರ್ಯಾಲೋಚನೇ |
| ೩೧೫ | ೨೯ | ' ವ್ಯಾಪ್ತಾ ' | ' ವ್ಯಾಪ್ತೊ ' |
| ೩೧೭ | ೧೩ | ಪ್ರಥಕ್ | ಪೃಥಕ್ |
| ೩೧೮ | ೨೫ | ನಿಷ್ಟ | ನಿಷ್ಠ |
| ೩೨೩ | ೩೨ | ಂದು | ಎಂದು |
| ೩೨೪ | ೨೧ | ತ್ಕರ್ತೃಸ್ತ್ರಾಃ | ತ್ಕರ್ತುಸ್ತ್ರಾಃ |
| ೩೨೫ | ೨೮ | ಆಮರ್ಷ | ಆಮರ್ಷ |
| ೩೨೬ | ೧೯ | ಶಕ್ತಿರುಚಿತ್ತಾದಿಯು ಶಕ್ತಿರು ಚೀರ್ಷ್ಯಾದಿಗಳು | ಶಕ್ತಿರುಚಿರ್ಷ್ಯಾದಿಗಳು |
| ೩೩೦ | ೯ | ಅಥವಾ | ಅಥವಾ |

# ಶುದ್ಧಾಶುದ್ಧಿ ಪತ್ರಿಕೆ

| ಪುಟ | ಸಾಲು | ಅಶುದ್ಧ | ಶುದ್ಧ |
|---|---|---|---|
| ೩೩೦ | ೧೧ | ಕಾಯವಾಚಕ | ಕಾರ್ಯವಾಚಕ |
| ೩೩೨ | ೯ | ವಿಶೇಷ | ವಿಶೇಷಣ |
| ೩೩೩ | ೨೬ | ವಿಭಾಷಾ | ವಿಭಾಷಾಽ |
| ೩೩೫ | ೨ | ತದಾಪಾದಾ | ತದಪಾದಾ |
| ೩೩೫ | ೧೧ | ಪ್ರಾತೀತಿಕೊಪಾಯ | ಪ್ರಾತೀತಿಕಾಪಾಯ |
| ೩೩೫ | ೧೬ | ಕತ್ರ್ಯಃ | ಕರ್ತುಃ |
| ೩೩೮ | ೨೮ | ಪೂಜ್ಯಕವಾಡ | ಪೂಜ್ಯವಾದ |
| ೩೩೮ | ೩೧ | ಚಾಣಂ | ಚಾಣಂ |
| ೩೪೬ | ೧೬ | ಚಾರಿತಾರ್ಥ | ಚರಿತಾರ್ಥ |
| ೩೫೩ | ೩೫ | ದ್ಯೋತ್ಯ | ದ್ಯೋತ |
| ೩೬೪ | ೩ | ವಿಶೇಷತ್ವ | ವಿಶೇಷ್ಯತ್ವ |
| ೩೭೫ | ೧೭ | ' ನ ' | ' ನಃ ' |
| ೩೭೭ | ೨೦ | ಅತಃ | ಅತಃ |
| ೩೮೫ | ೭ | ಬವತಿ | ಭವತಿ |
| ೩೮೬ | ೨೩ | ಮಾನೋಽಅಪರಶಬ್ದ | ಮಾನೋಽಪರಶಬ್ದ |
| ೩೮೬ | ೨೩ | ಪೀಽ | ಪೀ |
| ೩೮೭ | ೪ | ವ್ಯಾವತ್ತ್ಯ | ವ್ಯಾವೃತ್ತ್ಯ |
| ೩೮೭ | ೧೯ | ಯಾನಶಬ್ದ | ಯಾನ್ತಶಬ್ದ |
| ೩೯೦ | ೩೧ | ನಾಲು | ನಾಲ್ಕು |
| ೩೯೧ | ೩ | ಸ್ವರಸ್ಯ | ಸರ್ವಸ್ಯ |
| ೩೯೫ | ೧೬ | ಆಗಾಮಾದೇಶ | ಆಗಮಾದೇಶ |
| ೩೯೯ | ೩೭ | ಲುಬ್ಧ | ಲಬ್ದ |
| ೪೦೦ | ೩೦ | ಮಕಾರಾಂತನಾದಿ | ಮಕಾರಾಂತತನಾದಿ |
| ೪೦೬ | ೧೮ | ಪ್ರಾರೀಪ್ಸಿ | ಪ್ರಾರಿಪ್ಸಿ |
| ೪೦೭ | ೧೭ | ಎಂಬ ವ್ಯಯುವು | ಎಂಬವ್ಯಯುವು |
| ೪೦೮ | ೧೯ | ಸಮುಹಾರ | ಸಮಾಹಾರ |
| ೪೦೯ | ೧೦ | ವ್ಯಾವತ್ರ್ಯ | ವ್ಯಾವೃತ್ರ್ಯ |
| ೪೦೯ | ೩೫ | ಸುಭಾಶ್ರಯವಿಧಿ | ಸುಬಾಶ್ರಯವಿಧಿ |
| ೪೧೪ | ೩೯ | ಏಕಾರ್ಥಭಾವ | ಏಕಾರ್ಥೀಭಾವ |
| ೪೧೫ | ೮ | ಉಭಯ ವಿಧವಾದ ಸಾಮರ್ಥ್ಯವೆರಡೂ | ಸಾಮರ್ಥ್ಯವೆರಡೂ |
| ,, | ೯ | ಎಡೆಯಲ್ಲಿರುವದೇ | ಎಡೆಯಲ್ಲಿರುವವೇ ? |
| ,, | ೧೬ | ಪಥಾರ್ಥಕದೇಶವಾದ | ಪದಾರ್ಥೈಕದೇಶವಾದ |
| ,, | ೩೩ | ಸ ವಿಶೇಷಣಾನಾಂ | ಸವಿಶೇಷಣಾನಾಂ |
| ,, | ೩೩ | ವಿಶೇಷಣಯೋಗೋರ್ನ | ವಿಶೇಷಣಯೋಗೋ ನ |
| ,, | ೩೪ | ಏಕಾರ್ಥಿಭಾವಲಕ್ಷಣ | ಏಕಾರ್ಥೀಭಾವಲಕ್ಷಣ |
| ೪೧೬ | ೧ | ದ್ವೈಧಾ | ದ್ವೇಧಾ |

| ಪುಟ | ಸಾಲು | ಅಶುದ್ಧ | ಶುದ್ಧ |
|---|---|---|---|
| ೪೧೬ | ೨ | ಲಕ್ಷಣಮೇಕಾರ್ಥಭಾವ | ಲಕ್ಷಣಮೇಕಾರ್ಥೀಭಾವ |
| ,, | ೭ | ಜ್ಞಾನಸಾಧಾನಂ | ಜ್ಞಾನಸಾಧನಂ |
| ,, | ೧೫ | ಶಬ್ದಾರ್ಥಸಂಬಂಧ ರೂಪವೃತ್ತಿ | ಶಬ್ದಾರ್ಥಸಂಬಂಧರೂಪವೃತ್ತಿ |
| ,, | ೧೬ | ಸಿದ್ಧಿಸುವುವೆಂದು | ಸಿದ್ಧಿಸುವುದೆಂದು |
| ,, | ೨೦ | ಬಾಧಕವಿಲ್ಲವೋ | ಬಾಧಕವಿರುವದೋ |
| ,, | ೩೧ | ತಸ್ಮಾದೇಕಾರ್ಥಿಭಾವ | ತಸ್ಮಾದೇಕಾರ್ಥೀಭಾವ |
| ,, | ೩೩ | ಸಮಾಸ್ಯಕರವೆಂದು | ಸಮಾನ್ಯವೆಂದು |
| ೪೧೭ | ೨ | ತ್ರಿವಿಧವಾಗಿರುವುದೆಂದು | ತ್ರಿವಿಧವಾಗಿರುವುವೆಂದು |
| ೪೧೮ | ೧೮ | ಅನಪದಾರ್ಥ | ಅನ್ಯಪದಾರ್ಥ |
| ,, | ೩೧ | ಇತರೇತರ ಯೋಗದ್ವಂದ್ವ | ಇತರೇತರಯೋಗದ್ವಂದ್ವ |
| ೪೧೯ | ೧೨ | ವ್ಯಯುಪೇಕ್ಷಾ | ವ್ಯಪೇಕ್ಷಾ |
| ,, | ೧೪ | ವ್ಯತ್ತ್ಯಾಶ್ರಯ | ವೃತ್ತ್ಯಾಶ್ರಯ |
| ,, | ೨೦ | ವ್ಯತ್ತ್ಯರ್ಥಾವಬೋಧಕಂ | ವೃತ್ತ್ಯರ್ಥಾವಬೋಧಕಂ |
| ,, | ೨೦ | ವಾಕ್ಯ | ವಾಕ್ಯಂ |
| ೪೨೦ | ೩ | ಸಮಾಸಸಮಾನ್ಯ | ಸಮಾಸ ಸಾಮಾನ್ಯ |
| ,, | ೨೧ | ವಿಧ್ಯುಪಕಾರವಾದುದು | ವಿಧ್ಯುಪಕಾರಕವಾದುದು |
| ೪೨೧ | ೬ | ಏಕಾರ್ಥಿಭಾವ | ಏಕಾರ್ಥೀಭಾವ |
| ,, | ೬ | ನಾಮುಶಕ್ತಿ | ನಾಮಿ ಶಕ್ತಿ |
| ,, | ೭ | ಏಕಾರ್ಥಿ | ಏಕಾರ್ಥೀ |
| ,, | ೭ | ಽಸಾವಿತಿವ್ಯುತ್ಪತ್ತೇಃ | ಽಸಾವಿತಿ ವ್ಯುತ್ಪತ್ತೇಃ |
| ೪೨೩ | ೧೫ | ದ್ವಂದ್ವಶ್ಯತರ್ | ದ್ವಂದ್ವಶ್ಚತುರ್ |
| ೪೨೪ | ೧೮ | ಭವತೀ | ಭವತಿ |
| ೪೨೯ | ೮ | ಲಕ್ಷಸ್ಥಿಪದವು | ಲಕ್ಷ್ಯಸ್ಥಪದವು |
| ,, | ೧೪ | ಲಕ್ಷಗಳಲ್ಲಿ | ಲಕ್ಷ್ಯಗಳಲ್ಲಿ |
| ೪೩೦ | ೮ | ಈ ಸಮಾಸ | ಈಗ ಸಮಾಸ |
| ೪೩೨ | ೨೭ | ಅಂತರದಲ್ಲಿರುವ | ಅಂತದಲ್ಲಿರುವ |
| ೪೩೪ | ೧೮ | ತಾದರ್ಥೇ | ತಾದರ್ಥ್ಯೇ |
| ,, | ೨೩ | ತಾವರ್ಥೇ | ತಾದರ್ಥ್ಯೇ |
| ೪೩೮ | ೧೫ | ಅಂಶವಾಚಿಯಾದ | ಅಂಶಿವಾಚಿಯಾದ |
| ,, | ೨೩ | ಅವಯುವ | ಅವಯವಿ |
| ೪೩೯ | ೫ | ಅಂಶಾಂಶವಾಚಕ | ಅಂಶಾಂಶಿವಾಚಕ |
| ೪೪೩ | ೨ | ವ್ಯಾವರ್ತತೇ | ವ್ಯಾವರ್ತ್ಯತೇ |
| ,, | ೨೦ | ವಿಶೇಷಗಳಾಗಿದ್ದರೂ | ವಿಶೇಷಣಗಳಾಗಿದ್ದರೂ |
| ,, | ೨೫ | ಸಾಮಾನಾಧಿಕರಣ | ಸಮಾನಾಧಿಕರಣ |
| ೪೪೬ | ೨೦ | ಅನೇಕಮನ್ಯಾಪದಾರ್ಥೇ | ಅನೇಕಮನ್ಯಪದಾರ್ಥೇ |
| ೪೪೭ | ೨೫ | ಗ್ರಹ್ಣಂತಿ | ಗೃಹ್ಣಂತಿ |

# ಶುದ್ಧಾಶುದ್ಧಿ ಪತ್ರಿಕೆ

| ಪುಟ | ಸಾಲು | ಅಶುದ್ಧ | ಶುದ್ಧ |
|---|---|---|---|
| ೪೪೮ | ೧೭ | ಪ್ರಯೋಗಗಲ್ಲಿಯೂ | ಪ್ರಯೋಗಗಳಲ್ಲಿಯೂ |
| ೪೫೩ | ೨೫ | ಸುಬುತ್ತಿ | ಸುಬುತ್ಪತ್ತಿ |
| ೪೫೭ | ೨೮ | ವಿಭಾಷೈಕ | ವಿಭಾಷಯ್ಯೈಕ |
| ೪೬೦ | ೫ | ವೈಕಲ್ಪಿತಾತಿದೇಶವನ್ನು | ವೈಕಲ್ಪಿಕಾತಿದೇಶವನ್ನು |
| ೪೬೮ | ೧ | ಸಮಾತ್ರಯವಿಧಿ | ಸಮಾಸಾಶ್ರಯವಿಧಿ |
| ೪೭೦ | ೨೮ | ಕದಂತ | ಕೃದಂತ |
| ೪೭೪ | ೨೦ | ವಿಧಿಸ್ತದಾದಾವರ್ಣಗ್ರಹಣೇ | ವಿಧಿಸ್ತದಾದೇರ್ವರ್ಣಗ್ರಹಣೇ |
| ೪೮೦ | ೨೬ | ಚಾಕಾರಾದಿ | ಚಕಾರಾದಿ |
| ,, | ೨೯ | ಪೂರ್ವಸೂತ್ಪವಿಹಿತ | ಪೂರ್ವಸೂತ್ರವಿಹಿತ |
| ೪೮೩ | ೨ | ಅನಾವೃತ್ತ | ಅನುವೃತ್ತ |
| ೪೮೯ | ೧೧ | ಯುಕ್ತಯುಕ್ತವಾಗಿ | ಯುಕ್ತಿಯುಕ್ತವಾಗಿ |
| ೫೦೪ | ೨೨ | ಅಕಾರಾವನ್ನು | ಅಕಾರವನ್ನು |
| ೫೧೮ | ೨೫ | ವಿಪ್ಸಾರ್ಥ | ವೀಪ್ಸಾರ್ಥ |
| ೫೩೧ | ೧೦ | ಅರ್ಲಗ್ಗಣ್ಣು | ಅಲಗ್ಗಣ್ಣು |
| ೫೪೪ | ೧೮ | ವ್ರದ್ಧಾ | ವೃದ್ಧಾ |
| ೫೫೬ | ೨೩ | ಪ್ರಯೋಗಗಲ್ಲಿ | ಪ್ರಯೋಗಗಳಲ್ಲಿ |
| ,, | ೩೧ | ಪ್ರಯೋಜ್ಯ ಕರ್ತೃತ್ವ | ಪ್ರಯೋಜ್ಯ ಕರ್ತೃತ್ವಕ |
| ೫೫೮ | ೨೦ | ಅದೃತನ | ಅದ್ಯತನ |
| ೫೬೩ | ೧೬ | ಅನುವೃತ್ತಮಾನ | ಅನುವರ್ತ್ಯಮಾನ |
| ೫೮೬ | ೬ | ಅಗೋಃ | ಅಗೋಃ |
| ,, | ೨೦ | ಶ + ಅಪ್ | ಶ್ + ಅಪ್ |
| ೬೧೫ | ೧೦ | ಕ್ರಿಯಾ ಕ್ರಿಯಾ | ಕ್ರಿಯಾಕ್ರಿಯಾ |
| ೬೧೬ | ೧೧ | ಸಮಾನಾದಿ | ನಮುನಾದಿ |
| ೬೨೭ | ೩ | ಕೂಡೂತೆ | ಕೂಡುತೆ |
| ,, | ೧೭ | ಕ್ರಿಡನ | ಕ್ರೀಡನ |
| ,, | ೨೧ | ಕತ್ರರ್ಥ | ಕರ್ತ್ರರ್ಥ |
| ೬೫೭ | ೧೪ | ಭಾಷಾಮುಜ್ಞರೀದಾಮುಕ | ಭಾವಾಮುಜ್ಞರೀನಾಮುಕ |
| ೬೫೯ | ೫ | ಪರಿಸಮಾಪ್ತಿಶ್ಲೈಷ | ಪರಿಸಮಾಪ್ತಶ್ಲೈಷ |